# ಪರಿಪೂರ್ಣಚಂದ್ರಿಕಾ

## ಭಾಗ - 6

ಸೂತ್ರ-ಭಾಷ್ಯ-ಟೀಕಾ-ಟಿಪ್ಪಣಿ-ಮೊದಲಾದ 18 ಗ್ರಂಥಗಳೊಂದಿಗೆ
ಶ್ರೀವ್ಯಾಸತೀರ್ಥರ ತಾತ್ಪರ್ಯಚಂದ್ರಿಕಾ ಸಂಸ್ಕೃತಮೂಲ ಹಾಗೂ ಕನ್ನಡಾನುವಾದ





ಅಂತರ್ಯಾಮ್ಯಧಿಕರಣ

ಅದೃಶ್ಯತ್ವಾಧಿಕರಣ, ವೈಶ್ವಾನರಾಧಿಕರಣ

ದ್ಯುಭ್ವಾದ್ಯಧಿಕರಣ, ಭೂಮಾಧಿಕರಣ



ಪ್ರಕಾಶಕರು : ಶ್ರೀಪಾದರಾಜಮಠ, ಮುಳಬಾಗಿಲು

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥

ಭಾಗ - ೬

# ಪರಿಪೂರ್ಣಚಂದ್ರಿಕಾ

ದ್ವಿತೀಯಪಾದ - ಅಂತರ್ಯಾಮ್ಯಧಿಕರಣ, ಅದೃಶ್ಯತ್ವಾಧಿಕರಣ, ವೈಶ್ವಾನರಾಧಿಕರಣ,

ತೃತೀಯ ಪಾದ - ದ್ಯುಭ್ವಾದ್ಯಧಿಕರಣ, ಭೂಮಾಧಿಕರಣ

ಬ್ರಹ್ಮಸೂತ್ರ
ಸೂತ್ರದೀಪಿಕಾ
ತಂತ್ರದೀಪಿಕಾ
ನ್ಯಾಯಮುಕ್ತಾವಳಿ
ಬ್ರಹ್ಮಸೂತ್ರಭಾಷ್ಯ
ಭಾಷ್ಯದೀಪಿಕಾ
ಸತ್ತರ್ಕದೀಪಾವಳಿ
ತತ್ವಪ್ರಕಾಶಿಕಾ
ಭಾವದೀಪ
ವಾಕ್ಯಾರ್ಥಮಂಜರೀ
ತಾತ್ಪರ್ಯಚಂದ್ರಿಕಾ
ಪ್ರಕಾಶ
ಗುರುರಾಜೀಯ
ಭಾಟ್ಟಸಂಗ್ರಹ
ನ್ಯಾಯವಿವರಣ
ನ್ಯಾಯವಿವರಣಟೀಕಾ
ಅಣುಭಾಷ್ಯ
ತತ್ವಮಂಜರೀ

(ಶಂಕರಭಾಷ್ಯ, ಭಾಮತೀ, ರಾಮಾನುಜಭಾಷ್ಯ ಇವುಗಳ ಸಂಪೂರ್ಣ ಅಡಿಟಿಪ್ಪಣಿಯೊಂದಿಗೆ)

* * * * * *

ಪ್ರಧಾನಸಂಪಾದಕರು :
ವಿ॥ ಆರ್. ವೇಂಕಟೇಶಾಚಾರ್ಯ
ಶ್ರೀರಂಗಮ್

ಸಂಗ್ರಹ ಮತ್ತು ಅನುವಾದ :
ವಿ॥ ಬೆಮ್ಮತ್ತಿ ವೇಂಕಟೇಶಾಚಾರ್ಯ
ಬೆಂಗಳೂರು

\- - - - - -

ಪ್ರಕಾಶಕರು
ಶ್ರೀಪಾದರಾಜಮಠ
ಮುಳಬಾಗಿಲು.

'ಪರಿಪೂರ್ಣಚಂದ್ರಿಕಾ' ಖರನಾಮಸಂವತ್ಸರ ಭಾದ್ರಪದ ಬಹುಳ ತ್ರಯೋದಶಿ (ದಿನಾಂಕ : 25-09-2011) ಶ್ರೀಶ್ರೀ ವಿಜ್ಞಾನನಿಧಿತೀರ್ಥಶ್ರೀಪಾದಂಗಳವರ ಮಹಾಸಮಾರಾಧನೆಯ ಶುಭಸಂದರ್ಭದಲ್ಲಿ ಮುಳಬಾಗಿಲು ಕ್ಷೇತ್ರದಲ್ಲಿ ಶ್ರೀಶ್ರೀಶ್ರೀ ಕೇಶವನಿಧಿಶ್ರೀಪಾದಂಗಳವರಿಂದ ಬಿಡುಗಡೆಯಾಯಿತು.

ಪ್ರಕಾಶನ : ಶ್ರೀಪಾದರಾಜಮಠ, ಮುಳುಬಾಗಿಲು.

ಸಹಯೋಗ : ಶ್ರೀಮತಿ ಲೀಲಾ ಮತ್ತು ಶ್ರೀನಿವಾಸ ಪ್ರಹ್ಲಾದ

ಡಾಯಲ್ಸ್ ಟೌನ್, ಪೆನ್ಸಿಲ್‌ವೆನಿಯಾ, ೧೮೯೦೧,

ಯು.ಎಸ್.ಎ.

ಪ್ರಥಮಮುದ್ರಣ : 2011

ಬೆಲೆ : 1000 ರೂ

ಪ್ರತಿಗಳು : 1000





ಅಕ್ಷರಜೋಡಣೆ :

ಸುಬ್ಬಣ್ಣ

ಕೆ. ವೆಂಕಟೇಶಮೂರ್ತಿ - 9480261663

ನಾಗಲತಾ(ಸುಧಾ)ಗಿರಿ, ಬೆಂಗಳೂರು.

ಮುಖಪುಟ :

ಶ್ರೀಮತಿ ವಿಜಯಲಕ್ಷ್ಮಿ

ಮುದ್ರಣ

ದರ್ಶನ್ ಪ್ರಿಂಟರ್ಸ್, ರಾಘವೇಂದ್ರಕಾಲೋನಿ, ಬೆಂಗಳೂರು.

# ಮುನ್ನುಡಿ

ಭಗವಂತ ಎಲ್ಲಿದ್ದಾನೆ .......?

ಹೇಗಿದ್ದಾನೆ .........?

ಪ್ರತಿನಿತ್ಯ ನಾವು ಅವನನ್ನು ಎಲ್ಲಿ ಕಾಣಬೇಕು ............?

ಇದರ ಬಗ್ಗೆ ಎಷ್ಟು ವಿಚಾರ ಮಾಡಿದರೂ ಗೊಂದಲದಲ್ಲಿಯೇ ಮುಗಿಯುತ್ತದೆ.

..... ಆದರೆ ಉತ್ತರ ಕಷ್ಟವಿಲ್ಲ.

ಭಗವಂತನನ್ನು ಮೇಲಿನ ಲೋಕದಲ್ಲಿದ್ದಾನೆಂದು ...... ಅಥವಾ ದೊಡ್ಡ ಕ್ಷೇತ್ರಗಳಲ್ಲಿದ್ದಾನೆಂದು ...... ಅಥವಾ ಮಹಾತ್ಮರ ಬಳಿ ಇರುತ್ತಾನೆಂದು ತಿಳಿದು ಸುಮ್ಮನಿರಬೇಕಾಗಿಲ್ಲ ...... ನಮಗೆ ಅತ್ಯಂತ ಹತ್ತಿರವಿರುವ, ಅತ್ಯಂತ ಅಭಿಮಾನವೂ ಇರುವ .......

ನಮ್ಮ ಹೃದಯದಲ್ಲೇ ಇರುತ್ತಾನೆ.

ಆದ್ದರಿಂದಲೇ ನಾವು ಭಗವಂತನನ್ನು ಬೇರೆ ಎಲ್ಲೆಲ್ಲೋ ಹುಡುಕಬೇಕಾಗಿಲ್ಲ.

ಅದಕ್ಕಾಗಿ ಕ್ಷೇತ್ರ ಮೊದಲಾದವುಗಳಿಗೆ ಹೋಗಬೇಕಾಗಿಲ್ಲ. ಮನೆಯಲ್ಲೇ ಬಂಗಾರದ ಕೊಪ್ಪರಿಗೆಯಿರುವುದನ್ನು ಮರೆತು ಕಡುಬಡವರಾಗಿ ಊರಿನ ಜನರ ಮುಂದೆ ಭಿಕ್ಷೆ ಬೇಡಿದಂತೆ ನಮ್ಮ ಸ್ಥಿತಿ.

ಯಾವುದೇ ಕ್ಷೇತ್ರಾದಿಗಳಿಗೆ ಹೋದರೂ ಹೃದಯದಲ್ಲಿರುವ ಭಗವಂತನನ್ನು ನಾವು ಮರೆಯಬಾರದು.

ದೇವರ ಪೂಜೆಯ ಸಂದರ್ಭದಲ್ಲಿಯೂ ಹೃಯದಲ್ಲಿರುವ ಭಗವಂತನನ್ನು ನಾವು ಮರೆಯಬಾರದು.

*ಪರಿಪೂರ್ಣಚಂದ್ರಿಕಾ*

ಗುರುಗಳ ಅಂತರ್ಯಾಮಿಯಲ್ಲಿ ಕೃಷ್ಣಾರ್ಪಣವೆನ್ನುವಾಗಲೂ ಹೃದಯಲ್ಲಿರುವ ಭಗವಂತನನ್ನು ಮರೆಯಬಾರದು.

ಬಹಳ ಗಮನಿಸ ಬೇಕಾದ ವಿಚಾರ - ಪ್ರತಿನಿತ್ಯ ನಾವು ಮಾಡುವಂತಹ ಸಂಧ್ಯಾವಂದನೆ, ಗಾಯತ್ರಿಜಪ ಹಾಗೂ ಉಳಿದ ಮಂತ್ರಗಳ ಜಪದಕಾಲದಲ್ಲಿಯೂ ನಮ್ಮ ಹೃದಯದಲ್ಲೇ ಭಗವಂತನನ್ನು ಚಿಂತನೆ ಮಾಡಬೇಕು.

ಎಲ್ಲಿಯ ತನಕ ಹೃದಯದಲ್ಲೇ ಭಗವಂತನಿದ್ದಾನೆಂಬ ಚಿಂತನೆ, ಉಪಾಸನೆಗಳು ನಮಗೆ ಬರುವುದಿಲ್ಲವೋ? ಅಲ್ಲಿಯ ತನಕ ಭಗವಂತನು ನಮಗೆ ದೊರೆಯಲಾರ. ಆದ್ದರಿಂದಲೇ ಕಣ್ಮುಚ್ಚಿ ಧ್ಯಾನ ಮಾಡಬೇಕು. ಹೊರಗಿನ ಕಣ್ಮುಚ್ಚುವುದೆಂದರೆ ಒಳಗಣ್ಣಿನಿಂದ ಹೃದಯದಲ್ಲಿರುವ ಭಗವಂತನನ್ನು ಕಾಣುವುದು ಎಂದರ್ಥ.

ಬ್ರಹ್ಮಸೂತ್ರದ ಅಧ್ಯಯನವನ್ನು ಅನುಷ್ಠಾನಕ್ಕೆ ತರುವುದೆಂದರೆ ಹೃದಯದಲ್ಲಿರುವ ಭಗವಂತನನ್ನು ಪ್ರತಿಕ್ಷಣಗಳಲ್ಲಿಯೂ, ಪ್ರತಿಹೆಜ್ಜೆಯಲ್ಲಿಯೂ ಸ್ಮರಿಸುತ್ತಾ ಸರ್ವೋತ್ತಮನು, ಸರ್ವನಿಯಾಮಕನು ಸಕಲ ಗುಣಪರಿಪೂರ್ಣನೂ ಎಂದು ತಿಳಿಯುವಿಕೆ.

ಪ್ರಕೃತ ದ್ವಿತೀಯ ಪಾದದಲ್ಲಿರುವ ಗುಹಾಧಿಕರಣ, ಅಂತರ್ಯಾಮ್ಯಧಿಕರಣಗಳು ನಮ್ಮ ಹೃದಯದಲ್ಲೇ ಭಗವಂತನಿದ್ದಾನೆಂದು ಎಚ್ಚರಿಸುತ್ತಿದೆ.

ಪ್ರಕೃತ ತಾತ್ಪರ್ಯಚಂದ್ರಿಕೆಯಲ್ಲಿ ಅಂತರ್ಯಾಮ್ಯಧಿಕರಣವನ್ನು ಹೇಗೆ ಬಣ್ಣಿಸಿದ್ದಾರೆಂಬುದನ್ನು ತಿಳಿಯೋಣ.....

# ಅಂತರ್ಯಾಮ್ಯಧಿಕರಣ

*ಆನಂತರ್ಯ ಸಂಗತಿ ಹಾಗೂ ಅಂತರ್ಯಾಮಿ ಪ್ರಕೃತ್ಯಾದಿಗಳೋ ?*
*ಅಥವಾ ವಿಷ್ಣುವೋ? ಎಂದು ಸಂಶಯ*

ಅಂತರ್ಯಾಮ್ಯಧಿಕರಣವು ಪ್ರಾರಂಭವಾಗುತ್ತಿದೆ. ಹಿಂದಿನ ಅಧಿಕರಣದಲ್ಲಿ ಚಕ್ಷುರಂತಃಸ್ಥನಾದವನು ವಿಷ್ಣುವೇ ಆಗಿದ್ದಾನೆಂದು ನಿರ್ಣಯಿಸಿದ್ದಾಯಿತು. ಆ ನಿರ್ಣಯಕ್ಕೆ ಅಮೃತತ್ವವನ್ನು ಹೇತುವೆಂದು ಹೇಳಿದರು. ಆದರೆ ವಿಷ್ಣುವಿನಲ್ಲಿ ಅಂತಹ ಅಮೃತತ್ವಾದಿ ಹೇತುಗಳೇ ಕೂಡುವುದಿಲ್ಲವೆಂದು ಈ ಅಧಿಕರಣದಲ್ಲಿ ಆಕ್ಷೇಪ ಮಾಡುತ್ತಿರುವುದರಿಂದ ಆನಂತರ್ಯ ಸಂಗತಿಯನ್ನು ತಿಳಿಯಬೇಕು.

'ಅಂತರ್ಯಾಮ್ಯಮೃತಃ' ಎಂಬ ಶ್ರುತಿ ವಾಕ್ಯ ಈ ಅಧಿಕರಣಕ್ಕೆ ವಿಷಯವಾಗಿದೆ. ಇಲ್ಲಿ ಕೇಳಿಸುತ್ತಿರುವ ಅಂತರ್ಯಾಮಿಯು ಪ್ರಕೃತ್ಯಾದಿಗಳೇಕಾಗಬಾರದು? ಎಂಬುದು ಪೂರ್ವಪಕ್ಷಿಗಳ ವಾದ. ವಿಷ್ಣುವೇ ಎಂದು ಸಿದ್ಧಾಂತಿಗಳ

ನಿರ್ಣಯ. ಆದ್ದರಿಂದ ಒಂದು ವೇಳೆ ಮುಂದೆ ಹೇಳುವ ಪ್ರಕಾರ ಅಂತರ್ಯಾಮಿಯು ಅಚೇತನಪರವಾದರೆ ಆವಾಗ ಜಡವಿದಿತತ್ವವು ಪ್ರಕೃತ್ಯಾದಿಗಳಲ್ಲಿ ಉಪಪನ್ನವಾಗುತ್ತದೆ. ಆವಾಗ ರೂಢ್ಯರ್ಥದಲ್ಲಿ ಬಾಧಕವಿಲ್ಲದ ಕಾರಣ ಪ್ರಕೃತ್ಯಾದಿಗಳನ್ನೇ ಶರೀರವಾಗಿ ಶರೀರವಾಗಿವುಳ್ಳ ವಿಷ್ಣುವೆಂಬರ್ಥವನ್ನು ಸ್ವೀಕರಿಸಬೇಕೆಂಬುದು ಯುಕ್ತವಾಗುವುದಿಲ್ಲ. ಆದ್ದರಿಂದ ಪ್ರಕೃತ್ಯಾದಿಗಳೇ ಅಂತರ್ಯಾಮಿಯೆಂದು ಪೂರ್ವಪಕ್ಷದ ಫಲ. ಜೀವನಿಗಿಂತ ಅಂತರ್ಯಾಮಿಗೆ ಭೇದವನ್ನು ಹೇಳುವ ವಚನಗಳಿರುವುದಿಲ್ಲವೆಂದು ಪೂರ್ವಪಕ್ಷಿಯ ಅಭಿಪ್ರಾಯ.

ಒಂದು ವೇಳೆ ಚೇತನ ಪರವಾದರೆ ಆವಾಗ ಸಾಕಲ್ಯೇನಾವಿದಿತತ್ವವು ಪ್ರಕೃತ್ಯಾದಿಗಳಲ್ಲಿ ಕೂಡುವುದಿಲ್ಲ. ಹೀಗೆ ಬಾಧಕವಿರುವುದರಿಂದ ರೂಢಿಯನ್ನು ಬಿಟ್ಟು ಶೀರ್ಯಮಾಣತ್ವ ಎಂಬ ಯೋಗದಿಂದ ವಿಷ್ಣುವಿನಲ್ಲೂ ಸಹ ಪ್ರಕೃತ್ಯಾದಿಗಳೇ ಶರೀರವಾಗಿವೆಯೆಂಬರ್ಥವನ್ನು ಕೂಡಿಸಬಹುದು. ಆದ್ದರಿಂದ ವಿಷ್ಣುವೇ ಅಂತರ್ಯಾಮಿಯಾಗಿದ್ದಾನೆಂದು ಸಿದ್ಧಾಂತದ ಫಲ.

*ಪ್ರಕೃತಿಯೇ ಅಂತರ್ಯಾಮಿಯೆಂದು ಪೂರ್ವಪಕ್ಷ*

ಪೂರ್ವಪಕ್ಷ ಹೀಗಿದೆ - ''ಏಷ ತ ಆತ್ಮಾಅಂತರ್ಯಾಮೀ'' ಎಂಬ ವಿಷಯ ವಾಕ್ಯದಲ್ಲಿ ಪ್ರತಿಪಾದ್ಯವಾದ ಅಂತರ್ಯಾಮಿಯು ಪ್ರಕೃತಿಯೇ ಆಗಿದೆ. ಪ್ರಕೃತಿಯನ್ನು ಅಂತರ್ಯಾಮಿ ಎಂದು ಹೇಳಿದರೆ ಶ್ರುತಿಯಲ್ಲಿ ಹೇಳಲ್ಪಟ್ಟ ಪೃಥಿವ್ಯಾದಿಗಳು ಶರೀರವಾಗಿವೆ ಎಂಬ ಮಾತನ್ನು ಸುಲಭವಾಗಿ ಕೂಡಿಸಬಹುದು. ಪೃಥಿವ್ಯಾದಿಗಳಿಗೆ ಉಪಾದಾನವಾದ್ದರಿಂದ ಸ್ವರೂಪ ಎಂಬರ್ಥದಲ್ಲಿ ಶರೀರಶಬ್ದವನ್ನು ಪ್ರಯೋಗಿಸುವುದು ಕಷ್ಟವಾಗುವುದಿಲ್ಲ. ಆದರೆ ದಿಕ್ ಮೊದಲಾದವುಗಳು ಅಪ್ರಾಕೃತವಾದ್ದರಿಂದ ಪ್ರಕೃತಿಗೆ ಶರೀರಗಳಾಗಿವೆ ಎಂಬ ಮಾತನ್ನು ಕೂಡಿಸುವುದು ಸ್ವಲ್ಪ ಕಷ್ಟವಾಗುತ್ತದೆ. ಆದರೆ ಬ್ರಹ್ಮನು ಅಂತರ್ಯಾಮಿ ಎಂಬ ಪಕ್ಷವನ್ನು ಆಶ್ರಯಿಸಿದಾಗ ಪೃಥಿವ್ಯಾದಿಗಳು ಶರೀರವಾಗಿವೆ ಎಂಬ ಮಾತನ್ನೇ ಕೂಡಿಸಲು ಸಾಧ್ಯವಿಲ್ಲ. 'ಶೀರ್ಯಮಾಣತ್ವ' ಎಂಬ ಯೌಗಿಕಾರ್ಥವನ್ನು ಸ್ವೀಕರಿಸಲು ಹೊರಟರೆ ಅಪ್ರಾಕೃತವಾದ ದಿಗಾದಿಗಳಲ್ಲಿ ಅದೂ ಸಹ ತಪ್ಪಾಗುತ್ತದೆ. ಆದ್ದರಿಂದ ಪ್ರಕೃತಿಯನ್ನೇ ಅಂತರ್ಯಾಮಿಯೆನ್ನಬೇಕು. ದಿಕ್ ಮೊದಲಾದವನ್ನು ಶರೀರವೆಂದು ಹೇಳಿದ್ದರೆ ಗೌಣಾರ್ಥ ಮಾಡಬೇಕು.

ಪ್ರಕೃತಿಯನ್ನು ಅಂತರ್ಯಾಮಿ ಎಂದು ಹೇಳಿದಾಗ ಅನೇಕ ಬಾಧಕಗಳಿಗೆ ಅವಕಾಶವಿದೆ -

ಹೇಗೆಂದರೆ 'ಯಃ ಪೃಥಿವ್ಯಾಂ ತಿಷ್ಠನ್' ಎಂಬಲ್ಲಿ ಹೇಳಲ್ಪಟ್ಟ ಪೃಥಿವ್ಯಾದಿ ಆಧಾರತ್ವವು ಬಾಧಕವೋ. 'ಯಮಯತಿ' ಎಂಬಲ್ಲಿ ಹೇಳಲ್ಪಟ್ಟ ಪೃಥಿವ್ಯಾದಿ ನಿಯಾಮಕತ್ವವು ಬಾಧಕವೋ? ಅಥವಾ 'ಆತ್ಮಾನಂ ಯಮಯತಿ' ಎಂಬಲ್ಲಿ ಹೇಳಲ್ಪಟ್ಟ ಚೇತನ ನಿಯಾಮಕತ್ವವು ಬಾಧಕವೋ? ಅಥವಾ ಆತ್ಮಾವಿದಿತತ್ವವು ಬಾಧಕವೋ?. ''ಅದೃಷ್ಟೋ ದ್ರಷ್ಟಾಽಶ್ರುತಃ ಶ್ರೋತಾ ಅಮತೋ ಮಂತಾ ಅವಿಜ್ಞಾತೋ ವಿಜ್ಞಾತಾ'' ಎಂಬಲ್ಲಿ ಹೇಳಲ್ಪಟ್ಟ ದ್ರಷ್ಟೃತ್ವಾದಿಗಳು ಬಾಧಕಗಳೋ? ಎಂದು ಪ್ರಶ್ನಿಸುತ್ತೇವೆ ಎಂದರೆ ಈ ಯಾವ ಬಾಧಕಗಳಿಗೂ ಅವಕಾಶವಿಲ್ಲ. ಏಕೆಂದರೆ ಕಾರ್ಯದಲ್ಲಿ ಕಾರಣವಿದೆಯೆಂಬ ಪ್ರಯೋಗವು ಲೋಕದಲ್ಲಿ ಕಾಣಿಸುತ್ತಿದೆ. ಪೃಥಿವಿ ಹಾಗೂ ಪ್ರಕೃತಿಗಳಿಗೆ ಕಾರ್ಯಕಾರಣ ಭಾವವಿದ್ದರೂ ಆಧಾರಾಧೇಯಭಾವದಿಂದ ವ್ಯವಹರಿಸಬಹುದು.

ಇನ್ನು 'ಪೃಥಿವೀಂ ಯಮಯತಿ' ಎಂಬಲ್ಲಿ ಕೇಳಿಸುತ್ತಿರುವ ಪೃಥಿವ್ಯಾದಿನಿಯಾಮಕತ್ವವು ಪ್ರಕೃತಿಯಲ್ಲಿ ಕೂಡುವುದಿಲ್ಲವೆಂದು ಹೇಳಬೇಕು. ಆದರೆ ಆತ್ಮನ ಪ್ರವೃತ್ತಿಯು ಶರೀರದ ಮೂಲಕವೇ ಆಗಬೇಕೇ ಹೊರತು ನೇರವಾಗಿ ಆಗುವುದಿಲ್ಲ. ಆದ್ದರಿಂದ ಆತ್ಮನು ಪ್ರಕೃತ್ಯಧೀನವೆಂದು ಹೇಳಬಹುದು.

ಗುರುಗಳ ಅಂತರ್ಯಾಮಿಯಲ್ಲಿ ಕೃಷ್ಣಾರ್ಪಣವೆನ್ನುವಾಗಲೂ ಹೃದಯಲ್ಲಿರುವ ಭಗವಂತನನ್ನು ಮರೆಯಬಾರದು.

ಬಹಳ ಗಮನಿಸ ಬೇಕಾದ ವಿಚಾರ - ಪ್ರತಿನಿತ್ಯ ನಾವು ಮಾಡುವಂತಹ ಸಂಧ್ಯಾವಂದನೆ, ಗಾಯತ್ರಿಜಪ ಹಾಗೂ ಉಳಿದ ಮಂತ್ರಗಳ ಜಪದಕಾಲದಲ್ಲಿಯೂ ನಮ್ಮ ಹೃದಯದಲ್ಲೇ ಭಗವಂತನನ್ನು ಚಿಂತನೆ ಮಾಡಬೇಕು.

ಎಲ್ಲಿಯ ತನಕ ಹೃದಯದಲ್ಲೇ ಭಗವಂತನಿದ್ದಾನೆಂಬ ಚಿಂತನೆ, ಉಪಾಸನೆಗಳು ನಮಗೆ ಬರುವುದಿಲ್ಲವೋ? ಅಲ್ಲಿಯ ತನಕ ಭಗವಂತನು ನಮಗೆ ದೊರೆಯಲಾರ. ಆದ್ದರಿಂದಲೇ ಕಣ್ಮುಚ್ಚಿ ಧ್ಯಾನ ಮಾಡಬೇಕು. ಹೊರಗಿನ ಕಣ್ಮುಚ್ಚುವುದೆಂದರೆ ಒಳಗಣ್ಣಿನಿಂದ ಹೃದಯದಲ್ಲಿರುವ ಭಗವಂತನನ್ನು ಕಾಣುವುದು ಎಂದರ್ಥ.

ಬ್ರಹ್ಮಸೂತ್ರದ ಅಧ್ಯಯನವನ್ನು ಅನುಷ್ಠಾನಕ್ಕೆ ತರುವುದೆಂದರೆ ಹೃದಯದಲ್ಲಿರುವ ಭಗವಂತನನ್ನು ಪ್ರತಿಕ್ಷಣಗಳಲ್ಲಿಯೂ, ಪ್ರತಿಹೆಜ್ಜೆಯಲ್ಲಿಯೂ ಸ್ಮರಿಸುತ್ತಾ ಸರ್ವೋತ್ತಮನು, ಸರ್ವನಿಯಾಮಕನು ಸಕಲ ಗುಣಪರಿಪೂರ್ಣನೂ ಎಂದು ತಿಳಿಯುವಿಕೆ.

ಪ್ರಕೃತ ದ್ವಿತೀಯ ಪಾದದಲ್ಲಿರುವ ಗುಹಾಧಿಕರಣ, ಅಂತರ್ಯಾಮ್ಯಧಿಕರಣಗಳು ನಮ್ಮ ಹೃದಯದಲ್ಲೇ ಭಗವಂತನಿದ್ದಾನೆಂದು ಎಚ್ಚರಿಸುತ್ತಿದೆ.

ಪ್ರಕೃತ ತಾತ್ಪರ್ಯಚಂದ್ರಿಕೆಯಲ್ಲಿ ಅಂತರ್ಯಾಮ್ಯಧಿಕರಣವನ್ನು ಹೇಗೆ ಬಣ್ಣಿಸಿದ್ದಾರೆಂಬುದನ್ನು ತಿಳಿಯೋಣ.....

# ಅಂತರ್ಯಾಮ್ಯಧಿಕರಣ

*ಆನಂತರ್ಯ ಸಂಗತಿ ಹಾಗೂ ಅಂತರ್ಯಾಮಿ ಪ್ರಕೃತ್ಯಾದಿಗಳೋ ?*
*ಅಥವಾ ವಿಷ್ಣುವೋ? ಎಂದು ಸಂಶಯ*

ಅಂತರ್ಯಾಮ್ಯಧಿಕರಣವು ಪ್ರಾರಂಭವಾಗುತ್ತಿದೆ. ಹಿಂದಿನ ಅಧಿಕರಣದಲ್ಲಿ ಚಕ್ಷುರಂತಃಸ್ಥನಾದವನು ವಿಷ್ಣುವೇ ಆಗಿದ್ದಾನೆಂದು ನಿರ್ಣಯಿಸಿದ್ದಾಯಿತು. ಆ ನಿರ್ಣಯಕ್ಕೆ ಅಮೃತತ್ವವನ್ನು ಹೇತುವೆಂದು ಹೇಳಿದರು. ಆದರೆ ವಿಷ್ಣುವಿನಲ್ಲಿ ಅಂತಹ ಅಮೃತತ್ವಾದಿ ಹೇತುಗಳೇ ಕೂಡುವುದಿಲ್ಲವೆಂದು ಈ ಅಧಿಕರಣದಲ್ಲಿ ಆಕ್ಷೇಪ ಮಾಡುತ್ತಿರುವುದರಿಂದ ಆನಂತರ್ಯ ಸಂಗತಿಯನ್ನು ತಿಳಿಯಬೇಕು.

'ಅಂತರ್ಯಾಮ್ಯಮೃತಃ' ಎಂಬ ಶ್ರುತಿ ವಾಕ್ಯ ಈ ಅಧಿಕರಣಕ್ಕೆ ವಿಷಯವಾಗಿದೆ. ಇಲ್ಲಿ ಕೇಳಿಸುತ್ತಿರುವ ಅಂತರ್ಯಾಮಿಯು ಪ್ರಕೃತ್ಯಾದಿಗಳೇಕಾಗಬಾರದು? ಎಂಬುದು ಪೂರ್ವಪಕ್ಷಿಗಳ ವಾದ. ವಿಷ್ಣುವೇ ಎಂದು ಸಿದ್ಧಾಂತಿಗಳ

ನಿರ್ಣಯ. ಆದ್ದರಿಂದ ಒಂದು ವೇಳೆ ಮುಂದೆ ಹೇಳುವ ಪ್ರಕಾರ ಅಂತರ್ಯಾಮಿಯು ಅಚೇತನಪರವಾದರೆ ಆವಾಗ ಜಡವಿದಿತತ್ವವು ಪ್ರಕೃತ್ಯಾದಿಗಳಲ್ಲಿ ಉಪಪನ್ನವಾಗುತ್ತದೆ. ಆವಾಗ ರೂಢ್ಯರ್ಥದಲ್ಲಿ ಬಾಧಕವಿಲ್ಲದ ಕಾರಣ ಪ್ರಕೃತ್ಯಾದಿಗಳನ್ನೇ ಶರೀರವಾಗಿ ಶರೀರವಾಗಿವುಳ್ಳ ವಿಷ್ಣುವೆಂಬರ್ಥವನ್ನು ಸ್ವೀಕರಿಸಬೇಕೆಂಬುದು ಯುಕ್ತವಾಗುವುದಿಲ್ಲ. ಆದ್ದರಿಂದ ಪ್ರಕೃತ್ಯಾದಿಗಳೇ ಅಂತರ್ಯಾಮಿಯೆಂದು ಪೂರ್ವಪಕ್ಷದ ಫಲ. ಜೀವನಿಗಿಂತ ಅಂತರ್ಯಾಮಿಗೆ ಭೇದವನ್ನು ಹೇಳುವ ವಚನಗಳಿರುವುದಿಲ್ಲವೆಂದು ಪೂರ್ವಪಕ್ಷಿಯ ಅಭಿಪ್ರಾಯ.

ಒಂದು ವೇಳೆ ಚೇತನ ಪರವಾದರೆ ಆವಾಗ ಸಾಕಲ್ಯೇನಾವಿದಿತತ್ವವು ಪ್ರಕೃತ್ಯಾದಿಗಳಲ್ಲಿ ಕೂಡುವುದಿಲ್ಲ. ಹೀಗೆ ಬಾಧಕವಿರುವುದರಿಂದರೂಢಿಯನ್ನುಬಿಟ್ಟುಶೀರ್ಯಮಾಣತ್ವಎಂಬಯೋಗದಿಂದವಿಷ್ಣುವಿನಲ್ಲೂಸಹಪ್ರಕೃತ್ಯಾದಿಗಳೇ ಶರೀರವಾಗಿವೆಯೆಂಬರ್ಥವನ್ನು ಕೂಡಿಸಬಹುದು. ಆದ್ದರಿಂದ ವಿಷ್ಣುವೇ ಅಂತರ್ಯಾಮಿಯಾಗಿದ್ದಾನೆಂದು ಸಿದ್ಧಾಂತದ ಫಲ.

*ಪ್ರಕೃತಿಯೇ ಅಂತರ್ಯಾಮಿಯೆಂದು ಪೂರ್ವಪಕ್ಷ*

ಪೂರ್ವಪಕ್ಷ ಹೀಗಿದೆ - ''ಏಷ ತ ಆತ್ಮಾಅಂತರ್ಯಾಮೀ'' ಎಂಬ ವಿಷಯ ವಾಕ್ಯದಲ್ಲಿ ಪ್ರತಿಪಾದ್ಯವಾದ ಅಂತರ್ಯಾಮಿಯು ಪ್ರಕೃತಿಯೇ ಆಗಿದೆ. ಪ್ರಕೃತಿಯನ್ನು ಅಂತರ್ಯಾಮಿ ಎಂದು ಹೇಳಿದರೆ ಶ್ರುತಿಯಲ್ಲಿ ಹೇಳಲ್ಪಟ್ಟ ಪೃಥಿವ್ಯಾದಿಗಳು ಶರೀರವಾಗಿವೆ ಎಂಬ ಮಾತನ್ನು ಸುಲಭವಾಗಿ ಕೂಡಿಸಬಹುದು. ಪೃಥಿವ್ಯಾದಿಗಳಿಗೆ ಉಪಾದಾನವಾದ್ದರಿಂದ ಸ್ವರೂಪ ಎಂಬರ್ಥದಲ್ಲಿ ಶರೀರಶಬ್ದವನ್ನು ಪ್ರಯೋಗಿಸುವುದು ಕಷ್ಟವಾಗುವುದಿಲ್ಲ. ಆದರೆ ದಿಕ್ ಮೊದಲಾದವುಗಳು ಅಪ್ರಾಕೃತವಾದ್ದರಿಂದ ಪ್ರಕೃತಿಗೆ ಶರೀರಗಳಾಗಿವೆ ಎಂಬ ಮಾತನ್ನು ಕೂಡಿಸುವುದು ಸ್ವಲ್ಪ ಕಷ್ಟವಾಗುತ್ತದೆ. ಆದರೆ ಬ್ರಹ್ಮನು ಅಂತರ್ಯಾಮಿ ಎಂಬ ಪಕ್ಷವನ್ನು ಆಶ್ರಯಿಸಿದಾಗ ಪೃಥಿವ್ಯಾದಿಗಳು ಶರೀರವಾಗಿವೆ ಎಂಬ ಮಾತನ್ನೇ ಕೂಡಿಸಲು ಸಾಧ್ಯವಿಲ್ಲ. 'ಶೀರ್ಯಮಾಣತ್ವ' ಎಂಬ ಯೌಗಿಕಾರ್ಥವನ್ನು ಸ್ವೀಕರಿಸಲು ಹೊರಟರೆ ಅಪ್ರಾಕೃತವಾದ ದಿಗಾದಿಗಳಲ್ಲಿ ಅದೂ ಸಹ ತಪ್ಪಾಗುತ್ತದೆ. ಆದ್ದರಿಂದ ಪ್ರಕೃತಿಯನ್ನೇ ಅಂತರ್ಯಾಮಿಯೆನ್ನಬೇಕು. ದಿಕ್ ಮೊದಲಾದವನ್ನು ಶರೀರವೆಂದು ಹೇಳಿದ್ದರೆ ಗೌಣಾರ್ಥ ಮಾಡಬೇಕು.

ಪ್ರಕೃತಿಯನ್ನು ಅಂತರ್ಯಾಮಿ ಎಂದು ಹೇಳಿದಾಗ ಅನೇಕ ಬಾಧಕಗಳಿಗೆ ಅವಕಾಶವಿದೆ -

ಹೇಗೆಂದರೆ 'ಯಃ ಪೃಥಿವ್ಯಾಂ ತಿಷ್ಠನ್' ಎಂಬಲ್ಲಿ ಹೇಳಲ್ಪಟ್ಟ ಪೃಥಿವ್ಯಾದಿ ಆಧಾರತ್ವವು ಬಾಧಕವೋ. 'ಯಮಯತಿ' ಎಂಬಲ್ಲಿ ಹೇಳಲ್ಪಟ್ಟ ಪೃಥಿವ್ಯಾದಿ ನಿಯಾಮಕತ್ವವು ಬಾಧಕವೋ? ಅಥವಾ 'ಆತ್ಮಾನಂ ಯಮಯತಿ' ಎಂಬಲ್ಲಿ ಹೇಳಲ್ಪಟ್ಟ ಚೇತನ ನಿಯಾಮಕತ್ವವು ಬಾಧಕವೋ? ಅಥವಾ ಆತ್ಮಾವಿದಿತತ್ವವು ಬಾಧಕವೋ?. ''ಅದೃಷ್ಟೋ ದ್ರಷ್ಟಾಽಶ್ರುತಃ ಶ್ರೋತಾ ಅಮತೋ ಮಂತಾ ಅವಿಜ್ಞಾತೋ ವಿಜ್ಞಾತಾ'' ಎಂಬಲ್ಲಿ ಹೇಳಲ್ಪಟ್ಟ ದ್ರಷ್ಟೃತ್ವಾದಿಗಳು ಬಾಧಕಗಳೋ? ಎಂದು ಪ್ರಶ್ನಿಸುತ್ತೇವೆ ಎಂದರೆ ಈ ಯಾವ ಬಾಧಕಗಳಿಗೂ ಅವಕಾಶವಿಲ್ಲ. ಏಕೆಂದರೆ ಕಾರ್ಯದಲ್ಲಿ ಕಾರಣವಿದೆಯೆಂಬ ಪ್ರಯೋಗವು ಲೋಕದಲ್ಲಿ ಕಾಣಸುತ್ತಿದೆ. ಪೃಥಿವಿ ಹಾಗೂ ಪ್ರಕೃತಿಗಳಿಗೆ ಕಾರ್ಯಕಾರಣ ಭಾವವಿದ್ದರೂ ಆಧಾರಾಧೇಯಭಾವದಿಂದ ವ್ಯವಹರಿಸಬಹುದು.

ಇನ್ನು 'ಪೃಥಿವೀಂ ಯಮಯತಿ' ಎಂಬಲ್ಲಿ ಕೇಳಿಸುತ್ತಿರುವ ಪೃಥಿವ್ಯಾದಿನಿಯಾಮಕತ್ವವು ಪ್ರಕೃತಿಯಲ್ಲಿ ಕೂಡುವುದಿಲ್ಲವೆಂದು ಹೇಳಬೇಕು. ಆದರೆ ಆತ್ಮನ ಪ್ರವೃತ್ತಿಯು ಶರೀರದ ಮೂಲಕವೇ ಆಗಬೇಕೇ ಹೊರತು ನೇರವಾಗಿ ಆಗುವುದಿಲ್ಲ. ಆದ್ದರಿಂದ ಆತ್ಮನು ಪ್ರಕೃತ್ಯಧೀನವೆಂದು ಹೇಳಬಹುದು.

*ಪರಿಪೂರ್ಣಚಂದ್ರಿಕಾ*

'ಯಮಾತ್ಮಾ ನ ವೇದ' ಎಂಬಲ್ಲಿ ಆತ್ಮನಿಂದ ಅಂತರ್ಯಾಮಿಯು ತಿಳಿಯಲು ಸಾಧ್ಯವಿಲ್ಲ ಎಂದು ಹೇಳಲಾಗಿದೆ. ಇದನ್ನೂ ಸಹ ಪ್ರಕೃತಿಯಲ್ಲಿ ಕೂಡಿಸಬಹುದು. ಏಕೆಂದರೆ 'ಅಪ್ರತರ್ಕ್ಯಮವಿಜ್ಞೇಯಂ' ಇತ್ಯಾದಿ ವಾಕ್ಯಗಳಂತೆ ಪ್ರಕೃತಿಯನ್ನು ಸಾಕಲ್ಯೇನ ತಿಳಿಯಲು ಯಾರಿಂದಲೂ ಸಾಧ್ಯವಿಲ್ಲ.

ಅಂತರ್ಯಾಮಿಯಲ್ಲಿ 'ದ್ರಷ್ಟಾ ಶ್ರೋತಾ' ಇತ್ಯಾದಿಯಾಗಿ ದ್ರಷ್ಟೃತ್ವ, ಶ್ರೋತೃತ್ವಾದಿಗಳು ಕೇಳಿಸುತ್ತಿವೆ. ಇವುಗಳು ಪ್ರಾಕೃತವಾದ ಇಂದ್ರಿಯಗಳು ದರ್ಶನ ಸಾಧನವಾದ್ದರಿಂದ ಪ್ರಕೃತಿಯನ್ನು ದ್ರಷ್ಟಾಶ್ರೋತಾ ಇತ್ಯಾದಿಯಾಗಿ ಹೇಳಬಹುದು. ಏಕೆಂದರೆ ಕರಣದಲ್ಲಿ ಕರ್ತೃತ್ವದ ಪ್ರಯೋಗವನ್ನು ಮಾಡುವುದು ಕಂಡಿದೆ. (ಹಂತಾ ರಾಮಶರಃ ಇತ್ಯಾದಿ ಸ್ಥಳದಲ್ಲಿ) ಅಥವಾ ಅಭಿಮಾನಿಯಾದ ಜೀವನಲ್ಲಿ ದ್ರಷ್ಟೃತ್ವಾದಿಗಳಿರುವುದರಿಂದ ಅಭಿಮನ್ಯಮಾನವಾದ ಪ್ರಕೃತಿಯಲ್ಲೂ ಸಹ ದ್ರಷ್ಟೃತ್ವಾದಿಗಳನ್ನು ಹೇಳಬಹುದು. ಆದ್ದರಿಂದ ಪ್ರಕೃತಿಯೇ ಅಂತರ್ಯಾಮಿಯೆಂದು ಹೇಳಿದಾಗ ಯಾವ ಅಡಚಣೆಯಿರುವುದಿಲ್ಲ.

*ಪ್ರಕೃತಿ, ಅಂತರ್ಯಾಮಿಗಳು ಪೂರ್ವಪಕ್ಷಕ್ಕೆ ವಿಷಯವಲ್ಲವೆಂಬ ಪರಕೀಯಪಕ್ಷ ನಿರಾಸ*

ನಮ್ಮ ಸಿದ್ಧಾಂತದ ಪ್ರಕಾರ ಪ್ರಕೃತಿ ಹಾಗೂ ಅಭಿಮಾನಿಯಾದ ದೇವತೆಯು ಅಂತರ್ಯಾಮಿಯೆಂದು ಪೂರ್ವಪಕ್ಷ ಮಾಡಲಾಗಿದೆ. ಆದರೆ ಅದ್ವೈತಿಗಳು ಹಾಗೂ ರಾಮಾನುಜರು ಇದಕ್ಕೆ ವಿರುದ್ಧವಾಗಿ ಜೀವಸಾಮಾನ್ಯನನ್ನು ಪೂರ್ವಪಕ್ಷಕ್ಕೆ ವಿಷಯನೆನ್ನುತ್ತಾರೆ. ಪ್ರಕೃತಿಯಲ್ಲಿ ಜ್ಞಾನವಿಷಯತ್ವವನ್ನು ಹೇಳುವ ದ್ರಷ್ಟೃತ್ವವು ಕೂಡುವುದಿಲ್ಲವೆಂಬ ಒಂದು ಯುಕ್ತಿ ಬಿಟ್ಟರೆ ಬೇರೆ ಯುಕ್ತಿಯನ್ನು ಅವರು ಹೇಳಲಾರರು.

ಇವರ ವಾದದಲ್ಲಿ ಹುರುಳಿಲ್ಲ. ಸ್ವತಃ ಅವರೇ ಈಕ್ಷತ್ಯಧಿಕರಣದಲ್ಲಿ ಪ್ರಕೃತಿಗೆ ಗೌಣವಾದ ಜ್ಞಾನವಿಷಯತ್ವವನ್ನು ಒಪ್ಪಿದ್ದಾರೆ. ಅಷ್ಟೇ ಅಲ್ಲದೆ ಇದೇ ಅಧಿಕರಣದ ಸಿದ್ಧಾಂತದಲ್ಲಿ ಬ್ರಹ್ಮನಿಗೆ ಆರೋಪಿತವಾದ ಜ್ಞಾನವಿಷಯತ್ವವನ್ನು ಒಪ್ಪಿದ್ದಾರೆ. ಹೀಗೆ ಬೇರೆ ಕಡೆ ಗೌಣವಾದ ದ್ರಷ್ಟೃತ್ವವನ್ನು ಒಪ್ಪುವ ಅವರು ಪ್ರಕೃತಿಯಲ್ಲೇಕೆ ಗೌಣವಾದ ದ್ರಷ್ಟೃತ್ವವನ್ನು ನಿರಾಕರಿಸುತ್ತಾರೆಂಬುದು ಅರ್ಥವಾಗದ ವಿಚಾರ. ಮತ್ತು ಪ್ರಕೃತಿಯು ಪೂರ್ವಪಕ್ಷಕ್ಕೆ ವಿಷಯವಾಗದಿದ್ದ ಮೇಲೆ ಸೂತ್ರಕಾರರು 'ನಚ ಸ್ಮಾರ್ತಮ್' ಎಂಬ ಸೂತ್ರದಲ್ಲಿ ಪ್ರಕೃತಿಯನ್ನು ನಿಷೇಧಿಸಿದ್ದೂ ಸಹ ವ್ಯರ್ಥವಾಗುತ್ತದೆ.

ಪ್ರಕೃತಿಯು ಈ ಅಧಿಕರಣದ ಪೂರ್ವಪಕ್ಷಕ್ಕೆ ವಿಷಯವಾದಂತೆ ಅಭಿಮಾನಿದೇವತೆಯೂ ಸಹ ಅಂತರ್ಯಾಮಿಯೆಂದು ಪೂರ್ವಪಕ್ಷ ಮಾಡಬಹುದು. ಈ ಪಕ್ಷದಲ್ಲಿ ಪೃಥಿವ್ಯಾದಿಗಳಿಗೆ ಶರೀರತ್ವವನ್ನು ಉಪಪಾದಿಸುವುದು ಸುಲಭವಾಗುತ್ತದೆ. ಆದರೆ ಭಾಮತಿಯಲ್ಲಿ ಒಬ್ಬನೇ ಅಭಿಮಾನಿ ಜೀವನಿಗೆ ಸಮಸ್ತ ಜಗತ್ತಿನ ನಿಯಾಮಕತ್ವವು ಅಸಂಭಾವಿತವಾದ್ದರಿಂದ ಅಭಿಮಾನಿದೇವತೆಯೆಂಬ ಪಕ್ಷವನ್ನು ನಿರಾಕರಿಸಲಾಗಿದೆ.

ಆದರೆ ಅಭಿಮಾನಿದೇವತೆಯನ್ನು ನಿರಾಕರಿಸುವ ಭಾಮತಿಕಾರ ಜೀವಸಾಮಾನ್ಯನನ್ನು ಅಂತರ್ಯಾಮಿಯೆಂದು ಒಪ್ಪಿರುವುದು ಹಾಸ್ಯಾಸ್ಪದ ವಿಚಾರ. ಒಬ್ಬ ಅಭಿಮಾನಿಗೆ ಸಕಲ ಜಗತ್ಪ್ರೇರಕಶಕ್ತಿಯು ಬಾರದಿದ್ದಾಗ ಒಬ್ಬ ಜೀವ ಸಾಮಾನ್ಯನಿಗೆ ಅಂತಹ ಶಕ್ತಿ ಎಲ್ಲಿಂದ ಬರುತ್ತದೆಂದು ತಿಳಿಯುವುದಿಲ್ಲ. ಮತ್ತು ಜೀವಸಾಮಾನ್ಯನು ಅಂತರ್ಯಾಮಿಯೆಂದು ಹೇಳಿದರೆ ಅವನಿಗೆ ಪೃಥಿವೀ, ಪ್ರಾಣ ಮೊದಲಾದವುಗಳ ಸಮುದಾಯವು ಶರೀರವಾಗಿದೆ ಹೊರತು ಕೇವಲ ಪೃಥಿವಿಯಾಗಲೀ, ಕೇವಲ ಪ್ರಾಣಾದಿಗಳಾಗಲೀ ಶರೀರಗಳಾಗಿರುವುದಿಲ್ಲ. ಆದ್ದರಿಂದ ಶ್ರುತಿಯಲ್ಲಿ ಹೇಳಲ್ಪಟ್ಟ ಕೇವಲ ಪೃಥಿವ್ಯಾದಿ ಶರೀರತ್ವವು ತಪ್ಪಾಗುತ್ತದೆ. ಆದರೆ ಅಭಿಮಾನಿ ದೇವತೆಯಲ್ಲಿ ಆಯಾ ಭೂತಗಳಿಗೆ ಅಭಿಮಾನಿಯಾಗಿದ್ದಾರೆಂಬ ಕಾರಣದಿಂದಲೇ ಅವುಗಳನ್ನು ಶರೀರವೆಂದು ಹೇಳಬಹುದು.

*ಪರಿಪೂರ್ಣಚಂದ್ರಿಕಾ*

ಆದ್ದರಿಂದ ಅಭಿಮಾನಿದೇವತೆಗಳೇ ಅಂತರ್ಯಾಮಿಯು ಭಿನ್ನನಾದ್ದರಿಂದ ಆಕ್ಷಿಸ್ಥ ಹೊರತು ವಿಷ್ಣುವಲ್ಲವೆಂಬ ಪೂರ್ವಪಕ್ಷವು ದೃಢವಾಗುತ್ತದೆ. ವಿಷ್ಣುವಿನಲ್ಲಿ ಪೃಥಿವ್ಯಾದಿ ಶರೀರತ್ವವನ್ನು ಯೌಗಿಕವಾಗಿ ಹೇಳಬಹುದು. ಆದರೆ ಯೋಗಕ್ಕಿಂತ ರೂಢಿಯು ಪ್ರಬಲವಾದ್ದರಿಂದ ರೂಢ್ಯರ್ಥವನ್ನೇ ಸ್ವೀಕರಿಸಬೇಕು. ಬಾಧಕವಿದ್ದಾಗ ರೂಢ್ಯರ್ಥವನ್ನು ಬಿಡಬಹುದಾದರೂ ಇಲ್ಲಿ ಅಂತಹ ಬಾಧಕಗಳೇನೂ ಕಾಣಿಸುತ್ತಿಲ್ಲ.

ಈ ಎಲ್ಲಾ ಕಾರಣಗಳಿಂದ ಅಂತರ್ಯಾಮಿಯು ಭಿನ್ನನಾದ್ದರಿಂದ ಆಕ್ಷಿಸ್ಥ ಪುರುಷನು ವಿಷ್ಣುವಾಗುವುದಿಲ್ಲ. ಪೃಥಿವ್ಯಾದಿಗಳಿಗೆ ಅಭಿಮಾನಿಯಾದ ಜೀವ ಅಥವಾ ಪ್ರಕೃತಿ ಆಗುತ್ತದೆ. ಅಮೃತತ್ವವೂ ಸಹ ಜೀವ ಅಥವಾ ಪ್ರಕೃತಿಯಲ್ಲಿಯೇ ಉಪಪನ್ನವಾಗುತ್ತದೆ. ಹೀಗಿರುವಾಗ ಹಿಂದಿನ ಅಂತರಾಧಿಕರಣದಲ್ಲಿ ಅಮೃತತ್ವವೆಂಬ ಹೇತುವಿನಿಂದ ಆಕ್ಷಿಸ್ಥನಾದವನು ವಿಷ್ಣುವೇ ಆಗುತ್ತಾನೆಂದು ಸಮರ್ಥಿಸುವುದು ಹೇಗೆ ಯುಕ್ತವಾಗುತ್ತದೆ ? ಇಷ್ಟು ಪೂರ್ವಪಕ್ಷಿಗಳ ಅಭಿಪ್ರಾಯ.

*ಸರ್ವಾಂತರ್ಯಾಮಿಯಾದವನು ವಿಷ್ಣುವೇ ಎಂದು ಸಿದ್ಧಾಂತ*

ಅಧಿಕರಣದ ಸಿದ್ಧಾಂತ ಹೀಗಿದೆ - ಸಕಲರಲ್ಲಿ ಅಂತರ್ಯಾಮಿಯಾಗಿ ನೆಲೆಸಿರುವನು ಮಹಾವಿಷ್ಣುವೇ ಆಗಿದ್ದಾನೆ. ಯಾವ ಶ್ರುತಿಯು ಹೀಗೆ ಹೇಳುತ್ತಿದೆಯೋ ಅದೇ ಶ್ರುತಿಯಲ್ಲಿ ಕೇಳಿಸುತ್ತಿರುವ ಪೃಥಿವ್ಯಾದ್ಯವಿದಿತತ್ವವು ವಿಷ್ಣುವಿನಲ್ಲಿ ಸುಲಭವಾಗಿ ಬರುತ್ತದೆ. ಪೃಥಿವೀ ಶಬ್ದಕ್ಕೆ ಜಡವೆಂದು ಅರ್ಥವಲ್ಲ. ಹಾಗಾದಲ್ಲಿ ಅಪ್ರಸಕ್ತ ವಿಷಯ ನಿಷೇಧ ಮಾಡಿದಂತಾಗುತ್ತದೆ ಆದ್ದರಿಂದ ಅಭಿಮಾನಿಚೇತನರೆಂಬರ್ಥವನ್ನು ಹೇಳಬೇಕು. ಅಂತಹ ಅಭಿಮಾನಿಚೇತನರಿಂದ ಸಂಪೂರ್ಣವಾಗಿ ತಿಳಿಯಲು ಅಸಮರ್ಥನಾದವನು ಈಶ್ವರನೊಬ್ಬನೇ ಹೊರತು ಪ್ರಕೃತ್ಯಾದಿಗಳಲ್ಲ.

ಅಂತರತ್ವವೂ ಸಹ ವಿಷ್ಣುವಿನ ಧರ್ಮವೇ ಆಗಿದೆ -

ಪೃಥಿವ್ಯಾದ್ಯವಿದಿತತ್ವವು ಪರಮಾತ್ಮನಲ್ಲಿ ಬರುವಂತೆ ಅಂತರತ್ವವೂ ಸಹ ಬರುತ್ತದೆ. ಏಕೆಂದರೆ ಬಾಹ್ಯಪದಾರ್ಥಗಳ ಅಪೇಕ್ಷೆಯಿಲ್ಲದೇ ಯಾರು ವಿಹರಿಸುತ್ತಾರೋ ಅಂತಹವನು 'ಅಂತರಃ' ಎನಿಸುತ್ತಾನೆ. ಮತ್ತು ಅತ್ಯಂತ ಪ್ರಿಯನಾದ್ದರಿಂದಲೂ ಶ್ರೀಹರಿಯು ಅಂತರನೆಂದು ಹೇಳಲ್ಪಟ್ಟಿದ್ದಾನೆ.

ಪೂರ್ವಪಕ್ಷಕ್ಕೆ ಪ್ರಬಲ ಹೇತುವಾಗಿರುವ ಪೃಥಿವ್ಯಾದಿ ಶರೀರತ್ವವೂ ಸಹ ವಿಷ್ಣುವಿನಲ್ಲೇ ಉಪಪನ್ನವಾಗುತ್ತದೆ. ಅಗ್ನಿಯಲ್ಲಿ ಇಂದ್ರ ಶಬ್ದಪ್ರಯೋಗವನ್ನು ಯೌಗಿಕವಾಗಿ ಮತ್ತು ಗೌಣವಾಗಿ ಮಾಡುವಂತೆ ವಿಷ್ಣುವಿನಲ್ಲೂ ಯೌಗಿಕವಾಗಿ ಮತ್ತು ಗೌಣವಾಗಿ ಪೃಥಿವ್ಯಾದಿಶರೀರತ್ವವನ್ನು ಕೂಡಿಸಬೇಕು. ರೂಢ್ಯರ್ಥದಲ್ಲಿ ಬಾಧವಿರುವುದೇ ಇದಕ್ಕೆ ಕಾರಣ.

*ಸೂತ್ರಗಳ ಜೋಡಣೆಯು ಸ್ವಾರಸ್ಯಮಯವಾಗಿದೆ*

ಶಾರೀರ ಪದಕ್ಕೆ ಭಾಷ್ಯ ಹಾಗೂ ಟೀಕೆಗಳಲ್ಲಿ ಯೋಗಾರ್ಥವನ್ನಷ್ಟೇ ಹೇಳಲಾಗಿದೆ. ಬೃಹದಾರಣ್ಯಕ ಭಾಷ್ಯದಲ್ಲಿ ಗೌಣಾರ್ಥವನ್ನು ಹೇಳಲಾಗಿದೆ. ಎರಡೂ ಭಾಷ್ಯಗಳನ್ನು ವಿವಕ್ಷಿಸಿ ಪ್ರಕೃತ ಗ್ರಂಥಕಾರರು ವ್ಯಾಖ್ಯಾನಿಸುತ್ತಿದ್ದಾರೆಂಬ ಅಂಶವನ್ನು ಗಮನಿಸಬೇಕು.

ಪರಮಾತ್ಮನೇ ಅಂತರ್ಯಾಮಿಯೆಂದು ಹೇಳುವುದರಿಂದ 'ಯ ಆತ್ಮನಿ ತಿಷ್ಠನ್' ಎಂಬುದನ್ನು ಸ್ವರಸವಾಗಿ ಅರ್ಥೈಸಿದಂತಾಗುತ್ತದೆ.

ಸೂತ್ರಗಳ ಜೋಡಣೆಯು ಸ್ವಾರಸ್ಯಮಯವಾಗಿದೆ. ಮೊದಲನೆಯ ಸೂತ್ರವು ಸ್ವಪಕ್ಷದಲ್ಲಿ ಸಾಧಕ

ಪ್ರಮಾಣವನ್ನು ಹೇಳಿದೆ.

ಎರಡನೆಯ ಸೂತ್ರವು ಪ್ರಧಾನ ಹಾಗೂ ಜೀವಪಕ್ಷಗಳಲ್ಲಿ ಸಾಧಕವಿಲ್ಲವೆಂದು ಹೇಳಿದೆ. ಏಕೆಂದರೆ ಮೂರನೆಯ ಸೂತ್ರದಲ್ಲಿರುವ 'ಶಾರೀರಶ್ಚ' ಎಂಬ ಪದವು ಎರಡನೆಯ ಸೂತ್ರದಲ್ಲೂ ಅನ್ವಯವಾಗುತ್ತದೆ.

ಮೂರನೆಯ ಸೂತ್ರದಲ್ಲಿ ಜೀವಪಕ್ಷದಲ್ಲಿ ಬಾಧಕವನ್ನು ಹೇಳಲಾಗಿದೆ.

### *ಬೃಹದಾರಣ್ಯಕ ಭಾಷ್ಯದಿಂದ ವಿರೋಧ ಶಂಕೆ ಹಾಗೂ ಸಮಾಧಾನಗಳು*

ಬೃಹದಾರಣ್ಯಕ ಭಾಷ್ಯದಲ್ಲಿ ಆತ್ಮಶಬ್ದಕ್ಕೆ ಚತುರ್ಮುಖ ಎಂಬರ್ಥವನ್ನು ಹೇಳಿದ್ದಾರೆ. ಆದರೆ ಪ್ರಕೃತ ಜೀವನೆಂಬರ್ಥವನ್ನು ಒಪ್ಪಿ ಜೀವಭೇದದ ವಿಷಯದಲ್ಲಿ ಅದೇ ಶ್ರುತಿಯನ್ನು ಪ್ರಮಾಣವನ್ನಾಗಿ ಹೇಳಿದ್ದಾರೆ. ಇದು ವಿರುದ್ಧವಲ್ಲವೇ? ಎಂದು ಪ್ರಶ್ನಿಸಬಾರದು. ಚತುರ್ಮುಖಬ್ರಹ್ಮನಿಗೆ ನಿಯಾಮಕನಾದ್ದರಿಂದ ಬ್ರಹ್ಮನು ಚತುರ್ಮುಖಬ್ರಹ್ಮನಿಗಿಂತ ಭಿನ್ನನಾಗಿದ್ದಾನೆಂಬ ವಿಷಯವು ಸ್ಪಷ್ಟವಾಗಿ ತಿಳಿಯುತ್ತದೆ. ಚತುರ್ಮುಖನಿಂದಲೇ ಭಿನ್ನನಾದ ಮೇಲೆ ಚತುರ್ಮುಖನಿಂದ ಅಭಿಮನ್ಯಮಾನರಾದ ಸಕಲಜೀವರಿಗಿಂತ ಭಿನ್ನನಾಗಿದ್ದಾನೆಂದು ಇನ್ನೂ ಸ್ಪಷ್ಟವಾಗಿ ತಿಳಿಯುತ್ತದೆ. ಆದ್ದರಿಂದ ವಿರೋಧಕ್ಕೆ ಅವಕಾಶವಿಲ್ಲ.

'ಅಂತರ' ಶಬ್ದಕ್ಕೆ ಬೃಹದಾರಣ್ಯಕ ಭಾಷ್ಯದಲ್ಲಿ 'ಬಾಹ್ಯವಸ್ತುಗಳ ಅಪೇಕ್ಷೆಯಿಲ್ಲದೇ ಪೀಡಿಸುವಿಕೆ' ಎಂಬರ್ಥವನ್ನು ಹೇಳಿದ್ದಾರೆ. ಆದರೆ ಪ್ರಕೃತ ಟೀಕೆಯಲ್ಲಿ ಕೇವಲ ಭೇದವೆಂಬರ್ಥವನ್ನು 'ಅಂತರ' ಶಬ್ದಕ್ಕೆ ಹೇಳಿದ್ದಾರೆ. ಇದರ ವಿರೋಧ ಬರುತ್ತದಲ್ಲವೇ? ಎಂದೂ ಸಹ ಪ್ರಶ್ನಿಸಬಾರದು. 'ಆತ್ಮನೋ ಅಂತರಃ' ಎಂಬ ಶ್ರುತಿಯಲ್ಲಿರುವ ಅಂತರ ಶಬ್ದಕ್ಕೆ ಭೇದವೆಂಬರ್ಥವನ್ನು ಟೀಕೆಯಲ್ಲಿ ವಿವಕ್ಷಿಸಲಾಗಿದೆ. ಆದರೆ ಬೃಹದಾರಣ್ಯಕ ಭಾಷ್ಯದಲ್ಲಿ 'ಆತ್ಮಾನಾಂ ಅಂತರಃ' ಎಂಬಲ್ಲಿರುವ ಅಂತರ ಶಬ್ದವನ್ನು ಸ್ವೀಕರಿಸಿ ಅಂತಃಸ್ಥಿತ್ವ ರಮಣವೆಂಬ ಅರ್ಥವನ್ನು ಹೇಳಿದ್ದಾರೆ. ಆದ್ದರಿಂದ ಪರಸ್ಪರ ವಿರೋಧವಿರುವುದಿಲ್ಲ.

ಬೃಹದಾರಣ್ಯಕದಲ್ಲಿ ಮೂರು ಪ್ರಕರಣಗಳಿವೆ - ೧. ಅಭಿಮಾನಿ ದೇವತಾ ಪ್ರಕರಣ, ೨. ಅಧಿದೈವ ಪ್ರಕರಣ, ೩. ಅಧ್ಯಾತ್ಮ ಪ್ರಕರಣ ಎಂದು. ಈ ಮೂರು ಪ್ರಕರಣಗಳಲ್ಲಿಯೂ ಅಂತರ್ಯಾಮಿಯಾಗಿ ಹೇಳಲ್ಪಟ್ಟವನು ವಿಷ್ಣುವೇ ಪ್ರತಿಪಾದ್ಯನಾಗಿದ್ದಾನೆಂಬ ವಿಚಾರವು ನಿರ್ಧಾರವಾಯಿತು.

### *ಅದ್ವೈತಿಗಳ ಅಧಿಕರಣ ಶರೀರ*

ಅದ್ವೈತಿಗಳ ಅಧಿಕರಣ ಶರೀರ ಹೀಗಿದೆ -

ಬೃಹದಾರಣ್ಯಕೋಪನಿಷತ್ತಿನಲ್ಲಿರುವ 'ಯಃ ಪೃಥಿವ್ಯಾಂ ತಿಷ್ಠನ್' ಎಂಬ ವಾಕ್ಯವನ್ನೇ ಅದ್ವೈತಿಗಳೂ ಸಹ ವಿಷಯವಾಕ್ಯವೆಂದು ಹೇಳುತ್ತಾರೆ. ಈ ವಾಕ್ಯದಲ್ಲಿ ಲೋಕ, ವೇದ, ಯಜ್ಞ, ಪ್ರಾಣ ಮತ್ತು ಆತ್ಮ ಇವುಗಳ ಒಳಗಡೆ ನಿಯಾಮಕನಾಗಿ ನೆಲೆಸಿರುವ ವ್ಯಕ್ತಿಯನ್ನು ಪ್ರಸ್ತಾಪ ಮಾಡಲಾಗಿದೆ. ಈ ವ್ಯಕ್ತಿಯು ಅದೃಷ್ಟದ ಮೂಲಕ ಜೀವನಾಗಬಹುದು. ಅಥವಾ ಯೋಗಿಪುರುಷನೂ ಆಗಬಹುದು. ಅಥವಾ ದೇವತೆಗಳಾಗಬಹುದು. ಆದರೆ ಶರೀರವಿಲ್ಲದ ಬ್ರಹ್ಮನು ಅಂತರ್ಯಾಮಿಯಾಗಲು ಸಾಧ್ಯವಿಲ್ಲ. ನಿಯಾಮಕನೂ ಸಹ ಆಗಲಾರನು. ಇಷ್ಟು ಪೂರ್ವಪಕ್ಷ.

ಸರ್ವನಿಯಾಮಕತ್ವವು ಬ್ರಹ್ಮನ ಧರ್ಮವಾಗಿದೆ. ಅವನಿಂದ ನಿಯಮ್ಯವಾದ ಪ್ರಪಂಚವೇ ಶರೀರವಾಗಿದೆ. ಅಥವಾ ತನ್ನಲ್ಲಿರುವ ಮಾಯಾಶಕ್ತಿಯಿಂದ ಶರೀರದ ಅಪೇಕ್ಷೆ ಇಲ್ಲದೆಯೂ ಪ್ರಪಂಚವನ್ನು ನಿಯಮನ ಮಾಡುವ ಸಾಮರ್ಥ್ಯ ಅವನಿಗಿದೆ. ಆತ್ಮನಿಗೆ ಒಬ್ಬ ನಿಯಾಮಕನಿರುವುದಾದರೆ ಅವನಿಗೆ ಮತ್ತೊಬ್ಬ ನಿಯಾಮಕನು

ಇರಬೇಕಾಗುತ್ತದೆಂದು ಅನವಸ್ಥಾದೋಷಕ್ಕೆ ಅವಕಾಶವಿಲ್ಲ. ನಿಯಮ್ಯನಾದ ಜೀವಾತ್ಮನು ಮತ್ತು ನಿಯಾಮಕನಾದ ಪರಮಾತ್ಮನು ಒಬ್ಬನೇ ಆಗಿದ್ದಾನೆ. ಇವರಿಬ್ಬರಿಗೆ ತಾತ್ವಿಕವಾದ ಭೇದವಿರುವುದಿಲ್ಲ. ಮತ್ತು ಈ ಪ್ರಕರಣದಲ್ಲಿ 'ಏಷ ತ ಆತ್ಮಾ' ಎಂಬ ಶ್ರುತಿಯಲ್ಲಿ ಆತ್ಮತ್ವ, ಅಮೃತತ್ವ ಮೊದಲಾದ ಧರ್ಮಗಳನ್ನು ಅದೃಶ್ಯತ್ವಾದಿಧರ್ಮಗಳನ್ನು ಹೇಳಲಾಗಿದೆ. ಇವೆಲ್ಲವೂ ಬ್ರಹ್ಮನ ಅಸಾಧಾರಣಧರ್ಮವಾದ್ದರಿಂದ ಬ್ರಹ್ಮನೇ ಅಂತರ್ಯಾಮಿಯಾಗಿದ್ದಾನೆಂದು ಸಿದ್ಧಾಂತ.

ಈ ಅಧಿಕರಣ ಶರೀರವು ತಪ್ಪು. ಅಜ್ಞಾನವೇ ಕಲ್ಪಿತವಾದದ್ದು. ಅಜ್ಞಾನ ಕಲ್ಪಿತವಾದ ಜಗತ್ತು ಬ್ರಹ್ಮನ ಶರೀರವಾದರೆ ಶುಕ್ತಿಯ ಅಜ್ಞಾನದಿಂದ ಕಲ್ಪಿತವಾದ ರಜತವೂ ಸಹ ಶುಕ್ತಿಯ ಶರೀರವಾಗಬೇಕಾಗುತ್ತದೆ. ಮತ್ತು ನಮ್ಮಂತೆ ಬ್ರಹ್ಮನೂ ಸಹ ಸಂಸಾರಿಯಾಗಬೇಕಾಗುತ್ತದೆ. ಜಗತ್ತನ್ನು ಸೃಷ್ಟಿ ಮಾಡುವ ಮೊದಲು ಶರೀರ ರಹಿತನಾಗಿ ಇದ್ದಂತೆ ಜಗತ್ತನ್ನು ಸೃಷ್ಟಿಸಿದ ಮೇಲೂ ಶರೀರರಹಿತನಾಗಿಯೇ ಇರಬಹುದಲ್ಲವೇ?

ರೋಗಗ್ರಸ್ಥನಾದ ವ್ಯಕ್ತಿಗೆ ರೋಗವನ್ನು ಪರಿಹರಿಸಲು ಕಾಲ್ಪನಿಕವಾದ ಔಷಧಿಯನ್ನು ನೀಡುವುದರಿಂದ ಅವನ ರೋಗವು ಪರಿಹಾರವಾಗುವುದಿಲ್ಲ. ಅದರಂತೆ ಶರೀರ ಇಲ್ಲದ ವ್ಯಕ್ತಿಗೆ ನಿಯಮನ ಮಾಡಲು ಸಾಧ್ಯವಿಲ್ಲವೆಂದು ಹೇಳಿದಾಗ ಗೌಣವಾದ ಶರೀರವನ್ನು ಒಪ್ಪುವುದರಿಂದೇನೂ ಪ್ರಯೋಜನವಿಲ್ಲ. ಶುದ್ಧಬ್ರಹ್ಮನನ್ನು ನಿಯಾಮಕನೆಂದು ಹೇಳಲು ಸಾಧ್ಯವಿಲ್ಲ. ವಿಶಿಷ್ಟಬ್ರಹ್ಮನನ್ನು ಅವಿದ್ಯಾವಿಷಯನೆಂದು ಹೇಳಲು ಸಾಧ್ಯವಿಲ್ಲ. ಒಟ್ಟಾರೆ ಅದ್ವೈತಸಿದ್ಧಾಂತದಲ್ಲಿ ಸಿಲುಕಿಕೊಂಡಿರುವ ಇಬ್ಬರು ಬ್ರಹ್ಮರಿಗೂ ಏನೂ ಕೆಲಸವಿಲ್ಲ.

ಮತ್ತು ಅದ್ವೈತಿಗಳು ಪೂರ್ವಪಕ್ಷವನ್ನು ನಿರಾಕರಿಸುವುದಕ್ಕಾಗಿ ನಿಯಮ್ಯನಾದ ಜೀವನಿಗೂ ನಿಯಾಮಕನಾದ ಬ್ರಹ್ಮನಿಗೂ ಅಭೇದವನ್ನು ಒಪ್ಪುವದರ ಮೂಲಕ ಅನವಸ್ಥಾ ದೋಷವನ್ನು ಪರಿಹರಿಸಿದ್ದಾರೆ. ಆದರೆ ಜೀವಾದಿಗಳಿಂದ ಅಭೇದವಿದ್ದ ಮೇಲೆ ಅವರನ್ನು ಬ್ರಹ್ಮನು ಹೇಗೆ ತಾನೇ ನಿಯಮನ ಮಾಡುತ್ತಾನೆ. ಶ್ರುತಿ, ಸೂತ್ರಗಳಲ್ಲೆಲ್ಲಾ ಭೇದವೇ ಹೇಳಲ್ಪಟ್ಟಿರುವಾಗ ಅಭೇದದ ಮಾರ್ಗಕ್ಕೆ ಏಕೆ ಶರಣಾಗುತ್ತಾರೆ. ಇನ್ನು ಕಾಲ್ಪನಿಕ ಭೇದವನ್ನು ಒಪ್ಪುವ ಮೂಲಕ ಕಣ್ಣೊರೆಸುವಂತಹ ಪ್ರಯತ್ನವು ವ್ಯರ್ಥ. ಯಾವರೀತಿಯಾಗಿ ಜೀವಬ್ರಹ್ಮರಿಗೆ ಕಾಲ್ಪನಿಕ ಭೇದವನ್ನು ಒಪ್ಪುತ್ತಾರೋ ಅದರಂತೆ ಈಶ್ವರನನ್ನು ನಿಯಮನ ಮಾಡುವಂತಹ ಕಾಲ್ಪನಿಕ ಭೇದವುಳ್ಳ ಮತ್ತೊಬ್ಬ ವ್ಯಕ್ತಿಯೂ ಇರಬಹುದೆಂದು ಆಪಾದಿಸುತ್ತೇವೆ. ಆದ್ದರಿಂದ ಅದ್ವೈತಿಗಳು ಭಗವಂತನಲ್ಲಿ ಸ್ವಾತಂತ್ರ್ಯವೆಂಬ ಗುಣವನ್ನು ಒಪ್ಪಿಯೇ ತಮಗೆ ಅಂಟಿಕೊಂಡ ದೋಷಗಳನ್ನೆಲ್ಲಾ ಜಾಡಿಸಿಕೊಳ್ಳಬೇಕು. ಬೇರೆ ಉಪಾಯವಿಲ್ಲ. ಅನವಸ್ಥಾ ಪರಿಹಾರಕ್ಕಾಗಿ ಜೀವಬ್ರಹ್ಮರಿಗೆ ಅಭೇದವನ್ನು ಒಪ್ಪುವುದಕ್ಕಿಂತ ಜಡವಾದ ಶರೀರೇಂದ್ರಿಯಾದಿಗಳಿಗೂ ಜೀವನಿಗೂ ಅಭೇದವನ್ನು ಒಪ್ಪಿದ್ದರೆ ಸ್ವಲ್ಪವಾದರೂ ಬುದ್ಧಿವಂತಿಕೆಯನ್ನು ತೋರಿಸಿಕೊಂಡಂತಾಗುತ್ತಿತ್ತು. ಜಡಪದಾರ್ಥಗಳೊಟ್ಟಿಗೆ ಅಭೇದವು ಪ್ರಮಾಣ ವಿರುದ್ಧವೆಂದು ಹೇಳುವುದಾದರೆ; 'ಭೇದೇನೈನಮಧೀಯತೇ' ಇತ್ಯಾದಿ ಸೂತ್ರಗಳಲ್ಲಿ ಜೀವಬ್ರಹ್ಮರ ಭೇದವನ್ನೂ ಸಹ ನಿರಾಕರಿಸಲಾಗಿದೆ. ಈ ಎಲ್ಲಾ ಕಾರಣಗಳಿಂದ ಜಗತ್ತು ಬ್ರಹ್ಮನ ಅವಿದ್ಯಾಕಲ್ಪಿತವಾದ್ದರಿಂದ ಅವನ ಶರೀರವಾಗಿದೆಯೆಂಬ ಸಿದ್ಧಾಂತವು ಅತ್ಯಂತ ಅಯುಕ್ತವಾಗಿದೆ.

*ಅದ್ವೈತಮತದಲ್ಲಿ ನಿಯಾಮಕ ಬ್ರಹ್ಮನೇ ಇಲ್ಲ*

ಅನವಸ್ಥಾದೋಷವನ್ನು ಪರಿಹರಿಸುವುದಕ್ಕಾಗಿ ನಿಯಾಮಕರಿಗೆ ಭೇದವನ್ನೇನೂ ಒಪ್ಪಬೇಕಾಗಿಲ್ಲ. ಒಂದು ಶರೀರದಲ್ಲಿ ಎರಡು ಪ್ರತ್ಯಕ್‌ಚೈತನ್ಯಗಳನ್ನು ಒಪ್ಪಲು ಸಾಧ್ಯವಿಲ್ಲದ ಕಾರಣ ಅವರಿಬ್ಬರಿಗೆ ಐಕ್ಯವನ್ನು ಅನಿವಾರ್ಯವಾಗಿ ಹೇಳಬೇಕೆಂದು ಅದ್ವೈತಿಗಳು ಆಕ್ಷೇಪಿಸುತ್ತಾರೆ. ಆದರೆ ಇದನ್ನು ಒಂದೇ ಶರೀರದಲ್ಲಿ ಜೀವಬ್ರಹ್ಮರಿದ್ದಾರೆ. ಅನೇಕ ಅಭಿಮಾನಿದೇವತೆಗಳೂ ಇದ್ದಾರೆಂದು ಹೇಳುವ ದ್ವೈತಿಗಳಿಗೆ ಮನದಟ್ಟಾಗಿಸಲು ಅದ್ವೈತಿಗಳಿಗೆ ಸಾಧ್ಯವಿಲ್ಲ.

ಒಂದು ಶರೀರದಲ್ಲಿ ಪಿಶಾಚಿಯು ಸೇರಿಕೊಂಡಾಗ ಇಬ್ಬರು ಚೇತನರಿರುವುದು ನಮ್ಮ ಅನುಭವದಲ್ಲಿ ಕಾಣಸುತ್ತಿದೆ. ಐತರೇಯೋಪನಿಷತ್ತಿನಲ್ಲಂತೂ ಸ್ಪಷ್ಟವಾಗಿ "ಹಂತಾಸ್ಮಾತ್ ಶರೀರಾತ್" ಇತ್ಯಾದಿ ವಾಕ್ಯದಿಂದ ಅನೇಕ ಅಭಿಮಾನಿದೇವತೆಗಳು ಒಂದೇ ಶರೀರದಲ್ಲಿ ಪ್ರವೇಶಿಸಿದ್ದಾರೆಂಬುದು ಕಾಣಸುತ್ತಿದೆ. ಹೀಗೆ ಹೇಳಿದಾಗ ಏನೂ ಬಾಧಕವಿಲ್ಲ. 'ನಾನ್ಯೋಽತೋಽಸ್ತಿ ದ್ರಷ್ಟಾ" ಎಂಬ ಶ್ರುತಿಯು ಆಪಾತತಃ ಮತ್ತೊಬ್ಬನಿಲ್ಲ ಎಂದು ಹೇಳಿದಂತೆ ಕಾಣಸಬಹುದು. ಆದರೆ ಸ್ವತಂತ್ರನಾದ ಮತ್ತೊಬ್ಬ ದ್ರಷ್ಟೃಪುರುಷನಿಲ್ಲವೆಂದೇ ಆ ಶ್ರುತಿಯ ಅಭಿಪ್ರಾಯ.

ಈ ಸಂದರ್ಭದಲ್ಲಿ ವಿವರಣಕಾರನ ವಾದವೊಂದು ಹೀಗಿದೆ - ಅವಚ್ಛೇದಪಕ್ಷ ಹಾಗೂ ಪ್ರತಿಬಿಂಬ ಪಕ್ಷವೆಂದು ಎರಡು ಪಕ್ಷಗಳಿವೆ. ಅವಚ್ಛೇದಪಕ್ಷವೆಂದರೆ ಎಲ್ಲೆಡೆ ವ್ಯಾಪ್ತವಾಗಿರುವ ಆಕಾಶವು ಘಟದಲ್ಲಿಯೂ ಇರುತ್ತವೆ. ಆದರೆ ಬಾಹ್ಯಾಕಾಶವನ್ನು ಘಟದಲ್ಲಿದೆಯೆಂದು ಯಾರೂ ವ್ಯವಹರಿಸುವುದಿಲ್ಲ. ಕೇವಲ ಘಟಾವಚ್ಛಿನ್ನ ಆಕಾಶವಿದೆಯೆಂದೇ ಹೇಳುತ್ತಾರೆ. ಪ್ರತಿಬಿಂಬಪಕ್ಷದಲ್ಲಿ ಪ್ರತಿಬಿಂಬವಾದ ಆಕಾಶವು ಜಲದಲ್ಲಿದೆ. ಎಲ್ಲೆಡೆ ವ್ಯಾಪ್ತವಾದ ಆಕಾಶವೂ ಸಹ ಜಲದಲ್ಲಿದೆ. ಪ್ರಕೃತ ಜೀವನೆಂಬ ಶರೀರದಲ್ಲಿ ನಿಯಾಮಕನಾದ ಬ್ರಹ್ಮನಿದ್ದಾನೆಂದು ಅವಚ್ಛೇದಪಕ್ಷವನ್ನು ಅಂಗೀಕರಿಸಿ ಹೇಳಲು ಸಾಧ್ಯವಿಲ್ಲ. ಆದರೆ ಪ್ರತಿಬಿಂಬಪಕ್ಷವನ್ನು ಸ್ವೀಕರಿಸಿದಾಗ ಶರೀರದಲ್ಲಿ ಅವಿದ್ಯಾವಚ್ಛಿನ್ನನಾದ ಬ್ರಹ್ಮನೂ ಇರಬಹುದು. ನಿಯಾಮಕನಾದ ಬ್ರಹ್ಮನೂ ಸಹ ಇರಬಹುದು ಎಂದು.

ವಿವರಣಕಾರನ ಈ ಅಭಿಪ್ರಾಯವು ಹುರುಳಿಲ್ಲದ್ದು. ಏಕೆಂದರೆ ಘಟಾಕಾಶದಲ್ಲಿ ಬಾಹ್ಯಾಕಾಶವಿರುವುದು ಎಷ್ಟು ಅಸಂಭಾವಿತವೋ ಅದರಂತೆ ನೀರಿನಲ್ಲಿ ಬಿಂಬಭೂತವಾದ ಆಕಾಶವಿರುವುದೂ ಸಹ ಅಷ್ಟೇ ಅಸಂಭಾವಿತ.

ವಸ್ತುತಃ ಜಲದಲ್ಲಿ ಶುದ್ಧವಾದ ಆಕಾಶ, ಅವಚ್ಛಿನ್ನವಾದ ಆಕಾಶ ಹಾಗೂ ಪ್ರತಿಬಿಂಬಭೂತವಾದ ಆಕಾಶಗಳೆಂದು ಮೂರು ಆಕಾಶಗಳಿರುತ್ತದೆ. ಘಟದಲ್ಲಿ ಪ್ರತಿಬಿಂಬವಾದ ಆಕಾಶವಿರುವುದಿಲ್ಲ. ಕೇವಲ ಶುದ್ಧವಾದ ಆಕಾಶ ಹಾಗೂ ಅವಚ್ಛಿನ್ನವಾದ ಆಕಾಶಗಳೆರಡೇ ಇರುತ್ತವೆ. ಹೀಗೆ ವ್ಯತ್ಯಾಸವನ್ನೇನೋ ತೋರಿಸಬಹುದು. ಆದರೆ ದರ್ಪಣದಲ್ಲಿ ಪ್ರತಿಬಿಂಬವಾಗಿರುವ ಮುಖ ಹಾಗೂ ಮುಖಸಾಮಾನ್ಯವಿರುವುದು ಕಾಣಸುತ್ತದೆ. ಆದರೆ ಬಿಂಬಭೂತವಾದ ಮುಖವಿದೆಯೆಂದು ಯಾರೂ ಹೇಳುವುದಿಲ್ಲ. ಅದರಂತೆ ಶರೀರದಲ್ಲಿ ಚಿನ್ಮಾತ್ರನಿರಬಹುದು. ಅವಿದ್ಯಾವಚ್ಛಿನ್ನನಾದ ಬ್ರಹ್ಮನಿರಬಹುದು. ನಿಯಾಮಕಬ್ರಹ್ಮನಿದ್ದಾನೆಂದು ಈ ದೃಷ್ಟಾಂತದಿಂದ ಸಮರ್ಥಿಸಲು ಸಾಧ್ಯವಿಲ್ಲ. ಅದ್ವೈತಿಗಳು ಅವಚ್ಛಿನ್ನಬ್ರಹ್ಮ, ಪ್ರತಿಬಿಂಬಬ್ರಹ್ಮ, ಚಿನ್ಮಾತ್ರಬ್ರಹ್ಮನೆಂದು ಮೂರು ಬಗೆಯ ಬ್ರಹ್ಮರನ್ನು ಒಪ್ಪುತ್ತಾರೆ. ಈ ಮೂರು ಬ್ರಹ್ಮರಲ್ಲಿ ಅವಚ್ಛಿನ್ನಬ್ರಹ್ಮ ಹಾಗೂ ಪ್ರತಿಬಿಂಬಬ್ರಹ್ಮರು ಜೀವಸ್ವರೂಪವನ್ನು ತಾಳಿದ್ದರಿಂದ ನಿಯಮ್ಯರೇ ಆಗಿಬಿಟ್ಟಿದ್ದಾರೆ. ಇನ್ನು ಶುದ್ಧಬ್ರಹ್ಮನು ಯಾವುದೇ ಗುಣಗಳನ್ನು ಹೊಂದದ ಕಾರಣ ನಿಯಾಮಕನಾಗಲು ಸಾಧ್ಯವಿಲ್ಲ. ಇದು ಹೇಗಾಯಿತೆಂದರೆ 'ಮುಳ್ಳು ಕೊನೆಯ ಮೇಲೆ ಮೂರು ಕೆರೆಯ ಕಟ್ಟಿ, ಎರಡು ತುಂಬದು ಒಂದು ತುಂಬಲೇ ಇಲ್ಲ' ಎಂಬ ದಾಸರ ಒಗಟಿನ ಪದ್ಯದಂತೆ ಮೂರು ಬ್ರಹ್ಮರಲ್ಲಿ ಪ್ರತಿಬಿಂಬಬ್ರಹ್ಮ ಹಾಗೂ ಅವಚ್ಛಿನ್ನಬ್ರಹ್ಮರಿಗೆ ಜೀವಭಾವವಿರುವುದಿಂದ ನಿಯಾಮಕತ್ವ ಬರುವುದಿಲ್ಲ. ಉಳಿದೊಬ್ಬ ಶುದ್ಧಬ್ರಹ್ಮನಲ್ಲಿ ನಿಯಾಮಕತ್ವವನ್ನು ಸ್ವತಃ ಅವರೇ ಒಪ್ಪಿಲ್ಲ. ಒಟ್ಟಾರೆ ದೇಹದ ಒಳಗಡೆ ಕುಳಿತಿರುವ ಬ್ರಹ್ಮನು ನಪುಂಸಕನಂತೆ ವ್ಯರ್ಥವಾಗಿ ಕುಳಿತಿದ್ದಾನೆಂದು ಹೇಳಿದಂತಾಯಿತು.

*ಶಂಕರಭಾಷ್ಯ ರಾಮಾನುಜಭಾಷ್ಯಗಳ ಸೂತ್ರಾರ್ಥ ವಿಮರ್ಶೆ*

ಅದ್ವೈತಿಗಳ ಅಧಿಕರಣ ಶರೀರ ಹೀಗಿದೆ - ಬೃಹದಾರಣ್ಯಕೋಪನಿಷತ್ತಿನಲ್ಲಿ 'ಯಃ ಪೃಥಿವ್ಯಾನ್ ತಿಷ್ಠನ್' ಇತ್ಯಾದಿ ವಾಕ್ಯವನ್ನೇ ವಿಷಯವೆನ್ನುತ್ತಾರೆ. ಜೀವನಾಗಲೀ ಅಥವಾ ಯಾರಾದರೂ ಒಬ್ಬ ಯೋಗಿಯಾಗಲೀ, ಪೃಥಿವ್ಯಾದಿ

ಲೋಕಗಳ ಅಂತರ್ಯಾಮಿಯಾಗಿರಬಹುದು. ಬ್ರಹ್ಮನಿಗೆ ಶರೀರವಿಲ್ಲದ ಕಾರಣ ಅಂತರ್ಯಾಮಿಯೆನಿಸಲಾರನೆಂದು ಪೂರ್ವಪಕ್ಷ.

ಸಕಲ ಪ್ರಪಂಚವನ್ನೇ ಶರೀರವನ್ನಾಗಿ ಹೊಂದಿರುವ ಅಚಿಂತ್ಯವಾದ ಮಾಯಾಶಕ್ತಿಯನ್ನು ಪಡೆದಿರುವ ಬ್ರಹ್ಮನಿಗೆ ಶರೀರವಿಲ್ಲದಿದ್ದರೂ ಪ್ರಪಂಚವನ್ನು ನಿಯಮನ ಮಾಡುವ ಸಾಮರ್ಥ್ಯವಿದೆ. ಜೀವಾತ್ಮನಿಗೂ, ಪರಮಾತ್ಮನಿಗೂ ಅಭೇದವಿರುವುದರಿಂದ ಇವನಿಗೆ ಇನ್ನೊಬ್ಬ ನಿಯಾಮಕನ ಅವಶ್ಯಕತೆಯಿರುವುದಿಲ್ಲ. ಮತ್ತು ಅದೇ ಪ್ರಕರಣದಲ್ಲಿ ಆತ್ಮತ್ವ, ಅಮೃತತ್ವ ಮೊದಲಾದ ಧರ್ಮಗಳು ಅದೃಶ್ಯತ್ವಾದಿ ಧರ್ಮಗಳೂ ಸಹ ಕೇಳಿಸುತ್ತಿವೆ. ಇವೆಲ್ಲವೂ ಬ್ರಹ್ಮನ ಅಸಾಧಾರಣ ಧರ್ಮಗಳಾದ್ದರಿಂದ ಬ್ರಹ್ಮನೇ ಅಂತರ್ಯಾಮಿಯಾಗಿದ್ದಾನೆ ಹೊರತು ಜೀವನಲ್ಲವೆಂದು ಸಿದ್ಧಾಂತ. ಅದ್ವೈತಿಗಳ ಈ ಅಧಿಕರಣ ಶರೀರವು ಅಯುಕ್ತವಾಗಿದೆ. 'ಯಃ ಆತ್ಮನೀ ತಿಷ್ಠನ್' ಇತ್ಯಾದಿ ಶ್ರುತಿಗಳಲ್ಲಿ ಜೀವನಿಗೂ ಸಹ ಪರಮಾತ್ಮನು ನಿಯಾಮಕನಾಗಿದ್ದಾನೆಂದು ಹೇಳಲ್ಪಟ್ಟಿದೆ. ಅವರಿಬ್ಬರಿಗೂ ಐಕ್ಯವಿದ್ದಲ್ಲಿ ನಿಯಮ್ಯನಿಯಾಮಕಭಾವವು ಹೇಗೆ ಉಪಪನ್ನವಾಗುತ್ತದೆ? ಕಾಲ್ಪನಿಕ ಭೇದವನ್ನು ಒಪ್ಪುವುದಾದರೆ ಈಶ್ವರನಿಗೂ ಸಹ ಮತ್ತೊಬ್ಬ ನಿಯಾಮಕನಿರಬಹುದಲ್ಲವೇ? ಈಶ್ವರನು ಸ್ವತಂತ್ರನಾದ್ದರಿಂದ ಮತ್ತೊಬ್ಬ ನಿಯಾಮಕನ ಅವಶ್ಯಕತೆಯಿಲ್ಲವೆಂದು ಕೊನೆಯಲ್ಲಿ ಉತ್ತರಿಸುವುದಾದರೆ, ಮೊದಲೇ ಈ ಉತ್ತರವನ್ನು ಹೇಳಿ ಏಕೆ ಜಾಣತನವನ್ನು ತೋರಿಸಲಿಲ್ಲ?

'ನಚ ಸ್ಮಾರ್ತಮತದ್ಧರ್ಮಾಭಿಲಾಪಾತ್' ಎಂಬ ಎರಡನೆಯ ಸೂತ್ರಕ್ಕೆ ಅದ್ವೈತಿಗಳ ವ್ಯಾಖ್ಯಾನ ಹೀಗಿದೆ - ಈ ಪ್ರಕರಣದಲ್ಲಿ ಹೇಳಲ್ಪಟ್ಟ ಅದೃಶ್ಯತ್ವವು ಅಂತರ್ಯಾಮಿಯಲ್ಲಿ ಕೂಡುವುದಿಲ್ಲ. ದ್ರಷ್ಟೃತ್ವ, ಆತ್ಮತ್ವ ಮೊದಲಾದ ಧರ್ಮಗಳು ಪ್ರಕೃತಿಯಲ್ಲಿ ಕೂಡುವುದಿಲ್ಲ ಎಂದು ವ್ಯಾಖ್ಯಾನಿಸುತ್ತಾರೆ. 'ಶಾರೀರಶ್ಚೋಭಯೇಽಪಿ ಹಿ ಭೇದೇನೈವ ಮಧಿಯತೇ' ಎಂಬ ಮೂರನೆಯ ಸೂತ್ರ ವ್ಯಾಖ್ಯಾನ ಹೀಗಿದೆ - ಕಾಣ್ವಮಾಧ್ಯಂದಿನ ಶಾಖೆಗಳಲ್ಲಿ ಹೇಳಲ್ಪಟ್ಟ ಭೇದವು ಸತ್ಯವಲ್ಲ. ಜೀವಬ್ರಹ್ಮರಿಗೆ ಐಕ್ಯವೇ ಇದೆ. ಆದ್ದರಿಂದ ಇವರಿಬ್ಬರಿಗೂ ನಿಯಮ್ಯನಿಯಾಮಕಭಾವವನ್ನಾಗಲೀ ಅದರಿಂದ ಭೇದದ ಸಮರ್ಥನೆಯಾಗಲೀ ಮಾಡಲು ಸಾಧ್ಯವಿಲ್ಲ. ಅದ್ವೈತಿಗಳ ಎರಡನೆಯ ಸೂತ್ರವು ಪ್ರಥಮಸೂತ್ರದಲ್ಲಿರುವ 'ತದ್ಧರ್ಮವ್ಯಪದೇಶಾತ್' ಎಂಬ ಭಾಗದಿಂದಲೇ ಪುನರುಕ್ತವಾಗಿದೆ. ಮೂರನೆಯ ಸೂತ್ರದಲ್ಲಿ ನಿಯಮ್ಯನಿಯಾಮಕರಿಗೆ ಭೇದವೇ ಸ್ಪಷ್ಟವಾಗಿ ಕೇಳಿಸುತ್ತಿರುವಾಗ ಆ ಭೇದವನ್ನು ಕಲ್ಪನಿಕವೆಂದು ಹೇಳುವುದು ಮೂರ್ಖತನ.

ರಾಮಾನುಜ ಭಾಷ್ಯದಲ್ಲಿ ಜೀವನೇ ಅಂತರ್ಯಾಮಿಯೆಂದು ಪೂರ್ವಪಕ್ಷ. ಸಕಲ ಲೋಕ ನಿಯಂತೃತ್ವ ಎಂಬ ಧರ್ಮದಿಂದ ಪರಮಾತ್ಮನೇ ನಿಯಾಮಕನಾದ ಅಂತರ್ಯಾಮಿಯೆಂದು ಸಿದ್ಧಾಂತ.

ಇವರ ಮತವೂ ಸಹ ಯುಕ್ತವಾಗಿದೆ. ಅದ್ವೈತ ಮತದಲ್ಲಿ ಹಾಗೂ ವಿಶಿಷ್ಟಾದ್ವೈತ ಮತದಲ್ಲಿ ಅಧಿದೈವಾದಿಷು ಎಂಬ ಪದವು ವ್ಯರ್ಥವಾಗುತ್ತದೆ. ಆದರೆ ದ್ವೈತದರ್ಶನದಲ್ಲಿ 'ಅಧಿದೈವಾದಿಷು ತದ್ಧರ್ಮವ್ಯಪದೇಶಾತ್' ಎಂಬುದಾಗಿ 'ಅಧಿದೈವಾದಿಷು' ಎಂಬ ಪದವನ್ನು ಸಾಧ್ಯದಲ್ಲಿ ಸೇರದೆ ಹೇತುವಿನಲ್ಲಿ ಸೇರಿರುವ ಕಾರಣ ಅಂತರ್ಯಾಮಿಯೆಂದು ಉಕ್ತನಾದವನು ವಿಷ್ಣುವೇ ಆಗಿದ್ದಾನೆ.

# ಅದೃಶ್ಯತ್ವಾಧಿಕರಣ

*ಸಂಗತಿ ಹಾಗೂ ಸಂಶಯ ಪರಂಪರೆ*

ಹಿಂದಿನ ಅಧಿಕರಣದಲ್ಲಿ ಅಂತರ್ಯಾಮಿಯು ವಿಷ್ಣುವೇ ಆಗಿದ್ದಾನೆನ್ನಲು ಸಾಕಲ್ಯೇನ ಅವಿದಿತತ್ವವನ್ನು ಹೇತುವನ್ನಾಗಿ ಮಾಡಿದರು. ಅಂದರೆ ಅದೃಶ್ಯತ್ವವನ್ನು ಹೇತುವೆಂದು ಹೇಳಿದಂತಾಯಿತು. ಮತ್ತು ಆನಂದಮಯಾಧಿಕರಣದಲ್ಲಿ ಆನಂದಮಯನಾದ ವಿಷ್ಣುವಿಗೆ 'ಅದೃಶ್ಯೇಽನಾತ್ಮ್ಯೇ' ಎಂಬ ತೈತ್ತಿರಿಯದಲ್ಲಿ ಹೇಳಲ್ಪಟ್ಟ ಅದೃಶ್ಯತ್ವಗುಣವನ್ನು ಹೇಳಿದ್ದಾರೆ. ಈ ಅದೃಶ್ಯತ್ವಗುಣವು ವಿಷ್ಣುವಿನಲ್ಲಿ ಬರುವುದಿಲ್ಲವೆಂದು ಈ ಅಧಿಕರಣದಲ್ಲಿ ಆಕ್ಷೇಪ ಮಾಡುತ್ತಿದ್ದಾರೆ. ಆದ್ದರಿಂದ ಹಿಂದಿನ ಅಧಿಕರಣದಿಂದ ಆನಂತರ್ಯ ಸಂಗತಿಯು ಇರುತ್ತದೆ. ಮತ್ತು ಆನಂದಮಯಾಧಿಕರಣದಿಂದಲೂ ಪರಂಪರಯಾ ಸಂಗತಿಯು ಇರುತ್ತದೆ.

'ಅಕ್ಷರಾತ್ಪರತಃ ಪರಃ' ಎಂಬುದಾಗಿ ಯಾವ ಅಕ್ಷರವು ಪ್ರಸಕ್ತವಾಗಿದೆಯೋ, ಅದೇ ಅಕ್ಷರವು 'ಅಕ್ಷರಾತ್ಸಂಭವಿತೀಹ ವಿಶ್ವಂ' ಎಂಬಲ್ಲಿರುವ ಅಕ್ಷರಶಬ್ದದಿಂದಲೂ ಪ್ರತಿಪಾದ್ಯವಾದರೆ ಅದೃಶ್ಯತ್ವಾದಿಗುಣವುಳ್ಳ ಜಗತ್ಕಾರಣತ್ವೇನ ಹೇಳಲ್ಪಟ್ಟ ಪರತ್ವಾವಧಿತ್ವವು ಸರ್ವೋತ್ತಮನಾದ ವಿಷ್ಣುವಿನಲ್ಲಿ ಬರುವುದಿಲ್ಲ. ಆದ್ದರಿಂದ ಪ್ರಕೃತ್ಯಾದಿಗಳೇ ಅಕ್ಷರಶಬ್ದವಾಚ್ಯರಾಗುತ್ತಾರೆಂಬುದು ಪೂರ್ವಪಕ್ಷದ ಗುರಿ.

'ಅಕ್ಷರತ್ರಯಮೀರಿತಮ್' ಎಂದು ಮುಂದೆ ಹೇಳುವ ಪ್ರಕಾರ 'ಅಕ್ಷರಾತ್ಪರತಃ' ಎಂಬಲ್ಲಿ ಹೇಳಲ್ಪಟ್ಟ ಅಕ್ಷರವೇ ಬೇರೆ. 'ಅಕ್ಷರತ್ಸಂಭವತೀಹ ವಿಶ್ವಂ' ಎಂಬಲ್ಲಿ ಹೇಳಲ್ಪಟ್ಟ ಅಕ್ಷರವೇ ಬೇರೆ ಎಂದು ವಿವಕ್ಷಿಸಿದರೆ ಪರತ್ವಾವಧಿತ್ವವು ವಿಷ್ಣುವಿನಲ್ಲಿ ಬರುವುದಿಲ್ಲ. ಆವಾಗ ಪರವಿದ್ಯೆಯ ವಿಷಯನಾದ್ದರಿಂದ ವಿಷ್ಣುವೇ ಅಕ್ಷರನೆನಿಸುತ್ತಾನೆಂಬುದು ಸಿದ್ಧಾಂತದ ಗುರಿ.

*ಪ್ರಕೃತಿ, ಬ್ರಹ್ಮಾದಿಗಳೇ ಅದೃಶ್ಯರೆಂದು ಪೂರ್ವಪಕ್ಷ*

ಪೂರ್ವಪಕ್ಷ ಹೀಗಿದೆ - ಆನಂದಮಯಾಧಿಕರಣದಲ್ಲಿ 'ಅದೃಶ್ಯೇಽನಾತ್ಮ್ಯೇ' ಎಂದು ತೈತ್ತಿರೀಯ ವಾಕ್ಯವನ್ನು ಉಲ್ಲೇಖಮಾಡಿ ವಿಷ್ಣುವಿನಲ್ಲಿ ಅದೃಶ್ಯತ್ವಗುಣವನ್ನು ಹೇಳಲಾಗಿದೆ. ಮತ್ತು ಹಿಂದಿನ ಅಂತರ್ಯಾಮ್ಯಧಿಕರಣದಲ್ಲಿ "ಸ ಯೋಽತೋಽಶ್ರುತೋಮತೋ" ಇತ್ಯಾದಿ ಐತರೇಯೋಪನಿಷತ್ತಿನ ವಾಕ್ಯದಿಂದ ವಿಷ್ಣುವಿಗೆ ಅದೃಶ್ಯತ್ವ ಗುಣವನ್ನು ನಿರ್ಣಯಿಸಲಾಗಿದೆ. ಆದರೆ ಮಾಂಡೋಕ್ಯೋಪನಿಷತ್ತಿನಲ್ಲಿ ಇದೇ ಅದೃಶ್ಯತ್ವಗುಣವನ್ನು ಅಕ್ಷರತತ್ತ್ವಕ್ಕೆ ಹೇಳಲಾಗಿದೆ. ಈ ಅಕ್ಷರತತ್ವವನ್ನು ವಿಷ್ಣುವೆಂದು ನಿರ್ಣಯಿಸಲಾಗದು. ಏಕೆಂದರೆ 'ಅಕ್ಷರತ್ಸಂಭವತೀಹ ವಿಶ್ವಮ್' ಅಕ್ಷರತತ್ವದಿಂದ ಜಗತ್ತು ಹುಟ್ಟಿತು ಎಂದು ಹೇಳಿ. 'ಅಕ್ಷರತ್ಪರತಃ ಪರಃ' ಎಂಬುದಾಗಿ ಅಕ್ಷರತತ್ತ್ವಕ್ಕಿಂತಲೂ ವಿಷ್ಣು ಉತ್ತಮೋತ್ತಮನಾಗಿದ್ದಾನೆಂದು ಶ್ರುತಿ ಹೇಳುತ್ತಿದೆ. ಒಂದು ವೇಳೆ ವಿಷ್ಣುವೇ ಅಕ್ಷರನಾದರೆ ಅವನಿಗಿಂತ ಉತ್ತಮನಾದವನನ್ನು ಹೇಳಬೇಕಾಗುತ್ತದೆ. ಆವಾಗ ವಿಷ್ಣು ಸರ್ವೋತ್ತಮತ್ವವೇ ಭಗ್ನವಾಗುವ ಪ್ರಸಂಗ ಬರುತ್ತದೆ. ಆದ್ದರಿಂದ ಅಕ್ಷರತತ್ತ್ವ ವಿಷ್ಣುವಲ್ಲವೆಂಬುದನ್ನು ಒಪ್ಪಬೇಕು.

*ಪರಿಪೂರ್ಣಚಂದ್ರಿಕಾ*

ಹಾಗಾದರೆ ಅಕ್ಷರತತ್ತ್ವ ಎಂದರೆ ಯಾವುದು ? ಜಡಪ್ರಕೃತಿಯಾಗಬಹುದು. ಶ್ರುತಿಯು 'ತಥಾಕ್ಷರಾತ್ಸಂಭವತೀಹ ವಿಶ್ವಮ್' ಎಂದು ಜಗತ್ತಿಗೆ ಉಪಾದಾನ ಕಾರಣವಾಗಿರುವುದನ್ನು ಅಕ್ಷರ ಎಂದು ಹೇಳುತ್ತಿದೆ. ಜಡಪ್ರಕೃತಿಪಕ್ಷದಲ್ಲಿ ಈ ಉಪಾದಾನಕಾರಣತ್ವವು ಸಮಂಜಸವಾಗುತ್ತದೆ. ಶ್ರುತಿಯಲ್ಲಿ ಕಾರಣತ್ವವನ್ನಷ್ಟೇ ಹೇಳಿರುವುದರಿಂದ ನಿಮಿತ್ತಕಾರಣವೆಂದು ವಿವಕ್ಷಿಸಬಹುದಲ್ಲವೇ? ಎಂದು ಪ್ರಶ್ನಿಸಬಾರದು. ನಿಮಿತ್ತಕಾರಣಕ್ಕಿಂತ ಉಪಾದಾನಕಾರಣವು ಅಂತರಂಗವಾದ್ದರಿಂದ ಬಹಿರಂಗವಾದ ನಿಮಿತ್ತಕಾರಣಯೆಂಬರ್ಥವನ್ನು ಬಿಡಬೇಕಾಗುತ್ತದೆ.

ಅಥವಾ ಚೇತನಪ್ರಕೃತಿಯನ್ನು ಅಕ್ಷರವೆನ್ನಬಹುದು. ಗೀತೆಯಲ್ಲಿ ಲಕ್ಷ್ಮೀದೇವಿಯನ್ನು ಅಕ್ಷರವೆಂದು ಹೆಸರಿಸಲಾಗಿದೆ. ವಿಶ್ವಕ್ಕೆ ಉಪಾದಾನಕಾರಣವಾದ ಜಡಪ್ರಕೃತಿಗೆ ಇವಳು ಅಭಿಮಾನಿಯಾದ್ದರಿಂದ ಲಕ್ಷ್ಮೀದೇವಿಯನ್ನು ಉಪಾದಾನಕಾರಣವೆಂದು ಹೇಳಬಹುದು.

ಅಥವಾ ಚತುರ್ಮುಖನೂ ಸಹ ಅಕ್ಷರನಾಗಬಹುದು. ಶ್ರುತಿಯಲ್ಲಿ ಬ್ರಹ್ಮ ಎಂಬ ಹೆಸರು ಪ್ರಸ್ತುತವಾಗಿದೆ. ಜಾಯಮಾನತ್ವ ಮೊದಲಾದ ಲಿಂಗಗಳ ಬಲದಿಂದ ಬ್ರಹ್ಮಶಬ್ದವು ಚತುರ್ಮುಖನನ್ನೇ ಪ್ರತಿಪಾದಿಸುತ್ತದೆ ಹೊರತು ವಿಷ್ಣುವನ್ನಲ್ಲ. ಚತುರ್ಮುಖನು ಜಗತ್ತಿಗೆ ಕಾರಣನೂ ಆಗಿದ್ದಾನೆ. ಆದ್ದರಿಂದ ಅವನೂ ಸಹ ಇಲ್ಲಿ ಅಕ್ಷರನೆಂದು ಪ್ರಸ್ತುತನಾಗಿರಬಹುದು.

ಅಥವಾ ರುದ್ರನಲ್ಲಿ ಪ್ರಸಿದ್ಧವಾದ ಈಶ ಶಬ್ದವು ಈ ಪ್ರಕರಣದಲ್ಲಿ ಕೇಳಿಸುತ್ತಿರುವುದರಿಂದ ರುದ್ರನು ಅದೃಶ್ಯತ್ವಾದಿಗುಣಗಳುಳ್ಳ ಅಕ್ಷರನಾಗಬಹುದು.

ಹೀಗೆ ನಾಲ್ಕು ಬಗೆಯಲ್ಲಿ ಪೂರ್ವಪಕ್ಷ ಮಾಡಬಹುದು. ವಿಚಾರ ಮಾಡಿದರೆ ವಿಷ್ಣುವನ್ನು ಅಕ್ಷರನೆಂದು ಒಪ್ಪಲು ತೊಂದರೆಯೇ ಇದೆ. ಶ್ರುತಿಯಲ್ಲಿ ಯಾವುದು ಅಕ್ಷರತತ್ತ್ವವಾಗಿದೆಯೋ? ಅದು ಅಧಮವೆಂದು ಹೇಳಿದೆ. ವಿಷ್ಣು ಸರ್ವೋತ್ತಮನಾದ್ದರಿಂದ ಅಧಮನಾಗಲು ಸಾಧ್ಯವಿಲ್ಲ. ಪರವಿದ್ಯಾವಿಷಯತ್ವವನ್ನು ಶ್ರುತಿ ಹೇಳುತ್ತಿರುವುದರಿಂದ ವಿಷ್ಣುವೇ ಅಕ್ಷರನಾಗಿದ್ದಾನೆಂದು ಒಪ್ಪಬೇಕಲ್ಲವೇ? ಎಂಬ ಪ್ರಶ್ನೆಗೂ ಸಹ ಅವಕಾಶವಿಲ್ಲ. ಶಾಸ್ತ್ರಯೋನಿತ್ವಾಧಿಕರಣದಲ್ಲಿ ಋಗ್ವೇದಾದಿಗಳನ್ನು ಅಪರವಿದ್ಯೆಯೆಂದು ಅಂಗೀಕರಿಸಿ ಅಂತಹ ಶಾಸ್ತ್ರಗಳಿಂದೆಲ್ಲಾ ವಿಷ್ಣುಪ್ರತಿಪಾದ್ಯನೆಂದು ಸಿದ್ಧಾಂತಿಗಳೇ ಒಪ್ಪಿದ್ದಾರೆ. ಅಪರವಿದ್ಯೆಗೆ ವಿಷಯನಾದ ಮೇಲೆ ಅದಕ್ಕೆ ವಿರುದ್ಧವಾದ ಪರವಿದ್ಯೆಗೆ ವಿಷ್ಣು ವಿಷಯನಾಗಲಾರನು. ಹಾಗಾಗಿ ಬೇರೆ ಜಡಪ್ರಕೃತ್ಯಾದಿಗಳನ್ನೇ ಪರವಿದ್ಯೆಗೆ ವಿಷಯವೆಂದು ಒಪ್ಪಬೇಕಾಗುತ್ತದೆ.

*ಮತ ತ್ರಯಗಳಲ್ಲಿ ಪರವಿದ್ಯಾ ವಿಚಾರ*

ಸಿದ್ಧಾಂತವನ್ನು ಪ್ರಾರಂಭಿಸುತ್ತಿದ್ದಾರೆ. ಮೊದಲು ಪರವಿದ್ಯಾವಿಷಯತ್ವವು ವಿಷ್ಣುವಿನ ಅಸಾಧಾರಣ-ಲಿಂಗವಾಗಿದೆಯೆಂಬುದನ್ನು ಸಮರ್ಥಿಸುತ್ತಿದ್ದಾರೆ. ಪೂರ್ವಪಕ್ಷ ಮಾಡುವಾಗ ಅಪರವಿದ್ಯೆಗೆ ವಿಷ್ಣುವು ವಿಷಯನಾಗಿದ್ದಾನೆ ಹೊರತು, ಪರವಿದ್ಯೆಗೆ ವಿಷಯನಾಗುವುದಿಲ್ಲವೆಂದು ಸಮರ್ಥಿಸಿದ್ದರು. ಇದು ತಪ್ಪು. ಯಾವ ಋಗ್ವೇದಾದಿಗಳು ಅಪರವಿದ್ಯೆಯೆಂದು ಪೂರ್ವಪಕ್ಷಕಾರರು ಹೇಳಿದರೋ ಅದೇ ಋಗ್ವೇದಾದಿಗಳು ಪರವಿದ್ಯೆಯೆಂದೂ ಆಗುತ್ತವೆ. ಉಪಾಧಿಭೇದದಿಂದ ಒಂದೇ ಶಾಸ್ತ್ರವು ಪರವಿದ್ಯೆಯೂ ಆಗುತ್ತದೆ. ಅಪರವಿದ್ಯೆಯೂ ಆಗುತ್ತದೆ. ಯಾವರೀತಿಯಾಗಿ ಒಂದೇ ಕರ್ಮವು ನಿಷ್ಕಾಮಭಾವನೆಯಿಂದ ಆಚರಿಸಿದಾಗ ನಿವೃತ್ತಕರ್ಮವಾಗುತ್ತದೆ. ಸಕಾಮ ಭಾವನೆಯಿಂದ ಆಚರಿಸಿದಾಗ ಪ್ರವೃತ್ತಕರ್ಮವಾಗುತ್ತದೆ. ಅಥವಾ ನಾವು ತಿನ್ನುವ ಅನ್ನವು ಆರೋಗ್ಯಕ್ಕೆ ಹಿತವಾದ ಪದಾರ್ಥಗಳನ್ನು ಸೇರಿಸಿ ತಿಂದಾಗ ಪಥ್ಯವಾಗುತ್ತದೆ. ಆರೋಗ್ಯಕ್ಕೆ ಅಹಿತವಾದ ಪದಾರ್ಥವನ್ನು ಸೇರಿಸಿ ತಿಂದಾಗ ಅಪಥ್ಯವಾಗುತ್ತದೆ. ಇದರಂತೆ ಒಂದೇ ಋಗ್ವೇದಾದಿ ಶಾಸ್ತ್ರಗಳು ಉಪಕ್ರಮಾದಿ ತಾತ್ಪರ್ಯಲಿಂಗಗಳಿಂದ

ವಿಚಾರಮಾಡಿ ಬ್ರಹ್ಮನನ್ನು ತಿಳಿದಾಗ ಪರವಿದ್ಯೆಯೆನಿಸುತ್ತದೆ, ಇಲ್ಲದಿದ್ದರೆ ಅಪರವಿದ್ಯೆಯೆನಿಸುತ್ತದೆ. ಆದ್ದರಿಂದ ಶ್ರೀಮದಾಚಾರ್ಯರ ಮಾತು 'ಋಗಾದ್ಯಾ ಅಪರಾ ವಿದ್ಯಾ ಯದಾ ವಿಷ್ಣೋರ್ನ ವಾಚಕಾಃ । ತಾ ಏವ ಪರಮಾ ವಿದ್ಯಾ ಯದಾ ವಿಷ್ಣೋಸ್ತು ವಾಚಕಾಃ ॥' 'ಯಾವಾಗ ಋಗ್ವೇದಾದಿಗಳು ವಿಷ್ಣುವನ್ನು ಪ್ರತಿಪಾದಿಸದೆ, ಉಪಾಸನಾ, ಕರ್ಮ ಮೊದಲಾದವನ್ನಷ್ಟೇ ಪ್ರತಿಪಾದಿಸುತ್ತವೋ ಆವಾಗ ಅಪರವಿದ್ಯೆಯೆನಿಸುತ್ತವೆ. ಯಾವಾಗ ವಿಷ್ಣುವನ್ನು ಪ್ರತಿಪಾದಿಸುತ್ತವೋ ಆವಾಗ ಪರವಿದ್ಯೆಯೆನಿಸುತ್ತಿವೆ' ಎಂದು. ಈ ಮಾತನ್ನು ಎಂದೂ ಮರೆಯಬಾರದು.

ಈ ಸಂದರ್ಭದಲ್ಲಿ ಅದ್ವೈತಿಗಳು ಏನು ಹೇಳುತ್ತಾರೆಂಬುದನ್ನು ತಿಳಿಯಬೇಕು. ವೇದವು ಮಂತ್ರ ಹಾಗೂ ಉಪನಿಷತ್ತು ಎಂದು ಎರಡುವಿಧ. ಉಪನಿಷತ್ ಭಾಗವು ಪರವಿದ್ಯೆಯಾಗುತ್ತದೆ, ಮಂತ್ರಭಾಗವು ಅಪರವಿದ್ಯೆಯಾಗುತ್ತದೆ. ಏಕೆಂದರೆ ಉಪನಿಷತ್‌ಭಾಗವು ಶುದ್ಧಬ್ರಹ್ಮನನ್ನು ಪ್ರತಿಪಾದಿಸುವ ಮೂಲಕ ಮೋಕ್ಷಕಾರಣವಾಗಿದೆ. ಮಂತ್ರಭಾಗವು ಉಪಾಸನಾ, ಕರ್ಮ ಮೊದಲಾದವುಗಳನ್ನೆಲ್ಲಾ ಪ್ರತಿಪಾದನೆ ಮಾಡುವುದರಿಂದ ಮೋಕ್ಷಸಾಧನವಾಗಿಲ್ಲ ಎಂದು ಅದ್ವೈತಿಗಳ ಅಭಿಪ್ರಾಯ.

ಇದು ಸರಿಯಲ್ಲ. ಏಕೆಂದರೆ ಸಕಲ ಶ್ರುತಿಸ್ಮೃತಿಗಳಿಂದ ಮುಖ್ಯವಾಗಿ ಬ್ರಹ್ಮನೊಬ್ಬನೇ ಪ್ರತಿಪಾದ್ಯನಾಗಿದ್ದಾನೆ. ಆದ್ದರಿಂದ ಕೇವಲ ಉಪನಿಷತ್‌ಭಾಗದಿಂದ ಪ್ರತಿಪಾದ್ಯನೆಂಬ ನಿರ್ಣಯ ತಪ್ಪಾಗುತ್ತದೆ. ವಿಚಾರ ಮಾಡಿದರೆ ಮಂತ್ರಭಾಗವು ಉಪಾಸನಾದಿಗಳನ್ನು ವಿವರಿಸುವಂತೆ ಉಪನಿಷತ್ತಿನಲ್ಲಿಯೂ ಅನೇಕ ಕಡೆ ಬ್ರಹ್ಮವಿಚಾರವು ಇರದೆ ಉಪಾಸನಾದಿಗಳ ವಿಚಾರವೇ ಇರುವುದು ಕಾಣಿಸುತ್ತದೆ. ಇನ್ನು ಮಂತ್ರಭಾಗದಲ್ಲಿಯೂ ಅನೇಕಕಡೆ ಬ್ರಹ್ಮವಿಚಾರವು ಪ್ರಸಕ್ತವಾಗಿದೆ. ಆದ್ದರಿಂದ ಅದ್ವೈತಿಗಳ ಅಭಿಪ್ರಾಯ ಸರಿಯಲ್ಲ.

ಇನ್ನು ರಾಮಾನುಜರು ಪರೋಕ್ಷಜ್ಞಾನವನ್ನು ಅಪರವಿದ್ಯೆಯೆಂದೂ, ಭಕ್ತಿರೂಪವಾದ ಅಪರೋಕ್ಷಜ್ಞಾನವನ್ನು ಪರವಿದ್ಯೆಯೆಂದೂ ಹೇಳುತ್ತಾರೆ. ಇದೂ ಸಹ ತಪ್ಪು. ವಿದ್ಯಾಶಬ್ದಕ್ಕೆ ಜ್ಞಾನಕರಣವೆಂದರ್ಥ. ಏಕೆಂದರೆ 'ಯಯಾ ತದಕ್ಷರಮಧಿಗಮ್ಯತೇ' ಎಂಬ ಶ್ರುತಿಯಿಂದ ಇದು ಸ್ಪಷ್ಟವಾಗುತ್ತದೆ. ಮತ್ತು ವ್ಯಾಕರಣದ ಪ್ರಕಾರ 'ವಿದ್' ಧಾತುವಿಗೆ 'ಕ್ಯಪ್' ಪ್ರತ್ಯಯವು ಬಂದು ವಿದ್ಯಾ ಎಂಬ ರೂಪವು ನಿಷ್ಪನ್ನವಾಗಿದೆ. ಈ 'ಕ್ಯಪ್' ಪ್ರತ್ಯಯವು ಭಾವಾರ್ಥದಲ್ಲಿರುವಂತೆ ಕರಣ, ಅಧಿಕರಣ ಮೊದಲಾದ ಅರ್ಥಗಳಲ್ಲಿಯೂ ಬರುತ್ತದೆ. ಆದ್ದರಿಂದ ಜ್ಞಾನವೆಂಬರ್ಥವನ್ನು ಹೇಳುವಂತೆ ಜ್ಞಾನಕರಣವೆಂಬರ್ಥವನ್ನೂ ಸಹ ವಿದ್ಯಾಶಬ್ದಕ್ಕೆ ಹೇಳಬಹುದು. ಪ್ರಕೃತ ಜ್ಞಾನಕರಣವೆಂಬರ್ಥವನ್ನೇ ವಿವಕ್ಷಿಸಬೇಕು.

ಪೂರ್ವಪಕ್ಷ ಮಾಡುವಾಗ ಊರ್ಣನಾಭಿ ಮೊದಲಾದ ದೃಷ್ಟಾಂತಗಳನ್ನು ನೀಡಿ ಶ್ರುತಿಯಲ್ಲಿ ಉಪಾದಾನಕಾರಣತ್ವವೇ ಪ್ರಸಕ್ತವಾಗಿದೆಯೆಂದು ಹೇಳಿದ್ದರು ಇದೂ ಸಹ ತಪ್ಪು. ಊರ್ಣನಾಭಿ, ಪೃಥಿವೀ ಮೊದಲಾದವುಗಳೆಲ್ಲವೂ ನಿಮಿತ್ತಕಾರಣವೇ ಆಗಿವೆ ಹೊರತು, ಉಪಾದಾನಕಾರಣವಾಗಿರುವುದಿಲ್ಲವೆಂಬ ವಿಚಾರವನ್ನು ಪ್ರಕೃತ್ಯಧಿಕರಣದ ಅನುವ್ಯಾಖ್ಯಾನ ಸುಧಾದಿಗ್ರಂಥಗಳನ್ನು ಓದಿ ತಿಳಿದುಕೊಳ್ಳಬೇಕು. ಆದ್ದರಿಂದ ಶ್ರುತಿಯು ನಿಮಿತ್ತಕಾರಣವನ್ನೇ ಹೇಳುತ್ತಿದೆ. ಇದು ಬ್ರಹ್ಮನಲ್ಲಿ ಯುಕ್ತವಾಗುತ್ತದೆ. ಇದರ ಜೊತೆಗೆ ಸರ್ವಜ್ಞತ್ವ, ಪರವಿದ್ಯಾವಿಷಯತ್ವ ಮೊದಲಾದ ಲಿಂಗಗಳೆಲ್ಲವೂ ವಿಷ್ಣುವಿನದ್ದೇ ಆಗಿರುತ್ತವೆಂದು ತಿಳಿಯಬೇಕು.

*ವಿಶೇಷಣ ಹಾಗೂ ಭೇದವ್ಯಪದೇಶ ಹೇತುಗಳಲ್ಲಿರುವ ಸ್ವಾರಸ್ಯ ವರ್ಣನೆ*

ಪೂರ್ವಪಕ್ಷ ಮಾಡುವಾಗ 'ಯಃ ಸರ್ವಜ್ಞಃ ಸರ್ವವಿತ್' ಎಂಬ ಶ್ರುತಿಯಲ್ಲಿರುವ ಸರ್ವಜ್ಞಪದವು ವಿಶೇಷ್ಯನಾದ ರುದ್ರನನ್ನು ಹೇಳುತ್ತಿದೆ ಎಂದು ಆಕ್ಷೇಪಿಸಿದ್ದರು. ಇದು ತಪ್ಪು. ಸರ್ವಜ್ಞನಾದ ವ್ಯಕ್ತಿಯಿಂದ ಚತುರ್ಮುಖಬ್ರಹ್ಮನು ಹುಟ್ಟಿದನೆಂದು ಮುಂದಿನ ಶ್ರುತಿ ಹೇಳುತ್ತಿದೆ. ಒಂದು ವೇಳೆ ಸರ್ವಜ್ಞಪದದಿಂದ ರುದ್ರನನ್ನು ವಿವಕ್ಷಿಸುವುದಾದರೆ ಚತುರ್ಮುಖನಿಂದ ಹುಟ್ಟಿದ ರುದ್ರನು ಚತುರ್ಮುಖನಿಗೆ ಜನಕನಾಗುತ್ತಾನೆಂದು ಹೇಗೆ ಹೇಳಲು ಸಾಧ್ಯ ? ಆದ್ದರಿಂದ

ಸರ್ವಜ್ಞಪದವು ವಿಶೇಷಣವಾಚಕವಾಗಿದೆ. ಇದನ್ನು ತಿಳಿಸುವುದಕ್ಕಾಗಿಯೇ ಸೂತ್ರಕಾರರು 'ವಿಶೇಷಣ' ಪದವನ್ನು ಬಳಸಿದ್ದಾರೆ. 'ಸರ್ವವಿತ್' ಎಂಬ ಪದವು ಜಗತ್ಕಾರಣತ್ವಾದ್ಯರ್ಥದಲ್ಲಿರುವುದರಿಂದ ಪುನರುಕ್ತಿ ಬರುವುದಿಲ್ಲವೆಂದು ತಿಳಿಯಬೇಕು.

ಭಾಷ್ಯದಲ್ಲಿ ಈ ಸರ್ವಜ್ಞತ್ವವಿಶೇಷಣದಿಂದ ಜಡಪ್ರಕೃತಿಯನ್ನು ಮಾತ್ರ ನಿಷೇಧ ಮಾಡಿದ್ದಾರೆ. ವಸ್ತುತಃ ಚಿತ್ಪ್ರಕೃತಿ, ಬ್ರಹ್ಮ ಹಾಗೂ ರುದ್ರಾದಿಗಳಲ್ಲಿ ಮುಖ್ಯವಾದ ಸರ್ವಜ್ಞತ್ವವಿಲ್ಲದ ಕಾರಣ ಇವರನ್ನೂ ಸಹ ನಿರಾಕರಿಸಬಹುದಿತ್ತು. ಆದರೆ ಯಾವ ಪೂರ್ವಪಕ್ಷಿಯು ಚಿತ್ಪ್ರಕೃತ್ಯಾದಿಗಳನ್ನು ಅಕ್ಷರಶಬ್ದವಾಚ್ಯರೆಂದು ಆಕ್ಷೇಪಿಸುತ್ತಿದ್ದಾನೋ, ಅವನು ಅವರನ್ನೂ ಜಗತ್ತಿಗೆ ಕಾರಣರಾದ್ದರಿಂದ ಸರ್ವಜ್ಞರೂ ಆಗಿದ್ದಾರೆಂದು ಆಕ್ಷೇಪಿಸುತ್ತಾನೆ. ಹೀಗೆ ವಿಪ್ರತಿಪನ್ನವಾದ ಸರ್ವಜ್ಞತ್ವದಿಂದ ಚಿತ್ಪ್ರಕೃತ್ಯಾದಿಗಳನ್ನು ನಿಷೇಧಿಸುವುದು ತಪ್ಪಾಗುತ್ತದೆ. ಆದಕ್ಕೋಸ್ಕರ ಭಾಷ್ಯಕಾರರು ಜಡಪ್ರಕೃತಿಯನ್ನು ಮಾತ್ರ ನಿಷೇಧಿಸಲು ಇದನ್ನು ಹೇತುವನ್ನಾಗಿ ಉಪಯೋಗಿಸಿದ್ದಾರೆ. ಜಡವಾದ ಪದಾರ್ಥದಲ್ಲಿ ಜ್ಞಾನಕ್ಕೆ ಪ್ರಸಕ್ತಿ ಇಲ್ಲದಿದ್ದಾಗ ಸರ್ವಜ್ಞತ್ವವು ಸುತರಾಂ ಬರುವುದಿಲ್ಲ.

ಇದರಂತೆ ಭಾಷ್ಯದಲ್ಲಿ ಭೇದವ್ಯಪದೇಶವೆಂಬ ಹೇತುವಿನಿಂದ ಚತುರ್ಮುಖ, ರುದ್ರರನ್ನು ಮಾತ್ರ ನಿಷೇಧ ಮಾಡಿದ್ದಾರೆ, ಚಿತ್ಪ್ರಕೃತಿಯನ್ನು ನಿಷೇಧ ಮಾಡಿಲ್ಲ. ಏಕೆಂದರೆ ಅಕ್ಷರಗಳಲ್ಲಿ ಉತ್ತಮಾಕ್ಷರ, ಮಧ್ಯಮಾಕ್ಷರ, ಅಧಮಾಕ್ಷರವೆಂಬ ಪ್ರಭೇದವನ್ನು ಪರಿಗಣಿಸದೆ ಭೇದವ್ಯಪದೇಶವನ್ನು ತಿಳಿಯಲು ಸಾಧ್ಯವಿಲ್ಲ. ಹೀಗೆ ತಿಳಿಯುವುದು ಶ್ರೇಷ್ಠವಾದ್ದರಿಂದ ಆಚಾರ್ಯರು ಚಿತ್ಪ್ರಕೃತಿಯನ್ನು ನಿಷೇಧಿಸುವುದಕ್ಕಾಗಿ ಭೇದವ್ಯಪದೇಶವನ್ನು ಹೇತುವನ್ನಾಗಿ ಉಪಯೋಗಿಸಿಲ್ಲ.

ಸೂತ್ರದಲ್ಲಿ 'ಇತರ' ಶಬ್ದವನ್ನು ದ್ವಿವಚನದಲ್ಲಿ ಪ್ರಯೋಗಿಸಿದ್ದಾರೆ. ವಸ್ತುತಃ ಜಡಪ್ರಕೃತಿ, ಚತುರ್ಮುಖ, ರುದ್ರ, ಇವರನ್ನೆಲ್ಲಾ ವಿವಕ್ಷಿಸಿದಾಗ ಬಹುವಚನವನ್ನು ಪ್ರಯೋಗಿಸಬೇಕಿತ್ತು. ಆದರೆ ಚತುರ್ಮುಖ ಹಾಗೂ ರುದ್ರ ಇವರಿಬ್ಬರನ್ನು ಚೇತನರೆಂದು ಪರಿಗಣಿಸಿ ಜಡಪ್ರಕೃತಿಯನ್ನು ಅಚೇತನವೆಂದು ಪರಿಗಣಿಸಿ ದ್ವೈವಿಧ್ಯಕಲ್ಪನೆಯಿಂದ ದ್ವಿವಚನಪ್ರಯೋಗವು ಯುಕ್ತವಾಗಿದೆಯೆಂದು ತಿಳಿಯಬೇಕು.

ಕಾರ್ತವೀರ್ಯಾರ್ಜುನ, ಪಾಂಡವಾರ್ಜುನ ಎಂಬುದಾಗಿ ಇಬ್ಬರು ಅರ್ಜುನರಿದ್ದಾರೆ. ಕಾರ್ತವೀರ್ಯಾರ್ಜುನನಿಗಿಂತ ಪಾಂಡವಾರ್ಜುನನು ಉತ್ತಮನಾಗಿದ್ದಾನೆ. ಈ ವಿವಕ್ಷೆಯಿಂದ ಅರ್ಜುನನಿಗಿಂತ ಅರ್ಜುನನು ಉತ್ತಮನು ಎಂಬ ವಾಕ್ಯವನ್ನು ಪ್ರಯೋಗಿಸಬಹುದು. ಆದರಂತೆ ಅಕ್ಷರವು ಎರಡು ವಿಧ - ಬ್ರಹ್ಮಾಕ್ಷರ, ಅಬ್ರಹ್ಮಾಕ್ಷರ ಎಂದು. ಅಬ್ರಹ್ಮಾಕ್ಷರಕ್ಕಿಂತ ಬ್ರಹ್ಮಾಕ್ಷರವು ಉತ್ತಮವಾದ್ದರಿಂದ ಅಕ್ಷರಕ್ಕಿಂತ ಅಕ್ಷರವು ಉತ್ತಮವಾಗಿದೆ ಎಂಬ ವಾಕ್ಯವನ್ನು ಪ್ರಯೋಗಿಸಬಹುದು.

ಇದನ್ನೇ ನ್ಯಾಯವಿವರಣೆಯಲ್ಲಿ "ಅಕ್ಷರಾತ್ಪರತಃ ಪರಸ್ಯಾಪ್ಯಕ್ಷರಾಂತರತ್ವವಚನಾತ್" ಅಕ್ಷರಕ್ಕಿಂತ ಅಕ್ಷರವು ಉತ್ತಮವಾಗಿದೆಯೆಂದು ಹೇಳಬಹುದೆಂದಿದ್ದಾರೆ.

ಮತ್ತೊಂದು ಗಮನಿಸಬೇಕಾದ ವಿಚಾರ. 'ಅಕ್ಷರಾತ್ಪರತಃ ಪರಃ' ಎಂಬ ಶ್ರುತಿಯಲ್ಲಿ ಪೂರ್ವಪ್ರಸಕ್ತವಾದ ಅಕ್ಷರವನ್ನೇ ಸ್ವೀಕರಿಸಬೇಕೆಂಬುದು ಪೂರ್ವಪಕ್ಷಕಾರರ ವಾದ. 'ಅಕ್ಷರಾತ್ಸಂಭವತೀಹ ವಿಶ್ವಮ್' ಎಂಬಲ್ಲಿ ಜಗತ್ಕಾರಣತ್ವೇನ ಪ್ರಸ್ತುತವಾದ ಚಿತ್ಪ್ರಕೃತ್ಯಾದಿಗಳನ್ನು ವಿವಕ್ಷಿಸಿ ಆದಕ್ಕಿಂತ ಉತ್ತಮತ್ವವನ್ನು ವಿಷ್ಣುವಿನಲ್ಲಿ ಹೇಳಬೇಕೆಂದು ಪೂರ್ವಪಕ್ಷಕಾರರು ಹೇಳುತ್ತಿದ್ದಾರೆ. ಆದರೆ ಸಿದ್ಧಾಂತದಲ್ಲಿ ಇದನ್ನು ಒಪ್ಪುವುದಿಲ್ಲ. ಹಿಂದೆ ಪ್ರಸಕ್ತವಾಗಿರುವ ಅಕ್ಷರವನ್ನೇ 'ಅಕ್ಷರಾತ್ಪರತಃ ಪರಃ' ಎಂಬ ಅಕ್ಷರಶಬ್ದದಿಂದ ವಿವಕ್ಷಿಸಬೇಕಾಗಿಲ್ಲ. ಪೂರ್ವಮೀಮಾಂಸೆಯಲ್ಲಿಯೂ ಬಾಧಕವಿದ್ದಾಗ ಹಿಂದೆ ಪ್ರಸಕ್ತವಾದದ್ದನ್ನು ಬಿಡಬಹುದೆಂದು ನಿರ್ಣಯಿಸಿದ್ದಾರೆ. ಆದ್ದರಿಂದ ಪೂರ್ವಪ್ರಸಕ್ತವಾದದ್ದನ್ನು

ವಿವಕ್ಷಿಸಬೇಕಾಗಿಲ್ಲ, ಹೊರತಾಗಿ ಸ್ಕಾಂದಪುರಾಣದ ಆಧಾರದಿಂದ ಹೀಗೆ ಶ್ರುತ್ಯರ್ಥವನ್ನು ತಿಳಿಯಬೇಕು. ಮೂರು ಅಕ್ಷರತತ್ವಗಳಿಗಳಿವೆ, ಜಡಪ್ರಕೃತಿ, ಲಕ್ಷ್ಮೀದೇವಿ, ವಿಷ್ಣು ಎಂದು. ಮೊದಲನೆಯದ್ದು ಅಪರಾಕ್ಷರ ಎನಿಸುತ್ತದೆ. ಎರಡನೆಯದ್ದು ಪರಾಕ್ಷರಯೆನಿಸುತ್ತದೆ. ಮೂರನೆಯವನು ಪರಾತ್ಪರಾಕ್ಷರ ಎನಿಸುತ್ತಾನೆ. ಹೀಗೆ ಈ ವಿವಕ್ಷೆಯಿಂದ ಮಾಂಡೂಕ್ಯೋಪನಿಷತ್ತಿನಲ್ಲಿ 'ಅಕ್ಷರಾತ್ಪರತಃ ಪರಃ' ಎಂದು ವಿಷ್ಣುವನ್ನು 'ಪರಾತ್ಪರಾಕ್ಷರ' ಎಂದು ಕರೆಯಲಾಗಿದೆ. ಅಂದರೆ ಲಕ್ಷ್ಮೀದೇವಿಯು ಅಕ್ಷರವೆನಿಸಿದ ಜಡಪ್ರಕೃತಿಗಿಂತಲೂ ಉತ್ತಮಳಾಗಿದ್ದಾಳೆ, ಅವಳಿಗಿಂತಲೂ ವಿಷ್ಣು ಉತ್ತಮನಾಗಿದ್ದಾನೆ. ಆದ್ದರಿಂದ ವಿಷ್ಣು 'ಅಕ್ಷರಾತ್ಪರತಃ ಪರಃ' ಎನಿಸುತ್ತಾನೆ.

### *ಅದ್ವೈತಮತ ವಿಮರ್ಶೆ*

ಶಾಂಕರಭಾಷ್ಯದಲ್ಲಿ ಅದೃಶ್ಯತ್ವಾಧಿಕರಣದ ರಚನೆ ಹೀಗಿದೆ - 'ಯತ್ತದದ್ರೇಶ್ಯಮ್' ಎಂಬ ಆಥರ್ವಣೋಪನಿಷತ್ತಿನ ವಾಕ್ಯವು ವಿಷಯವಾಗಿದೆ. ಈ ಶ್ರುತಿಯಲ್ಲಿ ಕೇಳಿಸುತ್ತಿರುವ ಅದೃಶ್ಯತ್ವಾದಿಗುಣಗಳು ಪ್ರಧಾನದಲ್ಲಿ ಬರುತ್ತವೆ. ಏಕೆಂದರೆ ಅದೇ ಶ್ರುತಿಯಲ್ಲಿ ಮುಂದೆ 'ಯದ್ಭೂತಯೋನಿಮ್' ಎಂಬುದಾಗಿ ಭೂತಯೋನಿ ಶಬ್ದವನ್ನು ಪ್ರಯೋಗಿಸಲಾಗಿದೆ. ಯೋನಿ ಶಬ್ದಕ್ಕೆ ಉಪಾದಾನಕಾರಣವೆಂದರ್ಥ. ಆದ್ದರಿಂದಲೇ ಶ್ರುತಿಯು 'ಯಥೋರ್ಣನಾಭಿಃ' ಎಂಬುದಾಗಿ ಜೇಡರ ಹುಳುವಿನ ದೇಹ, ಭೂಮಿ, ಪುರುಷದೇಹಗಳನ್ನು ಉದಾಹರಣೆಯನ್ನಾಗಿ ನೀಡಿದೆ. ಆದ್ದರಿಂದ ಜಗತ್ತಿಗೆ ಉಪಾದಾನಕಾರಣವಾದ ಜಡಪ್ರಕೃತಿಯು ಭೂತಯೋನಿಯೆಂದು ಕರೆಯಲ್ಪಡುತ್ತದೆ. ಆದ್ದರಿಂದ ಅದೃಶ್ಯತ್ವಾದಿಗುಣವುಳ್ಳ ಅಕ್ಷರವೆಂದರೆ ಜಡಪ್ರಕೃತಿಯಾಗುತ್ತದೆಂದು ತಿಳಿಯಬೇಕು. 'ಅಕ್ಷರಾತ್ಪರತಃ ಪರಃ' ಎಂದು ಅಕ್ಷರತತ್ತ್ವಕ್ಕಿಂತ ಬ್ರಹ್ಮನು ಭಿನ್ನನಾಗಿದ್ದಾನೆಂದು ಹೇಳಿರುವುದರಿಂದ ಬ್ರಹ್ಮನನ್ನು ಅಕ್ಷರನೆಂದು ಹೇಳಲು ಸಾಧ್ಯವಿಲ್ಲ. ಅಥವಾ ಭೂತಯೋನಿ ಶಬ್ದಕ್ಕೆ ನಿಮಿತ್ತಕಾರಣವೆಂದು ಅರ್ಥೈಸಿದರೆ ಪುಣ್ಯಾಪಾಪಗಬಳ ಮೂಲಕ ಜಗತ್ತಿಗೆ ಕಾರಣನಾದ ಜೀವಾತ್ಮನು ಅಕ್ಷರಶಬ್ದವಾಚ್ಯನಾಗುತ್ತಾನೆ. ಇಷ್ಟು ಪೂರ್ವಪಕ್ಷ.

ಶಾಂಕರಭಾಷ್ಯದಂತೆ ಸಿದ್ಧಾಂತ - ಜಗತ್ತು ಬ್ರಹ್ಮನ ಪರಿಣಾಮವೆಂದು ನಾವು ಹೇಳುವುದಿಲ್ಲ ಹೊರತು, ಬ್ರಹ್ಮನವಿವರ್ತವಾಗಿದೆ. ಯಾವರೀತಿಯಾಗಿ ರಜ್ಜುವಿಗೆ ಸರ್ಪವು ವಿವರ್ತಕಾರಣವಾಗಿದೆಯೋ, ಅದರಂತೆ ಜಗತ್ತಿಗೆ ಬ್ರಹ್ಮನು ವಿವರ್ತಕಾರಣನಾಗಿದ್ದಾನೆ. ಇಂತಹ ವಿವರ್ತಕಾರಣವನ್ನು ಭೂತಯೋನಿಶಬ್ದವು ಪ್ರತಿಪಾದಿಸುತ್ತಿದೆ. ಮತ್ತು 'ಅಕ್ಷರಾತ್ಸಂಭವತೀಹ ವಿಶ್ವಮ್' ಎಂಬುದಾಗಿ ಅಕ್ಷರತತ್ತ್ವವನ್ನು ಜಗತ್ಕಾರಣವೆಂದು ಹೇಳಿ, ಅದೇ ಅಕ್ಷರತತ್ತ್ವವನ್ನು 'ಯಃ ಸರ್ವಜ್ಞಃ' ಎಂಬುದಾಗಿ ಸರ್ವಜ್ಞವೆಂದು ಶ್ರುತಿ ಹೇಳಿದೆ. ಸರ್ವಜ್ಞತ್ವಾದಿಗಳು ಬ್ರಹ್ಮನ ಧರ್ಮವೇ ಹೊರತು, ಪ್ರಕೃತಿಯ ಧರ್ಮವಲ್ಲ. ಆದ್ದರಿಂದ ಅದೃಶ್ಯತ್ವಾದಿಗುಣಗಳುಳ್ಳವನು ಬ್ರಹ್ಮನೇ ಆಗುತ್ತಾನೆ. ಮತ್ತು 'ಯಯಾ ತದಕ್ಷರಮಧಿಗಮ್ಯತೇ' ಎಂಬುದಾಗಿ ಪರವಿದ್ಯೆಗೆ ಅಕ್ಷರತತ್ತ್ವವು ವಿಷಯವಾಗಿದೆಯೆಂದು ತಿಳಿಯುತ್ತಿದೆ. ಅಕ್ಷರನು ಬ್ರಹ್ಮನಾಗದಿದ್ದರೆ ಪರವಿದ್ಯೆಗೆ ವಿಷಯನೂ ಸಹ ಆಗಲಾರನು. ಆದ್ದರಿಂದ ಜಗತ್ತಿನ ಅಧ್ಯಾಸಕ್ಕೆ ಅಧಿಷ್ಠಾನನಾದ ಶುದ್ಧಬ್ರಹ್ಮನೇ ಅದೃಶ್ಯತ್ವಾದಿಗುಣಗಳುಳ್ಳವನು.

ಅದ್ವೈತಿಗಳ ಈ ಅಧಿಕರಣ ಶರೀರ ಸರಿಯಿಲ್ಲ. ಏಕೆಂದರೆ ಸರ್ಪದ ಆರೋಪಕ್ಕೆ ಹಗ್ಗವು ಹೇಗೆ ಅಧಿಷ್ಠಾನವೋ, ಅದರಂತೆ ಪ್ರಪಂಚದ ಆರೋಪಕ್ಕೆ ಬ್ರಹ್ಮನು ಅಧಿಷ್ಠಾನನಾಗಿದ್ದಾನೆ. ಅಂತಹ ಬ್ರಹ್ಮನು ವಾಚ್ಯನಾದರೆ ನಿರ್ಧರ್ಮಕನಾದ ಶುದ್ಧಬ್ರಹ್ಮನಲ್ಲಿ 'ಧರ್ಮೋಕ್ತೇಃ' ಎಂಬ ಸೂತ್ರೋಕ್ತ ಕಾರಣ ವಚನವು ತಪ್ಪಾಗುತ್ತದೆ. ಮತ್ತು 'ಸೂರ್ಯದ್ವಾರೇಣ ವಿರಜಾಃ ಪ್ರಯಾಂತಿ' ಎಂಬುದಾಗಿ ಸೂರ್ಯನ ಮಾರ್ಗದಲ್ಲಿ ಬ್ರಹ್ಮನನ್ನು ಹೊಂದುತ್ತಾರೆಂದು

ಶ್ರುತಿ ಹೇಳುತ್ತಿದೆ. ಅಂತಹ ಬ್ರಹ್ಮನು ಕಾರ್ಯಬ್ರಹ್ಮನಾಗಿದ್ದಾನೆ ಹೊರತು, ಅಧಿಷ್ಠಾನನಾದ ಬ್ರಹ್ಮನಲ್ಲ. ಆದುದರಿಂದ ನಿರ್ಗುಣನಿಗೆ ಇವೆಲ್ಲವೂ ಬಾಧಕವಾಗುತ್ತವೆ. ಆದ್ದರಿಂದ ಅದ್ವೈತಿಗಳ ಅಧಿಕರಣಶರೀರವು ಅಸಾಧುವಾಗಿದೆ.

*ರಾಮಾನುಜರ ಅಧಿಕರಣ ವಿಮರ್ಶೆ ಮತ್ತು ಟೀಕೆಯ ಕಠಿಣಪದಾರ್ಥಗಳು*

ಅದೃಶ್ಯತ್ವಾದಿಗುಣವುಳ್ಳದ್ದು ಪ್ರಕೃತಿ, ಅಕ್ಷರಾತ್ಪರತಃ ಪರನಾದವನು ಜೀವನೆಂದು ಪೂರ್ವಪಕ್ಷಮಾಡಿ ಎರಡೂ ಸಹ ಪರಮಾತ್ಮನೇ ಎಂದು ರಾಮಾನುಜರು ಸಿದ್ಧಾಂತ ಮಾಡಿದ್ದಾರೆ. ಇದು ತಪ್ಪು. ಏಕೆಂದರೆ

'ದಿವ್ಯೋ ಹ್ಯಮೂರ್ತಃ ಪುರುಷಃ ಸ ಬಾಹ್ಯಾಭ್ಯಂತರೋ ಹ್ಯಜಃ ।
ಅಪ್ರಾಣೋ ಹ್ಯಮನಾಶ್ಶುಭ್ರೋ ಅಕ್ಷರಾತ್ಪರತಃ ಪರಃ' ॥

ಎಂಬುದಾಗಿ ದಿವ್ಯತ್ವ, ಅಮೂರ್ತತ್ವ ವ್ಯಾಪ್ತತ್ವ, ಪ್ರಾಣತ್ವ ಮೊದಲಾದ ಧರ್ಮಗಳಿಂದ ಅಕ್ಷರಾತ್ಪರತಃ ಪರವು ವಿಶಿಷ್ಟವಾಗಿದೆಯೆಂದು ಶ್ರುತಿ ಹೇಳುತ್ತಿದೆ. ಆದರೆ ಜೀವನಲ್ಲಿ ಅಮೂರ್ತತ್ವ ಮೊದಲಾದ ಯಾವುದೇ ಧರ್ಮಗಳು ಇರುವುದಿಲ್ಲ. ಆದ್ದರಿಂದ ಜೀವನು ಅಕ್ಷರಾತ್ಪರತಃ ಪರನಾಗುತ್ತಾನೆಂದು ಶಂಕೆಯೇ ಹುಟ್ಟುವುದಿಲ್ಲ.

# ವೈಶ್ವಾನರಾಧಿಕರಣ

*ವೈಶ್ವಾನರಶಬ್ದವು ಉಭಯತ್ರಪ್ರಸಿದ್ಧವಲ್ಲ*

ಈ ಅಧಿಕರಣದಲ್ಲಿ ನೇರವಾಗಿ ಲಿಂಗವನ್ನು ಸಮನ್ವಯ ಮಾಡುತ್ತಿಲ್ಲ. 'ವೈಶ್ವಾನರ' ಎಂಬ ನಾಮವನ್ನು ಸಮನ್ವಯ ಮಾಡುತ್ತಿದ್ದಾರೆ. ಹಾಗಾದರೆ ಲಿಂಗಸಮನ್ವಯ ಮಾಡುವ ಈ ಪಾದದಲ್ಲಿ ವೈಶ್ವಾನರಾಧಿಕರಣವು ಅಸಂಗತವಾಗುತ್ತದೆಂಬುದು ಮೊದಲನೆಯ ಪ್ರಶ್ನೆ. ಇಂತಹ 'ವೈಶ್ವಾನರ' ಎಂಬ ನಾಮವು ವಿಷ್ಣುವಿನಲ್ಲಿ ಹಾಗೂ ಅಗ್ನಿಯಲ್ಲಿ ಸಾಧಾರಣವಾಗಿರುವುದರಿಂದ ಉಭಯತ್ರಪ್ರಸಿದ್ಧವಾಗಿದೆ. ಈ ಪಾದದಲ್ಲಿ ಅನ್ಯತ್ರಪ್ರಸಿದ್ಧಶಬ್ದವನ್ನು ಸಮನ್ವಯ ಮಾಡುತ್ತಿರುವುದರಿಂದಲೂ ಈ ಅಧಿಕರಣಕ್ಕೆ ಇಲ್ಲಿ ಸಂಗತಿ ಇರುವುದಿಲ್ಲವೆಂಬುದು ಎರಡನೆಯ ಪ್ರಶ್ನೆ.

ಒಂದು 'ವೈಶ್ವಾನರ' ಎಂಬ ನಾಮವನ್ನು ಸಮನ್ವಯ ಮಾಡುವುದರಿಂದ ವೈಶ್ವಾನರನೆನಿಸಿದ ವಿಷ್ಣುವಿಗೆ ಸಂಬಂಧಪಟ್ಟ ಎಲ್ಲ ಲಿಂಗಗಳನ್ನು ಸಮನ್ವಯ ಮಾಡಿದಂತಾಗುವುದರಿಂದ ಈ ಅಧಿಕರಣವು ಇಲ್ಲಿ ಸಂಗತವಾಗುತ್ತದೆ. ಮತ್ತು ಉಭಯತ್ರಪ್ರಸಿದ್ಧವೂ ಆಗುವುದಿಲ್ಲ. ಪ್ರಮಾಣತೌಲ್ಯ ಹಾಗೂ ನ್ಯಾಯತೌಲ್ಯಗಳಿದ್ದರೆ ಮಾತ್ರ ಉಭಯತ್ರಪ್ರಸಿದ್ಧವಾಗುತ್ತದೆ. ಅಂದರೆ ಶ್ರುತಿಯಿಂದ ವಿಷ್ಣುವಿನಲ್ಲಿ ಪ್ರಸಿದ್ಧಿಯನ್ನು ಹೇಳಿದರೆ ಅಂತಹ ಶ್ರುತಿಯಿಂದಲೇ ಅಗ್ನಿಯಲ್ಲಿಯೂ ಪ್ರಸಿದ್ಧಿಯನ್ನು ಹೇಳಬೇಕು. ಅಥವಾ ಲೋಕರೂಢಿಯನ್ನು ಅಗ್ನಿಯಲ್ಲಿ ಹೇಳಿದರೆ ಅಂತಹ ಲೋಕರೂಢಿಯನ್ನೇ ವಿಷ್ಣುವಿನಲ್ಲಿ ಹೇಳಬೇಕು. ಹೀಗಿದ್ದರೆ ಮಾತ್ರ ಉಭಯತ್ರಪ್ರಸಿದ್ಧವೆನಿಸುತ್ತದೆ. ಆದರೆ ಪ್ರಕೃತ ವೈಶ್ವಾನರ ಶಬ್ದವು ಲೋಕರೂಢಿಯಿಂದ ಅಗ್ನಿಯಲ್ಲಿ ಪ್ರಸಿದ್ಧವಾಗಿದೆ. ಶ್ರುತಿಯಿಂದ ವಿಷ್ಣುವಿನಲ್ಲಿ ಪ್ರಸಿದ್ಧವಾಗಿದೆ. ಹೀಗಿರುವಾಗ ಉಭಯತ್ರಪ್ರಸಿದ್ಧವೆನ್ನಲು ಸಾಧ್ಯವಿಲ್ಲ ಹೊರತಾಗಿ, ಲೋಕರೂಢಿಯನ್ನು ವಿವಕ್ಷಿಸಿ ಅನ್ಯತ್ರಪ್ರಸಿದ್ಧವೇ ಆಗುತ್ತದೆ.

'ವೈಶ್ವಾನರ' ಶಬ್ದವು ಲಿಂಗಾತ್ಮಕವೆಂದು 'ವಿಶ್ವಜೀವಾಂತರತ್ವಾದ್ಯೈರ್ಲಿಂಗೈಃ' ಎಂಬ ಅಣುಭಾಷ್ಯದಲ್ಲಿ ಹೇಳಿದಂತೆ ಕಾಣಿಸುತ್ತದೆ. ಇದು ಸಿದ್ಧಾಂತದಲ್ಲಿ 'ವೈಶ್ವಾನರ' ಶಬ್ದವನ್ನು ಯೌಗಿಕವೆಂದು ಹೇಳಿದ್ದಾರೆ ಎಂಬ ಅಭಿಪ್ರಾಯದಿಂದ; ಹೊರತು, ಉಳಿದ ಶಬ್ದಗಳಂತೆ ಪೂರ್ವಪಕ್ಷ ಸಂದರ್ಭದಲ್ಲಿ ಲಿಂಗಾತ್ಮಕವಾಗಿರುವುದಿಲ್ಲ; ನಾಮಾತ್ಮಕವೇ ಆಗಿರುತ್ತದೆ.

ಈ ಅಧಿಕರಣಕ್ಕೆ ಹಿಂದಿನ ಅದೃಶ್ಯತ್ವಾಧಿಕರಣದ ಜೊತೆಗೆ ಆಕ್ಷೇಪಿಕೀ ಸಂಗತಿಯನ್ನು ತಿಳಿಯಬೇಕು. ಅದೃಶ್ಯತ್ವಾದಿಗುಣಗಳು ವಿಷ್ಣುವಿನ ಧರ್ಮವೆಂದು ಅಲ್ಲಿ ಹೇಳಲಾಗಿದೆ. ಅಂತಹ ಅದೃಶ್ಯತ್ವಾದಿಗುಣಗಳನ್ನು ಹೇಳುವ ಉಪನಿಷತ್ತಿನಲ್ಲಿ ಸರ್ವಗತತ್ವವನ್ನೂ ಸಹ ಹೇಳಲಾಗಿದೆ. ಅದೇ ಸರ್ವಗತತ್ವಧರ್ಮವನ್ನು ಛಾಂದೋಗ್ಯೋಪನಿಷತ್ತು ವೈಶ್ವಾನರನಲ್ಲಿ ಹೇಳುತ್ತಿದೆ. ವೈಶ್ವಾನರನು ವಿಷ್ಣುವಲ್ಲದಿದ್ದರೆ ಅದೃಶ್ಯತ್ವಾದಿಗುಣಗಳೂ ಸಹ ವಿಷ್ಣುವಿನ ಧರ್ಮವಾಗುವುದಿಲ್ಲ. ಹೀಗೆ ಹಿಂದಿನ ಅಧಿಕರಣದ ಸಿದ್ಧಾಂತವು ಅಯುಕ್ತವಾಗುತ್ತದೆ. ಈ ಉದ್ದೇಶಕ್ಕೋಸ್ಕರ ಸೂತ್ರಕಾರರು 'ವೈಶ್ವಾನರ' ಎಂಬ ನಾಮಾತ್ಮಕಶಬ್ದವನ್ನು ವಿಷ್ಣುವಿನಲ್ಲಿ ಸಮರ್ಥಿಸಲು ಹೊರಟಿದ್ದಾರೆ.

*ಸಂಶಯ ಹಾಗೂ ಪೂರ್ವಪಕ್ಷ*

ಛಾಂದೋಗ್ಯಾದಿ ಉಪನಿಷತ್ತುಗಳಲ್ಲಿ ಪ್ರಸ್ತುತನಾದ ವೈಶ್ವಾನರನು ಜಡವಾದ ಅಗ್ನಿ ಅಥವಾ ಅಗ್ನಿದೇವತೆ ಹೊರತು; ವಿಷ್ಣುವಲ್ಲ. ಏಕೆಂದರೆ ಲೋಕದಲ್ಲಿ ಶ್ರುತ್ಯುಕ್ತ 'ವೈಶ್ವಾನರ' ಶಬ್ದವನ್ನು ಇವರಿಬ್ಬರಲ್ಲಿಯೇ ಪ್ರಯೋಗಿಸುತ್ತಾರೆ. ಆದ್ದರಿಂದ ಶ್ರುತಿಯು ಅಗ್ನಿಯೇ ವೈಶ್ವಾನ[illegible]ಲು ಪ್ರಬಲವಾದ ಪ್ರಮಾಣವಾಗಿದೆ. ವಸ್ತುತಃ ಸರ್ವಗತತ್ವಧರ್ಮವು ವಿಷ್ಣುವಿನಲ್ಲಿರಬಹುದು. ಆದರೆ ಲಿಂಗಕ್ಕಿಂತ ಶ್ರುತಿಯು ಪ್ರಬಲವಾಗಿರುವುದರಿಂದ ಅಗ್ನಿಯೇ ವೈಶ್ವಾನರಶಬ್ದದಿಂದ ಪ್ರತಿಪಾದ್ಯನಾಗಬೇಕು. ಶ್ರುತಿಸಮಾಖ್ಯಾ, ಪುರುಷಸೂಕ್ತ ಸಮಾಖ್ಯಾ, ಆತ್ಮಶಬ್ದ, ಬ್ರಹ್ಮಪ್ರಕರಣ, ಸರ್ವಗತತ್ವಲಿಂಗ ಇವೇ ಮೊದಲಾದ ಅನೇಕ ಪ್ರಮಾಣಗಳು ಸಿದ್ಧಾಂತ ಸ್ಥಾಪಕಗಳಾಗಿವೆಯಲ್ಲವೇ? ಎಂದು ಪ್ರಶ್ನಿಸಬಾರದು. ಸ್ವಭಾವತಃ ಬಲಿಷ್ಠವಾದ ಒಂದೇ ಶ್ರುತಿಯು ಆ ಎಲ್ಲ ಲಿಂಗಗಳನ್ನು ಬಾಧಿಸುತ್ತದೆ. ಹೀಗೆ ಶ್ರುತಿಯ ಆಧಾರದಿಂದ ಅಗ್ನಿದೇವತೆಯು ವೈಶ್ವಾನರನಾಗಿದ್ದಾನೆಂದು ಪೂರ್ವಪಕ್ಷಕಾರನ ಅಭಿಪ್ರಾಯ.

*ನಿರ್ಧಾರಿತ ಪೂರ್ವಪಕ್ಷವೋ ? ಅನಿರ್ಧಾರಿತ ಪೂರ್ವಪಕ್ಷವೋ ?*

ಅಗ್ನಿಯು ವೈಶ್ವಾನರನಾಗಿದ್ದಾನೆಂಬ ಪೂರ್ವಪಕ್ಷಕ್ಕೆ ಶ್ರುತಿಯು ಆಧಾರವಾಗಿದೆ. ವಿಷ್ಣು ವೈಶ್ವಾನರನಾಗಿದ್ದಾನೆಂಬ ಸಿದ್ಧಾಂತಕ್ಕೆ ಲಿಂಗವು ಆಧಾರವಾಗಿದೆ. ಇವೆರಡರಲ್ಲಿ ಯಾವುದು ಪ್ರಬಲ? ಯಾವುದು ದುರ್ಬಲ? ಎಂಬುದನ್ನು ಮೊದಲು ವಿಚಾರ ಮಾಡಬೇಕು. ವಾಸ್ತವಿಕವಾಗಿ ಅಂತಃಸ್ಥತ್ವಾಧಿಕರಣದ ನ್ಯಾಯವನ್ನು ಸ್ಮರಿಸಿಕೊಂಡರೆ ಅಗ್ನಿಶ್ರುತಿ ಮೊದಲಾದವೆಲ್ಲ ವಿಷ್ಣುವನ್ನೇ ಪ್ರತಿಪಾದಿಸುತ್ತವೆಂದು ತಿಳಿಯುತ್ತದೆ. ಆವಾಗ ಶ್ರುತಿಯು ಸಾವಕಾಶವಾಗುವುದರಿಂದ ದುರ್ಬಲವಾಗುತ್ತದೆ. ಲಿಂಗವು ನಿರವಕಾಶವಾದ್ದರಿಂದ ಪ್ರಬಲವಾಗುತ್ತದೆ. ಆದರೆ ಪ್ರಕೃತ ಪೂರ್ವಪಕ್ಷಕಾರನು ತನ್ನ ವಾದವನ್ನು ಸಮರ್ಥವಾಗಿ ಮಂಡಿಸುತ್ತಿದ್ದಾನೆ. ಒಂದು ವೇಳೆ ಎಲ್ಲಾ ಶಬ್ದಗಳು ಭಗವಂತನನ್ನೇ ಪ್ರತಿಪಾದಿಸುವುದಾದರೆ ಲೋಕವ್ಯವಹಾರವೇ ಇಲ್ಲವಾಗುವ ಪ್ರಸಂಗ ಬರುತ್ತದೆ. ಆದಕ್ಕೋಸ್ಕರ ಅಗ್ನಿ ಮೊದಲಾದ ಶಬ್ದಗಳು ಮುಖ್ಯವಾಗಿ ದೇವತೆಗಳನ್ನು ಪ್ರತಿಪಾದಿಸುತ್ತವೆಂದು ಒಪ್ಪಬೇಕು.

ಇನ್ನು ಮುಖ್ಯಾರ್ಥನಾದವನು ಭಗವಂತ. ಅವನ ಸಂಬಂಧದಿಂದ ದೇವತೆಗಳು ಅಗ್ನಿ ಮೊದಲಾದ ಶಬ್ದಗಳಿಂದ ಪ್ರತಿಪಾದ್ಯರಾಗುತ್ತಾರೆಂದು ಸಿದ್ಧಾಂತಿಗಳು ಉತ್ತರಿಸಬಹುದು. ಹಾಗಾದರೆ ಸಕಲ ಶಬ್ದಗಳಿಗೆ ಎಲ್ಲಾ ಪದಾರ್ಥಗಳಲ್ಲಿ ಲಕ್ಷಣಾವೃತ್ತಿಯನ್ನು ಒಪ್ಪಿದಂತಾಗುತ್ತದೆ. ಹಾಗೇ ಲಕ್ಷಣಾವೃತ್ತಿಯನ್ನು ಒಪ್ಪಿದರೆ ಸಂಸ್ಕೃತ ಸಾಹಿತ್ಯದಲ್ಲಿರುವ ನಾಮಾತ್ಮಕ

ಶಬ್ದಗಳೆಲ್ಲವೂ ಪರ್ಯಾಯಪದಗಳಾದವು. ಆವಾಗ ಇಂದ್ರ ಮೊದಲಾದ ಶಬ್ದಗಳು ಇಂದ್ರನನ್ನು ಪ್ರತಿಪಾದಿಸುವಂತೆ ಅಗ್ನ್ಯಾದಿಗಳನ್ನೂ ಸಹ ಪ್ರತಿಪಾದಿಸಬೇಕಾಗುತ್ತದೆ. ಲಕ್ಷಣಾ ಮಾಡಬೇಕಾದರೆ ಲಕ್ಷಣೀಯವಾದ ವಸ್ತುವನ್ನು ಒಂದೇ ಶಬ್ದದಿಂದ ತಿಳಿಯಬೇಕೆಂದೇನೂ ನಿಯಮವಿಲ್ಲ. ತೀರದಲ್ಲಿ ಗಂಗಾಪದಕ್ಕೆ ಲಕ್ಷಣಾ ಮಾಡುವಂತೆ ಪ್ರವಾಹ ಶಬ್ದಕ್ಕೂ ಮಾಡಬಹುದು. 'ದೇವಸರಿತ್' ಎಂಬ ಶಬ್ದಕ್ಕೂ ಮಾಡಬಹುದು. ಹೀಗೊಪ್ಪದಿದ್ದರೆ ಅಗ್ನಿಯಲ್ಲಿ ವಹ್ನಿ ಶಬ್ದವನ್ನೂ ಸಹ ಪ್ರಯೋಗ ಮಾಡದೇ ಇರುವಂತಹ ಸ್ಥಿತಿ ಬರುತ್ತದೆ.

ಇನ್ನು ಪರಮಾತ್ಮನು ಅಗ್ನಿ ಮೊದಲಾದ ಶಬ್ದಗಳಿಂದ ಮುಖ್ಯವಾಗಿ ವಾಚ್ಯನಾಗಿದ್ದಾನೆ. ದೇವತೆಗಳು ಅಮುಖ್ಯವಾಗಿ ವಾಚ್ಯರಾಗಿದ್ದಾರೆಂದು ಸಿದ್ಧಾಂತಿಗಳು ಉತ್ತರಿಸಬಹುದು. ಆದರೆ ಹಾಗೆ ಹೇಳಲು ಕಾರಣವಿಲ್ಲ. ಒಂದು ವೇಳೆ ಅಗ್ನ್ಯಾದಿ ದೇವತೆಗಳನ್ನು ಯಾವುದಾದರೂ ಶಬ್ದವು ಮುಖ್ಯವಾಗಿ ಪ್ರತಿಪಾದಿಸುವುದಾಗಿದ್ದರೆ ಆದರ ಅನ್ವಯಕ್ಕೋಸ್ಕರ ಉಳಿದ ಶಬ್ದವನ್ನು ಅಮುಖ್ಯವಾಗಿ ಕೂಡಿಸಬಹುದಿತ್ತು. ಆದರೆ ಸಿದ್ಧಾಂತದ ಪ್ರಕಾರ ಭಗವಂತನನ್ನು ಬಿಟ್ಟು ಬೇರೆ ಯಾರೂ ಸಹ ಮುಖ್ಯವಾಗಿ ಯಾವುದೇ ಶಬ್ದದಿಂದ ಪ್ರತಿಪಾದ್ಯರಾಗುವುದಿಲ್ಲ.

ಮತ್ತು ಇಂದ್ರಾದಿ ಶಬ್ದಗಳು ಬ್ರಹ್ಮನಲ್ಲಿ ಮುಖ್ಯವಾಗಿರುವುದಾದರೆ, ಅಗ್ನಿಸೂಕ್ತ, ವಾಯುಸೂಕ್ತ ಎಂಬ ಸೂಕ್ತ ವ್ಯವಸ್ಥೆಯು ಹಾಗೂ ವೈಶ್ವಾನರ ವಿದ್ಯೆ, ಅಗ್ನಿವಿದ್ಯೆಯೆಂಬ ವಿದ್ಯಾವ್ಯವಸ್ಥೆಯೂ ಸಹ ಅಯುಕ್ತವಾಗುತ್ತದೆ. ಈ ಎಲ್ಲ ಕಾರಣಗಳಿಂದ ಲೋಕವ್ಯವಹಾರವನ್ನು ಕೂಡಿಸಬೇಕೆಂದರೆ ವಿಷ್ಣುವನ್ನು ಬಿಟ್ಟು ಬೇರೆ ಪದಾರ್ಥಗಳಲ್ಲಿಯೂ ಮುಖ್ಯವಾಚ್ಯತ್ವವನ್ನೇ ನಾವು ಒಪ್ಪಬೇಕು. ಹಾಗೆ ಒಪ್ಪಿದಾಗ ವೈಶ್ವಾನರ ಶ್ರುತಿಯು ಪೂರ್ವಪಕ್ಷಿಯ ವಿಷಯದಲ್ಲಿ ಪ್ರಬಲವಾದ ಪ್ರಮಾಣವಾಗುತ್ತದೆ.

ಟೀಕೆ, ಭಾಷ್ಯಗಳನ್ನು ನೋಡಿದಾಗ ಅನಿರ್ಧಾರಿತ ಪೂರ್ವಪಕ್ಷವನ್ನು ಮಾಡಿದಂತೆ ಕಾಣಸುತ್ತದೆ. ಅಂದರೆ ಪೂರ್ವಪಕ್ಷಯುಕ್ತಿ ಹಾಗೂ ಸಿದ್ಧಾಂತಯುಕ್ತಿಯು ಸಮಬಲವಾಗಿರುವುದರಿಂದ ವಿಷ್ಣುವೇ ವೈಶ್ವಾನರನೆಂದು ನಿರ್ಣಯವಾಗುವುದಿಲ್ಲವೆಂದು ಪೂರ್ವಪಕ್ಷ ಮಾಡಿದ್ದಾರೆ. ಆದರೂ ಸಹ ಚಂದ್ರಿಕಾಚಾರ್ಯರು ನಿಶ್ಚಯಾತ್ಮಕವಾದ ಪೂರ್ವಪಕ್ಷವನ್ನೇ ಸಮರ್ಥಿಸಿದ್ದಾರೆ. ಸಿದ್ಧಾಂತಯುಕ್ತಿಗಿಂತಲೂ ಪೂರ್ವಪಕ್ಷಯುಕ್ತಿಯು ಪ್ರಬಲವಾಗಿದೆ. ಏಕೆಂದರೆ ಅನ್ಯತ್ರಪ್ರಸಿದ್ಧಿಯೆಂಬ ನಿರವಕಾಶಯುಕ್ತಿಯಿಂದ ವೈಶ್ವಾನರ ಶ್ರುತಿಯು ಪ್ರಬಲವಾದ ಪ್ರಮಾಣವಾಗಿದೆ. ಆದ್ದರಿಂದ ವಿಷ್ಣು ವೈಶ್ವಾನರನಾಗಲು ಸಾಧ್ಯವೇ ಇಲ್ಲ. ಅಗ್ನಿಯೇ ವೈಶ್ವಾನರನಾಗುತ್ತಾನೆಂಬ ಪೂರ್ವಪಕ್ಷವನ್ನು ನಿರ್ಣಯ ಮಾಡಿದ್ದಾರೆ. ಇದಕ್ಕನುಗುಣವಾಗಿಯೇ ಟೀಕೆ ಹಾಗೂ ಭಾಷ್ಯಗಳನ್ನು ಅರ್ಥೈಸಿಕೊಳ್ಳಬೇಕು. ನಿಶ್ಚಯ ಮಾಡಲು ಬರುವುದಿಲ್ಲವೆಂದು ಟೀಕೆಯಲ್ಲಿ ಹೇಳಿದ್ದರೂ ಸಹ ಅಗ್ನಿ ಪರವಾಗಿ ನಿಶ್ಚಯಿಸಬಹುದೆಂಬುದನ್ನು ಅಲ್ಲಿ ವಿವಕ್ಷಿಸಿದಾಗ ಸಮಸ್ಯೆಯು ಪರಿಹಾರವಾಗುತ್ತದೆ. ಆದ್ದರಿಂದ ನಿಶ್ಚಯಾತ್ಮಕವಾದ ಪೂರ್ವಪಕ್ಷವನ್ನೇ ಮಾಡಲು ಬರುವಾಗ ಅನಿಶ್ಚಯಾತ್ಮಕವಾದ ಪೂರ್ವಪಕ್ಷವನ್ನೇಕೆ ಮಾಡಬೇಕು? ಅಥವಾ ಅನಿರ್ಧಾರಿತವಾದ ಪೂರ್ವಪಕ್ಷವನ್ನು ಇಟ್ಟುಕೊಂಡರೂ ಸಹ ವಿಷ್ಣುಪರತ್ವವಿಷಯದಲ್ಲಷ್ಟೇ ನಿಶ್ಚಯವಿಲ್ಲವೆಂದಭಿಪ್ರಾಯ. ಅಗ್ನಿವಿಷಯದಲ್ಲಿ ನಿಶ್ಚಯಾತ್ಮಕವಾಗಿ ಯುಕ್ತಿಗಳನ್ನು ಹೇಳಬಹುದು.

ಈ ವೈಶ್ವಾನರಾಧಿಕರಣವು ಹಿಂದಿನೆರಡು ಪಾದಗಳಲ್ಲಿ ಪ್ರಸಕ್ತವಾದ ಎಲ್ಲಾ ಅಧಿಕರಣಗಳ ಸಿದ್ಧಾಂತ ಪ್ರಮೇಯವನ್ನು ಆಕ್ಷೇಪಿಸುತ್ತಿರುವುದರಿಂದ ಎರಡು ಪಾದಗಳಲ್ಲಿರುವ ಎಲ್ಲಾ ಅಧಿಕರಣಗಳಿಗೆ ರಾಜನ ಸ್ಥಾನದಲ್ಲಿದೆ. ಆದ್ದರಿಂದಲೇ ವೈಶ್ವಾನರಾಧಿಕರಣವನ್ನು ಕೊನೆಯಲ್ಲಿ ಉಲ್ಲೇಖಿಸಿದ್ದಾರೆ.

*ಪರಿಪೂರ್ಣಚಂದ್ರಿಕಾ*

## *ವೈಶ್ವಾನರ ಶ್ರುತಿಯಿಂದ ವಿಷ್ಣುವೇ ಪ್ರತಿಪಾದ್ಯನೆಂದು ಸಿದ್ಧಾಂತ*

ಸಿದ್ಧಾಂತ ಹೀಗಿದೆ - ಅಜ್ಞಾನಿಗಳು ಅಜ್ಞಾನ ಪ್ರಯುಕ್ತವಾಗಿ ವಿಷ್ಣುಪರವಾದ ಶಬ್ದಗಳನ್ನು ಲೋಕದಲ್ಲಿ ಪ್ರಯೋಗಿಸಿದ್ದಾರೆ. ಅದರಂತೆ ಜ್ಞಾನಿಗಳೂ ಸಹ ಹಾನ, ಉಪಾದಾನ ಮೊದಲಾದ ವ್ಯವಹಾರಕ್ಕೋಸ್ಕರ ಲೋಕದಲ್ಲಿ ಪ್ರಯೋಗಿಸುತ್ತಾರೆ.

ವಸ್ತುತಃ ಸೂಕ್ತಾದಿವ್ಯವಸ್ಥೆಗೆ ಋಗ್ಭಾಷ್ಯದಲ್ಲಿ ಬೇರೆ ಕಾರಣವನ್ನೇ ಹೇಳಿದ್ದಾರೆ -

ಪೃಥಗ್ರೂಪಾಣಿ ವಿಷ್ಣೋಸ್ತು ದೇವತಾಂತರಗಾನಿ ಚ ।
ಅಗ್ನ್ಯಾದಿಸೂಕ್ತವಾಚ್ಯಾನಿ ನಾಮ್ನಾ ಸೂಕ್ತಭಿದಾ ಭವೇತ್ ॥

ಭಗವಂತನು ದೇವತಾಂತರ್ಗತನಾಗಿ ಹಾಗೂ ದೇವತೆಗಳಲ್ಲಿ ಅಂತರ್ಗತನಾಗದೇ ಎರಡು ರೂಪಗಳಿಂದ ಅಗ್ನಿ ಮೊದಲಾದ ಶಬ್ದಗಳಿಂದ ಪ್ರತಿಪಾದ್ಯನಾಗಿದ್ದಾನೆ. ಈ ಎರಡು ರೂಪಗಳಲ್ಲಿರುವ ಅಗ್ನ್ಯಾದಿ ಶಬ್ದಗಳನ್ನು ವಿವಕ್ಷಿಸಿ ಅಗ್ನಿಸೂಕ್ತ, ವಾಯುಸೂಕ್ತ ಇತ್ಯಾದಿ ವ್ಯವಸ್ಥೆಯು ಇರುತ್ತದೆ.

ಹೀಗೆ ಅಗ್ನಿ ಮೊದಲಾದ ಶಬ್ದಗಳ ಪ್ರಯೋಗವೇ ಸೂಕ್ತಾದಿಗಳಿಗೆ ವ್ಯವಸ್ಥಾಪಕವೆಂದು ಹೇಳಿದ್ದಾರೆ.

## *ಸೂತ್ರಕ್ರಮಗಳ ಸ್ವಾರಸ್ಯ ವರ್ಣನೆ*

ಪ್ರಥಮಸೂತ್ರದಲ್ಲಿ ಶ್ರುತಿ ಎಂಬ ಸಾಧಕ ಪ್ರಮಾಣವನ್ನು ಹೇಳಿರುತ್ತಾರೆ. ಎರಡನೆಯ ಸೂತ್ರದಲ್ಲಿ ಸಮಾಖ್ಯಾಪ್ರಮಾಣವನ್ನು ಹೇಳಿರುತ್ತಾರೆ. ಸ್ವಪಕ್ಷ ಸಾಧಕವನ್ನು ಹೇಳಿದ ಮೇಲೆ ಮೂರನೆಯ ಸೂತ್ರದಲ್ಲಿ ವೈಶ್ವಾನರ ಶ್ರುತಿಯಲ್ಲಿರುವ ಅಸಾಧಾರಣವಾದ ಬಾಧಕವನ್ನು ಪರಿಹರಿಸಿದ್ದಾರೆ. ನಾಲ್ಕನೆಯ ಸೂತ್ರದಲ್ಲಿ ಪರಮತ ನಿರಾಕರಣೆ ಇದೆ. ಐದನೆಯ ಸೂತ್ರದಲ್ಲಿ ವೈಶ್ವಾನರ ಶಬ್ದದ ಸಮನ್ವಯವು ಸಿದ್ಧವಾಯಿತಾದ್ದರಿಂದ ಸಕಲ ಶಬ್ದಗಳ ವಿಷಯದಲ್ಲಿರುವ ಬಾಧಕವನ್ನು ಪರಿಹರಿಸಿದ್ದಾರೆ. ಆರನೆಯ ಸೂತ್ರದಿಂದ ಮುಂದಿನ ನಾಲ್ಕು ಸೂತ್ರಗಳಲ್ಲಿ ವೇದದಲ್ಲಿರುವ ಸೂಕ್ತಾದಿ ವ್ಯವಸ್ಥೆಗಳನ್ನು ಅನೇಕ ಬಗೆಯಲ್ಲಿ ಸಮರ್ಥಿಸಿದ್ದಾರೆ. ಈ ಕ್ರಮದಲ್ಲಿ ಚಿಂತಿಸಿದಾಗ ಸೂತ್ರಗಳ ಜೋಡಣೆಯು ಅತ್ಯಂತ ಸ್ವರಸವಾಗಿದೆಯೆಂದು ಸ್ಪಷ್ಟವಾಗಿ ತಿಳಿಯುತ್ತದೆ.

ಕೊನೆಯ ನಾಲ್ಕು ಸೂತ್ರಗಳು ವೈಶ್ವಾನರವೆಂಬ ನಾಮಾತ್ಮಕ ಶಬ್ದದ ಸಮನ್ವಯಕ್ಕಾಗಿ ಹೊರಟಿರುವುದಿಲ್ಲ. ಸಕಲ ಶಬ್ದಗಳ ಸಮನ್ವಯವನ್ನು ಭಗವಂತನಲ್ಲೇ ಮಾಡಿದಾಗ ಬರುವಂತಹ ಬಾಧಕವನ್ನಷ್ಟೇ ಪರಿಹರಿಸಿದೆ. ವಾಸ್ತವಿಕವಾಗಿ ನಾಲ್ಕನೆಯ ಪಾದದ ಕೊನೆಯಲ್ಲಿ ಈ ನಾಲ್ಕು ಸೂತ್ರಗಳನ್ನು ಹೇಳಬೇಕಿತ್ತೆ ಎಂದ್ದೆನಿಸುತ್ತದೆ. ಆದರೆ ಕೇವಲ ಪದ, ವರ್ಣ ಸ್ವರಗಳ, ಸಮನ್ವಯದಲ್ಲಿ ಪರ್ಯವಸಾನ ಗೊಳ್ಳುವ ನಾಲ್ಕನೆಯ ಪಾದದಲ್ಲಿ ಈ ಸೂತ್ರಗಳು ಅಸಂಗತವೇ ಆಗುತ್ತಿದ್ದವು. ಆದ್ದರಿಂದ ಸೂತ್ರಕಾರರು ನಾಮಾತ್ಮಕ ಹಾಗೂ ಲಿಂಗಾತ್ಮಕ ಶಬ್ದಗಳ ಸಮನ್ವಯವು ಮುಗಿಯುತ್ತಿರುವ ಸಂದರ್ಭದಲ್ಲಿ ಈ ನಾಲ್ಕು ಸೂತ್ರಗಳನ್ನು ಹೇಳಿದ್ದು ಅತ್ಯಂತ ಸಂಗತವೇ ಆಗಿದೆ.

## *ಶಂಕರ, ರಾಮಾನುಜರ ಪ್ರಥಮ ಸೂತ್ರಾರ್ಥ ವಿಮರ್ಶೆ*

ಶಾಂಕರ ಭಾಷ್ಯದಲ್ಲಿ ಸೂತ್ರಾರ್ಥವನ್ನು ಹೀಗೆ ಹೇಳಿದ್ದಾರೆ - ಛಾಂದೋಗ್ಯದಲ್ಲಿ 'ಅಯಮಗ್ನಿರ್ವೈಶ್ವಾನರಃ' ಎಂಬುದಾಗಿ ವೈಶ್ವಾನರ ಶಬ್ದವು ಕೇಳಿಸುತ್ತಿದೆ. ಜಾಠರಾಗ್ನಿ, ಭೂತಾಗ್ನಿ, ಅಗ್ನಿದೇವತೆ ಮೂವರಲ್ಲಿಯೂ ವೈಶ್ವಾನರ

ಶಬ್ದವು ಸಮಾನವಾಗಿ ಪ್ರಯೋಗಿಸಲ್ಪಡುತ್ತದೆ. ಪ್ರಕರಣದ ಪ್ರಾರಂಭದಲ್ಲಿ ಜೀವ ಹಾಗೂ ಈಶ್ವರರಲ್ಲಿ ಸಾಧಾರಣವಾದ ಆತ್ಮಶಬ್ದವು ಕೇಳಿಸುತ್ತಿರುವುದರಿಂದ ಜೀವನೂ ಸಹ ವೈಶ್ವಾನರನೆನಿಸಬಹುದು. ಇಷ್ಟು ಪೂರ್ವಪಕ್ಷ.

ವೈಶ್ವಾನರ ಹಾಗೂ ಆತ್ಮಶಬ್ದಗಳು ಸಾಧಾರಣವಾಗಿದ್ದರೂ 'ಮೂರ್ಧೈವ ಸುತೇಜಾಃ' ಇತ್ಯಾದಿಯಾಗಿ ಸ್ವರ್ಗಾದಿಲೋಕಗಳೇ ವೈಶ್ವಾನರನ ಅವಯವವಾಗಿದೆಯೆಂದು ಶ್ರುತಿ ಹೇಳುತ್ತಿದೆ. ಹೀಗೆ ಜೀವನಲ್ಲಿಲ್ಲದ ವಿಶೇಷಣಗಳನ್ನು ವೈಶ್ವಾನರನಲ್ಲಿ ಹೇಳಿದ್ದರಿಂದ ಬ್ರಹ್ಮನೇ ಇಲ್ಲಿ ವೈಶ್ವಾನರ ಶಬ್ದದಿಂದ ಪ್ರತಿಪಾದ್ಯನಾಗುತ್ತಾನೆಂದು ಸಿದ್ಧಾಂತ.

ಶಂಕರ ಭಾಷ್ಯದ ಈ ವ್ಯಾಖ್ಯಾನವು ಅಯುಕ್ತವಾಗಿದೆ. ಏಕೆಂದರೆ ವೈಶ್ವಾನರಶಬ್ದವು ಜಾಠರಾಗ್ನಿ, ಭೂತಾಗ್ನಿ, ಅಗ್ನಿದೇವತೆ ಮೂರರಲ್ಲಿ ಮಾತ್ರ ಸಾಧಾರಣವಾಗಿಲ್ಲ. ಆತ್ಮನಲ್ಲಿಯೂ ಸಹ ಸಾಧಾರಣವಾಗಿರುವುದರಿಂದ ತ್ರಿತಯ ಸಾಧಾರಣವೆಂಬ ಅದ್ವೈತಿಗಳ ಮಾತು ತಪ್ಪಾಗುತ್ತದೆ.

ಮತ್ತು ಆತ್ಮಶಬ್ದವು ಜೀವ ಹಾಗೂ ಈಶ್ವರರಲ್ಲಿ ಸಾಧಾರಣವಾಗಿದೆಯೆಂದು ಸಾಧಾರಣಶಬ್ದದ ಅರ್ಥವನ್ನು ಹೇಳಿದರೆ; 'ದ್ಯುಭ್ವಾದ್ಯಾಯತನಂ ಸ್ವ ಶಬ್ದಾತ್' ಎಂಬಲ್ಲಿ 'ಸ್ವಶಬ್ದಾತ್' ಎಂಬ ಶಬ್ದಕ್ಕೆ 'ಆತ್ಮಶಬ್ದಾತ್' ಎಂದು ವ್ಯಾಖ್ಯಾನಿಸಿ ದ್ಯುಭ್ವಾದ್ಯಾಯತನತ್ವವನ್ನು ಬ್ರಹ್ಮನಲ್ಲಿ ಸಮರ್ಥಿಸಿದ್ದಾರೆ. ಇದರಿಂದ ಆತ್ಮಶಬ್ದವು ಕೇವಲ ಬ್ರಹ್ಮನನ್ನು ಪ್ರತಿಪಾದಿಸುತ್ತದೆಂದು ಅವರು ಒಪ್ಪಿದ್ದಾರೆ. ಇಲ್ಲದಿದ್ದರೆ 'ನಾನುಮಾನಮತಚ್ಛಬ್ದಾತ್' ಎಂಬ ಸೂತ್ರದಲ್ಲಿ ಆತ್ಮಶಬ್ದ ಜೀವನಲ್ಲಿಲ್ಲದ ಕಾರಣ ಜೀವನು ದ್ಯುಭ್ವಾದ್ಯಾಯತನನಾಗುವುದಿಲ್ಲವೆಂದು ನಿರಾಕರಿಸಿದ್ದು ಅವರ ಪ್ರಕಾರವೇ ತಪ್ಪಾಗುತ್ತದೆ.

*ರಾಮಾನುಜ ಭಾಷ್ಯದಲ್ಲಿ ಪ್ರಥಮ ಸೂತ್ರವ್ಯಾಖ್ಯಾನ ಹೀಗಿದೆ -*

ಜಾಠರಾಗ್ನಿ, ಭೂತಾಗ್ನಿ, ಅಗ್ನಿದೇವತೆ, ಪರಬ್ರಹ್ಮ ಈ ನಾಲ್ಕರಲ್ಲಿಯೂ ಸಾಧಾರಣವಾದ ವೈಶ್ವಾನರಶಬ್ದಕ್ಕೆ ಪರಮಾತ್ಮನಲ್ಲಿ ಮಾತ್ರ ಇರುವ ಧರ್ಮಗಳನ್ನು ವಿಶೇಷಣವನ್ನಾಗಿ ಹೇಳಲಾಗಿದೆ. ಮುಮುಕ್ಷುಗಳಾದ ಔಪಮನ್ಯುವೇ ಮೊದಲಾದ ಐದು ಮಂದಿ ಶಿಷ್ಯಂದಿರು ಬ್ರಹ್ಮನ ಜಿಜ್ಞಾಸೆಯನ್ನು ಮಾಡಿದ್ದಾರೆ. ಆವಾಗ ವೈಶ್ವಾನರನೇ ಬ್ರಹ್ಮನೆಂದು ರಾಜನು ಉಪದೇಶಿಸಿದ್ದಾನೆ. ಹೀಗೆ ಜಿಜ್ಞಾಸ್ಯಮಾನತ್ವ ಮುಂತಾದ ಬ್ರಹ್ಮನ ಲಿಂಗಗಳಿಂದ ವೈಶ್ವಾನರನಿಗೆ ವಿಶೇಷಣಗಳನ್ನು ಹೇಳಿದ್ದರಿಂದ ವೈಶ್ವಾನರನು ಬ್ರಹ್ಮನೇ ಆಗುತ್ತಾನೆಂದು ಸಿದ್ಧಾಂತ ಮಾಡಿದ್ದಾರೆ.

ಅದ್ವೈತಿಗಳಂತೆ ಇವರ ವ್ಯಾಖ್ಯಾನವೂ ಇರುತ್ತದೆ. ಜಾಠರಾಗ್ನಿಯನ್ನು ಪ್ರತ್ಯೇಕವಾಗಿ ಪರಿಗಣಿಸಿದ್ದು ತಪ್ಪಾಗುತ್ತದೆಂಬುದು ಇವರಿಗೂ ಸಮಾನ.

ಮತ್ತು 'ಆತ್ಮಾನಂ ವೈಶ್ವಾನರಮ್' ಎಂಬುದಾಗಿ ವೈಶ್ವಾನರನಲ್ಲಿ ನೇರವಾಗಿ ವಿಶೇಷಣವಾಗಿರುವ ಆತ್ಮಶ್ರುತಿಯಿಂದಲೇ ಬ್ರಹ್ಮನು ವೈಶ್ವಾನರನಾಗಿದ್ದಾನೆಂದು ಹೇಳಲು ಬರುವಾಗ ಪ್ರಕರಣದಿಂದ ಲಭಿಸುವ ಲಿಂಗವೆಂಬ ವಿಶೇಷಣದಿಂದ ಪರಮಾತ್ಮನನ್ನು ವೈಶ್ವಾನರನೆಂದು ನಿರ್ಣಯಿಸುವುದು ಅಯುಕ್ತವಾಗಿದೆ.

*ಶಾಂಕರ ರಾಮಾನುಜ ಭಾಷ್ಯಗಳಲ್ಲಿನ ದ್ವಿತೀಯ ಸೂತ್ರಾರ್ಥ ವಿಮರ್ಶೆ*

'ಯಸ್ಯಾಗ್ನಿರಸ್ಯಾಮ್' ಇತ್ಯಾದಿ ಶ್ರುತಿಗಳು ದ್ಯುಲೋಕಾದಿಗಳು ಬ್ರಹ್ಮನ ಅವಯವಗಳೆಂದು ಹೇಳಲ್ಪಟ್ಟಿದೆ. ಶ್ರುತಿಗೆ ಅನುಸಾರಿಯಾಗಿ ಸ್ಮೃತಿಯನ್ನು ವ್ಯಾಖ್ಯಾನಿಸಬೇಕಾದ್ದರಿಂದ ದ್ಯುಲೋಕಾದಿಗಳು ಬ್ರಹ್ಮನ ಅವಯವಗಳೆಂದೇ ಶ್ರುತಿಗಳೂ ಸಹ ಹೇಳುತ್ತಿವೆ. ಆದರೆ ಬ್ರಹ್ಮನೇ ವೈಶ್ವಾನರನೆಂದು ಅದ್ವೈತಿಗಳ ವ್ಯಾಖ್ಯಾನ.

ದ್ಯುಲೋಕದಿಂದ ಪೃಥಿವೀ ಲೋಕಪರ್ಯಂತ. ಸಕಲ ಲೋಕಗಳೂ ಬ್ರಹ್ಮನ ಅವಯವಗಳೇ ಆಗಿವೆಯೆಂದು 'ಅಗ್ನಿರ್ಮೂರ್ಧಾ' ಇತ್ಯಾದಿ ಶ್ರುತಿಗಳು ಪ್ರತಿಪಾದಿಸುತ್ತಿದೆ. ಅಂದರೆ ಶ್ರುತಿಯಲ್ಲಿ ಮಾಡಲ್ಪಟ್ಟ ಉಲ್ಲೇಖವೇ ವೈಶ್ವಾನರನು ಬ್ರಹ್ಮನಾಗಿದ್ದಾನೆನ್ನಲು ಕಾರಣವಾಗಿದೆ.ಯೆಂದು ರಾಮಾನುಜರು ವ್ಯಾಖ್ಯಾನಿಸುತ್ತಾರೆ.

ಇವರಿಬ್ಬರ ಅಭಿಪ್ರಾಯವೂ ಸರಿಯಿಲ್ಲ. ಚಕ್ಷುಷೀ ಚಂದ್ರಸೂರ್ಯೌ ಇತ್ಯಾದಿ ಶ್ರುತಿಯೂ ಸಹ ಸ್ಮೃತಿ ಮೂಲವಾಗಿದೆ. ಮತ್ತು 'ಅಹಂ ವೈಶ್ವಾನರಃ' ಎಂಬ ಶ್ರುತಿಯಲ್ಲಿ ನೇರವಾಗಿಯೇ ಈಶ್ವರನನ್ನು ವೈಶ್ವಾನರನೆಂದು ಹೇಳಿದ್ದಾರೆ. ರಾಮಾನುಜರು 'ಸ್ಮರ್ಯಮಾಣ' ಶಬ್ದಕ್ಕೆ 'ಪ್ರತ್ಯಭಿಜ್ಞಾನಮಾಯ' ಎಂಬರ್ಥವನ್ನು ಹೇಳಿದ್ದಾರೆ. ಈ ಅರ್ಥವು ಸೂತ್ರಾರ್ಥ ಸ್ವಾರಸ್ಯಕ್ಕೆ ಭಂಗವನ್ನುಂಟು ಮಾಡುತ್ತಿದೆ.

*ಉಳಿದ ಸೂತ್ರಾರ್ಥಗಳ ವಿಮರ್ಶೆ*

ವೈಶ್ವಾನರನು ಬ್ರಹ್ಮನ ಪ್ರತೀಕ ಹಾಗೂ ಉಪಾಧಿಯೆಂದು 'ತಥಾ ದೃಷ್ಟ್ಯುಪದೇಶಾತ್' ಎಂಬ ಸೂತ್ರಕ್ಕೆ ಅರ್ಥೈಸುತ್ತಾರೆ. ಆದರೆ ವೈಶ್ವಾನರನು ಪ್ರತೀಕವಾದರೆ ಬ್ರಹ್ಮವಾಚಕವಾಗಲು ಹೇಗೆ ಸಾಧ್ಯ ? ಮನಸ್ಸು ಬ್ರಹ್ಮನಿಗೆ ಪ್ರತೀಕವಾದ ಮಾತ್ರದಿಂದ 'ಮನಸ್' ಶಬ್ದದಿಂದ ಬ್ರಹ್ಮನು ಪ್ರತಿಪಾದ್ಯನಾಗುತ್ತಾನೇನು? ಮತ್ತು ಅಂತಹ ಪ್ರತೀಕೋಪಾಸನೆಯಿಂದ ಯಾವುದೇ ಪಾಪಗಳೂ ಸಹ ಕ್ಷಯವಾಗುವುದಿಲ್ಲ. ಕೇವಲ ನಿರ್ಗುಣೋಪಾಸನೆಯಿಂದಷ್ಟೇ ಪಾಪಕ್ಷಯವಾಗುತ್ತದೆಂಬುದು ಅದ್ವೈತಿಗಳ ಸಿದ್ಧಾಂತ. 'ಅರ್ಭಕೌಕಸ್ತ್ವಾತ್' ಮತ್ತು 'ತಥಾದೃಷ್ಟ್ಯುಪದೇಶಾತ್' ಇತ್ಯಾದಿ ಸೂತ್ರಗಳಲ್ಲಿ ಬ್ರಹ್ಮನಿಗೆ ಪ್ರಾದೇಶ ಮಾತ್ರ ಪರಿಮಾಣವನ್ನು ಸಮರ್ಥಿಸಿದ್ದಾಗಿದೆ. ಪುನಃ ಇಲ್ಲಿಯೂ ಅದನ್ನೇ ಪ್ರತಿಪಾದಿಸಿದರೆ ಪುನರುಕ್ತಿ ಬರುತ್ತದೆಂದು ತಿಳಿಯಬೇಕು. ರಾಮಾನುಜ ಭಾಷ್ಯದಲ್ಲಿಯ 'ಅಭಿವ್ಯಕ್ತೇರಿತಿ' ಇತ್ಯಾದಿ ನಾಲ್ಕು ಸೂತ್ರಗಳು ಬೇರೆ ಬೇರೆ ವಿಷಯವನ್ನು ಪ್ರತಿಪಾದಿಸುತ್ತವೆಂದು ಹೇಳಿದ್ದಾರೆ. ಆದರೆ ಒಂದೇ ವಿಷಯದಲ್ಲಿ ಅಭಿಪ್ರಾಯ ಭೇದಗಳನ್ನು ಸೂಚಿಸುತ್ತಿದೆಯೆಂದು ಹೇಳುವುದೇ ಸ್ವರಸವಾಗುತ್ತದೆ.

# ಪ್ರಥಮಾಧ್ಯಾಯದ ತೃತೀಯ ಪಾದ
# ದ್ಯುಭ್ವಾದ್ಯಧಿಕರಣ

*ಉಭಯತ್ರಪ್ರಸಿದ್ಧಶಬ್ದ ಸಮನ್ವಯದ ಅನಿವಾರ್ಯತೆ ಮತ್ತು ಶಬ್ದಸಂಗತಿ ವಿಚಾರ*

ನಾಮಪಾದದಲ್ಲಿ ಸಕಲ ನಾಮಾತ್ಮಕ ಶಬ್ದಗಳು ಭಗವಂತನ ಹೆಸರುಗಳಾಗಿವೆಯೆಂಬುದನ್ನು ವಿಚಾರ ಮಾಡಿದ್ದಾಯಿತು. ಯೌಗಿಕವಾದ ಸಕಲ ಶಬ್ದಗಳು ಲಿಂಗಸ್ವರೂಪದಲ್ಲಿರುವುದರಿಂದ ಅವುಗಳೂ ಸಹ ಭಗವಂತನ ಗುಣಪ್ರತಿಪಾದಕಗಳಾಗಿವೆಯೆಂಬುದನ್ನೂ ಸಹ ಎರಡನೇ ಪಾದದಲ್ಲಿ ವಿಚಾರ ಮಾಡಿದ್ದಾಯಿತು.

ಶಬ್ದಗಳು ಭಗವಂತನನ್ನು ಪ್ರತಿಪಾದಿಸಲು ಸಾಧ್ಯವಿಲ್ಲ. ಲೋಕರೂಢಿಯಂತೆ ಲೌಕಿಕಪದಾರ್ಥಗಳನ್ನೇ ಪ್ರತಿಪಾದಿಸುತ್ತದೆಂಬುದು ಪೂರ್ವಪಕ್ಷಕಾರನ ಆಗ್ರಹ. ಪ್ರತಿಯೊಂದು ಶಬ್ದಗಳೂ ಭಗವತ್ಪ್ರತಿಪಾದಕಗಳಾಗಿವೆ. ಭಗವಂತನನ್ನು ಬಿಟ್ಟು ಇತರ ಯಾವುದೇ ಪದಾರ್ಥಗಳನ್ನೂ ಸಹ ಪ್ರತಿಪಾದಿಸಲು ಸಾಧ್ಯವೇ ಇಲ್ಲವೆಂಬುದು

*ಪರಿಪೂರ್ಣಚಂದ್ರಿಕಾ*

ಸಿದ್ಧಾಂತಿಗಳ ಆಗ್ರಹ. ಇವರಿಬ್ಬರನ್ನೂ ಸಮಾಧಾನ ಮಾಡಲು ಒಂದು ಉಪಾಯವನ್ನು ಹುಡುಕಬಹುದು. ಸಕಲ ಶಬ್ದಗಳು ಹಾಗೂ ಲಿಂಗಗಳು ಲೌಕಿಕಪದಾರ್ಥಗಳನ್ನೂ ಪ್ರತಿಪಾದಿಸುತ್ತವೆ. ವಿಷ್ಣುವನ್ನೂ ಸಹ ಪ್ರತಿಪಾದಿಸುತ್ತವೆ. ಹೀಗೆ ಹೇಳಿದಾಗ ಇಬ್ಬರಿಗೂ ಗಲಾಟೆಯಾಗಲು ಸಾಧ್ಯವೇ ಇಲ್ಲ. ಆದ್ದರಿಂದ ಉಭಯತ್ರಪ್ರಸಿದ್ಧವೆಂದು ಶಬ್ದಗಳನ್ನು ಒಪ್ಪೋಣ ಏನು ತೊಂದರೆ? ಎಂಬ ಪ್ರಶ್ನೆಯನ್ನು ಅನೇಕ ಮಂದಿ ಮಾಡುತ್ತಾರೆ. ಅದಕ್ಕೆ ಉತ್ತರ ನೀಡುವುದಕ್ಕಾಗಿಯೇ ಮೂರನೇ ಪಾದವು ಹೊರಡುತ್ತಿದೆ. ಈ ಪಾದದಲ್ಲಿ ಉಭಯತ್ರಪ್ರಸಿದ್ಧವಾದ ಶಬ್ದಗಳೆಲ್ಲವೂ ಭಗವಂತನನ್ನೇ ಪ್ರತಿಪಾದಿಸುತ್ತವೆಂದು ಸಾಧಿಸುತ್ತಿದ್ದಾರೆ.

ತಿಳಿಯಬೇಕಾದ ವಿಚಾರವಿಷ್ಟು. ಹಿಂದಿನ ಎರಡು ಪಾದಗಳಲ್ಲಿ ಸಕಲಶಬ್ದಗಳಿಗೆ ಭಗವಂತನಲ್ಲಿ ತಾತ್ಪರ್ಯವಿದೆಯೆಂದು ಹೇಳಿದ್ದಾರೆ ಹೊರತು, ಮುಖ್ಯವಾಚ್ಯತ್ವವನ್ನು ಸಮರ್ಥಿಸಿರುವುದಿಲ್ಲ. ತಾತ್ಪರ್ಯವಿರುವ ಪ್ರಯುಕ್ತ ವಿಷ್ಣುಪರವಾಗುತ್ತವೆಂಬುದಂತೂ ಅನೇಕ ನ್ಯಾಯಗಳಿಂದ ತಿಳಿಯುತ್ತವೆ. ಆದರೆ ಲೋಕರೂಢಿಯೂ ಸಹ ಬೇರೆ ಪದಾರ್ಥಗಳಲ್ಲಿರುವುದರಿಂದ ಶಬ್ದಗಳು ವಿಷ್ಣುವನ್ನು ಪ್ರತಿಪಾದಿಸುವಂತೆ ಇತರ ಪದಾರ್ಥಗಳನ್ನೂ ಸಹ ಪ್ರತಿಪಾದಿಸುತ್ತವೆ. ಹಾಗಾಗಿ ಹಿಂದಿನ ಎರಡು ಪಾದಗಳಲ್ಲಿ ಯಾವ ಶಬ್ದಗಳನ್ನೆಲ್ಲ ಸಮನ್ವಯ ಮಾಡಿದರೋ ಅವೆಲ್ಲವೂ ವಿಷ್ಣುವಿನಲ್ಲೂ ಬರುತ್ತವೆ. ಲೋಕದಲ್ಲಿಯೂ ಬರುತ್ತವೆ. ವಿಷ್ಣುವಿನಲ್ಲಿ ಮಾತ್ರ ಬರುತ್ತವೆಂಬ ನಿರ್ಧಾರವನ್ನು ಮಾಡಲು ಸಾಧ್ಯವಿಲ್ಲ. ಹಾಗಾಗಿ ಹಿಂದಿನೆರಡು ಪಾದಗಳಲ್ಲಿ ಸಮನ್ವಯ ಮಾಡಿದ ಶಬ್ದಗಳನ್ನು ಪುನಃ ಸಮನ್ವಯ ಮಾಡುವ ಅನಿವಾರ್ಯತೆ ಬಹಳವಾಗಿ ಕಾಣಿಸುತ್ತದೆ. ಅದಕ್ಕೋಸ್ಕರವೇ ಈ ಪಾದ ಹೊರಟಿದೆ. ಈ ಪಾದವು ಹೊರಟಿದ್ದರೆ ಸಕಲ ಶಬ್ದಗಳೂ ಉಭಯತ್ರಪ್ರಸಿದ್ಧವೆಂದಾಗಿ ಭಗವಂತನಲ್ಲಿ ಸಕಲಶಬ್ದದ ಸಮನ್ವಯವೂ ಸಿದ್ಧವಾಗದೆ. ಸಕಲ ಗುಣಪರಿಪೂರ್ಣತ್ವದ ಸಿದ್ಧಿಯೂ ಸಹ ಆಗದಿರುವ ಪ್ರಸಂಗ ಬರುತ್ತಿತ್ತು.

ಈ ಪಾದದಲ್ಲಿ ಈಗಾಗಲೇ ಹೇಳಿದಂತೆ ಕೇವಲ ನಾಮಾತ್ಮಕ ಶಬ್ದಗಳ ಸಮನ್ವಯವಷ್ಟೇ ಅಲ್ಲ, ಲಿಂಗಾತ್ಮಕ ಶಬ್ದಗಳ ಸಮನ್ವಯವನ್ನೂ ಸಹ ಮಾಡುತ್ತಿದ್ದಾರೆ. ಒಟ್ಟು ಹದಿನಾಲ್ಕು ಅಧಿಕರಣಗಳು ಈ ಪಾದದಲ್ಲಡಗಿವೆ. ಅವುಗಳಲ್ಲಿ ಮೊದಲನೆಯದು ದ್ಯುಭ್ವಾದ್ಯಧಿಕರಣ. ಸರ್ವಾಧಾರತ್ವವೆಂಬ ಲಿಂಗವನ್ನು ಈ ಮೊದಲನೆಯ ಅಧಿಕರಣದಲ್ಲಿ ವಿಷ್ಣುಮಾತ್ರಪರವೆಂದು ಸಮನ್ವಯ ಮಾಡುತ್ತಾರೆ. ಮುಂದಿನ ಭೂಮಾಧಿಕರಣದಲ್ಲಿ 'ಭೂಮಾ' ಎಂಬ ನಾಮಾತ್ಮಕ ಶಬ್ದದ ಸಮನ್ವಯವನ್ನು, ಅದರ ಮುಂದಿನ ಅಕ್ಷರಾಧಿಕರಣದಲ್ಲಿ 'ಅಕ್ಷರ' ಎಂಬ ನಾಮಾತ್ಮಕ ಶಬ್ದವನ್ನು ವಿಷ್ಣುವಿನಲ್ಲಿ ಸಮರ್ಥನೆ ಮಾಡುತ್ತಾರೆ.

ನಾಲ್ಕನೆಯ ಸದಧಿಕರಣದಲ್ಲಿ ಅನೇಕ ಪ್ರಕರಣಗಳ ಸಮೂಹಾತ್ಮಕವಾದ ಸ್ಥಾನವೆಂಬುದನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡುತ್ತಾರೆ. ಐದನೆಯ ದಹರಾಧಿಕರಣದಲ್ಲಿ 'ಹೃತ್ಪದ್ಮಸ್ಥತ್ವ' ಲಿಂಗವನ್ನು, ಅನುಕೃತ್ಯಧಿಕರಣದಲ್ಲಿ 'ಅನುಕೂಲ್ಯೇನ ಗೃಹ್ಯಮಾಣತ್ವ' ಎಂಬ ಲಿಂಗವನ್ನು ಸಮನ್ವಯ ಮಾಡಿದ್ದಾರೆ. ಮುಂದಿನ ವಾಮನಾಧಿರಣದಲ್ಲಿ ಈಶಾನ ಶಬ್ದವನ್ನು ಕಂಪನಾಧಿಕರಣದಲ್ಲಿ ವಜ್ರ ಶಬ್ದವನ್ನು, ಜ್ಯೋತಿರಧಿಕರಣದಲ್ಲಿ ಜ್ಯೋತಿಶಬ್ದವನ್ನು, ಆಕಾಶಾಧಿಕರಣದಲ್ಲಿ ಆಕಾಶ ಶಬ್ದವನ್ನು, ಸುಷುಪ್ತ್ಯಧಿಕರಣದಲ್ಲಿ ಸ್ವಪ್ನಾದಿದ್ರಷ್ಟೃತ್ವವೆಂಬ ಲಿಂಗವನ್ನು, ಬ್ರಾಹ್ಮಣಾಧಿಕರಣದಲ್ಲಿ ಬ್ರಾಹ್ಮಣ ಶಬ್ದವನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡಿದ್ದಾರೆ. ಮಧ್ಯದಲ್ಲಿ ದೇವತಾಧಿಕರಣ ಹಾಗೂ ಅಪಶೂದ್ರಾಧಿಕರಣಗಳು ಬರುತ್ತವೆ. ಆದರೆ ಈ ಎರಡು ಅಧಿಕರಣಗಳಲ್ಲಿ ದೇವತೆಗಳಿಗೆ ಮಾತ್ರ ವೇದಾಧಿಕಾರವಿದೆ. ಶೂದ್ರಾದಿಗಳಿಗೆ ವೇದಾಧಿಕಾರವಿಲ್ಲವೆಂಬ ವಿಚಾರವನ್ನು ಮಾಡಿದ್ದಾರೆ. ಆದ್ದರಿಂದ ಯಾವುದೇ ಲಿಂಗವನ್ನಾಗಲೀ, ಹೆಸರನ್ನಾಗಲೀ, ಈ ಎರಡು ಅಧಿಕರಣಗಳಲ್ಲಿ ಸಮನ್ವಯ ಮಾಡದೆ ಪ್ರಾಸಂಗಿಕವಾದ ವಿಚಾರಗಳನ್ನಷ್ಟೇ ತಿಳಿಸಿದ್ದಾರೆ.

ಮೊದಲನೇ ಈ ದ್ಯುಭ್ವಾದ್ಯಧಿಕರಣದಲ್ಲಿ ಸಮನ್ವಯ ಮಾಡುತ್ತಿರುವ ದ್ಯುಭ್ವಾದ್ಯಾಯತನತ್ವವೆಂಬ ಲಿಂಗವು ಉಭಯತ್ರಪ್ರಸಿದ್ಧವಾಗಿದೆ ಹೊರತು, ಅನ್ಯತ್ರಪ್ರಸಿದ್ಧವಲ್ಲ. ವಸ್ತುತಃ ಜಾಯಮಾನತ್ವವೆಂಬ ಅನ್ಯತ್ರಪ್ರಸಿದ್ಧವಾದ ಲಿಂಗದ ಜೊತೆಗೆ ಇದನ್ನು ಹೇಳಿರುವುದರಿಂದ ಇದೂ ಸಹ ಅನ್ಯತ್ರಪ್ರಸಿದ್ಧವೆಂಬ ಭ್ರಾಂತಿ ಬರುತ್ತದೆ. ಆದರೆ ರುದ್ರನಲ್ಲಿ ಹಾಗೂ ವಿಷ್ಣುವಿನಲ್ಲಿ ಸಾಧಾರಣವಾದ ಶ್ರುತಿಯನ್ನು ನೋಡಿದಾಗ ದ್ಯುಭ್ವಾದ್ಯಾಯತನತ್ವವು ಸ್ವಾಭಾವಿಕವಾಗಿ ಉಭಯತ್ರಪ್ರಸಿದ್ಧವಾಗಿದೆಯೆಂದು ತಿಳಿಯುತ್ತದೆ. ಅನ್ಯತ್ರಪ್ರಸಿದ್ಧವೆಂದು ಹೇಳಬೇಕಾದರೆ ಅನ್ಯತ್ರಪ್ರಸಿದ್ಧವಾದ ಜಾಯಮಾನತ್ವವೆಂಬ ಲಿಂಗವನ್ನು ಅಪೇಕ್ಷಿಸಬೇಕು. ಉಭಯತ್ರಪ್ರಸಿದ್ಧವೆಂಬ ಲಿಂಗವನ್ನು ಹೇಳಬೇಕಾದರೆ ಮತ್ತೊಂದನ್ನು ಅಪೇಕ್ಷಿಸಬೇಕಾಗಿಲ್ಲ. ಸ್ವಾಭಾವಿಕವಾಗಿಯೇ ಉಭಯತ್ರಪ್ರಸಿದ್ಧವಾಗಿದೆಯೆಂದು ತಿಳಿಯಬಹುದು. ಸಾಪೇಕ್ಷಕ್ಕಿಂತ ನಿರಪೇಕ್ಷವು ಪ್ರಬಲವಾಗಿರುವುದರಿಂದ ದ್ಯುಭ್ವಾದ್ಯಾಯತನತ್ವವನ್ನು ಉಭಯತ್ರಪ್ರಸಿದ್ಧವಾದ ಲಿಂಗವೆಂದೇ ಪರಿಗಣಿಸಬೇಕು.

### *ಅನ್ಯತ್ರಪ್ರಸಿದ್ಧಶಬ್ದಗಳಿಗೂ, ಉಭಯತ್ರಪ್ರಸಿದ್ಧಶಬ್ದಗಳಿಗೂ ಸಾಂಕರ್ಯವಿಲ್ಲ*

ಈ ಅಧಿಕರಣದಲ್ಲಿ ಸಮನ್ವಯ ಮಾಡುತ್ತಿರುವ 'ಭೂಮಾ' ಮೊದಲಾದ ಶಬ್ದಗಳನ್ನು ಉಭಯತ್ರಪ್ರಸಿದ್ಧವೆಂದು ಹೇಗೆ ಹೇಳುತ್ತೀರಿ? ಇವುಗಳೂ ಸಹ ಅನ್ಯತ್ರಪ್ರಸಿದ್ಧವೇ ಆಗುತ್ತವೆ. ಏಕೆಂದರೆ ಭೂಮಾಧಿಕರಣದಲ್ಲಿ ಮುಖ್ಯಪ್ರಾಣನನ್ನು ಪ್ರತಿಪಾದಿಸುವ 'ಭೂಮಾ' ಎಂಬ ಶಬ್ದವು 'ಪ್ರಾಣೋನೂತ್ಕ್ರಾಮತಿ' ಎಂಬ ನಿರವಕಾಶವಾದ ಉತ್ಕ್ರಮಣವೆಂಬ ಲಿಂಗದಿಂದ ಮುಖ್ಯಪ್ರಾಣನಲ್ಲಿ ಪ್ರಸಿದ್ಧವಾಗಿದೆ. ಅಕ್ಷರಾಧಿಕರಣದಲ್ಲಿ ಸಮನ್ವಯ ಮಾಡಬೇಕಾದ ಅಕ್ಷರಶಬ್ದವೂ ಸಹ ಮತ್ತೊಂದು ಶ್ರುತಿಯಿಂದ ಸಿದ್ಧವಾದ ಚಂದ್ರಾದ್ಯಾಧಾರತ್ವವೆಂಬ ಲಕ್ಷ್ಮೀದೇವಿಯ ಲಿಂಗದಿಂದ ಅನ್ಯತ್ರಪ್ರಸಿದ್ಧವಾಗಿದೆ. ಸದಧಿಕರಣದಲ್ಲಿ ಸಮನ್ವಯ ಮಾಡಬೇಕಾದ 'ಸತ್' ಶಬ್ದವೂ ಸಹ 'ಬಹುಸ್ಯಾಮ್' ಎಂಬ ಶ್ರುತಿಯಿಂದ ಸಿದ್ಧವಾದ ವಿಕಾರ ಎಂಬ ಲಿಂಗದಿಂದ ಅನ್ಯತ್ರಪ್ರಸಿದ್ಧವಾಗಿದೆ. ದಹರಾಧಿಕರಣದಲ್ಲಿ ಸಮನ್ವಯ ಮಾಡುವ 'ಹೃತ್ಪದ್ಮಸ್ಥತ್ವ' ಎಂಬ ಲಿಂಗವೂ ಆಕಾಶಶ್ರುತಿಯಿಂದ ಅನ್ಯತ್ರಪ್ರಸಿದ್ಧವಾಗಿದೆ. ಹೀಗಿರುವಾಗ ಇವುಗಳನ್ನೆಲ್ಲಾ ಉಭಯತ್ರಪ್ರಸಿದ್ಧವೆಂದು ಹೇಗೆ ಹೇಳುತ್ತೀರಿ?

ಈ ಆಕ್ಷೇಪಕ್ಕೆ ಈಗಾಗಲೇ ಹೇಳಿದ ನಾಲ್ಕು ಬಗೆಯ ಸಮಾಧಾನವನ್ನು ತಿಳಿದುಕೊಳ್ಳಬೇಕು.

೧. 'ದ್ಯುಭ್ವಾದ್ಯಾಯತನತ್ವ' ಮೊದಲಾದ ಲಿಂಗಗಳಿಗೆ ಸಮಾನವಾದ ಶ್ರುತಿಯ ಬಲದಿಂದ ಅನ್ಯತ್ರಪ್ರಸಿದ್ಧಿಯೂ ಇರುತ್ತದೆ. ಉಭಯತ್ರಪ್ರಸಿದ್ಧಿಯೂ ಸಹ ಇರುತ್ತದೆ. ಇವೆರಡರಲ್ಲಿ ಉಭಯತ್ರಪ್ರಸಿದ್ಧತ್ವವನ್ನು ವಿವಕ್ಷಿಸಬೇಕು.

೨. ಅನ್ಯತ್ರಪ್ರಸಿದ್ಧಿಯು, ಅನ್ಯತ್ರಪ್ರಸಿದ್ಧವಾದ ಮತ್ತೊಂದು ಲಿಂಗವನ್ನು ಅಪೇಕ್ಷಿಸುತ್ತದೆ. ಉಭಯತ್ರಪ್ರಸಿದ್ಧಿಯು ಮತ್ತೊಂದು ಲಿಂಗವನ್ನು ಅಪೇಕ್ಷಿಸದೇ ಸಮಾಖ್ಯಾಶ್ರುತಿಯ ಬಲದಿಂದ ಸ್ವತಃ ಉಭಯತ್ರಪ್ರಸಿದ್ಧವಾಗುತ್ತದೆ. ಸಾಪೇಕ್ಷ ಹಾಗೂ ನಿರಪೇಕ್ಷಗಳಲ್ಲಿ ನಿರಪೇಕ್ಷವಾದದ್ದನ್ನೇ ಆಧರಿಸಬೇಕಾದ್ದರಿಂದ ದ್ಯುಭ್ವಾದ್ಯಾಯತನತ್ವಾದಿಗಳೆಲ್ಲವೂ ಉಭಯತ್ರಪ್ರಸಿದ್ಧವೆಂದು ವಿವಕ್ಷಿಸಬೇಕು.

೩. ದುಭ್ವಾದ್ಯಾಯತನತ್ವಾದಿಗಳಿಗೆ ಅನ್ಯತ್ರಪ್ರಸಿದ್ಧತ್ವವನ್ನು ಒಪ್ಪುವುದೇ ಬೇಕಾಗಿಲ್ಲ. ಏಕೆಂದರೆ 'ಶ್ರುತ್ಯಾದಿತೋ ಲೋಕತೋ ವಾಽಪೀತರೇಷು ಪ್ರಸಿದ್ಧತಾ' ಎಂಬ ಅನ್ಯತ್ರಪ್ರಸಿದ್ಧಿಯ ಲಕ್ಷಣದಲ್ಲಿ 'ಶ್ರುತ್ಯಾದಿತೌಲ್ಯಾಭಾವೇ ಸತಿ' ಎಂಬುದನ್ನು ವಿಶೇಷಣವನ್ನಾಗಿ ಹೇಳಿದ್ದರಿಂದ ಸರ್ವಗತತ್ವಾದಿಲಿಂಗಗಳಿಗೆ ಹಾಗೂ ಭೂಮಾದಿ ಶಬ್ದಗಳಿಗೆ

ಅನ್ಯತ್ರಪ್ರಸಿದ್ಧಿಯ ಸಾಹಚರ್ಯದಿಂದ ಅನ್ಯತ್ರಪ್ರಸಿದ್ಧತ್ವವಿದ್ದರೂ ಸಹ ಎಲ್ಲಿ ಶ್ರುತ್ಯಾದಿತೌಲ್ಯವು ಇರುವುದಿಲ್ಲವೋ ಅಲ್ಲಿಯೂ ಸಹ ಅನ್ಯತ್ರಪ್ರಸಿದ್ಧಿಯ ಲಕ್ಷಣಬರುತ್ತದೆ. ಭೂಮಾ, ದ್ಯುಭ್ವಾದ್ಯಾಯತನತ್ವ ಮೊದಲಾದೆಡೆ ಸಮಾಖ್ಯಾಶ್ರುತಿಯ ತೌಲ್ಯವಿರುವುದರಿಂದ ಅನ್ಯತ್ರಪ್ರಸಿದ್ಧಿಯ ಲಕ್ಷಣ ಬರುವುದಿಲ್ಲವೆಂದು ತಿಳಿಯಬೇಕು.

೪. ಅನ್ಯತ್ರಪ್ರಸಿದ್ಧವಾದ ಲಿಂಗದ ಸಾಹಚರ್ಯದಿಂದ ಅನ್ಯತ್ರಪ್ರಸಿದ್ಧವಾಗುತ್ತದೆಂಬ ಪರಿಕಲ್ಪನೆಯನ್ನೇ ಒಪ್ಪುವುದಿಲ್ಲ; ಹೊರತಾಗಿ ಸ್ವಾಭಾವಿಕವಾಗಿ ಯಾವುದು ಲೋಕರೂಢಿಯಿಂದ ಅನ್ಯತ್ರಪ್ರಸಿದ್ಧವಾಗಿರುತ್ತದೋ, ಅದನ್ನು ಮಾತ್ರ ಅನ್ಯತ್ರಪ್ರಸಿದ್ಧವೆಂದು ಹೇಳಬೇಕು. ಸರ್ವಗತತ್ವಾದಿಗಳೆಲ್ಲವೂ ಅನ್ಯತ್ರಪ್ರಸಿದ್ಧವಾದ ಶ್ರುತ್ಯಾದಿಗಳ ಸಾಹಚರ್ಯದಿಂದ ಅನ್ಯತ್ರಪ್ರಸಿದ್ಧವಾಗಿರುವುದಲ್ಲ. ಹೊರತಾಗಿ ಬೇರೆಕಡೆ ಪ್ರಸಿದ್ಧವಾಗಿವೆಯೆಂಬುದನ್ನು ತಿಳಿಸಲು ಮಾತ್ರ ಅಯಾ ಅಧಿಕರಣಗಳಲ್ಲಿ ಶ್ರುತ್ಯಾದಿ ಪ್ರಮಾಣಗಳನ್ನು ಹೇಳಿರುತ್ತಾರೆ.

ಪ್ರಕೃತ ದ್ಯುಭ್ವಾದ್ಯಾಯತನತ್ವಾದಿಗಳಲ್ಲಿ ಲೋಕರೂಢಿಯಿಂದ ಸ್ವಾಭಾವಿಕವಾಗಿ ಅನ್ಯತ್ರಪ್ರಸಿದ್ಧತ್ವವು ಇಲ್ಲದ ಕಾರಣ ಅನ್ಯತ್ರಪ್ರಸಿದ್ಧಿಯ ಲಕ್ಷಣ ಬರುವುದಿಲ್ಲವೆಂದು ತಿಳಿಯಬೇಕು. ಹಾಗಾಗಿ ಸರ್ವಗತತ್ವಾದಿಧರ್ಮಗಳು ಅನ್ಯತ್ರಪ್ರಸಿದ್ಧವಾದ ಶಬ್ದಗಳೇ ಆಗುತ್ತವೆ. ದ್ಯುಭ್ವಾದ್ಯಾಯತನತ್ವಗಳು ಉಭಯತ್ರಪ್ರಸಿದ್ಧವೇ ಆಗುತ್ತವೆ ಪರಸ್ಪರ ಸಾಂಕರ್ಯ ದೋಷಕ್ಕೆ ಅವಕಾಶವಿರುವುದಿಲ್ಲ.

*ಅಧಿಕರಣ ಸಂಗತಿ ಹಾಗೂ ಸಂಶಯ ಪರಂಪರೆ*

ಹಿಂದಿನ ಅಧಿಕರಣದಿಂದ ಈ ಅಧಿಕರಣಕ್ಕೆ ಸಂಗತಿಯನ್ನು ತೋರಿಸಬೇಕಾಗಿಲ್ಲ. ಏಕೆಂದರೆ ಪಾದದ ಮೊದಲನೇ ಅಧಿಕರಣಕ್ಕೆ ಸಂಗತಿ ಇರುವುದಿಲ್ಲ. ಹಾಗೇನಾದರೂ ಸಹಜವಾಗಿ ಸಂಗತಿ ಇದ್ದರೂ ಸಹ ಅದನ್ನು ತಿಳಿಯುವುದು ತಪ್ಪಲ್ಲ. ಹಿಂದಿನ ವೈಶ್ವಾನರಾಧಿಕರಣದಲ್ಲಿ ಸಿದ್ಧಾಂತಹೇತುವನ್ನಾಗಿ ಬಳಸಲ್ಪಟ್ಟ ಆತ್ಮಶಬ್ದವನ್ನು ವಿಚಾರ ಮಾಡುತ್ತಿರುವುದರಿಂದ ಆತೀದೇಶಿಕೀ ಸಂಗತಿಯನ್ನು ಹೇಳಿದರೆ ತಪ್ಪಿಲ್ಲ.

'ಯಸ್ಮಿನ್ದ್ಯೌಃ' ಇತ್ಯಾದಿ ಶ್ರುತಿಯಲ್ಲಿ ದ್ಯುಭ್ವಾದ್ಯಾಯತನತ್ವವೆಂಬ ಲಿಂಗವು ಕೇಳಿಸುತ್ತಿದೆ. ಇದು ರುದ್ರನಲ್ಲಿ ಬರುತ್ತದೆಂಬುದು ಪೂರ್ವಪಕ್ಷಕಾರನ ಆಗ್ರಹ, ವಿಷ್ಣುವಿನಲ್ಲಿ ಬರುತ್ತದೆಂಬುದು ಸಿದ್ಧಾಂತಿಗಳ ಆಗ್ರಹ. ಒಂದು ವೇಳೆ ಶರೀರವನ್ನು ಸ್ವೀಕಾರ ಮಾಡುವುದೇ ಜನನ = ಹುಟ್ಟುವಿಕೆ ಎಂದಾದರೆ, ಶರೀರವೇ ಇಲ್ಲದ ವಿಷ್ಣುವಿನಲ್ಲಿ ಜಾಯಮಾನತ್ವವು ಅಯುಕ್ತವಾಗುತ್ತದೆ. ಜಾಯಮಾನತ್ವವೆಂಬ ಬಾಧಕಲಿಂಗದಿಂದಲೇ ಪ್ರಕರಣದಲ್ಲಿ ಕೇಳಿಸುತ್ತಿರುವ ಆತ್ಮಶಬ್ದಾದಿಗಳೆಲ್ಲವೂ ವಿಷ್ಣುವನ್ನು ಪ್ರತಿಪಾದಿಸದೇ ಗೌಣವಾದ ಬೇರೆ ಯಾರನ್ನಾದರೂ ಪ್ರತಿಪಾದಿಸುತ್ತದೆಂದು ಹೇಳಬೇಕಾಗುತ್ತದೆ. ಆವಾಗ 'ರುದ್ರೋ ವಾವ ಲೋಕಾಧಾರಃ' ಇತ್ಯಾದಿ ಸಮಾಖ್ಯಾ ಪ್ರಮಾಣಗಳ ಬೆಂಬಲದಿಂದ ರುದ್ರಾದಿಗಳೇ ದ್ಯುಭ್ವಾದ್ಯಾಯತನರಾಗುತ್ತಾರೆಂಬುದು ಪೂರ್ವಪಕ್ಷಕಾರನ ಗುರಿ.

ಜನನ ಶಬ್ದಕ್ಕೆ ಹುಟ್ಟುವಿಕೆ ಎಂಬರ್ಥವನ್ನೇ ಸ್ವೀಕರಿಸಬೇಕಿಲ್ಲ. ಪ್ರಾದುರ್ಭಾವವೆಂಬರ್ಥವನ್ನೂ ಸಹ ಸ್ವೀಕರಿಸಬಹುದು. ಆದ್ದರಿಂದ ಜಾಯಮಾನತ್ವವನ್ನು ವಿಷ್ಣುವಿನಲ್ಲಿ ಹೇಳಲು ಏನೂ ಅಡ್ಡಿಯಿಲ್ಲ ಎಂದು ಒಪ್ಪಿದಾಗ ಆತ್ಮಶಬ್ದಾದಿಗಳೆಲ್ಲವೂ ಬಾಧಕವಿಲ್ಲದ ಕಾರಣ ಮಹಾವಿಷ್ಣುವನ್ನೇ ಮುಖ್ಯವಾಗಿ ಪ್ರತಿಪಾದಿಸುತ್ತವೆ. ಆತ್ಮಶಬ್ದಾದಿಗಳ ಬಲದಿಂದ ರುದ್ರಾದಿಗಳ ವಿಷಯದಲ್ಲಿರುವ ಸಮಾಖ್ಯಾದಿ ಪ್ರಮಾಣಗಳೆಲ್ಲವೂ ದುರ್ಬಲವಾಗುತ್ತವೆ. ಆವಾಗ 'ಯಸ್ಮಿನ್ದ್ಯೌಃ' ಇತ್ಯಾದಿ ಶ್ರುತಿಯಲ್ಲಿ ಪ್ರತಿಪಾದಿಸಲ್ಪಟ್ಟ ದ್ಯುಭ್ವಾದ್ಯಾಯತನತ್ವವೆಂಬ ಲಿಂಗವು ಮಹಾವಿಷ್ಣುವಿನಲ್ಲಿ ಸಿದ್ಧವಾಗುತ್ತದೆಂಬ ಸಾಧನೆಯೇ ಸಿದ್ಧಾಂತಿಗಳ ಗುರಿ.

*ಪರಿಪೂರ್ಣಚಂದ್ರಿಕಾ*

*ರುದ್ರ, ಪ್ರಕೃತಿ, ವಾಯು, ಜೀವ, ಈ ನಾಲ್ವರು ದ್ಯುಭ್ವಾದ್ಯಾಯತನರೆಂದು ಪೂರ್ವಪಕ್ಷ*

ಈ ಅಧಿಕರಣದ ಪೂರ್ವಪಕ್ಷ ಹೀಗಿದೆ - ದ್ಯುಭ್ವಾದ್ಯಾಯತನನಾದವನು ವಿಷ್ಣುವೇ ಆಗುತ್ತಾನೆಂದು ನಿರ್ಣಯಿಸಲು ಸಾಧ್ಯವಿಲ್ಲ; ಹೊರತಾಗಿ ರುದ್ರ, ಪ್ರಕೃತಿ, ವಾಯು ಅಥವಾ ಜೀವ ಇವರುಗಳೇ ದ್ಯುಭಾದ್ಯಾಯತನರಾಗುತ್ತೆನ್ನಲು ಪ್ರಮಾಣವಿದೆ. 'ರುದ್ರೋ ವಾವ ಲೋಕಾಧಾರಃ' ಎಂಬ ಶ್ರುತಿಯು ರುದ್ರನ ವಿಷಯದಲ್ಲಿ; 'ಆಕಾಶ ಏವ ತದೋತಂ ಚ' ಎಂಬ ಶ್ರುತಿಯು ಪ್ರಕೃತಿಯ ವಿಷಯದಲ್ಲಿ; 'ವಾಯುನಾ ವೈ' ಎಂಬ ಶ್ರುತಿಯು ವಾಯುದೇವನ ವಿಷಯದಲ್ಲಿ ಹಾಗೂ ಜಾಯಮಾನತ್ವ ಎಂಬ ಲಿಂಗವು ಜೀವನ ವಿಷಯದಲ್ಲಿ ಆಧಾರವಾಗಿದೆ. ರುದ್ರ, ಪ್ರಕೃತಿ, ವಾಯು ಈ ಮೂವರು ದ್ಯುಭಾದ್ಯಾಯತನರಾಗಿದ್ದಾರೆನ್ನಲು ಸಮಾಖ್ಯಾಪ್ರಮಾಣವಿದೆಯೆಂದು ಪೂರ್ವಪಕ್ಷಕಾರರು ಹೇಳುತ್ತಿರುವ ದೊಡ್ಡ ಆಧಾರ. ಆದರೆ ವಿಷ್ಣುವಿಷಯದಲ್ಲಿಯೂ 'ಲೋಕಾಶ್ಚ ಲೋಕಿನಶ್ಚ' ಇತ್ಯಾದಿ ಶ್ರುತಿಯು ಸಮಾಖ್ಯಾಪ್ರಮಾಣವಾಗಿದೆಯೆಂದು ಆಕ್ಷೇಪ ಬರುತ್ತದೆ. ಆದರೆ ರುದ್ರನ ವಿಷಯದಲ್ಲಿರುವ ಸಮಾಖ್ಯಾಪ್ರಮಾಣವು ವಿಷ್ಣುವಿಷಯಕವಾದ ಸಮಾಖ್ಯಾಪ್ರಮಾಣಕ್ಕಿಂತಲೂ ಅತ್ಯಂತ ಬಲಿಷ್ಠವಾಗಿದೆ. ರುದ್ರನಲ್ಲಿ ಪ್ರಸಿದ್ಧವಾದ ಕೃತ್ತಿವಾಸಾ ಮೊದಲಾದ ಶಬ್ದ ಪ್ರಯೋಗ ಹಾಗೂ ಪ್ರಾಣಾಧಾರತ್ವ ಮೊದಲಾದ ಲಿಂಗ ಇವುಗಳ ಬಲದಿಂದ ರುದ್ರವಿಷಯಕವಾದ ಪ್ರಮಾಣವು ಪ್ರಬಲವಾಗಿ ವಿಷ್ಣುವಿಷಯಕವಾದ ಸಮಾಖ್ಯಾಪ್ರಮಾಣವನ್ನು ಬಾಧಿಸುತ್ತದೆ. ಇನ್ನು ವಾಯು ಹಾಗೂ ಪ್ರಕೃತಿವಿಷಯಕವಾದ ಸಮಾಖ್ಯಾಪ್ರಮಾಣವು ಶ್ರುತಿಲಿಂಗಗಳ ಆಧಾರದಿಂದ ಪ್ರಬಲವಾಗದೇ ಇದ್ದರೂ, ಜಾಯಮಾನತ್ವವೆಂಬ ಲಿಂಗದ ಆಧಾರದಿಂದ ಪ್ರಬಲವಾಗಿದೆ. ಆದ್ದರಿಂದ ದುರ್ಬಲವಾದ ವಿಷ್ಣುವಿಷಯಕವಾದ ಸಮಾಖ್ಯಾಪ್ರಮಾಣದಿಂದ ದ್ಯುಲೋಕ, ಭೂಲೋಕಾದಿಗಳಿಗೆ ಆಧಾರನಾದವನು ವಿಷ್ಣುವೇ ಆಗಿದ್ದಾನೆಂದು ನಿಶ್ಚಯಿಸಲು ಸಾಧ್ಯವಿಲ್ಲ.

ಪೂರ್ವಪಕ್ಷಕಾರರ ಮೇಲೆ ಒಂದು ದೊಡ್ಡ ಆಕ್ಷೇಪ ಬರುತ್ತದೆ - ಯಾವ ಪ್ರಕರಣದಲ್ಲಿ ದ್ಯುಭ್ವಾದ್ಯಾಯತನತ್ವವು ಕೇಳಿಸುತ್ತಿದೆಯೋ, ಅದು ವಿಷ್ಣುಪ್ರಕರಣವಾಗಿದೆಯೆಂದು ಉಪಕ್ರಮದ ಆಧಾರದಿಂದ ತಿಳಿಯುತ್ತಿದೆ. ಮತ್ತು ಮುಕ್ತೋಪಸೃಪ್ಯತ್ವವೇ ಮೊದಲಾದ ವಿಷ್ಣುವಿನ ಅಸಾಧಾರಣ ಲಿಂಗಗಳೂ ಸಹ ಕೇಳಿಬರುತ್ತಿವೆ. ಲಿಂಗ ಹಾಗೂ ಪ್ರಕರಣಗಳು ವಿಷ್ಣುವಿಷಯದಲ್ಲಿರುವಾಗ ಕೇವಲ ಸಮಾಖ್ಯಾಪ್ರಮಾಣದಿಂದ ರುದ್ರಾದಿಗಳನ್ನು ಸಮರ್ಥಿಸಲು ಹೇಗೆ ಸಾಧ್ಯ ? ಮತ್ತು ರುದ್ರನ ವಿಷಯದಲ್ಲಿರುವ ಕೃತ್ತಿವಾಸಾ ಮೊದಲಾದ ಶಬ್ದಗಳು ಹಾಗೂ ಪಿನಾಕಿತ್ವ ಮೊದಲಾದ ಲಿಂಗಗಳು ವಿಷ್ಣುವಿನಲ್ಲಿ ಸಾವಕಾಶವಾಗುತ್ತವೆಂಬುದನ್ನು ಅಂತರಧಿಕರಣದಲ್ಲಿ ಹಾಗೂ 'ಶಾಸ್ತ್ರದೃಷ್ಟ್ಯಾ' ಎಂಬ ಸೂತ್ರದಲ್ಲಿ ಈಗಾಗಲೇ ಸಿದ್ಧಾಂತಿಗಳು ಸಮರ್ಥಿಸಿದ್ದಾರೆ. ಅಷ್ಟೇ ಅಲ್ಲದೆ ಜಾಯಮಾನತ್ವವೆಂಬ ಲಿಂಗವೂ ಸಹ ಪ್ರಾದುರ್ಭಾವವೆಂಬರ್ಥದಿಂದ ವಿಷ್ಣುವಿನಲ್ಲಿ ಸಾವಕಾಶವಾಗುತ್ತದೆ. ಹೀಗಿರುವಾಗ ಪೂರ್ವಪಕ್ಷಕಾರರು ತೋರಿಸಿದ ಯುಕ್ತಿಗಳೆಲ್ಲವೂ ಸಾವಕಾಶವಾಗಿ ದುರ್ಬಲವಾಗಿವೆ. ಪೂರ್ವಪಕ್ಷವೇ ಹೊರಡಲು ಸಾಧ್ಯವಿಲ್ಲದಿದ್ದಾಗ, ಈ ಅಧಿಕರಣದ ಪ್ರವೃತ್ತಿಯಾದರೂ ಸಹ ಏಕೆ? ಎಂಬ ದೊಡ್ಡ ಪ್ರಶ್ನೆಯನ್ನು ಪೂರ್ವಪಕ್ಷಕಾರರು ಎದುರಿಸಬೇಕು.

*ನಿರವಕಾಶಲಿಂಗಗಳ ಬಲದಿಂದ ಪೂರ್ವಪಕ್ಷ ಸ್ಥಾಪನೆ*

ಇದುವರೆಗೂ ಮಾಡಿದ ಪ್ರಶ್ನೆಗೆ ಹೀಗೆ ಉತ್ತರ - ಜಾಯಮಾನತ್ವವೆಂಬ ಲಿಂಗವು ಆನಂದಮಯಾಧಿಕರಣದಿಂದಾಗಲೀ, 'ಕಾರಣತ್ವೇನ ಚ' ಎಂಬ ಸೂತ್ರದಿಂದಾಗಲೀ ಸಾವಕಾಶವಾಗಲು ಸಾಧ್ಯವೇ ಇಲ್ಲ. ಈ ಅಧಿಕರಣದ ಸಿದ್ಧಾಂತವನ್ನು ವಿವಕ್ಷಿಸಿ ಆನಂದಮಯಾಧಿಕರಣದಲ್ಲಿ ಜಾಯಮಾನ ಶಬ್ದಕ್ಕೆ ಪ್ರಾದುರ್ಭಾವವೆಂಬರ್ಥವನ್ನು ಹೇಳಿರುತ್ತಾರೆ. ಹೀಗಿರುವಾಗ ಆ ಅಧಿಕರಣದ ವಚನದಿಂದ ಇಲ್ಲಿ ಸಾವಕಾಶತ್ವವನ್ನು

ಸ್ಥಾಪಿಸಲು ಸಾಧ್ಯವಿಲ್ಲ. ಮತ್ತು 'ಕಾರಣತ್ವೇನ' ಇತ್ಯಾದಿ ಸೂತ್ರದಲ್ಲಿಯೂ ಒಬ್ಬನೇ ವ್ಯಕ್ತಿಗೆ ಕಾರ್ಯಕಾರಣಭಾವವು ವಿರುದ್ಧವಾಗುತ್ತದಲ್ಲವೇ? ಎಂಬ ಆಶಂಕೆಗೆ ಉತ್ತರವನ್ನು ನೀಡಿದ್ದಾರೆ ಹೊರತು, ಯಾವುದೇ ತರಹದ ಜನನವಿಲ್ಲದ ಪರಮಾತ್ಮನಿಗೆ ಹುಟ್ಟುವಿಕೆ ಎಂಬುದು ಹೇಗೆ ಕೂಡುತ್ತದೆ ಎಂಬ ಆಶಂಕೆಯು ಅಲ್ಲಿ ಪ್ರಸಕ್ತವೇ ಆಗಿಲ್ಲ. ಆದಕ್ಕೆ ಉತ್ತರವನ್ನೂ ಸಹ ಅದಕ್ಕೆ ನೀಡಿರುವುದಿಲ್ಲ. ಆದ್ದರಿಂದ ಜಾಯಮಾನತ್ವವೆಂಬ ಲಿಂಗವು ಸಾವಕಾಶವಾಗಲು ಸಾಧ್ಯವಿಲ್ಲ; ಹೊರತಾಗಿ ನಿರವಕಾಶವೇ ಆಗಿದೆ. ಏಕೆಂದರೆ ಜನನವಿರುವಂತಹ ಚೇತನನಲ್ಲಿಯೇ ಮರಣವಿರಬೇಕು. 'ಯತೋ ವಾ ಇಮಾನಿ ಭೂತಾನಿ ಜಾಯಂತೇ' ಎಂದು ಚೇತನನಾದ ಜೀವನಲ್ಲಿ ಜನನವು ಕೇಳಿಸುತ್ತಿದೆ. ದೇಹತ್ಯಾಗವೆಂಬ ಮರಣಶೀಲನಾದ ಜೀವನಲ್ಲಿಯೇ ಇದನ್ನು ಕೂಡಿಸಬೇಕು; ಹೊರತು ಮರಣವಿಲ್ಲದ ಪರಮಾತ್ಮನಲ್ಲಿ ಇಂತಹ ಜನನವನ್ನು ಹೇಳುವುದು ತಪ್ಪಾಗುತ್ತದೆ. ಮತ್ತು ಜನನ ಶಬ್ದಕ್ಕೆ ಭೌತಿಕವಾದ ಶರೀರವನ್ನು ಸ್ವೀಕರಿಸುವುದು ಎಂದರ್ಥ. ಅಥವಾ ಅಸ್ವಾತಂತ್ರ್ಯವನ್ನು ಹೊಂದುವುದು ಎಂದರ್ಥ. ಇವೆರಡನ್ನೂ ಸಹ ಪರಮಾತ್ಮನಲ್ಲಿ ಹೇಳಲು ಸಾಧ್ಯವಿಲ್ಲ. ಆದ್ದರಿಂದ ಜಾಯಮಾನತ್ವವೆಂಬ ಧರ್ಮವೂ ಜೀವನಲ್ಲಿ ಮಾತ್ರ ಬರುತ್ತದೆ ಹೊರತು, ಪರಮಾತ್ಮನಲ್ಲಿ ಬರುವುದಿಲ್ಲ. ಇಂತಹ ಬಲಿಷ್ಠವಾದ ಲಿಂಗದಿಂದ ದ್ಯುಭ್ವಾದ್ಯಾಯತನರಾದವರು ಜೀವರೆನಿಸಿದ ರುದ್ರಾದಿಗಳೇ ಆಗುತ್ತಾರೆ. ಪರಮಾತ್ಮನಾಗಲು ಸಾಧ್ಯವಿಲ್ಲ.

ಅನುವ್ಯಾಖ್ಯಾನ ಹಾಗೂ ನ್ಯಾಯವಿವರಣಗಳಲ್ಲಿ ಹೇಳಲ್ಪಟ್ಟ ಸಮಾಖ್ಯಾಪ್ರಮಾಣವೂ ಸಹ ನಿರವಕಾಶವೇ ಆಗಿದೆ. ಏಕೆಂದರೆ ಸಮಾಖ್ಯಾಪ್ರಮಾಣಗಳಲ್ಲಿ ಯಾವುದೇ ವಿಷ್ಣುಲಿಂಗಗಳು ಕೇಳಿಸುತ್ತಿಲ್ಲ. ಹಾಗೇನಾದರೂ ಕೇಳಿಸಿದ್ದರೆ 'ಅಂತಸ್ತದ್ಧರ್ಮೋಪದೇಶಾತ್' ಎಂಬ ಸೂತ್ರದ ನ್ಯಾಯದಂತೆ ಆ ಪ್ರಮಾಣಗಳು ವಿಷ್ಣುಪರವೆಂದು ಸಮರ್ಥಿಸಬಹುದಿತ್ತು. ಆದ್ದರಿಂದ ಜಾಯಮಾನತ್ವವೆಂಬ ಲಿಂಗದಂತೆ ಸಮಾಖ್ಯಾಪ್ರಮಾಣವೂ ಸಹ ನಿರವಕಾಶವೇ ಆಗಿದೆ. ಇನ್ನು ವಿಷ್ಣುವಿಷಯಕವಾದ ಆತ್ಮಶಬ್ದ, ಮುಕ್ತೋಪಸೃಪ್ಯತ್ವವೆಂಬ ಲಿಂಗ, ಪರವಿದ್ಯಾವಿಷಯತ್ವವೆಂಬ ಪ್ರಕರಣ ಇವುಗಳನ್ನೆಲ್ಲಾ ಜೀವಬ್ರಹ್ಮರ ಐಕ್ಯದಿಂದ ಜೀವರಲ್ಲಿ ಕೂಡಿಸಬೇಕು. ಆದ್ದರಿಂದ ದ್ಯುಭ್ವಾದ್ಯಾಯತನರಾದವರು ರುದ್ರ, ಪ್ರಕೃತಿ, ಜೀವಾದಿಗಳೇ ಆಗುತ್ತಾರೆ ಹೊರತು, ವಿಷ್ಣುವಲ್ಲವೆಂಬ ಪೂರ್ವಪಕ್ಷವು ಸ್ಥಾಪಿತವಾಯಿತು.

*ಸಿದ್ಧಾಂತ - ವಿಷ್ಣುವಿನ ಹುಟ್ಟು ಲೋಕವಿಲಕ್ಷಣ*

ಸಿದ್ಧಾಂತದ ಸಾರ ಹೀಗಿದೆ - ಜಾಯಮಾನತ್ವವೆಂಬ ಲಿಂಗವು ಜೀವಾದಿಗಳ ವಿಷಯದಲ್ಲಿ ನಿರವಕಾಶಲಿಂಗವೆಂದು ಪೂರ್ವಪಕ್ಷಕಾರರು ಹೇಳಿದರು. ಆದರೆ ಅದು ಸಾವಕಾಶವೇ ಆಗಿದೆ. ಲೋಕದಲ್ಲಿ ಅಚೇತನಪದಾರ್ಥಕ್ಕಿಂತ ಚೇತನಪದಾರ್ಥದ ಜನನವು ವಿಲಕ್ಷಣವಾಗಿರುವುದು ಕಂಡಿದೆ. ಇಂತಹ ಚೇತನ, ಅಚೇತನ ಪದಾರ್ಥಗಳಿಗಿಂತ ಭಗವಂತನ ಜನನವೂ ಸಹ ಲೋಕವಿಲಕ್ಷಣವಾಗಿದೆ. ಆದ್ದರಿಂದ ಸುಖಸ್ವರೂಪನಾದ ಭಗವಂತನು ಮತ್ಸ್ಯ, ಕೂರ್ಮ, ವರಾಹ ಮೊದಲಾದ ಬೇರೆ ಬೇರೆ ತನ್ನ ಶರೀರಗಳನ್ನು ಪ್ರಕಟಪಡಿಸುತ್ತಾನೆ. ಇದೇ ಅವನ ಜನನವೆನಿಸುತ್ತದೆ ಹೊರತು, ಜೀವಾದಿಗಳಿಗೆ ಬರುವಂತೆ ದೇಹದ ಸಂಬಂಧವನ್ನು ಜನನವೆಂದು ಹೇಳಲಾಗದು. ಆದ್ದರಿಂದ 'ಅಜಾಯಮಾನೋ ಬಹುಧಾ ವಿಜಾಯತೇ' ಇತ್ಯಾದಿ ಶ್ರುತಿಯು ವಿಷ್ಣುವಿಷಯಕವೇ ಆಗಿದೆ. ಯಾವಾಗ ಜಾಯಮಾನತ್ವವೆಂಬ ಪೂರ್ವಪಕ್ಷಲಿಂಗವು ಸಾವಕಾಶವಾಗುತ್ತದೋ, ಆವಾಗ ಆತ್ಮಶ್ರುತಿಯು ನಿರವಕಾಶವಾಗುತ್ತದೆ. ನಿರವಕಾಶವಾದ ಆತ್ಮಶ್ರುತಿಯ ಬಲದಿಂದ ಜಾಯಮಾನತ್ವವೆಂಬ ಲಿಂಗವನ್ನೇ ಗೌಣ ಮಾಡಬೇಕು ಹೊರತು, ವಿಪರೀತವಾಗಿ ಹೇಳಬಾರದು.

ಸಮಾಖ್ಯಾಪ್ರಮಾಣವೂ ಸಹ ಸಾವಕಾಶವಾಗಿದೆ. ಆಚಾರ್ಯರು ಭಾಷ್ಯದಲ್ಲಿ ಅನೇಕ ಶ್ರುತಿ, ಸ್ಮೃತಿಗಳ ಆಧಾರದಿಂದ, ರುದ್ರ, ಅಂತಕ, ಪಿನಾಕೀ ಮೊದಲಾದ ಶಬ್ದಗಳನ್ನೆಲ್ಲಾ ವಿಷ್ಣುವಿನಲ್ಲೇ ಮುಖ್ಯವಾಗಿ ಪ್ರತಿಪಾದಿಸಿದ್ದಾರೆ. ಹೀಗೆ ಸೂತ್ರಕಾರರು ಹೇಳಲ್ಪಟ್ಟ ಆತ್ಮಶಬ್ದವೆಂಬ ಲಿಂಗದಿಂದ ಮುಕ್ತೋಪಸೃಪ್ಯತ್ವವೆಂಬ ಲಿಂಗದಿಂದ ವಿಷ್ಣುವೇ ದ್ಯುಭ್ವಾದ್ಯಾಯತನನಾಗಿದ್ದಾನೆಂದು ನಿರ್ಣಯವಾಗುತ್ತದೆ.

### *ಸೂತ್ರಗಳ ವಿನ್ಯಾಸದಲ್ಲಿ ಸ್ವಾರಸ್ಯ*

ಪ್ರಥಮಸೂತ್ರವು ಸ್ವಪಕ್ಷ ಸಾಧಕವನ್ನು ಹೇಳುತ್ತಿರುವುದರಿಂದ ಪ್ರಥಮ ಪ್ರಾಪ್ತವಾಗಿದೆ. ವಾದ ಕಥೆಯಲ್ಲಿ ಮೊದಲು ಸ್ವಪಕ್ಷ ಸಾಧಕಗಳನ್ನು ಹೇಳಿ, ಅನಂತರ (ಪರಪಕ್ಷಬಾಧಕಗಳನ್ನು ಹೇಳಬೇಕು) ಪರಪಕ್ಷಗಳನ್ನು ನಿರಾಕರಣೆ ಮಾಡಬೇಕು. ಅದಕ್ಕನುಸಾರಿಯಾಗಿ ಸೂತ್ರಕಾರರು ಮೊದಲು ಸ್ವಪಕ್ಷಸಾಧಕಗಳನ್ನು ಹೇಳಿ ಮುಂದೆ 'ಅತಚ್ಛಬ್ದಾತ್' ಇತ್ಯಾದಿಯಾಗಿ ಪರಪಕ್ಷಗಳನ್ನು ನಿರಾಕರಣೆ ಮಾಡಿದ್ದಾರೆ.

ಸೂತ್ರದಲ್ಲಿರುವ 'ಸ್ವಶಬ್ದಾತ್' ಎಂಬ ಹೇತುವಿನಿಂದ 'ಸ್ವ' ಎಂಬ ಶಬ್ದಕ್ಕೆ ಪರ್ಯಾಯ ಪದವೆನಿಸಿದ ಆತ್ಮಶಬ್ದವನ್ನು ಸ್ವೀಕರಿಸಬೇಕು. ಯಾವರೀತಿಯಾಗಿ ಪಾಣಿನಿ ವ್ಯಾಕ್ಯರಣದಲ್ಲಿ 'ಸಭಾರಾಜಾಽಮನುಷ್ಯಪೂರ್ವಾ' ಎಂಬ ಸೂತ್ರದಲ್ಲಿ 'ರಾಜಾ' ಎಂಬ ಶಬ್ದಕ್ಕೆ ಪರ್ಯಾಯ ಪದಗಳಾದ ಈಶ್ವರ ಮೊದಲಾದ ಶಬ್ದಗಳನ್ನು ಸ್ವೀಕರಿಸಿದ್ದಾರೋ, ಅದರಂತೆ ಇಲ್ಲಿಯೂ ಸಹ ತಿಳಿಯಬೇಕು.

### *'ಸ್ವಶಬ್ದಾತ್' ಎಂಬ ಸೂತ್ರ ಭಾಗದ ಗಾಂಭೀರ್ಯ*

ಸೂತ್ರದಲ್ಲಿ 'ಸ್ವಶಬ್ದಾತ್' ಎಂದು ಹೇಳಿದ್ದಾರೆ. ವಿಷ್ಣುವಿನಲ್ಲಿ ಅಸಾಧಾರಣವಾಗಿ ಪ್ರಯೋಗಿಸಲ್ಪಟ್ಟ ಆತ್ಮಶಬ್ದವು ಪ್ರಕರಣದಲ್ಲಿ ಕೇಳಿಸುತ್ತಿರುವುದರಿಂದ ಎಂದು ಇದರ ಅರ್ಥ. ಈ ಅರ್ಥವನ್ನು ವಿವಕ್ಷಿಸುವುದಾದರೆ ಸಹಜವಾಗಿ ಶಂಕೆಯು ಉದ್ಭವಿಸುತ್ತದೆ. ಸೂತ್ರಕಾರರು 'ಆತ್ಮಶಬ್ದಾತ್' ಎಂದೇ ಹೇಳಬಹುದಿತ್ತಲ್ಲವೇ? ನೇರವಾಗಿ ಇದರಿಂದ ಹೇತುವನ್ನು ತಿಳಿಸಿದಂತಾಗುತ್ತಿತ್ತು. 'ಸ್ವಶಬ್ದಾತ್' ಎಂದು ಹೇಳಿದರೆ ವಿಷ್ಣುವಿಗೆ ಸಂಬಂಧಪಟ್ಟ ಶಬ್ದ ಯಾವುದೆಂದು ಮೊದಲು ವಿಮರ್ಶಿಸಿ ಅನಂತರ ಅದು ಆತ್ಮಶಬ್ದವಾಗಿದೆಯೆಂಬುದನ್ನು ಅನ್ಯಥಾನುಪಪತ್ತಿ ಪ್ರಮಾಣದಿಂದ ತಿಳಿಯಬೇಕಾಗುತ್ತದೆ. ಇದು ವಕ್ರ ಮಾರ್ಗ. ಸೂತ್ರಕಾರರು ನೇರ ಮಾರ್ಗವನ್ನೇಕೆ ಬಿಟ್ಟರು? ವಕ್ರಮಾರ್ಗವನ್ನೇಕೆ ಹಿಡಿದರು? ಎಂದು.

ಇದು ಮಂದಮತಿಗಳಿಗೆ ಬರುವ ಪ್ರಶ್ನೆಯಷ್ಟೇ ಹೊರತು, ಇದರಲ್ಲಿ ಹುರುಳಿಲ್ಲ. 'ಸ್ವಶಬ್ದಾತ್' ಎಂಬ ಶಬ್ದ ಪ್ರಯೋಗದ ಹಿಂದೆ ಬಹಳ ಅರ್ಥವನ್ನು ತುಂಬಿದ್ದಾರೆ ಸೂತ್ರಕಾರರು. 'ಆತ್ಮಾ' ಎಂಬ ಶಬ್ದವು ವಿಷ್ಣುವಿನಲ್ಲಿ ಅಸಾಧಾರಣವಾಗಿದೆ ಮತ್ತು ಈ ಶಬ್ದವಿಶೇಷವನ್ನೇ ಸ್ವೀಕರಿಸಬೇಕು ಎಂಬೆರಡು ವಿಚಾರಗಳನ್ನು ತಿಳಿಸುವುದಕ್ಕಾಗಿ 'ಸ್ವಶಬ್ದಾತ್' ಎಂದು ಹೇಳಿರುವರು. ಒಂದು ವೇಳೆ ಆತ್ಮಶಬ್ದವನ್ನೇ ಬಾಯಿಬಿಟ್ಟು ಹೇಳಿದ್ದರೆ, ಅದು ವಿಷ್ಣುವಿನಲ್ಲಿ ಅಸಾಧಾರಣವಾಗಿದೆಯೆಂದು ತಿಳಿಯುತ್ತಿರಲಿಲ್ಲ. ಇದು ಶಬ್ದವಿಶೇಷವೆಂದೂ ಸಹ ತಿಳಿಯುತ್ತಿರಲಿಲ್ಲ. 'ಸ್ವ ಇತಿ ಶಬ್ದಃ = ಸ್ವಶಬ್ದಃ' ಎಂಬ ಕರ್ಮಧಾರಯವನ್ನು ಆಶ್ರಯಿಸಿದಾಗ ಶಬ್ದವಿಶೇಷವನ್ನೇ ಸ್ವೀಕರಿಸಬೇಕೆಂಬ ಪ್ರಯೋಜನವು ಲಾಭವಾಗುತ್ತದೆ. 'ಸ್ವಸ್ಯ ಶಬ್ದಃ' 'ಸ್ವಶಬ್ದಃ' ಎಂಬ ಷಷ್ಠೀತತ್ಪುರುಷವನ್ನು ಆಶ್ರಯಿಸಿದಾಗ ವಿಷ್ಣುವಿನ ಅಸಾಧಾರಣ ಶಬ್ದವಾಗಿದೆಯೆಂದು ತಿಳಿಯುತ್ತದೆ. 'ಆತ್ಮಶಬ್ದಾತ್' ಎಂಬ ಪದಪ್ರಯೋಗದಿಂದ ಈ ಎರಡು ಸಮಾಸಗಳೂ ತಿಳಿಯಲು ಸಾಧ್ಯವಿರಲಿಲ್ಲ. ಈ ಎರಡು ಸಮಾಸಗಳಿಂದ ತಿಳಿಯುವ ಪ್ರಮೇಯವೂ ಸಹ ಸಿದ್ಧವಾಗುತ್ತಿರಲಿಲ್ಲ.

ಅಥವಾ ಸ್ವಶಬ್ದಃವನ್ನು ದೃಷ್ಟಾಂತವನ್ನು ತಿಳಿಯಬಹುದು. ಲೋಕದಲ್ಲಿ ೧. ತಾನು, ೨. ದುಡ್ಡು, ೩. ಬಂಧು ಮೊದಲಾದ ಅರ್ಥಗಳಲ್ಲಿ ಸ್ವ ಎಂಬ ಶಬ್ದವನ್ನು ಪ್ರಯೋಗಿಸುವುದು ಕಂಡಿದೆ. ಆದರೂ ಸಹ ಚತುರ್ಮುಖನನ್ನು 'ಸ್ವಭೂಃ' ಎಂದು ಕರೆಯಲಾಗುತ್ತದೆ. ಏಕೆಂದರೆ 'ಸ್ವ' ಎನಿಸಿದ ಭಗವಂತನಿಂದ ಹುಟ್ಟಿದ್ದವನಾದ್ದರಿಂದ. ಇದರಿಂದ 'ಸ್ವ' ಶಬ್ದವು ಶ್ರೀಹರಿಯಲ್ಲೇ ಮುಖ್ಯವಾಗಿದೆಯೆಂದು ತಿಳಿಯುತ್ತದೆ. ಅದರಂತೆ ಆತ್ಮಶಬ್ದವನ್ನೂ ಲೋಕದಲ್ಲಿ ಬೇರೆಡೆ ಪ್ರಯೋಗಿಸಬಹುದು. ಆದರೆ ಚತುರ್ಮುಖನನ್ನೇ 'ಆತ್ಮಭೂಃ' ಎಂದೂ ಸಹ ಕರೆಯುತ್ತಾರೆ. ಹಾಗಾದರೆ ಆತ್ಮಶಬ್ದಕ್ಕೆ ಮುಖ್ಯಪ್ರತಿಪಾದ್ಯನು ವಿಷ್ಣುವೇ ಆಗಿದ್ದಾನೆಂದು ಅರ್ಥೈಸಬೇಕು. ಹೀಗೆ ಸ್ವಶಬ್ದವು ಹೇಗೆ ವಿಷ್ಣುವನ್ನೇ ಮುಖ್ಯವಾಗಿ ಪ್ರತಿಪಾದಿಸುತ್ತದೋ? ಅದರಂತೆ ಆತ್ಮಶಬ್ದವೂ ಸಹ ವಿಷ್ಣುವನ್ನೇ ಮುಖ್ಯವಾಗಿ ಪ್ರತಿಪಾದಿಸುತ್ತದೆಂಬ ಇತ್ಯಾದಿ ವಿಚಾರಗಳನ್ನು ಸೂತ್ರಕಾರರು ಇಲ್ಲಿ ಸೆರೆಹಿಡಿದಿದ್ದಾರೆ.

*ಮುಕ್ತೋಪಸೃಪ್ಯತ್ವವೆಂಬ ಎರಡನೆಯ ಸೂತ್ರದ ಸ್ಥಾನಮಾನ*

'ಯಸ್ಮಿನ್ದ್ಯೌಃ ಪೃಥಿವೀ' ಎಂಬ ವಿಷಯವಾಕ್ಯದಿಂದ ಸ್ವಲ್ಪ ಹತ್ತಿರದಲ್ಲಿಯೇ ಮುಕ್ತಪ್ರಾಪ್ಯತ್ವವೆಂಬ ಲಿಂಗವು ಶ್ರುತಿಯಲ್ಲಿ ಕೇಳಿಸುತ್ತಿದೆ. ಮುಕ್ತರಿಂದ ಹೊಂದಲು ಯೋಗ್ಯನಾಗಿರುವವನು ಪರಮಾತ್ಮನೇ ಆಗಿದ್ದಾನೆ ಹೊರತು, ಬೇರಾರೂ ಅಲ್ಲ. ಆದ್ದರಿಂದಲೂ ದ್ಯುಭ್ವಾದ್ಯಾಯತನನಾಗಿರುವವನು ವಿಷ್ಣುವೇ ಆಗಿದ್ದಾನೆಂದು ತಿಳಿಯಬೇಕು.

ಹೀಗೆ ದ್ಯುಭ್ವಾದ್ಯಾಯತನತ್ವವನ್ನು ಸಮರ್ಥಿಸಲು ಮತ್ತೊಂದು ಕಾರಣವನ್ನು ಈ ಸೂತ್ರವು ಹೇಳುವುದಾದರೆ 'ಚ' ಶಬ್ದವನ್ನು ಸೂತ್ರದಲ್ಲಿ ಹೇಳಬೇಕಿತ್ತಲ್ಲವೇ? ಎಂಬ ಪ್ರಶ್ನೆ ಬರುತ್ತದೆ. ಸಮಾಧಾನ ಹೀಗೆ - ಪ್ರಥಮ ಸೂತ್ರದಲ್ಲಿ ಆತ್ಮ ಶಬ್ದವೆಂಬ ಕಾರಣವನ್ನು ಹೇಳಿದ ಮೇಲೆ ಜಾಯಮಾನತ್ವವೆಂಬ ಲಿಂಗದಿಂದ ಆತ್ಮಶಬ್ದವು ಗೌಣಾರ್ಥವನ್ನು ಹೇಳಬಹುದಲ್ಲವೇ? ಎಂಬ ಆಕ್ಷೇಪವು ಬರುತ್ತದೆ. ಅದನ್ನು ನಿರಾಕರಿಸುವುದಕ್ಕಾಗಿ ಈ ಸೂತ್ರ ಹೊರಟಿದೆ ಹೊರತು, ನೇರವಾಗಿ ದ್ಯುಭ್ವಾದ್ಯಾಯತನತ್ವಕ್ಕೆ ಕಾರಣತ್ವವನ್ನು ಸಮರ್ಥಿಸಲು ಹೊರಟಿಲ್ಲ. ಜೀವವಿಷಯದಲ್ಲಿ ಬರುತ್ತಿರುವ ಆಕ್ಷೇಪವನ್ನು ಮಾಡದಿದ್ದರೆ ಈ ಸೂತ್ರಕ್ಕೆ ಪ್ರಸಕ್ತಿಯೇ ಇರುವುದಿಲ್ಲ. ಆದ್ದರಿಂದ ಸ್ವತಂತ್ರವಾಗಿ ಹೇತುವನ್ನು ಹೇಳದ ಕಾರಣ 'ಚ' ಶಬ್ದದ ಅನಿವಾರ್ಯತೆ ಇಲ್ಲ.

'ಮುಕ್ತೋಪಸೃಪ್ಯತ್ವ' ಎಂದರೆ ಮುಕ್ತರಿಂದ ಹೊಂದಲು ಯೋಗ್ಯನಾಗಿರಬೇಕು. ಇವನನ್ನು ಹೊಂದಿದ ಮೇಲೆ ಮತ್ತೊಬ್ಬರನ್ನು ಮುಕ್ತನು ಹೊಂದಬಾರದು ಎಂಬರ್ಥವನ್ನು ವಿವಕ್ಷಿಸಬೇಕು. ಏಕೆಂದರೆ ಮೋಕ್ಷಕ್ಕೆ ಹೋಗಬೇಕಾದರೆ ಅರ್ಚಿರ್ಲೋಕ, ಅಹರ್ಲೋಕ ಇವುಗಳ ಮೂಲಕ ಹೋಗುತ್ತಾನೆ. ಅಲ್ಲಿರುವ ದೇವತೆಗಳೂ ಸಹ ಮೊದಲು ಪ್ರಾಪ್ಯರೇ ಆಗಿದ್ದಾರೆ. ಆದರೆ ಅಂತಿಮವಾಗಿ ಪ್ರಾಪ್ಯನಾಗಿರುವವನು ವಿಷ್ಣುವೇ ಆಗಿದ್ದಾನೆ. ಆದ್ದರಿಂದಲೇ ಮುಕ್ತರಿಗೆ ಅವನು ಸೇತು ಎನಿಸಿದ್ದಾನೆ. 'ಸೇತು' ಪದದ ಈ ಅರ್ಥವನ್ನು ವಿವಕ್ಷಿಸಿಯೇ ಮುಕ್ತೋಪಸೃಪ್ಯತ್ವಲಿಂಗವನ್ನು ಹೇಳುವಾಗ ಭಾಷ್ಯಕಾರರು 'ಅಮೃತಸ್ಯೈಷ ಸೇತುಃ' ಎಂಬ ವಾಕ್ಯವನ್ನೇ ಉದಾಹರಿಸಿದ್ದಾರೆ.

*ಮೂರು ಹಾಗೂ ನಾಲ್ಕನೆಯ ಸೂತ್ರಗಳ ವ್ಯಾಖ್ಯಾನ*

'ಓಂ ನಾನುಮಾನಮತಚ್ಛಬ್ದಾತ್ ಓಂ' ಎಂಬ ಮೂರನೇ ಸೂತ್ರವು ಪರಪಕ್ಷದಲ್ಲಿ ಯಾವುದೇ ಸಾಧಕಪ್ರಮಾಣಗಳಿಲ್ಲವೆಂದು ಸಮರ್ಥಿಸುತ್ತಿದೆ. ಮೊದಲು ಸ್ವಪಕ್ಷದಲ್ಲಿ ಸಾಧಕಪ್ರಮಾಣಗಳನ್ನು ಹೇಳಿ ಈ ಸೂತ್ರದಲ್ಲಿ ಪರಪಕ್ಷದಲ್ಲಿ ಸಾಧಕಪ್ರಮಾಣಗಳಿಲ್ಲವೆಂದು ಹೇಳುತ್ತಿರುವುದರಿಂದ ಮೂರನೆಯ ಸ್ಥಾನವು ಈ ಸೂತ್ರಕ್ಕೆ ಸಮಂಜಸವಾಗಿದೆ.

ಸೂತ್ರದಲ್ಲಿರುವ ಅನುಮಾನ ಶಬ್ದಕ್ಕೆ ಅನುಮಾನವೇ ಪ್ರಧಾನವಾಗಿವುಳ್ಳ ಪಾಶುಪಾತ್ಯಾದ್ಯಾಗಮಗಳೆಂದರ್ಥ. ಇವುಗಳಲ್ಲಿ ರುದ್ರಾದಿಗಳೇ ದ್ಯುಭ್ವಾದ್ಯಾಯತನರಾಗಿದ್ದಾರೆಂದು ಹೇಳಲಾಗಿದೆಯೆಂದು ಪೂರ್ವಪಕ್ಷಕಾರರು ಹೇಳುತ್ತಾರೆ. ಆದರೆ ಈ ವಿಚಾರವನ್ನು ಸಮರ್ಥಿಸಲು ಯಾವುದೇ ಸಾಧಕಪ್ರಮಾಣಗಳಿರುವುದಿಲ್ಲ. ಅಷ್ಟೇ ಅಲ್ಲದೆ ವಿಷ್ಣುವಿಷಯಕವಾದ ಸಮಾಖ್ಯಾಪ್ರಮಾಣದಲ್ಲಿ ವಿಷ್ಣುವೇ ದ್ಯುಭ್ವಾದ್ಯಾಯತನನಾಗಿದ್ದಾನೆನ್ನಲು ಸಾಧಕಪ್ರಮಾಣಗಳಿಲ್ಲವೆಂದೂ ಸಹ ಹೇಳಲು ಸಾಧ್ಯವಿಲ್ಲ. ರುದ್ರಸಮಾಖ್ಯಾ ಪ್ರಮಾಣದಲ್ಲಿರುವ ರುದ್ರ, ಪಿನಾಕೀ ಮೊದಲಾದ ಶಬ್ದಗಳೆಲ್ಲವೂ ವಿಷ್ಣುವನ್ನು ಮುಖ್ಯವಾಗಿ ಪ್ರತಿಪಾದಿಸುತ್ತವೆ. ಅದರಂತೆ ವಿಷುಸಮಾಖ್ಯಾಪ್ರಮಾಣದಲ್ಲಿರುವ ವಿಷ್ಣು ಮೊದಲಾದ ಶಬ್ದಗಳು ರುದ್ರಾದಿಗಳನ್ನು ಮುಖ್ಯವಾಗಿ ಪ್ರತಿಪಾದಿಸುವುದಿಲ್ಲ. ಆದ್ದರಿಂದ ರುದ್ರಸಮಾಖ್ಯಾಪ್ರಮಾಣವು ಸಾವಕಾಶವೆಂದಂತಾಯಿತು. ವಿಷ್ಣುಸಮಾಖ್ಯಾಪ್ರಮಾಣವು ನಿರವಕಾಶವಾಯಿತು. ಆದ್ದರಿಂದಲೇ ಅನುವ್ಯಾಖ್ಯಾನದ ಶ್ಲೋಕದಲ್ಲಿ ಯಾವ ಯುಕ್ತಿಗಳು ಸಾವಕಾಶವಾಗಿರುತ್ತದೋ ಅವನ್ನೇ ಪೂರ್ವಪಕ್ಷಯುಕ್ತಿಯನ್ನಾಗಿ ಪರಿಗಣಿಸಿ ಅವೇ ಯುಕ್ತಿಗಳು ನಿರವಕಾಶವಾಗಿದ್ದರೆ ಸಿದ್ಧಾಂತ ಯುಕ್ತಿಗಳಾಗುತ್ತವೆಯೆಂದು ಶ್ರೀಮದಾಚಾರ್ಯರು ಹೇಳಿದ್ದಾರೆ.

ಸೂತ್ರದಲ್ಲಿ 'ಅತಚ್ಛಬ್ದಾತ್' ಎಂದು 'ನಞ್' ಸಮಾಸವು ಕಾಣಿಸುತ್ತಿದೆ. ಆದರೆ ಪ್ರಸಜ್ಯ ಪ್ರತಿಷೇಧಾರ್ಥದಲ್ಲಿ ನಞ್ ಎಂಬುದು ಕ್ರಿಯಾಸಾಪೇಕ್ಷವಾದ್ದರಿಂದ ಸಾಮರ್ಥ್ಯವನ್ನು ಹೊಂದದ ಕಾರಣ ಸಮಾಸವಾಗುವುದಿಲ್ಲವೆಂದೆನಿಸುತ್ತದೆ. ಆದರೂ 'ಅಸೂರ್ಯಂ ಪಶ್ಯಾಃ, ಅಶ್ರಾದ್ಧಭೋಜೀ' ಇತ್ಯಾದಿ ಸ್ಥಳಗಳಲ್ಲಿ 'ನಞ್' ಸಮಾಸವನ್ನು ಪ್ರಸಜ್ಯಪ್ರತಿಷೇಧಾರ್ಥದಲ್ಲಿಯೂ ಒಪ್ಪಿರುವುದರಿಂದ ಇಲ್ಲಿಯೂ ತಪ್ಪಾಗುವುದಿಲ್ಲ. ಅಥವಾ ಅವ್ಯಯೀಭಾವ ಸಮಾಸವೆಂದು ಪರಿಗಣಿಸಬಹುದು. ಅವ್ಯಯೀಭಾವ ಸಮಾಸವಾದರೆ 'ಅಮ್' ಪ್ರತ್ಯಯವು ಕೊನೆಯಲ್ಲಿ ಬರಬೇಕೆಂದೇನೂ ನಿಯಮವಿಲ್ಲ. 'ಅಪಂಚಮ್ಯಾಃ' ಎಂಬುದಾಗಿ ಪಂಚಮೀವಿಭಕ್ತಿಯನ್ನು ಬಿಟ್ಟು ಉಳಿದೆಡೆ ಹಾಗೇ 'ಅಮ್' ಪ್ರತ್ಯಯವು ಬರುತ್ತದೆಂದು ಪಾಣಿನಿ ಸೂತ್ರವು ಹೇಳಿದೆ.

ಮೂರನೆಯ ಸೂತ್ರವು ಹೀಗೆ ಪರಪಕ್ಷದಲ್ಲಿ ಸಾಧಕ ಪ್ರಮಾಣಗಳಿಲ್ಲವೆಂದು ಸಮರ್ಥಿಸಿದ ಮೇಲೆ ನಾಲ್ಕನೆಯ 'ಪ್ರಾಣಭೃಚ್ಚ' ಎಂಬ ಸೂತ್ರವು ಜೀವ ಹಾಗೂ ಪ್ರಧಾನಗಳು ದ್ಯುಭ್ವಾದ್ಯಾಯತನರಾಗುವುದಿಲ್ಲವೆಂದು ಸಮರ್ಥಿಸಿದೆ. ಈ ಸೂತ್ರವನ್ನು ಮುಂದಿನ 'ಭೇದವ್ಯಪದೇಶಾತ್' ಎಂಬ ಸೂತ್ರದಲ್ಲಿ ಅನುಕರ್ಷಮಾಡಬೇಕೆಂಬ ಉದ್ದೇಶದಿಂದ ಪ್ರತ್ಯೇಕವಾಗಿ ಹೇಳಿದ್ದಾರೆ. ಮುಂದಿನ ಸೂತ್ರದಲ್ಲಿ ಅನುಕರ್ಷ ಮಾಡುವ ಅವಶ್ಯಕತೆ ಇಲ್ಲದಿದ್ದಲ್ಲಿ ಹಿಂದಿನ ಸೂತ್ರಗಳ ಜೊತೆಗೆ ಸೇರಿಸಿ ಈ ಸೂತ್ರವನ್ನು ಪಠಿಸಬಹುದಿತ್ತು.

*ಐದು, ಆರು ಹಾಗೂ ಏಳನೆಯ ಸೂತ್ರಾರ್ಥ ವಿವರಣೆ*

'ಓಂ ಭೇದವ್ಯಪದೇಶಾತ್ ಓಂ' ಎಂಬ ಐದನೆಯ ಸೂತ್ರದಲ್ಲಿ ಜೀವಬ್ರಹ್ಮರಿಗೆ ಅಭೇದವನ್ನು ಆಶಂಕಿಸಿದರೆ ಉತ್ತರಿಸಲಾಗಿದೆ. ವಸ್ತುತಃ 'ಜುಷ್ಟಂ ಯದಾ ಪಶ್ಯತ್ಯನ್ಯಮೀಶಮ್' ಎಂಬ ಶ್ರುತಿಯಲ್ಲಿ ಭಿನ್ನನಾದ ಈಶನೆಂದಷ್ಟೇ ಹೇಳಲಾಗಿದೆ. ಯಾರಿಂದ ಭಿನ್ನನಾಗಿದ್ದಾನೆಂದು ಸ್ಪಷ್ಟವಾಗಿ ತಿಳಿಯುವುದಿಲ್ಲ. ಆದರೆ 'ಪಶ್ಯತೀ' ಎಂಬ ಕ್ರಿಯಾಪದದಿಂದ ಜೀವನು ಪ್ರಸಕ್ತನಾದ್ದರಿಂದ ಅರ್ಥಾತ್ ಜೀವನಿಂದ ಭೇದವನ್ನೇ ಹೇಳುತ್ತಿದೆಯೆಂದು ತಿಳಿಯಬೇಕು. 'ಜುಷ್ಟಂ ಯದಾ ಪಶ್ಯತಿ' ಎಂಬ ಶ್ರುತಿಯನ್ನು ಅದೃಶ್ಯತ್ವಾಧಿಕರಣದಲ್ಲಿ ರುದ್ರನಿಗಿಂತ ವಿಷ್ಣು ಭಿನ್ನನಾಗಿದ್ದಾನೆಂಬ ವಿಷಯದಲ್ಲಿ ಪ್ರಮಾಣವನ್ನಾಗಿ ಹೇಳಿದ್ದರು. ಮತ್ತೊಂದು ರೀತಿಯಲ್ಲಿ ಪ್ರಕೃತ ವ್ಯಾಖ್ಯಾನ ಮಾಡುತ್ತಾ ಜೀವ ಬ್ರಹ್ಮರ ಭೇದವಿಷಯದಲ್ಲಿಯೂ ಈ ಶ್ರುತಿಯು ಪ್ರಮಾಣವಾಗಿದೆಯೆಂದು ಸಮರ್ಥಿಸುತ್ತಿದ್ದಾರೆ.

'ಓಂ ಪ್ರಕರಣಾತ್ ಓಂ' ಎಂಬ ಆರನೆಯ ಸೂತ್ರವು ಹಿಂದಿನ ಸೂತ್ರದಲ್ಲಿ ಹೇಳಲ್ಪಟ್ಟ ಭೇದವು ಅನ್ಯವಿಷಯಕವಾಗುವುದಿಲ್ಲವೆಂಬುದನ್ನು ಮಾತ್ರ ಸಮರ್ಥನೆ ಮಾಡುತ್ತಿದೆ.

*ಪರಿಪೂರ್ಣಚಂದ್ರಿಕಾ*

'ಓಂ ಸ್ಥಿತ್ಯದನಾಭ್ಯಾಂಚ ಓಂ' ಎಂಬ ಏಳನೆಯ ಸೂತ್ರವು ಭೇದವಿಷಯದಲ್ಲಿ ಶ್ರುತಿಯು ಹೇಗೆ ಪ್ರಮಾಣವಾಗಿದೆಯೋ, ಅದರಂತೆ ಶ್ರುತಿ ಹಾಗೂ ಅದನಗಳೆಂಬ ಲಿಂಗಗಳೂ ಸಹ ಪ್ರಮಾಣವಾಗಿದೆಯೆಂದು ಸಮರ್ಥಿಸುತ್ತಿದೆ.

ಅದ್ವೈತಿಗಳು 'ದ್ವಾ ಸುಪರ್ಣಾ' ಎಂಬ ಶ್ರುತಿಯು ಬುದ್ಧಿಜೀವರಿಗೆ ಭೇದವನ್ನು ಹೇಳುವುದಕ್ಕಾಗಿ ಹೊರಟಿದೆ ಎನ್ನುತ್ತಾರೆ. ಅವರು ನೀಡುವ ಕಾರಣ ಪೈಂಗಿಗಹಸ್ಯ ಬ್ರಾಹ್ಮಣ ವಾಕ್ಯದಲ್ಲಿ 'ದ್ವಾ ಸುಪರ್ಣಾ' ಎಂಬ ವಾಕ್ಯವನ್ನು ವ್ಯಾಖ್ಯಾನ ಮಾಡುವಾಗ 'ತಾವೇತೌ ಸತ್ವಕ್ಷೇತ್ರಜ್ಞೌ' ಎಂದು ಹೇಳಲಾಗಿದೆ. ಸತ್ವ ಹಾಗೂ ಕ್ಷೇತ್ರಜ್ಞರೆಂದರೆ ಬುದ್ಧಿ ಮತ್ತು ಜೀವರೇ ಆಗಿರುತ್ತಾರೆಂದು ಅವರ ಸಮರ್ಥನೆ. ಇದು ಸರಿಯಲ್ಲ. 'ಸತ್ವಂ ಜೀವ ಇತಿ ಪ್ರೋಕ್ತಃ' ಇತ್ಯಾದಿ ಮಾತುಗಳ ಆಧಾರದಿಂದ ಜೀವನೇ ಸತ್ವಶಬ್ದದಿಂದ ಪ್ರತಿಪಾದ್ಯನು. ಕ್ಷೇತ್ರಜ್ಞಶಬ್ದದಿಂದ ಪರಮಾತ್ಮನೇ ಪ್ರತಿಪಾದ್ಯನೆನ್ನಲು 'ಅಗುಣಾನ್ವಿತಂ ಕ್ಷೇತ್ರಜ್ಞಮಾಹುಃ' ಇತ್ಯಾದಿ ಅನೇಕ ಪ್ರಮಾಣಗಳಿವೆ. ಈ ಕಾರಣದಿಂದ 'ದ್ವಾ ಸುಪರ್ಣಾ' ಎಂಬ ಶ್ರುತಿಯು ಜೀವಬ್ರಹ್ಮಭೇದಪ್ರತಿಪಾದಕವೇ ಆಗಿದೆ ಹೊರತು, ಬುದ್ಧಿಜೀವರ ಭೇದ ಪ್ರತಿಪಾದಕವಾಗಿಲ್ಲವೆಂದು ತಿಳಿಯಬೇಕು.

*ಶಾಂಕರ ಭಾಷ್ಯ ವಿಮರ್ಶೆ*

ಅದ್ವೈತಿಗಳು ನಾವು ಹೇಳುವ ವಾಕ್ಯವನ್ನೇ ಈ ಅಧಿಕರಣಕ್ಕೆ ವಿಷಯವೆನ್ನುತ್ತಾರೆ. ಆದರೆ ಪೂರ್ವಪಕ್ಷ ಹಾಗೂ ಸಿದ್ಧಾಂತ ಲಿಂಗಗಳಲ್ಲಿ ವ್ಯತ್ಯಾಸವಿದೆ. 'ಅಮೃತಸ್ಯೈಷ ಸೇತುಃ' ಎಂಬ ಶ್ರುತಿ ಅಮೃತಕ್ಕೆ ಸೇತುವಾಗಿರುವ ವ್ಯಕ್ತಿಯೇ ದ್ಯುಭ್ವಾದ್ಯಾಯತನನೆಂದು ಹೇಳುತ್ತಿದೆ. ಆದ್ದರಿಂದ ಅಮೃತ ಸ್ವರೂಪನಾದ ಬ್ರಹ್ಮನು ಅಮೃತಕ್ಕೆ ಸೇತುವಾಗಲು ಸಾಧ್ಯವಿಲ್ಲವೆಂದು ಪೂರ್ವಪಕ್ಷ ಮಾಡಿದ್ದಾರೆ. ಅಮೃತಸೇತುತ್ವವನ್ನು ಗೌಣವನ್ನಾಗಿ ವಿವಕ್ಷಿಸಿ ಮುಕ್ತರಿಗೆ ಆಶ್ರಯನಾದ್ದರಿಂದ ಬ್ರಹ್ಮನೇ ಅಮೃತಸೇತುವಾಗಿದ್ದಾನೆ. ಆದ್ದರಿಂದ ದ್ಯುಭ್ವಾದ್ಯಾಯತನನೂ ಸಹ ಅವನೇ ಆಗುತ್ತಾನೆಂದು ಸಿದ್ಧಾಂತ ಮಾಡಿದ್ದಾರೆ. ಅಥವಾ ಯಾರನ್ನು ತಿಳಿಯುವುದರಿಂದ ಮೋಕ್ಷವು ಉಂಟಾಗುತ್ತದೋ, ಅವನೇ ದ್ಯುಭ್ವಾದ್ಯಾಯತನನೆಂದು ಶ್ರುತಿಗೆ ಅರ್ಥೈಸಬೇಕೆಂದು ಮತ್ತೊಂದು ಬಗೆಯಲ್ಲಿಯೂ ವ್ಯಾಖ್ಯಾನಿಸುತ್ತಾರೆ.

ಇವರ ಈ ಅಧಿಕರಣ ಶರೀರವು ಅಯುಕ್ತವಾಗಿದೆ. ಶ್ರುತಿಯಲ್ಲಿ ಜಾಯಮಾನತ್ವಲಿಂಗವು ಕೇಳಿಸುತ್ತಿರುವುದರಿಂದ ಪ್ರಬಲವಾದ ಪೂರ್ವಪಕ್ಷಲಿಂಗವನ್ನು ಬಿಟ್ಟು ಅಪ್ರಧಾನವಾದ ಅಮೃತಸೇತುತ್ವವಿಲ್ಲವೆಂದು ಪೂರ್ವಪಕ್ಷ ಮಾಡುವುದು ಅಸಂಗತ. ಮತ್ತು ಅಮೃತಸೇತುತ್ವವನ್ನು ಬ್ರಹ್ಮನಲ್ಲಿ ಸಮರ್ಥಿಸಲು ಅವರಿಗೆ ಸಾಧ್ಯವೂ ಇಲ್ಲ. ಅದ್ವೈತಮತ ಪ್ರಕಾರ ಮೋಕ್ಷವು ಬ್ರಹ್ಮಸ್ವರೂಪವೇ ಆಗಿದೆ. ಹೀಗಿರುವಾಗ ಬ್ರಹ್ಮ ಮೋಕ್ಷಕ್ಕೆ ಆಶ್ರಯನಾಗಲು ಹೇಗೆ ಸಾಧ್ಯ ? ಆದ್ದರಿಂದ ಗೌಣವಾದ ಅಮೃತಸೇತುತ್ವವನ್ನು ಅವರಿಂದ ಸಮರ್ಥಿಸಲಾಗದು. ಮತ್ತು ದ್ಯುಭ್ವಾದ್ಯಾಯತನತ್ವವನ್ನು ಬ್ರಹ್ಮನಲ್ಲಿ ಸಮರ್ಥಿಸಲು ಸಾಧ್ಯವಿಲ್ಲ. ಏಕೆಂದರೆ ಮೂರನೆಯ ಪಾದವು ಅದ್ವೈತಮತ ಪ್ರಕಾರ ನಿರ್ವಿಶೇಷ ಬ್ರಹ್ಮಪ್ರತಿಪಾದಕವಾಗಿದೆ. ಆದ್ದರಿಂದ ನಿರ್ವಿಶೇಷ ಬ್ರಹ್ಮನಲ್ಲಿ ದ್ಯುಭ್ವಾದ್ಯಾಯತನತ್ವವೆಂಬ ಧರ್ಮವನ್ನು ಸಮರ್ಥಿಸುವುದು ಹೇಗೆ ಸಮಂಜಸವಾಗುತ್ತದೆ?

ಹಾಗೂ 'ಸ್ವಶಬ್ದಾತ್' ಎಂಬುದಕ್ಕೆ ಬ್ರಹ್ಮನಲ್ಲಿ ಆತ್ಮಶಬ್ದವಿರುವುದರಿಂದ ಎಂದು ವ್ಯಾಖ್ಯಾನಿಸುತ್ತಾರೆ. ನಿರ್ವಿಶೇಷ ಬ್ರಹ್ಮನಲ್ಲಿ ಆತ್ಮವಾಚ್ಯತ್ವವೂ ಸಹ ಇರುವುದಿಲ್ಲ. ಈ ಎಲ್ಲಾ ಕಾರಣಗಳಿಂದ ಅದ್ವೈತಿಗಳ ವ್ಯಾಖ್ಯಾನವು ಯಾರಿಗೂ ಸಹ ಮನದಟ್ಟಾಗುವುದಿಲ್ಲ. ಪ್ರತಿಯೊಂದು ಅಧಿಕರಣಗಳಂತೆ ಈ ಅಧಿಕರಣದಲ್ಲಿಯೂ 'ಭೇದವ್ಯಪದೇಶಾತ್' ಎಂಬ ಸೂತ್ರದಿಂದ, 'ಮುಕ್ತೋಪಸೃಪ್ಯವ್ಯಪದೇಶಾತ್' ಎಂಬ ಸೂತ್ರದಿಂದ ಅದ್ವೈತಿಗಳು ದ್ವೈತವನ್ನೇ ಸ್ಥಾಪನೆ ಮಾಡಿದ್ದಾರೆ.

ಅದ್ವೈತದ ಸಾಧನೆಗೆ ಇದೂ ಸಹ ಅವರಿಗೆ ಅನುಕೂಲವಾಗುವುದಿಲ್ಲ.

## ರಾಮಾನುಜ ಮತ ವಿಮರ್ಶೆ

ರಾಮಾನುಜರೂ ಸಹ 'ಯಸ್ಮಿನ್‌ದ್ಯೌಃ' ಎಂಬುದನ್ನೇ ವಿಷಯವಾಕ್ಯವೆನ್ನುತ್ತಾರೆ. ಆದರೆ ಈ ಅಧಿಕರಣದಲ್ಲಿ ಜೀವನು ಮಾತ್ರ ಪೂರ್ವಪಕ್ಷಕ್ಕೆ ವಿಷಯನು. ಪ್ರಕೃತಿ ಮೊದಲಾದವುಗಳು ಪೂರ್ವಪಕ್ಷಕ್ಕೆ ವಿಷಯವಲ್ಲವೆನ್ನುತ್ತಾರೆ. ಏಕೆಂದರೆ 'ಗೌಣಶ್ಚೇನ್ನಾತ್ಮಶಬ್ದಾತ್' ಎಂಬ ಈಕ್ಷತ್ಯಧಿಕರಣ ಸೂತ್ರದಲ್ಲಿ ಆತ್ಮಶಬ್ದವಾಚ್ಯತ್ವವನ್ನು ಪ್ರಕೃತಿಗೆ ನಿರಾಕರಣ ಮಾಡಿದ್ದರಿಂದ ಪುನಃ ಪೂರ್ವಪಕ್ಷ ಮಾಡಲು ಸಾಧ್ಯವಿಲ್ಲ. 'ನಾನುಮಾನಮ್' ಎಂಬ ಸೂತ್ರದಲ್ಲಿ ಪ್ರಕೃತಿಯನ್ನು ನಿರಾಕರಣೆ ಮಾಡಿದ್ದು ಕೇವಲ ದೃಷ್ಟಾಂತಕ್ಕೋಸ್ಕರ. ಹೇಗೆ ಪ್ರಕೃತಿ ಪ್ರಾಪಕವಾದ ಶಬ್ದಗಳು ಇಲ್ಲದ ಕಾರಣ ಪ್ರಕೃತಿಯು ಲೋಕಾಧಾರವಾಗುವುದಿಲ್ಲವೋ ಅದರಂತೆ ಜೀವನೂ ಸಹ ಲೋಕಾಧಾರನಾಗುವುದಿಲ್ಲವೆಂದು ಅದರ ಅಭಿಪ್ರಾಯ. 'ನಾನುಮಾನಮ್ ಅತಚ್ಛಬ್ದಾತ್, ಪ್ರಾಣಭೃಚ್ಚ' ಎಂಬುದನ್ನು ಒಂದೇ ಸೂತ್ರವೆನ್ನುವುದು ಇವರ ಮತ್ತೊಂದು ಅಭಿಪ್ರಾಯ.

ಇವರ ಅಧಿಕರಣಶರೀರವೂ ಸಹ ತಪ್ಪಾಗಿದೆ. ಪ್ರಕೃತಿಯು ಪೂರ್ವಪಕ್ಷಕ್ಕೆ ವಿಷಯವಾಗದಿರಬಹುದು. ಆದರೆ ರುದ್ರ ಹಾಗೂ ವಾಯುಗಳು ಪೂರ್ವಪಕ್ಷಕ್ಕೆ ವಿಷಯವಾಗಬಹುದಲ್ಲವೇ? ಇದಕ್ಕೆ ಅವರಲ್ಲಿ ಉತ್ತರವಿಲ್ಲ. ಮತ್ತು ಆತ್ಮಶಬ್ದದ ಬಲದಿಂದ ಪ್ರಕೃತಿಯು ಪೂರ್ವಪಕ್ಷಕ್ಕೆ ವಿಷಯವಾಗುವುದಿಲ್ಲವೆಂದಮೇಲೆ ಅದೇ ಆನಂದಮಯಾಧಿಕರಣದಲ್ಲಿ ಮುಕ್ತಪ್ರಾಪ್ಯತ್ವಧರ್ಮವನ್ನು ಜೀವನಲ್ಲಿ ನಿರಾಕರಿಸಲಾಗಿದೆ. ಪ್ರಕೃತಿಯನ್ನು ಪೂರ್ವಪಕ್ಷದಲ್ಲಿ ಸೇರಿಸದೇ ಬಿಟ್ಟರೆ, ಜೀವನನ್ನೂ ಸಹ ಪೂರ್ವಪಕ್ಷದಲ್ಲಿ ಸೇರಿಸಬಾರದು. ಆದ್ದರಿಂದ ಈ ಅಧಿಕರಣದ ಪೂರ್ವಪಕ್ಷಕ್ಕೆ ವಿಷಯವೇ ಇಲ್ಲದಂತಾಗುತ್ತದೆ. ಜಾಯಮಾನತ್ವ ಮೊದಲಾದ ಜೀವವಿಷಯಕವಾದ ಪೂರ್ವಪಕ್ಷಲಿಂಗಗಳಿಂದ ಮುಕ್ತೋಪಸೃಪ್ಯತ್ವವನ್ನು ಗೌಣವನ್ನಾಗಿ ವ್ಯಾಖ್ಯಾನಿಸಬೇಕೆನ್ನುವುದಾದರೆ ಪ್ರಕೃತಿ-ವಿಷಯದಲ್ಲಿರುವ ನಿರವಕಾಶಲಿಂಗಗಳಿಂದಲೇ ಆತ್ಮಶಬ್ದವನ್ನೂ ಸಹ ಗೌಣವನ್ನಾಗಿ ವ್ಯಾಖ್ಯಾನಿಸಬೇಕಾಗುತ್ತದೆ. ಆದ್ದರಿಂದ ಪ್ರಕೃತಿಯು ಪೂರ್ವಪಕ್ಷಕ್ಕೆ ವಿಷಯವಲ್ಲ. ಜೀವನು ಮಾತ್ರವೆಂಬ ವಿಷಯ ಎಂಬ ವಿಚಾರದಲ್ಲಿ ಅರ್ಥವಿಲ್ಲ.

ಅದೃಶ್ಯತ್ವಾಧಿಕರಣದಿಂದ ಈ ಅಧಿಕರಣಕ್ಕೆ ಪುನರುಕ್ತಿ ಬರುತ್ತದೆಂಬ ದೋಷ. ಮೂವರಿಗೂ ಸಮಾನ. ಏಕೆಂದರೆ 'ಯತ್ತದದ್ರೇಶ್ಯಮ್' ಎಂಬ ವಾಕ್ಯವು ಯಾವ ಪ್ರಕರಣದಲ್ಲಿದೆಯೋ, ಅದೇ ಪ್ರಕರಣದಲ್ಲಿ 'ಯಸ್ಮಿನ್ ದ್ಯೌಃ' ಎಂಬ ವಾಕ್ಯವೂ ಸಹ ಇರುತ್ತದೆ. ಅದೃಶ್ಯತ್ವಾಧಿಕರಣದಿಂದಲೇ ಲೋಕಾಧಾರತ್ವವನ್ನು ವಿಷ್ಣುವಿನಲ್ಲಿ ಸಮರ್ಥಿಸಿದ್ದರಿಂದ ಪುನಃ ಅದನ್ನೇ ಇಲ್ಲಿ ಸಮರ್ಥಿಸಿದರೆ ಪುನರುಕ್ತಿ ಬರುತ್ತದೆ. ಈ ಶಂಕೆಗೆ ಅದ್ವೈತಿಗಳು 'ಯಸ್ಮಿನ್‌ದ್ಯೌಃ' ಎಂಬ ವಾಕ್ಯವು ಪ್ರಕರಣದಲ್ಲಿ ಇಲ್ಲವೆಂದು ತಿಳಿದುಕೊಂಡು ಪೂರ್ವಪಕ್ಷದಲ್ಲಿ ಉತ್ತರಿಸುತ್ತಾರೆ. ಇದು ತಪ್ಪು. ಜಾಯಮಾನತ್ವ ಮೊದಲಾದ ಲಿಂಗಗಳಿಂದ ಸಂಪೂರ್ಣಪ್ರಕರಣವೇ ಜೀವಪರವಾಗುತ್ತದೆಂಬ ಅಧಿಕಾಶಂಕೆಯನ್ನು ಮಾಡಲು ಬರುವಾಗ ಆ ವಾಕ್ಯವನ್ನು ಇಲ್ಲವೆಂದು ತಿಳಿದುಕೊಳ್ಳಬೇಕೆಂಬ ಉತ್ತರವು ತಪ್ಪಾಗುತ್ತದೆ. ರಾಮಾನುಜರು 'ಯತ್ತದದ್ರೇಶ್ಯಮ್' ಎಂಬುದು ಬ್ರಹ್ಮಪರವಾದರೂ ಸಹ ಜೀವವಿಷಯಕವಾದ ಇಂದ್ರಿಯಾಧಾರತ್ವ ಮೊದಲಾದ ಲಿಂಗಗಳು ಕೇಳಿಸುತ್ತಿವೆ. ಆದ್ದರಿಂದ 'ಯಸ್ಮಿನ್‌ದ್ಯೌಃ' ಎಂಬ ಪ್ರಕರಣವೇ ಬೇರೆಯಾಗುತ್ತದೆ. ಪ್ರಕರಣವಿಚ್ಛೇದಪ್ರಾಪಕವು ಇದ್ದಾಗ ಪ್ರಕರಣಭೇದವನ್ನು ಒಪ್ಪುವುದು ಅನಿವಾರ್ಯವೆಂದು ಉತ್ತರಿಸುತ್ತಾರೆ. ಇದೂ ಸಹ ತಪ್ಪು. ಒಂದೇ ಪ್ರಕರಣವೆಂದು ವಿವಕ್ಷಿಸಿದಾಗಲೂ ಪೂರ್ವಪಕ್ಷವನ್ನು ಮಾಡಲು ಬರುವಾಗ ಭಿನ್ನಪ್ರಕರಣವೆಂದು ಹೇಳುವುದು ಸರಿಯಲ್ಲ. ಮತ್ತು ಅನುಭವವಿರುದ್ಧವಾದ ಲೋಕಾಧಾರತ್ವವನ್ನು ಜೀವನಲ್ಲಿ ಆಕ್ಷೇಪಿಸುವ ರಾಮಾನುಜರು ಸುಲಭವಾಗಿ ಆಕ್ಷೇಪಿಸಬಹುದಾದ ಅದೃಶ್ಯತ್ವವನ್ನೇಕೆ ಬಿಡುತ್ತಾರೆಂದು

ಅರ್ಥವಾಗದ ಸಂಗತಿ. ಆದ್ದರಿಂದ ಅದೃಶ್ಯತ್ವಾಧಿಕರಣದ ಮೇಲೆ ಬರುವ ಹೆಚ್ಚಿನ ಆಶಂಕೆಯ ಪರಿಹಾರಕ್ಕೋಸ್ಕರ ಈ ಅಧಿಕರಣವು ಹೊರಟಿರುತ್ತದೆಂಬ ಭಾಷ್ಯ ಹಾಗೂ ಟೀಕೆಗಳಲ್ಲಿರುವ ಮಾಡಿರುವ ಸಮರ್ಥನೆಯು ಅತ್ಯಂತ ಸಂಗತವಾಗಿದೆ.

# ಭೂಮಾಧಿಕರಣ

### *'ಭೂಮಾ' ಶಬ್ದವು ಧರ್ಮಿಪರ ಮತ್ತು ಉಭಯತ್ರಪ್ರಸಿದ್ಧ*

'ಭೂಮಾ' ಎಂಬ ನಾಮಾತ್ಮಕ ಶಬ್ದವನ್ನು ಈ ಅಧಿಕರಣದಲ್ಲಿ ಸಮನ್ವಯ ಮಾಡುತ್ತಿದ್ದಾರೆ. 'ಪ್ರಾಣೋ ವಾ ಆಶಾಯಾ ಭೂಯಾನ್' ಎಂಬುದಾಗಿ ಛಾಂದೋಗ್ಯದಲ್ಲಿ ಪ್ರಾಣನನ್ನು 'ಭೂಮಾ' ಎನ್ನಲಾಗಿದೆ. 'ವಿಷ್ಣುರ್ವ್ಯೈ ದೇವೇಭ್ಯೋ ಭೂಯಾನ್' ಎಂಬುದಾಗಿ ವಿಷ್ಣುವನ್ನೂ ಸಹ 'ಭೂಮಾ' ಎನ್ನಲಾಗಿದೆ. ಆದ್ದರಿಂದ ಪ್ರಾಣ ಹಾಗೂ ವಿಷ್ಣು ಇಬ್ಬರಲ್ಲಿಯೂ ಪ್ರಸಿದ್ಧವಾದ 'ಭೂಮಾ' ಎಂಬ ಶಬ್ದವು ಉಭಯತ್ರಪ್ರಸಿದ್ಧವಾಯಿತು.

ವಸ್ತುತಃ 'ಬಹು' ಎಂಬ ಶಬ್ದದ ಮೇಲೆ 'ಇಮನಿಚ್' ಪ್ರತ್ಯಯ ಹಾಗೂ ಭೂ ಆದೇಶಗಳು ಬಂದು 'ಭೂಮಾ' ಎಂಬ ಶಬ್ದವು ನಿಷ್ಪನ್ನವಾಗಿದೆ. ಆದ್ದರಿಂದ ಸಂಖ್ಯಾವಾಚಕವಾದ 'ಭೂಮಾ' ಎಂಬ ಶಬ್ದವು ಧರ್ಮವಾಚಕವಾಗುವುದರಿಂದ ಲಿಂಗಾತ್ಮಕವಾಗಿದೆಯೆಂದೆನಿಸುತ್ತದೆ. ಆದರೆ 'ಯೋ ವೈ ಭೂಮಾ ತದಮೃತಮ್' ಇತ್ಯಾದಿಯಾಗಿ ಶ್ರೇಷ್ಠನೆಂಬರ್ಥದಲ್ಲಿ ಉಪನಿಷತ್ತು 'ಭೂಮಾ' ಶಬ್ದವನ್ನು ಪ್ರಯೋಗ ಮಾಡುತ್ತಿದೆ. ಮತ್ತು 'ವಾಗ್ವಾವ ನಾಮ್ನೋ ಭೂಯಸೀ' ಇತ್ಯಾದಿ ಸ್ಥಳಗಳಲ್ಲಿ ಕೇಳಿಸುತ್ತಿರುವ 'ಭೂಮಾ' ಎಂಬ ಶಬ್ದಕ್ಕೆ ಸಮಾನಾರ್ಥಕವಾದ 'ಭೂಯಸ್' ಶಬ್ದವನ್ನು ಸಂಖ್ಯಾದ್ಯರ್ಥದಲ್ಲಿ ವಿವಕ್ಷಿಸಲು ಸಾಧ್ಯವಿಲ್ಲ. ಆದ್ದರಿಂದ ಶ್ರೇಷ್ಠನೆಂಬ ಧರ್ಮ್ಯವಾಚಕತ್ವವನ್ನೇ 'ಭೂಮಾ' ಎಂಬ ಶಬ್ದಕ್ಕೆ ಒಪ್ಪಬೇಕು.

ಇಂತಹ 'ಭೂಮಾ' ಎಂಬ ಶಬ್ದವು ಉಭಯತ್ರಪ್ರಸಿದ್ಧವಾಗಿದೆ. 'ಪ್ರಾಣೋ ವಾ ಆಶಾಯಾ ಭೂಯಾನ್' ಎಂಬ ಛಾಂದೋಗ್ಯೋಪನಿಷತ್ತಿನ ಉಪಕ್ರಮದಲ್ಲಿ ಪ್ರಾಣನಲ್ಲಿ ಪ್ರಸಿದ್ಧವಾದ 'ಭೂಮಾ' ಎಂಬ ಶಬ್ದವು 'ವಿಷ್ಣುರ್ವ್ಯೈ ದೇವೇಭ್ಯೋ ಭೂಯಾನ್' ಎಂಬ ಸಮಾಖ್ಯಾಪ್ರಮಾಣದಲ್ಲಿ ವಿಷ್ಣುವಿನಲ್ಲಿಯೂ ಪ್ರಸಿದ್ಧವಾಗಿದೆ. ಉಪಕ್ರಮ ಪ್ರಮಾಣಕ್ಕಿಂತ ಸಮಾಖ್ಯಾಪ್ರಮಾಣವು ದುರ್ಬಲವಾಗಿದ್ದರೂ ಕೂಡ ಇಲ್ಲಿರುವ ಸಮಾಖ್ಯಾಪ್ರಮಾಣವು ಅಭ್ಯಾಸ ಹಾಗೂ ಉಪಪತ್ತಿಗಳಿಂದ ಸಹಿತವಾಗಿದೆ. ಆದ್ದರಿಂದ ಉಪಕ್ರಮದಿಂದ ಸಮಾನಬಲವುಳ್ಳದ್ದೇ ಆಗಿದೆ. ಹೀಗೆ ಸಮಬಲವಾದ ಉಪಕ್ರಮ ಹಾಗೂ ಸಮಾಖ್ಯಾಪ್ರಮಾಣಗಳು ಪ್ರಾಣ ಹಾಗೂ ವಿಷ್ಣುವಿನಲ್ಲಿ 'ಭೂಮಾ' ಶಬ್ದವನ್ನು ಪ್ರಯೋಗಿಸುತ್ತಿರುವ ಕಾರಣ ಉಭಯತ್ರಪ್ರಸಿದ್ಧವಾಗಿದೆಯೆಂದು ತಿಳಿಯಬೇಕು. ಅಥವಾ ಉಪಕ್ರಮ ಹಾಗೂ ಸಮಾಖ್ಯಾಪ್ರಮಾಣಗಳಲ್ಲಿ ಯಾರಿಗೆ ಪ್ರಾಬಲ್ಯ ಹಾಗೂ ದೌರ್ಬಲ್ಯ ವಿಚಾರವು ಬಂದಿರುವುದಿಲ್ಲವೋ, ಅಂತಹ ವ್ಯಕ್ತಿಯ ವಿಷಯದಲ್ಲಿ 'ಭೂಮಾ' ಎಂಬ ಶಬ್ದವು ಉಭಯಸಾಧಾರಣವಾಗಿದೆಯೆಂದು ತಿಳಿಯಬಹುದು.

### *ಭೂಮಾಧಿಕರಣಕ್ಕೆ ಪಾದ ಸಂಗತಿ*

ಅಥವಾ 'ಅತ ಏವ ಪ್ರಾಣಃ' ಎಂಬ ಸೂತ್ರದಲ್ಲಿಯೇ ಪ್ರಾಣಶಬ್ದವನ್ನು ವಿಷ್ಣುಪರವೆಂದು ನಿರ್ಣಯಿಸಿದ್ದಾಗಿದೆ. ಆದ್ದರಿಂದ ಉಪಕ್ರಮದಲ್ಲಿರುವ ಪ್ರಾಣಶಬ್ದವು ಸಾವಕಾಶವಾಯಿತು. ಸಮಾಖ್ಯಾಪ್ರಮಾಣದಲ್ಲಿರುವ ವಿಷ್ಣುಶಬ್ದವು

ಪ್ರಾಣನಲ್ಲಿ ಸಮನ್ವಯವಾಗದ ಕಾರಣ ನಿರವಕಾಶವಾಗಿದೆ. ವಾಸ್ತವಿಕವಾಗಿ ಉಪಕ್ರಮವು ಸಮಾಖ್ಯಾಪ್ರಮಾಣಕ್ಕಿಂತ ಬಲಿಷ್ಠವಾಗಿದ್ದರೂ ಸಾವಕಾಶವಾಗಿರುವುದರಿಂದ ಸಮಾಖ್ಯಾಪ್ರಮಾಣಕ್ಕೆ ಹಾಗೂ ಉಪಕ್ರಮ ಪ್ರಮಾಣಕ್ಕೆ ಸಮಾನ ಬಲವನ್ನು ಹೇಳಬಹುದು.

ಈ ಅಧಿಕರಣದಲ್ಲಿ 'ಭೂಮಾ' ಎಂಬ ಶಬ್ದವು ಉಭಯಸಾಧಾರಣವಾಗಿದೆಯೆನ್ನಲು ಉಪಕ್ರಮ ವಾಕ್ಯ ಹಾಗೂ ಸಮಾಖ್ಯಾಪ್ರಮಾಣಗಳನ್ನು ಆಧರಿಸುತ್ತಿದ್ದಾರೆ. ಆದರೆ 'ಪ್ರಾಣೋ ವಾವ ಸರ್ವೇಭ್ಯೋ ಭೂಯಾನ್' ಎಂಬುದಾಗಿ ಪ್ರಾಣನ ವಿಷಯದಲ್ಲಿಯೂ ಸಮಾಖ್ಯಾಪ್ರಮಾಣವನ್ನೇ ಹೇಳಬಹುದು. ಹೀಗೆ ಹೇಳಿದಾಗ ಪೂರ್ವಪಕ್ಷ ಹಾಗೂ ಸಿದ್ಧಾಂತ ಪಕ್ಷಗಳಲ್ಲಿ ಸಮಬಲವಾದ ಪ್ರಮಾಣಗಳನ್ನು ಹೇಳಿದಂತಾಗುತ್ತದೆ. ಆದರೆ 'ಪ್ರಾಣೋ ವಾವ ಸರ್ವೇಭ್ಯೋ ಭೂಯಾನ್' ಎಂಬ ಸಮಾಖ್ಯಾಪ್ರಮಾಣದಲ್ಲಿ ಸಕಲ ದೇವತೆಗಳಿಗಿಂತಲೂ ಪ್ರಾಣನು ಉತ್ತಮನೆಂದು ಸ್ಪಷ್ಟವಾಗಿ ತಿಳಿಯುವುದಿಲ್ಲ. ಕೇವಲ ಉಪಾಸಕರಿಗಿಂತ ಉತ್ತಮನಾಗಿದ್ದಾನೆಂದಷ್ಟೇ ತಿಳಿಯುತ್ತದೆ. ಈ ಕಾರಣಕ್ಕಾಗಿ ಉಪಕ್ರಮಪ್ರಮಾಣವನ್ನೇ ಆಧರಿಸಿದ್ದಾರೆ.

ಹಿಂದಿನ ದ್ಯುಭ್ವಾದ್ಯಧಿಕರಣದಲ್ಲಿಯೂ ಉಪಕ್ರಮಪ್ರಮಾಣವನ್ನೇ ಹೇಳಬಹುದಿತ್ತಲ್ಲವೇ? ಎಂದು ಪ್ರಶ್ನಿಸಬಾರದು. ಅಲ್ಲಿ ರುದ್ರಾದಿ ಪ್ರಾಪಕವಾದ ಉಪಕ್ರಮಪ್ರಮಾಣವು ಇಲ್ಲದ ಕಾರಣದಿಂದಲೇ ಪೂರ್ವಪಕ್ಷ ಹಾಗೂ ಸಿದ್ಧಾಂತ ಪಕ್ಷಗಳಲ್ಲಿ ಸಮಬಲವಾದ ಸಮಾಖ್ಯಾಪ್ರಮಾಣಗಳನ್ನೇ ಆಶ್ರಯಿಸಲಾಗಿದೆ.

ಉಪಕ್ರಮ ಹಾಗೂ ಸಮಾಖ್ಯಾಪ್ರಮಾಣಗಳಿಂದ 'ಭೂಮಾ' ಎಂಬ ಶಬ್ದವು ಉಭಯ ಸಾಧಾರಣವಾಗಿದೆಯೆಂದು ಹೇಳುವುದಾದರೆ ಸರ್ವಗತತ್ವಾಧಿಕರಣದಲ್ಲಿಯೂ 'ತಸ್ಯೈತಸ್ಯಾವಾದಿತ್ಯೋ ರಸಃ' ಎಂದು ಆದಿತ್ಯನಲ್ಲಿ ಶ್ರುತಿರೂಪ ಉಪಕ್ರಮಪ್ರಮಾಣವಿದೆ. ಬ್ರಹ್ಮನ ವಿಷಯದಲ್ಲಿ ಸಮಾಖ್ಯಾಪ್ರಮಾಣವಿದೆ. ಹಾಗಾಗಿ 'ಭೂಮಾ' ಎಂಬ ಶಬ್ದದಂತೆ ಸರ್ವಗತತ್ವವೂ ಸಹ ಉಭಯತ್ರಪ್ರಸಿದ್ಧವಾಗಬೇಕಲ್ಲವೇ? ಎಂಬುದು ಮುಂದಿನ ಪ್ರಶ್ನೆ. ಈ ಪ್ರಶ್ನೆಗೆ ಹೀಗೆ ಉತ್ತರಿಸಬೇಕು. ಸರ್ವಗತತ್ವಾಧಿಕರಣದಲ್ಲಿ ಯಾವುದೇ ಶ್ರುತಿಯಲ್ಲಿಯೂ ಸಹ ಅಲೌಕಿಕತ್ವವೆಂಬ ಸರ್ವಭೂತಗತತ್ವವನ್ನು ಪೂರ್ವಪಕ್ಷಿಯು ಬ್ರಹ್ಮನಲ್ಲಿ ಒಪ್ಪಿರುವುದಿಲ್ಲ. ಆದ್ದರಿಂದ ಸಮಾಖ್ಯಾಪ್ರಮಾಣವನ್ನೇ ಅಲ್ಲಿ ಹೇಳಲು ಸಾಧ್ಯವಿಲ್ಲ. ಆದರೆ ಪ್ರಕೃತ ಈ ಅಧಿಕರಣದ ಪೂರ್ವಪಕ್ಷಿಯು ಸಮಾಖ್ಯಾಶ್ರುತಿಯು ವಿಷ್ಣುಪರವಾಗಬಹುದೆಂದು ಒಪ್ಪಿಕೊಂಡು ಉಪಕ್ರಮದಲ್ಲಿರುವ 'ಭೂಮಾ' ಎಂಬ ಶಬ್ದವನ್ನಷ್ಟೇ ವಿಷ್ಣುಪರವಲ್ಲವೆಂದು ಆಕ್ಷೇಪಿಸುತ್ತಿದ್ದಾನೆ. ಹೀಗೆ ಎರಡೂ ಅಧಿಕರಣಗಳ ವ್ಯತ್ಯಾಸವನ್ನು ಗಮನಿಸಬೇಕು.

'ಯೋ ವೈ ಭೂಮಾ ತತ್ಸುಖಮ್' ಇತ್ಯಾದಿಯಾಗಿ ಭೂಮರೂಪನಾದ ವಾಯು, ಆನಂದಮಯನಾಗದಿದ್ದರೆ ಇಲ್ಲಿ ಭೂಮನಿಗೆ ಹೇಳಲ್ಪಟ್ಟ ಸುಖವೂ ಸಹ ಕೂಡುವುದಿಲ್ಲ. ಆದ್ದರಿಂದ ಭೂಮನೆನಿಸಿದ ಮುಖ್ಯಪ್ರಾಣನೇ ಆನಂದಮಯನಾಗುತ್ತಾನೆ. ಹೀಗೆ 'ಭೂಮಾ' ಎಂಬ ಶಬ್ದವು ವಿಷ್ಣು ಹಾಗೂ ವಾಯು ಇಬ್ಬರಲ್ಲಿಯೂ ಸಾಧಾರಣವಾಗಿರುವುದರಿಂದ ಪಾದಸಂಗತಿಯು ಯುಕ್ತವಾಗಿದೆ.

*ಹಿಂದಿನ ಅಧಿಕರಣದಿಂದ ಅವಾಂತರಸಂಗತಿ ವಿಚಾರ*

ಭೂಮನಲ್ಲಿ ಸರ್ವಗತತ್ವ, ಆತ್ಮಕ್ರೀಡಾತ್ವ, ಅಮೃತತ್ವ ಇವೇ ಮೊದಲಾದ ಧರ್ಮಗಳು ಕೇಳಿಸುತ್ತಿವೆ. ದ್ಯುಭ್ವಾದ್ಯಾಯತನನಲ್ಲಿಯೂ ಕೂಡ ಇವೇ ಧರ್ಮಗಳು ಕೇಳಿಸುತ್ತಿವೆ. ಆದ್ದರಿಂದ ಭೂಮಾ ಹಾಗೂ ದ್ಯುಭ್ವಾದ್ಯಾಯತನರು ಒಬ್ಬನೇ ಎಂದು ತಿಳಿಯುತ್ತದೆ. ಒಂದು ವೇಳೆ ಈಗಾಗಲೇ ಹೇಳಿದಂತೆ ಭೂಮನು ಮುಖ್ಯಪ್ರಾಣನಾದರೆ ದ್ಯುಭ್ವಾದ್ಯಾಯತನನೂ ಸಹ ಅವನೇ ಆಗುತ್ತಾನೆ. ಹೀಗಿರುವಾಗ ದ್ಯುಭ್ವಾದ್ಯಾಯತನನು ವಿಷ್ಣುವೆಂದು ಹಿಂದಿನ ಅಧಿಕರಣದಲ್ಲಿ ಹೇಗೆ ನಿರ್ಣಯಿಸಿದಿರಿ ? ಎಂದು ಆಕ್ಷೇಪಿಕೀ ಸಂಗತಿಯನ್ನು ತಿಳಿಯಬೇಕು.

*ಪರಿಪೂರ್ಣಚಂದ್ರಿಕಾ*

ಟೀಕೆಯಲ್ಲಿ ಆನಂದಮಯಾಧಿಕರಣದಿಂದ ಸಂಗತಿಯನ್ನು ತೋರಿಸಿರುತ್ತಾರೆ. ಯಾವ ನ್ಯಾಯವನ್ನು ವಿವಕ್ಷಿಸಿ ಆನಂದಮಯಾಧಿಕರಣದಿಂದ ಸಂಗತಿಯನ್ನು ತೋರಿಸಿದ್ದಾರೋ ಅದೇ ನ್ಯಾಯವು ಹಿಂದಿನ ಅಧಿಕರಣದಿಂದ ತೋರಿಸುವ ಸಂಗತಿಯಲ್ಲಿಯೂ ಇರುವುದರಿಂದ ಟೀಕೆಯಿಂದಲೇ ಪೂರ್ವಾಧಿಕರಣದ ಸಂಗತಿಯನ್ನು ಸೂಚಿಸಿದ್ದಾರೆ.

*ಅಧಿಕರಣದ ಸಂಶಯ ಪರಂಪರೆ*

ಸಿದ್ಧಾಂತ ಹಾಗೂ ಪೂರ್ವಪಕ್ಷಗಳ ಫಲಫಲಿಭಾವವನ್ನು ಹೀಗೆ ತಿಳಿಯಬೇಕು - ಒಂದು ವೇಳೆ ಪ್ರಾಣನಲ್ಲಿ ಶ್ರುತವಾದ ಉತ್ಕ್ರಮಣಲಿಂಗವು ಮುಂದೆ ಹೇಳುವ ಪ್ರಕಾರ ಸರ್ವಗತನಾದ ಬ್ರಹ್ಮನಲ್ಲಿ ಅಯುಕ್ತವಾದರೆ ಉಪಕ್ರಮದಲ್ಲಿ ಶ್ರುತನಾದ ಪ್ರಾಣನು ವಾಯುವೇ ಆಗುತ್ತಾನೆ. ಅಂತಹ ವಾಯುವಿಗಿಂತ ಬ್ರಹ್ಮನು ಶ್ರೇಷ್ಠನೆಂದು ಸಿದ್ಧಾಂತಿಯು ಒಪ್ಪಿರುವುದರಿಂದ ಪ್ರಶ್ನೆ ಹಾಗೂ ಉತ್ತರಗಳಿಂದ ಪ್ರಾಣನಿಗಿಂತ ಉತ್ತಮತ್ವವನ್ನು ಬ್ರಹ್ಮನಿಗೆ ಹೇಳಬೇಕು. ಆದರೆ ಹಾಗೆ ಉಪನಿಷತ್ತಿನಲ್ಲಿ ಹೇಳಿರುವುದಿಲ್ಲ. ಹೀಗೆ ಹೇಳದಿರುವಿಕೆಯೇ ಮುಖ್ಯಪ್ರಾಣನಿಗೆ ಪೂರ್ಣಸುಖತ್ವವನ್ನು ಹಾಗೂ ಭೂಮತ್ವವನ್ನು ಹೇಳಬೇಕೆಂಬುದಕ್ಕೆ ಗಮಕ ಎಂದು ಪೂರ್ವಪಕ್ಷಕಾರರ ಆಶಯ.

ಒಂದು ವೇಳೆ ಭಗವಂತನ ಅನೇಕ ರೂಪಗಳ ಭೇದದಿಂದ ತನ್ನಿಂದಲೇ ತನಗೆ ಭೂಯಸ್ತ್ವವನ್ನು ಹೇಳಿದ್ದು ಯುಕ್ತವಾಗುವುದಾದರೆ ಪ್ರಾಣನೂ ಸಹ ಬ್ರಹ್ಮನೇ ಆಗುತ್ತಾನೆ. ಆವಾಗ ತನ್ನಿಂದಲೇ ತನಗೆ ಉತ್ತಮತ್ವವು ಬರುವುದಿಲ್ಲವಾದ್ದರಿಂದ ಭೂಯಸ್ತ್ವದ ಅನುಕ್ತಿಯು ಯುಕ್ತವಾಗುತ್ತದೆ. ಆದ್ದರಿಂದ ಪೂರ್ಣಸುಖತ್ವ ಹಾಗೂ ಭೂಮತ್ವಗಳೆರಡೂ ವಿಷ್ಣುವಿನಲ್ಲೇ ಬರುತ್ತದೆಂಬುದು ಸಿದ್ಧಾಂತದ ಉದ್ದೇಶ.

*ಮುಖ್ಯಪ್ರಾಣನೇ ಭೂಮನು (ಪ್ರಥಮ ಪೂರ್ವಪಕ್ಷ)*

ಮುಖ್ಯಪ್ರಾಣನೇ ಭೂಮನಾಗಿದ್ದಾನೆ. 'ಪ್ರಾಣೋ ವಾ ಆಶಾಯಾ ಭೂಯಾನ್' ಎಂಬ ಉಪಕ್ರಮ ಪ್ರಮಾಣವೇ ಈ ವಿಷಯದಲ್ಲಿ ಆಧಾರವಾಗಿದೆ. ಪ್ರಾಣ ಹಾಗೂ ಭೂಮಾ ಇಬ್ಬರಿಗೂ ಭೇದವನ್ನು ಹೇಳಬಾರದು. ಏಕೆಂದರೆ ಹಾಗೇನಾದರೂ ಭೇದವಿದ್ದಿದ್ದರೆ ಪ್ರಾಣನಿಗಿಂತ ಭೂಮನನ್ನು ಉತ್ತಮನೆಂದು ಹೇಳಬೇಕಿತ್ತು. ಆದರೆ ಹಾಗೆ ಹೇಳಿರುವುದಿಲ್ಲ. ಅಥವಾ ಪ್ರಾಣನಿಗಿಂತ ಉತ್ತಮನೊಬ್ಬ ಇದ್ದಾನೆಂಬ ಪ್ರಶ್ನೆಯನ್ನೂ ಸಹ ಮಾಡಿರುವುದಿಲ್ಲ. ಆದ್ದರಿಂದ ಮುಖ್ಯಪ್ರಾಣನೇ ಭೂಮನಾಗಿದ್ದಾನೆಂದು ಸ್ಪಷ್ಟವಾಗುತ್ತದೆ. ಇನ್ನು ವಿಷ್ಣುವಿನ ವಿಷಯದಲ್ಲಿಯೂ ಸಮಾಖ್ಯಾಪ್ರಮಾಣವಿದೆಯೆಂದು ಹೇಳಬಹುದು. ಆದರೆ ಉಪಕ್ರಮ ಹಾಗೂ ಸಮಾಖ್ಯಾಪ್ರಮಾಣಗಳೆರಡರ ಮಧ್ಯದಲ್ಲಿ ಉಪಕ್ರಮ ಪ್ರಮಾಣವೇ ಶ್ರೇಷ್ಠವಾಗಿರುತ್ತದೆ. ಆದ್ದರಿಂದ ವಿಷ್ಣುವಿನ ಸಮಾಖ್ಯಾಪ್ರಮಾಣವು ಇದನ್ನು ವಿರೋಧಿಸುವುದಿಲ್ಲ.

*ಮುಖ್ಯಪ್ರಾಣದೇವರೇ ಭೂಮರೆಂದು ಭಾಷ್ಯದ ಪ್ರಕಾರ ಪೂರ್ವಪಕ್ಷ*

ಭೂಮರೆನಿಸಿದವರು ಮುಖ್ಯಪ್ರಾಣದೇವರೇ ಹೊರತು, ಬ್ರಹ್ಮನಲ್ಲ. ಪ್ರಾಣಶಬ್ದದಿಂದ ಬ್ರಹ್ಮನೂ ಪ್ರತಿಪಾದ್ಯನಾದ್ದರಿಂದ ಬ್ರಹ್ಮನನ್ನೂ ಸಹ ಭೂಮನೆನ್ನಬಹುದಲ್ಲವೇ? ಎಂದು ಪ್ರಶ್ನಿಸಬಾರದು. ಪ್ರಥಮ ಪಾದದಲ್ಲಿ ಪ್ರಾಣಶಬ್ದವನ್ನು ಬ್ರಹ್ಮನೆಂದು ಸಮರ್ಥಿಸಲು ನಿರವಕಾಶವಾದ ವಿಷ್ಣುವಿನ ಲಿಂಗವಿತ್ತು. ಆದರೆ ಇಲ್ಲಿ ಅಂತಹ ವಿಷ್ಣುಲಿಂಗಗಳೇನೂ ಇರುವುದಿಲ್ಲ. ವಿಪರೀತವಾಗಿ 'ದೇಹಾದುತ್ಕ್ರಮಣ' ಎಂಬ ಲಿಂಗವೇ ಇರುತ್ತದೆ. ಮುಖ್ಯಪ್ರಾಣದೇವರು ಭೂಮರೆಂದು ಹೇಳಿದರೆ ಯಾವುದೇ ಬಾಧಕಗಳೂ ಸಹ ಇರುವುದಿಲ್ಲ. ಎಲ್ಲೆಡೆ ವ್ಯಾಪ್ತನಾಗಿದ್ದರೆ ಮಾತ್ರ ಭೂಮನೆನಿಸಬೇಕಾಗಿಲ್ಲ. ಭೂಮಪ್ರಕರಣವನ್ನು ಹಿಂದಿನ, ಮುಂದಿನ ವಾಕ್ಯಗಳಿಂದ ವಿಚಾರ

ಮಾಡಿದಾಗ ಅಲ್ಲಿ ಗುಣತಃ ಉತ್ತಮತ್ವವೇ ಪ್ರಸಕ್ತವಾಗಿದೆ ಎಂದು ತಿಳಿಯುತ್ತದೆ. ಆದ್ದರಿಂದ ಆಶಾಯೆನಿಸಿದ ಭಾರತಿಗಿಂತ ಉತ್ತಮನಾಗಿದ್ದಾನೆಂದರೆ ಹೆಚ್ಚಿನ ದೇಶದಲ್ಲಿದ್ದಾನೆಂದು ಅರ್ಥವಲ್ಲ. ಹೆಚ್ಚಿನ ಗುಣಗಳುಳ್ಳವ- ನಾಗಿದ್ದಾನೆಂದಷ್ಟೇ ಅರ್ಥ. ಆದ್ದರಿಂದ ಅಣುಸ್ವರೂಪರಾಗಿದ್ದರೂ ಸಹ ಮುಖ್ಯಪ್ರಾಣದೇವರಲ್ಲಿ ಭೂಮತ್ವವು ಯುಕ್ತವಾಗುತ್ತದೆ. ಅವರೇ ಆನಂದಮಯರೂ ಸಹ ಆಗುತ್ತಾರೆಂದು ಆಕ್ಷೇಪ ಮಾಡಬಹುದು.

### *ಉತ್ಕ್ರಮಣ ಲಿಂಗಕ್ಕೆ ನಿರವಕಾಶತ್ವ ಸಮರ್ಥನೆ*

ಭೂಮಪ್ರಕರಣದಲ್ಲಿ ಸರ್ವಗತತ್ವವು ಕೇಳಿಸುತ್ತಿದೆ. ಆದಕ್ಕನುಸಾರಿಯಾಗಿ ಪ್ರಾಣನಲ್ಲಿ ಕೇಳಿಸುತ್ತಿರುವ ದೇಹಾದ್ಯುತ್ಕ್ರಮಣವೆಂಬ ಲಿಂಗವನ್ನು ಗೌಣವಾಗಿ ವ್ಯಾಖ್ಯಾನಿಸಬೇಕೆಂದು ಹೇಳಬಾರದು. ಏಕೆಂದರೆ 'ಉತ್ಕ್ರಾಂತ' ಎಂಬ ಶಬ್ದದಿಂದಲೇ ನೇರವಾಗಿ ಪ್ರಾಣೋತ್ಕ್ರಮಣವೆಂಬ ಲಿಂಗವು ತಿಳಿಯುತ್ತಿದೆ. ಹಾಗೇ ಸರ್ವಗತತ್ವವವನ್ನು ನೇರವಾಗಿ ಹೇಳುವ ಯಾವುದೇ ಶಬ್ದಗಳು ಶ್ರುತಿಯಲ್ಲಿರುವುದಿಲ್ಲ. ಆದ್ದರಿಂದ ಸರ್ವಗತತ್ವವನ್ನೇ ಗೌಣವನ್ನಾಗಿ ಅರ್ಥೈಸಬೇಕು. ಒಟ್ಟಾರೆ ಸಂಪ್ರಸಾದವೆಂಬ ಪೂರ್ಣಾನಂದತ್ವವು ವಿಷ್ಣುವಿನಲ್ಲಿ ಮಾತ್ರ ಬರುತ್ತದೆಂಬ ನಿಯಮವನ್ನು ಸಿದ್ಧಾಂತಿಗಳು ಮಾಡಲು ಸಾಧ್ಯವಿಲ್ಲ. ಮುಖ್ಯಪ್ರಾಣದೇವರಲ್ಲಿಯೂ ಈ ಲಿಂಗವು ಬರುತ್ತಿದೆ.

### *ವ್ಯಾಪ್ತನಾದ ಬ್ರಹ್ಮನಲ್ಲಿ ಉತ್ಕ್ರಮಣವನ್ನು ಹೇಳಲಾಗದೆಂದು ಪೂರ್ವಪಕ್ಷದ ಉಪಸಂಹಾರ*

ಪರಮಾತ್ಮನು ವ್ಯಾಪ್ತನಾದ ಕಾರಣ 'ದೇಹದಿಂದ ಹೊರಗೆ ಹೊರಟದ್ದಾನೆ'. ಅಥವಾ 'ದೇಹದಲ್ಲಿ ಪ್ರವೇಶ ಮಾಡಿದ್ದಾನೆ' ಇತ್ಯಾದಿಯಾಗಿ ಯಾವುದೇ ಕ್ರಿಯೆಯನ್ನು ಹೇಳಲು ಸಾಧ್ಯವಿಲ್ಲ. ಇಂತಹ ಕ್ರಿಯೆಯನ್ನು ಅಣುಸ್ವರೂಪನಾದ ಮುಖ್ಯಪ್ರಾಣನಲ್ಲಿ ಮಾತ್ರ ಹೇಳಬೇಕೆಂದು ಪೂರ್ವಪಕ್ಷದ ಅಭಿಪ್ರಾಯ. ಬ್ರಹ್ಮನು ವ್ಯಾಪ್ತನಾಗಿದ್ದರೂ ಸಹ ಅಣುಸ್ವರೂಪನೂ ಆಗಿರುವ ಪ್ರಯುಕ್ತ ಕ್ರಿಯೆಯನ್ನು ಹೇಳಬಹುದಲ್ಲವೇ ? ಎಂಬ ಪ್ರಶ್ನೆ ಸಹಜವಾಗಿ ಬರುತ್ತದೆ. ಆದರೆ ಅಣುತ್ವವಿರುವ ಪ್ರಯುಕ್ತ ಕ್ರಿಯೆಯು ಬರುತ್ತದೆಂದು ಹೇಳುವುದಾದರೆ ಮಹತ್ತ್ವವಿರುವ ಪ್ರಯುಕ್ತ ಕ್ರಿಯೆಯು ಬರುವುದಿಲ್ಲವೆಂದು ಹೇಳಿದರೆ ಈ ರೀತಿಯ ಪೂರ್ವಪಕ್ಷಿಗಳ ಪ್ರತಿಬಂದಿಗೆ ಉತ್ತರವನ್ನು ನೀಡಲು ಸಾಧ್ಯವಿಲ್ಲ. ಆದ್ದರಿಂದ ವ್ಯಾಪ್ತನಾದ ಪರಮಾತ್ಮನಿಗೆ ಕ್ರಿಯೆಯು ಕೂಡುವುದಿಲ್ಲವೆಂಬುದೇ ಈ ಅಧಿಕರಣದ ಪೂರ್ವಪಕ್ಷ. ಇದರ ನಿರಾಕರಣೆಯೇ ಸಿದ್ಧಾಂತ.

ಈ ಪೂರ್ವಪಕ್ಷ ಹಾಗೂ ಸಿದ್ಧಾಂತಗಳನ್ನು ಬೇರೆ ಯಾವುದೇ ಅಧಿಕರಣಗಳಲ್ಲಿಯೂ ಸಹ ಮಾಡಿರುವುದಿಲ್ಲ. 'ಸರ್ವತ್ರ ಪ್ರಸಿದ್ಧೋಪದೇಶಾತ್' ಎಂಬ ಸೂತ್ರದಲ್ಲಿ ಸರ್ವಗತನಾದ ಪರಮಾತ್ಮನು ಹೃದಯದಲ್ಲಿದ್ದಾನೆಂದು ಹೇಳಿದ್ದಾರೆ ಹೊರತು, ವ್ಯಾಪ್ತನಾದ ಪರಮಾತ್ಮನಿಗೆ ಕ್ರಿಯೆಯು ಬರುತ್ತದೆಂದು ಹೇಳಿರುವುದಿಲ್ಲ. ಇದರಂತೆ 'ಜ್ಯೋತಿರ್ದರ್ಶನಾತ್' ಎಂಬ ಸೂತ್ರದಲ್ಲಿ ಕರ್ಮಾಧೀನವಾಗಿ ಸಂಚಾರವು ಬರುತ್ತದೆಂದು ಹೇಳಿದ್ದಾರೆ ಹೊರತು, ವ್ಯಾಪ್ತನಾದ ಪರಮಾತ್ಮನಿಗೆ ಕ್ರಿಯೆಯು ಬರುವುದಿಲ್ಲವೆಂದು ಪೂರ್ವಪಕ್ಷವನ್ನು ಮಾಡಿರುವುದಿಲ್ಲ. ಮತ್ತು ಅದರ ಖಂಡನೆಯನ್ನೂ ಸಹ ಮಾಡಿರುವುದಿಲ್ಲ. ಆದ್ದರಿಂದ ಈ ಅಧಿಕರಣವು ಬೇರೆ ಅಧಿಕರಣದಿಂದ ಗತಾರ್ಥವಾಗಲು ಸಾಧ್ಯವಿಲ್ಲ. ಆದ್ದರಿಂದ ಉತ್ಕ್ರಮಣವೆಂಬ ಲಿಂಗವು ಮುಖ್ಯಪ್ರಾಣನಲ್ಲಿ ಮಾತ್ರ ಬರುತ್ತದೆ. ಪ್ರಾಣಶಬ್ದದಿಂದ ಮುಖ್ಯಪ್ರಾಣದೇವರೇ ಪ್ರತಿಪಾದ್ಯರಾಗುತ್ತಾರೆ, ಅವರೇ ಭೂಮರೂ ಸಹ ಆಗುತ್ತಾರೆಂಬ ಎಂಬ ಪೂರ್ವಪಕ್ಷವು ಉದಯವಾಯಿತು.

*ವಿಷ್ಣುವೇ ಭೂಮನೆಂದು ಸಿದ್ಧಾಂತ*

ಯಾರು ಭೂಮನಾಗಿದ್ದಾನೋ, ಅವನು ಪರಿಪೂರ್ಣವಾದ ಸುಖವುಳ್ಳವನೆಂದು 'ಯೋ ವೈ ಭೂಮಾ ತತ್ಸುಖಮ್' ಎಂಬ ಶ್ರುತಿಯು ಪ್ರತಿಪಾದನೆ ಮಾಡುತ್ತಿದೆ. ನಿರುಪಪದವಾದ ಸುಖಶಬ್ದಕ್ಕೆ ಪರಿಪೂರ್ಣವೆಂದೇ ಅರ್ಥ. ಪರಿಪೂರ್ಣಸುಖ ಇರುವುದು ಪರಮಾತ್ಮನಲ್ಲಿ ಮಾತ್ರವೇ. ಬೇರೆಯವರೆಲ್ಲರೂ ಅಲ್ಪವಾದ ಸುಖವುಳ್ಳವರು. ಆದ್ದರಿಂದ ಬೇರೆಯವರು ಯಾರೂ ಸಹ 'ಭೂಮಾ' ಎಂಬ ಶಬ್ದದಿಂದ ಪ್ರತಿಪಾದ್ಯರಾಗುವುದಿಲ್ಲ. ಈ ಎಲ್ಲ ವಿಷಯವನ್ನು 'ಸಂಪ್ರಸಾದಾತ್' ಎಂಬ ಲಿಂಗದಿಂದ ಸೂತ್ರಕಾರರು ಹೇಳಿರುತ್ತಾರೆ.

'ವಿಶ್ವಶಂಭುವಮ್' ಎಂಬ ಶ್ರುತಿಯು ಪೂರ್ಣವಾದ ಸುಖಕ್ಕೆ ಆಶಯನಾದವನು ವಿಷ್ಣುವೇ ಆಗಿದ್ದಾನೆಂದು ಹೇಳುತ್ತಿರುವುದರಿಂದ ಮುಖ್ಯಪ್ರಾಣದೇವರನ್ನು ಪೂರ್ಣಸುಖಸ್ವರೂಪರೆಂದು ಹೇಳಬಾರದು.

*'ಅನುಕ್ತಿ' ಎಂಬ ಪೂರ್ವಪಕ್ಷಲಿಂಗವು ಸಾವಕಾಶ*

ಭೂಮನೇ ವಿಷ್ಣುವಾಗಿದ್ದಾನೆಂಬ ವಿಷಯದಲ್ಲಿ ಅನೇಕ ಸಾಧಕ ಪ್ರಮಾಣಗಳಿವೆ. ಅಷ್ಟೇ ಅಲ್ಲದೇ ಪೂರ್ವಪಕ್ಷಕಾರರು ಹೇಳಲ್ಪಟ್ಟ ಅನುಕ್ತಿ ಹಾಗೂ ಉತ್ಕ್ರಮಣ ಎಂಬ ಬಾಧಕಗಳೂ ಸಹ ಇರುವುದಿಲ್ಲ. ಏಕೆಂದರೆ ಪ್ರಾಣನಿಗಿಂತ ವಿಷ್ಣು ಅಧಿಕನಾಗಿದ್ದಾನೆಂದು ಹೇಳದಿರುವಿಕೆಯು ಬಾಧಕವಾಗುತ್ತದೆಂದು ಪೂರ್ವಪಕ್ಷಕಾರರು ಹೇಗೆ ಹೇಳುತ್ತಾರೋ ಅದರಂತೆ ವಿಷ್ಣುವಿಗಿಂತ ಪ್ರಾಣನು ಉತ್ತಮನಾಗಿದ್ದಾನೆಂಬ ಹೇಳದಿರುವಿಕೆಯು ಪೂರ್ವಪಕ್ಷಕಾರರಿಗೂ ಬಾಧಕವಾಗಿದೆ. ಪ್ರಾಣನು ಸರ್ವೋತ್ತಮನೆಂದೇ ಪೂರ್ವಪಕ್ಷಕಾರರು ಸಮರ್ಥಿಸಬೇಕು. ಆದ್ದರಿಂದ ವಿಷ್ಣುವಿಗಿಂತಲೂ ಪ್ರಾಣನಿಗೆ ಉತ್ತಮತ್ವವನ್ನು ಅವರು ಪ್ರತಿಪಾದಿಸಿದರೆ ಮಾತ್ರ ಭೂಮನು ಪ್ರಾಣನಾಗಿದ್ದಾನೆಂಬ ಸಮರ್ಥನೆಯು ಸಾಧ್ಯವಾಗುತ್ತದೆ. ಆದ್ದರಿಂದ ನಮ್ಮನ್ನು ಕುರಿತು ಯಾವ ಅನುಕ್ತಿಯನ್ನು ಬಾಧಕವನ್ನಾಗಿ ಹೇಳುತ್ತಿದ್ದಾರೋ, ಅದೇ ಅನುಕ್ತಿಯೆಂಬ ಲಿಂಗವು ಪೂರ್ವಪಕ್ಷಕಾರರಿಗೇನೇ ಮಾರಕವಾಗಿದೆ.

'ಅಧ್ಯುಪದೇಶಾತ್' ಎಂಬಲ್ಲಿ 'ಅಧಿ' ಎಂದರೆ 'ಸರ್ವಾಧಿಕ' ಎಂದರ್ಥ. ಪ್ರಾಣನನ್ನು ಸರ್ವೋತ್ತಮನೆಂದು ಶ್ರುತಿಯು ಹೇಳಿದೆ. ಶ್ರುತಿಯಲ್ಲಿ ಪ್ರಸಕ್ತವಾದ ಪ್ರಕರಣ ಹೀಗಿದೆ - ನಾರದರು ಸನತ್ಕುಮಾರರನ್ನು ಬ್ರಹ್ಮೋಪದೇಶಕ್ಕಾಗಿ ಉಪಸತ್ತಿ ಮಾಡುತ್ತಾರೆ. ಅಂತಹ ನಾರದರನ್ನು ಕುರಿತು ಸನತ್ಕುಮಾರರು 'ನಾಮ ಬ್ರಹ್ಮೇತ್ಯುಪಾಸೀತ' ನಾಮಾಭಿಮಾನಿಯಾದ ಉಷಾದೇವಿಯನ್ನು ಪೂರ್ಣಳೆಂದು ಉಪಾಸನೆ ಮಾಡಬೇಕು ಎಂದು ಪ್ರಾರಂಭ ಮಾಡಿ ಆಶಾನಾಮಕಳಾದ ಭಾರತೀದೇವಿಯ ತನಕ ಉಪಾಸನೆಯನ್ನು ತಾರತಮ್ಯ ಪ್ರಕಾರವಾಗಿ ಉಪದೇಶಿಸಿದರು. ಕೊನೆಯಲ್ಲಿ ಆಶಾನಾಮಕಳಾದ ಭಾರತೀದೇವಿಗಿಂತ ಪ್ರಾಣನನ್ನು ಉತ್ತಮನೆಂದು ಹೇಳಿದರು. ಅಂತಹ ಪ್ರಾಣನಿಗಿಂತ ಉತ್ತಮನಾದ ಮತ್ತೊಬ್ಬನನ್ನು ಹೇಳಲಿಲ್ಲ. ಇದರಿಂದ ಸರ್ವೋತ್ತಮನಾದ ವ್ಯಕ್ತಿ ಪ್ರಾಣನೆಂದೇ ತಿಳಿಯುತ್ತದೆ. ಈ ಪ್ರಾಣಶಬ್ದದಿಂದ ಪ್ರತಿಪಾದ್ಯನಾದವನು ವಿಷ್ಣುವೇ ಆಗಿದ್ದಾನೆ ಹೊರತು, ಮುಖ್ಯಪ್ರಾಣದೇವರಲ್ಲ. ಆದ್ದರಿಂದ ವಿಷ್ಣುವೇ ಭೂಮನೆನಿಸುತ್ತಾನೆಂಬುದು ಒಟ್ಟು ಅಭಿಪ್ರಾಯ.

*ವ್ಯತಿಹಾರಾದ್ಯಧಿಕರಣಗಳಿಂದ ಇದು ಗತಾರ್ಥವಲ್ಲ*

'ವ್ಯತಿಹಾರೋ ವಿಶಿಂಷಂತಿ' ಎಂಬ ಸೂತ್ರದಲ್ಲಿಯೂ ಮುಂದೆ ಇದೇ ವಿಷಯವನ್ನು ಪ್ರತಿಪಾದಿಸುವರಿದ್ದಾರೆ. ಆದ್ದರಿಂದ ಪ್ರಶ್ನಪ್ರತಿವಚನಗಳನ್ನು ಉಪನಿಷತ್ತಿನಲ್ಲಿ ಅನುಸಂಧಾನ ಮಾಡಿಕೊಂಡು ವಿಷ್ಣುವೇ ಭೂಮನಾಗಿದ್ದಾನೆಂದು

ಸಮರ್ಥಿಸುವುದು ಯುಕ್ತವಲ್ಲವೆಂದು ಹೇಳಬಾರದು. ಹಾಗೂ 'ವ್ಯತಿಹಾರೋ ವಿಶಿಂಷಂತಿ' ಎಂಬ ಸೂತ್ರದಲ್ಲಿ ಅಧ್ಯಾಹಾರ ಮಾಡಿಕೊಳ್ಳಬೇಕೆಂಬುದನ್ನು ಹೇಳಿದ್ದು ಸತ್ಯ. ಆದರೆ ಅದನ್ನೇ ಇಲ್ಲಿ ಆಕ್ಷೇಪ ಮಾಡುತ್ತಿರುವುದರಿಂದ ಪುನುರುಕ್ತಿಗೆ ಅವಕಾಶವಿಲ್ಲವೆಂದು ತಿಳಿಯಬೇಕು.

ನ್ಯಾಯವಿವರಣ ಹಾಗೂ ಛಾಂದೋಗ್ಯ ಭಾಷ್ಯಗಳಲ್ಲಿ ಪ್ರಾಣಶಬ್ದಕ್ಕೆ ಮುಖ್ಯಪ್ರಾಣನೆಂದೇ ವ್ಯಾಖ್ಯಾನಿಸಿದ್ದಾರೆ. ಹಾಗಾದರೆ ಶ್ರುತಿಯಲ್ಲಿ ವಿಷ್ಣುವನ್ನು ಉಲ್ಲೇಖಿಸಿದಂತೆಯೇ ಆಗಲಿಲ್ಲವಲ್ಲಾ? ಎಂದು ಪ್ರಶ್ನಿಸಬಾರದು. ಮುಖ್ಯಪ್ರಾಣದೇವರ ಅನಂತರ ಸತ್ಯವು ಪ್ರಸ್ತುತವಾಗಿದೆ. ಅಂತಹ ಸತ್ಯಶಬ್ದದಿಂದ ವಿಷ್ಣುವೇ ಪ್ರತಿಪಾದ್ಯನೆಂದು ತಿಳಿಯಬೇಕು. ಆದ್ದರಿಂದಲೇ 'ಏವಂ ವಿಜಾನನ್ ಅತಿವಾದೀ' ಎಂದು ಮುಖ್ಯಪ್ರಾಣದೇವರನ್ನು ಯಾರು ತಿಳಿಯುತ್ತಾರೋ, ಅವನನ್ನು 'ಅತಿವಾದಿ' ಅಂದರೆ ಅಧಿಕಜ್ಞಾನಿಯೆಂದು ಶ್ರುತಿಯು ಪ್ರಶಂಸಿಸಿದೆ. ಅನಂತರ 'ಏಷ ತು ವಾ ಅತಿವದತಿ ಯಃ ಸತ್ಯೇನಾತಿವದತಿ' ಎಂಬುದಾಗಿ ಯಾರು ಸತ್ಯಸ್ವರೂಪನಾದ ಬ್ರಹ್ಮನನ್ನು ತಿಳಿಯುತ್ತಾರೋ ಅವನು ಅತ್ಯಧಿಕವಾದ ಜ್ಞಾನಿ ಎಂಬುದಾಗಿ 'ತು' ಶಬ್ದವು ಅತಿಶಯವನ್ನು ತಿಳಿಸುತ್ತಿದೆ. ಆದ್ದರಿಂದ ಸತ್ಯಶಬ್ದದಿಂದ ಪರಬ್ರಹ್ಮನೇ ಪ್ರತಿಪಾದ್ಯನೆಂದು ಸಿದ್ಧವಾಗುತ್ತದೆ. ಆದ್ದರಿಂದ ಶ್ರುತಿಯಲ್ಲಿ ವಿಷ್ಣುವಿನ ಉಲ್ಲೇಖವಿದೆ ಎಂದು ಸಿದ್ಧವಾಗುತ್ತದೆ.

### *ಪ್ರಾಣಶಬ್ದಾರ್ಥ ವಿಷಯದಲ್ಲಿ ಭಾಷ್ಯ ಹಾಗೂ ನ್ಯಾಯವಿವರಣೆಗಳಿಗೆ ವಿರೋಧವಿಲ್ಲ*

'ಪ್ರಾಣೋ ವಾ ಆಶಾಯಾ ಭೂಯಾನ್' ಎಂಬ ಛಾಂದೋಗ್ಯದಲ್ಲಿರುವ ಪ್ರಾಣಶಬ್ದಕ್ಕೆ 'ವಿಷ್ಣು' ಎಂಬರ್ಥವನ್ನು ಒಪ್ಪಿ ಸಿದ್ಧಾಂತ ಮಾಡಿರುತ್ತಾರೆ. ಆದರೆ ನ್ಯಾಯವಿವರಣದಲ್ಲಿ ಮುಖ್ಯಪ್ರಾಣನೆಂಬರ್ಥವನ್ನೂ ಒಪ್ಪಿಯೇ ಸಿದ್ಧಾಂತ ಮಾಡಿರುತ್ತಾರೆ. ವಿಚಾರ ಮಾಡಿದರೆ ನ್ಯಾಯವಿವರಣದ ಅಭಿಪ್ರಾಯವು ಅತ್ಯಂತ ಸಮಂಜಸವೆಂದೆನಿಸುತ್ತದೆ. ಏಕೆಂದರೆ ಪ್ರಾಣಶಬ್ದವು ವಿಷ್ಣುಪರವಾಗುವುದರಿಂದ 'ಏಷ ತು ವಾ ಅತಿವದಿತಿ' ಎಂಬಲ್ಲಿರುವ 'ತು' ಶಬ್ದವು ಸ್ವಾರಸ್ಯವಾಗುತ್ತದೆ. ಮತ್ತು ಆಶಾನಾಮಕಳಾದ ಭಾರತೀದೇವಿಗಿಂತ ಮುಖ್ಯಪ್ರಾಣದೇವರಿಗೆ ಉತ್ತಮತ್ವವನ್ನು ಹೇಳಿದಂತಾಗುತ್ತದೆ. ಅಷ್ಟೇ ಅಲ್ಲದೆ 'ಇಯದಾಮನನಾತ್' ಇತ್ಯಾದಿ ಸೂತ್ರಗಳಲ್ಲಿ ಹಾಗೂ ಛಾಂದೋಗ್ಯಭಾಷ್ಯದಲ್ಲೆಲ್ಲಾ ಪ್ರಾಣಶಬ್ದಕ್ಕೆ ಮುಖ್ಯಪ್ರಾಣನೆಂಬರ್ಥವನ್ನೇ ಅಂಗೀಕರಿಸಿದ್ದಾರೆ. ಹೀಗಿರುವಾಗ ಭಾಷ್ಯದಲ್ಲಿ ವಿಷ್ಣುವೆಂಬರ್ಥವನ್ನು ಅಂಗೀಕರಿಸಿದ್ದು ವಿರುದ್ಧವಾಗುತ್ತದಲ್ಲವೆ ಎಂಬ ವಿರೋಧಾಶಂಕೆಯು ಬರುತ್ತದೆ.

ಇದಕ್ಕೆ ಸಮಾಧಾನ ಹೀಗೆ - ಶ್ರೀಮದಾಚಾರ್ಯರು ಭಾಷ್ಯದಲ್ಲಿ ಪ್ರಾಣಶಬ್ದಕ್ಕೆ ವಿಷ್ಣುವೆಂಬರ್ಥವನ್ನು ಒಪ್ಪಲು ಅನೇಕ ಕಾರಣಗಳಿವೆ. ಪೂರ್ವಪಕ್ಷಕಾರರಂತೆ ನಾವು ಕೇವಲ ಪ್ರಾಣಪರತ್ವವನ್ನು ಮಾತ್ರ ಒಪ್ಪಿರುವುದಿಲ್ಲ. ವಿಷ್ಣುಪರತ್ವವನ್ನೂ ಸಹ ಒಪ್ಪುತ್ತೇವೆ. ಅಥವಾ ಮುಖ್ಯಪ್ರಾಣದೇವರಿಗಿಂತ ವಿಷ್ಣು ಉತ್ತಮನಾಗಿದ್ದಾನೆಂದು ಹೇಳಬೇಕಾಗಿದೆ. ಅಥವಾ ಅಂತರ್ಯಾಮಿತ್ವೇನ್ಯೆವ ಉತ್ಕ್ರಮಣಾದಿಲಿಂಗವನ್ನು ವಿಷ್ಣುವಿನಲ್ಲಿ ಕೂಡಿಸಬೇಕಾಗಿದೆ. ಈ ಎಲ್ಲಾ ಕಾರಣಕ್ಕೋಸ್ಕರ ವಿಷ್ಣುಪರತ್ವವನ್ನು ಪ್ರಾಣಶಬ್ದಕ್ಕೆ ಒಪ್ಪಿರುತ್ತಾರೆ. ಆದ್ದರಿಂದ ಬೇರೆ ಬೇರೆ ವಿವಕ್ಷೆಗಳಿಂದ ಪ್ರಾಣಶಬ್ದದಿಂದ ಮುಖ್ಯಪ್ರಾಣ ಹಾಗೂ ವಿಷ್ಣು ಪ್ರತಿಪಾದ್ಯರಾಗಿದ್ದಾರೆಂದು ಉತ್ತರಿಸಬೇಕಾಗಿಲ್ಲ. ಹೊರತಾಗಿ ಮುಖ್ಯಪ್ರಾಣ ಹಾಗೂ ವಿಷ್ಣು ಇಬ್ಬರೂ ಸಹ ಪ್ರತಿಪಾದ್ಯರೇ ಆಗಿದ್ದಾರೆಂದು ಒಪ್ಪಬೇಕು. ವಿಕಲ್ಪಪಕ್ಷವನ್ನು ಆಶ್ರಯಿಸಬಾರದು. ಸಮುಚ್ಚಯಪಕ್ಷವನ್ನೇ ಆಶ್ರಯಿಸಬೇಕು.

### *ಭಗವಂತನಲ್ಲಿ ಉತ್ಕ್ರಮಣ ಕ್ರಿಯೆಯ ಸಮರ್ಥನೆ*

ಉತ್ಕ್ರಮಣವೆಂಬ ಕ್ರಿಯೆಯು ವ್ಯಾಪ್ತನಾದ ಭಗವಂತನಲ್ಲಿ ಹೇಗೆ ಕೂಡುತ್ತದೆ? ಎಂಬ ಗೊಂದಲವು ಬೇಡ. ಎಲ್ಲೆಡೆ ವ್ಯಾಪ್ತವಾದ ಜಾತಿಯು ಮಡಿಕೆ ಮೊದಲಾದವುಗಳಲ್ಲಿ ಇರುತ್ತದೆಂದು ಒಪ್ಪಿದ್ದಾರೆ. ಮತ್ತು ಆಕಾಶ, ದಿಕ್

ಇವೆರಡೂ ವ್ಯಾಪ್ತವಾಗಿರುವುದರಿಂದ ಪರಸ್ಪರ ಸಂಯೋಗವಿದ್ದರೂ ತಾರ್ಕಿಕರು ನಿತ್ಯದ್ರವ್ಯಗಳಿಗೆ ಸಂಯೋಗವನ್ನು ಒಪ್ಪಿರುವುದಿಲ್ಲ. ಅದರಂತೆ ಎಲ್ಲೆಡೆ ಭಗವಂತನು ವ್ಯಾಪ್ತನಾಗಿದ್ದರೂ ಕ್ರಿಯೆಯನ್ನು ಒಪ್ಪಲು ಅಡ್ಡಿಯಿಲ್ಲ.

'ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚ' ಇವೇ ಮೊದಲಾದ ಪ್ರಮಾಣಗಳ ಆಧಾರದಿಂದ ಭಗವಂತನಲ್ಲಿರುವ ಕ್ರಿಯೆ ಮೊದಲಾದವು ಸ್ವಾಭಾವಿಕವಾಗಿರುತ್ತವೆ ಎಂದು ತಿಳಿದು ಬರುತ್ತಿದೆ. ಮತ್ತು ಭಗವಂತನಲ್ಲಿ ಇಂತಹ ಕ್ರಿಯೆಯಿರಲು ಅಣುತ್ವವೆಂಬ ಧರ್ಮವಿದೆ. ಅಣುವಾದ ಪದಾರ್ಥಗಳಲ್ಲಿ ಕ್ರಿಯೆಯಿರುವುದು ಲೋಕದಲ್ಲಿ ಕಾಣುತ್ತೇವೆ. ಭಗವಂತನಿಗೆ ಅಣುರೂಪವೂ ಇರುವುದರಿಂದ ಕ್ರಿಯೆಯನ್ನು ಹೇಳಲು ಏನೂ ತೊಂದರೆಯಿಲ್ಲ. ಮತ್ತು ಇವನಲ್ಲಿರುವ ಕ್ರಿಯೆಯು ಲೋಕವಿಲಕ್ಷಣವಾಗಿರುವುರಿಂದ ಉತ್ತರದೇಶಸಂಯೋಗ, ಪೂರ್ವದೇಶವಿಭಾಗ ಮೊದಲಾದ ಪ್ರಯೋಜನಗಳಿಲ್ಲದಿದ್ದರೂ ಸ್ವಾಭಾವಿಕವಾಗಿ ಇರುತ್ತದೆಂದು ಒಪ್ಪಬೇಕು.

ಆದ್ದರಿಂದ ಉತ್ಕ್ರಮಣವೆಂಬ ಪೂರ್ವಪಕ್ಷಲಿಂಗವು ವಿಷ್ಣುವಿನಲ್ಲಿ ಸಾವಕಾಶವಾಯಿತು. ಈ ಲಿಂಗದಿಂದ ಮುಖ್ಯಪ್ರಾಣನೇ ಭೂಮನಾಗಿದ್ದಾನೆಂದು ಸಾಧಿಸಲು ಬರುವುದಿಲ್ಲ.

*ಭಗವತ್ ಕ್ರಿಯೆಯು ಶಕ್ತಿ, ವ್ಯಕ್ತಿ ಎಂದು ಎರಡು ವಿಧ*

ಯಾವುದೇ ಪದಾರ್ಥದಲ್ಲಿ ಕ್ರಿಯೆ ಉಂಟಾಗಬೇಕೆಂದರೆ ಅದು ಅಣುರೂಪವಾಗಿರಬೇಕು. ಅಥವಾ ಮಧ್ಯಮ ಪರಿಮಾಣವುಳ್ಳದ್ದಾಗಿರಬೇಕು. ಏಕೆಂದರೆ ಕ್ರಿಯೆ ಎಂದರೆ ತಾನು ಯಾವ ಸ್ಥಳದಲ್ಲಿ ಇರುತ್ತದೋ, ಆ ಸ್ಥಳವನ್ನು ಬಿಟ್ಟು ಮತ್ತೊಂದು ಸ್ಥಳಕ್ಕೆ ಹೋಗುವುದು ಎಂದರ್ಥ. ಎಲ್ಲೆಡೆ ತುಂಬಿರುವ ವಸ್ತು ಇರುವ ಸ್ಥಳದಿಂದ ಹೊರಟು ಮತ್ತೊಂದು ಸ್ಥಳಕ್ಕೆ ಹೋಗಲು ಸಾಧ್ಯವೇ ಇಲ್ಲ. ಭಗವಂತನು ಎಲ್ಲೆಡೆ ವ್ಯಾಪ್ತನಾಗಿದ್ದಲ್ಲಿ ಇಂತಹ ಕ್ರಿಯೆಯನ್ನು ಒಪ್ಪುವುದು ಹೇಗೆ ? ಎಂಬುದೇ ಇಲ್ಲಿ ಬಂದಿರುವ ದೊಡ್ಡ ಗೊಂದಲ.

ಈ ಗೊಂದಲಕ್ಕೆ ಅನೇಕ ಬಗೆಯಲ್ಲಿ ಪರಿಹಾರಗಳನ್ನು ತಿಳಿದುಕೊಳ್ಳಬಹುದು. ಭಗವಂತನು ಅಣುವಿಗಿಂತ ಅಣುಸ್ವರೂಪನು, ಹಾಗೂ ಮಹತ್‌ಪದಾರ್ಥಕ್ಕಿಂತಲೂ ಮಹತ್‌ಸ್ವರೂಪನೂ ಆಗಿರುತ್ತಾನೆ. ಈ ವಿರುದ್ಧ ಧರ್ಮವು ಒಬ್ಬನೇ ಭಗವಂತನಲ್ಲಿ ಒಪ್ಪಲು ಹೇಗೆ ಸಾಧ್ಯ ? ಎಂಬುದು ಮತ್ತೊಂದು ಗೊಂದಲ. ಈ ಗೊಂದಲವನ್ನು ಪರಿಹರಿಸಿಕೊಂಡರೆ ಎಲ್ಲೆಡೆ ವ್ಯಾಪ್ತನಾದ ಭಗವಂತನಲ್ಲಿ ಕ್ರಿಯೆಯೂ ಸಹ ಉಪಪನ್ನವಾಗುತ್ತದೆಂದು ಸುಲಭವಾಗಿ ತಿಳಿಯಬಹುದು. ನ್ಯಾಯಸುಧಾ, ಅನುವ್ಯಾಖ್ಯಾನ ಹಾಗೂ ತತ್ವಪ್ರಕಾಶಿಕೆ ಮೊದಲಾದ ಗ್ರಂಥಗಳಲ್ಲಿ ಹೇಳಿರುವ ಪ್ರಮೇಯಗಳನ್ನು ಗ್ರಂಥಕಾರರು ಇಲ್ಲಿ ಸಂಗ್ರಹಿಸಿ, ಈ ಎಲ್ಲಾ ಪ್ರಶ್ನೆಗಳನ್ನು ಪರಿಹರಿಸುತ್ತಿದ್ದಾರೆ. ಭಗವಂತನಲ್ಲಿ ಯಾವಾಗ ಅಣುತ್ವವೆಂಬ ಧರ್ಮವಿರುತ್ತದೋ, ಆವಾಗಲೇ ಮಹತ್ತ್ವವೆಂಬ ಧರ್ಮವು ಅದೇ ಪ್ರಕಾರದಲ್ಲಿರುತ್ತದೆಂದು ನಾವು ಹೇಳುವುದಿಲ್ಲ, ಸ್ವಲ್ಪ ವ್ಯತ್ಯಾಸವಿದೆ. ಪ್ರತಿಯೊಂದು ಗುಣಗಳೂ ಸಹ ಶಕ್ತಿ ಹಾಗೂ ವ್ಯಕ್ತಿ ಸ್ವರೂಪದಲ್ಲಿರುತ್ತದೆ. ಅಣುತ್ವವು ಯಾವಾಗ ಶಕ್ತಿಸ್ವರೂಪದಲ್ಲಿರುತ್ತದೋ, ಆವಾಗ ಮಹತ್ತ್ವವು ವ್ಯಕ್ತಿರೂಪದಲ್ಲಿರುತ್ತದೆ. ಶಕ್ತಿರೂಪವೆಂದರೆ ಆ ಸಂದರ್ಭದಲ್ಲಿ ಆ ರೂಪದಿಂದ ಕೆಲಸವಾಗುತ್ತಿರುವುದಿಲ್ಲ ಎಂದರ್ಥ. ವ್ಯಕ್ತಿಸ್ವರೂಪವೆಂದರೆ ಅದೇ ಸಂದರ್ಭದಲ್ಲಿ ಆ ರೂಪದಿಂದ ಆ ಕಾರ್ಯವು ನಡೆಯುತ್ತಿರುತ್ತದೆ ಎಂದರ್ಥ. ಆದ್ದರಿಂದ ಅಣುತ್ವ ಹಾಗೂ ಮಹತ್ತ್ವಗಳು ನಿರಂತರವಾಗಿ ಭಗವಂತನಲ್ಲಿ ಇದ್ದರೂ ಸಹ ಎರಡೂ ಧರ್ಮಗಳು ಕೇವಲ ಶಕ್ತಿರೂಪದಿಂದಾಗಲೀ ಅಥವಾ ವ್ಯಕ್ತಿರೂಪದಿಂದಾಗಲೀ, ಇರುವುದಿಲ್ಲವೆಂಬ ಸೂಕ್ಷ್ಮಪ್ರಮೇಯವನ್ನು ಗಮನಿಸಬೇಕು. ಅಂತೂ ಭಗವಂತನಲ್ಲಿ ಅಣುತ್ವವು ಯಾವಾಗ ವ್ಯಕ್ತಿಸ್ವರೂಪದಿಂದ ಇರುತ್ತದೋ, ಆವಾಗ ಮಹತ್ತ್ವವು ವ್ಯಕ್ತಿಸ್ವರೂಪದಿಂದ ಇರುವುದಿಲ್ಲವೆಂದಂತಾಯಿತು. ಈ ಬಗೆಯಲ್ಲಿ ಚಿಂತಿಸಿದಾಗ ಅಣುಸ್ವರೂಪನಾದ ಭಗವಂತನಿಗೆ ಪೂರ್ವದೇಶ ವಿಭಾಗ,

ಉತ್ತರದೇಶ ಸಂಯೋಗ ಮೊದಲಾದವುಗಳೆಲ್ಲವೂ ಸಿದ್ಧವಾಗುತ್ತವೆ. ಯಾವಾಗ ಮಹತ್ತ್ವವು ವ್ಯಕ್ತವಾಗಿರುತ್ತದೋ, ಆವಾಗ ಅಣುತ್ವವು ಶಕ್ತಿರೂಪದಲ್ಲಿರುವುದರಿಂದ ಪೂರ್ವದೇಶವಿಭಾಗ ಅಥವಾ ಉತ್ತರದೇಶಸಂಯೋಗಗಳನ್ನು ಒಪ್ಪಲು ಸಾಧ್ಯವಿಲ್ಲ. ಅಂದರೆ ವ್ಯಕ್ತನಾದ ಅಣುಸ್ವರೂಪವುಳ್ಳ ಭಗವಂತನಲ್ಲಿ ಕ್ರಿಯೆಯು ನಡೆಯುತ್ತದೆಂದು ಇದರ ಅಭಿಪ್ರಾಯ. ಭಗವಂತನಲ್ಲಿ ಅನೇಕ ಕ್ರಿಯೆಗಳಿವೆ. ಸೃಷ್ಟಿ ಮಾಡುವ ಕ್ರಿಯೆ, ಸಂಹಾರ ಮಾಡುವ ಕ್ರಿಯೆ ಇತ್ಯಾದಿಯಾಗಿ ಎಣಿಸಲು ಸಾಧ್ಯವಾಗದಷ್ಟು ಕ್ರಿಯೆಗಳಿವೆ. ಇವೆಲ್ಲವೂ ಸಹ ಭಗವತ್‌ಸ್ವರೂಪವೇ ಎಂಬುದರಲ್ಲಿ ಸಂದೇಹವಿಲ್ಲ. ಆದರೆ ಸೃಷ್ಟಿ ಮಾಡುವ ಕ್ರಿಯೆಯು ಭಗವತ್‌ಸ್ವರೂಪವಾದ್ದರಿಂದ ನಿರಂತರವಾಗಿರುವುದಾದರೆ, ನಿರಂತರ ಸೃಷ್ಟಿಯೇ ಆಗುತ್ತಿರಬೇಕಾಗುತ್ತದೆ. ಸಂಹಾರ, ನಿಯಮನ ಮೊದಲಾದ ಕ್ರಿಯೆಗಳು ನಡೆಯಲು ಸಾಧ್ಯವಿಲ್ಲದಂತಾಗುತ್ತದೆ. ಈಗಾಗಲೇ ಹೇಳಿದಂತೆ ಪ್ರತಿಯೊಂದೂ ಕ್ರಿಯೆಯನ್ನು ಶಕ್ತ್ಯಾತ್ಮನಾ, ವ್ಯಕ್ತ್ಯಾತ್ಮನಾ ವಿಭಾಗ ಮಾಡಿಕೊಂಡಾಗ ಯಾವಾಗ ಸೃಷ್ಟಿ ಸಮಯವು ಪ್ರಾಪ್ತವಾಗುತ್ತದೋ, ಆವಾಗ ಮಾತ್ರ ಸೃಷ್ಟಿ ಮಾಡುವ ಕ್ರಿಯೆಯು ಅಭಿವ್ಯಕ್ತವಾಗುತ್ತದೆ. ಸಂಹಾರ ಮಾಡುವ ಕಾಲವು ಪ್ರಾಪ್ತವಾದಾಗ ಸಂಹಾರ ಮಾಡುವಂತಹ ಕ್ರಿಯೆಯು ಪ್ರಾಪ್ತವಾಗುತ್ತದೆ. ಹೀಗೆ ಹೇಳಿದಾಗ ಎಲ್ಲಾ ವಿಧದ ಸಮಾಧಾನಗಳನ್ನು ಹೇಳಿದಂತಾಗುತ್ತದೆ. ಶ್ರೀರಾಮಚಂದ್ರನು ರಾವಣನನ್ನು ಕೊಂದನು ಎಂದು ಹೇಳಿದಾಗ ರಾವಣನ ಹನನವೆಂಬ ಕ್ರಿಯೆಯು ಶ್ರೀರಾಮಚಂದ್ರನಲ್ಲಿ ನಿರಂತರವಾಗಿ ಇರುತ್ತದೆ. ಅಂದ ಮಾತ್ರಕ್ಕೆ ಯಾವಾಗಲೂ ರಾವಣನನ್ನು ಸಂಹಾರ ಮಾಡುತ್ತಲೇ ಇರುತ್ತಾನೆ ಎಂದರ್ಥವಲ್ಲ. ಹೊರತಾಗಿ ಯಾವಾಗ ಆ ಸಮಯವು ಪ್ರಾಪ್ತವಾಗುತ್ತದೋ, ಆ ಸಂದರ್ಭದಲ್ಲಿ ಮಾತ್ರ ರಾವಣನನ್ನು ಕೊಲ್ಲುವಂತಹ ಕ್ರಿಯೆಯು ಅಭಿವ್ಯಕ್ತವಾಗುತ್ತದೆ. ಉಳಿದ ಕಾಲಗಳೆಲ್ಲಾ ಶಕ್ತಿಸ್ವರೂಪದಲ್ಲಿರುತ್ತದೆ ಎಂದು ತಿಳಿಯ ಬೇಕಾದ ಮುಖ್ಯಪ್ರಮೇಯ.

ಹೀಗೆ ಭಗವಂತನ ಕ್ರಿಯೆಗಳು ಅಣುತ್ವ, ಮಹತ್ತ್ವ ಮೊದಲಾದ ಗುಣಗಳು ಶಕ್ತಿ ಹಾಗೂ ವ್ಯಕ್ತಿಸ್ವರೂಪ ಎಂಬ ಎರಡು ಬಗೆಯನ್ನು ಹೊಂದಿರುತ್ತವೆ ಎಂದಷ್ಟೇ ಅಲ್ಲ. ಭಗವಂತನಿಗೆ ಅನೇಕ ರೂಪಗಳು ಪ್ರಮಾಣಸಿದ್ಧವಾಗಿದೆ. ಒಂದು ರೂಪದಲ್ಲಿ ಅಣುತ್ವವು ವ್ಯಕ್ತವಾಗಬಹುದು. ಮತ್ತೊಂದು ರೂಪದಲ್ಲಿ ಮಹತ್ತ್ವವು ವ್ಯಕ್ತವಾಗಬಹುದು. ಹೀಗೆ ರೂಪಗಳ ಭೇದದಿಂದಲೂ ಅಣುತ್ವ ಮಹತ್ತ್ವಗಳನ್ನು ಉಪಪಾದಿಸುವುದು ಸುಲಭ. ಸವಿಶೇಷ ಭೇದವಿರುವುದರಿಂದ ಹೀಗೆ ಭೇದದ ಕಾರ್ಯವು ಆಯಾ ರೂಪಗಳಲ್ಲಿ ನಡೆಯುತ್ತವೆ. ಅಥವಾ ಅಚಿಂತ್ಯಾತ್ಮಕ ಶಕ್ತಿಯನ್ನು ಹೊಂದಿರುವ ಭಗವಂತನಲ್ಲಿ ನಮ್ಮ ಕಲ್ಪನೆಗೆ ಮೀರಿದ ವಿಚಾರಗಳೇ ಇರುತ್ತವೆ.

ಸೂತ್ರದಲ್ಲಿ 'ಸಂಪ್ರಸಾದಾತ್' ಎಂದು ಹೇಳಿದ್ದಾರೆ. 'ಸಂಪ್ರಸಾದಾತ್' ಎಂಬ ಶಬ್ದಕ್ಕೆ ಪೂರ್ಣಸುಖವುಳ್ಳವನಾದ್ದರಿಂದ ಎಂದರ್ಥ. ಒಂದು ವೇಳೆ 'ಸಂಪ್ರಸಾದಾತ್' ಶಬ್ದವನ್ನು ಬಳಸದೇ 'ಪೂರ್ಣಸುಖಾತ್' ಎಂದೇ ಹೇಳಿದ್ದರೆ, ಸುಖವಿರುವುದಾದರೆ ದುಃಖವು ಬರಲಿ, ಅಥವಾ ಸುಖದ ಜೊತೆಗೆ ದುಃಖವು ಅವಿನಾಭೂತವಾಗಿದೆ, ಇತ್ಯಾದಿಯಾಗಿ ಪ್ರಶ್ನೆಗಳು ಹುಟ್ಟುತ್ತಿದ್ದವು. 'ಸಂಪ್ರಸಾದಾತ್' ಶಬ್ದವನ್ನು ಬಳಸಿದ್ದರಿಂದ ಸುಖದ ಕಾರ್ಯವೆನಿಸಿದ ಪ್ರಸಾದವು ಈಶ್ವರನಲ್ಲಿ ಪೂರ್ಣವಾಗಿರುವುದರಿಂದ ದುಃಖಕ್ಕೆ ಅವಕಾಶವಿಲ್ಲ. ಮತ್ತು ಜ್ಞಾನದಂತೆ ಸುಖವೂ ಸಹ ದುಃಖದಿಂದ ಅವಿನಾಭೂತವಾಗಿಲ್ಲ ಎಂಬೆರಡು ಪ್ರಮೇಯಗಳನ್ನು ಸೂತ್ರಕಾರರು ಸೂಚಿಸಿದ್ದಾರೆ. ಉಪನಿಷತ್ತಿನಲ್ಲಿರುವ ವಿಷಯವಾಕ್ಯಕ್ಕೆ ಅನುಗುಣವಾಗಿಯೇ ಸೂತ್ರಗಳ ಕ್ರಮವಿರುವುದರಿಂದ ಸೂತ್ರಗಳ ವಿನ್ಯಾಸ ಶೈಲಿಯು ಅತ್ಯಂತ ಅರ್ಥಪೂರ್ಣವಾಗಿದೆ.

*ಶಾಂಕರಭಾಷ್ಯ ವಿಮರ್ಶೆ*

ಶಾಂಕರಭಾಷ್ಯದಲ್ಲಿ 'ಭೂಮಾ ಸಂಪ್ರಸಾದಾತ್ ಅಧ್ಯುಪದೇಶಾತ್' ಎಂಬ ಸೂತ್ರವನ್ನು ವ್ಯಾಖ್ಯಾನಿಸುತ್ತಾ ಅಧಿಕರಣ ಶರೀರವನ್ನು ಹೀಗೆ ರಚನೆ ಮಾಡಿದ್ದಾರೆ. ನಾರದರಿಗೆ ಸನತ್ಕುಮಾರರು ಬ್ರಹ್ಮೋಪದೇಶವನ್ನು ಮಾಡುತ್ತಾ

'ನಾಮ ಬ್ರಹ್ಮೇತಿ ಉಪಾಸೀತ' ಎಂದು ಹೇಳಿದರು. ಆವಾಗ ನಾರದರು 'ಅಸ್ತಿ ಭಗವಃ ನಾಮ್ನೋ ಭೂಯಃ' ನಾಮಕ್ಕಿಂತ ಮಿಗಿಲಾದುದು ಯಾವುದು? ಎಂದು ಪ್ರಶ್ನಿಸುತ್ತಾರೆ. ಪುನಃ ಸನತ್ಕುಮಾರರು 'ವಾಗ್ವಾವ ನಾಮ್ನೋ ಭೂಯಸೀ' ಎಂದು ಉತ್ತರಿಸಿದರು. ಹೀಗೆ ಪ್ರಶ್ನೋತ್ತರಗಳು ನಡೆದು ಕೊನೆಯಲ್ಲಿ 'ಯೋ ವೈ ಭೂಮಾ ತತ್ಸುಖಮ್' ಎಂದು ಪ್ರಾಣನನ್ನು ಭೂಮನೆಂದು ಉಪದೇಶಿಸಿದರು. ಆದ್ದರಿಂದ ಜಡಭೂತವಾದ ಪ್ರಾಣವೇ ಭೂಮನೆಂದು ಪೂರ್ವಪಕ್ಷ.

ಸನತ್ಕುಮಾರರು ಪ್ರಾಣನ ತನಕ ಉಪದೇಶಿಸಿ ಅನಂತರ 'ಏಷ ತು ವಾ ಅತಿವದಿತಿ ಯ ಸತ್ಯೇನ ಅತಿವದತಿ' 'ಸತ್ಯನನ್ನು ಯಾರು ತಿಳಿಯುತ್ತಾನೋ, ಅವನೇ ಅತಿವಾದಿ' ಎಂದು ಹೇಳಿದ್ದಾರೆ. ಇಲ್ಲಿ 'ಸತ್ಯ' ಶಬ್ದಕ್ಕೆ ಬ್ರಹ್ಮನೆಂದರ್ಥ. 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಎಂಬುದಾಗಿ ತೈತ್ತಿರೀಯ ಶ್ರುತಿಯು ಬ್ರಹ್ಮನನ್ನೇ ಸತ್ಯವೆನ್ನುತ್ತಿದೆ. ಅದನ್ನೇ 'ಯೋ ವೈ ಭೂಮಾ ತತ್ಸುಖಮ್' ಎಂದು ಭೂಮನೆಂದು ಉಪದೇಶಿಸಲಾಗಿದೆ. ಆದ್ದರಿಂದ ನಿರ್ವಿಶೇಷಬ್ರಹ್ಮನೇ ಭೂಮನು ಹೊರತು, ಜಡವಾದ ವಾಯುವಲ್ಲ. ಹೀಗೆ ನಿರ್ವಿಶೇಷ ಬ್ರಹ್ಮನ ಪ್ರತಿಪಾದನೆಗಾಗಿ ಈ ಪಾದವು ಹೊರಟಿರುವುದರಿಂದ ಭೂಮಾಧಿಕರಣವು ನಿರ್ವಿಶೇಷಬ್ರಹ್ಮನನ್ನೇ ಭೂಮನೆನ್ನುತ್ತದೆ ಎಂದು ಸಿದ್ಧಾಂತ ಮಾಡಿದ್ದಾರೆ.

ಪೂರ್ವಪಕ್ಷ ಮತ್ತು ಸಿದ್ಧಾಂತಗಳೇ ಇವರ ಮತದಲ್ಲಿ ಕೂಡುವುದಿಲ್ಲ. ಏಕೆಂದರೆ ಪ್ರಾರಂಭದಲ್ಲಿ ಆತ್ಮಶಬ್ದ ಹಾಗೂ ಸುಖಶಬ್ದಗಳು ಕೇಳಿಸುತ್ತಿವೆ. ಜಡದಲ್ಲಿ ಇವೆರಡೂ ಸಹ ಉಪಪನ್ನವಾಗುವುದಿಲ್ಲ. ಮತ್ತು ಮಾತನಾಡುವಿಕೆ, ಚರ್ಚೆ ಮಾಡುವಿಕೆ ಮೊದಲಾದ ಚೇತನನ ಧರ್ಮವು ಪ್ರಾಣನಲ್ಲಿ ಕೇಳಿಸುತ್ತಿವೆ. ಇವೂ ಸಹ ಜಡದಲ್ಲಿ ಅನುಪಪನ್ನವಾಗುತ್ತವೆ. ಹಾಗಾಗಿ ಜಡವಾಯು ಭೂಮನೆಂದು ಪೂರ್ವಪಕ್ಷ ಮಾಡಿದ್ದೇ ತಪ್ಪು.

ಸಿದ್ಧಾಂತವೂ ಸಹ ತಪ್ಪು. ಉಪಕ್ರಮದಲ್ಲಿ ಗುಣಜ್ಯೇಷ್ಠತ್ವವು ಕೇಳಿಸುತ್ತಿದೆ. ನಿರ್ವಿಶೇಷನಾದ ನಿರ್ಗುಣಬ್ರಹ್ಮನಲ್ಲಿ ಉತ್ತಮವಾದ ಗುಣಗಳಿರಲು ಹೇಗೆ ಸಾಧ್ಯ? ಮತ್ತು ಯಾರು ಭೂಮನನ್ನು ತಿಳಿಯುತ್ತಾರೋ, ಅವನು ಬಯಸಿದ್ದನ್ನೆಲ್ಲಾ ಹೊಂದುತ್ತಾನೆಂಬ ಫಲವನ್ನು ಶ್ರುತಿಯು ಹೇಳುತ್ತಿದೆ. ಆದರೆ ಅದ್ವೈತಮತದಲ್ಲಿ ನಿರ್ವಿಶೇಷಬ್ರಹ್ಮನ ಜ್ಞಾನದಿಂದ ಅಂತಹ ಅಪೇಕ್ಷೆಗಳೇ ಉಂಟಾಗುವುದಿಲ್ಲವೆಂದು ಸಕಲ ನಿವೃತ್ತಿಯನ್ನು ಫಲವನ್ನಾಗಿ ಹೇಳಿದ್ದಾರೆ. ಈ ಎಲ್ಲಾ ಕಾರಣಗಳಿಂದ ಅದ್ವೈತಿಗಳ ಅಧಿಕರಣಶರೀರವು ಅಯುಕ್ತವಾಗಿದೆಯೆಂದು ತಿಳಿಯಬೇಕು.

### *ಅದ್ವೈತಿಗಳ ಸೂತ್ರಾರ್ಥ ವಿಮರ್ಶೆ*

ಅದ್ವೈತಿಗಳ ಪ್ರಥಮ ಸೂತ್ರಾರ್ಥ ಹೀಗಿದೆ - 'ಸಂಪ್ರಸಾದಾತ್' 'ಅಧಿ ಉಪದೇಶಾತ್ ಭೂಮಾ ಪರಮಾತ್ಮೈವ' 'ಸಂಪ್ರಸಾದಾತ್' ಎಂದರೆ 'ನಿದ್ರಾವಸ್ಥೆ' ಎಂದರ್ಥ. ನಿದ್ರಾವಸ್ಥೆಯಲ್ಲಿ ಕ್ರಿಯಾಶೀಲವಾದ ಪ್ರಾಣವಾಯುವನ್ನು ಲಕ್ಷಣಯಾ ಸ್ವೀಕರಿಸಬೇಕು. ಅಂತಹ ಪ್ರಾಣವಾಯುವಿಗಿಂತ ಅಧಿಕವಾಗಿ 'ಭೂಮ್ನಃ' ಭೂಮನನ್ನು 'ಉಪದೇಶಾತ್' 'ಉಪದೇಶ ಮಾಡಿರುವುದರಿಂದ ಬ್ರಹ್ಮನೇ ಭೂಮನಾಗುತ್ತಾನೆ' ಎಂದು ವ್ಯಾಖ್ಯಾನಿಸುತ್ತಾರೆ.

ಇದು ತಪ್ಪು. 'ಸಂಪ್ರಸಾದ' ಶಬ್ದಕ್ಕೆ 'ಸುಖ' ಎಂಬ ಯೌಗಿಕಾರ್ಥವನ್ನು ವಿವಕ್ಷಿಸಲು ಬರುವಾಗ ಲಕ್ಷಣಯಾ 'ಪ್ರಾಣವಾಯು' ಎಂಬ ವ್ಯಾಖ್ಯಾನವು ಅಯುಕ್ತ. ಮತ್ತು ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ ಯಾವ ಸೂತ್ರಗಳು ತತ್ವಜ್ಞಾನಕ್ಕೋಸ್ಕರ ಹೊರಟವೆಯೋ, ಅಂತಹ ಸೂತ್ರಗಳಲ್ಲಿ ಸಾಧ್ಯದ ಅಧ್ಯಾಹಾರವು ಇರುವುದಿಲ್ಲ. 'ಆನಂದಮಯೋಽಭ್ಯಾಸ್ಯಾತ್' ಎಂಬ ಸೂತ್ರವು ಬ್ರಹ್ಮನನ್ನು ಆನಂದಮಯನೆನ್ನುತ್ತಿದೆ. ಈ ಸೂತ್ರವು ಸ್ವಪಕ್ಷಸಾಧಕವಾಗಿರುವುದರಿಂದ ಪಕ್ಷ ಹಾಗೂ ಹೇತುಗಳನ್ನಷ್ಟೇ ಹೇಳಲಾಗಿದೆ. ಸಾಧ್ಯವನ್ನು ಹೇಳಿರುವುದಿಲ್ಲ. ಆದರೆ 'ನೇತರೋಽನುಪಪತ್ತೇಃ' ಇತ್ಯಾದಿಯಾದ ಪರಪಕ್ಷ ನಿರಾಸಕವಾದ ಸೂತ್ರಗಳಲ್ಲಿ 'ನೇತರಃ' ಎಂಬುದಾಗಿ ಸಾಧ್ಯವನ್ನೂ ಹೇಳಿರುತ್ತಾರೆ. ಪ್ರಕೃತ ಅದ್ವೈತಿಗಳು 'ಭೂಮಾ ಸಂಪ್ರಸಾದಾತ್' ಇತ್ಯಾದಿ ಸೂತ್ರವು ಪ್ರಾಣನು ಭೂಮನಲ್ಲವೆಂದು

ಪರಪಕ್ಷ ನಿರಾಸಕ್ಕೋಸ್ಕರ ಹೊರಟಿದೆ ಎಂದು ಹೇಳುವುದಾದರೆ ಇಲ್ಲಿಯೂ ಸಹ 'ನ ಪ್ರಾಣಃ' ಎಂಬ ಸಾಧ್ಯದ ನಿರ್ದೇಶವಿರಬೇಕಿತ್ತು. ಆದ್ದರಿಂದ ಇದನ್ನು ಸ್ವಪಕ್ಷಸಾಧಕಸೂತ್ರವೆಂದೇ ಪರಿಗಣಿಸಬೇಕಾಗುತ್ತದೆ. ಮತ್ತು ಪ್ರಾಣನಿಗಿಂತ ಭೂಮನು ಉತ್ತಮನೆಂದು ಹೇಳಿರುವ ಕಾರಣ ಬ್ರಹ್ಮನೇ ಭೂಮನಾಗುತ್ತಾನೆಂಬ ಸಾಧನೆಯನ್ನು ಅದ್ವೈತಿಗಳಿಂದ ಮಾಡಲಾಗದು. ಪ್ರಾಣನ ಉಪದೇಶದ ಅನಂತರ ಸತ್ಯನಾಮಕನಾದ ಬ್ರಹ್ಮನ ಉಪದೇಶವು ಹೇಗೆ ಇದೆಯೋ, ಅದರಂತೆ ವಿಜ್ಞಾನ, ಮತಿ, ಶ್ರದ್ಧಾ ಇವುಗಳ ಉಪದೇಶವೂ ಸಹ ಅಲ್ಲಿಯೇ ಇರುತ್ತದೆ. ಸತ್ಯನು ಬ್ರಹ್ಮನೆಂದು ಅದ್ವೈತಿಗಳು ಹೇಳುವುದಾದರೆ ವಿಜ್ಞಾನ, ಮತಿ, ಶ್ರದ್ಧಾ ಇವುಗಳೂ ಸಹ ಬ್ರಹ್ಮನೇ ಆಗಬೇಕಾಗುತ್ತದೆ. ಆದ್ದರಿಂದ ಪ್ರಾಣನಿಗಿಂತ ಉತ್ತಮವೆಂಬ ಉಪದೇಶವು ಬ್ರಹ್ಮತ್ವದ ನಿರ್ಧಾರಕ್ಕೆ ಕಾರಣವಾಗುವುದಿಲ್ಲ.

'ಧರ್ಮೋಪಪತ್ತೇಶ್ಚ' ಎಂಬ ಎರಡನೆಯ ಸೂತ್ರಕ್ಕೆ 'ಯತ್ರ ನಾನ್ಯತ್ಪಶ್ಯತಿ' ಯಾವುದೇ ವ್ಯವಹಾರವಿಲ್ಲವೆಂಬ ಧರ್ಮವನ್ನು ಶ್ರುತಿಯು ಹೇಳುತ್ತಿರುವುದರಿಂದ ನಿರ್ವಿಶೇಷ ಬ್ರಹ್ಮನ ಧರ್ಮವನ್ನು ಹೇಳಿದಂತಾಗುತ್ತದೆ. ಈ ಕಾರಣದಿಂದಲೂ ನಿರ್ವಿಶೇಷ ಬ್ರಹ್ಮನೇ ಭೂಮನೆಂದು ವ್ಯಾಖ್ಯಾನಿಸುತ್ತಾರೆ.

ಇದೂ ಸಹ ಸರಿಯಲ್ಲ. ಭೂಮನನ್ನು ಬೇರೆಯವರು ತಿಳಿಯುವುದಿಲ್ಲವೆಂದು ಶ್ರುತಿ ಹೇಳುತ್ತಿದೆ ಹೊರತು, ಭೂಮನಿಗೆ ದ್ರಷ್ಟೃತ್ವವನ್ನು ನಿಷೇಧ ಮಾಡುತ್ತಿಲ್ಲ. ಒಂದು ವೇಳೆ ನಿಷೇಧವನ್ನೇ ಮಾಡಿದ್ದಲ್ಲಿ ನಿರ್ವಿಶೇಷನ ಬ್ರಹ್ಮನಧರ್ಮವೆಂದು ಪರಿಗಣಿಸಬಹುದಿತ್ತು. ಅಷ್ಟೇ ಅಲ್ಲದೆ 'ಏವಂ ಪಶ್ಯನ್ ಏವಂ ವಿಜಾನನ್' ಇತ್ಯಾದಿಯಾಗಿ ದರ್ಶನ ಮೊದಲಾದ ವ್ಯವಹಾರವನ್ನೂ ಸಹ ಹೇಳಿರುವುದರಿಂದ ದರ್ಶನಾದಿಗಳ ವ್ಯವಹಾರಾಭಾವವು ಶ್ರುತವಾಗಿದೆಯೆಂಬ ಪರಿಕಲ್ಪನೆಯೇ ತಪ್ಪಾಗುತ್ತದೆ.

ಪ್ರತಿಯೊಂದು ಅಧಿಕರಣಗಳಂತೆ ಈ ಅಧಿಕರಣದಲ್ಲಿಯೂ 'ಧರ್ಮೋಪಪತ್ತೇಃ' ಎಂಬ ಸೂತ್ರದಲ್ಲಿ ನಿರ್ಧರ್ಮತ್ವಕ್ಕೆ ವಿರುದ್ಧವಾದ ಧರ್ಮವನ್ನು ಸೂತ್ರವು ಹೇಳುತ್ತಿರುವುದರಿಂದ ಅದ್ವೈತಿಗಳಿಗೆ ಈ ಅಧಿಕರಣವು ಕಂಟಕವೇ ಆಗಿದೆಯೆಂದು ತಿಳಿಯಬೇಕು.

*ರಾಮಾನುಜ ಭಾಷ್ಯದ ಅಧಿಕರಣ ವಿಮರ್ಶೆ*

ರಾಮಾನುಜರ ಭೂಮಾಧಿಕರಣ ಹೀಗಿದೆ - ಪ್ರಕರಣದಲ್ಲಿರುವ 'ಭೂಮಾ' ಎಂಬ ಶಬ್ದವು ಲಕ್ಷಣಾ ವೃತ್ತಿಯಿಂದ ಜೀವನನ್ನೇ ಪ್ರತಿಪಾದಿಸುತ್ತದೆ. ಕಾರಣವೇನೆಂದರೆ ಪ್ರಾಣಶಬ್ದವು ಜಡವಾಯುವನ್ನು ಪ್ರತಿಪಾದಿಸಲು ಪ್ರಕರಣದಲ್ಲಿ ಹೇಳಲ್ಪಟ್ಟ ಪಿತೃತ್ವ, ಹಿಂಸ್ಯತ್ವ ಮೊದಲಾದ ಬಾಧಕಗಳಿವೆ. ಆದ್ದರಿಂದ ಚೇತನನ್ನೇ ಪ್ರತಿಪಾದಿಸಬೇಕು. ಪ್ರಾಣಶಬ್ದದ ಸಾಹಚರ್ಯವಿರುವ ಪ್ರಯುಕ್ತ ಜೀವಾತ್ಮನೇ ಪ್ರಾಣನಾಗುತ್ತಾನೆ. ಮೋಕ್ಷವನ್ನು ಹೊಂದಿದ ನಂತರ ಪೂರ್ಣಸುಖಸ್ವರೂಪನಾಗುವುದರಿಂದ 'ಭೂಮಾ ತತ್ಸುಖಮ್' ಪೂರ್ಣಸುಖಸ್ವರೂಪನಾದ ಭೂಮನೆಂದರೆ ಜೀವಾತ್ಮನೇ ಆಗುತ್ತಾನೆಂಬುದು ಯುಕ್ತವಾಗಿದೆ. ಇಷ್ಟು ಪೂರ್ವಪಕ್ಷ.

ಜೀವನಿಗಿಂತ ಬ್ರಹ್ಮತತ್ವವು ಉತ್ತಮವೆಂದು 'ಸತ್ಯ' ಶಬ್ದದಿಂದ ತಿಳಿಯುತ್ತಿದೆ. ಮತ್ತು ಪ್ರಾಣಜ್ಞಾನಿಯನ್ನು ಅತಿವಾದಿಯೆಂದು ಸತ್ಯನನ್ನು ತಿಳಿದವನು ಅತಿಶಯವಾದ ಅತಿವಾದಿಯೆಂದು ಶ್ರುತಿಯು ಉಪಾಸಕನ ಭೇದವನ್ನು ಹೇಳುತ್ತಿದೆ. ಆದ್ದರಿಂದಲೇ ಪ್ರಾಣನೇ ಬೇರೆ, ಭೂಮನೇ ಬೇರೆ ಎಂಬ ವಿಷಯವು ಸ್ಪಷ್ಟವಾಗುತ್ತದೆ. 'ಸತ್ಯಂ ಜ್ಞಾನ ಅನಂತಂ ಬ್ರಹ್ಮ' ಎಂಬ ಶ್ರುತಿಯ ಆಧಾರದಿಂದ ಸತ್ಯ ಶಬ್ದದ ಪ್ರತಿಪಾದ್ಯನು ಬ್ರಹ್ಮನೇ ಆಗುತ್ತಾನೆ. ಇಷ್ಟು ಸಿದ್ಧಾಂತ.

ರಾಮಾನುಜರ ಈ ಅಧಿಕರಣ ಶರೀರವು ಅಯುಕ್ತವಾಗಿದೆ. ಏಕೆಂದರೆ ಅವರಪೂರ್ವಪಕ್ಷವು

ಸಮಂಜಸವಾಗಿದ್ದಲ್ಲಿ ಸಿದ್ಧಾಂತವು ಸರಿಯೆನ್ನಬಹುದಿತ್ತು. ಆದರೆ ಪೂರ್ವಪಕ್ಷವೇ ಸರಿಯಿಲ್ಲ. ಪ್ರಾಣಶಬ್ದಕ್ಕೆ ಅಭಿಮಾನಿ ಚೇತನವೆಂದು ಅರ್ಥೈಸಿದರೂ ಸಹ ಪಿತೃತ್ವ ಹಿಂಸತ್ವ ಮೊದಲಾದ ಧರ್ಮಗಳನ್ನು ಕೂಡಿಸಬಹುದು. ಪಿತೃತ್ವಾದಿ ಬಾಧಕಗಳಿರುವುದರಿಂದ ಜೀವನಲ್ಲಿ ಲಕ್ಷಣಾ ಮಾಡುವುದು ಅನಿವಾರ್ಯವೆಂಬ ಅವರ ವಿಚಾರದಲ್ಲಿ ಅರ್ಥವೇ ಇಲ್ಲ. ಮತ್ತು ತಂದೆ, ತಾಯಿ, ಆಚಾರ್ಯ ಮೊದಲಾದ ಜೀವರ ಪ್ರಾಣವು ಉತ್ಕ್ರಾಂತವಾಗುತ್ತದೆಂದು ಶ್ರುತಿಯು ಹೇಳುತ್ತಿದೆ. ಪ್ರಾಣನೇ ಜೀವನಾದರೆ, ಜೀವನ ದೆಸೆಯಿಂದ ಜೀವನು ಉತ್ಕ್ರಾಂತನಾಗುತ್ತಾನೆ ಎಂದು ಹೇಳಿದಂತಾಗುತ್ತದೆ. ಇದು ತಪ್ಪಲ್ಲವೇ? ಪ್ರಾಣೋತ್ಕ್ರಮಣವು ಪ್ರಸಿದ್ಧವಾಗಿದೆ ಹೊರತು, ಜೀವೋತ್ಕ್ರಮಣವು ಪ್ರಸಿದ್ಧವಾಗಿಲ್ಲ. ಆದ್ದರಿಂದ ಸೂತ್ರದಲ್ಲಿರುವ 'ಸಂಪ್ರಸಾದ' ಶಬ್ದವು ಜೀವನನ್ನು ಪ್ರತಿಪಾದಿಸುವುದಿಲ್ಲ. ಪ್ರಾಣನನ್ನೇ ಪ್ರತಿಪಾದಿಸುತ್ತದೆ. ಜೀವನನ್ನು ಪ್ರತಿಪಾದಿಸುತ್ತದೆಂಬ ಪೂರ್ವಪಕ್ಷವು ಅಯುಕ್ತವಾಗಿದೆಯೆಂದು ತಿಳಿಯಬೇಕು.

ಅನುವಾದಕರು

ಬೆಮ್ಮತ್ತಿ ವೆಂಕಟೇಶಾಚಾರ್ಯ

॥ ಶ್ರೀಕೃಷ್ಣಾರ್ಪಣಮಸ್ತು ॥

# ಚಂದ್ರಿಕಾಬಿಂದು

ಅದೃಶ್ಯತ್ವಾಧಿಕರಣ - ಈ ಅಧಿಕರಣದಲ್ಲಿ 'ದೃಶ್ಯತ್ವಾದ್ಯಭಾವ' ಎಂಬ ಲಿಂಗವನ್ನು ಬ್ರಹ್ಮನಲ್ಲಿ ಸಮನ್ವಯ ಮಾಡುತ್ತಾರೆ. ಹಿಂದಿನ ಅಂತರ್ಯಾಮ್ಯಧಿಕರಣದಲ್ಲಿ, ಅಂತರ್ಯಾಮಿಯಾದವನು 'ಬ್ರಹ್ಮ' ಎಂಬುದನ್ನು ಸಾಧನೆ ಮಾಡಲಿಕ್ಕೆ ಉಪಯೋಗಿಸಕೊಂಡ ಹೇತು - 'ಅದೃಶ್ಯತ್ವ'. ಈ 'ಅದೃಶ್ಯತ್ವ'ವೆಂಬ ಗುಣವು ವಿಷ್ಣುವಿನಲ್ಲಿ ಇರುವುದರಿಂದ, ಅಂತರ್ಯಾಮೀ ಬ್ರಹ್ಮ ಎಂದು ಸಾಧನೆ ಮಾಡಲಾಗಿತ್ತು. ಇಂತಹ ಅದೃಶ್ಯತ್ವ ಧರ್ಮವು ವಿಷ್ಣು ಇತರನಿಗೆ ಹೊರತು, ವಿಷ್ಣುವಿಗೆ ಇಲ್ಲ ಎಂದು ಆದರೆ, ಆಗ, ಅಂತರ್ಯಾಮೀ ವಿಷ್ಣು ಇತರ ಎಂದು ಆಗಿಬಿಡುತ್ತದೆ. ಆದ್ದರಿಂದ ಅದೃಶ್ಯತ್ವವು ವಿಷ್ಣುವಿನಲ್ಲೇ ಇರುವ ಅಸಾಧಾರಣ ಧರ್ಮ ಎಂಬುದನ್ನು ಸಾಧನೆ ಮಾಡಲಾಗಿದೆ.

ಅದೃಶ್ಯತ್ವ ಗುಣವು ವಿಷ್ಣು ಇತರರಲ್ಲಿ ಇದೆ ಎಂಬ ಸಂದೇಹಕ್ಕೆ ಕಾರಣವೇನು ಎಂದು ಕೇಳಿದರೆ. ಮುಂಡಕ ಉಪನಿಷತ್ತಿನಲ್ಲಿ, ಅದೃಶ್ಯತ್ವಗುಣವುಳ್ಳ ಅಕ್ಷರಶಬ್ದವಾಚ್ಯನಾದ ವ್ಯಕ್ತಿಯು ವಿಷ್ಣು ಇತರ ಎಂದು ಹೇಳಿದೆ. ನೇರವಾಗಿ ವಿಷ್ಣುಇತರ ಎಂದು ಹೇಳದಿದ್ದರೂ, ಅರ್ಥತಃ ಹೇಳಿದ್ದಾರೆ. ಹೇಗೆಂದರೆ

'ಯತ್ತದದ್ರೇಶ್ಯಂ, ಅಗ್ರಾಹ್ಯಂ...' ಎಂದು ಮೊದಲು ಅನೇಕ ಧರ್ಮಗಳನ್ನೂ ಹೇಳಿ, 'ಯಥಾ ಊರ್ಣನಾಭಿಃ ಸೃಜತೇ....' ಎಂದು ಅಕ್ಷರಶಬ್ದವಾಚ್ಯನಾದ ವ್ಯಕ್ತಿಯಲ್ಲಿ ಅದೃಶ್ಯತ್ವಗುಣಗಳನ್ನು ಹೇಳಿದ್ದಾರೆ; ಈ ಅಕ್ಷರಶಬ್ದವಾಚ್ಯನಾದ ವ್ಯಕ್ತಿಯು ವಿಷ್ಣು ಆಗಲಿಕ್ಕೆ ಸಾಧ್ಯವಿಲ್ಲ. ಯಾಕೆಂದರೆ, ಮುಂದೆ ಅದೇ ಮುಂಡಕದಲ್ಲಿ 'ಅಪ್ರಾಣೋಹಿ ಅಮನಾಃ' ಶುಭ್ರೋ ಅಕ್ಷರಾತ್ ಪರತಃ ಪರಃ'' ಎಂಬುದಾಗಿ. ಅಕ್ಷರಶಬ್ದವಾಚ್ಯನಾದ ವ್ಯಕ್ತಿಗಿಂತ ಇನ್ನೊಬ್ಬ ಉತ್ತಮನು ಇದ್ದಾನೆ ಎಂದು ಹೇಳಿದೆ; ಆದ್ದರಿಂದ ಅಕ್ಷರಶಬ್ದವಾಚ್ಯನಾದವನು ವಿಷ್ಣುವಾದರೆ, ಅವನನ್ನು ಮೀರಿಸುವ ಇನ್ನೊಬ್ಬ ವ್ಯಕ್ತಿಯು ಬಾಧಿತವಾಗುತ್ತದೆಯಾದ್ದರಿಂದ, ಅಕ್ಷರನು ವಿಷ್ಣುವಲ್ಲ. ಅಂತಹ ಅಕ್ಷರನಲ್ಲಿ ಹೇಳಿರುವ ಅದೃಶ್ಯತ್ವ ಮೊದಲಾದ ಗುಣಗಳು. ವಿಷ್ಣುವಿನಲ್ಲಿ ಇಲ್ಲ. ಆದ್ದರಿಂದ ಅಂತರ್ಯಾಮಿ ವಿಷ್ಣು ಅಲ್ಲ ಎಂದು ಹಿಂದಿನ ಅಧಿಕರಣದ ಮೇಲೆ ಆಕ್ಷೇಪವನ್ನು ಮಾಡಬಹುದು.

ಈ ವಿಷಯದಲ್ಲಿ ಒಂದು ಸಂದೇಹವು ಬರಬಹುದು. ಏನೆಂದರೆ - ಈ ಅಧಿಕರಣದಲ್ಲಿ, ವಸ್ತುತಃ ಅದೃಶ್ಯತ್ವ ಮೊದಲಾದ ಗುಣಸಮೂಹವನ್ನು ಸಮನ್ವಯ ಮಾಡಿದ್ದಾರೆ. ಲಿಂಗಪಾದವಾದ್ದರಿಂದ ಹಾಗೂ ಟೀಕಾದಲ್ಲಿ ಹಾಗೆಯೇ ಹೇಳಿದ್ದಾರೆ. ಹಾಗಾದರೆ,

ಅಕ್ಷರಶಬ್ದವಾಚ್ಯನಾದ ಒಂದು ವಸ್ತುವನ್ನು ಮಧ್ಯದಲ್ಲಿ ಇಟ್ಟುಕೊಂಡಿದ್ದು ಯಾಕೆ? ನೇರವಾಗಿ ಅದೃಶ್ಯತ್ವ ಮೊದಲಾದ ಗುಣಗಳನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡಬಹುದಲ್ಲಾ ಎಂದು?

ಇದಕ್ಕೆ ಉತ್ತರ - ಅಕ್ಷರಶಬ್ದದ ಮೂಲಕ ಪ್ರಶ್ನೆಯನ್ನು ತೆಗೆದುಕೊಂಡರೆ, ಆಗ ಪೂರ್ವಪಕ್ಷ ದೃಢವಾಗುತ್ತದೆ. ಅದು ಹೇಗೆಂದರೆ,

೧. ಈ ಅದೃಶ್ಯತ್ವಾದಿ ಧರ್ಮಗಳು ಯಾರಿಗೆ ? ಎಂದು ಪ್ರಶ್ನೆ ಬಂದರೆ, ಈ ಎಲ್ಲಾ ಧರ್ಮಗಳಿಗೆ, ಧರ್ಮಿ ಯಾರು ? ಎಂದು ಪ್ರಶ್ನೆ ಮಾಡಿದರೆ, ಆಗ ಅಕ್ಷರಶಬ್ದವಾಚ್ಯನೇ ಈ ಧರ್ಮಗಳಿಗೆ ವಿಶೇಷ್ಯನಾಗಿದ್ದಾನೆ ಎಂದು ಉತ್ತರ. ಇಂತಹ ಅಕ್ಷರನು ವಿಷ್ಣುಇತರ (ಹಿಂದೆ ಹೇಳಿದಂತೆ) ಎಂದು ಇರುವುದರಿಂದ ಅದೃಶ್ಯತ್ವಾದಿಗುಣಗಳು ವಿಷ್ಣುವಿನಲ್ಲಿ ಇಲ್ಲ ಎಂದು ಹೇಳಬಹುದು.

೨. ಅದೃಶ್ಯತ್ವಾದಿಗುಣವುಳ್ಳ ಅಕ್ಷರಶಬ್ದವಾಚ್ಯನಾದ ವ್ಯಕ್ತಿಗೆ ಉಪಾದಾನತ್ವವನ್ನು ಹೇಳಿದ (ತಥಾ ಅಕ್ಷರಾತ್-ಸಂಭವತಿ ಇಹ ವಿಶ್ವಮ್). ಅದು ವಿಷ್ಣುವಿಗೆ ಕೂಡುವುದಿಲ್ಲವಾದ್ದರಿಂದ ಅದೃಶ್ಯತ್ವಾದಿಗಳೂ ವಿಷ್ಣುಇತರ ಎಂದು ಸಾಧನೆ ಮಾಡಬಹುದು.

ಇನ್ನು ಇದರ ಮೇಲೆ ಬರುವ ಪ್ರಶ್ನೆ -

ಈ ಅಧಿಕರಣದಲ್ಲಿ, 'ಅದೃಶ್ಯತ್ವ' ಮೊದಲಾದವುಗಳನ್ನು ಸಮನ್ವಯ ಮಾಡುವುದು ಯಾಕೆ? ನೇರವಾಗಿ ಅಕ್ಷರಶಬ್ದ ಸಮನ್ವಯವನ್ನು ಮಾಡಿರಿ. ನೇರವಾಗಿ ಅಕ್ಷರಶಬ್ದ ಸಮನ್ವಯ ಮಾಡಿದರೆ, ಇದನ್ನು (ಈ ಸೂತ್ರವನ್ನು) ಲಿಂಗಪಾದದಲ್ಲಿ ಹೇಗೆ ಸೇರಿಸುವುದು. ನಾಮಪಾದದಲ್ಲಿ ಈ ಅಧಿ ಕರಣವು ಬರಬೇಕಾಗುತ್ತದೆ ಎಂದರೆ. ಅದಕ್ಕೆ ಉತ್ತರ - ಇದೇ ಲಿಂಗಪಾದದಲ್ಲಿ ಬರುವ ವೈಶ್ವಾನರಾಧಿ ಕರಣದಲ್ಲಿ ಒಂದು ವೈಶ್ವಾನರ ನಾಮಸಮನ್ವಯದಿಂದ ಅನೇಕ ಲಿಂಗಗಳು ಸಮನ್ವಿತವಾಗುತ್ತದೋ, ಅದರಂತೆ ಈ ಅಧಿಕರಣವೂ ಲಿಂಗಪಾದದಲ್ಲೇ ಇದ್ದುಕೊಂಡು ಅಕ್ಷರನಾಮವನ್ನು ಸಮನ್ವಯ ಮಾಡಿದರೂ, ಅನೇಕ ಲಿಂಗಗಳೂ ಸಮನ್ವಯವಾಗುತ್ತವೆಯಾದ್ದರಿಂದ ದೋಷವಿಲ್ಲ ಎಂದು ಸಮಾಧಾನವನ್ನು ಹೇಳಬಹುದು.

ಅಷ್ಟೇ ಅಲ್ಲದೆ, ನೇರವಾಗಿ ಅಕ್ಷರಶಬ್ದ ಸಮನ್ವಯವನ್ನು ಮಾಡಿದರೆ, ಇನ್ನೊಂದು ಲಾಭವೂ ಇದೆ. ಏನೆಂದರೆ ಪೂರ್ವಪಕ್ಷವು ನೇರವಾಗಿ ಬರುತ್ತದೆ. ಹೇಗೆಂದರೆ 'ಅಕ್ಷರಾತ್ ಸಂಭವತೀಹ ವಿಶ್ವಮ್' ಎಂದು ಅಕ್ಷರನಿಗೆ ಉಪಾದಾನತ್ವ ಕೇಳಿ ಬರುತ್ತಿರುವುದರಿಂದ ಅಕ್ಷರನು ಬ್ರಹ್ಮ ಅಲ್ಲ ಎಂದು.

ಹೀಗೆ ಮಾಡಿದರೆ 'ಉಪಾದಾನತ್ವಾತ್ ಅಕ್ಷರಶಬ್ದವಾಚ್ಯ'ನಾದವನನ್ನು 'ಇತರ' ಎಂದು ಹೇಳಿದರೆ, ಆಗ ಅಕ್ಷರನಿಗೆ ವಿಶೇಷಣವಾದ ಅದೃಶ್ಯತ್ವಾದಿಗುಣಗಳೂ ಕೂಡ ಅನ್ಯನಿಗೆ ಹೇಳಬೇಕಾಗುತ್ತದೆ ಎಂಬುದು ವಕ್ರವಾದ ಪೂರ್ವಪಕ್ಷಕ್ರಮ. ಆದ್ದರಿಂದ ಈ ಎರಡೂ ಕಾರಣಗಳಿಂದ, ನೇರವಾಗಿ ಅಕ್ಷರಶಬ್ದ ಸಮನ್ವಯವನ್ನೇ ಮಾಡುವುದು ಉಚಿತ ಎಂದು ಪ್ರಶ್ನೆ.

*ಪರಿಪೂರ್ಣಚಂದ್ರಿಕಾ*

ಇದಕ್ಕೆ ಉತ್ತರವನ್ನು ರಾಯರು ತಮ್ಮ ವ್ಯಾಖ್ಯಾನದಲ್ಲಿ ಹೇಳುತ್ತಾರೆ -

೧. ಅಕ್ಷರಶಬ್ದಸಮನ್ವಯವನ್ನು ಅಕ್ಷರಾಧಿಕರಣದಲ್ಲಿ ಮಾಡಲಿದ್ದೇವೆ. ಆದ್ದರಿಂದ ಇಲ್ಲಿ ಪುನಃ ಮಾಡಿದರೆ, ಪೌನರುರುಕ್ತಿ ದೋಷ ಬರುತ್ತದೆ. ಹಾಗಾದರೆ ಅಲ್ಲೇ ಅಕ್ಷರಶಬ್ದ ಸಮನ್ವಯವನ್ನು ಮಾಡಿದ ಮೇಲೆ ಅದೇ ನ್ಯಾಯದಿಂದ ಇಲ್ಲಿ ಅದೃಶ್ಯತ್ವಾದಿಗುಣಸಮೂಹವನ್ನು ಬ್ರಹ್ಮನಿಗೆ ಹೇಳಬಹುದು. ಆದ್ದರಿಂದ ಈ ಅಧಿಕರಣ ವ್ಯರ್ಥವೆಂದು ಹೇಳಿದರೆ, ಇಲ್ಲಿ ಬರುವ ಅಕ್ಷರಾತ್ ಪರತಃ ಪರಃ ಎಂದು ಪರ-ಅವಧಿತ್ವರೂಪ ಬಾಧಕವಿರುವುದರಿಂದ ಅಕ್ಷರಾಧಿಕರಣದ ಮೇಲೆ ಆಕ್ಷೇಪವನ್ನು ಮಾಡಬಹುದು. (ಅಂದರೆ ಇಲ್ಲಿ ಅಕ್ಷರಶಬ್ದವಾಚ್ಯನು ವಿಷ್ಣು ಅಲ್ಲ, ಪರಾವಧಿತ್ವಬಾಧಕವಿರುವುದರಿಂದ. ಆದ್ದರಿಂದ ಅಕ್ಷರಾಧಿಕರಣದಲ್ಲಿ ಹೇಳಿದ ಅಕ್ಷರನೂ ವಿಷ್ಣುವಲ್ಲ ಎಂದು.)

೨. ಇಲ್ಲಿ ಕೇವಲ ಅಕ್ಷರಶಬ್ದವನ್ನು ಸಮನ್ವಯ ಮಾಡದೆ, ಅನೇಕ ಗುಣಸಮೂಹವನ್ನು ಸಮನ್ವಯ ಮಾಡುತ್ತಾರೆ.

೩. ಈ ಪಾದದಲ್ಲಿ ಎಲ್ಲ ಅಧಿಕರಣಗಳಲ್ಲೂ ಅನ್ಯಸಾಹಿತ್ಯೇನ ಏವ ಅನ್ಯತ್ರಪ್ರಸಿದ್ಧಿಯನ್ನು ಹೇಳಲಾಗಿದೆ. (ಉದಾ:- ಆದಿತ್ಯಶ್ರುತಿಯಿಂದ ಸರ್ವಗತತ್ವವನ್ನು ಸಮನ್ವಯ ಮಾಡಿದಂತೆ) ಅದರಂತೆ ಇಲ್ಲಿ ಅಕ್ಷರಶ್ರುತಿಸಾಹಿತ್ಯೇನ, ಅದೃಶ್ಯತ್ವಾದಿಗಳಿಗೆ ಅನ್ಯತ್ರಪ್ರಸಿದ್ಧಿಯನ್ನು ಹೇಳುವುದು ಉಚಿತ.

೪. ಅದೃಶ್ಯತ್ವಾದಿಗುಣಸಮನ್ವಯವನ್ನು ಮಾಡಿದರೆ, ಆಗ ಹಿಂದಿನ ಅಧಿಕರಣದ ಸಂಗತಿಯು ನೇರವಾಗಿ ಬರುತ್ತದೆ. (ಹಿಂದೆ ಅಂತರ್ಯಾಮೀ ವಿಷ್ಣುಃ ಅದೃಶ್ಯತ್ವಾತ್ ಎಂದು ಹೇಳಿದ್ದರಿಂದ)

ಹೀಗೆ ನಾಲ್ಕು ರೀತಿಯಿಂದ ರಾಯರು ಸಮಾಧಾನವನ್ನು ಹೇಳಿದ್ದಾರೆ. ಇಷ್ಟು ಕಾರಣಗಳಿಂದಾಗಿಯೇ ವ್ಯಾಸರಾಜರು ಪೂರ್ವಪಕ್ಷವನ್ನು ಅಕ್ಷರಶಬ್ದದ ಮೂಲಕ ದೃಢಪಡಿಸುತ್ತಿದ್ದಾರೆ ಎಂದು ರಾಯರ ವ್ಯಾಖ್ಯಾನದಿಂದ ತಿಳಿದುಬರುತ್ತದೆ.

## ವೈಶ್ವಾನರಾಧಿಕರಣ

ಈ ಅಧಿಕರಣದಲ್ಲಿ ವೈಶ್ವಾನರ ಶಬ್ದಸಮನ್ವಯವನ್ನು ಮಾಡಿದ್ದಾರೆ.

ಸಮನ್ವಯ ಮಾಡುವ ಸಂದರ್ಭದಲ್ಲಿ, ೧. ಅಗ್ನಿ, ಇಂದ್ರ, ವೈಶ್ವಾನರ ಮೊದಲಾದ ಶಬ್ದಗಳು ಮುಖ್ಯವಾಗಿ ಬ್ರಹ್ಮನನ್ನೇ ಹೇಳಿದರೆ, ಪ್ರಸಿದ್ಧ ಅಗ್ನಿಯಲ್ಲಿ ಲೌಕಿಕವ್ಯವಹಾರ ಹೇಗೆ? (ಉದಾ:- ಅಗ್ನಿಂ, ಆನಯ ಎಂದು ಗುರುವು ಶಿಷ್ಯನಿಗೆ ಹೇಳಿದರೆ, ಅಗ್ನಿ ಶಬ್ದವು ಮುಖ್ಯವಾಗಿ ಬ್ರಹ್ಮನನ್ನೇ ಹೇಳಿದರೆ, ಲೌಕಿಕವ್ಯವಹಾರವನ್ನು ಹೇಗೆ ಕೂಡಿಸುವುದು)

೨. ಅಗ್ನಿ, ಇಂದ್ರ ಮೊದಲಾದ ಎಲ್ಲ ಶಬ್ದಗಳೂ ಬ್ರಹ್ಮನನ್ನೇ ಹೇಳಿದರೆ, ಅಗ್ನಿಸೂಕ್ತ, ಇಂದ್ರಸೂಕ್ತ ಮೊದಲಾದ ಸೂಕ್ತವ್ಯವಸ್ಥೆ ಹೇಗೆ?

೩. ಹಾಗೆಯೇ ಅಗ್ನಿವಿದ್ಯಾ, ಇಂದ್ರವಿದ್ಯಾ ಮೊದಲಾದ ವಿದ್ಯಾವ್ಯವಸ್ಥಾ ಹೇಗೆ? ಮೊದಲಾದ ಪ್ರಶ್ನೆಗಳಿಗೆ ಉತ್ತರವನ್ನೂ ಕೊಟ್ಟಿದ್ದಾರೆ.

ಸಿದ್ಧಾಂತದಲಿ ಉತ್ತರ ಕೊಡಬೇಕಾದರೆ, ಮೊದಲನೆ ಪ್ರಶ್ನೆಗೆ, ಅಗ್ನಿ, ವೈಶ್ವಾನರ ಮೊದಲಾದ ಶಬ್ದಗಳು ಪರಮಮುಖ್ಯವಾಗಿ ವಿಷ್ಣುವಿನನ್ನೇ ಹೇಳುತ್ತದೆ. ಮುಖ್ಯವಾಗಿ ಪುರಂದರ, ಅಗ್ನಿ ಮೊದಲಾದ ದೇವತೆಗಳನ್ನೂ ಹೇಳುತ್ತದೆ. ಆದ್ದರಿಂದ ಹಾನಾದಿವ್ಯವಹಾರಾರ್ಥಂ ಅಗ್ನಿ ಮೊದಲಾದ ಶಬ್ದಗಳನ್ನು ವಿಷ್ಣುಇತರರಲ್ಲೂ ಪ್ರಯೋಗಿಸಬಹುದು. (ಇದನ್ನು 'ಸಾಕ್ಷಾದಪ್ಯವಿರೋಧಂ ಜೈಮಿನಿಃ' ಎಂಬಲ್ಲಿ ಹೇಳಿದ್ದಾರೆ. ಇನ್ನು ಸೂಕ್ತವ್ಯವಸ್ಥಾ, ವಿದ್ಯಾವ್ಯವಸ್ಥಾ ಹೇಗೆ ಎಂಬುದಕ್ಕೆ ಮೂರುರೀತಿಯಲ್ಲಿ ಉತ್ತರ ಕೊಟ್ಟಿದ್ದಾರೆ.

೧. ''ಅಭಿವ್ಯಕ್ತೇಃ ಇತ್ಯಾಶ್ಮರಥ್ಯಃ'' ಎಂಬ ಸೂತ್ರದಲ್ಲಿ, ಅಗ್ನಿ ಮುಂತಾದವುಗಳಲ್ಲಿ ಬ್ರಹ್ಮನ ಉಪಾಸನೆಯಿಂದ ಬ್ರಹ್ಮನ ಅಭಿವ್ಯಕ್ತಿಯಾಗುವುದರಿಂದ, ಅಗ್ನಿಸೂಕ್ತ, ಇಂದ್ರಸೂಕ್ತ ಮೊದಲಾದ ಸೂಕ್ತವ್ಯವಸ್ಥಾವನ್ನು ಕೂಡಿಸಬಹುದು ಎಂದು ಆಶ್ಮರಥ್ಯರ ಅಭಿಪ್ರಾಯ.

೨. ''ಅನುಸ್ಮೃತೇಃ ಬಾದರಿಃ'' ಎಂಬ ಸೂತ್ರದಲ್ಲಿ, ಆಯಾ ಸೂಕ್ತಗಳ ಉಪಾಸಕರಿಂದ, ಆಯಾ ಪ್ರತೀಕಗಳಲ್ಲಿ ಬ್ರಹ್ಮನ ಸ್ಮರಣೆ (ಧ್ಯಾನ)ವನ್ನು ಮಾಡುವುದರಿಂದ ಸೂಕ್ತವ್ಯವಸ್ಥಾವನ್ನು ಕೂಡಿಸಬಹುದು. (ಉದಾ: ಅಗ್ನಿ ಉಪಾಸಕನು. ಅಗ್ನಿಪ್ರತೀಕದಲ್ಲಿ ಬ್ರಹ್ಮನನ್ನು ಉಪಾಸನೆ ಮಾಡುತ್ತಾನೆ.) ಎಂಬುದು ಶುಕಾಚಾರ್ಯರ ಅಭಿಪ್ರಾಯ.

೩. ''ಸಂಪತ್ತೇರಿತಿ ಜೈಮಿನಿಃ'' ಎಂಬ ಸೂತ್ರದಲ್ಲಿ, ಅಗ್ನಿಸೂಕ್ತದಿಂದ ಉಪಾಸನೆ ಮಾಡುವವನಿಗೆ ಅಗ್ನಿಸ್ಥ ಬ್ರಹ್ಮ ಪ್ರಾಪ್ತಿಯು, ವಾಯುಸೂಕ್ತದಿಂದ ಉಪಾಸನೆ ಮಾಡುವವನಿಗೆ ವಾಯುಗತ ಬ್ರಹ್ಮಪ್ರಾಪ್ತಿಯು. ಹೀಗೆ ಸೂಕ್ತ ವ್ಯವಸ್ಥೆಯನ್ನು ಮಾಡಬಹುದು. ಹೀಗೆ ಸೂಕ್ತವ್ಯವಸ್ಥಾ, ವಿದ್ಯಾವ್ಯವಸ್ಥೆಯನ್ನು ಮೂರುರೀತಿಯಲ್ಲಿ ಸಮಾಧಾನ ಹೇಳಿದ್ದಾರೆ.

ಇದರ ಮೇಲೆ ವ್ಯಾಸರಾಜರು ಒಂದು ಸ್ವಾರಸ್ಯವಾದ ಪ್ರಶ್ನೆಯನ್ನು ಮಾಡುತ್ತಾರೆ.

ಈ ರೀತಿಯಲ್ಲಿ ಸೂತ್ರಕಾರರು ಸಮಾಧಾನವನ್ನು ಹೇಳುವುದು ಸಮಂಜಸವಾಗುವುದಿಲ್ಲ ಯಾಕೆಂದರೆ -

೧. ಅಧಿಷ್ಠಾನ ಇದ್ದ ಕಡೆ, ಈ ಮೂರು ರೀತಿಯಲ್ಲಿ ಯಾವುದಾದರೂ ಒಂದು ಸಮಾಧಾನವನ್ನು ಇಟ್ಟುಕೊಂಡು ಸೂಕ್ತವ್ಯವಸ್ಥಾವನ್ನು ಮಾಡಬಹುದು. ಆದರೆ, ಎಲ್ಲಿ ನೇರವಾಗಿ ಬ್ರಹ್ಮನನ್ನು ಹೇಳುವ ವಾಕ್ಯಗಳಿರುತ್ತವೆಯೋ (ಉದಾಹರಣೆ ಪುರುಷಸೂಕ್ತ, ವಾಮನಸೂಕ್ತ, ವಿಷ್ಣುಸೂಕ್ತ) ಇಲ್ಲಿ ಅಧಿಷ್ಠಾನವೇ ಇಲ್ಲದಿರುವುದರಿಂದ, ಈ ಯಾವ ಸಮಾಧಾನವನ್ನೂ ಹೇಳಲಿಕ್ಕೆ ಬರುವುದಿಲ್ಲ.

೨. ಇನ್ನು ಈ ಮೂರು ಸಮಾಧಾನಗಳಲ್ಲಿ, ಅಧಿಷ್ಠಾನಭೇದವನ್ನು ಅವಲಂಬಿಸಿ, ಸೂಕ್ತಭೇದವನ್ನು ಹೇಳಬೇಕು. ಆದರೆ, ಕೆಲವು ಕಡೆ, ಒಂದೇ ದೇವತಾ ಇದ್ದು. (ಅಂದರೆ ಅಧಿಷ್ಠಾನಭೇದವಿಲ್ಲದೆ)

ಇದಕ್ಕೆ ಉತ್ತರವನ್ನು ರಾಯರು ತಮ್ಮ ವ್ಯಾಖ್ಯಾನದಲ್ಲಿ ಹೇಳುತ್ತಾರೆ -

೧. ಅಕ್ಷರಶಬ್ದಸಮನ್ವಯವನ್ನು ಅಕ್ಷರಾಧಿಕರಣದಲ್ಲಿ ಮಾಡಲಿದ್ದೇವೆ. ಆದ್ದರಿಂದ ಇಲ್ಲಿ ಪುನಃ ಮಾಡಿದರೆ, ಪೌನರುರುಕ್ತಿ ದೋಷ ಬರುತ್ತದೆ. ಹಾಗಾದರೆ ಅಲ್ಲೇ ಅಕ್ಷರಶಬ್ದ ಸಮನ್ವಯವನ್ನು ಮಾಡಿದ ಮೇಲೆ ಅದೇ ನ್ಯಾಯದಿಂದ ಇಲ್ಲಿ ಅದೃಶ್ಯತ್ವಾದಿಗುಣಸಮೂಹವನ್ನು ಬ್ರಹ್ಮನಿಗೆ ಹೇಳಬಹುದು. ಆದ್ದರಿಂದ ಈ ಅಧಿಕರಣ ವ್ಯರ್ಥವೆಂದು ಹೇಳಿದರೆ, ಇಲ್ಲಿ ಬರುವ ಅಕ್ಷರಾತ್ ಪರತಃ ಪರಃ ಎಂದು ಪರ-ಅವಧಿತ್ವರೂಪ ಬಾಧಕವಿರುವುದರಿಂದ ಅಕ್ಷರಾಧಿಕರಣದ ಮೇಲೆ ಆಕ್ಷೇಪವನ್ನು ಮಾಡಬಹುದು. (ಅಂದರೆ ಇಲ್ಲಿ ಅಕ್ಷರಶಬ್ದವಾಚ್ಯನು ವಿಷ್ಣು ಅಲ್ಲ, ಪರಾವಧಿತ್ವಬಾಧಕವಿರುವುದರಿಂದ. ಆದ್ದರಿಂದ ಅಕ್ಷರಾಧಿಕರಣದಲ್ಲಿ ಹೇಳಿದ ಅಕ್ಷರನೂ ವಿಷ್ಣುವಲ್ಲ ಎಂದು.)

೨. ಇಲ್ಲಿ ಕೇವಲ ಅಕ್ಷರಶಬ್ದವನ್ನು ಸಮನ್ವಯ ಮಾಡದೆ, ಅನೇಕ ಗುಣಸಮೂಹವನ್ನು ಸಮನ್ವಯ ಮಾಡುತ್ತಾರೆ.

೩. ಈ ಪಾದದಲ್ಲಿ ಎಲ್ಲ ಅಧಿಕರಣಗಳಲ್ಲೂ ಅನ್ಯಸಾಹಿತ್ಯೇನ ಏವ ಅನ್ಯತ್ರಪ್ರಸಿದ್ಧಿಯನ್ನು ಹೇಳಲಾಗಿದೆ. (ಉದಾ:- ಆದಿತ್ಯಶ್ರುತಿಯಿಂದ ಸರ್ವಗತತ್ವವನ್ನು ಸಮನ್ವಯ ಮಾಡಿದಂತೆ) ಅದರಂತೆ ಇಲ್ಲಿ ಅಕ್ಷರಶ್ರುತಿಸಾಹಿತ್ಯೇನ, ಅದೃಶ್ಯತ್ವಾದಿಗಳಿಗೆ ಅನ್ಯತ್ರಪ್ರಸಿದ್ಧಿಯನ್ನು ಹೇಳುವುದು ಉಚಿತ.

೪. ಅದೃಶ್ಯತ್ವಾದಿಗುಣಸಮನ್ವಯವನ್ನು ಮಾಡಿದರೆ, ಆಗ ಹಿಂದಿನ ಅಧಿಕರಣದ ಸಂಗತಿಯು ನೇರವಾಗಿ ಬರುತ್ತದೆ. (ಹಿಂದೆ ಅಂತರ್ಯಾಮೀ ವಿಷ್ಣುಃ ಅದೃಶ್ಯತ್ವಾತ್ ಎಂದು ಹೇಳಿದ್ದರಿಂದ)

ಹೀಗೆ ನಾಲ್ಕು ರೀತಿಯಿಂದ ರಾಯರು ಸಮಾಧಾನವನ್ನು ಹೇಳಿದ್ದಾರೆ. ಇಷ್ಟು ಕಾರಣಗಳಿಂದಾಗಿಯೇ ವ್ಯಾಸರಾಜರು ಪೂರ್ವಪಕ್ಷವನ್ನು ಅಕ್ಷರಶಬ್ದದ ಮೂಲಕ ದೃಢಪಡಿಸುತ್ತಿದ್ದಾರೆ ಎಂದು ರಾಯರ ವ್ಯಾಖ್ಯಾನದಿಂದ ತಿಳಿದುಬರುತ್ತದೆ.

## ವೈಶ್ವಾನರಾಧಿಕರಣ

ಈ ಅಧಿಕರಣದಲ್ಲಿ ವೈಶ್ವಾನರ ಶಬ್ದಸಮನ್ವಯವನ್ನು ಮಾಡಿದ್ದಾರೆ.

ಸಮನ್ವಯ ಮಾಡುವ ಸಂದರ್ಭದಲ್ಲಿ, ೧. ಅಗ್ನಿ, ಇಂದ್ರ, ವೈಶ್ವಾನರ ಮೊದಲಾದ ಶಬ್ದಗಳು ಮುಖ್ಯವಾಗಿ ಬ್ರಹ್ಮನನ್ನೇ ಹೇಳಿದರೆ, ಪ್ರಸಿದ್ಧ ಅಗ್ನಿಯಲ್ಲಿ ಲೌಕಿಕವ್ಯವಹಾರ ಹೇಗೆ? (ಉದಾ:- ಅಗ್ನಿಂ, ಆನಯ ಎಂದು ಗುರುವು ಶಿಷ್ಯನಿಗೆ ಹೇಳಿದರೆ, ಅಗ್ನಿ ಶಬ್ದವು ಮುಖ್ಯವಾಗಿ ಬ್ರಹ್ಮನನ್ನೇ ಹೇಳಿದರೆ, ಲೌಕಿಕವ್ಯವಹಾರವನ್ನು ಹೇಗೆ ಕೂಡಿಸುವುದು)

೨. ಅಗ್ನಿ, ಇಂದ್ರ ಮೊದಲಾದ ಎಲ್ಲ ಶಬ್ದಗಳೂ ಬ್ರಹ್ಮನನ್ನೇ ಹೇಳಿದರೆ, ಅಗ್ನಿಸೂಕ್ತ, ಇಂದ್ರಸೂಕ್ತ ಮೊದಲಾದ ಸೂಕ್ತವ್ಯವಸ್ಥೆ ಹೇಗೆ?

೩. ಹಾಗೆಯೇ ಅಗ್ನಿವಿದ್ಯಾ, ಇಂದ್ರವಿದ್ಯಾ ಮೊದಲಾದ ವಿದ್ಯಾವ್ಯವಸ್ಥಾ ಹೇಗೆ? ಮೊದಲಾದ ಪ್ರಶ್ನೆಗಳಿಗೆ ಉತ್ತರವನ್ನೂ ಕೊಟ್ಟಿದ್ದಾರೆ.

ಸಿದ್ಧಾಂತದಲಿ ಉತ್ತರ ಕೊಡಬೇಕಾದರೆ, ಮೊದಲನೆ ಪ್ರಶ್ನೆಗೆ, ಅಗ್ನಿ, ವೈಶ್ವಾನರ ಮೊದಲಾದ ಶಬ್ದಗಳು ಪರಮಮುಖ್ಯವಾಗಿ ವಿಷ್ಣುವಿನನ್ನೇ ಹೇಳುತ್ತದೆ. ಮುಖ್ಯವಾಗಿ ಪುರಂದರ, ಅಗ್ನಿ ಮೊದಲಾದ ದೇವತೆಗಳನ್ನೂ ಹೇಳುತ್ತದೆ. ಆದ್ದರಿಂದ ಹಾನಾದಿವ್ಯವಹಾರಾರ್ಥಂ ಅಗ್ನಿ ಮೊದಲಾದ ಶಬ್ದಗಳನ್ನು ವಿಷ್ಣುಇತರರಲ್ಲೂ ಪ್ರಯೋಗಿಸಬಹುದು. (ಇದನ್ನು 'ಸಾಕ್ಷಾದಪ್ಯವಿರೋಧಂ ಜೈಮಿನಿಃ' ಎಂಬಲ್ಲಿ ಹೇಳಿದ್ದಾರೆ. ಇನ್ನು ಸೂಕ್ತವ್ಯವಸ್ಥಾ, ವಿದ್ಯಾವ್ಯವಸ್ಥಾ ಹೇಗೆ ಎಂಬುದಕ್ಕೆ ಮೂರುರೀತಿಯಲ್ಲಿ ಉತ್ತರ ಕೊಟ್ಟಿದ್ದಾರೆ.

೧. ''ಅಭಿವ್ಯಕ್ತೇಃ ಇತ್ಯಾಶ್ಮರಥ್ಯಃ'' ಎಂಬ ಸೂತ್ರದಲ್ಲಿ, ಅಗ್ನಿ ಮುಂತಾದವುಗಳಲ್ಲಿ ಬ್ರಹ್ಮನ ಉಪಾಸನೆಯಿಂದ ಬ್ರಹ್ಮನ ಅಭಿವ್ಯಕ್ತಿಯಾಗುವುದರಿಂದ, ಅಗ್ನಿಸೂಕ್ತ, ಇಂದ್ರಸೂಕ್ತ ಮೊದಲಾದ ಸೂಕ್ತವ್ಯವಸ್ಥಾವನ್ನು ಕೂಡಿಸಬಹುದು ಎಂದು ಆಶ್ಮರಥ್ಯರ ಅಭಿಪ್ರಾಯ.

೨. ''ಅನುಸ್ಮೃತೇಃ ಬಾದರಿಃ'' ಎಂಬ ಸೂತ್ರದಲ್ಲಿ, ಆಯಾ ಸೂಕ್ತಗಳ ಉಪಾಸಕರಿಂದ, ಆಯಾ ಪ್ರತೀಕಗಳಲ್ಲಿ ಬ್ರಹ್ಮನ ಸ್ಮರಣೆ (ಧ್ಯಾನ)ವನ್ನು ಮಾಡುವುದರಿಂದ ಸೂಕ್ತವ್ಯವಸ್ಥಾವನ್ನು ಕೂಡಿಸಬಹುದು. (ಉದಾ: ಅಗ್ನಿ ಉಪಾಸಕನು. ಅಗ್ನಿಪ್ರತೀಕದಲ್ಲಿ ಬ್ರಹ್ಮನನ್ನು ಉಪಾಸನೆ ಮಾಡುತ್ತಾನೆ.) ಎಂಬುದು ಶುಕಾಚಾರ್ಯರ ಅಭಿಪ್ರಾಯ.

೩. ''ಸಂಪತ್ತೇರಿತಿ ಜೈಮಿನಿಃ'' ಎಂಬ ಸೂತ್ರದಲ್ಲಿ, ಅಗ್ನಿಸೂಕ್ತದಿಂದ ಉಪಾಸನೆ ಮಾಡುವವನಿಗೆ ಅಗ್ನಿಸ್ಥ ಬ್ರಹ್ಮ ಪ್ರಾಪ್ತಿಯು, ವಾಯುಸೂಕ್ತದಿಂದ ಉಪಾಸನೆ ಮಾಡುವವನಿಗೆ ವಾಯುಗತ ಬ್ರಹ್ಮಪ್ರಾಪ್ತಿಯು. ಹೀಗೆ ಸೂಕ್ತ ವ್ಯವಸ್ಥೆಯನ್ನು ಮಾಡಬಹುದು. ಹೀಗೆ ಸೂಕ್ತವ್ಯವಸ್ಥಾ, ವಿದ್ಯಾವ್ಯವಸ್ಥೆಯನ್ನು ಮೂರುರೀತಿಯಲ್ಲಿ ಸಮಾಧಾನ ಹೇಳಿದ್ದಾರೆ.

ಇದರ ಮೇಲೆ ವ್ಯಾಸರಾಜರು ಒಂದು ಸ್ವಾರಸ್ಯವಾದ ಪ್ರಶ್ನೆಯನ್ನು ಮಾಡುತ್ತಾರೆ.

ಈ ರೀತಿಯಲ್ಲಿ ಸೂತ್ರಕಾರರು ಸಮಾಧಾನವನ್ನು ಹೇಳುವುದು ಸಮಂಜಸವಾಗುವುದಿಲ್ಲ ಯಾಕೆಂದರೆ -

೧. ಅಧಿಷ್ಠಾನ ಇದ್ದ ಕಡೆ, ಈ ಮೂರು ರೀತಿಯಲ್ಲಿ ಯಾವುದಾದರೂ ಒಂದು ಸಮಾಧಾನವನ್ನು ಇಟ್ಟುಕೊಂಡು ಸೂಕ್ತವ್ಯವಸ್ಥಾವನ್ನು ಮಾಡಬಹುದು. ಆದರೆ, ಎಲ್ಲಿ ನೇರವಾಗಿ ಬ್ರಹ್ಮನನ್ನು ಹೇಳುವ ವಾಕ್ಯಗಳಿರುತ್ತವೆಯೋ (ಉದಾಹರಣೆ ಪುರುಷಸೂಕ್ತ, ವಾಮನಸೂಕ್ತ, ವಿಷ್ಣುಸೂಕ್ತ) ಇಲ್ಲಿ ಅಧಿಷ್ಠಾನವೇ ಇಲ್ಲದಿರುವುದರಿಂದ, ಈ ಯಾವ ಸಮಾಧಾನವನ್ನೂ ಹೇಳಲಿಕ್ಕೆ ಬರುವುದಿಲ್ಲ.

೨. ಇನ್ನು ಈ ಮೂರು ಸಮಾಧಾನಗಳಲ್ಲಿ, ಅಧಿಷ್ಠಾನಭೇದವನ್ನು ಅವಲಂಬಿಸಿ, ಸೂಕ್ತಭೇದವನ್ನು ಹೇಳಬೇಕು. ಆದರೆ, ಕೆಲವು ಕಡೆ, ಒಂದೇ ದೇವತಾ ಇದ್ದು. (ಅಂದರೆ ಅಧಿಷ್ಠಾನಭೇದವಿಲ್ಲದೆ)

ಸೂಕ್ತವ್ಯವಸ್ಥಾ ಇರುವುದು ಕಂಡಿದೆ. (ಅಂದರೆ ಅಧಿಷ್ಠಾನಭೇದವಿಲ್ಲದೆ) ಸೂಕ್ತವ್ಯವಸ್ಥಾ ಇರುವುದು ಕಂಡಿದೆ. ಉದಾ: ಸೌರಸೂಕ್ತ, ಸಾವಿತ್ರಸೂಕ್ತ, ಇವೆರಡಕ್ಕೂ ದೇವತಾ ಒಬ್ಬನೇ ಸೂರ್ಯ. ಆದರೂ ಸೌರ, ಸಾವಿತ್ರ ಮೊದಲಾಗಿ ಸೂಕ್ತಭೇದವಿದೆ. ಈ ಭೇದವನ್ನು ಹಿಂದೆ ಹೇಳಿದ ಮೂರುರೀತಿಯಿಂದಲೂ ಕೂಡಿಸುವುದಕ್ಕೆ ಬರುವುದಿಲ್ಲ.

ಆದ್ದರಿಂದ ಋಗ್ಭಾಷ್ಯದಲ್ಲಿ ಹೇಳಿದ ಸೂಕ್ತವ್ಯವಸ್ಥಾ ಸಮಾಧಾನವನ್ನು ಹೇಳಬೇಕು. ಅಲ್ಲಿ ಏನು ಹೇಳಿದ್ದಾರೆ ಎಂದರೆ. ವಿಷ್ಣುರೂಪಗಳು ಎರಡು ವಿಧ. ದೇವತಾಂತರ್ಗತವಿಷ್ಣುರೂಪಗಳು ಕೆಲವು. ದೇವತಾ-ಅನಂತರ್ಗತ ವಿಷ್ಣುರೂಪಗಳು ಇನ್ನು ಕೆಲವು. ಅದರಲ್ಲಿ 'ಅಗ್ನಿ' ಎಂಬ ದೇವತಾ ಅಧಿಷ್ಠಾನದಲ್ಲಿ ಇರುವ 'ಅಗ್ನಿ' ಎಂಬ ಹೆಸರುಳ್ಳ ವಿಷ್ಣುರೂಪ ಹಾಗೆಯೇ 'ವಾಯು' ಎಂಬ ದೇವತಾ ಅಧಿಷ್ಠಾನದಲ್ಲಿ ಇರುವ 'ವಾಯು' ಎಂಬ ಹೆಸರುಳ್ಳ ವಿಷ್ಣುರೂಪ. ಈ ರೂಪಗಳಿಗೆ ಭೇದವಿರುವುದರಿಂದ (ಹಾಗೂ ಅಧಿಷ್ಠಾನಗಳಲ್ಲಿ ಭೇದವಿರುವುದರಿಂದ) ಸೂಕ್ತಭೇದವ್ಯವಸ್ಥಾ. ಇನ್ನು ಅಧಿಷ್ಠಾನದ ಸಂಬಂಧವಿಲ್ಲದೇನೇ ಕೇವಲ ವಿಷ್ಣುವಿನ ನಾಮಗಳಲ್ಲಿ ಭೇದವಿರುವುದರಿಂದಲೂ ೩ ಸೂಕ್ತಭೇದವ್ಯವಸ್ಥಾವನ್ನು ಕೂಡಿಸಬಹುದು. ಉದಾ:- ವಾಮನ ಹಾಗೂ ವಿಷ್ಣು ಇವೆರಡು ಬೇರೆ ಬೇರೆ ಬ್ರಹ್ಮನ ನಾಮಗಳು.

ಹಾಗೆಯೇ ಸೌರಸೂಕ್ತ ಹಾಗೂ ಸಾವಿತ್ರ ಸೂಕ್ತ ಇವೆರಡಕ್ಕೂ ಅಧಿಷ್ಠಾನನಾದ ಸೂರ್ಯ ಒಬ್ಬನೇ ಆದರೂ, ವಿಷ್ಣುವಿನ ನಾಮಗಳಲ್ಲಿ ಭೇದ ಇದೆ. (ಸೂರ್ಯ, ಸಾವಿತ್ರ) ಎಂದು. ಆದ್ದರಿಂದ 'ನಾಮಭೇದಾತ್', 'ಸೂಕ್ತಭೇದಃ' ಎಂಬ ವ್ಯವಸ್ಥಾವನ್ನು ಋಗ್ಭಾಷ್ಯದಲ್ಲಿ ಮಾಡಿದ್ದಾರೆ.

ಈ ವ್ಯವಸ್ಥಾವನ್ನೇ ಇಲ್ಲೂ ಹೇಳಬೇಕು. ಇಲ್ಲದಿದ್ದರೆ, ಮೇಲೆ ಹೇಳಿದ ಎರಡು ಪ್ರಶ್ನೆಗಳಿಗೆ ಉತ್ತರ ಬರುವುದಿಲ್ಲ ಎಂಬ ಸ್ವಾರಸ್ಯವಾದ ಸಂದೇಹವನ್ನು ಎತ್ತಿಕೊಂಡು. ಅದಕ್ಕೆ ಪರಿಹಾರವನ್ನೂ ಅಷ್ಟೇ ಹೃದಯಂಗಮವಾಗಿ ಹೇಳಿದ್ದಾರೆ.

ಈ ಅಧಿಕರಣದಲ್ಲಿ, ಉಪಾಸಕನ ಉಪಾಸ್ಯವಾದ ಅಧಿಷ್ಠಾನದಲ್ಲಿ ಭೇದವಿದ್ದರಿಂದಲೂ ಸೂಕ್ತವ್ಯವಸ್ಥಾವನ್ನು ಕೂಡಿಸಬಹುದು ಎಂಬುದನ್ನೂ ಹೇಳುತ್ತಿದ್ದಾರೆ. ಆದ್ದರಿಂದ ಋಗ್ಭಾಷ್ಯದಲ್ಲಿ ಹೇಳಿದ ಪರಿಹಾರವನ್ನು ಒಪ್ಪಿ, ಇಲ್ಲಿ ಒಬ್ಬ ಸಾಧಕನು ಯಾವ ರೀತಿಯಲ್ಲಿ ಪರಮಾತ್ಮನ ರೂಪಗಳನ್ನು ಬೇರೆ ಬೇರೆ ಅಧಿಷ್ಠಾನಗಳಲ್ಲಿ ಉಪಾಸನೆಯನ್ನು ಮಾಡಬಹುದು. ಅದರಿಂದ ಆಗುವ ಫಲವೇನು ಎಂಬುದನ್ನು ತಿಳಿಸುವುದಕ್ಕಾಗಿ ಈ ಅಧಿಕರಣವು ಹೊರಟಿದೆ. ಹೀಗೆ ಅನುಷ್ಠಾನ-ಉಪಯೋಗಿಯಾಗುವ ಈ ಪರಿಹಾರದಿಂದಲೂ ಸೂಕ್ತವ್ಯವಸ್ಥಾವನ್ನು ಕೂಡಿಸಬಹುದು ಎಂಬ ಹೆಚ್ಚಿನ ಅಂಶವನ್ನು ಇಲ್ಲಿ ಹೇಳಿದ್ದಾರೆ ಹೊರತು, ಋಗ್ಭಾಷ್ಯದಲ್ಲಿ ಹೇಳಿರುವ ಪ್ರಮೇಯಕ್ಕೆ ಯಾವ ವಿರೋಧವೂ ಇಲ್ಲ.

## ದ್ಯುಭ್ವಾದ್ಯಧಿಕರಣ

ಈ ಅಧಿಕರಣದಲ್ಲಿ, ''ಎಲ್ಲಾ ಲೋಕಗಳಿಗೆ ಯಾವ ದೇವತೆಯು ಆಶ್ರಯನಾಗಿರುವವನಾಗಿದ್ದಾನೆ'' - ಎಂಬುವುದನ್ನು ನಿರ್ಣಯ ಮಾಡಲಾಗಿದೆ. 'ಸರ್ವಾಧಾರತ್ವ' ಎಂಬ ಲಿಂಗವನ್ನು ಸಮನ್ವಯ

ಮಾಡಲಾಗಿದೆ. 'ಮುಂಡಕ ಉಪನಿಷತ್ತಿನಲ್ಲಿ, ಯಸ್ಮಿನ್ ದ್ಯೌ ಪೃಥಿವೀ ಚ ಅಂತರಿಕ್ಷಂ ಆತ ಮನಃ ಸಹ ಪ್ರಾಣೈಶ್ಚ ಸರ್ವೈಃ । ತಮೇವೈಕಂ ಜಾನಥ ಆತ್ಮಾನಂ ಅನ್ಯಾವಾಚೋ ವಿಮುಂಚಥ' ಎಂಬ ಶ್ರುತಿಯು ಇಲ್ಲಿ ವಿಷಯವಾಕ್ಯ.

ಇಲ್ಲಿ ಪ್ರತಿಪಾದಿತವಾಗಿರುವ ದ್ಯು, ಭೂ, ಅಂತರಿಕ್ಷ ಮೊದಲಾದವುಗಳ ಆಶ್ರಯ ಪ್ರಧಾನಾದಿಗಳಲ್ಲಿ (ಪ್ರಧಾನ ಅಥವಾ ರುದ್ರ ಅಥವಾ ವಾಯು ಅಥವಾ ಜೀವ) ಯಾವುದಾದರೂ ಆಗಲಿ ಎಂಬುದು ಪೂರ್ವಪಕ್ಷ.

ಈ ವಾಕ್ಯದಲ್ಲಿ ಆತ್ಮಶಬ್ದವು ಶ್ರುತವಾಗಿರುವುದರಿಂದ, ಆ ಆತ್ಮ ಶಬ್ದವು ಬ್ರಹ್ಮನಿಗೆ ಮಾತ್ರ ವಾಚಕವಾಗಿರುವುದರಿಂದ ಬ್ರಹ್ಮನೇ ದ್ಯುಭ್ವಾದ್ಯಾಯತನ ಎಂಬುದು ಸಿದ್ಧಾಂತ.

ಇಲ್ಲಿ 'ಆತ್ಮಶಬ್ದಾತ್' ಎಂದು ಹೇಳದೇ 'ಸ್ವಶಬ್ದಾತ್' ಎಂದು ಸೂತ್ರಕಾರರು ಯಾಕೆ ಹೇಳಿದ್ದಾರೆ? ಎಂಬ ಪ್ರಶ್ನೆಗೆ ವ್ಯಾಸರಾಜರು ಸ್ವಾರಸ್ಯವಾಗಿ ಉತ್ತರವನ್ನು ಕೊಟ್ಟಿದ್ದಾರೆ.

ಸೂತ್ರದಲ್ಲಿರುವ 'ಸ್ವಶಬ್ದಾತ್' ಎನ್ನುವುದಕ್ಕೆ 'ಸ್ವೇತಿ ಶಬ್ದಃ ಸ್ವಶಬ್ದಃ' ಎಂದು ಕರ್ಮಧಾರಯ ಸಮಾಸವನ್ನು ಮಾಡಬೇಕು. ಅಲ್ಲಿರುವ ಸ್ವಶಬ್ದಕ್ಕೆ ಸ್ವಶಬ್ದ ಪರ್ಯಾಯವಾದ 'ಆತ್ಮಶಬ್ದವನ್ನು' ತೆಗೆದುಕೊಳ್ಳಬೇಕು.

ಇಲ್ಲಿ 'ಸ್ವ' ಎಂಬ ಶಬ್ದದಿಂದ ಆತ್ಮಶಬ್ದವನ್ನು ತೆಗೆದುಕೊಳ್ಳುವುದಕ್ಕಿಂತ, 'ಆತ್ಮಶಬ್ದಾತ್' ಎಂದೇ ಸೂತ್ರಕಾರರು ಪ್ರಯೋಗ ಮಾಡಬಹುದಾಗಿತ್ತು. ಆಗ ವಿಷಯವಾಕ್ಯದಲ್ಲಿ ಬರುವ ಆತ್ಮಶಬ್ದವನ್ನು ತೆಗೆದುಕೊಳ್ಳಬೇಕು ಎಂಬ ಸೂಚನೆಯೂ ಆಗುತ್ತಿತ್ತು. ಹಾಗೆ ಮಾಡದೆ 'ಸ್ವಶಬ್ದಾತ್' ಎಂದು ಹೇಳಿದಾಗ, ವಿಷಯವಾಕ್ಯದಲ್ಲಿ 'ಸ್ವ'ಶಬ್ದವನ್ನು ಹುಡುಕಿ, ಕಾಣದೇ ಇದ್ದಾಗ, ಸ್ವಶಬ್ದ ಪರ್ಯಾಯವಾದ ಆತ್ಮಶಬ್ದವನ್ನು ತೆಗೆದುಕೊಳ್ಳಬೇಕು ಎಂಬುದು. ವಕ್ರವಾದ ಮಾರ್ಗ. ಹೀಗೆ ಯಾಕೆ ಬಾದರಾಯಣರು ಸೂತ್ರಿಸಿದ್ದಾರೆ ಎಂಬ ಪ್ರಶ್ನೆ ಸಹಜ.

ಇದಕ್ಕೆ ವ್ಯಾಸರಾಜರು ಉತ್ತರ ಕೊಡುತ್ತಾ, ವೇದವ್ಯಾಸರೂ 'ಸ್ವಶಬ್ದಾತ್' ಎಂದು ಹೇಳಿದ್ದರಿಂದ. ಆತ್ಮಶಬ್ದವು ವಿಷ್ಣುವಿನ ಅಸಾಧಾರಣ ಶಬ್ದ ಎಂಬುದನ್ನು ತೋರಿಸಿಕೊಟ್ಟಂತೆ ಆಗುತ್ತದೆ.

'ಸ್ವಶಬ್ದಾತ್' ಎಂದು ಹೇಳದೆ, 'ಆತ್ಮಶಬ್ದಾತ್' ಎಂದು ಅಷ್ಟೇ ಹೇಳಿದ್ದಾರೆ. ಈ ಆತ್ಮಶಬ್ದವು ವಿಷ್ಣುವಿನ ಅಸಾಧಾರಣಶಬ್ದ ಎಂದು ತೋರಿಸಿಕೊಟ್ಟಂತೆ ಆಗುವುದಿಲ್ಲ.

ಹೀಗೆ ಹೇಳಿದಾಗ ಇನ್ನೊಂದು ಪ್ರಶ್ನೆ ಉದ್ಭವಿಸಬಹುದು. ವಿಷ್ಣುವಿನ ಅಸಾಧಾರಣಶಬ್ದವು ಈ ವಿಷಯವಾಕ್ಯದಲ್ಲಿ ಇದೆ ಎಂಬುದನ್ನು ತೋರಿಸಬೇಕು ಎಂದು ಬಾದರಾಯಣರ ವಿವಕ್ಷಾ ಇದ್ದರೆ, 'ತತ್-ಶಬ್ದಾತ್' ಎಂದು ಹೇಳಿದ್ದರೆ ಆಗುತ್ತಿತ್ತು. 'ತಸ್ಯ ಶಬ್ದಃ' 'ತಚ್ಛಬ್ದಃ' ಎಂದು ಸಮಾಸವನ್ನು ಆಶ್ರಯಿಸಿ, ವಿಷ್ಣುವಿನ ಅಸಾಧಾರಣ ಶಬ್ದವು ಈ ವಾಕ್ಯದಲ್ಲಿ ಇರುವುದರಿಂದ, ದ್ಯುಭ್ವಾದ್ಯಾಯತನ ವಿಷ್ಣುವೇ ಆಗಿದ್ದಾನೆ ಎಂದು ಸಾಧಿಸಬಹುದು. ಹೀಗೆ ಹೇಳದೇ 'ಸ್ವಶಬ್ದಾತ್' ಎಂದು ಹೇಳಿದ್ದು ಯಾಕೆ?

ಅದಕ್ಕೆ ಚಂದ್ರಿಕಾಚಾರ್ಯರು ಕೊಡುವ ಉತ್ತರ - ಒಂದು ವೇಳೆ 'ತಚ್ಛಬ್ದಾತ್' ಎಂದು ಹೇಳದಿದ್ದರೆ, ವಿಷ್ಣುವಿನ ಅಸಾಧಾರಣಶಬ್ದವನ್ನು ತೆಗೆದುಕೊಳ್ಳಬೇಕು ಎಂದೇನೋ ಹೇಳಿದಂತೆ ಆಗುತ್ತಿತ್ತು. ಆದರೆ ಆ ಶಬ್ದವು ಯಾವುದು ಎಂಬ ಪ್ರಶ್ನೆಗೆ ಉತ್ತರವಿರುತ್ತಿರಲಿಲ್ಲ. 'ಸ್ವಶಬ್ದಾತ್' ಎಂದು ಹೇಳಿದಾಗ, ವಿಷ್ಣುವಿನ ಅಸಾಧಾರಣಶಬ್ದವನ್ನು ತೆಗೆದುಕೊಳ್ಳಬೇಕು ಎಂದು ಸೂಚಿಸುವ ಜೊತೆಗೆ, ಆ ಶಬ್ದವು ಯಾವುದು ಎಂದು ಸೂಚಿಸಿದಂತೆಯೂ ಆಗುತ್ತದೆ. ಸ್ವಶಬ್ದಪರ್ಯಾಯ ಆತ್ಮಶಬ್ದವಾದುದರಿಂದ.

'ಸ್ವಶಬ್ದಾತ್' ಎಂದು ಹೇಳಿರುವುದರಿಂದ ವಿಷ್ಣುವಿನ ಅಸಾಧಾರಣಶಬ್ದವನ್ನು ತೆಗೆದುಕೊಳ್ಳಬೇಕು ಎಂದು ಹೇಗೆ ಸೂಚಿತವಾಯಿತು ಎಂದರೆ ಅನ್ಯಥಾ-ಅನುಪಪತ್ತಿಯಿಂದ ಎಂದು ಉತ್ತರಿಸುತ್ತಾರೆ ವ್ಯಾಸರಾಜರು. ಹೇಗೆಂದರೆ, 'ಆತ್ಮಶಬ್ದಾತ್' ಎಂದು ನೇರವಾಗಿ ಹೇಳಲಿಕ್ಕೆ ಬರುವಾಗ 'ಸ್ವಶಬ್ದಾತ್' ಎಂದು ಹೇಳಿ, ಸ್ವಶಬ್ದ ಪರ್ಯಾಯ ಆತ್ಮಶಬ್ದವನ್ನು ಗ್ರಹಣ ಮಾಡಬೇಕು ಎಂದು ವಕ್ರವಾದ ರೀತಿಯನ್ನು ಸೂತ್ರಕಾರರು ಆಶ್ರಯಣ ಮಾಡಿರುವುದರಿಂದಲೇ, ಈ ಆತ್ಮಶಬ್ದವು ಅಸಾಧಾರಣ ಎಂದು ತಿಳಿದುಬರುತ್ತದೆ.

ಹೀಗೆ 'ಸ್ವಶಬ್ದಾತ್' ಎಂದು ಸೂತ್ರಕಾರರು ಹೇಳಿರುವುದಕ್ಕೆ ಎರಡು ಪ್ರಯೋಜನವಿದೆ ಎಂದು ಹೇಳಿದಂತೆ ಆಯಿತು.

೧. ಅಸಾಧಾರಣ್ಯಜ್ಞಾಪನ (ಆತ್ಮಶಬ್ದವು ವಿಷ್ಣುವಿನ ಅಸಾಧಾರಣ ನಾಮ)

೨. ಶಬ್ದವಿಶೇಷ ಉಪಾದಾನ (ಆತ್ಮಶಬ್ದಗ್ರಹಣ)

ಹೀಗೆ ಹೇಳಿದ್ದರಿಂದ 'ಸ್ವಶಬ್ದಾತ್' ಎಂಬುದಕ್ಕೆ ಇನ್ನೊಂದು ರೀತಿಯಲ್ಲೂ ವಿಗ್ರಹವನ್ನು ಮಾಡಬಹುದು ಎಂದು ಸೂಚಿಸಿದಂತೆ ಆಯಿತು. 'ಸ್ವೇತಿ ಶಬ್ದಃ' 'ಸ್ವಶಬ್ದಃ' ಎಂದು ಒಂದು ರೀತಿಯ ವಿಗ್ರಹವಾದರೆ 'ಸ್ವಸ್ಯ (ವಿಷ್ಣೋರೇವ) ಶಬ್ದಃ ಸ್ವಬ್ದಃ' ಎಂದು ಎರಡನೆಯ ರೀತಿ. ಮೊದಲನೆಯ ರೀತಿಯ ವಿಗ್ರಹದಿಂದ ಆತ್ಮಶಬ್ದವು ಸೂಚಿತವಾದರೆ, ಎರಡನೆಯ ರೀತಿಯ ವಿಗ್ರಹದಿಂದ ಆ ಆತ್ಮಶಬ್ದವು ವಿಷ್ಣುವಿನ ಅಸಾಧಾರಣ ಶಬ್ದ ಎಂಬುದು ಸೂಚಿತವಾಯಿತು.

ಈ ಅಭಿಪ್ರಾಯವನ್ನು ಇಟ್ಟುಕೊಂಡೇ ತತ್ತ್ವಪ್ರದೀಪದಲ್ಲಿ, ''ವಿಷ್ಣೋಃ ಸ್ವರೂಪಸ್ಯೈವ ಸಾಕ್ಷಾತ್ ವಾಚಕಃ ಆತ್ಮಶಬ್ದಃ'' ಎಂದು ಹೇಳಿದ್ದಾರೆ. ಹೀಗೆ ಎರಡು ವಿಗ್ರಹಗಳನ್ನು ಆಶ್ರಯಿಸಿ, ಒಂದು ಸಮಾಧಾನವನ್ನು ಹೇಳಿ, ಇನ್ನೊಂದು ರೀತಿಯಲ್ಲೂ ಸಮಾಧಾನವನ್ನು ವ್ಯಾಸರಾಜರು ಹೇಳುತ್ತಾರೆ. 'ಸ್ವೇತಿಶಬ್ದಃ' 'ಸ್ವಶಬ್ದಃ' ಎಂದು ಒಂದೇ ವಿಗ್ರಹ ಮಾಡಬೇಕು. ಅಂದರೆ ಹಿಂದಿನಂತೆಯೇ ಸ್ವಶಬ್ದ ಪರ್ಯಾಯ ಆತ್ಮಶಬ್ದಾತ್ ಎಂದೇ ಅರ್ಥ. ಹಾಗಾದರೆ 'ಆತ್ಮಶಬ್ದಾತ್' ಎಂದೇ ಸೂತ್ರಕಾರರು ಹೇಳಬಹುದಿತ್ತಲ್ಲಾ, 'ಸ್ವಶಬ್ದಾತ್' ಎಂದು ಹೇಳಿದ್ದರಿಂದ ಏನು ಪ್ರಯೋಜನ? ಎಂದು ಪ್ರಶ್ನೆ ಬಂದರೆ, 'ಸ್ವಶಬ್ದಾತ್' ಎಂದು ಹೇಳಿದರೆ, ಇಷ್ಟು ಸೂಚಿಸಿದಂತೆ ಆಗುತ್ತದೆ - ಹೇಗೆ ಸ್ವಶಬ್ದವು ವಿಷ್ಣುವಿನಲ್ಲಿ ಮುಖ್ಯವೋ ಹಾಗೆ ಆತ್ಮಶಬ್ದವೂ ಕೂಡ ವಿಷ್ಣುವಿನಲ್ಲಿ ಮುಖ್ಯ.

ಇದನ್ನು ಆಚಾರ್ಯರು ಛಾಂದೋಗ್ಯಭಾಷ್ಯದಲ್ಲಿ ಸಮರ್ಥನೆ ಮಾಡಿದ್ದಾರೆ. ಅದನ್ನು ವ್ಯಾಸರಾಜರು ಇಲ್ಲಿ ನೆನಪಿಗೆ ತಂದುಕೊಡುತ್ತಾರೆ.

ಛಾಂದೋಗ್ಯಭಾಷ್ಯದಲ್ಲಿ- 'ಆತ್ಮಶಬ್ದವು ವಿಷ್ಣುವಿನಲ್ಲಿ ಮುಖ್ಯ' ಎಂಬುದನ್ನು ಸಮರ್ಥನೆ ಮಾಡಲು ಸ್ವಶಬ್ದವನ್ನು ದೃಷ್ಟಾಂತವಾಗಿ ಕೊಟ್ಟಿದ್ದಾರೆ. ಲೋಕದಲ್ಲಿ ಸ್ವಶಬ್ದವು ಅನ್ಯತ್ರಪ್ರಸಿದ್ಧವಾದರೂ (ಸ್ವ = ತಾನು), ಸ್ವಯಂಭೂಃ ಅಥವಾ ಸ್ವಭೂಃ ಎಂದು ಚತುರ್ಮುಖನಿಗೆ ಹೇಳುವ ಸಂದರ್ಭದಲ್ಲಿ ಸ್ವಶಬ್ದವು ವಿಷ್ಣುವಿನಲ್ಲಿ ಮುಖ್ಯವಾಗಿ ಹೇಳುತ್ತದೆ. ಅವನಿಂದ ಹುಟ್ಟಿದವನಾದ್ದರಿಂದ ಸ್ವಯಂಭೂ = ಎಂದರೆ ಚತುರ್ಮುಖ. 'ಯೋ ಬ್ರಹ್ಮಾಣಾಂ ವಿದಧಾತಿ' ಎಂಬ ಶ್ರುತಿ ಇರುವುದರಿಂದ, ಅದರಂತೆ, ಲೋಕೇ ಆತ್ಮಶಬ್ದವು ಅನ್ಯತ್ರಪ್ರಸಿದ್ಧವಾದರೂ, 'ಆತ್ಮಭೂಃ' ಎಂದು ಚತುರ್ಮುಖನಿಗೆ ನಾಮವಿರುವುದರಿಂದ, ಹಾಗೂ

*ಆತ್ಮೇತಿ ಮುಖ್ಯತೋ ವಿಷ್ಣುಃ ತದನ್ಯೇ ತು ಉಪಚಾರತಃ ।*
*ತಥೈವ ಸ್ವ ಇತಿ ಪ್ರೋಕ್ತಃ ತಸ್ಮಾತ್ ಆತ್ಮಭೂಃ ಸ್ವಭೂಃ ॥*

ಎಂಬ ಪ್ರಮಾಣವಿರುವುದರಿಂದಲೂ, ಆತ್ಮಶಬ್ದವು ವಿಷ್ಣುವಿನಲ್ಲಿ ಮುಖ್ಯ ಎಂಬುದನ್ನು ಆಚಾರ್ಯರು ಸಮರ್ಥನೆ ಮಾಡಿದ್ದಾರೆ. ಈ ನಿಯಮಕ್ಕೆ ಅನುಸಾರವಾಗಿ ಸೂತ್ರಕಾರರು 'ಸ್ವಶಬ್ದಾತ್' ಎಂದು ಹೇಳಿದ್ದಾರೆ. ಒಟ್ಟು ಇದರ ಅಭಿಪ್ರಾಯ - ಸ್ವಶಬ್ದವು ಹೇಗೆ ವಿಷ್ಣುವಿನಲ್ಲಿ ಮುಖ್ಯವೋ ಹಾಗೆಯೇ ಆತ್ಮಶಬ್ದವೂ ಮುಖ್ಯ ಎಂಬುದನ್ನು ಸೂಚನೆ ಮಾಡಲು 'ಸ್ವಶಬ್ದಾತ್' ಎಂದು ಪ್ರಯೋಗ ಮಾಡಿದ್ದಾರೆ. ಆತ್ಮಶಬ್ದಾತ್' ಎಂದೇ ಪ್ರಯೋಗ ಮಾಡಿದ್ದರೆ, ಈ ಮುಖ್ಯತ್ವವು ಸೂಚಿತವಾಗುತ್ತಿರಲಿಲ್ಲ.

ಹೀಗೆ ವ್ಯಾಸರಾಜರು ಸೂತ್ರದಲ್ಲಿ ಬರುವ 'ಸ್ವಶಬ್ದಾತ್' ಎನ್ನುವುದಕ್ಕೆ ಎರಡು ರೀತಿಯಿಂದ ಪ್ರಯೋಜನವನ್ನು ಬಹಳ ಸ್ವಾರಸ್ಯವಾಗಿ ಉಪಪಾದನೆ ಮಾಡಿದ್ದಾರೆ.

ಭೂಮಾಧಿಕರಣ

ಈ ಅಧಿಕರಣದಲ್ಲಿ ಭೂಮಾ ಶಬ್ದವು ವಿಷ್ಣುವಾಚಕ ಅರ್ಥಾತ್ ವಿಷ್ಣು ಪೂರ್ಣನಾಗಿದ್ದಾನೆ ಎಂಬ ಪ್ರಮೇಯವನ್ನು ಸಮರ್ಥಿಸುತ್ತಾರೆ. ಈ ಭೂಮಾ ಶಬ್ದವು ಛಾಂದೋಗ್ಯೋಪನಿಷತ್ತಿನಲ್ಲಿ 'ಯೋ ವೈ ಭೂಮಾ ತತ್ಸುಖಮ್' ಎಂಬ ವಾಕ್ಯದಲ್ಲಿ ಬರುತ್ತದೆ. ಅದೇ ಪ್ರಕರಣದಲ್ಲಿ. ಆ ಭೂಮಾಶಬ್ದದಿಂದ ವಾಚ್ಯನಾದ ವ್ಯಕ್ತಿಗೆ, ಉತ್ಕ್ರಮಣವನ್ನು ಹೇಳಿದ್ದಾರೆ. ಇಲ್ಲಿ ಬರುವ ದೊಡ್ಡ ಪ್ರಶ್ನೆ ವಿಷ್ಣು ಎಲ್ಲಕಡೆ ವ್ಯಾಪ್ತನಾಗಿರುವುದರಿಂದ ಅವನಿಗೆ ಉತ್ಕ್ರಮಣ (ಒಂದು ಕಡೆಯಿಂದ ಮತ್ತೊಂದು ಕಡೆಗೆ ಹೋಗುವುದು) ಎಂದು ಕ್ರಿಯೆ ಹೇಗೆ ಕೂಡುತ್ತದೆ. ಉದಾ:- 'ಅವ್ಯಾಕೃತಾಕಾಶ' ಸರ್ವತ್ರ ವ್ಯಾಪ್ತ ಅದರ ಪರಿಮಾಣಕ್ಕೆ 'ಮಹತ್ವ' ಎಂದು ಹೆಸರು. ಇಂತಹ ಆಕಾಶಕ್ಕೆ ಕ್ರಿಯೆಯನ್ನು ಹೇಳಲಿಕ್ಕೆ ಬರುವುದಿಲ್ಲ. ಅದರಂತೆ ವಿಷ್ಣುವೂ ಕೂಡ ಆಕಾಶದಂತೆ 'ಸರ್ವತ್ರ ವ್ಯಾಪ್ತ' ಅವನಲ್ಲೂ 'ಮಹತ್ವ' ಎಂಬ ಪರಿಮಾಣವಿದೆ. ಆದ್ದರಿಂದ ಅವನಲ್ಲಿ ಯಾವ ಕ್ರಿಯೆಯೂ ಇಲ್ಲ.

ಹಾಗೆ ಕ್ರಿಯೆಯ ಫಲ 'ಪೂರ್ವದೇಶವಿಯೋಗ' ಹಾಗೂ 'ಉತ್ತರದೇಶಸಂಯೋಗ'. (ಉದಾ: ಒಬ್ಬ ವ್ಯಕ್ತಿ ಬೆಂಗಳೂರನ್ನು ಬಿಟ್ಟು ಮೈಸೂರಿಗೆ ಬಂದರೆ, ಅವನಲ್ಲಿ ಕ್ರಿಯೆಯಾಯಿತು ಎಂದು ಹೇಳಬಹುದು. ಯಾಕೆಂದರೆ ಆ ಕ್ರಿಯೆಯ ಫಲ, ಬೆಂಗಳೂರು ದೇಶದ ವಿಯೋಗ ಹಾಗೂ ಮೈಸೂರು ದೇಶದ ಸಂಯೋಗ) ಎಲ್ಲ ಕಡೆ ಇರುವ ವಸ್ತುವಿಗೆ (ಉದಾ: ಆಕಾಶ) ಎಲ್ಲೂ ವಿಯೋಗವೇ ಇಲ್ಲ. ಹಾಗೂ ಸಂಯೋಗವೂ ಇಲ್ಲ (ಎರಡು ದ್ರವ್ಯಗಳಲ್ಲಿ ಮೊದಲು ಇಲ್ಲದೇ ಇರುವ ಒಂದು ಸಂಬಂಧ; ಒಂದಕ್ಕೊಂದು ಸೇರುವುದು) (ತಾರ್ಕಿಕರ ಪ್ರಕಾರ ಸಂಯೋಗವು ಜನ್ಯ)

ಹೀಗೆ ಸರ್ವತ್ರವ್ಯಾಪ್ತನಾದ ವಿಷ್ಣುವಿಗೆ ಪೂರ್ವದೇಶವಿಯೋಗ ಹಾಗೂ ಉತ್ತರದೇಶಸಂಯೋಗವನ್ನು ಹೇಳಲಿಕ್ಕೆ ಬರುವುದಿಲ್ಲ.

ಈ ಸೂಕ್ಷ್ಮ ಪ್ರಶ್ನೆಗೆ ವ್ಯಾಸರಾಜರು ಅತ್ಯಂತ ವಿಸ್ತಾರವಾಗಿ, ಸಮರ್ಪಕವಾಗಿ, ಸ್ವಾರಸ್ಯ ರೀತಿಯಿಂದ ಉತ್ತರವನ್ನು ಕೊಟ್ಟಿದ್ದಾರೆ.

ಮೊದಲನೆಯದಾಗಿ ಒಂದು ಕ್ರಿಯೆಯಾಗಬೇಕಾದರೆ, ಆ ವಸ್ತುವಿನಲ್ಲಿ 'ಮಹತ್ವ' ಪರಿಮಾಣವು ಪ್ರತಿಬಂಧಕವಲ್ಲ. ಕ್ರಿಯಾಗೆ 'ಅಣುತ್ವ' ಪರಿಣಾಮವು ಪ್ರಯೋಜಕ ಧರ್ಮ ಹೊರತು ಮಹತ್ವಾಭಾವವಾಗಲಿ, ಮಹತ್ವಾಭಾವವಿಶಿಷ್ಟ ಅಣುತ್ವವಾಗಲಿ ಪ್ರಯೋಜಕ ಧರ್ಮವಲ್ಲ. ಯಾಕೆಂದರೆ ಪ್ರಯೋಜಕಧರ್ಮವು ಎಷ್ಟು ಲಘುಭೂತವಾಗಿರುತ್ತದೋ ಅಷ್ಟು ಒಳ್ಳೆಯದು. ಕ್ರಿಯಾವತ್ವಕ್ಕೆ ಲಘುಭೂತವಾದ 'ಅಣುತ್ವ'ವನ್ನು ಪ್ರಯೋಜಕಧರ್ಮವೆಂದು ಹೇಳಬೇಕು ಹೊರತು, 'ಅಭಾವ' ಘಟಿತವಾದ ಗುರುಭೂತವಾದ 'ಮಹತ್ವಾಭಾವ'ವನ್ನಾಗಲೀ, ಮಹತ್ವಾಭಾವವಿಶಿಷ್ಟ ಅಣುತ್ವವನ್ನಾಗಲಿ ಪ್ರಯೋಜಕಧರ್ಮವನ್ನಾಗಿ ಹೇಳಬಾರದು. ವಿಷ್ಣುವಿನಲ್ಲಿ ಅಣುತ್ವವಿದೆಯಾದ್ದರಿಂದ ಅವನಲ್ಲಿ ಕ್ರಿಯಾವನ್ನು ಹೇಳಬಹುದು. ಆಕಾಶದಲ್ಲಿ ಅಣುತ್ವವು ಇಲ್ಲದಿರುವುದರಿಂದ ಅದರಲ್ಲಿ ಕ್ರಿಯಾ ಇಲ್ಲ.

ಆದರೆ ಇದರ ಮೇಲೆ ಹೀಗೆ ಪ್ರಶ್ನೆ ಬರಬಹುದು - ಅಕ್ರಿಯಾತ್ವಕ್ಕೆ ಪ್ರಯೋಜಕಧರ್ಮ ಮಹತ್ವ (ಉದಾ:- ಆಕಾಶದಲ್ಲಿ ಕ್ರಿಯಾ ಇಲ್ಲ. ಯಾಕೆಂದರೆ 'ಮಹತ್ವ' ಇರುವುದರಿಂದ) ಹೊರತು ಅಣುತ್ವಾಭಾವವಲ್ಲ. ಅಥವಾ ಅಣುತ್ವಾಭಾವವಿಶಿಷ್ಟಮಹತ್ವವಲ್ಲ. ಯಾಕೆಂದರೆ 'ಮಹತ್ವ' ಎಂಬ ಧರ್ಮವನ್ನು ಒಪ್ಪಿದರೆ ಲಘುಭೂತ. ಅಭಾವವಿಶಿಷ್ಟಧರ್ಮವನ್ನು ಒಪ್ಪಿದರೆ, ಗುರುಭೂತ. ಆದ್ದರಿಂದ ಕ್ರಿಯಾವತ್ವಕ್ಕೆ ಅಣುತ್ವವು ಲಘುಭೂತವಾದ ಪ್ರಯೋಜಕಧರ್ಮವಿದ್ದಂತೆ. ಅಕ್ರಿಯಾತ್ವಕ್ಕೆ ಮಹತ್ವವು ಲಘುಭೂತವಾದ ಪ್ರಯೋಜಕಧರ್ಮ ಅಷ್ಟೇ ಅಲ್ಲದೆ. ಮಹತ್ವವಿದ್ದರೂ ಕ್ರಿಯಾ ಇರುವುದಾದರೆ, 'ಉತ್ಕ್ರಾಂತಿಗತ್ಯಾಗತೀನಾಂ' ಎಂಬ ಸೂತ್ರದಲ್ಲಿ, ಜೀವನಿಗೆ ಕ್ರಿಯಾ ಇರುವುದರಿಂದ ಅಣುತ್ವವನ್ನು ಉಪಪಾದನೆ ಮಾಡಿರುವುದು ತಪ್ಪಾಗುತ್ತದೆ.

ಈ ಅಭ್ಯಧಿಕಾಶಂಕೆಗೆ ಉತ್ತರ ಕೊಡುತ್ತಾ ವ್ಯಾಸರಾಜರು ಹೇಳುತ್ತಾರೆ. ಕ್ರಿಯಾವತ್ವಕ್ಕೆ ಪ್ರಯೋಜಕಧರ್ಮ ಮಹತ್ವಾಭಾವ ಎಂದು ಹೇಳಿದರೆ, ಗುಣ, ಜಾತಿ ಮೊದಲಾದ ಪದಾರ್ಥಗಳಿಗೂ

'ಕ್ರಿಯಾ'ವನ್ನು ಹೇಳಬೇಕಾಗುತ್ತದೆ. ಅವುಗಳಲ್ಲಿ 'ಮಹತ್ವ'ವಿಲ್ಲದಿರುವುದರಿಂದ (ನೈಯ್ಯಾಯಿಕರು ಗುಣ, ಜಾತಿಗಳಲ್ಲಿ ಗುಣವನ್ನು ಒಪ್ಪುವುದಿಲ್ಲ) ಅಷ್ಟೇ ಅಲ್ಲ, ಅಕ್ರಿಯತ್ವಕ್ಕೆ 'ಮಹತ್ವ'ವೂ ಪ್ರಯೋಜಕಧರ್ಮವಲ್ಲ. ಯಾಕೆಂದರೆ, ಗುಣದಲ್ಲಿ 'ಮಹತ್ವ'ವಿಲ್ಲ. ಆದರೂ ಅಕ್ರಿಯತ್ವ ಇದೆ. ಅಂದರೆ ಪ್ರಯೋಜಕಧರ್ಮವಿಲ್ಲದಿದ್ದರೂ ಕಾರ್ಯ ಇದೆಯೆಂದರೆ ಅದು ಪ್ರಯೋಜಕಧರ್ಮವಲ್ಲವೆಂದು ಹೇಳಬೇಕು.

ಆದ್ದರಿಂದ ಕ್ರಿಯಾವತ್ವಕ್ಕೆ ಅಣುತ್ವವೇ ಪ್ರಯೋಜಕ ಹೊರತು, ಮಹತ್ವಾಭಾವವಲ್ಲ ಹಾಗೂ ಅಕ್ರಿಯತ್ವಕ್ಕೆ ಅಣುತ್ವಾಭಾವನೇ ಪ್ರಯೋಜಕ ಹೊರತು ಮಹತ್ವವಲ್ಲ. ವ್ಯಾಸರಾಜರು ಅಕ್ರಿಯತ್ವದ ಪ್ರಯೋಜಕಧರ್ಮಕ್ಕೆ ಒಂದು ಸುಲಭ ಉಪಾಯವನ್ನು ಹೇಳುತ್ತಾರೆ. ಮೊದಲು ಕ್ರಿಯಾವತ್ವಕ್ಕೆ ಪ್ರಯೋಜಕಧರ್ಮ 'ಅಣುತ್ವ' ಎಂದು ನಿರ್ಣಯವಾದ ಮೇಲೆ, ಅಕ್ರಿಯಾತ್ವಕ್ಕೆ ತದಭಾವವನೇ (ಅಣುತ್ವಾಭಾವವನ್ನೇ) ಪ್ರಯೋಜಕಧರ್ಮ ಎಂದು ಹೇಳುವುದು ಸೂಕ್ತ. ಉದಾ:- ಧೂಮಕ್ಕೆ ಪ್ರಯೋಜಕ ಅಗ್ನಿಯಾದರೆ, ಧೂಮಾಭಾವಕ್ಕೆ ಪ್ರಯೋಜಕಧರ್ಮ ಅಗ್ನ್ಯಾಭಾವ ಇಲ್ಲಿ ಒಂದು ಸಂಶಯ ಬರಬಹುದು.

ಕ್ರಿಯಾವತ್ವಕ್ಕೆ ಮಹತ್ವಾಭಾವ ಪ್ರಯೋಜಕ ಎಂದು ಹೇಳಿದರೆ. ಗುಣಜಾತ್ಯಾದಿಗಳಲ್ಲಿ ವ್ಯಭಿಚಾರವು ಇದೆ ಎಂದು ವ್ಯಾಸರಾಜರು ಹೇಳಿದರು. ಆದರೆ 'ಮಹತ್ವಾಭಾವ ವಿಶಿಷ್ಟಅಣುತ್ವ'ವು ಪ್ರಯೋಜಕಧರ್ಮವೆಂದು ಹೇಳಿದರೆ ಆಗ ವ್ಯಭಿಚಾರ ಬರುವುದಿಲ್ಲ. ಯಾಕೆಂದರೆ ಗುಣ, ಜಾತಿಗಳಲ್ಲಿ ಅಣುತ್ವವು ಇಲ್ಲ.

ಈ ಸಂಶಯಕ್ಕೆ ವ್ಯಾಸರಾಜರು ಈ ರೀತಿಯಲ್ಲಿ ಸಮಾಧಾನವನ್ನು ಹೇಳಿದ್ದಾರೆ. ಲಘುಭೂತವಾದ ಅಣುತ್ವವು ಪ್ರಯೋಜಕಧರ್ಮ ಎಂದು ಒಪ್ಪುವುದರಿಂದಲೇ ಕ್ರಿಯಾವತ್ವವನ್ನು ನಿರ್ವಹಣೆ ಮಾಡುವುದಕ್ಕೆ ಬರುವಾಗ, ಗುರುಭೂತವಾದ ಮಹತ್ವಾಭಾವವಿಶಿಷ್ಟ ಅಣುತ್ವವು ಪ್ರಯೋಜಕಧರ್ಮವೆಂದು ಹೇಳುವುದು ಸೂಕ್ತವಲ್ಲ. ಈ ಸಮಾಧಾನವನ್ನು ಹಿಂದೆಯೇ ಹೇಳಿದ್ದರು.

ಇದೇ ನಿಯಮವನ್ನು ಉಪಯೋಗಿಸಿ, ಸಿದ್ಧಾಂತಿಗೂ ದೋಷವನ್ನು ಹೇಳಬಹುದು ಎಂದು ಪೂರ್ವಪಕ್ಷಿ ಶಂಕಿಸಬಹುದು. ನಾವು ಅಕ್ರಿಯತ್ವಕ್ಕೆ ಅಣುತ್ವಾಭಾವ ಪ್ರಯೋಜಕ ಎಂದು ಹೇಳಿದರೆ, ಪೂರ್ವಪಕ್ಷಿ ಇದು ಗುರುಭೂತವಾದ ಪ್ರಯೋಜಕಧರ್ಮವಾದ್ದರಿಂದ ಲಘುಭೂತವಾದ 'ಮಹತ್ವ'ವನ್ನೇ ಪ್ರಯೋಜಕಧರ್ಮ ಎಂದು ಹೇಳಿರಿ, ಕ್ರಿಯಾವತ್ವಕ್ಕೆ ಮಹತ್ವಾಭಾವವನ್ನೇ ಪ್ರಯೋಜಕಧರ್ಮ ಎಂದು ಹೇಳಿರಿ ಎಂದು.

ಆದ್ದರಿಂದ ಸಿದ್ಧಾಂತಿಯು ಕ್ರಿಯಾವತ್ವಕ್ಕೆ ಅಣುತ್ವ ಪ್ರಯೋಜಕ, ಅಕ್ರಿಯತ್ವಕ್ಕೆ ಅಣುತ್ವಾಭಾವ ಪ್ರಯೋಜಕ ಎಂದು ಹೇಳಿದರೆ, ಪೂರ್ವಪಕ್ಷಿಯು ಅಕ್ರಿಯತ್ವಕ್ಕೆ ಮಹತ್ವ ಪ್ರಯೋಜಕ, ಕ್ರಿಯಾವತ್ವಕ್ಕೆ ಮಹತ್ವಾಭಾವಪ್ರಯೋಜಕ ಎಂದು ಹೇಳುತ್ತಾನೆ.

ಆದ್ದರಿಂದ ಇವೆರಡರಲ್ಲಿ ಯಾವುದು ಸರಿಯಾದದ್ದು ಎಂಬ ಸಂದೇಹ ಮತ್ತೆ ಬರುತ್ತದೆ.

*ಪರಿಪೂರ್ಣಚಂದ್ರಿಕಾ*

ಇದಕ್ಕೆ ವ್ಯಾಸರಾಜರು ಒಂದು ಮಹತ್ತ್ವವಾದ ಪದವನ್ನು ಸೇರಿಸಿದ್ದಾರೆ. 'ಭಾವರೂಪಾಯಾಂ ಕ್ರಿಯಾಯಾಂ ಪೂರ್ವಮ್ ಧೀಸ್ಥಂ ಅಣುತ್ವರೂಪಂ ಪ್ರಯೋಜಕಂ' ಎಂದು. ಅಂದರೆ ಒಂದರ ಅಭಾವಕ್ಕೆ ಪ್ರಯೋಜಕಧರ್ಮವನ್ನು ಹುಡುಕುವಾಗ ಮೊದಲು ಅದರ ಸತ್ವಕ್ಕೆ ಪ್ರಯೋಜಕಧರ್ಮವನ್ನು ಹುಡುಕಬೇಕು. ಆಮೇಲೆ ಅಭಾವಕ್ಕೆ, ಆ ಸತ್ವಪ್ರಯೋಜಧರ್ಮದ ಅಭಾವವೇ ಪ್ರಯೋಜಕಧರ್ಮವಾಗುತ್ತದೆ. ಉದಾ:- ಹಿಂದೆ ದೃಷ್ಟಾಂತ ಹೇಳಿದಂತೆ, ಧೂಮಾಭಾವಕ್ಕೆ ಯಾವುದು ಪ್ರಯೋಜಕ ಎಂದು ಪ್ರಶ್ನೆ ಬಂದಾಗ, ಮೊದಲು ಧೂಮಕ್ಕೆ ಯಾವುದು ಪ್ರಯೋಜಕ ಎಂಬುದನ್ನು ಗುರುತಿಸಬೇಕು. ಇಲ್ಲಿ ಅಗ್ನಿಯು ಪ್ರಯೋಜಕ ಎಂದು ಗೊತ್ತಾದ ಮೇಲೆ ಧೂಮಾಭಾವಕ್ಕೆ ಪ್ರಯೋಜಕ ಅಗ್ನ್ಯಭಾವ ಎಂದು ಗೊತ್ತಾಗುತ್ತದೆ. ಅದರಂತೆ ಇಲ್ಲಿಯೂ ತಿಳಿಯಬೇಕು.

ಜಿಜ್ಞಾಸು

# ವಿಷಯಾನುಕ್ರಮಣಿಕೆ

## ಅಂತರ್ಯಾಮ್ಯಧಿಕರಣ

### ಭಾಷ್ಯ ತತ್ತ್ವಪ್ರಕಾಶಿಕಾ



### ತಾತ್ಪರ್ಯಚಂದ್ರಿಕಾ

## ಅದೃಶ್ಯತ್ವಾಧಿಕರಣ -
## ಭಾಷ್ಯ ತತ್ತ್ವಪ್ರಕಾಶಿಕಾ



## ತಾತ್ಪರ್ಯಚಂದ್ರಿಕಾ

# ವೈಶ್ವಾನರಾಧಿಕರಣ -
## ಭಾಷ್ಯ ತತ್ತ್ವಪ್ರಕಾಶಿಕಾ



## ತಾತ್ಪರ್ಯಚಂದ್ರಿಕಾ

## ದ್ಯುಭ್ವಾದ್ಯಧಿಕರಣ

### ಭಾಷ್ಯ ತತ್ತ್ವಪ್ರಕಾಶಿಕಾ



*ಪರಿಪೂರ್ಣಚಂದ್ರಿಕಾ*

## ತಾತ್ಪರ್ಯಚಂದ್ರಿಕಾ

# ಭೂಮಾಧಿಕರಣ

## ಭಾಷ್ಯ ತತ್ತ್ವಪ್ರಕಾಶಿಕಾ



## ತಾತ್ಪರ್ಯಚಂದ್ರಿಕಾ

* * * * *

# ಅಂತರ್ಯಾಮ್ಯಧಿಕರಣ

(೧-೨-೫)

## ಭಾಗ -೧

ಬ್ರಹ್ಮಸೂತ್ರ, ಸೂತ್ರದೀಪಿಕಾ, ಬ್ರಹ್ಮಸೂತ್ರಭಾಷ್ಯ,
ಸತ್ತರ್ಕದೀಪಾವಳಿ, ತತ್ವಪ್ರಕಾಶಿಕಾ,
ಭಾವದೀಪ ಇವುಗಳ ವಿವರಣೆಯೊಂದಿಗೆ
ಸರಳ ಕನ್ನಡ ಅನುವಾದ

* * *

ಭಾಷ್ಯದೀಪಿಕಾ ಹಾಗೂ ವಾಕ್ಯಾರ್ಥಮಂಜರೀ -
ಸಂಪೂರ್ಣ ಸಂಸ್ಕೃತ ಮೂಲ.

॥ ಶ್ರೀಗುರುಭ್ಯೋ ನಮಃ ॥

# ಅಂತರ್ಯಾಮ್ಯಧಿಕರಣ

ದೇವದೇವೋತ್ತಮ ದೇವತಾಸಾರ್ವಭೌಮ
ಅಖಿಲಾಂಡಕೋಟಿಬ್ರಹ್ಮಾಂಡನಾಯಕ,ಚತುರ್ದಶಲೋಕಗುರುಗಳಾದ
ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ

## ಬ್ರಹ್ಮಮೀಮಾಂಸಾಶಾಸ್ತ್ರ

## 'ಅಂತರ್ಯಾಮಿ' ಎಂದರೆ ಮಹಾವಿಷ್ಣುವೇ

**ॐ ॥ अन्तर्याम्यधिदैवादिषु तद्धर्मव्यपदेशात् ॥ ॐ ॥ १८ ॥**

ಸೂತ್ರಾರ್ಥ - 'ಏಷ ಆತ್ಮಾಂऽತರ್ಯಾಮೀ' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ಅಂತರ್ಯಾಮಿಯು ವಿಷ್ಣುವೇ ಆಗಿದ್ದಾನೆ. ಏಕೆಂದರೆ ಅಧಿದೈವಾದಿಪ್ರಕರಣಗಳಲ್ಲಿ ಅವಿದಿತತ್ವವೇ ಮೊದಲಾದ ವಿಷ್ಣುವಿನ ಧರ್ಮಗಳನ್ನು ಹೇಳಿರುವುದರಿಂದ.

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका** — 'एष आत्माऽन्तर्यामी' इति श्रुत्युक्तोऽन्तर्यामी विष्णुरेव न प्रधानादिः । कुतः? अधिदैवादिषु अधिदैवाध्यात्माधिभूतादिप्रकरणेषु । तद्धर्मव्यपदेशात् । तस्मिन् अन्तर्यामिणि । तस्य 'यं पृथिवी न वेद' इति श्रुतौ उक्तस्याविदितत्वादिब्रह्मधर्मस्य व्यपदेशाद् उक्तत्वादित्यर्थः ॥

ಅರ್ಥ — 'ಏಷ ಆತ್ಮಾ ಅಂತರ್ಯಾಮೀ' ಎಂಬ ಬೃಹದಾರಣ್ಯಕಶ್ರುತಿಯು ಈ ಸೂತ್ರಕ್ಕೆ ವಿಷಯವಾಗಿದೆ. ಇಲ್ಲಿ ಹೇಳಲ್ಪಟ್ಟ ಅಂತರ್ಯಾಮಿಯು ವಿಷ್ಣುವೇ ಆಗಿದ್ದಾನೆ; ಹೊರತು ಪ್ರಕೃತ್ಯಾದಿಗಳಲ್ಲ. ಏಕೆಂದರೆ

ಅಧಿದೈವಾದಿಷು = ಅಧಿದೈವ, ಅಧ್ಯಾತ್ಮ, ಅಧಿಭೂತ ಮೊದಲಾದ ಪ್ರಕರಣಗಳಲ್ಲಿ, ತದ್ಧರ್ಮವ್ಯಪದೇಶಾತ್ = ಅಂತರ್ಯಾಮಿಯಲ್ಲಿ 'ಯಂ ಪೃಥಿವೀ ನ ವೇದ' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ಅವಿದಿತತ್ವ ಮೊದಲಾದ ಬ್ರಹ್ಮನ ಧರ್ಮಗಳನ್ನು ಹೇಳಿರುವುದರಿಂದ.

## श्रीमदानन्दतीर्थभगवत्पादाचार्यविरचित-
## ब्रह्मसूत्रभाष्यम्

**भाष्यम् – 'यः पृथिव्यां तिष्ठन् पृथिव्या अन्तरो यं पृथिवी न वेद यस्य पृथिवी शरीरं यः पृथिवीमन्तरो यमयत्येष त आत्माऽन्तर्याम्यमृतः' (बृ. ५-७-३) इत्यादि नाऽन्तर्याम्युच्यते ।**

ಅನುವಾದ - 'ಯಾರು ಪೃಥಿವಿಯಲ್ಲಿ ನೆಲೆಸಿ ಅದಕ್ಕಿಂತಲೂ ಭಿನ್ನನಾಗಿ ಇರುವನೋ ಯಾರನ್ನು ಪೃಥಿವೀ ಮೊದಲಾದ ದೇವತಾಸಮೂಹವು ತಿಳಿಯಲು ಸಾಧ್ಯವಿಲ್ಲವೋ ಯಾರು ಅಲ್ಲಿದ್ದು ಸ್ವರಮಣನಾಗಿ ಎಲ್ಲವನ್ನೂ ನಿಯಮನ ಮಾಡುತ್ತಾನೋ, ಅಂತಹ ಪುರುಷನೇ ನಿನ್ನ ಒಳಗಿದ್ದು ನಿಯಮಿಸುತ್ತಿದ್ದಾನೆ. ಈ ಪುರುಷನೇ ನಿನಗೆ ಸ್ವಾಮಿಯಾಗಿದ್ದಾನೆ. ಎಲ್ಲರ ಅಂತರ್ಯಾಮಿಯೂ ಆಗಿದ್ದಾನೆ. ಮತ್ತು ನಾಶ ರಹಿತನಾಗಿದ್ದಾನೆ'

ಇವೇ ಮೊದಲಾದ ವಾಕ್ಯಗಳಿಂದ ಎಲ್ಲರಲ್ಲಿಯೂ ಒಬ್ಬನೇ ವ್ಯಕ್ತಿಯು ನೆಲೆಸಿದ್ದಾನೆಂದು ಹೇಳಲ್ಪಟ್ಟಿದೆ.

ಪ್ರತಿಪದಾರ್ಥ -- ಈ ಅಧಿಕರಣದಲ್ಲಿ ಅಂತಃಸ್ಥತ್ವ ಎಂಬ ಭಾವಧರ್ಮದಿಂದ ಸಹಿತವಾದ ನಿಯಮನ ಎಂಬ ಕ್ರಿಯಾರೂಪವಾದ ಲಿಂಗದ ಸಮನ್ವಯವನ್ನು ಬ್ರಹ್ಮನಲ್ಲಿ ಮಾಡಲಾಗಿದೆ. ವಿಷಯವಾಕ್ಯವನ್ನು ಉದಾಹರಿಸುವ ಮೂಲಕ ವಿಷಯವನ್ನು ತೋರಿಸುತ್ತಿದ್ದಾರೆ.

ಯಃ = ಯಾವಾತನು, ಪೃಥಿವ್ಯಾಂ = ಭೂಮಿಯಲ್ಲಿ, ತಿಷ್ಠನ್ = ನೆಲೆಸಿದವನಾಗಿ, ಪೃಥಿವ್ಯಾಃ = ಪೃಥಿವಿಯಿಂದ ಹಾಗೂ ತದಭಿಮಾನಿದೇವತೆಯಿಂದ, ಅಂತರಃ = ಭಿನ್ನನಾಗಿದ್ದಾನೋ, ಯಂ = ಯಾವಾತನನ್ನು, ಪೃಥಿವೀ = ಪೃಥಿವೀ ಮೊದಲಾದ ದೇವತಾವೃಂದವು, ನ ವೇದ = ತಿಳಿಯುವುದಿಲ್ಲವೋ, ಯಸ್ಯ = ಯಾವನಿಗೆ, ಪೃಥಿವೀ = ಪೃಥಿವಿಯೇ, ಪೃಥಿವೀ ಅಭಿಮಾನಿ ದೇವತೆಯೇ, ಶರೀರಂ = ದೇಹವಾಗಿದೆಯೋ, ಯಃ = ಯಾವಾತನು, ಪೃಥಿವೀಂ = ಪೃಥಿವೀ ಮೊದಲಾದ ದೇವತಾವೃಂದವನ್ನು, ಅಂತರಃ = ಒಳಗಡೆ ಇದ್ದು, ಯಮಯತಿ = ಪ್ರೇರಣೆ ಮಾಡುತ್ತಾನೋ, ಏಷಃ = ಅಂತಹ ಈ ಪುರುಷನೇ, ತೇ= ನಿನಗೆ, ಆತ್ಮಾ = ಹೃದಯದಲ್ಲಿ ನೆಲೆಸಿರುವ ಸ್ವಾಮಿಯು ಮತ್ತು, ಅಂತರ್ಯಾಮೀ = ಎಲ್ಲೆಡೆ ಎಲ್ಲರ ಹೃದಯದಲ್ಲಿ ನೆಲೆಸಿರುವವನು, ಅಮೃತಃ = ನಾಶ ರಹಿತನು.

ಅಂತರ್ಯಾಮ್ಯಧಿಕರಣ (೧-೨-೫)

ಇತ್ಯಾದಿ = ಇವೇ ಮೊದಲಾದ ವಾಕ್ಯಗಳಿಂದ (ವಾಕ್ಯಗಳಲ್ಲಿ),
ಅಂತರ್ಯಾಮೀ = ಎಲ್ಲರ ಹೃದಯದಲ್ಲಿ ನೆಲೆಸಿರುವ ವ್ಯಕ್ತಿಯು ಒಬ್ಬನೇ ಎಂದು,
ಉಚ್ಯತೇ = ಕರೆಸಿಕೊಳ್ಳುತ್ತಾನೆ.(೧)

**भाष्यम् – तत्र च 'एतदमृतम्'(छां. ४-१५.१) इत्युक्तममृतत्वमुच्यते । स च 'यस्य पृथिवी शरीरम्' इत्यादिना सर्वात्मकत्वात् प्रकृतिस्तत्तज्जीवो वा युक्तः ।**

ಅನುವಾದ - ಆ ಪರಮಾತ್ಮನಲ್ಲಿ 'ಏತದಮೃತಮ್, ಏತದಭಯಮ್' ಇತ್ಯಾದಿಯಾಗಿ ಛಾಂದೋಗ್ಯದಲ್ಲಿ ಹೇಳಿದಂತೆ ನಾಶವಿಲ್ಲದಿರುವಿಕೆಯು ತಿಳಿಯುತ್ತದೆ. 'ಯಸ್ಯ ಪೃಥಿವೀ ಶರೀರಮ್' ಇತ್ಯಾದಿಯಾಗಿ ಸರ್ವಾತ್ಮಕತ್ವವು ಹೇಳಲ್ಪಟ್ಟಿದೆ. ಈ ಧರ್ಮವು ಪ್ರಕೃತಿ

---

(१) **भाष्यदीपिका** – अत्राधिकरणेऽन्तःस्थत्वरूपभावसहितं नियमनक्रियात्मकं लिङ्गं ब्रह्मणि समन्वीयते । विषयवाक्योदाहरणपूर्वकं विषयं दर्शयति – य इति ।। इत्यादीति प्रथमा सप्तम्यर्थे । तृतीयार्थे वा । 'सप्तसु प्रथमा' इति सूत्रात् । 'क्रियाविशेषणं वा' इति तत्त्वप्रदीपोक्तेः 'इत्यादिना' इति पाठस्तद्विरुद्धः । वाक्ये, वाक्येनेति वा शेषः। 'योऽप्सु तिष्ठन्' 'यो भूतेषु तिष्ठन्' इत्यादिकमादिशब्देन गृह्यते । अन्तर्यामीत्यनेन विषयो दर्शितः । बृहदारण्यके उद्दालकं प्रति याज्ञवल्क्येनोक्तम् इदं वाक्यम् । 'यः पृथिव्यां' पृथुं विष्णुमूढ्वा वाति गच्छतीति पृथिवी गरुडः, तस्मिन् तिष्ठन् 'पृथिव्याः' तदभिमानिचेतनात् 'अन्तरः' विविक्तः । 'यं च पृथिवी' तदभिमानी चेतनो न वेद साकल्येन । 'यस्य च पृथिवी' तद्वशत्वनिमित्तात् शरीरभूता । न केवलं तत्र स्थितिमात्रं, किन्तु 'योऽन्तरः' अन्तःस्थित्वा बाह्यविषयापेक्षां विना रममाणः । स्वतो नित्यतृप्तः -
'............ सोऽन्तरः स्ववशत्वतः ।
बाह्यापेक्षां विना यस्तु रमते सोऽन्तरः स्मृतः' ।। इति बृहद्भाष्योक्तेः ।
यद्वा -
'अतिप्रियत्वाच्च हरेरन्तरत्वमुदाहृतम् ।।' इति तत्रैवोक्तेः । 'प्रेयः पुत्रात्' इत्यादिश्रुत्या परमप्रेयोरूपत्वात् 'अन्तरः' अतिप्रियः सन् 'पृथिवीं' गरुडं 'यमयति' नियमयति । एषः 'ते' तव 'अन्तर्याम्यात्मा' नियामकः पुरुषः 'अमृतः' नित्य इति श्रुत्यर्थः ।।
एतेन 'अन्तरो विविक्तः' इति टीकाया बृहद्भाष्यविरोधो निरस्तः । बृहद्भाष्यस्य 'य आत्मानम्' इत्यत्रस्थान्तरशब्दविषयत्वात् । अत एव न श्रुतौ पौनरुक्त्यम् । द्वयोर्भिन्नार्थत्वात् । पूर्वपक्षी त्विदं वाक्यमन्यपरं मन्यते ।।

ಅಥವಾ ಆಯಾ ಜೀವರಲ್ಲಿ ಕಂಡುಬರುವುದರಿಂದ ಅಮೃತತ್ವಧರ್ಮವು ಅವರಿಗೇ ಸರಿಹೊಂದುತ್ತದೆ.

ಪ್ರತಿಪದಾರ್ಥ -- ಹಿಂದಿನ ಅಧಿಕರಣದ ವಿಷಯವಾಕ್ಯದಿಂದ ಸಂಗತಿಯನ್ನು ತೋರಿಸುತ್ತಿದ್ದಾರೆ.

ತತ್ರ ಚ = ಅಂತಹ ಪರಮಾತ್ಮನಲ್ಲಿ, ಏತದಮೃತಂ = 'ಏತದಮೃತಮ್, ಏತದಭಯಂ' ಎಂದು ಛಾಂದೋಗ್ಯದಲ್ಲಿ, ಉಕ್ತಮ್ = ಹೇಳಲಾಗಿದೆ. ಅಮೃತಂ = ನಾಶವಿಲ್ಲದಿರುವಿಕೆಯು, ಉಚ್ಯತೇ = ಹೇಳಲ್ಪಟ್ಟಿದೆ.

ಸ ಚ = ಇಂತಹ ಧರ್ಮಗಳಿಂದ ಹೇಳಿಸಿಕೊಳ್ಳುವವನು, ಪೃಥಿವೀ ಶರೀರಂ - = ಪೃಥಿವಿಯೇ ಶರೀರವು, ಯಸ್ಯ = ಯಾವನಿಗಿದೆಯೋ, ಇತ್ಯಾದಿನಾ = ಇವೇ ಮೊದಲಾದ ಪ್ರಮಾಣಗಳಿಂದ, ಸರ್ವಾತ್ಮಕತ್ವಾತ್ = ಎಲ್ಲೆಡೆ ವ್ಯಾಪ್ತವಾಗಿರುವಿಕೆ ಎಂಬ ಕಾರಣದಿಂದ, ಪ್ರಕೃತಿಃ = ಚಿತ್‌ಪ್ರಕೃತಿ ಅಥವಾ ಜಡಪ್ರಕೃತಿಯು, ತತ್ತಜ್ಜೀವೋ ವಾ = ಅಥವಾ ಅಲ್ಲಿರುವ ಜೀವರು, ಯುಕ್ತಃ = ಅಂತರ್ಯಾಮಿತ್ವವೆಂಬ ಧರ್ಮವುಳ್ಳವರೆಂದು ಹೇಳಬಹುದು.[१]

**भाष्यम् – नहि विष्णोः पृथिव्यादिशरीरत्वमङ्गीक्रियत इति ।**

ಅನುವಾದ - ವಿಷ್ಣುವಿಗೆ ಪೃಥಿವಿಯು ಶರೀರವಾಗಿರುವಿಕೆಯನ್ನು ಅಂಗೀಕರಿಸುವುದಿಲ್ಲ. ಆದ್ದರಿಂದ ವಿಷ್ಣುವು ಅಂತರ್ಯಾಮಿಯಲ್ಲ. ಹೀಗೆ ಆಕ್ಷೇಪ.

---

(१) भाष्यदीपिका – पूर्वाधिकरणतद्विषयवाक्यसङ्गतिं दर्शयति – तत्रेति ॥ इयमत्र तत्त्वप्रदीपोक्ता योजना – 'यः पृथिव्यां तिष्ठन्' इत्यादिवाक्येष्वन्तर्याम्युच्यते । तत्र च तद्वाक्येष्वेव तस्मिन्नेवान्तर्यामिणि 'एतदमृतमेतदभयम्' इति पूर्वनयोदाहृत-छान्दोग्यवाक्येऽक्षिपुरुषस्योक्तममृतत्वम् 'एष त आत्माऽन्तर्याम्यमृतः' इत्यनेन उच्यत इति । अनेन बृहदारण्यकोक्तान्तर्यामिणि विष्ण्वन्यत्वाक्षेपमुखेन तदुक्तामृतत्वस्याप्यन्यनिष्ठत्वं सम्पाद्य तस्य पूर्वाधिकरणोक्ताक्षिस्थत्वस्य विष्णुत्वसाधकत्वाक्षेपात् पूर्वेणाऽऽक्षेपिकी सङ्गतिरुक्ता भवति । ततः किमित्यतः सयुक्तिकं पूर्वपक्षयति – स चेति ॥ चशब्दो हेतुसमुच्चये । आदिपदेन 'यस्याऽपः शरीरम्' इत्यादेः सङ्ग्रहः । तच्छब्दस्य विपरिणामेन हेतुवाक्येन सम्बध्यते । आत्मशब्दः स्वरूपशरीरोभयार्थः । तथा च सोऽन्तर्यामी जडचेतनोभयरूपा प्रकृतिः पृथिव्यादितत्तज्जीवो वा युक्तः । कुतः? श्रौतशरीरशब्दस्य 'इदं पूर्वपक्षशरीरम्' इत्यादाविव स्वरूपार्थत्वात् । जडप्रकृतेश्च सर्वोपादानत्वेन सर्वात्मकत्वात् । चित्प्रकृतेश्च सर्वाभिमानित्वेन सर्वात्मकत्वात् पृथिव्यादिजीवस्य पृथिव्यादिसर्वशरीरत्वादिति योजना ॥

ಪ್ರತಿಪದಾರ್ಥ - - ಯಾವ ರೀತಿಯಾಗಿ ಪ್ರಕೃತಿ ಮೊದಲಾದ ಲಿಂಗಗಳಿಂದ ಪ್ರಕೃತಿಯನ್ನು ಅಂತರ್ಯಾಮಿಯೆಂದು ಹೇಳುವ ಲಿಂಗಗಳಿರುವುದರಿಂದ ಪ್ರಕೃತ್ಯಾದಿಗಳನ್ನು ಅಂತರ್ಯಾಮಿಯೆಂದು ಹೇಳಲಾಗುತ್ತದೋ ಅದರಂತೆ ಅಮೃತತ್ವ ಎಂಬ ಲಿಂಗದಿಂದ ವಿಷ್ಣುವನ್ನು ಅಂತರ್ಯಾಮಿಯೆಂದು ಏಕೆ ಹೇಳಬಾರದು? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ.

ಪೃಥಿವ್ಯಾದಿಶರೀರತ್ವಂ = ಪೃಥಿವಿಯೇ ದೇಹವಾಗಿರುವಿಕೆಯು, ವಿಷ್ಣೋಃ ನಾಂಗೀಕ್ರಿಯತೇ = ವಿಷ್ಣುವಿಗೆ ಒಪ್ಪುವುದಿಲ್ಲ. ಆದ್ದರಿಂದ ವಿಷ್ಣು ಸರ್ವಾಂತರ್ಯಾಮಿಯು ಆಗುವುದಿಲ್ಲ. ಇತಿ = ಹೀಗೆ ಪೂರ್ವಪಕ್ಷಸ್ವರೂಪವು.(१)

**भाष्यम् – अत आह -**

**ॐ ॥ अन्तर्याम्यधिदैवादिषु तद्धर्मव्यपदेशात् ॥ ॐ ॥१८॥**

**'यं पृथिवी न वेद, यः पृथिव्या अन्तरः' (बृ. ५-७-३.) इत्यादिना अधिदैवादिषु तद्धर्मव्यपदेशाद् विष्णुरेवान्तर्यामी ।**

ಅನುವಾದ - ಹಿಂದಿನ ಆಕ್ಷೇಪಕ್ಕೆ ಸೂತ್ರಕಾರರು ಉತ್ತರಿಸುತ್ತಿದ್ದಾರೆ 'ಯಂ ಪೃಥಿವೀ ನ ವೇದ' ಇತ್ಯಾದಿಯಾಗಿ ಬೃಹದಾರಣ್ಯಕದ ವಾಕ್ಯಗಳಿಂದ ಇಲ್ಲಿರುವ ಅಧಿದೈವ, ಅಧಿಭೂತ, ಅಧ್ಯಾತ್ಮ ಈ ಮೂರು ಪ್ರಕರಣಗಳಲ್ಲಿಯೂ ಅಂತರ್ಯಾಮಿಯೆಂದು ಪ್ರತಿಪಾದ್ಯನಾದವನು ವಿಷ್ಣುವೇ ಆಗಿದ್ದಾನೆ. ಆ ಧರ್ಮಗಳೂ ಸಹ ವಿಷ್ಣುವಿನದ್ದೇ ಆಗಿವೆ.

ಪ್ರತಿಪದಾರ್ಥ - ಸಿದ್ಧಾಂತವನ್ನು ಮಾಡುತ್ತಾ ಸೂತ್ರವನ್ನು ಹೇಳಿ ವ್ಯಾಖ್ಯಾನಿಸುತ್ತಿದ್ದಾರೆ. ಅತಃ = ಹಿಂದಿನ ಪೂರ್ವಪಕ್ಷದ ನಿರಾಕರಣೆಗೋಸ್ಕರ, ಆಹ = ಸೂತ್ರಕಾರರು 'ಅಂತರ್ಯಾಮ್ಯಧಿದೈವಾದಿಷು ತದ್ಧರ್ಮೋಪದೇಶಾತ್' ಎಂದು ಹೇಳಿದ್ದಾರೆ. ಪೃಥಿವೀ = ಪೃಥಿವಿಯು, ಯಂ = ಯಾವನನ್ನು , ನ ವೇದ = ತಿಳಿಯಲಾರಳೋ, ಪೃಥಿವ್ಯಾಃ = ಪೃಥಿವಿಯಿಂದ, ಯಃ = ಯಾವಾತನು, ಅಂತರಃ = ಅಂತರ್ಯಾಮಿಯಾಗಿದ್ದು ಪ್ರೇರಣೆ ಮಾಡುತ್ತಾನೋ, ಇತ್ಯಾದಿನಾ = ಇವೇ ಮೊದಲಾದ ಬೃಹದಾರಣ್ಯಕದ ಮಾತುಗಳಿಂದ ಅಧಿದೈವಾದಿಷು = ಅಧಿದೈವ, ಅಧಿಭೂತ, ಅಧ್ಯಾತ್ಮ ಮೊದಲಾದ ಪ್ರಕರಣಗಳಲ್ಲಿ,

---

(१) **भाष्यदीपिका** – ननु यथा प्रकृत्यादिलिङ्गेन तेषामन्तर्यामित्वं तथाऽमृतत्वलिङ्गेन विष्णोस्तत् किं न स्यादित्यत आह – न हीति ॥ पृथिव्यादि शरीरं यस्य स तथोक्तः, तस्य भावस्तत्त्वं त्वप्रत्ययापाठे त्वन्वयः ऋजुरङ्गीक्रियते । सिद्धान्तिनेति शेषः । तस्य पृथिव्यादिजडभिन्नचिच्छरीरत्वादिति हिशब्दाभिप्रायः । तथा च - सैद्धान्तिकलिङ्गापेक्षया पूर्वपक्षलिङ्गस्य निरवकाशतया बलवत्त्वादनेन तस्य बाधान्नान्तर्यामी विष्णुरिति भावः ॥

ತದ್ಧರ್ಮವ್ಯಪದೇಶಾತ್ = ಆ ವಿಷ್ಣುವಿನ ಧರ್ಮಗಳೇ ಹೇಳಲ್ಪಟ್ಟಿರುವುದರಿಂದ,
ವಿಷ್ಣುರೇವ = ಮಹಾವಿಷ್ಣುವೇ ಅಂತರ್ಯಾಮಿ = ಸರ್ವಾಂತರ್ಯಾಮಿಯಾಗಿದ್ದಾನೆ.(१)

**भाष्यम् – स हि – 'न ते विष्णो जायमानो न जातः' (ऋ.७-९९-२) 'स योऽतोऽश्रुतोऽगतोऽमतोऽनतोऽदृष्टोऽविज्ञातोऽनादिष्टः सर्वेषां भूतानामन्तरपुरुषः' (ऐ.आ. ३-२-४.) इत्यादिनाऽविदितोऽन्तरश्च ॥ १८ ॥**

ಅನುವಾದ - ಅಂತಹ ವಿಷ್ಣುವು ಶ್ರುತ್ಯುಕ್ತಧರ್ಮವುಳ್ಳವನು ಎಂದರೆ 'ಎಲೈ ! ವಿಷ್ಣುವೇ ಹಿಂದೆ ಹುಟ್ಟಿದವನಾಗಲೀ, ಮುಂದೆ ಹುಟ್ಟುವ ಜೀವರಾಶಿಗಳಾಗಲೀ ಯಾರೂ ಸಹ ನಿನ್ನ ಮಹಿಮೆಯನ್ನು ಇದುವರೆಗೂ ತಿಳಿದಿಲ್ಲ. ಮುಂದೆ ತಿಳಿಯುವುದೂ ಇಲ್ಲ' ಎಂದು ಋಗ್ವೇದದಲ್ಲಿ;

ಮತ್ತು ಐತರೇಯದಲ್ಲಿಯೂ 'ಪ್ರಸಿದ್ಧನಾದ ವಿಷ್ಣುವೇ ಸಂಪೂರ್ಣವಾಗಿ ಕೇಳುವುದರಿಂದ

(१) भाष्यदीपिका – सिद्धान्तयत्सूत्रमवतार्य व्याचष्टे – अत इति ।। इत्यादिना वाक्येन इति शेषः । तत्र यद्यपि सौत्रव्यपदेशपदेन अभिप्रेतं 'यं पृथिवी न वेद यः पृथिवीमन्तरो यमयति' इति वाक्यमेवोदाहर्तव्यम् । अत्रोक्तान्तरत्वस्यैव सौत्रधर्मशब्दार्थत्वात्, नतु 'पृथिव्यामन्तरः' इति वाक्यम् । अत्रत्यान्तरशब्दस्य विविक्तार्थत्वेन तदुक्तार्थस्याहेतुत्वात् । तथा च तदुदाहरणं न प्रकृतोपयुक्तम् । तथाऽपि तत्प्रतीकत्वेनोदाहृतमित्यदोषः । आदिशब्देन प्रकरणत्रयवाक्यं गृह्यते । अधिदैवादिषु । प्रकरणेष्विति शेषः । प्रकरणं नाम एकप्रमेयप्रतिपादकानेकवाक्यानि । तत्र 'यः पृथिव्यां तिष्ठन्' इत्यधिदैवतप्रकरणम् । 'यः सर्वेषु भूतेषु तिष्ठन्' इत्यधिभूतप्रकरणम् । 'यः प्राणे तिष्ठन्' इत्यध्यात्मप्रकरणम् । सूत्रे भाष्ये चाधिदैवेत्युक्त्या पृथिव्यादीनां जडत्वेन तदविदितत्वं सर्वस्यापि सम्भवतीति शङ्का वारिता । अत्रोक्तानां पृथिव्यादीनामधिदैवत्वेन चेतनत्वात् 'प्राणे' इति श्रुतौ प्राणशब्दः प्राणवायुदेवतापरः, सैव प्रमेयदीपरीत्या प्राणेन्द्रियदेवता । अधिदैवादिष्वित्यनेकप्रकरणग्रहणेन न केवलमेकत्र तद्धर्मोक्तिः, किन्तु बहुषु स्थलेष्विति सूचितम् । अनुवृत्तस्य तत्त्वित्यस्यार्थमाह – विष्णुरेवेति ।। तदित्यस्य नपुंसकत्वेऽप्यन्तर्यामीत्युद्देश्यसमर्पकसौत्रपदानुसारेण विष्णुरेवेति व्याख्यातम् । अनेन 'एष त आत्मा' (बृ.५-७-३) इत्युक्तोऽन्तर्यामी स विष्णुरेव । कुतः? अधिदैवादिषु प्रकरणेषु 'तद्धर्मव्यपदेशात्' तस्य विष्णोः धर्मस्य अविदितत्वान्तरत्वादेः 'यं पृथिवी न वेद' इत्यादिनोक्तत्वादिति सूत्रार्थ उक्तो भवति ।।

ತಿಳಿಯಲು ಅಸಮರ್ಥನು, ಹೊಂದಲು ಅಶಕ್ಯನು, ತಿಳಿಯಲು ಸಾಧ್ಯವಿಲ್ಲದವನು, ಯಾರಿಗೂ ಮಣಿಯಲಾರದವನು. ಕಾಣಲು ಸಾಧ್ಯವಿಲ್ಲದವನು. ಜ್ಞಾನಕ್ಕೆ ನಿಲುಕದವನು. ಯಾರಿಂದಲೂ ಆಜ್ಞೆಗೆ ಒಳಗಾಗದವನು. ಸಕಲಪ್ರಾಣಿಗಳ ಹೃದಯದಲ್ಲಿ ಭಿನ್ನನಾಗಿ ನೆಲೆಸಿ ಪ್ರೇರಣೆ ಮಾಡುವ ಮಹಾಪುರುಷನು ಇವನೇ --ಹೀಗೆ ಹೇಳಿದೆ. ಇಂತಹ ಶ್ರುತಿಗಳಿಂದ ಅಪ್ರಮೇಯನೂಅಂತರ್ಯಾಮಿಯಾದವನೂ ವಿಷ್ಣುವೇ ಆಗಿದ್ದಾನೆ.

ಪ್ರತಿಪದಾರ್ಥ -- ಅವಿದಿತತ್ವಾದಿಗಳನ್ನು ಅಂತಹ ವಿಷ್ಣುವಿನ ಧರ್ಮವೆಂದು ಹೇಗೆ ನಿಶ್ಚಯಿಸುತ್ತೀರಿ ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ.

ಸ ಹಿ = ಅಂತಹ ವಿಷ್ಣುವೇ, ಋಗ್ವೇದದಲ್ಲಿ ಹೀಗೆ ಹೇಳಲ್ಪಟ್ಟಿದ್ದಾನೆ. ಹೇ ವಿಷ್ಣೋ ಎಲೈ ವಿಷ್ಣುವೇ, ಜಾಯಮಾನಃ = ಮುಂದೆ ಹುಟ್ಟುವ ಸಕಲಜೀವರಾಶಿಗಳು, ಜಾತಃ = ಇಲ್ಲಿಯ ತನಕ ಹುಟ್ಟಿದ ಸಕಲ ಜೀವರಾಶಿಗಳು, ತೇ = ನಿನ್ನ ಅಗಾಧವಾದ ಮಹಿಮೆಯನ್ನು, ನ = ತಿಳಿಯಲು ಸಾಧ್ಯವೇ ಇಲ್ಲ. ಎಂದು.

ಐತರೇಯೋಪನಿಷತ್ತಿನಲ್ಲೂ - ಯಃ = ಯಾವ ಪ್ರಸಿದ್ಧನಾದ, ಸಃ = ಆ ವಿಷ್ಣುವು, ಅಶ್ರುತಃ = ಸಂಪೂರ್ಣವಾಗಿ ಕೇಳುವಿಕೆಯಿಂದ ತಿಳಿಯಲು ಸಾಧ್ಯವಿಲ್ಲದವನು. ಅಗತಃ = ಹೊಂದಲು ಅಸಮರ್ಥನು, ಅಮತಃ = ಮನನದಿಂದ ತಿಳಿಯಲು ಸಾಧ್ಯವಿಲ್ಲದವನು, ಅನತಃ = ಯಾರಿಗೂ ಮಣಿಯಲಾರದವನು, ಅದೃಷ್ಟಃ = ಕಾಣಲು ಸಾಧ್ಯವಿಲ್ಲದವನು, ಅವಿಜ್ಞಾತಃ = ಜ್ಞಾನಕ್ಕೆ ನಿಲುಕದವನು. ಅನಾದಿಷ್ಟಃ -= ಯಾರ ಆಜ್ಞೆಗೂ ಒಳಗಾಗದವನು. ಸರ್ವೇಷಾಂ ಭೂತಾನಾಂ = ಸಕಲಪ್ರಾಣಿಗಳ ಅಂತರಪುರುಷಃ = ಒಳಗಡೆ ನೆಲೆಸಿ ಪುರುಷನಾಗಿರುವವನು -- ಹೀಗೆ ಹೇಳಿದೆ.

ಇತ್ಯಾದಿನಾ = ಇವೇ ಮೊದಲಾದ ಶ್ರುತಿಗಳಿಂದ, ಅವಿದಿತಃ = ಅಪ್ರಮೇಯನೂ, ಚ = ಮತ್ತು, ಅಂತರಃ = ಅಂತರ್ಯಾಮಿಯಾದವನು (ಮಹಾವಿಷ್ಣುವೇ) ಆಗಿದ್ದಾನೆ.(೧)

---

(१) भाष्यदीपिका – अविदितत्वादेः कुतो विष्णुधर्मत्वमित्यत आह – स हीति ।। 'सः' विष्णुः 'हि' यस्मात् । 'इत्यादिना' वाक्येनेति शेषः । आदिपदेन 'दिव्यो देव एको नारायणः' (सुबाल.७) इत्युपक्रम्य 'यस्य पृथिवी शरीरं यः पृथिवीमन्तरः सञ्चरन् यं पृथिवी न वेद एष सर्वभूतान्तरात्मा अपहतपाप्मा दिव्यो देव एको नारायणः' इत्युपसंहृत्याधीतं श्रुत्यन्तरं गृह्यते । 'अविदितः' साकल्येनाज्ञातः 'अन्तरः' अन्तस्स्थित्वा रमणकृत् प्रसिद्ध इति शेषः । चः समुच्चये । 'न ते' इति वाक्यं च ते देव महिम्नः परमन्तं महिमानं श्रोत्रादिना नाऽप इति प्रकृतानुगुण्येन सर्वत्राधिकरणे व्याख्यातम् । 'सः' इति वाक्यमपि तत्रैव व्याकृतम् ।।

## श्रीपद्मनाभतीर्थविरचितसत्तर्कदीपावळ्याम्ः

## अन्तर्याम्याधिकरणम्

ॐ अन्तर्याम्यधिदैवादिषु तद्धर्मव्यपदेशात् ॐ ।। १-२-१८ ।।

ॐ नच स्मार्तमतद्धर्माभिलापात् ॐ ।। १-२-१९ ।।

ॐ शारीरश्चोभयेऽपि हि भेदेनैनमधीयते ॐ ।। १-२-२० ।।

'एतमदमृतमभयम्' इति यदक्ष्यन्तरपुरुषस्य विष्णुत्वसाधकममृतत्वमुक्तं तदन्तर्यामिणः श्रूयते । 'एष त आत्माऽन्तर्याम्यमृतः' इति अन्तर्यामी विष्णोरन्यः प्रतीयत इत्याशङ्क्य विष्णुरेवान्तर्यामीति प्रतिपादयितुमुत्तराधिकरणमारभ्यते ।। यः पृथिव्यां तिष्ठन्निति ।। यं पृथिवी न वेद पृथिवी देवता न वेदेत्यर्थः ।। उभयेऽपीति ।। काण्वा माध्यन्दिनायनाश्चान्तर्यामिणः सकाशाज्जीवमधीयत इत्यर्थः । 'यस्य पृथिवी शरीरम्' इत्यादिषु शरीरशब्दो न भोगायतनादित्वाभिप्रायः, किन्तु यौगिक इत्याह – शीर्यत इति ।।

।। इति सत्तर्कदीपावळ्याम् अन्तर्याम्याधिकरणम् ।।

'ಏತದಮೃತಮಭಯಮ್' ಇತ್ಯಾದಿ ಶ್ರುತಿಯಲ್ಲಿ ಚಕ್ಷುರಿಂದ್ರಿಯದಲ್ಲಿರುವ ಪುರುಷನು ವಿಷ್ಣುವೇ ಆಗಿದ್ದಾನೆನ್ನಲು ಅಮೃತತ್ವವೆಂಬ ಧರ್ಮವನ್ನು ಹೇಳಲಾಯಿತು. ಆದರೆ ಈ ಧರ್ಮವು ಅಂತರ್ಯಾಮಿಯಲ್ಲಿ ಕೇಳಿಸುತ್ತಿದೆ. ಅದು ಹೀಗೆ -- ''ಏಷ ತೇ ಆತ್ಮಾ ಅಂತರ್ಯಾಮ್ಯಮೃತಃ'' ಎಂದು. ಒಂದು ವೇಳೆ ಅಂತರ್ಯಾಮಿಯು ವಿಷ್ಣುವಿಗಿಂತ ಭಿನ್ನನಾದರೆ ಅವನೇ ಅಮೃತತ್ವ ಧರ್ಮವುಳ್ಳವನಾಗುತ್ತಾನೆಂದು ಆಶಂಕಿಸಿ, ಅಂತರ್ಯಾಮಿಯಾದವನು ವಿಷ್ಣುವೇ ಆಗಿದ್ದಾನೆಂದು ಪ್ರತಿಪಾದಿಸುವುದಕ್ಕಾಗಿ ಈ ಅಧಿಕರಣವು ಹೊರಟಿರುತ್ತದೆ. ''ಯಂ ಪೃಥಿವೀ ನ ವೇದ'' ಇತ್ಯಾದಿವಾಕ್ಯವು ಈ ಅಧಿಕರಣದ ವಿಷಯವಾಗಿದೆ. ಯಾವ ವ್ಯಕ್ತಿಯನ್ನು ಪೃಥಿವೀ ಎಂದರೆ ಪೃಥಿವ್ಯಭಿಮಾನಿಯಾದ ದೇವತೆಯು ತಿಳಿಯುವುದಿಲ್ಲವೋ ಎಂದು ಈ ಶ್ರುತಿಗೆ ಅರ್ಥ.

ಅಂತರ್ಯಾಮ್ಯಧಿಕರಣ (೧-೨-೫)

"ಶಾರೀರಶ್ಚೋಭಯೇऽಪಿ ಹಿ ಭೇದೇನೈನಮಧೀಯತೇ" ಎಂಬ ಸೂತ್ರದಲ್ಲಿ ಉಭಯೇऽಪಿ ಎಂದರೆ ಕಾಣ್ವಶಾಖಿಗಳು ಹಾಗೂ ಮಾಧ್ಯಂದಿನ ಶಾಖಿಗಳು ಅಂತರ್ಯಾಮಿಗಿಂತ ಜೀವನು ಭಿನ್ನನಾಗಿದ್ದಾನೆಂದು ಅಧ್ಯಯನ ಮಾಡುತ್ತಾರೆ ಎಂದರ್ಥ.

"ಯಸ್ಯ ಪೃಥಿವೀ ಶರೀರಂ" ಇತ್ಯಾದಿ ಶ್ರುತಿಯಲ್ಲಿ ಕೇಳಿಸುತ್ತಿರುವ ಶರೀರಶಬ್ದವು (ರೂಢವಾಗಿರುವ) ಭೋಗಕ್ಕೆ ಆಶ್ರಯವಾದ ದೇಹವನ್ನು ಹೇಳುತ್ತಿಲ್ಲ. ಹೊರತು ನಿತ್ಯವಾಗಿ ನಾಶ ಹೊಂದುವ ವಸ್ತುವೆಂದು ಯೌಗಿಕವಾದ ಅರ್ಥವನ್ನು ಹೇಳುತ್ತಿದೆ.

ಇಲ್ಲಿಗೆ ಸತ್ತರ್ಕದೀಪಾವಳಿಯ ಕನ್ನಡಾನುವಾದದಲ್ಲಿ ಅಂತರ್ಯಾಮ್ಯಧಿಕರಣವು
ಸಮಾಪ್ತವಾಯಿತು.
ಶ್ರೀಕೃಷ್ಣಾರ್ಪಣಮಸ್ತು

**तत्वप्रकाशिका –**

**अत्र पृथिव्यादिशरीरत्वलिङ्गसाहित्येन अन्यत्रप्रसिद्धान्तार्यामित्वलिङ्गस्य विष्णौ समन्वयप्रतिपादनादस्ति शास्त्रादिसङ्गतिः । विषयवाक्योदाहरणपूर्वकं विषयं दर्शयति – य इति ।।**

ಈ ಅಂತರ್ಯಾಮ್ಯಧಿಕರಣದಲ್ಲಿ ಪೃಥಿವ್ಯಾದಿಶರೀರತ್ವ (ಪೃಥಿವೀ ಮೊದಲಾದವುಗಳೇ ಶರೀರವಾಗಿರುವಿಕೆ) ಎಂಬ ಲಿಂಗದ ಜೊತೆಗೆ ಅನ್ಯತ್ರಪ್ರಸಿದ್ಧವಾದ ಅಂತರ್ಯಾಮಿತ್ವ ಎಂಬ ಲಿಂಗದ ಸಮನ್ವಯವನ್ನು ವಿಷ್ಣುವಿನಲ್ಲಿ ಪ್ರತಿಪಾದಿಸಲಾಗಿದೆ. ಆದ್ದರಿಂದಲೇ ಈಅಧಿಕರಣಕ್ಕೆ ಶಾಸ್ತ್ರಸಂಗತಿ ಅಧ್ಯಾಯಸಂಗತಿ ಹಾಗೂ ಪಾದಸಂಗತಿಗಳು ಇರುತ್ತವೆ.

ಈ ಅಧಿಕರಣದ ವಿಷಯವಾಕ್ಯವನ್ನು ಉದಾಹರಿಸುವ ಮೂಲಕವಾಗಿ ವಿಷಯವನ್ನು ಪ್ರದರ್ಶಿಸುತ್ತಿದ್ದಾರೆ. "ಯಃ ಪೃಥಿವ್ಯಾಂ" ಇತ್ಯಾದಿ ಭಾಷ್ಯದ ಮಾತಿನಲ್ಲಿ.

**तत्वप्रकाशिका – श्रुत्यादिसङ्गतिं दर्शयति – तत्रेति ।। 'एतदमृतमभयम्' इत्यक्षिस्थपुरुषस्यामृतत्वमुक्तम् । तत् काण्वमाध्यन्दिनश्रुत्योरन्तर्यामिणः कस्यचिच्छ्रूयते 'एष त आत्माऽन्तर्याम्यमृतः' इति । स चान्तर्यामी यदि विष्णोरितरः स्यात्तदाऽमृतत्वं चान्यनिष्ठं नाक्षिस्थस्य विष्णुत्वसाधकं स्यादिति, अवश्यं निर्णेतव्य एव ।**

ಶ್ರುತಿ ಸಂಗತಿ ಹಾಗೂ ಅಧಿಕರಣಸಂಗತಿಗಳನ್ನು ''ತತ್ರ ಚ'' ಎಂಬ ಭಾಷ್ಯದಿಂದ ತೋರಿಸಿದ್ದಾರೆ.

ಹಿಂದಿನ ಅಧಿಕರಣದಲ್ಲಿ ಕಣ್ಣಿನಲ್ಲಿರುವವನು ಪರಮಾತ್ಮನೇ ಆಗಿದ್ದಾನೆಂದು ನಿರ್ಣಯಿಸಲಾಯಿತು. ಆದರೆ 'ಏತದಮೃತಮಭಯಮ್' ಎಂಬ ಛಾಂದೋಗ್ಯದ ಮಾತಿನಲ್ಲಿ ಕಣ್ಣಿನಲ್ಲಿರುವ ಪುರುಷನಲ್ಲಿ ಅಮೃತತ್ವ ಎಂಬ ಧರ್ಮವು ಕೇಳಿಸುತ್ತಿದೆ. ಇದೇ ಧರ್ಮವನ್ನು ಕಾಣ್ವಶ್ರುತಿ ಹಾಗೂ ಮಾಧ್ಯಂದಿನ ಶ್ರುತಿಗಳು ಅಂತರ್ಯಾಮಿಯಾದ ಯಾರೋ ಒಬ್ಬನಲ್ಲಿ 'ಏಷ ತೇ ಆತ್ಮಾ ಅಂತರ್ಯಾಮ್ಯಮೃತಃ' ಎಂಬುದಾಗಿ ಹೇಳುತ್ತಿವೆ. ಆದ್ದರಿಂದ ಇಂತಹ ಅಂತರ್ಯಾಮಿಯು ಒಂದು ವೇಳೆ ವಿಷ್ಣುವಿಗಿಂತ ಬೇರೆಯವನಾದರೆ ಅವನಲ್ಲಿ ಕೇಳಿಸಲ್ಪಟ್ಟ ಅಮೃತತ್ವವೂ ಸಹ ಬೇರೆಯವನಲ್ಲೇ ಇರಬೇಕು. ಈ ಎಲ್ಲ ಕಾರಣಗಳಿಂದ ಹಿಂದಿನ ಅಧಿಕರಣದಲ್ಲಿ ಸಾಧಿಸಲ್ಪಟ್ಟ ವಿಷ್ಣುವೇ ಅಕ್ಷಿಸ್ಥನಾಗಿದ್ದಾನೆಂಬ ಪ್ರಮೇಯವು ಸಿದ್ಧವಾಗುವುದಿಲ್ಲ. ಆದ್ದರಿಂದ ಅಮೃತತ್ವ ಧರ್ಮವು ಇರುವಂತಹ ಅಂತರ್ಯಾಮಿಯು ಯಾರೆಂದು ಅವಶ್ಯವಾಗಿ ನಿರ್ಣಯಿಸಬೇಕಾಗಿದೆ.

**तत्वप्रकाशिका – तदन्तर्यामित्वमत्र विषयः । किं विष्णोरन्यस्य वा? इति सन्देहः । अमृतत्वं पृथिव्यादिशरीरत्वं च सन्देहबीजमिति भावः । सयुक्तिकं पूर्वपक्षयति – स चेति ॥**

ಈ ಅಧಿಕರಣಕ್ಕೆ ಅಂತರ್ಯಾಮಿತ್ವವೇ ವಿಷಯ. ಅಂತರ್ಯಾಮಿತ್ವವು ವಿಷ್ಣುವಿನ ಧರ್ಮವೋ ಅಥವಾ ಬೇರೆಯವರದ್ದೋ ಎಂಬುದೇ ಸಂದೇಹ? ಅಮೃತತ್ವ ಹಾಗೂ ಪೃಥಿವ್ಯಾದಿ ಶರೀರತ್ವ ಎಂಬ ಧರ್ಮಗಳು ಸಂದೇಹಕ್ಕೆ ಕಾರಣ ಎಂದು ತಿಳಿಯಬೇಕು. ಯುಕ್ತಿಬದ್ಧವಾದ ಪೂರ್ವಪಕ್ಷವನ್ನು ''ಸ ಚ'' ಎಂಬ ಭಾಷ್ಯದ ವಾಕ್ಯವು ತೋರಿಸುತ್ತಿದೆ.

**तत्वप्रकाशिका – सोऽन्तर्यामी प्रकृतिर्भवेत् । ''यस्य पृथिवी शरीरं यस्याऽपः शरीरम्'' इत्यादिनाऽन्तर्यामिणः पृथिव्यादिशरीरत्वस्य श्रवणात् । तस्य च प्रकृतावुपपत्तेः शरीरशब्दस्य स्वरूपेऽपि प्रयोगात् । प्रकृतेश्च पृथिव्यादि-सर्वात्मकत्वात् ।**

ಶ್ರುತಿಯಲ್ಲಿ ಕೇಳಿಸುತ್ತಿರುವ ಅಂತರ್ಯಾಮಿಯು ಪ್ರಕೃತಿಯೇ ಆಗಬೇಕು. ಏಕೆಂದರೆ 'ಯಸ್ಯ ಪೃಥಿವೀ ಶರೀರಂ ಯಸ್ಯಾಪಃ ಶರೀರಂ' ಪೃಥಿವಿಯು ಯಾರಿಗೆ ಶರೀರವಾಗಿದೆಯೋ, ನೀರು ಯಾರಿಗೆ ಶರೀರವಾಗಿದೆಯೋ ಇತ್ಯಾದಿಯಾಗಿ ಅಂತರ್ಯಾಮಿಯು ಪೃಥಿವೀ ಮೊದಲಾದವುಗಳನ್ನೇ ಶರೀರವನ್ನಾಗಿ ಹೊಂದಿದ್ದಾನೆಂದು ಹೇಳಲಾಗಿದೆ. ಈ ಪೃಥಿವ್ಯಾದಿ ಶರೀರತ್ವವು ಪ್ರಕೃತಿಯಲ್ಲಿ ಉಪಪನ್ನವಾಗುತ್ತದೆ. ಶರೀರಶಬ್ದವು ದೇಹ ಎಂಬ ಅರ್ಥದಲ್ಲಿ ಪ್ರಸಿದ್ಧವಿರುವಂತೆ ಸ್ವರೂಪ ಎಂಬರ್ಥದಲ್ಲಿಯೂ ಪ್ರಯೋಗಿಸಬಹುದು. ಪ್ರಕೃತಿಯಾದರೂ ಸಹ ಪೃಥಿವಿಯೇ ಮೊದಲಾದ ಸಕಲ ಪದಾರ್ಥಗಳ ಸ್ವರೂಪವಾಗಿದೆ.

**तत्वप्रकाशिका – न च 'यः पृथिव्यां तिष्ठन्' इत्यादेरनुपपत्तिः ।**

ಪ್ರಶ್ನೆ - ಪ್ರಕೃತಿಯನ್ನು ಅಂತರ್ಯಾಮಿಯೆಂದು ಹೇಳುತ್ತಿದ್ದೀರಿ ಹಾಗಾದರೆ ಪೃಥಿವೀ ಮತ್ತು ಅಂತರ್ಯಾಮಿ ಎರಡೂ ಒಂದೇ ಆದ್ದರಿಂದ 'ಪೃಥಿವ್ಯಾಂ ತಿಷ್ಠನ್' ಪೃಥಿವಿಯಲ್ಲಿ ನಿಂತು ಎಂಬ ಮಾತು ಅನುಪಪನ್ನವಾಗುತ್ತದೆ. ಏಕೆಂದರೆ ತಾನೇ ತನಗೆ ಆಧಾರವಾಗಲು ಸಾಧ್ಯವಿಲ್ಲವಲ್ಲವೇ?

**तत्वप्रकाशिका – 'व्याप्तं कार्येषु कारणम्' इत्यादिना कारणस्य कार्यस्थत्वोक्तेः ।**

ಸಮಾಧಾನ - ಈ ಪ್ರಶ್ನೆಯು ಸರಿಯಲ್ಲ; ಏಕೆಂದರೆ ಲೋಕದಲ್ಲಿ 'ವ್ಯಾಪ್ತಂ ಕಾರ್ಯೇಷು ಕಾರಣಮ್' ಕಾರ್ಯದಲ್ಲಿ ಕಾರಣವು ವ್ಯಾಪ್ತವಾಗಿದೆ ಎಂಬ ಪ್ರಯೋಗವಿದೆ. ಅದರಂತೆ ಕಾರ್ಯ ಹಾಗೂ ಕಾರಣಗಳಿಗೆ ಐಕ್ಯವಿದ್ದರೂ ಸಹ ಆಧಾರಾಧೇಯಭಾವವನ್ನು ಹೇಗೆ ಕೂಡಿಸುತ್ತೇವೋ ಅದರಂತೆ ಪ್ರಕೃತಿಯು ಪೃಥಿವಿಯ ಸ್ವರೂಪವಾಗಿದ್ದರೂ 'ಪೃಥಿವ್ಯಾಂ ತಿಷ್ಠನ್' ಎಂಬ ಪ್ರಯೋಗವನ್ನು ಕೂಡಿಸಬಹುದು.

**तत्वप्रकाशिका – 'पृथिवीं यमयति' इत्येतदप्युपचारेण नेतव्यम् ।**

ಪ್ರಶ್ನೆ - ಪ್ರಕೃತಿಯನ್ನೇ ಅಂತರ್ಯಾಮಿಯೆಂದು ಹೇಳಿದರೆ 'ಪೃಥಿವೀಂ ಯಮಯತಿ' ಪೃಥಿವಿಯನ್ನು ನಿಯಮನ ಮಾಡುತ್ತದೆ ಎಂಬ ಮಾತನ್ನು ಹೇಗೆ ಕೂಡಿಸುವುದು.

ಉತ್ತರ - ಈ ವಾಕ್ಯವನ್ನು ಗೌಣವಾಗಿ ವ್ಯಾಖ್ಯಾನಿಸಬೇಕು. ಕಾರ್ಯವು ಕಾರಣದ ಅಧೀನವಾದ್ದರಿಂದ ಕಾರಣವು ಕಾರ್ಯಕ್ಕೆ ವಿಷಯವಾಗಿದೆ ಎಂದು ಇದರ ಅರ್ಥ.

**तत्वप्रकाशिका – पृथिव्यादिजीवस्यैव तदन्तर्यामित्वम् । पृथिव्यादिशरीरत्वादेस्तस्मिन्नतिसुघटत्वादिति भावः ।**

ಅಥವಾ ಪೃಥಿವ್ಯಾದಿಗಳಲ್ಲಿ ಅಭಿಮಾನಿಯಾಗಿರುವ ಜೀವನೇ ಅಂತರ್ಯಾಮಿಯಾಗಿದ್ದಾನೆಂದು ಹೇಳಬಹುದು. ಏಕೆಂದರೆ ಅಭಿಮಾನಿಯಾದ ಜೀವನಿಗೆ ಪೃಥಿವೀ ಮೊದಲಾದವು ಶರೀರಗಳಾಗಿವೆ. ಎಂಬುದನ್ನು ಅತ್ಯಂತ ಸ್ಪಷ್ಟವಾಗಿ ಉಪಪಾದಿಸಬಹುದೆಂದು ತಿಳಿಯಬೇಕು.

**तत्वप्रकाशिका – ननु यथा प्रकृत्यादिलिङ्गेन तेषामन्तर्यामित्वं तथाऽमृतत्वलिङ्गेन विष्णोः किं न स्यादित्यत आह – न हीति ।।**

ಶಂಕೆ - ಯಾವ ರೀತಿಯಾಗಿ ಪೃಥಿವೀಶರೀರತ್ವ ಮೊದಲಾದ ಲಿಂಗಗಳಿಂದ ಪ್ರಕೃತಿ ಅಥವಾ ಜೀವರು ಅಂತರ್ಯಾಮಿಗಳಾಗಿದ್ದಾರೆಂದು ಹೇಳುತ್ತೀರೋ ಅದರಂತೆ ಅಮೃತತ್ವಲಿಂಗದಿಂದ ವಿಷ್ಣುವೇ ಅಂತರ್ಯಾಮಿಯಾಗಬಹುದಲ್ಲವೇ?

ಸಮಾಧಾನ - ಈ ಶಂಕೆಗೆ "ನಹಿ" ಎಂಬುದರಿಂದ ಉತ್ತರಿಸುತ್ತಿದ್ದಾರೆ. ಅದು ಹೀಗೆ —

**तत्वप्रकाशिका – विद्यामानेऽपि विष्णुलिङ्गे न तस्यान्तर्यामित्वम् । पृथिव्यादिशरीरत्वस्य कयाऽपि विधयाऽवकाशाभावात् ।**

ಅಮೃತತ್ವವೆಂಬ ವಿಷ್ಣುವಿನ ಲಿಂಗವು ಶ್ರುತಿಯಲ್ಲಿ ಕೇಳಿಸುತ್ತಿರಬಹುದು. ಆದರೂ ಸಹ ವಿಷ್ಣುವಿಗೆ ಅಂತರ್ಯಾಮಿತ್ವವು ಕೂಡುವುದಿಲ್ಲ. ಏಕೆಂದರೆ ಅದೇ ಸಂದರ್ಭದಲ್ಲಿ ಕೇಳಿಸುತ್ತಿರುವ ಪೃಥಿವ್ಯಾದಿ ಶರೀರತ್ವವು ವಿಷ್ಣುವಿನಲ್ಲಿ ಯಾವುದೇ ಪ್ರಕಾರದಿಂದಲೂ ಸಾವಕಾಶ ಮಾಡಲು ಸಾಧ್ಯವಿಲ್ಲ.

**तत्वप्रकाशिका – तस्य पृथिव्यादिभिन्नत्वचिच्छरीरत्वोररीकारेण पृथिव्यादिशरीरत्वानङ्गीकारात् । अमृतत्वस्य कथञ्चित्प्रकृत्यादावपि सावकाशत्वात् । सावकाशस्य च निरवकाशेन बाधोपपत्तेः ।**

ಏಕೆಂದರೆ ವಿಷ್ಣುವು ಪೃಥಿವ್ಯಾದಿ ಸಕಲಪದಾರ್ಥಗಳಿಗಿಂತ ಭಿನ್ನನಾಗಿದ್ದಾನೆ ಹಾಗೂ ಚಿನ್ಮಯಶರೀರನಾಗಿದ್ದಾನೆ. ಹೀಗೆ ಸಿದ್ಧಾಂತಿಗಳೇ ಒಪ್ಪಿರುವುದರಿಂದ ಪೃಥಿವೀ ಮೊದಲಾದವುಗಳನ್ನು ವಿಷ್ಣುವಿನ ಶರೀರವೆಂದು ಯಾವ ಪ್ರಕಾರದಿಂದಲೂ ಹೇಳಲಾಗದು. ಆದರೆ ವಿಷ್ಣುವಿನ ಧರ್ಮವೆನಿಸಿದ ಅಮೃತತ್ವವನ್ನು ಪ್ರಕೃತ್ಯಾದಿಗಳಲ್ಲಿ ಹೇಗಾದರೂ ಸಾವಕಾಶ ಮಾಡಬಹುದು. ಸಾವಕಾಶವಾದ ಧರ್ಮವು ನಿರವಕಾಶವಾದ ಯುಕ್ತಿಯಿಂದ ಬಾಧಿತವಾಗುತ್ತದೆ.

**तत्वप्रकाशिका – अतोऽन्तर्यामी न विष्णुरपि तु प्रकृत्यादय एवेति नामृतत्वमक्षिस्थस्य विष्णुत्वसाधकमिति भावः ।**

ಆದ್ದರಿಂದ ಅಂತರ್ಯಾಮಿಯಾದವನು ವಿಷ್ಣುವಾಗಲು ಸಾಧ್ಯವಿಲ್ಲ. ಹೊರತಾಗಿ ಪ್ರಕೃತಿ ಅಥವಾ ಜೀವರೇ ಆಗುತ್ತಾರೆ. ಹೀಗಿರುವಾಗ ಅಮೃತತ್ವಧರ್ಮವು ಅಕ್ಷಿಸ್ಥನಾದವನು ವಿಷ್ಣುವೇ ಆಗಿದ್ದಾನೆಂಬುದಕ್ಕೆ ಸಾಧಕಪ್ರಮಾಣವಾಗುವುದಿಲ್ಲವೆಂದು ಪೂರ್ವಪಕ್ಷದ ಅಭಿಪ್ರಾಯ.

**तत्वप्रकाशिका – सिद्धान्तयत्सूत्रमवतार्य व्याचष्टे – अत इति ।। अन्तर्यामी विष्णुरेव । अन्तर्यामिणः पृथिव्याद्यविदितत्वतदन्तरत्वाख्यधर्मव्यपदेशात् । अविदितत्वादेश्च विष्णुधर्मत्वात् ।**

ಸಿದ್ಧಾಂತವನ್ನು ಸ್ಥಾಪಿಸುವುದಕ್ಕಾಗಿ ಸೂತ್ರವನ್ನು ಪಠಿಸಿ ವ್ಯಾಖ್ಯಾನಿಸುತ್ತಿದ್ದಾರೆ. "ಅತಃ" ಇತ್ಯಾದಿಯಾಗಿ.

ಅಂತರ್ಯಾಮ್ಯಧಿಕರಣ (೧-೨-೫)

ಅಂತರ್ಯಾಮಿಯು ವಿಷ್ಣುವೇ ಆಗಿದ್ದಾನೆ. ಏಕೆಂದರೆ ಪೃಥಿವಿ ಮೊದಲಾದವುಗಳಿಂದ ತಿಳಿಯದಿರುವಿಕೆ ಮತ್ತು ಅವುಗಳ ಅಂತರ್ಯಾಮಿಯಾಗಿರುವಿಕೆ ಮೊದಲಾದ ಧರ್ಮಗಳನ್ನು ಶ್ರುತಿಯು ಹೇಳುತ್ತಿದೆ. ಈ ಅವಿದಿತತ್ವ ಮೊದಲಾದವುಗಳೆಲ್ಲವೂ ವಿಷ್ಣುವಿನ ಧರ್ಮವೇ ಆಗಿವೆ ಎಂಬ ವಿಚಾರವು ಸ್ಪಷ್ಟವಾಗಿದೆ.

**तत्त्वप्रकाशिका – नच वाच्यं पृथिव्यादीनां जडत्वेन तदज्ञेयत्व सर्वस्यापि सम्भवतीति । पृथिव्यादीनामधिदैवत्वेन जडत्वाभावादिति भावः ।**

ಶಂಕೆ - ಪೃಥಿವ್ಯಾದಿಗಳೆಲ್ಲವೂ ಜಡವಾದ್ದರಿಂದ ಇವುಗಳಿಂದ ತಿಳಿಯದಿರುವಿಕೆಯು ಸಕಲ ಪದಾರ್ಥಗಳಲ್ಲೂ ಪ್ರಾಪ್ತವಾಗುತ್ತದಲ್ಲವೇ?

ಸಮಾಧಾನ - ಇದು ತಪ್ಪು. ಪ್ರಕೃತ ಪೃಥಿವ್ಯಾದಿಗಳು ಅಧಿದೈವವಾದ್ದರಿಂದ ಪೃಥಿವ್ಯಾದಿಶಬ್ದಗಳಿಂದ ಅವುಗಳ ಅಂತರ್ಯಾಮಿಯಾದ ದೇವತೆಯೇ ಪ್ರಸಕ್ತನಾಗಿರುತ್ತಾನೆ. ಆದ್ದರಿಂದ ಪೃಥಿವ್ಯಾದಿಶಬ್ದಗಳು ಜಡಪರವಾಗಿವೆ ಎಂದು ಹೇಳಬಾರದು.

**तत्वप्रकाशिका – चक्षुरादीनां जडत्वेऽप्यत्रोक्तस्यैव तत्र कथनान्न विरोधः । अविदितत्वादेः कुतो विष्णुधर्मत्वमित्यत आह – स हीति ।। नच पृथिव्यादिजीवाविदितत्वं प्रकृतेः पृथिव्यादिजीवस्य वोपपद्यते ।। १८ ।।**

ವಸ್ತುತಃ ಚಕ್ಷುರಾದಿಶಬ್ದಗಳು ಜಡಪರವಾಗಿರಬಹುದು. ಆದರೆ 'ಯಃ ಚಕ್ಷುಷಿ ತಿಷ್ಠನ್' ಎಂಬಲ್ಲಿ ಹೇಳಿರುವುದನ್ನೇ 'ಯ ಏಷೋಽಂತರಕ್ಷಿಣಿ' ಎಂಬಲ್ಲಿಯೂ ಹೇಳಿರುವುದರಿಂದ ವಿರೋಧಕ್ಕೆ ಅವಕಾಶವಿಲ್ಲ.

ಇನ್ನು ಅವಿದಿತತ್ವಾದಿಗಳನ್ನು ವಿಷ್ಣುಧರ್ಮವೆಂದು ಹೇಗೆ ನಿಶ್ಚಯಿಸುತ್ತೀರಿ? ಎಂದು ಪ್ರಶ್ನಿಸಬಹುದು. ಇದಕ್ಕೆ "ಸಹಿ" ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. ಪೃಥಿವ್ಯಾದಿಪದಾರ್ಥಗಳ ಅಭಿಮಾನಿಯಾದ ಜೀವರಿಂದ ಪ್ರಕೃತಿಯು ಅಥವಾ ಪೃಥಿವ್ಯಾದಿ ಜೀವರುಗಳು ಅಜ್ಞೇಯರಾಗಲು ಸಾಧ್ಯವಿಲ್ಲ. ಆದ್ದರಿಂದ ಇದೂ ಪರಮಾತ್ಮನ ಲಿಂಗವೇ ಆಗಿದೆ.

**भावदीपः –**

**ॐ अन्तर्याम्यधिदैवादिषु तद्धर्मव्यपदेशात् ॐ ।। १-२-१८ ।।**

**इत्यन्तभाष्यं सङ्गतिपरत्वेन व्याकुर्वन् "एतदमृतं इत्युक्तं" इति वाक्यं व्याचष्टे – एतदिति ।। उभयेपीति । सुत्रोक्त्यनुरोधात् "तत्र च अमृतत्वमुच्यते" इत्यंशार्थमाह – तत्काण्वेति ।।**

"ಇತಿ" ಎಂಬಲ್ಲಿಯ ತನಕ ಇರುವ ಭಾಷ್ಯವನ್ನು ಸಂಗತಿಪರವಾಗಿ ವಾಖ್ಯಾನಿಸುತ್ತಾ "ಏತದಮೃತಂ ಇತ್ಯುಕ್ತಂ" ಎಂಬ ವಾಕ್ಯವನ್ನು ವ್ಯಾಖ್ಯಾನಿಸುತ್ತಿದ್ದಾರೆ "ಏತತ್" ಇತ್ಯಾದಿ ಟೀಕಾ ಗ್ರಂಥದಿಂದ. ಶ್ರುತಿಯಲ್ಲಿರುವ "ಏತತ್" ಎಂದರೆ ಅಮೃತತ್ವ ಮತ್ತು ಅಭಯತ್ವ ಎಂಬ ಎರಡು ಲಿಂಗಗಳೆಂದರ್ಥ. ಸೂತ್ರವನ್ನು ಅನುಸರಿಸಿ ಭಾಷ್ಯದಲ್ಲಿ ಹೇಳಿರುವ "ತತ್ರ ಚ ಅಮೃತತ್ವಮುಚ್ಯತೇ" ಎಂಬ ವಾಕ್ಯದ ಅರ್ಥವನ್ನು " ತತ್ಕಾಣ್ವ" ಇತ್ಯಾದಿ ಮಾತಿನಿಂದ ಹೇಳುತ್ತಿದ್ದಾರೆ.

**भावदीपः** – 'यः पृथिव्याम्' इत्यादिवाक्यस्य काण्वमाध्यन्दिनशाखयोरेक-रूपत्वादिति भावः । उच्यते पञ्चमेऽध्याये अन्तर्यामिणः कस्यचिदित्यनेन तत्रेत्यस्यान्तर्यामिणीत्यर्थो दर्शितः । कस्यचित् प्रकृत्यादेः । किं तदमृतत्वोक्तिपरं वाक्यमित्यतः तत्रेति परामृष्टवाक्यशेषमाह – **एष त इति** ।।

"ಯಃ ಪೃಥಿವ್ಯಾಂ" ಇತ್ಯಾದಿ ವಾಕ್ಯವು ಕಾಣ್ವಶಾಖೆಯಲ್ಲಿ ಹಾಗೂ ಮಾಧ್ಯಂದಿನಶಾಖೆಯಲ್ಲಿ ಒಂದೇ ರೀತಿಯಾಗಿ ರಚಿಸಲ್ಪಟ್ಟಿದೆ ಎಂದು ಅಭಿಪ್ರಾಯ. "ಉಚ್ಯತೇ" ಎಂದರೆ ಐದನೆಯ ಅಧ್ಯಾಯದಲ್ಲಿ "ಅಂತರ್ಯಾಮಿಣಃ ಕಸ್ಯಚಿತ್" ಎಂಬುದರಿಂದ. "ತತ್ರ" ಎಂದರೆ ಅಂತರ್ಯಾಮಿಣಃ" ಎಂಬ ಅರ್ಥವನ್ನು ತೋರಿಸಿದ್ದಾರೆ. "ಕಸ್ಯಚಿತ್" ಎಂದರೆ ಪ್ರಕೃತ್ಯಾದಿಗಳಿಗೆ ಎಂದರ್ಥ. ಅಮೃತತ್ವವನ್ನು ಹೇಳುವ ವಾಕ್ಯ ಯಾವುದು? ಎಂಬ ಪ್ರಶ್ನೆಗೆ "ತತ್ರ" ಎಂಬುದರಿಂದ ಪರಾಮರ್ಶಿಸಲ್ಪಟ್ಟ ವಾಕ್ಯಶೇಷವನ್ನು "ಏಷ ತೇ" ಎಂಬುದರಿಂದ ಹೇಳುತ್ತಿದ್ದಾರೆ.

**भावदीपः** – अत एव भाष्ये आत्माऽन्तर्यामीत्येव वाच्ये अमृत इत्यंशोऽप्युक्त इति भावः । 'यस्य पृथिवी शरीरम्' इत्यंशोक्तिः पूर्वपक्षयुक्तेः 'यं पृथिवी न वेद यः पृथिव्यामन्तरः' इत्यंशोक्तिः सिद्धान्तयुक्तेः 'यः पृथिवीमन्तरः' इत्यंशोक्तिर्भेदाध्ययनस्य सूचनायेत्याशयः ।

ಆದ್ದರಿಂದಲೇ ಭಾಷ್ಯದಲ್ಲಿ "ಆತ್ಮಾऽಂತರ್ಯಾಮೀ" ಎಂದಷ್ಟೇ ಹೇಳಿದ್ದರೂ ಸಾಕಾಗಿತ್ತು. ಆದರೂ ಸಹ "ಅಮೃತಃ" ಎಂಬ ಅಂಶವನ್ನು ಹೇಳಿದ್ದಾರೆ ಎಂದು ಅಭಿಪ್ರಾಯ. "ಯಸ್ಯ ಪೃಥಿವೀ ಶರೀರಂ" ಎಂಬ ಅಂಶವನ್ನು ಹೇಳಿದ್ದರಿಂದ ಪೂರ್ವಪಕ್ಷ ಯುಕ್ತಿಯನ್ನು, "ಯಂ ಪೃಥಿವೀ ನ ವೇದ" "ಯಃ ಪೃಥಿವ್ಯಾಮಂತರಃ" ಎಂಬ ಅಂಶವನ್ನು ಹೇಳಿದ್ದರಿಂದ ಸಿದ್ಧಾಂತ ಯುಕ್ತಿಯನ್ನು "ಯಃ ಪೃಥಿವೀಮಂತರಃ" ಎಂಬ ಅಂಶವನ್ನು ಹೇಳಿದ್ದರಿಂದ ಭೇದಾಧ್ಯಯನವನ್ನು ಸೂಚಿಸಿದ್ದಾರೆಂದು ತಿಳಿಯಬೇಕು.

**भावदीपः** – स च 'यस्य पृथिवी' इत्यादिवाक्यतात्पर्यम् ।। **स चेति** ।। अन्तर्याम्यमृत इति वाक्योक्त इत्यर्थः । सच इत्यस्यार्थः – **अन्तर्यामीति** ।। प्रकृतिर्जीवो वेत्यस्यार्थः – **इतर इति** ।। सर्वात्मकत्वादित्युक्तयुक्त्येत्यर्थः ।

ಅಂತರ್ಯಾಮಿಯು ವಿಷ್ಣುವೇ ಆಗಿದ್ದಾನೆ. ಏಕೆಂದರೆ ಪೃಥಿವಿ ಮೊದಲಾದವುಗಳಿಂದ ತಿಳಿಯದಿರುವಿಕೆ ಮತ್ತು ಅವುಗಳ ಅಂತರ್ಯಾಮಿಯಾಗಿರುವಿಕೆ ಮೊದಲಾದ ಧರ್ಮಗಳನ್ನು ಶ್ರುತಿಯು ಹೇಳುತ್ತಿದೆ. ಈ ಅವಿದಿತತ್ವ ಮೊದಲಾದವುಗಳೆಲ್ಲವೂ ವಿಷ್ಣುವಿನ ಧರ್ಮವೇ ಆಗಿವೆ ಎಂಬ ವಿಚಾರವು ಸ್ಪಷ್ಟವಾಗಿದೆ.

**तन्त्रप्रकाशिका – नच वाच्यं पृथिव्यादीनां जडत्वेन तदज्ञेयत्व सर्वस्यापि सम्भवतीति । पृथिव्यादीनामधिदैवत्वेन जडत्वाभावादिति भावः ।**

ಶಂಕೆ - ಪೃಥಿವ್ಯಾದಿಗಳೆಲ್ಲವೂ ಜಡವಾದ್ದರಿಂದ ಇವುಗಳಿಂದ ತಿಳಿಯದಿರುವಿಕೆಯು ಸಕಲ ಪದಾರ್ಥಗಳಲ್ಲೂ ಪ್ರಾಪ್ತವಾಗುತ್ತದಲ್ಲವೇ?

ಸಮಾಧಾನ - ಇದು ತಪ್ಪು. ಪ್ರಕೃತ ಪೃಥಿವ್ಯಾದಿಗಳು ಅಧಿದೈವವಾದ್ದರಿಂದ ಪೃಥಿವ್ಯಾದಿಶಬ್ದಗಳಿಂದ ಅವುಗಳ ಅಂತರ್ಯಾಮಿಯಾದ ದೇವತೆಯೇ ಪ್ರಸಕ್ತನಾಗಿರುತ್ತಾನೆ. ಆದ್ದರಿಂದ ಪೃಥಿವ್ಯಾದಿಶಬ್ದಗಳು ಜಡಪರವಾಗಿವೆ ಎಂದು ಹೇಳಬಾರದು.

**तत्वप्रकाशिका – चक्षुरादीनां जडत्वेऽप्यत्रोक्तस्यैव तत्र कथनान्न विरोधः । अविदितत्वादेः कुतो विष्णुधर्मत्वमित्यत आह – स हीति ।। नच पृथिव्यादिजीवाविदितत्वं प्रकृतेः पृथिव्यादिजीवस्य वोपपद्यते ।। १८ ।।**

ವಸ್ತುತಃ ಚಕ್ಷುರಾದಿಶಬ್ದಗಳು ಜಡಪರವಾಗಿರಬಹುದು. ಆದರೆ 'ಯಃ ಚಕ್ಷುಷಿ ತಿಷ್ಠನ್' ಎಂಬಲ್ಲಿ ಹೇಳಿರುವುದನ್ನೇ 'ಯ ಏಷೋಽಂತರಕ್ಷಿಣಿ' ಎಂಬಲ್ಲಿಯೂ ಹೇಳಿರುವುದರಿಂದ ವಿರೋಧಕ್ಕೆ ಅವಕಾಶವಿಲ್ಲ.

ಇನ್ನು ಅವಿದಿತತ್ವಾದಿಗಳನ್ನು ವಿಷ್ಣುಧರ್ಮವೆಂದು ಹೇಗೆ ನಿಶ್ಚಯಿಸುತ್ತೀರಿ? ಎಂದು ಪ್ರಶ್ನಿಸಬಹುದು. ಇದಕ್ಕೆ "ಸಹಿ" ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. ಪೃಥಿವ್ಯಾದಿಪದಾರ್ಥಗಳ ಅಭಿಮಾನಿಯಾದ ಜೀವರಿಂದ ಪ್ರಕೃತಿಯು ಅಥವಾ ಪೃಥಿವ್ಯಾದಿ ಜೀವರುಗಳು ಅಜ್ಞೇಯರಾಗಲು ಸಾಧ್ಯವಿಲ್ಲ. ಆದ್ದರಿಂದ ಇದೂ ಪರಮಾತ್ಮನ ಲಿಂಗವೇ ಆಗಿದೆ.

**भावदीपः –**

**ॐ अन्तर्याम्यधिदैवादिषु तद्धर्मव्यपदेशात् ॐ ।। १-२-१८ ।।**

**इत्यन्तभाष्यं सङ्गतिपरत्वेन व्याकुर्वन् "एतदमृतं इत्युक्तं" इति वाक्यं व्याचष्टे – एतदिति ।। उभयेपीति । सुत्रोक्त्यनुरोधात् "तत्र च अमृतत्वमुच्यते" इत्यंशार्थमाह – तत्काण्वेति ।।**

"ಇತಿ" ಎಂಬಲ್ಲಿಯ ತನಕ ಇರುವ ಭಾಷ್ಯವನ್ನು ಸಂಗತಿಪರವಾಗಿ ವಾಖ್ಯಾನಿಸುತ್ತಾ "ಏತದಮೃತಂ ಇತ್ಯುಕ್ತಂ" ಎಂಬ ವಾಕ್ಯವನ್ನು ವ್ಯಾಖ್ಯಾನಿಸುತ್ತಿದ್ದಾರೆ "ಏತತ್" ಇತ್ಯಾದಿ ಟೀಕಾ ಗ್ರಂಥದಿಂದ. ಶ್ರುತಿಯಲ್ಲಿರುವ "ಏತತ್" ಎಂದರೆ ಅಮೃತತ್ವ ಮತ್ತು ಅಭಯತ್ವ ಎಂಬ ಎರಡು ಲಿಂಗಗಳೆಂದರ್ಥ. ಸೂತ್ರವನ್ನು ಅನುಸರಿಸಿ ಭಾಷ್ಯದಲ್ಲಿ ಹೇಳಿರುವ "ತತ್ರ ಚ ಅಮೃತತ್ವಮುಚ್ಯತೇ" ಎಂಬ ವಾಕ್ಯದ ಅರ್ಥವನ್ನು " ತತ್ಕಾಣ್ವ" ಇತ್ಯಾದಿ ಮಾತಿನಿಂದ ಹೇಳುತ್ತಿದ್ದಾರೆ.

**भावदीपः – 'यः पृथिव्याम्' इत्यादिवाक्यस्य काण्वमाध्यन्दिनशाखयोरेकरूपत्वादिति भावः । उच्यते पञ्चमेऽध्याये अन्तर्यामिणः कस्यचिदित्यनेन तत्रेत्यस्यान्तर्यामिणीत्यर्थो दर्शितः । कस्यचित् प्रकृत्यादेः । किं तदमृतत्वोक्तिपरं वाक्यमित्यतः तत्रेति परामृष्टवाक्यशेषमाह – एष त इति ॥**

"ಯಃ ಪೃಥಿವ್ಯಾಂ" ಇತ್ಯಾದಿ ವಾಕ್ಯವು ಕಾಣ್ವಶಾಖೆಯಲ್ಲಿ ಹಾಗೂ ಮಾಧ್ಯಂದಿನಶಾಖೆಯಲ್ಲಿ ಒಂದೇ ರೀತಿಯಾಗಿ ರಚಿಸಲ್ಪಟ್ಟಿದೆ ಎಂದು ಅಭಿಪ್ರಾಯ. "ಉಚ್ಯತೇ" ಎಂದರೆ ಐದನೆಯ ಅಧ್ಯಾಯದಲ್ಲಿ "ಅಂತರ್ಯಾಮಿಣಃ ಕಸ್ಯಚಿತ್" ಎಂಬುದರಿಂದ. "ತತ್ರ" ಎಂದರೆ ಅಂತರ್ಯಾಮಿಣಃ" ಎಂಬ ಅರ್ಥವನ್ನು ತೋರಿಸಿದ್ದಾರೆ. "ಕಸ್ಯಚಿತ್" ಎಂದರೆ ಪ್ರಕೃತ್ಯಾದಿಗಳಿಗೆ ಎಂದರ್ಥ. ಅಮೃತತ್ವವನ್ನು ಹೇಳುವ ವಾಕ್ಯ ಯಾವುದು? ಎಂಬ ಪ್ರಶ್ನೆಗೆ "ತತ್ರ" ಎಂಬುದರಿಂದ ಪರಾಮರ್ಶಿಸಲ್ಪಟ್ಟ ವಾಕ್ಯಶೇಷವನ್ನು "ಏಷ ತೇ" ಎಂಬುದರಿಂದ ಹೇಳುತ್ತಿದ್ದಾರೆ.

**भावदीपः – अत एव भाष्ये आत्माऽन्तर्यामीत्येव वाच्ये अमृत इत्यंशोऽप्युक्त इति भावः । 'यस्य पृथिवी शरीरम्' इत्यंशोक्तिः पूर्वपक्षयुक्तेः 'यं पृथिवी न वेद यः पृथिव्यामन्तरः' इत्यंशोक्तिः सिद्धान्तयुक्तेः 'यः पृथिवीमन्तरः' इत्यंशोक्तिर्भेदाध्ययनस्य सूचनायेत्याशयः ।**

ಆದ್ದರಿಂದಲೇ ಭಾಷ್ಯದಲ್ಲಿ "ಆತ್ಮಾಽಂತರ್ಯಾಮೀ" ಎಂದಷ್ಟೇ ಹೇಳಿದ್ದರೂ ಸಾಕಾಗಿತ್ತು. ಆದರೂ ಸಹ "ಅಮೃತಃ" ಎಂಬ ಅಂಶವನ್ನು ಹೇಳಿದ್ದಾರೆ ಎಂದು ಅಭಿಪ್ರಾಯ. "ಯಸ್ಯ ಪೃಥಿವೀ ಶರೀರಂ" ಎಂಬ ಅಂಶವನ್ನು ಹೇಳಿದ್ದರಿಂದ ಪೂರ್ವಪಕ್ಷ ಯುಕ್ತಿಯನ್ನು, "ಯಂ ಪೃಥಿವೀ ನ ವೇದ" "ಯಃ ಪೃಥಿವ್ಯಾಮಂತರಃ" ಎಂಬ ಅಂಶವನ್ನು ಹೇಳಿದ್ದರಿಂದ ಸಿದ್ಧಾಂತ ಯುಕ್ತಿಯನ್ನು "ಯಃ ಪೃಥಿವೀಮಂತರಃ" ಎಂಬ ಅಂಶವನ್ನು ಹೇಳಿದ್ದರಿಂದ ಭೇದಾಧ್ಯಯನವನ್ನು ಸೂಚಿಸಿದ್ದಾರೆಂದು ತಿಳಿಯಬೇಕು.

**भावदीपः – स च 'यस्य पृथिवी' इत्यादिवाक्यतात्पर्यम् ॥ स चेति ॥ अन्तर्याम्यमृत इति वाक्योक्त इत्यर्थः । सच इत्यस्यार्थः – अन्तर्यामीति ॥ प्रकृतिर्जीवो वेत्यस्यार्थः – इतर इति ॥ सर्वात्मकत्वादित्युक्तयुक्त्येत्यर्थः ।**

"ಸ ಚ ಯಸ್ಯ ಪೃಥಿವೀ" ಇತ್ಯಾದಿ ಭಾಷ್ಯವಾಕ್ಯದ ತಾತ್ಪರ್ಯವನ್ನು "ಸ ಚ ಅಂತರ್ಯಾಮೀ" ಇತ್ಯಾದಿ ಟೀಕಾವಾಕ್ಯಗಳಿಂದ ವಿವರಿಸುತ್ತಿದ್ದಾರೆ. "ಸ ಚ" ಎಂದರೆ "ಅಂತರ್ಯಾಮ್ಯಮೃತಃ' ಎಂಬ ವಾಕ್ಯದಲ್ಲಿ ಹೇಳಿದ ರೀತಿ ಎಂದರ್ಥ. ಭಾಷ್ಯದಲ್ಲಿರುವ "ಸ ಚ" ಪದದ ಅರ್ಥವನ್ನು "ಅಂತರ್ಯಾಮೀ" ಎಂದು ಟೀಕೆಯಲ್ಲಿ ಬರೆದಿದ್ದಾರೆ. "ಪ್ರಕೃತಿರ್ಜೀವೋ ವಾ" ಎಂಬ ಭಾಷ್ಯಕ್ಕೆ "ಇತರಃ" ಎಂಬ ಅರ್ಥವನ್ನು ಬರೆದಿದ್ದಾರೆ. "ಸರ್ವಾತ್ಮಕತ್ವಾತ್" ಎಂಬ ಹಿಂದೆ ಹೇಳಿದ ಯುಕ್ತಿಯಿಂದ ಎಂದರ್ಥ.

**भावदीपः** – तत्र चेत्यादेरुच्यत इत्यन्तस्य तात्पर्यमाह – **तदेति** ।। **इत्यवश्येति** ।। इति सङ्गतिसम्भवादित्यर्थः ।। **अन्यस्य वेति** ।। जडप्रकृत्यादेरित्यर्थः । **द्रष्टा श्रोतेति** द्रष्टृत्वादेः श्रवणात् न प्रकृतेरत्रावकाश इति तु अक्षरनये निरस्तप्रायं भविष्यतीति भावः ।

"ತತ್ರ ಚ" ಎಂಬಲ್ಲಿಂದ ಪ್ರಾರಂಭಿಸಿ "ಉಚ್ಯತೇ" ಎಂಬಲ್ಲಿಯ ತನಕ ಇರುವ ಭಾಷ್ಯದ ತಾತ್ಪರ್ಯವನ್ನು "ತದಾ" ಎಂಬುದರಿಂದ ಹೇಳುತ್ತಿದ್ದಾರೆ. "ಇತಿ ಅವಶ್ಯಂ" ಎಂದರೆ ಹೀಗೆ ಸಂಗತಿಯು ಕೂಡುವುದರಿಂದ ಎಂದರ್ಥ. "ಅನ್ಯಸ್ಯ ವಾ" ಎಂದರೆ ಜಡಪ್ರಕೃತ್ಯಾದಿಗಳಿಗೆಂದರ್ಥ. "ದ್ರಷ್ಟಾ ಶ್ರೋತಾ" ಇತ್ಯಾದಿ ಶ್ರುತಿಯಿಂದ ದ್ರಷ್ಟೃತ್ವಾದಿಗಳು ಅಂತರ್ಯಾಮಿಯಲ್ಲಿ ಕೇಳಿಸುತ್ತಿರುವುದರಿಂದ ಪ್ರಕೃತಿಯು ಇಲ್ಲಿ ಪ್ರತಿಪಾದ್ಯವಾಗುವುದಿಲ್ಲ ಎಂಬ ವಿಚಾರವು ಅಕ್ಷರಾಧಿಕರಣದಿಂದಲೇ ನಿರಸ್ತವಾಗುತ್ತದೆಂದು ತಿಳಿಯಬೇಕು.

**भावदीपः** – भाष्ये प्रकृतिर्जीवो वेत्युक्तावप्यन्यस्येत्युक्तिः प्रकृतिजीवान्यतरानिश्चयेऽपि विष्ण्वन्यत्वेन पूर्वपक्षेऽवधारणं युक्तमिति दर्शयितुम् ।

ಭಾಷ್ಯದಲ್ಲಿ ಪ್ರಕೃತಿ ಹಾಗೂ ಜೀವರೆಂಬ ಪಕ್ಷಗಳನ್ನು ಪ್ರತ್ಯೇಕವಾಗಿ ಪರಿಗಣಿಸಿರಬಹುದು. ಆದರೂ ಸಹ ಟೀಕೆಯಲ್ಲಿ "ಅನ್ಯಸ್ಯ" ಎಂದು ಅದನ್ನು ವ್ಯಾಖ್ಯಾನಿಸಿದ್ದಾರೆ. ಏಕೆಂದರೆ ಪ್ರಕೃತಿ ಹಾಗೂ ಜೀವರೆಂಬ ಎರಡು ಪೂರ್ವಪಕ್ಷಕೋಟಿಗಳು ಅನಿತ್ಯವಾದರೂ ಸಹ ವಿಷ್ಣುವಿಗಿಂತ ಅನ್ಯವಾದ ವಸ್ತು ಅಂತರ್ಯಾಮಿಯಾಗುತ್ತದೆಂಬ ಪೂರ್ವಪಕ್ಷದಲ್ಲಿ ಅವಧಾರಣೆಯನ್ನು ತೋರಿಸುವುದಕ್ಕಾಗಿ ಹಾಗೆ ಹೇಳಿರುತ್ತಾರೆ.

**भावदीपः** – सङ्गतिपरतया व्याख्यातमेव भाष्यं पूर्वपक्षतद्युक्तितत्फलोक्तिपरत्वेन व्याकुर्वन् स चेति वाक्यं तावदवतारयति – **सयुक्तिकमिति** ।। व्यवहितत्वादन्वयोक्त्या प्रतिज्ञांशं व्याचष्टे – **स इति** ।।

ಸಂಗತಿಪರವಾಗಿ ವ್ಯಾಖ್ಯಾನಿಸಿದ ಭಾಷ್ಯವನ್ನು ಪೂರ್ವಪಕ್ಷ, ಪೂರ್ವಪಕ್ಷಯುಕ್ತಿ ಹಾಗೂ ಪೂರ್ವಪಕ್ಷಫಲಪರವಾಗಿ ವ್ಯಾಖ್ಯಾನಿಸುತ್ತಿದ್ದಾರೆ. ಮತ್ತು "ಸ ಚ" ಎಂಬ ವಾಕ್ಯಕ್ಕೆ ಅವತಾರಿಕೆಯನ್ನು "ಸ ಯುಕ್ತಿಕಂ" ಎಂಬ ವಾಕ್ಯದಿಂದ ನೀಡುತ್ತಿದ್ದಾರೆ. ವ್ಯವಹಿತವಾಗಿರುವುದರಿಂದ ಅನ್ವಯವು ತಿಳಿಯುವುದಿಲ್ಲ.

ಆದ್ದರಿಂದ ಅನ್ವಯವನ್ನು ಹೇಳುವ ಮೂಲಕ ಪ್ರತಿಜ್ಞಾಭಾಗವನ್ನು ವ್ಯಾಖ್ಯಾನಿಸುತ್ತಿದ್ದಾರೆ "ಸಃ " ಇತ್ಯಾದಿಯಾಗಿ.

**भावदीपः – आदिपदार्थोक्तिपूर्वं हेत्वंशं व्याचष्टे – यस्येति ।। उपपत्तेरित्युक्तं व्यनक्ति – शारीरेति ।। पूर्वपक्षस्य शरीरमित्यादौ स्वरूपेऽपि प्रयोगादित्यर्थः । एवं परिष्कृत्य भाष्यस्थं हेतुं सङ्गमयति –**

'ಆದಿ' ಪದದ ಅರ್ಥವನ್ನು ಹೇಳುವ ಮೂಲಕ ಹೇತ್ವಂಶವನ್ನು ವ್ಯಾಖ್ಯಾನಿಸುತ್ತಿದ್ದಾರೆ "ಯಸ್ಯ" ಎಂಬುದಾಗಿ. "ಉಪಪತ್ತೇಃ" ಎಂಬ ಮಾತನ್ನು "ಶರೀರಃ" ಎಂಬುದರಿಂದ ವ್ಯಾಖ್ಯಾನಿಸಿದ್ದಾರೆ. ಶರೀರಶಬ್ದವನ್ನು ಸ್ವರೂಪದಲ್ಲಿಯೂ ಪ್ರಯೋಗಿಸುವುದು ಕಾಣಸುತ್ತದೆ. "ಪೂರ್ವಪಕ್ಷಸ್ಯ ಶರೀರಂ" ಎಂದು ಹೇಳಿದಾಗ ಶರೀರ ಶಬ್ದಕ್ಕೆ ಸ್ವರೂಪವೆಂದಷ್ಟೇ ಅರ್ಥ. ಹೀಗೆ ಪರಿಷ್ಕರಿಸಿ ಭಾಷ್ಯದಲ್ಲಿರುವ ಹೇತುವನ್ನು ಸಮನ್ವಯ ಮಾಡುತ್ತಿದ್ದಾರೆ

**भावदीपः – प्रकृतेश्चेति ।।** उपादानत्वात् प्रकृतेः उपादानोपादेययोः 'खण्डितं रूपमेवात्र विकारोऽपि विकारिणः' इत्युक्तेरभेदादिति भावः । 'यस्य दिशः शरीरम्' 'यस्यात्मा शरीरम्' इत्यादि तु ब्रह्मपक्षेऽपि न स्वरसमिति भावः ।। **इत्यादिनेति ।।** पञ्चमे 'कारणेषु स्थितं कार्यं व्याप्तं कार्येषु कारणम्' इति गीतातात्पर्योक्तस्मृत्येत्यर्थः ।

ಪ್ರಕೃತಿಯು ಉಪಾದಾನಕಾರಣವಾಗಿದೆ. ಉಪಾದಾನ ಹಾಗೂ ಉಪಾದೇಯಗಳಿಗೆ ಅಭೇದವಿದೆಂಬುದು "ಖಂಡಿತಂ ರೂಪಮೇವಾತ್ರ ವಿಕಾರೋಽಪಿ ವಿಕಾರಿಣಃ" ಎಂಬ ಪ್ರಮಾಣದಿಂದ ಸಿದ್ಧವಾಗಿದೆ. "ಯಸ್ಯ ದಿಶಃ ಶರೀರಂ ಯಸ್ಯಾತ್ಮಾ ಶರೀರಂ" ಎಂಬುದಾಗಿ ಬ್ರಹ್ಮಪಕ್ಷದಲ್ಲಿಯೂ ಸಹ ಕೂಡಿಸಬಹುದು. ಆದರೆ ಇದು ಅಸ್ವರಸವಾಗಿದೆಂದು ತಿಳಿಯಬೇಕು. "ಇತ್ಯಾದಿನಾ" ಎಂದರೆ ಗೀತಾತಾತ್ಪರ್ಯದ ಐದನೆಯ ಅಧ್ಯಾಯದಲ್ಲಿ "ಕಾರಣೇಷು ಸ್ಥಿತಂ ಕಾರ್ಯಂ ವ್ಯಾಪ್ತಂ ಕಾರ್ಯೇಷು ಕಾರಣಂ" ಎಂಬುದಾಗಿ ಕಾರಣವು ಕಾರ್ಯದಲ್ಲಿ ಇರುತ್ತದೆ ಇತ್ಯಾದಿಯಾಗಿ ಹೇಳಿದ್ದಾರೆ.

**भावदीपः – कार्यस्थत्वेति ।।** 'खण्डितं रूपमेव' इति तत्वविवेकोक्त्या भेदस्यापि सत्त्वेन पटे तन्तव इत्यादिवदुपपत्तेरिति भावः ।। **उपचारेणेति ।।** कार्यस्य कारणायत्तत्वात् प्रकृत्यधीनत्वेन नेयमित्यर्थः ।

"ಖಂಡಿತಂ ರೂಪಮೇವಾತ್ರ ವಿಕಾರೋಽಪಿ ವಿಕಾರಿಣಃ" ಎಂಬುದಾಗಿ ತತ್ವವಿವೇಕದಲ್ಲಿ ಹೇಳಿರುವುದರಿಂದ ಕಾರ್ಯ ಕಾರಣಗಳಿಗೆ ಭೇದವು ಇರುತ್ತದೆ. ಆದ್ದರಿಂದ "ಪಟೇ ತಂತವಃ" ಎಂಬ

ಪ್ರಯೋಗದಲ್ಲಿ ಭೇದವಿದ್ದರೂ ಕಾರ್ಯಸ್ಥತ್ವವನ್ನು ಹೇಳಬಹುದು. ''ಉಪಚಾರೇಣ'' ಎಂದರೆ ಕಾರ್ಯವು ಕಾರಣಾಧೀನವಾದ್ದರಿಂದ ಪ್ರಕೃತ್ಯಧೀನನಾಗಿ ಕೂಡಿಸಬೇಕೆಂದರ್ಥ.

**भावदीपः –** एवं 'नच स्मार्तम्' इति सूत्रव्यावर्त्यमुक्त्वा 'शारीरश्च' इति सूत्रव्यावर्त्यं तत्तज्जीवो वेति भाष्योक्तं पूर्वपक्षमाह – **पृथिव्यादीति** ।। भाष्ये प्रकृतिपक्षे सर्वात्मकत्वादिति हेतूक्तिवज्जीवपक्षे हेत्वनुक्तेरभिप्रायमाह – **अतिसुघटत्वादिति भाव इति ।**

ಹೀಗೆ ''ನಚ ಸ್ಮಾರ್ತಮ್'' ಎಂಬ ಸೂತ್ರದದಿಂದ ವ್ಯಾವರ್ತ್ಯವಾದ ಪೂರ್ವಪಕ್ಷವನ್ನು ಹೇಳಿ ಈಗ ''ಶಾರೀರಶ್ಚ'' ಎಂಬ ಸೂತ್ರದಿಂದ ವ್ಯಾವರ್ತವನ್ನು ''ತತ್ತಜ್ಜೀವೋ ವಾ'' ಎಂದು ಭಾಷ್ಯದಲ್ಲಿ ಹೇಳಿರುವ ಪೂರ್ವಪಕ್ಷವನ್ನು ''ಪೃಥಿವ್ಯಾದಿ'' ಇತ್ಯಾದಿ ವಾಕ್ಯದಿಂದ ವಿವರಿಸುತ್ತಿದ್ದಾರೆ. ಭಾಷ್ಯದಲ್ಲಿ ಪ್ರಕೃತಿಯ ಪೂರ್ವಪಕ್ಷ ಕೋಟಿಯನ್ನು ಹೇಳಬೇಕಾದರೆ, ''ಸರ್ವಾತ್ಮಕತ್ವಾತ್'' ಎಂಬ ಹೇತುವನ್ನು ಹೇಳಿರುತ್ತಾರೆ. ಆದರೆ ಜೀವಪಕ್ಷದ ಪೂರ್ವಪಕ್ಷಕ್ಕೆ ಯಾವುದೇ ಹೇತುವನ್ನು ಹೇಳಿರುವುದಿಲ್ಲ. ಇದಕ್ಕೆ ಕಾರಣವನ್ನು ''ಅತಿಸುಘಟತ್ವಾದಿತಿ ಭಾವಃ'' ಎಂಬ ಟೀಕೆಯಿಂದ ಹೇಳಿರುತ್ತಾರೆ.

**भावदीपः –** पृथिव्याद्यभिमानिजीवान् प्रति पृथिव्यादेः स्थूलशरीरत्वादिति भावः । आदिपदेन 'यः पृथिव्यां तिष्ठन्' 'यः पृथिव्यामन्तरो यमयति' इत्यादिर्गृह्यते ।। **तेषामिति** ।। पूर्वं जीवो वेति सूत्रभाष्यदिशा जीव इत्येकवचनोक्तावपि तत्तदभिमानिनां बहुत्वेन तेषामित्यनुवादः । एकैकस्याभिमानिनः पृथिव्याद्यनेकशरीरकत्वायोगादिति भावः ।

ಪೃಥಿವಿಯೇ ಮೊದಲಾದ ಅಭಿಮಾನಿ ದೇವತೆಗಳಿಗೆ ಪೃಥಿವ್ಯಾದಿಗಳೇ ಸ್ಥೂಲಶರೀರವೆಂದರ್ಥ. ಆದಿ ಪದದಿಂದ 'ಯಃ ಪೃಥಿವ್ಯಾಂ ತಿಷ್ಠನ್ ಯಃ ಪೃಥಿವ್ಯಾಮಂತರೋ ಯಮಯತಿ'' ಇತ್ಯಾದಿ ವ್ಯಾಕ್ಯಗಳನ್ನು ಸ್ವೀಕರಿಸಬೇಕು. ''ತೇಷಾಂ'' ಎಂಬ ಟೀಕಾವಾಕ್ಯದ ಅಭಿಪ್ರಾಯ ಹೀಗಿದೆ - ಹಿಂದೆ ''ಜೀವೋ ವಾ'' ಎಂಬುದಾಗಿ ಸೂತ್ರಭಾಷ್ಯದ ಪ್ರಕಾರ ಏಕವಚನವನ್ನು ಹೇಳಿದ್ದರು. ಆದರೆ ಈಗ ಅಭಿಮಾನಿ ದೇವತೆಗಳು ಬಹಳ ಮಂದಿ ಇರುವುದರಿಂದ ''ತೇಷಾಂ'' ಎಂಬುದಾಗಿ ಬಹುವಚನದಿಂದ ಅನುವಾದ ಮಾಡಿದ್ದಾರೆ. ಒಬ್ಬೊಬ್ಬ ಅಭಿಮಾನಿದೇವತೆಗಳಿಗೆ ಪೃಥಿವಿಯೇ ಮೊದಲಾದ ಆನೇಕ ಶರೀರಗಳು ಇರಲು ಸಾಧ್ಯವಿಲ್ಲವೆಂದು ಅಭಿಪ್ರಾಯ.

**भावदीपः –** **कयापीति** ।। पृथिव्याद्यात्मकत्वे तत्तद्देहत्वेन वा सिद्धान्ते वक्ष्यमाणदिशा स्मर्यमाणत्वरूपयोगेन वेत्यर्थः । तद् व्यनक्ति – **तस्येति** ।। जन्मादिसूत्रे 'यो नः पिता' इति वाक्योक्त्या भाष्ये कर्तृत्वमेव ब्रह्मणो नोपादानत्वमित्युक्तेर्भिन्नत्वमिति भावः ।

"ಕಯಾಪಿ ವಿಧಯಾ" ಎಂಬ ಟೀಕೆಗೆ ಹೀಗರ್ಥ - ಪೃಥಿವೀ ಮೊದಲಾದವುಗಳ ಸ್ವರೂಪದಿಂದ, ಅಥವಾ ಪೃಥಿವೀ ಮೊದಲಾದವುಗಳು ದೇಹವಾಗಿರುವುದರಿಂದ, ಅಥವಾ ಸಿದ್ಧಾಂತದಲ್ಲಿ ಮುಂದೆ ಹೇಳುವ ಪ್ರಕಾರ ಸ್ಮರ್ಯಮಾಣತ್ವರೂಪವೆಂಬ ಯೋಗದಿಂದ ವಿಷ್ಣುವಿನಲ್ಲಿ ಪೃಥಿವ್ಯಾದಿ ಶರೀರತ್ವವನ್ನು ಕೂಡಿಸಲು ಬರುವುದಿಲ್ಲವೆಂದು ಅಭಿಪ್ರಾಯ. ಅದನ್ನೇ ಸ್ಪಷ್ಟಪಡಿಸುತ್ತಿದ್ದಾರೆ "ತಸ್ಯ" ಎಂಬ ವಾಕ್ಯದಿಂದ. ಜನ್ಮಾದ್ಯಧಿಕರಣದಲ್ಲಿ "ಯೋ ನಃ ಪಿತಾ" ಎಂಬ ವಾಕ್ಯದ ಆಧಾರದಿಂದ ಭಾಷ್ಯದಲ್ಲಿ ಕರ್ತೃತ್ವವನ್ನೇ ಬ್ರಹ್ಮನ ಲಕ್ಷಣವೆಂದಿದ್ದಾರೆ ಹೊರತು ಉಪಾದಾನತ್ವವನ್ನು ಬ್ರಹ್ಮನ ಲಕ್ಷಣವೆಂದು ಹೇಳಿರುವುದಿಲ್ಲ. ಆದ್ದರಿಂದ ಉಪಾದಾನತ್ವವು ಕರ್ತೃತ್ವಕ್ಕಿಂತ ಭಿನ್ನವಾದ್ದರಿಂದ ವಿಷ್ಣುವಿನಲ್ಲಿ ಕೂಡಿಸಲು ಬರುವುದಿಲ್ಲವೆಂದು ತಿಳಿಯಬೇಕು.

**भावदीपः –** चिच्छरीरेति ।। 'विकारत्वान्नेति चेत् तदुक्तम्' इत्यत्र 'अरूपवदेव हि' इति नये 'आह च तन्मात्रम्' इति सूत्रे च तथोक्तेरिति भावः । योगाद् रूढेर्बलवत्त्वेनेत्यपि ग्राह्यम् । एतेन पृथिव्यादिशरीरत्वं निरवकाशमिति न्यायविवरणोक्तं निरवकाशत्वं विवृतं ध्येयम् ।

'ಚಿಚ್ಛರೀರ" ಎಂದರೆ - ವಿಷ್ಣುವಿಗೆ ಚಿನ್ಮಯವಾದ ಶರೀರವನ್ನು "ವಿಕಾರತ್ವಾನ್ನೇತಿ ಚೇತ್ತದುಕ್ತಂ" ಎಂಬ ಸೂತ್ರದಲ್ಲಿ, "ಅರೂಪವದೇವ ಹಿ" ಎಂಬ ಸೂತ್ರದಲ್ಲಿ, ಮತ್ತು "ಆಹ ಚ ತನ್ಮಾತ್ರಂ" ಎಂಬ ಸೂತ್ರದಲ್ಲಿ ಸಿದ್ಧಾಂತಿಗಳು ಅಂಗೀಕರಿಸಿರುತ್ತಾರೆ. ಮತ್ತು ಯೋಗಕ್ಕಿಂತ ರೂಢಿಯೇ ಪ್ರಬಲವಾಗಿರುವುದರಿಂದ ಪೃಥಿವ್ಯಾದಿಶರೀರತ್ವವನ್ನು ವಿಷ್ಣುವಿನಲ್ಲಿ ಕೂಡಿಸಲು ಸಾಧ್ಯವಿಲ್ಲವೆಂಬ ಅರ್ಥವನ್ನು ಇಲ್ಲಿ ಸ್ವೀಕರಿಸಬೇಕು. ಹೀಗೆ ಹೇಳಿದ್ದರಿಂದ "ಪೃಥಿವ್ಯಾದಿಶರೀರತ್ವಂ ನಿರವಕಾಶಂ" ಎಂಬ ನ್ಯಾಯವಿವರಣದಲ್ಲಿ ಹೇಳಲ್ಪಟ್ಟ ನಿರವಕಾಶತ್ವವನ್ನು ವಿವರಿಸಿದಂತಾಯಿತು ಎಂದು ಅಭಿಪ್ರಾಯ.

**भावदीपः –** कथञ्चित् स्वरूपनित्यत्वेन एव पृथिव्याद्यविदितत्वमपि । 'अप्रतर्क्यमविज्ञेयम्' इत्यादिना कथञ्चिन्नेयमिति । भाष्यस्यैकवचनेन परमत इव एक जीव इति भ्रान्तिं निरस्यन्नुपसंहरति – **अतो निरवकाशलिङ्गादिति** ।। प्रकृत्यादय इति ।। अत एव भाष्ये तत्तज्जीव इत्युक्तिरिति भावः ।

"ಕಥಂಚಿತ್" ಎಂದರೆ ಸ್ವರೂಪತಃ ನಿತ್ಯವಾದ್ದರಿಂದ ಎಂದರ್ಥ. ಮತ್ತು ಪೃಥಿವ್ಯಾದ್ಯವಿದಿತತ್ವವೂ ಸಹ "ಅಪ್ರತರ್ಕ್ಯಂ ಅವಿಜ್ಞೇಯಂ" ಎಂಬ ವಾಕ್ಯದಂತೆ ಹೇಗಾದರೂ ಪ್ರಕೃತಿಯಲ್ಲಿ ಕೂಡಿಸಬಹುದೆಂದರ್ಥ. ಭಾಷ್ಯದಲ್ಲಿರುವ ಏಕವಚನದಿಂದ ಪರ ಮತದಲ್ಲಿ ಒಪ್ಪುವಂತೆ ಒಬ್ಬನೇ ಜೀವನು ಪೂರ್ವಪಕ್ಷಕ್ಕೆ ವಿಷಯನಾಗಿದ್ದಾನೆಂಬ ಭ್ರಾಂತಿಯು ಬರುತ್ತದೆ. ಅದನ್ನು ನಿರಾಕರಿಸುತ್ತಾ ಪೂರ್ವಪಕ್ಷವನ್ನು ಉಪಸಂಹಾರ ಮಾಡುತ್ತಿದ್ದಾರೆ "ಅತಃ ನಿರವಕಾಶಲಿಂಗಾತ್" ಎಂಬ ಮಾತಿನಿಂದ. "ಪ್ರಕೃತ್ಯಾದಯಃ" ಎಂದು ಹೇಳಿದ್ದರಿಂದಲೇ ಭಾಷ್ಯದಲ್ಲಿ "ತತ್ತಜ್ಜೀವಃ" ಎಂದು ಹೇಳಿದ್ದಾರೆಂದು ತಿಳಿಯಬೇಕು.

ಅಂತರ್ಯಾಮ್ಯಧಿಕರಣ (೧-೨-೫)

**भावदीपः –** तत्र चेत्यादिभाष्यं फलपरिमितिभावेन । तत्तात्पर्यमाह – नामृतत्वमिति ।। इत्याद्यन्तर्याम्युच्यत इति भाष्ये यादीति प्रथमा सप्तम्यर्थे, तृतीयार्थे वा । 'सप्तसु प्रथमा' इति सूत्रात् । क्रियाविशेषणं वा । इत्यादिवाक्येषु इत्यर्थ इति तत्त्वप्रदीपे व्याख्यातम् । सूत्रक्रममनुरुद्ध्य व्युत्क्रमेण भाष्यं व्याचष्टे – अन्तर्यामीति ।।

"ತತ್ರ ಚ" ಇತ್ಯಾದಿ ಭಾಷ್ಯವು ಫಲಪರವಾಗಿದೆ ಎಂಬ ಅಭಿಪ್ರಾಯದಿಂದ ಅದರ ತತ್ಪಾರ್ಯವನ್ನು "ನಾಮೃತತ್ವಂ" ಎಂದು ಹೇಳಿದ್ದಾರೆ. "ಇತ್ಯಾದ್ಯಂತರ್ಯಾಮ್ಯುಚ್ಯತೇ" ಎಂಬ ಭಾಷ್ಯದಲ್ಲಿ, "ಇತ್ಯಾದಿ" ಎಂಬುದು ಪ್ರಥಮಾವಿಭಕ್ತಿಯಲ್ಲಿದೆ. ಇದು ಸಪ್ತಮೀ ಅಥವಾ ತೃತೀಯಾ ಅರ್ಥದಲ್ಲಿ ಇದೆಯೆಂದು ತಿಳಿಯಬೇಕು. ಏಕೆಂದರೆ "ಸಪ್ತಸು ಪ್ರಥಮಾ" ಎಂಬ ಸೂತ್ರದ ಆಧಾರದಿಂದ ಪ್ರಥಮಾವಿಭಕ್ತಿಯನ್ನು ಎಲ್ಲಾ ವಿಭಕ್ತ್ಯರ್ಥಗಳಲ್ಲಿ ಪ್ರಯೋಗಿಸುವುದು ತಪ್ಪಾಗುವುದಿಲ್ಲ. "ಅಥವಾ" ಇತ್ಯಾದಿ ಎಂಬುದನ್ನು "ಉಚ್ಯತೇ" ಎಂಬ ಕ್ರಿಯಾ ಪದದಲ್ಲಿ ಅನ್ವಯ ಮಾಡಬಹುದು. "ಇತ್ಯಾದಿ ವಾಕ್ಯೇಷು ಇತ್ಯರ್ಥಃ" ಇತ್ಯಾದಿ ವಾಕ್ಯಗಳಲ್ಲಿ ಅಂತರ್ಯಾಮಿ ಎಂಬ ಅರ್ಥದಲ್ಲಿ ಹೇಳಲಾಗಿದೆ ಎಂಬುದಾಗಿ ತತ್ವಪ್ರದೀಪದಲ್ಲಿ ವ್ಯಾಖ್ಯಾನ ಮಾಡಿರುತ್ತಾರೆ.

**भावदीपः –** तद्धर्मेत्यत्र तच्छब्दार्थः – अन्तर्यामिण इति ।। अन्तरत्वेति ।। 'बाह्यापेक्षां विना यस्तु रमते सोऽन्तरः स्मृतः । अतिप्रियत्वाच्च हरेरन्तत्वमुदाहृतम् ।।' इति बृहद्भाष्योक्तरूपान्तरत्वेत्यर्थः ।

ಸೂತ್ರಕ್ರಮವನ್ನು ಅನುಸರಿಸಿ ಸ್ವಲ್ಪ ವ್ಯತ್ಯಾಸ ಮಾಡಿ ಭಾಷ್ಯವನ್ನು ವ್ಯಾಖ್ಯಾನಿಸುತ್ತಿದ್ದಾರೆ "ಅಂತರ್ಯಾಮಿ" ಎಂದು. "ತದ್ಧರ್ಮ" ಎಂಬಲ್ಲಿರುವ "ತತ್" ಶಬ್ದದ ಅಥವನ್ನು "ಅಂತರ್ಯಾಮಿಣಃ" ಎಂಬುದಾಗಿ ಹೇಳಿರುತ್ತಾರೆ. "ಅಂತರತ್ವ" ಎಂದರೆ "ಬಾಹ್ಯಾಪೇಕ್ಷಾಂ ವಿನಾ ಯಸ್ತು ರಮತೇ ಸೋಽಂತರಃ ಸ್ಮೃತಃ । ಅತಿಪ್ರಿಯತ್ವಾಚ್ಚ ಹರೇರಂತರತ್ವಮುದಾಹೃತಂ" ಬಾಹ್ಯಪದಾರ್ಥಗಳ ಅಪೇಕ್ಷವಿಲ್ಲದೆ ಯಾರು ಸ್ವರಮಣನಾಗಿದ್ದಾನೋ, ಮತ್ತು ಅತ್ಯಂತ ಪ್ರಿಯಾನಾಗಿದ್ದಾನೋ ಅಂತಹ ಹರಿಯಲ್ಲಿಯೇ ಅಂತರತ್ವವು ಸಿದ್ಧವಾಗುತ್ತದೆ" ಎಂದು ಬೃಹದ್ಭಾಷ್ಯದಲ್ಲಿ ಹೇಳಿದ್ದಾರೆ. ಅಂತಹ ಅಂತರತ್ವವನ್ನು ಇಲ್ಲಿ ವಿವಕ್ಷಿಸಬೇಕು.

**भावदीपः –** एतच्च 'यः पृथिव्यामन्तरो यमयति' इति वाक्योक्तमन्तरत्वं ज्ञेयम् । नतु पृथिव्या अन्तरमित्युक्तान्तरत्वं तस्यान्तरो विविक्त इति भेदरूपार्थत्वस्य वक्ष्यमाणत्वात् । भाष्ये पृथिव्या अन्तर इति प्रतीकमुखेन 'यः पृथिवीमन्तरः' इति वाक्यमेवाभिप्रेतम् ।

ಈ ವ್ಯಾಖ್ಯಾನವನ್ನು "ಯಃ ಪೃಥಿವೀಮಂತರೋ ಯಮಯತಿ"ಎಂಬ ವಾಕ್ಯದಲ್ಲಿ ಕೇಳಿಸುತ್ತಿರುವ ಅಂತರಶಬ್ದ ಅರ್ಥವಾಗಿದೆಯೆಂದು ತಿಳಿಯಬೇಕೇ ಹೊರತು "ಪೃಥಿವ್ಯಾ ಅಂತರಂ" ಎಂಬಲ್ಲಿ ಹೇಳಿರುವ ಅರ್ಥವಲ್ಲ. ಆ ಅಂತರತ್ವವು ಭೇದವುಳ್ಳ ಅರ್ಥವುಳ್ಳದಾಗಿದೆ ಎಂದು ಮುಂದೆ ಹೇಳುತ್ತೇವೆ. ಭಾಷ್ಯದಲ್ಲಿ "ಪೃಥಿವ್ಯಾ ಅಂತರೋಂಽತಸ್ಥಃ" ಎಂಬ ಪ್ರತೀಕವನ್ನು ಗ್ರಹಣ ಮಾಡುವ ಮೂಲಕ "ಯಃ ಪೃಥಿವೀಮಂತರಃ" ಎಂಬ ವ್ಯಾಕ್ಯವನ್ನೇ ವ್ಯಾಖ್ಯಾನ ಮಾಡುತ್ತಾರೆಂದು ತಿಳಿಯಬೇಕು.

**भावदीपः** – यद्वा 'पृथिव्या अन्तरः' इति पृथिव्या अन्तरोऽन्तःस्थः इत्यन्तःस्थरूपान्तत्वस्येत्यर्थः । क्वचित् तदन्तस्थत्वाख्येति पाठः । 'अन्तःस्थो देवतानां च न विदुर्यं च देवताः' इति काण्वभाष्योक्तेः । अन्तरो विविक्त इत्युक्तिस्तु अर्थान्तरमुपेत्येति ज्ञेयम् ।

ಅಥವಾ "ಪೃಥಿವ್ಯಾ ಅಂತರಃ" ಎಂಬ ವಾಕ್ಯದಲ್ಲಿ ಪೃಥಿವಿಯ ಅಂತರ್ಯಾಮಿಯಲ್ಲಿ ಅಂತಸ್ಥನಾದವನ್ನು ಎಂಬುದಾಗಿ ಅಂತಸ್ಥತ್ವರೂಪ ಅಂತರತ್ವವೆಂಬ ಅರ್ಥವನ್ನು ವಿವಕ್ಷಿಸಬಹುದು. ಕೆಲವಡೆ "ಅಂತಸ್ಥತ್ವ" ಎಂಬ ಪಾಠವೇ ಇದೆ ಹೊರತು ಅಂತಸ್ಥತ್ವವೆಂಬ ಪಾಠವಿರುವುದಿಲ್ಲ. "ಅಂತಸ್ಥೋ ದೇವತಾನಾಂ ಚ ನ ವಿದುರ್ಯಂ ಚ ದೇವತಾ" ಎಂದು ಕಾಣ್ವಭಾಷ್ಯವು ಈ ವಿಷಯದಲ್ಲಿ ಸಂವಾದಿಯಾಗಿದೆ. "ಅಂತರೋ ವಿವಿಕ್ತಃ" ಎಂಬುದಾಗಿ ಅಂತರ ಶಬ್ದಕ್ಕೆ ಅರ್ಥವನ್ನು ಹೇಳಿರುವುದು ಮತ್ತೊಂದು ಅರ್ಥವನ್ನು ವಿವಕ್ಷಿಸಿ ಹೇಳಿದ್ದಾರೆಂದು ತಿಳಿಯಬೇಕು.

**भावदीपः** – तद्धर्मेति तच्छब्दस्यार्थान्तरमाह – विष्णुधर्मत्वादिति ।। एतेन तस्य विष्णोरविदितत्वादिधर्मस्य तत्रान्तर्यामिणि व्यपदेशादिति सूत्रार्थो दर्शितः । अधिदैवादिष्वित्युक्तेरुपयोगं व्यावर्त्य पूर्वमाह – नचेति ।।

"ತದ್ಧರ್ಮ" ಎಂಬಲ್ಲಿರುವ "ತತ್" ಶಬ್ದಕ್ಕೆ ಬೇರೆ ಅರ್ಥವನ್ನು "ವಿಷ್ಣುಧರ್ಮತ್ವಾತ್" ಎಂಬುದಾಗಿ ಹೇಳುತ್ತಿದ್ದಾರೆ. ಹೀಗೆ ಹೇಳಿದ್ದರಿಂದ ತಸ್ಯ= ವಿಷ್ಣುವಿನ, ಧರ್ಮಃ = ಅವಿದಿತತ್ವಾದಿ ಧರ್ಮಗಳನ್ನು, ತತ್ರ = ಅಂತರ್ಯಾಮಿಯಲ್ಲಿ, ವ್ಯಪದೇಶಾತ್ = ಹೇಳಿದ್ದಾರೆ ಎಂದು ಸೂತ್ರಾರ್ಥವನ್ನು ಹೇಳಿದಂತಾಗುತ್ತದೆ. "ಅಧಿದೈವಾದಿಷು" ಎಂದು ಹೇಳಿದ್ದಕ್ಕೆ ಪ್ರಯೋಜನವನ್ನು ಪೂರ್ವಪಕ್ಷವನ್ನು ನಿರಾಕರಿಸುವ ಮೂಲಕವಾಗಿ ತೋರಿಸುತ್ತಿದ್ದಾರೆ "ನಚ " ಇತ್ಯಾದಿ ವಾಕ್ಯಗಳಿಂದ.

**भावदीपः** – अधिदैवत्वेनेति ।। देवैः साकल्येनावेद्यत्वं विष्णोरेव लिङ्गमित्यर्थः । जडत्वेऽप्रसक्तनिषेधः स्यादित्यर्थः । 'परमं तं नाप श्रोत्रादिना' इति ज्योतिर्नये व्याख्यातत्वान्नात्र श्रुतिं व्याचख्यौ । 'स योऽतः' इति श्रुत्यर्थस्तूक्तोऽस्माभिर्विवक्षितगुणेत्यत्र।

"ಅಧಿದೈವತ್ವೇನ" ಎಂದರೆ ದೇವತೆಗಳಿಂದ ಸಂಪೂರ್ಣವಾಗಿ ಹೇಳಲಾಗದ ವಸ್ತುವೆಂದರೆ ವಿಷ್ಣುವೇ ಆಗಿದ್ದಾನೆ ಇಂತಹ ಅವೇದ್ಯತ್ವವು ವಿಷ್ಣುವಿನ ಲಿಂಗವಾಗಿದೆಯೆಂದರ್ಥ. ಒಂದು ವೇಳೆ ಜಡವು ಜ್ಞಾನಕ್ಕೆ ವಿಷಯವಾಗದ ಕಾರಣ ಅವಿದಿತತ್ವವನ್ನು ಹೇಳಬಹುದೆಂದರೆ ಅಪ್ರಸಕ್ತನಿಷೇಧ ಮಾಡಿದಂತಾಗುತ್ತದೆ . "ಪರಂ ತಂ ನಾಪ ಶ್ರೋತ್ರಾದಿನಾ" - ಶ್ರೋತ್ರಾದಿ ಇಂದ್ರಿಯಗಳಿಂದ ವಿಷ್ಣುವನ್ನು ತಿಳಿಯಲಾಗುವುದಿಲ್ಲ ಎಂದು ಶ್ರುತಿಯ ಅರ್ಥವನ್ನು ಜ್ಯೋತಿರಧಿಕರಣದಲ್ಲಿ ವ್ಯಾಖ್ಯಾನ ಮಾಡಿದ್ದರಿಂದ ಪ್ರಕೃತ ಅದನ್ನು ವ್ಯಾಖ್ಯಾನಿಸಿಲ್ಲ. "ಸ ಯೋಽತಃ" ಎಂಬ ಶ್ರುತಿಯ ಅರ್ಥವನ್ನು "ವಿವಕ್ಷಿತಗುಣೋಪಪತ್ತೇಶ್ಚ" ಎಂಬ ಸೂತ್ರದ ವ್ಯಾಖ್ಯಾನದ ಸಂದರ್ಭದಲ್ಲಿ ನಾವೇ ಹೇಳಿರುತ್ತೇವೆ.

**भावदीपः** – चक्षुरादीनामिति ।। पुर्वत्र " य एषोऽन्तरक्षणि" इत्यादावक्ष्यादित्यचन्द्रविद्युतां जडत्वेऽपि अत्राधिदैवाध्यत्मादिप्रकरणेषु ओक्तस्य पृथिव्यादिचक्षुरादिदेवतास्थस्यैव । तत्र पुर्वत्राक्ष्यादावुक्तेरमृतत्वमुखेन पुर्वक्षेपसमाध्यविरोध इत्यर्थः । श्रुतौ लिङ्गस्यान्ययोगव्यवच्छेदानुक्तेः स्वयमाह – नचेति ।।

ಹಿಂದೆ "ಯೇ ಏಷೋಽಂತರಕ್ಷಣಿ" ಎಂಬಲ್ಲಿ ಅಕ್ಷಿ, ಆದಿತ್ಯ, ಚಂದ್ರ, ವಿದ್ಯುತ್ ಮೊದಲಾದವುಗಳು ಜಡವಾಗಿದ್ದರೂ ಅಧಿದೈವ ಅಧ್ಯಾತ್ಮ ಪ್ರಕರಣದಲ್ಲಿ ಹೇಳಲ್ಪಟ್ಟ ವ್ಯಕ್ತಿಯು ಪೃಥಿವೀ, ಚಕ್ಷುರಿಂದ್ರಿಯ ಮೊದಲಾದ ದೇವತೆಗಳ ಅಂತರ್ಯಾಮಿಯೇ ಆಗಿದ್ದಾನೆಂದು ತಿಳಿಯಬೇಕು. ಹಾಗಾದರೆ ಹಿಂದಿನ ಮಾತಿನಿಂದ ವಿರೋಧ ಬರುತ್ತದೆಂದು ಶಂಕಿಸಬಾರದು. ಹಿಂದೆ ಅಕ್ಷ್ಯಾದಿಗಳು ಪ್ರಸಕ್ತವಾದಾಗ ಅಮೃತತ್ವ ಧರ್ಮದಿಂದ ಸಮಾಧಾನ ನೀಡಲಾಯಿತು. ಈಗ ದೇವತೆಗಳಲ್ಲಿ ವಿಷ್ಣು ಇದ್ದಾನೆಂದು ಸಮಾಧಾನ ಹೇಳುತ್ತಿದ್ದಾರೆ. ಶ್ರುತಿಯಲ್ಲಿ ಲಿಂಗಕ್ಕೆ ಅನ್ಯಯೋಗವ್ಯವಚ್ಛೇದವನ್ನು ಹೇಳದ ಕಾರಣ ಸ್ವತಃ ತಾವೇ ಹೇಳುತ್ತಿದ್ದಾರೆ "ನಚ" ಎಂಬ ವಾಕ್ಯದಿಂದ.

**भावदीपः** – अप्रतर्क्यमविज्ञेयमित्यादि तु दुर्ज्ञानत्वादिपरम् । " सुक्ष्मत्वाद-प्रतिद्धत्वाद्गुणबाहुल्यतस्तथा । अनिर्देश्यौ तथाऽव्यक्तावचिन्त्यौ श्रीश्च माधव" इति द्वदशे गीतातात्पर्योक्तेः । "श्रुत्वात्मानं वेद न चैव कश्चित्"इति तु व्याख्यातं सर्वत्र प्रसिद्धेत्यादिनय इति भावः ।

"ಅಪ್ರತರ್ಕ್ಯಮವಿಜ್ಞೇಯಂ" ಇತ್ಯಾದಿ ವಾಕ್ಯಗಳಿಗೆ ತಿಳಿಯಲು ಸಾಧ್ಯವಿಲ್ಲವೆಂದಷ್ಟೇ ಅರ್ಥವನ್ನು ಮಾಡಬೇಕು. ಏಕೆಂದರೆ "ಸೂಕ್ಷ್ಮತ್ವಾದಪ್ರಸಿದ್ಧತ್ವಾದ್ ಗುಣಬಾಹುಲ್ಯತಸ್ತಥಾ । ಅನಿರ್ದೇಶ್ಯೋ ತಥಾಽವ್ಯಕ್ತಾವಚಿಂತ್ಯೋ ಶ್ರೀಶ್ಚ ಮಾಧವಃ" ಸೂಕ್ಷ್ಮನು ಅಪ್ರಸಿದ್ಧನು ಅನೇಕ ಗುಣಗಳಿಂದ ಕೂಡಿದವನಾಗಿರುವುದರಿಂದ ಅನಿರ್ದೇಶನಾದವನೂ ಅವ್ಯಕ್ತನೂ ಅಚಿಂತ್ಯನೂ ಆಗಿದ್ದಾನೆಂದು ತಿಳಿಯಬೇಕು. ಲಕ್ಷ್ಮೀದೇವಿ ಮತ್ತು ಮಾಧವನು ಸೂಕ್ಷ್ಮರು, ಅಪ್ರಸಿದ್ಧರು, ಬಹುಗುಣಗಳಿಂದ ಕೂಡಿದವರು, ಅನಿರ್ದೇಶ್ಯರು, ಅವ್ಯಕ್ತರು, ಅಚಿಂತ್ಯರು ಆಗಿದ್ದಾರೆಂದು ಗೀತಾತಾತ್ಪರ್ಯದ ಹನ್ನೆರಡನೇ ಅಧ್ಯಾಯದಲ್ಲಿ

ಹೇಳಿದ್ದಾರೆ. ಅದರ ಪ್ರಕಾರ ಇಲ್ಲಿ ವ್ಯಾಖ್ಯಾನಿಸಬೇಕು. "ಶ್ರುತ್ವಾತ್ಮಾನಂ ವೇದ ನ ಚೈವ ಕಶ್ಚಿತ್" ಎಂಬ ಶ್ಲೋಕಕ್ಕೆ "ಸರ್ವತ್ರ ಪ್ರಸಿದ್ಧೋಪದೇಶಾತ್" ಎಂಬ ಸೂತ್ರದಲ್ಲಿ ವ್ಯಾಖ್ಯಾನಿಸಿದ್ದನ್ನು ಇಲ್ಲಿ ಸ್ಮರಿಸಿಕೊಳ್ಳಬೇಕು.

**भावदीपः** – अन्तरत्वं च बाह्यापेक्षां विना रममाणत्वरुपं वा । पृथिव्यादिदेवतांतःस्यत्वरुपं वा । द्वेधापि विष्णोरन्यत्रानवकाशमिति "विवक्षितगुणोपपत्तेः" इत्यत्रोक्तप्रायमिति भावः ॥१८॥

ಅಂತರತ್ವವನ್ನು ಬಾಹ್ಯಾಪೇಕ್ಷೆ ಇಲ್ಲದೆ ಕ್ರೀಡಿಸುವವನು ಎಂಬರ್ಥದಲ್ಲಿ ಕೂಡಿಸಬೇಕು. ಅಥವಾ ಪೃಥಿವ್ಯಾದಿದೇವತೆಗಳಲ್ಲಿ ನೆಲಿಸಿದ್ದಾನೆಂದು ತಿಳಿಯಬೇಕು. ಎರಡೂ ಅರ್ಥಗಳಲ್ಲಿ ಭಗವಂತನನ್ನು ಬಿಟ್ಟು ಬೇರೆ ಕಡೆ ಅಂತರತ್ವವು ಉಪಪನ್ನವಾಗುವುದಿಲ್ಲ. ಹೀಗೆ "ವಿವಕ್ಷಿತಗುಣೋಪಪತ್ತೇಃ" ಎಂಬ ಸೂತ್ರದಿಂದ ಹೇಳಿದಂತಾಗುತ್ತದೆ.

**वाक्यार्थमञ्जरी** – **काण्वमाध्यन्दिनेति** ॥ 'यः पृथिव्यां तिष्ठन्' इत्यादि वाक्यस्योभयत्रापि पाठादेवमुक्तम् । यो भगवान् पृथिव्यां पृथिव्यभिमानिदेवतायां तिष्ठन् पृथिव्या अन्तरो विविक्तः यमन्तर्यामिणं पृथिवी न वेद यस्य पृथिवी शरीरम्, तद्वशत्वादेः । न केवलं तत्र स्थितिमात्रम्, किन्तु यो अन्तरो बाह्यापेक्षां विना रमत इति वा रमयति वान्तरः । पृथिवीं यमयति य एष भगवांस्ते तव आत्मा नियामकः । अमृतो नित्योऽन्तर्यामीति गौतमं प्रति याज्ञवल्क्यवचनं तदेवोपपादयति – **शरीरशब्दस्येति** ॥ इदं पूर्वपक्षशरीरमित्यादाविति शेषः ॥ **नचेति** ॥ पृथिव्यभिन्नायाः पृथिवीस्थत्वायोगादिति भावः ॥ **इत्यादिनेति** ॥ 'कारणेषु स्थितं कार्यं व्याप्तं कार्येषु कारणम्' इति गीतातात्पर्यस्मृत्येत्यर्थः । तयोर्भिन्नाभिन्नत्वेन भेदस्यापि सत्वादिति भावः । नन्वथापि पृथिवीं यमयेदित्युक्तपृथिवीनियामकत्वं कथमित्यत आह – **पृथिवीमिति** ॥ कार्यस्य कारणाधीनत्वादिति भावः ॥ **अतिसुघटत्वादिति** ॥ पृथिव्याद्यभिमानित्वेन तच्छरीरत्वतन्नियामकत्वादीनामुपपादकनिरपेक्षत्वादित्यर्थः । कयापि विधयेत्येतदाह – **तस्येति** ॥ उररीकारेण अङ्गीकारेण ॥ **कथञ्चिदिति** ॥ प्रकृत्यादेः स्वरूपनाशरहितत्वेनेत्यर्थः ॥ ॐ अन्तर्याम्यधिदैवादिषु तद्धर्मव्यपदेशात् ॐ ॥ अधिदैवादिपदेन तत्प्रकरणं लक्ष्यते । अन्तर्यामी विष्णुरेव । अधिदैवाधिभूतादिप्रकरणेषु तस्यान्तर्यामिणः सम्बन्धितया तस्य ब्रह्मणो धर्मस्य पृथिव्याद्यविदितत्वादेर्व्यपदेशादित्यर्थः । अधिदैवत्वेन अभिमानिदेवत्वेन । अन्यथा जडे ज्ञानाप्रसक्त्या 'अयं पृथिवी न वेद' इत्यादेः अप्रसक्तप्रतिषेधकत्वापत्तिरिति भावः ॥ **नचेति** ॥ धरायाः प्रकृतिस्वस्वरूपज्ञत्वादिति भावः ॥

# ಬ್ರಹ್ಮಮೀಮಾಂಸಾಶಾಸ್ತ್ರ

## ಪ್ರಕೃತಿ, ಜೀವ ಮೊದಲಾದವರು ಅಂತರ್ಯಾಮಿಗಳಲ್ಲ

**सू - ॐ ।। नच स्मार्तमतद्धर्माभिलापात् ।। ॐ ।। १९ ।।**

ಸೂತ್ರಾರ್ಥ - ಕಾಪಿಲಸ್ಮೃತಿಯಲ್ಲಿ ತ್ರಿಗುಣತ್ವವೆಂಬ ಪ್ರಕೃತಿಯ ಧರ್ಮವನ್ನಾಗಲೀ, ಸಂಸಾರಿತ್ವವೆಂಬ ಜೀವನ ಧರ್ಮವನ್ನಾಗಲೀ ಹೇಳದ ಕಾರಣ ಪ್ರಕೃತಿಗೆ ಅಂತರ್ಯಾಮಿತ್ವವು ಕೂಡುವುದಿಲ್ಲ.

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका** - चः समुच्चये । स्मार्तं कापिलस्मृत्युक्तम् । प्रधानं जीवश्च अन्तर्यामी न । कुतः? अतद्धर्माभिलापात् तद्धर्माणां प्रधानजीवधर्माणां त्रिगुणत्वसंसारित्वादीनाम् । अनभिलापात् - अनुक्तत्वादित्यर्थः ।।

ಸಮುಚ್ಚಯಾರ್ಥದಲ್ಲಿ ಚ ಶಬ್ದವಿದೆ. ಸ್ಮಾರ್ತಮ್ = ಕಾಪಿಲಸ್ಮೃತಿಯಲ್ಲಿ ಹೇಳಲ್ಪಟ್ಟ, ಪ್ರಧಾನವಾಗಲೀ ಜೀವವಾಗಲೀ ಅಂತರ್ಯಾಮಿಯಾಗುವುದಿಲ್ಲ. ಏಕೆಂದರೆ ಅತದ್ಧರ್ಮಾಭಿಲಾಪಾತ್ = ಪ್ರಧಾನ, ಜೀವ ಮೊದಲಾದವುಗಳ ಧರ್ಮಗಳನ್ನು ಅಂದರೆ ತ್ರಿಗುಣತ್ವ, ಸಂಸಾರಿತ್ವ ಮೊದಲಾದವುಗಳನ್ನು ಹೇಳಿರುವುದಿಲ್ಲ.

**श्रीमदानन्दतीर्थभगवत्पादाचार्यविरचित-**

## ब्रह्मसूत्रभाष्यम्

**भाष्यम् – त्रिगुणत्वादिप्रधानधर्मानुक्तेर्न स्मृत्युक्तं प्रधानमन्तर्यामी ।। १९ ।।**

ಅನುವಾದ - ಸತ್ವ, ರಜಸ್ಸು, ತಮಸ್ಸು ಮೊದಲಾದ ಗುಣಗಳ ಸ್ವರೂಪವನ್ನು ಹೊಂದಿದ ಪ್ರಕೃತಿಯ ಯಾವುದೇ ಧರ್ಮಗಳನ್ನು ಇಲ್ಲಿ ಹೇಳಿರುವುದಿಲ್ಲ. ಆದ್ದರಿಂದ ಕಾಪಿಲಸ್ಮೃತಿಯಲ್ಲಿ ಹೇಳಲ್ಪಟ್ಟ ಪ್ರಕೃತಿಯು ಅಂತರ್ಯಾಮಿಯು ಆಗುವುದಿಲ್ಲ.

ಪರಿಪೂರ್ಣಚಂದ್ರಿಕಾ

ಪ್ರತಿಪದಾರ್ಥ -- ಹೀಗೆ ನಿರವಕಾಶಲಿಂಗದಿಂದ ವಿಷ್ಣು ಅಂತರ್ಯಾಮಿಯಾಗಿದ್ದಾನೆಂಬುದನ್ನು ಸಮರ್ಥಿಸಿದರು. ಈಗ ಪ್ರಕೃತ್ಯಾದಿಗಳೇ ಅಂತರ್ಯಾಮಿಯಾಗಬಹುದಲ್ಲವೇ? ಎಂಬ ಪೂರ್ವಪಕ್ಷಿ ಮಾಡಿದ ಆಕ್ಷೇಪವನ್ನು ನಿರಾಕರಿಸುತ್ತಿದ್ದಾರೆ.

ತ್ರಿಗುಣತ್ವಾದಿ = ಸತ್ವ ರಜಸ್ಸು ತಮಸ್ಸು ಎಂಬ ಮೂರು ಗುಣಗಳಿಂದ ಕೂಡಿರುವಿಕೆಯೇ, ಆದಿ = ಮೊದಲಾದ, ಪ್ರಧಾನ = ಪ್ರಕೃತಿಯ, ಧರ್ಮ = ಯಾವುದೇ ಧರ್ಮಗಳನ್ನು, ಅನುಕ್ತೇಃ = ಅಂತರ್ಯಾಮಿಯಲ್ಲಿ ಹೇಳದ ಕಾರಣ, ಸ್ಮೃತ್ಯುಕ್ತಂ = ಕಾಪಿಲಸ್ಮೃತಿಯಲ್ಲಿ ಹೇಳಲ್ಪಟ್ಟ, ಪ್ರಧಾನಂ = ಪ್ರಕೃತಿಯು, ನ ಅಂತರ್ಯಾಮೀ = ಅಂತರ್ಯಾಮಿ ಆಗುವುದಿಲ್ಲ.[१]

---

(१) **भाष्यदीपिका** – एवं निरवकाशलिङ्गेन विष्णोरन्तर्यामित्वं समर्थ्य यदुक्तं पूर्वपक्षिणा प्रकृत्यादेरन्तर्यामित्वं तत् प्रकृतिजीवसाधारणं युक्त्या निराकुर्वत्सूत्रमुपन्यस्यति – **नचेति** ।। अत्र 'अतद्धर्माभिलापात्' इत्येतत् 'अतच्छब्दात्' इतिवदव्ययीभावसमासरूपम् । अत एव अव्ययमित्याशयेनानियमाभिप्रायेणाऽदौ हेतुवाक्यं व्याख्याति – **त्रिगुणत्वादीति** ।। सत्त्वादिरूपास्त्रयो गुणा यस्य कार्यभूतास्तत् त्रिगुणं, तस्य भावस्त्रिगुणत्वं तदादिर्येषां ते तथोक्ताः, प्रधानस्य प्रकृतेर्धर्माः, त्रिगुणत्वादयश्च ते प्रधानधर्माश्च ते तथोक्ताः, तेषामनुक्तिरुक्त्यभावः, तस्या इत्यर्थः । आदिपदेनोपादानत्वजडत्वसंसारित्वादीनां ग्रहणम् । प्रधानपदं जीवस्याप्युपलक्षकम् । आदिशब्दो वाऽत्र संयोज्यः । साध्यधर्मप्रतियोगिनिर्देशाय पूर्वपक्षे युक्तिसूचनाय च प्रयुक्तं स्मार्तमित्येतद् व्याचष्टे – **स्मृत्युक्तमिति** ।। पृथिव्याद्यात्मकतया कापिलस्मृतिप्रतिपादितमित्यर्थः । स्मृत्युक्तमेवैतन्न श्रुत्युक्तमिति ज्ञापनायेदम् । पर्यवसितार्थमाह – **प्रधानमिति** ।। जीवस्याप्युपलक्षकमिदम् । शारीरश्चेति वक्ष्यमाणस्यात्राप्यन्वयो दर्शितः । अन्तर्यामिणोऽन्यरूपत्वनिषेधाय प्रवृत्ते सूत्रेऽपेक्षितं साध्यधर्मिणं दर्शयति – **अन्तर्यामीति** ।। अन्तर्यामी न प्रधानमिति

योजना । न प्रधानमन्तर्यामीत्यनेन सौत्रचशब्दः अन्तर्यामी विष्णुरेव न तु प्रधानमिति तुशब्दार्थः । स च न शारीर इत्यादाविव परपक्षनिषेधमात्रं न क्रियते, किन्तु, स्वपक्षविधिरपीति परपक्षनिषेधस्य स्वपक्षविधिपूर्वकत्वरूपविशेषार्थ इति सूचितं भवति । अनेनान्तर्यामी विष्णुरेव, न तु स्मार्तं पृथिव्याद्यात्मकतया स्मृतौ प्रतिपादितं प्रधानम् । शारीरो जीवः । कुतः ? अत्र 'अतद्धर्माभिलापात्' त्रिगुणत्वसंसारित्वादिरूपप्रधानजीवधर्मोक्त्यभावादिति सूत्रवृत्तिर्दर्शिता भवति ।। तत्त्वप्रदीपे तु – नञस्तद्विरुद्धार्थत्वमाश्रित्याऽत्मत्वामृतत्वादृष्टत्वद्रष्टृत्वाद्यतद्धर्माभिलापाच्च इति हेतुवाक्यस्य वृत्त्यन्तरमपि दर्शितम् ।

**तत्वप्रकाशिका –**

**ॐ ।। नच स्मार्तमतद्धर्माभिलापात् ।। ॐ ।। १९ ।।**

**एवं निरवकाशलिङ्गेन विष्णोरन्तर्यामित्वं समर्थ्य, यदुक्तं प्रकृतेरन्तर्यामित्वमिति तदपाकुर्वत्सूत्रमुपन्यस्य व्याचष्टे – न चेति ।।**

ಇಲ್ಲಿಯ ತನಕ ಅವಿದಿತತ್ವವೇ ಮೊದಲಾದ ನಿರವಕಾಶಲಿಂಗಗಳಿಂದ ವಿಷ್ಣುವಿಗೆ ಅಂತರ್ಯಾಮಿತ್ವವನ್ನು ಸಮರ್ಥಿಸಿದ್ದಾಯಿತು. ಪ್ರಕೃತ ಪ್ರಕೃತಿಯು ಅಂತರ್ಯಾಮಿಯಾಗಿದೆ ಎಂಬ ಹಿಂದೆ ಹೇಳಿದ ಪೂರ್ವಪಕ್ಷವನ್ನು ನಿರಾಕರಿಸುವ ಸೂತ್ರವನ್ನು ಪಠಿಸಿ ವ್ಯಾಖ್ಯಾನಿಸುತ್ತಿದ್ದಾರೆ. ''ನಚ'' ಇತ್ಯಾದಿಯಾಗಿ.

**तत्वप्रकाशिका – स्मार्तं = कापिलस्मृतौ पृथिव्याद्यात्मकतयोक्तं प्रधानं नान्तर्यामि अविदितत्वाद्यनन्यथासिद्धविष्णुधर्मवत् त्रिगुणत्वोपादानत्वादिप्रधान-धर्मोक्त्यभावादित्यर्थः ।**

''ಸ್ಮಾರ್ತಂ'' ಎಂಬ ಸೂತ್ರದಲ್ಲಿರುವ ಪದಕ್ಕೆ 'ಕಾಪಿಲಸ್ಮೃತಿಯಲ್ಲಿ ಪ್ರಧಾನವು ಪೃಥಿವ್ಯಾದಿಗಳ ಸ್ವರೂಪವಾಗಿದೆ. ಅಂತರ್ಯಾಮಿ ಆಗುವುದಿಲ್ಲ. ಏಕೆಂದರೆ ಬೇರೆ ಎಲ್ಲೂ ಉಪಪನ್ನವಾಗದ ಅವಿದಿತತ್ವ ಎಂಬ ಧರ್ಮವನ್ನು ಅಂತರ್ಯಾಮಿಯಾದ ವಿಷ್ಣುವಿನಲ್ಲಿ ಶ್ರುತಿಯು ಹೇಗೆ ಹೇಳಿದೆಯೋ ಅದರಂತೆ ಕೇವಲ ಪ್ರಕೃತಿಯಲ್ಲೇ ಪ್ರಸಿದ್ಧವಾದ ತ್ರಿಗುಣತ್ವ ಅಥವಾ ವಿಶ್ವೋಪಾದಾನತ್ವ ಮೊದಲಾದ ಧರ್ಮಗಳನ್ನು ಆ ಪ್ರಕರಣದಲ್ಲಿ ಶ್ರುತಿಯು ಹೇಳುತ್ತಿಲ್ಲ. ಆದ್ದರಿಂದ ಪ್ರಕೃತಿಯು ಅಂತರ್ಯಾಮಿಯಾಗುವುದಿಲ್ಲವೆಂದು ಸೂತ್ರದ ಅಭಿಪ್ರಾಯ.

**तत्वप्रकाशिका – चशब्दो विष्णुरेवान्तर्यामी नतु प्रधानमिति तुशब्दार्थः ।।१९।।**

ಸೂತ್ರದಲ್ಲಿರುವ ಚಶಬ್ದವು ವಿಷ್ಣುವೇ ಅಂತರ್ಯಾಮಿಯಾಗಿದ್ದಾನೆ; ಹೊರತು ಪ್ರಧಾನವು ಅಂತರ್ಯಾಮಿಯಾಗಿಲ್ಲ ಎಂದು ತುಶಬ್ದಾರ್ಥದಲ್ಲಿ ಇರುತ್ತದೆ.

**भावदीपः –**

**ॐ नच स्मार्तमतद्धर्माभिलापात् ॐ ।। १-२-१९ ।।**

स्मार्तमित्युक्तिः पूर्वपक्षयुक्तिसूचनायेति भावेन व्याचष्टे – **स्मार्तमिति** ।। सौत्रपदानुवादोऽयम् । कापिलेत्यादिभाष्यपदव्याख्या ।

ಓಂ ನಚ ಸ್ಮಾರ್ತಮತದ್ಧರ್ಮಾಭಿಲಾಪಾತ್ ಓಂ

ಸೂತ್ರದಲ್ಲಿರುವ "ಸ್ಮಾರ್ತಮ್" ಎಂಬ ಪದವು ಪೂರ್ವಪಕ್ಷಯುಕ್ತಿಯನ್ನು ಸೂಚಿಸುತ್ತಿದೆ. ಈ ವಿಚಾರವನ್ನು ಟೀಕೆಯಲ್ಲಿ "ಸ್ಮಾರ್ತಮ್" ಎಂಬ ವಾಕ್ಯದಿಂದ ವ್ಯಾಖ್ಯಾನಿಸುತ್ತಿದ್ದಾರೆ. ಟೀಕೆಯಲ್ಲಿರುವ "ಸ್ಮಾರ್ತಮ್" ಪದವು ಭಾಷ್ಯಪದದ ಅನುವಾದರೂಪವಾಗಿದೆ. "ಕಾಪಿಲ" ಇತ್ಯಾದಿ ಮಾತುಗಳು ಭಾಷ್ಯದಲ್ಲಿರುವ ಪದಗಳ ವ್ಯಾಖ್ಯಾನರೂಪವಾಗಿದೆ.

**भावदीपः – सूत्रे तदिति स्मार्तं परामृश्यते ततोऽन्यदतत् ब्रह्म तद्धर्माभिलापादित्युक्तौ पूर्वेण पौनरुक्त्यं मत्वा भाष्ये अतदिति नञः प्रसज्य प्रतिषेधार्थतयाऽभिलापपदेनान्वयमुपेत्य अनुक्तेरित्युक्तमिति भावेन व्याचष्टे – अविदितत्वेति ॥**

ಸೂತ್ರದಲ್ಲಿ "ತತ್" ಎಂಬ ಪದವಿದೆ. "ತತ್" ಎಂಬ ಪದದಿಂದ ಸ್ಮೃತ್ಯುಕ್ತವಾದ ಪ್ರಕೃತಿಯನ್ನು ಪರಾಮರ್ಶಿಸಬೇಕು. ಅಂತಹ ಪ್ರಕೃತಿಗಿಂತ ಭಿನ್ನವಾದದ್ದು ಬ್ರಹ್ಮವೆಂಬ ಪದಾರ್ಥ. ಆದ್ದರಿಂದ "ಅತತ್" ಎಂಬ ಪದಕ್ಕೆ ಬ್ರಹ್ಮನೆಂದರ್ಥ. "ತದ್ಧರ್ಮಾಭಿಲಾಪಾತ್" ಎಂದರೆ ಬ್ರಹ್ಮನ ಧರ್ಮವು ಹೇಳಲ್ಪಟ್ಟಿರುವುದೆಂದರ್ಥ. ಹೀಗೆ ವಿವಕ್ಷಿಸಿದರೆ ಹಿಂದಿನ ಸೂತ್ರದ ಅರ್ಥವನ್ನೇ ಹೇಳಿದಂತಾಗಿ ಪುನರುಕ್ತಿದೋಷ ಬರುತ್ತದೆ. ಆದಕೋಸ್ಕರ ಭಾಷ್ಯದಲ್ಲಿ "ಅತತ್" ಎಂಬಲ್ಲಿರುವ "ನಞ" ಗೆ ಪ್ರಸಜ್ಯಪ್ರತಿಷೇಧಾರ್ಥವನ್ನು ಅಂಗೀಕರಿಸಿ "ಅತತ್" ಎಂಬ ಪದದಿಂದ ಅನ್ವಯವನ್ನು ಅಂಗೀಕರಿಸಿದ್ದಾರೆ, ಆದ್ದರಿಂದ "ಅನುಕ್ತೇಃ" ಎಂದು ಹೇಳಿದ್ದಾರೆ. ಅಂದರೆ ಪ್ರಕೃತಿಯ ಧರ್ಮಗಳನ್ನು ಹೇಳದ ಕಾರಣ ಬ್ರಹ್ಮನೇ ಪ್ರತಿಪಾದ್ಯನಾಗಬೇಕೆಂದು ಸೂತ್ರಾರ್ಥ. ಈ ಅಭಿಪ್ರಾಯದಿಂದ "ಅವಿದಿತತ್ವ" ಎಂದು ಟೀಕೆಯಲ್ಲಿ ಹೇಳಿರುತ್ತಾರೆ.

**भावदीपः – 'अकर्तरि च कारके सञ्ज्ञायाम्' इत्यादाविव नञः समास इति भावः । शरीरत्वं च सावकाशयिष्याम इति भावः । जीवसमुच्चायक इति भ्रान्तिं निराह – चशब्द इति ॥**

ಹೀಗೆ ಪ್ರಸಜ್ಯ ಪ್ರತಿಷೇದಾರ್ಥವನ್ನು ಒಪ್ಪಿ ಅನ್ವಯ ಮಾಡಿದಾಗ ಸಮಾಸವಾಗುವುದಿಲ್ಲವೆಂಬ ಶಂಕೆಗೆ ಅವಕಾಶವಿಲ್ಲ. ಏಕೆಂದರೆ "ಅಕರ್ತರಿ ಚ ಕಾರಕೇ ಸಂಜ್ಞಾಯಾಮ್" ಇತ್ಯಾದಿ ಸೂತ್ರದಲ್ಲಿ ಪ್ರಸಜ್ಯಪ್ರತಿಷೇದಾರ್ಥದಲ್ಲಿರುವ 'ನಞ' ಗೆ ಸಮಾಸ ಮಾಡಿರುವುದು ಕಂಡಿದೆ. ಶರೀರತ್ವವನ್ನಾದರೂ ಮುಂದೆ ಸಾವಕಾಶ ಮಾಡುತ್ತೇವೆಂದು ಅಭಿಪ್ರಾಯ. 'ಚ' ಶಬ್ದವು ಜೀವನನ್ನು ಸಮುಚ್ಚಯ ಮಾಡುತ್ತದೆಂಬ ಭ್ರಾಂತಿಯನ್ನು ನಿರಾಕರಿಸುವುಕ್ಕಾಗಿ "ಚ ಶಬ್ದಃ" ಇತ್ಯಾದಿ ಟೀಕೆಯು ಹೊರಟಿದೆ.

ಅಂತರ್ಯಾಮ್ಯಧಿಕರಣ (೧-೨-೫)

**भावदीपः** – तत्त्वप्रदीपे तु आत्मत्वादमृतत्वाद्दृष्टत्वाच्चतद्धर्माभिलापाच्चेति सूत्रोक्तांशस्य वृत्त्यन्तरमुक्तम्, नच पौनरुक्त्यम् । आद्यसूत्रोपात्तलिङ्गा-लिङ्गान्तराणामेवात्र गृहीतेरिति भावः ।। १९ ।।

ತತ್ವಪ್ರದೀಪದಲ್ಲಾದರೂ ಆತ್ಮತ್ವ, ಅಮೃತತ್ವ ಅದೃಷ್ಟತ್ವ ಮೊದಲಾದ ಪ್ರಕೃತಿಯಲ್ಲಿ ಬಾರದ ಧರ್ಮಗಳನ್ನು ಹೇಳಿರುವುದರಿಂದ ಸೂತ್ರದಲ್ಲಿರುವ ಅಂಶಕ್ಕೆ ಮತ್ತೊಂದು ಬಗೆಯ ವ್ಯಾಖ್ಯಾನವನ್ನು ಮಾಡಿರುತ್ತಾರೆ. ಈ ಪಕ್ಷದಲ್ಲಿಯೂ ಸಹ ಪುನರುಕ್ತಿಗೆ ಅವಕಾಶವಿಲ್ಲ. ಏಕೆಂದರೆ ಮೊದಲನೆಯ ಸೂತ್ರದಲ್ಲಿ ಯಾವ ಲಿಂಗವನ್ನು ವಿವಕ್ಷಿಸಿದ್ದಾರೋ ಅದಕ್ಕಿಂತ ಭಿನ್ನವಾದ ಲಿಂಗವನ್ನು ಈ ಸೂತ್ರದಲ್ಲಿ ವಿವಕ್ಷಿಸಿರುತ್ತಾರೆ.

**वाक्यार्थमञ्जरी** – ॐ नच स्मार्तमतद्धर्माभिलापात् ॐ ।। स्मार्तं प्रधानं नान्तर्यामी । त्रिगुणत्वादितद्धर्मानभिधानादित्यर्थः । पृथिवीशरीरत्वादि-तद्धर्माभिलापात् कथमतद्धर्माभिलाप इत्यत उक्तम् ।। अनन्यथासिद्धेति ।। तस्य त्वन्यथासिद्धिं वक्ष्यतीति भावः ।।

## ಬ್ರಹ್ಮಮೀಮಾಂಸಾಶಾಸ್ತ್ರ

### ಕಾಣ್ವಶಾಖೆಯಲ್ಲಿ ಜೀವನೇ ಬೇರೆ ಅಂತರ್ಯಾಮಿಯೇ ಬೇರೆ ಎಂದಿದೆ

**सू -ॐ ॥ शारीरश्चोभयेऽपि हि भेदेनैनमधीयते ॥ ॐ ॥ २० ॥**

ಸೂತ್ರಾರ್ಥ – ಕಾಣ್ವಶಾಖಿಗಳು ಹಾಗೂ ಮಾಧ್ಯಂದಿನ ಶಾಖಿಗಳು ಅಂತರ್ಯಾಮಿಯಿಂದ ಜೀವನು ಭಿನ್ನನಾಗಿದ್ದಾನೆಂದು ಅಧ್ಯಯನ ಮಾಡುತ್ತಾರೆ. ಈ ಕಾರಣದಿಂದ ಶಾರೀರನಾದ ಜೀವನು ಅಂತರ್ಯಾಮಿಯಾಗಲು ಸಾಧ್ಯವಿಲ್ಲ.

**सूत्रदीपिका** – चः नञोऽनुकर्षणार्थः । हि यस्मात् । उभये माध्यन्दिनाः काण्वाश्च 'आत्मनोऽन्तरः' 'विज्ञानादन्तरः' इति एवं जीवम् अन्तर्यामिणः सकाशाद् भिन्नत्वेनाधीयते पठन्ति । तस्माच्छारीरो जीवश्च नान्तर्यामीत्यर्थः ।।

ಅರ್ಥ - ಚಶಬ್ದವು 'ನಞ್' ಅನ್ನು ಅನುಕರ್ಷಣಮಾಡುವುದಕ್ಕಾಗಿ ಹೇಳಲ್ಪಟ್ಟಿದೆ. ಹಿ= ಯಾವ ಕಾರಣದಿಂದ, ಉಭಯೇ = ಮಾಧ್ಯಂದಿನ ಶಾಖಿಗಳು ಮತ್ತು ಕಾಣ್ವಶಾಖಿಗಳು, ಭೇದೇನ = 'ಆತ್ಮನೋಽಂತರಃ' 'ವಿಜ್ಞಾನಾದಂತರಃ' ಎಂಬುದಾಗಿ ಜೀವನನ್ನು ಅಂತರ್ಯಾಮಿಗಿಂತ ಭಿನ್ನನೆಂದು, ಅಧೀಯತೇ = ಅಧ್ಯಯನ ಮಾಡುತ್ತಾರೆ. ತಸ್ಮಾತ್ = ಆದ್ದರಿಂದ ಶಾರೀರಃ = ಜೀವನು, ನ = ಅಂತರ್ಯಾಮಿಯಾಗುವುದಿಲ್ಲ.

## श्रीमदानन्दतीर्थभगवत्पादाचार्यविरचित-
## ब्रह्मसूत्रभाष्यम्

**भाष्यम् – 'य आत्मनि तिष्ठन्नात्मनोऽन्तरो यमात्मा न वेद यस्याऽत्मा शरीरं य आत्मानमन्तरो यमयत्येष त आत्माऽन्तर्याम्यमृतः' (बृ.माध्यन्दिनपाठः) 'यो विज्ञाने तिष्ठन् विज्ञानादन्तरो यं विज्ञानं न वेद यस्य विज्ञानं शरीरम्' (बृ. ५-७-२२.) इत्युभयेऽपि हि शाखिनो भेदेनैनं जीवमधीयते ।**

ಅನುವಾದ - ''ಯಾವಾತನು ಜೀವರುಗಳಲ್ಲಿ ನೆಲೆಸಿ ಜೀವನಿಂದ ಭಿನ್ನನಾಗಿ ಇರುತ್ತಾನೋ, ಅಂತಹ ಯಾರನ್ನು ಜೀವನು ತಿಳಿಯಲು ಸಾಧ್ಯವಿಲ್ಲವೋ ಯಾರಿಗೆ ಆತ್ಮನು ಶರೀರದಂತಿದ್ದಾನೋ, ಯಾರು ಆತ್ಮನನ್ನು ನಿಯಮನ ಮಾಡುತ್ತಾನೋ, ಅಂತಹ ಆತ್ಮನು ನಿನ್ನ ಅಂತರ್ಯಾಮಿಯಾಗಿ ಅಮೃತನಾಗಿದ್ದಾನೆ. -- ಹೀಗೆ ಮಾಧ್ಯಂದಿನಶಾಖೆಯು ಹೇಳಿದೆ. ''ಯಾರು ಜ್ಞಾನಿಯಾದ ಜೀವನಲ್ಲಿ ನೆಲೆಸಿ ಜೀವನಿಗಿಂತ ಭಿನ್ನನಾಗಿ ಜೀವನಿಗೆ ತಿಳಿಯಲು ಸಾಧ್ಯವಿಲ್ಲದವನಾಗಿ ಜೀವನೇ ಶರೀರವಾಗಿ ಇರುವವನಾಗಿ ಹೇಳಲ್ಪಟ್ಟಿದ್ದಾನೋ ಹೀಗೆ ಎಂದು ಕಾಣ್ವಶಾಖೆಯಲ್ಲಿದೆ. ಪರಮಾತ್ಮನನ್ನು ಕಾಣ್ವಶಾಖಿಗಳು ಹಾಗೂ ಮಾಧ್ಯಂದಿನಶಾಖಿಗಳು ಅಂತರ್ಯಾಮಿ ಜೀವನಿಗಿಂತ ಭಿನ್ನನಾಗಿ ಅಂತರ್ಯಾಮಿಯು ಇದ್ದಾನೆಂದು ಅಧ್ಯಯನ ಮಾಡುತ್ತಿದ್ದಾರೆ. ಈ ಕಾರಣದಿಂದಲೂ ವಿಷ್ಣುವೇ ಅಂತರ್ಯಾಮಿಯೆಂದು ನಿರ್ಣಯವಾಗುತ್ತದೆ.

ಪ್ರತಿಪದಾರ್ಥ --ಪೂರ್ವಪಕ್ಷದಲ್ಲಿ ಜೀವನು ಅಂತರ್ಯಾಮಿಯಾಗಿದ್ದಾನೆಂದು ಹೇಳಲಾಗಿತ್ತು. ಈ ವಿಷಯದಲ್ಲಿ ಯಾವುದೇ ಸಾಧಕಪ್ರಮಾಣಗಳಿಲ್ಲವೆಂದು ಹಿಂದೆ ನಿರಾಕರಣೆ ಮಾಡಿದ್ದರೂ ಸಹ ಈಗ ಬಾಧಕಪ್ರಮಾಣವನ್ನು ಹೇಳುವ ಮೂಲಕ ಸೂತ್ರವನ್ನು ಪಠಿಸಿ ವ್ಯಾಖ್ಯಾನಿಸುತ್ತಿದ್ದಾರೆ.

ಯಃ = ಯಾವಾತನು, ಆತ್ಮನಿ = ಜೀವನಲ್ಲಿ, ತಿಷ್ಠನ್ = ನೆಲೆಸಿರುವವನಾಗಿ, ಆತ್ಮನಃ = ಜೀವನಿಂದ, ಅಂತರಃ = ಭಿನ್ನನಾಗಿ, ಯಂ = ಯಾವಾತನನ್ನು, ಆತ್ಮಾ =

ಜೀವನು, ನ ವೇದ = ತಿಳಿಯಲಾರನೋ, ಯಸ್ಯ = ಯಾವಾತನಿಗೆ, ಆತ್ಮಾ = ಜೀವನು, ಶರೀರಂ = ಶರೀರನಾಗಿದ್ದಾನೋ, ಯಃ = ಯಾವಾತನು, ಆತ್ಮಾನಂ = ಜೀವನನ್ನು, ಅಂತರಃ = ಅಂತರ್ಯಾಮಿಯಾಗಿದ್ದು, ಯಮಯತಿ = ಪ್ರೇರಣೆ ಮಾಡುತ್ತಾನೋ, ಏಷಃ = ಅಂತಹ ಈ ಭಗವಂತನೇ, ತೇ = ನಿನ್ನ, ಆತ್ಮಾ = ಸ್ವಾಮಿಯು ಹಾಗೂ, ಅಂತರ್ಯಾಮೀ = ಒಳಗಡೆ ನೆಲೆಸಿವವನು; ಹಾಗೂ, ಅಮೃತಃ = ನಾಶರಹಿತನೂ ಆಗಿದ್ದಾನೆ. ಹೀಗೆ ಬೃಹದಾರಣ್ಯಕೋಪನಿಷತ್ತು ಹೇಳಿದೆ.

ಯಃ = ಯಾವಾತನು ವಿಜ್ಞಾನೇ = ವಿಶೇಷಜ್ಞಾನಿಯಾದ ಜೀವನಲ್ಲಿ, ತಿಷ್ಠನ್ = ನೆಲೆಸಿ, ವಿಜ್ಞಾನಾತ್ = ಜೀವನಿಗಿಂತ, ಅಂತರಃ = ಭಿನ್ನನಾಗಿ, ವಿಜ್ಞಾನಂ = ಜೀವನಿಗೆ ನ ವೇದ = ತನ್ನನ್ನು ತಿಳಿಸಿಕೊಡುವುದಿಲ್ಲವೋ, ಯಸ್ಯ = ಯಾವಾತನಿಗೆ, ವಿಜ್ಞಾನಂ = ಜೀವನೇ, ಶರೀರಂ = ದೇಹವಾಗಿದ್ದಾನೋ, ಇತಿ = ಹೀಗೆ, ಉಭಯೇಽಪಿ = ಕಾಣ್ವಶಾಖೆಗಳು ಹಾಗೂ ಮಾಧ್ಯಂದಿನ ಶಾಖಿಗಳು, ಏನಂ = ಇಂತಹ, ಜೀವಂ = ಜೀವನನ್ನು, ಭೇದೇನ = ಅಂತರ್ಯಾಮಿಗಿಂತ ಭಿನ್ನನನ್ನು, ಅಧೀಯತೇ = ಅಧ್ಯಯನ ಮಾಡುತ್ತಾರೆ, ಹಿ = ಯಾವಕಾರಣದಿಂದ ಹೀಗೆ ಮಾಡುತ್ತಾರೋ ಆ ಕಾರಣದಿಂದಲೂ ವಿಷ್ಣುವೇ ಅಂತರ್ಯಾಮಿಯಾಗಿದ್ದಾನೆ.[१]

---

(१) **भाष्यदीपिका** – यज्जीवोऽन्तर्यामीत्युक्तम् । तत्साधकाभावेन निरस्तमपि पुनर्बाधकाख्यविशेषयुक्त्या निराकुर्वत्सूत्रमुपन्यस्य व्याचष्टे – **शारीर इति** ।। इत्यभिधीयत इत्यन्वयः । उभये इत्यस्य विशेष्यपदं दर्शयति – **शाखिन इति** ।। काण्वा माध्यन्दिनाश्चेत्यर्थः । 'आत्मनोऽन्तरः' इति माध्यन्दिनाः 'विज्ञानादन्तरः' इति काण्वाः । अपिशब्दः शाखासमुच्चये । अन्तर्यामिण इति विपरिणतमत्रानुवर्तते । एनमित्यनूद्य जीवमिति व्याख्यातम् । अतो न शारीरश्चान्तर्यामीति च शेषः । तेन सौत्रचशब्दो नञः समाकर्षकः । न केवलं न स्मार्तं, किन्तु शारीरश्चेति समुच्चयेऽपीत्युक्तं भवति ।।

तत्त्वप्रदीपे तु - चित्प्रकृतेरप्यत्र पूर्वपक्षविषयतामाश्रित्य श्रीभूदुर्गारूपायाः तस्याः 'यस्तेजसि तिष्ठन्' (बृ.५-७-१४) 'यस्तमसि तिष्ठन्' (बृ.५.७.१३) इत्याद्यन्तर्यामिणः सकाशाद्भेदेनाध्ययनान्न साऽप्यन्तर्यामीति समुच्चयार्थश्चशब्द इत्युक्तम् । अनेन 'हि' यस्मात् 'उभयेऽपि' शाखिनः 'एनं' जीवमन्तर्यामिणः सकाशाद् भेदेन 'अधीयते' आमनन्ति । तस्माद्बाधकान्नान्तर्यामी 'शारीरः' शरीराभिमानी जीव इति सूत्रार्थ उक्तो भवति ।।

श्रुतौ 'यः पृथिव्याः' इति वाक्यस्याऽदित्वेऽपि तद्विहायाऽत्मविज्ञानवाक्ययोश्चेतनपरत्वेनो-भयपरत्वादैकार्थ्याच्च ते एवात्रोभयकर्तृकभेदाध्ययनतयोदाहृते । 'आत्मनः' जीवात् 'अन्तरः' विविक्तः । एवं विज्ञानशब्दोऽपि 'य आत्मनि' इति श्रुतिसमाख्यानाज्जीव-सामान्यपरः ।।

यद्यपि बृहद्भाष्ये आत्मादिशब्दस्य चतुर्मुखाख्यजीवपरतया व्याख्यातत्वादिदं सूत्रं जीवविशेषस्य योगिनोऽन्तर्यामित्वनिरासकमिति । अत एव तत्त्वप्रदीपे योगिनोऽन्तर्यामित्वं

भाष्यम् –

'शीर्यते नित्यमेवास्माद् विष्णोस्तु जगदीदृशम् ।
रमते च परो ह्यस्मिन् शरीरं तस्य तज्जगत् ॥'
इति वचनान्न शरीरत्वविरोधः ॥ २० ॥

॥ इत्यन्तर्याम्यधिकरणम् ॥ ५ ॥

ಅನುವಾದ - ಯಾವ ಕಾರಣದಿಂದ ಈ ಸಮಸ್ತಜಗತ್ತು ನಿರಂತರವಾಗಿ ನಿಯಮೇನ ವಿಷ್ಣುವಿನಿಂದಲೇ ಸಂಹಾರಕ್ಕೆ ಒಳಗಾಗುತ್ತದೋ ಮತ್ತು ಇದರಲ್ಲಿ ಭಗವಂತನಿದ್ದು ಕ್ರೀಡಿಸುವುದರಿಂದ ಈ ಜಗತ್ತು ಅವನಿಗೆ ಶರೀರವಾಗಿದೆಯೋ ಆ ಕಾರಣದಿಂದಲೂ ಜಗತ್ತು ಪರಮಾತ್ಮನ ಶರೀರವಾಗಿದೆ ಎಂಬ ಪ್ರಮಾಣವಿರುವುದರಿಂದ ಅಂತರ್ಯಾಮಿತ್ವ, ಪೃಥಿವೀ ಶರೀರತ್ವಾದಿಗಳಿಗೆ ವಿರೋಧವು ಬರುವುದಿಲ್ಲ.

ಪ್ರತಿಪದಾರ್ಥ -- ವಿಷ್ಣು ಅಂತರ್ಯಾಮಿಯೆಂದು ಹೇಳಿದ್ದು ಕೂಡುವುದಿಲ್ಲ. ಪೃಥಿವ್ಯಾದಿ ಶರೀರತ್ವವು ಪ್ರಕೃತಿಯ ಧರ್ಮವಾಗಿರಬೇಕಾದರೆ ಯಾವುದೇ ಪ್ರಕೃತಿಯ ಧರ್ಮಗಳು ಹೇಳಲ್ಪಟ್ಟಿಲ್ಲ ಎಂಬ ಧೋರಣೆಯು ತಪ್ಪಾಗುತ್ತದೆ. ಈ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ.

ಯಸ್ಮಾತ್ = ಯಾವಕಾರಣದಿಂದ, ಈದೃಶಂ = ಇಂತಹ ಸಮಸ್ತಜಗತ್ತು, ಅಸ್ಮಾತ್ = ವಿಷ್ಣುವಿನಿಂದಲೇ, ನಿತ್ಯಮೇವ = ನಿರಂತರವಾಗಿ, ಶೀರ್ಯತೇ = ನಶಿಸುತ್ತದೋ, ಆದ್ದರಿಂದ ಈ ಜಗತ್ತು ವಿಷ್ಣುವಿನ ಶರೀರವೆಂದು ಕರೆಯಲ್ಪಟ್ಟಿದೆ. ಮತ್ತು ಪರಃ = ಸರ್ವೋತ್ತಮನಾದ ಪರಮಾತ್ಮನು, ಅಸ್ಮಿನ್ = ಈ ಜಗತ್ತಿನಲ್ಲಿ, ಹಿ = ಯಾವ ಕಾರಣದಿಂದ, ರಮತೇ = ವಿಹರಿಸುತ್ತಾನೋ, ತತ್ = ಆದ್ದರಿಂದ, ಜಗತ್ = ಜಗತ್ತು, ತಸ್ಯ = ಪರಮಾತ್ಮನ ಶರೀರವೆಂದು ವ್ಯವಹಾರವಿದೆ.

ಇತಿ = ಹೀಗೆ, ವಚನಾತ್ = ಪ್ರಮಾಣವಿರುವುದರಿಂದ, ಶರೀರತ್ವವಿರೋಧಃ = ಪೃಥಿವ್ಯಾದಿಶರೀರಿ ಎಂಬ ಮಾತಿನ ವಿರೋಧವು, ನ = ಬರುವುದಿಲ್ಲ.[१]

---

निराकरोतीत्युक्तम् । तथाऽपि यदा सर्वजीवाभिमानिचतुर्मुखादपि तन्नियामकत्वादिना भिन्नोऽन्तर्यामी तदा किमु तदभिमन्यमानसर्वजीवादिति कैमुत्यद्योतनाय तत्र तयोक्तिरिति चन्द्रिकायामुक्तत्वाज्जीवसामान्यान्तर्यामित्वनिषेधपरतया प्रवृत्ताया एतत्सूत्रटीकायाः बृहद्भाष्यतत्त्वप्रदीपविरोधः ॥

(१) भाष्यदीपिका – ननु न विष्णोरन्तर्यामित्वं युक्तम् । पृथिव्यादिशरीरत्वस्य प्रधानधर्मस्यात्रोक्तेः तस्य विष्णावसम्भवात् । कथं प्रधानधर्मानुक्तिः? पृथिव्यादिशरीरत्वस्यैव तद्धर्मत्वादित्यत आह – शीर्यत इति ॥ तुशब्दोऽवधारणे । तथा च 'हि' यस्मात् 'ईदृशं' वर्तमानजगत्सदृशं कालत्रयाबाध्यं वा 'जगत्' पृथिव्यादि अस्माद् विष्णोरेव 'नित्यं'

**तत्वप्रकाशिका –**

**ॐ ।। शारीरश्चोभयेऽपि हि भेदेनैनमधीयते ।। ॐ ।। २० ।।**

**यज्जीवोऽन्तर्यामीत्युक्तं तदपि संसारित्वाद्यतद्धर्माभिलापादिना निरस्तमपि विशेषयुक्त्या पराकुर्वत्सूत्रमुपन्यस्य व्याचष्टे – शारीरश्चेति ।।**

ಜೀವನು ಅಂತರ್ಯಾಮಿಯಾಗುತ್ತಾನೆಂಬ ಪೂರ್ವಪಕ್ಷವನ್ನು ಹಿಂದೆ ಮಾಡಲಾಗಿತ್ತು. ಇದನ್ನೂ ಸಹ ಹಿಂದಿನ ಸೂತ್ರದಲ್ಲಿ 'ಅತದ್ಧರ್ಮಾಭಿಲಾಪಾತ್' ಎಂಬ ಮಾತಿನಿಂದ ಜೀವನ ಧರ್ಮವೆನಿಸಿದ ಸಂಸಾರಿತ್ವಾದಿಗಳನ್ನು ಶ್ರುತಿಯು ಹೇಳದ ಕಾರಣ ನಿರಸ್ತವಾಯಿತು. ಆದರೂ ಸಹ ಪ್ರಕೃತ ವಿಶೇಷ ಯುಕ್ತಿಯನ್ನು ಹೇಳುವ ಮೂಲಕ ಪೂರ್ವಪಕ್ಷವನ್ನು ನಿರಾಕರಣೆ ಮಾಡುವವರಾಗಿ ಸೂತ್ರವನ್ನು ಪಠಿಸಿ "ಶಾರೀರಶ್ಚ' ಇತ್ಯಾದಿಯಾಗಿ ವ್ಯಾಖ್ಯಾನಿಸುತ್ತಿದ್ದಾರೆ.

**तत्वप्रकाशिका – चशब्दान्नञः समाकर्षः । 'आत्मनोऽन्तरः' इति माध्यन्दिनाः 'विज्ञानादन्तरः' इति काण्वाश्च जीवमन्तर्यामिणः सकाशाद् भेदेनाधीयते ।**

ಸೂತ್ರದಲ್ಲಿರುವ 'ಚ' ಶಬ್ದದಿಂದ ಹಿಂದಿನ ಸೂತ್ರದಲ್ಲಿರುವ 'ನ' ಎಂಬುದನ್ನು ಸಮಾಕರ್ಷ ಮಾಡಬೇಕು. 'ಆತ್ಮನೋಽಂತರಃ' ಎಂದು ಮಾಧ್ಯಂದಿನಶಾಖಿಗಳು, ಹಾಗೂ 'ವಿಜ್ಞಾನಾದಂತರಃ' ಎಂಬುದಾಗಿ ಕಾಣ್ವಶಾಖಿಗಳೂ ಸಹ ಜೀವನನ್ನು ಅಂತರ್ಯಾಮಿಗಿಂತ ಭಿನ್ನನೆಂದು ಅಧ್ಯಯನ ಮಾಡುತ್ತಾರೆ.

---

नियतं प्रतिकल्पं 'शीर्यते' नश्यति । आत्मादिचेतनानामपि देहद्वारा शीर्यता सत्यैव । यस्माच्च 'परः' परमात्मा 'अस्मिन्' जगति स्थितः सन् रमते 'तत्' तस्मादेव 'तस्य' विष्णोः 'जगत्' पृथिव्यादिकं शरीरमुच्यते, न रूढ्येत्यर्थः । न शरीरत्वविरोध इति ।। न पृथिव्यादिशरीरत्वविरोध इत्यर्थः । विष्ण्वन्तर्यामिताया अतद्धर्माभिलापोक्तेर्वेति शेषः । विष्णोः पृथिव्याद्यात्मकत्वतच्छरीरत्वाभ्यां पृथिव्यादिशरीरत्वानुपपत्तावपि शरीरशब्दस्य पृथिव्यादिषु योगवृत्तिमाश्रित्य तस्मिन् पृथिव्यादिशरीरत्वव्यपदेशोपपत्तेरितरत्र तदनुपपत्तेरिति भावः ।

यत्तु बृहदारण्यभाष्ये –

'पृथिव्याद्या देवतास्तु देहवद् यद्वशत्वतः ।
शरीरमिति चोच्यन्ते यस्य विष्णोः महात्मनः ।।'

इति प्रमाणानुसारेण पृथिव्यादेर्ब्रह्मशरीरत्वं गौणमित्युक्तम् । तत्पुराणादिषु प्रपञ्चे ब्रह्मकायत्वाद्युक्तिसमर्थनायेति न तद्विरोधः ।। ५ ।।

।। इत्यन्तर्याम्यधिकरणम् ।। ५ ।।

**तत्वप्रकाशिका – 'हि' यस्मादतो न शारीरश्चान्तर्यामीत्यर्थः । आत्मनः सकाशाद् अन्तरो विविक्तः । विज्ञानपदेन शारीरः कुतः? इति चेत्, उदाहृत-श्रुतिसमाख्यानादेव ।**

ಯಾವ ಕಾರಣದಿಂದ ಮಾಧ್ಯಂದಿನಶಾಖಿಗಳು ಹಾಗೂ ಕಾಣ್ವಶಾಖಿಗಳು ಜೀವನಿಗಿಂತ ಭಿನ್ನನೆಂದು ಅಂತರ್ಯಾಮಿಯನ್ನು ತಿಳಿಯುತ್ತಾರೋ ಆ ಕಾರಣದಿಂದ ಜೀವನನ್ನು ಅಂತರ್ಯಾಮಿಯೆಂದು ಹೇಳಲು ಸಾಧ್ಯವಿಲ್ಲ ಎಂದರ್ಥ. ಆತ್ಮನಃ = ಜೀವಾತ್ಮನಿಗಿಂತ, ಅಂತರಃ = ಅಂತರ್ಯಾಮಿಯು ಭಿನ್ನನಾಗಿದ್ದಾನೆ ಎಂದು ಶ್ರುತಿಯ ಅರ್ಥ. ವಿಜ್ಞಾನಪದಕ್ಕೆ ಜೀವಾತ್ಮನೆಂಬ ಅರ್ಥವು ಹೇಗೆ ಕೂಡುತ್ತದೆ? ಎಂದರೆ 'ಯ ಆತ್ಮನಿ ತಿಷ್ಠನ್' ಎಂಬ ಮಾಧ್ಯಂದಿನ ಶ್ರುತಿಯ ಸಮಾನಾರ್ಥಕವಾದ 'ಯೋ ವಿಜ್ಞಾನೇ ತಿಷ್ಠನ್' ಎಂಬ ಕಾಣ್ವಶ್ರುತಿಯ ಪ್ರಮಾಣವು ಸಂವಾದಿಯಾಗಿರುವುದರಿಂದ ವಿಜ್ಞಾನಪದಕ್ಕೆ ಜೀವನೆಂಬರ್ಥವೇ ಸಾಧುವಾಗಿರುತ್ತದೆ.

**तत्वप्रकाशिका – ननु विष्णावसम्भाव्यमानपृथिव्यादिशरीरत्वस्य प्रधानादिधर्मस्यात्रोक्तेः कथं विष्णोरन्तर्यामित्वम्? कथं च प्रधानादिधर्मानभिलापः? इत्यत आह – शीर्यत इति ।।**

ವಿಷ್ಣುವಿನಲ್ಲಿ ಅತ್ಯಂತ ಅಸಂಭಾವಿತವಾದ ಪೃಥಿವ್ಯಾದಿಶರೀರತ್ವ ಎಂಬ ಪ್ರಕೃತಿಯ ಧರ್ಮವನ್ನು ಶ್ರುತಿಯಲ್ಲಿ ಅಂತರ್ಯಾಮಿಗೆ ಹೇಳಲಾಗಿದೆ. ಹೀಗಿರುವಾಗ ವಿಷ್ಣುವನ್ನು ಅಂತರ್ಯಾಮಿಯೆಂದು ಹೇಳಲು ಹೇಗೆ ಸಾಧ್ಯ ? ಮತ್ತು ಪ್ರಕೃತಿಯ ಧರ್ಮವನ್ನು ಶ್ರುತಿಯು ಹೇಳುತ್ತಿಲ್ಲವೆಂಬ ಸಿದ್ಧಾಂತವಾದರೂ ಹೇಗೆ ಸರಿಯಾಗುತ್ತದೆ? ಎಂಬೆರೆಡು ಪ್ರಶ್ನೆಗಳಿಗೆ "ಶೀರ್ಯತೇ" ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

**तत्वप्रकाशिका – यद्यपि विष्णौ नोक्तप्रकारद्वयेन पृथिव्यादि-शरीरत्वोपपत्तिः । तथापि योगवृत्त्या तस्मिन् पृथिव्यादिशरीरत्वव्यपदेशोपपत्तेः न तद्विरोधो विष्ण्वन्तर्यामित्वस्य । नाप्यतद्धर्माभिलापोक्तेः विरोध इति भावः ।**

ಮತ್ತೇನೆಂದರೆ, ವಿಷ್ಣುವಿನಲ್ಲಿ ಹಿಂದೆ ಪ್ರಕೃತಿಯಲ್ಲಿ ಹೇಳಿದ ಎರಡುಪ್ರಕಾರಗಳಿಂದ ಪೃಥಿವ್ಯಾದಿ-ಶರೀರತ್ವವನ್ನು ಹೇಳಲು ಸಾಧ್ಯವಿಲ್ಲ. ಆದರೂ ಸಹ ಯೋಗವೃತ್ತಿಯಿಂದ ಪೃಥಿವ್ಯಾದಿಶರೀರತ್ವವನ್ನು ವಿಷ್ಣುವಿನಲ್ಲಿ ಹೊಂದಿಸಬಹುದು. ಆದ್ದರಿಂದ ಪೃಥಿವ್ಯಾದಿಶರೀರತ್ವವು ವಿಷ್ಣುವೇ ಅಂತರ್ಯಾಮಿ-ಯಾಗಿದ್ದಾನೆನ್ನಲು ವಿರೋಧವಾಗುವುದಿಲ್ಲ. ಅಥವಾ ಪ್ರಕೃತಿಯ ಧರ್ಮವನ್ನು ಇಲ್ಲಿ ಹೇಳದ ಕಾರಣದಿಂದಲೂ ವಿರೋಧವಿಲ್ಲವೆಂದು ತಿಳಿಯಬೇಕು.

ಅಂತರ್ಯಾಮ್ಯಧಿಕರಣ (೧-೨-೫)

**तत्वप्रकाशिका** – यद्यपि योगाद्रूढेः प्राबल्यम् । तथापि निरवकाशाविदितत्वादि-लिङ्गबलेन योगाङ्गीकारो युज्यते । अतोऽन्तर्यामी विष्णुरेवेति, स एव अमृतोऽक्षिस्थश्चेति सिद्धम् ।।२०।।

।। इति श्रीमज्जयतीर्थभिक्षुविरचितायां तत्वप्रकाशिकायाम्
अन्तर्याम्याधिकरणम् ।।

ವಸ್ತುತಃ 'ಯೋಗಾದ್ ರೂಢಿರ್ಬಲೀಯಸಿ' ಎಂಬ ನ್ಯಾಯದಂತೆ ಯೌಗಿಕಾರ್ಥಕ್ಕಿಂತಲೂ ರೂಢ್ಯರ್ಥವೇ ಪ್ರಬಲವಾಗಿರುತ್ತದೆ. ಆದರೂ ಸಹ ಅವಿದಿತತ್ವವೇ ಮೊದಲಾದ ನಿರವಕಾಶ-ಲಿಂಗಗಳಿಂದ ಯೌಗಿಕಾರ್ಥವನ್ನು ಸ್ವೀಕರಿಸುವುದು ಯುಕ್ತವಾಗುತ್ತದೆ. ಆದ್ದರಿಂದ ಅಂತರ್ಯಾಮಿಯು ವಿಷ್ಣುವೇ ಆಗಿದ್ದಾನೆ. ಅವನೇ ಅಮೃತನೂ ಹಾಗೂ ಅಕ್ಷಿಸ್ಥನೂ ಆಗಿದ್ದಾನೆಂದು ನಿರ್ಣಯವಾಯಿತು.

ಇಲ್ಲಿಗೆ ಶ್ರೀಜಯತೀರ್ಥಭಿಕ್ಷುಗಳಿಂದ ವಿರಚಿತವಾದ ತತ್ವಪ್ರಕಾಶಿಕೆಯ ಕನ್ನಡಾನುವಾದದಲ್ಲಿ
ಅಂತರ್ಯಾಮ್ಯಧಿಕರಣವು ಸಮಾಪ್ತವಾಯಿತು.

**भावदीपः** –

ॐ ।। शारीरश्चोभयेऽपि हि भेदेनैनमधीयते ।। ॐ ।। २० ।।

निरस्तमपीति ।। शारीरश्चेत्यपि पूर्वत्राकृष्य व्याख्येयमिति भावः ।। विशेषेति ।। तेन न पौनरुक्त्यमिति भावः । विशेषयुक्त्या निराकरणं च योगिजीवस्यान्तिर्यामिशङ्कानिरासार्थमित्युक्तं तत्त्वप्रदीपे । तथा चकाराद् 'यस्तेजसि तिष्ठन्' इत्यादिभेदाध्ययनाच्चित्प्रकृतिर्नान्तर्यामीति समुच्चयार्थ इत्यप्युक्तम् ।

॥ ಓಂ ಶಾರೀರಶ್ಚೋಭಯೇಽಪಿ ಹಿ ಭೇದೇನೈನಮಧೀಯತೇ ಓಂ ॥

ಟೀಕೆಯಲ್ಲಿ "ನಿರಸ್ತಮಪಿ" ಎಂದು ಹೇಳಿರುವುದರಿಂದ "ಶಾರಿರಶ್ಚ"ಎಂಬ ಸೂತ್ರದ ಭಾಗವನ್ನು ಹಿಂದಿನ ಸೂತ್ರದಲ್ಲಿ ಅನ್ವಯಮಾಡಿ ವ್ಯಾಖ್ಯಾನಿಸಬೇಕೆಂದು ತಿಳಿಯುತ್ತದೆ. "ವಿಶೇಷಯುಕ್ತಯಃ" ಎಂದು ಹೇಳಿದ್ದರಿಂದ ಪುನರುಕ್ತಿಗೆ ಅವಕಾಶವಿಲ್ಲವೆಂದು ತಿಳಿಯಬೇಕು. ತತ್ವಪ್ರದೀಪದಲ್ಲಿ ವಿಶೇಷಯುಕ್ತಿಯಿಂದ ನಿರಾಕರಿಸಿದ್ದರಿಂದ ಯೋಗಿಯಾದ ಜೀವನು ಅಂತರ್ಯಾಮಿಯಾಗಬಹುದಲ್ಲವೆ? ಎಂಬ ಶಂಕೆಯನ್ನು ನಿರಾಕರಿಸಿದ್ದಾರೆಂದು ವ್ಯಾಖ್ಯಾನಿಸಿದ್ದಾರೆ. ಸೂತ್ರದಲ್ಲಿರುವ "ಚ" ಕಾರವು "ಯಸ್ತೇಜಸಿ ತಿಷ್ಠನ್" ಎಂಬುದಾಗಿ ಭೇದವನ್ನು ಅಧ್ಯಯನ ಮಾಡುವ ಕಾರಣ ಚಿತ್‌ಪ್ರಕೃತಿಯು ಅಂತರ್ಯಾಮಿ ಆಗುವುದಿಲ್ಲವೆಂಬುದನ್ನು ಸಮುಚ್ಚಯ ಮಾಡುತ್ತದೆ ಎಂದೂ ಸಹ ವ್ಯಾಖ್ಯಾನಿಸಿರುತ್ತಾರೆ.

ಪರಿಪೂರ್ಣಚಂದ್ರಿಕಾ

**भावदीपः –** भाष्योक्तकृत्स्नवाक्ये भेदोक्त्यंशं दर्शयन् सूत्रभाष्ययोरर्थमाह – **आत्मन इति ।।** हीति सौत्रानुवादेन यस्मादिति व्याख्या । पूर्वमन्तर इत्यस्यान्तरत्वाख्यलिङ्गार्पकतया व्याख्यानेऽपि इह आत्मानमन्तर इत्यस्यापि उक्तत्वेन अपौनरुक्त्यायाऽऽत्मन इत्यादिपञ्चम्युपपत्तये साक्षाद्भेदोक्तिलाभाय चार्थमाह – **विविक्त इति ।।**

ಭಾಷ್ಯದಲ್ಲಿ ಹೇಳಲ್ಪಟ್ಟ ವಾಕ್ಯದಲ್ಲಿ ಭೇದವನ್ನು ಹೇಳುವ ಭಾಗವನ್ನು ತೋರಿಸುತ್ತಾ ಸೂತ್ರ ಹಾಗೂ ಭಾಷ್ಯಗಳ ಅರ್ಥವನ್ನು "ಆತ್ಮನಃ" ಎಂಬ ವ್ಯಾಕ್ಯದಿಂದ ಪ್ರತಿಪಾದಿಸುತ್ತಿದ್ದಾರೆ. "ಹಿ" ಎಂಬುದಾಗಿ ಸೂತ್ರದಲ್ಲಿರುವ ಪದವನ್ನು ಅನುವಾದ ಮಾಡಿ "ಯಃ" ಎಂದು ವ್ಯಾಖ್ಯಾನಿಸಿದ್ದಾರೆ. ಹಿಂದೆ "ಅಂತರಃ" ಎಂಬ ಶಬ್ದಕ್ಕೆ ಅಂತರತ್ವವೆಂಬ ಲಿಂಗವೆಂದು ವ್ಯಾಖ್ಯಾನಿಸಿದ್ದರೂ ಸಹ ಪ್ರಕೃತ ಆತ್ಮಾನಮಂತರಃ" ಎಂಬಲ್ಲಿರುವ ಅಂತರಶಬ್ದಕ್ಕೂ ಸಹ ಅಂತರತ್ವ ಎಂಬ ಅರ್ಥವನ್ನು ಹೇಳುತ್ತಿದ್ದರೂ ಸಹ ಪುನರುಕ್ತಿಗೆ ಅವಕಾಶವಿಲ್ಲ. ಮತ್ತು "ಆತ್ಮನಃ" ಎಂಬಲ್ಲಿರುವ ಪಂಚಮೀವಿಭಕ್ತಿಯು ಉಪಪನ್ನವಾಗಬೇಕೆಂದರೆ ನೇರವಾಗಿ ಭೇದವನ್ನು ಹೇಳಬೇಕು. ಈ ಎರಡು ವಿಷಯವನ್ನು ಪ್ರತಿಪಾದಿಸುವುದಕ್ಕಾಗಿ "ವಿವಿಕ್ತಃ" ಎಂದು ಹೇಳಿರುತ್ತಾರೆ.

**भावदीपः –** 'अद्भ्योऽन्तर' इत्यादिप्रकरणबलात् पञ्चम्यन्तत्वेऽपि स्पष्टत्वात् सकाशादित्युक्तम् । अन्तरशब्दस्योदरमन्तरं कुरुत इत्यादाविव भेदार्थत्वेऽपि धर्मधर्म्यभेदाद्वा 'अर्श आद्यच्'प्रत्ययान्तत्वेन वा विविक्त इत्युक्तम् । 'अन्यथान्तरमवकाशावधिपरिधानान्तर्धिभेदसादृश्ये' इत्यमरोक्तेः पुल्लिङ्गं न स्यात्।

"ಅದ್ಭ್ಯೋಽಂತರಃ" ಇತ್ಯಾದಿ ಪ್ರಕರಣಗಳಿಂದ ಪಂಚಮ್ಯಂತವೆಂದು ನಿರ್ಣಯವಾಗಿದ್ದರೂ ಸಹ ಸ್ಪಷ್ಟಪಡಿಸಲು "ಸಕಾಶಾತ್" ಎಂದು ಹೇಳಿರುತ್ತಾರೆ. ಅಂತರ ಶಬ್ದಕ್ಕೆ "ಉದರಮಂತರಂ ಕುರುತೇ" ಎಂಬಲ್ಲಿ ಹೇಗೆ ಭೇದಾರ್ಥವು ಪ್ರಸಿದ್ಧವಾಗಿದೆಯೋ ಅಂದರಂತೆ ಇಲ್ಲಿಯೂ ಸಹ ಜೀವನೆಂಬ ಅರ್ಥವನ್ನು ಒಪ್ಪಬೇಕಾದರೆ ಧರ್ಮ ಹಾಗೂ ಧರ್ಮಿಗಳಿಗೆ ಅಭೇದವಿರುವುದರಿಂದ ಮತ್ತು "ಅರ್ಶ ಆದ್ಯಚ್" ಎಂಬುದಾಗಿ ಅಚ್‌ಪ್ರತ್ಯಯಬಂದಿರುವುದರಿಂದ "ವಿವಿಕ್ತಃ" ಎಂದು ಟೀಕೆಯಲ್ಲಿ ಹೇಳಿರುತ್ತಾರೆ. ಇಲ್ಲದಿದ್ದರೆ "ಅಂತರಮವಕಾಶಾವಧಿಪರಿಧಾನಾಂತರ್ಧಿಭೇದಸಾದೃಶ್ಯೋ" ಎಂದು ಅಮರದಲ್ಲಿ ಹೇಳಿರುವುದರಿಂದ ಪುಲ್ಲಿಂಗ ಪ್ರಯೋಗವು ತಪ್ಪಾದೀತು.

**भावदीपः –** भाष्ये समग्रवाक्योक्तिः शाखयोरेकरूप्येण समाख्यात्वसिद्ध्या विज्ञानपदमात्मपदवत् जीवार्थकमिति दर्शनाय वा । आत्मनि तिष्ठन् इत्यादिना सर्वेणाप्याधाराधेयभावकर्मकर्तृभावशरीरशरीरिभावादिना भेदाध्ययनसूचनाय वा । अत एव समाख्यानादिति वक्ष्यतीत्याहुः ।

**तत्वप्रकाशिका** – **यद्यपि योगाद्रूढेः प्राबल्यम् । तथापि निरवकाशाविदितत्वादि-लिङ्गबलेन योगाङ्गीकारो युज्यते । अतोऽन्तर्यामी विष्णुरेवेति, स एव अमृतोऽक्षिस्थश्चेति सिद्धम् ।।२०।।**

**।। इति श्रीमज्जयतीर्थभिक्षुविरचितायां तत्वप्रकाशिकायाम्**
**अन्तर्याम्याधिकरणम् ।।**

ವಸ್ತುತಃ 'ಯೋಗಾದ್ ರೂಢಿರ್ಬಲೀಯಸಿ' ಎಂಬ ನ್ಯಾಯದಂತೆ ಯೌಗಿಕಾರ್ಥಕ್ಕಿಂತಲೂ ರೂಢ್ಯರ್ಥವೇ ಪ್ರಬಲವಾಗಿರುತ್ತದೆ. ಆದರೂ ಸಹ ಅವಿದಿತತ್ವವೇ ಮೊದಲಾದ ನಿರವಕಾಶ-ಲಿಂಗಗಳಿಂದ ಯೌಗಿಕಾರ್ಥವನ್ನು ಸ್ವೀಕರಿಸುವುದು ಯುಕ್ತವಾಗುತ್ತದೆ. ಆದ್ದರಿಂದ ಅಂತರ್ಯಾಮಿಯು ವಿಷ್ಣುವೇ ಆಗಿದ್ದಾನೆ. ಅವನೇ ಅಮೃತನೂ ಹಾಗೂ ಅಕ್ಷಿಸ್ಥನೂ ಆಗಿದ್ದಾನೆಂದು ನಿರ್ಣಯವಾಯಿತು.

ಇಲ್ಲಿಗೆ ಶ್ರೀಜಯತೀರ್ಥಭಿಕ್ಷುಗಳಿಂದ ವಿರಚಿತವಾದ ತತ್ವಪ್ರಕಾಶಿಕೆಯ ಕನ್ನಡಾನುವಾದದಲ್ಲಿ
ಅಂತರ್ಯಾಮ್ಯಧಿಕರಣವು ಸಮಾಪ್ತವಾಯಿತು.

**भावदीपः** –

**ॐ ।। शारीरश्चोभयेऽपि हि भेदेनैनमधीयते ।। ॐ ।। २० ।।**

**निरस्तमपीति ।। शारीरश्चेत्यपि पूर्वत्राकृष्य व्याख्येयमिति भावः ।। विशेषेति ।। तेन न पौनरुक्त्यमिति भावः । विशेषयुक्त्या निराकरणं च योगिजीवस्यान्तिर्यामिशङ्कानिरासार्थमित्युक्तं तत्त्वप्रदीपे । तथा चकाराद् 'यस्तेजसि तिष्ठन्' इत्यादिभेदाध्ययनाच्चित्प्रकृतिर्नान्तर्यामीति समुच्चयार्थ इत्यप्युक्तम् ।**

।। ಓಂ ಶಾರೀರಶ್ಚೋಭಯೇಽಪಿ ಹಿ ಭೇದೇನೈನಮಧೀಯತೇ ಓಂ ।।

ಟೀಕೆಯಲ್ಲಿ "ನಿರಸ್ತಮಪಿ" ಎಂದು ಹೇಳಿರುವುದರಿಂದ "ಶಾರಿರಶ್ಚ"ಎಂಬ ಸೂತ್ರದ ಭಾಗವನ್ನು ಹಿಂದಿನ ಸೂತ್ರದಲ್ಲಿ ಅನ್ವಯಮಾಡಿ ವ್ಯಾಖ್ಯಾನಿಸಬೇಕೆಂದು ತಿಳಿಯುತ್ತದೆ. "ವಿಶೇಷಯುಕ್ತಯಃ" ಎಂದು ಹೇಳಿದ್ದರಿಂದ ಪುನರುಕ್ತಿಗೆ ಅವಕಾಶವಿಲ್ಲವೆಂದು ತಿಳಿಯಬೇಕು. ತತ್ವಪ್ರದೀಪದಲ್ಲಿ ವಿಶೇಷಯುಕ್ತಿಯಿಂದ ನಿರಾಕರಿಸಿದ್ದರಿಂದ ಯೋಗಿಯಾದ ಜೀವನು ಅಂತರ್ಯಾಮಿಯಾಗಬಹುದಲ್ಲವೆ? ಎಂಬ ಶಂಕೆಯನ್ನು ನಿರಾಕರಿಸಿದ್ದಾರೆಂದು ವ್ಯಾಖ್ಯಾನಿಸಿದ್ದಾರೆ. ಸೂತ್ರದಲ್ಲಿರುವ "ಚ" ಕಾರವು "ಯಸ್ತೇಜಸಿ ತಿಷ್ಠನ್" ಎಂಬುದಾಗಿ ಭೇದವನ್ನು ಅಧ್ಯಯನ ಮಾಡುವ ಕಾರಣ ಚಿತ್‌ಪ್ರಕೃತಿಯು ಅಂತರ್ಯಾಮಿ ಆಗುವುದಿಲ್ಲವೆಂಬುದನ್ನು ಸಮುಚ್ಚಯ ಮಾಡುತ್ತದೆ ಎಂದೂ ಸಹ ವ್ಯಾಖ್ಯಾನಿಸಿರುತ್ತಾರೆ.

ಪರಿಪೂರ್ಣಚಂದ್ರಿಕಾ

**भावदीपः** – भाष्योक्तकृत्स्नवाक्ये भेदोक्त्यंशं दर्शयन् सूत्रभाष्ययोरर्थमाह – **आत्मन इति** ।। हीति सौत्रानुवादेन यस्मादिति व्याख्या । पूर्वमन्तर इत्यस्यान्तरत्वाख्यलिङ्गार्पकतया व्याख्यानेऽपि इह आत्मानमन्तर इत्यस्यापि उक्तत्वेन अपौनरुक्त्यायाऽऽत्मन इत्यादिपञ्चम्युपपत्तये साक्षाद्भेदोक्तिलाभाय चार्थमाह – **विविक्त इति** ।।

ಭಾಷ್ಯದಲ್ಲಿ ಹೇಳಲ್ಪಟ್ಟ ವಾಕ್ಯದಲ್ಲಿ ಭೇದವನ್ನು ಹೇಳುವ ಭಾಗವನ್ನು ತೋರಿಸುತ್ತಾ ಸೂತ್ರ ಹಾಗೂ ಭಾಷ್ಯಗಳ ಅರ್ಥವನ್ನು "ಆತ್ಮನಃ" ಎಂಬ ವ್ಯಾಕ್ಯದಿಂದ ಪ್ರತಿಪಾದಿಸುತ್ತಿದ್ದಾರೆ. "ಹಿ" ಎಂಬುದಾಗಿ ಸೂತ್ರದಲ್ಲಿರುವ ಪದವನ್ನು ಅನುವಾದ ಮಾಡಿ "ಯಃ" ಎಂದು ವ್ಯಾಖ್ಯಾನಿಸಿದ್ದಾರೆ. ಹಿಂದೆ "ಅಂತರಃ" ಎಂಬ ಶಬ್ದಕ್ಕೆ ಅಂತರತ್ವವೆಂಬ ಲಿಂಗವೆಂದು ವ್ಯಾಖ್ಯಾನಿಸಿದ್ದರೂ ಸಹ ಪ್ರಕೃತ ಆತ್ಮಾನಮಂತರಃ" ಎಂಬಲ್ಲಿರುವ ಅಂತರಶಬ್ದಕ್ಕೂ ಸಹ ಅಂತರತ್ವ ಎಂಬ ಅರ್ಥವನ್ನು ಹೇಳುತ್ತಿದ್ದರೂ ಸಹ ಪುನರುಕ್ತಿಗೆ ಅವಕಾಶವಿಲ್ಲ. ಮತ್ತು "ಆತ್ಮನಃ" ಎಂಬಲ್ಲಿರುವ ಪಂಚಮೀವಿಭಕ್ತಿಯು ಉಪಪನ್ನವಾಗಬೇಕೆಂದರೆ ನೇರವಾಗಿ ಭೇದವನ್ನು ಹೇಳಬೇಕು. ಈ ಎರಡು ವಿಷಯವನ್ನು ಪ್ರತಿಪಾದಿಸುವುದಕ್ಕಾಗಿ "ವಿವಿಕ್ತಃ" ಎಂದು ಹೇಳಿರುತ್ತಾರೆ.

**भावदीपः** – 'अक्ष्योऽन्तर' इत्यादिप्रकरणबलात् पञ्चम्यन्तत्वेऽपि स्पष्टत्वात् सकाशादित्युक्तम् । अन्तरशब्दस्योदरमन्तरं कुरुत इत्यादाविव भेदार्थत्वेऽपि धर्मधर्म्यभेदाद्वा 'अर्श आद्यच्'प्रत्ययान्तत्वेन वा विविक्त इत्युक्तम् । 'अन्यथान्तरमवकाशावधिपरिधानान्तर्धिभेदसादृश्ये' इत्यमरोक्तेः पुल्लिङ्गं न स्यात्।

"ಅಕ್ಷ್ಯೋಽಂತರಃ" ಇತ್ಯಾದಿ ಪ್ರಕರಣಗಳಿಂದ ಪಂಚಮ್ಯಂತವೆಂದು ನಿರ್ಣಯವಾಗಿದ್ದರೂ ಸಹ ಸ್ಪಷ್ಟಪಡಿಸಲು "ಸಕಾಶಾತ್" ಎಂದು ಹೇಳಿರುತ್ತಾರೆ. ಅಂತರ ಶಬ್ದಕ್ಕೆ "ಉದರಮಂತರಂ ಕುರುತೇ" ಎಂಬಲ್ಲಿ ಹೇಗೆ ಭೇದಾರ್ಥವು ಪ್ರಸಿದ್ಧವಾಗಿದೆಯೋ ಅಂದರಂತೆ ಇಲ್ಲಿಯೂ ಸಹ ಜೀವನೆಂಬ ಅರ್ಥವನ್ನು ಒಪ್ಪಬೇಕಾದರೆ ಧರ್ಮ ಹಾಗೂ ಧರ್ಮಿಗಳಿಗೆ ಅಭೇದವಿರುವುದರಿಂದ ಮತ್ತು "ಅರ್ಶ ಆದ್ಯಚ್" ಎಂಬುದಾಗಿ ಅಚ್‌ಪ್ರತ್ಯಯಬಂದಿರುವುದರಿಂದ "ವಿವಿಕ್ತಃ" ಎಂದು ಟೀಕೆಯಲ್ಲಿ ಹೇಳಿರುತ್ತಾರೆ. ಇಲ್ಲದಿದ್ದರೆ "ಅಂತರಮವಕಾಶಾವಧಿಪರಿಧಾನಾಂತರ್ಧಿಭೇದಸಾದೃಶ್ಯೇ" ಎಂದು ಅಮರದಲ್ಲಿ ಹೇಳಿರುವುದರಿಂದ ಪುಲ್ಲಿಂಗ ಪ್ರಯೋಗವು ತಪ್ಪಾದೀತು.

**भावदीपः** – भाष्ये समग्रवाक्योक्तिः शाखयोरेकरूप्येण समाख्यात्वसिद्ध्या विज्ञानपदमात्मपदवत् जीवार्थकमिति दर्शनाय वा । आत्मनि तिष्ठन् इत्यादिना सर्वेणाप्याधाराधेयभावकर्मकर्तृभावशरीरशरीरिभावादिना भेदाध्ययनसूचनाय वा । अत एव समाख्यानादिति वक्ष्यतीत्याहुः ।

ಭಾಷ್ಯದಲ್ಲಿ ಸಮಗ್ರ ಶ್ರುತಿವಾಕ್ಯವನ್ನು ಏಕೆ ಹೇಳಿದ್ದಾರೆಂದರೆ ಎರಡು ಶಾಖೆಗಳು ಏಕರೂಪವಾಗಿರುವುದರಿಂದ ಸಮಾಖ್ಯಾಪ್ರಮಾಣವು ಪ್ರಬಲವಾಗಿದೆಯೆಂದು ಸಿದ್ಧವಾಗುತ್ತದೆ. ಅಥವಾ ವಿಜ್ಞಾನಪದವು ಆತ್ಮಪದದಂತೆ ಜೀವವೆಂಬ ಅರ್ಥವನ್ನು ಹೇಳುತ್ತದೆಂದು ತಿಳಿಸುವುದಕ್ಕಾಗಿಯೂ ಸಮಗ್ರವಾಕ್ಯವನ್ನು ಹೇಳಿರುತ್ತಾರೆ. ಅಥವಾ "ಆತ್ಮನಿ ತಿಷ್ಠನ್" ಇತ್ಯಾದಿಯಾಗಿ ಸಕಲ ಪದಾರ್ಥಗಳಿಂದ ಆಧಾರ ಆಧೇಯಭಾವವು, ಕರ್ಮಕರ್ತೃಭಾವವು ಶರೀರಶರೀರಿಭಾವವು ಇರುವುದರಿಂದ ಭೇದಾಧ್ಯಯನ ಮಾಡುತ್ತಿದ್ದಾರೆಂದು ಸೂಚಿಸುವುದಕ್ಕಾಗಿಯೂ ಸಮಗ್ರ ವಾಕ್ಯವನ್ನು ಉದಾಹರಿಸಿರುತ್ತಾರೆ. ಆದ್ದರಿಂದಲೇ ಸಮಾಖ್ಯಾನವೆಂದು ಹೇಳುತ್ತಾರೆ ಎಂದು ಕೆಲವರ ವ್ಯಾಖ್ಯಾನ.

**भावदीपः –** पूर्वमधिदैवेत्युक्त्या पृथिव्यादेश्चेतनत्वावगमेन पृथिव्या अन्तर इति प्राथमिकवाक्योक्त्यापि जीवान्तर्यामिणोर्भेदसिद्धौ चेतनत्वेनोभय-सम्मतत्वादात्मनीति वाक्यमुक्तं भाष्ये ।

ಹಿಂದೆ ಅಧಿದೈವಗಳೆಂದು ಹೇಳಲ್ಪಟ್ಟ ಪೃಥಿವ್ಯಾದಿಗಳನ್ನು ಚೇತನಗಳೆಂದು ಪರಿಗಣಿಸಿದ್ದರಿಂದ "ಪೃಥಿವ್ಯಾ ಅಂತರಃ" ಎಂಬ ಪ್ರಾರಂಭದ ವಾಕ್ಯದಲ್ಲಿ ಪೃಥಿವಿಯ ಅಂತರ್ಯಾಮಿಯು ಹೇಳಲ್ಪಟ್ಟಿದ್ದರು, ಜೀವ ಹಾಗೂ ಅಂತರ್ಯಾಮಿಗೆ ಭೇದವನ್ನು ಸ್ಥಾಪಿಸುವುದಕ್ಕಾಗಿ ಚೇತನತ್ವವು ಉಭಯಸಮ್ಮತವಾದ್ದರಿಂದ "ಆತ್ಮನಿ" ಎಂಬ ವಾಕ್ಯವನ್ನು ಭಾಷ್ಯದಲ್ಲಿ ಹೇಳಿರುತ್ತಾರೆ.

**भावदीपः –** आत्मा विज्ञानमिति च सर्वजीवाभिमानवान् । ब्रह्मैवोक्त इति बृहद्भाष्ये तु सर्वजीवनियामकाद् विरिञ्चादपि भिन्नोऽन्तर्यामी किमु जीवादिति कैमुत्यायार्थान्तरमुक्तम् । अत एव तत्रैव षष्ठे 'यो विज्ञाने तिष्ठन्' 'य आत्मनि तिष्ठन्' इत्याद्युभयोर्जीवाभिप्रायेण पाठ इत्यप्युक्तम् । अधिकं चन्द्रिकायाम् ।

"ಆತ್ಮಾ ವಿಜ್ಞಾನಂ" ಎಂಬುದು ಸಕಲ ಜೀವರಿಗೆ ಅಭಿಮಾನಿಯು ಜೀವೋತ್ತಮನಾದ ಚತುರ್ಮುಖಬ್ರಹ್ಮನೆಂದು ಬೃಹದ್ಭಾಷ್ಯದಲ್ಲಿ ಸಕಲ ಜೀವರ ನಿಯಾಮಕನಾದ ಚತುರ್ಮುಖಬ್ರಹ್ಮನಿಗಿಂತ ಅಂತರ್ಯಾಮಿಯು ಭಿನ್ನನಾಗಿದ್ದಾನೆಂದು ಹೇಳಲಾಗಿದೆ. ಜೀವೋತ್ತಮನಾದ ಚತುರ್ಮುಖಬ್ರಹ್ಮನಿಗಿಂತ ಅಂತರ್ಯಾಮಿಯು ಭಿನ್ನನೆಂದು ಹೇಳಿದ ಮೇಲೆ ಜೀವನಿಗಿಂತ ಭಿನ್ನ ಎಂದು ಪ್ರತ್ಯೇಕವಾಗಿ ಹೇಳಬೇಕೇನು? ಎಂದು ಮತ್ತೊಂದು ಬಗೆಯ ವ್ಯಾಖ್ಯಾನವನ್ನು ಮಾಡಿರುತ್ತಾರೆ. ಆದ್ದರಿಂದ ಬೃಹದ್ಭಾಷ್ಯದ ಆರನೆಯ ಅಧ್ಯಾಯದಲ್ಲಿ "ಯೋ ವಿಜ್ಞಾನೇ ತಿಷ್ಠನ್ ಯಃ ಆತ್ಮನಿ ತಿಷ್ಠನ್" ಎಂದು ವಿಜ್ಞಾನ ಮತ್ತು ಆತ್ಮ ಪದಗಳಿಂದ ಜೀವನನ್ನೇ ವಿವಕ್ಷಿಸಿದ್ದಾರೆ. ಆದ್ದರಿಂದ "ಪಾಠಃ" ಎಂದು ಹೇಳಿರುತ್ತಾರೆ. ಹೆಚ್ಚಿನ ವಿಚಾರವನ್ನು ಚಂದ್ರಿಕೆಯಲ್ಲಿ ತಿಳಿಯಬೇಕು.

**भावदीपः –** कथं शीर्यत इति वचनेनोक्तशङ्कानिरासः । तदात्मकत्वत-देहत्वयोरन्यतरस्यापि विष्णावसमाधानादित्यतः पृथिव्यादिशरीरत्वमपि न निरवकाशम् । यौगिकशरीरत्वोपपत्तेर्विष्णोरपीति न्यायविवरणरीत्या भावमाह – यद्यपीति ॥

ಪರಿಪೂರ್ಣಚಂದ್ರಿಕಾ

"ಶೀರ್ಯತೇ" ಎಂಬ ಮಾತಿನಿಂದ ಹಿಂದಿನ ಪೂರ್ವಪಕ್ಷವು ಹೇಗೆ ಪರಿಹಾರವಾಗುತ್ತದೆ. ಏಕೆಂದರೆ ತದಾತ್ಮಕತ್ವ ಹಾಗೂ ತದ್ದೇಹತ್ವ ಎರಡನ್ನೂ ಸಹ ವಿಷ್ಣುವಿನಲ್ಲಿ ಕೂಡಿಸಲು ಬರುವುದಿಲ್ಲವೆಂಬ ಆಶಂಕೆಗೆ ಪೃಥಿವ್ಯಾದಿಶರೀರಗಳೂ ಸಹ ನಿರವಕಾಶವಾದ ಲಿಂಗವಲ್ಲ. ಏಕೆಂದರೆ ಯೌಗಿಕವಾಗಿ ಶರೀರಶಬ್ದವು ವಿಷ್ಣುವಿನಲ್ಲಿ ಉಪಪನ್ನವಾಗುತ್ತದೆಂಬ ನ್ಯಾಯವಿವರಣದ ಪ್ರಕಾರ ವ್ಯಾಖ್ಯಾನಿಸುತ್ತಿದ್ದಾರೆ "ಯದ್ಯಪಿ" ಇತ್ಯಾದಿ ವಾಕ್ಯಗಳಿಂದ.

**भावदीपः** – उक्तप्रकारेति ।। तदात्मकत्वतद्देहकत्वप्रकारद्वयेनेत्यर्थः । आत्मादेरपि देहादिद्वारा शीर्यताऽस्त्येवेति 'यस्यात्मा शरीरम्' इत्याद्युपपत्तिरिति भावः ।

ಟೀಕೆಯಲ್ಲಿ "ಉಕ್ತಪ್ರಕಾರ" ಎಂದರೆ ತದಾತ್ಮಕತ್ವ ಹಾಗೂ ತದ್ದೇಹಕತ್ವವೆಂಬ ಎರಡು ಪ್ರಕಾರಗಳಿಂದ ಎಂದರ್ಥ. ಆತ್ಮಾದಿಗಳಿಗೂ ಕೂಡ ದೇಹಾದಿಗಳ ಮುಖಾಂತರ ನಾಶಾದಿಗಳು ಉಂಟಾಗುತ್ತದೆ. ಆದ್ದರಿಂದ "ಯಸ್ಯಾತ್ಮಾ ಶರೀರಂ" ಎಂಬುದು ಉಪಪನ್ನವಾಗುತ್ತದೆ ಎಂದು ತಿಳಿಯಬೇಕು.

**भावदीपः** – बृहद्भाष्ये तु 'पृथिव्याद्या देवतास्तु देहवद्वशत्वतः । शरीरमिति चोच्यन्ते यस्य विष्णोर्महात्मनः ।।' इति यद् गौणशरीरत्वरूपं समाध्यन्तरमुक्तम्, तत्तु पुराणादौ जगतो ब्रह्मकायत्वाद्युक्तेरपि निर्वाहार्थम् । तत्र शीर्यतारूपयोगसम्भवादिति ज्ञेयम् ।

ಬೃಹದ್ಭಾಷ್ಯದಲ್ಲಿ "ಪೃಥಿವ್ಯಾದ್ಯಾ ದೇವತಾಸ್ತು ದೇಹವದ್ವಶತ್ವತಃ । ಶರೀರಮಿತಿ ಚೋಚ್ಯಂತೇ ಯಸ್ಯ ವಿಷ್ಣೋರ್ಮಹಾತ್ಮನಃ" ಎಂದು ಗೌಣವಾದ ಶರೀರವನ್ನು ವಿವಕ್ಷಿಸಿ ಮತ್ತೊಂದು ಸಮಾಧಾನವನ್ನು ಹೇಳಿರುತ್ತಾರೆ. ಆದರೆ ಕೇವಲ ಪುರಾಣಾದಿಗಳಲ್ಲಿ ಹೇಳಲ್ಪಟ್ಟ ಜಗತ್ತೇ ಬ್ರಹ್ಮನ ಶರೀರವಾಗಿದೆ ಎಂದು ಹೇಳಿದ ಮಾತುಗಳನ್ನು ಕೂಡಿಸುವುದಕ್ಕಾಗಿ ಎಂದು ತಿಳಿಯಬೇಕು. ಏಕೆಂದರೆ ಶೀರ್ಯತ್ವವೆಂಬ ಯೋಗಾರ್ಥವನ್ನು ಅಲ್ಲಿ ವಿವಕ್ಷಿಸಲಾಗದು.

**भावदीपः** – तथापीत्याद्यङ्गीकारवादः । वस्तुतस्त्वज्ञरूढ्यपेक्षया स्मृत्युक्तयोग-प्राबल्यस्य कम्पनादित्यत्र व्युत्पादयिष्यमाणत्वात् । स्मार्तयोगादेव पौराणिकरूढेरपि भावाच्च । अत एव भाष्ये इति वचनादिति योगस्य वाचनिकत्वमुक्तम् ।

"ತಥಾಪಿ" ಎಂಬುದು ಅಂಗೀಕಾರವಾದವಾಗಿದೆ. ವಿಚಾರ ಮಾಡಿದರೆ ಅಜ್ಞರೂಢಿಗಿಂತಲೂ ಸ್ಮೃತಿಯಲ್ಲಿ ಹೇಳಿದ ಯೋಗರೂಢಿಯು ಪ್ರಬಲವಾಗಿದೆ ಎಂದು "ಕಂಪನಾತ್" ಎಂಬ ಸೂತ್ರದಲ್ಲಿ ಸಮರ್ಥಿಸುತ್ತಾರೆ. ಸ್ಮೃತಿಸಿದ್ಧವಾದ ಯೋಗದ ಜೊತೆಗೆ ಪೌರಾಣಿಕರೂಢಿಯೂ ಸಹ ಇರುತ್ತದೆ ಎಂದು ತಿಳಿಯಬೇಕು. ಆದ್ದರಿಂದಲೇ ಭಾಷ್ಯದಲ್ಲಿ "ಇತಿ ವಚನಾತ್" ಎಂದು ಯೋಗವು ಸ್ಮೃತಿವಚನದಿಂದ ಸಿದ್ಧವಾಗಿದೆಯೆಂದು ಹೇಳಿದ್ದಾರೆ.

ಅಂತರ್ಯಾಮ್ಯಧಿಕರಣ (೧-೨-೫)

**भावदीपः – निरवकाशेति ।। जन्मादिनयरीत्येति भावः ।। अत इति ।। निरवकाशानेकलिङ्गसत्वात् परपक्षे साधकाभावाद्बाधकभावाच्च सूत्रत्रयोक्तहेत्वंशार्थः । स एवेति फलोक्तिः ।। २० ।।**

।। इति राघवेन्द्रयतिकृते भावदीपे अन्तर्याम्याधिकरणम् ।।

ನಿರವಕಾಶತ್ವವನ್ನು ಜನ್ಮಾದ್ಯಧಿಕರಣದಲ್ಲಿ ಹೇಳಿದ ಪ್ರಕಾರ ತಿಳಿಯಬೇಕು. ನಿರವಕಾಶವಾದ ಅನೇಕ ಲಿಂಗಗಳಿರುವುದರಿಂದ ಮತ್ತು ಪರಪಕ್ಷದಲ್ಲಿ ಸಾಧಕವಿಲ್ಲದಿರುವುದರಿಂದ ಮತ್ತು ಬಾಧಕವಿರುವುದರಿಂದ ಎಂದು ಮೂರುಸೂತ್ರಗಳಲ್ಲಿ ಹೇಳಲ್ಪಟ್ಟ ಹೇತುಭಾಗದ ಅರ್ಥವನ್ನು "ಅತಃ" ಎಂಬ ಪದವು ಹೇಳುತ್ತಿದೆ. "ಸ ಏವ" ಎಂದು ಸಿದ್ಧಾಂತದ ಫಲವನ್ನು ಹೇಳುತ್ತಿದ್ದಾರೆ.

॥ ಇಲ್ಲಿಗೆ ಭಾವದೀಪದ ಕನ್ನಡಾನುವಾದದಲ್ಲಿ ಅಂತರ್ಯಾಮ್ಯಧಿಕರಣವು ಸಮಾಪ್ತವಾಯಿತು ॥

**वाक्यार्थमञ्जरी**

**।। ॐ शारीरश्चोभयेऽपि हि भेदनैनमधीयते ॐ ।।**

शारीरो जीवश्च नान्तर्यामी । हि यस्मादेनं जीवमुभये माध्यन्दिनकाण्वशाखाः प्रकृतान्तर्यामिणः सकाशाद्भेदेन प्रतिपादयन्ति तस्मादित्यर्थः । 'आत्मनोऽन्तर' इत्येतज्जीवस्यान्तर्गत इति प्रतीतिनिरासाय व्याचष्टे – **आत्मन इति** ।। उदाहृतेति ।। 'य आत्मनि' इत्युदाहृतेत्यर्थः । भाष्ये शीर्यते विदार्यते ।। युज्यत इति ।। सति बाधके मुख्यार्थत्यागस्य न्याय्यत्वादिति भावः ।।

।। इति श्रीशर्कराश्रीनिवासविचचिता वाक्यार्थमञ्जर्याम् अन्तर्याम्याधिकरणम् ।।

ಅಂತರ್ಯಾಮ್ಯಧಿಕರಣ

(೧-೨-೫)

# ಭಾಗ - ೨

## ತಾತ್ಪರ್ಯಚಂದ್ರಿಕಾ, ಪ್ರಕಾಶ,

ಪ್ರತಿಯೊಂದು ವಾಕ್ಯಗಳ ವಿಶೇಷ ವಿವರಣೆಯೊಂದಿಗೆ

ಸರಳ ಅನುವಾದ

* * *

ಮತ್ತು

ಗುರುರಾಜೀಯಮ್, ಭಾಟ್ಟಸಂಗ್ರಹ,

ಶಾಂಕರಭಾಷ್ಯ, ಭಾಮತೀ,

ರಾಮಾನುಜಭಾಷ್ಯ ಇವುಗಳ ಸಂಪೂರ್ಣ ಅಡಿಟಿಪ್ಪಣಿಯೊಂದಿಗೆ

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥
॥ ಶ್ರೀಮಧ್ವರಾಜೋ ವಿಜಯತೇತರಾಮ್ ॥
॥ ಶ್ರೀಗುರುಭ್ಯೋ ನಮಃ ॥

ಶ್ರೀಬ್ರಹ್ಮಣ್ಯತೀರ್ಥಶ್ರೀಪಾದಶಿಷ್ಯ ಶ್ರೀ ವ್ಯಾಸತೀರ್ಥವಿರಚಿತಾ

# ತಾತ್ಪರ್ಯಚಂದ್ರಿಕಾ

## अथ अन्तर्याम्याधिकरणम्

ಆನಂತರ್ಯ ಸಂಗತಿ ಹಾಗೂ ಅಂತರ್ಯಾಮಿ ಪ್ರಕೃತ್ಯಾದಿಗಳೋ ?
ಅಥವಾ ವಿಷ್ಣುವೋ? ಎಂದು ಸಂಶಯ

**।। ॐ अन्तर्याम्यधिदैवादिषु तद्धर्मव्यपदेशात् ॐ ।।**

**अत्र चक्षुरन्तस्स्थस्य ब्रह्मत्वे हेतूकृतामृतत्वाक्षेपेण पूर्वपक्षोत्थानादनन्तर-सङ्गतिरिति भाष्य एवोक्तम् ।**

ಅನುವಾದ - ಈ ಅಧಿಕರಣದಲ್ಲಿ ಚಕ್ಷುರಂತಃಸ್ಥನಾದವನು ಬ್ರಹ್ಮನೆಂದು ಅಂಗೀಕರಿಸಿದರೆ ಚಕ್ಷುರಂತಃಸ್ಥತ್ವಕ್ಕೆ ಹೇತುವನ್ನಾಗಿ ಹೇಳಲ್ಪಟ್ಟ ಅಮೃತತ್ವವನ್ನು ಆಕ್ಷೇಪಿಸಿ. ಪೂರ್ವಪಕ್ಷವನ್ನು ಮಾಡುತ್ತಿರುವುದರಿಂದ ಪೂರ್ವಾಧಿಕರಣದಿಂದ ಅನಂತರಸಂಗತಿ ಎಂದು ತಿಳಿಯಬೇಕೆಂದು ಭಾಷ್ಯದಲ್ಲೇ ಹೇಳಲಾಗಿದೆ.

**अत्रान्तर्यामी किं प्रकृत्यादिः किं वा विष्णुरिति चिन्ता ।**

ಸಂಶಯ ಪರಂಪರೆ ಹೀಗಿದೆ - 'ಅಂತರ್ಯಾಮ್ಯಮೃತಃ' ಎಂಬ ಶ್ರುತಿಯಲ್ಲಿ ಕೇಳಿಸುತ್ತಿರುವ ಅಂತರ್ಯಾಮಿಯು ಪ್ರಕೃತ್ಯಾದಿಗಳೋ? ಅಥವಾ ವಿಷ್ಣುವೋ? ಎಂಬ ಸಂಶಯ ಬರುತ್ತದೆ.

**तदर्थं "यस्य पृथिवी शरीरम्" इत्यादिनोक्तं पृथिव्यादेरन्तर्यामिणं प्रति शरीरत्वं किं ब्रह्म प्रति न युक्तम् उत युक्तमिति ।**

ಹಿಂದಿನ ಸಂಶಯ ಪರಿಹಾರವಾಗಬೇಕೆಂದರೆ; 'ಯಸ್ಯ ಪೃಥಿವೀ ಶರೀರಂ' ಮುಂತಾದ 'ಅಂತರ್ಯಾಮಿಗೆ ಪೃಥಿವ್ಯಾದಿಗಳು ಶರೀರವಾಗಿವೆ' ಎಂದು ಹೇಳಲಾಗಿದೆ. ಪೃಥಿವ್ಯಾದಿಗಳಿಗೆ

ಶರೀರವಾಗಿರುವಿಕೆಯು ಬ್ರಹ್ಮನನ್ನು ಕುರಿತು ಯುಕ್ತವಾಗುವುದಿಲ್ಲವೋ? ಅಥವಾ ಯುಕ್ತವಾಗುತ್ತದೋ? ಎಂಬ ಸಂಶಯವು ಪರಿಹಾರವಾಗಬೇಕು.

**तदर्थं शरीरत्वं किं रूढमुत यौगिकमिति ।**

ಹಿಂದಿನ ಸಂಶಯವು ಪರಿಹಾರವಾಗಬೇಕೆಂದರೆ ಶರೀರಶಬ್ದವು ರೂಢವೋ ? ಅಥವಾ ಯೌಗಿಕವೋ? ಎಂಬ ಸಂಶಯವು ಪರಿಹಾರವಾಗಬೇಕು.

**तदर्थं किं रूढौ बाधकं नास्ति उत अस्तीति ।**

ಹಿಂದಿನ ಸಂಶಯವು ಪರಿಹಾರವಾಗಬೇಕೆಂದರೆ ಶರೀರಶಬ್ದಕ್ಕೆ ರೂಢ್ಯರ್ಥವನ್ನು ಸ್ವೀಕರಿಸಲು ಬಾಧಕವಿಲ್ಲವೋ? ಅಥವಾ ಇದೆಯೋ? ಎಂಬ ಸಂಶಯವು ಪರಿಹಾರವಾಗಬೇಕು.

**तदर्थं ''यं पृथिवी न वेद'' इत्यादिनाऽन्तर्यामिण्युक्तं पृथिव्याद्यविदितत्वं किं प्रकृत्यादौ युक्तम् उत नेति ।**

ಹಿಂದಿನ ಸಂಶಯವು ಪರಿಹಾರವಾಗಬೇಕೆಂದರೆ ''ಯಂ ಪೃಥ್ವಿವೀ ನ ವೇದ'' ಇತ್ಯಾದಿಯಾಗಿ ಅಂತರ್ಯಾಮಿಯಲ್ಲಿ ಹೇಳಲ್ಪಟ್ಟ ಪೃಥಿವ್ಯಾದಿಗಳಿಂದ ತಿಳಿಯಲ್ಪಡದಿರುವಿಕೆ ಎಂಬ ಧರ್ಮವು ಪ್ರಕೃತ್ಯಾದಿಗಳಲ್ಲಿ ಯುಕ್ತವಾಗುತ್ತದೋ ಅಥವಾ ಇಲ್ಲವೋ ? ಎಂಬ ಸಂಶಯವು ಪರಿಹಾರವಾಗಬೇಕು. ಹಿಂದಿನ ಸಂಶಯವು ಪರಿಹಾರವಾಗಬೇಕೆಂದರೆ

**तदर्थं ''यं पृथिवी'' इत्यादौ पृथिव्यादिशब्दः किमचेतनपरः किं वा तदभिमानिचेतनपर इति ।**

'ಯಂ ಪೃಥಿವೀ' ಇತ್ಯಾದಿಗಳಲ್ಲಿ ಕೇಳಿಸುತ್ತಿರುವ ಪೃಥಿವ್ಯಾದಿ ಶಬ್ದಗಳು ಅಚೇತನಪರವೋ? ಅಥವಾ ತದಭಿಮಾನಿಯಾದ ಚೇತನಪರವೋ? ಎಂಬ ಸಂಶಯವು ಪರಿಹಾರವಾಗಬೇಕು. ಹೀಗೆ ಒಟ್ಟು ಐದು ಬಗೆಯಲ್ಲಿ ಸಂಶಯ ಕೋಟಿಗಳು ಹುಟ್ಟುತ್ತವೆ.

**अचेतनपरत्वे हि अचेतनाविदितत्वं प्रकृत्यादेरपि सम्भवति, अन्यथा तु न सम्भवतीति ।।**

ಒಂದು ವೇಳೆ ಪೃಥಿವ್ಯಾದಿ ಶಬ್ದಗಳು ಅಚೇತನ ಪರವಾದರೆ ಅಚೇತನ ಪದಾರ್ಥಗಳಿಂದ ತಿಳಿಯಲು ಸಾಧ್ಯವಿಲ್ಲವೆಂಬ ಧರ್ಮವು ಪ್ರಕೃತ್ಯಾದಿಗಳಲ್ಲೂ ಉಪಪನ್ನವಾಗುತ್ತದೆ. ಅಚೇತನ ಪರವಾಗದಿದ್ದರೆ ಉಪಪನ್ನವಾಗುವುದಿಲ್ಲವೆಂದು ತಿಳಿಯಬೇಕು.

ಅಂತರ್ಯಾಮ್ಯಧಿಕರಣ (೧-೨-೫)

## ಶ್ರೀರಾಘವೇಂದ್ರತೀರ್ಥವಿರಚಿತ

# ಪ್ರಕಾಶ

**प्रकाशः** – ॐ अन्तर्याम्यधिदैवादिषु तद्धर्मव्यपदेशात् ॐ ।। "तत्र च "एतदमृतम्" इत्युक्तममृतत्वमुच्यते" इत्यादिभाष्यटीकयोः पूर्वश्रुतिसङ्गतेरेव प्रतीत्या पूर्वाधिकरणसङ्गत्यप्रतीतेः "श्रुत्यादिसङ्गतिं दर्शयति" इति टीका न युक्तेत्यत आह – **हेतूकृतेति** ।

ವಿವರಣೆ - "ಅಂತರ್ಯಾಮ್ಯಧಿದೈವಾದಿಷು ತದ್ಧರ್ಮವ್ಯಪದೇಶಾತ್" "ತತ್ರ ಚ "ಏತದಮೃತಮ್" ಇತ್ಯುಕ್ತಮಮೃತತ್ವಮುಚ್ಯತೇ" ಈ ಅಧಿಕರಣದ ವಿಷಯವಾಕ್ಯದಲ್ಲಿ 'ಅಮೃತಂ' ಎಂಬ ಪದದಿಂದ ಅಮೃತತ್ವವು ಹೇಳಲ್ಪಟ್ಟಿದೆ. ಇತ್ಯಾದಿ ಭಾಷ್ಯ ಹಾಗೂ ಟೀಕೆಗಳಲ್ಲಿ ಹಿಂದಿನ ಅಧಿಕರಣದ ಶ್ರುತಿವಾಕ್ಯದಿಂದ ಸಂಗತಿಯು ತೋರುತ್ತದೆಯೇ ಹೊರತು ಹಿಂದಿನ ಅಧಿಕರಣದಿಂದ ಸಂಗತಿಯನ್ನು ಹೇಳಿರುವುದು ಕಾಣಿಸುವುದಿಲ್ಲ. ಆದ್ದರಿಂದ 'ಶ್ರುತ್ಯಾದಿಸಂಗತಿಂ ದರ್ಶಯತಿ' 'ಶ್ರುತಿಸಂಗತಿ; ಅಧಿಕರಣಸಂಗತಿ ಮೊದಲಾದವುಗಳನ್ನು ತೋರಿಸುತ್ತಿದ್ದಾರೆ.' ಎಂಬ ಟೀಕೆಯು ಅಯುಕ್ತವಾಗುತ್ತದಲ್ಲವೆ? ಎಂಬ ಪ್ರಶ್ನೆಗೆ 'ಹೇತೂಕೃತ' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

**प्रकाशः** – "उपपत्तेः" इत्यनेनेत्यर्थः । 'सङ्गतिः' आक्षेपिकीत्यर्थः । **उक्तमिति** । श्रुतिसङ्गत्यविनाभूतत्वादुक्तप्रायमित्यर्थः । पूर्वाक्षेपसमर्थनं पूर्ववत् ध्येयम् । एतेनेहामृत्वस्यैवाक्षेपात् तेन प्राग्वदन्तर्यामी च विष्णुरिति शङ्कानवकाशः सूचितः ।

'ಹೇತೂಕೃತ' ಎಂದರೆ 'ಉಪಪತ್ತೇಃ' ಎಂಬುದರಿಂದ ಹೇತುವನ್ನಾಗಿ ಮಾಡಿದ್ದಾರೆಂದರ್ಥ. 'ಸಂಗತಿಃ' ಎಂದರೆ ಆಕ್ಷೇಪಿಕೀ ಸಂಗತಿಯೆಂದರ್ಥ. 'ಉಕ್ತಂ' ಎಂದು ಹೇಳಿದ್ದರಿಂದ ಶ್ರುತಿಸಂಗತಿಯಿಂದ ಅಧಿಕರಣಸಂಗತಿಯು (ವ್ಯಾಪ್ತ) ಅವಿನಾಭೂತವಾದ್ದರಿಂದ ಶ್ರುತಿಸಂಗತಿಯನ್ನು ಹೇಳಿದರೆ ಅಧಿಕರಣ ಸಂಗತಿಯನ್ನೂ ಸಹ ಹೇಳಿದಂತಾಗುತ್ತದೆ ಎಂದು ಅಭಿಪ್ರಾಯ. ಹಿಂದಿನ ಅಧಿಕರಣದ ಸಿದ್ಧಾಂತವನ್ನು ಆಕ್ಷೇಪ ಮಾಡುವ ಮೂಲಕ ಈ ಅಧಿಕರಣದ ಸಂಗತಿಯನ್ನು ತಿಳಿಯಬೇಕು. ಈ ಕ್ರಮವು ಹಿಂದಿನ ಅಧಿಕರಣಗಳಲ್ಲಿ ಹೇಳಿದ ಬಗೆಯಲ್ಲೇ ತಿಳಿಯಬೇಕು. ಹೀಗೆ ಹೇಳಿದ್ದರಿಂದ; ಅಮೃತತ್ವವನ್ನೇ ಈ ಅಧಿಕರಣದಲ್ಲಿ ಆಕ್ಷೇಪಿಸುತ್ತಿದ್ದಾರೆ. ಆದ್ದರಿಂದ ವಿಷ್ಣುವಿಗೆ ಅಂತರ್ಯಾಮಿತ್ವವನ್ನು ಹಿಂದೆ ಆಕ್ಷೇಪಿಸಿದಂತೆ ಇಲ್ಲಿ ಆಕ್ಷೇಪಿಸುತ್ತಿಲ್ಲವೆಂದು ಸೂಚಿಸಿದಂತಾಯಿತು.

**प्रकाशः** – अत्र पूर्वपक्षेऽन्तरत्वमप्यन्यस्यैवेति वक्ष्यमाणत्वात् "सर्वेषां भूतानाम् अन्तरःपुरुषः" इति "विवक्षितगुणोपपत्तेः" इत्यत्र विष्णुलिङ्गतया

निर्णीतेनान्तरत्वेन विष्णुः किं न स्यादित्यपि शङ्का प्रत्युक्ता । अमृतत्वाक्षेपस्तु सन्निधानाद्भाष्यादावत्रापि दर्शितः ।

ಈ ಅಧಿಕರಣದ ಪೂರ್ವಪಕ್ಷದಲ್ಲಿ ಅಂತರತ್ವವನ್ನೂ ಸಹ ಬೇರೆಯವರಲ್ಲೇ ಮುಂದೆ ಹೇಳುತ್ತಾರೆ. ಆದ್ದರಿಂದ 'ವಿವಕ್ಷಿತಗುಣೋಪಪತ್ತೇಃ' ಎಂಬ ಸೂತ್ರದಲ್ಲಿ "ಸರ್ವೇಷಾಂ ಭೂತಾನಾಮ್ ಅಂತರಃಪುರುಷಃ" ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ವಿಷ್ಣುಲಿಂಗವೆಂದು ಸಮರ್ಥಿಸಲಾದ ಅಂತರತ್ವದಿಂದ ಇಲ್ಲಿಯೂ ಅಂತರ್ಯಾಮಿಯು ವಿಷ್ಣು ಏಕಾಗಬಾರದು? ಎಂಬ ಶಂಕೆಯನ್ನು ಪರಿಹರಿಸಿದಂತಾಯಿತು. ಹೇಗೆಂದರೆ ಅಧಿಕರಣದ ಫಲವಾದ ಅಂತರತ್ವವನ್ನು ಬೇರೆಯವರಲ್ಲಿ ಆಕ್ಷೇಪಿಸುತ್ತಿರುವುದರಿಂದ. ಹಾಗಾದರೆ ಅಮೃತತ್ವವನ್ನು ಹೇಗೆ ಆಕ್ಷೇಪಿಸುತ್ತೀರಿ ಎಂದರೆ - ಅಮೃತತ್ವದ ಆಕ್ಷೇಪವಾದರೂ ಅಂತರತ್ವದ ಜೊತೆಗೆ ಕೇಳಿಸುತ್ತಿರುವುದರಿಂದ. ಭಾಷ್ಯ ಮತ್ತು ಟೀಕೆಗಳಲ್ಲಿ ಹಾಗೂ ಚಂದ್ರಿಕಾದಲ್ಲಿ ಹೇಳಿದ್ದಾರೆ.

**प्रकाशः** – यद्यप्यत्र "यश्चक्षुषि तिष्ठन्" इति चक्षुस्स्थस्यात्रोक्तपूर्वपक्षन्यायेनान्यत्वात् प्रागक्षिस्थोऽपि स एवेत्याक्षेप ऋजुः । यद्यत्रान्तर्यामी विष्णोरन्यस्तर्हि "अन्तर्याम्यमृतः" इत्युक्तामतृत्वमपि तस्यैवेति प्रागमृतत्वयुक्तोऽक्षिस्थोऽपि स एवेत्याक्षेपो वक्रः । प्राचीनः सौत्रप्रतिज्ञांशस्य, अयं च हेत्वंशस्येति स एव वाच्य इति भाति ।

ಮತ್ತೇನೆಂದರೆ ಈ ಅಧಿಕರಣದಲ್ಲಿ "ಯಶ್ಚಕ್ಷುಷಿ ತಿಷ್ಠನ್" ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ಚಕ್ಷುರಂತಃಸ್ಥನು ಬೇರೆಯವನಾಗಿದ್ದಾನೆಂದು ಈ ಅಧಿಕರಣದಲ್ಲಿ ಆಕ್ಷೇಪಿಸುತ್ತಿದ್ದಾರೆ. ಆದ್ದರಿಂದ ಹಿಂದಿನ ಅಧಿಕರಣದಲ್ಲಿ ಹೇಳಲ್ಪಟ್ಟ ಅಕ್ಷಿಸ್ಥನೂ ಸಹ ಬೇರೆಯವನೇ ಆಗುತ್ತಾನೆಂಬ ಸಂಗತಿಯನ್ನು ಹೇಳುವುದು ಋಜು ಸಂಗತಿ ಎನಿಸುತ್ತದೆ.

ಒಂದುವೇಳೆ ಅಂತರ್ಯಾಮಿತ್ವವು ವಿಷ್ಣುವಿಗಿಂತ ಬೇರೆಯವರಲ್ಲಿ ಬರುವುದಾದರೆ ಆಗ 'ಅಂತರ್ಯಾಮ್ಯಮೃತಃ' ಎಂಬಲ್ಲಿಯೂ ಸಹ ಅಮೃತತ್ವವೂ ಸಹ ಬೇರೆಯವರಲ್ಲೇ ಬರುತ್ತದೆ. ಆದ್ದರಿಂದ ಹಿಂದಿನ ಅಧಿಕರಣದಲ್ಲಿ ನಿರ್ಣಯಿಸಲ್ಪಟ್ಟ ಅಮೃತತ್ವ ಧರ್ಮವುಳ್ಳ ಅಕ್ಷಿಸ್ಥನೂ ಸಹ ಬೇರೆಯವನೇ ಆಗುತ್ತಾನೆಂದು ಇಲ್ಲಿ ಆಕ್ಷೇಪಿಸಲಾಗಿದೆ. ಇದು ವಕ್ರವಾದ ಸಂಗತಿಯಾಗಿದೆ. ಇಲ್ಲಿ ಪೂರ್ವ ಪ್ರತಿಜ್ಞಾತವಾದ ಋಜು ಸಂಗತಿಯನ್ನು ಹೇಳಿದಾಗ ಸೂತ್ರದಲ್ಲಿರುವ ಪ್ರತಿಜ್ಞಾಂಶವನ್ನೇ ಸಮರ್ಥಿಸಿದಂತಾಗುತ್ತದೆ. ಆದರೆ ವಕ್ರಸಂಗತಿಯನ್ನು ಆಶ್ರಯಿಸಿದಾಗ ಹೇತ್ವಂಶವನ್ನು ಸಮರ್ಥಿಸಿದಂತಾಗುತ್ತದೆ. ಇವುಗಳಲ್ಲಿ ಸೂತ್ರ ಘಟಿತವಾದ ಪ್ರತಿಜ್ಞಾಂಶವನ್ನು ಸಮರ್ಥಿಸುವುದೇ ಶ್ರೇಷ್ಠವಾದ್ದರಿಂದ ಋಜು ಸಂಗತಿಯನ್ನೇ ಹೇಳಬೇಕೆಂದು ತೋರುತ್ತದೆ.

**प्रकाशः** – तथाऽपि सर्वानुगुण्याय वा, अमृतत्वमुखेन चक्षुरादिस्थस्यापि विष्णुत्वशङ्का मा भूदिति वा तदाक्षेप उक्तः । अत्र सुधोक्तः अक्ष्यन्तरवस्थानविशिष्टरमणकर्तृत्वरूपान्तरत्वाक्षेपस्तु प्रागेव "सर्वत्र" इति नये विवृत इति भावः ।

ಆದರೂ ಸಹ ಸರ್ವಾನುಗುಣ್ಯಕ್ಕಾಗಿ ಅಥವಾ ಅಮೃತತ್ವದ ಮೂಲಕ ಚಕ್ಷುರಾದಿ ಇಂದ್ರಿಯನಾದವನೂ ವಿಷ್ಣುವೇ ಆಗಿದ್ದಾನೆಂಬ ಶಂಕೆಯು ತೋರಬಾರದೆಂದು ಹಾಗೇ (ವಕ್ರಸಂಗತಿಯನ್ನೇ) ಆಕ್ಷೇಪಿಸಲಾಗಿದೆ. ಪ್ರಕೃತ ನ್ಯಾಯಸುಧೆಯಲ್ಲಿ ಹೇಳಿದಂತೆ ನೇರವಾದ ಕಣ್ಣಿನೊಳಗಿದ್ದು ರಮಣವನ್ನು ಮಾಡುವವನೆಂಬ ಅಂತರತ್ವಗ ಆಕ್ಷೇಪವೂ ಹಿಂದೆ ಸರ್ವಗತತ್ವಾಧಿಕರಣದಲ್ಲೇ ವಿವರಿಸಿದ್ದಾಗಿದೆಯೆಂದು ತಿಳಿಯಬೇಕು.

**प्रकाशः** – एतेन स्थाननिर्देशोपपादनाय पृथिव्यादिस्थाननिर्देशो दृष्टान्तितः, तस्याक्षेपात् सङ्गतिरिति कल्पतरूक्तं निरस्तम् । स्थानसूत्र एवमर्थस्य निरासात् । प्रधानहेत्वाक्षेपसम्भवे त्वद्रीत्या शङ्कानिरासकसूत्राक्षेपायोगात् । तदेतदाह – **ब्रह्मत्वे हेतूकृतेति** ।

'ಕಲ್ಪತರು'ವಿನಲ್ಲಿ ಈ ಅಧಿಕರಣದ ಸಂಗತಿಯನ್ನು ಹೀಗೆ ಹೇಳಲಾಗಿದೆ - ಸ್ಥಾನನಿರ್ದೇಶವನ್ನು ಉಪಪಾದಿಸುವುದಕ್ಕಾಗಿ ಪೃಥಿವ್ಯಾದಿಸ್ಥಾನನಿರ್ದೇಶವನ್ನು ದೃಷ್ಟಾಂತವನ್ನಾಗಿ ಹಿಂದೆ ಹೇಳಿದ್ದರೂ, ಅದನ್ನು ಇಲ್ಲಿ ಆಕ್ಷೇಪಿಸುತ್ತಿರುವುದರಿಂದ ಈ ಅಧಿಕರಣಕ್ಕೆ ಆಕ್ಷೇಪಿಕೀ ಸಂಗತಿ ಇರುತ್ತದೆ ಎಂದು.

ಕಲ್ಪತರುವಿನ ಈ ಮಾತನ್ನು ಈಗ ನಿರಾಕರಿಸಿದಂತಾಯಿತು. ಏಕೆಂದರೆ 'ಸ್ಥಾನಾದಿವ್ಯಪದೇಶಾತ್' ಎಂಬ ಸೂತ್ರದಲ್ಲಿಯೇ ಈ ಆಕ್ಷೇಪವನ್ನು ನಿರಾಕರಿಸಿದ್ದಾಗಿದೆ. ಮತ್ತು ಪ್ರಧಾನವಾದ ಹೇತುವನ್ನೇ ಆಕ್ಷೇಪ ಮಾಡಲು ಬರುವಾಗ ನೀವು ಹೇಳುವ ಪ್ರಕಾರ ಶಂಕೆಯನ್ನು ಪರಿಹರಿಸುವ ಸೂತ್ರವನ್ನು ಆಕ್ಷೇಪಿಸುವುದು ತಪ್ಪಾಗುತ್ತದೆ. ಈ ವಿಷಯವನ್ನು 'ಬ್ರಹ್ಮತ್ವೇ ಹೇತೂಕೃತ' ಎಂಬುದರಿಂದ ಹೇಳಿದ್ದಾರೆ.

**प्रकाशः** – एतेनैव चक्षुषि स्थित्यादेः परमात्मन एव ''यश्चक्षुषि तिष्ठन्'' इति निर्देशादित्युक्तस्य समर्थनार्थमेतदिति केषाञ्चित्सङ्गत्युक्तिरपि अपास्तेति । एवं सङ्गतिटीकां विवृत्य विषयसंशयटीकां व्यनक्ति – **अत्रेति** ।

ಮತ್ತೆ ಕೆಲವರು ತೋರಿಸುವ ಸಂಗತಿ ಹೀಗಿದೆ - ಚಕ್ಷುರಿಂದ್ರಿಯದಲ್ಲಿ ಪರಮಾತ್ಮನೇ ನೆಲೆಸಿದ್ದಾನೆಂದು "ಯಶ್ಚಕ್ಷುಷಿ ತಿಷ್ಠನ್" ಎಂಬ ಶ್ರುತಿಯಲ್ಲಿ ನಿರ್ದೇಶಿಸಲಾಗಿದೆ. ಅದನ್ನೇ ಸಮರ್ಥಿಸುವುದಕ್ಕಾಗಿ ಈ ಅಧಿಕರಣವು ಹೊರಟಿರುತ್ತದೆ ಎಂದು. ಇವರ ವಿಚಾರವೂ ಸಹ ಈಗ ನಿರಾಕೃತವಾಯಿತು. ಏಕೆಂದರೆ ಪ್ರಧಾನವಾದ ಹೇತ್ವಂಶವನ್ನು ಸಮರ್ಥಿಸುವುದೇ ಸೂಕ್ತ.

ಹೀಗೆ ಸಂಗತಿಪರವಾದ ಟೀಕೆಯನ್ನು ವ್ಯಾಖ್ಯಾನಿಸಿ ವಿಷಯ ಹಾಗೂ ಸಂಶಯಗಳನ್ನು ಹೇಳುವ ಟೀಕೆಯನ್ನು 'ಅತ್ರ' ಇತ್ಯಾದಿ ವಾಕ್ಯದಿಂದ ವ್ಯಾಖ್ಯಾನಿಸುತ್ತಿದ್ದಾರೆ.

**प्रकाशः** – बृहदारण्यके तृतीये ''यः पृथिव्यां तिष्ठन् पृथिव्या अन्तरो यं पृथिवी न वेद यस्य पृथिवी शरीरं यः पृथिवीमन्तरो यमयत्येष त आत्माऽन्तर्याम्यमृतः'' इत्येवंरूपेणाबग्न्यन्तरिक्षवाय्वादित्यदिक्चन्द्रतारकाकाशतम-

स्तेजस्स्वधिदैवतं, ''यस्सर्वेषु भूतेषु'' इत्यधिभूतं, प्राणवाक्चक्षुश्श्रोत्रमनस्त्वग्-विज्ञानरेतस्स्वध्यात्मं श्रुतोऽन्तर्यामी विषय इत्यर्थः ।

ಬೃಹದಾರಣ್ಯದ ಮೂರನೇ ಅಧ್ಯಾಯದಲ್ಲಿರುವ ವಿಷಯವಾಕ್ಯ ಹೀಗಿದೆ - ''ಯಃ ಪೃಥಿವ್ಯಾಂ ತಿಷ್ಠನ್ ಪೃಥಿವ್ಯಾ ಅಂತರೋ ಯಂ ಪೃಥಿವೀ ನ ವೇದ ಯಸ್ಯ ಪೃಥಿವೀ ಶರೀರಂ ಯಃ ಪೃಥಿವೀಮಂತರೋ ಯಮಯತ್ಯೇಷ ತ ಆತ್ಮಾಂತರ್ಯಾಮ್ಯಮೃತಃ'' ಎಂದು. ಇಲ್ಲಿ ಅಪ್, ಅಗ್ನಿ, ಅಂತರಿಕ್ಷ, ವಾಯು, ಆದಿತ್ಯ, ದಿಕ್, ಚಂದ್ರ, ನಕ್ಷತ್ರ, ಆಕಾಶ, ತಮಸ್ಸು, ತೇಜಸ್ಸು ಮೊದಲಾದ ಆಧಿದೈವಿಕ ಪದಾರ್ಥಗಳಲ್ಲಿ ''ಯಸ್ಸರ್ವೇಷು ಭೂತೇಷು'' ಎಂಬಲ್ಲಿ ಹೇಳಲ್ಪಟ್ಟ ಆಧಿಭೌತಿಕಪದಾರ್ಥಗಳಲ್ಲಿ; ಪ್ರಾಣ, ವಾಕ್, ಚಕ್ಷುಷ್, ಶ್ರೋತ್ರ, ಮನಸ್ಸು, ತ್ವಕ್, ವಿಜ್ಞಾನ, ರೇತಸ್ಸು ಮೊದಲಾದ ಆಧ್ಯಾತ್ಮಿಕ ಪದಾರ್ಥಗಳಲ್ಲಿ ಇದ್ದಾನೆಂದು ಶ್ರುತನಾದ ಅಂತರ್ಯಾಮಿಯೇ ಈ ಅಧಿಕರಣಕ್ಕೆ ವಿಷಯನಾಗಿದ್ದಾನೆಂದು ತಿಳಿಯಬೇಕು.

**प्रकाशः** – टीकायामधिदैवादि सर्वप्रकरणश्रुतान्तर्यामिमात्रविषयताद्योत-नायान्तर्यामित्वं विषय इत्युक्तावपि, सूत्राभाष्यानुरोधेन 'अन्तर्यामी' इत्युक्तम् । आदिपदेन तत्तदभिमानिजीवाः ।

ಟೀಕೆಯಲ್ಲಿ ಆಧಿದೈವವೇ ಮೊದಲಾದ ಸಕಲ ಪ್ರಕರಣಗಳಲ್ಲಿ ಶ್ರುತನಾದ (ಕೇಳಲ್ಪಟ್ಟ) ಅಂತರ್ಯಾಮಿತ್ವವು ಮಾತ್ರ ವಿಷಯವಾಗಿದೆ. ಇದನ್ನು ತಿಳಿಸಲು 'ಅಂತರ್ಯಾಮಿತ್ವಂ ವಿಷಯಃ' ಎಂದು ಹೇಳಿದ್ದರೂ ಸಹ. ಸೂತ್ರ ಹಾಗೂ ಭಾಷ್ಯಗಳಲ್ಲಿ 'ಅಂತರ್ಯಾಮಿ' ಎಂಬ ಪದವಿರುವುದರಿಂದ ಪ್ರಕೃತ ಗ್ರಂಥಕಾರರೂ ಸಹ 'ಅಂತರ್ಯಾಮಿ' ಎಂದೇ ಹೇಳಿದ್ದಾರೆ. ಪ್ರಕೃತ್ಯಾದಿ ಎಂಬ ಆದಿಪದದಿಂದ ಪ್ರಕೃತ್ಯಾದಿ ಜಡಪದಾರ್ಥಗಳಿಗೆ ಅಭಿಮಾನಿಗಳಾದ ಚೇತನರನ್ನು ಗ್ರಹಣ ಮಾಡಬೇಕು.

**प्रकाशः** – अस्पष्टांशे फलफलिभावमाह – अचेतनेति । यदा वक्ष्यमाणदिशा अचेतनपरत्वं, तदा जडाविदित्वस्य प्रकृत्यादेरुपपत्तेः, रूढौ बाधकाभावात् तादृक्शरीरत्वं विष्णोर्न युक्तमिति प्रकृत्यादिरेवेति पूर्वपक्षे फलम् । जीवादन्तर्यामि-भेदोक्तिर्नेति पूर्वपक्षिणो भावः ।

ಯಾವ ಅಂಶವು ಅಸ್ಪಷ್ಟವಾಗಿದೆಯೋ ಆ ವಿಷಯದಲ್ಲಿ ಮಾತ್ರ ಫಲಫಲಿಭಾವವನ್ನು ಹೇಳುವುದಕ್ಕಾಗಿ ಅಚೇತನಪರತ್ವವೆಂಬ ವಾಕ್ಯವು ಹೊರಟಿದೆ.

ಒಂದು ವೇಳೆ ಮುಂದೆ ಹೇಳುವ ಪ್ರಕಾರ ಅಂತರ್ಯಾಮಿಯು ಅಚೇತನಪರವಾದರೆ ಆವಾಗ ಜಡಾವಿದಿತತ್ವವು ಪ್ರಕೃತ್ಯಾದಿಗಳಲ್ಲಿ ಉಪಪನ್ನವಾಗುತ್ತದೆ. ಆವಾಗ ರೂಢ್ಯರ್ಥದಲ್ಲಿ ಬಾಧಕವಿಲ್ಲದ ಕಾರಣ ಪ್ರಕೃತ್ಯಾದಿಗಳನ್ನೇ ಶರೀರವಾಗಿವುಳ್ಳ ವಿಷ್ಣುವೆಂಬರ್ಥವನ್ನು ಸ್ವೀಕರಿಸಬೇಕೆಂಬುದು ಯುಕ್ತವಾಗುವುದಿಲ್ಲ. ಆದ್ದರಿಂದ ಪ್ರಕೃತ್ಯಾದಿಗಳೇ ಅಂತರ್ಯಾಮಿಯೆಂದು ಪೂರ್ವಪಕ್ಷದ ಫಲ. ಜೀವನಿಗಿಂತ ಅಂತರ್ಯಾಮಿಗೆ ಭೇದವನ್ನು ಹೇಳುವ ವಚನಗಳಿರುವುದಿಲ್ಲವೆಂದು ಪೂರ್ವಪಕ್ಷಿಯ ಅಭಿಪ್ರಾಯ.

ಅಂತರ್ಯಾಮ್ಯಧಿಕರಣ (೧-೨-೫)

**प्रकाशः** – यदा तु चेतनपरत्वं, तदा तेन साकल्येनाविदितत्वस्य प्रकृत्यादावयोगात् बाधकेन रूढित्यागाच्छीर्यमाणत्वयोगेन विष्णावपि तच्छरीरकत्वसम्भवात् विष्णुरेवेति सिद्धान्ते फलमित्यर्थः ।

ಒಂದು ವೇಳೆ ಅಂತರ್ಯಾಮಿತ್ವವು ಚೇತನ ಪರವಾದರೆ ಆವಾಗ ಸಾಕಲ್ಯೇನಾವಿದಿತತ್ತ್ವವು ಎಲ್ಲರೀತಿಯಿಂದ ತಿಳಿಯಲ್ಪಡದೇ ಇರುವಿಕೆ ಪ್ರಕೃತ್ಯಾದಿಗಳಲ್ಲಿ ಕೂಡುವುದಿಲ್ಲ. ಹೀಗೆ ಬಾಧಕವಿರುವುದರಿಂದ ರೂಢಿಯನ್ನು ಬಿಟ್ಟು ಶೀರ್ಯಮಾಣತ್ವ ಎಂಬ ಯೋಗದಿಂದ ವಿಷ್ಣುವಿನಲ್ಲೂ ಸಹ ಪ್ರಕೃತ್ಯಾದಿಗಳೇ ಶರೀರವಾಗಿವೆಯೆಂಬರ್ಥವನ್ನು ಕೂಡಿಸಬಹುದು. ಆದ್ದರಿಂದ ವಿಷ್ಣುವೇ ಅಂತರ್ಯಾಮಿಯಾಗಿದ್ದಾನೆಂದು ಸಿದ್ಧಾಂತದ ಫಲ.

ಪ್ರಕೃತ್ಯಾದಿಗಳು ವಿಷ್ಣುವಿಗೆ ಶರೀರ ಎಂದರೆ ಪ್ರಕೃತ್ಯಾದಿಗಳು ಶೀರ್ಯಮಾಣತ್ವಾತ್ ಶರೀರ ಎಂಬ ಶಬ್ದವಾಚ್ಯವಾಗಿದೆ. ಆದ್ದರಿಂದ ಅವು ವಿಷ್ಣುವಿನ ಶರೀರ ಎಂಬ ವ್ಯವಹಾರಕ್ಕೆ ವಿಷಯವಾಗಿದೆ ಎಂದಭಿಪ್ರಾಯ.

**प्रकाशः** – यद्यपि विष्णुरिति चिन्तानन्तरं, तदर्थममृतत्वादिकं गौणम् उत मुख्यमिति, तदर्थं बाधकमस्त्युत नेति, तदर्थं शरीरत्वं विष्णोर्न युक्तमुत युक्तमिति, तदर्थं तत्किं रूढं यौगिकं वेत्येवं यथासूत्रविन्यासं चिन्तोपदर्शनीय, आद्ये सूत्रे साधकलिङ्गस्य, द्वितीयादौ परलिङ्गसावकाशतायाश्चोक्तेः ।

ಪ್ರಶ್ನೆ - 'ಕಿಂವಾ ವಿಷ್ಣುಃ' ಎಂಬ ಪ್ರಥಮಕೋಟಿಯ ಚಿಂತೆಯ ಅನಂತರ ಅದಕ್ಕೋಸ್ಕರ ಅಮೃತತ್ವಾದಿಗಳು ಗೌಣವಾಗುತ್ತವೋ? ಅಥವಾ ಮುಖ್ಯವಾಗುತ್ತವೋ? ಅದಕ್ಕೋಸ್ಕರ ಬಾಧಕವಿದೆಯೋ? ಇಲ್ಲವೋ? ಅದಕ್ಕೋಸ್ಕರ ಶರೀರತ್ವವು ವಿಷ್ಣುವಿನಲ್ಲಿ ಯುಕ್ತವಾಗುವುದಿಲ್ಲವೋ? ಯುಕ್ತವಾಗುತ್ತದೋ? ಅದಕ್ಕೋಸ್ಕರ ಶರೀರ ಪದವು ರೂಢವೋ? ಅಥವಾ ಯೌಗಿಕವೋ? ಎಂಬ ಕ್ರಮದಲ್ಲಿ ಸಂಶಯ ಕೋಟಿಗಳನ್ನು ತೋರಿಸಬೇಕಿತ್ತು. ಹೀಗೆ ತೋರಿಸಿದಾಗ ಸೂತ್ರಗಳ ಜೋಡಣೆಯ ಕ್ರಮದಲ್ಲಿಯೇ ಸಂಶಯವನ್ನು ತೋರಿಸಿದಂತಾಗಿ ತಿಳಿಯಲು ಅನುಕೂಲವಾಗುತ್ತಿತ್ತು. ಏಕೆಂದರೆ ಮೊದಲನೇ ಸೂತ್ರದಲ್ಲಿ ಸಾಧಕಲಿಂಗವನ್ನು ಹೇಳಿ, ಎರಡನೆಯ ಸೂತ್ರಾದಿಗಳಲ್ಲಿ ಪರಲಿಂಗಗಳಿಗೆ ಸಾವಕಾಶತ್ವವನ್ನು ಹೇಳುವ ಮೂಲಕ ಬಾಧಕವನ್ನು ಹೇಳಿದ್ದರಿಂದ ಈ ಕ್ರಮದಲ್ಲಿಯೇ ಸಂಶಯ ಕೋಟಿಗಳನ್ನು ತೋರಿಸುವುದು ಸಮಂಜಸವಾಗುತ್ತದಲ್ಲವೇ?

**प्रकाशः** – तथाऽपि सिद्धान्ते शरीरपदस्य यौगिकत्वोक्तेर्निर्बीजतानिरासायाधिदैवपदस्वारस्याय च तदभिप्रेतैवेयं चिन्ता दर्शिता । अत एव पूर्वपक्षटीकायां शरीरत्वस्याघटनयैव पूर्वं विष्णावुक्ता, सिद्धान्तटीकायां च "यद्यपि योगाद्रूढेः प्राधान्यम् । तथाऽपि निरवकाशाविदितत्वादिलिङ्गबलेन योगाङ्गीकारो युज्यते" इत्युक्तमिति भावः ।

ಉತ್ತರ - ಹೌದು. ಆದರೆ ಸಿದ್ಧಾಂತದಲ್ಲಿ ಶರೀರಪದವನ್ನು ಯೌಗಿಕವೆಂದು ಅಂಗೀಕರಿಸಲಾಗಿದೆ. ಅದು ನಿರ್ಬೀಜ ಎಂಬ ಶಂಕೆಯನ್ನು ಪರಿಹರಿಸುವುದಕ್ಕಾಗಿ ಮತ್ತು ಅಧಿದೈವಪದಸ್ವಾರಸ್ಯಕ್ಕಾಗಿ ಗ್ರಂಥಕಾರರು ಬೇರೆ ಕ್ರಮದಲ್ಲಿ ಸಿದ್ಧಾಂತಾಭಿಪ್ರೇತವಾದ ಚಿಂತೆಯನ್ನೇ ತೋರಿಸಿದ್ದಾರೆ. ಆದ್ದರಿಂದಲೇ ಪೂರ್ವಪಕ್ಷದ ಟೀಕೆಯಲ್ಲಿ ಶರೀರತ್ವವನ್ನು ಸೇರಿಸಿಕೊಳ್ಳದೆ. ಹಿಂದೆ ವಿಷ್ಣುವಿನಲ್ಲಿ ಹೇಳಿದ್ದಾರೆ. ಆದರೆ ಸಿದ್ಧಾಂತ ಟೀಕೆಯಲ್ಲಾದರೂ "ಯದ್ಯಪಿ ಯೋಗಾದ್ರೂಢೇಃ ಪ್ರಾಧಾನ್ಯಮ್ । ತಥಾऽಪಿ ನಿರವಕಾಶಾವಿದಿತತ್ವಾದಿಲಿಂಗಬಲೇನ ಯೋಗಾಂಗೀಕಾರೋ ಯುಜ್ಯತೇ" ವಸ್ತುತಃ ಯೋಗಕ್ಕಿಂತ ರೂಢಿಯು ಪ್ರಬಲವಾಗಿದೆ. ಆದರೆ ನಿರವಕಾಶವಾದ 'ಅವಿದಿತತ್ವ' ಎಂಬ ಲಿಂಗದ ಬಲದಿಂದ ಯೋಗಾರ್ಥವನ್ನು ಅಂಗೀಕರಿಸುವುದು ಯುಕ್ತವಾಗುತ್ತದೆ ಎಂದು ಹೇಳಿದ್ದಾರೆ.

ಪಾಂಡುರಂಗಿಕೇಶವಾಚಾರ್ಯವಿರಚಿತ

## ಗುರುರಾಜೀಯಮ್ (ಭಾವದೀಪ)

**गुरुराजीयम् – ।। ॐ अन्तर्याम्यधिदेवादिषु तद्धर्मव्यपेशात् ॐ ।। पूर्वपक्षे सिद्धान्ते च फलफलिभावमाह – अचेतनेति ।।**




ಅಂತರ್ಯಾಮ್ಯಧಿಕರಣವು ಪ್ರಾರಂಭವಾಗುತ್ತಿದೆ. ಹಿಂದಿನ ಅಧಿಕರಣದಲ್ಲಿ ಚಕ್ಷುರಂತಃಸ್ಥನಾದವನು ವಿಷ್ಣುವೇ ಆಗಿದ್ದಾನೆಂದು ನಿರ್ಣಯಿಸಿದ್ದಾಯಿತು. ಆ ನಿರ್ಣಯಕ್ಕೆ ಅಮೃತತ್ವವನ್ನು ಹೇತುವೆಂದು ಹೇಳಿದರು. ಆದರೆ ವಿಷ್ಣುವಿನಲ್ಲಿ ಅಂತಹ ಅಮೃತತ್ವಾದಿ ಹೇತುಗಳೇ ಕೂಡುವುದಿಲ್ಲವೆಂದು ಈ ಅಧಿಕರಣದಲ್ಲಿ ಆಕ್ಷೇಪ ಮಾಡುತ್ತಿರುವುದರಿಂದ ಆನಂತರ್ಯ ಸಂಗತಿಯನ್ನು ತಿಳಿಯಬೇಕು.

'ಅಂತರ್ಯಾಮ್ಯಮೃತಃ' ಎಂಬ ಶ್ರುತಿ ವಾಕ್ಯ ಈ ಅಧಿಕರಣಕ್ಕೆ ವಿಷಯವಾಗಿದೆ. ಇಲ್ಲಿ ಕೇಳಿಸುತ್ತಿರುವ ಅಂತರ್ಯಾಮಿಯು ಪ್ರಕೃತ್ಯಾದಿಗಳೇಕಾಗಬಾರದು? ಎಂಬುದು ಪೂರ್ವಪಕ್ಷಿಗಳ ವಾದ. ವಿಷ್ಣುವೇ ಎಂದು ಸಿದ್ಧಾಂತಿಗಳ ನಿರ್ಣಯ. ಆದ್ದರಿಂದ ಒಂದು ವೇಳೆ ಮುಂದೆ ಹೇಳುವ ಪ್ರಕಾರ ಅಂತರ್ಯಾಮಿಯು ಅಚೇತನಪರವಾದರೆ ಆವಾಗ ಜಡವಿದಿತತ್ವವು ಪ್ರಕೃತ್ಯಾದಿಗಳಲ್ಲಿ ಉಪಪನ್ನವಾಗುತ್ತದೆ. ಆವಾಗ ರೂಢ್ಯರ್ಥದಲ್ಲಿ ಬಾಧಕವಿಲ್ಲದ ಕಾರಣ ಪ್ರಕೃತ್ಯಾದಿಗಳನ್ನೇ ಶರೀರವಾಗಿ ಶರೀರವಾಗಿವುಳ್ಳ ವಿಷ್ಣುವೆಂಬರ್ಥವನ್ನು ಸ್ವೀಕರಿಸಬೇಕೆಂಬುದು ಯುಕ್ತವಾಗುವುದಿಲ್ಲ. ಆದ್ದರಿಂದ ಪ್ರಕೃತ್ಯಾದಿಗಳೇ ಅಂತರ್ಯಾಮಿಯೆಂದು ಪೂರ್ವಪಕ್ಷದ ಫಲ. ಜೀವನಿಗಿಂತ ಅಂತರ್ಯಾಮಿಗೆ ಭೇದವನ್ನು ಹೇಳುವ ವಚನಗಳಿರುವುದಿಲ್ಲವೆಂದು ಪೂರ್ವಪಕ್ಷಿಯ ಅಭಿಪ್ರಾಯ.

ಅಂತರ್ಯಾಮ್ಯಧಿಕರಣ (೧-೨-೫)

ಒಂದು ವೇಳೆ ಚೇತನ ಪರವಾದರೆ ಆವಾಗ ಸಾಕಲ್ಯೇನಾವಿದಿತತ್ತ್ವವು ಪ್ರಕೃತ್ಯಾದಿಗಳಲ್ಲಿ ಕೂಡುವುದಿಲ್ಲ. ಹೀಗೆ ಬಾಧಕವಿರುವುದರಿಂದ ರೂಢಿಯನ್ನು ಬಿಟ್ಟು ಶೀರ್ಯಮಾಣತ್ವ ಎಂಬ ಯೋಗದಿಂದ ವಿಷ್ಣುವಿನಲ್ಲೂ ಸಹ ಪ್ರಕೃತ್ಯಾದಿಗಳೇ ಶರೀರವಾಗಿವೆಯೆಂಬರ್ಥವನ್ನು ಕೂಡಿಸಬಹುದು. ಆದ್ದರಿಂದ ವಿಷ್ಣುವೇ ಅಂತರ್ಯಾಮಿಯಾಗಿದ್ದಾನೆಂದು ಸಿದ್ಧಾಂತದ ಫಲ.



## ಪ್ರಕೃತಿಯೇ ಅಂತರ್ಯಾಮಿಯೆಂದು ಪೂರ್ವಪಕ್ಷ

**तात्पर्यचन्द्रिका**

**पूर्वपक्षस्तु – ''एष त आत्माऽन्तर्यामी'' इत्युक्तोऽन्तर्यामी प्रकृतिः,**

ಅನುವಾದ - ಪೂರ್ವಪಕ್ಷ ಹೀಗಿದೆ - ''ಏಷ ತ ಆತ್ಮಾಂತರ್ಯಾಮೀ' ಎಂಬ ವಿಷಯವಾಕ್ಯದಲ್ಲಿ ಪ್ರತಿಪಾದ್ಯವಾದ ಅಂತರ್ಯಾಮಿಯು ಪ್ರಕೃತಿಯೇ ಆಗಿದೆ.

**अन्तर्यामिणि श्रुतस्य पृथिव्याद्यात्मकत्वरूपस्य पृथिव्यादिशरीरत्वस्य पृथिव्याद्युपादाने प्रकृतौ सम्भवात्, शरीरशब्दस्य 'इदं पूर्वपक्षशरीरम्' इत्यादौ स्वरूपेऽपि प्रयोगात् ।**

ಅಂರ್ತಯಾಮಿಯಲ್ಲಿ ಪೃಥಿವ್ಯಾದಿಸ್ವರೂಪವೆಂದು ಹೇಳುವ ಪೃಥಿವ್ಯಾದಿ ಶರೀರತ್ವವು (ಪೃಥಿವ್ಯಾದಿಗಳು ಶರೀರವಾಗಿವೆ) ಪ್ರಕೃತಿಯಲ್ಲಿ ಕೂಡುತ್ತದೆ. ಏಕೆಂದರೆ ಪೃಥಿವ್ಯಾದಿಗಳಿಗೆ ಪ್ರಕೃತಿಯು ಉಪಾದಾನವಾದ್ದರಿಂದ. ಅಂದರೆ ಪ್ರಕೃತಿಗೆ ಪೃಥಿವ್ಯಾದಿಗಳನ್ನು ಶರೀರವೆಂದು ಹೇಳಬಹುದು. ಶರೀರ ಶಬ್ದವು ಸ್ವರೂಪ ಎಂಬರ್ಥದಲ್ಲಿ ಪ್ರಯೋಗಿಸಲ್ಪಡುತ್ತದೆ. 'ಇದು ಪೂರ್ವಪಕ್ಷ ಶರೀರ' ಎಂದು ಹೇಳಿದಾಗ ಶರೀರ ಶಬ್ದವು ಸ್ವರೂಪ ಎಂಬರ್ಥದಲ್ಲಿಯೇ ಪ್ರಸಿದ್ಧವಾಗಿದೆ.

**यद्यपि ''यस्य दिशः शरीरं, यस्यात्मा शरीरम्'' इत्युक्तं दिगादिशरीरत्वं प्रकृतौ न मुख्यं, पृथिव्यादेः प्राकृतत्वेऽपि दिगादेरप्राकृतत्वात् ।**

ಮತ್ತೇನೆಂದರೆ 'ಯಸ್ಯ ದಿಶಃ ಶರೀರಂ, ಯಸ್ಯಾತ್ಮಾ ಶರೀರಮ್' ಎಂಬಲ್ಲಿ ದಿಕ್ ಮೊದಲಾದವುಗಳೂ ಸಹ ಶರೀರವಾಗಿವೆಯಂದು ಹೇಳಲಾಗಿದೆ. ಇದನ್ನು ಪ್ರಕೃತಿಯಲ್ಲಿ ಮುಖ್ಯವಾಗಿ ಹೇಳಲಾಗದು. ಏಕೆಂದರೆ ಪೃಥಿವ್ಯಾದಿಗಳು ಪ್ರಾಕೃತವಾದ್ದರಿಂದ ಶರೀರವೆಂದು ಹೇಳುವುದು ತಪ್ಪಾಗುವುದಿಲ್ಲ. ಆದರೆ ದಿಕ್ ಮೊದಲಾದವು ಅಪ್ರಾಕೃತವಾದ್ದರಿಂದ ಅವನ್ನು ಶರೀರವೆಂದು ಹೇಳಲಾಗದು.

**तथाऽपि गौणं तदस्तु । ब्रह्मणस्तु पृथिव्यादिशरीत्वमपि न मुख्यम् ।**

ಹಾಗಾದರೆ ದಿಗಭಿಮಾನಿಯ ಶರೀರವು ಪ್ರಾಕೃತವಾದ್ದರಿಂದ ಗೌಣಾರ್ಥವನ್ನು ಮಾಡಿ ದಿಗಾದಿಗಳಿಗೆ ಶರೀರತ್ವವನ್ನು ಸಮರ್ಥಿಸುತ್ತೇವೆ. ವಿಚಾರ ಮಾಡಿದರೆ ಬ್ರಹ್ಮಪಕ್ಷದಲ್ಲಿ ಪೃಥಿವ್ಯಾದಿಗಳಿಗೂ ಸಹ ಶರೀರತ್ವವನ್ನು ಮುಖ್ಯವಾಗಿ ಹೇಳಲಾಗದು.

**नच नित्ये दिगादिके ब्रह्म प्रति शीर्यमाणत्वादिरूपं यौगिकमपि शरीरत्वमस्ति ।**

ನಿತ್ಯವಾದ ದಿಗಾದಿಗಳಿಗೆ ಬ್ರಹ್ಮನನ್ನು ಕುರಿತು ಶೀರ್ಯಮಾಣತ್ವವೆಂಬ ಯೌಗಿಕಾರ್ಥವನ್ನು ಸ್ವೀಕರಿಸಿ ಅವು ಶರೀರವೆಂಬರ್ಥವನ್ನೂ ಸಹ ಹೇಳಲಾಗದು. ಆದರೆ ಪ್ರಕೃತಿಯಲ್ಲಿ ಗೌಣಾರ್ಥದಿಂದ ಶರೀರತ್ವವನ್ನು ಕೂಡಿಸಬಹುದು.

**''यः पृथीव्यां तिष्ठन्'' इत्यादिकं तु ''व्याप्तं कार्येषु कारणम्'' इत्युक्तेः, पटे तन्तव इति प्रतीतेश्च कारणस्यापि कार्यस्थत्वाद्युक्तम् ।**

'ಯ ಪೃಥಿವ್ಯಾಂ ತಿಷ್ಠನ್' ಎಂಬಲ್ಲಿ ಪೃಥಿವೀಯು ಅಂತರ್ಯಾಮಿಗೆ ಆಧಾರವಾಗಿದೆಯೆಂದು ಹೇಳಲಾಗಿದೆ. ಪ್ರಕೃತಿಯು ಪೃಥಿವಿಯ ಸ್ವರೂಪವಾಗಿರುವುದರಿಂದ ಪ್ರಕೃತಿಗೆ ಪೃಥಿವಿಯು ಆಧಾರವಾಗಲು ಹೇಗೆ ಸಾಧ್ಯ? ಎಂದು ಪ್ರಶ್ನಿಸಬಾರದು. ಈ ರೀತಿಯ ಪ್ರಯೋಗವೇನೂ ತಪ್ಪಾಗುವುದಿಲ್ಲ. 'ವ್ಯಾಪ್ತಂ ಕಾರ್ಯೇಷು ಕಾರಣಂ' ಎಂಬ ಗೀತಾ ತಾತ್ಪರ್ಯದ ಮಾತಿನಲ್ಲಿ ಕಾರ್ಯದಲ್ಲಿ ಕಾರಣವಿದೆಯೆಂದು ಹೇಳಿದ್ದಾರೆ. 'ಪಟೇ ತಂತವಃ' (ವಸ್ತ್ರದಲ್ಲಿ ದಾರ) ಎಂಬ ಪ್ರತ್ಯಕ್ಷ ಪ್ರತೀತಿಯೂ ಇದೆ. ಕಾರ್ಯ-ಕಾರಣವೆಂಬ ಭೇದವಿದ್ದರೂ ಕಾರ್ಯವು ಕಾರಣವೆಂಬ ಪ್ರಯೋಗ ಮಾಡುವುದೇನೂ ತಪ್ಪಾಗುವುದಿಲ್ಲ.

**कार्यकारणयोश्च भिन्नाभिन्नत्वाद् भेदेन तदात्मकत्वं, भेदेन तत्स्थत्वं चाविरुद्धम् ।**

ಕಾರ್ಯ ಹಾಗೂ ಕಾರಣಗಳಿಗೆ ಭೇದಾಭೇದವಿರುವುದರಿಂದ ಅಭೇದವನ್ನು ವಿವಕ್ಷಿಸಿ ತದಾತ್ಮಕತ್ವವನ್ನು (ಕಾರ್ಯಾತ್ಮಕತ್ವ) ಹೇಳಬಹುದು. ಭೇದವನ್ನು ವಿವಕ್ಷಿಸಿ ಕಾರ್ಯಸ್ಥಿತತ್ವವನ್ನು ಹೇಳಬಹುದು. ಹೀಗೆ ಹೇಳುವುದರಿಂದ ಯಾವ ವಿರೋಧವೂ ಬರುವುದಿಲ್ಲ.

**''पृथिवीं यमयति'' इत्यादिनोक्तं च तन्नियम्यत्वं गौणं, कार्यस्य कारणाधीनत्वात् ।**

ಇನ್ನು "ಪೃಥಿವೀಂ ಯಮಯತಿ" ಎಂಬಲ್ಲಿ ಕೇಳಿಸುತ್ತಿರುವ ಪೃಥಿವ್ಯಾದಿನಿಯಾಮಕತ್ವವು ಪ್ರಕೃತಿಯಲ್ಲಿ ಕೂಡುವುದಿಲ್ಲವೆಂದು ಹೇಳಬೇಕು. ಆದರೆ ಆತ್ಮನ ಪ್ರವೃತ್ತಿಯು ಶರೀರದ ಮೂಲಕವೇ ಆಗಬೇಕು ಹೊರತು ನೇರವಾಗಿ ಆಗುವುದಿಲ್ಲ. ಆದ್ದರಿಂದ ಆತ್ಮನು ಪ್ರಕೃತ್ಯಧೀನವೆಂದು ಹೇಳಬಹುದು. ಕಾರ್ಯವು ಕಾರಣಾಧೀನವಾದ್ದರಿಂದ ಗೌಣವಾದ ನಿಯಮ್ಯತ್ವವನ್ನು ಪೃಥಿವಿಗೆ ಹೇಳುತ್ತೇವೆ ಎಂದಭಿಪ್ರಾಯ.

**"यमात्मा न वेद" इत्येतदपि "अप्रतर्क्यमविज्ञेयम्" इत्यादिना प्रकृतेर्दुर्ज्ञानत्वात् ।**

"ಯಮಾತ್ಮಾ ನ ವೇದ" ಎಂಬಲ್ಲಿ ಆತ್ಮನಿಂದ ಅಂತರ್ಯಾಮಿಯು ತಿಳಿಯಲು ಸಾಧ್ಯವಿಲ್ಲ ಎಂದು ಹೇಳಲಾಗಿದೆ. ಇದನ್ನೂ ಸಹ ಪ್ರಕೃತಿಯಲ್ಲಿ ಕೂಡಿಸಬಹುದು. ಹೇಗೆಂದರೆ 'ಅಪ್ರತರ್ಕ್ಯಮವಿಜ್ಞೇಯಂ' ಇತ್ಯಾದಿ ಮಾತುಗಳಂತೆ ಪ್ರಕೃತಿಯನ್ನು ಸಾಕಲ್ಯೇನ ತಿಳಿಯಲು ಯಾರಿಂದಲೂ ಸಾಧ್ಯವಿಲ್ಲವಾದ್ದರಿಂದ.

**"द्रष्टा श्रोता" इत्यादिनोक्तं च द्रष्टृत्वादिकं प्राकृतानामिन्द्रियाणां दर्शनादिसाधनत्वेन' करणे कर्तृत्वोपचाराद्वाऽभिमानिद्वारा वा प्रकृतौ युक्तम् ।**

ಅಂತರ್ಯಾಮಿಯಲ್ಲಿ "ದ್ರಷ್ಟಾ ಶ್ರೋತಾ" ಇತ್ಯಾದಿಯಾಗಿ ದ್ರಷ್ಟೃತ್ವ, ಶ್ರೋತೃತ್ವಾದಿಗಳು ಕೇಳಿಸುತ್ತಿವೆ. ಪ್ರಾಕೃತವಾದ ಇಂದ್ರಿಯಗಳು ದರ್ಶನಸಾಧನವಾದ್ದರಿಂದ ಪ್ರಕೃತಿಯನ್ನೇ 'ದ್ರಷ್ಟಾ ಶ್ರೋತಾ' ಇತ್ಯಾದಿಯಾಗಿ ಹೇಳಬಹುದು. ಏಕೆಂದರೆ ಕರಣದಲ್ಲಿ ಕರ್ತೃತ್ವದ ಪ್ರಯೋಗವನ್ನು ಔಪಚಾರಿಕವಾಗಿ ಮಾಡುವುದು ಕಂಡಿದೆ. (ಹಂತಾ ರಾಮಶರಃ ಇತ್ಯಾದಿ ಸ್ಥಳದಲ್ಲಿ) ಅಥವಾ ಅಭಿಮಾನಿಯಾದ ಜೀವನಲ್ಲಿ ದ್ರಷ್ಟೃತ್ವಾದಿಗಳಿರುವುದರಿಂದ ಅಭಿಮನ್ಯಮಾನವಾದ ಪ್ರಕೃತಿಯಲ್ಲೂ ಸಹ ದ್ರಷ್ಟೃತ್ವಾದಿಗಳನ್ನು ಹೇಳಬಹುದು.

**प्रकाशः –**

**"सोऽन्तर्यामी प्रकृतिर्भवेत्" इत्यादिटीकां विवृण्वन् "पृथिव्यादि, शरीरत्वं निरवकाशम्" इति न्यायविवरणोक्तशरीरित्वरूपनिरवकाशलिङ्गेन पूर्वपक्षद्वयं वक्तुं "नच स्मार्तम्" इति सूत्रसूचितं प्रकृतिपूर्वपक्षं तादवाह – एष त इति ।**

ವಿವರಣೆ - "ಸೋಽಂತರ್ಯಾಮೀ ಪ್ರಕೃತಿರ್ಭವೇತ್" ಇತ್ಯಾದಿ ಟೀಕೆಯಲ್ಲಿ ಈ ಅಧಿಕರಣದ ಪೂರ್ವಪಕ್ಷವನ್ನು ವಿವರಿಸುತ್ತಾರೆ. ಹಾಗೂ "ಪೃಥಿವ್ಯಾದಿ, ಶರೀರತ್ವಂ ನಿರವಕಾಶಮ್" ಎಂದು

ನ್ಯಾಯವಿವರಣದಲ್ಲಿ ಹೇಳಲ್ಪಟ್ಟ ಶರೀರತ್ವವೆಂಬ ನಿರವಕಾಶಲಿಂಗದಿಂದ ಎರಡು ಪೂರ್ವಪಕ್ಷಗಳನ್ನು ತೋರಿಸಲು ಹೊರಟಿದ್ದಾರೆ. ಪ್ರಕೃತ 'ನಚ ಸ್ಮಾರ್ತಮ್' ಎಂಬ ಸೂತ್ರದಿಂದ ಸೂಚಿತವಾದ ಪ್ರಕೃತಿಯೇ ಅಂತರ್ಯಾಮಿ ಆಗಿದೆಯೆಂಬ ಪೂರ್ವಪಕ್ಷವನ್ನು 'ಏಷ ತ ಇತಿ' ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ.

**प्रकाशः** – एतेन 'सः' इति टीकास्थतच्छब्दार्थो विवृतः । ''यस्य पृथिवी'' इत्यादि ''सर्वात्मकत्वात्'' इत्यन्तटीकार्थं निष्कृष्याह – **अन्तर्यामिणीति** । तत्रानुपपत्तिमाशङ्क्य निराह – **यद्यपीति** ।

ಹೀಗೆ ಹೇಳಿದ್ದರಿಂದ 'ಸೋಽಂತರ್ಯಾಮೀ'' ಇತ್ಯಾದಿ ಟೀಕೆಯಲ್ಲಿರುವ ತತ್‌ಶಬ್ದದ ಅರ್ಥವನ್ನು ವಿವರಿಸಿದಂತಾಯಿತು. ''ಯಸ್ಯ ಪೃಥಿವೀ'' ಎಂಬಲ್ಲಿಂದ ಪ್ರಾರಂಭಿಸಿ ''ಸರ್ವಾತ್ಮಕತ್ವಾತ್'' ಎಂಬಲ್ಲಿಯವರೆಗಿನ ಟೀಕೆಯ ಅಭಿಪ್ರಾಯವನ್ನು ಸಂಗ್ರಹಿಸಿ ವ್ಯಾಖ್ಯಾನಿಸುತ್ತಿದ್ದಾರೆ 'ಅಂತರ್ಯಾಮಿಣಿ' ಇತ್ಯಾದಿಯಾಗಿ. ಅಲ್ಲಿರುವ ಅನುಪಪತ್ತಿಯನ್ನು ಆಶಂಕಿಸಿ ನಿರಾಕರಿಸುತ್ತಿದ್ದಾರೆ 'ಯದ್ಯಪಿ' ಇತ್ಯಾದಿಯಾಗಿ.

**प्रकाशः** – **गौणमिति** । दिगाद्यभिमानिदेहस्य प्राकृतत्वाद् दिगादिरपि तथोच्यत इति भावः । **ब्रह्मणस्त्विति** । प्रकृतौ किञ्चिदेवामुख्यं, ब्रह्मणि तु सर्वमपीति न तद्ग्रह इत्यर्थः ।

ದಿಕ್ ಮೊದಲಾದವುಗಳಿಗೆ ಅಭಿಮಾನಿಯಾದ ಯಾವ ದೇವತೆಯಿದ್ದಾನೋ? ಅವನ ದೇಹವು ಪ್ರಾಕೃತವಾದ್ದರಿಂದ ದಿಕ್ ಅನ್ನು ಪ್ರಾಕೃತವೆಂದು ಶ್ರುತಿ ಹೇಳುತ್ತಿದೆ. ಹೀಗೆ ಗೌಣಾರ್ಥವನ್ನು ಮಾಡಬೇಕೆಂದು 'ಗೌಣಂ' ಎಂಬ ಪದದಿಂದ ಹೇಳಿದ್ದಾರೆ. ಪ್ರಕೃತಿಯು ಅಂತರ್ಯಾಮಿ ಎಂಬ ಪಕ್ಷದಲ್ಲಿ ದಿಕ್‌ಶಬ್ದಕ್ಕೆ ಮಾತ್ರ ಗೌಣಾರ್ಥ ಮಾಡಬೇಕು. ಬ್ರಹ್ಮನು ಸರ್ವಾಂತರ್ಯಾಮಿ ಎಂಬ ಪಕ್ಷದಲ್ಲಿ ಎಲ್ಲಾ ಪದಗಳಿಗೂ ಗೌಣಾರ್ಥ ಮಾಡಬೇಕಾಗುತ್ತದೆ. ಆದ್ದರಿಂದ ಬ್ರಹ್ಮನೆಂಬ ಅರ್ಥವನ್ನು ಸ್ವೀಕರಿಸಬಾರದೆಂದು ಅಭಿಪ್ರಾಯ.

**प्रकाशः** – ननु ब्रह्मणि योगाङ्गीकारे मुख्यं युज्यत इत्यत आह – **नचेति** । 'नित्ये' इति हेतुगर्भम् । ननु ब्रह्मपक्षे यथा दिगादिशरीरत्वमयुक्तं, प्रकृतिपक्षेऽपि तथा न युक्तं, पृथिव्यादिशरीरत्वं चोभयत्रापि युक्तमिति चेन्न, योगाद्रूढे रथकाराधिकरणन्यायेन बलवत्त्वादिति भावः ।

ಬ್ರಹ್ಮನಲ್ಲಿ ಯೋಗಾರ್ಥವನ್ನು ಅಂಗೀಕರಿಸಿದರೆ ಮುಖ್ಯಾರ್ಥವನ್ನು ಸ್ವೀಕರಿಸಿದಂತಾಗುತ್ತದಲ್ಲವೇ? ಎಂಬ ಪ್ರಶ್ನೆಗೆ 'ನಚ ನಿತ್ಯೇ' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. 'ನಿತ್ಯೇ' ಎಂಬ ಪದವು ಹೇತುವನ್ನೂ ಸಹ ಹೇಳುತ್ತಿರುವುದರಿಂದ ಹೇತುಗರ್ಭವಿಶೇಷಣವಾಗಿದೆ. ಬ್ರಹ್ಮಪಕ್ಷದಲ್ಲಿ ಯಾವರೀತಿಯಾಗಿ ದಿಗಾದಿಗಳಿಗೆ ಶರೀರತ್ವವು ಅಯುಕ್ತವಾಗಿದೆಯೋ, ಅದೇರೀತಿಯಾಗಿ ಪ್ರಕೃತಿ ಪಕ್ಷದಲ್ಲಿಯೂ ಸಹ ದಿಗಾದಿಶರೀರತ್ವವು ಅಯುಕ್ತವಾಗಿದೆ. ಇನ್ನು ಪೃಥಿವ್ಯಾದಿಗಳು ಶರೀರವಾಗಿವೆಯೆಂದು ಹೇಳಿದಾಗ ಬಾಧಕವಿಲ್ಲವೆಂಬುದು ಎರಡೂ ಪಕ್ಷದಲ್ಲಿ ಸಮಾನವಾಗಿದೆಯಲ್ಲವೇ? ಎಂದರೆ.

ಹೀಗೆ ಪ್ರಶ್ನಿಸಬಾರದು. ಯೋಗಕ್ಕಿಂತ ರೂಢಿಯೇ ಪ್ರಬಲವೆಂದು ರಥಕಾರಾಧಿಕರಣದ ನ್ಯಾಯದಿಂದ ಸಿದ್ಧವಾಗಿದೆ. ಆದ್ದರಿಂದ ಯೋಗಾರ್ಥವನ್ನು ಸ್ವೀಕರಿಸುವ ಬ್ರಹ್ಮನ ಪಕ್ಷವನ್ನು ಸ್ವೀಕರಿಸಬಾರದು.

**प्रकाशः** – इयता ग्रन्थेन आद्यादिचिन्तात्रयस्यपूर्वपक्षकोटयो हेतुहेतुमद्भावापन्नतया विवृताः । इदानीं 'बाधकं नास्ति' इत्यपि कोटीर्विवरीतुकामः किमत्र बाधकं

ಇದುವರೆಗಿನ ಗ್ರಂಥದಿಂದ ಮೊದಲಿನ ಮೂರು ಸಂಶಯಕೋಟಿಗಳಲ್ಲಿರುವ ಪೂರ್ವಪಕ್ಷಕೋಟಿಗಳಿಗೆ ಹೇತುಹೇತುಮದ್ಭಾವವನ್ನು ತೋರಿಸುವ ಮೂಲಕ ವಿವರಿಸಿದಂತಾಯಿತು. ಪ್ರಕೃತ ಬಾಧಕವೂ ಸಹ ಇರುವುದಿಲ್ಲವೆಂಬ ಕೋಟಿಗಳನ್ನು ವಿವರಿಸುವ ಇಚ್ಛೆಯಿಂದ ಬಾಧಕಗಳನ್ನು ಹೇಳುವುದಾದರೆ ಯಾವ ಬಾಧಕವೆಂದು ಪ್ರಶ್ನಿಸುತ್ತಿದ್ದಾರೆ.

**प्रकाशः** – ''यः पृथिव्यां तिष्ठन्'' ''य आत्मनि तिष्ठन्'' इत्युक्तपृथिव्याद्याधारत्वं वा, ''यमयति'' इत्युक्तपृथिव्यादिनियामकत्वं वा, ''आत्मानं यमयति'' इत्युक्तचेतननियामकत्वं वा, आत्माविदितत्वं वा, ''अदृष्टो द्रष्टाऽश्रुतः श्रोता अमतो मन्ता अविज्ञातो विज्ञाता'' इत्युक्तद्रष्टृत्वादिकं वेति विकल्पान् हृदि कृत्वा, ''नच ''पृथिव्यां तिष्ठन्'' इत्यादेरनुपपत्तिः'' इत्यादिटीकां विवृण्वन् क्रमेण निराह – य इति ।

'ಯಃ ಪೃಥಿವ್ಯಾಂ ತಿಷ್ಠನ್' 'ಯ ಆತ್ಮನಿ ತಿಷ್ಠನ್' ಎಂಬಲ್ಲಿ ಹೇಳಲ್ಪಟ್ಟ ಪೃಥಿವ್ಯಾದಿ ಆಧಾರತ್ವವು ಬಾಧಕವೋ, ಅಥವಾ 'ಯಮಯತಿ' ಎಂಬಲ್ಲಿ ಹೇಳಲ್ಪಟ್ಟ ಪೃಥಿವ್ಯಾದಿ ನಿಯಾಮಕತ್ವವು ಬಾಧಕವೋ? ಅಥವಾ ''ಆತ್ಮಾನಂ ಯಮಯತಿ'' ಎಂಬಲ್ಲಿ ಹೇಳಲ್ಪಟ್ಟ ಚೇತನನಿಯಾಮಕತ್ವವು ಬಾಧಕವೋ? ಅಥವಾ ಆತ್ಮಾವಿದಿತತ್ವವು ಬಾಧಕವೋ?. ''ಅದೃಷ್ಟೋ ದ್ರಷ್ಟಾऽಶ್ರುತಃ ಶ್ರೋತಾ ಅಮತೋ ಮಂತಾ ಅವಿಜ್ಞಾತೋ ವಿಜ್ಞಾತಾ'' ಎಂಬಲ್ಲಿ ಹೇಳಲ್ಪಟ್ಟ ದ್ರಷ್ಟೃತ್ವಾದಿಗಳು ಬಾಧಕವೋ? ಹೀಗೆ ಅನೇಕ ಮುಖಗಳಲ್ಲಿ ವಿಕಲ್ಪಗಳನ್ನು ಮಾಡುತ್ತಾ ಕ್ರಮವಾಗಿ ನಿರಾಕರಿಸುತ್ತಿದ್ದಾರೆ. ಮತ್ತು ''ನಚ ''ಪೃಥಿವ್ಯಾಂ ತಿಷ್ಠನ್'' ಇತ್ಯಾದೇರನುಪಪತ್ತಿಃ'' ಇತ್ಯಾದಿ ಟೀಕೆಯನ್ನೂ ಸಹ 'ಯಃ' ಇತ್ಯಾದಿ ಗ್ರಂಥದಿಂದ ವಿವರಿಸುತ್ತಿದ್ದಾರೆ.

**प्रकाशः** – इत्युक्तेरिति । 'कारणेषु स्थितं कार्यं व्याप्तं कार्येषु कारणम्' ।

इति पञ्चमे गीतातात्पर्योक्तेरित्यर्थः । प्रत्यक्षं चाह – पट इति । एतेन टीका उपलक्षणमिति सूचितम् । टीकोक्तेविरोधं ह्याशङ्क्य स्वयं समाधत्ते – कार्येति ।

'ಇತ್ಯುಕ್ತೇಃ' ಎಂದರೆ 'ಕಾರಣೇಷು ಸ್ಥಿತಂ ಕಾರ್ಯಂ ವ್ಯಾಪ್ತಂ ಕಾರ್ಯೇಷು ಕಾರಣಮ್' ಎಂಬ ಪಂಚಮಾಧ್ಯಾಯದ ಗೀತಾತಾತ್ಪರ್ಯದಲ್ಲಿ ಹೇಳಿದ್ದಾರೆಂದು ತಿಳಿಯಬೇಕು. 'ಕಾರಣವು ಕಾರ್ಯದಲ್ಲಿದೆ'

ಎಂಬ ವಿಚಾರವು ಪ್ರತ್ಯಕ್ಷದಿಂದಲೂ ಸಿದ್ಧವಾಗಿದೆಯೆಂದು 'ಪಟ' ಇತ್ಯಾದಿ ವಾಕ್ಯದಿಂದ ಸಮರ್ಥಿಸುತ್ತಿದ್ದಾರೆ. ಇದರಿಂದ ಆಗಮವನ್ನು ಪ್ರಮಾಣವನ್ನಾಗಿ ಹೇಳಿದ ಟೀಕೆಯು ಕೇವಲ ಉಪಲಕ್ಷಣವಾಗಿದೆಯೆಂದು ಸೂಚಿಸಿದಂತಾಯಿತು. ಟೀಕೆಯಲ್ಲಿರುವ ವಿರೋಧವನ್ನು ಮನಸ್ಸಿನಲ್ಲಿ ಆಶಂಕಿಸಿ ಸ್ವತಃ ತಾವೇ ಸಮಾಧಾನವನ್ನು ಹೇಳುತ್ತಿದ್ದಾರೆ. 'ಕಾರ್ಯಕಾರಣಯೋಃ' ಎಂಬ ವಾಕ್ಯದಿಂದ.

**प्रकाशः** – गौणतां व्यनक्ति – **कार्यस्येति** । ''आत्मानम्'' इति माध्यन्दिनपाठः। ''विज्ञानम्'' इत्येव काण्वपाठः । 'यम्' इति पृथिव्याद्यविदितत्वं त्वग्रे सावकाशयिष्यत इति भावः । 'इत्यादिना' गीतावाक्येनेत्यर्थः ।

ನಿಯಮಾರ್ಥವು ಗೌಣವಾಗಿದೆಯೆಂದು 'ಕಾರ್ಯಸ್ಯ' ಎಂಬ ವಾಕ್ಯದಿಂದ ಸ್ಪಷ್ಟಪಡಿಸುತ್ತಿದ್ದಾರೆ. ''ಆತ್ಮಾನಂ ಯಮಯತಿ'' ಎನ್ನುವುದು ಮಾಧ್ಯಂದಿನಪಾಠ, 'ವಿಜ್ಞಾನಂ' ಎಂಬುದು ಕಾಣ್ವಪಾಠ, 'ಯಮಾತ್ಮಾ ನ ವೇದ' ಎಂದು ಮುಂದಿನ ಗ್ರಂಥದಲ್ಲಿದೆ. ಇದರಿಂದ ಪೃಥಿವ್ಯಾದ್ಯವಿದಿತತ್ವವನ್ನು ಮುಂದೆ ಸಾವಕಾಶ ಮಾಡುತ್ತಾರೆಂದು ತಿಳಿಯಬೇಕು. 'ಇತ್ಯಾದಿನಾ' ಎಂಬ ಪದಕ್ಕೆ ಇದೇ ಮೊದಲಾದ ಗೀತಾವಾಕ್ಯದಿಂದ ಎಂದರ್ಥ.

**गुरुराजीयम्** – 'यस्य पृथिवीशरीरम्' इत्यादिनाऽन्तर्यामिणः पृथिव्यादिशरीरत्वश्रवणात्तस्य च प्रकृतानुपपत्तेरिति टीकाऽनुपपन्ना । प्रकृतेरिव विष्णोरपि पृथिव्यादिशरीरत्वोपपत्तेः । नच पृथिव्यादिशरीरत्वं नाम पृथिव्याद्यात्मकत्वं विवक्षितमिति वाच्यम् । तस्य च प्रकृतावसम्भवादित्यतः पृथि॰ याद्यात्मकत्वस्य प्रकृतावुपपत्तौ नियामकमाह – **अन्तर्यामिणीति** ।। पृथिव्याद्युपादान इति तत्र हेतूक्तिः । शरीरशब्दस्य स्वरूपेऽपि प्रयोगादित्येवं टीकायामुक्तम् । तत्र दृष्टान्तस्तु नोक्त इत्यतो दृष्टान्तं वदन् व्याख्याति – **शरीरशब्दस्येति** ।। ननु दिगादिशरीरत्वस्य प्रकृतावभावेऽपि गौणस्य दिगादिशरीरत्वस्य प्रकृतौ सत्त्वेन प्रकृतेरन्तर्यामित्ववद् ब्रह्मणोऽपि गौणस्य दिगादिशरीरत्वस्य सम्भवादन्तर्यामित्वं किं न स्यादित्यतः प्रकृतौ दिगादिशरीरत्वस्य गौणत्वेऽपि पृथिव्याद्युपादानत्वेन पृथिव्याद्यात्मकत्वरूपपृथिव्यादिशरीरत्वस्य मुख्यत्वेनान्तर्यामित्वसम्भवेऽपि विष्णौ दिगादिशरीरत्ववत्पृथिव्यादिशरीरत्वस्यापि गौणत्वेनान्तर्यामित्वं न सम्भवति इत्यभिप्रायेणाह – **ब्रह्मणस्त्विति** ।। ननु 'शीर्यते नित्यमेवास्मात्' इत्युक्तरीत्या यौगिकस्य पृथिव्यादिशरीरत्वस्य ब्रह्मण्यपि सम्भवाद्ब्रह्मणोऽप्यन्तर्यामिता स्यादित्यतः पृथिव्यादेर्यौगिकशरीरत्वसम्भवेऽपि दिगादेर्यौगिकमपि न सम्भवतीति न तस्यान्तर्यामित्वमित्यभिप्रेत्याह – **नचेति** ।। अत्र यद्यपि प्रकृतौ पृथिव्यादिशरीरत्वस्य

रूढत्ववद्विष्णौ पृथिव्यादिशरीरत्वस्य यौगिकत्वे न मुख्यत्वम् । ब्रह्मणि दिगादि-शरीरत्वस्यामुख्यत्ववत्प्रकृतावपि दिगादिशरीरत्वममुख्यमेवेति प्रकृतेरेवान्तर्यामित्व-मिति निर्णयो नोपपन्नः । तथापि रूढ्यपेक्षया योगस्यामुख्यत्वात्प्रकृतावेव रूढस्य शरीरत्वस्य सत्त्वाद्विष्णौ तु यौगिकत्वान्निर्णयोपपत्तिरिति हृदयम् । 'व्याप्तं कार्येषु कारणम्' इत्यादिन इत्यत्र टीकास्थादिशब्दार्थमाह – **पटे तन्तव इति** ।। **प्रतीतेश्चेति** ।। पृथिवीं यमयति इत्येतदुपचारेण नेतव्यम् इति टीका । तत्रोपचारे निमित्तानुक्तेस्तत्र निमित्तं वदन्नेव व्याख्याति – **पृथिवीं यमयतीत्यादिनोक्तं चेति** ।। पृथिवीं यमयतीत्येतदुपचारेण नेतव्यमित्येतदुपलक्षणम् ।। **आत्मानं यमयतीत्येतदपीति** ।। गौणमिति सम्बन्धः । ननु चान्तर्यामिणो 'द्रष्टा श्रोत' इत्यादिना द्रष्टृत्वमुच्यते । द्रष्टृत्वं च दर्शनकर्तृत्वम् तच्च बुद्धिपूर्वप्रवृत्तिः । तथा च प्रकृतेः कथमन्तर्यामित्वम् । तस्या अचेतनत्वेन द्रष्टृत्वासम्भवादित्यत आह – **द्रष्टेति** ।। मुख्यामुख्ययोर्मुख्ये सम्प्रत्यय इति न्यायेन सम्भवति मुख्यार्थेऽमुख्यार्थ-ग्रहणमन्याय्यमित्यरुचेराह – **अभिमानद्वारा वेति** ।। **अन्यथेति** ।। जीवमात्रमन्तर्यामीत्येव पूर्वपक्ष इत्यर्थः । पृथिव्यादिजीवस्यैवैतदन्तर्यामित्वमित्युक्तं टीकायाम् । तत्र पृथिव्यादिरूप एव जीवोऽस्तीति प्रतीयते । तदयुक्तम् । पृथि॰ यादिरूपस्य जीवस्याभावादित्यतः पृथिव्याद्यभिमानी जीवः पृथिव्यादिजीव इति मध यमपदलोपीसमासोऽत्राभिमत इत्यभिप्रेत्याह – **पृथिव्यादीति** ।। पृथिव्यादिजीवानामन्तर्यामित्वे पृथिव्यादिशरीरत्वादेस्तस्मिन्नति- सुघटत्वादिति टीकायां हेतुरुक्तः । तत्र कथमतिसुघटत्वमित्यत आह – **तान्प्रतीति** ।। तदसम्भवात् प्रत्येकं सर्वनियन्तृत्वासम्भवात् इत्त्यर्थः ।




ಪೂರ್ವಪಕ್ಷ ಹೀಗಿದೆ - "ಏಷ ತ ಆತ್ಮಾಂತರ್ಯಾಮೀ" ಎಂಬ ವಿಷಯ ವಾಕ್ಯದಲ್ಲಿ ಪ್ರತಿಪಾದ್ಯವಾದ ಅಂತರ್ಯಾಮಿಯು ಪ್ರಕೃತಿಯೇ ಆಗಿದೆ. ಪ್ರಕೃತಿಯನ್ನು ಅಂತರ್ಯಾಮಿ ಎಂದು ಹೇಳಿದರೆ ಶ್ರುತಿಯಲ್ಲಿ ಹೇಳಲ್ಪಟ್ಟ ಪೃಥಿವ್ಯಾದಿಗಳು ಶರೀರವಾಗಿವೆ ಎಂಬ ಮಾತನ್ನು ಸುಲಭವಾಗಿ ಕೂಡಿಸಬಹುದು. ಪೃಥಿವ್ಯಾದಿಗಳಿಗೆ ಉಪಾದಾನವಾದ್ದರಿಂದ ಸ್ವರೂಪ ಎಂಬರ್ಥದಲ್ಲಿ ಶರೀರಶಬ್ದವನ್ನು ಪ್ರಯೋಗಿಸುವುದು ಕಷ್ಟವಾಗುವುದಿಲ್ಲ. ಆದರೆ

ದಿಕ್ ಮೊದಲಾದವುಗಳು ಅಪ್ರಾಕೃತವಾದ್ದರಿಂದ ಪ್ರಕೃತಿಗೆ ಶರೀರಗಳಾಗಿವೆ ಎಂಬ ಮಾತನ್ನು ಕೂಡಿಸುವುದು ಸ್ವಲ್ಪ ಕಷ್ಟವಾಗುತ್ತದೆ. ಆದರೆ ಬ್ರಹ್ಮನು ಅಂತರ್ಯಾಮಿ ಎಂಬ ಪಕ್ಷವನ್ನು ಆಶ್ರಯಿಸಿದಾಗ ಪೃಥಿವ್ಯಾದಿಗಳು ಶರೀರವಾಗಿವೆ ಎಂಬ ಮಾತನ್ನೇ ಕೂಡಿಸಲು ಸಾಧ್ಯವಿಲ್ಲ. 'ಶೀರ್ಯಮಾಣತ್ವ' ಎಂಬ ಯೌಗಿಕಾರ್ಥವನ್ನು ಸ್ವೀಕರಿಸಲು ಹೊರಟರೆ ಅಪ್ರಾಕೃತವಾದ ದಿಗಾದಿಗಳಲ್ಲಿ ಅದೂ ಸಹ ತಪ್ಪಾಗುತ್ತದೆ. ಆದ್ದರಿಂದ ಪ್ರಕೃತಿಯನ್ನೇ ಅಂತರ್ಯಾಮಿಯೆನ್ನಬೇಕು. ದಿಕ್ ಮೊದಲಾದವನ್ನು ಶರೀರವೆಂದು ಹೇಳಿದ್ದರೆ ಗೌಣಾರ್ಥ ಮಾಡಬೇಕು.

ಪ್ರಕೃತಿಯನ್ನು ಅಂತರ್ಯಾಮಿ ಎಂದು ಹೇಳಿದಾಗ ಅನೇಕ ಬಾಧಕಗಳಿಗೆ ಅವಕಾಶವಿದೆ -

ಹೇಗೆಂದರೆ 'ಯಃ ಪೃಥಿವ್ಯಾಂ ತಿಷ್ಠನ್' ಎಂಬಲ್ಲಿ ಹೇಳಲ್ಪಟ್ಟ ಪೃಥಿವ್ಯಾದಿ ಆಧಾರತ್ವವು ಬಾಧಕವೋ. 'ಯಮಯತಿ' ಎಂಬಲ್ಲಿ ಹೇಳಲ್ಪಟ್ಟ ಪೃಥಿವ್ಯಾದಿ ನಿಯಾಮಕತ್ವವು ಬಾಧಕವೋ? ಅಥವಾ 'ಆತ್ಮಾನಂ ಯಮಯತಿ' ಎಂಬಲ್ಲಿ ಹೇಳಲ್ಪಟ್ಟ ಚೇತನ ನಿಯಾಮಕತ್ವವು ಬಾಧಕವೋ? ಅಥವಾ ಆತ್ಮಾವಿದಿತತ್ವವು ಬಾಧಕವೋ?. "ಅದೃಷ್ಟೋ ದ್ರಷ್ಟಾऽಶ್ರುತಃ ಶ್ರೋತಾ ಅಮತೋ ಮಂತಾ ಅವಿಜ್ಞಾತೋ ವಿಜ್ಞಾತಾ" ಎಂಬಲ್ಲಿ ಹೇಳಲ್ಪಟ್ಟ ದ್ರಷ್ಟೃತ್ವಾದಿಗಳು ಬಾಧಕಗಳೋ? ಎಂದು ಪ್ರಶ್ನಿಸುತ್ತೇವೆ ಎಂದರೆ ಈ ಯಾವ ಬಾಧಕಗಳಿಗೂ ಅವಕಾಶವಿಲ್ಲ. ಏಕೆಂದರೆ ಕಾರ್ಯದಲ್ಲಿ ಕಾರಣವಿದೆಯೆಂಬ ಪ್ರಯೋಗವು ಲೋಕದಲ್ಲಿ ಕಾಣಸುತ್ತಿದೆ. ಪೃಥಿವಿ ಹಾಗೂ ಪ್ರಕೃತಿಗಳಿಗೆ ಕಾರ್ಯಕಾರಣ ಭಾವವಿದ್ದರೂ ಆಧಾರಾಧೇಯಭಾವದಿಂದ ವ್ಯವಹರಿಸಬಹುದು.

ಇನ್ನು 'ಪೃಥಿವೀಂ ಯಮಯತಿ' ಎಂಬಲ್ಲಿ ಕೇಳಿಸುತ್ತಿರುವ ಪೃಥಿವ್ಯಾದಿನಿಯಾಮಕತ್ವವು ಪ್ರಕೃತಿಯಲ್ಲಿ ಕೂಡುವುದಿಲ್ಲವೆಂದು ಹೇಳಬೇಕು. ಆದರೆ ಆತ್ಮನ ಪ್ರವೃತ್ತಿಯು ಶರೀರದ ಮೂಲಕವೇ ಆಗಬೇಕೇ ಹೊರತು ನೇರವಾಗಿ ಆಗುವುದಿಲ್ಲ. ಆದ್ದರಿಂದ ಆತ್ಮನು ಪ್ರಕೃತ್ಯಧೀನವೆಂದು ಹೇಳಬಹುದು.

'ಯಮಾತ್ಮಾ ನ ವೇದ' ಎಂಬಲ್ಲಿ ಆತ್ಮನಿಂದ ಅಂತರ್ಯಾಮಿಯು ತಿಳಿಯಲು ಸಾಧ್ಯವಿಲ್ಲ ಎಂದು ಹೇಳಲಾಗಿದೆ. ಇದನ್ನೂ ಸಹ ಪ್ರಕೃತಿಯಲ್ಲಿ ಕೂಡಿಸಬಹುದು. ಏಕೆಂದರೆ 'ಅಪ್ರತರ್ಕ್ಯಮವಿಜ್ಞೇಯಂ' ಇತ್ಯಾದಿ ವಾಕ್ಯಗಳಂತೆ ಪ್ರಕೃತಿಯನ್ನು ಸಾಕಲ್ಯೇನ ತಿಳಿಯಲು ಯಾರಿಂದಲೂ ಸಾಧ್ಯವಿಲ್ಲ.

ಅಂತರ್ಯಾಮಿಯಲ್ಲಿ 'ದ್ರಷ್ಟಾ ಶ್ರೋತಾ' ಇತ್ಯಾದಿಯಾಗಿ ದ್ರಷ್ಟೃತ್ವ, ಶ್ರೋತೃತ್ವಾದಿಗಳು ಕೇಳಿಸುತ್ತಿವೆ. ಇವುಗಳು ಪ್ರಾಕೃತವಾದ ಇಂದ್ರಿಯಗಳು ದರ್ಶನ ಸಾಧನವಾದ್ದರಿಂದ ಪ್ರಕೃತಿಯನ್ನು ದ್ರಷ್ಟಾಶ್ರೋತಾ ಇತ್ಯಾದಿಯಾಗಿ ಹೇಳಬಹುದು. ಏಕೆಂದರೆ ಕರಣದಲ್ಲಿ ಕರ್ತೃತ್ವದ ಪ್ರಯೋಗವನ್ನು ಮಾಡುವುದು ಕಂಡಿದೆ. (ಹಂತಾ ರಾಮಶರಃ ಇತ್ಯಾದಿ ಸ್ಥಳದಲ್ಲಿ) ಅಥವಾ ಅಭಿಮಾನಿಯಾದ ಜೀವನಲ್ಲಿ ದ್ರಷ್ಟೃತ್ವಾದಿಗಳಿರುವುದರಿಂದ ಅಭಿಮನ್ಯಮಾನವಾದ ಪ್ರಕೃತಿಯಲ್ಲೂ ಸಹ ದ್ರಷ್ಟೃತ್ವಾದಿಗಳನ್ನು ಹೇಳಬಹುದು. ಆದ್ದರಿಂದ ಪ್ರಕೃತಿಯೇ ಅಂತರ್ಯಾಮಿಯೆಂದು ಹೇಳಿದಾಗ ಯಾವ ಅಡಚಣೆಯಿರುವುದಿಲ್ಲ.



• • • • •

## ಪ್ರಕೃತಿ, ಅಂತರ್ಯಾಮಿಗಳು ಪೂರ್ವಪಕ್ಷಕ್ಕೆ ವಿಷಯವಲ್ಲವೆಂಬ ಪರಕೀಯಪಕ್ಷ ನಿರಾಸ

### तात्पर्यचन्द्रिका

**अत्र यदुक्तम् उभाभ्यां जीवमात्रमन्तर्यामीत्येव पूर्वः पक्षः । नतु प्रकृतिः, तस्याः द्रष्टृत्वाद्यसम्भवादिति,**

ಅನುವಾದ - ಈ ಸಂದರ್ಭದಲ್ಲಿ ರಾಮಾನುಜರು ಹಾಗೂ ಅದ್ವೈತಿಗಳು ಜೀವಸಾಮಾನ್ಯನನ್ನೇ ಅಂತರ್ಯಾಮಿಯೆಂದು ಪೂರ್ವಪಕ್ಷ ಮಾಡುತ್ತಾರೆ. ಪ್ರಕೃತಿಯನ್ನು ಪೂರ್ವಪಕ್ಷ ಮಾಡುವುದಿಲ್ಲ. ಏಕೆಂದರೆ ಪ್ರಕೃತಿಯಲ್ಲಿ ದ್ರಷ್ಟೃತ್ವಾದಿಗಳು ಕೂಡುವುದಿಲ್ಲವೆಂದು ಅವರ ಅಭಿಪ್ರಾಯ.

**तन्न, त्वन्मते "तदैक्षत" इति श्रुतस्येक्षणस्य प्रकृतौ गौणत्वेनेक्षत्यधिकरण-पूर्वपक्षवत्, द्रष्टृत्वादेर्दर्शनरूपे ब्रह्मणि आरोपितत्वेन वा, मायाविशिष्टनिष्ठत्वेन वा अत्यत्रसिद्धान्तवच्च, पृथिवीशरीरत्वादिप्रकृतिलिङ्गेन प्रधानेऽपि द्रष्टृत्वादे-र्गौणत्वेनारोपितत्वेन वा, चेतनविशिष्टनिष्ठत्वेन वा पूर्वपक्षस्य सम्भवात् ।**

ಇದು ತಪ್ಪು. ಏಕೆಂದರೆ ಅದ್ವೈತಿಗಳೇ "ತದೈಕ್ಷತ" ಎಂಬ ಶ್ರುತಿಯಲ್ಲಿ ಕೇಳಿಸುತ್ತಿರುವ ಈಕ್ಷಣವನ್ನು (ಜ್ಞಾನವಿಷಯತ್ವವನ್ನು) ಪ್ರಕೃತಿಯಲ್ಲಿ ಗೌಣವಾಗಿ ಸ್ವೀಕರಿಸುತ್ತಾರೆ. ಹಾಗೇ ಸ್ವೀಕರಿಸಿ ಈಕ್ಷತ್ಯಧಿಕರಣದ ಪೂರ್ವಪಕ್ಷವನ್ನು ರಚಿಸಿದ್ದಾರೆ. ಅದರಂತೆ ಇಲ್ಲಿಯೂ ಸಹ ಪ್ರಕೃತಿಗೆ ದರ್ಶನ ವಿಷಯತ್ವವನ್ನು ಗೌಣವಾಗಿ ಕೂಡಿಸಬಹುದು. ಅಥವಾ ಜ್ಞಾನರೂಪನಾದ ಬ್ರಹ್ಮನಲ್ಲಿ ಜ್ಞಾನವಿಷಯತ್ವವೆಂಬ ದ್ರಷ್ಟೃತ್ವಾದಿ ಧರ್ಮಗಳು ಆರೋಪಿತವಾದ್ದರಿಂದ ಉಪಪನ್ನವಾಗುತ್ತವೆ. ಮತ್ತು ಮಾಯಾವಿಶಿಷ್ಟನಾದ ಬ್ರಹ್ಮನಲ್ಲಿ ದ್ರಷ್ಟೃತ್ವಾದಿಗಳನ್ನು ಹೇಳಬಹುದೆಂದು ಈ ಅಧಿಕರಣದಲ್ಲಿ ಸಿದ್ಧಾಂತ ಮಾಡುತ್ತಾರೆ. ಅದರಂತೆ ಪ್ರಕೃತದಲ್ಲಿಯೂ ಪೃಥಿವೀಶರೀರತ್ವ ಮೊದಲಾದ ಪ್ರಕೃತಿವಾಚಕ-ಲಿಂಗಗಳಿರುವುದರಿಂದ ಪ್ರಕೃತಿಯನ್ನೇ ಅಂತರ್ಯಾಮಿಯೆಂದು ಹೇಳಿ ದ್ರಷ್ಟೃತ್ವಾದಿಗಳನ್ನು ಗೌಣವಾಗಿ ಅಥವಾ ಆರೋಪಿತವಾಗಿ ಅಥವಾ ಚೇತನವಿಶಿಷ್ಟನಿಷ್ಠವಾಗಿ ಕೂಡಿಸಬಹುದು. ಹೀಗೆ ಪ್ರಕೃತಿಯೇ ಅಂತರ್ಯಾಮಿಯೆಂದು ಪೂರ್ವಪಕ್ಷ ಮಾಡಬಹುದು.

**अन्यथा "नच स्मार्तम् " इति सूत्रे प्रकृतेर्निषेधो न स्यात् ।**

ಹೀಗೊಪ್ಪದಿದ್ದರೆ "ನಚ ಸ್ಮಾರ್ತಮ್' ಎಂಬ ಸೂತ್ರದಲ್ಲಿ ಪ್ರಕೃತಿಯನ್ನು ನಿಷೇಧ ಮಾಡಿದ್ದು ತಪ್ಪಾಗುತ್ತದೆ. ಏಕೆಂದರೆ ಪ್ರಕೃತಿಯು ಪೂರ್ವಪಕ್ಷಕ್ಕೆ ವಿಷಯವಾಗದಿದ್ದ ಮೇಲೆ ಅದನ್ನು ಅಂತರ್ಯಾಮಿಯಲ್ಲವೆಂದು ನಿಷೇಧಿಸುವುದರಲ್ಲಿ ಅರ್ಥವಿಲ್ಲ.

ಪರಿಪೂರ್ಣಚಂದ್ರಿಕಾ

**पृथिव्याद्यभिमानिनां जीवानां वैतदन्तर्यामित्वं, तान्प्रति पृथिव्यादेः स्थूलशरीरत्वात् ।**

ಪ್ರಕೃತಿಯು ಪೂರ್ವಪಕ್ಷಕ್ಕೆ ವಿಷಯವಾದಂತೆ ಪೃಥಿವ್ಯಾದ್ಯಭಿಮಾನಿ ಜೀವರುಗಳೂ ಸಹ ಪೂರ್ವಪಕ್ಷಕ್ಕೆ ವಿಷಯವಾಗಬಹುದು. ಅಭಿಮಾನಿ ಜೀವರಿಗೆ (ದೇವತೆಗಳಿಗೆ) ಪೃಥಿವ್ಯಾದಿಗಳು ಸ್ಥೂಲಶರೀರವಾಗಿರುವುದರಿಂದ ಅವರಿಗೆ ಪೃಥಿವ್ಯಾದಿ ಶರೀರತ್ವವು ಯುಕ್ತವಾಗುತ್ತದೆ. ಆದ್ದರಿಂದ ಅಭಿಮಾನಿ ದೇವತೆಗಳೇ ಅಂತರ್ಯಾಮಿಗಳಾಗುತ್ತಾರೆ.

**अत्र भामत्यां ''यस्सर्वान् लोकानन्तरो यमयति'' इति श्रुतस्य सर्वनियन्तृत्वस्याभिमानिजीवेषु प्रत्येकमसम्भवात् नैवं पूर्वपक्ष इत्युक्तम् ।**

ಆದರೆ ಭಾಮತಿಯಲ್ಲಿ ಅಭಿಮಾನಿಜೀವರನ್ನು ಪೂರ್ವಪಕ್ಷಕ್ಕೆ ವಿಷಯರಾಗುತ್ತಾರೆಂಬುದನ್ನು ನಿರಾಕರಿಸಲಾಗಿದೆ. ಏಕೆಂದರೆ "ಯಸ್ಸರ್ವಾನ್ ಲೋಕಾನಂತರೋ ಯಮಯತಿ" ಎಂಬಲ್ಲಿ ಕೇಳಿಸುತ್ತಿರುವ ಸಕಲಜಗತ್ತಿನ ನಿಯಂತೃತ್ವವು ಪ್ರತಿಯೊಬ್ಬ ಅಭಿಮಾನಿ ಜೀವರಲ್ಲಿ (ದೇವತೆಗಳಲ್ಲಿ) ಕೂಡಲು ಸಾಧ್ಯವಿಲ್ಲದ ಕಾರಣ ಹಾಗೆ ಪೂರ್ವಪಕ್ಷ ಮಾಡಬಾರದೆಂದು ಭಾಮತಿಯ ಅಭಿಪ್ರಾಯ.

**तन्न, स्वाङ्गीकृतजीवमात्रपक्षेऽपि तदसम्भवात् । 'यः' इत्याद्येकवचनस्य समुदायपरत्वं त्वभिमानिपक्षेऽपि समम् ।**

ಭಾಮತಿಯ ಅಭಿಪ್ರಾಯ ಸರಿಯಲ್ಲ. ತಾವು ಯಾವ ಜೀವಸಾಮಾನ್ಯರನ್ನು ಪೂರ್ವಪಕ್ಷಕ್ಕೆ ವಿಷಯರೆಂದು ಹೇಳುತ್ತಾರೋ ಅಂತಹ ಜೀವರಲ್ಲಿಯೂ ಪ್ರತ್ಯೇಕವಾದ ನಿಯಂತೃತ್ವವು ಕೂಡದ ಕಾರಣ ದೋಷವು ಸಮಾನವಾಗಿದೆ. ಇನ್ನು 'ಯಃ' ಇತ್ಯಾದಿ ಸ್ಥಳದಲ್ಲಿರುವ ಏಕವಚನವು ಸಮುದಾಯಾಭಿಪ್ರಾಯದಲ್ಲಿರುವುದರಿಂ. ಮಿಲಿತರಾದ ಜೀವರಿಗೆ ನಿಯಾಮಕತ್ವ ಶಕ್ತಿಯನ್ನು ಹೇಳಬಹುದೆಂದು ಉತ್ತರಿಸಿದರೆ ಅಭಿಮಾನಿ ಜೀವರ ಪಕ್ಷದಲ್ಲಿಯೂ ಈ ಸಮಾಧಾನವನ್ನು ಹೇಳಬಹುದು.

**प्रत्युत जीवमात्रपक्ष एव युक्तः, ''यस्य पृथिवी शरीरम्'' इत्यादिनोक्तस्य पृथिव्याद्येकैकशरीरत्वस्य, ''यस्य प्राणः शरीरम्'' इत्यादिनोक्तस्य प्राणवाक्चक्षुश्श्रोत्रादिशरीरत्वस्य चायोगात् ।**

ಅಷ್ಟೇ ಅಲ್ಲದೆ ಜೀವಸಾಮಾನ್ಯನೆಂಬರ್ಥವೇ ಯುಕ್ತವಾಗಿದೆ. ಏಕೆಂದರೆ "ಯಸ್ಯ ಪೃಥಿವೀ ಶರೀರಂ" ಇತ್ಯಾದಿ ವಾಕ್ಯದಲ್ಲಿ ಹೇಳಲ್ಪಟ್ಟ ಪೃಥಿವ್ಯಾದಿಗಳು ಒಂದೊಂದೂ ಶರೀರವಾಗಿದೆಯೆಂಬುದು

ಜೀವನಿಗೆ ಕೂಡುವುದಿಲ್ಲ. ಮತ್ತು "ಯಸ್ಯ ಪ್ರಾಣಃ ಶರೀರಂ" ಎಂಬಲ್ಲಿ ಹೇಳಲ್ಪಟ್ಟ ಪ್ರಾಣ, ವಾಕ್, ಚಕ್ಷುಸ್, ಶ್ರೋತ್ರ ಮೊದಲಾದವುಗಳಷ್ಟೇ ಜೀವನಿಗೆ ಶರೀರವಾಗುವುದಿಲ್ಲ. ಇವುಗಳೆಲ್ಲದರ ಸಂಘಾತದಿಂದಷ್ಟೇ ಜೀವನ ಶರೀರವು ಉತ್ಪನ್ನವಾಗಿದೆ.

**तस्मादभिमानिनामेवान्तर्यामित्वं नतु विष्णोः, तस्य पृथिव्याद्यात्मकत्वतद्देहत्वयोरयोगात् ।**

ಆದ್ದರಿಂದ ಪೃಥಿವ್ಯಾದಿಗಳ ಅಭಿಮಾನಿಗಳನ್ನೇ ಅಂತರ್ಯಾಮಿ ಎಂದು ಹೇಳಬೇಕು ಹೊರತು, ವಿಷ್ಣುವನ್ನು ಅಂತರ್ಯಾಮಿಯೆಂದು ಹೇಳಬಾರದು. ಏಕೆಂದರೆ ವಿಷ್ಣುವಿಗೆ ಪೃಥಿವ್ಯಾದ್ಯಾತ್ಮಕತ್ವವಾಗಲೀ, ಪೃಥಿವ್ಯಾದಿಗಳೇ ದೇಹವಾಗಿದೆಯೆಂಬುದಾಗಲೀ ಕೂಡುವುದಿಲ್ಲ.

**नच तेन शीर्यमाणत्वादिना पृथिव्यादेस्तच्छरीरत्वं, योगाद्रूढेर्बलीयस्त्वात् ।**

ರೂಢ್ಯರ್ಥವನ್ನು ಸ್ವೀಕರಿಸಲು ಬಾರದಿದ್ದರೂ ಶೀರ್ಯಮಾಣತ್ವವೆಂಬ ಯೋಗಾರ್ಥವನ್ನು ಸ್ವೀಕರಿಸುವ ಮೂಲಕ ವಿಷ್ಣುವಿಗೆ ಪೃಥಿವ್ಯಾದಿಗಳು ಶರೀರವಾಗಿದೆಯೆಂದು ಹೇಳಬಹುದಲ್ಲವೇ ? ಎಂದು ಪ್ರಶ್ನಿಸಬಾರದು. ಯೋಗಾರ್ಥಕ್ಕಿಂತ ರೂಢ್ಯರ್ಥವೇ ಪ್ರಬಲವಾಗಿರುತ್ತದೆ.

**"यं पृथिवी न वेद" इत्युक्तं पृथिव्यादिना अविदितत्वं च तस्य जडत्वादभिमानिन्यपि युक्तम् ।**

ಬಾಧಕವಿದ್ದಾಗ ರೂಢ್ಯರ್ಥವನ್ನು ಬಿಡಬಹುದು ಎಂದಿದೆ. ಪ್ರಕೃತ ಪೃಥಿವ್ಯಾದಿಗಳಿಂದ ತಿಳಿಯಲು ಸಾಧ್ಯವಿಲ್ಲವೆಂದು ಹೇಳಿದ್ದರಿಂದ ಅಭಿಮಾನಿ ಚೇತರನ್ನು ವಿವಕ್ಷಿಸಬಾರದೆಂದು ತಿಳಿಯುತ್ತದೆ. ಹೀಗೆ ಪೃಥಿವ್ಯಾದಿನಾಅವಿದಿತತ್ವಂ ಎಂಬ ಬಾಧಕವಿರುವುದರಿಂದ ರೂಢ್ಯರ್ಥವನ್ನು ಬಿಟ್ಟು ಯೋಗಾರ್ಥವನ್ನು ಸ್ವೀಕರಿಸಬಹುದಲ್ಲವೇ? ಎಂದು ಪ್ರಶ್ನಿಸಬಾರದು. ಪೃಥಿವ್ಯಾದಿಗಳು ಜಡವಾದ್ದರಿಂದ ತಿಳುವಳಿಕೆಯು ಅವುಗಳಲ್ಲಿ ಹೇಳಲು ಸಾಧ್ಯವಿಲ್ಲ. ಆದ್ದರಿಂದ ಪೃಥಿವ್ಯಾದಿನಾಅವಿದಿತತ್ವವನ್ನು ವಿಷ್ಣುವಿನಲ್ಲಿ ಹೇಳುವಂತೆ ಅಭಿಮಾನಿಗಳಾದ ಚೇತನರಲ್ಲಿಯೂ ಹೇಳಬಹುದು.

**"यम् आत्मा न वेद" इति चेतनस्य पृथगुक्तेः पृथिव्यादिशब्दो नाभिमानिचेतनपरः ।**

'ಯಂ ಪೃಥಿವೀ ನ ವೇದ' ಎಂಬಲ್ಲಿರುವ ಪೃಥಿವೀ ಮುಂತಾದ ಶಬ್ದವು ಜಡಪರವಾಗಿದೆಯೆನ್ನಲು ಕಾರಣವು ಹೀಗಿದೆ - 'ಯಮ್ ಆತ್ಮಾ ನ ವೇದ' ಎಂಬಲ್ಲಿ ಚೇತನರನ್ನು ಪ್ರತ್ಯೇಕವಾಗಿ ವಿವಕ್ಷಿಸಿದ್ದರಿಂದ ಇಲ್ಲಿರುವ ಪೃಥಿವೀ ಮುಂತಾದ ಶಬ್ದದಿಂದ ಅಭಿಮಾನಿ ಚೇತರನ್ನು ವಿವಕ್ಷಿಸಬಾರದು.

ಪರಿಪೂರ್ಣಚಂದ್ರಿಕಾ

**"यः पृथिव्या अन्तरः" इत्युक्तमन्तरत्वं यदि भिन्नत्वं, यदि वाऽन्तस्स्थत्वं, द्वयमपि पृथिव्यादिशरीरकेऽभिमानिन्यपि युक्तम् ।**

ಯೋಗಾರ್ಥವನ್ನು ಸ್ವೀಕರಿಸಲು "ಯಃ ಪೃಥಿವ್ಯಾ ಅಂತರಃ" ಎಂಬಲ್ಲಿ ಕೇಳಿಸುತ್ತಿರುವ ಅಂತರತ್ವವನ್ನು ಬಾಧಕವೆಂದು ಹೇಳಬಹುದಲ್ಲವೇ ? ಎಂದು ಪ್ರಶ್ನಿಸಬಾರದು. ಇಲ್ಲಿರುವ ಅಂತರತ್ವವು ಭಿನ್ನತ್ವ ಅಥವಾ ಅಂತಃಸ್ಥತ್ವ ಎಂಬರ್ಥದಲ್ಲಿರುವುದಾದರೆ ಪೃಥಿವ್ಯಾದಿಗಳನ್ನೇ ಶರೀರವಾಗಿ ಹೊಂದಿರುವ ಅಭಿಮಾನಿ ಚೇತನರಲ್ಲೂ ಅದು ಯುಕ್ತವಾಗುತ್ತದೆ.

**"य आत्मनि तिष्ठन् आत्मानं यमयति" इत्येतदपि तत्त्वाभिमानिनाम् अस्मदाद्यात्मनियामकत्वाद् युक्तम् ।**

"ಯ ಆತ್ಮನಿ ತಿಷ್ಠನ್" ಎಂಬಲ್ಲಿ ಹೇಳಲ್ಪಟ್ಟ ಚೇತನ ನಿಷ್ಠತ್ವವು "ಆತ್ಮಾನಂ ಯಮಯತಿ" ಎಂಬಲ್ಲಿ ಹೇಳಲ್ಪಟ್ಟ ಚೇತನ ನಿಯಾಮಕತ್ವವು ವಿಷ್ಣುವಿನಲ್ಲಿ ಬರುವಂತೆ ತತ್ತ್ವಾಭಿಮಾನಿದೇವತೆಗಳಲ್ಲೂ ಸಹ ಯುಕ್ತವಾಗುತ್ತದೆ. ಅವರೂ ಸಹ ನಮ್ಮೆಲ್ಲರನ್ನೂ ನಿಯಮನ ಮಾಡುತ್ತಾರೆ.

**"यमात्मा न वेद" इति तु अभिमानिजीवानां दुर्ज्ञानत्वाद् युक्तम् ।**

"ಯಮಾತ್ಮಾ ನ ವೇದ" ಎಂಬ ಮಾತೂ ಸಹ ಇಂದ್ರಿಯಾಭಿಮಾನಿ ಜೀವರನ್ನು (ತತ್ತ್ವಾಭಿಮಾನಿ ದೇವತೆಗಳನ್ನು) ತಿಳಿಯುವುದು ಕಷ್ಟವಾದ್ದರಿಂದ ಆತ್ಮರಿಂದ ಅವಿದಿತತ್ವವು ವಿಷ್ಣುವಿನಂತೆ ಅಭಿಮಾನಿ ಜೀವರಲ್ಲೂ (ದೇವತೆಗಳಲ್ಲೂ) ಯುಕ್ತವಾಗುತ್ತದೆ.

**यद्वा – "यः पृथिव्याम्" इत्यादाविव "य आत्मनि" इत्यत्रापि आत्माभिमानिजीव एवात्मान्तर्यामित्वेनोच्यत इति ।।**

ಅಥವಾ "ಯಃ ಪೃಥಿವ್ಯಾಂ" ಎಂಬಲ್ಲಿ ಯಾವರೀತಿಯಾಗಿ ಅಂತರ್ಯಾಮಿಯಾದ ಜೀವನು ಪ್ರತಿಪಾದ್ಯನಾಗಿದ್ದಾನೋ, ಅದರಂತೆ "ಯ ಆತ್ಮನಿ" ಎಂಬಲ್ಲಿಯೂ ಸಹ ಆತ್ಮನಿಗೆ ಅಭಿಮಾನಿಯಾದ ಜೀವನೇ ಅಂತರ್ಯಾಮಿಯೆಂದು ಪ್ರತಿಪಾದ್ಯನಾಗಿದ್ದಾನೆ. ಆದ್ದರಿಂದ ಹಿಂದೆ ಪೃಥಿವ್ಯಾದಿ ಶಬ್ದಗಳಿಗೆ ಅಭಿಮಾನಿಪರವಾಗಿ ಅರ್ಥೈಸಿದಂತೆ ಇಲ್ಲಿಯೂ ಸಹ ಆತ್ಮಶಬ್ದಕ್ಕೆ ಅಭಿಮಾನಿಪರವಾಗಿ ಅರ್ಥೈಸಿದಂತಾಗುತ್ತದೆ.

**प्रकाशः –**

**अत्र यदुक्तमिति** । स्पष्टयिष्यते चैतदग्रे । **गौणत्वेनेति** । "गौणश्चेत्" इति सूत्रे द्वाभ्यामपि गौणत्वेनोक्तत्वादिति भावः । **प्रधानेऽपि द्रष्टृत्वादेर्गौणत्वेनेति** ।

**ವಿವರಣೆ** - ಈ ಅಧಿಕರಣದ ಪೂರ್ವಪಕ್ಷವನ್ನು ಮಾಡುವಾಗ ಅದ್ವೈತಿಗಳು ಹಾಗೂ ರಾಮಾನುಜರು ಜೀವನೇ ಅಂತರ್ಯಾಮಿ ಎಂದು ಪೂರ್ವಪಕ್ಷ ಮಾಡುತ್ತಾರೆ. ಈ ವಿಷಯವನ್ನು ಮುಂದೆ ಸ್ಪಷ್ಟಪಡಿಸಲಾಗುತ್ತದೆ. 'ಗೌಣತ್ವೇನ' ಎಂದರೆ 'ಗೌಣಶ್ಚೇನ್ನಾತ್ಮಶಬ್ದಾತ್' ಎಂಬ ಸೂತ್ರದಲ್ಲಿ ಇಬ್ಬರೂ ಸಹ ಪ್ರಕೃತಿಗೆ ಜ್ಞಾನವಿಷಯತ್ವವನ್ನು ಗೌಣವಾಗಿ ಅಂಗೀಕರಿಸಿದ್ದಾರೆಂದು ತಿಳಿಯಬೇಕು. ಗ್ರಂಥದಲ್ಲಿ 'ಪ್ರಧಾನೇಽಪಿ ದ್ರಷ್ಟೃತ್ವಾದೇರ್ಗೌಣತ್ವೇನ' ಎಂದು ಹೇಳಿದ್ದಾರೆ. ಇದರಿಂದ ಪ್ರಧಾನದಲ್ಲಿ (ಪ್ರಕೃತಿ) ದ್ರಷ್ಟೃತ್ವಾದಿಗಳನ್ನು ಗೌಣವಾಗಿ ಸ್ವೀಕರಿಸಿದ್ದಾರೆಂದು ತಿಳಿಯಬೇಕು.

**प्रकाशः** – नन्वक्षराधिकरणटीकायां "द्रष्टृत्वादिश्रवणाज्जडप्रकृतेर्न सन्देहनिविष्टत्वम्" इति वक्ष्यत इति तद्विरुध्यत इति चेन्न,

ಪ್ರಶ್ನೆ - ಅಕ್ಷರಾಧಿಕರಣದ ಟೀಕೆಯಲ್ಲಿ ಜಡಪ್ರಕೃತಿಯಲ್ಲಿ ದ್ರಷ್ಟೃತ್ವಾದಿಗಳು ಕೇಳಿಸುತ್ತಿರುವುದರಿಂದ ಅದನ್ನು ಸಂದೇಹಕೋಟಿಯಲ್ಲಿ ನಿವೇಶಿಸಿಲ್ಲವೆಂದು ಹೇಳಿದ್ದಾರೆ. ಅಂದರೆ ದ್ರಷ್ಟೃತ್ವಾದಿಗಳು ಜಡವಸ್ತುವಿನಲ್ಲಿ ಗೌಣವಾಗಿಯೂ ಸಹ ಬರುವುದಿಲ್ಲವೆಂದು ಒಪ್ಪಿಕೊಂಡಂತಾಯಿತು. ಈಗ ಅದಕ್ಕೆ ವಿರುದ್ಧವಾಗಿ ಜಡವಾದ ಪ್ರಕೃತಿಯಲ್ಲಿ ದ್ರಷ್ಟೃತ್ವವನ್ನು ಹೇಳಿದರೆ ಅದರ ವಿರೋಧಬರುತ್ತದಲ್ಲವೇ?

**प्रकाशः** – तत्र द्रष्टृत्वादेः प्रथमतश्श्रवणादिह चरमश्रुतद्रष्टृत्वादेः प्रथमावगत-पृथिव्यादिशरीरस्थत्वपृथिवीस्थत्वादिना लिङ्गेन कथञ्चिन्नेयत्वादिति तात्पर्यात् । अत एव तत्र वक्ष्यति टीकाकारः "उत्तराधिकरणे त्वीक्षणस्य प्रथमाप्रतीतेर-स्त्यवकाशः" इतीति भावः ।

किमर्थमेवमित्यतः विपक्षे सूत्रविरोधमाह – **अन्यथेति** ।

ಉತ್ತರ - ಅಕ್ಷರಾಧಿಕರಣದ ವಿಷಯವಾಕ್ಯದಲ್ಲಿ ದ್ರಷ್ಟೃತ್ವಾದಿಗಳು ಮೊದಲು ಕೇಳಿಸುತ್ತಿರುವುದರಿಂದ ಯಥಾರ್ಥವಾಗಿಯೇ ಅರ್ಥೈಸಬೇಕಾಗುತ್ತದೆ. ಆದರೆ ಈ ಅಧಿಕರಣದ ವಿಷಯವಾಕ್ಯದಲ್ಲಿ ದ್ರಷ್ಟೃತ್ವಾದಿಗಳು ಕೊನೆಯಲ್ಲಿ ಕೇಳಿಸುತ್ತಿವೆ. ಆದ್ದರಿಂದ ಚರಮ ಶ್ರುತವಾದ ದೃಷ್ಟೃತ್ವಾದಿಗಳು ಮೊದಲು ಕೇಳಿಸುತ್ತಿರುವ ಪೃಥಿವ್ಯಾದಿಶರೀರಸ್ಥತ್ವ ಮತ್ತು ಪೃಥಿವೀಸ್ಥತ್ವ ಮೊದಲಾದ ಲಿಂಗಗಳ ಬಲದಿಂದ ಕಥಂಚಿತ್ ಕೂಡಿಸಬೇಕಾಗುತ್ತದೆ ಎಂದು ಅಭಿಪ್ರಾಯ. ಆದ್ದರಿಂದ ಪೂರ್ವಾಪರವಿರೋಧವಿಲ್ಲ. ಆದ್ದರಿಂದಲೇ ಅಕ್ಷರಾಧಿಕರಣದಲ್ಲಿ ಟೀಕಾರಾಯರು "ಉತ್ತರಾಧಿಕರಣೇ ತ್ವೀಕ್ಷಣಸ್ಯ ಪ್ರಥಮಾಪ್ರತೀತೇರಸ್ತ್ಯವಕಾಶಃ" ಎಂದು ಜ್ಞಾನವಿಷಯತ್ವವು ಪ್ರಥಮಪ್ರತೀತವಾಗದ ಕಾರಣ ಬೇರೆ ರೀತಿಯಲ್ಲಿ ಅರ್ಥೈಸಬಹುದೆಂದು ಹೇಳಿದ್ದಾರೆ.

ಈ ಅರ್ಥವನ್ನೇಕೆ ಒಪ್ಪಬೇಕು ? ಎಂಬ ಪ್ರಶ್ನೆಗೆ ವಿಪಕ್ಷದಲ್ಲಿ ಸೂತ್ರವಿರೋಧವನ್ನು ಹೇಳುತ್ತಿದ್ದಾರೆ. 'ಅನ್ಯಥಾ' ಇತ್ಯಾದಿಯಾಗಿ.

ಪರಿಪೂರ್ಣಚಂದ್ರಿಕಾ

**प्रकाशः** – यदत्रोक्तं श्रुतप्रकाशे तदग्रे निरसिष्यते । एवं पृथिव्यादिशरीरत्वं नाम तदात्मकत्वमित्युपेत्य एकः पूर्वपक्षः टीकाविवरणेन विवृतः ।

ಈ ವಿಷಯದಲ್ಲಿ ಶ್ರುತಪ್ರಕಾಶದ ಅಭಿಪ್ರಾಯವನ್ನು ಮುಂದೆ ನಿರಾಕರಿಸುತ್ತಾರೆ. ಹೀಗೆ 'ಪೃಥಿವ್ಯಾದಿ ಶರೀರತ್ವ' ಎಂಬುದಕ್ಕೆ 'ಪೃಥಿವ್ಯಾದಿ ಸ್ವರೂಪತ್ವ' ಎಂಬರ್ಥವನ್ನು ಸ್ವೀಕರಿಸಿ ಒಂದು ಪೂರ್ವಪಕ್ಷ ಟೀಕೆಯನ್ನು ವಿವರಿಸಿದ್ದಾಯಿತು.

**प्रकाशः** – इदानीं तद्देहत्वमर्थमुपेत्य "शारीरश्च" इति सूत्रसूचितं द्वितीयं पक्षं "पृथिव्यादिजीवस्य वैतदन्तर्यामित्वम्" इत्यादिटीकां विवृण्वन्नाह – पृथिव्यादीति ।

ಪ್ರಕೃತ 'ಪೃಥಿವ್ಯಾದಿ ಶರೀರ' ಎಂಬ ಶಬ್ದಕ್ಕೆ ಪೃಥಿವ್ಯಾದಿಗಳೇ ದೇಹವಾಗಿವೆಯೆಂಬರ್ಥವನ್ನು ಸ್ವೀಕರಿಸಿ 'ಶಾರೀರಶ್ಚ' ಎಂಬ ಸೂತ್ರದಿಂದ ಸೂಚಿತವಾದ ಎರಡನೇ ಪೂರ್ವಪಕ್ಷವನ್ನು 'ಪೃಥಿವ್ಯಾದಿ' ಎಂಬ ವಾಕ್ಯದಿಂದ ವಿವರಿಸುತ್ತಿದ್ದಾರೆ. ಇದರಿಂದ "ಪೃಥಿವ್ಯಾದಿಜೀವಸ್ಯ ವೈತದಂತರ್ಯಾಮಿತ್ವಂ' ಎಂಬಿತ್ಯಾದಿ ಟೀಕೆಯನ್ನು ವ್ಯಾಖ್ಯಾನಿಸುತ್ತಿದ್ದಾರೆ.

**प्रकाशः** – भाष्यसूत्रानुरोधेन टीकायामेकवचनोक्तावपि तज्जात्यभिप्रायमिति भावेन बहुवचनोक्तिः । अन्यथा भामतीमतरीत्या टीकायामपि जीवसामान्यमेवाभिमतमिति मन्दस्य शङ्का स्यात् । जीवसामान्यपक्षश्चाग्रेतनदोषदुष्टः ।

ಭಾಷ್ಯ ಹಾಗೂ ಸೂತ್ರಕ್ಕೆ ಅನುಸಾರಿಯಾಗಿ ಟೀಕೆಯಲ್ಲಿ ಏಕವಚನವನ್ನು ಹೇಳಿದ್ದರೂ ಸಹ ಅದನ್ನು ಸಮುದಾಯಾರ್ಥದಲ್ಲಿರುವ ಏಕವಚನವೆಂದು ತಿಳಿಯಬೇಕು. ಈ ಅಭಿಪ್ರಾಯದಿಂದ 'ಜೀವಾನಾಂ' ಎಂಬುದಾಗಿ ಗ್ರಂಥಕಾರರು ಚಂದ್ರಿಕಾದಲ್ಲಿ ಬಹುವಚನವನ್ನು ಹೇಳಿದ್ದಾರೆ. ಇಲ್ಲದಿದ್ದರೆ ಭಾಮತೀ ಮತದ ಪ್ರಕಾರ ಟೀಕೆಯಲ್ಲೂ ಸಹ ಅಭಿಮಾನಿಜೀವನನ್ನು ವಿವಕ್ಷಿಸದೇ ಕೇವಲ ಜೀವಸಾಮಾನ್ಯನನ್ನು ವಿವಕ್ಷಿಸಲಾಗಿದೆಯೆಂದು ಮಂದಜನರು ಶಂಕಿಸಬೇಕಾದೀತು. ಆದರೆ ಜೀವಸಾಮಾನ್ಯವೆಂಬ ಪಕ್ಷವು ಅನೇಕ ದೋಷ ದುಷ್ಟವಾಗಿದೆಯೆಂದು ಮುಂದೆ ನಿರಾಕರಿಸುತ್ತಾರೆ.

**प्रकाशः** – अत एव टीकायामुत्तरत्र "प्रकृत्यादिलिङ्गेन तेषामन्तर्यामित्वम्" इति "अतोऽन्तर्यामी न विष्णुः, अपि तु प्रकृत्यादयः" इति च बहुवचनोक्तिः । अन्यथा 'तस्य' इति 'प्रकृत्यादिः' इत्येव च निर्देशः स्यादिति भावः ।

ಆದ್ದರಿಂದಲೇ ಮುಂದಿನ ಟೀಕೆಯಲ್ಲಿ "ಪ್ರಕೃತ್ಯಾದಿಲಿಂಗೇನ ತೇಷಾಮಂತರ್ಯಾಮಿತ್ವಂ" ಎಂಬಲ್ಲಿ 'ತೇಷಾಂ' ಎಂಬ ಪದದಿಂದ; "ಅತೋಽಂತರ್ಯಾಮೀ ನ ವಿಷ್ಣುಃ, ಅಪಿ ತು ಪ್ರಕೃತ್ಯಾದಯಃ" ಎಂಬಲ್ಲಿ 'ಪ್ರಕೃತ್ಯಾದಯಃ' ಎಂದು ಬಹುವಚನವನ್ನೇ ಪ್ರಯೋಗಿಸಿದ್ದಾರೆ. ಒಂದು ವೇಳೆ ಏಕತ್ವವೇ ವಿವಕ್ಷಿತವಾಗಿದ್ದಲ್ಲಿ

'ತೇಷಾಂ' ಎಂದು ಹೇಳದೆ 'ತಸ್ಯ' ಎಂದು ಹೇಳುತ್ತಿದ್ದರು. ಹಾಗೂ 'ಪ್ರಕೃತ್ಯಾದಯಃ' ಎಂದು ಹೇಳುವ ಬದಲು 'ಪ್ರಕೃತ್ಯಾದಿಃ' ಎಂದು ಹೇಳುತ್ತಿದ್ದರು.

**प्रकाशः** – अत्र परोक्तं बाधकमाशङ्क्याह – **अत्रेति । नैवमिति ।** किन्तु जीवसामान्यमित्यर्थः । **तदिति ।** सर्वलोकनियन्तृत्वस्य प्रत्येकं जीवे असम्भवादित्यर्थः । न प्रत्येकं जीवानां तन्नियन्तृत्वं, किन्तु मिलितानां, ''यस्सर्वान् लोकान्'' इत्येकवचनं समुदायाशयमित्यत आह – **य इति ।**

ಅಭಿಮಾನಿ ಜೀವರೆಂಬ ಪರೋಕ್ತವಾದ ಅರ್ಥವನ್ನು ವಿವಕ್ಷಿಸಿದಾಗ ಬರುವ ಬಾಧಕವನ್ನು ಆಶಂಕಿಸುತ್ತಿದ್ದಾರೆ 'ಅತ್ರ' ಇತ್ಯಾದಿಯಾಗಿ. 'ನೈವಂ' ಎಂದರೆ ಅಭಿಮಾನಿಜೀವನನ್ನು ವಿವಕ್ಷಿಸಬಾರದು ಹೊರತಾಗಿ ಜೀವಸಾಮಾನ್ಯನನ್ನು ವಿವಕ್ಷಿಸಬೇಕೆಂದು ಅರ್ಥ. 'ತದಸಂಭವಾತ್' ಎಂಬ ಪದಕ್ಕೆ ಸರ್ವಲೋಕನಿಯಂತೃತ್ವವು ಪ್ರತ್ಯೇಕವಾಗಿ ಜೀವನಲ್ಲಿ ಅಸಂಭವವಾಗಿದೆ ಎಂದರ್ಥ. ಒಬ್ಬೊಬ್ಬ ಜೀವನೇ ಎಲ್ಲವನ್ನೂ ನಿಯಂತ್ರಿಸಲಾರ. ಆದರೆ ಒಟ್ಟಿಗೆ ಎಲ್ಲಾ ಜೀವರೂ ಸೇರಿ ಜಗತ್ತನ್ನು ನಿಯಂತ್ರಿಸಬಹುದು. ''ಯಸ್ಸರ್ವಾನ್ ಲೋಕಾನ್'' ಎಂಬಲ್ಲಿರುವ 'ಯಃ' ಎಂಬ ಪದವು ಸಮುದಾಯಾರ್ಥದಲ್ಲಿ ಏಕವಚನವನ್ನು ಹೊಂದಿದೆಯಲ್ಲವೇ? ಎಂಬ ಪ್ರಶ್ನೆಗೆ 'ಯ ಇತಿ' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

**प्रकाशः** – अभिमानिनामप्युक्तरीत्या तत्तल्लोकनियामकत्वेन मिलित्वा सर्वलोकनियन्तृत्वोपपत्तेरित्यर्थः । **प्रत्युतेति ।** प्राणचक्षुरादीन्द्रियपृथिव्यादिभूतसङ्घातशरीरकत्वात् जीवस्य पृथिव्यादिमात्रशरीरकत्वमयुक्तं, अभिमानिनां तु तत्तन्मात्रनियामकत्वेन तत्तन्मात्रस्थूलशरीरकत्वं युक्तमिति भावः ।

ಅಭಿಮಾನಿಜೀವರಿಗೂ ಆಯಾಯಾ ಲೋಕವನ್ನು ನಿಯಮನ ಮಾಡುವ ಮೂಲಕ ಸರ್ವಲೋಕನಿಯಂತೃತ್ವವನ್ನು ಹೇಳಬಹುದೆಂದು ಅರ್ಥ. 'ಪ್ರತ್ಯುತ' ಎಂದರೆ ಪ್ರಾಣ, ಚಕ್ಷುರಾದಿ ಇಂದ್ರಿಯ ಪೃಥಿವ್ಯಾದಿ ಭೂತಪದಾರ್ಥಗಳ ಮಿಲನದಿಂದ ಜೀವರ ಶರೀರವು ನಿರ್ಮಾಣವಾಗಿರುತ್ತದೆ. ಹೀಗಿರುವಾಗ ಶರೀರವನ್ನು ಕೇವಲ ಪೃಥಿವೀ ಕೇವಲ ಜಲ ಇತ್ಯಾದಿಗಳ ಸ್ವರೂಪವೆಂದು ಹೇಳುವುದು ತಪ್ಪಾಗುತ್ತದೆ. ಆದರೆ ಭೂತಾಭಿಮಾನಿ ಜೀವರಿಗೆ ಆಯಾ ಭೂತಗಳನ್ನಷ್ಟೇ ನಿಯಮನ ಮಾಡುವ ಶಕ್ತಿಯಿರುವುದರಿಂದ ಆಯಾ ಭೂತಗಳನ್ನೇ ಶರೀರವನ್ನಾಗಿ ಹೊಂದಿದ್ದಾರೆಂದು ಹೇಳುವುದು ಕೂಡುತ್ತದೆ.

**प्रकाशः** – ''विद्यमानेऽपि विष्णुलिङ्गे न तस्यान्तर्यामित्वम्'' इत्यादिटीकार्थमाह – **ननु विष्णोरित्यादिना ।** ''पृथिव्यादिशरीरकत्वस्य कयाऽपि विधया अवकाशाभावात्'' इति टीकायाम् विधाशब्दस्य ''पृथिवीभिन्नचिच्छरीरत्वोररीकारेण'' इति

वाक्यानुरोधेन तदात्मकत्वतद्देहत्वरूपप्रकारद्वयमर्थं विवृत्य योगवृत्त्याऽपि इत्यपेरर्थमभिप्रेत्य योगवृत्त्या विष्णौ घटनमाशङ्क्य निराह – नच तेनेति ।

"ವಿದ್ಯಮಾನೇऽಪಿ ವಿಷ್ಣುಲಿಂಗೇ ನ ತಸ್ಯಾಂತರ್ಯಾಮಿತ್ವಮ್" 'ವಿಷ್ಣುಲಿಂಗಗಳಿದ್ದರೂ ಸಹ ಅವನು ಅಂತರ್ಯಾಮಿ ಆಗುವುದಿಲ್ಲ' ಎಂಬ ಟೀಕೆಯ ಅಭಿಪ್ರಾಯವನ್ನು 'ನತು ವಿಷ್ಣೋಃ' ಇತ್ಯಾದಿ ಗ್ರಂಥದಿಂದ ವ್ಯಾಖ್ಯಾನಿಸುತ್ತಿದ್ದಾರೆ. "ಪೃಥಿವ್ಯಾದಿಶರೀರಕತ್ವಸ್ಯ ಕಯಾऽಪಿ ವಿಧಯಾ ಅವಕಾಶಾಭಾವಾತ್" 'ಪೃಥಿವ್ಯಾದಿ ಶರೀರತ್ವವು ಭಗವಂತನಲ್ಲಿ ಯಾವುದೇ ವಿಧದಲ್ಲಿಯೂ ಕೂಡುವುದಿಲ್ಲ' ಎಂಬ ಟೀಕೆಯಲ್ಲಿರುವ 'ವಿಧಾ' ಎಂಬ ಶಬ್ದಕ್ಕೆ ಎರಡು ಬಗೆಯಲ್ಲಿ ವ್ಯಾಖ್ಯಾನಿಸುತ್ತಿದ್ದಾರೆ. 'ಪೃಥಿವೀಭಿನ್ನಚಿಚ್ಛರೀರತ್ವೋರರೀಕಾರೇಣ" 'ಭಗವಂತನು ಪೃಥಿವಿಗಿಂತ ಭಿನ್ನನಾಗಿದ್ದಾನೆ ಮತ್ತು ಅವನ ಶರೀರವು ಚಿತ್‌ಸ್ವರೂಪವಾಗಿದೆ' ಎಂದು ಅಂಗೀಕರಿಸಿರುವುದರಿಂದ ಎಂಬ ವಾಕ್ಯವನ್ನು ಅನುಸರಿಸಿ ಶರೀರಶಬ್ದಕ್ಕೆ 'ತದಾತ್ಮಕತ್ವ' ಮತ್ತು 'ತದ್ದೇಹತ್ವ' ಎಂದು ಎರಡು ರೀತಿಯಾಗಿ ಅರ್ಥ ಎಂದಭಿಪ್ರಾಯ. ಹೀಗೆ ಶರೀರಕತ್ವ ಶಬ್ದಕ್ಕೆ ಅರ್ಥಗಳನ್ನು ವಿವರಿಸಿ. ಈಗ 'ಕಯಾऽಪಿ' ಎಂಬಲ್ಲಿರುವ 'ಅಪಿ' ಶಬ್ದಕ್ಕೆ 'ಯೋಗವೃತ್ಯಾ ಅಪಿ' ಎಂದು ಅರ್ಥೈಸಿದ್ದಾರೆ. ಯೋಗ್ಯವೃತ್ತಿಯಿಂದಲೂ ಶರೀರ ಪದವು ವಿಷ್ಣುವಿನಲ್ಲಿ ಕೂಡಬಹುದಲ್ಲವೇ? ಎಂದು ಆಶಂಕಿಸಿ ನಿರಾಕರಿಸುತ್ತಿದ್ದಾರೆ - 'ನಚ ತೇನ' ಇತ್ಯಾದಿ ವಾಕ್ಯದಿಂದ.

**प्रकाशः –** बलीयस्त्वादिति । तस्य जन्मादिनयपूर्वपक्ष एव व्युत्पादितत्वादिति भावः । रूढित्यागे बाधकमाशङ्क्याह – **यमिति** । 'तस्य' पृथिव्यादेः । जडत्वे युक्तिमाह – **यमिति** ।

ಯೋಗಕ್ಕಿಂತ ರೂಢಿಯು ಪ್ರಬಲವೆಂದು ಜನ್ಮಾಧಿಕರಣದ ಪೂರ್ವಪಕ್ಷದಲ್ಲಿ ಸಮರ್ಥಿಸಿದ್ದಾರೆಂದು ತಿಳಿಯಬೇಕು. ರೂಢ್ಯರ್ಥವನ್ನು ಬಿಡಲು ಬಾಧಕವನ್ನು ಆಶಂಕಿಸುತ್ತಿದ್ದಾರೆ - 'ಯಂ' ಇತ್ಯಾದಿಯಾಗಿ. 'ತಸ್ಯ' ಎಂಬ ಪದಕ್ಕೆ ಪೃಥಿವ್ಯಾದಿಗಳಿಗೆ ಎಂದರ್ಥ. 'ಜಡ' ಎಂಬ ವಿಷಯದಲ್ಲಿ ಎಂದರೆ ಪೃಥಿವ್ಯಾದಿ ಶಬ್ದಗಳು ಜಡಪರ ಎಂಬ ವಿಷಯದಲ್ಲಿ 'ಯಂ' ಇತ್ಯಾದಿ ವಾಕ್ಯದಿಂದ ಯುಕ್ತಿಯನ್ನು ಹೇಳುತ್ತಿದ್ದಾರೆ.

**प्रकाशः –** माध्यन्दिनपाठानुरोधेन 'आत्मा' इत्युक्तम् । "यं विज्ञानं न वेद" इति काण्वपाठस्यैवोक्तौ विज्ञानशब्दस्य आत्मशब्दस्येव जीवे प्रसिद्ध्यभावेन चेतनाज्ञेयत्वं न स्पष्टं भायादिति भावः ।

'ಯಮಾತ್ಮಾ ನ ವೇದ' ಎಂಬುದು ಮಾಧ್ಯಂದಿನಪಾಠ. 'ಯಂ ವಿಜ್ಞಾನಂ ನ ವೇದ' ಎಂಬುದು ಕಾಣ್ವ ಪಾಠ. ಇಲ್ಲಿ ಕಾಣ್ವಪಾಠವನ್ನು ವಿವಕ್ಷಿಸಿದರೆ ಆತ್ಮಶಬ್ದವು ಜೀವನಲ್ಲಿ ಪ್ರಸಿದ್ಧವಾಗಿರುವಂತೆ ವಿಜ್ಞಾನ ಶಬ್ದಕ್ಕೆ ಜೀವ ಎಂಬರ್ಥವು ಪ್ರಸಿದ್ಧವಾಗಿಲ್ಲ. ಆದ್ದರಿಂದ ಚೇತನರಿಂದ ತಿಳಿಯಲಾರ ಎಂಬರ್ಥವು ಸ್ಪಷ್ಟವಾಗಿ ತಿಳಿಯುವುದಿಲ್ಲವೆಂಬ ಅಭಿಪ್ರಾಯದಿಂದ ಮಾಧ್ಯಂದಿನ ಪಾಠವನ್ನೇ ಗ್ರಂಥಕಾರರು ಸ್ವೀಕರಿಸಿದ್ದಾರೆ.

ಅಂತರ್ಯಾಮ್ಯಧಿಕರಣ (೧-೨-೫)

**प्रकाशः** – नन्वथापि "अन्तरपुरुषः" इत्यत्र निर्णीतान्तरत्वं वा, "आत्मनि तिष्ठन्" इत्यादिनोक्तं चेतननिष्ठत्वं वा, चेतननियमनं वा, आत्मशब्दितचेतनाविदितत्वं वा रूढौ बाधकमस्तीत्यतः क्रमेण निराह – य इत्यादिना ।

ಪ್ರಶ್ನೆ - ರೂಢ್ಯರ್ಥವನ್ನು ಸ್ವೀಕರಿಸಲು ಬಾಧಕವಿಲ್ಲವೆಂದು ಹೇಳಲು ಸಾಧ್ಯವಿಲ್ಲ. ಏಕೆಂದರೆ "ಅಂತರಃ ಪುರುಷಃ" ಎಂಬಲ್ಲಿ ನಿರ್ಣಯಿಸಲ್ಪಟ್ಟ ಅಂತರತ್ವವು ಅಥವಾ 'ಆತ್ಮನಿ ತಿಷ್ಠನ್' ಎಂಬಲ್ಲಿ ಹೇಳಲ್ಪಟ್ಟ ಚೇತನನಿಷ್ಠತ್ವವು ಅಥವಾ ಚೇತನರ ನಿಯಾಮಕತ್ವವು ಅಥವಾ ಆತ್ಮ ಎಂಬ ಶಬ್ದದಿಂದ ಹೇಳಲ್ಪಡುವ ಚೇತನ ಅವಿದಿತತ್ವವು ರೂಢ್ಯರ್ಥವನ್ನು ಸ್ವೀಕರಿಸಲು ಬಾಧಕವಾಗಿದೆಯಲ್ಲವೇ ?

ಉತ್ತರ - ಈ ಎಲ್ಲಾ ಬಾಧಕಗಳನ್ನು 'ಯ ಪೃಥಿವ್ಯಾಂ' ಇತ್ಯಾದಿ ವಾಕ್ಯದಿಂದ ಕ್ರಮವಾಗಿ ನಿರಾಕರಿಸುತ್ತಿದ್ದಾರೆ.

**प्रकाशः** – पूर्वमात्मशब्दस्य जीवसामान्यपरत्वं, तद्वाक्यस्थ 'यः' इत्यादियच्छब्दस्य पृथिव्यादितत्त्वाभिमानिजीवसमुदायपरत्वमुपेत्य तल्लिङ्गं सावकाशमित्युक्तम् ।

ಹಿಂದೆ ಆತ್ಮಶಬ್ದವು ಜೀವಸಾಮಾನ್ಯಪರವಾಗಿದೆಯೆಂದು ಅಂಗೀಕರಿಸಿ ಆ ಶ್ರುತಿವಾಕ್ಯದಲ್ಲಿರುವ 'ಯಃ' ಮುಂತಾದ 'ಯತ್' ಶಬ್ದವು ಪೃಥಿವಿಯೇ ಮೊದಲಾದ ತತ್ತ್ವಾಭಿಮಾನಿ ದೇವತೆಗಳ ಸಮುದಾಯವನ್ನು ಹೇಳುತ್ತಿದೆ ಎಂಬರ್ಥವನ್ನು ಅಂಗೀಕರಿಸಿ ಪೃಥಿವ್ಯಾದಿಶರೀರತ್ವವೆಂಬ ಲಿಂಗವನ್ನು ಸಾವಕಾಶ ಮಾಡಿದ್ದರು.

**प्रकाशः** – इदानीमात्मशब्दः सकलचेतनपर एव, 'यः' इत्यादियच्छब्दस्तु सकलात्माभिमानिचेतनपरः, पूर्वत्र पृथिव्यादिशब्दैस्तदभिमानिजीवस्यैव ग्रहणेनात्रापि तत्प्रायपाठेन तथैव ग्राह्यत्वात् । आत्माज्ञेयत्वादि च आत्माभिमानिनो जीवस्य दुर्ज्ञेयत्वादिना युक्तमिति भावेनाह – यद्वेति ।

ಆದರೆ ಈಗ ಆತ್ಮಶಬ್ದವು ಸಕಲಚೇತರನ್ನು ಹೇಳುತ್ತದೆ. 'ಯಃ' ಇತ್ಯಾದಿಗಳಲ್ಲಿರುವ 'ಯತ್' ಶಬ್ದವು ಸಕಲ ಆತ್ಮಾಭಿಮಾನಿದೇವತೆಗಳನ್ನು ಹೇಳುತ್ತದೆ. ಏಕೆಂದರೆ ಹಿಂದೆ 'ಪೃಥಿವೀ' ಮುಂತಾದ ಶಬ್ದಗಳಿಂದ ಪೃಥಿವ್ಯಾದಿಗಳಿಗೆ ಅಭಿಮಾನಿಯಾದ ಜೀವನೆಂಬರ್ಥವನ್ನೇ ಸ್ವೀಕರಿಸಲಾಗಿತ್ತು. ಅದರ ಪ್ರಾಯಪಾಠದಿಂದ ಇಲ್ಲಿಯೂ ಸಹ ಅದೇ ಅರ್ಥವನ್ನೇ ಸ್ವೀಕರಿಸಬೇಕು. ಆತ್ಮನಿಂದ ತಿಳಿಯಲು ಸಾಧ್ಯವಿಲ್ಲವೆಂಬ ಮಾತನ್ನು ಅಭಿಮಾನಿಯಾದ ಜೀವನನ್ನು ತಿಳಿಯುವುದು ಕಷ್ಟವೆಂಬರ್ಥದಲ್ಲಿ ಕೂಡಿಸಬೇಕು. ಈ ಅಭಿಪ್ರಾಯದಿಂದ 'ಯದ್ವಾ' ಎಂಬುದಾಗಿ ಮತ್ತೊಂದು ಪಕ್ಷವನ್ನು ಗ್ರಂಥಕಾರರು ಹೇಳುತ್ತಿದ್ದಾರೆ.

ಪರಿಪೂರ್ಣಚಂದ್ರಿಕಾ

**प्रकाशः** – एवञ्चान्तर्यामिणोऽन्यत्वादमृतत्वस्यापि तस्यैव वाच्यत्वात् प्रागुक्तहेतुना नाक्षिस्थो विष्णुरिति भावः ।।

ಈ ಎಲ್ಲಾ ಕಾರಣಗಳಿಂದ ಅಂತರ್ಯಾಮಿಯು ಭಿನ್ನನಾದ್ದರಿಂದ ಅಕ್ಷಿಸ್ಥನಾದ ಪುರುಷನು ವಿಷ್ಣುವಾಗುವುದಿಲ್ಲ. ಕಿಂತು ಪೃಥಿವ್ಯಾದಿಗಳಿಗೆ ಅಭಿಮಾನಿಯಾದ ಜೀವ ಅಥವಾ ಪ್ರಕೃತಿ ಆಗುತ್ತದೆ. ಅಮೃತತ್ವವೂ ಸಹ ಜೀವ ಅಥವಾ ಪ್ರಕೃತಿಯಲ್ಲಿಯೇ ಉಪಪನ್ನವಾಗುತ್ತದೆ. ಹೀಗಿರುವಾಗ ಹಿಂದಿನ ಅಂತರಾಧಿಕರಣದಲ್ಲಿ ಹೇಳಿದ ಅಮೃತತ್ವವೆಂಬ ಹೇತುವಿನಿಂದ ಅಕ್ಷಿಸ್ಥನಾದವನು ವಿಷ್ಣುವೇ ಆಗುತ್ತಾನೆಂದು ಸಮರ್ಥಿಸುವುದು ಹೇಗೆ ಯುಕ್ತವಾಗುತ್ತದೆ ? ಇಷ್ಟು ಪೂರ್ವಪಕ್ಷಿಗಳ ಅಭಿಪ್ರಾಯ.

**गुरुराजीयम्** – ननु पृथिव्यादीनामनेकत्वान्नान्तर्यामित्वम् । 'यस्सर्वान्' इत्यन्तर्यामिण एकत्वस्य बोधनादिति चेन्न । तथा सति जीवमात्रमित्यपि न स्यात् । तेषामप्यनेकत्वसाम्यात् । नच जीवानामनेकत्वेऽपि तत्समुदायापेक्षयैकवचनोपपत्तिरिति वाच्यम् । तथा सत्यभिमानिपक्षेऽपि समुदायविवक्षया तदुपपत्तिरिति भावेनाह – **य इतीति** ।। ननु जीवमात्रस्यैकस्मिन्काले पृथिव्यादिशरीरत्वासम्भवेऽपि कदाचित्कस्यचिदित्येवंरूपेण जीवमात्रस्य पृथिव्यादिशरीरत्वमुपपन्नमित्यरुचेराह – **यस्य प्राण इति** ।। **प्रथमसूत्रोक्तं** पृथिव्याद्यविदितत्वमपि सावकाशमित्यतो न प्रकृतपक्षे बाधकमित्याह – **यं पृथिवी न वेदेति** ।। ननु कथं पृथिव्यादेर्जडत्वेन तदविदितत्वं जीवस्य । उच्यते । पृथिव्यादिशब्दानामभिमानिचेतनपरत्वात्तदविदितत्वस्य जीवेऽपि सम्भवादित्यत आह – **यमात्मा न वेदेति** ।। चेतनस्य पृथगुक्तेरिति ।। अन्यथा पौनरुक्त्यं स्यादिति भावः ।। **अभिमानिन्यपीति** ।। अभिमानिनः पृथिव्यादिरूपशरीराद्भिन्नत्वात्तदन्तस्स्थत्वाच्चेति भावः ।। **तत्वभिमानिनामिति** ।। पृथिव्याद्यभिमानिनामित्यर्थः। ननु पृथिव्यादेर्जडत्वेन तदविदितत्वस्याभिमानिनि सम्भवेऽपि पृथिव्याद्यभिमानिनामात्माविदितत्वं कथम् । आत्मनश्चेतनत्वेन तदविदितत्वस्यासम्भवादित्यत आह – **यमात्मेति** ।। नन्वेवं प्रायपाठबाधः । 'यःपृथिव्याम्' इत्यादौ पृथिव्याद्यभिमानिजीवस्यान्तर्यामित्ववत् 'य आत्मनि' इत्यत्रान्तर्यामिपरत्वाभावेन पृथिव्याद्यभिमानिदेवतानामन्तर्यामित्ववचनस्य प्रायपाठविरुद्धत्वादित्यरुच्या पक्षान्तरमाह – **यद्वेति** ।। **जीव एवेति** ।। चतुर्मुख इत्यर्थः ।।

**प्रकाशः** – नन्वथापि ''अन्तरपुरुषः'' इत्यत्र निर्णीतान्तरत्वं वा, ''आत्मनि तिष्ठन्'' इत्यादिनोक्तं चेतननिष्ठत्वं वा, चेतननियमनं वा, आत्मशब्दितचेतनाविदितत्वं वा रूढौ बाधकमस्तीत्यतः क्रमेण निराह – **य इत्यादिना ।**

ಪ್ರಶ್ನೆ - ರೂಢ್ಯರ್ಥವನ್ನು ಸ್ವೀಕರಿಸಲು ಬಾಧಕವಿಲ್ಲವೆಂದು ಹೇಳಲು ಸಾಧ್ಯವಿಲ್ಲ. ಏಕೆಂದರೆ ''ಅಂತರಃ ಪುರುಷಃ'' ಎಂಬಲ್ಲಿ ನಿರ್ಣಯಿಸಲ್ಪಟ್ಟ ಅಂತರತ್ವವು ಅಥವಾ 'ಆತ್ಮನಿ ತಿಷ್ಠನ್' ಎಂಬಲ್ಲಿ ಹೇಳಲ್ಪಟ್ಟ ಚೇತನನಿಷ್ಠತ್ವವು ಅಥವಾ ಚೇತನರ ನಿಯಾಮಕತ್ವವು ಅಥವಾ ಆತ್ಮ ಎಂಬ ಶಬ್ದದಿಂದ ಹೇಳಲ್ಪಡುವ ಚೇತನ ಅವಿದಿತತ್ವವು ರೂಢ್ಯರ್ಥವನ್ನು ಸ್ವೀಕರಿಸಲು ಬಾಧಕವಾಗಿದೆಯಲ್ಲವೇ ?

ಉತ್ತರ - ಈ ಎಲ್ಲಾ ಬಾಧಕಗಳನ್ನು 'ಯ ಪೃಥಿವ್ಯಾಂ' ಇತ್ಯಾದಿ ವಾಕ್ಯದಿಂದ ಕ್ರಮವಾಗಿ ನಿರಾಕರಿಸುತ್ತಿದ್ದಾರೆ.

**प्रकाशः** – पूर्वमात्मशब्दस्य जीवसामान्यपरत्वं, तद्वाक्यस्य 'यः' इत्यादियच्छब्दस्य पृथिव्यादितत्त्वाभिमानिजीवसमुदायपरत्वमुपेत्य तल्लिङ्गं सावकाशमित्युक्तम् ।

ಹಿಂದೆ ಆತ್ಮಶಬ್ದವು ಜೀವಸಾಮಾನ್ಯಪರವಾಗಿದೆಯೆಂದು ಅಂಗೀಕರಿಸಿ ಆ ಶ್ರುತಿವಾಕ್ಯದಲ್ಲಿರುವ 'ಯಃ' ಮುಂತಾದ 'ಯತ್' ಶಬ್ದವು ಪೃಥಿವಿಯೇ ಮೊದಲಾದ ತತ್ತ್ವಾಭಿಮಾನಿ ದೇವತೆಗಳ ಸಮುದಾಯವನ್ನು ಹೇಳುತ್ತಿದೆ ಎಂಬರ್ಥವನ್ನು ಅಂಗೀಕರಿಸಿ ಪೃಥಿವ್ಯಾದಿಶರೀರತ್ವವೆಂಬ ಲಿಂಗವನ್ನು ಸಾವಕಾಶ ಮಾಡಿದ್ದರು.

**प्रकाशः** – इदानीमात्मशब्दः सकलचेतनपर एव, 'यः' इत्यादियच्छब्दस्तु सकलात्माभिमानिचेतनपरः, पूर्वत्र पृथिव्यादिशब्दैस्तदभिमानिजीवस्यैव ग्रहणेनात्रापि तत्प्रायपाठेन तथैव ग्राह्यत्वात् । आत्माज्ञेयत्वादि च आत्माभिमानिनो जीवस्य दुर्ज्ञेयत्वादिना युक्तमिति भावेनाह – **यद्वेति ।**

ಆದರೆ ಈಗ ಆತ್ಮಶಬ್ದವು ಸಕಲಚೇತರನ್ನು ಹೇಳುತ್ತದೆ. 'ಯಃ' ಇತ್ಯಾದಿಗಳಲ್ಲಿರುವ 'ಯತ್' ಶಬ್ದವು ಸಕಲ ಆತ್ಮಾಭಿಮಾನಿದೇವತೆಗಳನ್ನು ಹೇಳುತ್ತದೆ. ಏಕೆಂದರೆ ಹಿಂದೆ 'ಪೃಥಿವೀ' ಮುಂತಾದ ಶಬ್ದಗಳಿಂದ ಪೃಥಿವ್ಯಾದಿಗಳಿಗೆ ಅಭಿಮಾನಿಯಾದ ಜೀವನೆಂಬರ್ಥವನ್ನೇ ಸ್ವೀಕರಿಸಲಾಗಿತ್ತು. ಅದರ ಪ್ರಾಯಪಾಠದಿಂದ ಇಲ್ಲಿಯೂ ಸಹ ಅದೇ ಅರ್ಥವನ್ನೇ ಸ್ವೀಕರಿಸಬೇಕು. ಆತ್ಮನಿಂದ ತಿಳಿಯಲು ಸಾಧ್ಯವಿಲ್ಲವೆಂಬ ಮಾತನ್ನು ಅಭಿಮಾನಿಯಾದ ಜೀವನನ್ನು ತಿಳಿಯುವುದು ಕಷ್ಟವೆಂಬರ್ಥದಲ್ಲಿ ಕೂಡಿಸಬೇಕು. ಈ ಅಭಿಪ್ರಾಯದಿಂದ 'ಯದ್ವಾ' ಎಂಬುದಾಗಿ ಮತ್ತೊಂದು ಪಕ್ಷವನ್ನು ಗ್ರಂಥಕಾರರು ಹೇಳುತ್ತಿದ್ದಾರೆ.

ಪರಿಪೂರ್ಣಚಂದ್ರಿಕಾ

**प्रकाशः** – एवञ्चान्तर्यामिणोऽन्यत्वादमृतत्वस्यापि तस्यैव वाच्यत्वात् प्रागुक्तहेतुना नाक्षिस्थो विष्णुरिति भावः ।।

ಈ ಎಲ್ಲಾ ಕಾರಣಗಳಿಂದ ಅಂತರ್ಯಾಮಿಯು ಭಿನ್ನನಾದ್ದರಿಂದ ಅಕ್ಷಿಸ್ಥನಾದ ಪುರುಷನು ವಿಷ್ಣುವಾಗುವುದಿಲ್ಲ. ಕಿಂತು ಪೃಥಿವ್ಯಾದಿಗಳಿಗೆ ಅಭಿಮಾನಿಯಾದ ಜೀವ ಅಥವಾ ಪ್ರಕೃತಿ ಆಗುತ್ತದೆ. ಅಮೃತತ್ವವೂ ಸಹ ಜೀವ ಅಥವಾ ಪ್ರಕೃತಿಯಲ್ಲಿಯೇ ಉಪಪನ್ನವಾಗುತ್ತದೆ. ಹೀಗಿರುವಾಗ ಹಿಂದಿನ ಅಂತರಾಧಿಕರಣದಲ್ಲಿ ಹೇಳಿದ ಅಮೃತತ್ವವೆಂಬ ಹೇತುವಿನಿಂದ ಅಕ್ಷಿಸ್ಥನಾದವನು ವಿಷ್ಣುವೇ ಆಗುತ್ತಾನೆಂದು ಸಮರ್ಥಿಸುವುದು ಹೇಗೆ ಯುಕ್ತವಾಗುತ್ತದೆ ? ಇಷ್ಟು ಪೂರ್ವಪಕ್ಷಿಗಳ ಅಭಿಪ್ರಾಯ.

**गुरुराजीयम्** – ननु पृथिव्यादीनामनेकत्वान्नान्तर्यामित्वम् । 'यस्सर्वान्' इत्यन्तर्यामिण एकत्वस्य बोधनादिति चेन्न । तथा सति जीवमात्रमित्यपि न स्यात् । तेषामप्यनेकत्वसाम्यात् । नच जीवानामनेकत्वेऽपि तत्समुदायापेक्षयैकवचनोपपत्तिरिति वाच्यम् । तथा सत्यभिमानिपक्षेऽपि समुदायविवक्षया तदुपपत्तिरिति भावेनाह – **य इतीति** ।। ननु जीवमात्रस्यैकस्मिन्काले पृथिव्यादिशरीरत्वासम्भवेऽपि कदाचित्कस्यचिदित्येवंरूपेण जीवमात्रस्य पृथिव्यादिशरीरत्वमुपपन्नमित्यरुचेराह – **यस्य प्राण इति** ।। प्रथमसूत्रोक्तं पृथिव्याद्यविदितत्वमपि सावकाशमित्यतो न प्रकृतपक्षे बाधकमित्याह – **यं पृथिवी न वेदेति** ।। ननु कथं पृथिव्यादेर्जडत्वेन तदविदितत्वं जीवस्य । उच्यते । पृथिव्यादिशब्दानामभिमानिचेतनपरत्वात्तदविदितत्वस्य जीवेऽपि सम्भवादित्यत आह – **यमात्मा न वेदेति** ।। चेतनस्य पृथगुक्तेरिति ।। अन्यथा पौनरुक्त्यं स्यादिति भावः ।। **अभिमानिन्यपीति** ।। अभिमानिनः पृथिव्यादिरूपशरीराद्भिन्नत्वात्तदन्तस्स्थत्वाच्चेति भावः ।। **तत्वभिमानिनामिति** ।। पृथिव्याद्यभिमानिनामित्यर्थः। ननु पृथिव्यादेर्जडत्वेन तदविदितत्वस्याभिमानिनि सम्भवेऽपि पृथिव्याद्यभिमानिनामात्माविदितत्वं कथम् । आत्मनश्चेतनत्वेन तदविदितत्वस्यासम्भवादित्यत आह – **यमात्मेति** ।। नन्वेवं प्रायपाठबाधः । 'यःपृथिव्याम्' इत्यादौ पृथिव्याद्यभिमानिजीवस्यान्तर्यामित्ववत् 'य आत्मनि' इत्यत्रान्तर्यामिपरत्वाभावेन पृथिव्याद्यभिमानिदेवतानामन्तर्यामित्ववचनस्य प्रायपाठविरुद्धत्वादित्यरुच्या पक्षान्तरमाह – **यद्वेति** ।। **जीव एवेति** ।। चतुर्मुख इत्यर्थः ।।




ನಮ್ಮ ಸಿದ್ಧಾಂತದ ಪ್ರಕಾರ ಪ್ರಕೃತಿ ಹಾಗೂ ಅಭಿಮಾನಿಯಾದ ದೇವತೆಯು ಅಂತರ್ಯಾಮಿಯೆಂದು ಪೂರ್ವಪಕ್ಷ ಮಾಡಲಾಗಿದೆ. ಆದರೆ ಅದ್ವೈತಿಗಳು ಹಾಗೂ ರಾಮಾನುಜರು ಇದಕ್ಕೆ ವಿರುದ್ಧವಾಗಿ ಜೀವಸಾಮಾನ್ಯನನ್ನು ಪೂರ್ವಪಕ್ಷಕ್ಕೆ ವಿಷಯನೆನ್ನುತ್ತಾರೆ. ಪ್ರಕೃತಿಯಲ್ಲಿ ಜ್ಞಾನವಿಷಯತ್ವವನ್ನು ಹೇಳುವ ದ್ರಷ್ಟೃತ್ವವು ಕೂಡುವುದಿಲ್ಲವೆಂಬ ಒಂದು ಯುಕ್ತಿ ಬಿಟ್ಟರೆ ಬೇರೆ ಯುಕ್ತಿಯನ್ನು ಅವರು ಹೇಳಲಾರರು.

ಇವರ ವಾದದಲ್ಲಿ ಹುರುಳಿಲ್ಲ. ಸ್ವತಃ ಅವರೇ ಈಕ್ಷತ್ಯಧಿಕರಣದಲ್ಲಿ ಪ್ರಕೃತಿಗೆ ಗೌಣವಾದ ಜ್ಞಾನವಿಷಯತ್ವವನ್ನು ಒಪ್ಪಿದ್ದಾರೆ. ಅಷ್ಟೇ ಅಲ್ಲದೆ ಇದೇ ಅಧಿಕರಣದ ಸಿದ್ಧಾಂತದಲ್ಲಿ ಬ್ರಹ್ಮನಿಗೆ ಆರೋಪಿತವಾದ ಜ್ಞಾನವಿಷಯತ್ವವನ್ನು ಒಪ್ಪಿದ್ದಾರೆ. ಹೀಗೆ ಬೇರೆ ಕಡೆ ಗೌಣವಾದ ದ್ರಷ್ಟೃತ್ವವನ್ನು ಒಪ್ಪುವ ಅವರು ಪ್ರಕೃತಿಯಲ್ಲೇಕೆ ಗೌಣವಾದ ದ್ರಷ್ಟೃತ್ವವನ್ನು ನಿರಾಕರಿಸುತ್ತಾರೆಂಬುದು ಅರ್ಥವಾಗದ ವಿಚಾರ. ಮತ್ತು ಪ್ರಕೃತಿಯು ಪೂರ್ವಪಕ್ಷಕ್ಕೆ ವಿಷಯವಾಗದಿದ್ದ ಮೇಲೆ ಸೂತ್ರಕಾರರು 'ನಚ ಸ್ಮಾರ್ತಮ್' ಎಂಬ ಸೂತ್ರದಲ್ಲಿ ಪ್ರಕೃತಿಯನ್ನು ನಿಷೇಧಿಸಿದ್ದೂ ಸಹ ವ್ಯರ್ಥವಾಗುತ್ತದೆ.

ಪ್ರಕೃತಿಯು ಈ ಅಧಿಕರಣದ ಪೂರ್ವಪಕ್ಷಕ್ಕೆ ವಿಷಯವಾದಂತೆ ಅಭಿಮಾನಿದೇವತೆಯೂ ಸಹ ಅಂತರ್ಯಾಮಿಯೆಂದು ಪೂರ್ವಪಕ್ಷ ಮಾಡಬಹುದು. ಈ ಪಕ್ಷದಲ್ಲಿ ಪೃಥಿವ್ಯಾದಿಗಳಿಗೆ ಶರೀರತ್ವವನ್ನು ಉಪಪಾದಿಸುವುದು ಸುಲಭವಾಗುತ್ತದೆ. ಆದರೆ ಭಾಮತಿಯಲ್ಲಿ ಒಬ್ಬನೇ ಅಭಿಮಾನಿ ಜೀವನಿಗೆ ಸಮಸ್ತ ಜಗತ್ತಿನ ನಿಯಾಮಕತ್ವವು ಅಸಂಭಾವಿತವಾದ್ದರಿಂದ ಅಭಿಮಾನಿದೇವತೆಯೆಂಬ ಪಕ್ಷವನ್ನು ನಿರಾಕರಿಸಲಾಗಿದೆ.

ಆದರೆ ಅಭಿಮಾನಿದೇವತೆಯನ್ನು ನಿರಾಕರಿಸುವ ಭಾಮತಿಕಾರ ಜೀವಸಾಮಾನ್ಯನನ್ನು ಅಂತರ್ಯಾಮಿಯೆಂದು ಒಪ್ಪಿರುವುದು ಹಾಸ್ಯಾಸ್ಪದ ವಿಚಾರ. ಒಬ್ಬ ಅಭಿಮಾನಿಗೆ ಸಕಲ ಜಗತ್ಪ್ರೇರಕಶಕ್ತಿಯು ಬಾರದಿದ್ದಾಗ ಒಬ್ಬ ಜೀವ ಸಾಮಾನ್ಯನಿಗೆ ಅಂತಹ ಶಕ್ತಿ ಎಲ್ಲಿಂದ ಬರುತ್ತದೆಂದು ತಿಳಿಯುವುದಿಲ್ಲ. ಮತ್ತು ಜೀವಸಾಮಾನ್ಯನು ಅಂತರ್ಯಾಮಿಯೆಂದು ಹೇಳಿದರೆ ಅವನಿಗೆ ಪೃಥಿವೀ, ಪ್ರಾಣ ಮೊದಲಾದವುಗಳ ಸಮುದಾಯವು ಶರೀರವಾಗಿದೆ ಹೊರತು ಕೇವಲ ಪೃಥಿವಿಯಾಗಲೀ, ಕೇವಲ ಪ್ರಾಣಾದಿಗಳಾಗಲೀ ಶರೀರಗಳಾಗಿರುವುದಿಲ್ಲ. ಆದ್ದರಿಂದ ಶ್ರುತಿಯಲ್ಲಿ ಹೇಳಲ್ಪಟ್ಟ ಕೇವಲ ಪೃಥಿವ್ಯಾದಿ ಶರೀರತ್ವವು ತಪ್ಪಾಗುತ್ತದೆ. ಆದರೆ ಅಭಿಮಾನಿ ದೇವತೆಯಲ್ಲಿ ಆಯಾ ಭೂತಗಳಿಗೆ ಅಭಿಮಾನಿಯಾಗಿದ್ದಾರೆಂಬ ಕಾರಣದಿಂದಲೇ ಅವುಗಳನ್ನು ಶರೀರವೆಂದು ಹೇಳಬಹುದು.

ಆದ್ದರಿಂದ ಅಭಿಮಾನಿದೇವತೆಗಳೇ ಅಂತರ್ಯಾಮಿಯು ಭಿನ್ನನಾದ್ದರಿಂದ ಆಕ್ಷಿಪ್ತ ಹೊರತು ವಿಷ್ಣುವಲ್ಲವೆಂಬ ಪೂರ್ವಪಕ್ಷವು ದೃಢವಾಗುತ್ತದೆ. ವಿಷ್ಣುವಿನಲ್ಲಿ ಪೃಥಿವ್ಯಾದಿ ಶರೀರತ್ವವನ್ನು ಯೌಗಿಕವಾಗಿ ಹೇಳಬಹುದು. ಆದರೆ ಯೋಗಕ್ಕಿಂತ ರೂಢಿಯು ಪ್ರಬಲವಾದ್ದರಿಂದ ರೂಢ್ಯರ್ಥವನ್ನೇ ಸ್ವೀಕರಿಸಬೇಕು. ಬಾಧಕವಿದ್ದಾಗ ರೂಢ್ಯರ್ಥವನ್ನು ಬಿಡಬಹುದಾದರೂ ಇಲ್ಲಿ ಅಂತಹ ಬಾಧಕಗಳೇನೂ ಕಾಣಿಸುತ್ತಿಲ್ಲ.

ಪರಿಪೂರ್ಣಚಂದ್ರಿಕಾ

ಈ ಎಲ್ಲಾ ಕಾರಣಗಳಿಂದ ಅಂತರ್ಯಾಮಿಯು ಭಿನ್ನನಾದ್ದರಿಂದ ಅಕ್ಷಿಸ್ಥ ಪುರುಷನು ವಿಷ್ಣುವಾಗುವುದಿಲ್ಲ. ಪೃಥಿವ್ಯಾದಿಗಳಿಗೆ ಅಭಿಮಾನಿಯಾದ ಜೀವ ಅಥವಾ ಪ್ರಕೃತಿ ಆಗುತ್ತದೆ. ಅಮೃತತ್ವವೂ ಸಹ ಜೀವ ಅಥವಾ ಪ್ರಕೃತಿಯಲ್ಲಿಯೇ ಉಪಪನ್ನವಾಗುತ್ತದೆ. ಹೀಗಿರುವಾಗ ಹಿಂದಿನ ಅಂತರಾಧಿಕರಣದಲ್ಲಿ ಅಮೃತತ್ವವೆಂಬ ಹೇತುವಿನಿಂದ ಅಕ್ಷಿಸ್ಥನಾದವನು ವಿಷ್ಣುವೇ ಆಗುತ್ತಾನೆಂದು ಸಮರ್ಥಿಸುವುದು ಹೇಗೆ ಯುಕ್ತವಾಗುತ್ತದೆ ? ಇಷ್ಟು ಪೂರ್ವಪಕ್ಷಿಗಳ ಅಭಿಪ್ರಾಯ.



## ಸರ್ವಾಂತರ್ಯಾಮಿಯಾದವನು ವಿಷ್ಣುವೇ ಎಂದು ಸಿದ್ಧಾಂತ

### तात्पर्यचन्द्रिका

**सिद्धान्तस्तु –**

**पृथिव्यादेर्जडत्वे स्यादप्रसक्तनिराक्रिया ।**
**चित्त्वे तु तेन कात्स्न्येनावेद्यत्वं नेश्वरं विना ।।**

ಅನುವಾದ - ಸಿದ್ಧಾಂತದ ಸಂಗ್ರಹ ಹೀಗಿದೆ -

ಪೃಥಿವ್ಯಾದೇರ್ಜಡತ್ವೇ ಸ್ಯಾದಪ್ರಸಕ್ತನಿರಾಕ್ರಿಯಾ ।
ಚಿತ್ತ್ವೇ ತು ತೇನ ಕಾರ್ತ್ಸ್ನ್ಯೇನಾವೇದ್ಯತ್ವಂ ನೇಶ್ವರಂ ವಿನಾ ।।

ಪೃಥಿವ್ಯಾದಿಗಳು ಜಡವಾದ್ದರಿಂದ ಜ್ಞಾನದ ಪ್ರಸಕ್ತಿಯೇ ಬರುವುದಿಲ್ಲ. ಅವುಗಳಲ್ಲಿ ತಿಳುವಳಿಕೆಯನ್ನು ನಿಷೇಧ ಮಾಡಿದರೆ ಅಪ್ರಸಕ್ತನಿಷೇಧವಾಗುತ್ತದೆ. ಆದ್ದರಿಂದ ಪೃಥಿವ್ಯಾದಿ ಶಬ್ದಗಳಿಗೆ ವಾಚ್ಯತ್ವೇನ ತದಭಿಮಾನಿ ಚೇತನರನ್ನೇ ವಿವಕ್ಷಿಸಬೇಕು. ಅಂತಹ ಚೇತನರಿಂದ ಸಮಗ್ರವಾಗಿ ತಿಳಿಯಲ್ಪಡದ ವಸ್ತು ಎಂದರೆ ಈಶ್ವರನೇ ಹೊರತು ಪ್ರಕೃತ್ಯಾದಿಗಳಲ್ಲ.

**''यं पृथिवी न वेद'' इत्यादौ पृथिव्यादेर्जडत्वे 'यम्' इत्यस्य वैयर्थ्यम्, ''यमात्मा न वेद'' इत्यस्यानुपपत्तिश्च । अप्रसक्तप्रतिषेधापातश्च ।**

'ಯಂ ಪೃಥಿವೀ ನ ವೇದ'' ಇತ್ಯಾದಿ ವಾಕ್ಯಗಳಲ್ಲಿ ಪೃಥಿವೀ ಮೊದಲಾದ ಶಬ್ದಗಳು ಜಡ ಪ್ರತಿಪಾದಕವಾದರೆ 'ಯಂ' ಎಂಬುದಾಗಿ ವಿಷಯನಿರ್ದೇಶ ಮಾಡಿದ್ದು ವ್ಯರ್ಥವಾಗುತ್ತದೆ. ಮತ್ತು ''ಯಮಾತ್ಮಾ ನ ವೇದ'' ಎಂಬುದಾಗಿ ಚೇತನರಿಂದ ತಿಳಿಯಲು ಸಾಧ್ಯವಿಲ್ಲವೆಂದು ಹೇಳಿದ್ದೂ ಸಹ ಅನುಪಪನ್ನವಾಗುತ್ತದೆ. ಮತ್ತು ಜಡದಲ್ಲಿ ಅಪ್ರಸಕ್ತವಾದ ತಿಳುವಳಿಕೆಯನ್ನು ನಿಷೇಧಿಸಿದಂತಾಗುತ್ತದೆ.

**''नान्तरिक्षे न दिवि'' इत्यन्तरिक्षादावप्रसक्तचयननिषेधस्तु ''हिरण्यं निधाय चेतव्यम्'' इति विधिस्तुत्यर्थः ।**

ಪೂರ್ವಮೀಮಾಂಸೆಯಲ್ಲಿ ಯಜ್ಞವೇದಿಕೆ ನಿರ್ಮಾಣವು ಅಂತರಿಕ್ಷದಲ್ಲಿ ಪ್ರಸಕ್ತವಾಗಿಲ್ಲ. ಆದರೂ ಸಹ ''ನಾಂತರಿಕ್ಷೇ ನ ದಿವಿ'' ಎಂಬುದಾಗಿ ಅಂತರಿಕ್ಷದಲ್ಲಿ ಯಜ್ಞವೇದಿಕೆಯನ್ನು ನಿರ್ಮಾಣ ಮಾಡಬಾರದೆಂಬ ನಿಷೇಧವೂ ಕಾಣಸುತ್ತದೆ. ಇದು ಅಪ್ರಸಕ್ತ ನಿಷೇಧವಲ್ಲವೇ? ಎಂದು ಪ್ರಶ್ನಿಸಬಾರದು. ''ಹಿರಣ್ಯಂ ನಿಧಾಯ ಚೇತವ್ಯಮ್'' ಹಿರಣ್ಯ ಸ್ಥಾಪನೆಯೆಂಬ ವಿಧಾನವನ್ನು ಪ್ರಶಂಸೆ ಮಾಡುವುದಕ್ಕಾಗಿ 'ನಾಂತರಿಕ್ಷೇ' ಎಂಬ ಮಾತು ಹೊರಟಿದೆ.

**प्रकृते तु न तथा । तस्मात्पृथिव्यादिः तदभिमानिचेतन एव । तेन च साकल्येनावेद्यत्वं भाष्योक्तश्रुत्यादिभिर्हरेरेव ।**

ಆದರೆ ಪ್ರಕೃತದಲ್ಲಿ ಹಾಗೆ ಹೇಳಲಾಗದು. ಅಂತಹ ವಿಧಾನವೇನೂ ಇಲ್ಲಿ ಕೇಳಿಸುತ್ತಿಲ್ಲ. ಆದ್ದರಿಂದ ಪೃಥಿವ್ಯಾದಿಶಬ್ದಗಳಿಂದ ಜಡವನ್ನು ವಿವಕ್ಷಿಸದೇ ಅಭಿಮಾನಿಯಾದ ಚೇತನರನ್ನೇ ವಿವಕ್ಷಿಸಬೇಕು. ಅಂತಹ ಅಭಿಮಾನಿ ಚೇತನರಿಂದ ಸಂಪೂರ್ಣವಾಗಿ ತಿಳಿಯಲು ಸಾಧ್ಯವಿಲ್ಲದವನು ವಿಷ್ಣುವೇ ಆಗಿದ್ದಾನೆ. ಈ ವಿಷಯವು ಸಾಕಲ್ಯೇನಾವೇದ್ಯತ್ವವು ಭಾಷ್ಯದಲ್ಲಿ ಹೇಳಲ್ಪಟ್ಟ ಶ್ರುತ್ಯಾದಿಗಳಿಂದ ದೃಢವಾಗುತ್ತದೆ.

**अन्तरत्वं च**

**बाह्यापेक्षां विना यस्तु रमते सोऽन्तरः स्मृतः ।**
**अतिप्रियत्वाच्च हरेरन्तरत्वमुदाहृतम् ॥**

ಪೃಥಿವ್ಯಾದ್ಯವಿದಿತತ್ವವು ಪರಮಾತ್ಮನಲ್ಲಿ ಬರುವಂತೆ ಅಂತರತ್ವವೂ ಸಹ ಬರುತ್ತದೆ. ಏಕೆಂದರೆ

ಬಾಹ್ಯಪೇಕ್ಷಾಂ ವಿನಾ ಯಸ್ತು ರಮತೇ ಸೋಽಂತರಃ ಸ್ಮೃತಃ ।
ಅತಿಪ್ರಿಯತ್ವಾಚ್ಚ ಹರೇರಂತರತ್ವಮುದಾಹೃತಮ್ ॥

ಬಾಹ್ಯಪದಾರ್ಥಗಳ ಅಪೇಕ್ಷೆಯಿಲ್ಲದೇ ಯಾರು ವಿಹರಿಸುತ್ತಾರೋ ಅಂತಹವನು 'ಅಂತರಃ' ಎನಿಸುತ್ತಾನೆ. ಮತ್ತು ಅತ್ಯಂತ ಪ್ರಿಯನಾದ್ದರಿಂದಲೂ ಶ್ರೀಹರಿಯು ಅಂತರನೆಂದು ಹೇಳಲ್ಪಟ್ಟಿದ್ದಾನೆ.

**इति स्मृत्युक्तं, स्वतो नित्यतृप्तात् ''प्रेयः पुत्रात्'' इत्यादिश्रुत्या परमप्रेयोरूपाच्च ब्रह्मणोऽन्यत्र न युक्तम् ।**

ಪರಿಪೂರ್ಣಚಂದ್ರಿಕಾ

ಮೇಲೆ ಹೇಳಿದ ಸ್ಮೃತಿಯ ಮಾತಿನಿಂದ ಶ್ರೀಹರಿಯು ಸ್ವಾಭಾವಿಕವಾಗಿಯೇ ನಿತ್ಯತೃಪ್ತನಾದ್ದರಿಂದ ಅಂತರನಾಗಿದ್ದಾನೆಂದು ತಿಳಿಯುತ್ತದೆ. ಹಾಗೂ "ಪ್ರೇಯಃ ಪುತ್ರಾತ್" ಇತ್ಯಾದಿ ಶ್ರುತಿಗಳಿಂದ ಪರಮಪ್ರೇಮಾಸ್ಪದನಾದ್ದರಿಂದಲೂ ಅಂತರನೆಂದು ತಿಳಿಯುತ್ತದೆ. ಇಂತಹ ಶ್ರುತಿ, ಸ್ಮೃತಿಸಿದ್ಧವಾದ ಅಂತರತ್ವವು ಶ್ರೀಹರಿಯನ್ನು ಬಿಟ್ಟು ಬೇರೆಯವರಲ್ಲಿ ಹೇಳಲಾಗದು.

**किञ्च श्रुत्यन्तरे "दिव्यो देव एको नारायणः" इत्युपक्रम्य "यस्य पृथिवी शरीरं यः पृथिवीमन्तरे सञ्चरन् यं पृथिवी न वेद" इत्याद्युक्त्वा 'एष सर्वभूतान्तरात्माऽपहतपाप्मा दिव्यो देव एको नारायणः" इत्युपसंहारान्नारायण एवान्तर्यामी ॥**

ಮತ್ತು ಇನ್ನೊಂದು ಉಪನಿಷತ್ತಿನಲ್ಲಿಯೂ ಅಂತರತ್ವವು ವಿಷ್ಣುವಿನಲ್ಲಿಯೇ ಉಪಪನ್ನವಾಗುತ್ತದೆಂಬುದು ಸ್ಪಷ್ಟವಾಗುತ್ತದೆ. ಉಪನಿಷತ್ತಿನಲ್ಲಿ "ದಿವ್ಯೋ ದೇವ ಏಕೋ ನಾರಾಯಣಃ" ಎಂದು ಪ್ರಾರಂಭವಾಗಿ "ಯಸ್ಯ ಪೃಥಿವೀ ಶರೀರಂ ಯಃ ಪೃಥಿವೀಮಂತರೇ ಸಂಚರನ್ ಯಂ ಪೃಥಿವೀ ನ ವೇದ" ಯಾರಿಗೆ ಪೃಥಿವಿಯು ಶರೀರವಾಗಿದೆಯೋ? ಯಾರು ಪೃಥಿವಿಯಲ್ಲಿ ಸಂಚರಿಸುತ್ತಾನೋ? ಯಾರನ್ನು ಪೃಥಿವಿಯಲ್ಲಿ ತಿಳಿಯುವುದಿಲ್ಲವೋ?" ಇತ್ಯಾದಿಯಾಗಿ ಅಂತರ್ಯಾಮಿಧರ್ಮಗಳನ್ನು ಹೇಳಿ "ಏಷ ಸರ್ವಭೂತಾಂತರಾತ್ಮಾऽಪಹತಪಾಪ್ಮಾ ದಿವ್ಯೋ ದೇವ ಏಕೋ ನಾರಾಯಣಃ" ಇವನು ಸಕಲ ಭೂತಗಳ ಅಂತರಾತ್ಮನು, ನಿರ್ದೋಷಿಯು, ದಿವ್ಯಸ್ವರೂಪವುಳ್ಳವನು, ಕ್ರೀಡಾದಿಗುಣವಿಶಿಷ್ಟನು ಹಾಗೂ ಅದ್ವಿತೀಯನು ನಾರಾಯಣನೇ ಆಗಿದ್ದಾನೆಂದು ಉಪಸಂಹಾರದಲ್ಲಿ ಹೇಳಲಾಗಿದೆ. ಈ ಸಮಾಖ್ಯಾಶ್ರುತಿಯ ಆಧಾರದಿಂದ ನಾರಾಯಣನೇ ಸರ್ವಾಂತರ್ಯಾಮಿ ಎಂದು ನಿರ್ಣಯವಾಗುತ್ತದೆ. ಹಾಗೂ ಪೂರ್ವಪಕ್ಷಕ್ಕೆ ಪ್ರಬಲ ಹೇತುವಾಗಿರುವ ಪೃಥಿವ್ಯಾದಿ ಶರೀರತ್ವವೂ ಸಹ ವಿಷ್ಣುವಿನಲ್ಲೇ ಉಪಪನ್ನವಾಗುತ್ತದೆ.

**पृथिव्यादेः शरीरत्वं यौगिकं गौणमेव वा ।**
**रूढस्यानुपपन्नत्वाद् अग्नेरिन्द्रत्ववद् भवेत् ॥**

ಪೃಥಿವ್ಯಾದೇಃ ಶರೀರತ್ವಂ ಯೌಗಿಕಂ ಗೌಣಮೇವ ವಾ ।
ರೂಢಸ್ಯಾನುಪಪನ್ನತ್ವಾದ್ ಅಗ್ನೇರಿಂದ್ರತ್ವವದ್ ಭವೇತ್ ॥

ಪೃಥಿವ್ಯಾದಿಶರೀರತ್ವವು ಯೌಗಿಕವಾಗಿ ಅಥವಾ ಗೌಣವಾಗಿ ವಿಷ್ಣುವಿನಲ್ಲೇ ಉಪಪನ್ನವಾಗುತ್ತದೆ. ಅಗ್ನಿಯಲ್ಲಿ ಇಂದ್ರ ಶಬ್ದಪ್ರಯೋಗವನ್ನು ಯೌಗಿಕವಾಗಿ ಅಥವಾ ಗೌಣವಾಗಿ ಮಾಡುವಂತೆ ವಿಷ್ಣುವಿನಲ್ಲೂ ಪೃಥಿವ್ಯಾದಿಶರೀರತ್ವವನ್ನು ಕೂಡಿಸಬೇಕು. ರೂಢ್ಯರ್ಥದಲ್ಲಿ ಬಾಧವಿರುವುದೇ ಇದಕ್ಕೆ ಕಾರಣ.

ಅಂತರ್ಯಾಮ್ಯಧಿಕರಣ (೧-೨-೫)

**यथा ''इन्द्रो न तस्थौ'' इतीन्द्रशब्दः गार्हपत्येऽपि स्वोचितैश्वर्यस्य सद्भावाद्योगेन वा, इन्द्रवद्यज्ञसाधनत्वाद् गौण्या वा वृत्त्या वर्तते ।**

ಇದಕ್ಕೆ ದೃಷ್ಟಾಂತ - "ಇಂದ್ರೋ ನ ತಸ್ಥೌ" ಎಂಬಲ್ಲಿ ಇಂದ್ರಶಬ್ದವು ಗಾರ್ಹಪತ್ಯಾಗ್ನಿಯಲ್ಲಿ ಪ್ರಯೋಗಿಸಲಾಗಿದೆ. ಇದು ತಪ್ಪಲ್ಲ. ತನಗೆ ಉಚಿತವಾದ ಐಶ್ವರ್ಯವನ್ನು ಅಗ್ನಿಯೂ ಸಹ ಹೊಂದಿರುವ ಕಾರಣ ಯೌಗಿಕಾರ್ಥದಿಂದ ಅಗ್ನಿಯಲ್ಲಿ ಇಂದ್ರಶಬ್ದವನ್ನು ಪ್ರಯೋಗಿಸಬಹುದು. ಅಥವಾ ಇಂದ್ರನಂತೆ ಅಗ್ನಿಯೂ ಸಹ ಯಜ್ಞಸಾಧನನಾದ್ದರಿಂದ ಗೌಣೀವೃತ್ತಿಯಿಂದಲೂ ಅಗ್ನಿಯನ್ನು ಇಂದ್ರನೆನ್ನಬಹುದು.

**उक्तं हि –**

**स्यादग्नेर्गौणमिन्द्रत्वं यज्ञसम्बन्धकारितम् ।**
**इन्दत्यर्थानुसाराद्वा स्वकार्ये सोऽपि हीश्वरः ।। इति ।**

ಈ ವಿಷಯವನ್ನೇ ಶ್ಲೋಕವಾರ್ತಿಕದಲ್ಲಿ ಹೀಗೆ ಹೇಳಲಾಗಿದೆ - ಯಜ್ಞಸಂಬಂಧವಿರುವ ಕಾರಣ ಅಗ್ನಿಗೆ ಗೌಣವಾದ ಇಂದ್ರತ್ವವನ್ನು ಹೇಳಬಹುದು. ಅಥವಾ 'ಇದಿ' ಧಾತುವಿಗೆ ಐಶ್ವರ್ಯವೆಂಬ ಅರ್ಥವಿರುವುದರಿಂದ ಯೋಗಾರ್ಥವನ್ನು ಅನುಸರಿಸಿಯೂ ಅಗ್ನಿಯನ್ನು ಇಂದ್ರನೆನ್ನಬಹುದು.

**तथा शरीरशब्दोऽपि पृथिव्यादिषु योगेन वा शरीरवत्तन्नियम्यत्वेन गौण्या वा वृत्त्या वर्तताम् । चेतनानामपि देहद्वारा शीर्णताऽस्त्येव ।**

ಇದರಂತೆ ಪೃಥಿವ್ಯಾದಿಗಳಲ್ಲಿ ಯೌಗಿಕವಾಗಿ ಅಥವಾ ಶರೀರದಂತೆ ಅವನಿಂದ ನಿಯಮ್ಯವಾಗಿದೆ ಎಂಬ ಗೌಣೀವೃತ್ತಿಯಿಂದಲೂ ಶರೀರಶಬ್ದ ಪ್ರಯೋಗವನ್ನು ಕೂಡಿಸಬಹುದು. ಶೀರ್ಯಮಾಣತ್ವ ಎಂಬ ಯೌಗಿಕಾರ್ಥವನ್ನು ಸ್ವೀಕರಿಸಿದಾಗ ಚೇತನರಿಗೆ ನಾಶವಿಲ್ಲದಿದ್ದರೂ ದೇಹದ ಮೂಲಕ ನಾಶವಿದೆ.

**प्रकाशः –**

अधिदैवाधिभूताध्यात्मप्रकरणेषु पृथिव्याद्यविदितत्वतदन्तरत्वरूपनिरवकाश-लिङ्गसत्त्वेन तद्बलेन पृथिव्यादिशरीत्वस्य कथञ्चिन्नेयत्वाद् अन्तर्यामी विष्णुरिति भावेन ''अन्तर्यामी विष्णुरेव'' इत्यादिटीकां विवृण्वन्नविदितत्वस्य निरवकाशत्वं तावदाह – पृथिव्यादेरिति ।

ವಿವರಣೆ - ವಿಷ್ಣುವೇ ಅಂತರ್ಯಾಮಿಯಾಗಿದ್ದಾನೆಂದು ಸಿದ್ಧಾಂತ ಮಾಡುತ್ತಿದ್ದಾರೆ. ಅಧಿದೈವ, ಅಧಿಭೂತ, ಅಧ್ಯಾತ್ಮ ಪ್ರಕರಣಗಳಲ್ಲಿ, ಪೃಥಿವ್ಯಾದ್ಯವಿದಿತತ್ವ, ತದಂತರತ್ವ ಮೊದಲಾದ ನಿರವಕಾಶ ಲಿಂಗಗಳಿರುವುದರಿಂದ ಅವುಗಳ ಬಲದಿಂದ ಪೃಥಿವ್ಯಾದಿ ಶರೀರತ್ವವೆಂಬ ಪೂರ್ವಪಕ್ಷಹೇತುವನ್ನು ವಿಷ್ಣುವಿನಲ್ಲಿ ಗೌಣವಾಗಿ ವ್ಯಾಖ್ಯಾನಿಸಬೇಕು ಆದ್ದರಿಂದ ವಿಷ್ಣುವೇ ಅಂತರ್ಯಾಮಿಯಾಗಿದ್ದಾನೆಂಬ ಅಭಿಪ್ರಾಯದಿಂದ "ಅಂತರ್ಯಾಮೀ ವಿಷ್ಣುರೇವ" ಇತ್ಯಾದಿ ಟೀಕೆಯನ್ನು ವಿವರಿಸುತ್ತಿದ್ದಾರೆ. ಮೊದಲಿಗೆ ಪೃಥಿವ್ಯಾದ್ಯವಿದಿತತ್ವವು ನಿರವಕಾಶವಾಗಿದೆಯೆಂಬ ವಿಷಯವನ್ನು 'ಪೃಥಿವ್ಯಾದೇಃ' ಎಂಬ ವಾಕ್ಯದಿಂದ ಸಮರ್ಥಿಸುತ್ತಿದ್ದಾರೆ.

**प्रकाशः** – यदुक्तं पृथिव्यादेर्जडत्वेन तदवेद्यत्वं प्रकृत्यादौ युक्तमिति, तत्र बाधकत्रयं वदन् पूर्वार्धं व्यनक्ति – **यमिति** । जडे ज्ञानमात्रस्यैवाभावेन 'न वेद' इत्येव वाच्यं, नतु 'यम्' इति विषयविशेषोपादानमित्यर्थः ।

ಹಿಂದೆ ಪೃಥಿವ್ಯಾದಿಗಳು ಜಡವಾದ್ದರಿಂದ ಇವುಗಳಿಂದ ಅವೇದ್ಯತ್ವವು ಪ್ರಕೃತ್ಯಾದಿಗಳಲ್ಲಿ ಯುಕ್ತವಾಗುತ್ತದೆಂದು ಹೇಳಲಾಗಿತ್ತು. ಈ ವಿಷಯದಲ್ಲಿ ಮೂರು ಬಾಧಕಗಳನ್ನು ಹೇಳುತ್ತಾ ಶ್ಲೋಕದ ಪೂರ್ವಾರ್ಧವನ್ನು ಸ್ವತಃ ತಾವೇ ವ್ಯಾಖ್ಯಾನಿಸುತ್ತಿದ್ದಾರೆ. 'ಯಂ ಪೃಥಿವೀ' ಇತ್ಯಾದಿಯಾಗಿ. ಜಡಪದಾರ್ಥದಲ್ಲಿ ಜ್ಞಾನಮಾತ್ರವೇ ಇರಲು ಸಾಧ್ಯವಿರದ ಕಾರಣ 'ನ ವೇದ' ಎಂದಷ್ಟೇ ಹೇಳಬೇಕಿತ್ತು. ವಿಷಯವಿಶೇಷವನ್ನು ಪ್ರತಿಪಾದಿಸುವ 'ಯಂ' ಎಂಬ ಪದವನ್ನು ಹೇಳಬಾರದಾಗಿತ್ತೆಂದು ಅಭಿಪ್ರಾಯ.

**प्रकाशः – यमात्मेति** । पृथिव्यादौ ज्ञानमात्रनिषेधे "यमात्मा" इत्यादावपि तथात्वापत्त्या चेतनस्य ज्ञानसामान्यनिषेधायोग इत्यर्थः । श्लोके 'अप्रसक्त' इत्युक्तिरुपलक्षणमिति भावः । **अप्रसक्तेति** । जडे ज्ञानप्रसक्तेरेवाभावादिति भावः ।

'ಯಮಾತ್ಮಾ ನ ವೇದ' ಇತ್ಯಾದಿ ವಾಕ್ಯಕ್ಕೆ ಹೀಗರ್ಥ - ಪೃಥಿವ್ಯಾದಿಗಳಲ್ಲಿ ಜ್ಞಾನಸಾಮಾನ್ಯವನ್ನು ನಿಷೇಧ ಮಾಡಿದರೆ 'ಯಮಾತ್ಮಾ' ಮುಂತಾದ ಸ್ಥಳದಲ್ಲಿಯೂ ಜ್ಞಾನಸಾಮಾನ್ಯವನ್ನೇ ನಿಷೇಧ ಮಾಡಿದಂತಾಗುತ್ತದೆ. ಎಂದರೆ ಚೇತನ ಪದಾರ್ಥಕ್ಕೆ ಜ್ಞಾನಸಾಮಾನ್ಯವನ್ನು ನಿಷೇಧ ಮಾಡಿದಂತಾಗುವುದು. ಇದು ತಪ್ಪಾಗುತ್ತದೆಂದು ಅಭಿಪ್ರಾಯ. ಶ್ಲೋಕದಲ್ಲಿ 'ಅಪ್ರಸಕ್ತ' ಎಂದು ಹೇಳಿರುವುದು ಉಪಲಕ್ಷಣವಾಗಿದೆಯೆಂದು ತಿಳಿಯಬೇಕು. 'ಅಪ್ರಸಕ್ತೇಃ' ಎಂದರೆ ಜಡಪದಾರ್ಥದಲ್ಲಿ ಜ್ಞಾನಕ್ಕೆ ಪ್ರಸಕ್ತಿಯೇ ಇಲ್ಲವಾದ್ದರಿಂದ ಎಂದು ಅಭಿಪ್ರಾಯ.

**प्रकाशः** – ननु 'पृथिव्यामग्निश्चेतव्यो नान्तरिक्षे न दिवि हिरण्यं निधाय चेतव्यम्" इत्यत्रेष्टकावेदिकारूपाग्निचयनस्य "नान्तरिक्षे" इत्यत्राप्रसक्तविषयत्वेऽपि यथा नित्यानुवादत्वं तद्वत्स्यादित्यत आह – **नेति** ।

ಆಕ್ಷೇಪ - ಅಪ್ರಸಕ್ತವಾದದ್ದನ್ನು ನಿಷೇಧ ಮಾಡಬಾರದೆಂದೇನೂ ನಿಯಮವಿಲ್ಲ. ಪೂರ್ವಮೀಮಾಂಸೆಯಲ್ಲಿ "ಪೃಥಿವ್ಯಾಮಗ್ನಿಶ್ಚೇತವ್ಯೋ ನಾಂತರಿಕ್ಷೇ ನ ದಿವಿ ಹಿರಣ್ಯಂ ನಿಧಾಯ

ಚೇತವ್ಯಮ್'' ಎಂಬಲ್ಲಿ ಇಟ್ಟಿಗೆಯಿಂದ ನಿರ್ಮಾಣ ಮಾಡಲ್ಪಡುವ ವೇದಿಕೆಯೆಂಬ ಅಗ್ನಿಸೇನವನ್ನು 'ನಾಂತರಿಕ್ಷೇ' ಎಂಬುದಾಗಿ ಅಂತರಿಕ್ಷದಲ್ಲಿ ನಿರ್ಮಾಣ ಮಾಡಬಾರದೆಂದು ನಿಷೇಧಿಸಲಾಗಿದೆ. ವಸ್ತುತಃ ವೇದಿಕೆಯ ನಿರ್ಮಾಣವನ್ನು ಭೂಮಿಯ ಮೇಲೆ ಮಾಡಬಹುದೇ ಹೊರತು ಅಂತರಿಕ್ಷದಲ್ಲಿ ನಿರ್ಮಾಣ ಮಾಡುವ ಪ್ರಸಕ್ತಿಯೇ ಬರುವುದಿಲ್ಲ. ಹೀಗಿರುವಾಗ 'ನಾಂತರಿಕ್ಷೇ' ಎಂಬ ನಿಷೇಧವು ನಿಮ್ಮ ಪ್ರಕಾರ ತಪ್ಪಾಗಬೇಕಾದೀತು. ಆದರೆ ಈ ವಾಕ್ಯವು ಅಪ್ರಸಕ್ತವಿಷಯವಾದರೂ ಸಹ ಇದನ್ನು ನಿತ್ಯಾನುವಾದವೆಂದು ಅಂದರೆ ವಸ್ತುಸ್ಥಿತಿಕಥನವೆಂದು ಹೇಳಿದ್ದಾರೆ. ಅದರಂತೆ ಪ್ರಕೃತದಲ್ಲಿಯೂ ಪೃಥಿವ್ಯಾದಿ ಜಡಪದಾರ್ಥಗಳಲ್ಲಿ ಜ್ಞಾನದ ಪ್ರಸಕ್ತಿಯಿಲ್ಲದಿದ್ದರೂ ತಿಳಿಯುವುದಿಲ್ಲವೆಂಬ ಜ್ಞಾನದ ನಿಷೇಧವು ವಸ್ತುಸ್ಥಿತಿಕಥನವೆಂದು ಹೇಳಬಹುದಲ್ಲವೇ?

ಸಮಾಧಾನ - ಈ ಆಕ್ಷೇಪಕ್ಕೆ 'ನಾಂತರಿಕ್ಷೇ' ಎಂಬುದರಿಂದ ಉತ್ತರಿಸುತ್ತಿದ್ದಾರೆ.

**प्रकाशः** – आद्यस्य द्वितीयपादे अर्थवादनये ''अभागिप्रतिषेधात्'' इति गुणसूत्रे ''नान्तरिक्षे'' इत्यादेरप्रसक्तनिषेधेनाप्रामाण्यमाशङ्क्य ''अन्त्योर्यथोक्तम्'' इति सिद्धान्तगुणसूत्रेण हिरण्यस्तुत्यर्थमितरनिन्दा क्रियते ।

ಅರ್ಥವಾದಾಧಿಕರಣದಲ್ಲಿ ಬರುವ 'ಅಭಾಗಿಪ್ರತಿಷೇಧಾತ್' ಎಂಬ ಈ ಗುಣಸೂತ್ರದಲ್ಲಿ 'ಅಂತರಿಕ್ಷೇ' ಇತ್ಯಾದಿಯಾದ ಅಪ್ರಸಕ್ತ ನಿಷೇಧಕ್ಕೆ ಅಪ್ರಾಮಾಣ್ಯವನ್ನು ಆಶಂಕಿಸಲಾಗಿದೆ. ಆನಂತರ ''ಅಂತ್ಯೋರ್ಯಥೋಕ್ತಮ್'' ಎಂಬ ಸಿದ್ಧಾಂತದ ಗುಣಸೂತ್ರದಲ್ಲಿ ಹಿರಣ್ಯಸ್ತುತಿಗೋಸ್ಕರ ಇತರ ನಿಂದೆಯನ್ನು ಮಾಡಲಾಗಿದೆಯೆಂದು ಸಿದ್ಧಾಂತ ಮಾಡಲಾಗಿದೆ. ಅಂದರೆ ಹಿರಣ್ಯಸ್ಥಾಪನೆಯನ್ನು ಮಾಡಿಯೇ ಇಟ್ಟಿಗೆಗಳಿಂದ ಯಜ್ಞವೇದಿಕೆಯನ್ನು ತಯಾರಿಸಬೇಕು. ಈ ವಿಷಯವನ್ನು ದೃಢಪಡಿಸುವುದಕ್ಕಾಗಿ ಆಕಾಶಾದಿಗಳಲ್ಲಿ ವೇದಿಕೆಯನ್ನು ನಿರ್ಮಾಣ ಮಾಡಬಾರದೆಂದು ಶ್ರುತಿ ಹೇಳುತ್ತಿದೆ.

**प्रकाशः** – 'असति प्रसङ्गे निषेधो नित्यानुवादः' इत्युक्तमभियुक्तैः । इह तु न तथा, विधेयान्तराभावदिति भावः ।

'ಅಸತಿ ಪ್ರಸಂಗೇ ನಿಷೇಧೋ ನಿತ್ಯಾನುವಾದಃ' ಪ್ರಸಕ್ತವಾಗದಿದ್ದರೂ ನಿಷೇಧ ಮಾಡಿದರೆ ಅದನ್ನು ನಿತ್ಯವಿಧಿಯೆಂದು ಅಭಿಯುಕ್ತರು ಅಭಿಪ್ರಾಯ ಪಡುತ್ತಾರೆ. ಆದ್ದರಿಂದ ಪೂರ್ವಮೀಮಾಂಸಾ ದೃಷ್ಟಾಂತವು ವಿಷಮವಾಗಿದೆ. ಏಕೆಂದರೆ ಹಿರಣ್ಯಸ್ಥಾಪನೆಯೆಂಬ ಮತ್ತೊಂದು ವಿಧೇಯವು ಅಲ್ಲಿ ಇರುವಂತೆ ಪ್ರಕೃತ ಅಂತಹ ವಿಧೇಯಾಂತರವು ಇರುವುದಿಲ್ಲ ಎಂದರೆ ಜಡದಲ್ಲಿ ಜ್ಞಾನಪ್ರಸಕ್ತಿಯನ್ನು ನಿಷೇಧ ಮಾಡಲು ಹೊರಟಾಗ ದೃಷ್ಟಾಂತದಲ್ಲಿ ಯಾವುದನ್ನೂ ವಿಧಾನ ಮಾಡುತ್ತಿಲ್ಲ. ಆದ್ದರಿಂದ ದೃಷ್ಟಾಂತ - ದಾರ್ಷ್ಟಾಂತಿಕಗಳಲ್ಲಿ - ವ್ಯತ್ಯಾಸವನ್ನು ಗಮನಿಸಬೇಕು.

**प्रकाशः** – 'एव' इत्यनेनाभिमानिनयन्यायेन पृथिव्यादिशब्दानाम् अभिमानिन्येव मुख्यत्वान्मुख्यसम्भवे नामुख्यं ग्राह्यमिति सूचितम् ।

ಪರಿಪೂರ್ಣಚಂದ್ರಿಕಾ

'ಏವ' ಎಂಬುದರಿಂದ ಅಭಿಮಾನಿ ಅಧಿಕರಣದ ನ್ಯಾಯದಂತೆ ಪೃಥಿವ್ಯಾದಿ ಶಬ್ದಗಳೆಲ್ಲವೂ ಅಭಿಮಾನಿದೇವತೆಗಳನ್ನೇ ಮುಖ್ಯವಾಗಿ ಪ್ರತಿಪಾದಿಸುತ್ತವೆಂದು ತಿಳಿಯುತ್ತದೆ. ಹೀಗೆ ಮುಖ್ಯಾರ್ಥವನ್ನೇ ಸ್ವೀಕರಿಸಲು ಬರುವಾಗ ಅಮುಖ್ಯಾರ್ಥವನ್ನು ಸ್ವೀಕರಿಸಬಾರದೆಂದು ಸೂಚಿಸಿದ್ದಾರೆ.

**प्रकाशः** – एतेन ''पृथिव्यादीनामधिदैवत्वेन जडत्वाभावात्'' इति टीका विवृता । ''यमात्मा न वेद'' इति पृथगुक्तिस्तु आत्माभिमानिपरत्वाद्युक्तेति भावः ।

ಹೀಗೆ ಹೇಳಿದ್ದರಿಂದ ''ಪೃಥಿವ್ಯಾದೀನಾಮಧಿದೈವತ್ವೇನ ಜಡತ್ವಾಭಾವಾತ್'' 'ಪೃಥಿವ್ಯಾದಿಗಳು ಅಧಿದೈವವಾದ್ದರಿಂದ ಜಡವಲ್ಲ' ಎಂಬ ಟೀಕೆಯನ್ನು ವಿವರಿಸಿದಂತಾಯಿತು. 'ಯಮಾತ್ಮಾ ನ ವೇದ' ಎಂದು ಪ್ರತ್ಯೇಕವಾಗಿ ಹೇಳಿದ್ದರಿಂದ ಅಲ್ಲಿ ಆತ್ಮಶಬ್ದಕ್ಕೆ ಆತ್ಮಾಭಿಮಾನಿ ಜೀವ ಎಂದರ್ಥ. ಆತ್ಮನಿಗೆ ಅಭಿಮಾನಿಯಾದ ದೇವತೆಯಿಂದಲೂ ಭಗವಂತನು ಅವೇದ್ಯ ಹಾಗೂ ಅವನಿಗೂ ಭಗವಂತನು ಅಂತರ್ಯಾಮಿಯಾಗಿದ್ದಾನೆ ಎಂದರ್ಥ.

**प्रकाशः** – ततश्च किमित्यतः उत्तरार्धं व्यनक्ति – तेन चेति । चेतनेनेत्यर्थः । लेशेन विदितत्वस्य सर्वत्र सम्भवेन तन्निषेधायोगात्, तदन्यथानुपपत्त्यैव साकल्येनाविदितत्वं लभ्यते । तच्च ''न ते विष्णो जायमानः'' इत्यादिभिः हरेरेवेत्यर्थः ।

ಹೀಗೆ ಹೇಳಿದ್ದರಿಂದ ಏನು ತಿಳಿಯಿತು ? ಎಂಬ ಪ್ರಶ್ನೆಗೆ ಶ್ಲೋಕದ ಉತ್ತರಾರ್ಧವನ್ನು ಸ್ವತಃ ವ್ಯಾಖ್ಯಾನಿಸುತ್ತಾ ಉತ್ತರಿಸುತ್ತಿದ್ದಾರೆ 'ತೇನ ಚ' ಇತ್ಯಾದಿಯಾಗಿ. 'ತೇನ' ಎಂಬ ಪದಕ್ಕೆ ಚೇತನನಿಂದ ಎಂದರ್ಥ. ಲೇಶತಃ ತಿಳುವಳಿಕೆಯು ಎಲ್ಲಾ ಪದಾರ್ಥಗಳಲ್ಲೂ ಬರುವುದರಿಂದ ಅದನ್ನು ನಿಷೇಧ ಮಾಡಲು ಸಾಧ್ಯವಿಲ್ಲ. ಆದ್ದರಿಂದ ಇದರ ಅನ್ಯಥಾನುಪಪತ್ತಿಯಿಂದ ಸಾಕಲ್ಯೇನಾವಿದಿತತ್ವವನ್ನೇ ಶ್ರುತಿಯ ಅರ್ಥವೆನ್ನಬೇಕು. ಇಂತಹ ಸಾಕಲ್ಯೇನ ಅವಿದಿತತ್ವವು ''ನ ತೇ ವಿಷ್ಣೋ ಜಾಯಮಾನಃ'' ಎಂಬ ಶ್ರುತಿಯ ಆಧಾರದಿಂದ ಭಗವಂತನಿಗೇ ಇದೆ ಎಂದು ಸ್ಪಷ್ಟವಾಗುತ್ತದೆ.

**प्रकाशः** – ''यः पृथिवीमन्तरो यमयति'' इति श्रुतान्तरत्वमपि निरवकाशमित्याह – अन्तरत्वं चेति । 'अन्यत्र न युक्तम्' इत्यन्वयः । 'स्मृत्युक्तं' बृहदारण्यकभाष्योक्तस्मृत्युक्तमित्यर्थः ।

'ಯಃ ಪೃಥಿವೀಮಂತರೋ ಯಮಯತಿ'' ಎಂಬಲ್ಲಿ ಕೇಳಿಸುತ್ತಿರುವ ಅಂತರತ್ವವೂ ಸಹ ನಿರವಕಾಶವಾಗಿದೆಯೆಂದು 'ಅಂತರತ್ವಂ ಚ' ಎಂಬ ವಾಕ್ಯದಿಂದ ಪ್ರತಿಪಾದಿಸುತ್ತಿದ್ದಾರೆ. 'ಅನ್ಯತ್ರ' ಎಂಬ ಪದಕ್ಕೆ 'ನ ಯುಕ್ತಂ' ಎಂಬಲ್ಲಿ ಅನ್ವಯ. 'ಸ್ಮೃತ್ಯುಕ್ತಂ' ಎಂದರೆ ಬೃಹದಾರಣ್ಯಕಭಾಷ್ಯದಲ್ಲಿ ಉದಾಹರಿಸಲ್ಪಟ್ಟ ಸ್ಮೃತಿಯಲ್ಲಿ ಹೇಳಲ್ಪಟ್ಟಿದೆ ಎಂದರ್ಥ.

ಅಂತರ್ಯಾಮ್ಯಧಿಕರಣ (೧-೨-೫)

**प्रकाशः** – पूर्वार्धतात्पर्यं – **स्वतो नित्यतृप्तादिति** । उत्तरार्धतात्पर्यं – **प्रेय इत्यादि** । **श्रुत्येति** । वाजसनेयश्रुत्येत्यर्थः । सूत्रभाष्याद्युक्तमुपलक्षणं मत्वा स्वयं समाख्यामप्याह – **किञ्चेति** ।

'ಬಾಹ್ಯಾಪೇಕ್ಷಾಂ' ಎಂಬ ಶ್ಲೋಕದ ಪೂರ್ವಾರ್ಧವನ್ನು ವ್ಯಾಖ್ಯಾನಿಸುತ್ತಿದ್ದಾರೆ ಸ್ವತಃ 'ನಿತ್ಯತೃಪ್ತಾತ್ವಾತ್' ಎಂಬುದಾಗಿ. ಉತ್ತರಾರ್ಧದ ತಾತ್ಪರ್ಯವನ್ನು 'ಪ್ರೇಯಃ' ಇತ್ಯಾದಿಯಾಗಿ ಹೇಳಿದ್ದಾರೆ. ಶ್ರುತ್ಯಾ ಎಂದರೆ ವಾಜಸನೇಯ ಶ್ರುತಿಯಿಂದ ಎಂದರ್ಥ. ಸೂತ್ರ ಹಾಗೂ ಭಾಷ್ಯದಲ್ಲಿ ಹೇಳಿದ್ದು ಕೇವಲ ಉಪಲಕ್ಷಣವೆಂದು ತಿಳಿದು ಗ್ರಂಥಕಾರರು ಸ್ವತಃ ಸಮಾಖ್ಯಾಪ್ರಮಾಣವನ್ನೂ ಸಹ ಹೇಳುತ್ತಿದ್ದಾರೆ. 'ಕಿಂಚ' ಇತ್ಯಾದಿಯಾಗಿ.

**प्रकाशः** – 'श्रुत्यन्तरे' सुबालोपनिषदि । ''तदाहुः किन्तदासीन्नैवेह किञ्चनाग्र आसीत्' अमूलमनाधारा इमाः प्रजाः प्रजायन्ते, दिव्यो देव एको नारायणश्चक्षुश्च द्रष्टव्यं च नारायणः श्रोत्रं च श्रोतव्यं च नारायणः'' इत्याद्युपक्रम्य, ''अन्तश्शरीरे निहितो गुहायामज एको नित्यो यस्य पृथिवी शरीरं यः पृथिवीमन्तरे सञ्चरन् यं पृथिवी न वेद यस्यापः शरीरं योऽपोऽन्तरे सञ्चरन् यमापो न विदुः'' इत्यादिना पृथिव्यब्वाय्वाकाशमनोहङ्कारबुद्धिचित्ताव्यक्ताक्षरमृत्युस्थत्वादिकमुक्त्वाऽन्ते ''एष सर्वभूतान्तरात्माऽपहतपाप्मा दिव्यो देव एको नारायणः'' इत्युक्तत्वादित्यर्थः । अस्य प्रसिद्धत्वात् भाष्यादावनुक्तिः ।

'ಶ್ರುತ್ಯಂತರೇ' ಎಂದರೆ ಸುಬಾಲೋಪನಿಷತ್ತಿನಲ್ಲಿ ಎಂದರ್ಥ. ಈ ಉಪನಿಷತ್ತು 'ತದಾಹುಃ ಕಿಂತದಾಸೀನ್ನೈವೇಹ ಕಿಂಚನಾಗ್ರ ಆಸೀತ್, ಅಮೂಲಮನಾಧಾರಾ ಇಮಾಃ ಪ್ರಜಾಃ ಪ್ರಜಾಯಂತೇ, ದಿವ್ಯೋ ದೇವ ಏಕೋ ನಾರಾಯಣಶ್ಚಕ್ಷುಶ್ಚ ದ್ರಷ್ಟವ್ಯಂ ಚ ನಾರಾಯಣಃ ಶ್ರೋತ್ರಂ ಚ ಶ್ರೋತವ್ಯಂ ಚ ನಾರಾಯಣಃ'' ಎಂದು ಪ್ರಾರಂಭವಾಗಿ, ಮಧ್ಯದಲ್ಲಿ 'ಅಂತಃಶರೀರೇ ನಿಹಿತೋ ಗುಹಾಯಾಮಜ ಏಕೋ ನಿತ್ಯೋ ಯಸ್ಯ ಪೃಥಿವೀ ಶರೀರಂ ಯಃ ಪೃಥಿವೀಮಂತರೇ ಸಂಚರನ್ ಯಂ ಪೃಥಿವೀ ನ ವೇದ ಯಸ್ಯಾಪಃ ಶರೀರಂ ಯೋಽಪೋಽಂತರೇ ಸಂಚರನ್ ಯಮಾಪೋ ನ ವಿದುಃ' ಇತ್ಯಾದಿಯಾದ ಮಾತುಗಳು ಕೇಳಿಸುತ್ತಿವೆ. ಇಲ್ಲಿ ಪೃಥಿವೀ, ಅಪ್, ವಾಯು, ಆಕಾಶ, ಮನಸ್ಸು, ಅಹಂಕಾರ, ಬುದ್ಧಿ, ಚಿತ್ತ, ಅವ್ಯಕ್ತ, ಅಕ್ಷರ, ಮೃತ್ಯು ಇವುಗಳ ಅಂತರ್ಯಾಮಿಯಾಗಿ ಇದ್ದಾನೆಂದು ಹೇಳಿದೆ. ಕೊನೆಯಲ್ಲಿ 'ಏಷ ಸರ್ವಭೂತಾಂತರಾತ್ಮಾऽಪಹತಾಪಾಪ್ಮಾ ದಿವ್ಯೋ ದೇವ ಏಕೋ ನಾರಾಯಣಃ'' ಎಂದು ಸ್ಪಷ್ಟವಾಗಿ ಭಗವಂತನೇ ಸರ್ವಾಂತರ್ಯಾಮಿಯಾಗಿದ್ದಾನೆಂದು ಹೇಳಲಾಗಿದೆ. ಈ ಶ್ರುತಿಯು ಪ್ರಸಿದ್ಧವಾದ್ದರಿಂದ ಭಾಷ್ಯಾದಿಗಳಲ್ಲಿ ಉಲ್ಲೇಖಿಸಿಲ್ಲ. ಹೀಗೆ ಸಮಾಖ್ಯಾಪ್ರಮಾಣದ ಬಲದಿಂದಲೂ ಅಂತರ್ಯಾಮಿಯಾದವನು ವಿಷ್ಣುವೇ ಆಗಿದ್ದಾನೆಂದು ನಿರ್ಣಯವಾಗುತ್ತದೆ.

ಪರಿಪೂರ್ಣಚಂದ್ರಿಕಾ

**प्रकाशः** – यद्वा – ''अधिदैवादिषु'' इति सामान्योक्त्या श्रुत्यन्तरस्थाधिदैवादि-प्रकरणस्यापि सूत्रादौ सङ्ग्रहसूचनादत्र तदुक्तिः ।

ಅಥವಾ ಸೂತ್ರದಲ್ಲಿ ''ಅಧಿದೈವಾಧಿಷು'' ಎಂದು ಸಾಮಾನ್ಯವಾಗಿ ಹೇಳಿರುವುದರಿಂದ ಬೇರೆ ಶ್ರುತಿಯಲ್ಲಿರುವ ಅಧಿದೈವಾದಿ ಪ್ರಕರಣವನ್ನೂ ಸಹ ಸೂತ್ರದಲ್ಲಿ ಸಂಗ್ರಹಿಸಬೇಕೆಂದು ವಿವಕ್ಷಿಸಬೇಕು. ಆದ್ದರಿಂದಲೇ ಇಲ್ಲಿ ಸಮಾಖ್ಯಾಪ್ರಮಾಣವನ್ನು ಹೇಳಿದ್ದಾರೆ.

**प्रकाशः** – यद्वा – 'तद्धर्मश्च व्यपदेशश्च' इति समाहारद्वन्द्वेन ''सम्भृतिद्युव्याप्ति'' इतिवदयं सूत्रभाष्यटीकासु ''तद्धर्मव्यपदेशात्'' इति निर्देश इति मत्वा, व्यपदेशशब्दार्थतया समाख्योक्तिरिति सूत्रादेरर्थान्तरमपि ध्येयम् ।

ಅಥವಾ ಸೂತ್ರದಲ್ಲಿ ''ತದ್ಧರ್ಮಶ್ಚ ವ್ಯಪದೇಶಶ್ಚ'' ಎಂದು ಸಮಾಹಾರದ್ವಂದ್ವವನ್ನು ಮಾಡಬಹುದು. ಆವಾಗ ''ಸಂಭೃತಿದ್ಯುವ್ಯಾಪ್ತಿ'' ಎಂಬಂತೆ ಇಲ್ಲಿಯೂ ಸಹ ಸೂತ್ರ ಭಾಷ್ಯ ಹಾಗೂ ಟೀಕೆಗಳಲ್ಲಿ ''ತದ್ಧರ್ಮವ್ಯಪದೇಶಾತ್'' ಎಂಬ ಪದವನ್ನು ಬಳಸಿರುತ್ತಾರೆ. ಹೀಗೆ ಸಮಾಸವನ್ನು ಆಶ್ರಯಿಸಿದಾಗ ವ್ಯಪದೇಶಶಬ್ದದಿಂದ ಸಮಾಖ್ಯಪ್ರಮಾಣವನ್ನು ಹೇಳಿದಂತಾಗುತ್ತದೆ. ಇದು ಸೂತ್ರಕ್ಕೆ ಮತ್ತೊಂದು ಬಗೆಯ ವ್ಯಾಖ್ಯಾನವೆಂದು ತಿಳಿಯಬೇಕು.

**प्रकाशः** – यदपि पृथिव्यादिशरीरत्वं परसाधकं स्वबाधकं, तस्य ''अतद्धर्माभिलापात्'' इति द्वितीयसूत्रांशलब्धं सावकाशत्वं, ''योगवृत्त्या तस्मिन् पृथिव्यादिशरीरत्वव्यपदेशोपपत्तेः'' इति भाष्यटीकोक्तम् अन्यत्रोक्तसावकाशत्वप्रकारं च सङ्गृह्णाह – **पृथिव्यादेरिति** ।

ಮತ್ತೇನೆಂದರೆ ಪೃಥಿವ್ಯಾದಿಶರೀರತ್ವವು ಪರಪಕ್ಷದಲ್ಲಿ ಸಾಧಕ ಪ್ರಮಾಣವಾಗಿದೆ. ಹಾಗೂ ಸ್ವಪಕ್ಷದಲ್ಲಿ ಬಾಧಕಪ್ರಮಾಣವಾಗಿದೆ ಎಂದು ತೋರುತ್ತದೆ. ಆದರ ''ಅತದ್ಧರ್ಮಾಭಿಲಾಪಾತ್'' ಎಂಬ ಎರಡನೇ ಸೂತ್ರದಿಂದ ತಿಳಿಯುವ ಸಾವಕಾಶತ್ವವನ್ನು ಮತ್ತು ''ಯೋಗವೃತ್ತ್ಯಾ ತಸ್ಮಿನ್ ಪೃಥಿವ್ಯಾದಿಶರೀರತ್ವವ್ಯಪದೇಶೋಪಪತ್ತೇಃ'' ವಿಷ್ಣುವಿನಲ್ಲಿ ಯೋಗವೃತ್ತಿಯಿಂದ ಪೃಥಿವ್ಯಾದಿ ಶರೀರತ್ವವನ್ನು ಉಪಪಾದಿಸಬಹುದೆಂಬ ಭಾಷ್ಯ ಹಾಗೂ ಟೀಕೆಗಳಲ್ಲಿ ಹೇಳಲ್ಪಟ್ಟ ಸಾವಕಾಶತ್ವವನ್ನು ಮತ್ತು ಬೇರೆ ಕಡೆ ಹೇಳಲ್ಪಟ್ಟ ಸಾವಕಾಶತ್ವ ಪ್ರಕಾರವನ್ನೂ ಸಹ 'ಪೃಥಿವ್ಯಾದೇಃ ' ಇತ್ಯಾದಿ ವಾಕ್ಯದಿಂದ ಸಂಗ್ರಹಿಸಿದ್ದಾರೆ.

**प्रकाशः** – ननु रूढिर्बलवतीत्यत उक्तं – **रूढस्येति** । उक्तबाधकेभ्य इति भावः । दृष्टान्तांशं व्यनक्ति – **यथेति** । ''कदाचन स्तरीरसि नेन्द्र'' इति पुरोनुवाक्या, ''निवेशनः'' इति याज्या, ''इन्द्रो न तस्थौ'' इत्युपरिष्टाल्लक्ष्म-श्रवणात् ।

ಶರೀರ ಶಬ್ದಕ್ಕೆ ರೂಢ್ಯರ್ಥವನ್ನು ಸ್ವೀಕರಿಸುವುದೇ ನ್ಯಾಯವೆಂದು ಹಿಂದೆ ಸಮರ್ಥಿಸಿದ್ದರಲ್ಲವೇ? ಎಂಬ ಪ್ರಶ್ನೆಗೆ 'ರೂಢಸ್ಯ' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. ಹಿಂದೆ ಹೇಳಿದ ಬಾಧಕಗಳಿರುವುದರಿಂದ ರೂಢ್ಯರ್ಥವನ್ನು ಬಿಡಬಹುದೆಂದು ತಿಳಿಯಬೇಕು. ಈ ವಿಷಯದಲ್ಲಿ ದೃಷ್ಟಾಂತವನ್ನು 'ಯಥಾ' ಇತ್ಯಾದಿ ವಾಕ್ಯದಿಂದ ನೀಡುತ್ತಿದ್ದಾರೆ. ''ಕದಾಚನ ಸ್ತರೀರಸಿ ನೇಂದ್ರ'' ಎಂಬುದು ಪುರೋನುವಾಕ್ಯಾ ಮಂತ್ರ ''ನಿವೇಶನಃ'' ಎಂಬುದು ಯಾಜ್ಯಾಮಂತ್ರ. ಏಕೆಂದರೆ ''ಇಂದ್ರೋ ನ ತಸ್ಥೌ'' ಎಂಬುದಾಗಿ ಮುಂದೆ ಲಕ್ಷಣವು ಕೇಳಿಸುತ್ತಿರುವುದರಿಂದ.

**प्रकाशः** – तत्र ''ऐन्द्र्या गार्हपत्यमुपतिष्ठते'' इति श्रौतविनियोगेन मन्त्रस्य गार्हपत्यशेषतया तत्प्रकाशकत्वान्मन्त्रस्थेन्द्रशब्दस्येदिधात्वर्थस्वोचितैश्वर्ययोगेन वा यज्ञसाधनत्वगुणमूलया गौण्या वृत्त्या वेत्यर्थः ।

ಪೂರ್ವಮೀಮಾಂಸೆಯಲ್ಲಿ 'ಐಂದ್ರ್ಯಾ ಗಾರ್ಹಪತ್ಯಮುಪತಿಷ್ಠತೇ' ಎಂಬಲ್ಲಿ 'ಉಪತಿಷ್ಠತೇ' ಎಂಬ ಶ್ರುತ್ಯುಕ್ತವಿನಿಯೋಗದಿಂದ ಐಂದ್ರೀಮಂತ್ರಕ್ಕೆ ಗಾರ್ಹಪತ್ಯಶೇಷತ್ವವನ್ನು ಅಂಗೀಕರಿಸಲಾಗಿದೆ. ಅಂದರೆ ಅಗ್ನಿಯೆನಿಸಿದ ಗಾರ್ಹಪತ್ಯನಲ್ಲಿ ಇಂದ್ರ ಶಬ್ದವನ್ನು ಪ್ರಯೋಗಿಸಲಾಗಿದೆ. ಇದು ತಪ್ಪಲ್ಲವೇ ? ಎಂಬ ಪ್ರಶ್ನೆ ಬಂದರೆ ಸಮಾಧಾನ ಹೀಗಿದೆ - ಗಾರ್ಹಪತ್ಯಾಗ್ನಿಯಲ್ಲಿಯೂ ತನಗೆ ಉಚಿತವಾದ ಐಶ್ವರ್ಯವಿರುತ್ತದೆ. ಆದ್ದರಿಂದ 'ಇದಿ' ಧಾತ್ವರ್ಥವಾದ ಐಶ್ವರ್ಯವೆಂಬ ಯೋಗಾರ್ಥವನ್ನು ಅಗ್ನಿಯಲ್ಲಿ ಹೇಳಬಹುದು. ಅಥವಾ ಇಂದ್ರನಂತೆ ಅಗ್ನಿಯೂ ಸಹ ಯಜ್ಞಸಾಧನನಾದ್ದರಿಂದ ಇಂದ್ರ ಎನಿಸಬಹುದು. ಹೀಗೆ ಯೋಗವೃತ್ತಿಯಿಂದ ಅಥವಾ ಗೌಣೀ ವೃತ್ತಿಯಿಂದ ಇಂದ್ರ ಶಬ್ದವನ್ನು ಗಾರ್ಹಪತ್ಯಾಗ್ನಿಯಲ್ಲಿ ಪ್ರಯೋಗಿಸಲಾಗಿದೆ.

**प्रकाशः** – उक्तं हीति । तृतीये वार्तिककृतेत्यर्थः । पूर्वार्धं व्यनक्ति – तथेति ।

शीर्यते नित्यमेवास्माद्विष्णोस्तु जगदीदृशम् ।
रमते च परो ह्यस्मिन् शरीरं तस्य तज्जगत् ।

इति उक्तयोगेनेत्यर्थः ।

'ಉಕ್ತಂ ಹಿ' ಎಂದರೆ ಶ್ಲೋಕವಾರ್ತಿಕದ ಮೂರನೇ ಅಧ್ಯಾಯದಲ್ಲಿ ಹೇಳಲ್ಪಟ್ಟಿದೆ ಎಂದರ್ಥ. ಶ್ಲೋಕದ ಪೂರ್ವಾರ್ಧವನ್ನು 'ತಥಾ' ಎಂಬ ವಾಕ್ಯದಿಂದ ವ್ಯಾಖ್ಯಾನಿಸುತ್ತಿದ್ದಾರೆ.

ಶೀರ್ಯತೇ ನಿತ್ಯಮೇವಾಸ್ಮಾದ್ವಿಷ್ಣೋಸ್ತು ಜಗದೀದೃಶಮ್ ।
ರಮತೇ ಚ ಪರೋ ಹ್ಯಸ್ಮಿನ್ ಶರೀರಂ ತಸ್ಯ ತಜ್ಜಗತ್ ॥

ನಿತ್ಯವಾಗಿ ಭಗವದಧೀನವಾಗಿ ಜಗತ್ ನಾಶಗೊಳ್ಳುತ್ತದೆ. ಶ್ರೇಷ್ಠನಾದ ಭಗವಂತನು ಅಂತಹ ಜಗತ್ತಿನಲ್ಲಿ ನೆಲೆಸಿ ವಿಹರಿಸುತ್ತಾನೆ. ಆದ್ದರಿಂದ ಜಗತ್ತು ಅವನಿಗೆ ಶರೀರ ಎನಿಸಿದೆಯೆಂಬ ಯೋಗವೃತ್ತಿಯಿಂದ ಶರೀರಶಬ್ದವನ್ನು ವಿಷ್ಣುವಿನಲ್ಲಿ ಪ್ರಯೋಗಿಸಬಹುದು.

ಪರಿಪೂರ್ಣಚಂದ್ರಿಕಾ

**प्रकाशः** – ननु यौगिकमपि शरीरत्वं पृथिव्यादेरपि चित्त्वेनायुक्तं, ''यस्यात्मा शरीरम्'' इत्याद्ययोगश्च, चेतननित्यतायाः ''यावदात्मभावित्वाच्च न दोषः'' इत्यादौ सेत्स्यमानत्वादित्यत आह – **चेतनानामपीति** ।

ಶರೀರಶಬ್ದಕ್ಕೆ ಯೌಗಿಕಾರ್ಥವನ್ನು ಸ್ವೀಕರಿಸುವುದಾದರೆ ಅಂತಹ ಶರೀರತ್ವವು ಪೃಥಿವ್ಯಾದಿಗಳೂ ಸಹ ಅಯುಕ್ತವಾಗುತ್ತದೆ. 'ಚಿತ್' ಆದ್ದರಿಂದ ''ಯಸ್ಯಾತ್ಮಾ ಶರೀರಂ'' ಎಂಬಲ್ಲಿ ಹೇಳಲ್ಪಟ್ಟ ಆತ್ಮನ ಶರೀರ ಎಂಬ ಪ್ರಯೋಗವೂ ಸಹ ಅಯುಕ್ತವಾಗುತ್ತದೆ. ಏಕೆಂದರೆ ''ಯಾವದಾತ್ಮಭಾವಿತ್ವಾಚ್ಚ ನ ದೋಷಃ'' ಇತ್ಯಾದಿ ಸ್ಥಳಗಳಲ್ಲಿ ಚೇತನನಿತ್ಯತ್ವವನ್ನು ಸಮರ್ಥಿಸಲಾಗುತ್ತದೆ. ಆದ್ದರಿಂದ ನೀವು ಹೇಳಿದ ಯೋಗಾರ್ಥವು ತಪ್ಪಾಗುತ್ತದಲ್ಲವೇ? ಈ ಪ್ರಶ್ನೆಗೆ ''ಚೇತನಾನಾಮಪಿ'' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

**प्रकाशः** – तादृशदेहसम्बन्धश्च ''ज्ञोऽत एव'' ''युक्तेश्च'' इत्यत्र सेत्स्यतीति भावः । एतेन दिशामप्यवान्तराभिमानिदेहद्वारा शीर्णताऽस्त्येवेति तत्रापि नायुक्तमिति ध्येयम् ।

ನಿತ್ಯನಾದ ಚೇತನನಿಗೆ ಅನಿತ್ಯವಾದ ದೇಹದ ಸಂಬಂಧವನ್ನು ಹೇಳಬಹುದೆಂದು ''ಜ್ಞೋऽತ ಏವ'' ಮತ್ತು ''ಯುಕ್ತೇಶ್ಚ'' ಸೂತ್ರದಲ್ಲಿ ಸಮರ್ಥಿಸುತ್ತಾರೆ ಎಂದು ಅಭಿಪ್ರಾಯ. ಹೀಗೆ ಹೇಳಿದ್ದರಿಂದ ದಿಕ್ಕುಗಳಿಗೂ ಅವಾಂತರ ಅಭಿಮಾನಿ ದೇವತೆಗಳ ದೇಹದ ಮೂಲಕವಾಗಿ ನಾಶಹೊಂದುವಿಕೆ ಎಂಬುದು ಉಪಪನ್ನವಾಗುತ್ತದೆ. ಆದ್ದರಿಂದ ಅವರಲ್ಲಿ ಪ್ರಯೋಗಿಸಲ್ಪಟ್ಟ ಶರೀರ ಶಬ್ದವೂ ಸಹ ಅಯುಕ್ತವಾಗುವುದಿಲ್ಲವೆಂದು ತಿಳಿಯಬೇಕು.

**गुरुराजीयम्** – **यमित्यस्य वैयर्थ्यमिति** ।। विशेषविधेश्शेषनिषेधनान्तरीयकत्ववद्विशेषनिषेधस्य शेषविधिनान्तरीयकत्वस्यापि सत्त्वात् 'यमिति विशेषनिषेधेनान्यज्ञानत्वं लभ्यते । तच्च पृथिव्यादेर्जडत्वादयुक्तमिति भावः । नन्वभिमानिजीवानां दुर्ज्ञानत्वात्' 'आत्मा न वेद' इत्युपपन्नमित्यरुच्याऽह – **अप्रसक्तेरिति** ।। किं चाभिमानिपरत्वे 'यः पृथिव्या अन्तरः' इत्युक्तान्तरत्वानुपपत्तिः । ननु चान्तरत्वं यदि भिन्नत्वं यदि वाऽन्तस्स्थत्वं द्वयमपि पृथिव्यादिशरीरकेऽभिमानिनि युक्तमित्युक्तमित्यत आह – **अन्तरत्वं चेति** ।।




ಅಧಿಕರಣದ ಸಿದ್ಧಾಂತ ಹೀಗಿದೆ - ಸಕಲರಲ್ಲಿ ಅಂತರ್ಯಾಮಿಯಾಗಿ ನೆಲೆಸಿರುವವನು ಮಹಾವಿಷ್ಣುವೇ ಆಗಿದ್ದಾನೆ. ಯಾವ ಶ್ರುತಿಯು ಹೀಗೆ ಹೇಳುತ್ತಿದೆಯೋ ಅದೇ ಶ್ರುತಿಯಲ್ಲಿ ಕೇಳಿಸುತ್ತಿರುವ ಪೃಥಿವ್ಯಾದ್ಯವಿದಿತತ್ವವು ವಿಷ್ಣುವಿನಲ್ಲಿ ಸುಲಭವಾಗಿ ಬರುತ್ತದೆ. ಪೃಥಿವೀ ಶಬ್ದಕ್ಕೆ ಜಡವೆಂದು ಅರ್ಥವಲ್ಲ. ಹಾಗಾದಲ್ಲಿ ಅಪ್ರಸಕ್ತ ವಿಷಯ ನಿಷೇಧ ಮಾಡಿದಂತಾಗುತ್ತದೆ ಆದ್ದರಿಂದ ಅಭಿಮಾನಿಚೇತನರೆಂಬರ್ಥವನ್ನು ಹೇಳಬೇಕು. ಅಂತಹ ಅಭಿಮಾನಿಚೇತನರಿಂದ ಸಂಪೂರ್ಣವಾಗಿ ತಿಳಿಯಲು ಅಸಮರ್ಥನಾದವನು ಈಶ್ವರನೊಬ್ಬನೇ ಹೊರತು ಪ್ರಕೃತ್ಯಾದಿಗಳಲ್ಲ.

ಅಂತರತ್ವವೂ ಸಹ ವಿಷ್ಣುವಿನ ಧರ್ಮವೇ ಆಗಿದೆ -

ಪೃಥಿವ್ಯಾದ್ಯವಿದಿತತ್ವವು ಪರಮಾತ್ಮನಲ್ಲಿ ಬರುವಂತೆ ಅಂತರತ್ವವೂ ಸಹ ಬರುತ್ತದೆ. ಏಕೆಂದರೆ ಬಾಹ್ಯಪದಾರ್ಥಗಳ ಅಪೇಕ್ಷೆಯಿಲ್ಲದೇ ಯಾರು ವಿಹರಿಸುತ್ತಾರೋ ಅಂತಹವನು 'ಅಂತರಃ' ಎನಿಸುತ್ತಾನೆ. ಮತ್ತು ಅತ್ಯಂತ ಪ್ರಿಯನಾದ್ದರಿಂದಲೂ ಶ್ರೀಹರಿಯು ಅಂತರನೆಂದು ಹೇಳಲ್ಪಟ್ಟಿದ್ದಾನೆ.

ಪೂರ್ವಪಕ್ಷಕ್ಕೆ ಪ್ರಬಲ ಹೇತುವಾಗಿರುವ ಪೃಥಿವ್ಯಾದಿ ಶರೀರತ್ವವೂ ಸಹ ವಿಷ್ಣುವಿನಲ್ಲೇ ಉಪಪನ್ನವಾಗುತ್ತದೆ. ಅಗ್ನಿಯಲ್ಲಿ ಇಂದ್ರ ಶಬ್ದಪ್ರಯೋಗವನ್ನು ಯೌಗಿಕವಾಗಿ ಮತ್ತು ಗೌಣವಾಗಿ ಮಾಡುವಂತೆ ವಿಷ್ಣುವಿನಲ್ಲೂ ಯೌಗಿಕವಾಗಿ ಮತ್ತು ಗೌಣವಾಗಿ ಪೃಥಿವ್ಯಾದಿಶರೀರತ್ವವನ್ನು ಕೂಡಿಸಬೇಕು. ರೂಢ್ಯರ್ಥದಲ್ಲಿ ಬಾಧವಿರುವುದೇ ಇದಕ್ಕೆ ಕಾರಣ.



● ● ● ● ●

ಸೂತ್ರಗಳ ಜೋಡಣೆಯು ಸ್ವಾರಸ್ಯಮಯವಾಗಿದೆ

## तात्पर्यचन्द्रिका

**शरीरत्वस्य गौणत्वं च बृहदारण्यकभाष्ये उक्तम् । तेन पुराणादिषु प्रपञ्चे ब्रह्मकायत्वाद्युक्तिरपि समर्थिता ।**

ಅನುವಾದ - ಶರೀರತ್ವವು ಗೌಣವಾಗಿದೆಯೆಂದು ಭಾಷ್ಯಟೀಕೆಗಳಲ್ಲಿ ಹೇಳದಿದ್ದರೂ ಬೃಹದಾರಣ್ಯಕದ ಭಾಷ್ಯದಲ್ಲಿ ಹೇಳಿದ್ದಾರೆ. ಇದರಿಂದ ಪುರಾಣಾದಿಗಳಲ್ಲಿ ಪ್ರಪಂಚವನ್ನು ಬ್ರಹ್ಮನ ಕಾಯವೆಂದು ಹೇಳಿದ್ದನ್ನು ಸಮರ್ಥಿಸಿದಂತಾಯಿತು.

**एवञ्च ''य आत्मनि तिष्ठन्'' इत्यादिकं च क्लेशेन न नेयमिति । एतदेवाभिप्रेत्योक्तं न्यायविवरणे – ''पृथिव्यादिशरीरत्वं च न निरवकाशं, यौगिक-शरीरत्वोपपत्तेर्विष्णोरपि'' इति ।**

ಪರಿಪೂರ್ಣಚಂದ್ರಿಕಾ

ಆದ್ದರಿಂದ "ಯ ಆತ್ಮನಿ ತಿಷ್ಠನ್" ಎಂಬುದನ್ನು ಭೇದಾಭೇದವನ್ನು ಒಪ್ಪುವ ಮೂಲಕ ಕಷ್ಟದಿಂದ ಅರ್ಥೈಸಬೇಕಾಗಿಲ್ಲ. ಇದೇ ಅಭಿಪ್ರಾಯದಿಂದಲೇ ನ್ಯಾಯವಿವರಣದಲ್ಲಿ "ಪೃಥಿವ್ಯಾದಿಶರೀರತ್ವಂ ಚ ನ ನಿರವಕಾಶಂ, ಯೌಗಿಕಶರೀರತ್ವೋಪಪತ್ತೇರ್ವಿಷ್ಣೋರಪಿ" ಪೃಥಿವ್ಯಾದಿ ಶರೀರತ್ವವು ನಿರವಕಾಶವಾಗಿಲ್ಲ. ಯೌಗಿಕವಾದ ಶರೀರತ್ವವನ್ನು ವಿಷ್ಣುವಿನಲ್ಲೂ ಕೂಡಿಸಬಹುದು ಎಂದು ಹೇಳಿದ್ದಾರೆ.

**सूत्रक्रमस्तु – आद्ये स्वपक्षसाधकोक्तिः, द्वितीये प्रधानजीवपक्षयोः साधकाभावोक्तिः, तृतीयसूत्रस्थस्य 'शारीरश्च' इत्यस्यात्रापि सम्बन्धात्, तृतीये जीवपक्षे बाधकोक्तिरिति ।**

ಸೂತ್ರಗಳ ಜೋಡಣೆಯು ಸ್ವಾರಸ್ಯಮಯವಾಗಿದೆ. ಮೊದಲನೆಯ ಸೂತ್ರವು ಸ್ವಪಕ್ಷದಲ್ಲಿ ಸಾಧಕಪ್ರಮಾಣವನ್ನು ಹೇಳಿದೆ.

ಎರಡನೆಯ ಸೂತ್ರವು ಪ್ರಧಾನ ಹಾಗೂ ಜೀವಪಕ್ಷಗಳಲ್ಲಿ ಸಾಧಕವಿಲ್ಲವೆಂದು ಹೇಳಿದೆ. ಏಕೆಂದರೆ ಮೂರನೆಯ ಸೂತ್ರದಲ್ಲಿರುವ 'ಶಾರೀರಶ್ಚ' ಎಂಬ ಪದವು ಎರಡನೆಯ ಸೂತ್ರದಲ್ಲೂ ಅನ್ವಯವಾಗುತ್ತದೆ.

ಮೂರನೆಯ ಸೂತ್ರದಲ್ಲಿ ಜೀವಪಕ್ಷದಲ್ಲಿ ಬಾಧಕವನ್ನು ಹೇಳಲಾಗಿದೆ.

**प्रकाशः –**

गौणत्वं भाष्यटीकयोर्नोक्तमित्यत आह – **शरीरत्वस्येति** ।

पृथिव्याद्या देवतास्तु देहवद्वशत्वतः ।
शरीरमिति चोच्यन्ते यस्य विष्णोर्महात्मनः ।।

इति स्मृत्या शरीरस्य यथा जीववशत्वं, तथा पृथिव्याद्यभिमानिजीवानामीश्वरवशत्वात्तच्छरीरत्वमिति गौणत्वमुक्तमित्यर्थः । तथा च भाष्यद्वयानुसाराद् द्वयमप्यस्माभिरुक्तमिति भावः ।

ವಿವರಣೆ - ಶರೀರಶಬ್ದಕ್ಕೆ ಗೌಣಾರ್ಥವನ್ನು ಮಾಡಬೇಕೆಂದು ಭಾಷ್ಯದಲ್ಲಾಗಲೀ, ಟೀಕೆಯಲ್ಲಾಗಲೀ ಹೇಳಿದ್ದು ಕಾಣಿಸುತ್ತಿಲ್ಲ. ಹೀಗಿರುವಾಗ ಗ್ರಂಥಕಾರರು ಯೋಗಾರ್ಥದ ಜೊತೆಗೆ ಗೌಣಾರ್ಥವನ್ನು ಹೇಗೆ ಸ್ವೀಕರಿಸಿದರು? ಎಂಬ ಪ್ರಶ್ನೆಗೆ 'ಶರೀರತ್ವಸ್ಯ' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

ಪೃಥಿವ್ಯಾದ್ಯಾ ದೇವತಾಸ್ತು ದೇಹವದ್ಯದ್ವಶತ್ವತಃ।
ಶರೀರಮಿತಿ ಚೋಚ್ಯಂತೇ ಯಸ್ಯ ವಿಷ್ಣೋರ್ಮಹಾತ್ಮನಃ॥

'ಪೃಥಿವೀ ಮೊದಲಾದ ದೇವತೆಗಳು ಭಗವಂತನ ಶರೀರ ಎಂದು ಕರೆಯಲ್ಪಡುತ್ತಾರೆ. ಏಕೆಂದರೆ ದೇಹದಂತೆ ಮಹಾತ್ಮನಾದ ವಿಷ್ಣುವಿಗೆ ಅಧೀನರಾಗಿದ್ದಾರೆ ಆದ್ದರಿಂದ ಎಂದು ಹೇಳಲಾಗಿದೆ' ಎಂಬ ಸ್ಮೃತಿಯಂತೆ ಶರೀರವು ಯಾವರೀತಿಯಾಗಿ ಆತ್ಮನ ಅಧೀನವಾಗಿದೆಯೋ, ಅದರಂತೆ ಪೃಥಿವ್ಯಾದ್ಯಭಿಮಾನಿ ಚೇತನರೂ ಸಹ ಈಶ್ವರನ ಅಧೀನರಾಗಿದ್ದಾರೆ. ಈ ಕಾರಣದಿಂದ ಪೃಥಿವ್ಯಾದಿ ಚೇತನರು ಭಗವಂತನಿಗೆ ಶರೀರ ಎನಿಸುತ್ತಾರೆ. ಹೀಗೆ ಗೌಣಾರ್ಥವನ್ನು ಮಾಡಬೇಕೆಂದು ಬೃಹದಾರಣ್ಯಕದ ಭಾಷ್ಯದಲ್ಲಿ ಹೇಳಿದ್ದಾರೆಂದು ತಿಳಿಯಬೇಕು. ಆದ್ದರಿಂದ ಪ್ರಕೃತ ಎರಡೂ ಭಾಷ್ಯಗಳನ್ನು ಅನುಸರಿಸಿ ಯೋಗಾರ್ಥ ಹಾಗೂ ಗೌಣಾರ್ಥಗಳನ್ನು ನಾವು ಅನುಸರಿಸಿದ್ದೇವೆಂದು ತಿಳಿದುಕೊಳ್ಳಬೇಕು.

**प्रकाशः** – गौणत्वोक्तेः फलमाह – **तेनेति** । गौणत्वकथनेनेत्यर्थः ।

ಗೌಣಾರ್ಥವನ್ನು ಹೇಳಿದ್ದಕ್ಕೆ ಏನು ಪ್ರಯೋಜನ ? ಎಂಬ ಪ್ರಶ್ನೆಗೆ 'ತೇನ' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. ಅಂದರೆ ಗೌಣತ್ವವನ್ನು ಹೇಳಿದ್ದರಿಂದ ಬೇರೆಕಡೆ ಪ್ರಸಿದ್ಧವಾಗಿರುವ ಪ್ರಪಂಚವು ಬ್ರಹ್ಮನ ಶರೀರವಾಗಿದೆ ಎಂಬುದನ್ನು ಸಮರ್ಥಿಸಿದಂತಾಗುತ್ತದೆ; ಇದೇ ಫಲ ಎಂದರ್ಥ.

**प्रकाशः** – **पुराणादिष्विति** ।

'स विश्वकायः पुरुहूत ईशः सत्यं परञ्ज्योतिरजः पुराणः ।'

इत्यादिभागवतादिष्वित्यर्थः । **कायत्वादीति** । देहत्वविग्रहत्वाद्युक्तिरादिपदार्थः । **क्लेशेनेति** । तच्छरीरस्य प्राकृतत्वभेदाभेदादिना ।

'ಪುರಾಣಾದಿಷು' ಎಂದರೆ 'ಸ ವಿಶ್ವಕಾಯಃ ಪುರುಹೂತ ಈಶಃ ಸತ್ಯಂ ಪರಂಜ್ಯೋತಿರಜಃ ಪುರಾಣಃ' ಮೊದಲಾದ ಭಾಗವತದ ಮಾತುಗಳಲ್ಲಿ ಎಂದರ್ಥ. 'ಕಾಯತ್ವಾದಿ' ಎಂಬಲ್ಲಿರುವ ಆದಿಪದದಿಂದ 'ದೇಹತ್ವ, ವಿಗ್ರಹತ್ವ' ಮೊದಲಾದ ಪ್ರಯೋಗಗಳನ್ನೂ ಸಹ ವಿವಕ್ಷಿಸಬೇಕು. 'ಕ್ಲೇಶೇನ' ಎಂದರೆ ಭೇದಾಭೇದವನ್ನು ಅಂಗೀಕರಿಸಿದ್ದರಿಂದ ಎಂದರ್ಥ. ಅಂದರೆ ಕಾರ್ಯಕ್ಕೂ ಕಾರಣಕ್ಕೂ ಭೇದಾಭೇದವನ್ನು ಅಂಗೀಕರಿಸಿ 'ಪೃಥಿವ್ಯಾಂ ತಿಷ್ಠನ್' ಎಂಬ ಆಧಾರಾಧೇಯಭಾವವನ್ನು ಕಷ್ಟಪಟ್ಟು ಕೂಡಿಸಿದ್ದರಿಂದ ಎಂದು ತಿಳಿಯಬೇಕು.

**प्रकाशः** – **यौगिकेति** । गौणशरीरत्वेत्यपि ग्राह्यम् । अविदितत्वादिनिरवकाशबाधकबलेन प्रथमप्राप्ताया अपि रूढेः परित्यागोपपत्तेरिति भावः ।

'ಯೌಗಿಕ' ಎಂಬ ಪದದಿಂದ 'ಗೌಣಶರೀರತ್ವ' ಎಂಬ ಮಾತನ್ನೂ ಸ್ವೀಕರಿಸಬೇಕು. ಅವಿದಿತತ್ವ ಮುಂತಾದ ನಿರವಕಾಶ ಬಾಧಕಗಳ ಲಿಂಗಗಳ ಬಲದಿಂದ ಪ್ರಥಮ ಪ್ರಾಪ್ತವಾಗಿದ್ದರೂ ರೂಢಿಯನ್ನು ಬಿಡಬೇಕೆಂದು ಅಭಿಪ್ರಾಯ.

ಪರಿಪೂರ್ಣಚಂದ್ರಿಕಾ

**प्रकाशः – आद्य इति ।** ''अन्तर्याम्यधिदैवादिषु तद्धर्मव्यपदेशात्'' इत्यत्र भाष्यादावविदितत्वान्तरत्वयोरुक्तेरिति भावः । 'द्वितीये' ''नच स्मार्तमतद्धर्माभिलापात्'' इत्यत्र ।

'ಆದ್ಯೇ' ಎಂದರೆ ''ಅಂತರ್ಯಾಮ್ಯಧಿದೈವಾದಿಷು ತದ್ಧರ್ಮವ್ಯಪದೇಶಾತ್'' ಎಂಬ ಮೊದಲನೆಯ ಸೂತ್ರದಲ್ಲಿ ಭಾಷ್ಯಾದಿಗಳಲ್ಲಿ ಅವಿದಿತತ್ವ ಹಾಗೂ ಅಂತರತ್ವಗಳೆಂಬ ಸಾವಕಾಶಲಿಂಗಗಳನ್ನು ಹೇಳಿದ್ದಾರೆಂದು ಅಭಿಪ್ರಾಯ. 'ದ್ವಿತೀಯೇ' ಎಂದರೆ ''ನಚ ಸ್ಮಾರ್ತಮತದ್ಧರ್ಮಾಭಿಲಾಪಾತ್'' ಎಂಬ ಎರಡನೆಯ ಸೂತ್ರದಲ್ಲಿ ಎಂದರ್ಥ.

**प्रकाशः –** भाष्ये त्रिगुणत्वोपादानत्वादिप्रधानधर्मोक्त्यभावात्कापिलस्मृतौ पृथिव्याद्यात्मकतयोक्तप्रधानं नान्तर्यामीत्युक्त्या संसारित्वादितद्धर्माभिलापाभावात् जीवोऽपि नेति लब्धत्वात् 'प्रधानजीव' इत्युक्तम् । जीवपदाभावात् कथमेतदित्यत आह – **तृतीयेति ।**

ಬೃಹದಾರಣ್ಯಕದ ಭಾಷ್ಯದಲ್ಲಿ ಕಾಪಿಲಸ್ಮೃತಿಯನ್ನು ಉದಾಹರಿಸಿದ್ದಾರೆ. ಅದರಲ್ಲಿ ತ್ರಿಗುಣತ್ವ, ಉಪಾದಾನತ್ವ ಮೊದಲಾದ ಪ್ರಕೃತಿಯ ಧರ್ಮವನ್ನು ಹೇಳಿದ್ದು ಕಾಣಿಸುವುದಿಲ್ಲ. ಆದ್ದರಿಂದ ಪೃಥಿವ್ಯಾದ್ಯಾತ್ಮಕವೆಂದು ಹೇಳಲ್ಪಟ್ಟ ಪ್ರಕೃತಿಯನ್ನು ಅಂತರ್ಯಾಮಿಯೆಂದು ಹೇಳಬಾರದು. ಹೀಗೆ ಹೇಳಿದ್ದರಿಂದಲೇ ಸಂಸಾರಿತ್ವವೇ ಮೊದಲಾದ ಜೀವನ ಧರ್ಮಗಳೂ ಸಹ ಕೇಳಿಸದ ಕಾರಣ ಜೀವನೂ ಸಹ ಅಂತರ್ಯಾಮಿಯಾಗುವುದಿಲ್ಲವೆಂದು ಅರ್ಥಾತ್ ಸಿದ್ಧವಾಗುತ್ತದೆ. ಈ ಅಭಿಪ್ರಾಯದಿಂದಲೇ ಗ್ರಂಥಕಾರರು 'ಪ್ರಧಾನ, ಜೀವ' ಎಂದು ಹೇಳಿದ್ದಾರೆ.

ಸೂತ್ರದಲ್ಲಿ ಜೀವಪದವು ಕೇಳಿಸದ ಕಾರಣ ಹೀಗೆ ಹೇಳುವುದು ತಪ್ಪಲ್ಲವೇ? ಎಂಬ ಪ್ರಶ್ನೆಗೆ 'ತೃತಿಯೇ' ಎಂಬುದರಿಂದ ಉತ್ತರಿಸುತ್ತಿದ್ದಾರೆ.

**प्रकाशः –** एतेन जीवपक्षे साधकं नेत्यनुक्त्वा कथं बाधकोक्त्यवसर इति प्रत्युक्तम् । एतेन ''यज्जीवनोऽन्तर्यामीत्युक्तम्, तदपि संसारित्वाद्य-तद्धर्माभिलापादिना निरस्तमपि विशेषयुक्त्या पराकुर्वत्सूत्रम्'' इति टीकोक्तं सूत्रारूढं दर्शितम् ।

ಹೀಗೆ ಹೇಳಿದ್ದರಿಂದ ಜೀವಪಕ್ಷದಲ್ಲಿ ಸಾಧಕವಿಲ್ಲವೆಂದು ಹೇಳದೆ ಬಾಧಕವನ್ನು ಹೇಳುವುದು ತಪ್ಪಲ್ಲವೇ? ಎಂಬ ಶಂಕೆಯನ್ನು ನಿರಾಕರಿಸಿದಂತಾಯಿತು. ಏಕೆಂದರೆ 'ನಚಸ್ಮಾರ್ತಮ್' ಎಂಬ ಎರಡನೆಯ ಸೂತ್ರದಲ್ಲೇ ಸಾಧಕವಿಲ್ಲವೆಂದು ಈಗ ಹೇಳಿದಂತೆ ಸಮರ್ಥಿಸಿದ್ದೇವೆ.

ಅಂತರ್ಯಾಮ್ಯಧಿಕರಣ (೧-೨-೫)

ಇದರಿಂದ ಟೀಕಾಮಾತನ್ನು ಸೂತ್ರಾರೂಢ ಮಾಡಿದಂತೆಯೂ ಆಯಿತು. ಹೇಗೆಂದರೆ - ಟೀಕೆಯ ಮಾತು ಹೀಗಿದೆ - ''ಯಜ್ಜೀವನೋಽಂತರ್ಯಾಮೀತ್ಯುಕ್ತಮ್, ತದಪಿ ಸಂಸಾರಿತ್ವಾದ್ಯತದ್ಧರ್ಮಾಭಿಲಾಪಾದಿನಾ ನಿರಸ್ತಮಪಿ ವಿಶೇಷಯುಕ್ತ್ಯಾ ಪರಾಕುರ್ವತ್‌ಸೂತ್ರಂ'' ಎಂದು "ಜೀವನು ಅಂತರ್ಯಾಮಿಯಾಗಿದ್ದಾನೆಂದು ಹೇಳಿದ್ದು ಸರಿಯಲ್ಲ. ಏಕೆಂದರೆ ಸಂಸಾರಿತ್ವವೇ ಮೊದಲಾದ ಜೀವನ ಧರ್ಮಗಳನ್ನು ಹೇಳದ ಕಾರಣ ಜೀವಪಕ್ಷವನ್ನು ನಿರಾಕರಿಸಿದಂತಾಯಿತು. ಆದರೂ ಸಹ ವಿಶೇಷ ಯುಕ್ತಿಯಿಂದ ನಿರಾಕರಿಸಲು ಮುಂದಿನ ಸೂತ್ರ ಹೊರಟಿದೆ'' ಎಂದು. ಈ ಟೀಕೆಯ ಮಾತಿನ ಅರ್ಥ. ಇದು ಮುಂದಿನ ಸೂತ್ರದಿಂದ ಶಾರೀರ ಪದವನ್ನು ಎರಡನೇ ಸೂತ್ರದಲ್ಲಿ ಅನುಕರ್ಷ ಮಾಡಿದ್ದರಿಂದ ಸೂತ್ರಾರೂಢವಾಯಿತು.

**प्रकाशः – 'अतद्धर्माभिलापात्' इत्यत्र समासनिर्वाहस्तु ''नानुमानमतच्छब्दात्'' इत्यत्र करिष्यत इति भावः ।**

'ಅತದ್ಧರ್ಮಾಭಿಲಾಪಾತ್' ಎಂಬಲ್ಲಿ "ತದ್ಧರ್ಮಾಣಾಮ್ ಅಭಿಲಾಪಃ ತದ್ಧರ್ಮಾಭಿಲಾಪಃ ತದ್ಧರ್ಮಾಭಿಲಾಪಸ್ಯ ಅಭಾವಃ = ಅತದ್ಧರ್ಮಾಭಿಲಾಪಃ, ತಸ್ಮಾತ್ = ಅತದ್ಧರ್ಮಾಭಿಲಾಪಾತ್'' ಎಂದು ಸಮಾಸ ಮಾಡಬೇಕು. ಆದರೆ ಇಲ್ಲಿರುವ 'ನಞ್' ಗೆ ಅಭಾವವೆಂದರ್ಥವನ್ನು ಹೇಳಿದ್ದರಿಂದ ಪ್ರಸಜ್ಯಪ್ರತಿಷೇಧ ಎಂಬರ್ಥವನ್ನು ಹೇಳಿದಂತಾಯಿತು. ಆವಾಗ ಸಮಾಸವಾಗುವುದಿಲ್ಲವೆಂದು ವ್ಯಾಕರಣದಲ್ಲಿ ನಿರ್ಣಯಿಸಿದ್ದಾರೆ. ಹೀಗಿರುವಾಗ ಸೂತ್ರಕಾರರು 'ಅತದ್ಧರ್ಮಾಭಿಲಾಪಾತ್' ಎಂದು ಹೇಗೆ ಸಮಾಸ ಮಾಡಿದರು? ಎಂದರೆ

ಇಲ್ಲಿ ಹೇಗೆ ಸಮಾಸವಾಗುತ್ತದೆಂಬುದನ್ನು "ನಾನುಮಾನಮತಚ್ಛಬ್ದಾತ್'' ಎಂಬ ಸೂತ್ರದಲ್ಲಿ ಸಮರ್ಥಿಸುತ್ತೇವೆ.

**प्रकाशः – तृतीय इति । ''शारीरश्चोभयेऽपि हि भेदेनैनमधीयते'' इत्यत्र ''आत्मनोऽन्तरः'' इति माध्यन्दिनाः ''विज्ञानादन्तरः'' इति काण्वाश्च जीवं विज्ञानादन्तर्यामिणो भेदेनाधीयत इति शारीरो नान्तर्यामीति भेदाध्ययन-रूपबाधकोक्तिरित्यर्थः ।**

'ತೃತೀಯೇ' ಎಂದರೆ ಮೂರನೆಯ ಸೂತ್ರದಲ್ಲಿ ಎಂದರ್ಥ. ಎಂದರೆ -"ಶಾರೀರಶ್ಚೋಭಯೇಽಪಿ ಹಿ ಭೇದೇನೈನಮಧೀಯತೇ'' ಎಂಬ ಸೂತ್ರದಲ್ಲಿ "ಆತ್ಮನೋಽಂತರಃ" ಎಂದು ಮಾಧ್ಯಂದಿನ ಶಾಖೆಯವರೂ ಹಾಗೂ ಶಾಖೆಗಳನ್ನು 'ವಿಜ್ಞಾನಾದಂತರಃ' ಕಾಣ್ವಶಾಖಿಗಳೂ ವಿಜ್ಞಾನಮಯನಾದ ಅಂತರ್ಯಾಮಿಯಿಂದ ಜೀವನಿಗೆ ಭೇದವಿದೆಯೆಂದು ಅಧ್ಯಯನ ಮಾಡುತ್ತಾರೆ. ಹೀಗೆ ಶಾರೀರನಾದ ಜೀವನು ಅಂತರ್ಯಾಮಿಯಾಗುವುದಿಲ್ಲವೆಂಬುದು ಭೇದಾಧ್ಯಯನವೆಂಬ ಬಾಧಕದಿಂದ ತಿಳಿಯುತ್ತದೆ ಎಂದಭಿಪ್ರಾಯ.

**प्रकाशः – यद्यपि चकारात् ' ''यस्तेजसि तिष्ठन्'' इत्यादिना श्रीभूदुर्गा-रूपायाश्चित्प्रकृतेरपि भेदेनाधीतत्वात् न चित्प्रकृतिरन्तर्यामीत्यभिप्रायः' इति तत्त्वप्रदीपरीत्या चित्प्रकृतिपक्षेऽपि बाधकोक्तिपरत्वं भाति, तथाऽपि टीकारीत्यैवमुक्तिः ।**

ಪರಿಪೂರ್ಣಚಂದ್ರಿಕಾ

'ಶಾರೀರಶ್ಚ' ಎಂಬ ಸೂತ್ರದಲ್ಲಿರುವ ಚಕಾರಕ್ಕೆ ತತ್ವಪ್ರದೀಪದಲ್ಲಿ ಮತ್ತೊಂದು ರೀತಿಯಲ್ಲಿ ವ್ಯಾಖ್ಯಾನಿಸಿದ್ದಾರೆ - ''ಯಸ್ತೇಜಸಿ ತಿಷ್ಠನ್'' ಎಂಬಲ್ಲಿರುವ ತೇಜಸ್ ಶಬ್ದದಿಂದ ಶ್ರೀಭೂದುರ್ಗಾರೂಪಗಳಿಂದ ಚಿತ್‌ಪ್ರಕೃತಿಯು ಪ್ರತಿಪಾದ್ಯವಾಗಿದೆ. ಅಂತಹ ಚಿತ್ಪ್ರಕೃತಿಯ ದೆಸೆಯಿಂದ ಅಂತರ್ಯಾಮಿಗೆ ಭೇದವಿದೆಯೆಂದು ಅಧ್ಯಯನ ಮಾಡುವುದರಿಂದ ಚಿತ್‌ಪ್ರಕೃತಿಯನ್ನು ಅಂತರ್ಯಾಮಿಯೆಂದು ಹೇಳಲಾಗದು. ಹೀಗೆ ತತ್ತ್ವಪ್ರದೀಪದ ಪ್ರಕಾರ ಚಿತ್ಪ್ರಕೃತಿಪಕ್ಷದಲ್ಲೂ ಸಹ ಬಾಧಕವನ್ನು ಹೇಳಿದ್ದೂ ಕಾಣಸುತ್ತದೆ. ಆದರೆ ಗ್ರಂಥಕಾರರು ಟೀಕೆಯ ಪ್ರಕಾರ ಸೂತ್ರವನ್ನು ವ್ಯಾಖ್ಯಾನಿಸಿದ್ದಾರೆ.

**गुरुराजीयम्** – ननु च भाष्यतट्टीकयोः पृथिव्यादेर्यौगिकशरीरत्वमेवोक्तम् । भवद्भिश्च शरीरवत्तन्नियम्यत्वेन गौणं शरीरमित्युच्यते । तत्कुतोऽवगन्तव्यम् । भाष्यानुक्तत्वेन मूलभूतप्रमाणाभावादित्यत आह – शरीरत्वस्येति ॥ एवम् 'आदिपदेन आत्मानं यमयति' इत्यस्य सङ्ग्रहः ॥ क्लेशेनेति ॥ नत्वभिमानिनामस्मदाद्यात्मकत्वनियामकत्वाभिप्रायेणात्माभिमानिचतुर्मुखरूपजीव-विशेषाभिप्रायेण चेति क्लेशेन नेयमित्यर्थः ॥



ಶಾರೀರ ಪದಕ್ಕೆ ಭಾಷ್ಯ ಹಾಗೂ ಟೀಕೆಗಳಲ್ಲಿ ಯೋಗಾರ್ಥವನ್ನಷ್ಟೇ ಹೇಳಲಾಗಿದೆ. ಬೃಹದಾರಣ್ಯಕ ಭಾಷ್ಯದಲ್ಲಿ ಗೌಣಾರ್ಥವನ್ನು ಹೇಳಲಾಗಿದೆ. ಎರಡೂ ಭಾಷ್ಯಗಳನ್ನು ವಿವಕ್ಷಿಸಿ ಪ್ರಕೃತ ಗ್ರಂಥಕಾರರು ವ್ಯಾಖ್ಯಾನಿಸುತ್ತಿದ್ದಾರೆಂಬ ಅಂಶವನ್ನು ಗಮನಿಸಬೇಕು.

ಪರಮಾತ್ಮನೇ ಅಂತರ್ಯಾಮಿಯೆಂದು ಹೇಳುವುದರಿಂದ 'ಯ ಆತ್ಮನಿ ತಿಷ್ಠನ್' ಎಂಬುದನ್ನು ಸ್ವರಸವಾಗಿ ಅರ್ಥೈಸಿದಂತಾಗುತ್ತದೆ.

ಸೂತ್ರಗಳ ಜೋಡಣೆಯು ಸ್ವಾರಸ್ಯಮಯವಾಗಿದೆ. ಮೊದಲನೆಯ ಸೂತ್ರವು ಸ್ವಪಕ್ಷದಲ್ಲಿ ಸಾಧಕ ಪ್ರಮಾಣವನ್ನು ಹೇಳಿದೆ.

ಎರಡನೆಯ ಸೂತ್ರವು ಪ್ರಧಾನ ಹಾಗೂ ಜೀವಪಕ್ಷಗಳಲ್ಲಿ ಸಾಧಕವಿಲ್ಲವೆಂದು ಹೇಳಿದೆ. ಏಕೆಂದರೆ ಮೂರನೆಯ ಸೂತ್ರದಲ್ಲಿರುವ 'ಶಾರೀರಶ್ಚ' ಎಂಬ ಪದವು ಎರಡನೆಯ ಸೂತ್ರದಲ್ಲೂ ಅನ್ವಯವಾಗುತ್ತದೆ.

ಮೂರನೆಯ ಸೂತ್ರದಲ್ಲಿ ಜೀವಪಕ್ಷದಲ್ಲಿ ಬಾಧಕವನ್ನು ಹೇಳಲಾಗಿದೆ.



● ● ● ● ●

ಅಂತರ್ಯಾಮ್ಯಧಿಕರಣ (೧-೨-೫)

## ಬೃಹದಾರಣ್ಯಕ ಭಾಷ್ಯದಿಂದ ವಿರೋಧ ಶಂಕೆ ಹಾಗೂ ಸಮಾಧಾನಗಳು

**तात्पर्यचन्द्रिका**

**अत्र यद्यपि**

**आत्मा विज्ञानमिति च सर्वजीवाभिमानवान् ।**
**ब्रह्मैवोक्तः ........................ ।**

**इति बृहदारण्यकभाष्ये आत्मादिशब्दश्चतुर्मुखपर इत्युक्तम् ।**

ಅನುವಾದ - ಶಂಕಾ - 'ಯ ಆತ್ಮನಿ' ಮತ್ತು 'ಯೋ ವಿಜ್ಞಾನೇ' ಇತ್ಯಾದಿ ಶ್ರುತಿಗಳನ್ನು ವ್ಯಾಖ್ಯಾನಿಸುವಾಗ ಬೃಹದಾರಣ್ಯಕ ಭಾಷ್ಯದಲ್ಲಿ 'ಆತ್ಮಾ ವಿಜ್ಞಾನಮಿತಿ ಚ ಸರ್ವಜೀವಾಭಿಮಾನವಾನ್ । ಬ್ರಹ್ಮೈವೋಕ್ತಃ...... ।' ಆತ್ಮ ಹಾಗೂ ವಿಜ್ಞಾನ ಶಬ್ದಗಳಿಂದ ಸಕಲ ಜೀವರ ಅಭಿಮಾನಿಯಾದ ಚತುರ್ಮುಖನೇ ಪ್ರತಿಪಾದ್ಯನಾಗಿದ್ದಾನೆಂದು ವ್ಯಾಖ್ಯಾನಿಸಿದ್ದಾರೆ. ಆದ್ದರಿಂದ 'ಶಾರೀರಸ್ಯ' ಎಂಬ ಸೂತ್ರದ ವಿಷಯವಾಕ್ಯದಲ್ಲಿರುವ ಆತ್ಮ ಹಾಗೂ ವಿಜ್ಞಾನ ಶಬ್ದಗಳು ಚತುರ್ಮುಖಬ್ರಹ್ಮನನ್ನು ಪ್ರತಿಪಾದಿಸುತ್ತವೆಂದು ಹೇಳಿರುವಾಗ ನೀವು ಜೀವನನ್ನು ಪ್ರತಿಪಾದಿಸುತ್ತವೆಂದು ವಿವಕ್ಷಿಸಿ ಜೀವನಿಂದ ಅಂತರ್ಯಾಮಿಗೆ ಭೇದವನ್ನು ಹೇಗೆ ಸಮರ್ಥಿಸುತ್ತೀರಿ ?

**तथाऽपि पूर्वपक्षे ''य आत्मनि'' इत्यादावात्मादिशब्दस्याऽऽत्माभिमानिपरत्वे ''यः पृथिव्याम्'' इत्यादौ पृथिव्यादिशब्दस्यापि तदभिमानिपरत्वापातेन ''यः पृथिव्याम्'' इत्यादेरेव भेदाध्ययनत्वप्रसङ्गात्, पूर्ववादिना पृथिव्यादिशब्दानां जडपरता, आत्मविज्ञानशब्दयोस्तु शारीरपरता वाच्येत्यभिप्रेत्य तं प्रति ''य आत्मनि'' इत्यादेः शारीरभेदे प्रमाणत्वोक्तिः ।**

ಸಮಾಧಾನ - ಬೃಹದಾರಣ್ಯಕ ಭಾಷ್ಯದಲ್ಲಿ ಚತುರ್ಮುಖಬ್ರಹ್ಮಪರವಾಗಿ ಅರ್ಥೈಸಿರುವುದು ಸತ್ಯ. ಆದರೆ ಈ ಅಧಿಕರಣದ ಪೂರ್ವಪಕ್ಷವನ್ನು ತೋರಿಸುವಾಗ 'ಯ ಆತ್ಮನಿ' ಎಂಬಲ್ಲಿರುವ ಆತ್ಮಾದಿ ಶಬ್ದಗಳಿಗೆ ಆತ್ಮನಿಗೆ ಅಭಿಮಾನಿಯಾದ ದೇವತೆಯನ್ನು ವಿವಕ್ಷಿಸಿದರೆ. 'ಯಃ ಪೃಥಿವ್ಯಾಂ'' ಎಂಬಲ್ಲೂ ಸಹ ಪೃಥಿವೀ ಮೊದಲಾದ ಶಬ್ದಗಳಿಗೆ ಪೃಥಿವ್ಯಭಿಮಾನಿದೇವತೆಯನ್ನೇ ವಿವಕ್ಷಿಸಬೇಕಾಗುತ್ತದೆ. ಹಾಗೆ ಮಾಡಿದರೆ 'ಯಃ ಪೃಥಿವ್ಯಾಂ' ಇತ್ಯಾದಿ ವಾಕ್ಯಗಳಿಂದಲೇ ಭೇದವನ್ನು ಅಧ್ಯಯನ ಮಾಡಬೇಕಾದೀತು. ಆದರೆ ಪೂರ್ವಪಕ್ಷಿಗಳು ಪೃಥಿವ್ಯಾದಿಶಬ್ದಗಳಿಗೆ ಜಡಪರತ್ವವನ್ನು ಒಪ್ಪಿರುತ್ತಾರೆ. ಮತ್ತು ಆತ್ಮ ಹಾಗೂ ವಿಜ್ಞಾನ ಶಬ್ದಗಳಿಗೆ ಶಾರೀರನಾದ ಜೀವಪರತ್ವವನ್ನು ಒಪ್ಪಿರುತ್ತಾರೆ. ಆದ್ದರಿಂದ

ಅಂತಹ ಪೂರ್ವಪಕ್ಷಿಯನ್ನು ಕುರಿತು "ಯ ಆತ್ಮನಿ" ಇತ್ಯಾದಿ ವಾಕ್ಯಗಳಿಂದ ಅಂತರ್ಯಾಮಿಗೆ ಶಾರೀರನಿಂದ = ಜೀವನಿಂದ ಭೇದವಿದೆ ಎನ್ನಲು ಪ್ರಮಾಣವನ್ನು ಹೇಳಿದ್ದಾರೆ. ಆದ್ದರಿಂದ ಬೃಹದಾರಣ್ಯಕ ಭಾಷ್ಯದ ವಿರೋಧಕ್ಕೆ ಅವಕಾಶವಿಲ್ಲ.

**यद्वा – जीवाभिमानिनश्चतुर्मुखादपि तन्नियामकत्वादिना भिन्नस्यान्तर्यामिणः किमु वक्तव्यं तदभिमन्यमानजीवेभ्यो भिन्नत्वमित्यभिप्रेत्य तदुक्तिः ।**

ಅಥವಾ ಜೀವಾಭಿಮಾನಿ ಚತುರ್ಮುಖನಿಗಿಂತಲೂ ಅವನಿಗೆ ನಿಯಾಮಕನಾದ ಕಾರಣ ಅವನಿಂದ ಅವನ ಅಂತರ್ಯಾಮಿಯು ಭಿನ್ನನಾದ ಮೇಲೆ ಚತುರ್ಮುಖಾಭಿಮನ್ಯರಾದ ಜೀವರಿಂದ ಅಂತರ್ಯಾಮಿಗೆ ಭೇದವು ಕೈಮುತ್ಯನ್ಯಾಯದಿಂದ ಸಿದ್ಧವಾಗುತ್ತದೆ ಎಂಬ ಅಭಿಪ್ರಾಯದಿಂದ ಆತ್ಮಶಬ್ದವು ಚತುರ್ಮುಖ ಪರ ಎಂದು ಶಂಕಾ ಮಾಡಲಾಗಿದೆ.

**यद्वा – "यः पृथिव्यां" इत्यादौ तत्तदभिमानिन एव तत्तदन्तर्यामित्वमिति वदता पूर्ववादिना "य आत्मनि" इत्यत्रापि जीवात्माभिमानिन एव तदन्तर्यामित्वं वाच्यम् ।**

ಅಥವಾ 'ಯಃ ಪೃಥಿವ್ಯಾಂ' ಇತ್ಯಾದಿ ಶ್ರುತಿಯಲ್ಲಿ ಪೃಥಿವ್ಯಾದ್ಯಭಿಮಾನಿ ದೇವತೆಯೇ ಅಂತರ್ಯಾಮಿಯಾಗಿದ್ದಾನೆಂದು ಪೂರ್ವಪಕ್ಷಿಯು ಹೇಳುತ್ತಿದ್ದಾನೆ. ಅಂತಹ ಪೂರ್ವಪಕ್ಷಿಯು 'ಯ ಆತ್ಮನಿ' ಎಂಬ ಶ್ರುತಿಯಲ್ಲಿಯೂ ಜೀವಾಭಿಮಾನಿಯಾದವನೇ ಅಂತರ್ಯಾಮಿಯಾಗಿದ್ದಾನೆಂದು ಹೇಳಬೇಕು.

**तच्चायुक्तं, "आत्मा विज्ञानं" इति स्मृत्या, अभिमानिप्रायपाठेन, अभिमान्यधिकरणन्यायेन च जीवाभिमानिन एव आत्मशब्दार्थत्वात्, अन्तर्यामिणश्च "य आत्मनि" इत्यादिना ततो भिन्नत्वेनाधीतत्वादित्यभिप्रेत्य तदुक्तिः ।**

ಇದು ತಪ್ಪು. 'ಆತ್ಮಾ ವಿಜ್ಞಾನಂ' ಎಂಬ ಸ್ಮೃತಿಯಿಂದ ಮತ್ತು ಪೃಥಿವ್ಯಾದಿಶಬ್ದಗಳ ಪ್ರಾಯಪಾಠಗಳ ಬಲದಿಂದ ಅಭಿಮಾನ್ಯಧಿಕರಣದ ನ್ಯಾಯದಿಂದಲೂ ಸಹ ಜೀವಾಭಿಮಾನಿಯಾದವನೇ ಆತ್ಮಶಬ್ದದ ಅರ್ಥನೆನಿಸಿರುತ್ತಾನೆ. ಆದರೆ 'ಯ ಆತ್ಮನಿ' ಇತ್ಯಾದಿ ಶ್ರುತಿಯಿಂದ ಪ್ರತಿಪಾದ್ಯನಾದ ಅಂತರ್ಯಾಮಿಯಾದರೂ ಅಭಿಮಾನಿಗಿಂತ ಭಿನ್ನನೆಂದು ಅತೀತನಾಗಿದ್ದಾನೆ. ಈ ಅಭಿಪ್ರಾಯದಿಂದ ಬೃಹದಾರಣ್ಯಕ ಭಾಷ್ಯದಲ್ಲಿ ಚತುರ್ಮುಖಪರತ್ವವನ್ನು ಆತ್ಮಶಬ್ದಕ್ಕೆ ಹೇಳಿರುತ್ತಾರೆ.

**''यः पृथिव्यां तिष्ठन्'' इत्यादिकं पृथिव्याद्यभिमानिभ्यो भेदेनाध्ययनं तु न्याययतौल्येनोक्तप्रायत्वान्न पृथगुक्तम् ।**

'ಯಃ ಪೃಥಿವ್ಯಾಂ ತಿಷ್ಠನ್' ಎಂಬಲ್ಲಿ ಪೃಥಿವ್ಯಾದ್ಯಭಿಮಾನಿ ದೇವತೆಗಳಿಗಿಂತ ಭೇದವಿದೆಯೆಂಬ ಅಧ್ಯಯನವಾದರೂ ಸಮಾನನ್ಯಾಯದಿಂದ ಉಕ್ತಪ್ರಾಯವೆಂದು ತಿಳಿದು ಪ್ರತ್ಯೇಕವಾಗಿ ಹೇಳಿರುವುದಿಲ್ಲ.

**श्रुतौ ''यः पृथिव्यां तिष्ठन्'' इत्यादेः प्राथम्येऽपि भाष्ये ''य आत्मनि तिष्ठन्, यो विज्ञाने तिष्ठन्'' इति वाक्ययोरुपादानं तु तयोरैकार्थ्यं, तत्र चेतनपरत्वस्योभयवादिसम्मतत्वं च दर्शयितुम् ।**

'ಯಃ ಪೃಥಿವ್ಯಾಂ ತಿಷ್ಠನ್' ಇತ್ಯಾದಿಯಾದ ವಾಕ್ಯವೇ ಮೊದಲಿರುತ್ತವೆ. ಆದರೆ ಭಾಷ್ಯದಲ್ಲಿ ಮೊದಲಿರುವ ವಾಕ್ಯವನ್ನು ಬಿಟ್ಟು ಅನಂತರ ಪ್ರಸಕ್ತವಾದ 'ಯಃ ಆತ್ಮನಿ ತಿಷ್ಠನ್, ಯೋ ವಿಜ್ಞಾನೇ ತಿಷ್ಠನ್' ಎಂಬೆರಡು ವಾಕ್ಯಗಳನ್ನು ಸ್ವೀಕರಿಸಿದ್ದಾರೆ. ಕಾರಣವೇನೆಂದರೆ ಈ ಎರಡು ವಾಕ್ಯಗಳಿಗೆ ಸಮಾನಾರ್ಥವಿದೆ. ಚೇತನಪರತ್ವವೆಂಬರ್ಥವು ಪೂರ್ವಪಕ್ಷಿಗಳಿಗೂ ಹಾಗೂ ಸಿದ್ಧಾಂತಿಗಳಿಗೂ ಸಮ್ಮತವಾಗಿದೆಯೆಂದು ತೋರಿಸುವುದಕ್ಕಾಗಿ

**यद्यप्यन्तरशब्दस्य बृहदारण्यकभाष्ये बाह्यापेक्षां विना रमणादिरर्थ इत्युक्तम्, अत्रापि च भाष्येऽन्तरत्वं आद्यसूत्रस्थतद्धर्मशब्दस्यार्थ इत्युक्तम् । भेदेनाध्ययनं तु ''य आत्मनि तिष्ठन् यस्यात्मा शरीरं य आत्मानां यमयत्येष त आत्मा'' इत्यादि भेदकाध्ययनात् सिध्यति ।**

**नच ''एष त आत्मा'' इत्यत्राऽऽत्मशब्दः स्वरूपार्थः, 'ते' इति षष्ठ्या औपचारिकत्वापातात् । शरीरशब्दसन्निधानेनात्मशब्दस्य शरीरप्रतिसम्बन्धिपरत्वाच्च। अत एव भाष्ये ''य आत्मनि'' इत्याद्यप्युदाहृतम् ।**

ಪ್ರಶ್ನೆ - ಅಂತರ ಶಬ್ದಕ್ಕೆ ಬೃಹದಾರಣ್ಯಕ ಭಾಷ್ಯದಲ್ಲಿ ಭಾಷ್ಯಾಪೇಕ್ಷೆ ಇಲ್ಲದೆ ರಮಿಸುವಿಕೆ ಎಂಬರ್ಥವನ್ನು ಅಂತರ ಶಬ್ದಕ್ಕೆ ಹೇಳಿದ್ದಾರೆ. ಈ ಅಧಿಕರಣದ ಭಾಷ್ಯದಲ್ಲಿಯೂ, ಪ್ರಥಮ ಸೂತ್ರದ ಅಂತಃಸ್ಥಧರ್ಮ ಎಂಬುದರ ಅರ್ಥವೇ ಅಂತರತ್ವವೆಂದು ವ್ಯಾಖ್ಯಾನಿಸಿದ್ದಾರೆ. ಭೇದಾಧ್ಯಯನವಾದರೂ ಸಹ 'ಯ ಆತ್ಮನಿ ತಿಷ್ಠನ್ ಯಸ್ಯಾತ್ಮಾ ಶರೀರಂ ಯ ಆತಾನಾನಾಂ ಯಮಯತ್ಯೇಷ ತ ಆತ್ಮಾ'' ಇತ್ಯಾದಿಯಾದ ಭೇದಕಾಧ್ಯಯನದಿಂದ ಸಿದ್ಧವಾಗುತ್ತದೆ. ಇನ್ನು 'ಏಷ ತ ಆತ್ಮ' ಎಂಬಲ್ಲಿರುವ

ಆತ್ಮಶಬ್ದಕ್ಕೆ ಸ್ವರೂಪವೆಂದರ್ಥವನ್ನು ಮಾಡಬಾರದು. 'ತೇ' ಎಂಬಲ್ಲಿರುವ ಷಷ್ಠೀ ವಿಭಕ್ತಿಗೆ ಗೌಣಾರ್ಥವನ್ನು ಮಾಡಿದಂತಾಗುತ್ತದೆ. ಶರೀರಶಬ್ದದ ಸನ್ನಿಧಾನದಿಂದ ಆತ್ಮಶಬ್ದಕ್ಕೆ ಶರೀರಕ್ಕೆ ಪ್ರತಿಸಂಬಂಧಿಯಾದ ಆತ್ಮನೆಂಬರ್ಥವನ್ನೇ ಹೇಳಬೇಕು. ಈ ಉದ್ದೇಶದಿಂದಲೇ ಭಾಷ್ಯದಲ್ಲಿ 'ಯಃ ಆತ್ಮನಿ' ಇತ್ಯಾದಿ ವಾಕ್ಯಗಳನ್ನೂ ಸಹ ಉದಾಹರಿಸಿರುತ್ತಾರೆ. ಹೀಗೆ ಭಾಷ್ಯದಲ್ಲಿ 'ಅಂತರ' ಶಬ್ದಕ್ಕೆ ಒಳಗಡೆ ಇದ್ದು ರಮಿಸುವಿಕೆ ಎಂಬರ್ಥವನ್ನು ಹೇಳಿರುವಾಗ ಭೇದಾಧ್ಯಯನದ ವಿಷಯದಲ್ಲಿ ಪ್ರಮಾಣವಾಗುತ್ತದೆಂದು ಹೇಗೆ ಹೇಳುತ್ತಿದ್ದೀರಿ?

**तथाऽपि टीकायां साक्षादेव भेदाध्ययनसिद्ध्यर्थं ''य आत्मनोऽन्तरः'' इत्यत्रत्यान्तरशब्दस्य विविक्तत्वमर्थः ।**

ಉತ್ತರ - ಭಾಷ್ಯದಲ್ಲಿ ಕೈಮುತ್ಯದಿಂದ ಭೇದಾಧ್ಯಯನವನ್ನು ಹೇಳಿದ್ದಾರೆ. ಆದರೆ ನೇರವಾಗಿಯೇ ಭೇದಾಧ್ಯಯನವು ಸಿದ್ಧವಾಗಬೇಕೆಂಬ ಉದ್ದೇಶದಿಂದ ಟೀಕೆಯಲ್ಲಿ 'ಯ ಆತ್ಮನೋऽಂತರಃ' ಎಂಬಲ್ಲಿರುವ 'ಅಂತರ' ಶಬ್ದಕ್ಕೆ ಭೇದವೆಂಬರ್ಥವನ್ನು ಸ್ವೀಕರಿಸಿದ್ದಾರೆ.

**बृहदारण्यकभाष्यं तु ''य आत्मानमन्तरः'' इत्यत्रान्तरशब्दविषयम् । अत एव श्रुतौ न पुनरुक्तिः ''य आत्मनोऽन्तरः, यो विज्ञानादन्तरः, योऽद्भयोऽन्तरः'' इत्यादौ पञ्चम्युपपत्तिश्च ।**

ಬೃಹದಾರಣ್ಯಕ ಭಾಷ್ಯದಲ್ಲಾದರೂ 'ಯ ಆತ್ಮಾನಾಂತರಃ' ಎಂಬ ಮತ್ತೊಂದು ಶ್ರುತಿಯಲ್ಲಿರುವ 'ಅಂತರ' ಶಬ್ದವನ್ನೇ ಸ್ವೀಕರಿಸಿದ್ದಾರೆ. ಹೀಗೆ ಹೇಳಿದ್ದರಿಂದ ಪುನರುಕ್ತಿದೋಷ ಪರಿಹಾರವೆಂಬ ಮತ್ತೊಂದು ಪ್ರಯೋಜನವು ಲಾಭವಾಯಿತು. 'ಯ ಆತ್ಮನೋऽಂತರಃ, ಯೋ ವಿಜ್ಞಾನಾದಂತರಃ, ಯೋऽದ್‌ಭಯೋऽಂತರಃ' ಇವೇ ಮೊದಲಾದ ಶ್ರುತಿಗಳಲ್ಲಿರುವ ಪಂಚಮಿ ವಿಭಕ್ತಿಯೂ ಸಹ ಸ್ವರಸವಾಯಿತು.

**''यं पृथिवी न वेद यः पृथिव्या अन्तरः इत्यादिना'' इत्याद्यसूत्रीयभाष्ये तु प्रतीकमुखेन ''पृथिवी मन्तरः'' इति वाक्यमुपात्तमित्यभिप्रेत्य ''अन्तरो विविक्तः'' इत्युक्तम् ॥**

'ಯಂ ಪೃಥಿವೀ ನ ವೇದ ಯಃ ಪೃಥಿವ್ಯಾ ಅಂತರಃ ಇತ್ಯಾದಿನಾ' ಇತ್ಯಾದಿಯಾದ ಪ್ರಥಮಸೂತ್ರದ ಭಾಷ್ಯದಲ್ಲಿ ಕೇವಲ ಪ್ರತೀಕ ಗ್ರಹಣಕ್ಕಾಗಿ 'ಪೃಥಿವೀ ಮಂತರಃ' ಎಂದು ಹೇಳಿರುತ್ತಾರೆ. ಈ ಅಭಿಪ್ರಾಯದಿಂದಲೇ 'ಅಂತರೋ ವಿವಿಕ್ತಃ' ಎಂಬ ಮಾತನ್ನೂ ಸಹ ಹೇಳಿದ್ದಾರೆಂದು ತಿಳಿಯಬೇಕು.

ಅಂತರ್ಯಾಮ್ಯಧಿಕರಣ (೧-೨-೫)

**प्रकाशः –**

**एतद्भाष्यस्य भाष्यान्तरविरोधं वा, अन्यत्रोक्तार्थे जीवान्तर्यामिभेदाध्यायनासिद्धं वा, अर्थद्वयोक्तेर्वैय्यर्थं वा हृदि कृत्वा तदनूद्य निराह अत्र – यद्यपीति ।**

ವಿವರಣೆ - 'ಶಾರೀರಶ್ಚೋಭಯೇಽಪಿ ಹಿ ಭೇದೇನೈನಮಧೀಯತೇ'' ಎಂಬ ಸೂತ್ರವನ್ನು ವ್ಯಾಖ್ಯಾನಿಸುವಾಗ 'ಯ ಆತ್ಮನಿ ತಿಷ್ಠನ್' ಎಂಬುದಾಗಿ ಮಾಧ್ಯಂದಿನಶಾಖೆಯಲ್ಲಿ 'ಯೋ ವಿಜ್ಞಾನೇ ತಿಷ್ಠನ್' ಎಂಬುದಾಗಿ ಕಾಣ್ವಶಾಖೆಯಲ್ಲಿ ಅಂತರ್ಯಾಮಿಯಿಂದ ಜೀವನಿಗೆ ಭೇದವನ್ನು ಅಧ್ಯಯನ ಮಾಡುತ್ತಾರೆಂದು ಹೇಳಲಾಗಿದೆ. ಇಲ್ಲಿರುವ ಆತ್ಮ ಹಾಗೂ ವಿಜ್ಞಾನಶಬ್ದಗಳಿಗೆ ಜೀವವೆಂಬರ್ಥವನ್ನು ಹೇಳಿದಾಗ ಮಾತ್ರ ಜೀವರಿಂದ ಭೇದವನ್ನು ತಿಳಿದಂತಾಗುತ್ತದೆ. ಆದರೆ ಬೃಹದಾರಣ್ಯಕ ಭಾಷ್ಯದಲ್ಲಿ ಈ ಅರ್ಥವೇ ತೋರುತ್ತಿಲ್ಲ. ಆದ್ದರಿಂದ ಸೂತ್ರಭಾಷ್ಯಕ್ಕೂ ಉಪನಿಷತ್‌ಭಾಷ್ಯಕ್ಕೂ ಪರಸ್ಪರ ವಿರೋಧ ಬರುತ್ತದೆ. ಮತ್ತು ಇಲ್ಲಿ ಹೇಳಿದ ವಿಷಯದಲ್ಲಿ ಜೀವಾಂತರ್ಯಾಮಿಯಿಂದ ಭೇದವನ್ನು ಅಧ್ಯಯನ ಮಾಡುತ್ತಾರೆಂಬುದೂ ಸಹ ಅಸಿದ್ಧವಾಗುತ್ತದೆ. ಮತ್ತು ಎರಡು ಬಗೆಯ ಅರ್ಥವನ್ನೂ ಹೇಳಿದ್ದೂ ಸಹ ವ್ಯರ್ಥವಾಗುತ್ತದೆ ಎಂಬ ಈ ಎಲ್ಲಾ ಆಶಂಕೆಗಳನ್ನು ಅನುವಾದ ಮಾಡಿ ನಿರಾಕರಿಸುತ್ತಿದ್ದಾರೆ 'ಯದ್ಯಪಿ' ಎಂಬ ಗ್ರಂಥದಿಂದ.

**प्रकाशः – पृथिव्यादिशब्दस्यापीति । अन्यथा प्रायपाठविरोधादिति भावः । अभिमानिपरत्वे को दोष इत्यत आह – य इति । पृथिव्यादिशब्दानामभिमानिचेतनपरत्वे 'यः' इत्यनेन तदन्यस्य ग्रहणात् ''एष त आत्माऽन्तर्यामी'' इति पृथिव्याद्यभिमानिचेतनभिन्नस्यान्तर्यामितापत्त्याऽभिमानिजीव एवान्तर्यामीति पक्षो न स्यादिति जडपरता वाच्येत्यर्थः ।**

ಆತ್ಮ ಶಬ್ದಕ್ಕೆ ಅಭಿಮಾನಿ ಪರವಾಗಿ ಅರ್ಥೈಸಿದಾಗ ಪೃಥಿವ್ಯಾದಿಶಬ್ದಗಳಿಗೂ ಅಭಿಮಾನಿ ಪರವಾಗಿಯೇ ಅರ್ಥೈಸಬೇಕು. ಇಲ್ಲದಿದ್ದರೆ ಪ್ರಾಯಪಾಠದ ವಿರೋಧ ಬರುತ್ತದೆಂದು 'ಪೃಥಿವ್ಯಾದಿಶಬ್ದಸ್ಯಾಪಿ' ಎಂಬುದರಿಂದ ಹೇಳುತ್ತಿದ್ದಾರೆ.

ಪೃಥಿವ್ಯಾದಿಶಬ್ದಗಳಿಗೆ ಅಭಿಮಾನಿ ದೇವತಾಪರವಾಗಿ ಅರ್ಥೈಸಿದರೆ ಏನು ತಪ್ಪು? ಎಂಬ ಶಂಕೆಗೆ 'ಯಃ ಪೃಥಿವ್ಯಾಂ' ಎಂಬುದರಿಂದ ಉತ್ತರಿಸುತ್ತಿದ್ದಾರೆ. ಇದರ ಅಭಿಪ್ರಾಯ ಹೀಗಿದೆ - ಪೃಥಿವ್ಯಾದಿಶಬ್ದಗಳು ಅಭಿಮಾನಿಯಾದ ಚೇತನನ್ನು ಪ್ರತಿಪಾದಿಸುವುದಾದರೆ 'ಯಃ' ಎಂಬ ಪದದಿಂದ ಅದಕ್ಕೆ ಅಭಿಮಾನಿ ದೇವತೆಯನ್ನು ವಿವಕ್ಷಿಸಲಾಗದು; ಹೊರತಾಗಿ ಬೇರೆಯವನನ್ನೇ ವಿವಕ್ಷಿಸಬೇಕು. ಆವಾಗ 'ಏಷ ತ' ಆತ್ಮಾಽಂತರ್ಯಾಮೀ' ಎಂಬಲ್ಲಿಯೂ ಪೃಥಿವ್ಯಾದ್ಯಭಿಮಾನಿಗಳಿಗಿಂತ ಭಿನ್ನನಾದ ಅಂತರ್ಯಾಮಿಯನ್ನೇ ವಿವಕ್ಷಿಸಬೇಕಾಗುತ್ತದೆ. ಆದ್ದರಿಂದ ಅಭಿಮಾನಿಯಾದ ಜೀವನೇ ಅಂತರ್ಯಾಮಿಯಾಗಿದ್ದಾನೆಂಬ ಎಂಬ ಪಕ್ಷವು ಭಗ್ನವಾಗುತ್ತದೆ. ಈ ಸಮಸ್ಯೆಯನ್ನು ಪರಿಹರಿಸಬೇಕೆಂದರೆ ಪೂರ್ವಪಕ್ಷಿಗಳು ಪೃಥಿವ್ಯಾದಿಶಬ್ದಗಳಿಗೆ ಜಡಪರತ್ವವನ್ನೇ ಒಪ್ಪಬೇಕು.

ಪರಿಪೂರ್ಣಚಂದ್ರಿಕಾ

**प्रकाशः** – भाष्ये आत्मादिशब्दस्य सर्वजीवार्थत्वोक्ते कृत्यमुक्त्वा, अन्यत्र चतुर्मुखपरत्वोक्तेः फलमाह – **यद्वेति** ।

ಭಾಷ್ಯದಲ್ಲಿ ಆತ್ಮ ಮೊದಲಾದ ಶಬ್ದಕ್ಕೆ ಸಕಲ ಜೀವರೆಂಬರ್ಥವನ್ನು ಹೇಳಿದ್ದಕ್ಕೆ ಪ್ರಯೋಜನವನ್ನು ಹೇಳಿ, ಬೇರೆ ಶ್ರುತಿಯಲ್ಲಿ ಆತ್ಮಾದಿ ಶಬ್ದಗಳಿಗೆ ಚತುರ್ಮುಖನೆಂಬರ್ಥವನ್ನು ಹೇಳಲು ಪ್ರಯೋಜನವನ್ನು 'ಯದ್ವಾ' ಇತ್ಯಾದಿ ವಾಕ್ಯದಿಂದ ತೋರಿಸುತ್ತಿದ್ದಾರೆ.

**प्रकाशः** – 'तदुक्तिः' चतुर्मुखपरत्वोक्तिः । तथा चात्मविज्ञानशब्दयोः चतुर्मुखपरत्वमेव, न शारीरार्थकत्वम् । अत्र भाष्ये शारीरार्थकत्वस्य प्रदर्शनं तु कैमुत्यलब्धस्य, नतु शब्दार्थत्वेन प्राप्तस्येत्यर्थः ।

'ತದುಕ್ತಿಃ' ಎಂದರೆ ಚತುರ್ಮುಖಪರತ್ವವೆಂಬ ಹೇಳುವಿಕೆ ಎಂಬರ್ಥ. ಆದ್ದರಿಂದ ಆತ್ಮ, ವಿಜ್ಞಾನ ಶಬ್ದಗಳಿಗೆ ಚತುರ್ಮುಖನೆಂದೇ ಅರ್ಥ ಹೊರತು, ಜೀವನೆಂದರ್ಥವಲ್ಲ. ಹಾಗಾದರೆ ಭಾಷ್ಯದಲ್ಲಿ ಜೀವನದೆಸೆಯಿಂದ ಭೇದವನ್ನು ತೋರಿಸಿದ್ದಾರಲ್ಲ? ಎಂದರೆ ಅದು ಕೇವಲ ಕೈಮುತ್ಯನ್ಯಾಯದಿಂದ ಲಬ್ಧವಾಗಿದೆಯಂದು ತಿಳಿಯಬೇಕು ಹೊರತು, ಶ್ರುತಿಯಿಂದ ನೇರವಾಗಿ ತಿಳಿದಿರುವುದಲ್ಲ.

**प्रकाशः** – ननु पृथिव्याद्यभिमानिजीवानामन्तर्यामित्वे शङ्किते तेषामेवान्तर्यामिणा भेदस्य आदौ वाच्यत्वेनावश्यवाच्यस्य साक्षादवचनं, अनुपपुक्तं चतुर्मुखस्य तत्कथनं तु साक्षादित्युक्तमित्यतश्चतुर्मुखपरत्वमेवावश्यं वाच्यमिति भावेन तदुक्तिं साधयति – **यद्वेति** ।

ಪ್ರಶ್ನೆ - ಪೃಥಿವ್ಯಾದ್ಯಭಿಮಾನಿ ಜೀವರುಗಳೇ ಅಂತರ್ಯಾಮಿಯಾಗಿದ್ದಾರಲ್ಲವೇ? ಎಂಬ ಶಂಕೆಗೆ ಅಭಿಮಾನಿ ಜೀವರು ಅಂತರ್ಯಾಮಿಯಿಂದ ಭಿನ್ನರಾಗಿದ್ದಾರೆಂದು ಹೇಳಬೇಕು. ಅವಶ್ಯವಾಗಿ ಹೇಳಬೇಕಾದ್ದನ್ನು ನೇರವಾಗಿ ಹೇಳಬೇಕು ಹೊರತು, ಕೈಮುತ್ಯದಿಂದ ಹೇಳಬಾರದು. ಚತುರ್ಮುಖನಿಗೆ ಭೇದವನ್ನು ನೇರವಾಗಿ ಹೇಳುವುದು ತಪ್ಪಲ್ಲವೇ?

ಉತ್ತರ - ಹೀಗೆ ಪ್ರಶ್ನಿಸಬಾರದು. ಆತ್ಮಶಬ್ದಕ್ಕೆ ಚತುರ್ಮುಖನೆಂಬ ಅರ್ಥವನ್ನೇ ಅವಶ್ಯವಾಗಿ ಹೇಳಬೇಕೆಂಬ ಅಭಿಪ್ರಾಯದಿಂದ 'ಯದ್ವಾ' ಇತ್ಯಾದಿ ವಾಕ್ಯವು ಅದನ್ನೇ ಸಾಧಿಸುತ್ತಿದೆ.

**प्रकाशः** – **स्मृत्येति** । प्रागुक्तयेत्यर्थः । **अभिमानीति** । पृथिव्याद्यभिमानिप्रायपाठेनेत्यर्थः । **अभिमान्यधिकरणेति** । तत्र अभिमन्यमानशब्दानां अभिमानिनि मुख्यत्वोक्तेरिति भावः ।

'ಸ್ಮೃತ್ಯಾ' ಎಂದರೆ ಹಿಂದೆ ಹೇಳಿದ ಶ್ರುತಿಯಿಂದ ಎಂದರ್ಥ. 'ಅಭಿಮಾನಿ' ಎಂಬ ಪದಕ್ಕೆ ಪೃಥಿವ್ಯಾದ್ಯಭಿಮಾನಿ ಪ್ರಾಯಪಾಠದಿಂದ ಎಂದರ್ಥ. ಅಭಿಮನ್ಯಧಿಕರಣದಲ್ಲಿ ಅಭಿಮನ್ಯಮಾನವಾದ ಶಬ್ದವು ಅಭಿಮಾನಿಯಲ್ಲಿ ಮುಖ್ಯವಾಗಿದೆಯೆಂದು ಸಾಧಿಸಿದ್ದಾರೆ.

**प्रकाशः** – ननु एवं पृथिव्यादिशब्दानामप्यभिमानिपरत्वात्तत्राप्यभिमानिनोऽन्तर्यामिणो भेदोक्तिसम्भवेन भाष्ये ''य आत्मनि'' इत्यादिविशिष्यप्रदर्शनमयुक्तमित्यत आह – **यः पृथिव्यामिति** । प्रथमातिक्रमे हेतुमाह – **श्रुताविति** ।

ಪೃಥಿವ್ಯಾದಿಶಬ್ದಗಳಿಗೆ ಅಭಿಮಾನಿದೇವತಾ ಪರತ್ವವನ್ನು ಹೇಳಬೇಕಾದ್ದರಿಂದ ಅಭಿಮಾನಿದೇವತೆಗಳಿಗೆ ಅಂತರ್ಯಾಮಿಯಿಂದ ಭೇದವನ್ನು ಹೇಳಿದಂತಾಗುತ್ತದೆ. ಹೀಗಿರುವಾಗ ಭಾಷ್ಯದಲ್ಲಿ 'ಯ ಆತ್ಮನಿ' ಇತ್ಯಾದಿಯಾಗಿ ವಿಶೇಷವಾದ ಇದೇ ಶ್ರುತಿಯನ್ನು ಸ್ವೀಕರಿಸಲು ಏನು ಕಾರಣ? ಎಂಬ ಪ್ರಶ್ನೆಗೆ 'ಯಃ ಪೃಥಿವ್ಯಾಂ' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. ಪ್ರಥಮ ಪ್ರಾಪ್ತವಾದದ್ದನ್ನು ಅತಿಕ್ರಮ ಮಾಡಲು ಕಾರಣವನ್ನು 'ಶ್ರುತೌ' ಇತ್ಯಾದಿ ವಾಕ್ಯದಿಂದ ತೋರಿಸುತ್ತಿದ್ದಾರೆ.

**प्रकाशः** – टीकायां ''आत्मनस्सकाशादन्तरो विविक्तः'' इत्युक्तं, तदाचार्यसूक्तिविरुद्धमित्याशङ्क्य समाधत्ते – यद्यपीति ।

बाह्यापेक्षां विना यस्तु रमते सोऽन्तरः स्मृतः ।
अतिप्रियत्वाच्च हरेरन्तरत्वमुदाहृतम् ।।

इत्यनेनेत्यर्थः ।

ಟೀಕೆಯಲ್ಲಿ 'ವಿವಿಕ್ತಃ' ಎಂಬುದಾಗಿ ಅಂತರ ಶಬ್ದಕ್ಕೆ ಭೇದವೆಂಬರ್ಥವನ್ನು ಹೇಳಿದ್ದಾರೆ. ಆದರೆ ಶ್ರೀಮದಾಚಾರ್ಯರು ಬೇರೆಯೇ ಅರ್ಥವನ್ನು ಹೇಳಿದ್ದರಿಂದ ಟೀಕೆಯು ಭಾಷ್ಯವಿರುದ್ಧವಾಯಿತಲ್ಲವೇ? ಎಂಬುದಾಗಿ 'ಯದ್ಯಪಿ' ಇತ್ಯಾದಿ ವಾಕ್ಯದಿಂದ ಆಶಂಕಿಸಿ ಸಮಾಧಾನವನ್ನು ಹೇಳಿದ್ದಾರೆ.

ಬಾಹ್ಯಾಪೇಕ್ಷಾಂ ವಿನಾ ಯಸ್ತು ರಮತೇ ಸೋऽಂತರಃ ಸ್ಮೃತಃ।
ಅತಿಪ್ರಿಯತ್ವಾಚ್ಚ ಹರೇರಂತರತ್ವಮುದಾಹೃತಮ್ ॥

ಬಾಹ್ಯಾಪೇಕ್ಷೆಯು ಇಲ್ಲದೆ ಯಾವಾತನು ಸುಖಿಸುತ್ತಾನೋ, ಅವನೇ ಅಂತರನೆನಿಸಿದ್ದಾನೆ. ಈ ವಾಕ್ಯದಲ್ಲಿ ಅಂತರಶಬ್ದಕ್ಕೆ ಭೇದವೆಂಬರ್ಥವನ್ನು ಸ್ವೀಕರಿಸಿಲ್ಲ.

**प्रकाशः** – भेदोक्त्यर्थान्तरमेतत्किं नेति भ्रमं निराह – **भेदेनेति** । **भेदकेति** ।

सप्तमीषष्ठ्यादिरूपभिन्नविभक्तिनिर्देशरूपेत्यर्थः । भेदकत्वं साधयति – **नचेति** । 'टीकायाम्' इत्यस्य 'इत्युक्तम्' इत्यन्वयः ।

ಭೇದವನ್ನು ಹೇಳುವುದಕ್ಕಾಗಿ ಅದೇ ಶ್ರುತಿಗೆ ಟೀಕಾರಾಯರು ಮತ್ತೊಂದು ಅರ್ಥವನ್ನು ಹೇಳಿರಬಹುದೆಂಬ ಭ್ರಮೆಯನ್ನು ಭೇದೇನ ಇತ್ಯಾದಿ ವಾಕ್ಯದಿಂದ ನಿರಾಕರಿಸುತ್ತಿದ್ದಾರೆ. 'ಭೇದಕಾಧ್ಯಯನಾತ್' ಎಂದರೆ ಸಪ್ತಮೀ, ಷಷ್ಠಿ ಮೊದಲಾದ ಬೇರೆ ಬೇರೆ ವಿಭಕ್ತಿಗಳ ನಿರ್ದೇಶದಿಂದ ತಿಳಿಯಲ್ಪಟ್ಟ ಭೇದಾಧ್ಯಯನದಿಂದ ಎಂದರ್ಥ. ಭೇದಕ ಧರ್ಮವನ್ನೇ 'ನಚ' ಇತ್ಯಾದಿ ವಾಕ್ಯದಿಂದ ಸಾಧಿಸುತ್ತಿದ್ದಾರೆ. 'ಟೀಕಾಯಾಂ' ಎಂಬ ಪದಕ್ಕೆ 'ಇತ್ಯುಕ್ತಂ' ಎಂಬಲ್ಲಿ ಅನ್ವಯ.

**प्रकाशः – पञ्चमीति ।** ''अपादाने पञ्चमी'' इति प्रकरणे ''अन्यारादितरर्ते दिक्छब्दाञ्चूत्तरपदाजाहियुक्ते'' इति 'अन्य' इत्यर्थग्रहणेन पञ्चमीविधानात्, बाह्यानपेक्षरमणार्थत्वे 'पृथिव्याः' इत्यस्य वैयर्थ्यं च स्यादिति भावः ।

'ಅಪಾದಾನೇ ಪಂಚಮೀ' ಎಂಬ ಪ್ರಕರಣದಲ್ಲಿ 'ಅನ್ಯಾರಾದಿತರರ್ತೇದಿಕ್ಛಬ್ದಾಂಚೂತ್ತರಪದಾಜಹಿ-ಯುಕ್ತೇ' ಇತ್ಯಾದಿ ಸೂತ್ರದಲ್ಲಿ 'ಅನ್ಯ' ಎಂಬರ್ಥದಲ್ಲಿ ಪಂಚಮಿಯನ್ನು ವಿಧಾನ ಮಾಡಲಾಗಿದೆ. ಮತ್ತು ಬಾಹ್ಯಾಪೇಕ್ಷೆಯಿಲ್ಲದೇ ಕ್ರೀಡಿಸುವಿಕೆ ಎಂಬರ್ಥವನ್ನು ವಿವಕ್ಷಿಸುವುದಾದಲ್ಲಿ 'ಪೃಥಿವ್ಯಾಃ' ಎಂಬ ಷಷ್ಠೀ ವಿಭಕ್ತಿಯೂ ಸಹ ವ್ಯರ್ಥವಾಗುತ್ತದೆಂದು ತಿಳಿಯಬೇಕು.

**प्रकाशः –** तर्हि भाष्ये ''– यं पृथिवी न वेद यः पृथिव्या अन्तरः'' इत्यादिनाऽधिदैवादिषु तद्धर्मव्यपदेशात्'' इत्युक्तिः कथमित्यत आह – **यमिति ।**

ಹಾಗಾದರೆ ಭಾಷ್ಯದಲ್ಲಿ 'ಯಂ ಪೃಥೀವೀ ನ ವೇದ ಯಃ ಪೃಥಿವ್ಯಾ ಅಂತರಃ' ಇತ್ಯಾದಿನಾಧಿದೈವಾದಿಷು ತದ್ಧರ್ಮವ್ಯಪದೇಶಾತ್' ಎಂದೇಕೆ ಹೇಳಿದ್ದಾರೆ? ಎಂಬ ಪ್ರಶ್ನೆಗಳಿಗೆ 'ಯಮ್' ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾರೆ.

**प्रकाशः –** अविदितत्वस्योक्त्यर्थं 'यं' इत्यादेरवश्यवाच्यत्वात्तन्मुखेन ''यः पृथिवीमन्तरः'' इत्येवाभिप्रेतमित्यर्थः । अत एव टीकायां वाक्यशेषमनुपादायाद्यसूत्रे 'पृथिव्याद्यविदितत्वान्तरत्वाख्यधर्मव्यपेशात्' इति सामान्येनोक्तमिति भावः ॥

ಅವಿದಿತತ್ವವನ್ನು ತಿಳಿಸುವುದಕ್ಕಾಗಿ 'ಯಂ' ಇತ್ಯಾದಿ ವಾಕ್ಯವನ್ನು ಅವಶ್ಯವಾಗಿ ಹೇಳಬೇಕು. ತನ್ಮೂಲಕವಾಗಿ 'ಯಃ ಪೃಥಿವೀಮಂತರಃ' ಎಂಬ ವಾಕ್ಯವಷ್ಟೇ ಅಭಿಪ್ರೇತವಾಗಿದೆ. ಆದ್ದರಿಂದಲೇ ಟೀಕೆಯಲ್ಲಿ ಯಾವುದೇ ಒಂದು ವಿಶೇಷವಾದ ವಾಕ್ಯವನ್ನು ಉಲ್ಲೇಖಿಸದಲೇ ಪ್ರಥಮ ಸೂತ್ರದಲ್ಲಿ 'ಪೃಥಿವ್ಯಾದ್ಯವಿದಿ-ತತ್ವಾಂತರತ್ವಾಖ್ಯಧರ್ಮವ್ಯಪದೇಶಾತ್' ಎಂದು ಸಾಮಾನ್ಯವಾಗಿ ಹೇಳಿದ್ದಾರೆ.

**गुरुराजीयम् –** ननु द्वितीये प्रधानजीवयोस्स्वपक्षसाधकाभावोक्तिरयुक्ता । जीवमात्रस्यान्तर्यामिणस्सकाशाद्भेदप्रतिपादनार्थं चतुर्मुखस्यान्तर्यामिणस्सकाशाद् भेदप्रतिपादकवाक्योदारहरणस्यासङ्गतत्वात् । नच तत्राप्यात्मशब्दो जीवपर इति

तदुक्तिर्युक्तेति वाच्यम् । तथा सति बृहदारण्यकभाष्यविरोधस्स्यात् । तत्रात्मा विज्ञानमिति चेत्यादिनाऽऽत्मादिशब्दानां जीवविशेषचतुर्मुखपरतयोक्तत्वादित्यत आह – **अत्र यद्यपीति** ।।

नन्वेवं पूर्वपक्षरीत्या भेदव्यपदेशोक्तौ वास्तवभेदव्यपदेशाभावाज्जीवमात्रस्यान्तर्यामिणस्सकाशाद्भेदसिद्धिर्न स्यादित्यरुच्याऽऽह – **यद्वेति** ।। अस्मिन्पक्षे कैमुत्येन लाभेऽपि साक्षान्न तल्लाभ इत्यतः पक्षान्तरमाह – **यद्वेति** ।। नन्वभिमान्यधिकरणन्यायेनात्मशब्दस्य तदभिमानिचेतनपरत्ववत्पृथिव्यादिशब्दानामपि चेतनपरत्वेन यः पृथिव्यां तिष्ठन्नित्यादिनोक्तस्यान्तर्यामिणः पृथिव्याद्यभिमानिभ्यो भेदव्यपदेशस्य सत्त्वात्सोऽपि कुतो नोक्त इत्यत आह – **यद्वेति** ।। ननु टीकायामन्तरो विविक्त इति व्याख्यातम् । तदयुक्तम् । बृहदारण्यकवाक्यविरोधात् । एतद्भाष्यविरोधाच्च । बाह्यापेक्षां विना रमणस्यैव तदर्थत्वेनोक्तत्वात् । नच भेदव्यपदेशलाभार्थं तथा व्याख्यानम् । य आत्मनि तिष्ठन्नित्यादिनापि भेदव्यपदेशलाभोपपत्तेरित्यतस्तत्सार्थक्यं वक्तुमाह – **यद्यपीति** ।। **अत एवेति** ।। य आत्मनि तिष्ठन्नित्यादेरपि भेदव्यपेशस्य भाष्यकृदभिप्रेतत्वादेवेत्यर्थः ।। **साक्षादेवेति** ।। अन्यथा तु भेदाकोक्त्या भेदलाभ इति भावः । **अत एवेति** ।। बाह्यपेक्षां विना रमणरूपस्य बृहद्भाष्योक्तस्यान्तर इत्युभयत्रत्यान्तरशब्दविष्यत्वे एकेनैव बाह्यापेक्षां विना रमणस्योक्तत्वेन द्वितीयेनापि तदुक्तौ पौनरुक्त्यं स्यादिति भावः । अत्र यद्यप्यात्मन इति पृथिव्या इत्येव चोदाहरणीयम् । तथाप्यात्मन इत्यस्य पञ्चमीत्वसिद्ध्यर्थं विज्ञानादित्यस्य पृथिव्या इत्यस्य पञ्चमीत्वसिद्ध्यर्थं चाद्भ्य इत्यस्योदाहरणम् । अन्यथा षष्ठीत्वान्न पञ्चम्यनुपपत्तिरिति शङ्का स्यादिति भावः ।। **पञ्चम्युपपत्तिश्चेति** ।। पृथिव्या इत्यादौ सादृश्यात्षष्ठीपञ्चमीसन्देहेऽपि विज्ञानादद्भ्य इत्यादौ पञ्चम्या निर्णीतत्वेन तत्प्रायपाठेन सर्वत्रापि पञ्चम्या निर्णयात् । तस्याश्च पृथिव्यादेरपादानत्वाभावेन कारकविभक्तित्वासम्भवादुपपदविभक्तित्वे पदान्तरयोगाभावात् । अन्यारादितरर्त इत्यत्रान्येत्यस्यान्यार्थकशब्दग्रहणपरत्वादन्तरशब्दपरत्वस्य च विभक्तिप्रतिरूपकान्तरेणेति यदन्तरं व्याघ्रहरीन्द्रयोर्वने इत्यादौ भेदभेदकयोः प्रयोगादत्र

विभक्तत्वार्थेऽन्यः कृष्ण इत्यादाविव पञ्चम्या उपपत्तेरन्यथा चोपपत्तेरिति भावः । नन्वेवं पृथिव्या इत्यस्य यदि पृथिव्या भिन्न इत्यर्थस्तर्हि प्रथमसूत्रभाष्ये तद्ग्रहणमयुक्तम् । तस्य तद्धर्मत्वाभावादित्यत आह – यमिति ॥



## ಸಾರ

ಬೃಹದಾರಣ್ಯಕ ಭಾಷ್ಯದಲ್ಲಿ ಆತ್ಮಶಬ್ದಕ್ಕೆ ಚತುರ್ಮುಖ ಎಂಬರ್ಥವನ್ನು ಹೇಳಿದ್ದಾರೆ. ಆದರೆ ಪ್ರಕೃತ ಜೀವನೆಂಬರ್ಥವನ್ನು ಒಪ್ಪಿ ಜೀವಭೇದದ ವಿಷಯದಲ್ಲಿ ಅದೇ ಶ್ರುತಿಯನ್ನು ಪ್ರಮಾಣವನ್ನಾಗಿ ಹೇಳಿದ್ದಾರೆ. ಇದು ವಿರುದ್ಧವಲ್ಲವೇ? ಎಂದು ಪ್ರಶ್ನಿಸಬಾರದು. ಚತುರ್ಮುಖಬ್ರಹ್ಮನಿಗೆ ನಿಯಾಮಕನಾದ್ದರಿಂದ ಬ್ರಹ್ಮನು ಚತುರ್ಮುಖಬ್ರಹ್ಮನಿಗಿಂತ ಭಿನ್ನನಾಗಿದ್ದಾನೆಂಬ ವಿಷಯವು ಸ್ಪಷ್ಟವಾಗಿ ತಿಳಿಯುತ್ತದೆ. ಚತುರ್ಮುಖನಿಂದಲೇ ಭಿನ್ನನಾದ ಮೇಲೆ ಚತುರ್ಮುಖನಿಂದ ಅಭಿಮನ್ಯಮಾನರಾದ ಸಕಲಜೀವರಿಗಿಂತ ಭಿನ್ನನಾಗಿದ್ದಾನೆಂದು ಇನ್ನೂ ಸ್ಪಷ್ಟವಾಗಿ ತಿಳಿಯುತ್ತದೆ. ಆದ್ದರಿಂದ ವಿರೋಧಕ್ಕೆ ಅವಕಾಶವಿಲ್ಲ.

'ಅಂತರ' ಶಬ್ದಕ್ಕೆ ಬೃಹದಾರಣ್ಯಕ ಭಾಷ್ಯದಲ್ಲಿ 'ಬಾಹ್ಯವಸ್ತುಗಳ ಅಪೇಕ್ಷೆಯಿಲ್ಲದೇ ಪೀಡಿಸುವಿಕೆ' ಎಂಬರ್ಥವನ್ನು ಹೇಳಿದ್ದಾರೆ. ಆದರೆ ಪ್ರಕೃತ ಟೀಕೆಯಲ್ಲಿ ಕೇವಲ ಭೇದವೆಂಬರ್ಥವನ್ನು 'ಅಂತರ' ಶಬ್ದಕ್ಕೆ ಹೇಳಿದ್ದಾರೆ. ಇದರ ವಿರೋಧ ಬರುತ್ತದಲ್ಲವೇ? ಎಂದೂ ಸಹ ಪ್ರಶ್ನಿಸಬಾರದು. 'ಆತ್ಮನೋ ಅಂತರಃ' ಎಂಬ ಶ್ರುತಿಯಲ್ಲಿರುವ ಅಂತರ ಶಬ್ದಕ್ಕೆ ಭೇದವೆಂಬರ್ಥವನ್ನು ಟೀಕೆಯಲ್ಲಿ ವಿವಕ್ಷಿಸಲಾಗಿದೆ. ಆದರೆ ಬೃಹದಾರಣ್ಯಕ ಭಾಷ್ಯದಲ್ಲಿ 'ಆತ್ಮಾನಾಂ ಅಂತರಃ' ಎಂಬಲ್ಲಿರುವ ಅಂತರ ಶಬ್ದವನ್ನು ಸ್ವೀಕರಿಸಿ ಅಂತಃಸ್ಥಿತ್ವ ರಮಣವೆಂಬ ಅರ್ಥವನ್ನು ಹೇಳಿದ್ದಾರೆ. ಆದ್ದರಿಂದ ಪರಸ್ಪರ ವಿರೋಧವಿರುವುದಿಲ್ಲ.

ಬೃಹದಾರಣ್ಯಕದಲ್ಲಿ ಮೂರು ಪ್ರಕರಣಗಳಿವೆ - ೧. ಅಭಿಮಾನಿ ದೇವತಾ ಪ್ರಕರಣ, ೨. ಅಧಿದೈವ ಪ್ರಕರಣ, ೩. ಅಧ್ಯಾತ್ಮ ಪ್ರಕರಣ ಎಂದು. ಈ ಮೂರು ಪ್ರಕರಣಗಳಲ್ಲಿಯೂ ಅಂತರ್ಯಾಮಿಯಾಗಿ ಹೇಳಲ್ಪಟ್ಟವನು ವಿಷ್ಣುವೇ ಪ್ರತಿಪಾದ್ಯನಾಗಿದ್ದಾನೆಂಬ ವಿಚಾರವು ನಿರ್ಧಾರವಾಯಿತು.



## तात्पर्यचन्द्रिका

अन्ये तु – शरीरादिराहित्यात् ब्रह्मणो न नियन्तृत्वं पटवदिति प्राप्ते, शरीरादिराहित्यमसिद्धं, चैत्रकर्मनिर्मितस्य चैत्रशरीरत्ववत् ब्रह्मविषयकाविद्याकल्पितस्य जगतस्तच्छरीरत्वादिति सिद्धन्तः ।[1]

---

(१) शङ्करभाष्यम् -

अन्तर्याम्यधिदैवादिषु तद्धर्मव्यपदेशात्
प्रधानं जीव ईशो वा कोऽन्तर्यामी जगत्प्रति ।
कारणत्वात् प्रधानं स्याज्जीवो वा कर्मणो मुखात् ॥
जीवैकत्वामृतत्वादेरन्तर्यामी परेश्वरः ।
द्रष्टृत्वादेर्न प्रधानं न जीवोऽपि नियम्यतः ॥

'य इमं च लोकं परं च लोकं सर्वाणि च भूतानि योऽन्तरो यमयति' इत्युपक्रम्य श्रूयते, 'यः पृथिव्यां तिष्ठन् पृथिव्या अन्तरो यं पृथिवी न वेद यस्य पृथिवी शरीरं यः पृथिवीमन्तरो यमयत्येष त आत्मान्तर्याम्यमृतः' इत्यादि । अत्राधिदैवतमधिलोकमधिवेदमधियज्ञमधिभूतमध्यात्मं च कश्चिदन्तरवस्थितो यमयितान्तर्यामीति श्रूयते । स किमधिदैवाद्यभिमानी देवतात्मा कश्चित्, किं वा प्राप्ताणिमाद्यैश्वर्यः कश्चिद् योगी किं वा परमात्मा किंवार्थान्तरं किञ्चिदित्यपूर्वसञ्ज्ञादर्शनात् संशयः । किं तावन्नः प्रतिभाति, सञ्ज्ञाया अप्रसिद्धत्वात् सञ्ज्ञिनाऽप्यप्रसिद्धेनार्थान्तरेण केनचिद् भवितव्यमिति । अथवा नानिरूपितरूपमर्थान्तरं शक्यमस्तीत्यभ्युपगन्तुम् । अन्तर्यामिशब्दश्चान्तर्यमनयोगेन प्रवृत्तो नात्यन्तप्रसिद्धः । तस्मात् पृथिव्याद्यभिमानी कश्चिद्देवोऽन्तर्यामी स्यात् । तथाच श्रूयते'पृथिव्येव यस्यायतनमग्निर्लोको मनो ज्योतिः' इत्यादि । स च कार्यकरणवत्त्वात् पृथिव्यादीनन्तस्तिष्ठन्यमयतीति युक्तं देवतात्मनो यमयितृत्वम् । योगिनो वा कस्यचित् सिद्धस्य सर्वानुप्रवेशेन यमयितृत्वं स्यात् । नतु परमात्मा प्रतीयेत, अकार्यकरणत्वादित्येवं प्राप्त इदमुच्यते । योऽन्तर्याम्यधिदैवादिषु श्रूयते स परमात्मैव स्यान्नान्य इति । कुतः? तद्धर्मव्यपदेशात् । तस्य हि परमात्मनो धर्मा इह निर्दिश्यमाना दृश्यन्ते । पृथिव्यादि तावदधिदैवादिभेदभिन्नं समस्तं विकारजातमन्तस्तिष्ठन्यमयतीति परमात्मनो यमयितृत्वं धर्म उपपद्यते । सर्वविकारकारणत्वे सति सर्वशक्त्युपपत्तेः । 'एष त आत्माऽन्तर्याम्यमृतः' इति चात्मत्वामृतत्वे मुख्ये परमात्मन उपपद्येते । 'यं पृथिवी न वेद' इति च

पृथिवीदेवताया अविज्ञेयमन्तर्यामिणं ब्रुवन् देवतात्मनोऽन्यमन्तर्यामिणं दर्शयति । 'पृथिवी देवता ह्यहमस्मि पृथिवीत्यात्मानं विजानीयात्' । 'तथा अदृष्टोऽश्रुतः' इत्यादिव्यपदेशो रूपादिविहीनत्वात् परमात्मन उपपद्यत इति । यत्त्वकार्यकरणस्य परमात्मनो यमयितृत्वं नोपपद्यत इति । नैष दोषः । यान्नियच्छति तत्कार्यकरणैरेव तस्य कार्यकरणवत्त्वोपपत्तेः । तस्याप्यन्यो नियन्तेत्यनवस्थादोषश्च न सम्भवति, भेदाभावात् । भेदे हि सत्यनवस्थादोषोपपत्तिः । तस्मात् परमात्मैवान्तर्यामी ।।

**नच स्मार्तमतद्धर्माभिलापात्**

स्यादेतत् । अदृष्टत्वादयो धर्माः साङ्ख्यस्मृतिकल्पितस्य प्रधानस्याप्युपपद्यन्ते, रूपादिहीनतया तस्य तैरभ्युपगमात् । 'अप्रतर्क्यमविज्ञेयं प्रसुप्तमिव सर्वतः' इति हि स्मरन्ति । तस्यापि नियन्तृत्वं सर्वविकारकारणत्वादुपपद्यते । तस्मात्प्रधानमन्तर्यामिशब्दं स्यात् । 'ईक्षतेर्नाशब्दम्' इत्यत्र निराकृतमपि सत्प्रधानमिहादृष्टत्वादिव्यपदेशसम्भवेन पुनराशङ्क्यते । अत उत्तरमुच्यते । नच स्मार्तं प्रधानमन्तर्यामिशब्दं भवितुमर्हति । कस्माद्, अतद्धर्माभिलापात् । यद्यप्यदृष्टत्वादिव्यपदेशः प्रधानस्य सम्भवति, तथापि न द्रष्टृत्वादिव्यपदेशः सम्भवति, प्रधानस्याचेतनत्वेन तैरभ्युपगमात् । अदृष्टो द्रष्टाऽश्रुतः श्रोताऽमतो मन्ताऽविज्ञातो विज्ञाता' इति हि वाक्यशेष इह भवति । आत्मत्वमपि न प्रधानस्योपपद्यते ।।

यदि प्रधानमात्मत्वद्रष्टृत्वाद्यसम्भवान्नान्तर्याम्यभ्युपगम्यते, शारीरस्तर्ह्यन्तर्यामी भवतु । शारीरो हि चेतनत्वाद् द्रष्टा श्रोता मन्ता विज्ञाता च भवति, आत्मा च प्रत्यक्त्वात् । अमृतश्च, धर्माधर्मफलोपभोगोपपत्तेः । अदृष्टत्वादयश्च धर्माः शारीरे प्रसिद्धाः, दर्शनादिक्रियायाः कर्तरि प्रवृत्तिविरोधात् । 'न दृष्टेर्द्रष्टारं पश्येः' इत्यादिश्रुतिभ्यश्च । तस्य च कार्यकरणसङ्घातमन्तर्यमयितुं शीलं, भोक्तृत्वात् । तस्माच्छारीरोऽन्तर्यामीत्यत उत्तरं भवति –

**शारीरश्चोभयेऽपि हि भेदेनैनमधीयते**

नेति पूर्वसूत्रादनुवर्तते । शारीरश्च नान्तर्यामीष्यते । कस्माद्, यद्यपि द्रष्टृत्वादयो धर्मास्तस्य सम्भवन्ति, तथापि घटाकाशवदुपाधिपरिच्छिन्नत्वान्न कार्त्स्न्येन पृथिव्यादिष्वन्तरवस्थातुं नियन्तुं च शक्नोति । अपि चोभयेऽपि हि शाखिनः काण्वा माध्यन्दिनाश्चान्तर्यामिणो भेदेनैनं शारीरं पृथिव्यादिवदधिष्ठानत्वेन नियम्यत्वेन चाधीयते । 'यो विज्ञाने तिष्ठन्' इति काण्वाः । 'य आत्मनि तिष्ठन्' इति माध्यन्दिनाः । 'य आत्मनि तिष्ठन्' इत्यस्मिंस्तावत्पाठे भवत्यात्मशब्दः शारीरस्य वाचकः । 'यो विज्ञाने तिष्ठन्' इत्यस्मिन्नपि पाठे विज्ञानशब्देन शारीर उच्यते ।

ಶರೀರವಿದ್ದರೆ ಮಾತ್ರ ಬೇರೆ ಪದಾರ್ಥಗಳನ್ನು ನಿಯಂತ್ರಣ ಮಾಡಲು ಸಮರ್ಥನಾಗುತ್ತಾನೆ. ಆದರೆ

विज्ञानमयो हि शारीरः । तस्माच्छारीरादन्य ईश्वरोऽन्तर्यामीति सिद्धम् । कथं पुनरेकस्मिन् देहे द्वौ द्रष्टारावुपपद्येते, यश्चायमीश्वरोऽन्तर्यामी यश्चायमितरः शारीरः । का पुनरिहानुपपत्तिः । 'नान्योऽतोऽस्ति द्रष्टा' इत्यादि श्रुतिवचनं विरुद्ध्येत । अत्र हि प्रकृतादन्तर्यामिणोऽन्यं द्रष्टारं, श्रोतारं, मन्तारं, विज्ञातारं चात्मानं प्रतिषेधति । नियन्त्रन्तरप्रतिषेधार्थमेतद्वचनमिति चेन्न, नियन्त्रन्तराप्रसङ्गादविशेषश्रवणाच्च । अत्रोच्यते, अविद्याप्रत्युपस्थापितकार्यकरणोपाधिनिमित्तोऽयं शारीरान्तर्यामिणोर्भेदव्यपदेशो न पारमार्थिकः । एको हि प्रत्यगात्मा भवति । न द्वौ प्रत्यगात्मानौ सम्भवतः । एकस्यैव तु भेदव्यवहार उपाधिकृतः, यथा घटाकाशो महाकाश इति । ततश्च ज्ञातृज्ञेयादिभेदश्रुतयः प्रत्यक्षादीनि च प्रमाणानि संसारानुभवो विधिप्रतिषेधशास्त्रं चेति सर्वमेतदुपपद्यते । तथाच श्रुतिः 'यत्र हि द्वैतमिव भवति, तदितर इतरं पश्यति' इत्यविद्याविषये सर्वं व्यवहारं दर्शयति । 'यत्र त्वस्यसर्वमात्मैवाभूत् तत् केन कं पश्येद्' इति विद्याविषये सर्वं व्यवहारं वारयति ॥

**भामती – अन्तर्याम्यधिदैवादिषु तद्धर्मव्यपदेशात् ॥** 'स्वकर्मोपार्जितं देहं तेनान्यच्च नियच्छति । तक्षादिरशरीरस्तु नात्मान्तर्यामितां भजेत् ॥' प्रवृत्तिनियमलक्षणं हि कार्यं चेतनस्य शरीरिणः स्वशरीरेन्द्रियादौ वा शरीरेण वा वास्यादौ दृष्टं नाशरीरस्य ब्रह्मणो भवितुमर्हति । नहि जातु वटाङ्कुरः कुटजबीजाज्जायते । तदनेन 'जन्माद्यस्य यतः' इत्येतदप्याक्षिप्तं वेदितव्यम् । तस्मात्परमात्मनः शरीरेन्द्रियादिरहितस्यान्तर्यामित्वाभावात्, प्रधानस्य वा पृथिव्याद्यभिमानवत्या देवताया वाणिमाद्यैश्वर्ययोगिनो योगिनो वा जीवात्मनो वान्तर्यामिता स्यात् । तत्र यद्यपि प्रधानस्यादृष्टत्वाश्रुतत्वामतत्वाविज्ञातत्वानि सन्ति, तथापि तस्याचेतनस्य द्रष्टृत्वश्रोतृत्वमन्तृत्वविज्ञातृत्त्वानां श्रुतानामभावात्, अनात्मत्वाच्च 'एष त आत्मा' इति श्रुतेरनुपपत्तेर्न प्रधानस्यान्तर्यामिता । यद्यपि पृथिव्याद्यभिमानिनो देवस्यात्मत्वमस्ति, अदृष्टत्वादयश्च सह द्रष्टृत्वादिभिरुपपद्यन्ते, शरीरेन्द्रियादियोगश्च, पृथिव्येव यस्यायतनमग्निर्लोको मनो ज्योतिः' इत्यादिश्रुतेः, तथापि तस्य प्रतिनियतनियमनाद् 'यः सर्वांल्लोकानन्तरो यमयति यः सर्वाणि भूतान्यन्तरो यमयति' इति श्रुतिविरोधादनुपपत्तेः, योगी तु यद्यपि लोकभूतवशितया सर्वांल्लोकान् सर्वाणि च भूतानि नियन्तुमर्हति तत्र तत्रानेकविधदेहेन्द्रियादिनिर्माणेन 'स एकधा भवति त्रिधा भवति' इत्यादिश्रुतिभ्यः, तथापि 'जगद् व्यापारवर्जं प्रकरणात्' इति वक्ष्यमाणेन न्यायेन विकारविषये विद्यासिद्धानां व्यापाराभावात् सोऽपि नान्तर्यामी । तस्मात् पारिशेष्याज्जीव एव चेतनो देहेन्द्रियादिमान् द्रष्टृत्वादिसम्पन्नः स्वयमदृश्यादिः स्वात्मनि वृत्तिविरोधात् । अमृतश्च, देहेन्द्रियादिनाशेऽप्यनाशात् । अन्यथामुष्मिकफलोपभोगा-

ಶರೀರವೇ ಇಲ್ಲದ ಬಟ್ಟೆ ಮೊದಲಾದ ವಸ್ತುಗಳು ಮತ್ತೊಂದನ್ನು ನಿಯಂತ್ರಿಸಲು ಹೇಗೆ ಅಸಮರ್ಥವಾಗಿವೆಯೋ? ಅದರಂತೆ ಬ್ರಹ್ಮನೂ ಸಹ ಶರೀರರಹಿತನಾಗಿರುವುದರಿಂದ ಬೇರೆ ಪದಾರ್ಥಗಳನ್ನು ನಿಯಂತ್ರಿಸಲು ಅಸಮರ್ಥನಾಗಿದ್ದಾನೆಂದು ಪೂರ್ವಪಕ್ಷ.

---

भावेन कृतविप्रणाशाकृताभ्यागमप्रसङ्गात् । 'य आत्मनि तिष्ठन्' इति चाभेदेऽपि कथञ्चिद् भेदोपचारात् 'स भगवः कस्मिन् प्रतिष्ठितः स्वे महिम्नि' इतिवत् । 'यमात्मा न वेद' इति च स्वात्मनि वृत्तिविरोधाभिप्रायम् । 'यस्यात्मा शरीरम्' इत्यादि च सर्वं 'स्वे महिम्नि' इतिवद् योजनीयम् । यदि पुनरात्मनोऽपि नियन्तुरन्यो नियन्ता भवेद् वेदिता वा ततस्तस्याप्यन्य इत्यनवस्था स्यात् । सर्वलोकभूतनियन्तृत्वं च जीवस्यादृष्टद्वारा । तदुपार्जितौ हि धर्माधर्मौ नियच्छत इत्यनया द्वारा जीवो नियच्छति । एकवचनं च जात्यभिप्रायम् । तस्माज्जीवात्मैवान्तर्यामी, न परमात्मेति । एवं प्राप्तेऽभिधीयते 'देहेन्दि३यादिनियमे नास्य देहेन्द्रियान्तरम् । तत्कर्मोपार्जितं तच्चेत् तदविद्यार्जितं जगत् ।।' श्रुतिस्मृतीतिहासपुराणेषु तावदत्रभवतः सर्वज्ञस्य सर्वशक्तेः परमेश्वरस्य जगद्योनित्वमवगम्यते । न तत्पृथग्जनसाधारण्यानुमानाभासेनागमविरोधिना शक्यमपह्नोतुम् । तथाच सर्वं विकारजातं तदविद्याशक्तिपरिणामस्तस्य शरीरेन्द्रियस्थाने वर्तत इति यथायथं पृथिव्यादिदेवतादिकार्यकरणैस्तानेव पृथिव्यादिदेवतादीञ्छक्नोति नियन्तुम् । नचानवस्था । नहि नियन्त्रन्तरं तेन नियम्यते, किन्तु यो जीवो नियन्ता लोकसिद्धः स परमात्मैवोपाध्यवच्छेदकल्पितभेदस्तथा व्याख्यायत इत्यसकृदावेदितम्, तत्कुतो नियन्त्रन्तरम्, कुतश्चानवस्था । तथाच 'नान्योऽतोऽस्ति द्रष्टा' इत्याद्या अपि श्रुतयुपपन्नार्थाः । परमार्थतोऽन्तर्यामिणोऽन्यस्य जीवात्मनो द्रष्टुरभावात् । अविद्याकल्पित जीवपरमात्मभेदाश्रयास्तु ज्ञातृज्ञेयबेदश्रुतयः, प्रत्यक्षादीनि प्रमाणानि, संसारानुभवः, विधिनिषेधशास्त्राणि च । एवं चाधिदैवादिष्वेकस्यैवान्तर्यामिणः प्रत्यभिज्ञानं समञ्जसं भवति, 'यः सर्वांल्लोकान्' 'यः सर्वाणि भूतानि' इत्यत्र य इत्येकवचनमुपपद्यते । अमृतत्वं च परमात्मनि समञ्जसं नान्यत्र । 'य आत्मनि तिष्ठन्' इत्यादौ चाभेदेऽपि भेदोपचारक्लेशो न भविष्यति । तस्मात्परमात्मान्तर्यामी न जीवादिरिति सिद्धम् । पृथिव्यादि स्तनयित्न्वन्तमधिदैवम् । 'यः सर्वेषु लोकेषु' इत्यधिलोकम् । 'यः सर्वेषु वेदेषु' इत्यधिवेदम् । 'यः सर्वेषु यज्ञेषु' इत्यधियज्ञम् । 'यः सर्वेषु भूतेषु' इत्यधिभूतम् । प्राणाद्यात्मान्तमध्यात्मम् । सञ्ज्ञाया अप्रसिद्धत्वादित्युपक्रममात्रं पूर्वः पक्षः ।। १९ ।।

**दर्शनादिक्रियायाः कर्तरि प्रवृत्तिविरोधात् ।।** कर्तरि आत्मनि प्रवृत्तिविरोधादित्यर्थः ।।२०।।

ಶರೀರರಾಹಿತ್ಯವೆಂಬ ಹೇತುವೇ ಅಸಿದ್ಧವಾಗಿದೆ. ಯಾವರೀತಿಯಾಗಿ ಚೈತ್ರನ ಕರ್ಮದಿಂದ ನಿಯಮಿತವಾದ ಶರೀರವು ಚೈತ್ರನ ಶರೀರವೆಂದು ಕರೆಸಿಕೊಳ್ಳುತ್ತದೋ ಅದರಂತೆ ಬ್ರಹ್ಮವಿಷಯಕವಾದ ಅವಿದ್ಯೆಯಿಂದ ಕಲ್ಪಿತವಾದ ಜಗತ್ತೇ ಬ್ರಹ್ಮನಿಗೆ ಶರೀರವಾಗಿದೆ. ಇಂತಹ ತನ್ನ ಶರೀರವಾದ ಜಗತ್ತನ್ನು ಬ್ರಹ್ಮನು ನಿಯಂತ್ರಣ ಮಾಡಬಹುದೆಂದು ಸಿದ್ಧಾಂತ.

**तदुक्तं भामात्यां –**

**'देहेन्द्रियादिनियमे नास्य देहेन्द्रियान्तरम् ।**
**तत्कर्मोपार्जितं तच्चेत्तदविद्यार्जितं जगत् ।।'**

**इतीत्याहुः ।**

ಇದನ್ನೇ ಭಾಮತಿಯಲ್ಲಿ ಹೀಗೆ ಹೇಳಲಾಗಿದೆ -

ಬ್ರಹ್ಮನಿಗೆ ಶರೀರವಿಲ್ಲವೆಂದರೆ ಏನರ್ಥ? ನಿಯಮ್ಯವಾದ ದೇಹಕ್ಕಿಂತ ಅತಿರಿಕ್ತವಾದ ದೇಹವಿಲ್ಲವೆಂದು ಹೇಳುವುದಾದರೆ ನಿಯಮ್ಯವಾದ ತನ್ನ ಶರೀರಕ್ಕಿಂತ ಅತಿರಿಕ್ತವಾದ ದೇಹವಿಲ್ಲದಿದ್ದರೂ ತನ್ನ ದೇಹಕ್ಕೆ ನಿಯಾಮಕನಾಗಬಹುದು. ಇನ್ನು ದೇಹಸಂಬಂಧವೇ ಇಲ್ಲವೆಂದು ಹೇಳುವುದಾದರೆ ಜೀವನ ಕರ್ಮದಿಂದ ಜೀವನು ಹೇಗೆ ಶರೀರವನ್ನು ಪಡೆಯುತ್ತಾನೋ ಅದರಂತೆ ಅವಿದ್ಯೆಯಿಂದ ಬ್ರಹ್ಮನೂ ಸಹ ಜಗತ್ತನ್ನೇ ಶರೀರವನ್ನಾಗಿ ಪಡೆಯುತ್ತಾನೆ ಎಂದು.

**तन्न, तदविद्याकल्पितस्य तच्छरीरत्वे ब्रह्मवत् स्वतश्शरीरशून्यशुक्तिस्थाण्वाद्यज्ञानकल्पितस्य रूप्यदेहादेः शुक्तिस्थाण्वादिशरीरत्वापातात् ।**

ಇದು ಸರಿಯಲ್ಲ. ಬ್ರಹ್ಮನ ಅವಿದ್ಯಾದಿಂದ ಕಲ್ಪಿತವಾದ ಜಗತ್ತು ಬ್ರಹ್ಮನ ಶರೀರವಾಗಿದೆಯೆಂದು ಹೇಳುತ್ತಿದ್ದೀರಿ. ಹಾಗಾದರೆ ಬ್ರಹ್ಮನು ಹೇಗೆ ಸ್ವತಃ ಶರೀರಶೂನ್ಯನಾಗಿದ್ದಾನೋ? ಅದರಂತೆ ರಜತ ಹಾಗೂ ದೇಹಗಳೂ ಸಹ ಸ್ವತಃ ಶರೀರಶೂನ್ಯವಾಗಿವೆ. ಆದ್ದರಿಂದ ಬ್ರಹ್ಮನ ಅವಿದ್ಯಾದಿಂದ ಕಲ್ಪಿತವಾದದ್ದು ಬ್ರಹ್ಮನ ಶರೀರವೆಂದು ಹೇಳುವಂತೆ ಶುಕ್ತಿಯ ಅಜ್ಞಾನದಿಂದ ಕಲ್ಪಿತವಾದ ರಜತವೂ ಸಹ ಶುಕ್ತಿಯ ಶರೀರವಾಗಬೇಕಾಯಿತು. ಸ್ಥಾಣುವಿನ ಅಜ್ಞಾನದಿಂದ ಕಲ್ಪಿತವಾದ ದೇಹವೂ ಸ್ಥಾಣುವಿನ ಶರೀರವೆಂದಾಗಬೇಕಾದೀತು.

**ब्रह्मणः स्वाविद्याकल्पितेनास्मदादिसंसारेण संसारित्वापाताच्च ।**

ಮತ್ತು ಬ್ರಹ್ಮನೂ ತನ್ನ ಅಜ್ಞಾನದಿಂದ ಕಲ್ಪಿತನಾದ್ದರಿಂದ ನಮ್ಮಂತೆ ಬ್ರಹ್ಮನೂ ಸಹ ಸಂಸಾರಿಯಾಗಬೇಕಾದೀತು. ಅಂದರೆ ಅವಿದ್ಯಾಕಲ್ಪಿತವಾದದ್ದನ್ನೇ ಸಂಸಾರವೆಂದು ಅದ್ವೈತಿಗಳು

ಹೇಳುವ ಕಾರಣ ಬ್ರಹ್ಮನೂ ಸಹ ಸ್ವ-ಅಜ್ಞಾನಕಲ್ಪಿತನಾದ್ದರಿಂದ ಸಂಸಾರಿಯಾಗಬೇಕಾದೀತೆಂದು ಅಭಿಪ್ರಾಯ.

**जगदार्जनात् प्रागशरीरस्यैव स्रष्टृत्ववत् नियन्तृत्वस्याप्युपपत्तेश्च ।**

ಮತ್ತು ಜಗತ್ತು ಸೃಷ್ಟಿಯಾಗುವ ಮೊದಲು ಬ್ರಹ್ಮನು ಅಶರೀರನಾಗಿದ್ದನು. ಅಶರೀರಿಯಾದ ಬ್ರಹ್ಮನಿಂದ ಜಗತ್ತಿನ ಸೃಷ್ಟಿಯಾಯಿತೆಂದು ಹೇಳುವಂತೆ ಅಶರೀರಿಯಾದ ಬ್ರಹ್ಮನಿಂದಲೇ ನಿಯಂತೃತ್ವವು ನಡೆಯಬಹುದು. ನಿಯಮನಕ್ಕೋಸ್ಕರ ಶರೀರವನ್ನು ಒಪ್ಪುವ ಅವಶ್ಯಕತೆಯಿರುವುದಿಲ್ಲ.

**न चाशरीरस्यानियन्तृत्वे शङ्किते गौणशरीरोपपादनं युक्तम् ।**

ಶರೀರವಿಲ್ಲದ ಕಾರಣ ನಿಯಂತೃತ್ವವು ಕೂಡುವುದಿಲ್ಲವೆಂದು ಆಶಂಕಿಸಿದಾಗ ಗೌಣವಾದ ಶರೀರವನ್ನು ಒಪ್ಪುವುದು ಅಯುಕ್ತವಾಗುತ್ತದೆ. (ನಿರ್ಗತಿಕನಾದ ವ್ಯಕ್ತಿಯಲ್ಲಿ ಗೌಣವಾದ ಹಣವನ್ನು ಸಮರ್ಪಿಸುವುದರಿಂದ ಅವನು ಶ್ರೀಮಂತನಾಗಲಾರ)

**किञ्च शुद्धं न नियन्तृ, अशुद्धं त्वविद्याकल्पितत्वान्नाविद्याविषयः ।**

ಮತ್ತೆ - ಶುದ್ಧಬ್ರಹ್ಮನಿಗೆ ಶರೀರವನ್ನು ಅದ್ವೈತಿಗಳು ಒಪ್ಪುವುದಾದರೆ ಅವನಿಗೆ ನಿಯಂತೃತ್ವವನ್ನು ಒಪ್ಪಲು ಸಾಧ್ಯವಿಲ್ಲ. ಅಶುದ್ಧಬ್ರಹ್ಮನಿಗೆ ಶರೀರವನ್ನು ಒಪ್ಪುವುದಾದರೆ ಅವಿದ್ಯಾವಿಷಯನೆಂದು ಹೇಳಬೇಕು. ಆದರೆ ಅವಿದ್ಯಾಕಲ್ಪಿತನಾದ ಅಶುದ್ಧಬ್ರಹ್ಮನು ಅವಿದ್ಯೆಗೆ ವಿಷಯನಾಗಲು ಹೇಗೆ ಸಾಧ್ಯ ? ಇನ್ನು ಅವಿದ್ಯೆಗೆ ಶುದ್ಧಬ್ರಹ್ಮನು ವಿಷಯನಾಗಬಹುದು ಆದರೆ ಅವನಲ್ಲಿ ನಿಯಂತೃತ್ವ ಮೊದಲಾದ ಧರ್ಮಗಳನ್ನು ಹೇಳಲು ಬರುವುದಿಲ್ಲ.

**यच्चोक्तं – देहादिनियन्तुरपि जीवस्य भिन्ननियन्तृनियम्यत्वे तन्नियन्तुरीश्वरस्यापि भिन्ननियन्तृनियम्यत्वेनावस्थापातात् नियन्तृ ब्रह्म नियम्यजीवाभिन्नमिति,**

ಮತ್ತು ಅದ್ವೈತಿಗಳ ಮತ್ತೊಂದು ಮಾತು ಹೀಗಿದೆ - ದೇಹೇಂದ್ರಿಯಾದಿಗಳಿಗೆ ಜೀವನು ನಿಯಾಮಕನಾಗಿದ್ದಾನೆ. ಇಂತಹ ಜೀವನು ಬೇರೊಬ್ಬ ನಿಯಾಮಕನಿಂದ ನಿಯಮ್ಯನಾದರೆ ಅಂತಹ ನಿಯಾಮಕನಾದ ಈಶ್ವರನಿಗೂ ಸಹ ಭಿನ್ನವಾದ ಮತ್ತೊಬ್ಬ ನಿಯಾಮಕನು ಇರಬೇಕಾಗುತ್ತದೆ. ಅವರಿಗೂ ಮತ್ತೊಬ್ಬ ನಿಯಾಮಕನ ಅನಿವಾರ್ಯತೆ ಇರುವುದರಿಂದ ಅನವಸ್ಥಾ ದೋಷವು ಬರುತ್ತದೆ. ಇದನ್ನು ಪರಿಹರಿಸಬೇಕೆಂದರೆ ನಿಯಂತೃವಾಗಿರುವ ಬ್ರಹ್ಮನು ನಿಯಮ್ಯನಾದ ಜೀವನಿಗಿಂತ ಅಭಿನ್ನನಾಗಿದ್ದಾನೆಂದೇ ಹೇಳಬೇಕು. ಆವಾಗ ಮತ್ತೊಬ್ಬ ನಿಯಮಕನ ಅಪೇಕ್ಷೆಯು ಬಾರದ ಕಾರಣ ಅನವಸ್ಥಾ ದೋಷವು ಪರಿಹಾರವಾಗುತ್ತವೆ ಎಂದು.

ಅಂತರ್ಯಾಮ್ಯಧಿಕರಣ (೧-೨-೫)

ಶರೀರರಾಹಿತ್ಯವೆಂಬ ಹೇತುವೇ ಅಸಿದ್ಧವಾಗಿದೆ. ಯಾವರೀತಿಯಾಗಿ ಚೈತ್ರನ ಕರ್ಮದಿಂದ ನಿಯಮಿತವಾದ ಶರೀರವು ಚೈತ್ರನ ಶರೀರವೆಂದು ಕರೆಸಿಕೊಳ್ಳುತ್ತದೋ ಅದರಂತೆ ಬ್ರಹ್ಮವಿಷಯಕವಾದ ಅವಿದ್ಯೆಯಿಂದ ಕಲ್ಪಿತವಾದ ಜಗತ್ತೇ ಬ್ರಹ್ಮನಿಗೆ ಶರೀರವಾಗಿದೆ. ಇಂತಹ ತನ್ನ ಶರೀರವಾದ ಜಗತ್ತನ್ನು ಬ್ರಹ್ಮನು ನಿಯಂತ್ರಣ ಮಾಡಬಹುದೆಂದು ಸಿದ್ಧಾಂತ.

**तदुक्तं भामात्यां –**

**'देहेन्द्रियादिनियमे नास्य देहेन्द्रियान्तरम् ।**
**तत्कर्मोपार्जितं तच्चेत्तदविद्यार्जितं जगत् ।।'**

**इतीत्याहुः ।**

ಇದನ್ನೇ ಭಾಮತಿಯಲ್ಲಿ ಹೀಗೆ ಹೇಳಲಾಗಿದೆ -

ಬ್ರಹ್ಮನಿಗೆ ಶರೀರವಿಲ್ಲವೆಂದರೆ ಏನರ್ಥ? ನಿಯಮ್ಯವಾದ ದೇಹಕ್ಕಿಂತ ಅತಿರಿಕ್ತವಾದ ದೇಹವಿಲ್ಲವೆಂದು ಹೇಳುವುದಾದರೆ ನಿಯಮ್ಯವಾದ ತನ್ನ ಶರೀರಕ್ಕಿಂತ ಅತಿರಿಕ್ತವಾದ ದೇಹವಿಲ್ಲದಿದ್ದರೂ ತನ್ನ ದೇಹಕ್ಕೆ ನಿಯಾಮಕನಾಗಬಹುದು. ಇನ್ನು ದೇಹಸಂಬಂಧವೇ ಇಲ್ಲವೆಂದು ಹೇಳುವುದಾದರೆ ಜೀವನ ಕರ್ಮದಿಂದ ಜೀವನು ಹೇಗೆ ಶರೀರವನ್ನು ಪಡೆಯುತ್ತಾನೋ ಅದರಂತೆ ಅವಿದ್ಯೆಯಿಂದ ಬ್ರಹ್ಮನೂ ಸಹ ಜಗತ್ತನ್ನೇ ಶರೀರವನ್ನಾಗಿ ಪಡೆಯುತ್ತಾನೆ ಎಂದು.

**तन्न, तदविद्याकल्पितस्य तच्छरीरत्वे ब्रह्मवत् स्वतश्शरीरशून्यशुक्तिस्थाण्वाद्यज्ञानकल्पितस्य रूप्यदेहादेः शुक्तिस्थाण्वादिशरीरत्वापातात् ।**

ಇದು ಸರಿಯಲ್ಲ. ಬ್ರಹ್ಮನ ಅವಿದ್ಯಾದಿಂದ ಕಲ್ಪಿತವಾದ ಜಗತ್ತು ಬ್ರಹ್ಮನ ಶರೀರವಾಗಿದೆಯೆಂದು ಹೇಳುತ್ತಿದ್ದೀರಿ. ಹಾಗಾದರೆ ಬ್ರಹ್ಮನು ಹೇಗೆ ಸ್ವತಃ ಶರೀರಶೂನ್ಯನಾಗಿದ್ದಾನೋ? ಅದರಂತೆ ರಜತ ಹಾಗೂ ದೇಹಗಳೂ ಸಹ ಸ್ವತಃ ಶರೀರಶೂನ್ಯವಾಗಿವೆ. ಆದ್ದರಿಂದ ಬ್ರಹ್ಮನ ಅವಿದ್ಯಾದಿಂದ ಕಲ್ಪಿತವಾದದ್ದು ಬ್ರಹ್ಮನ ಶರೀರವೆಂದು ಹೇಳುವಂತೆ ಶುಕ್ತಿಯ ಅಜ್ಞಾನದಿಂದ ಕಲ್ಪಿತವಾದ ರಜತವೂ ಸಹ ಶುಕ್ತಿಯ ಶರೀರವಾಗಬೇಕಾಯಿತು. ಸ್ಥಾಣುವಿನ ಅಜ್ಞಾನದಿಂದ ಕಲ್ಪಿತವಾದ ದೇಹವೂ ಸ್ಥಾಣುವಿನ ಶರೀರವೆಂದಾಗಬೇಕಾದೀತು.

**ब्रह्मणः स्वाविद्याकल्पितेनास्मदादिसंसारेण संसारित्वापाताच्च ।**

ಮತ್ತು ಬ್ರಹ್ಮನೂ ತನ್ನ ಅಜ್ಞಾನದಿಂದ ಕಲ್ಪಿತನಾದ್ದರಿಂದ ನಮ್ಮಂತೆ ಬ್ರಹ್ಮನೂ ಸಹ ಸಂಸಾರಿಯಾಗಬೇಕಾದೀತು. ಅಂದರೆ ಅವಿದ್ಯಾಕಲ್ಪಿತವಾದದ್ದನ್ನೇ ಸಂಸಾರವೆಂದು ಅದ್ವೈತಿಗಳು

ಹೇಳುವ ಕಾರಣ ಬ್ರಹ್ಮನೂ ಸಹ ಸ್ವ-ಅಜ್ಞಾನಕಲ್ಪಿತನಾದ್ದರಿಂದ ಸಂಸಾರಿಯಾಗಬೇಕಾದೀತೆಂದು ಅಭಿಪ್ರಾಯ.

**जगदार्जनात् प्रागशरीरस्स्यैव सृष्टृत्त्ववत् नियन्तृत्वस्याप्युपपत्तेश्च ।**

ಮತ್ತು ಜಗತ್ತು ಸೃಷ್ಟಿಯಾಗುವ ಮೊದಲು ಬ್ರಹ್ಮನು ಅಶರೀರನಾಗಿದ್ದನು. ಅಶರೀರಿಯಾದ ಬ್ರಹ್ಮನಿಂದ ಜಗತ್ತಿನ ಸೃಷ್ಟಿಯಾಯಿತೆಂದು ಹೇಳುವಂತೆ ಅಶರೀರಿಯಾದ ಬ್ರಹ್ಮನಿಂದಲೇ ನಿಯಂತೃತ್ವವು ನಡೆಯಬಹುದು. ನಿಯಮನಕ್ಕೋಸ್ಕರ ಶರೀರವನ್ನು ಒಪ್ಪುವ ಅವಶ್ಯಕತೆಯಿರುವುದಿಲ್ಲ.

**न चाशरीरस्यानियन्तृत्वे शङ्किते गौणशरीरोपपादनं युक्तम् ।**

ಶರೀರವಿಲ್ಲದ ಕಾರಣ ನಿಯಂತೃತ್ವವು ಕೂಡುವುದಿಲ್ಲವೆಂದು ಆಶಂಕಿಸಿದಾಗ ಗೌಣವಾದ ಶರೀರವನ್ನು ಒಪ್ಪುವುದು ಅಯುಕ್ತವಾಗುತ್ತದೆ. (ನಿರ್ಗತಿಕನಾದ ವ್ಯಕ್ತಿಯಲ್ಲಿ ಗೌಣವಾದ ಹಣವನ್ನು ಸಮರ್ಪಿಸುವುದರಿಂದ ಅವನು ಶ್ರೀಮಂತನಾಗಲಾರ)

**किञ्च शुद्धं न नियन्तृ, अशुद्धं त्वविद्याकल्पितत्वान्नाविद्याविषयः ।**

ಮತ್ತೆ - ಶುದ್ಧಬ್ರಹ್ಮನಿಗೆ ಶರೀರವನ್ನು ಅದ್ವೈತಿಗಳು ಒಪ್ಪುವುದಾದರೆ ಅವನಿಗೆ ನಿಯಂತೃತ್ವವನ್ನು ಒಪ್ಪಲು ಸಾಧ್ಯವಿಲ್ಲ. ಅಶುದ್ಧಬ್ರಹ್ಮನಿಗೆ ಶರೀರವನ್ನು ಒಪ್ಪುವುದಾದರೆ ಅವಿದ್ಯಾವಿಷಯನೆಂದು ಹೇಳಬೇಕು. ಆದರೆ ಅವಿದ್ಯಾಕಲ್ಪಿತನಾದ ಅಶುದ್ಧಬ್ರಹ್ಮನು ಅವಿದ್ಯೆಗೆ ವಿಷಯನಾಗಲು ಹೇಗೆ ಸಾಧ್ಯ ? ಇನ್ನು ಅವಿದ್ಯೆಗೆ ಶುದ್ಧಬ್ರಹ್ಮನು ವಿಷಯನಾಗಬಹುದು ಆದರೆ ಅವನಲ್ಲಿ ನಿಯಂತೃತ್ವ ಮೊದಲಾದ ಧರ್ಮಗಳನ್ನು ಹೇಳಲು ಬರುವುದಿಲ್ಲ.

**यच्चोक्तं – देहादिनियन्तुरपि जीवस्य भिन्ननियन्तृनियम्यत्वे तन्नियन्तुरीश्वरस्यापि भिन्ननि-न्तृनियम्यत्वेनावस्थापातात् नियन्तृ ब्रह्म नियम्यजीवाभिन्नमिति,**

ಮತ್ತು ಅದ್ವೈತಿಗಳ ಮತ್ತೊಂದು ಮಾತು ಹೀಗಿದೆ - ದೇಹೇಂದ್ರಿಯಾದಿಗಳಿಗೆ ಜೀವನು ನಿಯಾಮಕನಾಗಿದ್ದಾನೆ. ಇಂತಹ ಜೀವನು ಬೇರೊಬ್ಬ ನಿಯಾಮಕನಿಂದ ನಿಯಮ್ಯನಾದರೆ ಅಂತಹ ನಿಯಾಮಕನಾದ ಈಶ್ವರನಿಗೂ ಸಹ ಭಿನ್ನವಾದ ಮತ್ತೊಬ್ಬ ನಿಯಾಮಕನು ಇರಬೇಕಾಗುತ್ತದೆ. ಅವರಿಗೂ ಮತ್ತೊಬ್ಬ ನಿಯಾಮಕನ ಅನಿವಾರ್ಯತೆ ಇರುವುದರಿಂದ ಅನವಸ್ಥಾ ದೋಷವು ಬರುತ್ತದೆ. ಇದನ್ನು ಪರಿಹರಿಸಬೇಕೆಂದರೆ ನಿಯಂತೃವಾಗಿರುವ ಬ್ರಹ್ಮನು ನಿಯಮ್ಯನಾದ ಜೀವನಿಗಿಂತ ಅಭಿನ್ನನಾಗಿದ್ದಾನೆಂದೇ ಹೇಳಬೇಕು. ಆವಾಗ ಮತ್ತೊಬ್ಬ ನಿಯಮಕನ ಅಪೇಕ್ಷೆಯು ಬಾರದ ಕಾರಣ ಅನವಸ್ಥಾ ದೋಷವು ಪರಿಹಾರವಾಗುತ್ತವೆ ಎಂದು.

**तन्न, अभेदे सुतरां नियन्तृत्वायोगात् ।**

ಅದ್ವೈತಿಗಳ ಈ ನಿಲುವು ಅಯುಕ್ತವಾಗಿದೆ. ಅನವಸ್ಥಾದೋಷ ಪರಿಹಾರಕ್ಕಾಗಿ ಅಭೇದವನ್ನು ಹೇಳುವುದಾದರೆ ಸುತರಾಂ ನಿಯಂತೃತ್ವವೂ ಕೂಡುವುದಿಲ್ಲ.

**श्रुतिसूत्रयोर्भेदोक्त्ययोगाच्च ।**

ಮತ್ತು 'ಭೇದೇನೈನಮಧೀಯತೇ' ಎಂಬುದಾಗಿ ಸೂತ್ರವು ಭೇದವನ್ನೇ ಹೇಳುತ್ತಿದೆ. ಶ್ರುತಿಯೂ ಸಹ ಭೇದವನ್ನೇ ಹೇಳುತ್ತಿರುವುದರಿಂದ ಇವುಗಳಿಗೆ ಅಸ್ವಾರಸ್ಯವನ್ನು ಹೇಳಿದಂತಾಗುತ್ತದೆ.

**काल्पनिकभेदेन नियन्तृत्वादिकं युक्तमिति चेत्, तर्हि यथा देहादिनियन्तुर्जीवस्य व्यावहारिकभेदवानीशो नियन्ता, तथेशस्यापि व्यावहारिकभेदवान्यो नियन्ता स्यादिति व्यावहारिकनियन्तृपरम्परया अनवस्था स्यात् ।**

ಕಾಲ್ಪನಿಕವಾದ ಭೇದವನ್ನು ಒಪ್ಪಿ ನಿಯಂತೃತ್ವಾದಿಗಳನ್ನು ಕೂಡಿಸಬಹುದಲ್ಲವೇ? ಎಂದು ಶಂಕಿಸಬಾರದು. ಹಾಗಾದರೆ ಯಾವರೀತಿಯಾಗಿ ದೇಹೇಂದ್ರಿಯಾದಿಗಳನ್ನು ನಿಯಮನ ಮಾಡುವ ಜೀವನಿಗೆ ವ್ಯಾವಹಾರಿಕ ಭೇದವುಳ್ಳ ಮತ್ತೊಬ್ಬ ಈಶ್ವರನು ನಿಯಾಮಕನಾಗಿದ್ದಾನೆಂದು ಹೇಳುತ್ತೀರೋ? ಅದರಂತೆ ನಿಯಾಮಕನಾದ ಅಂತಹ ಈಶ್ವರನಿಗೂ ವ್ಯಾವಹಾರಿಕಭೇದವುಳ್ಳ ಮತ್ತೊಬ್ಬ ನಿಯಾಮಕನನ್ನು ಒಪ್ಪಲೇಬೇಕಾಗುತ್ತದೆ. ಅವರಿಗೂ ಸಹ ವ್ಯಾವಹಾರಿಕಭೇದವುಳ್ಳ ಮತ್ತೊಬ್ಬ ನಿಯಾಮಕನ ಅಪೇಕ್ಷೆಯಿರುವುದರಿಂದ ವ್ಯಾವಹಾರಿಕ ನಿಯಂತೃಪರಂಪರೆಯಿರುವುದರಿಂದ ಅನವಸ್ಥಾದೋಷವು ಅದ್ವೈತಿಗಳಿಗೆ ತಪ್ಪಿದ್ದಲ್ಲ.

**अथ "न वैशेष्यात्" इत्युक्तन्यायेन ईशस्य स्वातन्त्र्यादिविशेषान्न नियन्त्रन्तरं, तर्ह्यनवस्थापरिहारो नाभेदेन, किन्तु स्वातन्त्र्येणेति सत्यभेद एवास्तु ।**

ಇನ್ನು "ನ ವೈಶೇಷ್ಯಾತ್" ಎಂಬಲ್ಲಿ ಹೇಳಿದ ನ್ಯಾಯದ ಪ್ರಕಾರ ಭಗವಂತನಿಗೆ ಸ್ವಾತಂತ್ರ್ಯ ಮೊದಲಾದ ವಿಶೇಷಗುಣವಿರುತ್ತದೆ. ಆದ್ದರಿಂದ ಅವನಿಗೆ ಮತ್ತೊಬ್ಬ ನಿಯಾಮಕನನ್ನು ಒಪ್ಪಬೇಕಾಗಿಲ್ಲ ಎಂದು ಉತ್ತರಿಸಿದರೆ ಅನವಸ್ಥಾ ಪರಿಹಾರವನ್ನು ಅಭೇದದಿಂದ ಮಾಡಿದಂತೆ ಆಗಲಿಲ್ಲ ; ಹೊರತಾಗಿ ಸ್ವಾತಂತ್ರ್ಯದಿಂದ ಎಂದಾಯಿತು. ಆದ್ದರಿಂದ ಸತ್ಯವಾದಭೇದವಿದ್ದರೆ ಏನು ತೊಂದರೆ ?

ಪರಿಪೂರ್ಣಚಂದ್ರಿಕಾ

**किञ्चानवस्थातो बिभ्यता शरीरजीवयोरेवैक्यं स्वीकार्यम् । प्रमाणविरोधश्च जीवपरयोरैक्येऽपि ''भेदेनैनमधीयते'' इति सूत्र एवोक्तः ।**

ಮತ್ತು ಅನವಸ್ಥಾದೋಷಕ್ಕೆ ಹೆದರಿ ಶರೀರ ಹಾಗೂ ಜೀವರಿಗೆ ಐಕ್ಯವೆಂದು ಒಪ್ಪಬೇಕಾಗುತ್ತದೆ. ಪ್ರಮಾಣವಿರೋಧಬರುತ್ತದೆಂದರೆ ಜೀವ ಹಾಗೂ ಪರಮಾತ್ಮನ ಐಕ್ಯವಿಷಯದಲ್ಲಿಯೂ 'ಭೇದೇನೈನಮಧೀಯತೇ' ಎಂಬ ಸೂತ್ರದಲ್ಲಿ ಹೇಳಿದ ಪ್ರಕಾರ ಅನೇಕ ಪ್ರಮಾಣಗಳ ವಿರೋಧವು ಬರುತ್ತದೆ.

**किञ्चैवं सति स्वकार्यं प्रति कारणस्यापि पृथिव्यादिकस्य ब्रह्मकार्यत्वे ब्रह्मणोऽप्यन्यकार्यत्वमित्यनवस्थापरिहाराय पृथिवीब्रह्मणोरभेदः स्यात् । प्रमाणविरोधस्तु जीवपरयोरैक्येऽपि सम इत्युक्तम् ।**

ಹೀಗೆ ಅನವಸ್ಥಾವನ್ನು ಪರಿಹರಿಸುವುದಕ್ಕಾಗಿ ಅಭೇದವನ್ನು ಒಪ್ಪುವುದಾದರೆ ಕಾರ್ಯಕಾರಣಗಳಿಗೂ ಸಹ ಅಭೇದ ಬರಬೇಕಾದೀತು. ತನ್ನ ಕಾರ್ಯಕ್ಕೆ ಪೃಥಿವ್ಯಾದಿಗಳೂ ಕಾರಣವಾಗಿರಬಹುದು. ಆದರೆ ಈ ಎಲ್ಲಾ ಪೃಥಿವ್ಯಾದಿಗಳೂ ಬ್ರಹ್ಮನ ಕಾರ್ಯವಾಗಿವೆ. ಅಂತಹ ಬ್ರಹ್ಮನೂ ಸಹ ಮತ್ತೊಂದು ಪದಾರ್ಥದಿಂದ ಕಾರ್ಯಭೂತನೇ ಆಗಬೇಕು. ಹೀಗೆ ಅನವಸ್ಥಾ ದೋಷವು ಬರುತ್ತದೆ. ಇದನ್ನು ಪರಿಹರಿಸುವುದಕ್ಕಾಗಿ ಪೃಥಿವೀ ಹಾಗೂ ಬ್ರಹ್ಮನಿಗೂ ಅಭೇಧವನ್ನು ಒಪ್ಪಬೇಕಾದೀತು. ಹಾಗೆ ಅಭೇದ ಒಪ್ಪಿದರೆ ಪ್ರಮಾಣವಿರೋಧ ಬರುತ್ತದಲ್ಲವೇ? ಎಂದು ಪ್ರಶ್ನಿಸಬಾರದು. ಜೀವ ಹಾಗೂ ಪರಮಾತ್ಮರ ಐಕ್ಯವಿಷಯದಲ್ಲಿಯೂ ಈ ದೋಷವು ಸಮಾನವಾಗಿದೆ ಎಂದು ಹಿಂದೆಯೇ ಹೇಳಲಾಗಿದೆ.

**प्रकाशः —**

अन्ये त्विति । अत्रान्तर्यामी किं प्रधानमुत पृथिव्याद्यभिमानिदेवता, किं प्राप्ताणिमाद्यैश्वर्यः कश्चिद्योगी जीवः, अथ परमात्मेत्यादि भाष्ये प्रदर्शितम् ।

ವಿವರಣೆ - ಇಲ್ಲಿಯ ತನಕ ನಮ್ಮ ಸಿದ್ಧಾಂತದ ಪ್ರಕಾರ ಅಂತರ್ಯಾಮ್ಯಧಿಕರಣವನ್ನು ಸ್ಥಾಪಿಸಿದ್ದಾಯಿತು. ಈಗ ಅದ್ವೈತ ಮತದ ಪ್ರಕಾರ ಅಂತರ್ಯಾಮ್ಯಧಿಕರಣವನ್ನು ಅನುವಾದ ಮಾಡಿ ವಿಮರ್ಶಿಸಲು ಹೊರಟಿದ್ದಾರೆ. 'ಅನ್ಯೇ ತು' ಇತ್ಯಾದಿ ಗ್ರಂಥದಿಂದ. ಈ ಅಧಿಕರಣದಲ್ಲಿ ಅಂತರ್ಯಾಮಿಯು ಪ್ರಧಾನವೋ? ಅಥವಾ ಪೃಥಿವೀ ಮೊದಲಾದ ಪಂಚಭೂತಗಳ ಅಭಿಮಾನಿದೇವತೆಯೋ? ಅಥವಾ ಅಣಿಮಾ ಮಹಿಮಾ ಮೊದಲಾದ ಅಷ್ಟ ಐಶ್ವರ್ಯಗಳನ್ನು ಹೊಂದಿರುವ ಯಾರಾದರೊಬ್ಬ ಯೋಗಿಯೋ? ಅಥವಾ ಜೀವನೋ? ಅಥವಾ ಪರಮಾತ್ಮನೋ? ಎಂಬುದಾಗಿ ಸಂದೇಹ, ಪೂರ್ವಪಕ್ಷಗಳನ್ನು ಶಾಂಕರ ಭಾಷ್ಯದಲ್ಲಿ ತೋರಿಸಿರುತ್ತಾರೆ.

ಅಂತರ್ಯಾಮ್ಯಧಿಕರಣ (೧-೨-೫)

**तन्न, अभेदे सुतरां नियन्तृत्वायोगात् ।**

ಅದ್ವೈತಿಗಳ ಈ ನಿಲುವು ಅಯುಕ್ತವಾಗಿದೆ. ಅನವಸ್ಥಾದೋಷ ಪರಿಹಾರಕ್ಕಾಗಿ ಅಭೇದವನ್ನು ಹೇಳುವುದಾದರೆ ಸುತರಾಂ ನಿಯಂತೃತ್ವವೂ ಕೂಡುವುದಿಲ್ಲ.

**श्रुतिसूत्रयोर्भेदोक्त्ययोगाच्च ।**

ಮತ್ತು 'ಭೇದೇನೈನಮಧೀಯತೇ' ಎಂಬುದಾಗಿ ಸೂತ್ರವು ಭೇದವನ್ನೇ ಹೇಳುತ್ತಿದೆ. ಶ್ರುತಿಯೂ ಸಹ ಭೇದವನ್ನೇ ಹೇಳುತ್ತಿರುವುದರಿಂದ ಇವುಗಳಿಗೆ ಅಸ್ವಾರಸ್ಯವನ್ನು ಹೇಳಿದಂತಾಗುತ್ತದೆ.

**काल्पनिकभेदेन नियन्तृत्वादिकं युक्तमिति चेत्, तर्हि यथा देहादिनियन्तुर्जीवस्य व्यावहारिकभेदवानीशो नियन्ता, तथेशस्यापि व्यावहारिकभेदवान्यो नियन्ता स्यादिति व्यावहारिकनियन्तृपरम्परया अनवस्था स्यात् ।**

ಕಾಲ್ಪನಿಕವಾದ ಭೇದವನ್ನು ಒಪ್ಪಿ ನಿಯಂತೃತ್ವಾದಿಗಳನ್ನು ಕೂಡಿಸಬಹುದಲ್ಲವೇ? ಎಂದು ಶಂಕಿಸಬಾರದು. ಹಾಗಾದರೆ ಯಾವರೀತಿಯಾಗಿ ದೇಹೇಂದ್ರಿಯಾದಿಗಳನ್ನು ನಿಯಮನ ಮಾಡುವ ಜೀವನಿಗೆ ವ್ಯಾವಹಾರಿಕ ಭೇದವುಳ್ಳ ಮತ್ತೊಬ್ಬ ಈಶ್ವರನು ನಿಯಾಮಕನಾಗಿದ್ದಾನೆಂದು ಹೇಳುತ್ತೀರೋ? ಅದರಂತೆ ನಿಯಾಮಕನಾದ ಅಂತಹ ಈಶ್ವರನಿಗೂ ವ್ಯಾವಹಾರಿಕಭೇದವುಳ್ಳ ಮತ್ತೊಬ್ಬ ನಿಯಾಮಕನನ್ನು ಒಪ್ಪಲೇಬೇಕಾಗುತ್ತದೆ. ಅವರಿಗೂ ಸಹ ವ್ಯಾವಹಾರಿಕಭೇದವುಳ್ಳ ಮತ್ತೊಬ್ಬ ನಿಯಾಮಕನ ಅಪೇಕ್ಷೆಯಿರುವುದರಿಂದ ವ್ಯಾವಹಾರಿಕ ನಿಯಂತೃಪರಂಪರೆಯಿರುವುದರಿಂದ ಅನವಸ್ಥಾದೋಷವು ಅದ್ವೈತಿಗಳಿಗೆ ತಪ್ಪಿದ್ದಲ್ಲ.

**अथ ''न वैशेष्यात्'' इत्युक्तन्यायेन ईशस्य स्वातन्त्र्यादिविशेषान्न नियन्त्रन्तरं, तर्ह्यनवस्थापरिहारो नाभेदेन, किन्तु स्वातन्त्र्येणेति सत्यभेद एवास्तु ।**

ಇನ್ನು ''ನ ವೈಶೇಷ್ಯಾತ್'' ಎಂಬಲ್ಲಿ ಹೇಳಿದ ನ್ಯಾಯದ ಪ್ರಕಾರ ಭಗವಂತನಿಗೆ ಸ್ವಾತಂತ್ರ್ಯ ಮೊದಲಾದ ವಿಶೇಷಗುಣವಿರುತ್ತದೆ. ಆದ್ದರಿಂದ ಅವನಿಗೆ ಮತ್ತೊಬ್ಬ ನಿಯಾಮಕನನ್ನು ಒಪ್ಪಬೇಕಾಗಿಲ್ಲ ಎಂದು ಉತ್ತರಿಸಿದರೆ ಅನವಸ್ಥಾ ಪರಿಹಾರವನ್ನು ಅಭೇದದಿಂದ ಮಾಡಿದಂತೆ ಆಗಲಿಲ್ಲ ; ಹೊರತಾಗಿ ಸ್ವಾತಂತ್ರ್ಯದಿಂದ ಎಂದಾಯಿತು. ಆದ್ದರಿಂದ ಸತ್ಯವಾದಭೇದವಿದ್ದರೆ ಏನು ತೊಂದರೆ ?

**किञ्चानवस्थातो बिभ्यता शरीरजीवयोरैक्यं स्वीकार्यम् । प्रमाणविरोधश्च जीवपरयोरैक्येऽपि ''भेदेनैनमधीयते'' इति सूत्र एवोक्तः ।**

ಮತ್ತು ಅನವಸ್ಥಾದೋಷಕ್ಕೆ ಹೆದರಿ ಶರೀರ ಹಾಗೂ ಜೀವರಿಗೆ ಐಕ್ಯವೆಂದು ಒಪ್ಪಬೇಕಾಗುತ್ತದೆ. ಪ್ರಮಾಣವಿರೋಧಬರುತ್ತದೆಂದರೆ ಜೀವ ಹಾಗೂ ಪರಮಾತ್ಮನ ಐಕ್ಯವಿಷಯದಲ್ಲಿಯೂ 'ಭೇದೇನೈನಮಧೀಯತೇ' ಎಂಬ ಸೂತ್ರದಲ್ಲಿ ಹೇಳಿದ ಪ್ರಕಾರ ಅನೇಕ ಪ್ರಮಾಣಗಳ ವಿರೋಧವು ಬರುತ್ತದೆ.

**किञ्चैवं सति स्वकार्यं प्रति कारणस्यापि पृथिव्यादिकस्य ब्रह्मकार्यत्वे ब्रह्मणोऽप्यन्यकार्यत्वमित्यनवस्थापरिहाराय पृथिवीब्रह्मणोरभेदः स्यात् । प्रमाणविरोधस्तु जीवपरयोरैक्येऽपि सम इत्युक्तम् ।**

ಹೀಗೆ ಅನವಸ್ಥಾವನ್ನು ಪರಿಹರಿಸುವುದಕ್ಕಾಗಿ ಅಭೇದವನ್ನು ಒಪ್ಪುವುದಾದರೆ ಕಾರ್ಯಕಾರಣಗಳಿಗೂ ಸಹ ಅಭೇದ ಬರಬೇಕಾದೀತು. ತನ್ನ ಕಾರ್ಯಕ್ಕೆ ಪೃಥಿವ್ಯಾದಿಗಳೂ ಕಾರಣವಾಗಿರಬಹುದು. ಆದರೆ ಈ ಎಲ್ಲಾ ಪೃಥಿವ್ಯಾದಿಗಳೂ ಬ್ರಹ್ಮನ ಕಾರ್ಯವಾಗಿವೆ. ಅಂತಹ ಬ್ರಹ್ಮನೂ ಸಹ ಮತ್ತೊಂದು ಪದಾರ್ಥದಿಂದ ಕಾರ್ಯಭೂತನೇ ಆಗಬೇಕು. ಹೀಗೆ ಅನವಸ್ಥಾ ದೋಷವು ಬರುತ್ತದೆ. ಇದನ್ನು ಪರಿಹರಿಸುವುದಕ್ಕಾಗಿ ಪೃಥಿವೀ ಹಾಗೂ ಬ್ರಹ್ಮನಿಗೂ ಅಭೇಧವನ್ನು ಒಪ್ಪಬೇಕಾದೀತು. ಹಾಗೆ ಅಭೇದ ಒಪ್ಪಿದರೆ ಪ್ರಮಾಣವಿರೋಧ ಬರುತ್ತದಲ್ಲವೇ? ಎಂದು ಪ್ರಶ್ನಿಸಬಾರದು. ಜೀವ ಹಾಗೂ ಪರಮಾತ್ಮರ ಐಕ್ಯವಿಷಯದಲ್ಲಿಯೂ ಈ ದೋಷವು ಸಮಾನವಾಗಿದೆ ಎಂದು ಹಿಂದೆಯೇ ಹೇಳಲಾಗಿದೆ.

**प्रकाशः —**

अन्ये त्विति । अत्रान्तर्यामी किं प्रधानमुत पृथिव्याद्यभिमानिदेवता, किं प्राप्ताणिमाद्यैश्वर्यः कश्चिद्योगी जीवः, अथ परमात्मेत्यादि भाष्ये प्रदर्शितम् ।

ವಿವರಣೆ - ಇಲ್ಲಿಯ ತನಕ ನಮ್ಮ ಸಿದ್ಧಾಂತದ ಪ್ರಕಾರ ಅಂತರ್ಯಾಮ್ಯಧಿಕರಣವನ್ನು ಸ್ಥಾಪಿಸಿದ್ದಾಯಿತು. ಈಗ ಅದ್ವೈತ ಮತದ ಪ್ರಕಾರ ಅಂತರ್ಯಾಮ್ಯಧಿಕರಣವನ್ನು ಅನುವಾದ ಮಾಡಿ ವಿಮರ್ಶಿಸಲು ಹೊರಟಿದ್ದಾರೆ. 'ಅನ್ಯೇ ತು' ಇತ್ಯಾದಿ ಗ್ರಂಥದಿಂದ. ಈ ಅಧಿಕರಣದಲ್ಲಿ ಅಂತರ್ಯಾಮಿಯು ಪ್ರಧಾನವೋ? ಅಥವಾ ಪೃಥಿವೀ ಮೊದಲಾದ ಪಂಚಭೂತಗಳ ಅಭಿಮಾನಿದೇವತೆಯೋ? ಅಥವಾ ಅಣಿಮಾ ಮಹಿಮಾ ಮೊದಲಾದ ಅಷ್ಟ ಐಶ್ವರ್ಯಗಳನ್ನು ಹೊಂದಿರುವ ಯಾರಾದರೊಬ್ಬ ಯೋಗಿಯೋ? ಅಥವಾ ಜೀವನೋ? ಅಥವಾ ಪರಮಾತ್ಮನೋ? ಎಂಬುದಾಗಿ ಸಂದೇಹ, ಪೂರ್ವಪಕ್ಷಗಳನ್ನು ಶಾಂಕರ ಭಾಷ್ಯದಲ್ಲಿ ತೋರಿಸಿರುತ್ತಾರೆ.

ಅಂತರ್ಯಾಮ್ಯಧಿಕರಣ (೧-೨-೫)

**प्रकाशः** – भामात्यां तु अचेतस्य प्रधानस्य द्रष्टृत्वश्रोतृत्वविज्ञातृत्वादीनाम्, ''एष आत्मा'' इत्युक्तात्मत्वस्य चायोगात्,

ಶಾಂಕರಭಾಷ್ಯಕ್ಕಿಂತ ಸ್ವಲ್ಪ ವಿಭಿನ್ನವಾದ ಸಂದೇಹ, ಪೂರ್ವಪಕ್ಷಗಳನ್ನು ಭಾಮತಿಯಲ್ಲಿ ತೋರಿಸಲಾಗಿದೆ. ಅದು ಹೀಗೆ - ಪ್ರಧಾನವು ಅಚೇತನವಾಗಿರುವುದರಿಂದ ಶ್ರುತಿಯಲ್ಲಿ ಹೇಳಲ್ಪಟ್ಟ ದ್ರಷ್ಟೃತ್ವ, ಶ್ರೋತೃತ್ವ, ವಿಜ್ಞಾತೃತ್ವ ಮೊದಲಾದ ಧರ್ಮಗಳಾಗಲೀ, 'ಏಷ ಆತ್ಮಾ' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ಆತ್ಮತ್ವ ರೂಪಧರ್ಮವಾಗಲೀ ಯುಕ್ತವಾಗುವುದಿಲ್ಲ. ಆದ್ದರಿಂದ ಸಂದೇಹಕ್ಕೆ ಪ್ರಧಾನವು ವಿಷಯವೇ ಆಗುವುದಿಲ್ಲ.

**प्रकाशः** – पृथिव्याद्यभिमानिनो देवस्य प्रतिनियतनियमनात् ''यः सर्वान् लोकानन्तरो यमयति यस्सर्वाणि भूतान्यन्तरो यमयति'' इत्युक्तसर्वलोकभूत-नियमनायोगात्,

ಪ್ರಕೃತಿಯಂತೆ ಪೃಥಿವ್ಯಾದ್ಯಭಿಮಾನಿ ದೇವತೆಗಳನ್ನೂ ಸಹ ಸಂದೇಹಕ್ಕೆ ವಿಷಯರಾಗಿದ್ದಾರೆಂದು ಹೇಳಲು ಸಾಧ್ಯವಿಲ್ಲ. ಏಕೆಂದರೆ ಪ್ರತಿಯೊಬ್ಬ ಅಭಿಮಾನಿದೇವತೆಗಳಿಗೆ ಸೀಮಿತವಾದ ಪದಾರ್ಥಗಳನ್ನಷ್ಟೇ ನಿಯಮನ ಮಾಡುವಂತಹ ಶಕ್ತಿಯಿರುತ್ತದೆ. ಆದರೆ ಶ್ರುತಿಯಲ್ಲಿ ''ಯಃ ಸರ್ವಾನ್ ಲೋಕಾನ್ ಅಂತರೋ ಯಮಯತಿ ಯಸ್ಸರ್ವಾಣಿ ಭೂತಾನ್ಯಂತರೋ ಯಮಯತಿ'' ಎಂಬುದಾಗಿ ಸಕಲ ಲೋಕಗಳನ್ನೂ ಸಕಲಭೂತಗಳನ್ನೂ ಅಂತರ್ಯಾಮಿಯು ನಿಯಮನ ಮಾಡುತ್ತಾನೆಂದು ಹೇಳಲಾಗಿದೆ. ಇದು ಅಭಿಮಾನಿ ದೇವತೆಗಳಲ್ಲಿ ಕೂಡುವುದಿಲ್ಲ.

**प्रकाशः** – योगिजीवस्य च ''जगद्व्यापारवर्जम्'' इति वक्ष्यमाणन्यायेन ज्ञानिनो नियमनादिव्यापाराभावात् न प्रधानाभिमानिदेवयोगिजीवानामत्र सन्देहविषयता ।

ಅಣಿಮಾ, ಮಹಿಮಾ ಮೊದಲಾದ ಅಷ್ಟೈಶ್ವರ್ಯವುಳ್ಳ ಯೋಗಿಜೀವನೂ ಸಹ ಅಂತರ್ಯಾಮಿಯಾಗುತ್ತಾನೆಂಬ ಸಂದೇಹಕ್ಕೆ ವಿಷಯನಾಗುವುದಿಲ್ಲ. ಏಕೆಂದರೆ ''ಜಗದ್ವ್ಯಾಪಾರವರ್ಜಮ್'' ಎಂಬುದಾಗಿ ಮುಂದೆ ಹೇಳುವ ನ್ಯಾಯದಿಂದ ಜ್ಞಾನಿಯಾಗಿರುವ ಯೋಗಿ ಪುರುಷನಿಗೆ ಜಗತ್ತನ್ನು ನಿಯಮನ ಮಾಡುವಂತಹ ಯಾವುದೇ ವ್ಯಾಪಾರಗಳು ಇರುವುದಿಲ್ಲ.

ಆದ್ದರಿಂದ ಪ್ರಧಾನವಾಗಲೀ, ಅಭಿಮಾನಿ ದೇವತೆಗಳಾಗಲೀ, ಯೋಗಿಯಾದ ಜೀವನಾಗಲೀ ಅಂತರ್ಯಾಮಿಯಾಗಿರುತ್ತಾರೆಂಬುದು ಸಂದೇಹಕ್ಕೆ ವಿಷಯವೇ ಆಗುವುದಿಲ್ಲ.

**प्रकाशः** – किन्तु जीवमात्रं वा परमात्मा वेति सन्देहे जीवमात्रमेव ।

ಹೊರತಾಗಿ ಕೇವಲ ಜೀವ ಹಾಗೂ ಪರಮಾತ್ಮರು ಮಾತ್ರ ಸಂದೇಹಕ್ಕೆ ವಿಷಯರಾಗುತ್ತಾರೆ. ಆದ್ದರಿಂದ ಶ್ರುತಿಯಲ್ಲಿ ಹೇಳಲ್ಪಟ್ಟ ಅಂತರ್ಯಾಮಿಯು ಜೀವನೋ? ಅಥವಾ ಪರಮಾತ್ಮನೋ? ಎಂದು ಈ ಅಧಿಕರಣದ ಸಂದೇಹ.

ಪರಿಪೂರ್ಣಚಂದ್ರಿಕಾ

**प्रकाशः** – लोके चेतनस्य शरीरिणः स्वशरीरेन्द्रियादौ शरीरेण वास्यादौ नियमनादिकार्योपलम्भात् । जीवस्य च शरीरेन्द्रियादिमत्त्वाद्द्रष्टृत्वादिसम्भवाच्च ।

ಲೋಕದಲ್ಲಿ ಚೇತನನಾದ ಶರೀರಿಯು ತನ್ನ ಶರೀರ, ಇಂದ್ರಿಯ ಮೊದಲಾದವುಗಳನ್ನು ನೇರವಾಗಿ ನಿಯಮಿಸುತ್ತಾನೆ. ಆದರೆ ವಾಸ್ಯಾದಿಗಳನ್ನು (ಉಳಿ ಮೊದಲಾದವುಗಳನ್ನು) ತನ್ನ ಶರೀರದ ಮೂಲಕ ನಿಯಮನ ಮಾಡುತ್ತಾನೆ. ಮತ್ತು ಜೀವನಿಗೇ ಶರೀರ, ಇಂದ್ರಿಯಾದಿಗಳಿರುವುದರಿಂದ ಹಾಗೂ ಅವನು ಅವುಗಳಿಂದ ಪದಾರ್ಥಗಳನ್ನು ತಿಳಿಯುವುದರಿಂದ ಅವನಿಗೇ ದ್ರಷ್ಟೃತ್ವಾದಿಗಳು ಉಪಪನ್ನವಾಗುತ್ತದೆ.

**प्रकाशः** – अदृष्टादिद्वारा सर्वलोकादिनियन्तृत्वोपपत्तेश्च ।

ಅಷ್ಟೇ ಅಲ್ಲದೆ ತನ್ನ ಅದೃಷ್ಟದ ಮೂಲಕವಾಗಿ ಸಕಲ ಜಗತ್ತಿನ ನಿಯಂತೃತ್ವವೂ ಸಹ ಉಪಪನ್ನವಾಗುತ್ತದೆ. ಅಂದರೆ ಜೀವನು ಫಲವನ್ನು ಉಣ್ಣಬೇಕೆಂಬ ಉದ್ದೇಶದಿಂದ ಈ ಜಗತ್ತು ಉತ್ಪನ್ನವಾಗಿದೆ. ಆದ್ದರಿಂದ ಜೀವನ ಅದೃಷ್ಟವೇ ಜಗತ್ತಿಗೆ ಕಾರಣವೆಂದಂತಾಯಿತು.

**प्रकाशः** – 'यः' इत्येकवचनस्य च जात्यभिप्रायत्वात् । नच जीवस्याप्यन्यो नियन्ताऽऽवश्यक इति वाच्यं, तस्याप्यन्यः तस्याप्यन्य इत्यनवस्थापत्तेः ।

ವಿಷಯವಾಕ್ಯದಲ್ಲಿರುವ 'ಯಃ' ಎಂಬ ಏಕವಚನವು ಸಮುದಾಯಾಭಿಪ್ರಾಯದಲ್ಲಿ ಉಲ್ಲೇಖಿತವಾಗಿದೆ. ಆದ್ದರಿಂದ ಏಕವಚನದ ವಿರೋಧಕ್ಕೂ ಅವಕಾಶವಿರುವುದಿಲ್ಲ.

ಜೀವನಿಗೆ ಮತ್ತೊಬ್ಬ ನಿಯಾಮಕನು ಬೇಕಾಗುತ್ತದೆಂದು ಆಕ್ಷೇಪಿಸಬಾರದು; ಏಕೆಂದರೆ - ಅಂತಹ ಜೀವನಿಗೂ ಮತ್ತೊಬ್ಬ ನಿಯಾಮಕನ ಅವಶ್ಯಕತೆ ಇದೆ. ಆ ನಿಯಾಮಕನಿಗೂ ಮತ್ತೊಬ್ಬ ನಿಯಾಮಕನ ಅಪೇಕ್ಷೆಯಿರುವುದರಿಂದ ಹೀಗೆ ಅನವಸ್ಥಾದೋಷವು ಬರುತ್ತದೆ.

**प्रकाशः** – उक्तञ्च –

'स्वकर्मोपार्जितं देहं तेनान्यच्च नियच्छति ।
अक्षरादिशरीरस्तु नाऽत्मान्तर्यामितां भजेत् ॥'

इति । एवं प्राप्ते

ಮೇಲೆ ಹೇಳಿದ ವಿಷಯವನ್ನೆಲ್ಲಾ ಸಂಗ್ರಹಿಸಿ ಭಾಮತಿಯಲ್ಲಿ ಹೀಗೆ ಹೇಳಲಾಗಿದೆ -

'ಸ್ವಕರ್ಮೋಪಾರ್ಜಿತಂ ದೇಹಂ ತೇನಾನ್ಯಚ್ಚ ನಿಯಚ್ಛತಿ ।
ಅಕ್ಷರಾದಿಶರೀರಸ್ತು ನಾऽತ್ಮಾಂತರ್ಯಾಮಿತಾಂ ಭಜೇತ್ ॥'

ಬಡಿಗೆಗಾರನು ತನ್ನ ಕರ್ಮದಿಂದ ಸಂಪಾದಿಸಲ್ಪಟ್ಟ ದೇಹವನ್ನು ನಿಯಂತ್ರಣ ಮಾಡುತ್ತಾನೆ. ಅಂತಹ ದೇಹದ ಮುಖಾಂತರ ಕಟ್ಟಿಗೆ ಒಡೆಯಲು ಸಾಧನವಾದ ಉಳಿ ಮೊದಲಾದವುಗಳನ್ನು ನಿಯಂತ್ರಣ

ಮಾಡುತ್ತಾನೆ. ಆದ್ದರಿಂದ ಜೀವನೇ ಅಂತರ್ಯಾಮಿಯಾಗುತ್ತಾನೆ. ಆದರೆ ಬ್ರಹ್ಮನಿಗೆ ಶರೀರೇಂದ್ರಿಯಾದಿಗಳೇ ಇಲ್ಲದ ಕಾರಣ ಅಂತರ್ಯಾಮಿಯಾಗಲು ಸಾಧ್ಯವಿಲ್ಲ ಎಂದು. ಇಷ್ಟು ಪೂರ್ವಪಕ್ಷ.

**प्रकाशः** – सर्वस्य विकारजातस्य तदविद्याशक्तिपरिणामत्त्वात्तस्य च चैत्रकर्मनिर्मितस्य चैत्रशरीरादित्ववद् ब्रह्मणः शरीरेन्द्रियादिस्थानत्वाद् यथायथं पृथिव्यादिकार्यकारणैस्तानेव पृथिव्यादिदेवान् शक्नोति नियन्तुमिति अधिदैवादिषु उक्तोऽन्तर्यामी ब्रह्मैव,

ಜೀವನೇ ಅಂತರ್ಯಾಮಿಯಾಗಿದ್ದಾನೆಂಬ ಪೂರ್ವಪಕ್ಷವು ಅಯುಕ್ತವಾಗಿದೆ. ಏಕೆಂದರೆ ವಿಕಾರವನ್ನು ತಾಳಿದ ಸಮಸ್ತ ಜಗತ್ತು ಬ್ರಹ್ಮನ ಅವಿದ್ಯಾಶಕ್ತಿಯ ಪರಿಣಾಮವಾಗಿದೆ. ಅಂದರೆ ಅವಿದ್ಯಾಕಲ್ಪಿತವಾಗಿದೆ. ಯಾವರೀತಿಯಾಗಿ ಚೈತ್ರನ ಕರ್ಮದಿಂದ ನಿರ್ಮಿತವಾದ ಶರೀರವನ್ನು ಚೈತ್ರನು ನಿಯಮನ ಮಾಡುತ್ತಾನೋ ಅದರಂತೆ ಬ್ರಹ್ಮನಿಗೆ ಅವಿದ್ಯಾಕಲ್ಪಿತವಾದ ಈ ಸಮಸ್ತ ಜಗತ್ತು ಅವನ ಶರೀರ ಹಾಗೂ ಇಂದ್ರಿಯಗಳ ಸ್ಥಾನದಲ್ಲಿದೆ. ಹೀಗೆ ಶರೀರವೇ ಆಗಿರುವ ಜಗತ್ತನ್ನು ಬ್ರಹ್ಮನು ನಿಯಮನ ಮಾಡಬಹುದು. ಮತ್ತು ಪೃಥಿವೀ ಮೊದಲಾದ ಕಾರ್ಯಕಾರಣಗಳಿಂದ ಅಲ್ಲೇ ಇರುವ ಪೃಥಿವ್ಯಾದ್ಯಭಿಮಾನಿ ದೇವತೆಗಳನ್ನು ನಿಯಂತ್ರಣ ಮಾಡಲು ಸಮರ್ಥನಾಗುತ್ತಾನೆ. ಆದ್ದರಿಂದ ಅಧಿದೈವಾದಿಪ್ರಕರಣದಲ್ಲಿ ಅಂತರ್ಯಾಮಿಯೆಂದು ಪ್ರತಿಪಾದಿಸಲ್ಪಟ್ಟಿರುವವನು ಬ್ರಹ್ಮನೇ ಆಗಿದ್ದಾನೆ.

**प्रकाशः** – आत्मत्वामृतत्वादिधर्माणां व्यपदेशात् ।

ವಿಷಯವಾಕ್ಯದಲ್ಲಿರುವ ಆತ್ಮತ್ವ, ಅಮೃತತ್ವ ಮೊದಲಾದ ಧರ್ಮಗಳು ಬ್ರಹ್ಮನು ಅಂತರ್ಯಾಮಿಯಾಗಿದ್ದಾನೆಂಬ ಪಕ್ಷದಲ್ಲಷ್ಟೇ ಉಪಪನ್ನವಾಗುತ್ತವೆ.

**प्रकाशः** – न चानवस्था, ''नान्योऽतोऽस्ति द्रष्टा'' इत्यादिश्रुत्या नियन्तृब्रह्मणो नियम्यजीवाद् भेदानभ्युपगमात् ।

ಬ್ರಹ್ಮನನ್ನು ಅಂತರ್ಯಾಮಿಯೆಂದು ಹೇಳಿದರೆ ನಿಯಾಮಕನಾದ ಜೀವನಿಗೆ ಮತ್ತೊಬ್ಬ ನಿಯಾಮಕನನ್ನು ಒಪ್ಪಿದಂತಾಯಿತು. ಆವಾಗ ಅಂತಹ ನಿಯಾಮಕನಾದ ಬ್ರಹ್ಮನಿಗೂ ಮತ್ತೊಬ್ಬ ಬ್ರಹ್ಮನನ್ನು ಒಪ್ಪಬೇಕಾಗುತ್ತದ್ದರಿಂದ ಅನವಸ್ಥಾದೋಷ ಬರುತ್ತದಲ್ಲವೇ? ಎಂದು ಪ್ರಶ್ನಿಸಬಾರದು. ''ನಾನ್ಯೋಽತೋಽಸ್ತಿ ದ್ರಷ್ಟಾ'' ಎಂಬ ಶ್ರುತಿಯು ನಿಯಂತೃವಾಗಿರುವ ಬ್ರಹ್ಮನಿಗೆ ನಿಯಮ್ಯನಾದ ಜೀವನಿಂದ ಅಭೇದವನ್ನು ಹೇಳುತ್ತಿದೆ. ಆದ್ದರಿಂದ ಜೀವಬ್ರಹ್ಮರಿಗೆ ಭೇದವಿದ್ದಲ್ಲಿ ಅನವಸ್ಥಾದೋಷವನ್ನು ಆಕ್ಷೇಪಿಸಬಹುದಿತ್ತು. ಆದರೆ ಅಭೇದವಿರುವುದರಿಂದ ನಿಯಾಮಕನಿಗೆ ಮತ್ತೊಬ್ಬ ನಿಯಾಮಕನನ್ನು ಒಪ್ಪಿದಂತಾಗುವುದಿಲ್ಲ.

**प्रकाशः** – अविद्याकल्पितजीवपरमात्मभेदाश्रयास्तु ज्ञातृज्ञेयभेदश्रुतय इति सिद्धान्त इत्यर्थः ।

ಪರಿಪೂರ್ಣಚಂದ್ರಿಕಾ

ಹಾಗಾದರೆ ಅಧಿದೈವಾದಿಪ್ರಕರಣದಲ್ಲಿ ಜ್ಞಾತೃಜ್ಞೇಯಭಾವವನ್ನು ಹೇಳುವಂತಹ ಆಧಾರಾಧೇಯಭಾವವನ್ನು ಹೇಳುವಂತಹ ಶ್ರುತಿಗಳನ್ನು ಹೇಗೆ ಕೂಡಿಸುವುದು ಎಂದು ಶಂಕಿಸಬಾರದು. ಅವಿದ್ಯಾಕಲ್ಪಿತವಾದ ಜೀವಪರಮಾತ್ಮರ ಭೇದವನ್ನು ಒಪ್ಪಿರುವುದರಿಂದ ಆ ಶ್ರುತಿಗಳು ತದ್ವಿಷಯಕವಾಗಿ ಉಪಪನ್ನವಾಗುತ್ತವೆ. ಅಂದರೆ ವ್ಯವಹಾರಿಕ ಭೇದವನ್ನು ವಿವಕ್ಷಿಸಿ ಜ್ಞಾತೃಜ್ಞೇಯಭಾವಸಂಬಂಧಾದಿಗಳನ್ನೆಲ್ಲಾ ಹೊಂದಿಸಬೇಕೆಂದರ್ಥ. ಇಷ್ಟು ಭಾಮತಿಯಲ್ಲಿರುವ ಸಿದ್ಧಾಂತ.

**प्रकाशः – देहेन्द्रियादीति ।** किमिदमशरीरत्वं, यतो नियन्तृत्वाभाव उच्यते । नियम्यातिरिक्तदेहराहित्यं वा, देहसम्बन्धाभावो वा ।

'ದೇಹೇಂದ್ರಿಯಾದಿ' ಎಂಬ ಶ್ಲೋಕಕ್ಕೆ ಹೀಗರ್ಥ - ಬ್ರಹ್ಮನಲ್ಲಿ ಅಶರೀರತ್ವವನ್ನು ಹೇಳಲಾಗಿದೆ. ಆದ್ದರಿಂದಲೇ ಅವನು ನಿಯಮ್ಯನಾಗಲಾರನೆಂದು ಪೂರ್ವಪಕ್ಷದಲ್ಲಿ ಹೇಳಲಾಯಿತು. ಇದರ ಅಭಿಪ್ರಾಯವೇನು? ನಿಯಮ್ಯವಾದ ಪದಾರ್ಥಕ್ಕಿಂತ ಅತಿರಿಕ್ತವಾದ ದೇಹವು ಬ್ರಹ್ಮನಿಗಿರುವುದಿಲ್ಲವೆಂದು ಅರ್ಥವೋ? ಅಥವಾ ಯಾವುದೇ ದೇಹದ ಸಂಬಂಧವು ಬ್ರಹ್ಮನಿಗೆ ಇರುವುದಿಲ್ಲವೆಂದರ್ಥವೋ?

**प्रकाशः – नाद्यः ।** अस्य जीवस्य स्वदेहादिनियमने कार्ये न देहान्तरमस्तीति व्यभिचार इत्यर्थः ।

ಮೊದಲನೆಯ ಪಕ್ಷ ಅಯುಕ್ತವಾಗಿದೆ. ಏಕೆಂದರೆ ಜೀವನೂ ಸಹ ತನ್ನ ದೇಹವನ್ನು ನಿಯಮನ ಮಾಡುವಾಗ ಮತ್ತೊಂದು ದೇಹಾಂತರವನ್ನು ಹೊಂದಿರುವುದಿಲ್ಲ. ಅಂದರೆ ನಿಯಮ್ಯವಾದ ಪದಾರ್ಥಕ್ಕಿಂತ ಅತಿರಿಕ್ತವಾದ ದೇಹವು ಜೀವನಲ್ಲಿ ಇರುವುದಿಲ್ಲ. ಆದರೆ ಶರೀರತ್ವವು ಇದೆ. ಹೀಗೆ ಹೇತುವಿದ್ದು ಸಾಧ್ಯವಿಲ್ಲದ ಕಾರಣ ವ್ಯಭಿಚಾರ ದೋಷವು ಬರುತ್ತದೆ.

**प्रकाशः – द्वितीयं शङ्कते – तत्कर्मेति ।** जीवे स्वकर्मार्जितदेहसम्बन्धोऽस्तीति चेत्, परस्यपि देहासम्बन्धोऽसिद्ध इत्याह – **तदविद्येति** । तद्विषयत्वादिविद्यायाः तदविद्यात्वम् ।

ಎರಡನೆಯ ಪಕ್ಷವನ್ನು 'ತತ್ಕರ್ಮ' ಎಂಬ ವಾಕ್ಯದಿಂದ ಆಶಂಕಿಸುತ್ತಿದ್ದಾರೆ. ಜೀವನಲ್ಲಿ ಸ್ವಕರ್ಮದಿಂದ ಸಂಪಾದಿಸಲ್ಪಟ್ಟ ದೇಹಸಂಬಂಧವು ಇರುತ್ತದೆಂದು ಹೇಳುತ್ತೀರಿ. ಹಾಗಾದರೆ ಬ್ರಹ್ಮನಿಗೂ ಸಹ ಅಂತಹ ಅವಿದ್ಯಾವಿಷಯಕವಾದ ದೇಹಸಂಬಂಧವನ್ನು ಒಪ್ಪಬಹುದು. ದೇಹಸಂಬಂಧಾಭಾವವೆಂಬ ಹೇತು ಅಸಿದ್ಧವಾಗಿದೆಯೆಂದು 'ತದವಿದ್ಯಾ' ಎಂಬ ವಾಕ್ಯದಿಂದ ಪ್ರತಿಪಾದಿಸುತ್ತಿದ್ದಾರೆ. 'ತದವಿದ್ಯಾ' ಎಂಬ ಮಾತಿಗೆ 'ತದವಿದ್ಯಾ' ಎಂದರೆ ಅವಿದ್ಯೆಯು ಬ್ರಹ್ಮವಿಷಯಕವಾಗಿದೆ ಎಂದು ಅಭಿಪ್ರಾಯ.

**प्रकाशः –** पूर्वपक्षभागस्य प्रागेव अस्मदीयपूर्वपक्षेषु दूषितत्वात्, अतिप्रसङ्गापादनेन सिद्धान्तांशं निराह – **तन्नेति** ।

ಪೂರ್ವಪಕ್ಷಭಾಗವನ್ನು ಹಿಂದೆ ನಮ್ಮ ಸಿದ್ಧಾಂತದ ಪೂರ್ವಪಕ್ಷದಲ್ಲಿ ದೂಷಣೆ ಮಾಡಿದ್ದರಿಂದ ಪ್ರಕೃತ ಅತಿಪ್ರಸಂಗವನ್ನು ಆಪಾದನೆ ಮಾಡುವ ಮೂಲಕ ಸಿದ್ಧಾಂತಾಂಶವನ್ನು ನಿರಾಕರಿಸುತ್ತಿದ್ದಾರೆ 'ತನ್ನ' ಇತ್ಯಾದಿ ವಾಕ್ಯದಿಂದ.

**प्रकाशः – रूप्यदेहादेरिति ।** यथाक्रममन्वयः । नन्वगत्या स्रष्टृत्वाङ्गीकारेऽपि न नियमनं तथा वाच्यमित्यत आह – **नचेति ।**

'ರೂಪ್ಯದೇಹಾದೇಃ' ಎಂಬಲ್ಲಿ ರೂಪ್ಯ ಪದವನ್ನು ಹಾಗೂ ದೇಹ ಪದವನ್ನು ಯಥಾಕ್ರಮದಲ್ಲಿ ಅನ್ವಯ ಮಾಡಬೇಕು.

ಸ್ರಷ್ಟೃತ್ವವನ್ನು ಬ್ರಹ್ಮನಲ್ಲಿ ಒಪ್ಪುವುದು ಅನಿವಾರ್ಯ. ಆದ್ದರಿಂದ ದೇಹವಿಲ್ಲದಿದ್ದರೂ ಪ್ರಳಯಕಾಲದಲ್ಲಿ ಜಗತ್ತನ್ನು ಸೃಷ್ಟಿ ಮಾಡಬಹುದು. ಆದರೆ ನಿಯಮನವನ್ನು ಶರೀರವಿಲ್ಲದೆ ಒಪ್ಪುವ ಅವಶ್ಯಕತೆಯಿರುವುದಿಲ್ಲ. ಈ ಆಕ್ಷೇಪಕ್ಕೆ 'ನಚ' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

**प्रकाशः –** अस्तु वा तदज्ञानकल्पितं तच्छरीरमिति, तथाऽपि किं शुद्धस्येदं शरीरमुत विशिष्टस्येति विकल्प्य क्रमेण निराह – **किञ्चेति ।**

ಬ್ರಹ್ಮನ ಅಜ್ಞಾನದಿಂದ ಕಲ್ಪಿತವಾದದ್ದು ಬ್ರಹ್ಮನ ಶರೀರವಾಗಿದೆಯೆಂಬುದನ್ನು ಒಪ್ಪೋಣ. ಆದರೆ ಆ ಶರೀರವನ್ನು ಶುದ್ಧಬ್ರಹ್ಮನಿಗೆ ಒಪ್ಪುತ್ತೀರೋ ? ಅಥವಾ ವಿಶಿಷ್ಟಬ್ರಹ್ಮನಿಗೆ ಒಪ್ಪುತ್ತೀರೋ? ಎಂದು ವಿಕಲ್ಪಿಸಿ ಕ್ರಮವಾಗಿ 'ಕಿಂಚ' ಎಂಬ ವಾಕ್ಯದಿಂದ ನಿರಾಕರಿಸುತ್ತಿದ್ದಾರೆ.

**प्रकाशः –** शुद्धस्य नियन्तृत्वमेव नास्ति, निर्विकारत्वात्तस्य शरीराद्युपपादनक्लेशो व्यर्थः ।

ಅಭಿಪ್ರಾಯ ಹೀಗಿದೆ - ಶುದ್ಧಬ್ರಹ್ಮನಲ್ಲಿ ನಿಯಂತೃತ್ವವೆಂಬ ಧರ್ಮವೇ ಬರುವುದಿಲ್ಲ. ಏಕೆಂದರೆ ಅವನಲ್ಲಿ ಯಾವುದೇ ವಿಕಾರಗಳಾಗಲೀ ಅಥವಾ ಧರ್ಮಗಳಾಗಲೀ ಬರುವುದಿಲ್ಲವೆಂಬುದು ಅದ್ವೈತ ಸಿದ್ಧಾಂತ. ಅಂತಹ ಶುದ್ಧನಲ್ಲಿ ಶರೀರಾದಿಗಳನ್ನು ಉಪಪಾದಿಸುವಿಕೆಯೆಂಬ ಕ್ಲೇಶವು ವ್ಯರ್ಥವಾಗಿದೆ.

**प्रकाशः –** विशिष्टं तु नियामकं भवति, तस्याविषयत्वाभावान्न तदीयत्वमविद्याया इति न तदविद्यार्जितं जगादिति न तच्छरीरत्वम् ।

ಇನ್ನು ವಿಶಿಷ್ಟಬ್ರಹ್ಮನನ್ನು ನಿಯಾಮಕನೆಂದು ಹೇಳಬೇಕು. ಆದರೆ ಶುದ್ಧಬ್ರಹ್ಮನನ್ನು ಬಿಟ್ಟು ಉಳಿದೆಲ್ಲಾ ಪದಾರ್ಥಗಳು ಅವಿದ್ಯಾಕಲ್ಪಿತವೆಂದು ಅದ್ವೈತಿಗಳು ಒಪ್ಪಿರುವುದರಿಂದ ವಿಶಿಷ್ಟಬ್ರಹ್ಮನೂ ಸಹ ಅವಿದ್ಯಾಕಲ್ಪಿತನೇ ಆಗುತ್ತಾನೆ. ಯಾವ ಪದಾರ್ಥವು ಅಜ್ಞಾನಕಲ್ಪಿತವಾಗಿದೆಯೋ ಅದು ಅಜ್ಞಾನಕ್ಕೆ ವಿಷಯವಾಗಲು ಸಾಧ್ಯವಿಲ್ಲ. ಆದ್ದರಿಂದ ವಿಶಿಷ್ಟವಿಷಯಕವಾದ ಅಜ್ಞಾನವೇ ಅಸಂಭಾವಿತವಾಗಿದೆ. ಹೀಗಿರುವಾಗ ಅಂತಹ ವಿಶಿಷ್ಟಬ್ರಹ್ಮನ ಅಜ್ಞಾನಕ್ಕೆ ವಿಷಯವಾಗಿರುವುದರಿಂದ ಜಗತ್ತನ್ನು ಅವನ ಶರೀರವೆಂದು ಹೇಳಲು ಸಾಧ್ಯವಿಲ್ಲ.

ಪರಿಪೂರ್ಣಚಂದ್ರಿಕಾ

**प्रकाशः – उक्तञ्च –**

'आश्रयत्वविषयत्वभागिनी निर्विशेषचितिरेव केवला ।
पूर्वसिद्धतमसो हि पश्चिमो नाश्रयो भवति नापि गोचरः ।।'

इति ।

ಅಜ್ಞಾನವು ಶುದ್ಧಬ್ರಹ್ಮನಲ್ಲಿ ಬರುತ್ತದೆ ಹೊರತು; ವಿಶಿಷ್ಟಬ್ರಹ್ಮನಲ್ಲಿ ಬರುವುದಿಲ್ಲವೆನ್ನಲು ಅದ್ವೈತಿಗಳೇ ಹೇಳುವ ಪ್ರಸಿದ್ಧವಾದ ಒಂದು ಶ್ಲೋಕ ಹೀಗಿದೆ -

ಆಶ್ರಯತ್ವವಿಷಯತ್ವಭಾಗಿನೀ ನಿರ್ವಿಶೇಷಚಿತಿರೇವ ಕೇವಲಾ ।
ಪೂರ್ವಸಿದ್ಧತಮಸೋ ಹಿ ಪಶ್ಚಿಮೋ ನಾಶ್ರಯೋ ಭವತಿ ನಾಪಿ ಗೋಚರಃ ॥

ಅಜ್ಞಾನಕ್ಕೆ ಆಶ್ರಯವಾದ ಹಾಗೂ ವಿಷಯವಾದ ವಸ್ತು ನಿರ್ವಿಶೇಷಬ್ರಹ್ಮನೇ ಆಗಬೇಕು. ಏಕೆಂದರೆ ಮೊದಲು ಸಿದ್ಧವಾಗಿರುವ ತಮಸ್ಸಿಗೆ (ಅಜ್ಞಾನಕ್ಕೆ) ಅನಂತರ ಹುಟ್ಟುವ ವಿಶಿಷ್ಟಬ್ರಹ್ಮಾದಿಗಳು ಆಶ್ರಯರಾಗಲೀ, ವಿಷಯರಾಗಲೀ ಆಗುವುದಿಲ್ಲ ಎಂದು.

**प्रकाशः – अनवस्थाशङ्कापरिहारौ च भाष्योक्तावनूद्य निराह – यच्चेति ।**

ಅದ್ವೈತಿಗಳು ನಿಯಾಮಕನಾದ ಜೀವನಿಗೆ ಬ್ರಹ್ಮನು ನಿಯಾಮಕನಾಗಿದ್ದಾನೆಂದು ಹೇಳಿದರೆ ಅನವಸ್ಥಾದೋಷವು ಬರುತ್ತದೆಂದು ಆಪಾದಿಸಿದ್ದರು. ಈ ಅನವಸ್ಥಾದೋಷವನ್ನು ಮತ್ತು ಅದರ ಪರಿಹಾರವನ್ನು ಶಂಕರಭಾಷ್ಯದಲ್ಲಿಯೇ ಹೇಳಿರುತ್ತಾರೆ. ಅದನ್ನೇ ಅನುವಾದ ಮಾಡಿ 'ಯಚ್ಚ' ಇತ್ಯಾದಿ ವಾಕ್ಯಗಳಿಂದ ನಿರಾಕರಿಸುತ್ತಿದ್ದಾರೆ.

**प्रकाशः – प्रतिबन्दीमापादयन् अनवस्थापरिहारं प्रकारान्तरेण तेनैव वाचयति – तर्हीति । 'उक्तन्यायेन' ''सर्वत्र'' इत्यधिकरणसूत्रेणोक्तन्यायेनेत्यर्थः ।**

ಪ್ರತಿಬಂದಿಯನ್ನು ಆಪಾದಿಸುತ್ತಾ ಅನವಸ್ಥಾಪರಿಹಾರವನ್ನು ಮತ್ತೊಂದು ಬಗೆಯಲ್ಲಿ ಅದ್ವೈತಿಗಳ ಮುಖಾಂತರವೇ ಮಾಡಿಸುತ್ತಿದ್ದಾರೆ - 'ತರ್ಹಿ' ಇತ್ಯಾದಿ ವಾಕ್ಯದಿಂದ. 'ಉಕ್ತನ್ಯಾಯೇನ' ಎಂದರೆ 'ಸರ್ವತ್ರ ಪ್ರಸಿದ್ಧೋಪದೇಶಾತ್' ಎಂಬ ಸೂತ್ರದಲ್ಲಿ ಹೇಳಲ್ಪಟ್ಟ ನ್ಯಾಯದಿಂದ ಎಂದರ್ಥ.

**प्रकाशः – किञ्चेति । कियन्तं दूरं गत्वा अभेदाश्रयणेन किमित्यर्थः ।**

'ಕಿಂಚ' ಎಂಬುದರ ತಾತ್ಪರ್ಯ ಹೀಗೆ - ಸ್ವಲ್ಪ ದೂರ ಹೋಗಿ ಅಭೇದವನ್ನು ಒಪ್ಪುವುದಕ್ಕಿಂತ ಮೊದಲೇ ಅಭೇದವನ್ನು ಒಪ್ಪುವುದು ಸೂಕ್ತವಾದ ಮಾರ್ಗ. ಅಂದರೆ ಶರೀರ ಇಂದ್ರಿಯಗಳಿಗೆ ಜೀವನಿಂದ ಭೇದವನ್ನು ಒಪ್ಪಿ ಅಂತಹ ಜೀವನಿಗೆ ಬ್ರಹ್ಮನಿಂದ ಅಭೇದವನ್ನು ಒಪ್ಪುತ್ತೀರಿ. ಅದಕ್ಕಿಂತ ಜೀವನಿಗೂ ಶರೀರ ಇಂದ್ರಿಯಾದಿಗಳಿಗೂ ಅಭೇದವನ್ನು ಒಪ್ಪುವುದು ಅತ್ಯಂತ ಸೂಕ್ತವೆಂದರ್ಥ.

ಅಂತರ್ಯಾಮ್ಯಧಿಕರಣ (೧-೨-೫)

**प्रकाशः** – ननु देहभेदे तस्य नाशे अस्यापि नाशेन स्वर्गाद्युद्देशेन धर्माधर्मादिविधायकप्रमाणविरोधोऽनुभवविरोधश्चेत्यत आह – **प्रमाणविरोधश्चेति** ।

ಜೀವಬ್ರಹ್ಮರಿಗೆ ಐಕ್ಯ ಹೇಳುವುದು ತಪ್ಪಲ್ಲ. ದೇಹೇಂದ್ರಿಯಾದಿಗಳಿಗೂ ಜೀವನಿಗೂ ಐಕ್ಯವನ್ನು ಹೇಳಬಾರದು. ಹಾಗೇನಾದರೂ ಜೀವನಿಗೆ ದೇಹೇಂದ್ರಿಯಾದಿಗಳಿಂದ ಐಕ್ಯವನ್ನು ಒಪ್ಪಿದರೆ ದೇಹನಾಶವಾದರೆ ಜೀವನೂ ಸಹ ನಾಶವಾಗುತ್ತಾನೆ. ಆವಾಗ ಸ್ವರ್ಗಾದಿಗಳ ಉದ್ದೇಶದಿಂದ ನಡೆಸುವ ಧರ್ಮಾಧರ್ಮವಿಧಾಯಕವಾದ ಪ್ರಮಾಣಗಳ ವಿರೋಧಬರುತ್ತದೆ. ದೇಹದ ಜೊತೆಗೆ ಜೀವನೂ ಸಹ ನಾಶವಾಗುವುದರಿಂದ ಸ್ವರ್ಗಾದಿಫಲಗಳು ಜೀವನಿಗೆ ದೊರೆಯುವುದಿಲ್ಲ. ಮತ್ತು 'ಮಮದೇಹಃ' ಎಂಬುದಾಗಿ ಶರೀರಾದಿಗಳಿಗಿಂತಲೂ ಜೀವನು ಭಿನ್ನನಾಗಿದ್ದಾನೆಂಬ ಅನುಭವವೇ ನಮ್ಮೆಲ್ಲರಿಗೂ ಇರುತ್ತದೆ. ಈ ಅನುಭವವಿರೋಧವೂ ಸಹ ಬರುತ್ತದಲ್ಲವೇ? ಎಂಬ ಪ್ರಶ್ನೆಗೆ 'ಪ್ರಮಾಣವಿರೋಧ' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

**प्रकाशः** – अनवस्थानिरासाय नियन्तुर्नियम्याभेदे अङ्गीक्रियमाणे कार्यस्याप्यभिन्नकारणजन्यत्वं स्यात् अन्यथोक्तदोषादिति जडाभेदोऽप्युपेयः स्यादित्याह – **किञ्चैवं सतीति** ।

ಅನವಸ್ಥಾದೋಷವನ್ನು ಪರಿಹರಿಸುವುದಕ್ಕಾಗಿ ನಿಯಾಮಕನಿಗೆ ನಿಯಮ್ಯನಿಂದ ಅಭೇದವನ್ನು ಒಪ್ಪುತ್ತಿದ್ದೀರಿ. ಹಾಗಾದರೆ ಸಕಲ ಕಾರ್ಯಗಳಿಗೆ ಕಾರಣದಿಂದ ಐಕ್ಯವನ್ನು ಒಪ್ಪಬೇಕಾದೀತು. ಇಲ್ಲದಿದ್ದರೆ ಆ ಕಾರಣಕ್ಕೂ ಮತ್ತೊಂದು ಕಾರಣದ ಅವಶ್ಯಕತೆಯಿರುವುದರಿಂದ ಅನವಸ್ಥಾದೋಷವು ಬರುತ್ತದೆ. ಇಂತಹ ಅನವಸ್ಥಾದೋಷವನ್ನು ಜಡಪದಾರ್ಥಗಳಿಗೆ ಅಭೇದವನ್ನು ಒಪ್ಪುವ ಮೂಲಕವಾಗಿಯೂ ಪರಿಹರಿಸಬಹುದೆಂದು 'ಕಿಂಚೈವಂ ಸತಿ' ಎಂಬ ವಾಕ್ಯದಿಂದ ಪ್ರತಿಪಾದಿಸುತ್ತಿದ್ದಾರೆ.

**प्रकाशः** – ननु "यः पृथिव्यां तिष्ठन्" इत्यादिभेदोक्तिर्विरुध्यत इत्यत आह – **प्रमाणेति** ।

ಪೃಥಿವೀಗೂ ಬ್ರಹ್ಮನಿಗೆ ಅಭೇದ ಹೇಳಿದರೆ 'ಯಃ ಪೃಥಿವ್ಯಾಂ ತಿಷ್ಠನ್' ಇತ್ಯಾದಿಯಾದ ಭೇದವಿಧಾಯಕವಾದ ಪ್ರಮಾಣಗಳಿಂದ ವಿರೋಧ ಬರುತ್ತದಲ್ಲವೇ? ಎಂಬ ಪ್ರಶ್ನೆಗೆ 'ಪ್ರಮಾಣವಿರೋಧಸ್ತು' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

**प्रकाशः** – उपलक्षणमिदम्, पृथिव्यादेः स्वव्यतिरिक्तज्ञानप्रकाश्यत्वे ज्ञानस्यापि स्वव्यतिरिक्तज्ञानापेक्षत्वेनानवस्थाप्रसङ्गात्, तन्निरासाय ज्ञानजडयोरभेदः स्यात् । ज्ञानस्य स्वप्रकाशत्वे नियन्तुः स्वातन्त्र्यमस्तु ।

ಉಪಲಕ್ಷಣದಿಂದ ಇನ್ನು ಕೆಲವು ದೋಷಗಳನ್ನು ಇಲ್ಲಿ ತಿಳಿದುಕೊಳ್ಳಬೇಕು. ಪೃಥಿವ್ಯಾದಿಗಳೆಲ್ಲವೂ ತನಗಿಂತ ಭಿನ್ನವಾದ ಜ್ಞಾನದಿಂದ ಪ್ರಕಾಶಿತವಾಗುತ್ತಿವೆ. ಆ ಜ್ಞಾನವೂ ಸಹ ಮತ್ತೊಂದು ಜ್ಞಾನದಿಂದ ಪ್ರಕಾಶವಾಗಬೇಕು. ಆ ಜ್ಞಾನಕ್ಕೂ ಮತ್ತೊಂದು ಜ್ಞಾನದ ಅಪೇಕ್ಷೆಯಿರುವುದರಿಂದ ಅನವಸ್ಥಾದೋಷವು ಬರುತ್ತದೆ. ಇದನ್ನು ಪರಿಹರಿಸುವುದಕ್ಕಾಗಿ ಅದ್ವೈತಿಗಳು ಜ್ಞಾನಕ್ಕೂ ಪೃಥಿವ್ಯಾದಿ ಜಡಪದಾರ್ಥಗಳಿಗೂ ಅಭೇದವನ್ನು ಒಪ್ಪಬೇಕಾದೀತು.

ಜ್ಞಾನಕ್ಕೆ ಮತ್ತೊಂದು ಜ್ಞಾನದ ಅಪೇಕ್ಷೆಯಿರುವುದಿಲ್ಲ. ಏಕೆಂದರೆ ಸ್ವಪ್ರಕಾಶ್ಯವಾಗಿದೆಯೆಂದು ಅದ್ವೈತಿಗಳು ಉತ್ತರಿಸಿದರೆ ನಮಗೂ ಇದು ಸಮಾನ. ಅಂದರೆ ನಿಯಾಮಕನಾದ ಭಗವಂತನಲ್ಲಿ ಸ್ವಾತಂತ್ರ್ಯವನ್ನು ಒಪ್ಪಿದರೆ ಸಾಕು. ಅನವಸ್ಥಾದಿದೋಷಗಳು ಪರಿಹಾರವಾಗುತ್ತದೆ.

**प्रकाशः** – एवं पृथिव्यादेस्स्वव्यतिरिक्तेन धारणे तत्रापि तथेत्यनवस्थेत्यपि ध्येयम् ।

ಇದರಂತೆ ಪೃಥಿವ್ಯಾದಿಗಳನ್ನು ಭಿನ್ನನಾದ ವ್ಯಕ್ತಿಯು ಧರಿಸಿದ್ದಾನೆಂದು ಹೇಳಬೇಕು. ಆ ವ್ಯಕ್ತಿಯನ್ನೂ ಸಹ ಮತ್ತೊಬ್ಬ ಭಿನ್ನನಾದ ವ್ಯಕ್ತಿಯೇ ಧರಿಸಬೇಕು. ಹೀಗೆ ಅನವಸ್ಥಾದೋಷ ಬರುತ್ತದೆ. ಇದನ್ನು ಪರಿಹರಿಸುವುದಕ್ಕಾಗಿ ಪೃಥಿವ್ಯಾದಿ ಪದಾರ್ಥಗಳಿಗೂ ಧಾರಕನಾದ ಭಗವಂತನಿಗೂ ಅಭೇದವನ್ನು ಒಪ್ಪಬೇಕಾಗುವ ಪ್ರಸಂಗ ಬರುತ್ತದೆ.

**गुरुराजीयम्** – **तदुक्तं भामत्यामिति** ।। **किमत्राशरीरत्वं** यतो नियन्तृत्वाभावः । किं नियम्यातिरिक्तदेहरहितत्वं वा देहसम्बन्धाभावो वा देहभोक्तृत्वाभावो वा । नाद्य इत्याह – **देहेति** ।। देहादौ तत्तदात्मा तत्साक्षाद्बुद्धिस्थोऽस्येत्युक्तः । अथवा तस्माज्जीवात्मैवेत्युपसंहारस्थो जीवात्मा परामृष्टः । अस्य स्वदेहादिनियमनेन देहाद्यन्तरम् अतोऽनेकान्तिकतेत्यर्थः । द्वितीयं शङ्कते – **तदिति** ।। परस्यापि देहासम्बन्धोऽसिद्ध इत्याह – **तदविद्येति** ।। तद्विषय त्वादविद्यायास्तदविद्यात्वम् । तृतीये तु सोपाधिकतैव । मुक्तस्यापि पराभेदेन पक्षत्वान्न साध्याव्याप्तिः । **शरीरजीवयोरिति** ।। शरीरजीवयोर्भेदे शरीरस्य भिन्ननिय न्तृनियम्यत्वापत्त्या अनवस्थापातादिति भावः ।




ಅದ್ವೈತಿಗಳ ಅಧಿಕರಣ ಶರೀರ ಹೀಗಿದೆ -

ಬೃಹದಾರಣ್ಯಕೋಪನಿಷತ್ತಿನಲ್ಲಿರುವ 'ಯಃ ಪೃಥಿವ್ಯಾಂ ತಿಷ್ಠನ್' ಎಂಬ ವಾಕ್ಯವನ್ನೇ ಅದ್ವೈತಿಗಳೂ ಸಹ ವಿಷಯವಾಕ್ಯವೆಂದು ಹೇಳುತ್ತಾರೆ. ಈ ವಾಕ್ಯದಲ್ಲಿ ಲೋಕ, ವೇದ, ಯಜ್ಞ, ಪ್ರಾಣಿ ಮತ್ತು ಆತ್ಮ ಇವುಗಳ ಒಳಗಡೆ ನಿಯಾಮಕನಾಗಿ ನೆಲೆಸಿರುವ ವ್ಯಕ್ತಿಯನ್ನು ಪ್ರಸ್ತಾಪ ಮಾಡಲಾಗಿದೆ. ಈ ವ್ಯಕ್ತಿಯು ಅದೃಷ್ಟದ ಮೂಲಕ ಜೀವನಾಗಬಹುದು. ಅಥವಾ ಯೋಗಿಪುರುಷನೂ ಆಗಬಹುದು. ಅಥವಾ ದೇವತೆಗಳಾಗಬಹುದು. ಆದರೆ ಶರೀರವಿಲ್ಲದ ಬ್ರಹ್ಮನು ಅಂತರ್ಯಾಮಿಯಾಗಲು ಸಾಧ್ಯವಿಲ್ಲ. ನಿಯಾಮಕನೂ ಸಹ ಆಗಲಾರನು. ಇಷ್ಟು ಪೂರ್ವಪಕ್ಷ.

ಸರ್ವನಿಯಾಮಕತ್ವವು ಬ್ರಹ್ಮನ ಧರ್ಮವಾಗಿದೆ. ಅವನಿಂದ ನಿಯಮ್ಯವಾದ ಪ್ರಪಂಚವೇ ಶರೀರವಾಗಿದೆ. ಅಥವಾ ತನ್ನಲ್ಲಿರುವ ಮಾಯಾಶಕ್ತಿಯಿಂದ ಶರೀರದ ಅಪೇಕ್ಷೆ ಇಲ್ಲದೆಯೂ ಪ್ರಪಂಚವನ್ನು ನಿಯಮನ ಮಾಡುವ ಸಾಮರ್ಥ್ಯ ಅವನಿಗಿದೆ. ಆತ್ಮನಿಗೆ ಒಬ್ಬ ನಿಯಾಮಕನಿರುವುದಾದರೆ ಅವನಿಗೆ ಮತ್ತೊಬ್ಬ ನಿಯಾಮಕನು ಇರಬೇಕಾಗುತ್ತದೆಂದು ಅನವಸ್ಥಾದೋಷಕ್ಕೆ ಅವಕಾಶವಿಲ್ಲ. ನಿಯಮ್ಯನಾದ ಜೀವಾತ್ಮನು ಮತ್ತು ನಿಯಾಮಕನಾದ ಪರಮಾತ್ಮನು ಒಬ್ಬನೇ ಆಗಿದ್ದಾನೆ. ಇವರಿಬ್ಬರಿಗೆ ತಾತ್ವಿಕವಾದ ಭೇದವಿರುವುದಿಲ್ಲ. ಮತ್ತು ಈ ಪ್ರಕರಣದಲ್ಲಿ 'ಏಷ ತ ಆತ್ಮಾ' ಎಂಬ ಶ್ರುತಿಯಲ್ಲಿ ಆತ್ಮತ್ವ, ಅಮೃತತ್ವ ಮೊದಲಾದ ಧರ್ಮಗಳನ್ನು ಅದೃಶ್ಯತ್ವಾದಿಧರ್ಮಗಳನ್ನು ಹೇಳಲಾಗಿದೆ. ಇವೆಲ್ಲವೂ ಬ್ರಹ್ಮನ ಅಸಾಧಾರಣಧರ್ಮವಾದ್ದರಿಂದ ಬ್ರಹ್ಮನೇ ಅಂತರ್ಯಾಮಿಯಾಗಿದ್ದಾನೆಂದು ಸಿದ್ಧಾಂತ.

ಈ ಅಧಿಕರಣ ಶರೀರವು ತಪ್ಪು. ಅಜ್ಞಾನವೇ ಕಲ್ಪಿತವಾದದ್ದು. ಅಜ್ಞಾನ ಕಲ್ಪಿತವಾದ ಜಗತ್ತು ಬ್ರಹ್ಮನ ಶರೀರವಾದರೆ ಶುಕ್ತಿಯ ಅಜ್ಞಾನದಿಂದ ಕಲ್ಪಿತವಾದ ರಜತವೂ ಸಹ ಶುಕ್ತಿಯ ಶರೀರವಾಗಬೇಕಾಗುತ್ತದೆ. ಮತ್ತು ನಮ್ಮಂತೆ ಬ್ರಹ್ಮನೂ ಸಹ ಸಂಸಾರಿಯಾಗಬೇಕಾಗುತ್ತದೆ. ಜಗತ್ತನ್ನು ಸೃಷ್ಟಿ ಮಾಡುವ ಮೊದಲು ಶರೀರ ರಹಿತನಾಗಿ ಇದ್ದಂತೆ ಜಗತ್ತನ್ನು ಸೃಷ್ಟಿಸಿದ ಮೇಲೂ ಶರೀರರಹಿತನಾಗಿಯೇ ಇರಬಹುದಲ್ಲವೇ?

ರೋಗಗ್ರಸ್ಥನಾದ ವ್ಯಕ್ತಿಗೆ ರೋಗವನ್ನು ಪರಿಹರಿಸಲು ಕಾಲ್ಪನಿಕವಾದ ಔಷಧಿಯನ್ನು ನೀಡುವುದರಿಂದ ಅವನ ರೋಗವು ಪರಿಹಾರವಾಗುವುದಿಲ್ಲ. ಅದರಂತೆ ಶರೀರ ಇಲ್ಲದ ವ್ಯಕ್ತಿಗೆ ನಿಯಮನ ಮಾಡಲು ಸಾಧ್ಯವಿಲ್ಲವೆಂದು ಹೇಳಿದಾಗ ಗೌಣವಾದ ಶರೀರವನ್ನು ಒಪ್ಪುವುದರಿಂದೇನೂ ಪ್ರಯೋಜನವಿಲ್ಲ. ಶುದ್ಧಬ್ರಹ್ಮನನ್ನು ನಿಯಾಮಕನೆಂದು ಹೇಳಲು ಸಾಧ್ಯವಿಲ್ಲ. ವಿಶಿಷ್ಟಬ್ರಹ್ಮನನ್ನು ಅವಿದ್ಯಾವಿಷಯನೆಂದು ಹೇಳಲು ಸಾಧ್ಯವಿಲ್ಲ. ಒಟ್ಟಾರೆ ಅದ್ವೈತಸಿದ್ಧಾಂತದಲ್ಲಿ ಸಿಲುಕಿಕೊಂಡಿರುವ ಇಬ್ಬರು ಬ್ರಹ್ಮರಿಗೂ ಏನೂ ಕೆಲಸವಿಲ್ಲ.

ಮತ್ತು ಅದ್ವೈತಿಗಳು ಪೂರ್ವಪಕ್ಷವನ್ನು ನಿರಾಕರಿಸುವುದಕ್ಕಾಗಿ ನಿಯಮ್ಯನಾದ ಜೀವನಿಗೂ ನಿಯಾಮಕನಾದ ಬ್ರಹ್ಮನಿಗೂ ಅಭೇದವನ್ನು ಒಪ್ಪುವದರ ಮೂಲಕ ಅನವಸ್ಥಾ ದೋಷವನ್ನು ಪರಿಹರಿಸಿದ್ದಾರೆ. ಆದರೆ ಜೀವಾದಿಗಳಿಂದ ಅಭೇದವಿದ್ದ ಮೇಲೆ ಅವರನ್ನು ಬ್ರಹ್ಮನು ಹೇಗೆ ತಾನೇ ನಿಯಮನ ಮಾಡುತ್ತಾನೆ.

ಶ್ರುತಿ, ಸೂತ್ರಗಳಲ್ಲೆಲ್ಲಾ ಭೇದವೇ ಹೇಳಲ್ಪಟ್ಟಿರುವಾಗ ಅಭೇದದ ಮಾರ್ಗಕ್ಕೆ ಏಕೆ ಶರಣಾಗುತ್ತಾರೆ. ಇನ್ನು ಕಾಲ್ಪನಿಕ ಭೇದವನ್ನು ಒಪ್ಪುವ ಮೂಲಕ ಕಣ್ಣೊರೆಸುವಂತಹ ಪ್ರಯತ್ನವು ವ್ಯರ್ಥ. ಯಾವರೀತಿಯಾಗಿ ಜೀವಬ್ರಹ್ಮರಿಗೆ ಕಾಲ್ಪನಿಕ ಭೇದವನ್ನು ಒಪ್ಪುತ್ತಾರೋ ಅದರಂತೆ ಈಶ್ವರನನ್ನು ನಿಯಮನ ಮಾಡುವಂತಹ ಕಾಲ್ಪನಿಕ ಭೇದವುಳ್ಳ ಮತ್ತೊಬ್ಬ ವ್ಯಕ್ತಿಯೂ ಇರಬಹುದೆಂದು ಆಪಾದಿಸುತ್ತೇವೆ. ಆದ್ದರಿಂದ ಅದ್ವೈತಿಗಳು ಭಗವಂತನಲ್ಲಿ ಸ್ವಾತಂತ್ರ್ಯವೆಂಬ ಗುಣವನ್ನು ಒಪ್ಪಿಯೇ ತಮಗೆ ಅಂಟಿಕೊಂಡ ದೋಷಗಳನ್ನೆಲ್ಲಾ ಜಾಡಿಸಿಕೊಳ್ಳಬೇಕು. ಬೇರೆ ಉಪಾಯವಿಲ್ಲ. ಅನವಸ್ಥಾ ಪರಿಹಾರಕ್ಕಾಗಿ ಜೀವಬ್ರಹ್ಮರಿಗೆ ಅಭೇದವನ್ನು ಒಪ್ಪುವುದಕ್ಕಿಂತ ಜಡವಾದ ಶರೀರೇಂದ್ರಿಯಾದಿಗಳಿಗೂ ಜೀವನಿಗೂ ಅಭೇದವನ್ನು ಒಪ್ಪಿದ್ದರೆ ಸ್ವಲ್ಪವಾದರೂ ಬುದ್ಧಿವಂತಿಕೆಯನ್ನು ತೋರಿಸಿಕೊಂಡಂತಾಗುತ್ತಿತ್ತು. ಜಡಪದಾರ್ಥಗಳೊಟ್ಟಿಗೆ ಅಭೇದವು ಪ್ರಮಾಣ ವಿರುದ್ಧವೆಂದು ಹೇಳುವುದಾದರೆ; 'ಭೇದೇನ್ಯನಮಧೀಯತೇ' ಇತ್ಯಾದಿ ಸೂತ್ರಗಳಲ್ಲಿ ಜೀವಬ್ರಹ್ಮರ ಭೇದವನ್ನೂ ಸಹ ನಿರಾಕರಿಸಲಾಗಿದೆ. ಈ ಎಲ್ಲಾ ಕಾರಣಗಳಿಂದ ಜಗತ್ತು ಬ್ರಹ್ಮನ ಅವಿದ್ಯಾಕಲ್ಪಿತವಾದ್ದರಿಂದ ಆವನ ಶರೀರವಾಗಿದೆಯೆಂಬ ಸಿದ್ಧಾಂತವು ಅತ್ಯಂತ ಅಯುಕ್ತವಾಗಿದೆ.



• • • • •

## ಅದ್ವೈತಮತದಲ್ಲಿ ನಿಯಾಮಕ ಬ್ರಹ್ಮನೇ ಇಲ್ಲ

### तात्पर्यचन्द्रिका

**यच्चोक्तम् – एकस्मिन् शरीरे प्रत्यग्द्वयं नेति,**

ಅನುವಾದ - ಜೀವನಿಂದ ಬ್ರಹ್ಮನು ಅಭಿನ್ನನಾಗಿದ್ದಾನೆಂದು ಅದ್ವೈತಿಗಳು ಹೇಳುವ ಕಾರಣ ಹೀಗಿದೆ - ಒಂದೇ ಶರೀರದಲ್ಲಿ ಎರಡು ಪ್ರತ್ಯಕ್‌ಚೈತನ್ಯಗಳು ಇರಲು ಸಾಧ್ಯವಿಲ್ಲ. ಆದ್ದರಿಂದ ಜೀವನಿಂದ ಬ್ರಹ್ಮನಿಗೆ ಐಕ್ಯ ಹೇಳಿದಾಗ ಒಬ್ಬನೇ ಪ್ರತ್ಯಕ್‌ಚೈತನ್ಯನನ್ನು ಒಪ್ಪಿದಂತಾಗುತ್ತದೆ ಎಂದು.

**तन्न, मां प्रति दृष्टान्ताभावात् ।**

ಇದು ತಪ್ಪು. ಭೇದವಾದಿಗಳಾದ ನಮ್ಮನ್ನು ಕುರಿತು ನಿನಗೆ ಹೀಗೆ ಸಮರ್ಥಿಸಲು ದೃಷ್ಟಾಂತವೇ ಇರುವುದಿಲ್ಲ. ನಾವು ಒಂದೇ ಶರೀರದಲ್ಲಿ ಜೀವ ಹಾಗೂ ಬ್ರಹ್ಮರನ್ನು ಒಪ್ಪುತ್ತೇವೆ. ಇಂತಹ ನಮ್ಮನ್ನು ಕುರಿತು ಒಂದೇ ದೇಹದಲ್ಲಿ ಎರಡು ಪ್ರತ್ಯಕ್‌ಚೈತನ್ಯಗಳಿರುವಿರುವುದಿಲ್ಲವೆಂಬ ಪ್ರಮೇಯವನ್ನು ಸಾಧಿಸಲಾಗದು.

**ग्रहाद्याविष्टशरीरेऽहमर्थरूपप्रत्यग्द्वयदर्शनाच्च ।**

ಅಷ್ಟೇ ಅಲ್ಲದೆ, ಉಳಿದ ಶರೀರದಲ್ಲಿ ಎರಡು ಪ್ರತ್ಯಕ್‌ಚೈತನ್ಯಗಳಿರುವುದು ಅನುಭವಸಿದ್ಧವಾಗಿದೆ. ಯಾವ ಶರೀರದಲ್ಲಿ ಪಿಶಾಚಿಯು ಸೇರಿಕೊಂಡಿರುತ್ತದೋ ಅದು ಆ ಶರೀರದಲ್ಲಿ ನಿಂತು 'ಅಹಮ್' ಎಂದು ಹೇಳುತ್ತದೆ. ಮೊದಲೇ ಇರುವ ಜೀವನೂ ಸಹ 'ಅಹಮ್' ಎನ್ನುತ್ತಾನೆ. ಹೀಗೆ ಒಂದೇ ಶರೀರದಲ್ಲಿ ಅಹಮರ್ಥವೆಂಬ ಎರಡು ಪ್ರತ್ಯಕ್‌ಚೈತನ್ಯಗಳಿರುವುದು ಅನುಭವಸಿದ್ಧವಾಗಿವೆ.

**"हन्तास्माच्छरीरादुत्क्रामाम तद्यस्मिन् उत्क्रान्ते" "हन्तेदं पुनश्शरीरं प्रविशाम तद्यस्मिन् नः प्रपन्ने" इत्यादावेकस्मिन् शरीरे चक्षुराद्यभिमान्यनेकाहमर्थश्रवणाच्च ।**

ಮತ್ತು ಐತರೇಯೋಪನಿಷತ್ತಿನಲ್ಲಿ ಸ್ಪಷ್ಟವಾಗಿ "ಹಂತಾಸ್ಮಾಚ್ಛರೀರಾದುತ್ಕ್ರಮಾಮ ತದ್ಯಸ್ಮಿನ್ ಉತ್ಕ್ರಾಂತೇ" "ಹಂತೇದಂ ಪುನಶ್ಶರೀರಂ ಪ್ರವಿಶಾಮ ತದ್ಯಸ್ಮಿನ್ ನಃ ಪ್ರಪನ್ನೇ" ಯಾರು ಈ ಶರೀರವನ್ನು ಬಿಟ್ಟುಹೋಗುವುದರಿಂದ ಶರೀರವು ಬೀಳುತ್ತದೋ ಯಾರ ಪ್ರವೇಶದಿಂದ ಶರೀರವು ಎದ್ದೇಳುತ್ತದೋ ಅವನೇ ಶ್ರೇಷ್ಠನು ಎಂಬುದಾಗಿ ಚಕ್ಷುರಾದ್ಯಭಿಮಾನಿದೇವತೆಗಳು ವಿವಾದ ಮಾಡಿದ್ದಾರೆ. ಈ ವಿವಾದದಿಂದ ಒಂದೇ ದೇಹದಲ್ಲಿ ಅನೇಕ ಚಕ್ಷುರಾದ್ಯಭಿಮಾನಿದೇವತೆಗಳ 'ಅಹಮ್' ಎಂಬ ಪ್ರಯೋಗವು ಕೇಳಿಸುತ್ತಿದೆ. ಅಂದರೆ ಒಂದೇ ಶರೀರದಲ್ಲಿ ಅನೇಕ ಅಭಿಮಾನಿದೇವತೆಗಳಿದ್ದಾರೆಂಬುದನ್ನು ಉಪನಿಷತ್ತಿನ ಆಧಾರದಿಂದ ಒಪ್ಪಿಕೊಳ್ಳಬೇಕು.

**बाधकाभावाच्च । अन्तर्याम्युक्त्यनन्तरं "नान्योऽतोऽस्ति द्रष्टा" इति द्रष्ट्रन्तरनिषेधो बाधक इति त्वन्यत्र निरस्तम् ।**

ಒಂದೇ ದೇಹದಲ್ಲಿ ಅನೇಕ ಅಹಮರ್ಥರನ್ನು ಒಪ್ಪಿದರೆ ಏನೂ ಬಾಧಕವಿರುವುದಿಲ್ಲ.

ಆಕ್ಷೇಪ - ಅಂತರ್ಯಾಮಿಯನ್ನು ಹೇಳಿದ ಮೇಲೆ "ನಾನ್ಯೋಽತೋಽಸ್ತಿ ದ್ರಷ್ಟಾ" 'ಬ್ರಹ್ಮನಿಗಿಂತ ಅನ್ಯನಾದ ಮತ್ತೊಬ್ಬ ದ್ರಷ್ಟೃಪುರುಷನು ದೇಹದಲ್ಲಿರುವುದಿಲ್ಲ' ಎಂದು ನಿಷೇಧಿಸುತ್ತಿದೆ. ಹೀಗೆ ಮತ್ತೊಬ್ಬ ದ್ರಷ್ಟೃಪುರುಷನಿಲ್ಲವೆಂಬ ನಿಷೇಧವೇ ಬಾಧಕವಾಗಿದೆಯಲ್ಲವೇ?

ಸಮಾಧಾನ - ಈ ಬಾಧಕವನ್ನು ನ್ಯಾಯಾಮೃತಾದಿ ಗ್ರಂಥಗಳಲ್ಲಿ ನಿರಾಕರಿಸಿದ್ದೇವೆ. ಮುಖ್ಯವಾದ ದ್ರಷ್ಟೃಯೆನಿಸಿದವನು ಪರಮಾತ್ಮನೇ; ಹೊರತು ಜೀವನಲ್ಲ. ಜೀವನು ಅಸ್ವತಂತ್ರ ದ್ರಷ್ಟೃಯೆನಿಸಿದ್ದಾನೆಂದು ಈ ಶ್ರುತಿಯ ಒಟ್ಟು ತಾತ್ಪರ್ಯ.

**अत्र यदुक्तं विवरणे – "यो विज्ञाने तिष्ठन्" इत्यादौ ब्रह्मणो जीवावच्छेदेषु नियन्तृत्वेनावस्थानं श्रूयते ।**

ಜೀವಬ್ರಹ್ಮೈಕ್ಯ ವಿಚಾರದಲ್ಲಿ ವಿವರಣ ಗ್ರಂಥ ಹೀಗೆ ಹೇಳಿದೆ - "ಯೋ ವಿಜ್ಞಾನೇ ತಿಷ್ಠನ್" ಇತ್ಯಾದಿ ಅಂತರ್ಯಾಮಿ ಪ್ರಕರಣದಲ್ಲಿ ಬ್ರಹ್ಮನು ಜೀವಾವಚ್ಛೇದಗಳಲ್ಲಿ ನಿಯಾಮಕನಾಗಿದ್ದಾನೆಂದು ಕೇಳಿಸುತ್ತಿದೆ.

**तच्च यद्यप्यवच्छेदपक्षे न युक्तम्, घटावच्छिन्नाकाशप्रदेशे बाह्याकाशस्यादर्शनेन द्विगुणीकृत्य वृत्त्यनुपपत्तेः, जीवप्रदेशे ब्रह्मणोऽवस्थानायोगात् ।**

ಇದು ವಸ್ತುತಃ ಅವಚ್ಛೇದಪಕ್ಷದಲ್ಲಿ ಯುಕ್ತವಾಗುವುದಿಲ್ಲ. ಏಕೆಂದರೆ ಘಟಾವಚ್ಛಿನ್ನವಾದ ಆಕಾಶವಿರುವ ಪ್ರದೇಶದಲ್ಲಿ ಬಾಹ್ಯಕಾಶವಿರುವುದು ಕಾಣಿಸುತ್ತಿಲ್ಲ. ಅಂದರೆ ಘಟದ ಒಳಗಡೆ ಘಟಾಕಾಶವಿದೆಯೆಂದು ಹೇಳುತ್ತಾರೆ ಹೊರತು. ಬಾಹ್ಯಾಕಾಶವಿದೆಯೆಂದು ಹೇಳುವುದಿಲ್ಲ. ಹೀಗೆ ಒಂದು ಪ್ರದೇಶದಲ್ಲಿ ಎರಡು ಪದಾರ್ಥಗಳಿರುವುದು ಸಾಧ್ಯವಿಲ್ಲದ ಕಾರಣ ಜೀವ ಇರುವ ಪ್ರದೇಶದಲ್ಲಿ ಎಲ್ಲೆಡೆ ವ್ಯಾಪ್ತನಾದ ಬ್ರಹ್ಮನು ಇರಲು ಸಾಧ್ಯವಿಲ್ಲ.

**तथाऽपि प्रतिबिम्बपक्षे युक्तम्, जलगतस्वाभाविकाऽकाशे सत्येव प्रतिबिम्बाऽकाशदर्शनेन द्विगुणीकृत्य वृत्त्युपपत्तेरिति,**

ಹೀಗೆ ಅವಚ್ಛೇದಪಕ್ಷದಲ್ಲಿ ಜೀವ ಹಾಗೂ ಬ್ರಹ್ಮರು ಒಂದೇ ದೇಹದಲ್ಲಿ ಒಟ್ಟಿಗೆ ಇರುವುದು ಅಸಂಭಾವಿತವಾಗಬಹುದು. ಆದರೆ ಪ್ರತಿಬಿಂಬಪಕ್ಷದಲ್ಲಿ ಒಂದೇ ದೇಹದಲ್ಲಿ ಇಬ್ಬರೂ ಸಹ ಇರಬಹುದು. ಉದಾ :- ಜಲದಲ್ಲಿ ಸ್ವಾಭಾವಿಕವಾದ ಆಕಾಶವಿದೆ. ಅದೇ ಸಂದರ್ಭದಲ್ಲಿ ಪ್ರತಿಬಿಂಬವಾದ ಆಕಾಶವೂ ಸಹ ಕಾಣಿಸುತ್ತದೆ. ಹೀಗೆ ಒಂದೇ ಜಲ ಎಂಬ ಪದಾರ್ಥದಲ್ಲಿ ಬಿಂಬಭೂತವಾದ ಆಕಾಶ ಹಾಗೂ ಪ್ರತಿಬಿಂಬಭೂತವಾದ ಆಕಾಶವಿರುವುದು ಕಾಣಿಸುತ್ತಿದೆ. ಅದರಂತೆ ಒಂದೇ ದೇಹದಲ್ಲಿ ಬಿಂಬನಾದ ಬ್ರಹ್ಮನು ಹಾಗೂ ಪ್ರತಿಬಿಂಬನಾದ ಜೀವನು ಇರಬಹುದು.

**तत्र ब्रूमः –**

**घटाकाशे यथा बाह्याकाशं नैवोपलभ्यते ।**
**तथैव प्रतिबिम्बेऽपि बिम्बाकाशं न दृश्यते ।।**

ಈ ಹಿಂದಿನ ವಾದಕ್ಕೆ ಉತ್ತರ ಹೀಗೆ - ಘಟಾಕಾಶದಲ್ಲಿ ಬಾಹ್ಯಾಕಾಶವು ಹೇಗೆ ತೋರುತ್ತಿಲ್ಲವೋ? ಅದರಂತೆ ನೀರಿನಲ್ಲಿಯೂ ಪ್ರತಿಬಿಂಬಭೂತವಾದ ಆಕಾಶ ತೋರಿದರೂ ಬಿಂಬಭೂತವಾದ ಆಕಾಶವು ತೋರುವುದಿಲ್ಲ.

**यथा घटस्यान्तः आकाशमात्रेऽवच्छिन्नाकाशे च सत्यपि बाह्याकाशं नास्ति,**

ಆಕಾಶವು ಒಟ್ಟು ಮೂರು ಬಗೆಯಾಗಿದೆ - ೧. ಆಕಾಶ ಸಾಮಾನ್ಯ, ೨. ಅವಚ್ಛಿನ್ನ ಆಕಾಶ, ೩. ಬಾಹ್ಯಾಕಾಶ ಎಂದು. ಘಟದ ಒಳಗಡೆ ಆಕಾಶಸಾಮಾನ್ಯವಿದೆ. ಮತ್ತು ಘಟಾವಚ್ಛಿನ್ನಾಕಾಶವೂ ಇದೆ. ಆದರೆ ಬಾಹ್ಯಾಕಾಶವು ಇರಲು ಸಾಧ್ಯವಿಲ್ಲವೆಂದು ನೀವೇ ಒಪ್ಪುತ್ತೀರಿ.

**तथा जलस्यान्तराकाशमात्रे प्रतिबिम्बाकाशे च सत्यपि बिम्बाकाशं नास्त्येव ।**

ಅದರಂತೆ ಪ್ರತಿಬಿಂಬ ಪಕ್ಷದಲ್ಲಿಯೂ ಮೂರು ಬಗೆಯ ಆಕಾಶವಿದೆ. ೧. ಆಕಾಶ ಸಾಮಾನ್ಯ, ೨. ಪ್ರತಿಬಿಂಬ ಆಕಾಶ, ೩. ಬಿಂಬಾಕಾಶ ಎಂದು. ಜಲದಲ್ಲಿ ಆಕಾಶ ಸಾಮಾನ್ಯ ಮತ್ತು ಪ್ರತಿಬಿಂಬಭೂತವಾದ ಆಕಾಶವಿದೆಯೆಂದು ಹೇಳಲು ಏನೂ ತೊಂದರೆಯಿಲ್ಲ. ಆದರೆ ಬಿಂಬಭೂತವಾದ ಆಕಾಶವು ಕಾಣಿಸುತ್ತಿದೆಯೆಂಬುದು ಮಾತ್ರ ಬಹಳ ತಪ್ಪಾಗುತ್ತದೆ.

**ननु तथाऽपि जलस्यान्तरुक्तमाकाशद्वयं जलावच्छिन्नाकाशं चेति तत्त्रयमस्ति, घटस्यान्तस्तूक्ताकाशद्वयमेवेति वैषम्यमिति चेन्न,**

ಆಕ್ಷೇಪ - ಘಟಕ್ಕೂ ಮತ್ತು ಜಲಕ್ಕೂ ವ್ಯತ್ಯಾಸವಿದೆ. ಜಲದಲ್ಲಿ ಆಕಾಶಸಾಮಾನ್ಯ ಹಾಗೂ ಪ್ರತಿಬಿಂಬಭೂತವಾದ ಆಕಾಶ ಎರಡೂ ಇರುವಂತೆ ಜಲಾವಚ್ಛಿನ್ನವಾದ ಆಕಾಶವೆಂಬ ಮೂರನೆಯ ಆಕಾಶವೊಂದಿದೆ. ಆದರೆ ಘಟದಲ್ಲಿ ಆಕಾಶಸಾಮಾನ್ಯ ಹಾಗೂ ಘಟಾವಚ್ಛಿನ್ನಆಕಾಶಗಳೆರಡೇ ಇರುತ್ತವೆ. ಬಿಂಬಪ್ರತಿಬಿಂಬಭಾವವಿಲ್ಲದ ಕಾರಣ ಪ್ರತಿಬಿಂಬಭೂತವಾದ ಆಕಾಶವಿದೆಯೆಂದು ಹೇಳಲಾಗದು. ಆದರಂತೆ ಶರೀರದಲ್ಲಿ ಚಿನ್ಮಾತ್ರನಿದ್ದಾನೆ. ದೇಹಾವಚ್ಛಿನ್ನವಾದ ಜೀವನಾದ ಆತ್ಮನಿದ್ದಾನೆ. ಮತ್ತು ಪ್ರತಿಬಿಂಬಭೂತನಾದ ನಿಯಾಮಕಬ್ರಹ್ಮನಿದ್ದಾನೆ. ಹೀಗೆ ಜಲದ ದೃಷ್ಟಾಂತದಿಂದ ಒಂದೇ ಶರೀರದಲ್ಲಿ ಜೀವನ ಅಸ್ತಿತ್ವ ಹಾಗೂ ನಿಯಾಮಕಬ್ರಹ್ಮನ ಅಸ್ತಿತ್ವವನ್ನು ಕೂಡಿಸಬಹುದಲ್ಲವೇ?

**यस्याकाशादेर्जलेनावच्छेदः तत्र प्रतिबिम्बनं च तत्र त्रितयसद्भावेऽपि, यस्य प्रतिबिम्बनमात्रं दर्पणादौ मुखादेः, तत्र त्रितयाभावेन प्रतिबिम्बपक्षपातायोगात् ।**

ಆಕಾಶಕ್ಕೆ ಜಲದಿಂದ ಅವಚ್ಛೇದಕವಿರುವುದರಿಂದ ಮೂರುಬಗೆಯ ಆಕಾಶಗಳನ್ನು ಜಲದಲ್ಲಿ ಹೇಳಬಹುದು. ಆದರೆ ಬಿಂಬಪ್ರತಿಬಿಂಬಭಾವ ಇರುವ ಸ್ಥಳದಲ್ಲೆಲ್ಲಾ ಹೀಗೆ ಮೂರುಬಗೆಯಲ್ಲಿ ಹೇಳಲು ಸಾಧ್ಯವಿಲ್ಲ. ಏಕೆಂದರೆ ದರ್ಪಣಾದಿಗಳಲ್ಲಿ ಮುಖದ ಪ್ರತಿಬಿಂಬವು ಕಾಣಿಸುತ್ತದೆ. ಇಂತಹ ದರ್ಪಣದಲ್ಲಿ ಅವಚ್ಛಿನ್ನವಾದ ಮುಖವನ್ನಾಗಲೀ ಕೇವಲ ಮುಖವನ್ನಾಗಲೀ ಹೇಳಲು ಸಾಧ್ಯವಿಲ್ಲ. ಕೇವಲ ಪ್ರತಿಬಿಂಬಭೂತವಾದ ಮುಖವಷ್ಟೇ ಇರುತ್ತದೆ. ಆದ್ದರಿಂದ ಪ್ರತಿಬಿಂಬಪಕ್ಷದಲ್ಲಿ ಒಂದೇ ದೇಹದಲ್ಲಿ ಎರಡು ಚೈತನ್ಯವನ್ನು ಉಪಪಾದಿಸಬಹುದೆಂಬ ನಿಮ್ಮ ಯುಕ್ತಿಯು ಅಸಾಧುವಾಗಿದೆ.

**ननु तर्हि ब्रह्मणोऽविद्ययाऽवच्छेदस्तत्र प्रतिबिम्बनं चेति द्वयमप्यस्त्विति चेत्,**

ಆಕ್ಷೇಪ - ಹಾಗಾದರೆ ಆಕಾಶದೃಷ್ಟಾಂತದಂತೆ ಬ್ರಹ್ಮನನ್ನು ನಾವು ವಿವಕ್ಷಿಸುತ್ತೇವೆ ಹೊರತು, ದರ್ಪಣದ ದೃಷ್ಟಾಂತದಂತೆ ಬ್ರಹ್ಮನನ್ನು ವಿವಕ್ಷಿಸುವುದಿಲ್ಲ. ಬ್ರಹ್ಮನಿಗೆ ಅವಿದ್ಯೆಯೆಂಬ ಉಪಾಧಿಯಿಂದ ಅವಚ್ಛೇದವನ್ನು ಹೇಳಬಹುದು. ಯಾವರೀತಿಯಾಗಿ ಜಲದಲ್ಲಿ ಅವಚ್ಛಿನ್ನವಾದ ಆಕಾಶ, ಆಕಾಶಸಾಮಾನ್ಯ ಹಾಗೂ ಪ್ರತಿಬಿಂಬಭೂತವಾದ ಆಕಾಶವು ಇರುತ್ತವೋ ಆದರಂತೆ ಶರೀರದಲ್ಲಿ ಅವಚ್ಛಿನ್ನನಾದ ಬ್ರಹ್ಮನು, ಪ್ರತಿಬಿಂಬಭೂತನಾದ ಬ್ರಹ್ಮನು ಚಿನ್ಮಾತ್ರನು ಇರಬಹುದೆಂದು ಹೇಳಿದರೆ ಏನು ತಪ್ಪು?

**न, यत्र द्वयं, तत्र यद्यपि जलान्तर्जलाच्छिन्नाकाशे सत्येव पुनराकाशमात्रं प्रतिबिम्बाकाशं चास्ति,**

ಇದು ತಪ್ಪು. ವಸ್ತುತಃ ಜಲದಲ್ಲಿ ಜಲಾವಚ್ಛಿನ್ನವಾದ ಆಕಾಶವಿದ್ದರೆ ಮಾತ್ರವೇ ಆಕಾಶಸಾಮಾನ್ಯ ಹಾಗೂ ಪ್ರತಿಬಿಂಬಭೂತವಾದ ಆಕಾಶಗಳಿರುವುದು ಕಾಣಿಸುತ್ತದೆ.

**तथाऽपि जलान्तर्बाह्याकाशस्य बिम्बाकाशस्य चाभावेन तत्स्थानीयस्य ब्रह्मणो जीवप्रदेशे नियन्तृत्वेनावस्थानायोगात् ।**

ಆದರೂ ಸಹ ಜಲದಲ್ಲಿ ಬಾಹ್ಯಾಕಾಶವಾಗಲೀ, ಬಿಂಬಾಕಾಶವಾಗಲೀ ಇರುವುದಿಲ್ಲ. ಅದರಂತೆ ಬ್ರಹ್ಮನು ಜೀವನೆಂಬ ಶರೀರದಲ್ಲಿ ಚಿನ್ಮಾತ್ರರೂಪದಿಂದಾಗಲೀ, ಅವಚ್ಛಿನ್ನರೂಪದಿಂದಾಗಲೀ ಇರಬಹುದು. ಆದರೆ ನಿಯಾಮಕರೂಪದಿಂದ ಇರಲು ಸಾಧ್ಯವಿಲ್ಲ. ಹೇಗೆ ನೀರಿನಲ್ಲಿ ಬಾಹ್ಯಾಕಾಶವಾಗಲೀ, ಬಿಂಬಾಕಾಶವಾಗಲೀ ಇರುವುದಿಲ್ಲವೋ ಅದರಂತೆ ಬಿಂಬಭೂತನಾದ ಬ್ರಹ್ಮನಾಗಲೀ, ನಿಯಾಮಕ ಬ್ರಹ್ಮನಾಗಲೀ ಜೀವನಲ್ಲಿ ಇರುವುದಿಲ್ಲ.

**आकाशकमात्रस्थानीयस्य चिन्मात्रस्य त्वन्मते अनियन्तृत्वात् ।**

ಇನ್ನು ಕೇವಲ ಆಕಾಶಮಾತ್ರಸ್ಥಾನದಲ್ಲಿ ಇರುವ ಚಿನ್ಮಾತ್ರನನ್ನು ದೇಹದಲ್ಲಿದ್ದಾನೆಂದು ಹೇಳಬೇಕು. ಆದರೆ ಇವನು ನಿಯಾಮಕನಾಗಲು ಸಾಧ್ಯವಿಲ್ಲ.

**तस्मादवच्छेदप्रतिबिम्बनयोर्विकल्पे समुच्चये वा ब्रह्मणोऽन्तर्यामित्वायोगः ।**

ಆದ್ದರಿಂದ ಅವಚ್ಛೇದ ಹಾಗೂ ಪ್ರತಿಬಿಂಬಗಳನ್ನು ಪ್ರತ್ಯೇಕವಾಗಿ ವಿವಕ್ಷಿಸಿದಾಗ; ಅಥವಾ ಒಟ್ಟಿಗೇ ವಿವಕ್ಷಿಸಿದಾಗ ಎರಡೂ ಪಕ್ಷಗಳಲ್ಲಿಯೂ ಬ್ರಹ್ಮನಿಗೆ ಅಂತರ್ಯಾಮಿತ್ವವು ಯುಕ್ತವಾಗುವುದಿಲ್ಲ.

**किञ्चावच्छेदोपाधौ घटादावच्छिन्नाकाशव्यतिरेकेणाकाशव्यक्त्यन्तरं प्रतिबिम्बनोपाधौ दर्पणादौ च प्रतिबिम्बव्यतिरेकेण मुख्यव्यक्त्यन्तरं नास्तीत्यन्यत्रोक्तम् ।**

ಜಲವು ಅವಚ್ಛೇದಕಕ್ಕೂ ಉಪಾಧಿಯಾಗುತ್ತದೆ. ಪ್ರತಿಬಿಂಬಕ್ಕೂ ಉಪಾಧಿಯಾಗುತ್ತದೆ. ಆದ್ದರಿಂದ ಅವಚ್ಛಿನ್ನಆಕಾಶವಿದೆಯೆಂದೂ; ಪ್ರತಿಬಿಂಬಭೂತವಾದ ಆಕಾಶವಿದೆಯೆಂದೂ ಸಹ ಹೇಳಬಹುದು. ಇವೆರಡಕ್ಕಿಂತ ಅತಿರಿಕ್ತವಾಗಿ ಆಕಾಶಮಾತ್ರವನ್ನು ಜಲದಲ್ಲಿ ಹೇಳಲು ಸಾಧ್ಯವಿಲ್ಲ. ಅದರಂತೆ ಪ್ರಕೃತ ದೇಹದಲ್ಲಿ ಅವಿದ್ಯಾಪ್ರತಿಬಿಂಬಿತನನ್ನು ಹಾಗೂ ಅವಿದ್ಯಾವಚ್ಛಿನ್ನನನ್ನು ಹೇಳಬಹುದು. ಆದರೆ ಅವಿದ್ಯಾಪ್ರತಿಬಿಂಬಿತನಾದ ವ್ಯಕ್ತಿಯಾಗಲೀ ಅವಿದ್ಯಾವಚ್ಛಿನ್ನನಾದ ವ್ಯಕ್ತಿಯಾಗಲೀ ಜೀವನೇ ಆಗಿದ್ದಾನೆ. ಈ ಎರಡಕ್ಕಿಂತ ವಿಭಿನ್ನವಾಗಿ ನಿಯಾಮಕಬ್ರಹ್ಮನಾಗಲೀ ಶುದ್ಧಚಿನ್ಮಾತ್ರನಾಗಲೀ ದೇಹದಲ್ಲಿದ್ದಾನೆಂದು ಹೇಳಲು ಸಾಧ್ಯವಿಲ್ಲ. ದರ್ಪಣಾದಿಗಳಲ್ಲಿಯೂ ಪ್ರತಿಬಿಂಬಕ್ಕಿಂತ ಅತಿರಿಕ್ತವಾದ ಮುಖವೆಂಬ ವ್ಯಕ್ತಿಯನ್ನು ಹೇಳಲು ಸಾಧ್ಯವಿಲ್ಲವೆಂಬ ವಿಚಾರವು ನ್ಯಾಯಾಮೃತಾದಿ ಗ್ರಂಥಗಳಲ್ಲಿ ವಿವರಿಸಲ್ಪಟ್ಟಿದೆ.

**प्रकाशः –**

ननु नानवस्थानिरासाय नियन्त्रभेदः, अपि तु प्रत्यक्चैतन्यद्वयायोगाद् उभयोरभेद इत्येतदनूद्य निराह – **यच्चेति** ।

ವಿವರಣೆ - ಅನವಸ್ಥಾದೋಷವನ್ನು ಪರಿಹರಿಸುವುದಕ್ಕಾಗಿ ನಿಯಾಮಕರಿಗೆ ಭೇದವನ್ನು ಒಪ್ಪಬೇಕಾಗಿಲ್ಲ. ಹೊರತಾಗಿ ಒಂದೇ ಶರೀರದಲ್ಲಿ ಎರಡು ಪ್ರತ್ಯಕ್‌ಚೈತನ್ಯಗಳು ಇರಲು ಸಾಧ್ಯವಿಲ್ಲದ ಕಾರಣ ಆ ಎರಡು ಪ್ರತ್ಯಕ್‌ಚೈತನ್ಯಗಳಿಗೆ ಅಭೇದವನ್ನೇ ಒಪ್ಪಬೇಕು. ಹೀಗೆ ಅದ್ವೈತಿಗಳು ಹೇಳುತ್ತಾರೆ. ಅವರ ಮತವನ್ನು ಅನುವಾದ ಮಾಡಿ ನಿರಾಕರಿಸುತ್ತಿದ್ದಾರೆ. 'ಯಚ್ಚ ' ಇತ್ಯಾದಿ ವಾಕ್ಯಗಳಿಂದ.

**प्रकाशः – मां प्रतीति** । जीवेशभेदवादे प्रतिशरीरं तयोः सत्त्वादिति भावः । **अनेकाहमर्थेति** । बहुवचनप्रयोगादिति भावः ।

ಗ್ರಂಥದಲ್ಲಿ 'ಮಾಂ ಪ್ರತಿ' ಎಂದಿದೆ. ಒಂದೇ ದೇಹದಲ್ಲಿ ಎರಡು ಪ್ರತ್ಯಕ್‌ಚೈತನ್ಯಗಳಿರುವುದಿಲ್ಲವೆಂಬ ವಿಚಾರವನ್ನು ದ್ವೈತಿಗಳಿಗೆ ಮನದಟ್ಟಾಗಿಸಲು ಅದ್ವೈತಿಗಳಿಂದ ಸಾಧ್ಯವಿಲ್ಲ. ಏಕೆಂದರೆ ಜೀವೇಶರಿಗೆ ಭೇದವನ್ನು ಒಪ್ಪುವ ನಾವು ಪ್ರತಿಯೊಂದು ಶರೀರದಲ್ಲಿಯೂ ಅವರಿಬ್ಬರ ಅಸ್ತಿತ್ವವನ್ನು ಹೇಳುತ್ತೇವೆ. ಇನ್ನು ಅಭಿಮಾನಿ ದೇವತೆಗಳನ್ನು ವಿವಕ್ಷಿಸಿದಾಗಲೂ ಅನೇಕ ಜೀವರನ್ನೇ ಒಂದು ದೇಹದಲ್ಲಿ ಒಪ್ಪುತ್ತೇವೆ. 'ಅನೇಕಾಹಮರ್ಥಶ್ರವಣಾಚ್ಚ' ಎಂದು ಗ್ರಂಥದಲ್ಲಿದೆ. ಅಂದರೆ ಐತರೇಯೋಪನಿಷತ್ತಿನಲ್ಲಿ 'ಪ್ರವಿಶಾಮಃ ನಃ' ಇತ್ಯಾದಿಯಾಗಿ ಅಸ್ಮದ್ ಶಬ್ದದ ಬಹುವಚನ ಪ್ರಯೋಗವಿರುವುದರಿಂದ ಅನೇಕ ಮಂದಿಯೇ ಒಂದು ಶರೀರದಲ್ಲಿದ್ದಾರೆಂದು ತಿಳಿಯುತ್ತದೆ.

**प्रकाशः** – ननु तत्र प्रत्यक्त्वमेव सत्यं, भेदो मिथ्येति चेत्, भेदस्सत्यः प्रत्यक्त्वं मिथ्येति किं न स्यात् । प्रत्यक्त्वे बाधकं नेति चेत्, तुल्यं भेदेऽपीत्याह – **बाधकेति** ।

ಐತರೇಯೋಪನಿಷತ್ತಿನಲ್ಲಿ ಅನೇಕ ಅಭಿಮಾನಿದೇವತೆಗಳು ಒಂದೇ ದೇಹದಲ್ಲಿ ಪ್ರವೇಶಮಾಡಿದ್ದಾರೆಂದು ಹೇಳಿದ್ದಾರೆ. ಇದನ್ನು ಒಪ್ಪಬಹುದು. ಆದರೆ ಆ ಎಲ್ಲಾ ಅಭಿಮಾನಿ ದೇವತೆಗಳಿಗೆ ಇರುವ ಭೇದವು ಮಿಥ್ಯಾಭೂತವಾಗಿವೆ.

ಸಮಾಧಾನ - ಇದು ತಪ್ಪು. ಎಲ್ಲಾ ಅಭಿಮಾನಿ ದೇವತೆಗಳಿಗಿರುವ ಭೇದವೇ ಸತ್ಯವಾಗಿವೆ. ಆದರೆ ದೇಹದ ಒಳಗಡೆ ಒಳಗಿದ್ದಾರೆಂಬುದು ಮಿಥ್ಯಾಭೂತವಾಗಿದೆಯೆಂದು ನಾವು ವಿಪರೀತವಾಗಿ ಹೇಳಿದರೆ ನಿಮ್ಮಲ್ಲಿ ಉತ್ತರವಿಲ್ಲ.

ಆಕ್ಷೇಪ - ಅಭಿಮಾನಿದೇವತೆಗಳಿಗೆ ಪ್ರತ್ಯಕ್ತ್ವವನ್ನು (ದೇಹದ ಒಳಗಿದ್ದಾರೆಂಬುದನ್ನು) ಒಪ್ಪಿದರೆ ಏನೂ ಬಾಧಕವಿಲ್ಲವಲ್ಲ?

ಸಮಾಧಾನ - ಹಾಗಾದರೆ ಆ ಎಲ್ಲಾ ಅಭಿಮಾನಿ ದೇವತೆಗಳಿಗೆ ಇರುವ ಭೇದವನ್ನು ಸತ್ಯವೆಂದು ಹೇಳಿದರೂ ಸಹ ಏನೂ ಬಾಧಕವಿರುವುದಿಲ್ಲ. ಈ ವಿಚಾರವನ್ನು 'ಬಾಧಕಾಭಾವಾಚ್ಚ' ಎಂಬುದರಿಂದ ಗ್ರಂಥಕಾರರು ಪ್ರತಿಪಾದಿಸಿದ್ದಾರೆ.

**प्रकाशः** – अतः शब्दपरामर्शं दर्शयितुम्, 'अन्तर्याम्युक्त्यनन्तरम्' इत्युक्तम् । 'अन्यत्र' न्यायामृते द्वितीयपरिच्छेदे ''अहं ब्रह्मास्मि'' इत्यादि श्रुत्यर्थवर्णन-प्रस्तावे ।

''ನಾನ್ಯೋಽತೋಽಸ್ತಿ ದ್ರಷ್ಟಾ'' ಎಂಬ ಶ್ರುತಿಯಲ್ಲಿರುವ ಅತಃ ಶಬ್ದದಿಂದ ಪರಾಮರ್ಶಿಸಲ್ಪಟ್ಟ ಅರ್ಥವನ್ನು ತೋರಿಸುವುದಕ್ಕಾಗಿ ಗ್ರಂಥಕಾರರು ಅಂತರ್ಯಾಮ್ಯುಕ್ತ್ಯನಂತರಂ'' ಎಂದು ಹೇಳಿರುತ್ತಾರೆ. 'ಅನ್ಯತ್ರ' ಎಂದರೆ ನ್ಯಾಯಾಮೃತದ ದ್ವಿತೀಯಪರಿಚ್ಛೇದದಲ್ಲಿರುವ ''ಅಹಂ ಬ್ರಹ್ಮಾಸ್ಮಿ'' ಎಂಬ ಶ್ರುತ್ಯರ್ಥವನ್ನು ವರ್ಣನೆ ಮಾಡುವ ಸಂದರ್ಭದಲ್ಲಿ ಎಂದರ್ಥ.

**प्रकाशः** – तत्र 'अतः' इत्यनेन प्रस्तुतसर्वनियन्तारं परामृश्य अन्यो द्रष्टा नास्तीत्युक्ते 'अस्मिन् ग्रामे अयमेव सर्वनियामको नान्यः पुरुषोऽस्ति' इत्यादावन्यशब्दस्य प्रस्तुतसदृशपरतया व्युत्पन्नत्वेन, इहापि सर्वनियामकद्रष्ट्रन्तर-निषेधात्, भेदनिषेधाभावादिति निरस्तमित्यर्थः ।

ನ್ಯಾಯಾಮೃತದಲ್ಲಿ ಪ್ರತಿಪಾದಿಸಲ್ಪಟ್ಟ ವಿಚಾರದ ಸಾರ ಹೀಗಿದೆ - ಶ್ರುತಿಯಲ್ಲಿರುವ 'ಅತಃ' ಎಂಬ ಪದದಿಂದ ಪ್ರಸ್ತುತನಾದ ಸರ್ವನಿಯಾಮಕನನ್ನು ಪರಾಮರ್ಶಮಾಡಿ 'ಅನ್ಯಃ ದ್ರಷ್ಟಾ ನ' ಮತ್ತೊಬ್ಬ ದ್ರಷ್ಟೃಪುರುಷನು ಇರುವುದಿಲ್ಲ ಎಂದು ಶ್ರುತಿಯು ಹೇಳುತ್ತಿದೆ. ''ಈ ಗ್ರಾಮದಲ್ಲಿ ಇವನೊಬ್ಬನೇ ಸರ್ವನಿಯಾಮಕನು; ಮತ್ತೊಬ್ಬನಿಲ್ಲ'' ಹೀಗೆ ಹೇಳಿದಾಗ ಅನ್ಯಶಬ್ದವು ಸದೃಶನಾದ ಅಂದರೆ ಸರ್ವನಿಯಾಮಕನಿಗೆ ಸರಿಸಾಟಿಯಾದ ಮತ್ತೊಬ್ಬ ಪುರುಷನನ್ನೇ ಹೇಳುತ್ತದೆ; ಹೊರತು, ಸಾಮಾನ್ಯ ಪ್ರಜೆ ಮೊದಲಾದವರನ್ನು ಹೇಳುವುದಿಲ್ಲ. ಆದರಂತೆ ಶ್ರುತಿಯಲ್ಲಿರುವ ಅನ್ಯಶಬ್ದವೂ ಸಹ ಮತ್ತೊಬ್ಬ

ನಿಯಾಮಕಪುರುಷನನ್ನೇ ಅಲ್ಲಗಳೆಯುತ್ತಿದೆ. ಏಕೆಂದರೆ 'ಅತಃ' ಎಂಬ ಪದದಿಂದ ಸರ್ವನಿಯಾಮಕನಾದ ಅಂತರ್ಯಾಮಿಯೇ ಪ್ರಸಕ್ತನಾಗಿದ್ದಾನೆ. ಆದ್ದರಿಂದ ಅನ್ಯಶಬ್ದವು ಕೇವಲ ಜೀವ ಮೊದಲಾದವರನ್ನು ನಿಷೇಧಿಸುವುದಿಲ್ಲ. ಹಾಗಾಗಿ "ನಾನ್ಯೋಽತೋಽಸ್ತಿ ದ್ರಷ್ಟಾ" ಎಂಬ ಶ್ರುತಿಗೆ ಸರ್ವನಿಯಾಮಕನಾದ ಅಂತರ್ಯಾಮಿಯಾದ ಭಗವಂತನೇ ಮುಖ್ಯವಾದ ದ್ರಷ್ಟೃತ್ವವುಳ್ಳವನು; ಮುಖ್ಯವಾದ ದ್ರಷ್ಟೃತ್ವವುಳ್ಳ ಅಥವಾ ಸ್ವತಂತ್ರವಾದ ದ್ರಷ್ಟೃತ್ವವುಳ್ಳ ಮತ್ತೊಬ್ಬ ಪುರುಷನಿಲ್ಲವೆಂದು ಇದರ ಅರ್ಥ.

**प्रकाशः** – "नेह नाना" इत्यादिकमप्यन्यत्र प्रथमपरिच्छेदे निरस्तमिति भावः ।

"ನೇಹ ನಾನಾ" ಇತ್ಯಾದಿ ಶ್ರುತಿಗಳು ಭಿನ್ನನಾದ ಮತ್ತೊಬ್ಬ ಪುರುಷನು ಇಲ್ಲವೆಂದು ನಿರಾಕರಿಸುತ್ತಿದೆ ಎಂಬ ಆಕ್ಷೇಪಕ್ಕೂ ಅವಕಾಶವಿಲ್ಲ. ಈ ಶ್ರುತಿಯು ಭೇದವನ್ನು ನಿರಾಕರಿಸುತ್ತಿಲ್ಲ; ಹೊರತಾಗಿ ಭಗವಂತನ ಅವಯವ, ಗುಣ, ಕ್ರಿಯಾ ಮೊದಲಾದವುಗಳಿಗೆ ಭೇದವಿಲ್ಲವೆಂದಷ್ಟೇ ಪ್ರತಿಪಾದಿಸುತ್ತಿದೆ ಎಂಬ ವಿಚಾರವನ್ನು ನ್ಯಾಯಾಮೃತದ ಪ್ರಥಮ ಪರಿಚ್ಛೇದದಲ್ಲಿ ವರ್ಣಿಸಲಾಗಿದೆಯೆಂದು ತಿಳಿಯಬೇಕು.

**प्रकाशः** – विवरणे अवच्छेदपक्षे अन्तर्याम्यवस्थानं न युक्तम्, प्रतिबिम्बपक्ष एव युक्तमित्युक्तम्,

ವಸ್ತುತಃ ವಿವರಣ ಗ್ರಂಥದಲ್ಲಿ ಅವಚ್ಛೇದಪಕ್ಷದಲ್ಲಿ ಅಂತರ್ಯಾಮಿಯು ದೇಹದಲ್ಲಿದ್ದಾನೆಂದು ಹೇಳಲಾಗದು. ಆದರೆ ಪ್ರತಿಬಿಂಬಪಕ್ಷದಲ್ಲಿ ಹೇಳಬಹುದೆಂದು ನಿರೂಪಿಸಲಾಗಿದೆ.

**प्रकाशः** – तदयुक्तम्, पक्षद्वयेऽप्ययोगादिति दूषयितुमनुवदति – **अत्रेति** । **अवच्छेदेति** । अविद्यावच्छिन्नो जीवस्तत्र प्रतिबिम्बितो वा जीव इति मतद्वयम् । अत्राद्य इत्यर्थः । कुत इत्यत आह – **घटेति** ।

ವಿವರಣಕಾರನ ಈ ಅಭಿಪ್ರಾಯವು ಸರಿಯಲ್ಲ. ಅವಚ್ಛೇದಪಕ್ಷದಲ್ಲಾಗಲೀ, ಪ್ರತಿಬಿಂಬಪಕ್ಷದಲ್ಲಾಗಲೀ ನಿಯಾಮಕನಾದ ಅಂತರ್ಯಾಮಿಯು ದೇಹದಲ್ಲಿದ್ದಾನೆಂದು ಅದ್ವೈತಿಗಳಿಗೆ ಪ್ರತಿಪಾದಿಸಲು ಸಾಧ್ಯವಿಲ್ಲವೆಂದು ಅದ್ವೈತಮತವನ್ನು ದೂಷಿಸುವುದಕ್ಕಾಗಿ 'ಅತ್ರ' ಇತ್ಯಾದಿ ವಾಕ್ಯಗಳಿಂದ ಅನುವಾದ ಮಾಡುತ್ತಿದ್ದಾರೆ. ಗ್ರಂಥದಲ್ಲಿರುವ 'ಅವಚ್ಛೇದಪಕ್ಷೇ' ಎಂಬುದಕ್ಕೆ ಹೀಗರ್ಥ - ಜೀವನು ಅವಿದ್ಯಾವಚ್ಛಿನ್ನನಾಗಿದ್ದಾನೆಂಬುದು ಒಂದು ಪಕ್ಷ. ಪ್ರತಿಬಿಂಬಿತನಾಗಿದ್ದಾನೆಂಬುದು ಮತ್ತೊಂದು ಪಕ್ಷ. ಈ ಎರಡರಲ್ಲಿ ಮೊದಲನೆಯ ಪಕ್ಷದಲ್ಲಿ ಎಂದರ್ಥ. ಮೊದಲನೆಯ ಪಕ್ಷವನ್ನು ಏಕೆ ಅಂಗೀಕರಿಸಬಾರದು ಎಂಬ ಪ್ರಶ್ನೆಗೆ 'ಘಟ' ಇತ್ಯಾದಿ ವಾಕ್ಯಗಳಿಂದ ಉತ್ತರಿಸುತ್ತಿದ್ದಾರೆ.

**प्रकाशः** – युक्ततामाह – **जलेति** । अवच्छेदपक्षे यथा युक्तता, तथा प्रतिबिम्बपक्षेऽपीति परोक्तं दृष्टान्तीकृत्याह – **घटेति** ।

ಪ್ರತಿಬಿಂಬ ಪಕ್ಷದಲ್ಲಿ ಬ್ರಹ್ಮನಿಗೆ ಜೀವಶರೀರದಲ್ಲಿ ಪ್ರವೇಶವು ಯುಕ್ತವಾಗುತ್ತದೆಂಬುದನ್ನು 'ಜಲಗತ' ಇತ್ಯಾದಿ ವಾಕ್ಯಗಳಿಂದ ಪ್ರತಿಪಾದಿಸುತ್ತಿದ್ದಾರೆ. ಅವಚ್ಛೇದಪಕ್ಷದಲ್ಲಿ ದೇಹದಲ್ಲಿರುವಿಕೆಯನ್ನು ಅದ್ವೈತಿಗಳು ಹೇಗೆ ಒಪ್ಪಿರುವುದಿಲ್ಲವೋ ಅದರಂತೆ ಪ್ರತಿಬಿಂಬಪಕ್ಷದಲ್ಲಿಯೂ ಒಪ್ಪಲು ಸಾಧ್ಯವಿಲ್ಲವೆಂದು ಅವರ ದೃಷ್ಟಾಂತವನ್ನು ನೀಡಿ ನಿರಾಕರಿಸುತ್ತಿದ್ದಾರೆ. 'ಘಟಾಕಾಶ' ಎಂಬ ಶ್ಲೋಕದಿಂದ.

**प्रकाशः – श्लोकं व्याचष्टे – यथेति । नास्त्येवेति ।** तथा च बिम्बरूपत्वादन्तर्यामिणः तत्र नावस्थानमिति भावः ।

ಗ್ರಂಥಕಾರರು ತಮ್ಮ ಶ್ಲೋಕಕ್ಕೆ ತಾವೇ ವ್ಯಾಖ್ಯಾನ ಮಾಡುತ್ತಿದ್ದಾರೆ. 'ಯಥಾ' ಇತ್ಯಾದಿ ಗ್ರಂಥದಿಂದ. 'ನಾಸ್ತ್ಯೇವ' ಎಂದರೆ ಅಂತರ್ಯಾಮಿಯು ಬಿಂಬರೂಪನಾದ್ದರಿಂದ ದೇಹದಲ್ಲಿರಲಾರನೆಂದು ಅಭಿಪ್ರಾಯ.

**प्रकाशः – प्रतिबिम्बपक्षे अवच्छेदवैलक्षण्यमाशङ्कते – नन्विति । उक्तमिति ।** बिम्बप्रतिबिम्बत्वरहितमाकाशमात्रं प्रतिबिम्बाकाशं चेति द्वयमित्यर्थः ।

ಪ್ರತಿಬಿಂಬಪಕ್ಷದಲ್ಲಿ ಅವಚ್ಛೇದಪಕ್ಷಕ್ಕಿಂತ ವೈಲಕ್ಷಣ್ಯವಿದೆಯೆಂದು 'ನನು ತಥಾऽಪಿ' ಎಂಬ ಗ್ರಂಥದಿಂದ ಆಕ್ಷೇಪ ಮಾಡುತ್ತಿದ್ದಾರೆ. 'ಉಕ್ತಮ್' ಎಂದರೆ ಬಿಂಬಪ್ರತಿಬಿಂಬ ಭಾವವನ್ನು ಹೊಂದದ ಶುದ್ಧ ಆಕಾಶವು ಮತ್ತು ಪ್ರತಿಬಿಂಬಭೂತವಾದ ಆಕಾಶ ಎರಡನ್ನೂ ಹೇಳಲಾಗಿದೆ ಎಂದರ್ಥ.

**प्रकाशः – द्वयमेवेति ।** आकाशमात्रमवच्छिन्नं चेति द्वयं, नतु प्रतिबिम्बाकाशमित्यर्थः । तस्यास्वच्छतया प्रतिबिम्बनानुपाधित्वादिति भावः ।

'ದ್ವಯಮೇವ' ಎಂದರೆ ಶುದ್ಧವಾದ ಆಕಾಶ ಹಾಗೂ ಅವಚ್ಛಿನ್ನವಾದ ಆಕಾಶಗಳೆರಡೇ ಎಂದರ್ಥ. ಹೊರತು, ಪ್ರತಿಬಿಂಬಭೂತವಾದ ಆಕಾಶವನ್ನು ವಿವಕ್ಷಿಸಬಾರದು. ಏಕೆಂದರೆ ಘಟವು ಅಸ್ವಚ್ಛವಾದ್ದರಿಂದ ಪ್ರತಿಬಿಂಬಕ್ಕೆ ಉಪಾಧಿಯಾಗುವುದಿಲ್ಲ.

**प्रकाशः – त्रितयाभावेनेति ।** तथा च ब्रह्मणोऽविद्यायां प्रतिबिम्बितमात्रत्वेन, तत्र चिन्मात्रस्य प्रतिबिम्बितस्य च, घटादावाकाशद्वयस्येव दर्पणादौ मुखमात्र-प्रतिबिम्बमुखरूपद्वयस्येव, भावेऽपि त्रितयाभावेनावच्छेदपक्षत्यागेन प्रतिबिम्ब-पक्षस्वीकारायोगादित्यर्थः ।

ಗ್ರಂಥದಲ್ಲಿ 'ತ್ರಿತಯಾಭಾವೇನ' ಎಂದು ಹೇಳಿರುತ್ತಾರೆ. ಬ್ರಹ್ಮನು ಅವಿದ್ಯೆಯಲ್ಲಿ ಕೇವಲ ಪ್ರತಿಬಿಂಬಿತನಾಗಿದ್ದಾನೆ; ಹೊರತು ಅವಚ್ಛಿನ್ನನಾಗಿಲ್ಲ. ಆದ್ದರಿಂದ ಚಿನ್ಮಾತ್ರನು ಮತ್ತು ಪ್ರತಿಬಿಂಬಿತನು ಇರಬಹುದು. ಯಾವರೀತಿಯಾಗಿ ದರ್ಪಣದಲ್ಲಿ ಮುಖವೆಂಬ ಸಾಮಾನ್ಯವು ಹಾಗೂ ಪ್ರತಿಬಿಂಬ ಎಂಬ ಮುಖಗಳೆರಡೇ ಇರುತ್ತವೋ ಹೊರತು, ಅವಚ್ಛಿನ್ನವಾದ ಮುಖವೆಂಬ ಮೂರನೆಯ ಪಕ್ಷವು ಇರುವುದಿಲ್ಲವೋ, ಆದರಂತೆ ಘಟದಲ್ಲಿಯೂ ಸಹ ಕೇವಲ ಘಟಾಕಾಶ ಮತ್ತು ಘಟಾವಚ್ಛಿನ್ನ ಆಕಾಶಗಳು

ಇದ್ದರೂ ಸಹ ಅವಚ್ಛಿನ್ನನಾದ ಬ್ರಹ್ಮನು ಇರಲು ಸಾಧ್ಯವಿಲ್ಲ. ಆದ್ದರಿಂದ ಅವಚ್ಛೇದಪಕ್ಷವನ್ನು ಬಿಟ್ಟು ಪ್ರತಿಬಿಂಬ ಪಕ್ಷವನ್ನು ಸ್ವೀಕರಿಸುವುದರಲ್ಲಿ ಅರ್ಥವೇ ಇಲ್ಲ.

**प्रकाशः** – ननु सत्यं, यत्रैकस्यावच्छेदः प्रतिबिम्बनं च, तत्र सामान्यं प्रतिबिम्बितवमच्छिन्नं चेति त्रितयमन्यत्र द्वयमिति । तथाऽपि प्रकृते तथाऽस्त्विति शङ्कते – **नन्विति** ।

ಹೌದು, ಯಾವ ಘಟಾದಿಗಳಲ್ಲಿ ಒಂದರ ಅವಚ್ಛೇದ ಮಾತ್ರವಿರುತ್ತದೋ ಅಲ್ಲಿ ಅವಚ್ಛಿನ್ನ ಹಾಗೂ ಸಾಮಾನ್ಯ ಎರಡೇ ಇರುತ್ತದೆ. ದರ್ಪಣಾದಿಗಳಲ್ಲಿ ಪ್ರತಿಬಿಂಬವಿದ್ದರೆ ಪ್ರತಿಬಿಂಬಿತವಾದ ಮುಖ ಹಾಗೂ ಮುಖ ಸಾಮಾನ್ಯವು ಎರಡೇ ಇರುತ್ತದೆ. ಮೂರು ಇರುವುದಿಲ್ಲ. ಹೀಗೆ ಅವಚ್ಛೇದಪಕ್ಷದಲ್ಲಾಗಲೀ ಪ್ರತಿಬಿಂಬಪಕ್ಷದಲ್ಲಾಗಲೀ ಎರಡು ಬರುತ್ತವೆ. ಎರಡೇ ಹೊರತು ಮೂರು ಬರುವುದಿಲ್ಲ. ಆದರೆ ಎಲ್ಲೆಲ್ಲಿ ಒಂದೇ ಉಪಾಧಿಯಲ್ಲಿ ಅವಚ್ಛೇದ ಹಾಗೂ ಪ್ರತಿಬಿಂಬಗಳು ಒಟ್ಟಿಗೆ ಇರುತ್ತವೋ ಅಲ್ಲಿ ಸಾಮಾನ್ಯ ಹಾಗೂ ಪ್ರತಿಬಿಂಬ ಮತ್ತು ಅವಚ್ಛಿನ್ನ ಮೂರೂ ಸಹ ಇರುತ್ತವೆ. ಬೇರೆ ಕಡೆ ಎರಡು ಮಾತ್ರ ಇರುತ್ತವೆ. ಜಲವು ಇದಕ್ಕೆ ದೃಷ್ಟಾಂತ ಆದರೆ ಬ್ರಹ್ಮಪಕ್ಷದಲ್ಲಿ ಮೂರೂ ಸಹ ಬರಬಹುದೆಂದು 'ನನು' ಇತ್ಯಾದಿ ವಾಕ್ಯಗಳಿಂದ ಆಕ್ಷೇಪಿಸುತ್ತಿದ್ದಾರೆ.

**प्रकाशः** – किमेतावता; एकस्मिन्नके देहे अवच्छिन्नं प्रतिबिम्बितं चिन्मात्रं चेति ब्रह्मत्रयसिद्धावपि तत्रावच्छिन्नं वा प्रतिबिम्बितं वा नान्तर्यामि, तस्य नियम्यरूपजीवत्वात् । अथ तत्रत्यं चिन्मात्रं वा, सार्वज्ञ्याद्युपेतं बिम्बभूतं ब्रह्म वा तथेति वाच्यमिति भावेन, अन्त्ये दोषमाह – **यत्रेति** ।

ಇದರಿಂದೇನೂ ಪ್ರಯೋಜನವಿಲ್ಲ. ಒಂದೇ ದೇಹದಲ್ಲಿ ಅವಚ್ಛಿನ್ನನಾದ ಬ್ರಹ್ಮ, ಪ್ರತಿಬಿಂಬಿತನಾದ ಬ್ರಹ್ಮ, ಚಿನ್ಮಾತ್ರನಾದ ಬ್ರಹ್ಮನೆಂದು ಎಂಬ ಮೂರು ಬಗೆಯ ಬ್ರಹ್ಮರನ್ನು ನೀವು ಸಾಧಿಸಿದಿರಿ. ಆದರೆ ಅವಚ್ಛಿನ್ನನಾದ ಬ್ರಹ್ಮನು ಮತ್ತು ಪ್ರತಿಬಿಂಬಿತನಾದ ಬ್ರಹ್ಮನು ಅಂತರ್ಯಾಮಿಯಾಗುವುದಿಲ್ಲ. ಏಕೆಂದರೆ ಅವರಿಬ್ಬರೂ ನಿಯಮ್ಯರಾದ ಜೀವಸ್ವರೂಪವನ್ನು ತಾಳಿದ್ದಾರೆ. ಇನ್ನು ಆ ಮೂರುಬ್ರಹ್ಮರಲ್ಲಿ ಚಿನ್ಮಾತ್ರ ಅಥವಾ ಸಾರ್ವಜ್ಞ್ಯಾದಿಗುಣಗಳಿಂದ ಕೂಡಿರುವ ಬಿಂಬಭೂತನಾದ ಬ್ರಹ್ಮನನ್ನು ನಿಯಾಮಕನೆಂದು ಹೇಳಬೇಕು. ಈ ಎರಡನೇ ಪಕ್ಷದಲ್ಲಿ 'ಯತ್ರ' ಎಂಬ ವಾಕ್ಯದಿಂದ ದೋಷವನ್ನು ಹೇಳುತ್ತಿದ್ದಾರೆ.

**प्रकाशः** – 'द्वयम्' अवच्छिन्नं प्रतिबिम्बितं चेत्यर्थः । आद्ये दोषमाह – **आकाशमात्रेति** । **विकल्प इति** । घटादावाकाशस्येवावच्छेदमात्रं न प्रतिबिम्बनं, दर्पणादौ मुखस्येव ब्रह्मणोऽविद्यायां प्रतिबिम्बनमात्रं न त्ववच्छेद इति विकल्पपक्षे, जलादावेकस्याकाशस्येव ब्रह्मण एकस्मिन् देहे अविद्ययाऽवच्छेदः प्रतिबिम्बनं चेति समुच्चयपक्षे चेत्यर्थः । पक्षद्वयेऽप्यन्तर्यामिभूतस्य तत्राभावादिति भावः ।

'ದ್ವಯಮ್' ಎಂದರೆ ಅವಚ್ಛಿನ್ನನಾದ ಹಾಗೂ ಪ್ರತಿಬಿಂಬಭೂತನಾದ ಬ್ರಹ್ಮನು ಎಂದರ್ಥ. ಅವಚ್ಛಿನ್ನ ಪಕ್ಷದಲ್ಲಿ 'ಆಕಾಶಮಾತ್ರ' ಇತ್ಯಾದಿ ವಾಕ್ಯದಿಂದ ದೋಷವನ್ನು ಹೇಳಿದ್ದಾರೆ. 'ವಿಕಲ್ಪಃ' ಎಂದರೆ ಘಟಾದಿಗಳಲ್ಲಿ ಆಕಾಶವು ಅವಚ್ಛಿನ್ನವಾಗುತ್ತದೆ ಹೊರತು ಪ್ರತಿಬಿಂಬವಾಗುವುದಿಲ್ಲ. ದರ್ಪಣಾದಿಗಳಲ್ಲಿ ಮುಖವು ಹೇಗೆ ಪ್ರತಿಬಿಂಬವಾಗುತ್ತದೋ, ಅದರಂತೆ ಅವಿದ್ಯೆಯಲ್ಲಿ ಬ್ರಹ್ಮನು ಪ್ರತಿಬಿಂಬನಾಗುತ್ತಾನೆ ಹೊರತು ಅವಚ್ಛಿನ್ನನಾಗುವುದಿಲ್ಲ. ಅದು ವಿಕಲ್ಪ ಪಕ್ಷ. ಇನ್ನು ಜಲಾದಿಗಳಲ್ಲಿ ಒಂದೇ ಆಕಾಶವು ಅವಚ್ಛಿನ್ನವೂ, ಪ್ರತಿಬಿಂಬಿತವೂ ಆಗುವಂತೆ ಒಂದೇ ದೇಹದಲ್ಲಿ ಬ್ರಹ್ಮನು ಅವಿದ್ಯೆಯಿಂದ ಅವಚ್ಛಿನ್ನನೂ, ಪ್ರತಿಬಿಂಬಿತನೂ ಆಗುತ್ತಾನೆಂಬುದು ಸಮುಚ್ಚಯ ಪಕ್ಷ. ಈ ಎರಡು ಪಕ್ಷಗಳಲ್ಲಿಯೂ ಸಹ ಅಂತರ್ಯಾಮಿಯು ನಿಯಾಮಕನಾಗಿ ದೇಹದಲ್ಲಿರಲು ಸಾಧ್ಯವಿಲ್ಲವೆಂದು ತಿಳಿಯಬೇಕು.

**प्रकाशः** – नन्ववच्छेदपक्षे प्रतिबिम्बनपक्षे च यच्चिन्मात्रमाकाशस्थानीयं तदेवागत्या नियन्तृ स्यादिति कश्चिद् ब्रूयात्तं प्रत्याह – **किञ्चेति । 'अन्यत्र'** न्यायामृते ।

ಆಕ್ಷೇಪ - ಅವಚ್ಛೇದಪಕ್ಷದಲ್ಲಿ ಮತ್ತು ಪ್ರತಿಬಿಂಬಪಕ್ಷದಲ್ಲಿ ಆಕಾಶಸ್ಥಾನದಲ್ಲಿರುವ ಚಿನ್ಮಾತ್ರವನ್ನೇ ಗತಿಯಿಲ್ಲದೇ ಅವಶ್ಯವಾಗಿ ನಿಯಾಮಕವೆಂದು ಹೇಳಬೇಕು. ಹೀಗೆ ಹೇಳಿದಾಗ ಎಲ್ಲ ದೋಷವು ಪರಿಹಾರವಾಗುತ್ತದಲ್ಲವೇ?

ಸಮಾಧಾನ - ಹೀಗೆ ಅದ್ವೈತಿಗಳಲ್ಲಿ ಯಾರಾದರೂ ಆಕ್ಷೇಪಿಸಬಹುದು. ಇದನ್ನೇ ಗ್ರಂಥಕಾರರು 'ಕಿಂಚ' ಇತ್ಯಾದಿ ವಾಕ್ಯದಿಂದ ನಿರಾಕರಿಸಿದ್ದಾರೆ. ಅವಚ್ಛೇದಪಕ್ಷದಲ್ಲಾಗಲೀ, ಪ್ರತಿಬಿಂಬಪಕ್ಷದಲ್ಲಾಗಲೀ, ಅಂತಹ ಚಿನ್ಮಾತ್ರನನ್ನು ಇದ್ದಾನೆಂದು ಸಮರ್ಥಿಸಲಾಗದು. 'ಅನ್ಯತ್ರ' ಎಂಬ ಪದಕ್ಕೆ ನ್ಯಾಯಾಮೃತದಲ್ಲಿ ಎಂದರ್ಥ.

**गुरुराजीयम्** – यदुक्तं परैरेको हि प्रत्यगात्मा भवति । न द्वौ प्रत्यगात्मानौ सम्भवतः । एकस्यैव तु भेदव्यवहार उपाधिकृतः । यथा घटाकाशो मठाकाश इति । तद्वदिति । तदनूद्य दूषयति – **यच्चोक्तमिति ।। मां प्रतीति ।।** एकस्यैव प्रत्यगात्मनो भेदव्यवहार उपाधिकृत इत्यत्र मां प्रति दृष्टान्ताभावात् । गगनेऽपि भेदस्य स्वाभाविकत्वेनोपाधिकृतत्वाभावेन तस्य दृष्टान्तत्वासम्भवादिति भावः । **अवच्छेदपक्ष इति** ।। सर्वगतस्य गगनस्य घटाकाशत्वव्यपदेशः । तथा तदुपाध्यवच्छिन्ने ब्रह्मणि जीवत्वव्यपदेश इत्यवच्छेदपक्ष इत्यर्थः । **द्विगुणीकृत्येति** ।। सर्वगतस्य ब्रह्मण उपाध्यवच्छेदे प्राथमिकी वृत्तिः । पुनरवच्छिन्नेऽपि नियन्तृत्वादिसिद्ध्यर्थमनवच्छिन्नस्य वृत्त्यन्तरमाश्रयणीयम् । न चैतदुपलब्धचरमिति द्विगुणीकृत्य वृत्त्यनुपपत्तिः । गगनस्य त्ववच्छिन्ने

वृत्त्यनङ्गीकाराद्वैषम्यमिति भावः । अन्तःकरणप्रतिबिम्बितजीवनियन्तृत्वेन ब्रह्मणस्तत्रावस्थानाद् द्विगुणीकृत्य वृत्त्यनुपपत्तिस्तत्रापि समेत्याशङ्क्याह – **प्रतिबिम्बेति** ।। किमवच्छेदपक्षं परित्यज्य प्रतिबिम्बपक्षमेवाश्रित्य ब्रह्मणोऽवस्थानं प्रतिपाद्यते। किं वा प्रतिबिम्बपक्षमभेदव्यवच्छेदपक्षं चाश्रित्यान्तर्यामिणोऽवस्थानमिति। नाद्यः । अवच्छेदपक्ष इव प्रतिबिम्बपक्षेऽप्याकाशद्वयस्यैव प्राप्त्या बिम्बाकाशस्याभावादित्याह – **यथेति** । अथावच्छेदप्रतिबिम्बपक्षयोस्साम्यं विघटयति – **नन्विति**।। उक्तमाकाशद्वयं स्वाभाविकाकाशः प्रतिबिम्बाकाशश्चेत्याकाशद्वयमित्यर्थः । तर्ह्यवच्छेदप्रतिबिम्बनवति त्रितयसद्भावेऽप्यवच्छेदमात्र इव प्रतिबिम्बनमात्रेऽपि द्वयस्यैव सत्त्वेनावच्छेदपक्षं परित्यज्य प्रतिबिम्बपक्षाश्रयणमयुक्तमित्याह – **यस्येति**।। **त्रितयाभावेनेति** ।। दर्पणादौ स्वाभाविकाकाशस्य प्रतिमुखाकाशस्य सद्भावेऽपि दर्पणादेर्जलादिवदनिबिडद्रव्यत्वाभावेन दर्पणावच्छिन्नाकाशाभावेन त्रितयाभाव इत्यर्थः । नन्ववच्छेदपक्षमात्र इव प्रतिबिम्बपक्षमात्रेऽपि त्रितयाभावेऽपि ब्रह्मणोऽविद्ययाऽवच्छेदस्य प्रतिबिम्बस्य च सत्त्वादाकाशवत्त्रितयसिद्धिस्स्यात् । न चैवमवच्छेदपक्षस्याप्याश्रयणेऽवच्छेदपक्षो न युक्त इत्यादिपूर्वोक्तिव्याघात इति वाच्यम् । केवलावच्छेदमात्रपक्षे त्रितयलाभस्य तत्रानभिप्रेतत्वादवच्छेदसहितप्रतिबिम्बपक्षे त्रितयलाभस्य चाभिप्रेतत्वात् । ततश्च न विरोध इति समुच्चयमाशङ्कते – **ननु तर्हीति** ।। एवमवच्छेदप्रतिबिम्बपक्षोभयाश्रयणेऽपि तेनान्तर्यामिणस्सत्त्वसिद्धिरित्याह – **यत्रेत्यादि** ।। अवच्छेदपक्षाश्रयणेनाह – **बाह्याकाशस्येति** ।। प्रतिबिम्बपक्षाश्रयणेनाह – **बिम्बाकास्येति** ।। ननु जीवप्रदेशे चिन्मात्रावस्थाने चिन्मात्रस्यैवान्तर्यामित्वादन्तर्यामिणोऽवस्थानसिद्धिरित्यत आह – **आकाशमात्रेति** ।। अन्यथाऽपसिद्धान्तस्स्यादिति भावः । **तस्मादिति** ।। परेणावच्छेदपक्षस्य प्रतिबिम्बन्ासमुदायपक्षयोर्निराकृतत्वादिति भावः । **किञ्चेति** ।। तथा चास्याभ्युपगमवादेनोक्तत्वान्न ग्रन्थान्तरस्थस्वोक्तिविरोध इति भावः ।। दर्पणादौ च प्रतिबिम्बव्यतिरेकेण मुख० यत्त्यन्तरं नास्तीत्यन्यत्रोक्तमिति ।। मुखप्रतिमुखानुगतमुखत्वातिरिक्तमुखमात्ररूपव्यक्त्यन्तरस्येव जीवब्रह्मानुगत चित्त्वातिरिक्तचिन्मात्ररूपस्याज्ञानाश्रयत्वयोग्यव्यक्त्यन्तरस्य चाभावाच्चेति न्यायामृते प्रथमपरिच्छेदेऽज्ञानस्य विवरणोक्तचिन्मात्राश्रितत्वभङ्गे उक्तमित्यर्थः ।

## ಸಾರ

ಅನವಸ್ಥಾದೋಷವನ್ನು ಪರಿಹರಿಸುವುದಕ್ಕಾಗಿ ನಿಯಾಮಕರಿಗೆ ಭೇದವನ್ನೇನೂ ಒಪ್ಪಬೇಕಾಗಿಲ್ಲ. ಒಂದು ಶರೀರದಲ್ಲಿ ಎರಡು ಪ್ರತ್ಯಕ್‌ಚೈತನ್ಯಗಳನ್ನು ಒಪ್ಪಲು ಸಾಧ್ಯವಿಲ್ಲದ ಕಾರಣ ಅವರಿಬ್ಬರಿಗೆ ಐಕ್ಯವನ್ನು ಅನಿವಾರ್ಯವಾಗಿ ಹೇಳಬೇಕೆಂದು ಅದ್ವೈತಿಗಳು ಆಕ್ಷೇಪಿಸುತ್ತಾರೆ. ಆದರೆ ಇದನ್ನು ಒಂದೇ ಶರೀರದಲ್ಲಿ ಜೀವಬ್ರಹ್ಮರಿದ್ದಾರೆ. ಅನೇಕ ಅಭಿಮಾನಿದೇವತೆಗಳೂ ಇದ್ದಾರೆಂದು ಹೇಳುವ ದ್ವೈತಿಗಳಿಗೆ ಮನದಟ್ಟಾಗಿಸಲು ಅದ್ವೈತಿಗಳಿಗೆ ಸಾಧ್ಯವಿಲ್ಲ. ಒಂದು ಶರೀರದಲ್ಲಿ ಪಿಶಾಚಿಯು ಸೇರಿಕೊಂಡಾಗ ಇಬ್ಬರು ಚೇತನರಿರುವುದು ನಮ್ಮ ಅನುಭವದಲ್ಲಿ ಕಾಣಸುತ್ತಿದೆ. ಐತರೇಯೋಪನಿಷತ್ತಿನಲ್ಲಂತೂ ಸ್ಪಷ್ಟವಾಗಿ "ಹಂತಾಸ್ಮಾತ್ ಶರೀರಾತ್'' ಇತ್ಯಾದಿ ವಾಕ್ಯದಿಂದ ಅನೇಕ ಅಭಿಮಾನಿದೇವತೆಗಳು ಒಂದೇ ಶರೀರದಲ್ಲಿ ಪ್ರವೇಶಿಸಿದ್ದಾರೆಂಬುದು ಕಾಣಸುತ್ತಿದೆ. ಹೀಗೆ ಹೇಳಿದಾಗ ಏನೂ ಬಾಧಕವಿಲ್ಲ. 'ನಾನ್ಯೋಽತೋಽಸ್ತಿ ದ್ರಷ್ಟಾ'' ಎಂಬ ಶ್ರುತಿಯು ಆಪಾತತಃ ಮತ್ತೊಬ್ಬನಿಲ್ಲ ಎಂದು ಹೇಳಿದಂತೆ ಕಾಣಸಬಹುದು. ಆದರೆ ಸ್ವತಂತ್ರನಾದ ಮತ್ತೊಬ್ಬ ದ್ರಷ್ಟ್ರಪುರುಷನಿಲ್ಲವೆಂದೇ ಆ ಶ್ರುತಿಯ ಅಭಿಪ್ರಾಯ.

ಈ ಸಂದರ್ಭದಲ್ಲಿ ವಿವರಣಕಾರನ ವಾದವೊಂದು ಹೀಗಿದೆ - ಅವಚ್ಛೇದಪಕ್ಷ ಹಾಗೂ ಪ್ರತಿಬಿಂಬ ಪಕ್ಷವೆಂದು ಎರಡು ಪಕ್ಷಗಳಿವೆ. ಅವಚ್ಛೇದಪಕ್ಷವೆಂದರೆ ಎಲ್ಲೆಡೆ ವ್ಯಾಪ್ತವಾಗಿರುವ ಆಕಾಶವು ಘಟದಲ್ಲಿಯೂ ಇರುತ್ತವೆ. ಆದರೆ ಬಾಹ್ಯಾಕಾಶವನ್ನು ಘಟದಲ್ಲಿದೆಯೆಂದು ಯಾರೂ ವ್ಯವಹರಿಸುವುದಿಲ್ಲ. ಕೇವಲ ಘಟಾವಚ್ಛಿನ್ನ ಆಕಾಶವಿದೆಯೆಂದೇ ಹೇಳುತ್ತಾರೆ. ಪ್ರತಿಬಿಂಬಪಕ್ಷದಲ್ಲಿ ಪ್ರತಿಬಿಂಬವಾದ ಆಕಾಶವು ಜಲದಲ್ಲಿದೆ. ಎಲ್ಲೆಡೆ ವ್ಯಾಪ್ತವಾದ ಆಕಾಶವೂ ಸಹ ಜಲದಲ್ಲಿದೆ. ಪ್ರಕೃತ ಜೀವನೆಂಬ ಶರೀರದಲ್ಲಿ ನಿಯಾಮಕನಾದ ಬ್ರಹ್ಮನಿದ್ದಾನೆಂದು ಅವಚ್ಛೇದಪಕ್ಷವನ್ನು ಅಂಗೀಕರಿಸಿ ಹೇಳಲು ಸಾಧ್ಯವಿಲ್ಲ. ಆದರೆ ಪ್ರತಿಬಿಂಬಪಕ್ಷವನ್ನು ಸ್ವೀಕರಿಸಿದಾಗ ಶರೀರದಲ್ಲಿ ಅವಿದ್ಯಾವಚ್ಛಿನ್ನನಾದ ಬ್ರಹ್ಮನೂ ಇರಬಹುದು. ನಿಯಾಮಕನಾದ ಬ್ರಹ್ಮನೂ ಸಹ ಇರಬಹುದು ಎಂದು.

ವಿವರಣಕಾರನ ಈ ಅಭಿಪ್ರಾಯವು ಹುರುಳಿಲ್ಲದ್ದು. ಏಕೆಂದರೆ ಘಟಾಕಾಶದಲ್ಲಿ ಬಾಹ್ಯಾಕಾಶವಿರುವುದು ಎಷ್ಟು ಅಸಂಭಾವಿತವೋ ಅದರಂತೆ ನೀರಿನಲ್ಲಿ ಬಿಂಬಭೂತವಾದ ಆಕಾಶವಿರುವುದೂ ಸಹ ಅಷ್ಟೇ ಅಸಂಭಾವಿತ.

ವಸ್ತುತಃ ಜಲದಲ್ಲಿ ಶುದ್ಧವಾದ ಆಕಾಶ, ಅವಚ್ಛಿನ್ನವಾದ ಆಕಾಶ ಹಾಗೂ ಪ್ರತಿಬಿಂಬಭೂತವಾದ ಆಕಾಶಗಳೆಂದು ಮೂರು ಆಕಾಶಗಳಿರುತ್ತದೆ. ಘಟದಲ್ಲಿ ಪ್ರತಿಬಿಂಬವಾದ ಆಕಾಶವಿರುವುದಿಲ್ಲ. ಕೇವಲ ಶುದ್ಧವಾದ ಆಕಾಶ ಹಾಗೂ ಅವಚ್ಛಿನ್ನವಾದ ಆಕಾಶಗಳೆರಡೇ ಇರುತ್ತವೆ. ಹೀಗೆ ವ್ಯತ್ಯಾಸವನ್ನೇನೋ ತೋರಿಸಬಹುದು. ಆದರೆ ದರ್ಪಣದಲ್ಲಿ ಪ್ರತಿಬಿಂಬವಾಗಿರುವ ಮುಖ ಹಾಗೂ ಮುಖಸಾಮಾನ್ಯವಿರುವುದು ಕಾಣಸುತ್ತದೆ. ಆದರೆ ಬಿಂಬಭೂತವಾದ ಮುಖವಿದೆಯೆಂದು ಯಾರೂ ಹೇಳುವುದಿಲ್ಲ. ಅದರಂತೆ ಶರೀರದಲ್ಲಿ ಚಿನ್ಮಾತ್ರನಿರಬಹುದು. ಅವಿದ್ಯಾವಚ್ಛಿನ್ನನಾದ ಬ್ರಹ್ಮನಿರಬಹುದು. ನಿಯಾಮಕಬ್ರಹ್ಮನಿದ್ದಾನೆಂದು ಈ ದೃಷ್ಟಾಂತದಿಂದ ಸಮರ್ಥಿಸಲು ಸಾಧ್ಯವಿಲ್ಲ. ಅದ್ವೈತಿಗಳು ಅವಚ್ಛಿನ್ನಬ್ರಹ್ಮ, ಪ್ರತಿಬಿಂಬಬ್ರಹ್ಮ, ಚಿನ್ಮಾತ್ರಬ್ರಹ್ಮನೆಂದು ಮೂರು ಬಗೆಯ ಬ್ರಹ್ಮರನ್ನು ಒಪ್ಪುತ್ತಾರೆ. ಈ ಮೂರು ಬ್ರಹ್ಮರಲ್ಲಿ ಅವಚ್ಛಿನ್ನಬ್ರಹ್ಮ ಹಾಗೂ ಪ್ರತಿಬಿಂಬಬ್ರಹ್ಮರು ಜೀವಸ್ವರೂಪವನ್ನು ತಾಳಿದ್ದರಿಂದ ನಿಯಮ್ಯರೇ ಆಗಿಬಿಟ್ಟಿದ್ದಾರೆ. ಇನ್ನು

ಶುದ್ಧಬ್ರಹ್ಮನು ಯಾವುದೇ ಗುಣಗಳನ್ನು ಹೊಂದದ ಕಾರಣ ನಿಯಾಮಕನಾಗಲು ಸಾಧ್ಯವಿಲ್ಲ. ಇದು ಹೇಗಾಯಿತೆಂದರೆ 'ಮುಳ್ಳು ಕೊನೆಯ ಮೇಲೆ ಮೂರು ಕೆರೆಯ ಕಟ್ಟಿ, ಎರಡು ತುಂಬದು ಒಂದು ತುಂಬಲೇ ಇಲ್ಲ' ಎಂಬ ದಾಸರ ಒಗಟಿನ ಪದ್ಯದಂತೆ ಮೂರು ಬ್ರಹ್ಮರಲ್ಲಿ ಪ್ರತಿಬಿಂಬಬ್ರಹ್ಮ ಹಾಗೂ ಅವಚ್ಛಿನ್ನಬ್ರಹ್ಮರಿಗೆ ಜೀವಭಾವವಿರುವುದಿಂದ ನಿಯಾಮಕತ್ವ ಬರುವುದಿಲ್ಲ. ಉಳಿದೊಬ್ಬ ಶುದ್ಧಬ್ರಹ್ಮನಲ್ಲಿ ನಿಯಾಮಕತ್ವವನ್ನು ಸ್ವತಃ ಅವರೇ ಒಪ್ಪಿಲ್ಲ. ಒಟ್ಟಾರೆ ದೇಹದ ಒಳಗಡೆ ಕುಳಿತಿರುವ ಬ್ರಹ್ಮನು ನಪುಂಸಕನಂತೆ ವ್ಯರ್ಥವಾಗಿ ಕುಳಿತಿದ್ದಾನೆಂದು ಹೇಳಿದಂತಾಯಿತು.

• • • • •

### ಶಂಕರಭಾಷ್ಯ ರಾಮಾನುಜಭಾಷ್ಯಗಳ ಸೂತ್ರಾರ್ಥ ವಿಮರ್ಶೆ

## तात्पर्यचन्द्रिका

**यच्चोक्तमुभाभ्याम् – आद्यसूत्रे अधिदेवादिषु योऽन्तर्यामी स परमात्मेत्यन्वय इति,**

ಅನುವಾದ - ರಾಮಾನುಜರು ಹಾಗೂ ಅದ್ವೈತಿಗಳು ಮೊದಲನೆಯ ಸೂತ್ರವನ್ನು ಹೀಗೆ ವ್ಯಾಖ್ಯಾನಿಸುತ್ತಾರೆ - "ಅಂತರ್ಯಾಮ್ಯಧಿದೇವಾದಿಷು ತದ್ಧರ್ಮವ್ಯಪದೇಶಾತ್" ಎಂಬ ಪ್ರಕರಣಗಳಲ್ಲಿ ಯಾರು ಅಂತರ್ಯಾಮಿಯಾಗಿ ಶ್ರುತನಾಗಿದ್ದಾನೋ ಅವನು ಪರಮಾತ್ಮನೇ ಆಗಿದ್ದಾನೆ. ಏಕೆಂದರೆ ಪರಮಾತ್ಮನ ಧರ್ಮಗಳು ಕೇಳಿಸುತ್ತಿರುವುದರಿಂದ ಎಂದು.

**तन्न, तथात्वे 'अधिदैवादिषु' इत्यस्य वैयर्थ्यात् ।**

ಇದು ತಪ್ಪು. ಹಾಗೇ ಅರ್ಥೈಸುವುದಾದರೆ 'ಅಧಿದೈವಾದಿಷು' ಎಂಬ ಪದವೇ ವ್ಯರ್ಥವಾಗುತ್ತದೆ. ಅಧಿದೈವಾದಿ ಪ್ರಕರಣಗಳಲ್ಲಿ ಎಂದು ಹೇಳದಿದ್ದರೂ ಅಂತರ್ಯಾಮಿಯು ಪರಮಾತ್ಮನೇ ಆಗಿದ್ದಾನೆಂದು ನಿರ್ಣಯಿಸಲು ಬರುತ್ತದೆ.

**विषयवाक्यसूचनस्यान्तर्यामिपदेनैव सिद्धेः ।**

ವಿಷಯವಾಕ್ಯವನ್ನು ಸೂಚಿಸುವುದಕ್ಕಾಗಿ ಅಧಿದೈವವೆಂಬ ಪದವು ಸಾರ್ಥಕವಲ್ಲವೇ? ಎಂದು ಪ್ರಶ್ನಿಸಬಾರದು. ಅಂತರ್ಯಾಮಿ ಪದದಿಂದಲೇ ಅಂತರ್ಯಾಮಿ ಶಬ್ದಗಳಲ್ಲಿರುವ ಎಲ್ಲಾ ಶ್ರುತಿವಾಕ್ಯಗಳು ಈ ಅಧಿಕರಣಕ್ಕೆ ವಿಷಯವಾಗುತ್ತದೆಂದು ಸಿದ್ಧವಾಗುತ್ತದೆ.

**अन्यथा "अन्तस्तद्धर्म" इत्यादावादित्यादिष्वन्तरिति साध्यं निर्दिश्येत ।**[१]

(१) **श्रीभाष्य –** 'स्थानादिव्यपदेशाच्च' इत्यत्र 'यश्चक्षुषि तिष्ठन्' इत्यादिना प्रतिपाद्यमानं

चक्षुषि स्थितिनियमनादिकं परमात्मन एवेति सिद्धं कृत्वाऽक्षिपुरुषस्य परमात्मत्वं साधितम् । इदानीं तदेव **समर्थयते–**

**अन्तर्याम्यधिदैवादिषु तद्धर्मव्यपदेशात्**

काण्वा माध्यन्दिनाश्च वाजसनेयिनः समामनन्ति । 'यः पृथिव्यां तिष्ठन् पृथिव्या अन्तरो यं पृथिवी न वेद यस्य पृथिवी शरीरं यः पृथिवीमन्तरो यमयति एष त आत्माऽन्तर्याम्यमृतः' इति । एवमम्ब्वग्न्यन्तरिक्षवाय्वादित्यादिचन्द्रतारकाकाशतमस्तेजस्सु देवेषु च सर्वेषु भूतेषु च प्राणवाक्चक्षुःश्रोत्रमनस्त्वग्विज्ञानरेतस्स्वात्मात्मीयेषु च तिष्ठन्तं तत्तदन्तरभूतं तत्तदवेद्यं तत्तच्छरीरकं तत्तद्यमयन्तं कञ्चिन्निर्दिश्य 'एष त आत्माऽन्तर्याम्यमृतः' इत्युपदिश्यते । माध्यन्दिनपाठे तु 'यस्सर्वेषु लोकेषु तिष्ठन्' 'यस्सर्वेषु वेदेषु' 'यस्सर्वेषु यज्ञेषु' इति च पर्यायाः, 'यो विज्ञाने तिष्ठन्' इत्यस्य पर्यायस्य स्थाने 'य आत्मनि तिष्ठन्' इति पर्यायः । 'स त आत्माऽन्तर्याम्यमृतः' इति च विशेषः । तत्र संशय्यते । किमयमन्तर्यामी प्रत्यगात्मा, उत परमात्मा? इति । किं युक्तम्? प्रत्यगात्मेति । कुतः? वाक्यशेषे 'द्रष्टा श्रोता' इति करणायत्तज्ञानताश्रुतेः । एवं द्रष्टुरेवान्तर्यामित्वोपदेशात् 'नान्योऽतोस्ति द्रष्टा' इति द्रष्ट्रन्तरनिषेधाच्चेति ।

एवं प्राप्तेऽभिधीयते– **अन्तर्याम्यधिदैवाधिलोकादिषु तद्धर्मव्यपदेशात् ।।** अधिदैवाधिलोकादि पदचिह्नितेषु वाक्येषु श्रूयमाणोऽन्तर्याम्यपहतपाप्मा परमात्मा नारायणः । काण्वपाठ-सिद्धेभ्योऽधिदैवादिमद्भ्यो वाक्येभ्योऽधिकान्यधिलोकादिमन्ति वाक्यानि माध्यन्दिनपाठे सन्तीति ज्ञापनार्थमधिदैवाधिलोकादिष्वित्युभयोरुपादानम् । तदेवमुभयेष्वपि वाक्येष्वन्तर्यामी परमात्मेत्यर्थः । कुतः? तद्धर्मव्यपदेशात् । परमात्मधर्मो ह्ययम् । यदेक एव सन् सर्वलोकसर्वभूतसर्वदेवादीन्नियमयतीति । तथा ह्युद्दालकप्रश्नः 'य इमं च लोकं परं च लोकं सर्वाणि च भूतानि योऽन्तरो यमयति' इत्युपक्रम्य 'तमन्तर्यामिणं ब्रूहि' इति तस्य चोत्तरम् । 'यः पृथिव्यां तिष्ठन्' इत्यारभ्योक्तम् । तदेतत् सर्वान् लोकान् सर्वाणि च भूतानि सर्वान् देवान् सर्वान् वेदान् सर्वांश्च यज्ञानन्तःप्रविश्य सर्वप्रकारनियमनं सर्वशरीरतया सर्वस्यात्मत्वं च सर्वज्ञात् सत्यसङ्कल्पात् पुरुषोत्तमादन्यस्य न सम्भवति । तथाहि 'अन्तःप्रविष्टः शास्ता जनानां सर्वात्मा' । 'तत् सृष्ट्वा । तदेवानुप्राविशत् । तदनुप्रविश्य । सच्च त्यच्चाभवत् ।' इत्यादीन्यौपनिषदानि वाक्यानि परमात्मन एव सर्वस्य प्रशासितृत्वं सर्वस्यात्मत्वमित्यादीनि वदन्ति । तथा सुबालोपनिषदि 'नैवेह किञ्चनाग्र आसीदमूलमनाधारमिमाः प्रजाः प्रजायन्ते दिव्यो देव एको नारायणः । चक्षुश्च द्रष्टव्यं च नारायणः । श्रोत्रं च श्रोतव्यं च नारायणः' इत्यारभ्य 'अन्तश्शरीरे निहितो गुहायामज एको नित्यः यस्य पृथिवी शरीरं यः पृथिवीमन्तरे सञ्चरन् यं पृथिवी न वेद यस्यापश्शरीरम्'

ಹೀಗೊಪ್ಪದಿದ್ದರೆ 'ಅಂತಸ್ತದ್ಧರ್ಮೋಪದೇಶಾತ್' ಇತ್ಯಾದಿ ಸೂತ್ರಗಳಲ್ಲಿಯೂ 'ಆದಿತ್ಯಾದಿಷು

---

इत्यादि । 'यस्य मृत्युः शरीरं यो मृत्युमन्तरे सञ्चरन् यं मृत्युर्न वेद एष सर्वभूतान्तरात्माऽपहतपाप्मा दिव्यो देव एको नारायणः' इति परस्यैव ब्रह्मणः सर्वात्मत्वं सर्वशरीरत्वं सर्वस्य नियन्तृत्वं च प्रतिपाद्यते । स्वाभाविकं चामृतत्वं परमात्मन एव धर्मः । नच परस्यात्मनः करणायत्तं द्रष्टृत्वादिकम्, अपितु स्वभावत एव सर्वज्ञत्वात् सत्यसङ्कल्पत्वाच्च स्वत एव । तथाच श्रुतिः 'पश्यत्यचक्षुस्स शृणोत्यकर्णः अपाणिपादो जवनो ग्रहीता' इति । नच दर्शनश्रवणादिशब्दाश्चक्षुरादिकरणजन्मनो ज्ञानस्य वाचकाः, अपितु रूपादिसाक्षात्कारस्य । स च रूपादिसाक्षात्कारः कर्मतिरोहितस्वाभाविकज्ञानस्य जीवस्य चक्षुरादिकरणजन्मा, परस्य तु स्वत एव । 'नान्योऽतोऽस्ति द्रष्टा' इत्येतदपि पूर्ववाक्योदितान्नियन्तुर्द्रष्टुरन्यो द्रष्टा नास्तीति वदति । 'यं पृथिवी न वेद' 'यमात्मा न वेद' इत्येवमादिभिर्वाक्यैः पृथिव्यात्मादिनियम्यैरनुलभ्यमान एव नियमयतीति यत्पूर्वमुक्तम्, तदेव 'अदृष्टो द्रष्टा अश्रुतः श्रोता' इति निगमय्य 'नान्योऽतोऽस्ति द्रष्टा' इत्यादिना तस्य नियन्तुर्नियन्त्रन्तरं निषिद्ध्यते । 'एष त आत्मा' इति च 'ते' इति व्यतिरेकविभक्तिनिर्दिष्टस्य जीवस्यात्मतयोपदिश्यमानोऽन्तर्यामी न प्रत्यगात्मा भवितुमर्हति ।। १९ ।।

**नच स्मार्तमतद्धर्माभिलापाच्छारीरश्च**

स्मार्तम् प्रधानम् । शारीरः जीवः । स्मार्तश्च शारीरश्च नान्तर्यामी । अतद्धर्माभिलापात् तयोरसम्भावितधर्माभिलापात् । स्वभावत एव सर्वस्य द्रष्टृत्वं सर्वस्य नियन्तृत्वं सर्वस्यात्मत्वं स्वत एवामृतत्वं च तयोर्न सम्भावनागन्धमर्हति । एतदुक्तं भवति – यथा स्मार्तमचेतनं सर्वज्ञत्वनियन्तृत्वसर्वात्मत्वादिकं नार्हति तथा जीवोऽप्यतद्धर्मत्वादिति । अमीषां गुणानां परमात्मन्यन्वयः प्रत्यगात्मनि व्यतिरेकश्च सूत्रद्वयेन दर्शितः ।। २० ।।

निरपेक्षं च हेत्वन्तरमाह –

**उभयेऽपि हि भेदेनैनमधीयते**

उभये माध्यन्दिनाः काण्वाश्च अन्तर्यामिणो नियाम्यत्वेन वागादिभिरचेतनैस्समम् एनं शारीरमपि विभज्याधीयते 'य आत्मनि तिष्ठन्नात्मनोऽन्तरो यमात्मा न वेद यस्यात्मा शरीरं य आत्मानमन्तरो यमयति स त आत्माऽन्तर्याम्यमृतः' इति माध्यन्दिनाः, 'यो विज्ञाने तिष्ठन्' इति च काण्वाः, परमात्मनियम्यतया तस्माद् विलक्षणत्वेनैनमधीयत इत्यर्थः । अतोऽन्तर्यामी प्रत्यगात्मनो विलक्षणोऽपहतपाप्मा परमात्मा नारायण इति सिद्धम् ।। २१ ।।

इति अन्तर्याम्यधिकरणम्

ಪರಿಪೂರ್ಣಚಂದ್ರಿಕಾ

ಅಂತಃ' ಎಂಬುದಾಗಿ ಸಾಧ್ಯವನ್ನು ನಿರ್ದೇಶಿಸಬೇಕಾಗಿತ್ತು. ಏಕೆಂದರೆ ಅಲ್ಲಿಯೂ ಸಹ ಆದಿತ್ಯಾದ್ಯಂತರ್ಗತತ್ವವನ್ನೇ ಸಮರ್ಥಿಸುತ್ತಿರುವುದರಿಂದ.

**तस्मादधिदैवादिप्रकरणेषु तद्धर्मव्यपदेशादिति यथाश्रुत एवान्वयः ।**

ಆದ್ದರಿಂದ ನಾವು ಹೇಳುವಂತೆ ಅಧಿದೈವ, ಅಧ್ಯಾತ್ಮ, ಅಧಿಭೂತಾದಿಪ್ರಕರಣಗಳಲ್ಲಿ ಭಗವಂತನ ಧರ್ಮಗಳು ಹೇಳಲ್ಪಟ್ಟಿರುವುದರಿಂದ ಅಂತರ್ಯಾಮಿಯೆಂದು ಶ್ರುತನಾದವನು ಅವನೇ ಆಗುತ್ತಾನೆಂದು ಯಥಾಶ್ರುತವಾಗೇ ಅನ್ವಯ ಮಾಡಬೇಕು; ಹೊರತು ಅಧಿದೈವಾದಿಪ್ರಕರಣಗಳಲ್ಲಿ ಅಂತರ್ಯಾಮಿಯಾದವನು ಪರಮಾತ್ಮನೆಂದು ಅನ್ವಯ ಮಾಡಬಾರದು.

**वरं हि वैयर्थ्यादपि लक्षणा ।**

ನಿಮಗೂ ಸಹ ಅಧಿದೈವಶಬ್ದಕ್ಕೆ ಅಧಿದೈವಾದಿಪ್ರಕರಣವೆಂಬರ್ಥದಲ್ಲಿ ಲಕ್ಷಣಾ ಮಾಡುವಂತಹ ದೋಷ ಬರುತ್ತದಲ್ಲವೇ? ಎಂದು ಶಂಕಿಸಬಾರದು. ವೈಯರ್ಥ್ಯಕ್ಕಿಂತ ಲಕ್ಷಣಾವು ದೊಡ್ಡ ದೋಷವಲ್ಲ. ವೈಯರ್ಥ್ಯ ಹಾಗೂ ಲಕ್ಷಣಾ ಈ ದೋಷಗಳಲ್ಲಿ ವೈಯರ್ಥ್ಯವೇ ದೊಡ್ಡ ದೋಷ. ನಿಮಗೆ ವೈಯರ್ಥ್ಯ ಬರುತ್ತದೆ. ನಮಗೆ ಲಕ್ಷಣಾ ಬರುತ್ತದೆ.

**एवं हि न केवलं तद्धर्मव्यपदेशमात्रं, किन्तु तस्याभ्यासोऽप्यस्तीति सूचितम् ।**

ನಮ್ಮ ಪ್ರಕಾರ ಸೂತ್ರವನ್ನು ವ್ಯಾಖ್ಯಾನಿಸಿದಾಗ ಕೇವಲ ತದ್ಧರ್ಮವ್ಯಪದೇಶರೂಪವಾದ ಹೇತುವಷ್ಟೇ ಇರುವುದಲ್ಲ ಹೊರತಾಗಿ, ಭಗವತ್ಪ್ರತಿಪಾದಕವಾದ ಧರ್ಮಗಳ ಅಭ್ಯಾಸವೂ ಸಹ ಇರುತ್ತದೆಂದು ಹೇಳಿದಂತಾಗುತ್ತದೆ.

**यच्च द्वितीयसूत्रेऽतद्धर्माभिलापो नाम प्रधानधर्मविरुद्धधर्माभिलाप इत्युक्तं,**

ಇನ್ನು ಪರರು 'ನಚ ಸ್ಮಾರ್ತಮ್' ಎಂಬ ಎರಡನೇ ಸೂತ್ರಕ್ಕೆ ಹೀಗೆ ವ್ಯಾಖ್ಯಾನಿಸುತ್ತಾರೆ - 'ಅತದ್ಧರ್ಮಾಭಿಲಾಪ' ಎಂದರೆ ಪ್ರಧಾನದ (ಪ್ರಕೃತಿಯ) ಧರ್ಮಕ್ಕೆ ವಿರುದ್ಧವಾದ ಧರ್ಮವನ್ನು ಹೇಳಿರುವುದರಿಂದ ಬ್ರಹ್ಮನೇ ಅಂತರ್ಯಾಮಿಯಾಗುತ್ತಾನೆ.

**तत्र, आद्यसूत्रस्थेन "तद्धर्मव्यपदेशात्" इत्यनेन पुनरुक्तेः । ब्रह्मधर्मो हि प्रधानधर्मविरुद्ध एव । तस्मात् त्रिगुणत्वादिधर्माभिलापाभावादित्येवार्थः ।**

ಇದು ತಪ್ಪು. ಮೊದಲನೆಯ ಸೂತ್ರದಲ್ಲಿರುವ "ತದ್ಧರ್ಮವ್ಯಪದೇಶಾತ್" ಎಂಬ ಹೇತುವಿನಿಂದಲೇ ಈ ವಿಷಯವು ಸಿದ್ಧವಾಗಿರುವಾಗ ಪುನರುಕ್ತಿ ಬರುತ್ತದೆ. ಏಕೆಂದರೆ ಮೊದಲನೆಯ

ಸೂತ್ರದಲ್ಲಿ ಬ್ರಹ್ಮನ ಧರ್ಮಗಳು ಹೇಳಲ್ಪಟ್ಟಿರುವುದರಿಂದ ಎಂದು ಅರ್ಥೈಸಲಾಯಿತು. ಬ್ರಹ್ಮನ ಧರ್ಮಗಳೆಲ್ಲವೂ ಪ್ರಧಾನದ ಧರ್ಮಕ್ಕೆ ವಿರುದ್ಧವೇ ಆಗಿವೆ. ಆದ್ದರಿಂದ ಒಂದೇ ಹೇತುವನ್ನು ಎರಡು ಸೂತ್ರದಲ್ಲಿ ಹೇಳಿದರೆ ಪುನರುಕ್ತಿಯು ಬಂದೇ ಬರುತ್ತದೆ. ಆದ್ದರಿಂದ ನಾವು ಹೇಳುವಂತೆ 'ಅತದ್ಧರ್ಮಾಭಿಲಾಪಾತ್' ಎಂಬ ಹೇತುವಿಗೆ ತ್ರಿಗುಣತ್ವವೇ ಮೊದಲಾದ ಪ್ರಕೃತಿಯ ಧರ್ಮಗಳನ್ನು ಹೇಳದ ಕಾರಣ ಎಂದು ವ್ಯಾಖ್ಯಾನಿಸಬೇಕು.

**किञ्च – ''भेदव्यपदेशात्'' ''भेदव्यपदेशाच्चान्यः'' ''सम्भोगप्राप्तिरिति चेन्न वैशेष्यात्'' इत्यादिकमतीतं, ''शारीरश्चोभयेऽपि हि भेदेनैनमधीयते'' इति वर्तमानं, ''विशेषणभेदव्यपदेशाभ्यां च नेतरौ'' ''भेदव्यपदेशात्'' इत्यादि चाऽऽगामि भेदप्रतिपादकम् ॥**

ಮತ್ತು "ಭೇದವ್ಯಪದೇಶಾತ್" "ಭೇದವ್ಯಪದೇಶಾಚ್ಚಾನ್ಯಃ" "ಸಂಭೋಗಪ್ರಾಪ್ತಿರಿತಿ ಚೇನ್ನ ವೈಶೇಷ್ಯಾತ್" ಇತ್ಯಾದಿಯಾದ. ಹಿಂದೆ ಬಂದಿರುವ ಅನೇಕ ಸೂತ್ರಗಳಲ್ಲಿ ಭೇದವೇ ಪ್ರತಿಪಾದಿಸಲ್ಪಟ್ಟಿವೆ. ಪ್ರಕೃತ ಪ್ರಸಕ್ತವಾಗಿರುವ "ಶಾರೀರಶ್ಚೋಭಯೇಽಪಿ ಹಿ ಭೇದೇನೈನಮಧೀಯತೇ" ಎಂಬ ಸೂತ್ರವೂ ಸಹ ಭೇದವನ್ನೇ ಹೇಳುತ್ತಿದೆ. ಮುಂದೆ ಹೇಳಲಿರುವ "ವಿಶೇಷಣಭೇದವ್ಯಪದೇಶಾಭ್ಯಾಂ ಚ ನೇತರೌ" "ಭೇದವ್ಯಪದೇಶಾತ್" ಇತ್ಯಾದಿ ಅನೇಕ ಸೂತ್ರಗಳಲ್ಲಿ ಭೇದವನ್ನೇ ಪ್ರತಿಪಾದಿಸುತ್ತಾರೆ. ಹೀಗೆ ಹಿಂದಿನ, ಮುಂದಿನ ಮತ್ತು ಈಗಿನ ಸೂತ್ರಗಳೆಲ್ಲವೂ ಭೇದವನ್ನೇ ಪ್ರತಿಪಾದಿಸುತ್ತಿವೆ. ಇದಕ್ಕೆ ವಿರುದ್ಧವಾಗಿ ನೀವು ಅಭೇದವನ್ನು ಹೇಗೆ ಪ್ರತಿಪಾದಿಸುತ್ತೀರಿ?

**अद्वैतिभिर्व्याक्रियते कथमद्वैतदूषकम् ।**
**सूत्रजातं स्वसिद्धान्ततया लज्जां विनैव तु ॥**

ಅದ್ವೈತಮತವನ್ನು ದೂಷಿಸುವ ಭೇದಪ್ರತಿಪಾದಕ ಸೂತ್ರಗಳ ಸಮೂಹವನ್ನು ಅದ್ವೈತಿಗಳು ತಮ್ಮ ಸಿದ್ಧಾಂತ ಪರವಾಗಿ ನಾಚಿಕೆ ಬಿಟ್ಟು ವ್ಯಾಖ್ಯಾನಿಸುತ್ತಾರೆ. ಇದು ಹೇಗೆ? ಎಂಬುದು ಆಶ್ಚರ್ಯ.

**यदि मिथ्यार्थवादीनि सूत्राणीत्येव कीर्तनम् ।**
**सूत्रव्याख्या तर्हि वेदबोध्यमिथ्यात्वबोधकः ॥**

ಒಂದು ವೇಳೆ ಭೇದಪ್ರತಿಪಾದಕವಾದ ಸೂತ್ರಗಳೆಲ್ಲವೂ ಮಿಥ್ಯಾಭೂತವಾದ ಭೇದವನ್ನು ಪ್ರತಿಪಾದಿಸುತ್ತಿವೆ ಎಂದು ತಮ್ಮ ವಾದವನ್ನು ಅದ್ವೈತಿಗಳು ಸಮರ್ಥಿಸಿಕೊಳ್ಳುವುದಾದರೆ

ವೇದಪ್ರತಿಪಾದ್ಯವಾದ ಸುಳ್ಳು ಎಂಬ ಪದಾರ್ಥವನ್ನು ಈ ಸೂತ್ರಗಳು ಪ್ರತಿಪಾದಿಸುತ್ತಿವೆ ಎಂದು ಹೇಳಿದಂತಾಯಿತು.

**बौद्धागमोऽपि वेदस्य व्याख्यारूपः प्रसज्यते ।**

**बौद्धोऽपि ब्रह्मसूत्राणि व्याख्यायान्ते भवानिव ।।**

ಹಾಗಾದರೆ ಬೌದ್ಧಾಗಮವೂ ಸಹ ವೇದಕ್ಕೆ ವ್ಯಾಖ್ಯಾನವಾಗಬಹುದು. ನಿನ್ನಂತೆ ಬೌದ್ಧನೂ ಸಹ ಬ್ರಹ್ಮಸೂತ್ರಗಳನ್ನು ವ್ಯಾಖ್ಯಾನಿಸುತ್ತಾನೆ.

**मिथ्यैषोऽर्थः किन्तु तत्त्वं शून्यमेवेति कीर्तयेत् ।**

**असद्वे(द्वै)त्यादिवचनं तस्य स्यात्तत्त्ववेदकम् ।।**

ವೇದವನ್ನು ವ್ಯಾಖ್ಯಾನಿಸಿದ ಮೇಲೆ ಬೌದ್ಧನು. ಎಲ್ಲವೂ ಸಹ ಮಿಥ್ಯಾ. ತತ್ತ್ವವು ಶೂನ್ಯ ಎಂದು ಸಮರ್ಥಿಸಿ 'ಅಸದ್ವಾ ಇದಮಗ್ರ ಆಸೀತ್' ಇತ್ಯಾದಿ ಕೆಲವೇ ಕೆಲವು ಪ್ರಮಾಣಗಳನ್ನು ಆಧಾರವನ್ನಾಗಿ ನೀಡುತ್ತಾನೆ. ಆದ್ದರಿಂದ ಅಂತಹ ವೇದವೂ ಸಹ ಅವನಿಗೆ ತತ್ತ್ವಾವೇದಕವೇ ಆಗಬೇಕಾಗುತ್ತದೆ.

**अपौरुषेयभावेन प्रयुक्ता च प्रमाणता ।**

**व्यावहारिकमात्रेण नार्थेन परितुष्यति ।।**

ಬೌದ್ಧರು ವೇದವನ್ನು ಅಪೌರುಷೇಯವಾದ್ದರಿಂದ ಪ್ರಮಾಣವೆಂದು ಹೇಳುವುದಿಲ್ಲ. ನಾವಾದರೂ ಅಪೌರುಷೇಯತ್ವವನ್ನು ಒಪ್ಪುತ್ತೇವಲ್ಲವೇ ಎಂದು ಅದ್ವೈತಿಗಳು ಅಹಂಕಾರದಿಂದ ಉತ್ತರಿಸಬಹುದು. ಆದರೆ ಕೇವಲ ವ್ಯವಹಾರಿಕವಾದ ವಿಷಯವನ್ನು ಪ್ರತಿಪಾದಿಸುವ ಮಾತ್ರದಿಂದ ಅಪೌರುಷೇಯ ಪ್ರಯುಕ್ತವಾದ ಪ್ರಾಮಾಣ್ಯವನ್ನು ವೇದಕ್ಕೆ ಸಮರ್ಥಿಸಿದಂತಾಗುವುದಿಲ್ಲ. ಪ್ರಾಮಾಣ್ಯವು ನೀವು ನೀಡುವ ಕಾರಣದಿಂದ ಸಂತೋಷವನ್ನು ಹೊಂದುವುದಿಲ್ಲ.

**असकृच्छ्रुतिभिः सूत्रैर्भेदे यत्नेन साधिते ।**

**मिथ्यार्थतां कथं ब्रूयात् सूत्राणां भाष्यकृत्स्वयम् ।।**

ಅನೇಕ ಶ್ರುತಿಗಳ ಆಧಾರದಿಂದ ಪ್ರಯತ್ನಪೂರ್ವಕವಾಗಿ ಸೂತ್ರಗಳಿಂದ ಭೇದವನ್ನು ಸಮರ್ಥಿಸಲಾಗಿದೆ. ಹೀಗಿರುವಾಗ ಸ್ವತಃ ಭಾಷ್ಯಕಾರನೆಂಬ ಪಟ್ಟಿಯನ್ನು ಹಾಕಿಕೊಂಡ ನೀನು ಸೂತ್ರಗಳಿಗೆ ಸುಳ್ಳು ಸುಳ್ಳಾದ ಅರ್ಥವನ್ನು ಹೇಳುವುದು ಹೇಗೆ ಸರಿಯಾಗುತ್ತದೆ.

ಅಂತರ್ಯಾಮ್ಯಧಿಕರಣ (೧-೨-೫)

**सौगता वेदबाह्या हि वेदाप्रामाण्यवादिनः ।**
**अवैदिका इति ज्ञात्वा वैदिकैः परिवर्जिताः ।।**

ಬೌದ್ಧನು ವೇದಪ್ರಾಮಾಣ್ಯವನ್ನು ಒಪ್ಪುವುದಿಲ್ಲ. ವೇದಬಾಹ್ಯನಾಗಿದ್ದಾನೆ. ಆದ್ದರಿಂದಲೇ ಅವೈದಿಕನಾಗಿದ್ದಾನೆಂದು ತಿಳಿದು ಎಲ್ಲ ವೈದಿಕರು ಬೌದ್ಧರನ್ನು ದೂರವಿಟ್ಟಿದ್ದಾರೆ.

**वेदान् प्रविश्य वेदानामप्रामाण्यं प्रसाधयन् ।**
**मायी तु यत्नतस्ताज्यो वैदिकैर्हितशत्रुवत् ।।**

ಆದರೆ ಅದ್ವೈತಿಗಳು ವೇದದ ಒಳಗಡೆ ಪ್ರವೇಶಿಸಿ ವೈದಿಕರೆಂಬ ಪಟ್ಟಿಯನ್ನು ಕಟ್ಟಿಕೊಂಡು ವೇದದ ಅಪ್ರಮಾಣ್ಯವನ್ನೇ ಸಾಧಿಸುವ ಗುರಿಯನ್ನು ಇಟ್ಟುಕೊಂಡಿದ್ದಾರೆ. ಇಂತಹ ಮಾಯಾವಾದಿಗಳು ಎಲ್ಲಾ ವೈದಿಕರಿಗೆ ಹಿತಶತ್ರುಗಳಾಗಿದ್ದಾರೆ. ಶತ್ರುವಿಗಿಂತ ಹಿತಶತ್ರುವಾದವನು ಬಹಳ ಅಪಾಯಕಾರಿ. ಆದ್ದರಿಂದ ಬೌದ್ಧರಿಗಿಂತಲೂ ಇಂತಹ ಮಾಯಾವಾದಿಗಳನ್ನು ಬಹಳಷ್ಟು ದೂರದಲ್ಲಿಡಬೇಕು.

**टीकाक्षरार्थस्तु स्पष्टः ।।**

**।। इति श्रीब्रह्मण्यतीर्थपूज्यश्रीपादशिष्यव्यासतीर्थविरचितायां तात्पर्यचन्द्रिकायाम् अन्तर्याम्यधिकरणं सम्पूर्णम् ।।**

ಟೀಕೆಯಲ್ಲಿರುವ ಕಠಿಣಪದಾರ್ಥಗಳು ಸ್ಪಷ್ಟವಾಗಿರುವುದರಿಂದ ಪ್ರತ್ಯೇಕವಾಗಿ ಬರೆದಿರುವುದಿಲ್ಲ.

ಇಲ್ಲಿಗೆ ತಾತ್ಪರ್ಯಚಂದ್ರಿಕೆಯ ಕನ್ನಡಾನುವಾದದಲ್ಲಿ
ಅಂತರ್ಯಾಮ್ಯಧಿಕರಣವು ಸಂಪೂರ್ಣವಾಯಿತು.

**प्रकाशः –**

एवमधिकरणप्रमेयं परमते निरस्य, मायिमते रामानुजमते च सूत्राक्षारार्थानुपपत्तिमाह – **यच्चेति ।**

ವಿವರಣೆ - ಈ ಹಿಂದೆ ರಾಮಾನುಜರ ಹಾಗೂ ಅದ್ವೈತಿಗಳ ಅಧಿಕರಣ ರಚನೆಯನ್ನು ನಿರಾಕರಿಸಿದ್ದಾಯಿತು. ಪ್ರಕೃತ ಮಾಯಾವಾದಿಗಳ ಹಾಗೂ ರಾಮಾನುಜರ ಸೂತ್ರಾಕ್ಷರಾರ್ಥದಲ್ಲಿರುವ ಅನುಪಪತ್ತಿಯನ್ನು ತೋರಿಸುವುದಕ್ಕಾಗಿ 'ಯಚ್ಚ' ಇತ್ಯಾದಿ ಗ್ರಂಥವು ಹೊರಟಿರುತ್ತದೆ.

**प्रकाशः** – केषाञ्चिदधिकरणशरीरं परमतादनतिभिन्नत्वान्न पृथग्दूषितम् । तथा हि –

ಇನ್ನು ಕೆಲವು ಪರವಾದಿಗಳ ಅಧಿಕರಣಶರೀರವನ್ನು ಗ್ರಂಥಕಾರರು ಪ್ರತ್ಯೇಕವಾಗಿ ದೂಷಿಸಿಲ್ಲ. ಏಕೆಂದರೆ ಅದ್ವೈತಮತಕ್ಕಿಂತ ಹೆಚ್ಚಿನ ವ್ಯತ್ಯಾಸವೇನೂ ಅವರ ಮತದಲ್ಲಿ ಕಾಣಿಸುವುದಿಲ್ಲ. ಅವರ ಅಧಿಕರಣ ಶರೀರ ಹೀಗಿದೆ -

**प्रकाशः** – प्रधानस्य वाक्यशेषोक्तद्रष्टृत्वाद्ययोगेन शङ्कितुमयोग्यत्वात्, अयमन्तर्यामी ऐश्वर्ययोगविशेषनिमित्तप्रकृष्टादृष्टवान् जीवविशेषः परमात्मा वेति सन्देहे,

ವಾಕ್ಯಶೇಷದಲ್ಲಿ ಹೇಳಲ್ಪಟ್ಟಿರುವ ದ್ರಷ್ಟೃತ್ವಾದಿಗಳು ಪ್ರಧಾನದಲ್ಲಿ ಯುಕ್ತವಾಗುವುದಿಲ್ಲ. ಆದ್ದರಿಂದ ಪ್ರಧಾನದಲ್ಲಿ ಅಂತಹ ದ್ರಷ್ಟೃತ್ವಗಳು ಬರುತ್ತವೋ, ಇಲ್ಲವೋ? ಎಂಬ ಶಂಕೆಯೇ ತಪ್ಪಾಗುತ್ತದೆ. ಆದ್ದರಿಂದ ಅಂತರ್ಯಾಮಿಯೆಂದು ಹೇಳಲ್ಪಟ್ಟಿರುವನು ಐಶ್ವರ್ಯಾದಿ ಗುಣವಿಶೇಷನಿಮಿತ್ತಕವಾಗಿ ಅದೃಷ್ಟವಂತನಾದ ಜೀವವಿಶೇಷನೋ, ಅಥವಾ ಪರಮಾತ್ಮನೋ? ಎಂದು ಸಂದೇಹ.

**प्रकाशः** – वाक्यशेषे ''द्रष्टा श्रोता मन्ता'' इति करणजन्यदर्शनश्रवणमननादि-रूपज्ञानवत्त्वश्रवणात् तस्य च जीव एव सम्भवाद् द्रष्टृत्वादेः करणजन्य-ज्ञानपरत्वमनङ्गीकृत्य रूपादिसाक्षात्कारमात्रपरत्वेऽङ्गीक्रियमाणे रूपादिसाक्षात्कारस्य जीवपरयोः साधारण्येन अस्मिन् प्रकरणे ''नान्योऽतोऽस्ति द्रष्टा'' इति द्रष्ट्रन्तरनिषेधायोगात् करणायत्तज्ञानपरत्वात्, जीवस्यैतादृशद्रष्टृत्वेन निषेधायोगात्तद्बलेन ''आत्मनि तिष्ठन् आत्मनोऽन्तरो यमात्मा न वेद'' इत्यात्मस्थित्यन्तरत्वाविदितत्वनियन्तृत्वादेः कथञ्चिन्नेयत्वात् जीवविशेष एवान्तर्यामीति प्राप्ते,

ಪೂರ್ವಪಕ್ಷ - ವಾಕ್ಯಶೇಷದಲ್ಲಿ ದ್ರಷ್ಟಾ, ಶ್ರೋತಾ, ಮಂತಾ ಇತ್ಯಾದಿಯಾಗಿ ಯಾರೋ ಒಬ್ಬನಿಗೆ ಇಂದ್ರಿಯಜನ್ಯವಾದ ದರ್ಶನ, ಶ್ರವಣ, ಮನನ ಇತ್ಯಾದಿ ರೂಪವಾದ ಜ್ಞಾನವಿರುವಿಕೆಯನ್ನು ಹೇಳಲಾಗಿದೆ. ಇಂತಹ ಜ್ಞಾನವತ್ವವು ಜೀವನಲ್ಲೇ ಬರುತ್ತದೆ, ಹೊರತು ಪರಮಾತ್ಮನಲ್ಲಿ ಬರುವುದಿಲ್ಲ. ಒಂದುವೇಳೆ 'ದ್ರಷ್ಟಾ' ಇತ್ಯಾದಿ ಪದಗಳಿಗೆ ಇಂದ್ರಿಯಜನ್ಯಜ್ಞಾನವಿಷಯತ್ವವನ್ನು ಒಪ್ಪದೇ ಕೇವಲ

ರೂಪಾದಿಸಾಕ್ಷಾತ್ಕಾರವುಳ್ಳವನೆಂಬ ಅರ್ಥವನ್ನು ಅಂಗೀಕರಿಸಿದರೆ ರೂಪಾದಿಸಾಕ್ಷಾತ್ಕಾರವು ಜೀವ ಹಾಗೂ ಪರಮಾತ್ಮ ಇಬ್ಬರಲ್ಲಿಯೂ ಸಾಧಾರಣವಾಗಿರುತ್ತದೆ. ಆವಾಗ ಇಬ್ಬರಲ್ಲಿಯೂ ದ್ರಷ್ಟೃತ್ವಾದಿಗಳನ್ನು ಹೇಳಿದಂತಾಗುತ್ತದೆ. ಹೀಗೆ ಹೇಳಿದರೆ ಅದೇ ಪ್ರಕರಣದಲ್ಲಿ "ನಾನ್ಯೋಽತೋಽಸ್ತಿ ದ್ರಷ್ಟಾ" ಎಂಬ ಶ್ರುತಿಯಲ್ಲಿ ಮತ್ತೊಬ್ಬ ದ್ರಷ್ಟೃಪುರುಷವಿಲ್ಲವೆಂದು ನಿಷೇಧ ಮಾಡಿದ್ದು ತಪ್ಪಾಗುತ್ತದೆ. ಅದಕ್ಕೋಸ್ಕರ ಇಂದ್ರಿಯಜನ್ಯಜ್ಞಾನವಿಷಯತ್ವವೆಂಬ ಅರ್ಥವನ್ನೇ 'ದ್ರಷ್ಟಾ' ಇತ್ಯಾದಿ ಪದಗಳಿಗೆ ಹೇಳಬೇಕು. ಜೀವನಲ್ಲಿ ಇಂತಹ ಇಂದ್ರಿಯಜನ್ಯಜ್ಞಾನವು ಇರುವುದರಿಂದ ಅವನು ದ್ರಷ್ಟೃತ್ವವುಳ್ಳವನಾಗಿದ್ದಾನೆ. ಆದ್ದರಿಂದಲೇ "ನಾನ್ಯೋಽತೋಽಸ್ತಿ ದ್ರಷ್ಟಾ" ಎಂಬ ಶ್ರುತಿಯಿಂದ ಜೀವನನ್ನು ನಿಷೇಧಿಸಲು ಸಾಧ್ಯವಿಲ್ಲ. ಈ ಒಂದು ಯುಕ್ತಿಯ ಆಧಾರದಿಂದ "ಆತ್ಮನಿ ತಿಷ್ಠನ್ ಆತ್ಮನೋಽಂತರೋ ಯಮಾತ್ಮಾ ನ ವೇದ" ಇತ್ಯಾದಿ ವಾಕ್ಯಗಳಲ್ಲಿ ಕೇಳಿಸುತ್ತಿರುವ ಆತ್ಮಸ್ಥಿತಿ, ಅಂತರತ್ವ, ಅವಿದಿತತ್ವ ಮತ್ತು ನಿಯಂತೃತ್ವಾದಿಗಳನ್ನು ಜೀವನಲ್ಲಿ ಗೌಣವಾಗಿ ವ್ಯಾಖ್ಯಾನಿಸಬೇಕು. ಹಾಗಾಗಿ ಐಶ್ವರ್ಯಾದಿಗುಣಗಳುಳ್ಳ ಜೀವನೆಂಬ ವಿಶೇಷಪುರುಷನೇ ಅಂತರ್ಯಾಮಿಯೆಂದು ಶ್ರುತಿಪ್ರತಿಪಾದ್ಯನಾಗಿದ್ದಾನೆ.

**प्रकाशः** – "यः पृथिव्यां तिष्ठन्" इत्यादिषु पृथिव्यादिसर्वभूतान्तःप्रवेशसर्वनियमनसर्वशरीरकत्वादितद्धर्मोपदेशात् परमात्मैव । "द्रष्टा" इत्यादिवाक्यशेषस्तु रूपादिसाक्षात्कारमात्रपरो न करणायत्तज्ञानपरः । स च "पश्यत्यचक्षुः स शृणोत्यकर्णः" इत्यादिना परस्यैव । "नान्योऽतोऽस्ति" इति द्रष्ट्रन्तरनिषेधस्तु स्वातन्त्र्येण द्रष्ट्रन्तरनिषेधपर इति सिद्धान्त इति ।

ಸಿದ್ಧಾಂತ - ಪರಮಾತ್ಮನೇ ಅಂತರ್ಯಾಮಿಯಾಗಿದ್ದಾನೆ; ಹೊರತು ಜೀವನಲ್ಲ. ಏಕೆಂದರೆ ಪೃಥಿವಿಯೇ ಮೊದಲಾದ ಸಕಲ ಭೂತಪದಾರ್ಥಗಳ ಒಳಗಡೆ ಪ್ರವೇಶಿಸಿ ಎಲ್ಲವನ್ನೂ ನಿಯಮನ ಮಾಡುತ್ತಾನಾದ್ದರಿಂದ ಪೃಥಿವ್ಯಾದಿಗಳೆಲ್ಲವೂ ಅವನಿಗೆ ಶರೀರವಾಗಿವೆ. ಹೀಗೆ ಭಗವಂತನ ಅನೇಕ ಧರ್ಮಗಳು ಕೇಳಿಸುತ್ತಿರುವುದರಿಂದ ಪರಮಾತ್ಮನೇ ಅಂತರ್ಯಾಮಿಯಾಗಿದ್ದಾನೆ. ಹಾಗಾದರೆ 'ದ್ರಷ್ಟಾ ಶ್ರೋತಾ' ಎಂಬ ಶ್ರುತಿಗೆ ಏನರ್ಥ? ಎಂದು ಪ್ರಶ್ನಿಸಬಾರದು. 'ದ್ರಷ್ಟಾ' ಇತ್ಯಾದಿ ಪದಗಳಿಗೆ ಇಂದ್ರಿಯಜನ್ಯಜ್ಞಾನವುಳ್ಳವನೆಂಬರ್ಥವನ್ನು ಮಾಡಬೇಕಾಗಿಲ್ಲ. ರೂಪಾದಿಸಾಕ್ಷಾತ್ಕಾರವುಳ್ಳವನೆಂಬ ಅರ್ಥವನ್ನಷ್ಟೇ ಮಾಡಬೇಕು. ಇಂತಹ ರೂಪಾದಿಸಾಕ್ಷಾತ್ಕಾರವೂ ಸಹ "ಪಶ್ಯತ್ಯಚಕ್ಷುಃ ಸ ಶೃಣೋತ್ಯಕರ್ಣಃ" ಇತ್ಯಾದಿ ಮಾತುಗಳ ಆಧಾರದಿಂದ ಪರಮಾತ್ಮನಲ್ಲಿ ಯುಕ್ತವಾಗುತ್ತದೆ. ಹಾಗಾದರೆ 'ನಾನ್ಯೋಽತೋಽಸ್ತಿ ದ್ರಷ್ಟಾ' ಮತ್ತೊಬ್ಬ ದ್ರಷ್ಟೃಪುರುಷನಿಲ್ಲವೆಂದು ಶ್ರುತಿಯು ಹೇಗೆ ನಿಷೇಧಮಾಡುತ್ತಿದೆ? ಎಂದರೆ ಸ್ವತಂತ್ರನಾದ, ಪ್ರಧಾನನಾದ ಮತ್ತೊಬ್ಬ ದ್ರಷ್ಟೃಪುರುಷನಿಲ್ಲವೆಂದೇ ಶ್ರುತಿಯ ಅಭಿಪ್ರಾಯ. ಹೀಗೆ ಸಿದ್ಧಾಂತ ಮಾಡಿದ್ದಾರೆ.

ಪರಿಪೂರ್ಣಚಂದ್ರಿಕಾ

**प्रकाशः** – अत्र प्रधानपूर्वपक्षस्य प्रागेव समर्थनेन तत्त्यागोऽयुक्तः । अन्यथा "नच स्मार्तम्" इति प्रधानप्रत्याख्यानायोगः ।

ಇವರು ಪ್ರಧಾನವನ್ನು ಬಿಟ್ಟು ಕೇವಲ ಜೀವನನ್ನು ಪೂರ್ವಪಕ್ಷವಿಷಯವನ್ನಾಗಿ ಸ್ವೀಕರಿಸಿದ್ದೇ ತಪ್ಪು. ಏಕೆಂದರೆ ಈ ಹಿಂದೆ ಪ್ರಧಾನಪೂರ್ವಪಕ್ಷವನ್ನು ಸಮರ್ಥಿಸಿದ್ದರಿಂದ ಇಲ್ಲಿ ಅದನ್ನು ಬಿಡುವುದು ಸರಿಯಲ್ಲ. ಒಂದುವೇಳೆ ಪ್ರಧಾನನ್ನು ಬಿಟ್ಟು ಜೀವನನ್ನು ಮಾತ್ರ ಪೂರ್ವಪಕ್ಷ ಮಾಡಿದರೆ 'ನಚ ಸ್ಮಾರ್ತಮ್' ಎಂಬ ಸೂತ್ರದಲ್ಲಿ ಪ್ರಧಾನವನ್ನು ನಿರಾಕರಿಸಿದ್ದೇ ತಪ್ಪಾದೀತು.

**प्रकाशः** – यदत्रोक्तं श्रुतप्रकाशे – "नच स्मार्तम्" इति दृष्टान्ततयैवोपन्यस्तो न प्राधान्येन अत एव "नच स्मार्तमतद्धर्माभिलापाच्छारीरश्च" इत्येवमन्तमेकं सूत्रमिति,

ಇದಕ್ಕೆ ಶ್ರುತಪ್ರಕಾಶದ ಸಮರ್ಥನೆ ಹೀಗಿದೆ - 'ನಚ ಸ್ಮಾರ್ತಮ್' ಎಂಬ ಸೂತ್ರದಲ್ಲಿ ಪ್ರಧಾನವನ್ನು ನಿರಾಕರಿಸುತ್ತಿಲ್ಲ; ಹೊರತಾಗಿ, ಕೇವಲ ದೃಷ್ಟಾಂತವನ್ನಷ್ಟೇ ಹೇಳಿದ್ದಾರೆ. ಯಾವರೀತಿಯಾಗಿ ಪ್ರಧಾನವು ಅಂತರ್ಯಾಮಿಯಾಗಿಲ್ಲವೋ ಅದರಂತೆ ಜೀವನೂ ಸಹ ಅಂತರ್ಯಾಮಿಯಾಗಿರುವುದಿಲ್ಲ. ಆದ್ದರಿಂದಲೇ "ನಚ ಸ್ಮಾರ್ತಮತದ್ಧರ್ಮಾಭಿಲಾಪಾತ್ ಶಾರೀರಶ್ಚ" ಎಂಬಲ್ಲಿಯ ತನಕ ಒಂದೇ ಸೂತ್ರವೆಂದು ಪರಿಗಣಿಸಬೇಕು. 'ಉಭಯೇಽಪಿ ಹಿ ಭೇದೇನೈನಮಧೀಯತೇ' ಎಂಬುದನ್ನು ಮತ್ತೊಂದು ಸೂತ್ರವೆಂದು ಪರಿಗಣಿಸಬೇಕು.

**प्रकाशः** – तन्न, दृष्टान्तत्वद्योतकाभावात् । अन्यथा "नानुमानमतच्छब्दात्" "प्राणभृच्च" इत्यादावपि तथात्वापत्तिः ।

ಶ್ರುತಪ್ರಕಾಶದ ಈ ಧೋರಣೆ ಸರಿಯಿಲ್ಲ. ಪ್ರಧಾನವನ್ನು ದೃಷ್ಟಾಂತವೆಂದು ಪರಿಗಣಿಸಬೇಕೆಂದರೆ ಸೂತ್ರದಲ್ಲಿ ದೃಷ್ಟಾಂತ ದ್ಯೋತಕವಾದ "ಯಥಾ" ಅಥವಾ "ಇವ" ಇತ್ಯಾದಿ ಶಬ್ದಗಳು ಇರಬೇಕಾಗುತ್ತದೆ. ಅಂತಹ ಪದಗಳೇನೂ ಕಾಣಿಸುತ್ತಿಲ್ಲ. ಆದ್ದರಿಂದ 'ನಚ ಸ್ಮಾರ್ತಮ್' ಎಂಬ ಸೂತ್ರವು ಪ್ರಧಾನವನ್ನು ನೇರವಾಗಿಯೇ ನಿರಾಕರಿಸುತ್ತಿದೆ ಎಂದು ಹೇಳಬೇಕು. ಮತ್ತು 'ನಚ ಸ್ಮಾರ್ತಮತದ್ಧರ್ಮಾಭಿಲಾಪಾತ್' ಎಂಬುದೇ ಬೇರೆ ಸೂತ್ರ. 'ಶಾರೀರಶ್ಚೋಭಯೇಽಪಿ ಹಿ ಭೇದೇನೈನಮಧೀಯತೇ' ಎಂಬುದು ಮತ್ತೊಂದು ಸೂತ್ರವೆಂದು ಹೇಳಬೇಕು. ಹೀಗೊಪ್ಪದಿದ್ದರೆ "ನಾನುಮಾನಮತಶಬ್ದಾತ್" "ಪ್ರಾಣಭೃಚ್ಚ" ಎಂಬುದನ್ನು ಒಂದೇ ಸೂತ್ರವೆಂದು ಪರಿಗಣಿಸಿರಿ. ಅನುಮಾನಶಬ್ದವು ಪ್ರಧಾನದ ದೃಷ್ಟಾಂತವನ್ನು ನೀಡುವ ಮೂಲಕ 'ಪ್ರಾಣಭೃತ್' ಅಂದರೆ ಜೀವನನ್ನು ಅಲ್ಲಗಳೆಯುತ್ತಿದೆ ಎಂದು ವ್ಯಾಖ್ಯಾನಿಸಿರಿ. ಆದರೆ ಆ ಸಂದರ್ಭದಲ್ಲಿ ನೀವೇ ಹಾಗೇ ವ್ಯಾಖ್ಯಾನಿಸಿಲ್ಲ. ಹೀಗಿರುವಾಗ ಒಂದೊಂದು ಕಡೆ ಒಂದೊಂದು ಬಗೆ ಸೂತ್ರಗಳನ್ನು ವ್ಯಾಖ್ಯಾನಿಸುವುದು ಮೂರ್ಖತನವಲ್ಲವೇ?

ಅಂತರ್ಯಾಮ್ಯಧಿಕರಣ (೧-೨-೫)

**प्रकाशः** – दृष्टान्तोपादानस्य वैयर्थ्याच्च । 'नच शारीरः स्मार्तवत्' इत्यादिविन्यासापाताच्च ।

ಮತ್ತು ದೃಷ್ಟಾಂತವನ್ನು ನೀಡುವ ಆವಶ್ಯಕತೆಯೇ ಇಲ್ಲ. ದೃಷ್ಟಾಂತವನ್ನು ಹೇಳದೇ ಜೀವನು ಅಂತರ್ಯಾಮಿಯಾಗಿಲ್ಲ ಎಂದು ಉಪಪಾದಿಸಿದರೆ ಸಾಕು. ಮತ್ತು 'ನಚ ಶಾರೀರಃ ಸ್ಮಾರ್ತವತ್' ಎಂದೇ ಸೂತ್ರದ ವಿನ್ಯಾಸ ಇರಬೇಕಾಗುತ್ತದೆ ಎಂದೂ ಆಪಾದಿಸಲು ಬರುತ್ತದೆ.

**प्रकाशः** – प्रधानशङ्कानुदयादेवं कल्पनमिति चेन्न,

ಆಕ್ಷೇಪ - ಪ್ರಕೃತಿಯು ಅಂತರ್ಯಾಮಿಯಾಗಿರಬಹುದೆಂಬ ಸಂಶಯವೇ ಹುಟ್ಟುವುದಿಲ್ಲ. ಹೀಗಿರುವಾಗ ಪ್ರಕೃತಿಯು ಪೂರ್ವಪಕ್ಷಕ್ಕೆ ವಿಷಯವಾಗಲು ಹೇಗೆ ಅರ್ಹವಾಗುತ್ತದೆ? ಈ ಉದ್ದೇಶಕ್ಕೋಸ್ಕರ ನಾವು ಪ್ರಕೃತಿಯನ್ನು ದೃಷ್ಟಾಂತವೆಂದು ಪರಿಗಣಿಸಿದ್ದೇವೆ.

तच्छङ्कोदयस्य मूल एवोक्तत्वात् । 'शारीरश्च' इति चशब्दास्वारस्याच्च ।

ಸಮಾಧಾನ - ಇದು ತಪ್ಪು. ಪ್ರಕೃತಿಯು ಪೂರ್ವಪಕ್ಷಕ್ಕೆ ವಿಷಯವಾಗುತ್ತದೆಂದು ಮೂಲದಲ್ಲಿಯೇ ನಾವು ಈ ಹಿಂದೆಯೇ ಪ್ರತಿಪಾದಿಸಿದ್ದೇವೆ. ಮತ್ತು 'ಶಾರೀರಶ್ಚ' ಎಂಬ ಸೂತ್ರದಲ್ಲಿ 'ಚ' ಶಬ್ದದಿಂದ ಪ್ರಕೃತಿಯನ್ನು ಸಮಾಕರ್ಷಮಾಡಿರುತ್ತಾರೆ. ಜೀವನೊಬ್ಬನೇ ಪೂರ್ವಪಕ್ಷಕ್ಕೆ ವಿಷಯನಾದರೆ ಈ 'ಚ' ಶಬ್ದವು ಅಸ್ವರಸವಾಗುತ್ತದೆ.

**प्रकाशः** – अस्यापि जीवमात्रनिरासपरत्वे योगविभागायोगेन "अतद्धर्माभिलापात् शारीरश्चोभयेऽपि हि भेदेनैनमधीयते" इत्येकवाक्यतयैव विन्यासः स्यादिति ।

ಮತ್ತು 'ಶಾರೀರಶ್ಚ' ಎಂಬ ಸೂತ್ರವು ಕೇವಲ ಜೀವನನ್ನು ನಿರಾಕರಣೆ ಮಾಡುವುದಾದರೆ ಎರಡು ಸೂತ್ರಗಳು ಬೇಕಾಗಿಲ್ಲ. ಕೇವಲ "ಅತದ್ಧರ್ಮಾಭಿಲಾಪಾತ್ ಶಾರೀರಶ್ಚೋಭಯೇऽಪಿ ಹಿ ಭೇದೇನೈನಮಧೀಯತೇ" ಎಂದು ಒಂದೇ ಸೂತ್ರವನ್ನಾಗಿ ಪರಿಗಣಿಸಿ ಒಂದು ವಾಕ್ಯರೂಪದಲ್ಲಿ ಪದಗಳ ವಿನ್ಯಾಸವಿರಬೇಕಿತ್ತು. ಈ ಎಲ್ಲಾ ಕಾರಣಗಳಿಂದ ಇವರ ಮತವು ಅಯುಕ್ತವಾಗಿದೆ.

**प्रकाशः** – नन्वधिदैवादिचिह्नितेषु वाक्येष्विति विषयसूचनार्थं तदित्युक्तमित्यत आह – **विषयेति** ।

'ಅಧಿದೈವಾದಿಷು' ಎಂಬ ಪದವು ವ್ಯರ್ಥವಾಗುವುದಿಲ್ಲ. 'ಅಧಿದೈವ' ಎಂಬ ಪದದಿಂದ ಕೂಡಿರುವ ವಾಕ್ಯಗಳೆಲ್ಲವೂ ಈ ಅಧಿಕರಣದ ವಿಷಯವಾಕ್ಯಗಳಾಗಿವೆ ಎಂಬುದನ್ನು ಸೂಚಿಸುವುದಕ್ಕೋಸ್ಕರ

ಸಾರ್ಥಕವಾಗಿದೆಯಲ್ಲವೇ? ಎಂಬ ಪ್ರಶ್ನೆಗೆ ಗ್ರಂಥಕಾರರು 'ವಿಷಯವಾಕ್ಯ' ಎಂಬ ಮಾತಿನಿಂದ ಸಮಾಧಾನ ಹೇಳುತ್ತಿದ್ದಾರೆ.

**प्रकाशः** – ननु भवन्मतेऽप्यधिदैवादिप्रकरणेष्विति प्रकरणलक्षकत्वाल्लक्षणादोष इत्यत आह – **वरं हीति** ।

ದ್ವೈತಿಗಳೂ ಸಹ ಅಧಿದೈವಾದಿಪ್ರಕರಣಗಳಲ್ಲಿ ಎಂದು ಅರ್ಥೈಸುವುದರಿಂದ ಅವರಿಗೆ ಅಧಿದೈವಪದಕ್ಕೆ ಪ್ರಕರಣದಲ್ಲಿ ಲಕ್ಷಣಾಮಾಡುವಂತಹ ದೋಷಬರುತ್ತದ್ದಲ್ಲವೇ? ಈ ಆಕ್ಷೇಪಕ್ಕೆ 'ವರಂ ಹಿ' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

**प्रकाशः** – अत एव ''एकादश वै पशोरवादानानि तानि द्विरवद्यति'' इति वाक्यवैयर्थ्यपरिहाराय ''यद्यपि चतुरवर्त्ती यजमानः पञ्चावत्तैव वपा कार्या'' इत्यत्र वपाशब्दे पाशुकहविर्मात्रलक्षणेति स्वीकृतं मीमांसकैरिति भावः ।

ಲಕ್ಷಣಾದೋಷಕ್ಕಿಂತ ವೈಯರ್ಥ್ಯದೋಷವೇ ಬಲಿಷ್ಠವಾಗಿದೆ. ಆದ್ದರಿಂದಲೇ ಪೂರ್ವಮೀಮಾಂಸೆಯಲ್ಲಿ ''ಏಕಾದಶ ವೈ ಪಶೋರವಾದಾನಾನಿ ತಾನಿ ನಿರವದ್ಯತಿ'' ಎಂಬ ವಾಕ್ಯದ ವೈಯರ್ಥ್ಯವನ್ನು ಪರಿಹರಿಸುವುದಕ್ಕಾಗಿ ''ಯದ್ಯಪಿ ಚತುರವರ್ತೀ ಯಜಮಾನಃ ಪಂಚಾವತ್ತೈವ ವಪಾ ಕಾರ್ಯಾ'' ಎಂಬಲ್ಲಿ ವಪಾ ಶಬ್ದಕ್ಕೆ ಪಾಶುಕಹವಿಸ್ಸಿನಲ್ಲಿ ಮಾತ್ರ ಲಕ್ಷಣಾ ಮಾಡಲಾಗಿದೆ. ಇದರಿಂದ ಲಕ್ಷಣಾ ಮಾಡಿದರೂ ಪರವಾಗಿಲ್ಲ. ವ್ಯರ್ಥವಾದ ಪದಗಳನ್ನು ಪ್ರಯೋಗಿಸಬಾರದೆಂದು ಸ್ಪಷ್ಟವಾಗುತ್ತದೆ.

**प्रकाशः** – अत्र सूत्रे एवमपि न वैयर्थ्यानिस्तार इत्यत आह – **एवं हीति** ।

अत्र 'अधिदैवाधिलोकादिषु'' इति पाठः कैश्चित्कल्पित एव न वास्तव इति ध्येयम् ।

ಲಕ್ಷಣಾ ಮಾಡಿದರೆ ವೈಯರ್ಥ್ಯದೋಷಕ್ಕೆ ಅವಕಾಶವಿಲ್ಲ. ಮತ್ತು ಸೂತ್ರದಲ್ಲಿರುವ ಪದಗಳು ಸಾರ್ಥಕವೇ ಆಗುತ್ತವೆಂದು 'ಏವಂ ಹಿ' ಎಂಬ ವಾಕ್ಯದಿಂದ ಪ್ರತಿಪಾದಿಸಿದ್ದಾರೆ. ಅಂದರೆ ಬ್ರಹ್ಮನ ಧರ್ಮಗಳು ಇರುವುದಷ್ಟೇ ಅಲ್ಲ. ಅಭ್ಯಾಸವೆಂಬ ಪ್ರಮಾಣವು ಇರುತ್ತಾದ್ದರಿಂದ ಸಾರ್ಥಕವಾಗಿದೆ. ಕೆಲವರು 'ಅಧಿದೈವಾಧಿಲೋಕಾದಿಷು' ಎಂಬ ಪಾಠವನ್ನು ಸ್ವೀಕರಿಸುತ್ತಾರೆ. ಆದರೆ ಈ ಪಾಠವು ವಾಸ್ತವವಲ್ಲ ಎಂದು ತಿಳಿಯಬೇಕು.

**प्रकाशः** – इत्युक्तमिति । उभाभ्यामिति वर्तते ।

ಅಂತರ್ಯಾಮ್ಯಧಿಕರಣ (೧-೨-೫)

**तस्मादिति** । अत्र समासोपपत्तिस्तु ''अतच्छब्दात्'' इत्यत्र वक्ष्यत इति भावः ।

ಗ್ರಂಥದಲ್ಲಿ 'ಇತ್ಯುಕ್ತಂ' ಎಂದು ಹೇಳಿದ್ದಾರೆ. 'ಉಭಾಭ್ಯಾಮ್' ಎಂಬುದನ್ನು ಶೇಷಪೂರಣ ಮಾಡಿಕೊಳ್ಳಬೇಕು. 'ತಸ್ಮಾತ್' ಎಂಬ ವಾಕ್ಯದ ಅಭಿಪ್ರಾಯ ಹೀಗಿದೆ - ಅದ್ವೈತಿಗಳು 'ಅತದ್ಧರ್ಮಾಭಿಲಾಪಾತ್' ಎಂಬಲ್ಲಿರುವ 'ನಞ್'ಗೆ ವಿರುದ್ಧವೆಂಬ ಅರ್ಥವನ್ನು ಮಾಡುತ್ತಾರೆ. 'ನ ಸುರಾಃ ಅಸುರಾಃ' ಎಂಬಲ್ಲಿರುವ 'ನ್‌ಞ್' ಎಂಬುದು ಹೇಗೆ ವಿರುದ್ಧಾರ್ಥದಲ್ಲಿದೆಯೋ ಅದರಂತೆ 'ಅತದ್ಧರ್ಮಾಭಿಲಾಪಾತ್' ಎಂಬಲ್ಲಿರುವ 'ನ್‌ಞ್' ಪ್ರತ್ಯಯವೂ ಸಹ 'ಪ್ರಕೃತಿಯ ವಿರುದ್ಧಧರ್ಮಗಳು ಹೇಳಲ್ಪಟ್ಟಿರುವುದರಿಂದ' ಎಂಬರ್ಥವನ್ನು ಹೇಳುತ್ತಿದೆ. ಈ ಅರ್ಥದಲ್ಲಿ ಸಮಾಸವಾಗುತ್ತದೆ. ಆದರೆ ನಾವು 'ಅತದ್ಧರ್ಮಾಭಿಲಾಪಾತ್' ಎಂಬಲ್ಲಿರುವ 'ನಞ್'ಗೆ ಅಭಾವವೆಂಬರ್ಥವನ್ನು ಹೇಳುತ್ತೇವೆ. ಅಭಾವಾರ್ಥದಲ್ಲಿ ಸಮಾಸವಾಗುವುದು ಅಷ್ಟು ಸುಲಭವಲ್ಲ. ಆದರೂ ಸಹ ಹೇಗೆ ಸಮಾಸವಾಗಿದೆಯೆಂಬ ವಿಚಾರವನ್ನು 'ಅತಚ್ಛಬ್ದಾತ್' ಎಂಬ ಸೂತ್ರವನ್ನು ವ್ಯಾಖ್ಯಾನಿಸುವಾಗ ವಿವರಿಸುತ್ತೇವೆ ಎಂದು ತಿಳಿಯಬೇಕು.

**प्रकाशः** – तृतीयसूत्रं मायिमते अनुपपन्नमिति वदन् प्रसङ्गादतीतानागतभेदसूत्राणि सर्वाण्यप्ययुक्तानीत्याह – **किञ्चेति** ।

ಮೊದಲೆರಡು ಸೂತ್ರಗಳು ಪರಮತದಲ್ಲಿ ಅಯುಕ್ತವಾಗಿವೆಯೆಂದು ಹೇಳಿದ್ದಾಯಿತು. ಈಗ 'ಶಾರೀರಶ್ಚ' ಇತ್ಯಾದಿ ಮೂರನೆಯ ಸೂತ್ರವೂ ಸಹ ಅದ್ವೈತಮತದಲ್ಲಿ ಅನುಪಪನ್ನವಾಗಿದೆಯೆಂಬುದನ್ನು ಹೇಳುತ್ತಿದ್ದಾರೆ. ಈ ಸಂದರ್ಭದಲ್ಲಿ ಪ್ರಾಸಂಗಿಕವಾಗಿ ಹಿಂದಿನ ಹಾಗೂ ಮುಂದಿನ ಭೇದಪ್ರತಿಪಾದಕ ಸೂತ್ರಗಳನ್ನು ಅದ್ವೈತಿಗಳಿಗೆ ಅಭೇದ ಪರವಾಗಿ ವ್ಯಾಖ್ಯಾನಿಸಲು ಸಾಧ್ಯವಿಲ್ಲವೆಂದು 'ಕಿಂಚ' ಇತ್ಯಾದಿ ವಾಕ್ಯದಿಂದ ಪ್ರತಿಪಾದಿಸುತ್ತಿದ್ದಾರೆ.

**प्रकाशः** – 'भेदप्रतिपादकम्' इत्यस्य 'सूत्रजातम्' इति श्लोकगतेनान्वयः । 'इत्यादि च' इत्यपि तेनैवान्वेति । का कथन्तेत्यत उक्तम् – **अद्वैतदूषकमिति** । मिथ्याभेदपरत्वेन अद्वैताविरोधित्वात् का लज्जाप्रसक्तिरित्यत आह – **यदीति** ।

'ಭೇದಪ್ರತಿಪಾದಕಮ್' ಎಂಬುದಕ್ಕೆ ಶ್ಲೋಕದಲ್ಲಿರುವ 'ಸೂತ್ರಜಾತಮ್' ಎಂಬಲ್ಲಿ ಅನ್ವಯ. 'ಇತ್ಯಾದಿ ಚ' ಎಂಬುದೂ ಸಹ ಅಲ್ಲಿಯೇ ಅನ್ವಯಹೊಂದುತ್ತದೆ. ಅದ್ವೈತಿಗಳು 'ಕಥಂ ವ್ಯಾಕ್ರಿಯತೇ' ಹೇಗೆ ವ್ಯಾಖ್ಯಾನಿಸುತ್ತಾರೆ ? ಎಂದು ಪ್ರಶ್ನಿಸಿದರು. ಅದ್ವೈತಿಗಳು ಎಲ್ಲವನ್ನೂ ವ್ಯಾಖ್ಯಾನಿಸುತ್ತಾರಲ್ಲವೇ? ಎಂದರೆ 'ಅದ್ವೈತದೂಷಕಮ್' ಎಂಬುದರಿಂದ ಉತ್ತರಿಸುತ್ತಿದ್ದಾರೆ. ಹೌದು, ಬೇರೆಯದನ್ನು ವ್ಯಾಖ್ಯಾನಿಸಬಹುದು. ಆದರೆ ಅದ್ವೈತಮತವನ್ನೇ ದೂಷಿಸುವ ಸೂತ್ರಗಳನ್ನೇ ಹೇಗೆ ವ್ಯಾಖ್ಯಾನಿಸುತ್ತೀರಿ? ಎಂದು ಶ್ಲೋಕದ ಅಭಿಪ್ರಾಯ. ಆ ಸೂತ್ರಗಳೆಲ್ಲವೂ ಮಿಥ್ಯಾಭೂತವಾದ ಭೇದವನ್ನು ಪ್ರತಿಪಾದಿಸುತ್ತಿದೆ. ಆದ್ದರಿಂದ ಅದ್ವೈತಕ್ಕೆ

ವಿರುದ್ಧವಾಗಿಲ್ಲ. ಹೀಗಿರುವಾಗ ಅಂತಹ ಸೂತ್ರಗಳನ್ನು ವ್ಯಾಖ್ಯಾನಿಸಲು ನಾಚಿಕೆಯೇಕೆ? ಎಂಬ ಪ್ರಶ್ನೆಗೆ 'ಯದಿ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ.

**प्रकाशः** – ननु यथाऽर्थवादानां मिथ्यार्थावलम्बनेन प्राशस्त्ये तात्पर्यात् प्रामाण्यं, तद्वत् सूत्रादीनि सर्वाणि मिथ्यार्थवादीन्यपि तात्त्विकशुद्धचैतन्यतात्पर्य-विषयोपेतानि भविष्यन्ति, नैवं बौद्धमत इत्यत आह – **बौद्धोऽपीति** ।

'ವಾಯುರ್ವೈ ಕ್ಷೇಪಿಷ್ಠಾ ದೇವತಾ' ಇತ್ಯಾದಿ ಅರ್ಥವಾದ ವಾಕ್ಯಗಳು ಸುಳ್ಳನ್ನೇ ಹೇಳುತ್ತಿವೆ. ಆದರೂ ಶ್ವೇತಪಶುವಿನ ಆಲಂಭವನ್ನೇ ಮಾಡುವುದು ಅತ್ಯಂತ ಪ್ರಶಸ್ತ ಎಂಬ ವಿಷಯದಲ್ಲಿ ಪ್ರಾಶಸ್ತ್ಯವನ್ನು ತಿಳಿಸುವ ಕಾರಣ ಹೇಗೆ ಪ್ರಮಾಣವೇ ಆಗುತ್ತವೋ, ಅದರಂತೆ ಎಲ್ಲ ಭೇದಪ್ರತಿಪಾದಕ ಸೂತ್ರಗಳೂ ಸಹ ಮಿಥ್ಯಾಭೂತವಾದ ಭೇದವನ್ನೇ ಪ್ರತಿಪಾದಿಸಬಹುದು. ಸಾತ್ವಿಕವಾದ ಶುದ್ಧಚೈತನ್ಯನ ಸಮರ್ಥನೆಯಲ್ಲಿ ತಾತ್ಪರ್ಯವನ್ನು ಹೊಂದಿರುವ ಕಾರಣ ಪ್ರಮಾಣವಾಗುತ್ತವೆ. ಈ ಪ್ರಮೇಯವನ್ನು ಬೌದ್ಧರು ಹೇಳುವುದಿಲ್ಲ. ಆದ್ದರಿಂದ ಬೌದ್ಧಮತಕ್ಕೂ ಮಾಯಾವಾದಮತಕ್ಕೂ ವೈಲಕ್ಷಣ್ಯವಿದೆಯಲ್ಲವೇ?

ಈ ಆಕ್ಷೇಪಕ್ಕೆ 'ಬೌದ್ಧೋಽಪಿ' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

**प्रकाशः** – ननु न तस्य तथा वचने तत्त्वावेदकवचनं मानमस्ति, मम तु अस्ति ''सदेव'' इत्यादिकमित्यत आह – **असद्वेत्यादीति** ।

ಬೌದ್ಧರು ಸೂತ್ರವನ್ನು ವ್ಯಾಖ್ಯಾನಿಸಿ ಪಾರಮಾರ್ಥಿಕವಾದ ಶೂನ್ಯವೆಂಬ ತತ್ತ್ವದಲ್ಲಿ ಎಲ್ಲಾ ಸೂತ್ರಗಳಿಗೆ ತಾತ್ಪರ್ಯವಿದೆಯೆಂದು ಅದ್ವೈತಿಗಳಂತೆ ಹೇಳಲು ಸಾಧ್ಯವಿಲ್ಲ. ಹಾಗೇ ಹೇಳಲು ತತ್ತ್ವಾವೇದಕವಾದ ಪ್ರಮಾಣಗಳೇ ಬೌದ್ಧರಲ್ಲಿ ಇರುವುದಿಲ್ಲ. ಆದರೆ ಮಾಯಾವಾದಮತದಲ್ಲಿ 'ಸದೇವ ಸೌಮ್ಯ ಇದಮಗ್ರ ಆಸೀತ್' ಇತ್ಯಾದಿ ಶ್ರುತಿವಾಕ್ಯಗಳು ಪ್ರಮಾಣವಾಗಿವೆ. ಆದ್ದರಿಂದ ಇಬ್ಬರ ಮತದಲ್ಲಿಯೂ ವೈಲಕ್ಷಣ್ಯವಿದೆ.

ಈ ಆಕ್ಷೇಪಕ್ಕೆ 'ಅಸದ್ವಾ' ಇತ್ಯಾದಿ ಶ್ಲೋಕದಿಂದ ಉತ್ತರಿಸುತ್ತಿದ್ದಾರೆ.

**प्रकाशः** – ननु तेन असदर्थकत्वमागमादेरुच्यते, मया तु व्यावहारिकसदर्थकत्वमित्यत आह – **अपौरुषेयेति** ।

ಮಾಯಾವಾದಮತದಂತೆ ಬೌದ್ಧರೂ ಸಹ 'ಅಸದೇವ ಇದಮಗ್ರ ಆಸೀತ್' ಇದರ ಪ್ರಮಾಣವನ್ನು ಆಧಾರವನ್ನಾಗಿ ನೀಡಬಹುದು. ಆಗಮವೆಲ್ಲವೂ ಅಸತ್‌ಪದಾರ್ಥವನ್ನು ಪ್ರತಿಪಾದಿಸುತ್ತದೆಂದು ಬೌದ್ಧರು ಹೇಳುತ್ತಾರೆ. ಆದರೆ ಮಾಯಾವಾದಿಗಳು ವ್ಯಾವಹಾರಿಕವಾದ ಸತ್‌ಪದಾರ್ಥವನ್ನು ಆಗಮಗಳೆಲ್ಲವೂ ಪ್ರತಿಪಾದಿಸುತ್ತವೆಂದು ಹೇಳುತ್ತಾರೆ. ಹೀಗೆ ಇಬ್ಬರಮತದಲ್ಲಿಯೂ ವೈಲಕ್ಷಣ್ಯವಿದೆಯಲ್ಲವೇ? ಎಂಬ ಪ್ರಶ್ನೆಗೆ 'ಅಪೌರುಷೇಯ' ಎಂಬ ಶ್ಲೋಕದಿಂದ ಉತ್ತರಿಸುತ್ತಿದ್ದಾರೆ. ವ್ಯಾವಹಾರಿಕವಾದ ಸತ್‌ಪದಾರ್ಥದ ಪ್ರತಿಪಾದನೆಯಿಂದ ಶುದ್ಧವಾದ ಪ್ರಾಮಾಣ್ಯವು ಸಂತೋಷವನ್ನು ಕೊಡುವುದಿಲ್ಲ ಎಂದರ್ಥ.

ಅಂತರ್ಯಾಮ್ಯಧಿಕರಣ (೧-೨-೫)

**प्रकाशः** – अयुक्तं च मिथ्यार्थकथनमित्याह – **असकृदिति** । तन्मतदूषणस्य फलमाह – **सौगता इति** ।

ಮತ್ತು ಮಿಥ್ಯಾರ್ಥ ಪ್ರತಿಪಾದನೆಯನ್ನು ಹೇಳುವುದೇ ತಪ್ಪು ಎಂಬುದಾಗಿ 'ಅಸಕೃತ್' ಎಂಬ ಮಾತಿನಿಂದ ಹೇಳುತ್ತಿದ್ದಾರೆ. ಹೀಗೆ ಮಾಯಾವಾದ ಮತವನ್ನು ದೂಷಿಸಿದ್ದಕ್ಕೆ ಏನು ಪ್ರಯೋಜನ ? ಎಂಬ ಪ್ರಶ್ನೆಗೆ 'ಸೌಗತಾಃ' ಎಂಬುದರಿಂದ ಉತ್ತರಿಸಿದ್ದಾರೆ. ಬೌದ್ಧರನ್ನು ಹೇಗೆ ಪರಿತ್ಯಾಗ ಮಾಡುತ್ತೇವೆಯೋ ಅದಕ್ಕಿಂತ ಹೆಚ್ಚು ಈ ಮಾಯಾವಾದಿಗಳನ್ನು ಪರಿತ್ಯಾಗ ಮಾಡಬೇಕೆಂಬುದೇ ದೂಷಣೆಯ ಫಲ.

**प्रकाशः** – **'प्रविश्य'** विचार्य । ननु ''अस्मायामेधास्रजो विनिः'' इति मायावीति भाव्यम्, सत्यम्, ''व्रीह्यादिभ्यश्च'' इति इनिप्रत्यये मायीति साधु । **स्पष्ट इति** । उपन्यासमुखेन विवृत इत्यर्थः ।

'ಪ್ರವಿಶ್ಯ' ಎಂಬ ಪದಕ್ಕೆ 'ವಿಚಾರ ಮಾಡಿ' ಎಂದರ್ಥ.

ಶಂಕಾ - ಗ್ರಂಥಕಾರರು 'ಮಾಯೀ' ಎಂಬ ಶಬ್ದವನ್ನು ಪ್ರಯೋಗಿಸಿದ್ದಾರೆ. ವಸ್ತುತಃ 'ಅಸ್ಮಾಯಾಮೇಧಾಸ್ರಜೋ ವಿನಿಃ' ಎಂಬ ಸೂತ್ರದಿಂದ 'ತದಸ್ಯ ಅಸ್ತೀತಿ' ಎಂಬರ್ಥದಲ್ಲಿ ಮಾಯಾಶಬ್ದಕ್ಕೆ 'ವಿನಿ' ಪ್ರತ್ಯಯವು ಬರಬೇಕು. ಆವಾಗ 'ಮಾಯಾವೀ' ಎಂಬ ರೂಪಕ್ಕೆ ಸಾಧುವಾಗುತ್ತದೆ ಹೊರತು, 'ಮಾಯೀ' ಎಂಬ ರೂಪವು ಸಾಧುವಾಗುವುದಿಲ್ಲ.

ಸಮಾಧಾನ - 'ವ್ರೀಹ್ಯಾದಿಭ್ಯಶ್ಚ' ಎಂಬ ಸೂತ್ರದಲ್ಲಿ 'ವ್ರೀಹಿ' ಮೊದಲಾದ ಶಬ್ದಗಳಿಗೆ 'ಇನಿ' ಪ್ರತ್ಯಯವು ಹೇಳಲ್ಪಟ್ಟಿದೆ. 'ಮಾಯಾ' ಶಬ್ದವನ್ನು ಆಕೃತಿಗಣವನ್ನಾಗಿ ಪರಿಗಣಿಸಿದಾಗ 'ವ್ರೀಹಿ' ಮೊದಲಾದ ಶಬ್ದಗಳಂತೆ ಇದಕ್ಕೂ ಸಹ 'ತದಸ್ಯ ಅಸ್ತಿ' ಎಂಬರ್ಥದಲ್ಲಿ 'ಇನಿ' ಪ್ರತ್ಯಯವು ಬರುತ್ತದೆ. ಇನಿ ಪ್ರತ್ಯಯ ಬಂದರೆ 'ಮಾಯೀ' ಎಂಬ ರೂಪವು ಸಾಧುವಾಗುತ್ತದೆ.

'ಸ್ಪಷ್ಟಃ' ಎಂಬ ಶಬ್ದಕ್ಕೆ ಈ ಹಿಂದೆ ಉಪನ್ಯಾಸರೂಪದಲ್ಲಿ ಟೀಕೆಯನ್ನು ವ್ಯಾಖ್ಯಾನಿಸುವಾಗಲೇ ವಿವರಿಸಿದ್ದಾಗಿದೆ ಎಂದರ್ಥ.

**प्रकाशः** – एतेन अत्रान्तर्यामी नारायणश्चतुर्मुखो वेति पूर्वपक्षं कृत्वा, अधिदैवादिषु श्रूयमाणोऽन्तर्यामी शिव एव, सर्वान्तरत्वरूपधर्मस्याथर्वशिरसि ''ते देवा रुद्रमपृच्छन्' इति प्रस्तुतरुद्रनिष्ठतया ''सोऽन्तरादन्तरं प्राविशत्'' इति श्रवणादिति केनचित्प्रलपितं प्रत्युक्तं,

ಶೈವಮತ ನಿರಾಕರಣೆ - ಹೀಗೆ ಮಾಯಾವಾದ ಮತವನ್ನು ನಿರಾಕರಿಸಿದ್ದರಿಂದ, ಶೈವಮತವನ್ನೂ ಸಹ ನಿರಾಕರಿಸಿದಂತಾಯಿತು.

ಪರಿಪೂರ್ಣಚಂದ್ರಿಕಾ

ಶೈವರ ಅಧಿಕರಣ ರಚನೆ ಹೀಗಿದೆ - ಅಂತರ್ಯಾಮಿಯೆಂದು ಪ್ರತಿಪಾದ್ಯನಾದವನು ನಾರಾಯಣನೋ, ಅಥವಾ ಚತುರ್ಮುಖನೋ, ಅಥವಾ ಶಿವನೋ ? ಎಂದು ಸಂಶಯ. ನಾರಾಯಣ ಅಥವಾ ಚತುರ್ಮುಖಬ್ರಹ್ಮನು ಅಂತರ್ಯಾಮಿಯೆಂದು ಪೂರ್ವಪಕ್ಷ.

ಅಧಿದೈವಾದಿ ಪ್ರಕರಣದಲ್ಲಿ ಅಂತರ್ಯಾಮಿಯೆಂದು ಶ್ರುತನಾದವನು ಶಿವನಾಗಿದ್ದಾನೆ ಹೊರತು, ನಾರಾಯಣನಾಗಲೀ, ಚತುರ್ಮುಖನಾಗಲೀ ಅಲ್ಲ. ಏಕೆಂದರೆ "ಸೋಽಂತರಾದಂತರಂ ಪ್ರಾವಿಶತ್" ಎಂಬುದಾಗಿ ಶಿವನೇ ಅಂತರ್ಯಾಮಿಯಾಗಿ ಪ್ರವೇಶಿಸಿದ್ದಾನೆಂದು ಶ್ರುತಿಯು ಹೇಳುತ್ತಿದೆ. ಇಲ್ಲಿರುವ 'ಸಃ' ಎಂಬ ಪದವು ರುದ್ರನನ್ನೇ ಹೇಳುತ್ತದೆಂದು ಹೇಗೆ ನಿಶ್ಚಯಿಸುತ್ತೀರಿ? ಎಂದರೆ ಹಿಂದೆ 'ತೇ ದೇವಾ ರುದ್ರಮಪೃಚ್ಛನ್' ಎಂಬುದಾಗಿ ರುದ್ರನೇ ಸರ್ವಾಂತರತ್ವಧರ್ಮದಿಂದ ಕೂಡಿದವನಾಗಿ ಪ್ರಸಕ್ತನಾಗಿದ್ದಾನೆ. ಹಿಂದೆ ಪ್ರಸಕ್ತನಾದ ರುದ್ರನನ್ನೇ ಇಲ್ಲಿರುವ 'ಸಃ' ಎಂಬ ಪದದಿಂದ ವಿವಕ್ಷಿಸಬೇಕು.

ಶೈವರ ಈ ಜೊಳ್ಳುಮಾತುಗಳಿಗೆ ಅರ್ಥವೇ ಇಲ್ಲ.

**प्रकाशः** – सूत्रोपात्तप्रधानपक्षत्यागायोगात् । "दिव्यो देव एको नारायणः" इति मूलोक्तसमाख्याविरोधेन, तत्र तत्र भाष्योदाहृतानेकवचनविरोधेन च शिवान्तर्यामित्वस्य बाधितत्वाच्च ।

ಏಕೆಂದರೆ ಸೂತ್ರದಲ್ಲಿ ಪ್ರಧಾನವೇ ಅಂತರ್ಯಾಮಿಯೆಂಬ ಪೂರ್ವಪಕ್ಷವನ್ನು ನಿರಾಕರಿಸಿರುವಾಗ ನಾರಾಯಣನೆಂಬ ಅಥವಾ ಚತುರ್ಮುಖನೆಂಬ ಪೂರ್ವಪಕ್ಷವನ್ನು ಮಾಡುವುದು ಬಹಳ ತಪ್ಪಾಗುತ್ತದೆ. ಮತ್ತು 'ದಿವ್ಯೋ ದೇವ ಏಕೋ ನಾರಾಯಣಃ' ಎಂಬುದಾಗಿ ಸಮಾಖ್ಯಾಪ್ರಮಾಣದಿಂದ ವಿರೋಧ ಬರುತ್ತದೆ. ಮತ್ತು ಅನೇಕ ಕಡೆ ಅಲ್ಲಲ್ಲಿ ಭಾಷ್ಯದಲ್ಲಿ ಉದಾಹರಿಸಲ್ಪಟ್ಟ ವಿಷ್ಣುವಿಷಯಕವಾದ ಅನೇಕ ವಾಕ್ಯಗಳ ವಿರೋಧವೂ ಸಹ ಈ ಶೈವರಿಗೆ ಬರುತ್ತದೆ. ಆದ್ದರಿಂದ ಆ ಎಲ್ಲಾ ಪ್ರಮಾಣಗಳಿಂದ ಶಿವನೇ ಅಂತರ್ಯಾಮಿಯಾಗಿದ್ದಾನೆ ಎಂಬ ಮಾತಿಗೆ ಬಾಧದೋಷ ಬರುತ್ತದೆ.

**प्रकाशः** – "सोऽन्तरादन्तरं प्राविशत्" इति अथर्वशिरोवाक्येऽपि न शिवस्यान्तर्यामित्वमुच्यते, किन्तु 'सः' इति प्राक् प्रकृतरुद्रान्तर्यामिणं नारायणमेव परामृश्य "अन्तरादन्तरं प्राविशद्दिशश्चैवान्तरा" इति नारायणस्यैवान्तर्यामित्वमुच्यते।

ಮತ್ತು "ಸೋಽಂತರಾದಂತರಂ ಪ್ರಾವಿಶತ್" ಎಂಬ ಅಥರ್ವಶಿರೋವಾಕ್ಯದಲ್ಲಿಯೂ ಶಿವನಿಗೆ ಅಂತರ್ಯಾಮಿತ್ವವನ್ನು ಹೇಳಿರುವುದಿಲ್ಲ. ಹೊರತಾಗಿ 'ಸಃ' ಎಂಬ ಪದವು ಹಿಂದೆ ಪ್ರಕೃತನಾದ ರುದ್ರನ ಅಂತರ್ಯಾಮಿಯಾದ ನಾರಾಯಣನನ್ನೇ ಪರಾಮರ್ಶೆ ಮಾಡುತ್ತದೆ. ಅಂತಹ ನಾರಾಯಣನು ಎಲ್ಲರಲ್ಲಿಯೂ ಪ್ರವೇಶಿಸಿದನು ಎಂಬುದಾಗಿ ನಾರಾಯಣನ ಅಂತರ್ಯಾಮಿತ್ವವನ್ನೇ ಈ ಶ್ರುತಿಯಲ್ಲಿ ಹೇಳಲಾಗಿದೆ.

ಅಂತರ್ಯಾಮ್ಯಧಿಕರಣ (೧-೨-೫)

**प्रकाशः** – ''विश प्रवेशने'' इतिधातुनिष्पन्नविष्णुशब्दार्थस्य ''सर्वा दिशो विष्टोऽस्मि'' इत्यैतरेयभाष्योक्तदिशा 'प्राविशत्' इत्यनेन ज्ञापनाच्च । अन्यथा –

'अन्तर्बहिश्च तत्सर्वं व्याप्य नारायणः स्थितः ।'

इत्यादिविरोधापत्तेः ।

ವಿಚಾರ ಮಾಡಿದರೆ 'ವಿಷ್ಣು' ಎಂಬ ಪದವು 'ವಿಶಪ್ರವೇಶನೇ' ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. ಈ ವಿಷ್ಣುಶಬ್ದದ ಅರ್ಥವನ್ನೇ ''ಸರ್ವಾ ದಿಶೋ ವಿಷ್ಟೋಽಸ್ಮಿ'' ಎಂಬ ಐತರೇಯ ಭಾಷ್ಯದ ಪ್ರಕಾರ 'ಪ್ರಾವಿಶತ್' ಎಂಬ ಪದವು ಹೇಳುತ್ತಿದೆ. ವಿಷ್ಣು ಶಬ್ದಾರ್ಥವನ್ನೇ 'ಪ್ರಾವಿಶತ್' ಎಂಬ ಪದವು ಹೇಳುತ್ತಿರುವುದರಿಂದ 'ಸೋಽಂತರಾತ್' ಎಂಬ ಪದವು ವಿಷ್ಣುಪರವೇ ಆಗಬೇಕು ಹೊರತು, ಶಿವಪರವಾಗುವುದಿಲ್ಲ. ಹೀಗೆ ಹೇಳದಿದ್ದರೆ - 'ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ' ಎಂಬ ವಾಕ್ಯದ ವಿರೋಧ ಬರಬೇಕಾದೀತು.

**प्रकाशः** – विस्तरस्तु गुरुपादकृतपरतत्त्वप्रकाशिकायां ध्येयः । सूत्रास्वारस्यं च रामानुजमत इव ज्ञेयम् ।

**इति श्रीमत्सर्वतन्त्रस्वतन्त्रसुधीन्द्रतीर्थगुरुपादशिष्यराघवेन्द्रयतिकृते चन्द्रिकाप्रकाशे अन्तर्याम्यधिकरणम् सम्पूर्णम् ॥**

ಶೈವಮತಖಂಡನೆಯ ಇನ್ನೂ ಹೆಚ್ಚಿನ ವಿಚಾರವನ್ನು ಗುರುಗಳು ರಚಿಸಿರುವ ಪರತತ್ತ್ವಪ್ರಕಾಶಿಕೆಯನ್ನು ಓದಿ ತಿಳಿದುಕೊಳ್ಳಬೇಕು. ಇವರ ಮತದಲ್ಲಿರುವ ಸೂತ್ರಗಳ ಅಸ್ವಾರಸ್ಯವನ್ನು ರಾಮಾನುಜಮತದಂತೆ ತಿಳಿದುಕೊಳ್ಳಬೇಕು.

ಇಲ್ಲಿಗೆ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ ಪ್ರಕಾಶಟಿಪ್ಪಣಿಯ ಕನ್ನಡಾನುವಾದದಲ್ಲಿ ಅಂತರ್ಯಾಮ್ಯಧಿಕರಣವು ಮುಕ್ತಾಯವಾಯಿತು.

* * * * * * *

ಶ್ರೀಕೃಷ್ಣಾರ್ಪಣಮಸ್ತು.

**गुरुराजीयम्** – ननु च भवत्पक्षेऽपि 'अधिदेवादिषु' इत्यस्य यथाश्रुतस्यानन्वयः । 'प्रकरणेषु' इत्युक्तावपि लक्षणा स्यादित्यत आह – **वरं हीति** ।। लक्षणाप्रयोजकं प्रयोजनं चाह – **एवं हीति** ।।

।। इति श्रीकेशवभट्टारकेण विरचितायां भावदीपिकायाम्
अन्तर्याम्याधिकरणं सम्पूर्णम् ।। ५ ।।




ಅದ್ವೈತಿಗಳ ಅಧಿಕರಣ ಶರೀರ ಹೀಗಿದೆ - ಬೃಹದಾರಣ್ಯಕೋಪನಿಷತ್ತಿನಲ್ಲಿ 'ಯಃ ಪೃಥಿವ್ಯಾನ್ ತಿಷ್ಠನ್' ಇತ್ಯಾದಿ ವಾಕ್ಯವನ್ನೇ ವಿಷಯವೆನ್ನುತ್ತಾರೆ. ಜೀವನಾಗಲೀ ಅಥವಾ ಯಾರಾದರೂ ಒಬ್ಬ ಯೋಗಿಯಾಗಲೀ, ಪೃಥಿವ್ಯಾದಿ ಲೋಕಗಳ ಅಂತರ್ಯಾಮಿಯಾಗಿರಬಹುದು. ಬ್ರಹ್ಮನಿಗೆ ಶರೀರವಿಲ್ಲದ ಕಾರಣ ಅಂತರ್ಯಾಮಿಯೆನಿಸಲಾರನೆಂದು ಪೂರ್ವಪಕ್ಷ.

ಸಕಲ ಪ್ರಪಂಚವನ್ನೇ ಶರೀರವನ್ನಾಗಿ ಹೊಂದಿರುವ ಅಚಿಂತ್ಯವಾದ ಮಾಯಾಶಕ್ತಿಯನ್ನು ಪಡೆದಿರುವ ಬ್ರಹ್ಮನಿಗೆ ಶರೀರವಿಲ್ಲದಿದ್ದರೂ ಪ್ರಪಂಚವನ್ನು ನಿಯಮನ ಮಾಡುವ ಸಾಮರ್ಥ್ಯವಿದೆ. ಜೀವಾತ್ಮನಿಗೂ, ಪರಮಾತ್ಮನಿಗೂ ಅಭೇದವಿರುವುದರಿಂದ ಇವನಿಗೆ ಇನ್ನೊಬ್ಬ ನಿಯಾಮಕನ ಅವಶ್ಯಕತೆಯಿರುವುದಿಲ್ಲ. ಮತ್ತು ಅದೇ ಪ್ರಕರಣದಲ್ಲಿ ಆತ್ಮತ್ವ, ಅಮೃತತ್ವ ಮೊದಲಾದ ಧರ್ಮಗಳು ಅದೃಶ್ಯತ್ವಾದಿ ಧರ್ಮಗಳೂ ಸಹ ಕೇಳಿಸುತ್ತಿವೆ. ಇವೆಲ್ಲವೂ ಬ್ರಹ್ಮನ ಅಸಾಧಾರಣ ಧರ್ಮಗಳಾದ್ದರಿಂದ ಬ್ರಹ್ಮನೇ ಅಂತರ್ಯಾಮಿಯಾಗಿದ್ದಾನೆ ಹೊರತು ಜೀವನಲ್ಲವೆಂದು ಸಿದ್ಧಾಂತ. ಅದ್ವೈತಿಗಳ ಈ ಅಧಿಕರಣ ಶರೀರವು ಅಯುಕ್ತವಾಗಿದೆ. 'ಯಃ ಆತ್ಮನೀ ತಿಷ್ಠನ್' ಇತ್ಯಾದಿ ಶ್ರುತಿಗಳಲ್ಲಿ ಜೀವನಿಗೂ ಸಹ ಪರಮಾತ್ಮನು ನಿಯಾಮಕನಾಗಿದ್ದಾನೆಂದು ಹೇಳಲ್ಪಟ್ಟಿದೆ. ಅವರಿಬ್ಬರಿಗೂ ಐಕ್ಯವಿದ್ದಲ್ಲಿ ನಿಯಮ್ಯನಿಯಾಮಕಭಾವವು ಹೇಗೆ ಉಪಪನ್ನವಾಗುತ್ತದೆ? ಕಾಲ್ಪನಿಕ ಭೇದವನ್ನು ಒಪ್ಪುವುದಾದರೆ ಈಶ್ವರನಿಗೂ ಸಹ ಮತ್ತೊಬ್ಬ ನಿಯಾಮಕನಿರಬಹುದಲ್ಲವೇ? ಈಶ್ವರನು ಸ್ವತಂತ್ರನಾದ್ದರಿಂದ ಮತ್ತೊಬ್ಬ ನಿಯಾಮಕನ ಅವಶ್ಯಕತೆಯಿಲ್ಲವೆಂದು ಕೊನೆಯಲ್ಲಿ ಉತ್ತರಿಸುವುದಾದರೆ, ಮೊದಲೇ ಈ ಉತ್ತರವನ್ನು ಹೇಳಿ ಏಕೆ ಜಾಣತನವನ್ನು ತೋರಿಸಲಿಲ್ಲ?

'ನಚ ಸ್ಮಾರ್ತಮತದ್ಧರ್ಮಾಭಿಲಾಪಾತ್' ಎಂಬ ಎರಡನೆಯ ಸೂತ್ರಕ್ಕೆ ಅದ್ವೈತಿಗಳ ವ್ಯಾಖ್ಯಾನ ಹೀಗಿದೆ - ಈ ಪ್ರಕರಣದಲ್ಲಿ ಹೇಳಲ್ಪಟ್ಟ ಅದೃಶ್ಯತ್ವವು ಅಂತರ್ಯಾಮಿಯಲ್ಲಿ ಕೂಡುವುದಿಲ್ಲ. ದ್ರಷ್ಟೃತ್ವ, ಆತ್ಮತ್ವ ಮೊದಲಾದ

ಧರ್ಮಗಳು ಪ್ರಕೃತಿಯಲ್ಲಿ ಕೂಡುವುದಿಲ್ಲ ಎಂದು ವ್ಯಾಖ್ಯಾನಿಸುತ್ತಾರೆ. 'ಶಾರೀರಶ್ಚೋಭಯೇಽಪಿ ಹಿ ಭೇದೇನೈವ ಮಧೀಯತೇ' ಎಂಬ ಮೂರನೆಯ ಸೂತ್ರ ವ್ಯಾಖ್ಯಾನ ಹೀಗಿದೆ - ಕಾಣ್ವಮಾಧ್ಯಂದಿನ ಶಾಖೆಗಳಲ್ಲಿ ಹೇಳಲ್ಪಟ್ಟ ಭೇದವು ಸತ್ಯವಲ್ಲ. ಜೀವಬ್ರಹ್ಮರಿಗೆ ಐಕ್ಯವೇ ಇದೆ. ಆದ್ದರಿಂದ ಇವರಿಬ್ಬರಿಗೂ ನಿಯಮ್ಯನಿಯಾಮಕಭಾವವನ್ನಾಗಲೀ ಅದರಿಂದ ಭೇದದ ಸಮರ್ಥನೆಯಾಗಲೀ ಮಾಡಲು ಸಾಧ್ಯವಿಲ್ಲ. ಅದ್ವೈತಿಗಳ ಎರಡನೆಯ ಸೂತ್ರವು ಪ್ರಥಮಸೂತ್ರದಲ್ಲಿರುವ 'ತದ್ಧರ್ಮವ್ಯಪದೇಶಾತ್' ಎಂಬ ಭಾಗದಿಂದಲೇ ಪುನರುಕ್ತವಾಗಿದೆ. ಮೂರನೆಯ ಸೂತ್ರದಲ್ಲಿ ನಿಯಮ್ಯನಿಯಾಮಕರಿಗೆ ಭೇದವೇ ಸ್ಪಷ್ಟವಾಗಿ ಕೇಳಿಸುತ್ತಿರುವಾಗ ಆ ಭೇದವನ್ನು ಕಲ್ಪಿತವೆಂದು ಹೇಳುವುದು ಮೂರ್ಖತನ.

ರಾಮಾನುಜ ಭಾಷ್ಯದಲ್ಲಿ ಜೀವನೇ ಅಂತರ್ಯಾಮಿಯೆಂದು ಪೂರ್ವಪಕ್ಷ. ಸಕಲ ಲೋಕ ನಿಯಂತೃತ್ವ ಎಂಬ ಧರ್ಮದಿಂದ ಪರಮಾತ್ಮನೇ ನಿಯಾಮಕನಾದ ಅಂತರ್ಯಾಮಿಯೆಂದು ಸಿದ್ಧಾಂತ.

ಇವರ ಮತವೂ ಸಹ ಯುಕ್ತವಾಗಿದೆ. ಅದ್ವೈತ ಮತದಲ್ಲಿ ಹಾಗೂ ವಿಶಿಷ್ಟಾದ್ವೈತ ಮತದಲ್ಲಿ ಅಧಿದೈವಾದಿಷು ಎಂಬ ಪದವು ವ್ಯರ್ಥವಾಗುತ್ತದೆ. ಆದರೆ ದ್ವೈತದರ್ಶನದಲ್ಲಿ 'ಅಧಿದೈವಾದಿಷು ತದ್ಧರ್ಮವ್ಯಪದೇಶಾತ್' ಎಂಬುದಾಗಿ 'ಅಧಿದೈವಾದಿಷು' ಎಂಬ ಪದವನ್ನು ಸಾಧ್ಯದಲ್ಲಿ ಸೇರದೆ ಹೇತುವಿನಲ್ಲಿ ಸೇರಿರುವ ಕಾರಣ ಅಂತರ್ಯಾಮಿಯೆಂದು ಉಕ್ತನಾದವನು ವಿಷ್ಣುವೇ ಆಗಿದ್ದಾನೆ.



• • • • •

# ಅಂತರ್ಯಾಮ್ಯಧಿಕರಣ

(೧-೨-೫)

## ಭಾಗ -೩

ನ್ಯಾಯವಿವರಣ, ನ್ಯಾಯವಿವರಣಪಂಚಿಕಾ,
ಅಣುಭಾಷ್ಯ, ತತ್ವಮಂಜರೀ,
ತಂತ್ರದೀಪಿಕಾ, ನ್ಯಾಯಮುಕ್ತಾವಳಿ ಗ್ರಂಥಗಳ
ಸರಳ ಕನ್ನಡ ಅನುವಾದ

* * *

ಸೂತ್ರಾರ್ಥರತ್ನಾವಳಿ ಗ್ರಂಥದ ಸಂಸ್ಕೃತ ಮೂಲ

॥ ಶ್ರೀಗುರುಭ್ಯೋ ನಮಃ ॥

श्रीमदानन्दतीर्थभगवत्पादाचार्यविरचितम्

# न्यायविवरणम्

श्री जयतीर्थविरचिता

# न्यायविवरणपञ्चिका

## अन्तर्याम्यधिकरणम् (१।२।५)

**पृथिव्यादिशरीरत्वं च न निरवकाशम् । यौगिकशरीरत्वोपपत्तेर्विष्णोरपि ॥५॥**

ಅಂತರ್ಯಾಮಿಯು ವಿಷ್ಣುವಲ್ಲವೆನ್ನಲು ಪೃಥಿವ್ಯಾದಿಶರೀರತ್ವವು ನಿರವಕಾಶಲಿಂಗ-ವಾಗಿದೆಯೆಂದು ಪೂರ್ವಪಕ್ಷ.

ಶರೀರಶಬ್ದಕ್ಕೆ ಯೌಗಿಕಾರ್ಥವನ್ನು ಸ್ವೀಕರಿಸಿದಾಗ ಪೃಥಿವ್ಯಾದಿಶರೀರತ್ವವೆಂಬ ಲಿಂಗವು ವಿಷ್ಣುವಿನಲ್ಲಿ ಸಾವಕಾಶವಾಗಿದೆಯೆಂದು ಸಿದ್ಧಾಂತ.

**टीका – ॐ अन्तर्याम्यधिदैवादिषु तद्धर्मव्यपदेशात् ॐ ॥ निरवकाशेनामृतत्वादिनाऽक्षिस्थो हरिरेवेति प्रतिपादितेऽपि अन्तर्यामी विष्णोरन्य एव स्यात् । पृथिव्यादिशरीरस्य तत्रावकाशाभावादित्याशङ्कायामाह – पृथिव्यादीति ॥**

ಹಿಂದಿನ ಅಧಿಕರಣದಲ್ಲಿ ಅಮೃತತ್ವ ಮೊದಲಾದ ನಿರವಕಾಶಲಿಂಗಗಳ ಬಲದಿಂದ ಚಕ್ಷುರಿಂದ್ರಿಯದಲ್ಲಿರುವವನು ಶ್ರೀಹರಿಯೇ ಆಗಿದ್ದಾನೆಂದು ಪ್ರತಿಪಾದಿಸಲಾಯಿತು. ಆದರೆ ಅಂತರ್ಯಾಮಿಯಾದವನು ವಿಷ್ಣುವಿಗಿಂತ ಭಿನ್ನನಾದ ವ್ಯಕ್ತಿಯೇ ಆಗಬೇಕು. ಏಕೆಂದರೆ ಅಂತರ್ಯಾಮಿ ಪ್ರಕರಣದಲ್ಲಿ ಪೃಥಿವೀ ಮೊದಲಾದವುಗಳು ಯಾರಿಗೆ ಶರೀರವಾಗಿವೆಯೋ ಅವನೇ ಎಲ್ಲರಲ್ಲೂ ಅಂತರ್ಯಾಮಿಯಾಗಿದ್ದಾನೆಂದು ಹೇಳಲಾಗಿದೆ. ಈ ಪೃಥಿವ್ಯಾದಿಶರೀರತ್ವವೆಂಬ ಲಿಂಗವು ನಿರವಕಾಶವಾದ್ದರಿಂದ ವಿಷ್ಣುವನ್ನು ಅಂತರ್ಯಾಮಿಯೆಂದು ಹೇಗೆ ಹೇಳುತ್ತೀರಿ?

ಈ ಆಕ್ಷೇಪಕ್ಕೆ "ಪೃಥಿವ್ಯಾದಿಶರೀರತ್ವಂ" ಎಂಬ ಮಾತಿನಿಂದ ಉತ್ತರಿಸುತ್ತಿದ್ದಾರೆ. ಪೃಥಿವ್ಯಾದಿಶರೀರತ್ವವು ನಿರವಕಾಶವಾಗಿಲ್ಲ.

**कुतो न? इत्यत आह – यौगिकेति ।। अशरीरस्यापि विष्णोः 'शीर्यते नित्यमेवास्मात्' इत्युक्तरीत्या पृथिव्यादिना योगवृत्तिसिद्धशरीरशब्दवाच्यत्व-सम्भवादित्यर्थः ।**

ಏಕೆ ನಿರವಕಾಶವಾಗಿಲ್ಲ? ಎಂಬ ಪ್ರಶ್ನೆಗೆ ''ಯೌಗಿಕ'' ಇತ್ಯಾದಿ ಮಾತುಗಳಿಂದ ಉತ್ತರಿಸುತ್ತಿದ್ದಾರೆ. ವಸ್ತುತಃ ಪೃಥಿವೀ ಮೊದಲಾದ ಭೂತಪದಾರ್ಥಗಳು ವಿಷ್ಣುವಿಗೆ ಶರೀರವಾಗಿಲ್ಲ. ಆದರೂ ಸಹ 'ಶೀರ್ಯತೇ ನಿತ್ಯಮೇವಾಸ್ಮಾತ್' ಎಂಬ ಅರ್ಥವನ್ನು ವಿವಕ್ಷಿಸಿದಾಗ ಪೃಥಿವ್ಯಾದಿಗಳು ಭಗವಂತನ ಶರೀರವಾಗಬಹುದು. ಅಂದರೆ ಯಾರ ದೆಸೆಯಿಂದ ಪೃಥಿವ್ಯಾದಿಗಳು ನಿತ್ಯವಾಗಿ ನಾಶವನ್ನು ಹೊಂದುತ್ತವೋ ಅಂತಹವನು ಶರೀರೀ ಎನಿಸಿದ್ದಾನೆ. ಹೀಗೆ ಯೋಗವೃತ್ತಿಯಿಂದ ಸಿದ್ಧವಾದ ಶರೀರಶಬ್ದವಾಚ್ಯತ್ವವನ್ನು ವಿಷ್ಣುವಿನಲ್ಲಿ ಕೂಡಿಸಬಹುದು.

**योगवृत्त्या विष्णुं प्रति शरीरशब्दवाच्यानीति यावत् । अविदितत्वादिबलेन प्रथमप्राप्ताया अपि रूढेः परित्यागोपपत्तेरिति ।।**

ಪೃಥಿವೀ ಮೊದಲಾದವುಗಳು ವಿಷ್ಣುವಿಗೆ ಯೌಗಿಕಾರ್ಥವನ್ನು ವಿವಕ್ಷಿಸಿದಾಗ ಶರೀರವಾಗುತ್ತವೆ. ಎಂದು ತಿಳಿಯಬೇಕು. ಯೋಗಕ್ಕಿಂತ ರೂಢಿಯು ಪ್ರಬಲವಾದ್ದರಿಂದ ವಿಷ್ಣುವಿನಲ್ಲಿ ಯೌಗಿಕಾರ್ಥವನ್ನು ವಿವಕ್ಷಿಸುವುದು ತಪ್ಪಲ್ಲವೇ ಎಂದು ಪ್ರಶ್ನಿಸಬಾರದು. ಅವಿದಿತತ್ವವೇ ಮೊದಲಾದ ವಿಷ್ಣುವಿನ ಲಿಂಗಗಳು ಕೇಳಿಸುತ್ತಿವೆ. ಇವುಗಳ ಬಲದಿಂದ ಮೊದಲು ಪ್ರಾಪ್ತವಾದ ರೂಢಿಯನ್ನು ಬಿಟ್ಟು ಯೌಗಿಕಾರ್ಥವನ್ನು ಸ್ವೀಕರಿಸುವುದು ಸಮಂಜಸವಾಗುತ್ತದೆ.

ಶ್ರೀಜಯತೀರ್ಥಭಿಕ್ಷುಗಳಿಂದ ರಚಿತವಾದ ನ್ಯಾಯವಿವರಣೆಯ ಟೀಕೆಯ

ಕನ್ನಡಾನುವಾದದಲ್ಲಿ ಅಂತರ್ಯಾಮ್ಯಧಿಕರಣವು ಸಮಾಪ್ತವಾಯಿತು.

****

श्रीमदानन्दतीर्थभगवत्पादाचार्यविरचितम्

# अणुभाष्यम्

## अन्तर्याम्यधिकरणम् (१।२।५)

**नियन्ता**

ಅಣುಭಾಷ್ಯ - ಪೃಥಿವ್ಯಾದಿಗಳಲ್ಲಿದ್ದು ನಿಯಮನ ಮಾಡುವವನು ಮಹಾವಿಷ್ಣುವೇ ಆಗಿದ್ದಾನೆ.

***

श्री आनन्दतीर्थभगवत्पादाचार्यविरचितम्

ब्रह्मसूत्राणुभाष्यम्

श्रीराघवेन्द्रतीर्थविरचिता

ब्रह्मसूत्राणुभाष्यविवृतिः

# तत्वमञ्जरी

## अन्तर्याम्यधिकरणम् (१।२।५)

नन्वक्ष्यन्तस्स्थो नियन्ता विष्णुरित्ययुक्तम् । 'एतदमृतम्' इति तत्र हेतूकृतस्यामृतत्वस्य वाजसनेये पञ्चमे 'यः पृथिव्यां तिष्ठन्' इत्युपक्रम्य 'एष त आत्मा अन्तर्याम्यमृतः' इत्यादिना पृथिव्याद्यन्तर्यामिण श्रवणात्तस्य च 'पृथिवी शरीरं' इति पृथिवीशरीरकत्वादिना पृथिव्याद्यभिमानिजीवत्वाद् उपादानप्रकृतित्वाद्वेत्यतः प्राप्तम् – अन्तर्यामीत्यादिसूत्रत्रयम् ।

ಹಿಂದಿನ ಅಧಿಕರಣದಲ್ಲಿ ಚಕ್ಷುರಿಂದ್ರಿಯದಲ್ಲಿ ನಿಯಾಮಕನಾಗಿ ನೆಲೆಸಿದವನು ವಿಷ್ಣುವೇ ಆಗಿದ್ದಾನೆಂದು ನಿರ್ಣಯಿಸಲಾಯಿತು. ಇದು ತಪ್ಪು. ಏಕೆಂದರೆ, 'ಏತದಮೃತಮ್' ಇತ್ಯಾದಿಯಾದ ಶ್ರುತಿಯಲ್ಲಿ

ಅಮೃತತ್ವವೆಂಬ ಧರ್ಮವು ಚಕ್ಷುರಿಂದ್ರಿಯದ ಅಂತರ್ಯಾಮಿಯಲ್ಲಿ ಕೇಳಿಸುತ್ತಿದೆ. ಬೃಹದಾರಣ್ಯಕದ ಐದನೆಯ ಅಧ್ಯಾಯದಲ್ಲಿ 'ಯಃ ಪೃಥಿವ್ಯಾಂ ತಿಷ್ಠನ್' ಎಂದು ಪ್ರಾರಂಭವಾಗಿ 'ಏಷ ತ ಆತ್ಮಾ ಅಂತರ್ಯಾಮ್ಯಮೃತಃ' ಎಂದು ಕೊನೆಗೊಳ್ಳುವ ಶ್ರುತಿಯಲ್ಲಿ ಪೃಥಿವ್ಯಾದಿಗಳ ಅಂತರ್ಯಾಮಿಯಾದ ವ್ಯಕ್ತಿಯ ಧರ್ಮವು ಕೇಳಿಸುತ್ತಿದೆ. ಈ ಅಂತರ್ಯಾಮಿಗೆ 'ತಸ್ಯ ಪೃಥಿವೀ ಶರೀರಮ್' ಎಂಬುದಾಗಿ ಪೃಥಿವ್ಯಾದಿಗಳನ್ನು ಶರೀರವೆಂದು ಹೇಳಲಾಗಿದೆ. ಪೃಥಿವ್ಯಾದಿಗಳು ಶರೀರವಾಗಬೇಕಾದರೆ ಅಭಿಮಾನಿದೇವತೆ ಅಂತರ್ಯಾಮಿಯಾಗಬೇಕು. ಅಥವಾ ಪೃಥಿವಿಗೆ ಉಪಾದಾನಕಾರಣವಾದ ಪ್ರಕೃತಿಯು ಅಂತರ್ಯಾಮಿಯಾಗಬೇಕು; ಹೊರತು ವಿಷ್ಣುವು ಅಂತರ್ಯಾಮಿಯಾಗುವುದಿಲ್ಲ. ಆದ್ದರಿಂದ ಅಮೃತತ್ವಧರ್ಮವುಳ್ಳ ಪೃಥಿವ್ಯಾದಿಗಳ ಅಭಿಮಾನಿಯಾದ ಅಂತರ್ಯಾಮಿಯು ಜೀವಾದಿಗಳೇ ಆಗುತ್ತಾರೆಂಬ ಪೂರ್ವಪಕ್ಷವು ಪ್ರಾಪ್ತವಾಗುತ್ತದೆ. ಇದನ್ನು ಪರಿಹರಿಸುವುದಕ್ಕಾಗಿ ''ಅಂತರ್ಯಾಮಿ'' ಇತ್ಯಾದಿ ಮೂರು ಸೂತ್ರಗಳು ಹೊರಟಿವೆ.

तस्याप्यर्थो – नियन्ता चेति । पूर्ववदनुषङ्गः । स चक्षुरादावमृतत्वेनोक्तः स एको विष्णुरेव सर्वगो नियन्ता अन्तर्यामिशब्दोक्तसर्वप्राण्यन्तस्स्थः सन्नियमनकर्ता । न तु तत्तदभिमानिजीवः तदुपादानप्रकृतिर्वेत्यर्थः ।

ಈ ಅಧಿಕರಣದ ಸಾರವನ್ನೂ ಸಹ 'ನಿಯಂತಾ ಚ' ಎಂಬ ಪದದಿಂದಲೇ ಸಂಗ್ರಹಿಸಿದ್ದಾರೆ. ಇಲ್ಲಿಯೂ ಸಹ 'ಸ ಏಕೋ ವಿಷ್ಣುರೇವ ಸರ್ವಗಃ ನಿಯಂತಾ' ಎಂಬುದಾಗಿ ಹಿಂದಿನಂತೆ ಯೋಜನೆ ಮಾಡಿಕೊಳ್ಳಬೇಕು. ಸಃ ಎಂದರೆ ಚಕ್ಷುರಾದಿ ಇಂದ್ರಿಯಗಳಲ್ಲಿ ಅಮೃತತ್ವ ಮೊದಲಾದ ಧರ್ಮಗಳುಳ್ಳವನಾಗಿ ಪ್ರತಿಪಾದ್ಯನಾದ ಒಬ್ಬನೇ ವಿಷ್ಣುವು ಸರ್ವತ್ರ ವ್ಯಾಪ್ತನಾಗಿದ್ದಾನೆ. ನಿಯಾಮಕನಾಗಿದ್ದಾನೆ. ಅಂತರ್ಯಾಮಿಶಬ್ದದಿಂದ ಪ್ರತಿಪಾದ್ಯನಾಗಿ ಸಕಲಪ್ರಾಣಿಗಳ ಹೃದಯದಲ್ಲಿ ನೆಲೆಸಿದ್ದಾನೆ. ಸಕಲರಿಗೂ ನಿಯಾಮಕನಾಗಿದ್ದಾನೆಂದು ಇದರ ಅರ್ಥ; ಹೊರತು ಪೃಥಿವ್ಯಾದಿಗಳ ಅಭಿಮಾನಿಗಳು; ಆ ಅಭಿಮಾನಿಗಳಾದ ಜೀವರುಗಳು ಅಥವಾ ಪೃಥಿವ್ಯಾದಿಗಳಿಗೆ ಉಪಾದಾನಕಾರಣವಾದ ಪ್ರಕೃತಿಯು ಅಂತರ್ಯಾಮಿಯಾಗಲು ಸಾಧ್ಯವಿಲ್ಲವೆಂದು ಅಣುಭಾಷ್ಯದ ಅರ್ಥ.

कुतः । सर्वैर्लिङ्गैर्युतो हि । 'यं पृथिवी न वेद' 'पृथिवीमन्तर' इत्यादिनोक्त - पृथिव्याद्यभिमानिदेवाविदितत्व अनन्यापेक्षरमणवत्त्वरूपान्तरत्व अमृतत्वाद्येतत्प्रकरणस्थलिङ्गैर्युतत्वादित्यर्थः । पूर्ववद्वा योजना । प्रागुक्तसमुच्चये चशब्दः ।

ಏಕೆಂದರೆ 'ಸರ್ವೈರ್ಲಿಂಗೈಃ ಯುತೋ ಹಿ' ಎಂಬುದರಿಂದ ಉತ್ತರಿಸಿದ್ದಾರೆ. ಅಂದರೆ 'ಯಂ ಪೃಥಿವೀ ನ ವೇದ' 'ಪೃಥಿವೀಮಂತರಃ' ಇತ್ಯಾದಿಯಾದ ಶ್ರುತಿಗಳಲ್ಲಿ ಪೃಥಿವ್ಯಾದ್ಯಭಿಮಾನಿದೇವತೆಗಳಿಂದ ಭಗವಂತನ ತಿಳಿಯದಿರುವಿಕೆ. ಮತ್ತೊಬ್ಬರ ಅಪೇಕ್ಷೆಯಿಲ್ಲದೆ ರಮಣಶೀಲನಾಗಿರುವಿಕೆ, ಅಮೃತತ್ವವನ್ನು ಹೊಂದಿರುವಿಕೆ ಮೊದಲಾದ ಅನೇಕ ಲಿಂಗಗಳು ಅಂತರ್ಯಾಮಿಪ್ರಕರಣದಲ್ಲಿ ಕೇಳಿ ಬರುತ್ತಿವೆ. ಇವೆಲ್ಲವೂ ಸಹ ವಿಷ್ಣುವಿನ ಅಸಾಧಾರಣಲಿಂಗಗಳು. ಇಲ್ಲಿಯೂ ಹಿಂದಿನಂತೆ ಯೋಜನೆಮಾಡಿಕೊಳ್ಳಬಹುದು. ಚಶಬ್ದವು ಹಿಂದೆ ಹೇಳಿದ ಯುಕ್ತಿಯನ್ನು ಸಮುಚ್ಚಯ ಮಾಡುತ್ತಿದೆ.

ಅಂತರ್ಯಾಮ್ಯಧಿಕರಣ (೧-೨-೫)

**ननु च शरीरवत्त्वलिङ्गाज्जीव एव कुतो न इत्यतोऽपि - नियन्तेति । 'विश्वजीवान्तरत्वाद्यैः' इत्यन्वेति । हि यस्मात् नियंताऽन्तर्यामी 'यो विज्ञानादन्तरः' 'य आत्मनोऽन्तरः' इत्यादिनोक्तविज्ञानात्मशब्दितसर्वजीवविविक्तत्वरूपान्तरत्वाख्यै वश्च जीवान्तरत्वाद्यैर्लिङ्गैः युतोऽतो न जीव इत्यर्थः ।**

ಶರೀರವಿರುವಿಕೆ ಮೊದಲಾದ ಲಿಂಗಗಳಿಂದ ಅಂತರ್ಯಾಮಿಯಾದವನು ಜೀವನೇ ಏಕಾಗಬಾರದು? ಎಂಬ ಪ್ರಶ್ನೆಗೂ ಸಹ ''ನಿಯಂತಾ ಚ'' ಎಂಬುದರಿಂದಲೇ ಉತ್ತರಿಸಿದ್ದಾರೆ. 'ವಿಶ್ವಜೀವಾಂತರತ್ವಾದ್ಯೈಃ' ಎಂಬುದನ್ನು ಸಹ 'ನಿಯಂತಾ' ಎಂಬಲ್ಲಿ ಅನ್ವಯಮಾಡಿಕೊಳ್ಳಬೇಕು. ಹಿ = ಯಾವ ಕಾರಣದಿಂದ, ನಿಯಂತಾ = ಅಂತರ್ಯಾಮಿಯಾಗಿ ನಿಯಾಮಕನಾದವನು ವಿಷ್ಣುವೇ ಆಗಿದ್ದಾನೆ. ಏಕೆಂದರೆ 'ಯೋ ವಿಜ್ಞಾನಾದಂತರಃ' 'ಯೋ ಆತ್ಮನೋ ಅಂತರಃ' ಇತ್ಯಾದಿಯಾಗಿ ಹೇಳಲ್ಪಟ್ಟ ವಿಜ್ಞಾನ ಹಾಗೂ ಆತ್ಮಶಬ್ದದ ಅರ್ಥವೆನಿಸಿದ ಸಕಲ ಜೀವರುಗಳಿಗಿಂತ ಭಗವಂತನು ಭಿನ್ನನಾಗಿದ್ದಾನೆ. ಹೀಗೆ ಸರ್ವಜೀವಭಿನ್ನತ್ವರೂಪವಾದ ವಿಶ್ವಜೀವಾಂತರತ್ವ ಮೊದಲಾದ ಲಿಂಗಗಳಿರುವುದರಿಂದ ಜೀವನು ಅಂತರ್ಯಾಮಿಯಾಗುವುದಿಲ್ಲ.

**आद्यपदेन 'य आत्मनि' इत्युक्ताधाराधेयत्वादिग्रहः । न हि जीवाद्भेदेनाधीतस्य जीवत्वं युक्तमिति भावः ।**

'ವಿಶ್ವಜೀವಾಂತರತ್ವಾದ್ಯೈಃ' ಎಂಬಲ್ಲಿರುವ ಆದ್ಯಪದದಿಂದ, 'ಯ ಆತ್ಮನಿ' ಎಂಬ ಶ್ರುತಿಯಲ್ಲಿ ಹೇಳಿದ ಆಧಾರಾಧೇಯತ್ವಭಾವವನ್ನು ಗ್ರಹಣಮಾಡಬೇಕು. ಜೀವನಿಗೂ ಸಹ ಅಂತರ್ಯಾಮಿಯು ಆಧಾರನಾಗಿದ್ದಾನೆಂದು ಆಧಾರಾಧೇಯಭಾವವನ್ನು ಹೇಳಿರುವುದರಿಂದಲೂ ಜೀವನು ಅಂತರ್ಯಾಮಿಯಾಗುವುದಿಲ್ಲ. ಏಕೆಂದರೆ ಜೀವನಿಗಿಂತ ಭಿನ್ನನಾಗಿ ತಿಳಿಯಲ್ಪಟ್ಟವನಿಗೆ ಜೀವತ್ವವು ಯುಕ್ತವಾಗುವುದಿಲ್ಲವೆಂದು ಅಭಿಪ್ರಾಯ.

**कथं तर्हि पृथिव्याद्यभिमानिसर्वजीवशरीरकत्वम् अशरीरस्य विष्णोरित्यतोऽपि- नियन्तेति । हि यतो विष्णुर्नियन्ता सर्वनियामकः अतः पृथिव्याद्यभिमानि- सर्वजीवशरीरक इत्यर्थः ।**

ಹಾಗಾದರೆ ಪೃಥಿವ್ಯಾದ್ಯಭಿಮಾನಿದೇವತೆಗಳು ಹಾಗೂ ಸಕಲಜೀವರುಗಳೇ ಶರೀರವಾಗಿ ಉಳ್ಳವನು ವಿಷ್ಣು ಹೇಗಾಗುತ್ತಾನೆ? ಅವನಿಗೆ ಶರೀರವು ಇರುವುದಿಲ್ಲವಲ್ಲವೇ? ಎಂಬ ಪ್ರಶ್ನೆಗೆ ''ನಿಯಂತಾ ಚ'' ಎಂಬುದರಿಂದಲೇ ಸಮಾಧಾನವನ್ನು ತಿಳಿಯಬೇಕು. ಹಿ = ಯಾವ ಕಾರಣದಿಂದ ವಿಷ್ಣುವು ನಿಯಂತಾ ಸಕಲ ನಿಯಾಮಕನಾಗಿದ್ದಾನೋ, ಆ ಕಾರಣದಿಂದ ಪೃಥಿವ್ಯಾದ್ಯಭಿಮಾನಿದೇವತೆಗಳಿಗೆ ಹಾಗೂ ಸಕಲ ಜೀವರುಗಳಿಗೆ ಶರೀರಿಯಾಗಿದ್ದಾನೆಂದರ್ಥ.

यथा लोके शरीरं जीवतन्त्रं तथा सर्वे जीवा विष्णुतन्त्रत्वाद् गौण्या वृत्त्या तच्छरीराणीत्यर्थः ।

'पृथिव्याद्या देवतास्तु देहवद्यद्वगन्वतः ।
शरीरमिति चोच्यन्ते यस्य विष्णोर्महात्मनः ।।'

इति बृहद्भाष्योपात्तस्मृतेः । 'शीर्यते नित्यमेवास्मात्' इति भाष्योक्तदिशा सर्वस्य विष्णुना देहादिद्वारा यथायोग्यं शीर्यमाणत्वाच्च योगवृत्त्या सर्वशरीरत्वं युक्तमिति चशब्दार्थः ।। ५ ।।

ಯಾವ ರೀತಿಯಾಗಿ ಲೋಕದಲ್ಲಿ ಶರೀರವು ಜೀವನ ಅಧೀನವಾಗಿರುತ್ತದೋ ಅದೇ ರೀತಿಯಾಗಿ ಸಕಲಜೀವರುಗಳು ವಿಷ್ಣುವಿನ ಅಧೀನರಾಗಿದ್ದಾರೆ ಹೀಗೆ ಅಮುಖ್ಯವೃತ್ತಿಯಿಂದ ಜೀವರುಗಳನ್ನು ಶ್ರುತಿಯು ಭಗವಂತನ ಶರೀರವೆಂದು ಹೇಳಿದೆ.

'ಪೃಥಿವ್ಯಾದ್ಯಾ ದೇವತಾಸ್ತು ದೇಹವದ್ ಯದ್ ವಶತ್ವತಃ।
ಶರೀರಮಿತಿ ಚೋಚ್ಯಂತೇ ಯಸ್ಯ ವಿಷ್ಣೋರ್ಮಹಾತ್ಮನಃ॥'

ಪೃಥಿವೀ ಮೊದಲಾದ ಭೂತಗಳ ಅಭಿಮಾನಿದೇವತೆಗಳು ದೇಹದಂತೆ ಭಗವಂತನಿಗೆ ಅಧೀನರಾಗಿದ್ದಾರೆ. ಆದ್ದರಿಂದಲೇ ಭಗವಂತನ ಶರೀರವೆಂದು ಅವರನ್ನು ಕರೆಯಲಾಗಿದೆ'' ಎಂಬ ಬೃಹದಾರಣ್ಯಕೋಪನಿಷತ್ತಿನ ಭಾಷ್ಯದಲ್ಲಿ ಉದಾಹರಿಸಲ್ಪಟ್ಟ ಸ್ಮೃತಿಯ ಆಧಾರದಿಂದ ಶರೀರಶಬ್ದಾರ್ಥವನ್ನು ತಿಳಿದುಕೊಳ್ಳಬೇಕು. ಮತ್ತು 'ಶೀರ್ಯತೇ ನಿತ್ಯಮೇವಾಸ್ಮಾತ್' ಇತ್ಯಾದಿಯಾಗಿ ಭಾಷ್ಯದಲ್ಲಿ ಹೇಳಿದ ಪ್ರಕಾರ ಎಲ್ಲವೂ ಸಹ ವಿಷ್ಣುವಿನಿಂದ ದೇಹನಾಶದ ಮೂಲಕ ನಾಶಗೊಳಿಸಲ್ಪಡುತ್ತದೆ. ಆದ್ದರಿಂದ ಯಥಾಯೋಗ್ಯವಾಗಿ ಎಲ್ಲವೂ ನಾಶವನ್ನು ಹೊಂದುವುದರಿಂದ ಯೋಗವೃತ್ತಿಯಿಂದ ಸಕಲವೂ ಭಗವಂತನ ಶರೀರವೆನಿಸಿದೆ. ಇಷ್ಟು ನಿಯಂತಾ ಚ ಎಂಬಲ್ಲಿರುವ ಚಶಬ್ದದ ಅರ್ಥ.

ಶ್ರೀರಾಘವೇಂದ್ರತೀರ್ಥಶ್ರೀಪಾದಂಗಳವರಿಂದ ವಿರಚಿತವಾದ

ತತ್ವಮಂಜರಿಯ ಕನ್ನಡಾನುವಾದದಲ್ಲಿ ಅಂತರ್ಯಾಮ್ಯಧಿಕರಣವು ಮುಗಿಯಿತು.

***

।। श्रीजानकीवदनाम्भोजराजहंसाय रामचन्द्राय नमः ।।

।। श्री गुरुभ्यो नमः ।। हरिः ॐ ।।

श्री राघवेन्द्रतीर्थविरचिता

# तन्त्रदीपिका

प्रणम्य गुणसम्पूर्णं दोषातीतं रमापतिम् ।

पूर्णबोधं गुरूनन्यान् कुर्मः सूत्रार्थसङ्ग्रहम् ।।

प्रथमाध्यायस्य द्वितीयः पादः

## अन्तर्याम्यधिकरणम् (१।२।५)

।। ॐ अन्तर्याम्यधिदैवादिषु तद्धर्मव्यपदेशात् ॐ ।। १-२-१८ ।।

अत्र नयेऽन्तःस्थितिरूपभावयुक्तं नियमनाख्यं क्रियात्मकं लिङ्गं समन्वीयते । अधिदैवादिपदेन तत्तत्प्रकरणं लक्ष्यते । तदिति तन्त्रम् । तत्त्वित्यस्ति ।

ಈ ಅಧಿಕರಣದಲ್ಲಿ 'ಅಂತಃಸ್ಥಿತಿ' ಎಂಬ ಭಾವಧರ್ಮದಿಂದ ಸಹಿತವಾದ ನಿಯಮನ ಎಂಬ ಕ್ರಿಯಾರೂಪವಾದ ಲಿಂಗವನ್ನು ಸಮನ್ವಯಮಾಡುತ್ತಿದ್ದಾರೆ. ಸೂತ್ರದಲ್ಲಿರುವ 'ಅಧಿದೈವಾದಿ' ಎಂಬ ಪದದಿಂದ ಅಧಿದೈವ ಪ್ರಕರಣವನ್ನು ವಿವಕ್ಷಿಸುವಂತೆ ಅಧಿಭೂತಪ್ರಕರಣ, ಅಧ್ಯಾತ್ಮಪ್ರಕರಣಗಳನ್ನೂ ಸಹ ಲಕ್ಷಣಯಾ ವಿವಕ್ಷಿಸಬೇಕು. 'ತದ್ಧರ್ಮವ್ಯಪದೇಶಾತ್' ಎಂಬಲ್ಲಿರುವ 'ತತ್'ಎಂಬ ಪದವನ್ನು ಎರಡು ಬಾರಿ ಆವೃತ್ತಿಮಾಡಿಕೊಳ್ಳಬೇಕು. 'ತತ್ತು' ಎಂಬ ಪದವಂತೂ ಇಲ್ಲಿಯೂ ಅನ್ವಯವಾಗುತ್ತದೆ.

"एष त आत्माऽतर्याम्यमृतः" इति श्रुतोऽन्तर्यामी ब्रह्मैव न तु प्रकृतिस्तत्तदभिमानी वा । कुतः? अधिदैवाधिभूतादिप्रकरणेषु तस्यान्तर्यामिणः सम्बन्धितया तस्य ब्रह्मणो धर्मस्य "यं पृथिवी न वेद यं पृथिवीमन्तरो यमयति" इत्यादिना पृथिव्याद्यविदितत्वान्तरत्वादेर्व्यपदेशादित्यर्थः ।

'ಏಷ ತ ಆತ್ಮಾऽಂತರ್ಯಾಮ್ಯಮೃತಃ' ಎಂಬ ಶ್ರುತಿಯಲ್ಲಿ ಅಂತರ್ಯಾಮಿಯಾಗಿ ಪ್ರತಿಪಾದ್ಯನಾದವನು ಬ್ರಹ್ಮನೇ ಆಗಿದ್ದಾನೆ. ಪ್ರಕೃತಿಯಾಗಲೀ ಪೃಥಿವ್ಯಾದಿಗಳ ಅಭಿಮಾನಿ ಜೀವರುಗಳಾಗಲೀ ಪ್ರತಿಪಾದ್ಯರಾಗಿಲ್ಲ. ಏಕೆಂದರೆ, ಅಧಿದೈವ, ಅಧಿಭೂತ, ಅಧ್ಯಾತ್ಮಪ್ರಕರಣಗಳಲ್ಲಿ ತಸ್ಯ = ಅಂತರ್ಯಾಮಿಗೆ ಸಂಬಂಧಿಸಿದ, ತಸ್ಯ = ಬ್ರಹ್ಮನ ಧರ್ಮಸ್ಯ = ಯಂ ಪೃಥಿವೀ ನ ವೇದ

ಯಃ ಪೃಥಿವೀಮಂತರೋ ಯಮಯತಿ' ಇತ್ಯಾದಿ ಶ್ರುತಿಗಳಿಂದ ತಿಳಿಯಲ್ಪಡುವ ಪೃಥಿವ್ಯಾದ್ಯವಿದಿತತ್ವ, ಅಂತರತ್ವ ಮೊದಲಾದ ಧರ್ಮಗಳ ವ್ಯಪದೇಶಾತ್ = ಉಲ್ಲೇಖ ಮಾಡಿರುವುದರಿಂದ ಎಂದು.

तत्त्वित्यनुवृत्तावपि पुंनिर्देशो निर्णयश्रुत्यनुसारात् । तद्धर्मव्यपदेशादित्येव पूर्तावधिदैवेत्युक्तिः पृथिव्यादेश्चेतनत्वसूचनार्था । तेन जडावेद्यत्वं प्रकृत्यादावपि युक्तमिति न शङ्क्यम् ।

ವಸ್ತುತಃ 'ತತ್ತು' ಎಂಬ ಪದವು ಅನುವೃತ್ತಿಯಿಂದ ಸಿದ್ಧವಾಗುತ್ತಿದೆ. ಆದರೂ ಸಹ 'ಏಷ ತ ಆತ್ಮಾ' ಎಂಬ ನಿರ್ಣಯಶ್ರುತಿಗೆ ಅನುಸಾರಿಯಾಗಿ 'ಅಂತರ್ಯಾಮೀ' ಎಂಬುದಾಗಿ ಪುಲ್ಲಿಂಗ ಪ್ರಯೋಗವನ್ನು ಮಾಡಿದ್ದಾರೆ.

'ತದ್ಧರ್ಮವ್ಯಪದೇಶಾತ್' ಎಂಬುದರಿಂದಲೇ ಸೂತ್ರದ ತಾತ್ಪರ್ಯವನ್ನು ಹೇಳಿದಂತಾಗುತ್ತದೆ. ಪುನಃ ಅಧಿದೈವ ಎಂದು ಹೇಳಿರುವ ಉದ್ದೇಶವೇನೆಂದರೆ ಪೃಥಿವ್ಯಾದಿಗಳು ಚೇತನರಾಗಿದ್ದಾರೆಂಬುದನ್ನು ಸೂಚಿಸುವುದಕ್ಕಾಗಿ. ಇದರಿಂದ ಜಡಪದಾರ್ಥಗಳಿಂದ ತಿಳಿಯಲ್ಪಡದಿರುವಿಕೆಯು ಪ್ರಕೃತ್ಯಾದಿಗಳಲ್ಲಿಯೂ ಯುಕ್ತವಾಗುತ್ತದೆಂಬ ಶಂಕೆಯನ್ನು ನಿರಾಕರಿಸಿದಂತಾಯಿತು.

ननु पृथिव्यादिशरीरत्वलिङ्गात् प्रकृतिजीवौ किं न स्यातामित्यत आह -

**।। ॐ नच स्मार्तमतद्धर्माभिलापात् ॐ ।। १-२-१९।।**

चस्त्वर्थे । शारीरश्चेत्यनुकृष्यते । स्मार्तं साङ्ख्यस्मृत्युक्तं प्रधानम् । अन्तर्यामी तदेव न तु स्मार्तं शारीरो जीवश्च । कुतः? अतद्धर्माभिलापात् । तयोः स्मार्तजीवयोर्धर्माणां त्रिगुणत्वसंसारित्वादीनामभिलापाभावादित्यर्थः ।

'ಯಸ್ಯ ಪೃಥಿವೀ ಶರೀರಮ್' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ಪೃಥಿವ್ಯಾದಿಶರೀರತ್ವವೆಂಬ ಲಿಂಗದಿಂದ ಪ್ರಕೃತಿ ಅಥವಾ ಅಭಿಮಾನಿಜೀವರು ಏಕೆ ಅಂತರ್ಯಾಮಿಗಳಾಗಬಾರದು? ಎಂಬ ಆಕ್ಷೇಪಕ್ಕೆ ಉತ್ತರವನ್ನು ನೀಡುವುದಕ್ಕಾಗಿ ಮುಂದಿನ ಸೂತ್ರ ಹೊರಟಿದೆ. "ಓಂ ನ ಚ ಸ್ಮಾರ್ತಮತದ್ಧರ್ಮಾಭಿಲಾಪಾತ್ ಓಂ"

ಸೂತ್ರಾರ್ಥ ಹೀಗಿದೆ - ಸೂತ್ರದಲ್ಲಿರುವ ಚ ಶಬ್ದವನ್ನು ತು ಶಬ್ದದ ಅರ್ಥದಲ್ಲಿ ಬಳಸಿದ್ದಾರೆ. ಶಾರೀರಶ್ಚ ಎಂಬ ಮುಂದಿನ ಸೂತ್ರದ ಪದವನ್ನು ಇಲ್ಲಿ ಅನುಕರ್ಷಮಾಡಬೇಕು. 'ಸ್ಮಾರ್ತಮ್' ಎಂದರೆ ಸಾಂಖ್ಯಸ್ಮೃತಿಯಲ್ಲಿ ಹೇಳಲ್ಪಟ್ಟಿರುವ ಪ್ರಕೃತಿ ಎಂದರ್ಥ. ಅಂತರ್ಯಾಮಿಯು ಬ್ರಹ್ಮನೇ ಆಗಿದ್ದಾನೆ ಹೊರತು ಸ್ಮೃತಿಸಿದ್ಧವಾದ ಪ್ರಕೃತಿಯಾಗಲೀ ಶಾರೀರನಾದ ಜೀವನಾಗಲೀ ಆಗುವುದಿಲ್ಲ. ಏಕೆಂದರೆ, ಅತದ್ಧರ್ಮಾಭಿಲಾಪಾತ್ ಸ್ಮಾರ್ತವಾದ ಪ್ರಕೃತಿ ಮತ್ತು ಜೀವರುಗಳ, ತ್ರಿಗುಣತ್ವ, ಸಂಸಾರಿತ್ವ ಮೊದಲಾದ ಧರ್ಮಗಳನ್ನು, ಅಭಿಲಾಪಾಭಾವಾತ್ = ಉಲ್ಲೇಖಮಾಡದ ಕಾರಣ ಎಂದು.

शारीरत्वं तु ''शीर्यते नित्यमेवास्मात्'' इत्यादिना सावकाशमिति भावः ।

ಸೂತ್ರದಲ್ಲಿ 'ಶೀರ್ಯತೇ ನಿತ್ಯಮೇವಾಸ್ಮಾತ್' ಎಂಬ ಪ್ರಮಾಣವನ್ನು ಅನುಸರಿಸಿ ಪೃಥಿವ್ಯಾದಿಶರೀರತ್ವವು ಬ್ರಹ್ಮನಲ್ಲಿ ಸಾವಕಾಶವಾಗಿದೆಯೆಂದು ತಿಳಿಸಿದ್ದಾರೆ.

स्मार्तत्युक्तिः स्मृत्युक्तदिशा सर्वस्य तदुपादानकतया तदभेदेन तत्स्वरूपत्वाभिप्रयेण पृथिव्यादिशारीरत्वमिति पूर्वपक्षे युक्तिं सूचयितुम् ।

ಸ್ಮಾರ್ತ ಎಂದು ಹೇಳಿದ್ದರಿಂದ ಸಾಂಖ್ಯಸ್ಮೃತಿಯ ಪ್ರಕಾರ ಸಕಲವಸ್ತುಗಳು ಪ್ರಕೃತಿಗೆ ಉಪಾದಾನಕಾರಣವಾದ್ದರಿಂದ ಪ್ರಕೃತಿಯಿಂದ ಅಭಿನ್ನವಾಗಿವೆ. ಆದ್ದರಿಂದಲೇ ಪ್ರಕೃತಿಯು ಸಕಲಪದಾರ್ಥಗಳ ಸ್ವರೂಪವಾಗಿದೆಯೆಂಬ ಅಭಿಪ್ರಾಯದಿಂದ ಪೃಥಿವ್ಯಾದಿಶರೀರತ್ವವು ಪ್ರಕೃತಿಗೆ ಯುಕ್ತವಾಗುತ್ತದೆ. ಈ ಪೂರ್ವಪಕ್ಷಯುಕ್ತಿಯನ್ನು ಸೂಚಿಸಿದ್ದಾರೆ.

शारीरेत्युक्तिरपि शारीरत्वात्तत्तच्छरीरत्वं तत्तदभिमानिजीवस्य युक्तमिति सूचयितुमित्याहुः ।

ಇದರಂತೆ ಸೂತ್ರದಲ್ಲಿ ಶಾರೀರವೆಂಬ ಪದವೂ ಸಹ ಶರೀರವುಳ್ಳವರಾದ್ದರಿಂದ ಅಭಿಮಾನಿಜೀವರುಗಳು ಪೃಥಿವ್ಯಾದಿಗಳನ್ನೇ ಶರೀರವನ್ನಾಗಿ ಹೊಂದಿದ್ದಾರೆ ಎಂಬರ್ಥದಲ್ಲಿದೆ. ಆದ್ದರಿಂದ ಇದು ಯುಕ್ತವಾಗುತ್ತದೆಂದು ಸೂಚಿಸಿದ್ದಾರೆಂದು ಹೇಳುತ್ತಾರೆ.

तत्त्वप्रदीपे तु कापिलस्मृतिमात्रल्पितं, नतु श्रुत्युक्तमिति स्मार्तमित्युक्तम् ।

ತತ್ವಪ್ರದೀಪದಲ್ಲಾದರೂ ಸಾಂಖ್ಯರ ಪ್ರಕೃತಿಯು ಕಾಪಿಲಸ್ಮೃತಿಯಿಂದ ಮಾತ್ರ ಕಲ್ಪಿತವಾಗಿದೆ; ಹೊರತು ಶ್ರುತಿಸಿದ್ಧವಾಗಿಲ್ಲವೆಂದು ಸೂಚಿಸಲು ''ಸ್ಮಾರ್ತಮ್'' ಎಂದು ಪ್ರಯೋಗಿಸಿದ್ದಾರೆಂದು ಹೇಳಿದ್ದಾರೆ.

प्रसज्यप्रतिषेधार्थकनञः क्रियासापेक्षत्वेनाऽसामर्थ्येऽपि ''असूर्यं पश्याः'' इत्यादाविवाकर्तरि चेति ज्ञापनात् समासः ।।

ಸೂತ್ರದಲ್ಲಿರುವ ನಞ್‌ಪದವು ಪ್ರಸಜ್ಯಪ್ರತಿಷೇಧಾರ್ಥಕದಲ್ಲಿರುವುದರಿಂದ ಕ್ರಿಯಾಸಾಪೇಕ್ಷವಾಗಿದೆ. ಆದ್ದರಿಂದ ಸಮಾಸವನ್ನು ಹೊಂದುವುದಿಲ್ಲ. ಆದರೆ 'ಅಕರ್ತರಿ ಚ ಕಾರಕೇ ಸಂಜ್ಞಾಯಾಮ್' ಎಂಬ ವ್ಯಾಕರಣ ಸೂತ್ರದಿಂದ ಸೂಚಿಸಿದಂತೆ 'ಅಸೂರ್ಯಂ ಪಶ್ಯಾಃ' ಎಂಬಲ್ಲಿ ಹೇಗೆ ಸಮಾಸವಾಗುತ್ತದೋ ಅದರಂತೆ ಇಲ್ಲಿಯೂ ಸಹ ಸಮಾಸವಾಗಿದೆಯೆಂದು ತಿಳಿಯಬೇಕು.

जीवपक्षे साधकं नेत्युक्त्वा बाधकं चाह -

।। ॐ शारीरश्चोभयेपि हि भेदेनैनमधीयते ॐ ।। १-२-२० ।।

ಪರಿಪೂರ್ಣಚಂದ್ರಿಕಾ

ಜೀವನು ಅಂತರ್ಯಾಮಿಯಾಗಿದ್ದಾನೆಂಬ ಪಕ್ಷದಲ್ಲಿ ಯಾವುದೇ ಸಾಧಕಪ್ರಮಾಣಗಳಿರುವುದಿಲ್ಲವೆಂದು ಹೇಳಿ ಬಾಧಕಪ್ರಮಾಣವು ಇರುತ್ತದೆಂದು ತಿಳಿಸಲು ಮುಂದಿನ ಸೂತ್ರ ಹೊರಟಿದೆ. 'ಓಂ ಶಾರೀರಶ್ಚೋಭಯೇಽಪಿ ಹಿ ಭೇದೇನೈನಮಧೀಯತೇ ಓಂ'

नेति वर्तते । 'आत्मनोऽन्तरः' इति माध्यन्दिनायनाः 'विज्ञानादन्तरो विविक्तः' इति काण्वाश्चैनं जीवं प्रकृतादन्तर्यामिणो भेदेनाधीयते हि तस्मादतो न शारीरश्चान्तर्यामीत्यर्थः ।

ಸೂತ್ರಾರ್ಥ ಹೀಗಿದೆ -- ಹಿಂದಿನ ಸೂತ್ರದಿಂದ ನ ಎಂಬುದನ್ನು ಅನುವೃತ್ತಿ ಮಾಡಬೇಕು. ಹಿ= ಯಾವ ಕಾರಣದಿಂದ, ಭೇದೇನೈನಮಧೀಯತೇ = ಆತ್ಮನೋಽಂತರಃ ಎಂಬುದಾಗಿ ಮಾಧ್ಯಂದಿನಶಾಖಿಗಳು ಹಾಗೂ 'ವಿಜ್ಞಾನಾದಂತರಃ' ಎಂಬುದಾಗಿ ಕಾಣ್ವಶಾಖಿಗಳು ಜೀವನನ್ನು ಅಂತರ್ಯಾಮಿಯಿಂದ ಭಿನ್ನನಾಗಿದ್ದಾನೆಂದು ಅಧ್ಯಯನ ಮಾಡುತ್ತಾರೋ, ಅತಃ = ಆ ಕಾರಣದಿಂದ, ಶಾರೀರಶ್ಚ = ಜೀವನೂ ಸಹ, ನ = ಅಂತರ್ಯಾಮಿಯಾಗುವುದಿಲ್ಲ.

आत्मविज्ञानशब्दयोर्जीवार्थत्वादिति भावः । चकारो ''यस्तेजसि तिष्ठन्'' इत्यादिभेदाध्ययनात् चित्प्रकृतिर्नान्तर्यामीति समुच्चयार्थ इति तत्त्वप्रदीपकोक्तिः ।

ಏಕೆಂದರೆ ಆತ್ಮಾ ಮತ್ತು ವಿಜ್ಞಾನಶಬ್ದಗಳು ಜೀವ ಎಂಬರ್ಥದಲ್ಲಿ ಇರುವುದರಿಂದ ಎಂದು ಅಭಿಪ್ರಾಯ. ಸೂತ್ರದಲ್ಲಿರುವ ಚಶಬ್ದವು 'ಯಸ್ತೇಜಸಿ ತಿಷ್ಠನ್' ಎಂಬುದಾಗಿ ಚಿತ್ಪ್ರಕೃತಿಯನ್ನು ಅಂತರ್ಯಾಮಿಯಿಂದ ಭಿನ್ನವಾಗಿ ಅಧ್ಯಯನ ಮಾಡುವುದರಿಂದ ಚಿತ್ಪ್ರಕೃತಿಯು ಅಂತರ್ಯಾಮಿಯಾಗುವುದಿಲ್ಲವೆಂಬುದನ್ನು ಸಮುಚ್ಚಯ ಮಾಡುತ್ತಿದೆ. ಹೀಗೆ ತತ್ವಪ್ರದೀಪಕಾರರು ವ್ಯಾಖ್ಯಾನಿಸುತ್ತಾರೆ.

नञोऽनुकर्षणार्थ इति टीकोक्तिः । आद्यसूत्रेऽनुवृत्तावधारणव्यावर्त्यं सयुक्तिकं दर्शयितुमिमौ योगौ ॥५॥

ಟೀಕೆಯಲ್ಲಿ ಹಿಂದಿನ ಸೂತ್ರದಿಂದ ನಞ್ ಎಂಬುದನ್ನು ಅನುವೃತ್ತಿಮಾಡಿಕೊಳ್ಳುವುದಕ್ಕಾಗಿ ಚಶಬ್ದವನ್ನು ಹೇಳಿರುತ್ತಾರೆಂದು ವ್ಯಾಖ್ಯಾನಿಸಿದ್ದಾರೆ.

ಮೊದಲನೆಯ ಸೂತ್ರದಲ್ಲಿ ಅನುವೃತ್ತವಾದ ತತ್ತು ಎಂಬುದು ಅವಧಾರಣಾರ್ಥದಲ್ಲಿದೆ. ಇದರಿಂದ ವ್ಯಾವರ್ತ್ಯವಾದ ವಿಷಯವನ್ನು ಯುಕ್ತಿಬದ್ಧವಾಗಿ ತೋರಿಸಲು ಮುಂದಿನ ಎರಡು ಸೂತ್ರಗಳನ್ನು ರಚಿಸಿದ್ದಾರೆ.

ಶ್ರೀರಾಘವೇಂದ್ರತೀರ್ಥಶ್ರೀಪಾದಂಗಳವರಿಂದ ರಚಿತವಾದ

ತಂತ್ರದೀಪಿಕಾದ ಕನ್ನಡಾನುವಾದದಲ್ಲಿ ಅಂತರ್ಯಾಮ್ಯಧಿಕರಣವು ಸಮಾಪ್ತವಾಯಿತು.

ಅಂತರ್ಯಾಮ್ಯಧಿಕರಣ (೧-೨-೫)

श्री राघवेन्द्रतीर्थविरचिता

# श्रीन्यायमुक्तावळिः

## अन्तर्याम्यधिकरणम् (१।२।५)

।। ॐ अन्तर्याम्याधिदैवादिषु तद्धर्मव्यपदेशात् ॐ।। ५ ।।

।। ॐ नच स्मार्तमतद्धर्माभिलापात् ॐ ।।

।। ॐ शारीरश्चोभयेऽपि हि भेदेनैनमधीयते ॐ ।।

अत्रामृतत्वमुखेन आक्षेपात् आक्षेपिकी संगतिः । वाजसनेये पंचमेऽध्याये ''एष त आत्मा अन्तर्याम्यमृत''(बृ.५-७-३) इतिश्रुतः अन्तर्यामी किं प्रकृतिजीवौ वा उत विष्णुरिति संदेहः ।

ಈ ಅಧಿಕರಣದಲ್ಲಿ ಅಮೃತತ್ವವೆಂಬ ಧರ್ಮವನ್ನು ಆಕ್ಷೇಪಮಾಡಿದ್ದರಿಂದ ಹಿಂದಿನ ಅಧಿಕರಣದಿಂದ ಆಕ್ಷೇಪಿಕೀ ಸಂಗತಿಯು ಇರುತ್ತದೆ. ಬೃಹದಾರಣ್ಯಕೋಪನಿಷತ್ತಿನ ಐದನೆಯ ಅಧ್ಯಾಯದಲ್ಲಿ 'ಏಷ ತೇ ಆತ್ಮಾ ಅಂತರ್ಯಾಮ್ಯಮೃತಃ' ಎಂಬುದಾಗಿ ಅಮೃತತ್ವ ಧರ್ಮಕ್ಕೆ ಆಶ್ರಯನಾದ ವ್ಯಕ್ತಿ ಅಂತರ್ಯಾಮಿಯಾಗಿದ್ದಾನೆಂದು ಹೇಳಲಾಗಿದೆ. ಈ ಅಂತರ್ಯಾಮಿಯು ಪ್ರಕೃತಿ ಹಾಗೂ ಜೀವರೋ ಅಥವಾ ವಿಷ್ಣುವೋ ಎಂದು ಸಂದೇಹ.

प्रकृतिरित्येकः पूर्वः पक्षः । 'यस्य पृथिवी शरीरम्' इत्यादिना श्रुतपृथिव्याद्यात्मकत्वरूपपृथिव्यादिशरीरकत्वस्य सर्वोपादाने प्रकृतौ संभवात् । शरीरपदस्य ''पूर्वपक्षस्य शरीरम्'' इत्यादौ स्वरूपेऽपि संभवात् ।

ಪ್ರಕೃತಿಯೇ ಅಂತರ್ಯಾಮಿಯಾಗಿದೆಯೆಂದು ಮೊದಲನೆಯಪೂರ್ವಪಕ್ಷ. ಏಕೆಂದರೆ, 'ಯಸ್ಯ ಪೃಥಿವೀ ಶರೀರಮ್' ಇತ್ಯಾದಿ ಶ್ರುತಿಯಲ್ಲಿ ಕೇಳಿಸುತ್ತಿರುವ ಪೃಥಿವ್ಯಾದ್ಯಾತ್ಮಕತ್ವವನ್ನೇ ಪೃಥಿವ್ಯಾದಿಶರೀರಕತ್ವವನ್ನಾಗಿ ಹೇಳಲಾಗಿದೆ. ಈ ಪೃಥಿವ್ಯಾದ್ಯಾತ್ಮಕತ್ವವು ಎಲ್ಲ ಕಾರ್ಯಗಳಿಗೆ ಉಪಾದಾನಕಾರಣವಾದ ಪ್ರಕೃತಿಯಲ್ಲೇ ಉಪಪನ್ನವಾಗುತ್ತದೆ.

ಶರೀರಪದಕ್ಕೆ ಕೇವಲ 'ಸ್ವರೂಪ' ಎಂದರ್ಥ. 'ಪೂರ್ವಪಕ್ಷಸ್ಯ ಶರೀರಮ್' ಎಂದು ಪ್ರಯೋಗಿಸುತ್ತಾರೆ. ಇಲ್ಲಿರುವ ಶರೀರಶಬ್ದವು ಪೂರ್ವಪಕ್ಷದ ಸ್ವರೂಪ ಎಂಬರ್ಥದಲ್ಲಿ ಪ್ರಸಿದ್ಧವಾಗಿದೆ. ಆದರಂತೆ 'ಪೃಥಿವೀಶರೀರಮ್' ಎಂದು ಹೇಳಿದಾಗ ಪೃಥಿವಿಯ ಸ್ವರೂಪವೆಂದರ್ಥವೆಂದು ಹೇಳಬೇಕು.

''व्याप्तं कार्येषु कारणम्'' इत्यादिना कारणस्य कार्यस्थत्वेन यः पृथिव्यां तिष्ठन्नित्यादेरप्युपपत्तेः ।

'ವ್ಯಾಪ್ತಂ ಕಾರ್ಯೇಷು ಕಾರಣಮ್' ಇತ್ಯಾದಿಯಾಗಿ ಕಾರಣವು ಕಾರ್ಯದಲ್ಲಿರುತ್ತದೆಂದು ತಿಳಿಯುತ್ತಿದೆ. ಆದ್ದರಿಂದ 'ಯಃ ಪೃಥಿವ್ಯಾಂ ತಿಷ್ಠನ್' ಎಂಬುದಾಗಿ ಕಾರ್ಯಕ್ಕೂ ಕಾರಣಕ್ಕೂ ಭೇದವನ್ನು ಹೇಳಿದ್ದಾರೆಂಬ ಗೊಂದಲಕ್ಕೆ ಅವಕಾಶವಿಲ್ಲ. ಕಾರ್ಯಕಾರಣಗಳಿಗೆ ಅಭೇದವಿದ್ದರೂ ಸಹ ಕಾರಣವು ಕಾರ್ಯದಲ್ಲಿರುತ್ತದೆಂಬ ವ್ಯವಹಾರವು ಲೋಕದಲ್ಲಿದೆ.

कार्यकारणयोर्भेदाभेदेन तादात्म्यतत्स्थत्वयोरविरोधात् । कार्यस्य कारणाधीनत्वेन यः पृथिवीमन्तरो यमयतीत्यादेः गौणत्वेनोपपत्तेरिति ।

ಕಾರ್ಯ ಹಾಗೂ ಕಾರಣಗಳಿಗೆ ಭೇದವು ಇಲ್ಲದ ಕಾರಣ ತಾದಾತ್ಮ್ಯವನ್ನು ಹೇಳಬಹುದು. ಮತ್ತು ಕಾರ್ಯಕಾರಣಗಳಿಗೆ ಭೇದಾಭೇದವಿರುವುದರಿಂದ ಐಕ್ಯವನ್ನು ಮತ್ತು ಕಾರ್ಯದಲ್ಲಿ ಕಾರಣವಿದೆ ಎಂದೂ ಸಹ ಹೇಳಬಹುದು. ಎರಡಕ್ಕೂ ವಿರೋಧ ಬರುವುದಿಲ್ಲ. ಕಾರ್ಯವು ಕಾರಣದ ಅಧೀನವಾದ್ದರಿಂದ 'ಯಃ ಪೃಥಿವೀಂ ಅಂತರೋ ಯಮಯತಿ' ಎಂಬುದನ್ನು ಕೂಡಿಸಬೇಕು. ಅಂದರೆ ಉಪಾದಾನಕಾರಣದ ಅಧೀನವಾಗಿದೆಯೆಂದು ಗೌಣವಾಗಿ ವ್ಯಾಖ್ಯಾನಿಸಬೇಕು.

पृथिव्यादितत्तदभिमानिजीवा एव वा तत्तदन्तर्यामीत्यन्यः । तान्प्रति पृथिव्यादेः स्थूलशरीरत्वात् ।

ಅಥವಾ ಪೃಥಿವ್ಯಾದಿಗಳಿಗೆ ಅಭಿಮಾನಿಯಾದ ಜೀವರುಗಳೇ ಅಂತರ್ಯಾಮಿಯಾಗುತ್ತಾರೆ. ಅಭಿಮಾನಿ ದೇವತೆಗಳಿಗೆ ಪೃಥಿವ್ಯಾದಿಗಳು ಸ್ಥೂಲವಾದ ಶರೀರವಾದ್ದರಿಂದ ಎಂದು ಎರಡನೆಯ ಪೂರ್ವಪಕ್ಷ.

एवं च प्रकृत्यादिरेवात्रामृतोऽन्य इति प्राचीनामृतत्वं नाक्षिस्थस्य विष्णुत्वसाधकमिति ।

ಆದ್ದರಿಂದ ಪ್ರಕೃತ್ಯಾದಿಗಳೇ ಅಮೃತತ್ವಧರ್ಮವುಳ್ಳ ಅಂತರ್ಯಾಮಿಯೆಂದು ಸಿದ್ಧವಾಗುತ್ತದೆ. ಆದ್ದರಿಂದ ಹಿಂದಿನ ಅಧಿಕರಣದಲ್ಲಿ ಚಕ್ಷುರಿಂದ್ರಿಯದಲ್ಲಿರುವ ವ್ಯಕ್ತಿಗೆ ಅಮೃತತ್ವಧರ್ಮದಿಂದ ವಿಷ್ಣುತ್ವವನ್ನು ಸಮರ್ಥಿಸಿದ್ದು ತಪ್ಪಾಗುತ್ತದೆ. ಇಷ್ಟು ಪೂರ್ವಪಕ್ಷ.

सिद्धान्तस्तु ।। यं पृथिवी न वेद यः पृथिवीमन्तरो यमयतीत्यादिनोक्तस्य कार्त्स्न्येन पृथिव्यादिदेवाविदितत्वस्य बाह्यापेक्षां विना रममाणत्वरूपान्तरत्वस्य च लिंगस्य ''न ते विष्णो जायमानः'' (ऋ.५-९९-२) ''स योऽतोऽश्रुतोऽगतोऽमतो ऽदृष्टः सर्वेषां भूतानामन्तरपुरुषः'' इत्यादिश्रुत्या (ऐ.३-२-४) विष्ण्वेकधर्मत्वात् पृथिव्यादेः जडत्वे अप्रसक्तनिरासप्रसङ्गात् यमित्यस्य वैयर्थ्याच्च ।

ಸಿದ್ಧಾಂತ ಹೀಗಿದೆ - 'ಯಂ ಪೃಥಿವೀಂ ನ ವೇದ ಯಃ ಪೃಥಿವೀಮಂತರೋ ಯಮಯತಿ' ಇತ್ಯಾದಿ ವಾಕ್ಯದಲ್ಲಿ ಪೃಥಿವ್ಯಾದಿ ಅಭಿಮಾನಿ ದೇವತೆಗಳಿಗೆ ಸಂಪೂರ್ಣವಾಗಿ ಯಾವ ವ್ಯಕ್ತಿಯು

ತಿಳಿಯಲಾರನೋ ಅವನೇ ಅಂತರ್ಯಾಮಿಯಾಗಿದ್ದಾನೆಂದು ಹೇಳಲಾಗಿದೆ. ಮತ್ತು ಬಾಹ್ಯಪದಾರ್ಥಗಳ ಅಪೇಕ್ಷೆಯಿಲ್ಲದೆ ಸುಖಿಸುವವನಾಗಿದ್ದಾನೆಂದು ಹೇಳಲಾಗಿದೆ. ಹೀಗೆ ಪೃಥಿವ್ಯಾದ್ಯವಿದಿತತ್ವ, ಅಂತರತ್ವ ಮೊದಲಾದ ಲಿಂಗಗಳು ವಿಷ್ಣುವೇ ಅಂತರ್ಯಾಮಿಯಾಗಿದ್ದಾನೆಂಬುದಕ್ಕೆ ಸಾಧಕಗಳಾಗಿವೆ. ಅಷ್ಟೇ ಅಲ್ಲದೇ 'ನ ತೇ ವಿಷ್ಣೋ ಜಾಯಮಾನಃ' ಎಂಬ ಋಗ್ವೇದಶ್ರುತಿಯಲ್ಲಿ' 'ಸ ಯೋಽತೋಽಶ್ರುತೋಽಗತೋಽಮತೋಽದೃಷ್ಟಃ ಸರ್ವೇಷಾಂ ಭೂತಾನಾಮಂತರಪುರುಷಃ' ಎಂಬ ಐತರೇಯಶ್ರುತಿಯಲ್ಲಿ ಹೇಳಲ್ಪಟ್ಟಧರ್ಮಗಳೆಲ್ಲವೂ ಕೇವಲ ವಿಷ್ಣುವಿನ ಅಸಾಧಾರಣಲಿಂಗಗಳಾಗಿವೆ. ಒಂದು ವೇಳೆ ಜಡವಾದ ಪ್ರಕೃತಿಯನ್ನು ಅಂತರ್ಯಾಮಿಯೆಂದು ವಿವಕ್ಷಿಸಿದರೆ 'ಯಂ ಪೃಥಿವೀ ನ ವೇದ' ಎಂದರೆ ಪೃಥಿವ್ಯಾದಿ ಜಡಪದಾರ್ಥಗಳಿಂದ ತಿಳಿಯಲಾರನೆಂದು ವಿವಕ್ಷಿಸಿದರೆ ಅಪ್ರಸಕ್ತವಾದದ್ದನ್ನು ನಿರಾಸಮಾಡಿದಂತಾಗುತ್ತದೆ. ಮತ್ತು 'ಯಂ' ಎಂಬುದು ವ್ಯರ್ಥವಾಗುತ್ತದೆ.

शरीरत्वस्य शीर्यत इति शरीरमिति योगेन वा शरीरवदीशनियम्यत्वेन गौण्या वृत्त्या वा युक्तत्वेन यः पृथिव्यामित्यादेः क्लेशेनानेयत्वात् ।

ಶರೀರಶಬ್ದಕ್ಕೆ 'ಶೀರ್ಯತೇ ಇತಿ ಶರೀರಮ್' 'ನಾಶ ಹೊಂದುವ ಪದಾರ್ಥವು ಶರೀರ' ಎಂದು ಯೌಗಿಕವಾದ ಅರ್ಥವನ್ನು ಸ್ವೀಕರಿಸಿದಾಗ ಭಗವಂತನ ಅಧೀನವಾಗಿ ನಾಶವನ್ನು ಹೊಂದುತ್ತದೆಂದು ಹೇಳಿದಂತಾಗುತ್ತದೆ. ಶರೀರವು ಹೇಗೆ ಜೀವನಿಂದ ನಿಯಮ್ಯವಾಗಿದೆಯೋ ಅದರಂತೆ ಸಕಲಪದಾರ್ಥಗಳು ಭಗವಂತನಿಂದ ನಿಯಮ್ಯವಾಗಿವೆ ಎಂದು ಗೌಣೀವೃತ್ತಿಯನ್ನೂ ಸಹ ಹೇಳಬಹುದು. ಹೀಗೆ 'ಯಃ ಪೃಥಿವ್ಯಾಮ್' ಇತ್ಯಾದಿ ಶ್ರುತಿಯನ್ನು ಸುಲಭವಾಗಿ ವ್ಯಾಖ್ಯಾನಿಸಲು ಬರುತ್ತದೆ.

प्रकृतिजीवयोः त्रिगुणत्वसंसारित्वाद्यसाधारणधर्माभावात् ''य आत्मनोऽन्तरो विज्ञानादन्तरो विविक्तः'' इति जीवादन्तर्यामिणो भेदव्यपदेशाच्च अन्तर्यामी विष्णुरेवेत्यमृतत्वमपि तस्यैवेति । फले तु पूर्वाक्षेपसमाधी ।। ५ ।।

ಪ್ರಕೃತಿ ಹಾಗೂ ಜೀವರನ್ನುಅಂತರ್ಯಾಮಿಯೆಂದು ವಿವಕ್ಷಿಸಲು ಸಾಧ್ಯವಿಲ್ಲ. ಏಕೆಂದರೆ ಶ್ರುತಿಯಲ್ಲಿ ತ್ರಿಗುಣತ್ವ ಮೊದಲಾದ ಪ್ರಕೃತಿಯ ಧರ್ಮವನ್ನಾಗಲೀ, ಸಂಸಾರಿತ್ವವೇ ಮೊದಲಾದ ಜೀವನ ಧರ್ಮಗಳನ್ನಾಗಲೀ ಹೇಳಿರುವುದಿಲ್ಲ. ಅಷ್ಟೇ ಅಲ್ಲದೆ 'ಯ ಆತ್ಮನೋಽಂತರೋ ವಿಜ್ಞಾನಾದಂತರೋ ವಿವಿಕ್ತಃ' ಎಂಬುದಾಗಿ ಜೀವನಿಗಿಂತ ಅಂತರ್ಯಾಮಿಯು ಭಿನ್ನನಾಗಿದ್ದಾನೆಂದು ಹೇಳಲಾಗಿದೆ. ಆದ್ದರಿಂದ ವಿಷ್ಣುವೇ ಅಂತರ್ಯಾಮಿಯಾಗಿದ್ದಾನೆ. ಅಮೃತತ್ವಧರ್ಮವೂ ಸಹ ಅವನದ್ದೇ ಆಗಿದೆ.

ಹಿಂದಿನ ಅಧಿಕರಣದಲ್ಲಿ ಸಾಧಿಸಲ್ಪಟ್ಟ ಅಮೃತತ್ತ್ವವನ್ನು ಆಕ್ಷೇಪಿಸುವುದು ಪೂರ್ವಪಕ್ಷದ ಫಲ. ಅದಕ್ಕೆ ಸಮಾಧಾನವಾಗಿ ಸಿದ್ಧಾಂತದ ಫಲ.

ಶ್ರೀರಾಘವೇಂದ್ರತೀರ್ಥಶ್ರೀಪಾದಂಗಳವರಿಂದ ರಚಿತವಾದ

ನ್ಯಾಯಮುಕ್ತಾವಳಿಯ ಕನ್ನಡಾನುವಾದದಲ್ಲಿ ಅಂತರ್ಯಾಮ್ಯಧಿಕರಣವು ಸಮಾಪ್ತವಾಯಿತು.

# सूत्रार्थरत्नावलिः

## अन्तर्याम्यधिकरणम् (१।२।५)

अत्रान्तःस्थत्वरूपभावसहितं नियमनक्रियात्मकं लिङ्गं ब्रह्मणि समन्वीयते ।

**ॐ ॥ अन्तर्याम्यधिदैवादिषु तद्धर्मव्यपदेशात् ॥ ॐ ॥ १८ ॥**

ननु प्रकृतिरेवान्तर्यामी । 'यस्य पृथिवी'(बृ. ५।७।३) इत्यादिना पृथिव्यादि-शरीरव्यपदेशात् । शरीरशब्दस्य स्वरूपेऽपि प्रयोगदर्शनेन तस्य तत्रोपपत्तेः । नच 'यः पृथिव्याम्' इत्यादिना पृथिव्यादिस्थत्वोक्तिविरोधः । 'व्याप्तं कार्येषु कारणम्' इति वचनात् । तस्य तत्रोपपत्तेः । न च प्रकृतेरचेतनत्वेन पृथिव्यादिनियामकत्वा-योगः । कार्यस्य कारणाधीनत्वेन चेतनप्रकृतेरपि नियामकत्वोपचारोपपत्तेः । न चामृतत्व-विरोधः । तस्य विष्ण्वाविवात्रापि योगेनोपपत्तेः । तत्तज्जीवानां वा - एतदन्तर्यामित्वम् । पृथिव्यादिशरीरत्वादेस्तेष्वपि सुघटत्वात् । ततश्च प्रवृत्यादेरेवान्त र्यामित्वेन तत्र श्रुतममृतत्वं नाक्षिस्यस्य विष्णुत्वसाधकमिति प्राप्ते सूत्रितम् ।

**ॐ॥ अन्तर्याम्यधिदैवादिषु तद्धर्मव्यपदेशादिति ॥ अस्यार्थः – 'एष त आत्माऽन्तर्यामि' (बृ.५।७।३) इति श्रुत्युक्तोऽन्तर्यामी विष्णुरेव न प्रधानादि । कुतः? अधिदैवादिषु अधिदैवाध्यात्माधिभूतादिप्रकरणेषु । तद्धर्मव्यपदेशात् तस्मिन् अन्तर्यामिणि तस्य 'यं पृथिवी न वेद' (बृ. ५।७।३) श्रुतौ उक्तस्याविदितत्वादिब्रह्म धर्मस्य व्यपदेशात् उक्तत्वादित्यर्थः ।**

एवञ्च पृथिव्यादिदेवताऽविदितत्वान्तराख्यधर्मव्यपदेशादन्तर्यामी विष्णुरेवेति सिद्धम् ॥

ಅಂತರ್ಯಾಮ್ಯಧಿಕರಣ (೧-೨-೫)

**ॐ।। नच स्मार्तमतद्धर्माभिलापात् ।।ॐ**

एवं निरवकाशलिङ्गेन विष्णोरन्तर्यामित्वं समर्थ्य, प्रकृत्यादेरन्तर्यामित्वं तत्प्रकृतिजीवसाधारणं युक्त्या पराकुर्वत् सूत्रमाह –

**ॐ ।। न च स्मार्तमतद्धर्माभिलापादिति ।। अस्यार्थः । चः समुच्चये । स्मार्तं कापिलस्मृत्युक्तम् । प्रधानं जीवश्च अन्तर्यामी न । कुतः ? अतद्धर्माभिलापात् तद्धर्माणां प्रधानजीवधर्माणां त्रिगुणत्वसंसारित्वादीनाम् । अनभिलापात् अनुक्तत्वादित्यर्थः ।**

एवञ्च विष्ण्वसाधारणपृथिव्याद्यविदित्वादिधर्मोपदेशवत् कपिलस्मृत्युक्तप्रकृति-प्रधानजीवासाधारणोपादानत्वजडत्वत्रिगुणत्वसंसारित्वादिधर्माणामनुक्तत्वात् अन्तर्यामी विष्णुरेवेति सिद्धम् ।

**ॐ ।। शारीरश्चोभयेऽपि हि भेदेनैनमधीयते ।।ॐ**

जीवस्यान्तर्यामित्वं तत्साधकाभावेन निरस्तमपि पुनर्बाधकाख्यविशेषयुक्त्या निराकुर्वत् सूत्रमुपन्यस्यति –

**ॐ।। शारीरश्चोभयेऽपि हि भेदेनैनमधीयत इति ।। अस्यार्थः – चो नञोऽनुकर्षणार्थः । हि यस्मात् । उभये माध्यन्दिनाः काण्वाश्च । आत्मनोऽन्तरः (बृ.५।७।२२) विज्ञानादन्तरः (बृ.४।५।२२) इति । एनं जीवम् । अन्तर्यामिणः सकाशात् । भेदेन भिन्नत्वेन । अधीयते पठन्ति । तस्माच्छारीरो जीवश्च नान्तर्यामीत्यर्थः ।**

एवञ्चोभयशाखिभिः 'आत्मानमन्तरः' इति, 'विज्ञानादन्तरः' इति च जीवस्य ब्रह्मणो भेदेनोपदेशादन्तर्यामी विष्णुरेवेति सिद्धम् ।

।। इति अन्तर्याम्यधिकरणम् ।।

॥ ಪರಿಪೂರ್ಣಚಂದ್ರಿಕೆಯಲ್ಲಿ ಅಂತರ್ಯಾಮ್ಯಧಿಕರಣವು ಮುಗಿಯಿತು ॥

॥ ಶ್ರೀಮಧ್ವೇಶಾರ್ಪಣಮಸ್ತು ॥

ಪರಿಪೂರ್ಣಚಂದ್ರಿಕಾ

# ಅದೃಶ್ಯತ್ವಾಧಿಕರಣ
(೧-೨-೬)

## ಭಾಗ -೧

ಬ್ರಹ್ಮಸೂತ್ರ, ಸೂತ್ರದೀಪಿಕಾ, ಬ್ರಹ್ಮಸೂತ್ರಭಾಷ್ಯ,
ಸತ್ತರ್ಕದೀಪಾವಳಿ, ತತ್ವಪ್ರಕಾಶಿಕಾ,
ಭಾವದೀಪ ಇವುಗಳ ವಿವರಣೆಯೊಂದಿಗೆ
ಸರಳ ಕನ್ನಡ ಅನುವಾದ

* * *

ಭಾಷ್ಯದೀಪಿಕಾ ಹಾಗೂ ವಾಕ್ಯಾರ್ಥಮಂಜರೀ -
ಸಂಪೂರ್ಣ ಸಂಸ್ಕೃತ ಮೂಲ.

**ॐ॥ नच स्मार्तमतद्धर्माभिलापात् ॥ॐ**

एवं निरवकाशलिङ्गेन विष्णोरन्तर्यामित्वं समर्थ्य, प्रकृत्यादेरन्तर्यामित्वं तत्प्रकृतिजीवसाधारणं युक्त्या पराकुर्वत् सूत्रमाह –

**ॐ ॥ न च स्मार्तमतद्धर्माभिलापादिति ॥ अस्यार्थः । चः समुच्चये । स्मार्तं कापिलस्मृत्युक्तम् । प्रधानं जीवश्च अन्तर्यामी न । कुतः ? अतद्धर्माभिलापात् तद्धर्माणां प्रधानजीवधर्माणां त्रिगुणत्वसंसारित्वादीनाम् । अनभिलापात् अनुक्तत्वादित्यर्थः ।**

एवञ्च विष्ण्वसाधारणपृथिव्याद्यविदित्वादिधर्मोपदेशवत् कपिलस्मृत्युक्तप्रकृति-प्रधानजीवासाधारणोपादानत्वजडत्वत्रिगुणत्वसंसारित्वादिधर्माणामनुक्तत्वात् अन्तर्यामी विष्णुरेवेति सिद्धम् ।

**ॐ ॥ शारीरश्चोभयेऽपि हि भेदेनैनमधीयते ॥ॐ**

जीवस्यान्तर्यामित्वं तत्साधकाभावेन निरस्तमपि पुनर्बाधकाख्यविशेषयुक्त्या निराकुर्वत् सूत्रमुपन्यस्यति –

**ॐ॥ शारीरश्चोभयेऽपि हि भेदेनैनमधीयत इति ॥ अस्यार्थः – चो नञोऽनुकर्षणार्थः । हि यस्मात् । उभये माध्यन्दिनाः काण्वाश्च । आत्मनोऽन्तरः (बृ.५।७।२२) विज्ञानादन्तरः (बृ.४।५।२२) इति । एनं जीवम् । अन्तर्यामिणः सकाशात् । भेदेन भिन्नत्वेन । अधीयते पठन्ति । तस्माच्छारीरो जीवश्च नान्तर्यामीत्यर्थः ।**

एवञ्चोभयशाखिभिः 'आत्मानमन्तरः' इति, 'विज्ञानादन्तरः' इति च जीवस्य ब्रह्मणो भेदेनोपदेशादन्तर्यामी विष्णुरेवेति सिद्धम् ।

॥ इति अन्तर्याम्यधिकरणम् ॥

॥ ಪರಿಪೂರ್ಣಚಂದ್ರಿಕೆಯಲ್ಲಿ ಅಂತರ್ಯಾಮ್ಯಧಿಕರಣವು ಮುಗಿಯಿತು ॥

॥ ಶ್ರೀಮಧ್ವೇಶಾರ್ಪಣಮಸ್ತು ॥

ಪರಿಪೂರ್ಣಚಂದ್ರಿಕಾ

# ಅದೃಶ್ಯತ್ವಾಧಿಕರಣ
(೧-೨-೬)

## ಭಾಗ -೧

ಬ್ರಹ್ಮಸೂತ್ರ, ಸೂತ್ರದೀಪಿಕಾ, ಬ್ರಹ್ಮಸೂತ್ರಭಾಷ್ಯ,
ಸತ್ತರ್ಕದೀಪಾವಳಿ, ತತ್ವಪ್ರಕಾಶಿಕಾ,
ಭಾವದೀಪ ಇವುಗಳ ವಿವರಣೆಯೊಂದಿಗೆ
ಸರಳ ಕನ್ನಡ ಅನುವಾದ

* * *

ಭಾಷ್ಯದೀಪಿಕಾ ಹಾಗೂ ವಾಕ್ಯಾರ್ಥಮಂಜರೀ -
ಸಂಪೂರ್ಣ ಸಂಸ್ಕೃತ ಮೂಲ.

॥ ಶ್ರೀಗುರುಭ್ಯೋ ನಮಃ ॥

# ಅದೃಶ್ಯತ್ವಾಧಿಕರಣ

ದೇವದೇವೋತ್ತಮ ದೇವತಾಸಾರ್ವಭೌಮ
ಅಖಿಲಾಂಡಕೋಟಿಬ್ರಹ್ಮಾಂಡನಾಯಕ,ಚತುರ್ದಶಲೋಕಗುರುಗಳಾದ
ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ

## ಬ್ರಹ್ಮಮೀಮಾಂಸಾಶಾಸ್ತ್ರ

## ಅದೃಶ್ಯತ್ವಾದಿಗುಣಗಳುಳ್ಳವನೂ ಸಹ ಮಹಾವಿಷ್ಣುವೇ

**ॐ ॥ अदृश्यत्वादिगुणको धर्मोक्तेः ॥ ॐ (१-२-२१)**

ಆಥರ್ವಣೋಪನಿಷತ್ತಿನಲ್ಲಿ 'ಯತ್ತದದ್ರೇಶ್ಯಮ್' ಇತ್ಯಾದಿಯಾಗಿ ಹೇಳಲ್ಪಟ್ಟ ಅದೃಶ್ಯತ್ವಾದಿಗುಣಗಳು ಪರಮಾತ್ಮನಲ್ಲೇ ಬರುತ್ತವೆ. ಏಕೆಂದರೆ ಮೋಕ್ಷಕಾರಣವಾದ ಪರವಿದ್ಯೆಗೆ ಅಕ್ಷರರೂಪನಾದ ಭಗವಂತನನ್ನು ವಿಷಯನೆಂದು ಹೇಳಿರುವುದರಿಂದ.

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका** — अदृश्यत्वादिगुणकः 'यत्तदद्रेश्यम्' इति श्रुत्युक्तादृश्यत्वादिधर्मविशिष्टाक्षरशब्दवाच्यो विष्णुरेव न प्रकृत्यादिः । कुतः? धर्मोक्तेः ऋगादिपर विद्याविषयत्वरूपविष्णुधर्मस्य 'यया' इति श्रुत्युक्तत्वादित्यर्थः ।।

ಅರ್ಥ - ಅದೃಶ್ಯತ್ವಾದಿಗುಣಕಃ = ಯತ್ತದದ್ರೇಶ್ಯಂ ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ಅದೃಶ್ಯತ್ವಾದಿ ಧರ್ಮಗಳಿಂದ ವಿಶಿಷ್ಟನಾದವನು ಅಕ್ಷರಶಬ್ದವಾಚ್ಯನಾದ ವಿಷ್ಣುವೇ ಆಗುತ್ತಾನೆ ಹೊರತು ಪ್ರಕೃತ್ಯಾದಿಗಳಲ್ಲ. ಏಕೆಂದರೆ ಧರ್ಮೋಕ್ತೇಃ = ಋಗ್ವೇದವೇ ಮೊದಲಾದ ಪರವಿದ್ಯಾವಿಷಯತ್ವವೆಂಬ ವಿಷ್ಣುವಿನ ಧರ್ಮವನ್ನು ಯಯಾ ಎಂಬ ಶ್ರುತಿಯಲ್ಲಿ ಹೇಳಿರುವುದರಿಂದ,

ಪರಿಪೂರ್ಣಚಂದ್ರಿಕಾ

## श्रीमदानन्दतीर्थभगवत्पादाचार्यविरचित-
# ब्रह्मसूत्रभाष्यम्

**भाष्यम् – अदृश्यत्वादिगुणा विष्णोरुक्ताः ।**

ಅನುವಾದ - ಆನಂದಮಯಾಧಿಕರಣದಲ್ಲಿ ಅದೃಶ್ಯತ್ವ ಮೊದಲಾದ ಗುಣಗಳನ್ನು ವಿಷ್ಣುವಿನಲ್ಲಿ ಸ್ಥಾಪಿಸಲಾಗಿದೆ. ಆದರೆ ಮುಂಡಕೋಪನಿಷತ್ತಿನಲ್ಲಿ ಅಕ್ಷರನಲ್ಲಿ ಅದೃಶ್ಯತ್ವವನ್ನು ಹೇಳಿದ್ದು ಕಾಣಿಸುತ್ತಿದೆ.

ಪ್ರತಿಪದಾರ್ಥ -- ಈ ಅಧಿಕರಣದಲ್ಲಿ ದೃಶ್ಯತ್ವಾಭಾವ ಮೊದಲಾದ ಲಿಂಗಗಳನ್ನು ಬ್ರಹ್ಮನಲ್ಲಿ ಸಮನ್ವಯ ಮಾಡಲಾಗಿದೆ. ಹಿಂದಿನ ಅಧಿಕರಣದಿಂದ ಮತ್ತೆ ಬೇರೆ ಅಧಿಕರಣದ ವಿಷಯ ವಾಕ್ಯಗಳಿಂದ ಸಂಗತಿಯನ್ನು ಸಾಂಗತ್ಯದ ಮೂಲಕ ವಿಷಯವಾಕ್ಯವನ್ನು ಉದಾಹರಿಸುವವರಾಗಿ ವಿಷಯ, ಸಂಶಯ ಪೂರ್ವಪಕ್ಷಗಳನ್ನು ಹೇಳುತ್ತಿದ್ದಾರೆ -

ಅದೃಶ್ಯತ್ವಾದಿ ಗುಣಾಃ = ಕಣ್ಣಿಗೆ ಕಾಣಿಸದಿರುವಿಕೆ, ಮೊದಲಾದ ಅಭಾವರೂಪವಾದ ಧರ್ಮಗಳನ್ನು, ವಿಷ್ಣೋಃ = ವಿಷ್ಣುವಿಗೆ, ಉಕ್ತಾಃ = ಆನಂದಮಯಾಧಿಕರಣದಲ್ಲಿ ಹೇಳಲ್ಪಟ್ಟಿದೆ.(१)

**भाष्यम् – तत्र –**

**'यत्तदद्रेश्यमग्राह्यमगोत्रमवर्णमचक्षुःश्रोत्रं तदपाणिपादम् ।**
**नित्यं विभुं सर्वगतं सुसूक्ष्मं तदव्ययं यद् भूतयोनिं परिपश्यन्ति धीराः'**
**(मुं.१-१-६) इत्युक्त्वा –**

(१) भाष्यदीपिका – अत्राधिकरणे दृश्यत्वाद्याभावाख्यलिङ्गं ब्रह्मणि समन्वीयते । पूर्वाधिकरणतद्विषयसङ्गतिविषयवाक्योदाहरणपूर्वकं विषयसंशयौ सयुक्तिकं पूर्वपक्षं च सूचयति – अदृश्यत्वादीति ।। 'गुणाः' शुभधर्माः । आदिपदेनानात्म्यादिग्रहणम् । उक्ता इति ।। आनन्दमयस्य 'अदृश्ये' इति वाक्येनेति च शेषः । उपलक्षणमेतत् । अन्तःस्थस्य 'न विजानन्ति' (तै.आ.३-११) इत्यनेन सर्वगतस्य 'स योऽतोऽश्रुतः' (ऐ.आ. ३-२-४) इत्यनेन अन्तर्यामिणः 'यं पृथिवी न वेद' (बृ.५-७-३) इत्यव्यवहितपूर्वाधिकरणोदाहृतवाक्येन चेत्यपि द्रष्टव्यम् ।

**ಅನುವಾದ - ''ಯಾವ ತತ್ತ್ವವು ಅದೃಶ್ಯವು ಮನಸ್ಸಿನಿಂದ ತಿಳಿಯಲು ಅಶಕ್ಯವೋ ವಸಿಷ್ಠ ಮೊದಲಾದ ಗೋತ್ರಗಳುಳ್ಳದ್ದೂ, ಪ್ರಾಕೃತ ಬಣ್ಣ ವಿಲ್ಲದ್ದೂ, ಪ್ರಾಕೃತ ಕಣ್ಣುಗಳುಳ್ಳದ್ದೂ ಮೊದಲಾದ ಇಂದ್ರಿಯಗಳು ಇಲ್ಲವೋ ಪ್ರಾಕೃತವಾದ ರೂಪ ಇಲ್ಲವೋ ಪ್ರಾಕೃತ ಕಿವಿಗಳಿಲ್ಲದ್ದು ಪ್ರಾಕೃತ ಕರ್ಮೇಂದ್ರಿಯಗಳಿಲ್ಲದ್ದು ನಾಶವಿಲ್ಲದ್ದು ಎಲ್ಲೆಡೆ ತುಂಬಿರುವಂತಹದ್ದು ಎಲ್ಲರ ಒಳಗಡೆ ಅಂತರ್ಯಾಮಿಯಾಗಿರುವಂತಹದ್ದು ಅಣುವಾಗಿರುವಂತಹದ್ದು ಕುಗ್ಗುವಿಕೆ ಮೊದಲಾದ ಧರ್ಮಗಳಿಲ್ಲದ್ದು ಆಗಿದೆಯೊ ಅಂತಹ ಪರಿಪೂರ್ಣವಾದ ವಸ್ತುವನ್ನೇ ಜ್ಞಾನಿಗಳು ಜಗತ್ತಿಗೆ ಕಾರಣವನ್ನಾಗಿ ತಿಳಿಯುತ್ತಾರೆ. ಹೀಗೆ ಮುಂಡಕೋಪನಿಷತ್ತಿನಲ್ಲಿ ಹೇಳಿದೆ.**

ಪ್ರತಿಪದಾರ್ಥ -- ತತ್ರ = ಆವಿಷಯದಲ್ಲಿ, ಯತ್ = ಯಾವ ತತ್ವವು, ಅದ್ರೇಶ್ಯಂ = ಸಂಪೂರ್ಣವಾಗಿ ನೋಡಲು ಸಾಧ್ಯವಿಲ್ಲವೋ, ಅಗ್ರಾಹ್ಯ = ಬುದ್ಧಿಯಿಂದ ಗ್ರಹಿಸಲು ಸಾಧ್ಯವಿಲ್ಲವೋ, ಅಗೋತ್ರಂ = ವಸಿಷ್ಠ ಮೊದಲಾದ ಗೋತ್ರರೆಂದು ಹೇಳಲು ಬರುವುದಿಲ್ಲವೋ, ಅವರ್ಣಂ = ಪ್ರಾಕೃತವಾದ ರೂಪವಿಲ್ಲದ್ದೋ, ಅಚಕ್ಷುಃ = ಪ್ರಾಕೃತವಾದ ಕಣ್ಣುಗಳು ಇಲ್ಲದ್ದೋ, ಅಶ್ರೋತ್ರಂ = ಪ್ರಾಕೃತವಾದ ಕಿವಿಗಳೂ ಇಲ್ಲದ್ದೋ, ತದಪಾಣಿಪಾದಂ = ಪ್ರಾಕೃತವಾದ ಕರ್ಮೇದ್ರಿಯಗಳಿಂದ ರಹಿತವಾಗಿದೆಯೋ, ನಿತ್ಯಂ = ಸ್ವರೂಪತಃ ನಾಶವಿಲ್ಲದ್ದು, ವಿಭುಂ = ಎಲ್ಲೆಡೆ ವ್ಯಾಪಿಸಿದೆಯೋ, ಸರ್ವಗತಂ = ಎಲ್ಲರ ಒಳಗಡೆ ಅಂತರ್ಯಾಮಿಯಾಗಿದೆಯೋ, ಸುಸೂಕ್ಷ್ಮಂ = ಅತ್ಯಂತ, ಸೂಕ್ಷ್ಮವಾಗಿದೆಯೋ, ತದವ್ಯಯಂ = ಕುಗ್ಗುವಿಕೆ ಮುಂತಾದ ಧರ್ಮಗಳಿಲ್ಲದ್ದೋ, ತತ್= ಅಂತಹ, ಪರಿಪೂರ್ಣವಾದ ತತ್ವವನ್ನು, ಧೀರಾಃ = ಜ್ಞಾನಿಗಳು, ಯದ್ಭೂತಯೋನಿಂ = ಜಗತ್ತಿನ ಸೃಷ್ಟ್ಯಾದಿಕಾರಣವನ್ನಾಗಿ, ಪರಿಪಶ್ಯಂತಿ = ತಿಳಿಯುತ್ತಾರೆ. ಇತ್ಯುಕ್ತ್ವಾ = ಮುಂಡಕೋಪನಿಷತ್ತಿನಲ್ಲಿ ಹೀಗೆ ಹೇಳಿದೆ.(೧)

---

(१) **भाष्यदीपिका** – उक्ता इत्यावर्तते । 'उक्त्वा' इत्यनन्तरम् आम्नात इति शेषः । तेन क्त्वाप्रत्ययोपपत्तिः । चन्द्रिकायां तु – इत्युक्त्वा प्रतीयत इति भाष्ये क्रिययोः समानकर्तृकत्वाभावेऽपि क्त्वाप्रत्ययो 'यदोर्वंशं नरः श्रुत्वा सर्वपापैः प्रमुच्यते' इतिवद् द्रष्टव्यमित्युक्तेरप्ययमेवाभिप्रायः । पर इतीत्यनन्तरं वाक्य इति शेषः । 'तस्माच्च' इति पदद्वयं भाष्यकारीयम् । तथाचेत्थं योजना – पूर्वं ये अदृश्यत्वादिगुणा विष्णोरुक्तास्ते यत्र कस्यचिदक्षरस्योक्तास्तत्राऽथर्वणऽदृश्यत्वादिगुणकाक्षरविषये 'यत्तदद्रेश्यमग्राह्यम्' इत्याद्युक्त्वा तथा तत्रैव 'यथोर्णनाभिः' इत्यादि 'विश्वम्' इत्यन्तं वाक्यं चोक्त्वा पठित्वा अनन्तरमाम्नाते -

'दिव्यो ह्यमूर्तः पुरुषः स बाह्याभ्यन्तरो ह्यजः ।
अप्राणो ह्यमनाः शुभ्रो ह्यक्षरात् परतः परः ।।'

इत्युत्तरवाक्ये 'तस्मादक्षरात्' प्रकृतादक्षरादपि 'परः' उत्तमः 'प्रतीयते' प्रतिपाद्यतया

भाष्यम् –

'यथोर्णनाभिः सृजते गृह्णते च यथा पृथिव्यामोषधयः सम्भवन्ति ।
यथा सतः पुरुषात् केशलोमानि तथाऽक्षरात् सम्भवतीह विश्वम् ॥'
(मुं.१-१-७.) इत्युक्त्वा,

तस्माच्च – 'अक्षरात् परतः परः' (मुं. २-१-२.)इति परः प्रतीयते। अतोऽब्रवीत्
- सू - ॐ ॥ अदृश्यत्वादिगुणको धर्मोक्तेः ॥ ॐ ॥ २१ ॥

ಅನುವಾದ - ಜೇಡರಹುಳು ಬಲೆಯನ್ನು ತನ್ನ ಬಾಯಿಂದ ನಿರ್ಮಿಸುತ್ತದೆ. ಕೆಲಸವಾದ ಮೇಲೆ ತಾನೇ ತಿಂದುಬಿಡುತ್ತದೆ. ಇದರಂತೆ ಭೂಮಿಯಲ್ಲಿ ಸಸ್ಯ ಮೊದಲಾದುವುಗಳು ಹುಟ್ಟುತ್ತವೆ ಅದರಂತೆ, ಬದುಕಿರುವ ಮನುಷ್ಯನ ಶರೀರದಿಂದ ಕೇಶ, ರೋಮ ಮೊದಲಾದವುಗಳು ಹುಟ್ಟುತ್ತವೆ ಇದರಂತೆ, ನಾಶರಹಿತನಾದ ಪರಮಾತ್ಮನ ದೆಸೆಯಿಂದ ಸಮಸ್ತ ಬ್ರಹ್ಮಾಂಡವು ಹುಟ್ಟುತ್ತದೆ. ಹೀಗೆ ಶ್ರುತಿಯಲ್ಲಿ ಹೇಳಿ ಅಂತಹ ಸರ್ವೋತ್ತಮನಾದ ಅಕ್ಷರತತ್ವಕ್ಕಿಂತ, ಉತ್ತಮವಾದ ವಸ್ತುವಿಗಿಂತಲೂ ಉತ್ತಮವಾದುದೆಂದು, ವಿಷ್ಣುವನ್ನು ಸರ್ವೋತ್ತಮನೆಂದು ಹೇಳಿದೆ. ಇಲ್ಲಿ ಅದೃಶ್ಯತ್ವವನ್ನು ಅಕ್ಷರತತ್ವದಲ್ಲಿ ವಿಶೇಷಣವಾಗಿ

---

ज्ञायत इति । अनेन पूर्वोक्तादृश्यत्वस्य विष्ण्वन्यनिष्टत्वाक्षेपात् पूर्वेणाऽनन्दमयाद्यधिकरणेन अस्याऽक्षेपिकी सङ्गतिः । अदृश्यत्वादिरूपो विषयः। किं विष्णोरन्यस्य वेति सन्देहः । न विष्णोरदृश्यत्वादीति पूर्वः पक्षः । अदृश्यत्वादिविशिष्टे 'अक्षरात् सम्भवति' इत्यक्षरशब्दश्रवणात् तस्य च तत्परत्वोक्त्या विष्णोः निरवकाशत्वादिति पूर्वपक्षयुक्तिश्च सूचिता भवतीति । श्रुत्यर्थस्तु – 'यत्' परविद्यागम्यमक्षरं 'तद् अद्रेश्यं' दृश्यशब्दितचक्षुरादि ज्ञेयभिन्नम् । 'अग्राह्यं' मनोग्राह्यभिन्नम् । 'अगोत्रं' न विद्यते गोत्रादिकं यस्य तद्धि तथोच्यते इति सुधोक्तेर्वसिष्ठादिगोत्रहीनम् । 'अवर्णं' प्राकृतशुक्लादिवर्णहीनम् । अदृश्यत्वादिशब्दैर्दृश्याद्यन्योन्याभावोऽभिधीयत इति सुधोक्तेः गोत्रवर्णभिन्नत्वं चार्थः । तत् 'अचक्षुःश्रोत्रं' प्राकृतज्ञानेन्द्रियादिशून्यम् । तत् 'अपाणिपादं' प्राकृतकर्मेन्द्रियशून्यं 'नित्यं' स्वरूपनाशरहितं 'विभुं' समर्थं 'सर्वगतं' व्याप्तं 'सुसूक्ष्मम्' अत्यन्ताव्यक्तं 'यद् भूतयोनिं' 'धीराः' ज्ञानिनः परिपश्यन्ति 'तद् अक्षरम्' अव्ययं देहतो नाशशून्यमिति । अत्र तच्छब्दस्य सर्वत्रान्वयाय त्रिर्ग्रहणम् । भूतयोनिपदं च सत्तर्कदीपावल्यां भूतानाम् आकाशादीनां ब्रह्मादिचेतनानां वा केषाञ्चित् स्त्रीव्यवधानेन विना स्वदेहादेवोत्पादकमिति व्याख्यातम् । धीरा इत्यनेनादृश्यत्वदृश्यत्वयोर्विरोधः परिहृतः ॥

ಹೇಳಿದ್ದರಿಂದ. ಅಕ್ಷರಶಬ್ದದಿಂದ ವಾಚ್ಯವಾದ ವಸ್ತು ಯಾವುದು? ಎಂಬ ಸಂಶಯಕ್ಕೆ ಅವಕಾಶ ಇದೆ. ಆದ್ದರಿಂದ ಸೂತ್ರಕಾರರು ಉತ್ತರಿಸುತ್ತಿದ್ದಾರೆ.

ಓಂ ॥ ಅದೃಶ್ಯತ್ವಾದಿಗುಣಕೋ ಧರ್ಮೋಕ್ತೇಃ ॥ ಓಂ ಎಂಬುದಾಗಿ.

ಇದನ್ನೇ ದೃಷ್ಟಾಂತ ಪುರಸ್ಸರವಾಗಿ ಸ್ಪಷ್ಟಪಡಿಸುತ್ತಾರೆ -

ಪ್ರತಿಪದಾರ್ಥ -- ಊರ್ಣನಾಭಿಃ = ಜೇಡರಹುಳು, ಯಥಾ = ಯಾವರೀತಿಯಾಗಿ, ಸೃಜತೇ = ತನ್ನ ಎಂಜಲಿನಿಂದ ಬಲೆಯನ್ನು ಸೃಷ್ಟಿಸುತ್ತದೋ, ಗೃಹ್ಣತೇ = ಕೆಲಸವಾದ ಮೇಲೆ ತಾನೇ ತಿನ್ನುತ್ತದೋ, ಚ = ಮತ್ತು, ಯಥಾ = ಯಾವರೀತಿಯಾಗಿ, ಪೃಥಿವ್ಯಾಂ = ಭೂಮಿಯಲ್ಲಿ, ಓಷಧಯಃ = ಶಸ್ಯಗಳು, ಸಂಭವಂತಿ = ಹುಟ್ಟುತ್ತವೋ, ಯಥಾ = ಯಾವರೀತಿಯಾಗಿ, ಸತಃ = ಬದುಕಿರುವ, ಪುರುಷಾತ್ = ಪುರುಷನ ಶರೀರದಿಂದ, ಕೇಶಲೋಮಾನಿ = ಕೇಶ, ರೋಮ, ಮೊದಲಾದವು, ಸಂಭವಂತಿ = ಪುನಃ ಪುನಃ ಹುಟ್ಟುತ್ತವೋ, ತಥಾ = ಅದೇರೀತಿಯಾಗಿ, ಅಕ್ಷರಾತ್ = ನಾಶರಹಿತನಾದ ಪರಮಾತ್ಮನ ದೆಸೆಯಿಂದ, ವಿಶ್ವಮ್ = ಸಕಲ ಜಗತ್ತೂ, ಸಂಭವತಿ = ಹುಟ್ಟುತ್ತದೆ, ಇತಿ = ಹೀಗೆ, ಇಹ = ಮುಂಡಕೋಪನಿಷತ್ತಿನಲ್ಲಿ, ಉಕ್ತ್ವಾ = ಹೇಳಿ, ತಸ್ಮಾತ್ = ಅಂತಹ, ಪರತಃ = ಸರ್ವೋತ್ತಮವಾದ, ಅಕ್ಷರಾತ್= ಅಕ್ಷರತತ್ವದ ದೆಸೆಯಿಂದ, ಪರಃ = ಶ್ರೇಷ್ಠನಾದ ಭಗವಂತನನ್ನು ಹೇಳಿದ್ದು, ಪ್ರತೀಯತೇ = ಕಾಣಸುತ್ತದೆ. ಅತಃ = ಅಂತಹ, ಅಕ್ಷರ ತತ್ವವು ಯಾವುದು ಎಂಬ ಶಂಕೆಗೆ, ಬ್ರವೀತಿ = ಸೂತ್ರಕಾರರೇ ಉತ್ತರಿಸುತ್ತಿದ್ದಾರೆ "ಅದೃಶ್ಯತ್ವಾದಿಗುಣಕೋ ಧರ್ಮೋಕ್ತೇಃ"(१)

---

(१) **भाष्यदीपिका** – एतदेव दृष्टान्तोक्त्या स्पष्टयति – **यथेति** ।। 'यथोर्णनाभिः' तन्तुवायः 'सृजते' स्वोपभुक्तवस्तूनि तन्त्वात्मना परिणतानि स्वदेहान्निष्कासयति । 'गृह्णते' चक्राद्याकारतया बहिर्निष्कासितं वस्तु पुनरन्तः स्वोदरे गृह्णाति । तथा विश्वं प्रलये निगीर्णं सृष्टौ अक्षरात् सम्भवति । दृष्टान्तान्तरमाह – **यथेति** ।। 'ओषधयः' अङ्कुरादयः । दृष्टान्तान्तरमाह – **यथेति** ।। 'सतः' जीववतः पुरुषाच्छरीरात् शिरस्याः केशाः, अन्यानि लोमानि तानि । 'इह' लोके 'विश्वं' नानाविधकार्यं 'सम्भवति' जायत इत्यर्थः । अत्र ब्रह्मणो भूतकारणत्वं तत्कर्तृत्वरूपं न तूपादानत्वमिति वक्तुमाद्यो दृष्टान्तः । अङ्कुरादिजनने पृथिवी बीजमिव विश्वसृष्टौ ब्रह्म तत्कर्मापेक्षत इति वक्तुं द्वितीयः । अनायासेन सृष्टिरिति वक्तुं तृतीयः ।।

दिव्य इत्यादिवाक्यं तु 'दिव्यः' अद्भुतः 'अमूर्तः' नियतपरिच्छिन्नपरिमाणरहितः । किन्तु बाह्य आभ्यन्तरश्च । 'अप्राणो ह्यमनाः' इति पदाभ्यां षोडशकलाराहित्यमुच्यते । 'शुभ्रः' शुद्धः जडात् 'परतः अक्षरात्' चित्प्रकृतेः पर इति कर्मनिर्णयटीकायां व्याख्यातम् ।। सिद्धान्तयत्सूत्रमवतारयति – अत इति ।। इति सङ्गतिसम्भवाद् इति शङ्कासद्भावाच्च तदुत्तररूपं सूत्रमब्रवीद्बादरायण इत्यर्थः । तत्सूत्रं पठति – अदृश्यत्वादीति ।।

भाष्यम् – पृथिव्यादिदृष्टान्तमुक्त्वा 'अक्षरात् सम्भवतीह विश्वम्' (मुं.१-१-७) इत्यतः परं तत्परतः पराभिधानात् 'कूटस्थोऽक्षर उच्यते' (भ.गी. १५-१६) इति स्मृतेश्च प्रकृतेः प्राप्तिः ।

ಪೃಥಿವಿ, ಜೇಡರ ಹುಳ, ಮನುಷ್ಯ ಮೊದಲಾದ ದೃಷ್ಟಾಂತಗಳನ್ನು ಹೇಳಿ, 'ಅಕ್ಷರತತ್ವದಿಂದ ಸಮಸ್ತ ಜಗತ್ತು ಹುಟ್ಟುತ್ತದೆ' ಎಂದು ಹೇಳಿ, ಅನಂತರ ಅದಕ್ಕಿಂತ ಸರ್ವೋತ್ತಮನನ್ನಾಗಿ ಹೇಳಿದ ಕಾರಣ 'ಕೂಟಸ್ಥೋऽಕ್ಷರ ಉಚ್ಯತೇ' ಎಂಬುದಾಗಿ ಗೀತೆಯಲ್ಲಿ ಹೇಳಿದ್ದರಿಂದಲೂ ಸಹ ಅಕ್ಷರ ಶಬ್ದದಿಂದ ಲಕ್ಷ್ಮೀದೇವಿಯು ಹೇಳಲ್ಪಟ್ಟಿದ್ದಾಳೆ. ಆದ್ದರಿಂದ ಉಲ್ಲೇಖಿಸಲ್ಪಟ್ಟಿದೆ.

ಪ್ರತಿಪದಾರ್ಥ -- ಅದೃಶ್ಯತ್ವ ಮೊದಲಾದ ಗುಣಗಳು ವಿಷ್ಣುವಿನದ್ದು ಅಲ್ಲವೆಂದಾದರೆ ವಾಕ್ಯಕ್ಕೆ ನಿರ್ವಿಷಯತ್ವ ಬರುವ ಕಾರಣ ಅಪ್ರಾಮಾಣ್ಯದೋಷವು ಬರುತ್ತದೆ. ಈ ಪ್ರಶ್ನೆಯನ್ನು ಪರಿಹರಿಸುವುದಕ್ಕಾಗಿ ಪೂರ್ವಪಕ್ಷವನ್ನೇ ಸಮರ್ಥಿಸುತ್ತಿದ್ದಾರೆ.

ಪೃಥಿವ್ಯಾದಿದೃಷ್ಟಾಂತಂ = ಪೃಥಿವಿ, ಜೇಡರ ಹುಳ, ಮನುಷ್ಯ ಮೊದಲಾದ ಉದಾಹರಣೆಗಳನ್ನು, ಉಕ್ತ್ವಾ = ಹೇಳಿ, ಅಕ್ಷರಾತ್ = ಅಕ್ಷರತತ್ವದಿಂದ, ವಿಶ್ವಂ = ಪ್ರಪಂಚವು ಸಂಭವತಿ ಹುಟ್ಟುತ್ತದೆ, ಇತಿ = ಈ ರೀತಿಯಾಗಿ, ಉಕ್ತ್ವಾ = ಹೇಳಿ, ತತ್ = ಆ ಅಕ್ಷರ ತತ್ವಕ್ಕಿಂತ, ಪರತಃ = ಉತ್ತಮವಾದ ವಸ್ತು, ಪರ = ಉತ್ತಮವಾದ ವಸ್ತುವನ್ನು, ಅಭಿಧಾನಾತ್ = ಕೊನೆಯಲ್ಲಿ ಹೇಳಿರುವುದರಿಂದ, ಅಷ್ಟೇ ಅಲ್ಲದೆ ಕೂಟಸ್ಥೋऽಕ್ಷರ ಉಚ್ಯತೇ' ನಿರ್ವಿಕಾರಳಾದ ಲಕ್ಷ್ಮೀದೇವಿಯು ಅಕ್ಷರಶಬ್ದವಾಚ್ಯಳಾಗಿದ್ದಾಳೆ. ಇತಿ = ಈ ರೀತಿಯಾಗಿ, ಸ್ಮೃತೇಃ ಚ = ಗೀತೆಯಲ್ಲಿ ಹೇಳಿರುವುದರಿಂದಲೂ, ಪ್ರಕೃತೇಃ = ಚಿತ್ಪ್ರಕೃತಿಯೆನಿಸಿದ ಲಕ್ಷ್ಮೀದೇವಿಗೆ, ಪ್ರಾಪ್ತಿಃ = ಅದೃಶ್ಯತ್ವವು ಪ್ರಾಪ್ತವಾಗುತ್ತದೆ.[१]

---

(१) भाष्यदीपिका – नन्वदृश्यत्वादिकं विष्णोर्न चेत् – तर्हि वाक्यस्य निर्विषयतयाऽप्रामाण्यं स्याद् इत्यतः पूर्वपक्षं विशदयति – पृथिव्यादीति ।। श्रुतावूर्णनाभिदृष्टान्तस्य प्राथम्येऽपि तत्र सृजत इत्यनेन कर्तृत्वमात्रप्रतीतेः पूर्वपक्षानुकूलस्योपादानतया जगत्कारणत्वस्याप्रतीतेः तं परित्यज्य पृथिव्यादीत्युक्तम् । चः समुच्चये । तथा चेत्थं योजना – पृथिव्यादिदृष्टान्तमुक्त्वा अनन्तरमुक्तात् 'अक्षरात् सम्भवतीह विश्वम्' इत्यतो वाक्यात् 'परम्' अनन्तरमधीतेन 'अक्षरात्परतः परः' इति वाक्येन 'तत्परतः' तस्मात् कारणीभूतादक्षरात् परतः परस्योत्तमस्योक्तत्वात्, तथा 'कूटस्थोऽक्षर उच्यते' इति स्मृतेश्च जडप्रकृतेश्चित्प्रकृतेश्चादृश्यत्वादिप्राप्तिरिति ।।

अत्रायं विवेकः – यदा जडप्रकृतेः पूर्वपक्षविषयता तदाऽक्षरशब्दो हेतुः तत्परतः पराभिधानं च । तस्य निरवकाशत्वे अक्षरात्परत इति च व्यधिकरणे पञ्चम्यौ । यदा च चित्प्रकृतेस्तदाऽक्षरशब्दस्तत्परो हेतुः । समानाधिकरणे पञ्चम्यौ । स्मृतेश्चेत्यपि हेतुरिति । स्मृतिश्चात्राधिकरणे व्याख्याता ।।

**भाष्यम् – ब्रह्मशब्दात्तत्परतः पराभिधानादेव च हिरण्यगर्भस्य ।**

ಅನುವಾದ - ಅಥವಾ 'ಸ ಬ್ರಹ್ಮವಿದ್ಯಾಮ್' ಎಂಬ ಬ್ರಹ್ಮಪ್ರಕರಣದಲ್ಲಿ ಬ್ರಹ್ಮಶಬ್ದವು ಕೇಳಿಸುತ್ತಿದೆ. ಮತ್ತು ವಿಷ್ಣು ಅಕ್ಷರತತ್ತ್ವಕ್ಕಿಂತ ಉತ್ತಮೋತ್ತಮನೆಂದು ಹೇಳಿರುವ ಕಾರಣ, ಚತುರ್ಮುಖಬ್ರಹ್ಮನೂ ಸಹ ಅಕ್ಷರಶಬ್ದದಿಂದ ಪ್ರತಿಪಾದ್ಯನಾಗಬಹುದು.

ಪ್ರತಿಪದಾರ್ಥ -- ಅದೃಶ್ಯತ್ವ ಎಂಬ ಧರ್ಮವು ಚತುರ್ಮುಖಬ್ರಹ್ಮನಲ್ಲಿಯೂ ಬರಬಹುದೆಂದು ಮತ್ತೊಂದು ಬಗೆಯ ಪೂರ್ವಪಕ್ಷವನ್ನು ತೋರಿಸುತ್ತಿದ್ದಾರೆ.

ಬ್ರಹ್ಮಶಬ್ದಾತ್ = ಬ್ರಹ್ಮಪದದ ಪ್ರಯೋಗವು ಕಾಣಸುತ್ತಿರುವುದರಿಂದ, ತತ್ ಪರತಃ = ಶ್ರೀತತ್ತ್ವಕ್ಕಿಂತ, ಚ = ಮತ್ತು, ಪರಾಭಿಧಾನಾದೇವ = ವಿಷ್ಣುವನ್ನು ಸರ್ವೋತ್ತಮನೆಂದು ಹೇಳಿರುವುದರಿಂದ, ಹಿರಣ್ಯಗರ್ಭಸ್ಯ = ಚತುರ್ಮುಖಬ್ರಹ್ಮದೇವರಿಗೂ, ತತ್ಪ್ರಾಪ್ತಿಃ = ಅದೃಶ್ಯತ್ವವು ಪ್ರಾಪ್ತವಾಗುತ್ತದೆ. ಹೀಗೆ ಲಕ್ಷ್ಮೀದೇವಿ, ಅಥವಾ ಚತುರ್ಮುಖ ಬ್ರಹ್ಮದೇವರಲ್ಲಿ ವಿಷ್ಣುವಿನ ಅದೃಶ್ಯತ್ವಧರ್ಮವು ಬರುತ್ತದೆಂದು ಪೂರ್ವಪಕ್ಷ.[१]

**भाष्यम् – 'तमेवं विद्वानमृत इह भवति' (तै.आ. ३-१२-७.) 'तत्कर्म हरितोषं यत् सा विद्या तन्मतिर्यया ।' 'अथ द्वे वाव विद्ये वेदितव्ये परा चैवापरा च । तत्र ये वेदा यान्यङ्गानि यान्युपाङ्गानि यानि प्रत्यङ्गानि साऽपरा । अथ परा यया स हरिर्वेदितव्यो योऽसावदृश्यो निर्गुणः परः परमात्मा' इत्यादिना तद्धर्मत्वेनावगतपरविद्याविषयत्वोक्तेर्विष्णुरेवादृश्यत्वादिगुणकः ॥ २१ ॥**

ಅನುವಾದ - ಸಿದ್ಧಾಂತ ಹೀಗಿದೆ – 'ಹೀಗೆ ಭಗವಂತನನ್ನು ತಿಳಿದರೆ ಮಾತ್ರ ಮೋಕ್ಷ' ಎಂದು ಮತ್ತು 'ಯಾವುದು ಭಗವಂತನಿಗೆ ಸಂತೋಷಕರವಾಗುತ್ತದೋ ಅಂತಹದ್ದೇ ಸತ್ಕರ್ಮ ಎನಿಸುತ್ತದೆ; ಯಾವ ವಿದ್ಯೆಯಿಂದ ಭಗವದ್ವಿಷಯಕವಾದ ಬುದ್ಧಿಯು ಹುಟ್ಟುತ್ತದೋ ಅದೇ ಪರವಿದ್ಯೆ ಎನಿಸುತ್ತದೆ.

---

(१) भाष्यदीपिका – पूर्वपक्षान्तरं वक्ति – ब्रह्मशब्दादिति ।।'स ब्रह्मविद्याम्' इत्यादौ श्रुतब्रह्मशब्दादित्यर्थः । ब्रह्मशब्दो विष्णावेव मुख्य इति तस्यैव साधको नेतरस्येत्यतो हेत्वन्तरमाह – परत इति ।। व्यधिकरणे पञ्चम्यौ । तथा च - हिरण्यगर्भाख्यादक्षरात् 'परतः' श्रीतत्त्वात् परस्य विष्णोरभिधानादित्यर्थः । एवशब्देन हेतोर्निरवकाशत्वं नात्र हेत्वन्तरं गवेषणीयमिति च सूचयति । हिरण्यगर्भस्य प्राप्तिरित्यन्वयः । उपलक्षणमेतत् । 'कर्तारमीशम्' इतीशशब्दश्रवणाद् रुद्रस्य वा अदृश्यत्वादिप्राप्तिरिति वक्ष्यमाणमत्रापि द्रष्टव्यम् । अस्मिन् पक्षे ईशशब्दस्य विष्णौ सावकाशत्वशङ्कायामनन्तरं तत्परतः पराभिधानादित्यपि योज्यम् । अत्रापि व्यधिकरणे पञ्चम्यौ ।।

ಅಧಿಕಾರವನ್ನು ಹೊಂದಿದ ಮೇಲೆ ತಿಳಿಯಬೇಕಾದ ವಿದ್ಯೆಗಳು ಎರಡು. ಪರ-ಅಪರ ಎಂದು. ಈ ಎರಡು ವಿದ್ಯೆಗಳಲ್ಲಿ ಋಗ್ವೇದ ಮೊದಲಾದ ನಾಲ್ಕುವೇದಗಳು ಶಿಕ್ಷಾ, ವ್ಯಾಕರಣ, ಛಂದಸ್ಸು, ನಿರುಕ್ತ, ಜ್ಯೋತಿಷ್ಯ ಮತ್ತು ಕಲ್ಪ ಎಂಬ ಆರು ವೇದಾಂಗಗಳು ವೈದ್ಯಶಾಸ್ತ್ರ, ಧರ್ಮಶಾಸ್ತ್ರ, ಗಾಂಧರ್ವಶಾಸ್ತ್ರ, ಸ್ಥಾಪತ್ಯಗಳೆಂಬ ಉಪಾಂಗಗಳು, ಮತ್ತು ಕಲೆ ಮೊದಲಾದವುಗಳು ಇವೆಲ್ಲವೂ ಸಹ ಅಪರವಿದ್ಯೆಗಳು. ಇನ್ನು ಪರವಿದ್ಯೆಯೆಂದರೆ ಶ್ರುತಿಪ್ರಸಿದ್ಧನಾದ, ಸಾಕಲ್ಯದಿಂದ ತಿಳಿಯಲು ಅಸಾಧ್ಯನಾದ, ಪ್ರಾಕೃತಗುಣಗಳಿಂದ ರಹಿತನಾದ, ಉತ್ತಮೋತ್ತಮನಾದ, ಸಕಲ ಪ್ರೇರಕನಾದ, ಪಾಪಪರಿಹಾರಕನೂ ಆದ ಪರಮಾತ್ಮನು ಯಾವ ವಿದ್ಯೆಯಿಂದ ತಿಳಿಯಲು ಅರ್ಹನಾಗಿದ್ದಾನೋ ಅಂತಹ ವಿದ್ಯೆಯೇ ಪರ ಎಂಬ ಶಬ್ದದಿಂದ ವಾಚ್ಯವಾಗಿದೆ.

ಇವೇ ಮೊದಲಾದ ವಾಕ್ಯಗಳಿಂದ ಪರವಿದ್ಯಾವಿಷಯತ್ವವನ್ನು ವಿಷ್ಣುವಿಗೆ ಹೇಳಿರುವುದರಿಂದ ಅದೃಶ್ಯತ್ವಾದಿಗಳು ವಿಷ್ಣುವಿನ ಅಸಾಧಾರಣವಾದ ಧರ್ಮಗಳೇ ಆಗಿವೆಯೆಂದು ನಿರ್ಣಯವಾಗುತ್ತದೆ.

ಪ್ರತಿಪದಾರ್ಥ -- ಹೀಗೆ ಪೂರ್ವಪಕ್ಷವು ಪ್ರಾಪ್ತವಾದರೆ ಅದನ್ನು ನಿರಾಕರಿಸುವುದಕ್ಕಾಗಿ ಸೂತ್ರವನ್ನು ವ್ಯಾಖ್ಯಾನಿಸುತ್ತಿದ್ದಾರೆ.

ತಮ್ = ಪರಮಾತ್ಮನನ್ನು, ಏವಂ = ಹಿಂದೆ ಹೇಳಿದ ಪ್ರಕಾರದಲ್ಲಿ ಅನಂತ ಗುಣಗಳುಳ್ಳವನನ್ನಾಗಿ, ವಿದ್ವಾನ್ = ತಿಳಿದರೆ, ಇಹ = ಈ ಲೋಕದಲ್ಲಿ, ಅಮೃತಃ = ಮುಕ್ತನಾಗುತ್ತಾನೆ. ಹೀಗೆ ತೈತ್ತಿರೀಯೋಪನಿಷತ್ತು ಹೇಳಿದೆ.

ಮತ್ತು ಯತ್ = ಯಾವುದು, ಹರಿತೋಷಂ = ಪರಮಾತ್ಮನಿಗೆ, ಸಂತೋಷಕರವಾಗಿದೆಯೋ, ತತ್ಕರ್ಮ = ಅದೇ ಸತ್ಕರ್ಮವು, ಯಯಾ = ಯಾವ ವಿದ್ಯೆಯಿಂದ, ತನ್ಮತಿಃ = ಪರಮಾತ್ಮನ ತಿಳುವಳಿಕೆಯು ಪ್ರಾಪ್ತವಾಗುತ್ತದೋ, ಸಾ = ಅದೇ, ವಿದ್ಯಾ = ಪ್ರವಿದ್ಯೆಯು ಹೀಗೆ ಹೇಳಿರುವುದರಿಂದ ಶ್ರುತಿಪ್ರತಿಪಾದ್ಯನು ಪರಮಾತ್ಮನೇ ಆಗುತ್ತಾನೆ.

ಅಥ = ಅಧಿಕಾರಸಂಪತ್ತಿಯ ಅನಂತರ, ವೇದಿತವ್ಯೇ = ತಿಳಿಯಲು ಯೋಗ್ಯವಾದವುಗಳು, ದ್ವೇ ವಾವ ವಿದ್ಯೇ = ಎರಡೇ ವಿದ್ಯೆಗಳು, ಪರ = ಪರವಿದ್ಯೆ, ಚ = ಮತ್ತು, ಅಪರಾ ಚ = ಅಪರವಿದ್ಯೆ ಎಂದು.

ತತ್ರ = ಈ ಎರಡು ವಿದ್ಯೆಗಳಲ್ಲಿ, ಯೇ = ಯಾವುದು, ವೇದಾಃ = ಋಗ್ವೇದ ಮೊದಲಾದ ನಾಲ್ಕುವೇದಗಳು, ಯಾನಿ ಅಂಗಾನಿ = ವೇದಾರ್ಥಗಳನ್ನು ತಿಳಿಯಲು ಅನುಕೂಲಕರವಾದ, ಶಿಕ್ಷಾದಿ ಶಾಸ್ತ್ರಗಳು, ಯಾನಿ ಉಪಾಂಗಾನಿ = ವೈದ್ಯಶಾಸ್ತ್ರ ಧರ್ಮಶಾಸ್ತ್ರ ಮೊದಲಾದ ಉಪಾಂಗಗಳು, ಯಾನಿ ಪ್ರತ್ಯಾಂಗಾನಿ = ಉಳಿದ ಕಲೆ ಮೊದಲಾದವುಗಳು, ಸಾ = ಇವೆಲ್ಲವೂ ಸಹ, ಅಪರಾ = ಅಪರವಿದ್ಯಾ ಎಂಬ ಶಬ್ದದಿಂದ ಪ್ರತಿಪಾದ್ಯವಾಗಿವೆ. ಅಥ = ಅನಂತರ, ಪರಾ = ಪರವಿದ್ಯೆಯೆಂದರೆ, ಯಃ = ಯಾವ ಶ್ರುತಿಪ್ರಸಿದ್ಧನಾದ, ಅದೃಶ್ಯಃ = ಸಂಪೂರ್ಣವಾಗಿ ತಿಳಿಯಲು ಅನರ್ಹನಾದ, ನಿರ್ಗುಣಃ = ಪ್ರಾಕೃತಗುಣಗಳಿಂದ ರಹಿತನಾದ, ಪರಃ = ಸರ್ವೋತ್ತಮನಾದ,

ಪರಮಾತ್ಮಾ = ಸಕಲನಿಯಾಮಕನಾದ, ಅಸೌ = ಅಂತಹ, ಹರಿಃ = ಪಾಪಪರಿಹಾರಕನಾದ ಪರಮಾತ್ಮನು, ಯಯಾ = ಯಾವ ವಿದ್ಯೆಯಿಂದ, ವೇದಿತವ್ಯಃ = ತಿಳಿಯಲು ಯೋಗ್ಯನೋ, ಸಾ = ಅಂತಹ ವಿದ್ಯೆಯು, ಪರಾ = ಪರಶಬ್ದವಾಚ್ಯವಾಗುತ್ತದೆ.

ಇತ್ಯಾದಿನಾ = ಇವೇ ಮೊದಲಾದವಾಕ್ಯಗಳಿಂದ, ತದ್ಧರ್ಮತ್ವೇನ = ಭಗವಂತನ ಧರ್ಮ ಎಂಬುದಾಗಿ, ಅವಗತ = ತಿಳಿಯಲ್ಪಟ್ಟ, ಪರವಿದ್ಯಾವಿಷಯತ್ವೋಕ್ತೇಃ = ಪರವಿದ್ಯಾ ವಿಷಯತ್ವವನ್ನು ಹೇಳಿರುವುದರಿಂದ, ವಿಷ್ಣುರೇವ = ಮಹಾವಿಷ್ಣುವೇ, ಅದೃಶ್ಯತ್ವಾದಿಗುಣಕಃ = ಅದೃಶ್ಯತ್ವಮೊದಲಾದ ಧರ್ಮಗಳುಳ್ಳವನಾಗುತ್ತಾನೆ.[१]

---

(१) **भाष्यदीपिका – एवं प्राप्तं पूर्वपक्षं प्रतिक्षेप्तुं सूत्रं व्याचष्टे – तमेवमिति ।।** 'तमेवम्' इत्येकं श्रुतिवाक्यम् । 'तत्' इत्यपरं स्मृतिवाक्यम् । 'अथ' इत्यन्यच्छ्रुतिवाक्यम् । आदिपदेन 'तदेतद् ब्रह्म' (बृ.४-५-१९.) 'त्रिपादस्यामृतम्' (ऋ.१०-९०-३.) इत्यादिकं गृह्यते । तस्य विष्णोर्धर्मस्तद्धर्मः तस्य भावस्तत्त्वं तेनेति विग्रहः । प्रकारे तृतीया । अवगतत्वं प्रसिद्धत्वं विषयत्वविशेषणम् । अमृतत्वादेरप्युपलक्षकमेतत् । अत्रेति शेषः । सूत्रेऽनुवृत्तस्य तत्त्वित्यस्यार्थो विष्णुरेवेति । अत्रादृश्यत्वं दृश्यभिन्नत्वम् । तच्च स्वरूपम्, नतु गोत्राद्यत्यन्ताभाववद्ब्रह्मभिन्नम् । तत्र तद्वत्त्वं ब्रह्मस्वरूपमिति विशेषं वक्तुम् अदृश्यत्वादयो गुणा यस्येति बहुव्रीहित्वं च सूचयितुं शुभधर्मार्थकगुणशब्दप्रयोगः कप्रत्ययश्च । तथा चेत्थं सूत्रभाष्ययोजना - अदृश्यत्वादिगुणकस्तत्तु विष्णुरेव । कुतः? अत्र प्रकरणे 'अथ परा यया तदक्षरमधिगम्यते' (मुं. १-१-५.) 'तदेतदक्षरं ब्रह्म' (मुं.२-२-२) 'पुरुष एवेदं विश्वं कर्म तपोब्रह्म परामृतम्' (मुं.२.१.१०) इति वाक्येषु तस्यादृश्यत्वादिगुणकस्य परविद्याविषयत्वरूपधर्मोक्तेः । न च तस्य परविद्याविषयत्वोक्तावपि कुतो विष्णुत्वमिति वाच्यम् । यतस्तत् 'तमेवम्' इत्यादिना तद्धर्मत्वेनावगतमिति । अत्र 'तमेवम्' इति श्रुतौ मोक्षसाधनज्ञानविषयत्वोक्त्या विष्णोः परविद्याविषयत्वमुक्तं भवति । मोक्षसाधनविद्याया एव परविद्यात्वात् । तत्कर्मेति स्मृतावपि यद्धरितुष्टिकरं तदेव कर्म । यया 'तन्मतिः' हरेः ज्ञानं भवति, सैव विद्येत्युक्तत्वेन तस्य परविद्याविषयत्वमुच्यते । 'द्वे विद्ये वेदितव्ये' (मुं.१-१-४.) इत्यत्रापि विष्णोः परविद्याविषयत्वमुच्यत इति न हेतुविशेषणासिद्धिः । अथेति प्रकरणारम्भे । वावेत्यवधारणे । चौ परस्परसमुच्चये । तथा च परा चापरा च द्वे विद्ये ज्ञातव्ये । 'तत्र' परापरयोर्मध्ये 'ये वेदाः' ऋगाद्याः यानि शिक्षादिषडङ्गानि 'यान्युपाङ्गानि' आयुर्वेदगान्धर्वादीनि । 'यानि प्रत्यङ्गानि' शिष्टाः कला विद्याः साऽपरा । अथेत्यर्थान्तरे । योऽसौ 'अदृश्यो' दृश्यादन्यो 'निर्गुणः' सत्त्वादिहीनः 'परः' विलक्षणः 'परमात्मा' सर्वोत्तमो व्याप्तः स हरिर्यया वेदितव्यः सा ऋगादिरूपैव परेति श्रुत्यर्थः । तथा च यथैकस्य कर्मणः सकामत्वनिष्कामत्वरूपोपाधिभेदात् प्रवृत्तनिवृत्तपदोदितत्वं तथा

## श्रीपद्मनाभतीर्थविरचितसत्तर्कदीपावळ्याम्:

## ॐ अदृश्यत्वादिगुणको धर्मोक्तेः ॐ ॥ १-२-२१ ॥

'अदृश्येऽनात्म्ये' इत्यादिना अदृश्यत्वादिगुणा विष्णोरुक्तास्ते चाथर्वणे अक्षरस्योच्यन्ते ॥ यत्तदद्रेश्यमग्राह्यमिति ॥ नचैतदक्षरं विष्णुः । तस्य तस्मात्परत्वेन श्रूयमाणत्वात् । 'अक्षरात्परतः परः' इति एवम्प्राप्ते । सूत्रमवतारयति – अदृश्यत्वेति ॥ अदृश्यत्वादिगुणकमक्षरं विष्णुरेव न प्रकृतिहिरण्यगर्भाविति प्रतिपिपादयिषया प्रसक्तिं दर्शयति – पृथिव्यादीत्यादिना ॥ अस्यार्थः । पृथिवीदृष्टान्तेन ह्यक्षरमुच्यमानं प्रकृतिर्भवेत् । कूटस्थोऽक्षर उच्यते । 'उत्तमः पुरुषस्त्वन्यः' इति स्मृत्या प्रकृतेरक्षरत्वेनोच्यमानत्वात् ।

"ಅದೃಶ್ಯೇಽನಾತ್ಮ್ಯೇ" ಇತ್ಯಾದಿ ಶ್ರುತಿಯಿಂದ ಅದೃಶ್ಯತ್ವಾದಿಗುಣಗಳು ವಿಷ್ಣುವಿನ ಧರ್ಮವೆಂದು ಹಿಂದಿನ ಅಧಿಕರಣದಲ್ಲಿ ಹೇಳಲಾಯಿತು. ಆದರೆ ಇದೇ ಧರ್ಮಗಳು ಆಥರ್ವಣೋಪನಿಷತ್ತಿನಲ್ಲಿ ಅಕ್ಷರನಾಮಕನಾದ ವ್ಯಕ್ತಿಯಲ್ಲಿ ಕೇಳಿಸುತ್ತಿದೆ 'ಯತ್ತದದ್ರೇಶ್ಯಮಗ್ರಾಹ್ಯಂ' ಇತ್ಯಾದಿಯಾಗಿ. ವಿಷ್ಣುವೇ ಅಕ್ಷರನೆಂದು ಹೇಳಲಾಗದು. ಅಕ್ಷರವೆನಿಸಿದ ವಸ್ತುವಿಗಿಂತ ವಿಷ್ಣು ಪರಮೋತ್ಕೃಷ್ಟನಾಗಿದ್ದಾನೆಂದು 'ಅಕ್ಷರಾತ್ ಪರತಃ ಪರಃ' ಎಂಬ ಶ್ರುತಿಯು ಹೇಳುತ್ತಿದೆ. ಇಷ್ಟು ಪೂರ್ವಪಕ್ಷ.

ಇದನ್ನು ಪರಿಹರಿಸುವುದಕ್ಕಾಗಿ ಸೂತ್ರವು ಹೊರಟಿದೆ. ಅದೃಶ್ಯತ್ವಾದಿಗುಣಗಳುಳ್ಳ ಅಕ್ಷರನು ವಿಷ್ಣುವೇ ಆಗಿದ್ದಾನೆ; ಹೊರತು ಪ್ರಕೃತಿಯಾಗಲೀ ಹಿರಣ್ಯಗರ್ಭನಾಗಲೀ ಅಲ್ಲ. ಹೀಗೆ ಪ್ರತಿಪಾದಿಸುವುದಕ್ಕಾಗಿ ಪ್ರಸಕ್ತಿಯನ್ನು ಹೇಳುತ್ತಿದ್ದಾರೆ "ಪೃಥಿವ್ಯಾದಿ" ಇತ್ಯಾದಿ ಭಾಷ್ಯದಿಂದ. ಇದರ ಅರ್ಥ ಹೀಗಿದೆ. ಪೃಥಿವೀ ದೃಷ್ಟಾಂತದಿಂದ ಅಕ್ಷರನನ್ನು ಹೇಳಿದ್ದರಿಂದ ಪ್ರಕೃತಿಯೇ ಅಕ್ಷರಶಬ್ದವಾಚ್ಯವಾಗಬೇಕು. "ಕೂಟಸ್ಥೋ ಅಕ್ಷರ ಉಚ್ಯತೇ" ಎಂದು, "ಉತ್ತಮಪುರುಷಸ್ತ್ವನ್ಯಃ" ಎಂದು ಹೇಳಿದ್ದರಿಂದ ಪ್ರಕೃತಿಯೇ ಅಕ್ಷರಶಬ್ದವಾಚ್ಯವಾಗುತ್ತದೆ.

'ब्रह्मा देवानां प्रथमः सम्बभूव विश्वस्य कर्ता भुवनस्य गोप्ता ।
स ब्रह्मविद्यां सर्वविद्याप्रतिष्ठामथर्वाय ज्येष्ठपुत्राय प्राह ॥'

---

विष्णुविषयकत्वकर्मादिविषयकत्वरूपोपाधिभेदादृगादीनाम् एव परापरविद्यात्वोपपत्तिरिति भावः । न चानुव्याख्याने ब्रह्मसूत्रस्य परविद्यात्वोक्तिविरोधः । अनुग्राह्यतया ऋगादीनामनुग्राहकतया ब्रह्मसूत्रस्य च परविद्यात्वोपपत्तेः ।

ಅದೃಶ್ಯತ್ವಾಧಿಕರಣ (೧-೨-೬)

**इत्युपक्रम्य श्रूयमाणमदृश्यत्वादिगुणकमक्षरं हिरण्यगर्भो वा भवेत् । तस्मिन्नपि ब्रह्मशब्दसम्भवात्**

ಅಥವಾ ಚತುರ್ಮುಖಬ್ರಹ್ಮನೂ ಸಹ ಅಕ್ಷರಶಬ್ದವಾಚ್ಯನಾಗಬಹುದು.

'ಬ್ರಹ್ಮಾ ದೇವಾನಾಂ ಪ್ರಥಮಃ ಸಂಬಭೂವ ವಿಶ್ವಸ್ಯ ಕರ್ತಾ ಭುವನಸ್ಯ ಗೋಪ್ತಾ । ಸ ಬ್ರಹ್ಮವಿದ್ಯಾಂ ಸರ್ವವಿದ್ಯಾಪ್ರತಿಷ್ಠಾಮಥರ್ವಾಯ ಜ್ಯೇಷ್ಠಪುತ್ರಾಯ ಪ್ರಾಹ'

ಎಂದು ಪ್ರಾರಂಭವಾಗಿ ಕೇಳಿಸುತ್ತಿರುವ ಶ್ರುತಿಯಲ್ಲಿ ಅದೃಶ್ಯತ್ವಾದಿಗುಣಗಳುಳ್ಳ ಅಕ್ಷರನು ಹಿರಣ್ಯಗರ್ಭನೇ ಎಂದು ತಿಳಿದು ಬರುತ್ತಿದೆ. ಏಕೆಂದರೆ ಬ್ರಹ್ಮಶಬ್ದವು ಅವನಲ್ಲೇ ಲೋಕಪ್ರಸಿದ್ಧವಾಗಿದೆ.

**पुरुषोत्तमस्त्वेतदक्षरं न भवत्येव । तस्मात्परत्वेनोपरि श्रूयमाणत्वादित्येतन्निषेधति – तमेवेत्यादिना ॥**

ಅಕ್ಷರಕ್ಕಿಂತ ಪರಮೋತ್ಕೃಷ್ಟನಾದ ಪುರುಷೋತ್ತಮನಾದ ವಿಷ್ಣುವು ಈ ಅಕ್ಷರಶಬ್ದವಾಚ್ಯನಾಗಲು ಸಾಧ್ಯವಿಲ್ಲ. ಏಕೆಂದರೆ, ಅಕ್ಷರಕ್ಕಿಂತ ಉತ್ತಮತ್ವವನ್ನು ಹೇಳಿರುವುದರಿಂದ ಎಂಬ ಆಕ್ಷೇಪವನ್ನು ನಿರಾಕರಿಸುತ್ತಿದ್ದಾರೆ ''ತಮೇವ'' ಇತ್ಯಾದಿ ಭಾಷ್ಯದಿಂದ.

**अस्यार्थः । 'अथ परा यया तदक्षरमधिगम्यते' 'यत्तदद्रेश्यम्' इति परविद्याविषयत्ववचनाद् विष्णुरेवादृश्यत्वादिगुणकोऽक्षरः । परविद्याविषयत्वस्य 'तमेवं विद्वानमृत इह भवति' इत्यादिवाक्यान्तरेषु विष्ण्वेकनिष्ठत्वेन तद्धर्मत्वेनोक्तत्वात् ।**

ಇದರ ಅರ್ಥ ಹೀಗಿದೆ; 'ಅಥ ಪರಾ ಯಯಾ ತದಕ್ಷರಮಧಿಗಮ್ಯತೇ' 'ಯತತ್ತದ್ರೇಶ್ಯಮ್' ಇತ್ಯಾದಿಯಾಗಿ ಯಾವಾತನು ಅಕ್ಷರಶಬ್ದವಾಚ್ಯನಾಗಿದ್ದಾನೋ ಅವನು ಪರವಿದ್ಯೆಗೂ ಸಹ ವಿಷಯನಾಗಿದ್ದಾನೆಂದು ಶ್ರುತಿಯು ಹೇಳುತ್ತಿದೆ. ಮೋಕ್ಷವನ್ನು ದಯಪಾಲಿಸುವ ಮಹಾವಿಷ್ಣುವೇ ಪರವಿದ್ಯೆಗೆ ವಿಷಯನಾಗಿದ್ದಾನೆಂಬುದು ಪ್ರಸಿದ್ಧವಾಗಿದೆ. ಅಂತಹ ವಿಷ್ಣುವೇ ಅದೃಶ್ಯತ್ವಾದಿಗುಣಗಳುಳ್ಳ ಅಕ್ಷರನೂ ಸಹ ಆಗುತ್ತಾನೆ. ಭಗವಂತನು ಪರವಿದ್ಯೆಗೆ ವಿಷಯನಾಗಿದ್ದಾನೆಂಬ ವಿಚಾರವು 'ತಮೇವಂ ವಿದ್ವಾನಮೃತ ಇಹ ಭವತಿ' ಇತ್ಯಾದಿ ಬೇರೆ ಶ್ರುತಿಗಳಿಂದ ಸಿದ್ಧವಾಗಿದೆ. ಇದು ವಿಷ್ಣುವಿನಲ್ಲಿ ಮಾತ್ರವಿರುವುದರಿಂದ ಅವನ ಅಸಾಧಾರಣಧರ್ಮವಾಗಿದೆಯೆಂದು ಆ ಶ್ರುತಿಯಲ್ಲಿ ಹೇಳಿರುತ್ತಾರೆ.

**वेदानामपरविद्याविषयत्वं यज्ञाद्यर्थान्तरविषयत्वविवक्षया तेषामेव परविद्याविषयत्वं विष्णुविषयत्वविवक्षयेत्यवगन्तव्यम् ।**

ವೇದಗಳು ಯಾವಾಗ ವಿಷ್ಣುವನ್ನು ಬಿಟ್ಟು ಯಜ್ಞ ಮೊದಲಾದ ಬೇರೆ ವಿಚಾರವನ್ನು ಪ್ರತಿಪಾದಿಸುತ್ತವೋ ಆವಾಗ ಅಪರವಿದ್ಯೆ ಎನಿಸುತ್ತವೆ. ಅದೇ ವೇದಗಳೇ ಯಾವಾಗ ವಿಷ್ಣುವನ್ನು ಪ್ರತಿಪಾದಿಸುತ್ತವೋ ಆವಾಗ ಪರವಿದ್ಯೆ ಎನಿಸುತ್ತವೆಯೆಂದು ತಿಳಿಯಬೇಕು.

ಪರಿಪೂರ್ಣಚಂದ್ರಿಕಾ

**तदुक्तं परमसंहितायाम्–**

**'ऋगाद्या अपरा विद्या यदा विष्णोर्न वाचकाः ।**
**ता एव परमा विद्या यदा विष्णोस्तु वाचकाः ॥'**

ಇದನ್ನೇ ಪರಮಸಂಹಿತೆಯಲ್ಲಿ ಹೀಗೆ ಹೇಳಿದ್ದಾರೆ.

ಋಗಾದ್ಯಾ ಅಪರಾ ವಿದ್ಯಾ ಯದಾ ವಿಷ್ಣೋರ್ನ ವಾಚಕಾಃ ।
ತಾ ಏವ ಪರಮಾ ವಿದ್ಯಾ ಯದಾ ವಿಷ್ಣೋಸ್ತು ವಾಚಕಾಃ ॥

ಯಾವಾಗ ಋಗ್ವೇದಾದಿವಿದ್ಯೆಗಳು ವಿಷ್ಣುವನ್ನು ಪ್ರತಿಪಾದಿಸುವುದಿಲ್ಲವೋ ಆವಾಗ ಅವು ಅಪರವಿದ್ಯೆ ಎನಿಸುತ್ತವೆ. ಅದೇ ಋಗ್ವೇದಾದಿಗಳು ವಿಷ್ಣುವನ್ನು ಯಾವಾಗ ಪ್ರತಿಪಾದಿಸುತ್ತವೋ ಅವೇ ಆವಾಗ ಪರವಿದ್ಯೆ ಎನಿಸುತ್ತವೆ.

**इति विष्णुरेवादृश्यत्वादिगुणकाक्षरं न प्रकृतिहिरण्यगर्भावित्येतद्धेत्वन्तरेण सूत्रमुपन्यस्य साधयति – विशेषणेत्यादिना ॥**

ಹೀಗೆ ವಿಷ್ಣುವೇ ಅದೃಶ್ಯತ್ವಾದಿಗುಣಗಳುಳ್ಳ ಅಕ್ಷರನೆನಿಸುತ್ತಾನೆ; ಹೊರತು ಪ್ರಕೃತಿಯಾಗಲೀ ಹಿರಣ್ಯಗರ್ಭನಾಗಲೀ ಅಕ್ಷರಶಬ್ದವಾಚ್ಯರಾಗುವುದಿಲ್ಲ, ಈ ವಿಷಯವನ್ನು ಮತ್ತೊಂದು ಹೇತುವಿನಿಂದ ಪ್ರತಿಪಾದಿಸುವುದಕ್ಕಾಗಿ ಸೂತ್ರವನ್ನು ಉಪನ್ಯಾಸಮಾಡಿ ಸಾಧಿಸುತ್ತಿದ್ದಾರೆ. ವಿಶೇಷಣ ಇತ್ಯಾದಿಯಾಗಿ.

**'यः सर्वज्ञः' इत्यादिवत् 'अक्षरात्परतः परः' इति विशेष्यमाणत्वादप्यदृश्यत्वादिगुणकाक्षरं विष्णुः । विश्वयोन्यक्षरस्यावरत्वासम्भवात् । 'अक्षरात्परतः परः' इत्यवधित्वेनोच्यमानं क्षरं तस्मादन्यदेव । तदेतदाह – अपरमिति ॥**

'ಯಃ ಸರ್ವಜ್ಞಃ' ಎಂಬ ಶ್ರುತಿಯಲ್ಲಿ ಸರ್ವಜ್ಞತ್ವವನ್ನು ವಿಶೇಷಣವನ್ನಾಗಿ ಹೇಳಿದಂತೆ 'ಅಕ್ಷರಾತ್ ಪರತಃ ಪರಃ' ಎಂಬಲ್ಲಿಯೂ ಪರತಃಪರತ್ವವನ್ನು ವಿಶೇಷಣವನ್ನಾಗಿ ಮುಂದೆ ಹೇಳುವುದರಿಂದ ಅದೃಶ್ಯತ್ವಾದಿಗುಣಗಳುಳ್ಳ ಅಕ್ಷರನು ವಿಷ್ಣುವೇ ಆಗುತ್ತಾನೆ.

ಜಗತ್ತಿಗೆ ಕಾರಣವಾದ ಅಕ್ಷರಕ್ಕೆ ಅವರತ್ವವನ್ನು ಹೇಳುವುದು ತಪ್ಪಾಗುತ್ತದೆ. ಆದ್ದರಿಂದ ಅಕ್ಷರವು ಸರ್ವೋತ್ಕೃಷ್ಟವಾದ ಪದಾರ್ಥವಾದ್ದರಿಂದ ವಿಷ್ಣುವೇ ಆಗಬೇಕು. ಇನ್ನು 'ಅಕ್ಷರಾತ್ ಪರತಃ ಪರಃ' ಎಂಬಲ್ಲಿ ಅವಧಿಯೆಂದು ಕೇಳಿಸಲ್ಪಡುತ್ತಿರುವ ಅಕ್ಷರವೇ ಬೇರೆಯಾಗಿದೆ. ಈ ಅಭಿಪ್ರಾಯದಿಂದ ''ಅಪರಂ'' ಇತ್ಯಾದಿಭಾಷ್ಯವು ಹೊರಟಿದೆ.

**नच 'कर्तारमीशम्' इति विशेष्यमाणत्वाददृश्यत्वादिगुणकमक्षरं रुद्र इति वाच्यम् । यदा 'पश्यत्यन्यमीशम्' इत्यज्ञप्रसिद्धेशादन्यस्य विष्णोरेव विवक्षितत्वादित्याह – जुष्टमिति ॥**

ಅದೃಶ್ಯತ್ವಾಧಿಕರಣ (೧-೨-೬)

ಕರ್ತಾರಮೀಶಮ್ ಎಂದು ಮುಂದೆ ವಿಶೇಷಣವನ್ನು ಹೇಳಿದ್ದರಿಂದ ಅದೃಶ್ಯತ್ವಾದಿ ಗುಣವುಳ್ಳವನು ಈಶಶಬ್ದವಾಚ್ಯನಾದ ರುದ್ರನೇ ಏಕಾಗಬಾರದು. 'ಯದಾ ಪಶ್ಯತ್ಯನ್ಯಮೀಶಮ್' ಎಂಬುದಾಗಿ ಅಜ್ಞಾನಿಗಳ ಪ್ರಸಿದ್ಧಿಯನ್ನು ವಿವಕ್ಷಿಸಿ ಈಶಶಬ್ದವಾಚ್ಯನಾದ ರುದ್ರನಿಗಿಂತ ವಿಷ್ಣು ಅನ್ಯನಾಗಿದ್ದಾನೆಂದು ಹೇಳಿರುವುದರಿಂದ ವಿಷ್ಣುವೇ ಅಕ್ಷರನಾಗುತ್ತಾನೆ. ಈ ಅಭಿಪ್ರಾಯದಿಂದ "ಜುಷ್ಟಮ್" ಎಂಬ ವಾಕ್ಯವು ಹೊರಟಿದೆ.

**ॐ विशेषणभेदव्यपदेशाभ्यां च नेतरौ ॐ ॥ १-२-२२ ॥**

**ॐ रूपोपन्यासाच्च ॐ ॥ १-२-२३ ॥**

**विष्णुरेवात्रोच्यत इत्येतद्युक्त्यन्तरेण साधयत्सूत्रमुपन्यस्य व्याचष्टे – रूपेत्यादिना ॥ प्राकृताकाररहितत्वेन 'अवर्णमचक्षुःश्रोत्रम्' इत्युक्तोऽप्यप्राकृतरूपवत्त्वेन मुख्यरूपवान् विष्णुरेवात्रोच्यत इत्यर्थः ॥**

ವಿಷ್ಣುವೇ ಅಕ್ಷರಶಬ್ದವಾಚ್ಯನಾಗಿದ್ದಾನೆಂದು ಸಾಧಿಸುವುದಕ್ಕಾಗಿ ಮತ್ತೊಂದು ಯುಕ್ತಿಯನ್ನು ಹೇಳುವ ಸೂತ್ರವನ್ನು ಉಪನ್ಯಾಸಮಾಡಿ ವ್ಯಾಖ್ಯಾನಿಸುತ್ತಿದ್ದಾರೆ "ರೂಪೋಪನ್ಯಾಸಾಚ್ಚ" ಎಂಬುದಾಗಿ. ಪ್ರಾಕೃತವಾದ ಆಕಾರವಿಲ್ಲದ ಕಾರಣ ಭಗವಂತನು ಅವರ್ಣ, ಅಚಕ್ಷು, ಅಶ್ರೋತ್ರನೆನಿಸಿದ್ದಾನೆ. 'ಅಚಕ್ಷುರಶ್ರೋತ್ರಂ' ಎಂದು ಶ್ರುತಿಯಲ್ಲಿ ಹೇಳಲ್ಪಟ್ಟ ವ್ಯಕ್ತಿಯೂ ಸಹ ಪ್ರಾಕೃತವಾದ ಚಕ್ಷುರಾದಿ ಇಂದ್ರಿಯಗಳಿಲ್ಲದವನು. ಆದ್ದರಿಂದ ಅಪ್ರಾಕೃತರೂಪವುಳ್ಳ ಪರಮಾತ್ಮನೇ ಶ್ರುತಿಪ್ರತಿಪಾದ್ಯನಾಗಿದ್ದಾನೆ ಎಂದರ್ಥ.

**॥ इति श्रीपद्मनाभतीर्थविरचितसत्तर्कदीपावळ्याम्ः**
**अन्तर्याम्याधिकरणम् ॥**

**तत्वप्रकाशिका –**

**ॐ अदृश्यत्वादिगुणको धर्मोक्तेः ॐ ॥ १-२-२१ ॥**

**अत्राऽक्षरशब्दसाहित्येन अन्यत्रप्रसिद्धादृश्यत्वादिलिङ्गानां ब्रह्मणि समन्वयप्रतिपादनादस्ति शास्त्रादिसङ्गतिः । श्रुत्यादिसङ्गतिं विषयवाक्योदाहरणेन विषयसंशयौ सयुक्तिकं पूर्वपक्षं च सूचयति – अदृश्यत्वादीति ॥**

ಈ ಅಧಿಕರಣದಲ್ಲಿ ಅಕ್ಷರಶಬ್ದದ ಸಂಬಂಧವಿರುವ ಪ್ರಯುಕ್ತ ವಿಷ್ಣುವನ್ನು ಬಿಟ್ಟು ಬೇರೆಡೆ ಪ್ರಸಿದ್ಧವಾದ ಅದೃಶ್ಯತ್ವವೇ ಮೊದಲಾದ ಲಿಂಗಗಳನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡಲಾಗಿದೆ. ಆದ್ದರಿಂದಲೇ ಈ ಅಧಿಕರಣಕ್ಕೆ ಶಾಸ್ತ್ರಸಂಗತಿ, ಅಧ್ಯಾಯಸಂಗತಿ ಹಾಗೂ ಪಾದಸಂಗತಿಗಳು ಇರುತ್ತವೆ. ಶ್ರುತಿಸಂಗತಿ, ಅಧಿಕರಣಸಂಗತಿಗಳನ್ನು ವಿಷಯವಾಕ್ಯವನ್ನು ಉದಾಹರಿಸುವ ಮೂಲಕ ತೋರಿಸುತ್ತಿದ್ದಾರೆ. ಮತ್ತು ವಿಷಯ, ಸಂಶಯ, ಹಾಗೂ ಯುಕ್ತಿಬದ್ಧವಾದ ಪೂರ್ವಪಕ್ಷಗಳನ್ನೂ ಸಹ ಸೂಚನೆ ಮಾಡುತ್ತಿದ್ದಾರೆ. ''ಅದೃಶ್ಯತ್ವಾದಿ'' ಇತ್ಯಾದಿ ಭಾಷ್ಯದಿಂದ.

**तत्वप्रकाशिका – 'अदृश्येऽनात्म्ये' इत्यानन्दमयस्य अदृश्यत्वादिगुणा उक्ताः । ते चाथर्वणे कस्यचिदक्षरस्योच्यन्ते –**

'ಅದೃಶ್ಯೇऽನಾತ್ಮ್ಯೇ' ಎಂಬ ಶ್ರುತಿಯಲ್ಲಿ ಆನಂದಮಯನಿಗೆ ಅದೃಶ್ಯತ್ವಾದಿಗುಣಗಳು ಹೇಳಲ್ಪಟ್ಟಿವೆ. ಅಂತಹ ಗುಣಗಳನ್ನು ಆಥರ್ವಣೋಪನಿಷತ್ತು ಯಾರೋ ಒಬ್ಬ ಅಕ್ಷರನಿಗೆ ಹೇಳುತ್ತಿದೆ.

**तत्वप्रकाशिका – 'अथ परा यया तदक्षरमधिगम्यते',**

**'यत्तदद्रेश्यमग्राह्यमगोत्रमवर्णमचक्षुः श्रोत्रं तदपाणिपादम् ।**
**नित्यं विभुं सर्वगतं सुसूक्ष्मं तदव्ययं यद्भूतयोनिं परिपश्यन्ति धीराः ।।'**
**'यथोर्णनाभिः सृजते गृह्णते च यथा पृथिव्यामोषधयः सम्भवन्ति ।**
**यथा सतः पुरुषात् केशलोमानि तथाऽक्षरात्सम्भवतीह विश्वम्' इति ।**

ಈ ಅಧಿಕರಣದ ವಿಷಯವಾಕ್ಯ ಹೀಗಿದೆ ''ಅಥ ಪರಾ ಯಯಾ ತದಕ್ಷರಮಧಿಗಮ್ಯತೇ'

''ಯತ್ತದದ್ರೇಶ್ಯಮಗ್ರಾಹ್ಯಮಗೋತ್ರಮವರ್ಣಮಚಕ್ಷುಃ ಶ್ರೋತ್ರಂ ತದಪಾಣಿಪಾದಮ್ ।
ನಿತ್ಯಂ ವಿಭುಂ ಸರ್ವಗತಂ ಸುಸೂಕ್ಷ್ಮಂ ತದವ್ಯಯಂ ಯದ್‌ಭೂತಯೋನಿಂ ಪರಿಪಶ್ಯಂತಿ ಧೀರಾಃ ।।'
'ಯಥೋರ್ಣನಾಭಿಃ ಸೃಜತೇ ಗೃಹ್ಣತೇ ಚ ಯಥಾ ಪೃಥಿವ್ಯಾಮೋಷಧಯಃ ಸಂಭವಂತಿ ।
ಯಥಾ ಸತಃ ಪುರುಷಾತ್ ಕೇಶಲೋಮಾನಿ ತಥಾऽಕ್ಷರಾತ್ ಸಂಭವತೀಹ ವಿಶ್ವಮ್''

''ಯಾವ ವಿದ್ಯೆಯಿಂದ ಅಕ್ಷರನು ತಿಳಿಯುತ್ತಾನೋ ಅದೇ ಪರವಿದ್ಯೆಯು''.

''ಅಂತಹ ಅಕ್ಷರನು ಸಂಪೂರ್ಣವಾಗಿ ತಿಳಿಯಲಾರನು. ಯಾವುದೇ ಇಂದ್ರಿಯಗಳಿಂದ ಗ್ರಹಿಸಲು ಸಾಧ್ಯವಿಲ್ಲದವನು ವಸಿಷ್ಠಮೊದಲಾದ ಗೋತ್ರಗಳಿಲ್ಲದವನು. ಪ್ರಾಕೃತವಾದ ರೂಪವಿಲ್ಲದವನು ಪ್ರಾಕೃತವಾದ ಚಕ್ಷುಸ್ಸು, ಶ್ರೋತ್ರ ಮೊದಲಾದ ಜ್ಞಾನೇಂದ್ರಿಯಗಳಿಂದ ರಹಿತನು. ಹಸ್ತ, ಪಾದ ಮೊದಲಾದ ಕರ್ಮೇಂದ್ರಿಯಗಳಿಂದಲೂ ರಹಿತನು. ಅನಾದಿನಿತ್ಯನು; ಸರ್ವತ್ರವ್ಯಾಪ್ತನು. ಸೂಕ್ಷ್ಮಾತಿಸೂಕ್ಷ್ಮನು. ನಾಶರಹಿತನು. ಬ್ರಹ್ಮಾದಿ ಸಕಲದೇವತೆಗಳಿಗೂ ಕಾರಣಕರ್ತನು. ಹೀಗೆ ಜ್ಞಾನಿಗಳು

ಯಾವ ಭಗವಂತನನ್ನು ತಿಳಿಯುತ್ತಾರೋ ಅಂತಹ ಅಕ್ಷರನು ನಾಶರಹಿತನಾಗಿದ್ದಾನೆ'.

'ಯಾವ ರೀತಿಯಾಗಿ ಜೇಡರ ಹುಳು ತನ್ನ ಎಂಜಲಿನಿಂದ ಬಲೆಯನ್ನು ರಚನೆ ಮಾಡಿ ಅನಂತರ ಅದನ್ನೇ ನುಂಗಿಬಿಡುತ್ತದೋ, ಅಥವಾ ಯಾವ ರೀತಿಯಲ್ಲಿ ಪೃಥಿವಿಯಲ್ಲಿ ಸಸ್ಯಗಳು ಹುಟ್ಟುತ್ತವೋ ಯಾವ ರೀತಿಯಾಗಿ ಜೀವಂತನಾದ ಪುರುಷನ ದೇಹದಿಂದ ಕೇಶಲೋಮಾದಿಗಳು ಹುಟ್ಟುತ್ತವೋ ಅದರಂತೆ ಅಕ್ಷರನಿಂದ ಈ ವಿಶ್ವವು ಹುಟ್ಟುತ್ತದೆ'. ಎಂಬುದಾಗಿ.

**तत्वप्रकाशिका – तेषां च विष्वन्यनिष्ठत्वे प्रागुक्तानन्दमयत्वं चान्यस्यैव स्यादित्यवश्यं निर्णेतव्यता । तददृश्यत्वादि लिङ्गजातमत्र विषयः । विष्णोरन्यस्य वेति सन्देहः । आनन्दमये श्रुतत्वमक्षरशब्दस्य सन्देहबीजम् ।**

ಅಂತಹ ಅದೃಶ್ಯತ್ವಾದಿಗುಣಗಳು ವಿಷ್ಣುವನ್ನು ಬಿಟ್ಟು ಬೇರೆಯವರಲ್ಲಿ ಬರುವುದಾದರೆ ಹಿಂದೆ ನಿರ್ಣಯಿಸಿದ ಆನಂದಮಯತ್ವವೂ ಸಹ ಬೇರೆಯವರಲ್ಲೇ ಬರಬೇಕಾಗುತ್ತದೆ ಏಕೆಂದರೆ ಆನಂದಮಯನಿಗೆ ಅದೃಶ್ಯತ್ವಾದಿಗುಣಗಳು ಹೇಳಲ್ಪಟ್ಟಿವೆ. ಆದ್ದರಿಂದ ಅದೃಶ್ಯತ್ವಾದಿ ಗುಣಗಳು ಯಾರ ಧರ್ಮವೆಂದು ಅವಶ್ಯವಾಗಿ ನಿರ್ಣಯಿಸಬೇಕು. ಆದ್ದರಿಂದ ಅದೃಶ್ಯತ್ವಾದಿ ಗುಣಗಳ ಸಮೂಹವೇ ಈ ಅಧಿಕರಣದ ವಿಷಯ. ವಿಷ್ಣುವಿನದ್ದೋ ಅಥವಾ ಬೇರೆಯವರದ್ದೋ ಎಂದು ಸಂದೇಹ. ಆನಂದಮಯನಲ್ಲಿ ಈ ಲಿಂಗವು ಶ್ರುತವಾದ್ದರಿಂದ, 'ಇದು ಆನಂದಮಯನದ್ದೇ' ಎಂಬ ಶ್ರುತಿವಾಕ್ಯ ಮತ್ತು ಅಕ್ಷರಶಬ್ದವು ಸಂದೇಹಕ್ಕೆ ಕಾರಣಗಳಾಗಿವೆ.

**तत्वप्रकाशिका – न विष्णोरदृश्यत्वादीति तावत्पूर्वः पक्षः । अदृश्यत्वादिगुणके 'अक्षरात् सम्भवतीह विश्वम्' इत्यक्षरशब्दश्रवणात् । तस्य च विष्णौ निरवकाशत्वात् । यतः अस्मादप्यक्षरादुत्तरवाक्ये परः प्रतीयते ।**

ಅದೃಶ್ಯತ್ವಾದಿಗುಣಗಳು ವಿಷ್ಣುವಿನ ಧರ್ಮವಲ್ಲವೆಂದು ಪೂರ್ವಪಕ್ಷ. ಏಕೆಂದರೆ ಈ ಅದೃಶ್ಯತ್ವಾದಿ ಗುಣಗಳುಳ್ಳ ಪದಾರ್ಥದಲ್ಲಿ ''ಅಕ್ಷರಾತ್ ಸಂಭವತೀಹ ವಿಶ್ವಮ್'' ಎಂಬುದಾಗಿ ಅಕ್ಷರಶಬ್ದವು ಕೇಳಿಸುತ್ತಿದೆ. ಈ ಅಕ್ಷರಶಬ್ದವು ವಿಷ್ಣುವಿನಲ್ಲಿ ನಿರವಕಾಶವಾಗಿದೆ. ಏಕೆಂದರೆ ಈ ಅಕ್ಷರಕ್ಕಿಂತ ಶ್ರೇಷ್ಠವಾದದ್ದು ಮತ್ತೊಂದು ಪದಾರ್ಥವಿದೆ ಎಂಬುದಾಗಿ ಮುಂದಿನ ವಾಕ್ಯದಿಂದ ತಿಳಿಯುತ್ತಿದೆ.

**तत्वप्रकाशिका –**

**'दिव्यो ह्यमूर्तः पुरुषः स बाह्याभ्यन्तरो ह्यजः ।**
**अप्राणो ह्यमनाः शुभ्रो ह्यक्षरात्परतः परः' इति ।**

''ದಿವ್ಯೋ ಹ್ಯಮೂರ್ತಃ ಪುರುಷಃ ಸ ಬಾಹ್ಯಾಭ್ಯಂತರೋ ಹ್ಯಜಃ।
ಅಪ್ರಾಣೋ ಹ್ಯಮನಾಃ ಶುಭ್ರೋ ಹ್ಯಕ್ಷರಾತ್ ಪರತಃ ಪರಃ॥''
ಪರಿಪೂರ್ಣಚಂದ್ರಿಕಾ

ದಿವ್ಯಸ್ವರೂಪನಾದವನು, ಅಮೂರ್ತನಾದವನು, ಪುರುಷನು, ವಿಶ್ವದ ಒಳಗೂ ಹೊರಗೂ ನೆಲೆಸಿರುವವನು, ಉತ್ಪತ್ತಿನಾಶವಿಲ್ಲದವನು, ಪ್ರಾಣ ಮೊದಲಾದ ಷೋಡಶಕಲೆಗಳಿಂದ ಶೂನ್ಯನಾದವನು, ಪ್ರಾಕೃತಮನಸ್ಸಿಲ್ಲದವನು, ಶುದ್ಧಸ್ವರೂಪಿ ಇಂತಹ ಸರ್ವೋತ್ತಮನು ಅಕ್ಷರ ತತ್ವಕ್ಕಿಂತ ಶ್ರೇಷ್ಠನಾಗಿದ್ದಾನೆ ಎಂದು.

**तत्वप्रकाशिका – नहि विष्णोरपि परोऽस्ति इति ; अतः 'न विष्णुरदृश्यत्वादिगुणक इति, नानन्दमयोऽपि' इति भावः ।**

ವಿಷ್ಣುವಿಗಿಂತ ಶ್ರೇಷ್ಠನಾದವನು ಮತ್ತೊಬ್ಬನಿಲ್ಲ. ಆದ್ದರಿಂದ ಅದೃಶ್ಯತ್ವಾದಿ ಗುಣವುಳ್ಳವನು ವಿಷ್ಣುವೆಂದು ನಿರ್ಣಯಿಸಲಾಗದು. ಆದ್ದರಿಂದಲೇ ಆನಂದಮಯನೂ ಸಹ ವಿಷ್ಣುವಾಗುವುದಿಲ್ಲವೆಂದು ಪೂರ್ವಪಕ್ಷ.

**तत्वप्रकाशिका – सिद्धान्तयत्सूत्रं तावदवतारयति – अत इति ।। अदृश्यत्वादिकं न विष्णोश्चेत्तर्हि वाक्यस्य निर्विषयतयाऽप्रामाण्यं स्यादित्यतः पूर्वपक्षं विशदयति – पृथिव्यादीति ।।**

ಸಿದ್ಧಾಂತವನ್ನು ಸ್ಥಾಪನೆಮಾಡುವುದಕ್ಕಾಗಿ ಸೂತ್ರವನ್ನು ಉಲ್ಲೇಖಿಸಲು ಹೊರಟಿದ್ದಾರೆ "ಅತಃ' ಎಂಬುದಾಗಿ. ಅದೃಶ್ಯತ್ವಾದಿಗಳು ವಿಷ್ಣುವಿನ ಧರ್ಮವಾಗದಿದ್ದರೆ "ಯತ್ತದದ್ರೇಶ್ಯಂ" ಎಂಬ ವಾಕ್ಯವು ನಿರ್ವಿಷಯವಾಗುವಂತಹ ಪರಿಸ್ಥಿತಿ ಬರುತ್ತದೆ. ಆದ್ದರಿಂದಲೇ ಅಪ್ರಮಾಣವೂಆಗಬೇಕಾಗುತ್ತದೆ. ಈ ಕಾರಣಕ್ಕಾಗಿ ಪೂರ್ವಪಕ್ಷವನ್ನು ಸ್ಪಷ್ಟವಾಗಿ ತೋರಿಸಲು "ಪೃಥಿವ್ಯಾದಿ" ಇತ್ಯಾದಿ ಭಾಷ್ಯದ ಮಾತು ಹೊರಟಿದೆ.

**तत्वप्रकाशिका – अदृश्यत्वादिकं जडप्रकृतेर्भवेत् । अस्याः पृथिव्यादिदृष्टान्तेन उपादानतया जगत्कारणत्वोक्तेः । न चायं कारणत्वमात्रे दृष्टान्त इति वाच्यमित्यतो वाक्यादनन्तरम् 'अक्षरात्परतः परः' इति तस्मात्परतः पराभिधानात् ।**

ಸ್ಪಷ್ಟವಾದ ಪೂರ್ವಪಕ್ಷ ಹೀಗಿದೆ -- ಜಡಪ್ರಕೃತಿಯು ಅದೃಶ್ಯತ್ವಾದಿಧರ್ಮಗಳಿಗೆ ಆಧಾರವಾಗಬಹುದು. ಏಕೆಂದರೆ ಪೃಥಿವ್ಯಾದಿಗಳನ್ನು ದೃಷ್ಟಾಂತವನ್ನಾಗಿ ನೀಡಿ ಉಪಾದಾನವೆಂದು ಜಗತ್ಕಾರಣತ್ವವನ್ನು ಶ್ರುತಿಯು ಹೇಳಿದೆ. ಕೇವಲ ಕಾರಣತ್ವವಿಷಯದಲ್ಲಿ ಇದು ದೃಷ್ಟಾಂತವಾಗಲು ಸಾಧ್ಯವಿಲ್ಲ. ಏಕೆಂದರೆ, ಕಾರಣಪ್ರತಿಪಾದಕವಾದ ವಾಕ್ಯದ ಮುಂದೆ 'ಅಕ್ಷರಾತ್ ಪರತಃ ಪರಃ' ಎಂಬ ವಾಕ್ಯವು ಕೇಳಿಸುತ್ತಿದೆ. ಇದು ಅಕ್ಷರತತ್ವಕ್ಕಿಂತ ಮತ್ತೊಂದು ಪರವಸ್ತು ಇದೆ ಎಂದು ಹೇಳುತ್ತಿದೆ. ಆದ್ದರಿಂದ ಅಕ್ಷರಶಬ್ದದಿಂದ ವಿಷ್ಣುವನ್ನು ವಿವಕ್ಷಿಸಿ, ಇಂತಹ ವಿಷ್ಣುವಿಗೆ ಕಾರಣತ್ವವನ್ನು ಶ್ರುತಿ ಹೇಳುತ್ತಿದೆ ಎಂದು ಅರ್ಥೈಸಲಾಗದು.

**तत्वप्रकाशिका – चेतनप्रकृतेर्वाऽदृश्यत्वादिकम् । तस्यामक्षरशब्दस्य स्मृतिसिद्धत्वात् । न चासौ शब्दः परमात्मन्यपि सम्भवतीति वाच्यम् । तत्परतःपराभिधानात् । तच्च तस्यामक्षरात्परतःपर इति समानाधिकरण्येनोपपन्नम् । विकारित्वेन जगत्कारणत्ववचनं तस्या विकाराभिमानित्वाद्युज्यते ।**

ಎರಡನೆಯ ಪೂರ್ವಪಕ್ಷ— ಅಥವಾ ಚೇತನಪ್ರಕೃತಿಯು ಅದೃಶ್ಯತ್ವಾದಿಗಳಿಗೆ ಆಶ್ರಯವಾಗಬಹುದು. ಇಂತಹ ಚೇತನಪ್ರಕೃತಿಯಲ್ಲಿ ಅಕ್ಷರಶಬ್ದದ ಪ್ರಯೋಗವು ಸ್ಮೃತಿಯಿಂದಲೇ ಸ್ಪಷ್ಟವಾಗಿ ಸಿದ್ಧವಾಗಿದೆ. ಅಕ್ಷರಶಬ್ದವು ಪರಮಾತ್ಮನಲ್ಲಿ ಉಪಪನ್ನವಾಗುತ್ತದೆಂದು ಹೇಳಬಾರದು. ಏಕೆಂದರೆ ಅಕ್ಷರತತ್ತ್ವಕ್ಕಿಂತಲೂ ಒಬ್ಬನು ಶ್ರೇಷ್ಠನಾಗಿದ್ದಾನೆಂದು ಶ್ರುತಿಯು ಹೇಳುತ್ತಿದೆ. ಒಂದು ವೇಳೆ ವಿಷ್ಣುವನ್ನೇ ಅಕ್ಷರನೆಂದು ಹೇಳಿದರೆ ''ಅಕ್ಷರಾತ್ ಪರತಃ ಪರಃ 'ಪರವಾದ ಅಕ್ಷರಕ್ಕಿಂತ ಉತ್ತಮವು' ಎಂದು ಹೇಳಿರುವುದು ಸರಿಯಲ್ಲ. ಆದರೆ ಪ್ರಕೃತಿಯಲ್ಲಿ ಇದು ಸಾಮಾನಾಧಿಕರಣ್ಯದಿಂದ ಉಪಪನ್ನವಾಗುತ್ತದೆ. ಹಾಗೂ ಅಕ್ಷರವು ವಿಕಾರವನ್ನು ಹೊಂದಿ ಜಗತ್ತಿಗೆ ಕಾರಣವಾಗುತ್ತದೆಂಬ ಮಾತು ಕೇಳಿಸುತ್ತಿರಬಹುದು. ಆದರೂ ಇದನ್ನು ವಿಕಾರಕ್ಕೆ ಅಭಿಮಾನಿಯಾದ್ದರಿಂದ ಲಕ್ಷ್ಮೀದೇವಿಯಲ್ಲಿ ಕೂಡಿಸಬಹುದು -- ಎಂದರೆ;

'ಪರತಃ ಅಕ್ಷರಾತ್' ಎಂಬುದಾಗಿ ಶ್ರೇಷ್ಠವಾದ ಶ್ರೀತತ್ತ್ವಕ್ಕಿಂತ ಎಂದು ಸಾಮಾನ್ಯಾಧಿಕರಣ್ಯದಿಂದ ಅನ್ವಯವನ್ನು ಹೇಳಿದರೆ ಮಾತ್ರ ಇದು ಕೂಡುತ್ತದೆ. ಇಲ್ಲಿ ಶ್ರೀತತ್ತ್ವವು ವಿಕಾರತ್ವದಿಂದ ಜಗತ್ತಿಗೆ ಕಾರಣವೆಂದು ಹೇಳಬಹುದು. ಅಂದರೆ ಲಕ್ಷ್ಮೀದೇವಿಯು ವಿಕಾರಕ್ಕೆ ಅಭಿಮಾನಿಯಾದ್ದರಿಂದ ಇದು ಉಪಪನ್ನವಾಗುತ್ತದೆ.

**तत्वप्रकाशिका – हिरण्यगर्भस्य वाऽदृश्यत्वादिकम् । स ब्रह्मविद्यामित्यादिब्रह्म शब्दात् । न च ब्रह्मशब्दो विष्णौ मुख्य इति तद्ग्रहण् । तत्परतःपराभिधानात् ।**

ಮೂರನೆಯ ಪೂರ್ವಪಕ್ಷ – ಅಥವಾ ಹಿರಣ್ಯಗರ್ಭನು ಅದೃಶ್ಯತ್ವಧರ್ಮಕ್ಕೆ ಆಶ್ರಯನಾಗಬಹುದು. ಏಕೆಂದರೆ ಇದೇ ಪ್ರಕರಣದ ಪ್ರಾರಂಭದಲ್ಲಿ 'ಸಃ ಬ್ರಹ್ಮವಿದ್ಯಾಮ್' ಎಂಬುದಾಗಿ ಬ್ರಹ್ಮಶಬ್ದವು ಕೇಳಿಸುತ್ತಿದೆ. ವಿಷ್ಣುವಿನಲ್ಲಿ ಬ್ರಹ್ಮಶಬ್ದವು ಮುಖ್ಯವಾಗಿದೆಯಲ್ಲವೇ? ಎಂದು ಪ್ರಶ್ನಿಸಬಾರದು. ಏಕೆಂದರೆ ಬ್ರಹ್ಮನಿಗಿಂತಲೂ ವಿಷ್ಣುವಿಗೆ ಉತ್ತಮತ್ವವನ್ನು ಇದೇ ಶ್ರುತಿ ಹೇಳುತ್ತಿದೆ. ಆದ್ದರಿಂದ ಬ್ರಹ್ಮಶಬ್ದದಿಂದ ಚತುರ್ಮುಖನನ್ನೇ ವಿವಕ್ಷಿಸಬೇಕಾಗುತ್ತದೆ.

**तत्वप्रकाशिका – रुद्रस्य वैतददृश्यत्वादिलिङ्गजातम् । 'कर्तारमीशम्' इति ईशशब्दश्रवणात् । नच ईशशब्दो विष्णावपि सम्भवतीति तद्ग्रहः । तत्परतःपराभिधानादेवेति भावः ।**

ನಾಲ್ಕನೆಯ ಪೂರ್ವಪಕ್ಷ. ಅಥವಾ ರುದ್ರನೂ ಅದೃಶ್ಯತ್ವಾದಿಧರ್ಮಗಳಿಗೆ ಆಶ್ರಯನಾಗಬಹುದು. 'ಕರ್ತಾರಮೀಶಮ್'' ಎಂಬುದಾಗಿ ಈಶಶಬ್ದವು ಕೇಳಿಸುತ್ತಿದೆ. ಈಶಶಬ್ದವನ್ನು ವಿಷ್ಣುವಿನಲ್ಲೂ ಸಹ ಕೂಡಿಸಬಹುದಲ್ಲವೇ ಎಂದು ಪ್ರಶ್ನಿಸಬಾರದು. ಇಲ್ಲಿಯೂ ಸಹ ಈಶನಿಗಿಂತಲೂ ವಿಷ್ಣುವು ಶ್ರೇಷ್ಠನಾಗಿದ್ದಾನೆಂದು ಶ್ರುತಿಯು ಹೇಳಿದೆ. ಆದ್ದರಿಂದ ರುದ್ರನನ್ನೇ ಈಶಶಬ್ದದಿಂದ ವಿವಕ್ಷಿಸಬೇಕಾಗುತ್ತದೆ.

**तत्वप्रकाशिका – एवं प्राप्तं पूर्वपक्षं प्रतिक्षेप्तुं सूत्रं व्याचष्टे – तमेवमिति ।। अदृश्यत्वादिगुणको विष्णुरेव ।**

ಹೀಗೆ ನಾಲ್ಕು ಬಗೆಯ ಪೂರ್ವಪಕ್ಷಗಳನ್ನು ನಿರಾಕರಿಸುವುದಕ್ಕಾಗಿ ಸೂತ್ರವನ್ನು ''ತಮೇವಮ್'' ಇತ್ಯಾದಿಯಾಗಿ ವ್ಯಾಖ್ಯಾನಿಸುತ್ತಿದ್ದಾರೆ. ಅದೃಶ್ಯತ್ವಾದಿ ಧರ್ಮಗಳಿಗೆಲ್ಲಾ ಆಶ್ರಯನಾಗಿರುವವನು ವಿಷ್ಣುವೇ ಆಗಿದ್ದಾನೆ.

**तत्वप्रकाशिका – ''अथ परा यया तदक्षरमधिगम्यते'' इत्यदृश्यत्वादिगुणकस्य परविद्याविषयत्वोक्तेः । परविद्याविषयत्वस्य च श्रुतिस्मृतिभिः विष्णुधर्मत्वेनावगतत्वादित्यर्थः ।**

'ಅಥ ಪರಾ ಯಯಾ ತಕ್ಷರಮಧಿಗಮ್ಯತೇ' ಎಂಬ ಶ್ರುತಿಯಲ್ಲಿ ಅದೃಶ್ಯತ್ವಾದಿ ಗುಣವುಳ್ಳಂತಹ ವ್ಯಕ್ತಿಯಲ್ಲಿಯೇ ಪರವಿದ್ಯಾವಿಷಯತ್ವವು ಹೇಳಲ್ಪಟ್ಟಿದೆ. ಪರವಿದ್ಯೆಗೆ ವಿಷಯನಾದವನು ವಿಷ್ಣುವೇ ಆಗಿದ್ದಾನೆಂಬ ವಿಚಾರವು ಶ್ರುತಿಸ್ಮೃತಿಗಳಿಂದ ಸ್ಪಷ್ಟವಾಗಿ ತಿಳಿಯುತ್ತಿದೆ ಎಂದರ್ಥ.

**तत्वप्रकाशिका – 'तमेवम्' इति श्रुतौ मोक्षसाधनविद्याविषयत्वोक्त्या विष्णोः परविद्याविषयत्वमुक्तं भवति । मोक्षसाधनविद्यायाः परविद्यात्वत् ।**

'ತಮೇವಂ ವಿದ್ವಾನಮೃತ ಇಹ ಭವತಿ' ಎಂಬ ಶ್ರುತಿಯೂ ಸಹ ಭಗವಂತನ ಜ್ಞಾನವೇ ಮೋಕ್ಷಕ್ಕೆ ಸಾಧನವಾಗಿದೆಯೆಂದು ಹೇಳುತ್ತಿದೆ. ಇದರಿಂದ ವಿಷ್ಣುವೇ ಪರವಿದ್ಯೆಗೆ ವಿಷಯನಾಗಿದ್ದಾನೆಂದು ಹೇಳಿದಂತಾಗುತ್ತದೆ. ಏಕೆಂದರೆ ಮೋಕ್ಷಕ್ಕೆ ಸಾಧನವಾದ ವಿದ್ಯೆಯೇ ಪರವಿದ್ಯೆ ಎನಿಸುತ್ತದೆ.

**तत्वप्रकाशिका – 'तत्कर्म' इति स्मृतौ च सैव परविद्या यया हरेर्ज्ञानं भवतीति तस्य परविद्याविषयत्वमुच्यते ।**

''ತತ್ಕರ್ಮ ಹರಿತೋಷಂ ಯತ್'' ಎಂಬ ಸ್ಮೃತಿಯೂ ಸಹ ಯಾವುದರಿಂದ ಭಗವಂತನ ಜ್ಞಾನವು ಉಂಟಾಗುತ್ತದೋ ಅದೇ ಪರವಿದ್ಯೆ ಎನಿಸುತ್ತದೆ ಎಂದು ಹೇಳಿದೆ. ಆದ್ದರಿಂದಲೂ ಪರವಿದ್ಯೆಗೆ ವಿಷಯನಾದವನು ಭಗವಂತನೇ ಆಗುತ್ತಾನೆ.

ಅದೃಶ್ಯತ್ವಾಧಿಕರಣ (೧-೨-೬)

**तत्वप्रकाशिका – 'द्वे विद्ये' इत्यत्र च यदा वेदाद्यन्यविषयतया योज्यते तदा तस्याऽपरविद्यात्वम् । यदा पुनरेतैः स हरिर्वेद्यो भवति तदा परविद्यात्वमिति हरेः परविद्याविषयत्वमुच्यते ।**

"ದ್ವೇವಿದ್ಯೇವೇದಿತವ್ಯೇ" ಎಂಬಲ್ಲಿವೇದವನ್ನುವಿಷ್ಣುವಿಗಿಂತ ಬೇರೆಯವರಲ್ಲಿಸಮನ್ವಯಮಾಡಿದರೆ ಅಪರವಿದ್ಯೆ ಎನಿಸುತ್ತದೆ. ಅದೇ ವೇದದ ಮತುಗಳಿಂದ ಭಗವಂತನನ್ನು ತಿಳಿದರೆ ಅದು ಪರವಿದ್ಯೆ ಎನಿಸುತ್ತದೆ. ಹೀಗೆ ಪರವಿದ್ಯೆಗೆ ವಿಷಯನಾದವನು ವಿಷ್ಣುವೆಂದು ಇದರಿಂದಲೂ ನಿರ್ಣಯವಾಗುತ್ತದೆ.

**तत्वप्रकाशिका – तदुक्तम् –**

**'ऋगाद्या अपराविद्या यदा विष्णोर्न वाचकाः ।**

**ता एव परमा विद्या यदा विष्णोस्तु वाचकाः' इति ॥२१॥**

ಈ ವಿಚಾರವು ಮುಂದಿನ ಪ್ರಮಾಣದಿಂದ ಸ್ಪಷ್ಟವಾಗುತ್ತದೆ.

"ಋಗಾದ್ಯಾ ಅಪರಾವಿದ್ಯಾ ಯದಾ ವಿಷ್ಣೋರ್ನ ವಾಚಕಾಃ।

ತಾ ಏವ ಪರಮಾ ವಿದ್ಯಾ ಯದಾ ವಿಷ್ಣೋಸ್ತು ವಾಚಕಾಃ॥"

'ಋಗ್ವೇದ ಯಜುರ್ವೇದ ಮೊದಲಾದ ಸಚ್ಛಾಸ್ತ್ರಗಳು ಯಾವಾಗ ವಿಷ್ಣುವನ್ನು ಪ್ರತಿಪಾದಿಸುವುದಿಲ್ಲವೋ ಆವಾಗ ಅಪರವಿದ್ಯೆ ಎನಿಸುತ್ತವೆ. ಆದೇ ಋಗ್ವೇದಾದಿ ಸಚ್ಛಾಸ್ತ್ರಗಳು ಯಾವಾಗ ವಿಷ್ಣುವನ್ನು ಪ್ರತಿಪಾದಿಸುತ್ತವೋ ಆವಾಗ ಪರವಿದ್ಯೆ ಎನಿಸುತ್ತವೆ' ಎಂದು.

**भावदीपः –**

**ॐ अदृश्यत्वादिगुणको धर्मोक्तेः ॐ**

इत्यन्तभाष्यं सङ्गतिपरत्वेन व्याचष्टे – अदृश्य इति ।। अदृश्यत्वादीत्यादिपदेन-नात्म्यपदोक्तजीवगुणराहित्यं स्वामिराहित्यमित्यादिग्रहः ।

ಭಾಷ್ಯದಲ್ಲಿ "ಇತಿ" ಎಂಬಲ್ಲಿಯ ತನಕ ಇರುವ ವಾಕ್ಯಗಳು ಈ ಅಧಿಕರಣಕ್ಕೆ ಹಿಂದಿನ ಅಧಿಕರಣದಿಂದ ಇರುವಂತಹ ಸಂಗತಿಯನ್ನು ತೋರಿಸಲು ಹೊರಟಿವೆ ಎಂಬುದಾಗಿ ಟೀಕೆಯಲ್ಲಿ "ಅದೃಶ್ಯೇ" ಇತ್ಯಾದಿ ವಾಕ್ಯಗಳಿಂದ ವ್ಯಾಖ್ಯಾನಿಸುತ್ತಿದ್ದಾರೆ. ಭಾಷ್ಯದಲ್ಲಿ "ಅದೃಶ್ಯತ್ವಾದಿ" ಎಂದು ಹೇಳಿದ್ದಾರೆ. "ಆದಿ" ಪದದಿಂದ "ಅದೃಶ್ಯೇಽನಾತ್ಮ್ಯೇ" ಇತ್ಯಾದಿ ಶ್ರುತಿಯಲ್ಲಿ ಕೇಳಿಸುತ್ತಿರುವ "ಅನಾತ್ಮ್ಯೇ" ಎಂಬ ಪದದಿಂದ ತಿಳಿಯುವಂತಹ ಜೀವನಲ್ಲಿರುವ ಗುಣಗಳು ಪರಮಾತ್ಮನಲ್ಲಿ ಇರುವುದಿಲ್ಲವೆಂದು ಮತ್ತು ಜೀವನಿಗೆ ಮತ್ತೊಬ್ಬ ಸ್ವಾಮಿ ಇರುವಂತೆ ಪರಮಾತ್ಮನಿಗೆ ಅಂತಹ ಸ್ವಾಮಿ ಇರುವುದಿಲ್ಲವೆಂದು ತಿಳಿಸಿದ್ದಾರೆ.

**भावदीपः** – तत्रेत्यस्य तात्पर्यं तेचेति ।।''विश्वमित्युक्त्वा'' इत्यन्तस्य तात्पर्यम् – **आथर्वण इत्यादि** ।। कुत्रोच्यन्त इत्यतो ''यत्तत्'' इति भाष्यं प्राप्तमित्युपेत्य, तत् पठति – **अथेति** ।।

ಭಾಷ್ಯದಲ್ಲಿರುವ ''ತತ್ರ'' ಎಂಬ ಪದಕ್ಕೆ ಟೀಕೆಯಲ್ಲಿ ''ತೇ ಚ'' ಇತ್ಯಾದಿಯಾಗಿ ತಾತ್ಪರ್ಯವನ್ನು ಹೇಳಿದ್ದಾರೆ. ''ವಿಶ್ವಂ ಇತ್ಯುಕ್ತ್ವಾ'' ಎಂಬಲ್ಲಿಯ ತನಕ ಈ ಅಧಿಕರಣದ ವಿಷಯವಾಕ್ಯವನ್ನು ತೋರಿಸಿದ್ದಾರೆ. ಆ ಸಮಗ್ರ ವಿಷಯವಾಕ್ಯದ ತಾತ್ಪರ್ಯವನ್ನು ''ಆಥರ್ವಣೇ'' ಎಂದು ಹೇಳಿರುತ್ತಾರೆ. ಅಕ್ಷರನು ಎಲ್ಲಿ ಶ್ರುತನಾಗಿದ್ದಾನೆ? ಎಂಬ ಪ್ರಶ್ನೆಗೆ ''ಯತ್ತದದ್ರೇಶ್ಯಂ'' ಇತ್ಯಾದಿ ವಾಕ್ಯವನ್ನು ಭಾಷ್ಯದಲ್ಲಿ ಉಲ್ಲೇಖಿಸಿದ್ದಾರೆ ಎಂಬುದಾಗಿ ವಿವರಿಸುತ್ತಾ, ಅದೇ ವಾಕ್ಯವನ್ನು ಸಂಪೂರ್ಣವಾಗಿ ಪಠಿಸುತ್ತಿದ್ದಾರೆ ''ಅಥ'' ಇತ್ಯಾದಿ ಟೀಕೆಯಿಂದ.

**भावदीपः** – गुणानामक्षरनिष्ठताप्रदर्शनाय वा सिद्धान्तहेतुप्रदर्शनार्थं तदुपयोगितया वा पूर्वशेषोक्तिः ।

''ಯತ್ತದದ್ರೇಶ್ಯಂ'' ಎಂಬಲ್ಲಿಂದ ವಿಷಯವಾಕ್ಯವನ್ನು ಭಾಷ್ಯದಲ್ಲಿ ತೋರಿಸಿದ್ದಾರೆ. ಆದರೆ ಟೀಕೆಯಲ್ಲಿ ಅದರ ಹಿಂದಿನ ವಾಕ್ಯವೆನಿಸಿದ ''ಅಥ ಪರಾ'' ಎಂಬುದರಿಂದಲೇ ವಿಷಯವಾಕ್ಯವನ್ನು ಪ್ರದರ್ಶಿಸಿದ್ದಾರೆ. ಕಾರಣವೇನೆಂದರೆ ಅದೃಶ್ಯತ್ವಾದಿ ಗುಣಗಳೆಲ್ಲವೂ ಅಕ್ಷರನಲ್ಲಿಯೇ ಶ್ರುತವಾಗಿದೆ ಎಂದು ತೋರಿಸಬೇಕಾಗಿದೆ. ಮತ್ತು ಸಿದ್ಧಾಂತ ಹೇತುವನ್ನೂ ಸಹ ಪ್ರದರ್ಶನ ಮಾಡಬೇಕಾಗಿದೆ. ಅದಕ್ಕೆ ಉಪಯೋಗಿಯಾಗುವಂತೆ ಹಿಂದಿನ ವಾಕ್ಯವನ್ನೂ ಸಹ ಉಲ್ಲೇಖಿಸಿದ್ದಾರೆಂದು ತಿಳಿಯಬೇಕು.

**भावदीपः** – भाष्ये विच्छिद्य पाठात् सङ्गत्याद्युक्त्यर्थम् अक्षरद्वयैक्यसूचनाय समग्रोक्तिः । दृष्टान्तोक्तेरप्युपन्यासस्य कृत्यमग्रे व्यक्तम् ।

ವಿಷಯವಾಕ್ಯವನ್ನು ತೋರಿಸುವಾಗ ಭಾಷ್ಯದಲ್ಲಿ ''ಇತ್ಯುಕ್ತ್ವಾ'' ಎಂದು ಮಧ್ಯದಲ್ಲಿ ವಿಚ್ಛೇದ ಮಾಡಿ ಪುನಃ ಮುಂದಿನ ವಾಕ್ಯವನ್ನು ತೋರಿಸಿದ್ದಾರೆ. ಆದರೆ ಟೀಕೆಯಲ್ಲಿ ಹಾಗೆ ವಿಚ್ಛೇದ ಮಾಡದೇ ಒಟ್ಟಿಗೆ ವಾಕ್ಯವನ್ನು ಪ್ರದರ್ಶನ ಮಾಡಿದ್ದಾರೆ. ಕಾರಣವೇನೆಂದರೆ ಸಂಗತಿ ತೋರಿಸಬೇಕಾಗಿದೆ. ಮತ್ತು ಹಿಂದಿನ ಮುಂದಿನ ವಾಕ್ಯಗಳಲ್ಲಿ ಪ್ರತಿಪಾದ್ಯವಾದ ಅಕ್ಷರತತ್ವವು ಒಂದೇ ಆಗಿದೆ ಎಂದು ತಿಳಿಸಬೇಕಾಗಿದೆ. ಈ ದೃಷ್ಟಿಯಿಂದ ಟೀಕೆಯಲ್ಲಿ ಸಮಗ್ರವಾಕ್ಯವನ್ನು ಒಟ್ಟಿಗೆ ನೀಡಿದ್ದಾರೆ. ''ಯಥೋರ್ಣನಾಭಿಃ'' ಇತ್ಯಾದಿಯಾದ ದೃಷ್ಟಾಂತವಚನವನ್ನು ಭಾಷ್ಯದಲ್ಲಿ ಮತ್ತು ಟೀಕೆಯಲ್ಲಿ ಏಕೆ ಉಲ್ಲೇಖಿಸಿದ್ದಾರೆ? ಎಂಬುದರ ಬಗ್ಗೆ ಮುಂದೆ ಸ್ಪಷ್ಟಪಡಿಸುತ್ತೇವೆ.

**भावदीपः** – अद्रेश्यं चक्षुरादिना अदृश्यम् । अग्राह्यं मनसा । अवर्णं ब्राह्मण्यादिवर्णहीनम् । संहर्तृत्वमधिकं वदन् भूतयोनिमित्युक्तकारणत्वं स्पष्टयति – **यथोर्णनाभिरिति** ।।

ಅದ್ರೇಶ್ಯಂ = ಚಕ್ಷುರಿಂದ್ರಿಯವೇ ಮೊದಲಾದವುಗಳಿಂದ ನೋಡಲು ಸಾಧ್ಯವಿಲ್ಲದವನು. ಅಗ್ರಾಹ್ಯಂ = ಮನಸ್ಸಿನಿಂದಲೂ ಸಹ ತಿಳಿಯಲು ಸಾಧ್ಯವಿಲ್ಲದವನು. ಅವರ್ಣಂ = ಬ್ರಾಹ್ಮಣ್ಯವೇ ಮೊದಲಾದ ವರ್ಣವಿಲ್ಲದವನು.

ಸಂಹರ್ತೃತ್ವವನ್ನು ಅಧಿಕವಾಗಿ ಹೇಳುವವರಾಗಿ "ಭೂತಯೋನಿಂ" ಎಂಬುದರಿಂದ ತಿಳಿಯಲ್ಪಟ್ಟ ಕಾರಣತ್ವವನ್ನೇ ಸ್ಪಷ್ಟಪಡಿಸುತ್ತಿದ್ದಾರೆ "ಯಥೋರ್ಣನಾಭಿಃ" ಇತ್ಯಾದಿ ವಾಕ್ಯದಿಂದ.

**भावदीपः – कारणत्वं कर्तृत्वरूपमिति वक्तुमाद्यः । अङ्कुरजनने पृथिवीबीजमिव विश्वसृष्ट तत्तत्कर्मापेक्षत इति वक्तुं द्वितीयः । अनायासेन तत्सृष्टिरिति वक्तुं तृतीयो दृष्टान्तः ।**

"ಯಥೋರ್ಣನಾಭಿಃ" ಇತ್ಯಾದಿ ವಾಕ್ಯಶೇಷದಿಂದ ಮೂರು ದೃಷ್ಟಾಂತಗಳನ್ನು ಶ್ರುತಿಯು ಹೇಳುತ್ತಿದೆ. ಅಕ್ಷರತತ್ವದಲ್ಲಿ ಶ್ರುತವಾದ ಕಾರಣತ್ವವು ಕರ್ತೃತ್ವರೂಪವಾಗಿದೆ ಎಂದು ತಿಳಿಸುವುದಕ್ಕಾಗಿ ಮೊದಲನೆಯ ಊರ್ಣನಾಭಿಯ ದೃಷ್ಟಾಂತವನ್ನು ನೀಡಲಾಗಿದೆ. ಮೊಳಕೆಯು ಹುಟ್ಟಬೇಕೆಂದರೆ ಭೂಮಿಯು ಹೇಗೆ ಕಾರಣವಾಗುತ್ತದೆಯೋ ಹಾಗೆಯೇ ಸಕಲಜೀವರಾಶಿಗಳು ಹುಟ್ಟಬೇಕಾದರೆ ಅವರವರ ಕರ್ಮಗಳೇ ಕಾರಣವಾಗಿದೆ ಎಂದು ತಿಳಿಸಲು ಎರಡನೆಯ ಪೃಥಿವೀಯಿಂದ ಹುಟ್ಟುವ ಓಷಧಿ ದೃಷ್ಟಾಂತವನ್ನು ನೀಡಲಾಗಿದೆ. ಭಗವಂತನು ಅನಾಯಾಸವಾಗಿ ಸೃಷ್ಟ್ಯಾದಿಗಳನ್ನು ಮಾಡುತ್ತಾನೆಂದು ತಿಳಿಸಲು ಮೂರನೆಯ ಕೇಶಲೋಮ ದೃಷ್ಟಾಂತವನ್ನು ನೀಡಲಾಗಿದೆ.

**भावदीपः – सतो जीवतः पुरुषाद्देहात् । शिरस्थाः केशाः । अन्यानि लोमानि । सर्वस्य तात्पर्यमाह – तेषामिति ।।**

ಸತಃ = ಜೀವಂತವಾದ, ಪುರುಷಾತ್ = ದೇಹದ ದಸೆಯಿಂದ, ಕೇಶಾಃ = ತಲೆಯಲ್ಲಿರುವ ಕೂದಲುಗಳು, ಲೋಮಾನಿ = ದೇಹದಲ್ಲಿರುವ ಕೂದಲುಗಳು ಹುಟ್ಟುತ್ತವೆ. ಎಂದು ಶ್ರುತಿಯ ಪದಗಳಿಗೆ ಅರ್ಥ. ಸಮಗ್ರ ಶ್ರುತಿಯ ತಾತ್ಪರ್ಯವನ್ನು "ತೇಷಾಂ" ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ.

**भावदीपः – अक्षरश्रुत्या दृष्टान्तपूर्वमुक्तोपादानत्वयुक्त्या 'तस्मादक्षराद्' इति भाष्यशेषोक्तदिशा विष्णावयोगे चान्यनिष्ठत्व इत्यर्थः ।**

ಅಕ್ಷರಶ್ರುತಿಯಿಂದ ದೃಷ್ಟಾಂತಪೂರ್ವಕವಾಗಿ ಹೇಳಲ್ಪಟ್ಟ ಉಪಾದಾನತ್ವ ಯುಕ್ತಿಯಿಂದ "ತಸ್ಮಾದಕ್ಷರಾದ್" ಎಂಬ ಭಾಷ್ಯಶೇಷದ ಮಾತಿನಿಂದ ವಿಷ್ಣುವಿನಲ್ಲಿ ಅದೃಶ್ಯತ್ವಾದಿ ಗುಣಗಳು ಯುಕ್ತವಾಗುವುದಿಲ್ಲ ಹೊರತಾಗಿ ಬೇರೆಯವರಲ್ಲಿಯೇ ಯುಕ್ತವಾಗುತ್ತದೆ ಎಂದು "ತೇಷಾಂ" ಇತ್ಯಾದಿ ವಾಕ್ಯಗಳ ಅಭಿಪ್ರಾಯ.

**भावदीपः – उक्ता इत्यन्तवाक्यस्य तात्पर्यम् – प्रागुक्तेति ।। इतीति ।। पूर्वाक्षेपरूपसङ्गतिसम्भवाद्धेतोरित्यर्थः ।।**

"ಪ್ರಾಗುಕ್ತ" ಎಂಬ ಪದದಿಂದ ಹಿಂದೆ "ಅದೃಶ್ಯತ್ವಾದಿ ಗುಣಾಃ ಉಕ್ತಾಃ" ಇತ್ಯಾದಿ ವಾಕ್ಯದಿಂದ ಹೇಳಲ್ಪಟ್ಟ ಅಭಿಪ್ರಾಯವನ್ನು ಪರಾಮರ್ಶಿಸುತ್ತಿದ್ದಾರೆ. "ಇತಿ ಅವಶ್ಯಂ" ಎಂಬಲ್ಲಿರುವ "ಇತಿ" ಎಂಬ ಪದಕ್ಕೆ ಹಿಂದಿನ ಅಧಿಕರಣದಿಂದ ಆಕ್ಷೇಪರೂಪವಾದ ಸಂಗತಿಯಿರುವ ಕಾರಣ ಎಂದರ್ಥ.

**भावदीपः – निर्णेतव्यतेति ।। तेषामित्यनुकर्षः । भाष्ये गुणा इति बहुवचनोक्तेराह – जातमिति ।। पादसङ्गत्यर्थम् – लिङ्गेति ।।**

"ನಿರ್ಣೇತವ್ಯತಾ" ಎಂಬ ಪದದ ಅನಂತರ "ತೇಷಾಂ" ಎಂಬ ಪದವನ್ನು ಅನುಕರ್ಷ ಮಾಡಬೇಕು. ಭಾಷ್ಯದಲ್ಲಿ "ಅದೃಶ್ಯತ್ವಾದಿಗುಣಾಃ" ಎಂದು ಬಹುವಚನ ಹೇಳಿದ್ದರಿಂದ ಟೀಕೆಯಲ್ಲಿ "ಲಿಂಗ ಜಾತಂ" ಎಂಬುದಾಗಿ ಜಾತ ಪದವನ್ನು ಪ್ರಯೋಗಿಸಿದ್ದಾರೆ. ಪಾದಸಂಗತಿಯನ್ನು ತಿಳಿಸುವುದಕ್ಕಾಗಿ ಲಿಂಗಪದವನ್ನು ಪ್ರಯೋಗಿಸಿದ್ದಾರೆ.

**भावदीपः – तदेव भाष्यं पूर्वपक्षतद्युक्तितत्फलपरत्वेन व्याकर्तुं परः प्रतीयत इत्युक्तिलब्धप्रतिज्ञामाह – न विष्णोरिति ।।**

ಸಂಗತಿಪರವಾದ ಭಾಷ್ಯವನ್ನೇ ಪೂರ್ವಪಕ್ಷವನ್ನು, ಪೂರ್ವಪಕ್ಷಯುಕ್ತಿ ಮತ್ತು ಪೂರ್ವಪಕ್ಷಫಲ ಪರವಾಗಿ ವ್ಯಾಖ್ಯಾನಿಸುವವರಾಗಿ "ಪರಃ ಪ್ರತೀಯತೇ" ಎಂಬ ಭಾಷ್ಯದಲ್ಲಿರುವ ಮಾತಿನಿಂದ ದೊರೆಯಲ್ಪಟ್ಟ ಪ್ರತಿಜ್ಞಾಂಶವನ್ನು "ನ ವಿಷ್ಣೋಃ" ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ.

**भावदीपः – विष्णोर्न चेन्निर्विषयं वाक्यमित्यत उक्तम् – तावदिति ।। अन्यस्य तु पश्चाद् विवरिष्याम इत्यर्थः । कुत इत्यतः तत्रेत्यादि ।। 'अक्षरात्सम्भवतीह विश्वम्' इत्युक्त्वेत्यन्तपूर्ववाक्यं प्राप्तमिति मत्वाऽऽह – अदृश्यत्वादिगुणक इति।। भाष्यस्थतत्रेत्यस्यर्थोऽयम् ।**

"ನ ವಿಷ್ಣೋಃ" ಇತ್ಯಾದಿ ವಾಕ್ಯಗಳ ಅಭಿಪ್ರಾಯ ಹೀಗಿದೆ - ವಿಷ್ಣು ಅದೃಶ್ಯತ್ವಾದಿ-ಗುಣಗಳುಳ್ಳವನಾಗದಿದ್ದಲ್ಲಿ ವಾಕ್ಯವು ನಿರ್ವಿಷಯವಾಗಬೇಕಾಗುತ್ತದಲ್ಲವೇ? ಎಂಬ ಪ್ರಶ್ನೆಗೆ "ತಾವತ್" ಎಂಬ ಪದವನ್ನು ಪ್ರಯೋಗಿಸಿದ್ದಾರೆ. ಅಂದರೆ ಆ ವಾಕ್ಯಕ್ಕೆ ವಿಷ್ಣು ವಿಷಯನಾಗದಿದ್ದರೂ ಬೇರೆಯವರು ವಿಷಯರಾಗುತ್ತಾರೆ ಎಂಬುದನ್ನು ಮುಂದೆ ತಿಳಿಸುತ್ತೇವೆ ಎಂದು "ತಾವತ್" ಎಂಬ ಪದದಿಂದ ಸೂಚನೆ ಮಾಡಿದ್ದಾರೆ.

ವಿಷ್ಣು ಏಕೆ ಅದೃಶ್ಯತ್ವಾದಿ ಗುಣಗಳುಳ್ಳವನಾಗುವುದಿಲ್ಲ ? ಎಂಬ ಪ್ರಶ್ನೆಗೆ ಭಾಷ್ಯದಲ್ಲಿ "ತತ್ರ" ಎಂಬಲ್ಲಿಂದ ಪ್ರಾರಂಭಿಸಿ "ಅಕ್ಷರಾತ್ಸಂಭವತೀಹ ವಿಶ್ವಮ್" ಎಂಬಲ್ಲಿಯ ತನಕ ಉತ್ತರಿಸಿದ್ದಾರೆ. ಈ ಅಭಿಪ್ರಾಯದಿಂದ ಟೀಕೆಯಲ್ಲಿ "ಅದೃಶ್ಯತ್ವಾದಿಗುಣಕೇ" ಇತ್ಯಾದಿಯಾಗಿ ಹೇಳುತ್ತಿದ್ದಾರೆ. ಭಾಷ್ಯದಲ್ಲಿರುವ "ತತ್ರ" ಎಂಬ ಪದದ ಅರ್ಥವನ್ನು "ಅದೃಶ್ಯತ್ವಾದಿಗುಣಕೇ" ಎಂದಿದ್ದಾರೆ.

**भावदीपः** – तथापि कुतो न विष्णुरित्यतः ''अक्षरात्परतः पर'' इति श्रुतेरपि नाक्षरात्सम्भवतीत्यस्याः निरवकशत्वामिति न्ययविवरणोक्तदिशाऽक्षरशब्दस्य विष्णौ निरवकशत्वं वक्तुं प्रवृत्तं तस्माच्चेत्यादिभाष्यवाक्यशेषं मत्वाऽऽह – **तस्य चेति** ।।

ಆದರೂ ಸಹ ವಿಷ್ಣು ಏಕೆ ಅದೃಶ್ಯತ್ವಾದಿ ಗುಣಗಳುಳ್ಳವನಾಗುವುದಿಲ್ಲ? ಎಂಬ ಪ್ರಶ್ನೆಗೆ ''ಅಕ್ಷರಾತ್ಪರತಃ ಪರಃ'' ಎಂಬ ಶ್ರುತಿಗಿಂತಲೂ ''ಅಕ್ಷರಾತ್ಸಂಭವತೀಹ ವಿಶ್ವಂ'' ಎಂಬ ವಾಕ್ಯವು ನಿರವಕಾಶವಾಗಿಲ್ಲ ಎಂಬ ನ್ಯಾಯವಿವರಣದಲ್ಲಿ ಹೇಳಿದಂತೆ ಅಕ್ಷರ ಶಬ್ದಕ್ಕೆ ವಿಷ್ಣುವಿನಲ್ಲಿ ನಿರವಕಾಶತ್ವವನ್ನು ಸಾಧಿಸುವುದಕ್ಕಾಗಿ ''ತಸ್ಮಾಚ್ಚ'' ಇತ್ಯಾದಿ ಭಾಷ್ಯದ ವಾಕ್ಯಶೇಷವು ಹೊರಟಿರುತ್ತದೆ. ಈ ಅಭಿಪ್ರಾಯದಿಂದ ''ತಸ್ಯ ಚ'' ಇತ್ಯಾದಿ ಟೀಕೆಯು ಹೊರಟಿದೆ.

**भावदीपः** – तत्र हेतुत्वेन भाष्यशेषं व्याचष्टे – **यत इति** ।। तस्मादित्यस्य व्यवहितयत्किञ्चित्परामर्शित्वभ्रमनिरासायास्मादप्यक्षरादिति व्याख्या । भाष्ये इत्यतः परमित्यग्रेतनभाष्यानुरोधादिहापीति शब्दानन्तरं ''वाक्य'' इति शेषः ।

ಈ ವಿಷಯದಲ್ಲಿ ಕಾರಣವನ್ನು ಭಾಷ್ಯದ ವಾಕ್ಯಶೇಷದಿಂದಲೇ ತೋರಿಸುತ್ತಿದ್ದಾರೆ ''ಯತಃ'' ಇತ್ಯಾದಿ ಟೀಕೆಯಿಂದ. ''ತಸ್ಮಾತ್'' ಎಂಬ ಪದವು ವ್ಯವಹಿತವಾದ ಯಾವುದಾದರೂ ಒಂದನ್ನು ಪರಾಮರ್ಶಿಸಬಹುದೆಂಬ ಭ್ರಮೆಯನ್ನು ನಿರಾಕರಿಸುವುದಕ್ಕಾಗಿ ''ಅಸ್ಮಾದಪ್ಯಕ್ಷರಾತ್'' ಎಂದು ವ್ಯಾಖ್ಯಾನಿಸಿದ್ದಾರೆ. ಮುಂದಿನ ಭಾಷ್ಯದಲ್ಲಿರುವ ''ಇತಿ'' ಶಬ್ದದ ಅನಂತರ 'ವಾಕ್ಯೇ'ವೆಂಬುದನ್ನು ಇಟ್ಟುಕೊಂಡಿದ್ದರಿಂದ ಇಲ್ಲಿಯೂ ಸಹ 'ವಾಕ್ಯೇ' ಎಂಬುದನ್ನು ಶೇಷಪೂರಣ ಮಾಡಿಕೊಳ್ಳಬೇಕೆಂದು ತಿಳಿಯುತ್ತದೆ.

**भावदीपः** – **अस्मादप्यक्षराद्** ।। अक्षरात्सम्भवतीति वाक्यादुत्तरवाक्येऽस्मादप्यक्षरात्परः प्रतीयत इत्यर्थः । एतेन भाष्ये तस्मादिति पूर्ववाक्यमक्षरं च परामृश्यत इति दर्शितम् ।

''ಅಸ್ಮಾದಪ್ಯಕ್ಷರಾತ್'' ಎಂದರೆ ''ಅಕ್ಷರಾತ್ಸಂಭವತಿ'' ಎಂಬ ಮುಂದಿನ ವಾಕ್ಯದಲ್ಲಿ ಈ ಅಕ್ಷರನಿಗಿಂತಲೂ ಉತ್ತಮನಿದ್ದಾನೆಂದು ತಿಳಿಯುತ್ತದೆ ಎಂದರ್ಥ. ಹೀಗೆ ಹೇಳಿದ್ದರಿಂದ ಭಾಷ್ಯದಲ್ಲಿ ''ತಸ್ಮಾತ್'' ಎಂಬ ಪೂರ್ವವಾಕ್ಯವನ್ನು ಮತ್ತು ಅಕ್ಷರನನ್ನು ಪರಾಮರ್ಶ ಮಾಡಿಕೊಳ್ಳಬೇಕೆಂದು ತಿಳಿಸಿದಂತಾಯಿತು.

**भावदीपः** – ''इत्युक्त्वा प्रवृत्ते उत्तरवाक्ये'' इति योजनात् क्त्वाश्रुत्युपपत्तिः । तत्किमुत्तरवाक्यम्? इत्यतो 'अक्षरात्परतः परः' इत्येतत् प्रवृत्तमिति मत्वा 'परो विष्णुः' इत्यत्र लिङ्गानि वक्तुं शेषपूर्वकमाह – **दिव्यो हीति** ।।

ಭಾಷ್ಯದಲ್ಲಿ "ಇತ್ಯುಕ್ತ್ವಾ ಪ್ರವೃತ್ತೇ ಉತ್ತರವಾಕ್ಯೇ" ಎಂದು ಯೋಜನೆ ಮಾಡಿಕೊಳ್ಳಬೇಕು. ಇದರಿಂದ 'ಕ್ತ್ವಾ' ಪ್ರತ್ಯಯಾಂತ ಶ್ರುತಿಯು ಉಪಪನ್ನವಾಗುತ್ತದೆ. ಉತ್ತರವಾಕ್ಯ ಯಾವುದು? ಎಂಬ ಪ್ರಶ್ನೆಗೆ "ಅಕ್ಷರಾತ್ಪರತಃ ಪರಃ" ಎಂಬ ವಾಕ್ಯವು ಹೊರಟಿದೆ. ಈ ದೃಷ್ಟಿಯಿಂದ ವಿಷ್ಣುವೇ ಶ್ರೇಷ್ಠನಾಗಿದ್ದಾನೆ ಎಂಬ ವಿಷಯದಲ್ಲಿ ಲಿಂಗವನ್ನು ಹೇಳುವುದಕ್ಕಾಗಿ ಉಳಿದ ವಾಕ್ಯಭಾಗವನ್ನು "ದಿವ್ಯೋ ಹಿ" ಇತ್ಯಾದಿಯಾಗಿ ವಿವಕ್ಷಿಸುತ್ತಿದ್ದಾರೆ.

**भावदीपः –** दिव्योऽत्यद्भुतः । अमूर्तो नियतपरिच्छिन्नपरिमाणरहितः । किन्तु बाह्यः आभ्यन्तरश्च । 'अप्राणो ह्यमनाः' इति षोडशकलाराहित्यमुच्यते । शुभ्रः शुद्ध इति कर्मनिर्णयटीकोक्तार्थो बोध्यः।

ದಿವ್ಯಃ = ಅತ್ಯದ್ಭುತನಾದವನು, ಅಮೂರ್ತಃ = ನಿಯತವಾದ ಪರಿಚ್ಛಿನ್ನಪರಿಮಾಣ ಇಲ್ಲದವನು, ಹೊರತಾಗಿ ಹೊರಗಡೆ ಒಳಗಡೆ ಎಲ್ಲಾ ಕಡೆಯೂ ತುಂಬಿರುವವನು. "ಅಪ್ರಾಣೋ ಹ್ಯಮನಾಃ" ಎಂಬುದರಿಂದ ಷೋಡಶಕಲಾರಹಿತನೆಂದು ತಿಳಿಸಲಾಗಿದೆ. "ಶುಭ್ರಃ" ಎಂಬ ಪದಕ್ಕೆ ಕರ್ಮನಿರ್ಣಯ ಟೀಕೆಯಲ್ಲಿ ಹೇಳಿರುವ ರೀತಿಯಾಗಿ ಶುದ್ಧನಾದವನು ಎಂಬರ್ಥವನ್ನು ತಿಳಿಯಬೇಕು.

**भावदीपः –** नहीति ।। 'सैव हि सत्यादयः' इत्यादौ तस्यैकस्यैव परत्वोक्तेः । 'सा काष्ठा सा परा गतिः' इत्यादेरिति भावः । एतेन 'अक्षरात्सम्भवति' इति वाक्यस्थाक्षरशब्दस्य निरवकाशत्वमित्यर्थो दर्शितः ।। अत इति ।। निरवकाशाक्षरशब्दादित्यर्थः । उक्तेत्यन्तवाक्यतात्पर्यम् "अदृश्यत्वादि" इति अद्रेश्यवाक्ये अदृश्यवाक्ये च श्रुतेत्यर्थः ।।

ವಿಷ್ಣು ಒಬ್ಬನೇ ಸರ್ವೋತ್ತಮನೆಂದು ಹೇಳಲಾಗಿದೆ. "ಸಾ ಕಾಷ್ಠಾ ಸಾ ಪರಾ ಗತಿಃ" ಎಂಬುದೇ ಈ ವಿಷಯದಲ್ಲಿ ಪ್ರಮಾಣವಾಗಿದೆ. ಹೀಗೆ ಹೇಳಿದ್ದರಿಂದ "ಅಕ್ಷರಾತ್ಸಂಭವತಿ" ಎಂಬ ವಾಕ್ಯದಲ್ಲಿರುವ "ಅಕ್ಷರ" ಶಬ್ದಕ್ಕೆ ನಿರವಕಾಶತ್ವವನ್ನು ಸಮರ್ಥಿಸಿದಂತಾಯಿತು. "ಅತಃ" ಎಂಬ ಪದಕ್ಕೆ ನಿರವಕಾಶವಾದ ಅಕ್ಷರ ಶ್ರುತಿಯ ಬಲದಿಂದ ಎಂದರ್ಥ.

"ಉಕ್ತಃ" ಎಂಬಲ್ಲಿಯ ತನಕದ ವಾಕ್ಯದ ತಾತ್ಪರ್ಯವನ್ನು "ಅದೃಶ್ಯತ್ವಾದಿಗುಣಕಃ" ಎಂಬುದರಿಂದ ಹೇಳಿದ್ದಾರೆ. "ಯತ್ತದದ್ರೇಶ್ಯಂ" ಎಂಬ ವಾಕ್ಯದಲ್ಲಿ ಮತ್ತು ಅದೃಶ್ಯತ್ವ ವಾಕ್ಯದಲ್ಲಿಯೂ ಶ್ರುತವಾಗಿದೆ ಎಂದರ್ಥ.

**भावदीपः –** प्रकृतेः प्राप्तिरिति प्रकृतिपदस्य जडपरत्वं तावदुपेत्य भाष्यं व्याचष्टे – जडेति ।। अस्येति ।। अदृश्यत्वादिगुणकाक्षरस्येत्यर्थः ।

''ಪ್ರಕೃತೇಃ ಪ್ರಾಪ್ತಿಃ'' ಪ್ರಕೃತಿಗೂ ಸಹ ಅದೃಶ್ಯತ್ವಾದಿಗಳು ಉಪಪನ್ನವಾಗುತ್ತವೆ ಎಂಬಲ್ಲಿರುವ ಪ್ರಕೃತಿ ಪದಕ್ಕೆ ಜಡಪರತ್ವವನ್ನು ಅಂಗೀಕರಿಸಿ ಭಾಷ್ಯವನ್ನು ವ್ಯಾಖ್ಯಾನಿಸುತ್ತಿದ್ದಾರೆ ''ಜಡ'' ಇತ್ಯಾದಿಯಾಗಿ. ''ಅಸ್ಯ'' ಎಂಬ ಪದಕ್ಕೆ ಅದೃಶ್ಯತ್ವಾದಿ ಗುಣಗಳುಳ್ಳ ಅಕ್ಷರನಿಗೆ ಎಂದರ್ಥ.

**भावदीपः** – 'यथोर्णनाभिः' इत्यत्र स्फुटमुपादानत्वाप्रतीतेः ''पृथिव्यादि'' इत्युक्तम् । भाष्यटीकयोः 'यथोर्णनाभिः' इत्युक्तिस्तु सिद्धान्ते उपयुज्यत इति भावः ।

''ಯಥೋರ್ಣನಾಭಿಃ'' ಎಂಬ ಶ್ರುತಿಯಲ್ಲಿ ಸ್ಪಷ್ಟವಾಗಿ ಉಪಾದಾನಕಾರಣತ್ವವು ಪ್ರತೀತವಾಗುತ್ತಿಲ್ಲ. ಆದಕ್ಕೋಸ್ಕರ ಪೃಥಿವೀ ದೃಷ್ಟಾಂತವನ್ನು ನೀಡಿರುತ್ತಾರೆ. ಭಾಷ್ಯ ಹಾಗೂ ಟೀಕೆಗಳಲ್ಲಿ ಊರ್ಣನಾಭಿ ದೃಷ್ಟಾಂತವನ್ನು ಏಕೆ ಉಲ್ಲೇಖಿಸಿದ್ದಾರೆ? ಎಂದರೆ ಸಿದ್ಧಾಂತಕ್ಕೆ ಉಪಯೋಗವಾಗುತ್ತದೆ ಎಂಬ ಅಭಿಪ್ರಾಯದಿಂದ.

**भावदीपः** – प्रागुक्तन्यायविवरणानुरोधेनाक्षरादित्युत्तरभाष्यं लिङ्गनिरवकाशतोक्त्यर्थं प्रवृत्तमिति मत्वाऽवतारयति – **नचेति** ।। तथाच विष्णावपि तद्युक्तमिति भावः ।

ಹಿಂದೆ ಉಲ್ಲೇಖಿಸಿದ ನ್ಯಾಯವಿವರಣಾನುಸಾರಿಯಾಗಿ ''ಅಕ್ಷರಾತ್'' ಎಂಬ ಮುಂದಿನ ಭಾಷ್ಯವು ಲಿಂಗಕ್ಕೆ ನಿರವಕಾಶತ್ವವನ್ನು ಸಮರ್ಥಿಸುವುದಕ್ಕಾಗಿ ಹೊರಟಿದೆ ಎಂಬ ಅಭಿಪ್ರಾಯದಿಂದ ''ನಚ'' ಇತ್ಯಾದಿಯಾಗಿ ಅವತಾರಿಕೆ ನೀಡುತ್ತಿದ್ದಾರೆ. ಆದ್ದರಿಂದ ವಿಷ್ಣುವಿನಲ್ಲಿಯೂ ಸಹ ಅಕ್ಷರ ಶ್ರುತಿಯು ಉಪಪನ್ನವಾಗುತ್ತದೆ ಎಂದು ತಿಳಿಯಬೇಕು.

**भावदीपः** – दृष्टान्तवैय्यर्थ्ये सत्यपि इत्यतः परमिति भाष्योक्तं दोषान्तरं व्यनक्ति – **इत्यतो वाक्यादिति** ।। तच्छब्दार्थः – **तस्मादिति** ।। कारणत्वेनोक्ताक्षरादित्यर्थः ।

ದೃಷ್ಟಾಂತವೈಯರ್ಥ್ಯದೋಷ ಇರುವಾಗಲೇ ಭಾಷ್ಯದಲ್ಲಿ ''ಪರಂ'' ಎಂಬ ಪದದಿಂದ ಹೇಳಲ್ಪಟ್ಟ ಮತ್ತೊಂದು ದೋಷವನ್ನು ''ಇತ್ಯತೋ ವಾಕ್ಯಾತ್'' ಎಂಬ ಟೀಕೆಯಿಂದ ವ್ಯಾಖ್ಯಾನಿಸುತ್ತಿದ್ದಾರೆ. ''ತತ್'' ಶಬ್ದದ ಅರ್ಥವೇ ''ತಸ್ಮಾತ್'' ಎಂದು ತಿಳಿಯಬೇಕು. ಅಂದರೆ ಜಗತ್ಕಾರಣವೆಂದು ಹೇಳಲ್ಪಟ್ಟ ಅಕ್ಷರನ-ದೆಸೆಯಿಂದ ಎಂದರ್ಥ.

**भावदीपः** – विष्णोः परत्वोक्तेः तदवध्यक्षरत्वमयुक्तम् । जडत्वे तु ततः परतः श्रीतत्त्वात्परो विष्णुरिति युक्तमिति उपादानत्वं जडप्रकृतेरेव दृष्टान्तवैय्यर्थ्यं च नेति भावः ।

**भावदीपः** – ವಿಷ್ಣುವು ಸರ್ವೋತ್ತಮನಾದ್ದರಿಂದ ಅವನಿಗೆ ಅಕ್ಷರವು ಅವಧಿಯಾಗಿದೆ ಎಂದು ಹೇಳಿದ್ದು ತಪ್ಪು. ಜಡವಾದ ಪ್ರಕೃತಿಯು ಅವಧಿಭೂತವಾದ ಅಕ್ಷರವೆಂದು ಪರಿಗಣಿಸಿದರೆ ಅಂತಹ ಜಡವಾದ ಅಕ್ಷರದ ದಸೆಯಿಂದ ಲಕ್ಷ್ಮೀದೇವಿಯು ಶ್ರೇಷ್ಠಳಾಗಿದ್ದಾಳೆ. ಅವಳಿಗಿಂತಲೂ ವಿಷ್ಣು ಶ್ರೇಷ್ಠನಾಗಿದ್ದಾನೆ ಎಂದು ಹೇಳಬಹುದು. ಮತ್ತು ಜಡಪ್ರಕೃತಿಗೆ ಉಪಾದಾನಕಾರಣತ್ವವೂ ಸಹ ಇರುವುದರಿಂದ ದೃಷ್ಟಾಂತಕ್ಕೆ ವೈಯರ್ಥ್ಯ ದೋಷವು ಬರುವುದಿಲ್ಲ ಎಂದು ಅಭಿಪ್ರಾಯ.

**भावदीपः** – एतेन 'अक्षरात्सम्भवति' इत्यस्याः निरवकाशत्वमिति न्यायविवरणोक्तम् इत्यन्तस्योपादानस्य निरवकाशत्वमित्यर्थान्तरं दर्शितम् । कूटस्थेत्यादि व्याचष्टे – **चेतनेति** ।।

ಹೀಗೆ ಹೇಳಿದ್ದರಿಂದ "ಅಕ್ಷರಾತ್ಸಂಭವತಿ" ಎಂಬ ಶ್ರುತಿಗೆ ನಿರವಕಾಶತ್ವವನ್ನು ಉಪಾದಾನತ್ವರೂಪವಾದ ಲಿಂಗಕ್ಕೂ ಸಹ ನಿರವಕಾಶತ್ವವನ್ನು ತಿಳಿಸಿದಂತಾಯಿತೆಂಬ ಮತ್ತೊಂದು ವ್ಯಾಖ್ಯಾನವನ್ನು ತೋರಿಸಿದಂತಾಯಿತು. "ಕೂಟಸ್ಥ" ಇತ್ಯಾದಿಯಾಗಿ ಹೇಳಿದ್ದನ್ನೇ "ಚೇತನ" ಇತ್ಯಾದಿಯಾಗಿ ವ್ಯಾಖ್ಯಾನಿಸುತ್ತಿದ್ದಾರೆ.

**भावदीपः** – न्यायविवरणमनुरुद्ध्य पूर्वोक्तदिशा अक्षरशब्दनिरवकाशत्वोक्तिपरतया पूर्वभाष्यमेव शङ्कापूर्वं योजयति – **नचेति** ।।

ನ್ಯಾಯವಿವರಣಕ್ಕೆ ಅನುಸಾರಿಯಾಗಿ ಹಿಂದೆ ಹೇಳಿದ ಪ್ರಕಾರ ಅಕ್ಷರ ಶಬ್ದವು ನಿರವಕಾಶವಾಗಿದೆ ಎಂಬ ಅರ್ಥದಲ್ಲಿಯೂ ಹಿಂದೆ ಹೇಳಿದ ಭಾಷ್ಯವನ್ನೇ ಶಂಕಾಪೂರ್ವಕವಾಗಿ ಯೋಜನೆ ಮಾಡುತ್ತಿದ್ದಾರೆ "ನಚ" ಇತ್ಯಾದಿ ವಾಕ್ಯದಿಂದ.

**भावदीपः** – अक्षरन्यायनयेनेति भावः । चित्प्रकृतौ वा कथं युक्तम् अन्तराले कस्यचिदभावेन परत इत्युक्त्ययोगात् । अत आह – **तचेति** ।

ಅಕ್ಷರಾಧಿಕರಣದ ನ್ಯಾಯದಂತೆ ಇಲ್ಲಿಯೂ ಸಹ ತಿಳಿಯಬೇಕು. ಚಿತ್ಪ್ರಕೃತಿಯನ್ನು ಅಕ್ಷರಶಬ್ದ ಪ್ರತಿಪಾದ್ಯವೆಂದು ತಿಳಿದರೆ 'ಅಕ್ಷರಾತ್ ಪರತಃ ಪರತ್ವ'ವನ್ನು ವಿಷ್ಣುವಿಗೆ ಹೇಳಲು ಸಾಧ್ಯವಿಲ್ಲ. ಶ್ರೀತತ್ವಕ್ಕಿಂತ ಶ್ರೇಷ್ಠನಾದ ವಿಷ್ಣುವಿಗಿಂತ ಮತ್ತೊಂದು ಶ್ರೇಷ್ಠವಾದ ಪದಾರ್ಥವು ಇರುವುದಿಲ್ಲವಲ್ಲ? ಎಂಬ ಪ್ರಶ್ನೆಗೆ "ತಚ್ಚ" ಇತ್ಯಾದಿಯಾದ ಟೀಕೆಯಿಂದ ಉತ್ತರಿಸುತ್ತಿದ್ದಾರೆ.

**भावदीपः** – **युज्यत इति** ।। विष्णावविकारित्वादतदभिमानित्वाच्च न युज्यत इति भावः । ब्रह्मेत्यादि व्याचष्टे – **हिरण्यगर्भस्य वेति** ।। **तत्परत इति** ।। परावधित्वेनोक्ताक्षरत्वायोगान्न विष्णुग्रहणमित्यर्थः ।

ಅದೃಶ್ಯತ್ವಾಧಿಕರಣ (೧-೨-೬)

**भावदीपः –** ವಿಷ್ಣುವಿನಲ್ಲಿ ವಿಕಾರವೂ ಇರುವುದಿಲ್ಲ ಅಭಿಮಾನಿತ್ವವೂ ಸಹ ಇರುವುದಿಲ್ಲವಾದ್ದರಿಂದ ಕೂಡುವುದಿಲ್ಲ ಎಂದು ತಿಳಿಯಬೇಕು. ಚತುರ್ಮುಖಬ್ರಹ್ಮಾದಿಗಳೂ ಸಹ ಅದೃಶ್ಯತ್ವಾದಿ ಗುಣಗುಳ್ಳವರಾಗಬಹುದೆಂದು "ಹಿರಣ್ಯಗರ್ಭಸ್ಯ ವಾ" ಇತ್ಯಾದಿ ವಾಕ್ಯಗಳಿಂದ ವ್ಯಾಖ್ಯಾನಿಸುತ್ತಿದ್ದಾರೆ. "ತತ್ ಪರತಃ" ಎಂದರೆ ಪರಕ್ಕೆ ಅವಧಿ ಎಂದು ಹೇಳಲ್ಪಟ್ಟ ವ್ಯಕ್ತಿಗೆ ಅಕ್ಷರತ್ವವು ಕೂಡುವುದಿಲ್ಲವಾದ್ದರಿಂದ ವಿಷ್ಣುವನ್ನು ಸ್ವೀಕರಿಸಲಾಗದು ಎಂದು ಅಭಿಪ್ರಾಯ.

**भावदीपः –** विरिञ्चस्याक्षरत्वे तु परतः श्रीतत्त्वात् परो विष्णुरिति भावः । तदुक्तं तत्त्वप्रदीपे – तस्मात् परस्याः प्रकृतेः परस्य हरेरभिधानादिति ।

ಒಂದು ವೇಳೆ ಚತುರ್ಮುಖಬ್ರಹ್ಮದೇವರೇ ಅಕ್ಷರರಾದಲ್ಲಿ ಪರಶಬ್ದ ವಾಚ್ಯಳಾದ ಲಕ್ಷ್ಮೀದೇವಿಗಿಂತಲೂ ವಿಷ್ಣು ಪರನಾಗಿದ್ದಾನೆಂದು ತಿಳಿಯಬೇಕು. ಇದನ್ನೇ ತತ್ತ್ವಪ್ರದೀಪದಲ್ಲಿ - "ತಸ್ಮಾತ್ ಪರಸ್ಯಾಃ ಪಕೃತೇಃ ಪರಸ್ಯ ಹರೇರಭಿಧಾನಾತ್" - "ಚತುರ್ಮುಖಬ್ರಹ್ಮನಿಗಿಂತಲೂ ಶ್ರೇಷ್ಠಳಾದ ಲಕ್ಷ್ಮೀದೇವಿಗಿಂತಲೂ ಕೂಡ ಶ್ರೀಹರಿಯು ಶ್ರೇಷ್ಠನೆಂದು ಹೇಳಿರುವುದರಿಂದ" ಎಂದು ವ್ಯಾಖ್ಯಾನಿಸಿದ್ದಾರೆ.

**भावदीपः –** ईशपदप्राप्तोऽपि न रुद्र इत्यग्रे भाषणान्निरवकाशत्वोक्तिसौकर्याय अत्रैवाह – **रुद्रस्येति** ।। **विष्णावपीति** ।। अन्तर्नयन्यायेनेति वा शब्दादेवेत्यत्रेशशब्दपर्यायेशानशब्दस्य समन्वेषमाणत्वाद्वेति भावः ।

ಈಶಪದವೂ ಸಹ ರುದ್ರನನ್ನು ಪ್ರತಿಪಾದಿಸುವುದಿಲ್ಲವೆಂದು ಮುಂದೆ ಸಮರ್ಥಿಸುತ್ತೇವೆ. ಪ್ರಕೃತ ನಿರವಕಾಶತ್ವವನ್ನು ತಿಳಿಸುವುದಕ್ಕಾಗಿ ಮುಂದೆ ಹೇಳುವ ವಿಷಯವನ್ನೇ ಇಲ್ಲಿ "ರುದ್ರಸ್ಯ" ಇತ್ಯಾದಿಯಾಗಿ ಹೇಳಿದ್ದಾರೆ. ಅಂತರಾಧಿಕರಣದ ನ್ಯಾಯದಿಂದ ಮತ್ತು "ಶಬ್ದಾದೇವ" ಎಂಬ ಸೂತ್ರದಿಂದ ಈಶಶಬ್ದಕ್ಕೆ ಪರ್ಯಾಯಶಬ್ದವೆನಿಸಿದ ಈಶಾನಶಬ್ದವನ್ನು ಸಮನ್ವಯ ಮಾಡುತ್ತಾರೆಂದು ತಿಳಿಯಬೇಕು.

**भावदीपः – तत्परत इति** ।। रुद्रस्याक्षरत्वे तु परतश्चतुर्मुखात्परो विष्णुरिति युक्तम् । अस्मिन् पक्षे श्रीतत्त्वमीश्वरकोटिनिविष्टमिति भावः । भाष्यं व्युत्क्रमेण व्याचष्टे – **अदृश्यत्वेति** ।। तत्त्वित्यनुवृत्तस्यार्थः – **विष्णुरेवेति** ।।

ರುದ್ರನು ಅಕ್ಷರನಾದಲ್ಲಿ ಅವನಿಗಿಂತಲೂ ಶ್ರೇಷ್ಠನಾದ ಚತುರ್ಮುಖಬ್ರಹ್ಮನಿಗಿಂತಲೂ ಶ್ರೇಷ್ಠನಾದವನು ವಿಷ್ಣುವೆಂದು ಹೇಳಬಹುದು. ಆದರೆ ಈ ಪಕ್ಷದಲ್ಲಿ ಈಶ್ವರ ಕೋಟಿಯಲ್ಲಿ ಶ್ರೀತತ್ತ್ವವೂ ಸಹ ಸೇರಿರುತ್ತದೆ ಎಂದು ಅಭಿಪ್ರಾಯ. ಭಾಷ್ಯವನ್ನು ವಿಪರೀತಕ್ರಮದಿಂದಲೂ ವ್ಯಾಖ್ಯಾನಿಸುತ್ತಿದ್ದಾರೆ "ಅದೃಶ್ಯತ್ವ" ಇತ್ಯಾದಿಯಾಗಿ. ಅನುವೃತ್ತವಾದ "ತತ್ತು" ಎಂಬ ಪದದ ಅರ್ಥವನ್ನೇ "ವಿಷ್ಣುರೇವ" ಎಂದಿದ್ದಾರೆ.

**भावदीपः –** हेतूक्तिपरं वाक्यं दर्शयंस्तद्धर्मत्वेनावगतपरविद्येति भाष्यमाकाङ्क्षानुरोधेन विच्छिद्य व्याकुर्वन् सूत्रखण्डार्थमाह – **अथ परेति** ।।

ಹೇತುವನ್ನು ಸಮರ್ಥಿಸುವ ವಾಕ್ಯವನ್ನು ತೋರಿಸುತ್ತಾ ವಿಷ್ಣುವಿನ ಧರ್ಮವೆಂದು ತಿಳಿಸುತ್ತಿರುವ "ಪರವಿದ್ಯಾ" ಇತ್ಯಾದಿ ಭಾಷ್ಯವನ್ನು ಆಕಾಂಕ್ಷೆಗೆ ಅನುಸಾರಿಯಾಗಿ ತುಂಡರಿಸಿ ವ್ಯಾಖ್ಯಾನಿಸುತ್ತಿದ್ದಾರೆ. ಮತ್ತು ಸೂತ್ರದ ಒಂದು ಭಾಗದ ವ್ಯಾಖ್ಯಾನವನ್ನೂ ಸಹ ಮಾಡುತ್ತಿದ್ದಾರೆ "ಅಥ ಪರಃ" ಇತ್ಯಾದಿ ಟೀಕೆಯಿಂದ.

**भावदीपः** – तमेवेत्यादेरर्थः – श्रुतीति ।। श्रुती च स्मृतिश्च ताभिरित्यर्थः ।। हरेर्ज्ञानमिति ।। अनेन तन्मतिरिति परामर्शप्रदर्शनाय पूर्वपादोक्तिरिति सूचितम् ।

"ತಮೇವ" ಇತ್ಯಾದಿ ಶ್ರುತಿಯ ಅರ್ಥವನ್ನೇ "ಶ್ರುತಿ" ಎಂದು ಹೇಳಿದ್ದಾರೆ. ಅಂದರೆ ಶ್ರುತಿ ಹಾಗೂ ಸ್ಮೃತಿಗಳಿಂದ ಎಂದರ್ಥ. ಶ್ರೀಹರಿಯ ಜ್ಞಾನವೆಂದು ಅನ್ವಯ. ಹೀಗೆ ಹೇಳಿದ್ದರಿಂದ "ತನ್ಮತಿಃ" ಎಂಬಲ್ಲಿರುವ "ತತ್" ಪದದಿಂದ ಯಾವುದನ್ನು ಪರಾಮರ್ಶಿಸಬೇಕೆಂಬುದನ್ನು ತಿಳಿಸುವುದಕ್ಕಾಗಿ ಪೂರ್ವಪಾದವನ್ನೂ ಸಹ ಉಲ್ಲೇಖಿಸಿದ್ದಾರೆಂದು ಸೂಚಿಸಿದಂತಾಯಿತು.

**भावदीपः** – परापरविद्ययोर्भेदभ्रान्तिं निरस्यन् परापरविषयत्वरूपोपाधिकृतभेदमाह – यदेति ।। अन्येति ।। कर्मादिविषयतया ।। तदुक्तमिति ।। आथर्वणभाष्य इत्यर्थः ।

ಪರವಿದ್ಯೆ ಮತ್ತು ಅಪರವಿದ್ಯೆಗಳು ಭಿನ್ನವಿಷಯಕವಾಗಿದೆ ಎಂಬ ಭ್ರಾಂತಿಯನ್ನು ನಿರಾಕರಿಸುತ್ತಾ ಪರವಿಷಯತ್ವ ಹಾಗೂ ಅಪರವಿಷಯತ್ವ ಎಂಬ ಉಪಾಧಿಗಳ ಭೇದವಷ್ಟೇ ಇರುತ್ತದೆ ಎಂದು "ಯದಾ" ಇತ್ಯಾದಿ ವಾಕ್ಯದಿಂದ ಸಮರ್ಥಿಸಿದ್ದಾರೆ. "ಅನ್ಯ" ಎಂದರೆ ಕರ್ಮ ಮೊದಲಾದವುಗಳನ್ನು ವಿಷಯೀಕರಿಸುವುದರಿಂದ ಎಂದರ್ಥ. "ತದುಕ್ತಂ" ಎಂದರೆ ಆಥರ್ವಣಭಾಷ್ಯದಲ್ಲಿ ಹೇಳಿದ್ದಾರೆಂದು ಅರ್ಥ.

**भावदीपः** – यथैकमेव कर्माभिसन्धिभेदात् प्रवृत्तं निवृत्तमिति चोच्यते, तथेति भावः । एतेन ऋगाद्यपरविद्याविषये शास्त्रयोनौ हरौ न तद्विरुद्धपरविद्याविषयत्वमिति निरस्तम् ।

ಯಾವ ರೀತಿಯಾಗಿ ಒಂದೇ ಕರ್ಮವು ಬೇರೆ ಬೇರೆ ಅನುಸಂಧಾನದಿಂದ ಪ್ರವೃತ್ತಕರ್ಮ ಹಾಗೂ ನಿವೃತ್ತಕರ್ಮವೆಂದು ಪ್ರಭೇದವನ್ನು ತಾಳುತ್ತದೊ, ಅದೇ ರೀತಿಯಾಗಿ ಒಂದೇ ವಿದ್ಯೆ ಬೇರೆ ಬೇರೆ ಉಪಾದಿಗಳಿಂದ ಪ್ರಭೇದವನ್ನು ಹೊಂದಿದೆ ಎಂದು ತಿಳಿಯಬೇಕು. ಹೀಗೆ ಹೇಳಿದ್ದರಿಂದ ಋಗ್ವೇದವೇ ಮೊದಲಾದ ಅಪರವಿದ್ಯೆಗೆ ವಿಷಯನಾದ ಶ್ರೀಹರಿಯಲ್ಲಿ ತದ್ವಿರುದ್ಧವಾದ ಪರವಿದ್ಯಾವಿಷಯತ್ವವು ಬರುವುದಿಲ್ಲವೆಂಬ ಆಕ್ಷೇಪವನ್ನು ನಿರಾಕರಿಸಿದಂತಾಯಿತು.

**भावदीपः** – भाष्ये यान्यङ्गानीति शिक्षादीनि षडङ्गान्युच्यन्ते । आयुर्वेदो धनुर्वेदो गान्धर्वः स्थापत्यं चोपाङ्गानि शिष्टा कला विद्याः प्रत्यङ्गानीति तत्त्वप्रदीपोक्तार्थः ।। २१ ।।

ಅದೃಶ್ಯತ್ವಾಧಿಕರಣ (೧-೨-೬)

ಭಾಷ್ಯದಲ್ಲಿ 'ಅಂಗಾನಿ' ಎಂಬ ಪದದಿಂದ ಶಿಕ್ಷಾ, ವ್ಯಾಕರಣ ಮೊದಲಾದ ಷಡಂಗಗಳನ್ನು, ಆಯುರ್ವೇದ, ಧನುರ್ವೇದ, ಗಾಂಧರ್ವ, ಸ್ಥಾಪತ್ಯ ಮೊದಲಾದ ಉಪಾಂಗಗಳನ್ನು, ಉಳಿದ ಕಲೆ, ವಿದ್ಯೆ ಮೊದಲಾದ ಪ್ರತ್ಯಂಗಗಳನ್ನು ಸಂಗ್ರಹಿಸಿದ್ದಾರೆಂದು ತತ್ವಪ್ರದೀಪದಲ್ಲಿ ವ್ಯಾಖ್ಯಾನಿಸಿದ್ದಾರೆ.

**वाक्यार्थमञ्जरी –**

**ॐ अदृश्यत्वादिगुणको धर्मोक्तेः ॐ**

**अथेति** ।। अथापरविद्यानिरूपणानन्तरं परापरविद्या निरूप्यत इति शेषः । यया विद्यया तत् **प्रसिद्धमक्षरम्** अक्षरशब्दाभिधेयं ब्रह्म अधि अधिकत्वेन गम्यते अवगम्यते सा परविद्येत्यर्थः । प्रसिद्धाक्षरव्याव्...तत्स्वरूपं निरूपयति – **यत्तदद्रेश्यमित्यादिना** ।। यत्पूर्वोक्तमक्षरमद्रेश्यमदृश्यम् अग्राह्यं केनापि ग्रहीतुमशक्यम् । अगोत्रं भारद्वाजादिगोत्ररहितम् । अवर्णं प्राकृतवर्णरहितं ब्राह्मणादिवर्णरहितं वा । अचक्षुःश्रोत्रं चक्षुःश्रोत्रोपलक्षितप्राकृतज्ञानेन्द्रियरहितम् । अपाणिपादम् पाणिपादोपलक्षितप्राकृतकमन्द्रियरहितम् । नित्यस्वरूपतो देहतश्चाविनाशि । विभुं समर्थम् । सर्वगतं सर्वत्र व्याप्तम् । सुसूक्ष्मं जीवादप्यतिशयेन सूक्ष्मम् । अव्ययं ह्रासरहितम् । नन्वेवमक्षरस्यादृश्यत्वेऽधिगम्यत इति दृश्यत्वोक्तिः कथमित्यत आह – **यद्भूतयोनिमिति** ।। भूतयोनिं जगत्कारणं यदक्षरं तद्धीराः पण्डिताः परिपश्यन्ति । स्वयोग्यतानुसारेण जानन्ति । अनेनाधीराणामदृश्यमित्युक्तं भवति । लोके पितुरन्यस्यैवमारकत्वदर्शनान्न तथेहान्यस्य संहर्तृत्वं मन्तव्यमिति भावेन स्रष्टृत्वं संहर्तृत्वं च सदृष्टान्तमुपपादयति – **यथेति** ।। सदृष्टान्तो यथा ऊर्णनाभिस्तन्तुवायकः स्वभुक्तमन्नादिकं तन्त्वाद्याकारेण सृजते पुनर्गृह्णते संहरति च तथाऽक्षरशब्दोक्तो भगवानपि पूर्वकल्पे भुक्तं जगत् सृजते संहरति च, किमनुसृत्य सृजत इत्यतो दृष्टान्तेनाह – **यथेति** ।। यथा पृथिवी शाल्यादिनानाबीजान्यपेक्ष्य तत्तदङ्कुरान् जनयति, तथा चेतनानां विविधकर्माण्यपेक्ष्य, तत् सृजतीत्युक्तं भवति । कुलालवन्नाक्षरस्य क्लेशेन स्रष्टृत्वम् इति सदृष्टान्तमाह – **यथेति** ।। सतश्चेतनाधिष्ठितात् पुरुषदेहाच्छिरसि विद्यमानाः केशाः देहे विद्यमानानि लोमानि अनायासेन भवन्ति । तथाऽक्षरादिहास्वतन्त्रवर्गे विश्वं सर्वमनायासेन भवत्युत्पद्यत इत्यर्थः । प्रकृत्यादीनामप्यदृश्यत्वं वक्ष्यामीति तावच्छब्दः ।। **दिव्य इति** ।। दिव्योऽलौकिकः । अमूर्तः अपरिच्छिन्नपरिमाणः पुरुषः

पूर्णषड्गुणः बाह्याभ्यन्तरः बहिरन्तश्च नियामकतया स्थितः अजः उत्पत्तिरहितः ।। **अप्राणो ह्यमना इति** ।। षोडशकलारहितः शुभ्रः अक्षराज्जडप्रकृतेः पराच्छ्रीतत्त्वात्परः उत्तम इत्यर्थः ।। **ॐ अदृश्यत्वादिगुणको धर्मोक्तेः ॐ** अदृश्यत्वम् आदि येषाम् अग्राह्यत्वादीनां तेऽदृश्यत्वादयः अदृश्यत्वादयो गुणा यस्यासौ अदृश्यत्वादिगुणाः स एवादृश्यत्वादिगुणकः स च विष्णुरेव ।। **अथ परेति** ।। ऋगादिपरविद्याविषयत्वरूप तद्धर्माभिधानादित्यर्थः । वाक्यस्य 'यत्तदद्रेश्यम्' इत्यादेः ।। **नचेति** ।। तथाच विष्णुग्रहणोपपत्तेरिति भावः । इत्यत इत्यनुवादस्तस्मात्परतः अदृश्यत्वादिगुणकाक्षरात्परत, एवमग्रेऽपि ।। **सामानाधिकरण्येनेति** ।। परतः ब्रह्माद्युत्तमादक्षरादित्यक्षरपरशब्दयोश्चित्प्रकृतिरूपैकार्थप्रतिपादकत्वेनेत्यर्थः ।। **स ब्रह्मेति** ।। 'स ब्रह्मविद्यामथर्वाय ज्येष्ठपुत्राय प्राह' इत्यत्रेत्यर्थः ।। **कर्तारमिति** ।। 'कर्तारमीशं पुरुषं ब्रह्मयोनिम्' इत्यत्रेत्यर्थः । श्रुत्यादौ परविद्याविषयत्वपरशब्दाभा वात्कथं तदुदाहरणमित्यतस्तदुपपादयति – **तमेवेत्यादिना** ।। भाष्येऽङ्गानि शिक्षादीनि षट् उपाङ्गानि आयुर्वेदादीनि पञ्च शिष्टाः कलाविद्याः प्रत्यङ्गानीति तत्त्वप्रदीपानुसारेण ध्येयम् ।। **अन्येति** ।। कर्मादीत्यर्थः । तदुक्तमाथर्वणभाष्ये, एतदर्थश्च ब्रह्ममीमांसाशास्त्रव्युत्पादितन्यायानुपकृतवेदादयो विष्णोरेव वाचकास्तदुपकृतास्तद्वाचका भवन्तीति सुधानुसारेण ध्येयः ।। २१ ।।

# ಬ್ರಹ್ಮಮೀಮಾಂಸಾಶಾಸ್ತ್ರ

## ಸರ್ವಜ್ಞರಲ್ಲದ ಬ್ರಹ್ಮಾದಿಗಳು ಅದೃಶ್ಯರಲ್ಲ

**सू – ॐ ।। विशेषणभेदव्यपदेशाभ्यां च नेतरौ ।। ।। ॐ ।। २२ ।।**

ಸೂತ್ರಾರ್ಥ -- ಬ್ರಹ್ಮರುದ್ರಾದಿಗಳಾಗಲೀ ಜಡಪ್ರಕೃತಿಯಾಗಲೀ ಅದೃಶ್ಯತ್ವಾದಿ ಗುಣವುಳ್ಳವರಾಗುವುದಿಲ್ಲ. ಏಕೆಂದರೆ ಸರ್ವಜ್ಞತ್ವ ಮೊದಲಾದ ವಿಶೇಷಣಗಳನ್ನು ಅಕ್ಷರಕ್ಕಿಂತ ಭೇದವನ್ನು ಹೇಳಿರುವುದರಿಂದ.

ಅದೃಶ್ಯತ್ವಾಧಿಕರಣ (೧-೨-೬)

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका —** चः समुच्चये । इतरौ प्रकृतिद्वयम् । विरिञ्चरुद्रौ च नादृश्यत्वादिगुणकौ । कुतः? विशेषणभेदव्यपदेशात् । प्रतिज्ञाद्वये क्रमेणैकैकहेत्वन्वयः । सार्वज्ञादिविशेषणात् । 'तस्मादेतत्' इति अदृश्यत्वादिगुणकाक्षराद् विरिञ्चरुद्रयोर्भेदोक्तेश्चेत्यर्थः ।

ಅರ್ಥ -ಚಶಬ್ದವು ಸಮುಚ್ಚಯಾರ್ಥದಲ್ಲಿದೆ. ಇತರೌ = ಬ್ರಹ್ಮ, ರುದ್ರರು ಅಥವಾ ಜಡಪ್ರಕೃತಿಯು, ನ = ಅದೃಶ್ಯತ್ವಾದಿಗುಣಗಳುಳ್ಳವರಲ್ಲ. ಏಕೆಂದರೆ ಚ = ಧರ್ಮಗಳನ್ನು ಹೇಳಿರುವುದರಿಂದ, ಮಾತ್ರವಲ್ಲ, ವಿಶೇಷಣಭೇದವ್ಯಪದೇಶಾಭ್ಯಾಮ್ = ಯಃ ಸರ್ವಜ್ಞಃ ಎಂದು ಸರ್ವಜ್ಞತ್ವ ಮೊದಲಾದ ವಿಶೇಷಣಗಳನ್ನು ಮತ್ತು 'ತಸ್ಮಾದೇತದ್ ಬ್ರಹ್ಮ' ಎಂಬುದಾಗಿ ಬ್ರಹ್ಮ, ರುದ್ರರನ್ನು ಅದೃಶ್ಯತ್ವಾದಿ ಗುಣವುಳ್ಳ ಅಕ್ಷರನಾಮಕ ಪರಮಾತ್ಮನಿಂದ ಭಿನ್ನರೆಂದು ಹೇಳಿರುವುದರಿಂದ.

### श्रीमदानन्दतीर्थभगवत्पादाचार्यविरचित-

## ब्रह्मसूत्रभाष्यम्

**भाष्यम् — सू — ॐ ॥ विशेषणभेदव्यपदेशाभ्यां च नेतरौ ॥ ॥ ॐ ॥ २२ ॥ 'यः सर्वज्ञः सर्वविद् यस्य ज्ञानमयं तपः' (मुं. १-१-९) इति विशेषणान्न प्रकृतिः । 'तस्मादेतद् ब्रह्म नाम रूपमन्नं च जायते' (मुं. १-१-९) इति भेदव्यपदेशान्न विरिञ्चः ।**

ಅನುವಾದ - ಮಾಂಡೂಕ್ಯೋಪನಿಷತ್ತಿನಲ್ಲಿ 'ಯಾರು ಎಲ್ಲವನ್ನೂ ತಿಳಿದು ವಿಶೇಷಾಕಾರವಾಗಿಯೂ ತಿಳಿದಿದ್ದಾನೋ, ಯಾರ ಆಲೋಚನೆಯು ವಿಜ್ಞಾನಸ್ವರೂಪವಾಗಿದೆಯೋ' ಹೀಗೆ ಅದೃಶ್ಯಗುಣವುಳ್ಳವನಲ್ಲಿ ವಿಶೇಷಣಗಳನ್ನು ನೀಡಲಾಗಿದೆ. ಆದ್ದರಿಂದ ಲಕ್ಷ್ಮಿಯು ಅದೃಶ್ಯತ್ವಗುಣವನ್ನು ಹೊಂದಿರುವುದಿಲ್ಲ.

ಮತ್ತು 'ಅದೃಶ್ಯನಾದ ಅಕ್ಷರನಿಂದಲೇ ಚತುರ್ಮುಖಬ್ರಹ್ಮ ಮೊದಲಾದ ಹೆಸರುಗಳು ಹಾಗೂ ಚತುರ್ಮುಖ ಮೊದಲಾದ ರೂಪಗಳು, ಅನ್ನ ಮೊದಲಾದವುಗಳು ಮತ್ತು ಇವುಗಳ ಅಭಿಮಾನಿದೇವತೆಗಳು ಹುಟ್ಟುತ್ತಾರೋ' ಹೀಗೆ ಚತುರ್ಮುಖ ಬ್ರಹ್ಮದೇವರಿಂದ ಭೇದವನ್ನು ಹೇಳಿರುವ ಕಾರಣ ಚತುರ್ಮುಖಬ್ರಹ್ಮನು ಅದೃಶ್ಯನಾಗುವುದಿಲ್ಲ.

ಪರಿಪೂರ್ಣಚಂದ್ರಿಕಾ

ಪ್ರತಿಪದಾರ್ಥ -- ಪ್ರಕೃತಿ ಹಾಗೂ ಚತುರ್ಮುಖ ಬ್ರಹ್ಮನು ಅದೃಶ್ಯತ್ವಧರ್ಮವನ್ನು ಹೊಂದಿರುವುದಿಲ್ಲವೆಂಬ ಸಿದ್ಧಾಂತವನ್ನೇ ಉಪೋದ್ಬಲಿಸಲು ಮತ್ತೊಂದು ಸೂತ್ರವನ್ನು ಪಠಿಸಿ ವ್ಯಾಖ್ಯಾನಿಸುತ್ತಿದ್ದಾರೆ.

ಯಃ = ಯಾವಾತನು, ಸರ್ವಜ್ಞಃ = ಎಲ್ಲವನ್ನೂ ತಿಳಿದಿದ್ದಾನೋ, ಸರ್ವವಿತ್ = ಎಲ್ಲ ಪದಾರ್ಥವನ್ನೂ ವಿಶೇಷಾಕಾರವಾಗಿಯೂ ತಿಳಿದಿದ್ದಾನೋ, ಯಸ್ಯ = ಯಾರ ತಪಃ ಆಲೋಚನೆಯು, ಜ್ಞಾನಮಯಂ = ವಿಜ್ಞಾನಸ್ವರೂಪವಾಗಿದೆಯೋ, ಇತಿ = ಹೀಗೆ ವಿಶೇಷಣಾತ್ = ಅದೃಶ್ಯನಲ್ಲಿ ವಿಶೇಷಣವನ್ನು ಹೇಳಿದ್ದರಿಂದ, ಪ್ರಕೃತಿಃ = ಲಕ್ಷ್ಮಿಯು, ನ = ಅದೃಶ್ಯತ್ವಗುಣವನ್ನು ಹೊಂದಿರುವುದಿಲ್ಲ.

ಮತ್ತು ತಸ್ಮಾತ್ = ಅದೃಶ್ಯನಾದ ಅಕ್ಷರನಿಂದಲೇ, ಏತದ್‌ಬ್ರಹ್ಮ ನಾಮ = ಚತುರ್ಮುಖಬ್ರಹ್ಮನೆಂಬ ಹೆಸರು, ರೂಪಂ = ರೂಪಗಳು, ಅನ್ನಂ ಚ = ಆಹಾರಗಳೂ ಸಹ ಜಾಯತೇ ಹುಟ್ಟುತ್ತವೋ, ಇತಿ = ಹೀಗೆ, ಭೇದವ್ಯಪದೇಶಾತ್ = ಭೇದವನ್ನೇ ಹೇಳಿರುವುದರಿಂದ, ನ ವಿರಿಂಚಃ = ಚತುರ್ಮುಖನೂ ಸಹ ಅದೃಶ್ಯನಾಗುವುದಿಲ್ಲ.[१]

---

(१) **भाष्यदीपिका** – यदुक्तं प्रकृतिविरिञ्चयोरदृश्यत्वादिगुणकत्वमिति तत्सिद्धान्तहेतोः परपक्षनिरासेऽपि व्यापारात् तद्धर्मोक्तेरित्यनेनोक्तस्य परविद्याविषयत्वस्य विष्णोरन्यत्र निरवकाशत्वान्यथानुपपत्त्या निराकृतमपि विशेषयुक्त्या निराकुर्वत्सूत्रं पठित्वा व्याचष्टे – **विशेषणेति** ।। व्यपदेशशब्द उभयान्वयीत्याशयेनोभयश्रुतिमाह – **य इति** ।।'भेदः' अन्यत्वम् । चशब्दस्य न केवलं धर्मोक्तेः, किन्तु विशेषणभेदव्यपदेशाभ्याम् इति समुच्चयार्थत्वस्य स्पष्टत्वान्न तस्यार्थ उक्तः । प्रकृतिः विरिञ्च इत्यनेन इतरा इतरश्चेति विग्रहाश्रयेणेतरशब्दार्थोऽभिहितः । उभयत्रादृश्यत्वादिगुणक इत्यनुषज्यते । प्रकृतिपक्षे लिङ्गविपरिणामः । तथा च 'यस्सर्वज्ञः' इति वाक्ये तस्यादृश्यत्वादिगुणकस्य 'विशेषणात्' सार्वज्ञ्यादिविशेषणोक्तेर्न दृश्यत्वादिगुणा जडप्रकृतिः । एवं 'तस्मात्' इति वाक्ये विरिञ्चस्य तस्मादक्षराज्जन्यत्वरूपभेदकधर्मोक्त्या भेदव्यपदेशान्नादृश्यत्वादिगुणो विरिञ्च इति योजना ।।

आथर्वणे 'यः सर्वज्ञः सर्ववित्' इत्यतः पूर्ववाक्ये 'तपसा चीयते ब्रह्म' (मुं.१-१-८) इत्यत्र परब्रह्मतपसा सम्बध्यत इत्युक्तम् । तत् तपश्शब्दस्याऽलोचनार्थतयाऽज्ञानप्रतीतौ तन्निरासाय 'यस्य ज्ञानमयं तपः' इति वाक्यान्तरं प्रवृत्तम् । तस्य यस्य 'तपः' आलोचनक्रिया 'ज्ञानमयं' तदात्मकमेव न संशयाद्यात्मकमित्यर्थः । कुतस्तपसः सन्तापान्यपूर्णयथार्थज्ञानात्मकत्वमित्याकाङ्क्षायां तस्य सर्वज्ञत्वादाप्तकामत्वादिति हेतुप्रदर्शनाय 'यस्सर्वज्ञः' इति पूर्ववाक्योपन्यासः । तदर्थस्तु – 'यः सर्वज्ञः' सर्वविषयकसामान्यज्ञानवान् 'सर्ववित्' सर्वविषयकविशेषज्ञानवांश्च । सर्वस्य लब्धा सर्वकामः सर्वोत्पादको वेति । तत्त्वप्रदीपे तु – विद सत्तायामिति धातुव्याख्यानात् सर्वत्र विद्यत इति सर्वविदित्युक्तम् ।।

**भाष्यम् – 'अपरं त्वक्षरं या सा प्रकृतिर्जडरूपिका ।**
**श्रीः परा प्रकृतिः प्रोक्ता चेतना विष्णुसंश्रया ॥**
**तामक्षरं परं प्राहुः परतः परमक्षरम् ।**
**हरिमेवाखिलगुणमक्षरत्रयमीरितम् ॥'**

**इति स्कान्दे त्र्यक्षराभिधानादक्षरात् परतः पर इत्यपि विशेषणमेव ।**

ಅನುವಾದ - ಜಡರೂಪವಾದ ಪ್ರಕೃತಿಯು 'ಅಪರ' ಅಕ್ಷರ ಎಂಬ ಶಬ್ದವಾಚ್ಯವಾಗಿದೆ. ಉತ್ತಮವಾದ ಪ್ರಕೃತಿಯು ಚೇತನರೂಪಿಯಾದ ಲಕ್ಷ್ಮೀದೇವಿಯಾಗಿದ್ದಾಳೆ. ಇವಳು ವಿಷ್ಣುವನ್ನು ಆಶ್ರಯಿಸಿದ್ದಾಳೆ. ಇವಳೇ ಶ್ರೀಶಬ್ದದಿಂದ ವಾಚ್ಯಳಾಗಿದ್ದಾಳೆ. ಇಂತಹ ಲಕ್ಷ್ಮೀದೇವಿಯನ್ನು 'ಪರ ಅಕ್ಷರ' ಎಂದು ಹೇಳುತ್ತಾರೆ. ಸಕಲಗುಣಪರಿಪೂರ್ಣನಾದ ವಿಷ್ಣುವನ್ನು ಅಕ್ಷರಕ್ಕಿಂತ ಉತ್ತಮೋತ್ತಮ ಎನ್ನುತ್ತಾರೆ. ಇವನು ಈ ರೀತಿಯಾಗಿ ಸ್ಕಾಂದಪುರಾಣದಲ್ಲಿ ಮೂರು ಬಗೆಯ ಅಕ್ಷರತತ್ವಗಳನ್ನು ಹೇಳಿರುವ ಕಾರಣ 'ಅಕ್ಷರಾತ್ ಪರತಃ ಪರಃ' 'ಪರತಃ ಪರ ಅಕ್ಷರ' ಎಂಬ ಮಾತು ವಿಷ್ಣುವಿಗೇ ವಿಶೇಷಣವಾಗುತ್ತದೆ.

ಪ್ರತಿಪದಾರ್ಥ -- ಆಥರ್ವಣೋಪನಿಷತ್ತಿನಲ್ಲಿ 'ಯಃ ಸರ್ವಜ್ಞಃ' ಎಂಬ ಹಿಂದಿನ ವಾಕ್ಯದಲ್ಲಿ ತಪಃಶಬ್ದವು ಕೇಳಿಸುತ್ತಿದೆ. ಆಲೋಚನಾರ್ಥದಲ್ಲಿರುವ ಈ ಶಬ್ದದಿಂದ ಅಜ್ಞಾನವೂ ಸಹ ಭಗವಂತನಲ್ಲಿದೆ ಎಂಬ ಭ್ರಾಂತಿಯು ಬರುತ್ತದೆ ಅದನ್ನು ಪರಿಹರಿಸುವುದಕ್ಕಾಗಿ ಮತ್ತೊಂದು ಶ್ರುತಿಯನ್ನು ಉದಾಹರಿಸುತ್ತಿದ್ದಾರೆ.

ಯಾ = ಯಾವ, ಪ್ರಕೃತಿಃ = ಜಡಪ್ರಕೃತಿಯಿದೆಯೋ, ಸಾ = ಅದು, ಅಪರಂ = ಅಪರ ಎಂಬ ಅಕ್ಷರಂ ಅಕ್ಷರಶಬ್ದವಾಚ್ಯವಾಗಿದೆ. ಪರ = ಉತ್ತಮವಾದ, ಪ್ರಕೃತಿಃ = ಪ್ರಕೃತಿಯೆಂದರೆ, ಚೇತನಾ = ಚಿದ್ರೂಪಳಾದವಳು, ವಿಷ್ಣುಸಂಶ್ರಯಾ = ವಿಷ್ಣುವನ್ನೇ ಆಶ್ರಯಿಸಿದವಳು, ಶ್ರೀ = ಶ್ರೀಶಬ್ದದಿಂದ ವಾಚ್ಯಳಾದವಳು ಹೀಗೆ, ಪ್ರೋಕ್ತಾ = ಹೇಳಲ್ಪಟ್ಟಿದೆ.

ಇವಳನ್ನು ಪರಂ ಅಕ್ಷರಂ = ಪರ ಅಕ್ಷರಾ ಎಂದೂ, ಪ್ರಾಹುಃ = ಹೇಳುತ್ತಾರೆ. ಪರತಃ = ಇಂತಹ ಲಕ್ಷ್ಮೀದೇವಿಗಿಂತಲೂ, ಪರಮಕ್ಷರಮ್ = ಉತ್ತಮನಾದ ಅಕ್ಷರನೆಂದು, ಅಖಿಲಗುಣಂ = ಸಕಲಗುಣಪರಿಪೂರ್ಣನಾದ, ಹರಿಮೇವ = ಪಾಪ-ಪರಿಹಾರಕನಾದ ಪರಮಾತ್ಮನನ್ನೇ ಜ್ಞಾನಿಗಳು, ಪ್ರಾಹುಃ = ಹೇಳುತ್ತಾರೆ. ಹೀಗೆ ಅಕ್ಷರತ್ರಯಂ = ಮೂರು ಬಗೆಯ ಅಕ್ಷರಗಳನ್ನು, ಈರಿತಮ್ = ಹೇಳಲಾಗಿದೆ. ಇತಿ = ಹೀಗೆ, ಸ್ಕಾಂದೇ = ಸ್ಕಾಂದಪುರಾಣದಲ್ಲಿ, ತ್ರ್ಯಕ್ಷರಾಭಿಧಾನಾತ್ = ಮೂರು ಬಗೆಯ ಅಕ್ಷರಗಳನ್ನು ಹೇಳಿರುವ ಕಾರಣ, ಅಕ್ಷರಾತ್ ಪರತಃ ಪರಃ = ಅಕ್ಷರ ಎಂಬ ಶಬ್ದವಾಚ್ಯಳಾದ ಲಕ್ಷ್ಮಿಗಿಂತಲೂ ಉತ್ತಮನು, ಇತ್ಯಪಿ = ಹೀಗೆಂಬ ವಾಕ್ಯದಲ್ಲಿ ಹೇಳಿದ

---

'यस्य यः' इति यच्छब्दद्वयस्य 'तस्मात्' अक्षरात् 'एतद् ब्रह्म' चतुर्मुखाख्यं 'नाम रूपमन्नं' तदभिमानिदैवतं चोत्पद्यत इत्युत्तरवाक्यगततच्छब्देनान्वयः ॥

ಪರಿಪೂರ್ಣಚಂದ್ರಿಕಾ

ಅಕ್ಷರಾತ್ ಪರತಃ ಪರತ್ವವೂ ಸಹ, ವಿಶೇಷಣಮೇವ = ವಿಷ್ಣುವಿನಲ್ಲೇ ಇರುವಂತಹ ವಿಶೇಷಣಗಳಾಗಿವೆ.[1]

**भाष्यम् – 'जुष्टं यदा पश्यत्यन्यमीशमस्य महिमानमिति वीतशोकः' (मुं.३-१-२) इति भेदव्यपदेशादीशपदप्राप्तोऽपि न रुद्रः ॥२२॥**

ಅನುವಾದ - 'ತಾನು ಆರಾಧನೆ ಮಾಡುವ, ಪ್ರಸಿದ್ಧನಾದ ರುದ್ರನಿಗಿಂತ ಬೇರೆಯಾದ ಭಗವಂತನನ್ನು ಹಿಂದೆ ಹೇಳಿದ ಅವನ ಮಹಿಮೆಯನ್ನು ಯಾವ ಜೀವನು ಸಾಕ್ಷಾತ್ಕರಿಸಿಕೊಳ್ಳುತ್ತಾನೋ ಅವನು ದುಃಖದಿಂದ ರಹಿತನಾಗುತ್ತಾನೆ'.

ಈ ರೀತಿಯಾಗಿ ಮುಂಡಕ ಉಪನಿಷತ್ತಿನಲ್ಲಿ ರುದ್ರದೇವರಿಂದ ಭೇದವನ್ನು ಅಕ್ಷರನಿಗೆ ಹೇಳಿರುವ ಕಾರಣ ಈಶಪದದಿಂದ ಪ್ರಸಕ್ತನಾದವನೂ ಸಹ ವಿಷ್ಣುವೇ ಆಗುತ್ತಾನೆ; ರುದ್ರನಲ್ಲ.

---

(१) **भाष्यदीपिका** – ननु न विष्णोरदृश्यत्वादिगुणकत्वं, परतः पराभिधानेनाक्षरश्रुतेस्तत्र निरवकाशत्वादित्यतो विशेषणभेदव्यपदेशादिति सूत्रखण्डस्यार्थान्तरमाह – **अपरमिति** ।। तुशब्दोऽवधारणे । 'अक्षरत्रयम्' अक्षरस्य त्रयम् 'ईरितम्' अक्षरं त्रिविधं प्रोक्तम् इति यावत् । तिस्रो विधाः व्यक्तिनिर्देशपूर्वकं दर्शयति – **अपरमिति** ।। या यदपरमक्षरं सा जडरूपिका प्रकृतिरेव । या यत्परमक्षरं 'प्रोक्ता' प्रोक्तं वृद्धैस्तां तद् या विष्णुसंश्रया परा उत्तमा चेतना प्रकृतिः श्रीः लक्ष्मीः तां प्राहुः । यत्परतः परमक्षरमीरितं तज्जडप्रकृतेः पराछ्रीतत्त्वादखिलगुणं हरिमेव प्राहुरिति स्मृत्यर्थः । इति स्कान्दे इत्यस्य 'त्र्यक्षराभिधानात्' अक्षरत्रैविध्यस्योक्तत्वादित्यनेनान्वयः । अक्षरात् परतः पर इत्यपीति । इति वाक्योक्तमक्षरात्परतः परत्वमपीत्यर्थः । अपिः समुच्चये । तस्येति शेषः । तेनैवकारस्यान्वयः । तथा च न केवलं सार्वज्ञं विशेषणम्, किन्त्वक्षरात् परतः परत्वमपि तस्य विष्ण्वाख्यप्रकृताक्षरस्यैव विशेषणं, न तु प्रकृताक्षरमवधीकृत्यान्यस्य कस्यचिद् विशेषणम् । येनाक्षरश्रुतेर्विष्णाववकाशाभावः । न चाक्षरस्याक्षरात् परतः परत्वं विरुद्धमिति वाच्यम् । 'अपरम्' इति स्कान्दे त्र्यक्षराभिधानाद् अक्षरान्तरात् परादस्याक्षरस्य परत्वोपपत्तेरिति योजना । अक्षरत्रयाभिधानेन अक्षरात् परतः पर इत्यत्र सामानाधिकरण्येन वैयधिकरण्येन वाऽन्वयो दर्शितः । प्रमेयदीपे तु – अक्षराच्छ्रीतत्वात् परतः परोऽत्युत्तम इति तद्भाष्यदिशा श्रुत्यर्थ उक्तः । अनेनाक्षरात्परतः पर इत्यपि तस्यैव विशेषणं, न त्वन्यस्य । न चाक्षरात्परतः परत्वं विरुद्धमिति वाच्यम् । भेदव्यपदेशात् । 'अक्षरत्रयमीरितम्' इत्यक्षराणामवान्तरभेदोक्तेः पाण्डवस्यार्जुनस्य स्वाधमकार्तवीर्यार्जुनादिव अक्षरात्परादक्षरान्तरादस्याक्षरस्य परत्वोपपत्तिरिति सूत्रखण्डस्यार्थान्तरमुक्तं भवति ।।

ಪ್ರತಿಪದಾರ್ಥ -- 'ಅನ್ಯ' ಎಂಬ ಶಬ್ದವು ಕೇಳಿಸುತ್ತಿರುವುದರಿಂದ ರುದ್ರನೇಕೆ ಅದೃಶ್ಯತ್ವಗುಣವುಳ್ಳವನಾಗಬಾರದು ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ.

ಜುಷ್ಟಂ = ತಾನು ಆರಾಧಿಸುವ, ಅನ್ಯಮ್ ಈಶಂ = ರುದ್ರನಿಗಿಂತ ಭಿನ್ನನಾದ, ಅಸ್ಯ = ಹಿಂದೆ ಹೇಳಿದ ವಿಷ್ಣುವಿನ, ಮಹಿಮಾನಂ = ಮಹಿಮೆಯನ್ನು, ಯದಾ = ಯಾವಾಗ, ಪಶ್ಯತಿ = ಜೀವನು ಸಾಕ್ಷಾತ್ಕರಿಸಿಕೊಳ್ಳುತ್ತಾನೋ, ಇತಿ = ಆವಾಗ, ವೀತಶೋಕಃ = ದುಃಖರಹಿತನಾಗುತ್ತಾನೆ. ಇತಿ = ಹೀಗೆ, ಭೇದವ್ಯಪದೇಶಾತ್ = ರುದ್ರದೇವರ ದೆಸೆಯಿಂದ ಭೇದವನ್ನು ಹೇಳಿರುವ ಕಾರಣ, ಈಶಪದಪ್ರಾಪ್ತೋಪಿ = ಈಶಪದದಿಂದ ಪ್ರಸಕ್ತನಾದವನೂ ಸಹ, ನ ರುದ್ರಃ = ರುದ್ರನಾಗುವುದಿಲ್ಲ; ಹೊರತು ವಿಷ್ಣುವೇ ಆಗುತ್ತಾನೆ.(१)

**तत्वप्रकाशिका –**

**ॐ ।। विशेषणभेदव्यपदेशाभ्यां च नेतरौ ।। ॐ**

**यदुक्तं प्रकृतिविरिञ्चयोरदृश्यत्वादिगुणकत्वमिति तदर्थान्निराकृतमपि विशेषयुक्त्या पराकुर्वत्सूत्रं पठित्वा, व्याचष्टे – विशेषणेति ।।**

ಪ್ರಧಾನ, ಚತುರ್ಮುಖ ಬ್ರಹ್ಮ ಇವರಿಬ್ಬರೂ ಅದೃಶ್ಯತ್ವಾದಿಗುಣಗಳಿಂದ ಯುಕ್ತರಾಗಿದಾರೆಂಬ ಪೂರ್ವಪಕ್ಷವನ್ನು 'ಧರ್ಮೋಕ್ತೇಃ' ಎಂಬ ಯುಕ್ತಿಯಿದ ಈಗಾಗಲೇ ಅರ್ಥಾತ್ ನಿರಾಕರಣೆ ಮಾಡಿದಂತಾಗಿದೆ ಆದರೂ ಸಹ ವಿಶೇಷಯುಕ್ತಿಯಿಂದ, ಆ ಪೂರ್ವ ಪಕ್ಷವನ್ನು ನಿರಾಕರಣೆ ಮಾಡುವುದಕ್ಕಾಗಿ ಸೂತ್ರವನ್ನು ಪಠಿಸುತ್ತಾ ವ್ಯಾಖ್ಯಾನಿಸುತ್ತಿದ್ದಾರೆ ವಿಶೇಷಣ ಇತ್ಯಾದಿಯಾಗಿ.

**तत्वप्रकाशिका – 'तपसा चीयते ब्रह्म' इत्यत्राज्ञानप्रतीतौ तन्निरासाय 'यस्य ज्ञानमयं तपः' इत्युक्तार्थे हेतुतयाऽदृश्यत्वादिगुणकस्य सार्वज्ञविशेषणोक्तेर्नाचेतन-प्रकृतेरदृश्यत्वादिगुणकत्वम् ।**

(१) **भाष्यदीपिका** – ननु 'अन्यम्' इति शब्दश्रवणाददृश्यत्वादिगुणको रुद्रः किं न स्यादिति शङ्कोत्तरतयाऽपि भेदव्यपदेशान्नेतर इति सूत्रांशं व्याचष्टे – **जुष्टमिति** ।। यद्यपि तथाऽपीत्यर्थेऽपिशब्दः । रुद्रोऽपीति समुच्चये वा । न केवलं पूर्वहेतोः, किन्तु भेदव्यपदेशादपीति समुच्चये वा । रुद्र इतीतरशब्दस्यार्थान्तरोक्तिः । न चेतरशब्दस्य जडप्रकृतिविरिञ्चरुद्रपरत्वे द्विवचनानुपपत्तिरिति वाच्यम् । विरिञ्चिरुद्रयोश्चेतनत्वेनैकीकृतत्वात् । तथा च यद्यपीशशब्दाद् रुद्रोऽप्यदृश्यत्वादिगुणकत्वेन 'प्राप्तः' प्रतीतः, तथाऽपि 'जुष्टम्' इति वाक्ये प्रवृत्तविष्ण्वाख्याक्षरस्येशशब्दितरुद्रादन्यत्वव्यपदेशादपि नादृश्यत्वादिगुणको रुद्र इति योजना । श्रुतिस्तु – **आनन्दमयाधिकरणे व्याख्याता** ।।

ಪರಿಪೂರ್ಣಚಂದ್ರಿಕಾ

ತಪಸಾ ಜೀಯತೇ ಬ್ರಹ್ಮ - ಬ್ರಹ್ಮನು ತಪಸ್ಸನ್ನು ಆಚರಿಸುತ್ತಾನೆ ಎಂಬ ವಾಕ್ಯವನ್ನು ಕೇಳಿದಾಗ ಬ್ರಹ್ಮನಲ್ಲಿ ಅಜ್ಞಾನ ಇದೆ ಎಂದು ತಿಳಿಯುತ್ತದೆ. ಅದನ್ನು ನಿರಾಕರಣೆ ಮಾಡುವುದಕ್ಕಾಗಿ 'ಯಸ್ಯ ಜ್ಞಾನಮಯಂ ಮಯಂ ತಪಃ' ಯಾರ ತಪಸ್ಸು ಜ್ಞಾನಸ್ವರೂಪವಾಗಿದೆಯೋ ಎಂಬುದಾಗಿ 'ತಪಃ' ಎಂಬ ಶಬ್ದದ ಅರ್ಥವನ್ನು ಸ್ಪಷ್ಟ ಪಡಿಸಲಾಗಿದೆ. ಅಂದರೆ ಬ್ರಹ್ಮನ ತಪಸ್ಸು ಜ್ಞಾನಸ್ವರೂಪವಾಗಿದೆ ಎಂಬುದನ್ನು ತಿಳಿಸಲು ಅದೃಶ್ಯತ್ವಾದಿಗುಣಗಳುಳ್ಳ ಅಕ್ಷರನಿಗೆ 'ಯಃ ಸರ್ವಜ್ಞಃ ಸರ್ವವಿತ್' ಎಂಬಲ್ಲಿ ಸರ್ವಜ್ಞತ್ವವೆಂಬ ವಿಶೇಷಣವನ್ನು ಹೇಳಲಾಗಿದೆ. ಆದ್ದರಿಂದ ಅಚೇತನ ಪ್ರಕೃತಿಗೆ ಅದೃಶ್ಯತ್ವಾದಿ ಗುಣಗಳನ್ನು ಹೇಳಲು ಸಾಧ್ಯವಿಲ್ಲ

**तत्वप्रकाशिका – तस्मादक्षरादेतद् ब्रह्म चतुर्मुखाख्यं जायत इति विरिञ्चस्य तज्जन्यतया तस्माद्भेव्यपदेशान्नासावप्यदृश्यत्वादिगुणक इत्यर्थः ।**

ಮತ್ತು ಅಕ್ಷರನಿಂದ ಚತುರ್ಮುಖನು ಹುಟ್ಟಿದನು, ಎಂದು ಶ್ರುತಿಯು ಹೇಳುತ್ತಿರುವುದರಿಂದ ಚತುರ್ಮುಖನು ಅಕ್ಷರತತ್ವಕ್ಕಿಂತ ಭಿನ್ನನೆಂದು ಸ್ಪಷ್ಟವಾಗುತ್ತದೆ. ಆದ್ದರಿಂದ ಅದೃಶ್ಯತ್ವಾದಿ-ಗುಣಗಳುಳ್ಳವನು ಚತುರ್ಮುಖಬ್ರಹ್ಮನಾಗುವುದಿಲ್ಲ ಎಂದು ಅಭಿಪ್ರಾಯ.

**तत्वप्रकाशिका – ज्ञानवेदनयोः सामान्यविशेषतयाऽर्थान्तरत्वम् । 'विदॢ लाभे' विदोत्पत्तावित्यतो वा ।**

ಇಲ್ಲಿರುವ ಜ್ಞಾನ ಎಂಬ ಶಬ್ದಕ್ಕೆ ಸಾಮಾನ್ಯಜ್ಞಾನವೆಂದೂ, ವೇದನ ಎಂದರೆ ವಿಶೇಷಜ್ಞಾನವೆಂದೂ ತಿಳಿಯಬೇಕು. ಅಥವಾ 'ವಿದೂಲೃ ಲಾಭೇ' ಎಂಬ ಧಾತುವಿನಂತೆ 'ಲಾಭ' ಎಂಬ ಅರ್ಥವನ್ನು ವಿದಉತ್ಪತ್ತೌ ಎಂಬ ಧಾತುವಿನಂತೆ ಉತ್ಪತ್ತಿ ಎಂಬ ಅರ್ಥವನ್ನೂಸಹ ತಿಳಿಯಬಹುದು. ಅಂದರೆ ಸಕಲ ವಸ್ತುಗಳೂ ಯಾವ ವಿಷ್ಣುವಿಗೆ ಲಾಭವಾಗುತ್ತದೋ ಅಥವಾ ಸಕಲವಸ್ತುಗಳನ್ನೂ ಯಾರು ಸೃಷ್ಟಿ ಮಾಡುತ್ತಾನೋ ಎಂಬ ಎರಡು ಅರ್ಥಗಳನ್ನು ಹೇಳಿದಂತಾಗುತ್ತದೆ.

**तत्वप्रकाशिका – न विष्णोरदृश्यत्वादिगुणकत्वम् । परतःपराभिधानेन अक्षरशब्दस्य विष्णौ निरवकाणत्वादित्यतः सूत्रखण्डस्यार्थान्तरमाह – अपरमिति ।।**

ವಿಷ್ಣುವಿಗೆ ಅದೃಶ್ಯತ್ವಾದಿಗುಣಗಳನ್ನು ಹೇಳಲಾಗದು ಏಕೆಂದರೆ ಅಕ್ಷರಕಿಂತ ಶ್ರೇಷ್ಠವಾದ ವಸ್ತು ಬೇರೆ ಇರುತ್ತದೆ ಎಂದು ಶ್ರುತಿಯು ಹೇಳುತ್ತಿದೆ. ಅಕ್ಷರಶಬ್ದವು ನಿರವಕಾಶವಾದ ಪ್ರಯುಕ್ತ ಅದಕ್ಕೆ ವಿಷ್ಣು ಎಂಬ ಅರ್ಥವನ್ನು ಹೇಳಲು ಸಾಧ್ಯವಿಲ್ಲವಲ್ಲಾ ಈ ಆಶಂಕೆಗೆ ಉತ್ತರಿಸಲು 'ಅಪರಮ್' ಇತ್ಯಾದಿಯಾಗಿ ಹೇಳಿದ್ದಾರೆ.

ಅದೃಶ್ಯತ್ವಾಧಿಕರಣ (೧-೨-೬)

**तत्वप्रकाशिका – भवेदक्षरश्रुतेर्विष्णाववकाशाभावो यदि 'अक्षरात्परतः परः' इत्यत्र प्रकृताक्षरमवधीकृत्य कस्याचित्परत्वमुच्यत । न एतदस्ति ।**

'ಅಕ್ಷರಾತ್ ಪರತಃ ಪರಃ' ಎಂಬಲ್ಲಿ ಯಾವ ಅಕ್ಷರವು ಪ್ರಕೃತವಾಗಿದೆಯೋ ಅದನ್ನೇ ಅವಧಿಯನ್ನಾಗಿಸಿ ಮತ್ತೊಬ್ಬರಿಗೆ ಪರತ್ವವನ್ನು ಹೇಳಿದಪಕ್ಷದಲ್ಲಿ ಅಕ್ಷರ ಶ್ರುತಿಗೆ ವಿಷ್ಣುವಿನಲ್ಲಿ ಅವಕಾಶವಿರುತ್ತಿರಲಿಲ್ಲ. ಆದರೆ ಹಾಗೆ ಹೇಳುತ್ತಿಲ್ಲ.

**तत्वप्रकाशिका – किन्तु प्रकृताक्षरस्यैव अक्षरात्परतःपरत्वविशेषणमुच्यते । न चाक्षरस्याक्षरात्परतःपरत्वं विरुद्धमिति वाच्यम् । त्र्यक्षराभिधानादक्षरान्तरादस्याक्षरस्य परत्वोपपत्तेरिति भावः ।**

ಹೊರತಾಗಿ, ಯಾವ ಜಗತ್ತಿಗೆ ಕಾರಣವಾದ ಅಕ್ಷರವಿದೆಯೋ ಅಂತಹ ವಸ್ತುವಿನಲ್ಲೇ 'ಅಕ್ಷರಾತ್ ಪರತಃ ಪರಃ' ಪರತ್ವವನ್ನು ಹೇಳಲಾಗಿದೆ. ಅಕ್ಷರ ಪದಾರ್ಥವು ಒಂದೇ ಆಗಿರುವಾಗ ಅಕ್ಷರನಿಗಿಂತ ಪರತ್ವವನ್ನು ಅದೇ ವಸ್ತುವಿನಲ್ಲಿ ಹೇಳುವುದು ವಿರುದ್ದವಾಗುತ್ತದಲ್ಲವೇ? ಎಂದು ಪ್ರಶ್ನಿಸಬಾರದು. ಅಕ್ಷರಶಬ್ದದಿಂದ ಪ್ರತಿಪಾದ್ಯವಾದ ಪದಾರ್ಥಗಳು ಒಟ್ಟು ಮೂರು ಇರುತ್ತವೆ ಆದ್ದರಿಂದ ವಿಷ್ಣುವಿಗಿಂತ ಭಿನ್ನವಾದ ಯಾವ ಅಕ್ಷರ ಶಬ್ದ ಪ್ರತಿಪಾದ್ಯ ವಸ್ತುವಿದೆಯೋ ಅದಕ್ಕಿಂತ ಉತ್ತಮತ್ವವನ್ನು ವಿಷ್ಣುವಿಗೆ ಹೇಳಬಹುದು. ಹೀಗೆ ಶ್ರುತಿಯ ಅಭಿಪ್ರಾಯವಿರುವುದರಿಂದ ವಿರೋಧವಿಲ್ಲವೆಂದು ತಿಳಿಯಬೇಕು.

**तत्वप्रकाशिका – ईशशब्दात् अदृश्यत्वादिगुणको रुद्र इत्यस्योत्तरतयाऽपि सूत्रशेषं व्याचष्टे – जुष्टमिति ।।**

'ಕರ್ತಾರಮೀಶಂ' ಎಂಬಲ್ಲಿ ಈಶಶಬ್ದವು ಕೇಳಿಸುತ್ತಿರುವುದರಿಂದ ರುದ್ರನನ್ನು ಸ್ವೀಕರಿಸಬೇಕಲ್ಲವೇ? ಎಂಬ ಪೂರ್ವಪಕ್ಷಕ್ಕೆ ಉತ್ತರಿಸಲು ಭಾಷ್ಯಕಾರರು ಸೂತ್ರದಲ್ಲಿರುವ 'ಭೇದವ್ಯಪದೇಶಾತ್' ಎಂಬ ಭಾಗವನ್ನು ವ್ಯಾಖ್ಯಾನಿಸುತ್ತಿದ್ದಾರೆ ''ಜುಷ್ಟಮ್'' ಇತ್ಯಾದಿಯಾಗಿ.

**तत्वप्रकाशिका – अस्याक्षरस्यान्यमीशमिति प्रसिद्धेशाद्रुद्राद्भेदव्यपदेशान्न रुद्रोऽदृश्यत्वादिगुणक इत्यर्थः ।**

ಅಕ್ಷರ ಎಂಬ ಪರಮಾತ್ಮನಿಗೆ ''ಅನ್ಯಮೀಶಂ'' ಎಂಬುದಾಗಿ ಈಶಶಬ್ದವಾಚ್ಯತ್ವವನ್ನು ಹೇಳಲಾಗಿದೆ. ಆದ್ದರಿಂದ ಪರಮಾತ್ಮನೇ ಮುಖ್ಯವಾಗಿ ಈಶಶಬ್ದದಿಂದ ವಾಚ್ಯನಾಗುತ್ತಾನೆ. ಪ್ರಸಿದ್ಧನಾದ ರುದ್ರನಿಗಿಂತ ಪರಮಾತ್ಮನಿಗೆ ಭೇದವನ್ನು ಹೇಳಿರುವುದರಿಂದ ರುದ್ರನು ಅದೃಶ್ಯತ್ವಾದಿ ಗುಣವುಳ್ಳವನಾಗುವುದಿಲ್ಲ.

**तत्वप्रकाशिका – यदपि पृथिव्यादिदृष्टान्तेन जगत्कारणत्ववचनं तत्कारणत्वमात्रतात्पर्यम् । ब्रह्माक्षरेशशब्दास्तु विष्णावेव मुख्याः । बाधकाभावस्योक्तत्वात् ।। २२ ।।**

ಇನ್ನು ಪೃಥಿವ್ಯಾದಿ ದೃಷ್ಟಾಂತದಿಂದ ಜಗತ್ಕಾರಣತ್ವದ ಮಾತೂ ಸಹ ಕೇವಲ ಕಾರಣತ್ವದಲ್ಲಷ್ಟೇ ತಾತ್ಪರ್ಯವನ್ನು ಹೊಂದಿದೆ. ಬ್ರಹ್ಮ, ಅಕ್ಷರ, ಈಶಶಬ್ದಗಳು ವಿಷ್ಣುವಿನಲ್ಲೇ ಮುಖ್ಯವಾಗಿವೆ. ಈ ವಿಷಯದಲ್ಲಿ ಯಾವುದೇ ಬಾಧಕವಿಲ್ಲವೆಂಬುದನ್ನು ಮುಂದೆ ಸ್ಪಷ್ಟಪಡಿಸುತ್ತೇವೆ.

**भावदीपः –**

**ॐ विशेषणभेदव्यपदेशाभ्यां च नेतरौ ॐ ।।**

ननु पूर्वं कयापि युक्त्या प्रकृत्यादेरनिरासाद् विशेषणभेदव्यपदेशाभ्यां चेति कथं चशब्द इत्यत आह – **तदर्थादिति** ।।

॥ ಓಂ ವಿಶೇಷಣಭೇದವ್ಯಪದೇಶಾಭ್ಯಾಂ ಚ ನೇತರೌ ಓಂ ॥

ಹಿಂದಿನ ಸೂತ್ರದಲ್ಲಿ ಪ್ರಕೃತಿ ಹಾಗೂ ಚತುರ್ಮುಖಬ್ರಹ್ಮದೇವರನ್ನು ಅದೃಶ್ಯತ್ವಾದಿ-ಗುಣಗಳುಳ್ಳವರಲ್ಲವೆಂದು ಯಾವುದೇ ಯುಕ್ತಿಗಳಿಂದಲೂ ಸಹ ನಿರಾಕರಿಸಿಲ್ಲ. ಹೀಗಿರುವಾಗ "ವಿಶೇಷಣಭೇದವ್ಯಪದೇಶಾಭ್ಯಾಂ ಚ" ಎಂಬಲ್ಲಿ "ಚ" ಎಂಬ ಶಬ್ದವನ್ನು ಏಕೆ ಹೇಳಿದ್ದಾರೆ? ಎಂಬ ಪ್ರಶ್ನೆಗೆ "ತದರ್ಥಾತ್" ಎಂಬ ಪದದಿಂದ ಉತ್ತರಿಸಿದ್ದಾರೆ.

**भावदीपः – धर्मोक्तेरिति** हेतोः स्वपक्षसाधन इव विष्णुरेवेत्यवधारणव्यावर्त्य-पूर्वपक्षकोटिनिरासेऽपि व्यापारादिति भावः ।

ಮುಂದಿನ ಸೂತ್ರದಲ್ಲಿ "ಧರ್ಮೋಕ್ತೇಃ" ಎಂಬ ಹೇತುವಿನಿಂದ ವಿಷ್ಣು ಒಬ್ಬನೇ ಅದೃಶ್ಯತ್ವಾದಿ ಗುಣಗಳುಳ್ಳವನಾಗಿದ್ದಾನೆಂಬ ಸ್ವಪಕ್ಷಸಾಧನೆಯಲ್ಲಿ ಹೇತುವನ್ನು ಹೇಳಿದ್ದಾರೆ. ಈ ಅವಧಾರಣೆಯಿಂದ ಪೂರ್ವಪಕ್ಷಕೋಟಿಯನ್ನೂ ಸಹ ಅರ್ಥಾತ್ ನಿರಾಕರಿಸಿದಂತಾಗುತ್ತದೆ.

**भावदीपः – तपसेति** ।। चीयते सम्बद्ध्यते ब्रह्म परं ब्रह्मेत्यर्थः । ज्ञानमयं ज्ञानात्मकं न त्वालोचनात्मकमित्युक्तार्थ इत्यर्थः । विवृतमेतत् कर्मनिर्णय-टीकायाम् । सर्वज्ञत्वात् सर्वविच्छब्दितासकामत्वाद्यस्य तपो ज्ञानस्वरूपं न त्वालोचनात्मकं सन्तापात्मकं वा । अज्ञो ह्यालोचयति । अनाप्तकामस्तपस्यति । 'स तपस्तप्त्वा । इदं सर्वमसृजत' इत्यस्य व्याख्यानमेतदिति वा ।

"ಚೀಯತೇ" ಎಂಬ ಶಬ್ದಕ್ಕೆ ಸಂಬಂಧವನ್ನು ಹೊಂದಲಾಗುತ್ತದೆ ಎಂದರ್ಥ. "ಬ್ರಹ್ಮ" ಎಂಬ ಶಬ್ದಕ್ಕೆ ಪರಬ್ರಹ್ಮನ ವಿಷಯದಲ್ಲಿ ಎಂದರ್ಥ. "ಜ್ಞಾನಮಯಂ" ಎಂಬುದು ಜ್ಞಾನಸ್ವರೂಪವೇ ಹೊರತು ಆಲೋಚನಾತ್ಮಕವಲ್ಲ. ಇದನ್ನು ಕರ್ಮನಿರ್ಣಯ ಟೀಕೆಯಲ್ಲಿ ವಿವರಿಸಿದ್ದಾರೆ. ಸರ್ವಜ್ಞನಾಗಿರುವುದರಿಂದ "ಸರ್ವವಿತ್" ಶಬ್ದಪ್ರತಿಪಾದ್ಯವಾದ ಆಪ್ತಕಾಮತ್ವವಿರುವುದರಿಂದ ಯಾರ ತಪಸ್ಸು ಜ್ಞಾನಸ್ವರೂಪವಾಗಿದೆಯೋ ಹೊರತು ಆಲೋಚನಸ್ವರೂಪವಾಗಿಲ್ಲವೋ ಅಥವಾ ಸಂತಾಪಸ್ವರೂಪವೂ ಆಗಿಲ್ಲವೋ ಅಂತಹ ತಪಸ್ಸನ್ನು ವಿವಕ್ಷಿಸಬೇಕು. ಅಜ್ಞಾನಿಯಾದವನಷ್ಟೇ ಆಲೋಚಿಸುತ್ತಾನೆ ಅನಾಪ್ತಕಾಮನೇ ತಪಸ್ಸನ್ನು ಆಚರಿಸುತ್ತಾನೆ. ಇದು "ಸ ತಪಸ್ತಪ್ತ್ವಾ ಇದಂ ಸರ್ವಮಸೃಜತ್" ಎಂಬುದರ ವ್ಯಾಖ್ಯಾನವಾಗಿದೆ.

**भावदीपः – नाचेतनेति ।। चित्प्रकृतिनिषेधस्तु नानेन सम्भवति । तस्या अत्रोक्ताक्षरत्वे विश्वकर्तृत्वप्राप्त्या सार्वज्ञस्यापि शक्यशङ्कत्वात् । श्रुतेः सङ्कुचित-सार्वज्ञपरत्वसम्भवाच्च जडप्रकृतिमात्रनिषेधे हेतुरयमिति भावः ।**

ಅಚೇತನಪ್ರಕೃತಿಯನ್ನಷ್ಟೇ ನಿಷೇಧ ಮಾಡಬಹುದು ಹೊರತು ಚಿತ್ಪ್ರಕೃತಿಯನ್ನಲ್ಲ. ಏಕೆಂದರೆ ಚಿತ್ಪ್ರಕೃತಿಯನ್ನು ಅಕ್ಷರವೆಂದು ಪರಿಗಣಿಸಿದರೆ ವಿಶ್ವಕರ್ತೃತ್ವವನ್ನೂ ಸಹ ಹೇಳಿದಂತಾಗುತ್ತದೆ ಅದರಲ್ಲಿ ಸರ್ವಜ್ಞತ್ವವನ್ನು ಶಂಕಿಸಬಹುದು. ಶ್ರುತಿಯು ಹೇಳುವ ಸಾರ್ವಜ್ಞ್ಯವನ್ನು ಸಂಕೋಚ ಮಾಡಬಹುದಾದ್ದರಿಂದ ಜಡಪ್ರಕೃತಿಯನ್ನಷ್ಟೇ ನಿಷೇಧ ಮಾಡಲು ಇದು ಹೇತುವಾಗಿದೆ ಎಂದು ತಿಳಿಯಬೇಕು.

**भावदीपः –'एतद्ब्रह्म चतुर्मुखः' इति तद्भाष्यदिशाऽर्थमाह – तस्मादिति ।। चतुर्मुखाख्यमिति नागरूपान्नाभिमानीति योज्यम् । पूर्ववाक्ये 'तपसा चीयते ब्रह्म' इति ब्रह्मपदेन परब्रह्मोक्तावप्यत्र जायत इत्युक्तबाधकादन्योक्तिर्युक्तेति भावः ।**

"ಏತದ್ಬ್ರಹ್ಮ" ಎಂದರೆ ಚತುರ್ಮುಖನೇ ಆಗಿದ್ದಾನೆಂದು ಭಾಷ್ಯದ ಪ್ರಕಾರ ಅರ್ಥವನ್ನು "ತಸ್ಮಾತ್" ಇತ್ಯಾದಿಯಾಗಿ ಹೇಳಿದ್ದಾರೆ. ಚತುರ್ಮುಖನೆಂಬ ಬ್ರಹ್ಮನು ನಾಮ, ರೂಪ ಮತ್ತು ಅನ್ನಗಳಿಗೆ ಅಭಿಮಾನಿಯಾಗಿದ್ದಾನೆ. ಇವನು ಅಕ್ಷರನಿಂದ ಹುಟ್ಟಿದಕಾರಣ ಅಕ್ಷರನನ್ನೇ ಚತುರ್ಮುಖಬ್ರಹ್ಮನೆಂದು ವಿವಕ್ಷಿಸಲು ಸಾಧ್ಯವಿಲ್ಲ. ಹಿಂದಿನ ವಾಕ್ಯದಲ್ಲಿ "ತಪಸಾ ಚೀಯತೇ ಬ್ರಹ್ಮ" ಎಂಬಲ್ಲಿರುವ ಬ್ರಹ್ಮಪದದಿಂದ ಮಹಾವಿಷ್ಣುವು ಪ್ರತಿಪಾದ್ಯನಾದರೂ ಪ್ರಕೃತ "ಜಾಯತೇ" ಎಂಬ ಬಾಧಕದಿಂದ ಮಹಾವಿಷ್ಣುವನ್ನು ಬಿಟ್ಟು ಬೇರೆಯವನು ಪ್ರತಿಪಾದ್ಯನಾಗುತ್ತಾನೆಂದು ಹೇಳುವುದು ತಪ್ಪಲ್ಲವೆಂದು ತಿಳಿಯಬೇಕು.

**भावदीपः – तथाच न ह्येकशब्देन द्विरुक्तेन भेदश्रुतिं विना वस्तुद्वय कुत्रचिदुच्यत इति तार्तीयगीताभाष्यस्थवाक्याविरोध इति ध्येयम् ।**

ಆದ್ದರಿಂದ ಒಂದೇ ಶಬ್ದವನ್ನು ಎರಡುಬಾರಿ ಹೇಳಿದಾಗ ಭೇದಶ್ರುತಿ ಇಲ್ಲದಿದ್ದರೆ ಎರಡು ವಸ್ತುಗಳು ಎಲ್ಲಿಯೂ ಸಹ ಪ್ರತಿಪಾದ್ಯವಾಗುವುದಿಲ್ಲ ಎಂಬ ಮೂರನೇ ಅಧ್ಯಾಯದ ಗೀತಾಭಾಷ್ಯದಲ್ಲಿರುವ ವಾಕ್ಯದಿಂದಲೂ ಸಹ ವಿರೋಧವನ್ನು ಪರಿಹರಿಸಿದಂತಾಯಿತು.

ಪರಿಪೂರ್ಣಚಂದ್ರಿಕಾ

**भावदीपः – विद्लृ लाभ इति ।।** सर्वं विन्दत इति वा, सर्वं वेदयति उत्पादयतीति वा सर्ववित् । आप्तकामः सर्वोत्पादको वेत्यर्थः ।

"ಸರ್ವಂ ವಿಂದತೇ" ಅಥವಾ "ಸರ್ವಂ ವೇದಯತಿ" = ಉತ್ಪಾದಯತಿ ಎಲ್ಲವನ್ನು ತಿಳಿದಿದ್ದಾನೆ ಮತ್ತು ಎಲ್ಲವನ್ನೂ ಹುಟ್ಟಿಸುತ್ತಾನೆ ಎಂದು "ಸರ್ವವಿತ್" ಶಬ್ದವು ನಿಷ್ಪನ್ನವಾಗಿದೆ ಎಂದು ತಿಳಿಯಬೇಕು. ಅಥವಾ ಆಪ್ತಕಾಮನಾದವನು ಎಲ್ಲದಕ್ಕೂ ಉತ್ಪಾದಕನಾಗಿದ್ದಾನೆಂದೂ ಸಹ ತಿಳಿಯಬಹುದು.

**भावदीपः – सूत्रखण्डस्यार्थान्तरमिति ।।** परतः परत्वरूपविशेषणादक्षरव्यक्तीनां भेदव्यपदेशादित्यर्थान्तरमित्यर्थः । आकाङ्क्षामनुरुद्ध्य भाष्यमेवकारव्यावृत्तिं वदन् व्याचष्टे – **भवेदिति ।।**

ಸೂತ್ರಖಂಡಕ್ಕೆ ಮತ್ತೊಂದು ಬಗೆಯ ಅರ್ಥ ಹೀಗಿದೆ - "ಪರತಃ ಪರತ್ವ" ಎಂಬ ವಿಶೇಷಣದಿಂದ ಅಕ್ಷರವ್ಯಕ್ತಿಗಳಿಗೆ ಭೇದವನ್ನು ಹೇಳಿರುವುದರಿಂದ ಎಂದು. ಆಕಾಂಕ್ಷೆಗೆ ಅನುಸಾರಿಯಾಗಿ "ಏವ" ಕಾರದಿಂದ ವ್ಯಾವೃತ್ತವಾದದ್ದನ್ನು ತಿಳಿಸುತ್ತಾ ಭಾಷ್ಯವನ್ನು ವ್ಯಾಖ್ಯಾನಿಸುತ್ತಿದ್ದಾರೆ "ಭವೇತ್" ಇತ್ಯಾದಿಯಾಗಿ.

**भावदीपः –** त्र्यक्षरोक्तावपि कथं विशेषणमित्यतो "अक्षरात्परतः परस्याक्षरान्तरत्ववचनात्" इति न्यायविवरणोक्तं संयोजयति – **अक्षरान्तरादिति ।।** अक्षरद्वयोक्तावपि पूर्तौ त्र्यक्षरोक्तिरक्षराज्जडप्रकृतेः परतः श्रीतत्त्वात्परो विष्णुरिति वैय्यधिकरण्येन परतोऽक्षरात् श्रीतत्त्वादिति सामानाधिकरण्येन चान्वयायेत्याहुः – **अन्यमीशमितीति ।।**

ಮೂರುಬಗೆಯ ತತ್ವವನ್ನು ಹೇಳಿರುವುದರಿಂದ ಪರತಃ ಪರತ್ವವು ಹೇಗೆ ವಿಶೇಷಣವಾಗುತ್ತದೆ? ಎಂಬ ಪ್ರಶ್ನೆಗೆ "ಅಕ್ಷರಾತ್ಪರತಃ ಪರಸ್ಯಾಕ್ಷರಾಂತರತ್ವವಚನಾತ್" ಎಂಬ ನ್ಯಾಯವಿವರಣದ ಮಾತನ್ನು ಯೋಜನೆ ಮಾಡುತ್ತಿದ್ದಾರೆ "ಅಕ್ಷರಾಂತರಾತ್" ಇತ್ಯಾದಿಯಾಗಿ. ವಸ್ತುತಃ ಎರಡು ಬಗೆಯ ಅಕ್ಷರಗಳನ್ನು ಹೇಳಿದ್ದರೆ ಸಾಕಾಗುತ್ತಿತ್ತು. ಆದರೂ ಕೂಡ ಮೂರನೆಯ ಅಕ್ಷರವನ್ನು ಹೇಳಿದ್ದರಿಂದ ಅಕ್ಷರ ತತ್ವವೆನಿಸಿದ ಜಡಪ್ರಕೃತಿಗಿಂತಲೂ ಲಕ್ಷ್ಮೀದೇವಿಯು ಶ್ರೇಷ್ಠಳು, ಅವಳಿಗಿಂತಲೂ ಮಹಾವಿಷ್ಣು ಶ್ರೇಷ್ಠನೆಂದು "ಅಕ್ಷರಾತ್" ಮತ್ತು "ಪರತಃ" ಎಂಬೆರೆಡು ಪದಗಳಿಗೆ ವೈಯ್ಯಧಿಕರಣ್ಯದಿಂದ ಅರ್ಥವನ್ನು ತಿಳಿಯಬೇಕು. ಅಥವಾ ಶ್ರೇಷ್ಠಳಾದ ಅಕ್ಷರಳೆನಿಸಿದ ಲಕ್ಷ್ಮೀದೇವಿಗಿಂತ ವಿಷ್ಣು ಶ್ರೇಷ್ಠನಾಗಿದ್ದಾನೆಂದು 'ಅಕ್ಷರಾತ್' ಮತ್ತು 'ಪರತಃ' ಎಂಬೆರಡು ಪದಗಳಿಗೆ ಸಾಮಾನಾಧಿಕರಣ್ಯದಿಂದಲೂ ಸಹ ಅನ್ವಯವನ್ನು ತಿಳಿಯಬಹುದು ಎಂದು ಕೆಲವರು ವ್ಯಾಖ್ಯಾನಿಸುತ್ತಾರೆ.

**भावदीपः –** अन्यो मार्गम् इत्युक्ते प्रसिद्धमार्गादन्यत्ववद् अन्यमीशमित्युक्ते प्रसिद्धेश्वराद् रुद्रादन्यत्वप्रतीतेरिति भावः । एतदर्थान्तरमुपेत्योक्तमिति कृत्वा

आनन्दमयनयोक्त्या द्युभ्वादिनये वक्ष्यमाणेन जीवादन्यः स्वतन्त्रोऽयमित्याथर्वण-भाष्येण च न विरोधः ।

ಬೇರೆ ಮಾರ್ಗವೆಂದು ಹೇಳಿದರೆ ಪ್ರಸಿದ್ಧ ಮಾರ್ಗಕ್ಕಿಂತ ಬೇರೆಯಾದ ಮಾರ್ಗವೆಂಬ ಅರ್ಥವು ತಿಳಿಯುವಂತೆ "ಅನ್ಯಮೀಶಂ" ಎಂದು ಹೇಳಿದಾಗ ಪ್ರಸಿದ್ಧನಾದ ರುದ್ರನೆಂಬ ಈಶ್ವರನಿಗಿಂತ ಭಿನ್ನನಾದವನು ಎಂಬ ಅರ್ಥವು ತಿಳಿಯುತ್ತದೆ ಎಂದು ಅಭಿಪ್ರಾಯ. ಇದು ಮತ್ತೊಂದು ಅರ್ಥವೆಂದು ಅಂಗೀಕರಿಸಿ ವ್ಯಾಖ್ಯಾನಿಸಿದ್ದಾರೆ ಎಂದು ತಿಳಿಯಬೇಕು. ಹಿಂದೆ ಆನಂದಮಯಾಧಿಕರಣದಲ್ಲಿ ಹೇಳಿದಂತೆ ಮತ್ತು ಮುಂದೆ ದ್ಯುಭ್ವಾಧಿಕರಣದಲ್ಲಿ ಹೇಳುವಂತೆ ಜೀವನಿಗಿಂತ ಭಿನ್ನನಾದ ವಿಷ್ಣು ಸ್ವತಂತ್ರನಾಗಿ ಇರುತ್ತಾನೆ ಎಂದು ತಿಳಿಯಬೇಕು. ಹೀಗೆ ಹೇಳಿದ್ದರಿಂದ ಆಥರ್ವಣಭಾಷ್ಯದಿಂದಲೂ ವಿರೋಧ ಬರುವುದಿಲ್ಲ.

**भावदीपः** – नचानेकार्थत्वं दोषः, वचनेनैव प्रतीयमानत्वादर्थस्य कल्पनाभावादित्यादिना कर्मनिर्णये निरासात् ।। **कारणत्वमात्रेति** ।। विवृतमेतत् प्रकृतिनयानुव्याख्याने । नचोर्णनाभिजनितॄणां च विकारितेत्यादिना ।। २२ ।।

ಒಂದು ಪದಕ್ಕೆ ಅನೇಕಾರ್ಥವನ್ನು ಹೇಳುವುದು ದೋಷವಲ್ಲ. ಏಕೆಂದರೆ ಶಬ್ದವನ್ನು ಕೇಳುವುದರಿಂದಲೇ ಎರಡು ಅರ್ಥಗಳು ಉಪಸ್ಥಿತವಾಗುತ್ತಿರುವಾಗ ಕಲ್ಪನೆ ಮಾಡಬೇಕಾಗಿಲ್ಲ ಎಂದು ಕರ್ಮನಿರ್ಣಯದಲ್ಲಿ ಅನೇಕಾರ್ಥವನ್ನು ಹೇಳುವುದು ದೋಷವಾಗುತ್ತದೆ ಎಂಬುದನ್ನು ನಿರಾಕರಿಸಿದ್ದಾರೆ. "ಕಾರಣತ್ವಮಾತ್ರ" ಎಂದರೆ ಪ್ರಕೃತ್ಯಧಿಕರಣದ ಅನುವ್ಯಾಖ್ಯಾನದಲ್ಲಿ ವಿವರಿಸಿದಂತೆ ತಿಳಿಯಬೇಕು. ಉರ್ಣನಾಭಿ ಮೊದಲಾದವುಗಳಲ್ಲಿ ವಿಕಾರವಿಕಾರಿಭಾವವು ಇರುವುದಿಲ್ಲವೆಂದು ಹೇಳಿರುತ್ತಾರೆ.

वाक्यार्थमञ्जरी – **अर्थादिति** ।। परविद्याविषयत्वस्य विष्णोरन्यत्र निरवकाशत्वान्यथानुपपत्त्येत्यर्थः ।। **ॐ विशेषणभेदव्यपदेशाभ्यां च नेतरौ ॐ** ।। इतरौ चेतनप्रकृतिचतुर्मुखौ नादृश्यत्वादिगुणकौ 'यः सर्वज्ञः' इति सर्वज्ञत्वरूपविशेषणव्यपदेशात् । अदृश्यत्वादगुणकभेदव्यपदेशाच्चेत्यर्थः । चीयते सम्बध्यते तपोऽकुरुतेति यावत् ।। **अज्ञानप्रतीताविति** ।। 'तप आलोचने' इति धातुः । आलोचनं चाज्ञस्यैवेति भावः ।। **ज्ञानमयमिति** ।। यस्य ब्रह्मणस्तपो ज्ञानमयं ज्ञानस्वरूपमेव, नत्वालोचनात्मकम् । कुतः? अज्ञो ह्यालोचयति, नचायम्, तथा यतः सर्वज्ञ इति हेतुतयेत्यर्थः । सामान्यविशेषवस्तुगतसामान्य-विशेषाकारविषयतया सर्वैर्ज्ञेया धर्माः सामान्यधर्माः । सर्वाज्ञेयाः विशेषधर्माः क्रमेण तदुभयविषयकत्वेन सामान्यविशेषज्ञानत्वयोरवान्तरविशेष इति न पुनरुक्तिरिति भावः । स्फुटमेतन्मनोविज्ञानशब्दयोरपुनरुक्तिप्रतिपादकानन्दमयसुधायाम् – विद्लृ

लाभ इति ।। तथाच सर्वं विन्दते लभत इति वा, सर्वं वेदयते उत्पादयतीति वा सर्ववित् । सत्यकामः सर्वोत्पादको वेत्यर्थ उक्तो भवति । सूत्रखण्डस्य विशेषणव्यपदेशादित्यस्य । प्रकृताक्षरम् अदृश्यत्वादिगुणकम् ।। **सूत्रशेषमिति** ।। भेदव्यपदेशान्नेतर इत्यंशम् ।। **अन्यमीशमिति** ।। अन्यो मार्ग इत्युक्ते प्रसिद्धमार्गाद न्यत्वप्रतीतिवदिति भावः ।।२२।।

# ಬ್ರಹ್ಮಮೀಮಾಂಸಾಶಾಸ್ತ್ರ

## ಶುದ್ಧವಾದ ಹಳದಿ ಬಣ್ಣ ಭಗವಂತನಿಗೆ ಮಾತ್ರ

**सू - ॐ ।। रूपोपन्यासाच्च ।। ॐ ।। २३ ।।**

ಸೂತ್ರಾರ್ಥ -- ಶ್ರುತಿಯಲ್ಲಿ 'ರುಗ್ಮವರ್ಣಂ' ಎಂಬುದಾಗಿ ಅಪ್ರಾಕೃತವಾದ ಪೀತವರ್ಣವನ್ನು ಅಕ್ಷರನಿಗೆ ಹೇಳಲಾಗಿದೆ. ಆದ್ದರಿಂದ ಬ್ರಹ್ಮನೇ ಅದೃಶ್ಯನಾಗುತ್ತಾನೆ.

।। ಶ್ರೀವೇದವ್ಯಾಸದೇವರಿಂದ ರಚಿಸಲ್ಪಟ್ಟ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ
ಅದೃಶ್ಯತ್ವಾಧಿಕರಣವು ಸಮಾಪ್ತವಾಯಿತು ।।

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका** — 'यदा पश्यः पश्यते' इति विष्ण्वसाधारणस्वर्णरूप- प्रतिपादनाच्च अदृश्यत्वादिगुणको विष्णुरेवेत्यर्थः ।।

ಅರ್ಥ - ಚ = ಕೇವಲ ಧರ್ಮವನ್ನು ಹೇಳಿರುವುದರಿಂದ ಮಾತ್ರವಲ್ಲ; ಮತ್ತೇನೆಂದರೆ, ರೂಪೋಪನ್ಯಾಸಾತ್ = 'ಯದಾ ಪಶ್ಯಃ ಪಶ್ಯತೇ' ಎಂಬುದಾಗಿ ವಿಷ್ಣುವಿನಲ್ಲಿ ಅಸಾಧಾರಣವಾದ ಸುವರ್ಣರೂಪವನ್ನು ಪ್ರತಿಪಾದನೆ ಮಾಡಿರುವುದರಿಂದ ಅದೃಶ್ಯತ್ವಾದಿಗುಣವುಳ್ಳವನು ವಿಷ್ಣುವೇ ಆಗುತ್ತಾನೆಂದರ್ಥ.

।। ಸೂತ್ರದೀಪಿಕೆಯಲ್ಲಿ ಅದೃಶ್ಯತ್ವಾಧಿಕರಣವು ಸಮಾಪ್ತವಾಯಿತು ।।

ಅದೃಶ್ಯತ್ವಾಧಿಕರಣ (೧-೨-೬)

आनन्दमयनयोक्त्या द्युभ्वादिनये वक्ष्यमाणेन जीवादन्यः स्वतन्त्रोऽयमित्याथर्वण-भाष्येण च न विरोधः ।

ಬೇರೆ ಮಾರ್ಗವೆಂದು ಹೇಳಿದರೆ ಪ್ರಸಿದ್ಧ ಮಾರ್ಗಕ್ಕಿಂತ ಬೇರೆಯಾದ ಮಾರ್ಗವೆಂಬ ಅರ್ಥವು ತಿಳಿಯುವಂತೆ "ಅನ್ಯಮೀಶಂ" ಎಂದು ಹೇಳಿದಾಗ ಪ್ರಸಿದ್ಧನಾದ ರುದ್ರನೆಂಬ ಈಶ್ವರನಿಗಿಂತ ಭಿನ್ನನಾದವನು ಎಂಬ ಅರ್ಥವು ತಿಳಿಯುತ್ತದೆ ಎಂದು ಅಭಿಪ್ರಾಯ. ಇದು ಮತ್ತೊಂದು ಅರ್ಥವೆಂದು ಅಂಗೀಕರಿಸಿ ವ್ಯಾಖ್ಯಾನಿಸಿದ್ದಾರೆ ಎಂದು ತಿಳಿಯಬೇಕು. ಹಿಂದೆ ಆನಂದಮಯಾಧಿಕರಣದಲ್ಲಿ ಹೇಳಿದಂತೆ ಮತ್ತು ಮುಂದೆ ದ್ಯುಭ್ವಾಧಿಕರಣದಲ್ಲಿ ಹೇಳುವಂತೆ ಜೀವನಿಗಿಂತ ಭಿನ್ನನಾದ ವಿಷ್ಣು ಸ್ವತಂತ್ರನಾಗಿ ಇರುತ್ತಾನೆ ಎಂದು ತಿಳಿಯಬೇಕು. ಹೀಗೆ ಹೇಳಿದ್ದರಿಂದ ಆಥರ್ವಣಭಾಷ್ಯದಿಂದಲೂ ವಿರೋಧ ಬರುವುದಿಲ್ಲ.

**भावदीपः** – नचानेकार्थत्वं दोषः, वचनेनैव प्रतीयमानत्वादर्थस्य कल्पनाभावादित्यादिना कर्मनिर्णये निरासात् ।। **कारणत्वमात्रेति** ।। विवृतमेतत् प्रकृतिनयानुव्याख्याने । नचोर्णनाभिजनितॄणां च विकारितेत्यादिना ।। २२ ।।

ಒಂದು ಪದಕ್ಕೆ ಅನೇಕಾರ್ಥವನ್ನು ಹೇಳುವುದು ದೋಷವಲ್ಲ. ಏಕೆಂದರೆ ಶಬ್ದವನ್ನು ಕೇಳುವುದರಿಂದಲೇ ಎರಡು ಅರ್ಥಗಳು ಉಪಸ್ಥಿತವಾಗುತ್ತಿರುವಾಗ ಕಲ್ಪನೆ ಮಾಡಬೇಕಾಗಿಲ್ಲ ಎಂದು ಕರ್ಮನಿರ್ಣಯದಲ್ಲಿ ಅನೇಕಾರ್ಥವನ್ನು ಹೇಳುವುದು ದೋಷವಾಗುತ್ತದೆ ಎಂಬುದನ್ನು ನಿರಾಕರಿಸಿದ್ದಾರೆ. "ಕಾರಣತ್ವಮಾತ್ರ" ಎಂದರೆ ಪ್ರಕೃತ್ಯಧಿಕರಣದ ಅನುವ್ಯಾಖ್ಯಾನದಲ್ಲಿ ವಿವರಿಸಿದಂತೆ ತಿಳಿಯಬೇಕು. ಉರ್ಣನಾಭಿ ಮೊದಲಾದವುಗಳಲ್ಲಿ ವಿಕಾರವಿಕಾರಿಭಾವವು ಇರುವುದಿಲ್ಲವೆಂದು ಹೇಳಿರುತ್ತಾರೆ.

**वाक्यार्थमञ्जरी** – **अर्थादिति** ।। परविद्याविषयत्वस्य विष्णोरन्यत्र निरवकाशत्वान्यथानुपपत्त्येत्यर्थः ।। **ॐ विशेषणभेदव्यपदेशाभ्यां च नेतरौ ॐ** ।। इतरौ चेतनप्रकृतिचतुर्मुखौ नादृश्यत्वादिगुणकौ 'यः सर्वज्ञः' इति सर्वज्ञत्वरूपविशेषणव्यपदेशात् । अदृश्यत्वादगुणकभेदव्यपदेशाच्चेत्यर्थः । चीयते सम्बद्ध्यते तपोऽकुरुतेति यावत् ।। **अज्ञानप्रतीताविति** ।। 'तप आलोचने' इति धातुः । आलोचनं चाज्ञस्यैवेति भावः ।। **ज्ञानमयमिति** ।। यस्य ब्रह्मणस्तपो ज्ञानमयं ज्ञानस्वरूपमेव, नत्वालोचनात्मकम् । कुतः? अज्ञो ह्यालोचयति, नचायम्, तथा यतः सर्वज्ञ इति हेतुतयेत्यर्थः । सामान्यविशेषवस्तुगतसामान्य-विशेषाकारविषयतया सर्वैर्ज्ञेया धर्माः सामान्यधर्माः । सर्वाज्ञेयाः विशेषधर्माः क्रमेण तदुभयविषयकत्वेन सामान्यविशेषज्ञानत्वयोरवान्तरविशेष इति न पुनरुक्तिरिति भावः । स्फुटमेतन्मनोविज्ञानशब्दयोरपुनरुक्तिप्रतिपादकानन्दमयसुधायाम् – विद्लृ

लाभ इति ।। तथाच सर्वं विन्दते लभत इति वा, सर्वं वेदयते उत्पादयतीति वा सर्ववित् । सत्यकामः सर्वोत्पादको वेत्यर्थ उक्तो भवति । सूत्रखण्डस्य विशेषणव्यपदेशादित्यस्य । प्रकृताक्षरम् अदृश्यत्वादिगुणकम् ।। **सूत्रशेषमिति** ।। भेदव्यपदेशान्नेतर इत्यंशम् ।। **अन्यमीशमिति** ।। अन्यो मार्ग इत्युक्ते प्रसिद्धमार्गाद न्यत्वप्रतीतिवदिति भावः ।।२२।।

## ಬ್ರಹ್ಮಮೀಮಾಂಸಾಶಾಸ್ತ್ರ

## ಶುದ್ಧವಾದ ಹಳದಿ ಬಣ್ಣ ಭಗವಂತನಿಗೆ ಮಾತ್ರ

**सू - ॐ ।। रूपोपन्यासाच्च ।। ॐ ।। २३ ।।**

ಸೂತ್ರಾರ್ಥ -- ಶ್ರುತಿಯಲ್ಲಿ 'ರುಗ್ಮವರ್ಣಂ' ಎಂಬುದಾಗಿ ಅಪ್ರಾಕೃತವಾದ ಪೀತವರ್ಣವನ್ನು ಅಕ್ಷರನಿಗೆ ಹೇಳಲಾಗಿದೆ. ಆದ್ದರಿಂದ ಬ್ರಹ್ಮನೇ ಅದೃಶ್ಯನಾಗುತ್ತಾನೆ.

॥ ಶ್ರೀವೇದವ್ಯಾಸದೇವರಿಂದ ರಚಿಸಲ್ಪಟ್ಟ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ
ಅದೃಶ್ಯತ್ವಾಧಿಕರಣವು ಸಮಾಪ್ತವಾಯಿತು ॥

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका** — 'यदा पश्यः पश्यते' इति विष्ण्वसाधारणस्वर्णरूप- प्रतिपादनाच्च अदृश्यत्वादिगुणको विष्णुरेवेत्यर्थः ।।

ಅರ್ಥ - ಚ = ಕೇವಲ ಧರ್ಮವನ್ನು ಹೇಳಿರುವುದರಿಂದ ಮಾತ್ರವಲ್ಲ; ಮತ್ತೇನೆಂದರೆ, ರೂಪೋಪನ್ಯಾಸಾತ್ = 'ಯದಾ ಪಶ್ಯಃ ಪಶ್ಯತೇ' ಎಂಬುದಾಗಿ ವಿಷ್ಣುವಿನಲ್ಲಿ ಅಸಾಧಾರಣವಾದ ಸುವರ್ಣರೂಪವನ್ನು ಪ್ರತಿಪಾದನೆ ಮಾಡಿರುವುದರಿಂದ ಅದೃಶ್ಯತ್ವಾದಿಗುಣವುಳ್ಳವನು ವಿಷ್ಣುವೇ ಆಗುತ್ತಾನೆಂದರ್ಥ.

॥ ಸೂತ್ರದೀಪಿಕೆಯಲ್ಲಿ ಅದೃಶ್ಯತ್ವಾಧಿಕರಣವು ಸಮಾಪ್ತವಾಯಿತು ॥

ಅದೃಶ್ಯತ್ವಾಧಿಕರಣ (೧-೨-೬)

**श्रीमदानन्दतीर्थभगवत्पादाचार्यविरचित-**

# ब्रह्मसूत्रभाष्यम्

**भाष्यम् – 'यदा पश्यः पश्यते रुक्मवर्णं कर्तारमीशं पुरुषं ब्रह्मयोनिम्' (मुं. ३-१-३.) इति ।**

ಅನುವಾದ - ಮಾಂಡೂಕ್ಯೋಪನಿಷತ್ತಿನಲ್ಲಿ 'ಜ್ಞಾನಿಯಾದ ಜೀವನು ಯಾವಾಗ ಸುವರ್ಣ ವರ್ಣದಲ್ಲಿರುವ ಜಗತ್ತಿಗೆ ಕರ್ತೃವಾದ, ಎಲ್ಲಕ್ಕೂ ಒಡೆಯನಾದ, ಪುರುಷಶಬ್ದ-ವಾಚ್ಯನಾದ ಚತುರ್ಮುಖಬ್ರಹ್ಮದೇವರಿಗೂ ಕಾರಣನಾಗಿರುವ ಪರಮಾತ್ಮನನ್ನು ನೋಡುತ್ತಾನೋ' ಎಂಬುದಾಗಿ ಅಕ್ಷರನಲ್ಲಿ ಹಳದಿವರ್ಣವನ್ನು ಹೇಳಲಾಗಿದೆ. ಇದರಿಂದಲೂ ಅದೃಶ್ಯತ್ವಧರ್ಮವುಳ್ಳವನು ವಿಷ್ಣುವೇ ಎಂದು ನಿರ್ಣಯವಾಗುತ್ತದೆ.

ಪ್ರತಿಪದಾರ್ಥ -- ಮತ್ತೊಂದು ಯುಕ್ತಿಯಿಂದ ಅದೃಶ್ಯತ್ವಾದಿ ಗುಣಗಳನ್ನು ಸಾಧಿಸುವುದಕ್ಕಾಗಿ ಸೂತ್ರವನ್ನು ಪಠಿಸಿ ಸೂತ್ರದಲ್ಲೇ ಇರುವ ಶ್ರುತಿಯನ್ನು ಉದಾಹರಿಸುತ್ತಿದ್ದಾರೆ.

ಪಶ್ಯಃ = ಜ್ಞಾನಿಯಾದ ಜೀವನು, ಯದಾ = ಯಾವಾಗ, ರುಗ್ಮವರ್ಣಂ = ಸುವರ್ಣಬಣ್ಣದಲ್ಲಿರುವ, ಕರ್ತಾರಂ = ಜಗತ್ತಿಗೆ ಒಡೆಯನಾದ ಜಗತ್ತಿಗೆ ಕರ್ತೃವಾದ, ಈಶಂ = ಎಲ್ಲ ಪದಾರ್ಥಗಳಿಗೂ ಸ್ವಾಮಿಯಾದ, ಪುರುಷಂ = ಪುರುಷಶಬ್ದವಾಚ್ಯನಾದ, ಬ್ರಹ್ಮಯೋನಿಂ = ಚತುರ್ಮುಖಬ್ರಹ್ಮದೇವರಿಗೂ ಕಾರಣನಾದ ಪರಮಾತ್ಮನನ್ನು, ಪಶ್ಯತೇ = ನೋಡುತ್ತಾನೋ, ಇತಿ = ಹೀಗೆ ಅದೃಶ್ಯತ್ವಗುಣವುಳ್ಳ ಪರಮಾತ್ಮನಲ್ಲಿ ಭಂಗಾರವರ್ಣವನ್ನು ವಿಶೇಷಣವನ್ನಾಗಿ ಹೇಳಲಾಗಿದೆ.[१]

---

(१) **भाष्यदीपिका –** युक्त्यन्तरेण विष्णोरेवादृश्यत्वादिगुणकत्वं साधयत्सूत्रं पठित्वा तदुपात्तश्रुतिमेवोदाहरति – **रूपोपन्यासेति** ।। इति रूपोपन्यासादित्यन्वयः । सूत्रे चशब्दो युक्तिसमुच्चये । तथा च – न केवलं धर्मोक्तेः, किन्त्वदृश्यत्वादिगुणकस्य 'यदा' इति श्रुतौ शुद्धरुग्मरूपोक्तेश्चादृश्यत्वादिगुणको विष्णुरेवेति योजना । अत्र यदेति वाक्यस्य 'तदा विद्वान् पुण्यपापे विधूय निरञ्जनः परमं साम्यमुपैति' (मुं. ३-१-३) इति वाक्यशेषेणान्वयः । पश्यतीति पश्यो द्रष्टा जीवः । यदा 'रुग्मवर्णं' शुद्धहेमवर्णं 'ब्रह्मयोनिं' हिरण्यगर्भकारणम्, अत एव जगतः कर्तारं 'पुरुषं' पूर्णषड्गुणं 'स्वस्येशं' विष्णुं 'पश्यते' पश्यति तदाऽसौ 'विद्वान्' जीवन्मुक्तः 'पुण्यपापे' अप्रारब्धे अनिष्टपुण्यं पापं च विधूय 'निरञ्जनः' ज्ञानोत्तरविकर्मकृताशुचित्वादिदोषरहितः, 'अञ्जनाख्याविद्यारहितः' इति सुधोक्तेरज्ञानरहितो वा 'परमं साम्यं' पूर्णानन्दत्वादिसाम्यं निर्दुःखत्वादिसाम्यं वा

भाष्यम् – 'एको नारायण आसीन्न ब्रह्मा न च शङ्करः । स मुनिर्भूत्वा समचिन्तयत् । तत एते व्यजायन्त विश्वो हिरण्यगर्भोऽग्निर्यमो वरुणरुद्रेन्द्रा इति । तस्य हैतस्य परमस्य नारायणस्य चत्वारि रूपाणि शुक्लं रक्तं रौग्मं कृष्णमिति । स एतान्येतेभ्योऽभ्यचीक्लृपत् । विमिश्राणि व्यमिश्रयत् ।

ಅನುವಾದ - ಮುಖ್ಯವಾಗಿ ನಾರಾಯಣನೊಬ್ಬನೇ ಪ್ರಳಯಕಾಲದಲ್ಲಿ ಇದ್ದನು. ಚತುರ್ಮುಖಬ್ರಹ್ಮನು ಅಥವಾ ರುದ್ರನು ಯಾರೂ ಸಹ ಇರಲಿಲ್ಲ. ನಾರಾಯಣನು ಮೌನವನ್ನು ತಾಳಿ ಸೃಷ್ಟಿಯನ್ನು ಮಾಡಲು ಇಚ್ಛಿಸಿದನು. ಅನಂತರ ಆ ಭಗವಂತನಿಂದ ವಾಯು ಮೊದಲಾದ ದೇವತೆಗಳು ಮಹದಾದಿತತ್ವಗಳು ಹುಟ್ಟಿದವು. ಹಾಗೂ ವಾಯುದೇವರು, ಚತುರ್ಮುಖಬ್ರಹ್ಮ, ಅಗ್ನಿ, ಯಮ ವರುಣ ರುದ್ರ, ಇಂದ್ರ ಮೊದಲಾದ ದೇವತೆಗಳು ಹುಟ್ಟಿದರು. ಮಹಾಮಹಿಮೆಯುಳ್ಳ ಸರ್ವೋತ್ತಮನಾದ ಭಗವಂತನ ನಾಲ್ಕುರೂಪಗಳು ಬಿಳಿ, ಕೆಂಪು, ಹಳದಿ, ಕಪ್ಪು ಎಂಬ ನಾಲ್ಕು ಬಣ್ಣದವು. ಭಗವಂತನು ಪ್ರಾಕೃತ ಬಣ್ಣಗಳಿಂದ ಕೂಡಿದ ಮೂಲಭೂತವಾದ ಬಣ್ಣಗಳನ್ನು ಬ್ರಹ್ಮಾದಿ ದೇವತೆಗಳಿಗೆ ಮೀಸಲಾಗಿಟ್ಟನು. ಮೊದಲೇ ಮಿಶ್ರವಾದ ಆ ಬಣ್ಣಗಳನ್ನು ಪುನಃ ಪ್ರಾಕೃತರೂಪಗಳಿಂದ ಮಿಶ್ರವಾದವುಗಳನ್ನಾಗಿ ಮಾಡಿ ಮನುಷ್ಯರಿಗೆ ಮೀಸಲಾಗಿಟ್ಟನು.

ಪ್ರತಿಪದಾರ್ಥ -- ಬ್ರಹ್ಮಾದಿದೇವತೆಗಳಿಗೂ ಸಹ ರೂಪವಿರುವುದರಿಂದ ರೂಪೋಪನ್ಯಾಸ ಎಂಬ ಹೇತು ವಿಷ್ಣುತ್ವನಿಶ್ಚಾಯಕವಲ್ಲ ಎಂಬ ಆಕ್ಷೇಪಕ್ಕೆ ಉತ್ತರಿಸುತ್ತಿದ್ದಾರೆ.

ನಾರಾಯಣಃ = ನಾರಾಯಣನೇ, ಏಕಃ = ಪ್ರಧಾನವಾಗಿ, ಆಸೀತ್ = ಪ್ರಳಯಕಾಲದಲ್ಲಿ ಇದ್ದನು, ನ ಬ್ರಹ್ಮ = ಬ್ರಹ್ಮದೇವರು ಇರಲಿಲ್ಲ. ನಚ ಶಂಕರಃ = ರುದ್ರದೇವರೂ ಇರಲಿಲ್ಲ. ಸಃ = ಅಂತಹ ನಾರಾಯಣನು, ಮುನಿರ್ಭೂತ್ವಾ = ಮೌನವನ್ನು ತಾಳಿ, ಸಮಚಿಂತಯತ್ = ಸೃಷ್ಟಿಯನ್ನು ಮಾಡಲು ಆಲೋಚಿಸಿದನು. ತತಃ = ಅನಂತರ ಏತೇ = ಮಹದಾದಿತತ್ವಗಳು, ವ್ಯಜಾಯಂತ = ಹುಟ್ಟಿದವು. ಮತ್ತು, ವಿಶ್ವಃ = ವಾಯುದೇವರು, ಹಿರಣ್ಯಗರ್ಭಃ = ಚತುರ್ಮುಖಬ್ರಹ್ಮದೇವರು, ಅಗ್ನಿಃ = ಅಗ್ನಿಯು, ಯಮಃ = ಯಮನು, ವರುಣಃ = ವರುಣನು, ರುದ್ರಃ = ರುದ್ರನು, ಇಂದ್ರಃ = ಇಂದ್ರದೇವರು ಇವರೇ ಮೊದಲಾದವರು, ಇತಿ = ಹುಟ್ಟಿದರು.

ತಸ್ಯ = ಸೃಷ್ಟಿಮಾಡಿ ಪ್ರಸಿದ್ಧನಾದ, ಏತಸ್ಯ = ಮಹಾಮಹಿಮೆಯುಳ್ಳ, ಪರಮಸ್ಯ =

---

'उपैति' प्राप्नोतीति श्रुत्यर्थः । तत्त्वोद्योतटीकायां त्वियं श्रुतिः मुक्तपरतया व्याख्याता । परममित्येतदभिव्यक्तमिति च व्याख्यातम् ॥

ಸರ್ವೋತ್ತಮನಾದ, ನಾರಾಯಣಸ್ಯ = ನಾರಾಯಣನ, ರೂಪಾಣಿ = ರೂಪಗಳು, ಚತ್ವಾರಿ = ನಾಲ್ಕು, ಶುಕ್ಲಂ = ಬಿಳಿ, ರಕ್ತಂ = ಕೆಂಪು, ರೌಗ್ಮಂ = ಹಳದಿ, ಕೃಷ್ಣಮಿತಿ = ಕಪ್ಪು ಎಂಬುದಾಗಿ.

ಸಃ = ಆ ನಾರಾಯಣನು, ಏತಾನಿ = ಈ ನಾಲ್ಕು ಬಣ್ಣಗಳನ್ನು, ಏತೇಭ್ಯಃ = ಬ್ರಹ್ಮಾದಿದೇವತೆಗಳಿಗೆ, ವ್ಯಚೀಕ್ಲಪತ್ = ಮೀಸಲಾಗಿಟ್ಟನು. ವಿಮಿಶ್ರಾಣಿ = ಮೊದಲೇ ಮಿಶ್ರಿತವಾದ ಆ ಬಣ್ಣಗಳನ್ನು, ಪುನಃ = ಪ್ರಾಕೃತರೂಪದಿಂದ, ವ್ಯಮಿಶ್ರಯತ್ = ವಿಶೇಷವಾಗಿ ಮಿಶ್ರಣಮಾಡಿ ಮನುಷ್ಯರಿಗೆ ಮೀಸಲಾಗಿಟ್ಟನು.(१)

**भाष्यम् – अत एतादृगेव तद्रूपम् इति तस्यैव हि रूपाण्यभिधीयन्ते ॥२३॥**

**॥ इत्यदृश्यत्वाधिकरणम् ॥ ६ ॥**

ಈ ಶ್ರುತಿಗಳ ಆಧಾರದಿಂದ ಶುಕ್ಲ, ಪೀತ ಮೊದಲಾದವುಗಳು ಭಗವಂತನದ್ದೇ ಬಣ್ಣಗಳೆಂದು ನಿಶ್ಚಯವಾಗುತ್ತದೆ; ಆದ್ದರಿಂದ ಶ್ರುತಿಯಲ್ಲಿ 'ರುಗ್ಮವರ್ಣಂ' ಎಂದು ಹೇಳಿದ್ದು ವಿಷ್ಣುವಿನ ವಿಶೇಷಣವೆಂದು ತಿಳಿಯಬೇಕು.

ಪ್ರತಿಪದಾರ್ಥ -- ಅತಃ = ಮಿಶ್ರಣವನ್ನು ಮಾಡಿರುವ ಕಾರಣ, ತದ್ರೂಪಂ = ಆ ಭಗವಂತನ ರೂಪಗಳು, ಏತಾದೃಕ್ ಏವ = ಶುದ್ಧವಾದ ಶುಕ್ಲ ಪೀತ ಮೊದಲಾದ

(१) **भाष्यदीपिका** – ननु ब्रह्मादीनामपि रूपसद्भावात् कुतो रूपोपन्यासेनास्य विष्णुत्वनिश्चय इत्यत आह – एक इति ॥ 'इदमग्रे' इत्युपस्क्रियते । अत एव न्यायदीपिकायां जगदादावित्युक्तम् । हेत्यास्वादने । एतेभ्य इति तादर्थ्ये चतुर्थी । तथा च इदमस्य जगतोऽग्रे प्रलये नारायणः 'एकः' स्वतन्त्र आसीत् । न तदा चतुर्मुखशङ्करौ, न स्वस्वव्यापारावास्ताम् । 'सः' विष्णुस्तदा 'मुनिः' मननशीलो मौनी वा भूत्वा 'समचिन्तयत्' एते जायन्तामिति ध्यानरूपां चिन्तामकरोत् । 'ततः' तस्य चिन्तनादेते व्यजायन्त । के ते? यो 'विश्वो' वायुः, यश्च हिरण्यगर्भः, येऽग्न्यादय एत इत्यर्थः । ततः किमित्यत आह – 'तस्य' श्रुत्यादिप्रसिद्धस्य 'एतस्य' सर्वजीवशरीरगस्य 'परमस्य' सर्वोत्तमस्य नारायणस्य 'रूपाणि' वर्णाश्चत्वारि भवन्ति । कानि तानि? शुक्लादीनि । किञ्चातः? 'सः' नारायणः पूर्वमेव 'विमिश्राणि' स्वेन मिश्रीकृतानि रूपाणि 'एतेभ्यो' वायुप्रभृत्युक्तदेवानामर्थे 'अभ्यचीक्लृपत्' क्लृप्तान्यकरोत् । तानि विमिश्राणि पुनरपि 'व्यमिश्रयत्' मानुषादौ विशेषेण मिश्रीचकार । यद्वा – स एतानि रूपाणि व्यमिश्रयत्, विमिश्राणि चैतेभ्योऽभ्यचीक्लृपदित्यर्थः । शुद्धानि रूपाणि तु स्वस्यैवाकरोदिति भावः ॥ अत्राऽद्ययोजना तत्त्वप्रदीपटीकयोरुक्ता । द्वितीया तु टीकायामिति ध्येयम् ॥

ಸ್ವರೂಪಗಳು, ಇತಿ = ಹೀಗೆ, ತಸ್ಯೈವ ಹಿ = ವಿಷ್ಣುವಿನದ್ದೇ, ರೂಪಾಣಿ = ರೂಪಗಳು, ಅಭಿಧೀಯಂತೇ = ಹೇಳಲ್ಪಟ್ಟವೆ ಹೀಗೆ ವಿಷ್ಣುವಿನಲ್ಲಿ ರೂಪಗಳನ್ನು ಹೇಳಿದ್ದರಿಂದ ಅದೃಶ್ಯತ್ವವೆಂಬ ಧರ್ಮಕ್ಕೆ ಆಶ್ರಯನಾದವನು ವಿಷ್ಣುವೇ ಆಗಿದ್ದಾನೆಂದು ನಿರ್ಣಯವಾಯಿತು.[१]

**तत्वप्रकाशिका –**

**ॐ ।। रूपोपन्यासाच्च ।। ॐ**

**युक्त्यन्तरेण विष्णोरेवादृश्यत्वादिगुणकत्वं साधयत्सूत्रमुपन्यस्य, तदुपात्तश्रुतिमेवोदाहरति – रूपेति ।।**

ಮತ್ತೊಂದು ಯುಕ್ತಿಯಿಂದ ವಿಷ್ಣುವೇ ಅದೃಶ್ಯತ್ವಾದಿಗುಣಗಳಿಗೆ ಆಶ್ರಯನಾಗಿದ್ದಾನೆಂಬ ವಿಷಯವನ್ನು ಸಮರ್ಥಿಸುವುದಕ್ಕಾಗಿ ಸೂತ್ರವನ್ನು ಉಪನ್ಯಾಸ ಮಾಡಿ ಸೂತ್ರದಿಂದಲೇ ಸೂಚಿತವಾದ ಶ್ರುತಿಯನ್ನು "ರೂಪ" ಇತ್ಯಾದಿಯಾಗಿ ಉದಾಹರಿಸುತ್ತಿದ್ದಾರೆ.

**तत्वप्रकाशिका – 'द्रष्टा = जीवः, यदा रुक्मवर्णं हिरण्यगर्भकारणं जगत्कर्तारं पश्यति तदाऽसौ विद्वान् अनिष्टं पुण्यं पापं च विहाय, निर्लेपः पूर्णानन्दत्वादिसाम्यं प्राप्नोति' इत्यदृश्यत्वादिगुणकस्य रुक्मरूपोपन्यासाच्च, असौ विष्णुरेवेत्यर्थः ।**

ಪಶ್ಯ: ಎಂಬ ಶಬ್ದಕ್ಕೆ ನೋಡುವವನು ಎಂದರ್ಥ. ಜೀವನು ಯಾವಾಗ ಸುವರ್ಣಕಾಂತಿಯಿಂದ ಕೂಡಿರುವ ಚತುರ್ಮುಖಬ್ರಹ್ಮನಿಗೂ ಕಾರಣನಾದ ಜಗತ್ತಿಗೆ ಕರ್ತೃವಾದ ಭಗವಂತನನ್ನು ನೋಡುತ್ತಾನೋ ಆವಾಗ ವಿದ್ವಾಂಸನೆನಿಸಿ ಅನಿಷ್ಟವಾದ ಪುಣ್ಯ ಹಾಗೂ ಪಾಪಗಳನ್ನು ಬಿಟ್ಟು ದೋಷಗಳಿಂದ ನಿರ್ಮುಕ್ತನಾಗುತ್ತಾನೆ. ಮತ್ತು ಪೂರ್ಣವಾದ ಆನಂದವನ್ನು ಹೊಂದುವ ಮೂಲಕ ಭಗವಂತನ ಸಾಮ್ಯವನ್ನು ಪಡೆಯುತ್ತಾನೆ.

(१) भाष्यदीपिका – ततः किमित्यत आह – अत इति ।। अतो मिश्रीकरणात् तद्रूपं तस्य विष्णो रूपम् 'एतादृगेव' शुद्धं शुक्लादिस्वरूपमेव । न तु वाय्वादिरूपमिव मिश्रमित्यर्थः । यद्यप्यत्र 'तस्य हैतस्य' इत्यादिकमेवोदाहरणीयम्, प्रकृतोपयुक्तत्वात्, न तु 'एको नारायणः' इत्यादिकम् । तथाऽपि 'एतेभ्यः' इत्यस्यार्थस्य प्रत्ययार्थं तदंशोदाहरणं कृतम् । इतीति ।'हि' यस्माद् 'इति' उदाहृतवाक्येन 'रूपाणि' शुद्धरौग्मादिरूपाणि तस्य विष्णोरेवाभिधीयन्ते, नेतरेषां, तस्मान्नाप्रयोजकता शङ्क्येत्यर्थः । अनेन सूत्रे सामान्येनोक्तत्वेऽपि रूपशब्दः शुद्धरूपपरः । तच्चान्यत्र नास्ति । 'ध्येयः सदा' इति सूर्ये प्रतीतमपि मिश्रमेवेति लिङ्गस्यान्यत्र निरवकाशत्वमुक्तं भवति ।

ಹೀಗೆ ಶ್ರುತಿಯಲ್ಲಿ ಅದೃಶ್ಯತ್ವಾದಿ ಗುಣವುಳ್ಳ ವ್ಯಕ್ತಿಗೆ ಭಂಗಾರವರ್ಣವನ್ನು ಹೇಳಿರುವುದರಿಂದಲೂ ವಿಷ್ಣುವೇ ಅದೃಶ್ಯತ್ವಾದಿಗುಣಗಳಿಗೆ ಆಶ್ರಯನಾಗಿದ್ದಾನೆಂದು ನಿರ್ಣಯವಾಗುತ್ತದೆ.

**तत्वप्रकाशिका – ननु ब्रह्मादीनामपि रूपसद्भावात् कुतो रूपोपन्यासेनास्य विष्णुत्वनिश्चय इत्यत आह – एक इति ।।**

ಶಂಕೆ -- ಬ್ರಹ್ಮಾದಿ ದೇವತೆಗಳಿಗೂ ಸಹ ರೂಪವಿರುವುದರಿಂದ ರೂಪೋಪನ್ಯಾಸವೆಂಬ ಹೇತುವು ಹೇಗೆ ವಿಷ್ಣುತ್ವನಿಶ್ಚಾಯಕವಾಗುತ್ತದೆ? ಎಂಬ ಪ್ರಶ್ನೆಗೆ "ಏಕಃ" ಎಂಬುದರಿಂದ ಉತ್ತರಿಸುತ್ತಾರೆ.

**तत्वप्रकाशिका – विश्वो वायुः, विमिश्राणि = एतेभ्योऽभ्यचीक्लृपत् । व्यमिश्रयदिति मानुषादौ विशेषेण मिश्रीचकारेत्यर्थः । स एतानि व्यामिश्रयत् । विमिश्राणि च, एतेभ्योऽभ्यचीक्लृपदिति वा ।**

ವಿಶ್ವಶಬ್ದಕ್ಕೆ ವಾಯು ಎಂದರ್ಥ. ವಿಮಿಶ್ರಾಣಿ = ಮಿಶ್ರವಾದ ವರ್ಣಗಳನ್ನು, ಏತೇಭ್ಯಃ = ಬ್ರಹ್ಮ, ಇಂದ್ರ ಮೊದಲಾದ ದೇವತೆಗಳಿಗೆ ಕೊಡಲ್ಪಟ್ಟವು ಎಂದರ್ಥ. ವ್ಯಮಿಶ್ರಯತ್ ಎಂದರೆ ಮನುಷ್ಯಾದಿಗಳಿಗೆ ವಿಶೇಷವಾಗಿ ಮಿಶ್ರಣ ಮಾಡಿಕೊಡಲ್ಪಟ್ಟ ಎಂದರ್ಥ. ಅಥವಾ ಆ ರೂಪಗಳು ಮಿಶ್ರಮಾಡಲ್ಪಟ್ಟವು; ಮಿಶ್ರಿತವಾದ ರೂಪಗಳು ವಾಯುದೇವಾದಿಗಳಲ್ಲಿ ವ್ಯವಸ್ಥಿತವಾಗಿ ಇಡಲ್ಪಟ್ಟವೆ ಎಂದರ್ಥ.

**तत्वप्रकाशिका – 'तस्य हैतस्येत्यादेरेवात्रोपयुक्तत्वेऽप्येतान्येतेभ्य इत्यस्यार्थप्रतीत्यर्थमन्यांशोदाहरणम् । तस्माद् विष्णोरेव अदृश्यत्वादिगुणकत्वमिति स एवाऽऽनन्दमय इति सिद्धम् ।। २३ ।।**

।। इति श्रीमज्जयतीर्थभिक्षुविरचितायां तत्वप्रकाशिकायाम्
अदृश्यत्वाधिकरणम् ।।

ಪ್ರಕೃತಕ್ಕೆ ತಸ್ಯ ಹೈತಸ್ಯ ಎಂಬಲ್ಲಿಂದ ಕೃಷ್ಣಮಿತಿ ಎಂಬಲ್ಲಿಯ ತನಕದ ಭಾಗವು ಉಪಯುಕ್ತವಾಗಿರುತ್ತದೆ. ಆದ್ದರಿಂದ ಉಳಿದದ್ದನ್ನು ಏಕೋ ನಾರಾಯಣಃ ಎಂಬುದು ಏತಾನ್ಯೇತೇಭ್ಯಃ ವ್ಯಚೀಕ್ಲೃಪತ್ ಎಂಬುದು ಸ್ಪಷ್ಟವಾಗಿರುವುದರಿಂದ ಇದನ್ನು ನೀಡಿದ್ದಾರೆಂದು ತಿಳಿಯಬೇಕು. ಆದ್ದರಿಂದ ಇಲ್ಲಿಯ ತನಕ ನಡೆಸಿದ ವಿಚಾರದಿಂದ ವಿಷ್ಣುವೇ ಅದೃಶ್ಯತ್ವಾದಿಗುಣಗಳಿಗೆ ಆಶ್ರಯನಾಗಿದ್ದಾನೆ; ಅವನೇ ಆನಂದಮಯನಾಗಿದ್ದಾನೆಂದು ಸಿದ್ಧವಾಯಿತು.

॥ ಇಲ್ಲಿಗೆ ಶ್ರೀಜಯತೀರ್ಥಭಿಕ್ಷುಗಳಿಂದ ವಿರಚಿತವಾದ ತತ್ವಪ್ರಕಾಶಿಕ ಕನ್ನಡಾನುವಾದದಲ್ಲಿ
ಅದೃಶ್ಯತ್ವಾಧಿಕರಣವು ಮುಗಿಯಿತು ॥
ಪರಿಪೂರ್ಣಚಂದ್ರಿಕಾ

**भावदीपः** – ॐ **रूपोपन्यासाच्च ॐ** ।। सूत्रे चशब्दादाह – **युक्त्यन्तरेणेति** ।। सिद्धान्तहेतोः परपक्षनिरासेऽपि व्यापारोऽस्तीति वा लिङ्गस्य निरवकाशत्वव्यक्त्यर्थं वा विष्णोरेवेत्युक्तम् ।

।। ಓಂ ರೂಪೋಪನ್ಯಾಸಾಚ್ಚ ಓಂ ।।

ಸೂತ್ರದಲ್ಲಿರುವ "ಚ" ಶಬ್ದಕ್ಕೆ "ಯುಕ್ತ್ಯಂತರೇಣ" ಎಂದು ವ್ಯಾಖ್ಯಾನಿಸಿದ್ದಾರೆ. ಸಿದ್ಧಾಂತ ಹೇತುವು ಪೂರ್ವಪಕ್ಷವನ್ನೂ ಸಹ ನಿರಾಕರಿಸುತ್ತದೆ ಎಂದು ಅಥವಾ ಸಿದ್ಧಾಂತ ಹೇತು ನಿರವಕಾಶವಾಗಿದೆ ಎಂದು ತಿಳಿಸುವುದಕ್ಕಾಗಿ "ವಿಷ್ಣುರೇವ" ಎಂದು ಅವಧಾರಣೆಯನ್ನು ಮಾಡಿರುತ್ತಾರೆ.

**भावदीपः** – भाष्यस्य सूत्रेणान्वयं मत्वाऽर्थमाह – **द्रष्टेति** ।। पश्यतीति पश्यो द्रष्टा । 'प्राघ्राध्माधेट्दृशः शः' इति शप्रत्यये पश्यादेशः । ब्रह्मयोनिं हिरण्यगर्भकारणम् । 'अत एव कर्तारम्' 'तदा विद्वान् पुण्यपापे विधूय निरञ्जनः परमं साम्यमुपैति' इति शेषार्थोक्त्याऽकाङ्क्षां पूरयति – **तदेति** ।।

ಭಾಷ್ಯಕ್ಕೆ ಸೂತ್ರದ ಜೊತೆಗೆ ಅನ್ವಯವನ್ನು ತಿಳಿಸುತ್ತಾ ವ್ಯಾಖ್ಯಾನ ಮಾಡುತ್ತಿದ್ದಾರೆ "ದ್ರಷ್ಟಾ" ಇತ್ಯಾದಿಯಾಗಿ. ಶ್ರುತಿಯಲ್ಲಿರುವ "ಪಶ್ಯಃ" ಎಂಬ ಪದದ ಅರ್ಥವನ್ನೇ "ದ್ರಷ್ಟಾ" ಎಂದು ಹೇಳಿರುತ್ತಾರೆ. "ಪ್ರಾಘ್ರಾಧ್ಮಾಧೇಟ್‌ದೃಶಃ ಶಃ" ಎಂಬ ಸೂತ್ರಾನುಸಾರಿಯಾಗಿ "ಶ" ಪ್ರತ್ಯಯವು ಪರದಲ್ಲಿ ಇದ್ದಾಗ 'ದೃಶ್' ಧಾತುವಿಗೆ 'ಪಶ್ಯ' ಎಂಬ ಆದೇಶವು ಬರುತ್ತದೆ. "ಬ್ರಹ್ಮಯೋನಿಂ" ಎಂದರೆ ಚತುರ್ಮುಖಬ್ರಹ್ಮನಿಗೂ ಕಾರಣನಾದವನು ಎಂದರ್ಥ. ಆದ್ದರಿಂದಲೇ ಜಗತ್ಕರ್ತಾ ಆಗಿದ್ದಾನೆಂದು ತಿಳಿಯಬೇಕು. "ತದಾ ವಿದ್ವಾನ್ ಪುಣ್ಯಪಾಪೇ ವಿಧೂಯ ನಿರಂಜನಃ ಪರಮಂ ಸಾಮ್ಯಮುಪೈತಿ" ಎಂಬ ಉಳಿದ ಶ್ರುತಿಯ ಭಾಗದ ಅರ್ಥವನ್ನು ಹೇಳುತ್ತಾ ಆಕಾಂಕ್ಷೆಯನ್ನು ಪೂರ್ಣ ಮಾಡುತ್ತಿದ್ದಾರೆ "ತದಾ" ಇತ್ಯಾದಿ ವಾಕ್ಯಗಳಿಂದ.

**भावदीपः** – अप्रकृतत्वभ्रान्तिं निराह – **असौ विद्वानिति** ।। पुण्यपापमनिष्टमिति तद्भाष्योक्तेराह – **अनिष्टमनपेक्षमिति** ।। सञ्चितपुण्यपापे इत्यर्थः । अपौनरुक्त्या निरञ्जनपदार्थमाह – **निर्लेप इति** ।।

ಪ್ರಕೃತವಾಗಿಲ್ಲವೆಂಬ ಭ್ರಾಂತಿಯನ್ನು "ಅಸೌ ವಿದ್ವಾನ್" ಎಂಬುದರಿಂದ ನಿರಾಕರಿಸಿದ್ದಾರೆ. ಪುಣ್ಯ ಹಾಗೂ ಪಾಪಗಳೆರಡೂ ಅನಿಷ್ಟವೆಂದು ಉಪನಿಷದ್‌ಭಾಷ್ಯದಲ್ಲಿಯೇ ಹೇಳಿದ್ದಾರೆ. 'ಅನಿಷ್ಟಂ' ಎಂದರೆ ಅನಪೇಕ್ಷಿತವಾದದ್ದು ಎಂದರ್ಥ. ಸಂಚಿತವಾದ ಪುಣ್ಯ ಹಾಗೂ ಪಾಪಗಳೆರಡನ್ನು ಎಂದರ್ಥ. ಪುನರುಕ್ತಿ ಬಾರದಂತೆ 'ನಿರಂಜನಂ' ಪದದ ಅರ್ಥವನ್ನು 'ನಿರ್ಲೇಪಃ' ಇತ್ಯಾದಿಯಾಗಿ ಹೇಳಿದ್ದಾರೆ.

**भावदीपः** – 'तदधिगम उत्तरपूर्वाघयोरश्लेषविनाशौ' इति वक्ष्यमाणदिशा ज्ञानानन्तरभाविपापकृताशुचित्वादिलेपरहित इत्यर्थः । परमशब्दार्थः – **पूर्णेति** ।।

**ईशशब्दस्य रुद्रपरत्वशङ्कनात्तस्य वैष्णवत्वाय तत्रैव वाक्येऽनेकविष्णुलिङ्गप्रदर्शनाय समग्रवाक्यार्थोक्तिरित्याहुः ।**

"ತದಧಿಗಮ ಉತ್ತರಪೂರ್ವಾಘಯೋರಶ್ಲೇಷವಿನಾಶೌ" ಎಂಬ ಸೂತ್ರದಲ್ಲಿ ಹೇಳುವಂತೆ ಅಪರೋಕ್ಷ ಜ್ಞಾನದ ಆನಂತರ ಪುಣ್ಯ ಪಾಪಗಳು ಅಂಟುವುದಿಲ್ಲವೆಂದು ತಿಳಿಯಬೇಕು. 'ಪರಮ' ಶಬ್ದದ ಅರ್ಥವನ್ನೇ 'ಪೂರ್ಣ' ಎಂದು ಹೇಳಿದ್ದಾರೆ. 'ಈಶ' ಶಬ್ದಕ್ಕೆ ರುದ್ರನೆಂಬ ಅರ್ಥವನ್ನು ಹೇಳಬಹುದಲ್ಲವೆ? ಎಂಬ ಶಂಕೆಯನ್ನು ಪರಿಹರಿಸುವುದಕ್ಕಾಗಿ ಈಶ ಶಬ್ದವು ವಿಷ್ಣುವನ್ನೇ ಪ್ರತಿಪಾದಿಸುತ್ತದೆ. ಏಕೆಂದರೆ ಅದೇ ವಾಕ್ಯದಲ್ಲಿ ವಿಷ್ಣುವಿನ ಅನೇಕ ಲಿಂಗಗಳು ಇರುತ್ತವೆ ಎಂದು ತಿಳಿಸುವುದಕ್ಕಾಗಿ ಸಮಗ್ರ ವಾಕ್ಯದ ಅರ್ಥವನ್ನು ಹೇಳಿದ್ದಾರೆಂದು ಕೆಲವರು ವ್ಯಾಖ್ಯಾನಿಸುತ್ತಾರೆ.

**भावदीपः – 'धिया निगृह्यमाणोऽपि भ्रुवोर्मध्यात्प्रजापतेः । सद्योऽजायत तन्मन्युः कुमारो नीललोहितः ।।' इति तृतीयस्कन्धाद्युक्त्या रुद्रस्य ब्रह्मजातत्वेन ब्रह्मयोनित्वाद्ययोगादिति ।**

"ಧಿಯಾ ನಿಗೃಹ್ಯಮಾಣೋऽಪಿ ಭ್ರುವೋರ್ಮಧ್ಯಾತ್ಪ್ರಜಾಪತೇಃ । ಸದ್ಯೋऽಜಾಯತ ತನ್ಮನ್ಯುಃ ಕುಮಾರೋ ನೀಲಲೋಹಿತಃ ॥" ಎಂದು ತೃತೀಯ ಸ್ಕಂಧದಲ್ಲಿ ಹೇಳಿದಂತೆ ಬ್ರಹ್ಮದೇವರ ಭ್ರೂ ಮಧ್ಯಪ್ರದೇಶದಿಂದ ರುದ್ರದೇವರು ಹುಟ್ಟಿದರೆಂದು ತಿಳಿಯುತ್ತದೆ. ಇಂತಹ ರುದ್ರದೇವರು ಬ್ರಹ್ಮದೇವರಿಗೆ ಜನಕರಾಗಲು ಸಾಧ್ಯವಿಲ್ಲವೆಂದು ಅಭಿಪ್ರಾಯ.

**भावदीपः – यद्वा पश्यतीति पश्यो जीवः । संसारेऽपि साम्यसत्वात् परममिति । अभिव्यक्तमिति यावत् । अत्र 'पुण्यपापे विधूय निरञ्जनः' इति मुक्तलिङ्गमिति तत्त्वोद्योतटीकायां मुक्तभेदपरतया व्याख्यानेऽपि इह 'जुष्टं यदा' इति 'प्राणो ह्येष सर्वभूतैः' इति पूर्वोत्तरवाक्यमनुरुध्य जीवन्मुक्तपरतया व्याख्यानाय समग्रवाक्यार्थोक्तिः ।**

ಅಥವಾ 'ಪಶ್ಯತಿ ಇತಿ ಪಶ್ಯಃ' ಎಂಬ ವ್ಯುತ್ಪತ್ತಿಯಿಂದ ಜೀವನೆಂಬ ಅರ್ಥವನ್ನು ತಿಳಿಯಬೇಕು. ಸಂಸಾರದಲ್ಲಿಯೂ ಸಹ ಸಾಮ್ಯವಿರುವುದರಿಂದ "ಪರಮಂ" ಎಂಬ ಅರ್ಥವನ್ನು ತಿಳಿಯಬೇಕು.

"ಪುಣ್ಯಪಾಪೇ ವಿಧೂಯ ನಿರಂಜನಃ" ಎಂಬುದು ಮುಕ್ತರ ಲಿಂಗವಾಗಿದೆ ಎಂಬುದಾಗಿ ತತ್ತ್ವೋದ್ಯೋತ ಟೀಕೆಯಲ್ಲಿ ಮುಕ್ತರಿಂದ ಭೇದವನ್ನು ತಿಳಿಸುವುದಕ್ಕಾಗಿ ಈ ಶ್ರುತಿಯನ್ನು ಉಲ್ಲೇಖಿಸಿದ್ದಾರೆ. ಆದರೂ ಸಹ ಪ್ರಕೃತ "ಜುಷ್ಟಂ ಯದಾ" ಮತ್ತು "ಪ್ರಾಣೋ ಹ್ಯೇಷ ಸರ್ವಭೂತೈಃ" ಎಂಬ ಹಿಂದಿನ ಮುಂದಿನ ವಾಕ್ಯಗಳಿಗೆ ಅನುಸಾರಿಯಾಗಿ ಜೀವಭೇದಪರವಾಗಿ ಇಲ್ಲಿ ವ್ಯಾಖ್ಯಾನಿಸಿದ್ದಾರೆ. ಅದಕ್ಕೋಸ್ಕರವಾಗಿಯೇ ಸಮಗ್ರವಾದ ಅರ್ಥವನ್ನು ಹೇಳಿದ್ದಾರೆ ಎಂದು ತಿಳಿಯಬೇಕು.

ಪರಿಪೂರ್ಣಚಂದ್ರಿಕಾ

**भावदीपः** – एतेभ्य इति चतेर्थी वायुप्रभृत्युक्तदेवतानामर्थ इत्यर्थः ।। अन्यांशेति ।। तर्हि 'तत एते व्यजायन्त' इत्यादिनैव पूर्येत, मैवम् । पूर्वशेषोक्तेरपि तत इत्यस्यार्थप्रतीत्यर्थत्वादिति भावः । फलोक्त्योपसंहरति – तस्मादिति ।।

"ಏತೇಭ್ಯಃ"ಎಂಬುದು ಚತುರ್ಥೀವಿಭಕ್ತಿಯಾಗಿದೆ. "ವಾಯುದೇವರಿಂದ ಹುಟ್ಟಿದ ಸಕಲ ದೇವತೆಗಳಿಗೂ" ಎಂದು ಇದರ ಅರ್ಥ. "ಅನ್ಯಾಂಶೋದಾಹರಣಮ್" ಎಂದು ಟೀಕೆಯಲ್ಲಿ ಹೇಳಿದ್ದಾರೆ. ಹಾಗಾದರೆ "ತತಃ ಏತೇ ವ್ಯಜಾಯಂತ" ಎಂದಷ್ಟೇ ಹೇಳಿದ್ದರೆ ಸಾಕಾಗಿತ್ತಲ್ಲವೆ? ಎಂದು ಪ್ರಶ್ನಿಸಬಾರದು. "ತತಃ" ಎಂಬ ಪದದ ಅರ್ಥವನ್ನು ತಿಳಿಸುವುದಕ್ಕಾಗಿ ಹಿಂದಿನ ವಾಕ್ಯಶೇಷವನ್ನು ಉಲ್ಲೇಖಿಸಿದ್ದಾರೆಂದು ಅಭಿಪ್ರಾಯ. ಫಲವನ್ನು ಹೇಳುವ ಮುಖಾಂತರ ಉಪಸಂಹಾರ ಮಾಡುತ್ತಿದ್ದಾರೆ "ತಸ್ಮಾತ್" ಇತ್ಯಾದಿಯಾಗಿ.

**भावदीपः** – निरवकाशानेकलिङ्गसत्वात् परपक्षे बाधकभावाच्चेति सूत्रत्रयहेत्वंशार्थः । "अदृश्यत्वादिगुणकः तत्तु"इति प्रतिज्ञार्थः विष्णोरेवेत्यादि । नेतरावित्युक्तप्रधानादयो नेत्यस्यार्थः एवेति । अद्रेश्यवाक्योक्तम् अदृश्यवाक्योक्तं चादृश्यत्वादिकमित्यर्थः ।

ನಿರವಕಾಶವಾದ ವಿಷ್ಣುವಿನ ಅನೇಕ ಲಿಂಗಗಳಿರುವುದರಿಂದ ಮತ್ತು ಪರಪಕ್ಷದಲ್ಲಿ ಬಾಧಕಗಳಿರುವುದರಿಂದ ಎಂದು ಮೂರೂ ಸೂತ್ರಗಳಲ್ಲಿರುವ ಹೇತುವಿನ ಅರ್ಥ. "ಅದೃಶ್ಯತ್ವಾದಿಗುಣಕಃ ತತ್ತು" ಎಂಬ ಪ್ರತಿಜ್ಞೆಯ ಅರ್ಥವನ್ನೇ ಟೀಕೆಯಲ್ಲಿ "ವಿಷ್ಣುರೇವ" ಎಂದು ಹೇಳಿದ್ದಾರೆ. "ನೇತರೌ" ಎಂಬುದರಿಂದ ತಿಳಿಯಲ್ಪಟ್ಟ ಪ್ರಧಾನಾದಿಗಳು ಅದೃಶ್ಯತ್ವಾದಿ ಗುಣಗಳುಳ್ಳವಲ್ಲ ಎಂಬ ಅರ್ಥವನ್ನು "ಏವ" ಎಂಬುದರಿಂದ ಸೂಚಿಸಿದ್ದಾರೆ. ಅದ್ರೇಶ್ಯವಾಕ್ಯದಿಂದ ಹಾಗೂ ಅದೃಶ್ಯತ್ವವಾಕ್ಯದಿಂದ ತಿಳಿಯಲ್ಪಟ್ಟ ಅದೃಶ್ಯತ್ವಾದಿಗಳು ವಿಷ್ಣುವಿನಲ್ಲಿಯೇ ಬರುತ್ತವೆ ಎಂದು ಅರ್ಥ.

**भावदीपः** – यत्त्वत्र केनचिदुक्तं पञ्चकोटिकसंशयो नेतराविति सूत्रोक्तकोटिद्वयविरुद्ध इति, तन्न । चन्द्रिकायामेव समाधानात् ।

ಕೆಲವರು ಐದು ಬಗೆಯ ಸಂಶಯಗಳನ್ನು ಕೋಟಿದ್ವಯವನ್ನಷ್ಟೇ ನಿರಾಕರಿಸುವ "ನೇತರೌ" ಎಂಬ ಸೂತ್ರದಿಂದ ಪರಿಹರಿಸಲು ಸಾಧ್ಯವಿಲ್ಲವೆಂದು ಆಕ್ಷೇಪಿಸಿದ್ದಾರೆ. ಇದು ತಪ್ಪು. ತಾತ್ಪರ್ಯಚಂದ್ರಿಕೆಯಲ್ಲಿ ಈ ಪ್ರಶ್ನೆಗೆ ಸಮಾಧಾನವನ್ನು ನೀಡಿದ್ದಾರೆ.

**भावदीपः** – यदपि प्रथमदृष्टान्तमुल्लङ्घ्य द्वितीयदृष्टान्तानुरोधेन प्रधानपूर्वपक्षोक्तिरयुक्तेति, तदपि न । प्रथमदृष्टान्तस्यापि मायावादिरीत्या उपादानत्व एव सम्भवात् । स्पष्टत्वार्थं टीकादौ द्वितीयोक्तेः ।

ಶ್ರುತಿಯಲ್ಲಿರುವ ಮೊದಲನೆಯ ದೃಷ್ಟಾಂತವನ್ನು ಬಿಟ್ಟು ಎರಡನೆಯ ದೃಷ್ಟಾಂತಕ್ಕೆ ಅನುಸರಿಸಿ ಪ್ರಕೃತಿಪರವಾಗಿ ಪೂರ್ವಪಕ್ಷವನ್ನು ಹೇಳಿದ್ದು ತಪ್ಪಲ್ಲವೆ? ಎಂದೂ ಸಹ ಪ್ರಶ್ನಿಸಬಾರದು. ಮೊದಲನೆಯ

ದೃಷ್ಟಾಂತವೂ ಸಹ ಮಾಯಾವಾದಿಗಳ ಪ್ರಕಾರ ಉಪಾದಾನವೆಂಬ ಅರ್ಥದಲ್ಲಿಯೇ ಪರ್ಯವಸಾನವಾಗುತ್ತದೆ. ಸ್ಪಷ್ಟವಾಗಿ ಅರ್ಥವಾಗುವ ಕಾರಣ ಟೀಕೆಯಲ್ಲಿ ಎರಡನೆಯ ದೃಷ್ಟಾಂತವನ್ನೇ ಸ್ವೀಕರಿಸಿದ್ದಾರೆ.

**भावदीपः** – ईशश्रुत्या रुद्रप्राप्तिरप्ययुक्ता । ब्रह्मयोनित्वादिलिङ्ग-विरोधित्वादित्यपि न । ब्रह्मयोनित्वादेर्बहुव्रीह्याश्रयणेन सावकाशत्वोपपत्तेः । रुद्रप्राप्तेश्चन्द्रिकायामुपपादनाच्च । एवमन्यदपि तदीयं दुर्वचनं निरस्यम् ।। २३ ।।

।। इति श्रीराघवेन्द्रयतिकृते भावदीपे अदृश्यत्वाधिकरणम् ।।

**भावदीपः** – ಈಶಶ್ರುತಿ ಇರುವುದರಿಂದ ರುದ್ರನೂ ಸಹ ಪೂರ್ವಪಕ್ಷಕ್ಕೆ ವಿಷಯನಾಗುತ್ತಾನೆ ಎಂದು ಹೇಳಿದ್ದೇ ತಪ್ಪು? ಹಾಗಾದಲ್ಲಿ ಬ್ರಹ್ಮಯೋನಿತ್ವವೇ ಮೊದಲಾದ ಲಿಂಗಗಳಿಗೆ ವಿರೋಧ ಬರುತ್ತದೆ ಎಂದು ಕೆಲವರು ಆಕ್ಷೇಪಿಸುತ್ತಾರೆ. ಇದನ್ನೂ ಸಹ ನಿರಾಕರಿಸಿದಂತಾಯಿತು. ಏಕೆಂದರೆ 'ಬ್ರಹ್ಮಯೋನಿತ್ವ' ಎಂಬುದು ಬಹುವ್ರೀಹಿ ಸಮಾಸವನ್ನು ಆಶ್ರಯಿಸಿದ ಕಾರಣ ಸಾವಕಾಶವಾಗುತ್ತದೆ. ಮತ್ತು ರುದ್ರನೂ ಸಹ ಹೇಗೆ ಪೂರ್ವಪಕ್ಷಕ್ಕೆ ವಿಷಯನಾಗುತ್ತಾನೆ ಎಂಬ ವಿಷಯವನ್ನು ತಾತ್ಪರ್ಯಚಂದ್ರಿಕೆಯಲ್ಲಿ ಸ್ಪಷ್ಟಪಡಿಸಲಾಗಿದೆ. ಉಳಿದ ಪೂರ್ವಪಕ್ಷಗಳ ವಿಷಯದಲ್ಲಿಯೂ ಸಹ ಬೇರೆಯವರ ದುರಭಿಪ್ರಾಯಗಳನ್ನು ನಿರಾಕರಿಸಬೇಕು.

॥ ಇಲ್ಲಿಗೆ ಭಾವದೀಪದ ಕನ್ನಡಾನುವಾದದಲ್ಲಿ ಅದೃಶ್ಯತ್ವಾಧಿಕರಣವು ಮುಗಿಯಿತು ॥

**वाक्यार्थमञ्जरी** – **।। ॐ रुपोपन्यअसाच्च ॐः ।। रुग्मवर्णमिति ।।** रुग्मरुपाभिधानाच्चादृश्यत्वादिगुणकोविष्णुरेवेत्यर्थः ।। पश्यतीति पश्य इत्याश्येनोक्तं "दृष्टेति तदा विद्वानपुण्यपापे विधूय निरंजनः परमं साम्यमुपैति" इति शेषार्थोक्त्याकांक्षां पूरयति ।। तदेति ।। पुण्यनाशस्यापुरुषार्थत्वादाह ।। अनिष्टपुण्यमिति ।। अपरोजनात्पूवभाविपुण्यं द्विविधं काम्यमकाम्यं च तत्राकाम्यमपरोक्ष ज्ञनाय भवति ।। काम्यं च द्विविधम् । इष्टमनिष्टं च । तत्रेष्टमप्रारब्धमपि न नश्यति । इष्टनाशस्यापुरुषार्थत्वात् अनिष्ट तु नश्यतीति चतुर्थ एवोत्तरत्र स्पष्टम् । पुण्यपापे विधूयेत्यनेनपौनरुक्त्यवारणाय निरंजन शब्दार्थमाह । निर्लेप इति । ज्ञनोत्तरकालीनानिष्टपुण्यपापलेपरहित इत्यर्थः । पूर्णेति । योग्यतानुसारेणेदम् । एतेभ्यः विश्वादिभ्यः । अभ्यचीक्लृपत् दत्तवान् विशेषेणविश्वादिगतरुपापेक्षया । भाष्ये अत एतदिति । अतः देवादिरुपाणां शुद्धत्वाभावादेतच्छुद्धं शुक्लादि एतद्रूपम् एतस्य हरेरुपमित्यर्थः ।। ४ ।।

।। इति श्रीशर्कराश्रीनिवासाविरचितायां वाक्यार्थमञ्जर्याम् अदृश्यत्वाधिकरणम् ।। ६ ।।

****

ಪರಿಪೂರ್ಣಚಂದ್ರಿಕಾ

## ಅದೃಶ್ಯತ್ವಾಧಿಕರಣ
## (೧-೨-೬)

# ಭಾಗ - ೨

## ತಾತ್ಪರ್ಯಚಂದ್ರಿಕಾ, ಪ್ರಕಾಶ,

ಪ್ರತಿಯೊಂದು ವಾಕ್ಯಗಳ ವಿಶೇಷ ವಿವರಣೆಯೊಂದಿಗೆ

ಸರಳ ಅನುವಾದ

* * *

ಮತ್ತು

ಗುರುರಾಜೀಯಮ್, ಭಾಟ್ಟಸಂಗ್ರಹ,

ಶಾಂಕರಭಾಷ್ಯ, ಭಾಮತೀ,

ರಾಮಾನುಜಭಾಷ್ಯ ಇವುಗಳ ಸಂಪೂರ್ಣ ಅಡಿಟಿಪ್ಪಣಿಯೊಂದಿಗೆ

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥
॥ ಶ್ರೀಮಧ್ವರಾಜೋ ವಿಜಯತೇತರಾಮ್ ॥
॥ ಶ್ರೀಗುರುಭ್ಯೋ ನಮಃ ॥

ಶ್ರೀಬ್ರಹ್ಮಣ್ಯತೀರ್ಥಶ್ರೀಪಾದಶಿಷ್ಯ ಶ್ರೀವ್ಯಾಸತೀರ್ಥವಿರಚಿತಾ

# ತಾತ್ಪರ್ಯಚಂದ್ರಿಕಾ

## अथ अदृश्यत्वाधिकरणम्

ಸಂಗತಿ ಹಾಗೂ ಸಂಶಯ ಪರಂಪರೆ

॥ ॐ अदृश्यत्वादिगुणको धर्मोक्तेः ॐ ॥

**अत्रान्तर्यामिणो ब्रह्मत्वे हेतूकृतस्य "यं पृथिवी न वेद" इत्युक्तस्यादृश्यत्वस्याक्षेपेण पूर्वपक्षोत्थानादनन्तरसङ्गतिः ।**

ಅನುವಾದ - ಈ ಅಧಿಕರಣದಲ್ಲಿ ಅದೃಶ್ಯತ್ವವೆಂಬ ಧರ್ಮವನ್ನು ಪರಮಾತ್ಮನಲ್ಲಿ ಸಮನ್ವಯ ಮಾಡುತ್ತಿದ್ದಾರೆ. ಹಿಂದಿನ ಅಧಿಕರಣದಲ್ಲಿ ಪರಮಾತ್ಮನೇ ಅಂತರ್ಯಾಮಿಯೆನ್ನಲು 'ಯಂ ಪೃಥಿವೀ ನ ವೇದ' ಇತ್ಯಾದಿ ಸ್ಥಿತಿಗಳಿಂದ ತಿಳಿಯಲ್ಪಡುವ ಅದೃಶ್ಯತ್ವಾದಿಗಳನ್ನು ಹೇತುಗಳನ್ನಾಗಿ ಮಾಡಿದರು. ಆ ಹೇತುವು ಪರಮಾತ್ಮನಲ್ಲಿ ಅಸಿದ್ಧವಾಗಿದೆಯೆಂದು ಆಕ್ಷೇಪ ಮಾಡಿ ಪೂರ್ವಪಕ್ಷ ಮಾಡುತ್ತಿರುವುದರಿಂದ ಹಿಂದಿನ ಅಧಿಕರಣದಿಂದ ಆನಂತರ್ಯಸಂಗತಿಯಿರುತ್ತದೆಂದು ತಿಳಿಯಬೇಕು.

**अत्रादृश्यत्वादिगुणकमक्षरं किं प्रकृत्यादि किं वा विष्णुरिति चिन्ता ।**

ಈ ಅಧಿಕರಣದ ಸಂಶಯ ಪರಂಪರೆ ಹೀಗಿದೆ - ಅದೃಶ್ಯತ್ವಾದಿಗುಣಗಳನ್ನು ಹೊಂದಿರುವ ಅಕ್ಷರವು ಪ್ರಕೃತ್ಯಾದಿಗಳೋ? ಅಥವಾ ವಿಷ್ಣುವೋ? ಎಂದು ಸಂಶಯ.

**तदर्थं ब्रह्मणोऽक्षरत्वे "अक्षरात्परतः परः" इति वाक्यशेषोक्तं अक्षरस्य परत्वावधित्वं न सम्भवति उत सम्भवतीति ।**

ಪರಿಪೂರ್ಣಚಂದ್ರಿಕಾ

ಹಿಂದಿನ ಸಂಶಯವು ಪರಿಹಾರವಾಗಬೇಕೆಂದರೆ ಬ್ರಹ್ಮನು ಅಕ್ಷರನಾಗಿದ್ದಾನೆನ್ನಲು 'ಅಕ್ಷರಾತ್ಪರತಃ ಪರಃ' ಎಂಬ ವಾಕ್ಯಶೇಷದಲ್ಲಿ ಹೇಳಲ್ಪಟ್ಟ ಪರತ್ವಾವಧಿತ್ವವು ಅಕ್ಷರನಲ್ಲಿ ಯುಕ್ತವಾಗುವುದಿಲ್ಲವೋ? ಅಥವಾ ಯುಕ್ತವಾಗುತ್ತದೋ? ಎಂದು ಸಂಶಯ.

**तदर्थं परत्वावधिभूतमक्षरमदृश्यत्वादिगुणकाक्षरादनन्यद् उतान्यदिति ।**

**अनन्यत्वे परत्वावधित्वस्य ब्रह्मणयोगात् न तस्याक्षरत्वं युक्तम्, अन्यत्वे तु युक्तम् ॥**

ಹಿಂದಿನ ಸಂಶಯವು ಪರಿಹಾರವಾಗಬೇಕೆಂದರೆ ಪರತ್ವಕ್ಕೆ ಅವಧಿಯಾಗಿರುವಂತಹ ಅಕ್ಷರವು ಅದೃಶ್ಯತ್ವಾದಿಗುಣವುಳ್ಳ ಅಕ್ಷರಕ್ಕಿಂತ ಅಭಿನ್ನವಾಗಿದೆಯೋ? ಅಥವಾ ಭಿನ್ನವಾಗಿದೆಯೋ? ಎಂಬ ಸಂಶಯವು ಪರಿಹಾರವಾಗಬೇಕು. ಅಭಿನ್ನವಾಗಿದೆಯೆಂದರೆ ಪರತ್ವಾವಧಿತ್ವವು ಬ್ರಹ್ಮನಲ್ಲಿ ಅಯುಕ್ತವಾದ್ದರಿಂದ ಬ್ರಹ್ಮನಿಗೆ ಅಕ್ಷರತ್ವವು ಯುಕ್ತವಾಗುವುದಿಲ್ಲ. ಭಿನ್ನವಾಗಿರುವುದಾದರೆ ಬ್ರಹ್ಮನಿಗೆ ಅಕ್ಷರತ್ವವು ಯುಕ್ತವಾಗುತ್ತದೆ.

## ಶ್ರೀರಾಘವೇಂದ್ರತೀರ್ಥವಿರಚಿತ
# ಪ್ರಕಾಶ

**प्रकाशः —**

**ॐ अदृश्यत्वादिगुणको धर्मोक्तेः ॐ ॥** भाष्ये "अदृश्यत्वादिगुणा विष्णोरुक्ताः" इति सामान्येनोक्तेः,

ವಿವರಣೆ - ಅದೃಶ್ಯತ್ವಾಧಿಕರಣವು ಪ್ರಾರಂಭವಾಗುತ್ತಿದೆ. ಮೊದಲು ಈ ಅಧಿಕರಣಕ್ಕೆ ಹಿಂದಿನ ಅಧಿಕರಣದಿಂದ ಸಂಗತಿಯನ್ನು ಸಮರ್ಥಿಸುತ್ತಿದ್ದಾರೆ. ಗ್ರಂಥಕಾರರು ಆಕ್ಷೇಪಿಕೀ ಸಂಗತಿಯನ್ನು ಹೇಳುವ ಮೂಲಕ ಅದೃಶ್ಯತ್ವಾಧಿಕರಣಕ್ಕೆ ಅಂತರ್ಯಾಮ್ಯಧಿಕರಣದಿಂದ ಸಂಗತಿಯನ್ನು ತೋರಿಸಿದ್ದಾರೆ. ಭಾಷ್ಯದಲ್ಲಿ "ಅದೃಶ್ಯತ್ವಾದಿಗುಣಾ ವಿಷ್ಣೋರುಕ್ತಾಃ" ಎಂದು ಸಾಮಾನ್ಯವಾಗಿ ಹೇಳಿರುವುದರಿಂದ ಹಿಂದಿನ ಅಧಿಕರಣದಿಂದ ಅಥವಾ ಆನಂದಮಯಾಧಿಕರಣದಿಂದಲೂ ಸಂಗತಿಯು ಪ್ರಾಪ್ತವಾಗುತ್ತದೆ.

**प्रकाशः – तत्वप्रदीपे च ''–''अदृश्येऽनात्म्ये'' ''सहैव सन्तं न विजानन्ति देवाः'' ''स योऽतोऽश्रुतः'' इत्यादिना अदृश्यत्वादिगुणाः विष्णोरुक्ताः'' इत्यादिपदप्रयोगात्**

ಭಾಷ್ಯಾನುಸಾರವಾಗಿ ತತ್ವಪ್ರದೀಪದಲ್ಲಿಯೂ "ಅದೃಶ್ಯೇಽನಾತ್ಮ್ಯೇ" ಎಂಬ ಆನಂದಮಯಾಧಿಕರಣದ ವಿಷಯವಾಕ್ಯದಿಂದ "ಸಹೈವ ಸಂತಂ ನ ವಿಜಾನಂತಿ ದೇವಾಃ" ಎಂಬ ವಿಷಯವಾಕ್ಯದಿಂದ ಮತ್ತು "ಸ ಯೋಽತೋಽಶ್ರುತಃ" ಎಂಬ ಹಿಂದಿನ ಅಂತರ್ಯಾಮ್ಯಧಿಕರಣದ ವಿಷಯವಾಕ್ಯದಿಂದ ಅದೃಶ್ಯತ್ವಾದಿಗುಣಗಳನ್ನು ವಿಷ್ಣುವಿನಲ್ಲಿ ಈ ಅಧಿಕರಣವು ಸಮರ್ಥಿಸುತ್ತಿದೆ ಎಂದು ಹೇಳಿದ್ದಾರೆ. ಆದ್ದರಿಂದ ಇದೂ ಸಹ ಒಂದು ಸಂಗತಿ ಪ್ರತಿಪಾದಕ ಸಂವಾದ.

**प्रकाशः – टीकायाम् ''अदृश्येऽनात्म्ये'' इति विशिष्योक्तावपि तुल्यन्यायतया प्राप्तां ''पूर्ववददृश्यत्वादिबलेन रूढिं परित्यज्य योगवृत्त्याऽक्षरशब्दो विष्णौ सम्भवति'' इति न्यायविवरणटीकोक्त्या च लब्धां पूर्वसङ्गतिमाह – अत्रेति ।**

ಹಾಗೂ ತತ್ವಪ್ರಕಾಶಿಕೆಯಲ್ಲಿ "ಅದೃಶ್ಯೇಽನಾತ್ಮ್ಯೇ" ಎಂಬುದಾಗಿ ಆನಂದಮಯಾಧಿಕರಣದ ವಿಷಯ-ವಾಕ್ಯವನ್ನಷ್ಟೇ ವಿಶೇಷವಾಗಿ ಹೇಳಿದ್ದಾರೆ. ಆದರೂ ಸಹ ಸಮಾನ ನ್ಯಾಯದಿಂದ ಹಿಂದಿನ ಅಂತರ್ಯಾಮ್ಯಧಿಕರಣದ 'ಸ ಯೋಽತೋಽಶ್ರುತಃ' ಎಂಬ ವಾಕ್ಯವನ್ನೂ ಸಹ ಉಪಲಕ್ಷಣಯಾ ಸ್ವೀಕರಿಸಬೇಕು ಎಂದು ಹೇಳಿದ್ದಾರೆ. ಹಾಗೂ ನ್ಯಾಯವಿವರಣೆ ಟೀಕೆಯಲ್ಲಿ "ಪೂರ್ವವದದೃಶ್ಯತ್ವಾದಿಬಲೇನ ರೂಢಿಂ ಪರಿತ್ಯಜ್ಯ ಯೋಗವೃತ್ತ್ಯಾಽಕ್ಷರಶಬ್ದೋ ವಿಷ್ಣೌ ಸಂಭವತಿ" ಹಿಂದಿನ ಅಧಿಕರಣದಂತೆ ಅಕ್ಷರಶಬ್ದವು ಅದೃಶ್ಯತ್ವಾದಿ ಹೇತುಗಳಿಂದ ರೂಢಿಯನ್ನು ಬಿಟ್ಟು ಯೋಗವೃತ್ತಿಯಿಂದಲೇ ವಿಷ್ಣುವಿನಲ್ಲಿ ಸಮನ್ವಯವಾಗುತ್ತದೆ ಎಂದು ಹೇಳಿರುತ್ತಾರೆ. ಹೀಗೆ, ಭಾಷ್ಯದಲ್ಲಿ ಹೇಳಿದ ಸಾಮಾನ್ಯವಚನ, ತತ್ವಪ್ರದೀಪದಲ್ಲಿನ ಪ್ರಯೋಗಗಳು, ತತ್ವಪ್ರಕಾಶಿಕಾ ವಾಕ್ಯ ಪರ್ಯಾಲೋಚನೆ ಮತ್ತು ನ್ಯಾಯವಿವರಣ ಟೀಕಾವಾಕ್ಯಗಳಿಂದ ಈ ಅಧಿಕರಣಕ್ಕೆ ಹಿಂದಿನ ಅಂತರ್ಯಾಮ್ಯಧಿಕರಣದಿಂದ ಸಂಗತಿಯಿರುತ್ತದೆಂಬುದು ಎಲ್ಲ ರೀತಿಯಿಂದಲೂ ಸ್ಪಷ್ಟವಾಗುತ್ತದೆ. ಇದನ್ನು 'ಅತ್ರ' ಎಂಬ ವಾಕ್ಯದಿಂದ ಹೇಳುತ್ತಿದ್ದಾರೆ.

**प्रकाशः – ननु अदृश्यत्वं सामान्यं, पृथिव्यविदितत्वं विशेषः, तेन कथं तदाक्षेप इति,**

'ಯತ್ತ ದದ್ರೇಶ್ಯಂ' ಎಂಬ ಶ್ರುತಿಯಲ್ಲಿ ಕೇಳಿಸುತ್ತಿರುವ ಅದೃಶ್ಯತ್ವವು ಸಾಮಾನ್ಯರೂಪವಾಗಿವೆ. 'ಯಂ ಪೃಥಿವೀ ನ ವೇದ' ಎಂಬಲ್ಲಿ ಕೇಳಿಸುತ್ತಿರುವ ಪೃಥಿವ್ಯವಿದಿತತ್ವ ರೂಪ ಧರ್ಮವು ವಿಶೇಷ ರೂಪವಾಗಿದೆ. ಹೀಗಿರುವಾಗ ಸಾಮಾನ್ಯವಾದ ಅದೃಶ್ಯತ್ವಾದಿಧರ್ಮವು ವಿಷ್ಣುವಿನಲ್ಲಿ ಇಲ್ಲದ ಕಾರಣ ವಿಶೇಷರೂಪವಾದ ಪೃಥಿವ್ಯವಿದಿತತ್ವ ಎಂಬ ಧರ್ಮವೂ ಸಹ ವಿಷ್ಣುವಿನಲ್ಲಿ ಬರುವುದಿಲ್ಲವೆಂದು ಹೇಗೆ ಹೇಳುತ್ತೀರಿ? ಎರಡೂ ಸಹ ಒಂದೇ ಆಗಿದ್ದಲ್ಲಿ ಹಾಗೇ ಹೇಳಬಹುದಿತ್ತು. ಆದರೆ ಸಾಮಾನ್ಯ ವಿಶೇಷಭಾವವಿರುವುದರಿಂದ ಅದೃಶ್ಯತ್ವವಿಲ್ಲದಿದ್ದರೆ ಪೃಥಿವ್ಯವಿದಿತತ್ವವು ಬರುವುದಿಲ್ಲವೆಂದು ಹೇಳಲಾಗದು.

ಪರಿಪೂರ್ಣಚಂದ್ರಿಕಾ

**प्रकाशः** – मैवं, सर्वादृश्यत्ववति तदेकदेशपृथिव्यविदितत्वस्यापि "मुखनासिकावचनोऽनुनासिकः" इत्यत्र महाभाष्योक्तेन प्रासादवासिन्यायेन सत्त्वाद्वा,

ಈ ಆಕ್ಷೇಪಕ್ಕೆ ನಾಲ್ಕು ಬಗೆಯಲ್ಲಿ ಉತ್ತರಿಸುತ್ತಿದ್ದಾರೆ. ಮೊದಲನೆಯ ಸಮಾಧಾನ ಹೀಗಿದೆ - ಪ್ರಾಸಾದವಾಸಿನ್ಯಾಯದಿಂದ ಸಾಮಾನ್ಯವಿಲ್ಲದಿದ್ದರೆ ವಿಶೇಷವು ಬರುವುದಿಲ್ಲವೆಂಬುದನ್ನು ತಿಳಿಯಬೇಕು. ಅಂದರೆ ಸಕಲ ಪದಾರ್ಥಗಳಿಂದ ತಿಳಿಯಲಾರನೆಂದು ಹೇಳಿದಾಗ ಸರ್ವಪದಾರ್ಥಗಳ ಏಕದೇಶವಾದ ಪೃಥಿವ್ಯಾದಿಗಳಿಂದಲೂ ಸಹ ತಿಳಿಯಲಾರನೆಂದೇ ಅರ್ಥ. ಸಮಗ್ರ ಪ್ರಾಸಾದಕ್ಕೆ ಒಡೆಯನಾದವನು ಅದರ ಏಕದೇಶಕ್ಕೂ ಹೇಗೆ ಒಡೆಯನಾಗಿರುತ್ತಾನೋ ಅದರಂತೆ ಈ ಪ್ರಾಸಾದವಾಸಿನ್ಯಾಯವು "ಮುಖ ನಾಸಿಕಾವಚನೋಽನುನಾಸಿಕಃ" ಎಂಬ ಸೂತ್ರದ ಮಹಾಭಾಷ್ಯದಲ್ಲಿ ಹೇಳಲ್ಪಟ್ಟಿರುತ್ತದೆ.

**प्रकाशः** – पृथिव्याद्यधिदैवादिसर्वाविदितत्वस्य अदृश्यत्वरूपत्वाद्वा,

ಅಥವಾ ಎರಡನೆಯ ಸಮಾಧಾನ ಹೀಗೆ - 'ಯಂ ಪೃಥಿವೀ ನ ವೇದ' 'ಯಮ್ ಆಕಾಶೋ ನ ವೇದ' ಇತ್ಯಾದಿಯಾಗಿ ಅಧಿದೇವಾದಿ ಇಪ್ಪತ್ತೊಂದು ಪ್ರಕರಣಗಳಲ್ಲಿ ಪ್ರತಿಯೊಂದರಿಂದಲೂ ಅವನು ತಿಳಿಯಲಾರನೆಂದು ನಿರೂಪಿಸಲಾಗಿದೆ. ಇದರಿಂದ ಯಾರಿಂದಲೂ ಸಹ ಪರಮಾತ್ಮನು ತಿಳಿಯಲಾರನೆಂದು ಸರ್ವಾದೃಶ್ಯತ್ವವನ್ನೇ ಹೇಳಿದಂತಾಗುತ್ತದೆ. ಅಂದರೆ ಪೃಥಿವ್ಯಾದಿಅಧಿದೈವಾದಿಸರ್ವಾವಿದಿತತ್ವವು ಅದೃಶ್ಯತ್ವ ರೂಪವೇ ಆಗಿರುವುದರಿಂದ ಸಾಮಾನ್ಯವಿಶೇಷಭಾವವನ್ನು ಹೇಳಬೇಕಾಗಿಲ್ಲ.

**प्रकाशः** – "सहैव सन्तं न विजानन्ति देवाः" इत्यत्रेव कैमुत्यलब्धत्वाद्वा,

ಅಥವಾ ಅಂತಃಸ್ಥತ್ವಾಧಿಕರಣದಲ್ಲಿ ಆನಂದಮಯಾಧಿಕರಣವನ್ನು ಆಕ್ಷೇಪ ಮಾಡಿಕೊಂಡಂತೆ ಇಲ್ಲಿಯೂ ತಿಳಿಯಬೇಕು. "ಸಹೈವ ಸಂತಂ ನ ವಿಜಾನಂತಿ ದೇವಾಃ" ಎಂಬುದಾಗಿ ದೇವತೆಗಳೇ ತಮ್ಮ ಜೊತೆಗಿರುವ ಭಗವಂತನನ್ನೇ ತಿಳಿಯಲಾರರೆಂದು ಹೇಳಿದ ಮೇಲೆ ಉಳಿದವರು ತಿಳಿಯುವುದಿಲ್ಲವೆಂದು ಪ್ರತ್ಯೇಕ ಹೇಳಬೇಕೇನು ? ಎಂಬ ಕೈಮುತ್ಯನಾಯದಿಂದ ಸರ್ವಾವಿದಿತತ್ವವನ್ನು ಅಂತಃಸ್ಥತ್ವಾಧಿಕರಣದಲ್ಲಿ ಹೇಳಿದ್ದರು, ಅದರಂತೆ ಪ್ರಕೃತದಲ್ಲಿಯೂ ಪೃಥಿವೀ, ಆಕಾಶ ಮೊದಲಾದ ಯಾವುದೇ ಪದಾರ್ಥಗಳಿಂದಲೂ ಭಗವಂತನು ತಿಳಿಯಲಾರನೆಂದು ಹೇಳಿದಮೇಲೆ ಉಳಿದವರು ತಿಳಿಯುತ್ತಾರೆಂದು ಹೇಳಬೇಕೇನು ? ಎಂಬುದಾಗಿ ಕೈಮುತ್ಯನ್ಯಾಯವನ್ನು ವಿವಕ್ಷಿಸಿದಾಗ ಪೃಥಿವ್ಯಾದ್ಯವಿದಿತತ್ವವು ಅದೃಶ್ಯತ್ವರೂಪವೆಂದೇ ನಿರ್ಣಯವಾಗುತ್ತದೆ. ಇದು ಮೂರನೆಯ ಸಮಾಧಾನ.

**प्रकाशः** – उभयत्रापि अपरिच्छिन्नवैभवस्य विवक्षितत्वाद्वा तदाक्षेपात् ॥

ಅಥವಾ 'ಯತ್ತ ದದ್ರೇಶ್ಯಂ' ಎಂಬ ವಾಕ್ಯಕ್ಕೆ ಭಗವಂತನ ಅಪರಿಚ್ಛಿನ್ನವೈಭವವನ್ನು ಹೇಳುವುದರಲ್ಲೇ ತಾತ್ಪರ್ಯವಿದೆ. ಅದರಂತೆ 'ಯಂ ಪೃಥಿವೀ ನ ವೇದ' ಇತ್ಯಾದಿ ವಾಕ್ಯಗಳಿಗೂ ಭಗವಂತನ ಅಪರಿಚ್ಛಿನ್ನವೈಭವವನ್ನು ಹೇಳುವುದರಲ್ಲೇ ತಾತ್ಪರ್ಯವಿದೆ. ಹೀಗೆ ಎರಡೂ ಶ್ರುತಿಗಳಿಗೆ ಅಪರಿಚ್ಛಿನ್ನ ವೈಭವ

**प्रकाशः – तत्वप्रदीपे च ''–''अदृश्येऽनात्म्ये'' ''सहैव सन्तं न विजानन्ति देवाः'' ''स योऽतोऽश्रुतः'' इत्यादिना अदृश्यत्वादिगुणाः विष्णोरुक्ताः'' इत्यादिपदप्रयोगात्**

ಭಾಷ್ಯಾನುಸಾರವಾಗಿ ತತ್ವಪ್ರದೀಪದಲ್ಲಿಯೂ "ಅದೃಶ್ಯೇಽನಾತ್ಮ್ಯೇ" ಎಂಬ ಆನಂದಮಯಾಧಿಕರಣದ ವಿಷಯವಾಕ್ಯದಿಂದ "ಸಹೈವ ಸಂತಂ ನ ವಿಜಾನಂತಿ ದೇವಾಃ" ಎಂಬ ವಿಷಯವಾಕ್ಯದಿಂದ ಮತ್ತು "ಸ ಯೋಽತೋಽಶ್ರುತಃ" ಎಂಬ ಹಿಂದಿನ ಅಂತರ್ಯಾಮ್ಯಧಿಕರಣದ ವಿಷಯವಾಕ್ಯದಿಂದ ಅದೃಶ್ಯತ್ವಾದಿಗುಣಗಳನ್ನು ವಿಷ್ಣುವಿನಲ್ಲಿ ಈ ಅಧಿಕರಣವು ಸಮರ್ಥಿಸುತ್ತಿದೆ ಎಂದು ಹೇಳಿದ್ದಾರೆ. ಆದ್ದರಿಂದ ಇದೂ ಸಹ ಒಂದು ಸಂಗತಿ ಪ್ರತಿಪಾದಕ ಸಂವಾದ.

**प्रकाशः – टीकायाम् ''अदृश्येऽनात्म्ये'' इति विशिष्योक्तावपि तुल्यन्यायतया प्राप्तां ''पूर्ववददृश्यत्वादिबलेन रूढिं परित्यज्य योगवृत्त्याऽक्षरशब्दो विष्णौ सम्भवति'' इति न्यायविवरणटीकोक्त्या च लब्धां पूर्वसङ्गतिमाह – अत्रेति ।**

ಹಾಗೂ ತತ್ವಪ್ರಕಾಶಿಕೆಯಲ್ಲಿ "ಅದೃಶ್ಯೇಽನಾತ್ಮ್ಯೇ" ಎಂಬುದಾಗಿ ಆನಂದಮಯಾಧಿಕರಣದ ವಿಷಯ-ವಾಕ್ಯವನ್ನಷ್ಟೇ ವಿಶೇಷವಾಗಿ ಹೇಳಿದ್ದಾರೆ. ಆದರೂ ಸಹ ಸಮಾನ ನ್ಯಾಯದಿಂದ ಹಿಂದಿನ ಅಂತರ್ಯಾಮ್ಯಧಿಕರಣದ 'ಸ ಯೋಽತೋಽಶ್ರುತಃ' ಎಂಬ ವಾಕ್ಯವನ್ನೂ ಸಹ ಉಪಲಕ್ಷಣಯಾ ಸ್ವೀಕರಿಸಬೇಕು ಎಂದು ಹೇಳಿದ್ದಾರೆ. ಹಾಗೂ ನ್ಯಾಯವಿವರಣೆ ಟೀಕೆಯಲ್ಲಿ "ಪೂರ್ವವದದೃಶ್ಯತ್ವಾದಿಬಲೇನ ರೂಢಿಂ ಪರಿತ್ಯಜ್ಯ ಯೋಗವೃತ್ತ್ಯಾಽಕ್ಷರಶಬ್ದೋ ವಿಷ್ಣೌ ಸಂಭವತಿ" ಹಿಂದಿನ ಅಧಿಕರಣದಂತೆ ಅಕ್ಷರಶಬ್ದವು ಅದೃಶ್ಯತ್ವಾದಿ ಹೇತುಗಳಿಂದ ರೂಢಿಯನ್ನು ಬಿಟ್ಟು ಯೋಗವೃತ್ತಿಯಿಂದಲೇ ವಿಷ್ಣುವಿನಲ್ಲಿ ಸಮನ್ವಯವಾಗುತ್ತದೆ ಎಂದು ಹೇಳಿರುತ್ತಾರೆ. ಹೀಗೆ, ಭಾಷ್ಯದಲ್ಲಿ ಹೇಳಿದ ಸಾಮಾನ್ಯವಚನ, ತತ್ವಪ್ರದೀಪದಲ್ಲಿನ ಪ್ರಯೋಗಗಳು, ತತ್ವಪ್ರಕಾಶಿಕಾ ವಾಕ್ಯ ಪರ್ಯಾಲೋಚನೆ ಮತ್ತು ನ್ಯಾಯವಿವರಣ ಟೀಕಾವಾಕ್ಯಗಳಿಂದ ಈ ಅಧಿಕರಣಕ್ಕೆ ಹಿಂದಿನ ಅಂತರ್ಯಾಮ್ಯಧಿಕರಣದಿಂದ ಸಂಗತಿಯಿರುತ್ತದೆಂಬುದು ಎಲ್ಲ ರೀತಿಯಿಂದಲೂ ಸ್ಪಷ್ಟವಾಗುತ್ತದೆ. ಇದನ್ನು 'ಅತ್ರ' ಎಂಬ ವಾಕ್ಯದಿಂದ ಹೇಳುತ್ತಿದ್ದಾರೆ.

**प्रकाशः – ननु अदृश्यत्वं सामान्यं, पृथिव्यविदितत्वं विशेषः, तेन कथं तदाक्षेप इति,**

'ಯತ್ತ ದದ್ರೇಶ್ಯಂ' ಎಂಬ ಶ್ರುತಿಯಲ್ಲಿ ಕೇಳಿಸುತ್ತಿರುವ ಅದೃಶ್ಯತ್ವವು ಸಾಮಾನ್ಯರೂಪವಾಗಿವೆ. 'ಯಂ ಪೃಥಿವೀ ನ ವೇದ' ಎಂಬಲ್ಲಿ ಕೇಳಿಸುತ್ತಿರುವ ಪೃಥಿವ್ಯವಿದಿತತ್ವ ರೂಪ ಧರ್ಮವು ವಿಶೇಷ ರೂಪವಾಗಿದೆ. ಹೀಗಿರುವಾಗ ಸಾಮಾನ್ಯವಾದ ಅದೃಶ್ಯತ್ವಾದಿಧರ್ಮವು ವಿಷ್ಣುವಿನಲ್ಲಿ ಇಲ್ಲದ ಕಾರಣ ವಿಶೇಷರೂಪವಾದ ಪೃಥಿವ್ಯವಿದಿತತ್ವ ಎಂಬ ಧರ್ಮವೂ ಸಹ ವಿಷ್ಣುವಿನಲ್ಲಿ ಬರುವುದಿಲ್ಲವೆಂದು ಹೇಗೆ ಹೇಳುತ್ತೀರಿ? ಎರಡೂ ಸಹ ಒಂದೇ ಆಗಿದ್ದಲ್ಲಿ ಹಾಗೇ ಹೇಳಬಹುದಿತ್ತು. ಆದರೆ ಸಾಮಾನ್ಯ ವಿಶೇಷಭಾವವಿರುವುದರಿಂದ ಅದೃಶ್ಯತ್ವವಿಲ್ಲದಿದ್ದರೆ ಪೃಥಿವ್ಯವಿದಿತತ್ವವು ಬರುವುದಿಲ್ಲವೆಂದು ಹೇಳಲಾಗದು.

**प्रकाशः** – मैवं, सर्वादृश्यत्ववति तदेकदेशपृथिव्यविदितत्वस्यापि "मुखनासिकावचनोऽनुनासिकः" इत्यत्र महाभाष्योक्तेन प्रासादवासिन्यायेन सत्त्वाद्वा,

ಈ ಆಕ್ಷೇಪಕ್ಕೆ ನಾಲ್ಕು ಬಗೆಯಲ್ಲಿ ಉತ್ತರಿಸುತ್ತಿದ್ದಾರೆ. ಮೊದಲನೆಯ ಸಮಾಧಾನ ಹೀಗಿದೆ - ಪ್ರಾಸಾದವಾಸಿನ್ಯಾಯದಿಂದ ಸಾಮಾನ್ಯವಿಲ್ಲದಿದ್ದರೆ ವಿಶೇಷವು ಬರುವುದಿಲ್ಲವೆಂಬುದನ್ನು ತಿಳಿಯಬೇಕು. ಅಂದರೆ ಸಕಲ ಪದಾರ್ಥಗಳಿಂದ ತಿಳಿಯಲಾರನೆಂದು ಹೇಳಿದಾಗ ಸರ್ವಪದಾರ್ಥಗಳ ಏಕದೇಶವಾದ ಪೃಥಿವ್ಯಾದಿಗಳಿಂದಲೂ ಸಹ ತಿಳಿಯಲಾರನೆಂದೇ ಅರ್ಥ. ಸಮಗ್ರ ಪ್ರಾಸಾದಕ್ಕೆ ಒಡೆಯನಾದವನು ಅದರ ಏಕದೇಶಕ್ಕೂ ಹೇಗೆ ಒಡೆಯನಾಗಿರುತ್ತಾನೋ ಅದರಂತೆ ಈ ಪ್ರಾಸಾದವಾಸಿನ್ಯಾಯವು "ಮುಖ ನಾಸಿಕಾವಚನೋಽನುನಾಸಿಕಃ" ಎಂಬ ಸೂತ್ರದ ಮಹಾಭಾಷ್ಯದಲ್ಲಿ ಹೇಳಲ್ಪಟ್ಟಿರುತ್ತದೆ.

**प्रकाशः** – पृथिव्याद्यधिदैवादिसर्वाविदितत्वस्य अदृश्यत्वरूपत्वाद्वा,

ಅಥವಾ ಎರಡನೆಯ ಸಮಾಧಾನ ಹೀಗೆ - 'ಯಂ ಪೃಥಿವೀ ನ ವೇದ' 'ಯಮ್ ಆಕಾಶೋ ನ ವೇದ' ಇತ್ಯಾದಿಯಾಗಿ ಅಧಿದೇವಾದಿ ಇಪ್ಪತ್ತೊಂದು ಪ್ರಕರಣಗಳಲ್ಲಿ ಪ್ರತಿಯೊಂದರಿಂದಲೂ ಅವನು ತಿಳಿಯಲಾರನೆಂದು ನಿರೂಪಿಸಲಾಗಿದೆ. ಇದರಿಂದ ಯಾರಿಂದಲೂ ಸಹ ಪರಮಾತ್ಮನು ತಿಳಿಯಲಾರನೆಂದು ಸರ್ವಾದೃಶ್ಯತ್ವವನ್ನೇ ಹೇಳಿದಂತಾಗುತ್ತದೆ. ಅಂದರೆ ಪೃಥಿವ್ಯಾದಿಅಧಿದೈವಾದಿಸರ್ವಾವಿದಿತತ್ವವು ಅದೃಶ್ಯತ್ವ ರೂಪವೇ ಆಗಿರುವುದರಿಂದ ಸಾಮಾನ್ಯವಿಶೇಷಭಾವವನ್ನು ಹೇಳಬೇಕಾಗಿಲ್ಲ.

**प्रकाशः** – "सहैव सन्तं न विजानन्ति देवाः" इत्यत्रेव कैमुत्यलब्धत्वाद्वा,

ಅಥವಾ ಅಂತಃಸ್ಥತ್ವಾಧಿಕರಣದಲ್ಲಿ ಆನಂದಮಯಾಧಿಕರಣವನ್ನು ಆಕ್ಷೇಪ ಮಾಡಿಕೊಂಡಂತೆ ಇಲ್ಲಿಯೂ ತಿಳಿಯಬೇಕು. "ಸಹೈವ ಸಂತಂ ನ ವಿಜಾನಂತಿ ದೇವಾಃ" ಎಂಬುದಾಗಿ ದೇವತೆಗಳೇ ತಮ್ಮ ಜೊತೆಗಿರುವ ಭಗವಂತನನ್ನೇ ತಿಳಿಯಲಾರರೆಂದು ಹೇಳಿದ ಮೇಲೆ ಉಳಿದವರು ತಿಳಿಯುವುದಿಲ್ಲವೆಂದು ಪ್ರತ್ಯೇಕ ಹೇಳಬೇಕೇನು ? ಎಂಬ ಕೈಮುತ್ಯನಾಯದಿಂದ ಸರ್ವಾವಿದಿತತ್ವವನ್ನು ಅಂತಃಸ್ಥತ್ವಾಧಿಕರಣದಲ್ಲಿ ಹೇಳಿದ್ದರು, ಅದರಂತೆ ಪ್ರಕೃತದಲ್ಲಿಯೂ ಪೃಥಿವೀ, ಆಕಾಶ ಮೊದಲಾದ ಯಾವುದೇ ಪದಾರ್ಥಗಳಿಂದಲೂ ಭಗವಂತನು ತಿಳಿಯಲಾರನೆಂದು ಹೇಳಿದಮೇಲೆ ಉಳಿದವರು ತಿಳಿಯುತ್ತಾರೆಂದು ಹೇಳಬೇಕೇನು ? ಎಂಬುದಾಗಿ ಕೈಮುತ್ಯನ್ಯಾಯವನ್ನು ವಿವಕ್ಷಿಸಿದಾಗ ಪೃಥಿವ್ಯಾದ್ಯವಿದಿತತ್ವವು ಅದೃಶ್ಯತ್ವರೂಪವೆಂದೇ ನಿರ್ಣಯವಾಗುತ್ತದೆ. ಇದು ಮೂರನೆಯ ಸಮಾಧಾನ.

**प्रकाशः** – उभयत्रापि अपरिच्छिन्नवैभवस्य विवक्षितत्वाद्वा तदाक्षेपात् ॥

ಅಥವಾ 'ಯತ್ತ ದದ್ರೇಶ್ಯಂ' ಎಂಬ ವಾಕ್ಯಕ್ಕೆ ಭಗವಂತನ ಅಪರಿಚ್ಛಿನ್ನವೈಭವವನ್ನು ಹೇಳುವುದರಲ್ಲೇ ತಾತ್ಪರ್ಯವಿದೆ. ಅದರಂತೆ 'ಯಂ ಪೃಥಿವೀ ನ ವೇದ' ಇತ್ಯಾದಿ ವಾಕ್ಯಗಳಿಗೂ ಭಗವಂತನ ಅಪರಿಚ್ಛಿನ್ನವೈಭವವನ್ನು ಹೇಳುವುದರಲ್ಲೇ ತಾತ್ಪರ್ಯವಿದೆ. ಹೀಗೆ ಎರಡೂ ಶ್ರುತಿಗಳಿಗೆ ಅಪರಿಚ್ಛಿನ್ನ ವೈಭವ

ಉಪಪಾದನದಲ್ಲಿ ತಾತ್ಪರ್ಯವಿರುವುದರಿಂದ ಆದರ ಆಧಾರದಿಂದ ಪೃಥಿವ್ಯಾದ್ಯವಿದಿತತ್ವದಿಂದ ಸರ್ವಾದೃಶ್ಯತ್ವವನ್ನು ಆಕ್ಷೇಪಿಸಲಾಗಿದೆ. ಇದು ನಾಲ್ಕನೆಯ ಸಮಾಧಾನ.

**प्रकाशः** – यदत्रोभाभ्यामुक्तं – प्राक् प्रधानस्य द्रष्टृत्वाद्ययोगेन निरासेऽपीह तथा बाधकाभावाददृश्यत्वादिकं प्रधानस्य स्यादिति शङ्कोदयात्सङ्गतिरिति, तन्न,

ಈ ಸಂದರ್ಭದಲ್ಲಿ ಇಬ್ಬರು ಪರವಾದಿಗಳು ಈ ಅಧಿಕರಣಕ್ಕೆ ಹೀಗೆ ಸಂಗತಿ ಹೇಳುತ್ತಾರೆ - ಹಿಂದಿನ ಅಧಿಕರಣದಲ್ಲಿ ದ್ರಷ್ಟೃತ್ವಾದಿ ಧರ್ಮಗಳು ಶ್ರುತಿಯಲ್ಲಿ ಕೇಳಿಸುತ್ತಿರುವುದರಿಂದ ಪ್ರಧಾನಕ್ಕೆ ಅಂತರ್ಯಾಮಿತ್ವವನ್ನು ಸಮರ್ಥಿಸಲು ಆಗಲಿಲ್ಲ. ಆದ್ದರಿಂದ ಶ್ರುತಿಗೆ ಪ್ರಧಾನಪರತ್ವವನ್ನು ನಿರಾಕರಿಸಲಾಯಿತು. ಆದರೆ ಅಂತಹ ದ್ರಷ್ಟೃತ್ವಾದಿಬಾಧಕಗಳು ಈ ಅಧಿಕರಣದಲ್ಲಿ ಕೇಳಿಸದ ಕಾರಣ ಪ್ರಧಾನಕ್ಕೆ ಅದೃಶ್ಯತ್ವಾದಿಧರ್ಮಗಳನ್ನು ಹೇಳಬಹುದಲ್ಲವೇ? ಎಂಬ ಶಂಕೋತ್ಥಾಪನ ಪೂರ್ವಕವಾಗಿ ಸಂಗತಿಯನ್ನು ಹೇಳಿರುತ್ತಾರೆ.

ಇದು ಸರಿಯಲ್ಲ.

**प्रकाशः** – साक्षात्सौत्रहेत्वाक्षेपसम्भवेनेदृशस्यानादरणीयत्वादिति भावेनोक्तं – **ब्रह्मत्वे हेतूकृतस्येति ।**

ಏಕೆಂದರೆ ನೇರವಾಗಿ ಸೂತ್ರದಲ್ಲಿ ಹೇಳಲ್ಪಟ್ಟ ಹೇತುವನ್ನೇ ಆಕ್ಷೇಪ ಮಾಡಲು ಬರುವಾಗ ಅದೃಶ್ಯತ್ವದಿಂದ ಆಕ್ಷೇಪ ಮಾಡುವುದು ಸರಿಯಾಗುವುದಿಲ್ಲ. ಈ ಅಭಿಪ್ರಾಯದಿಂದ ಗ್ರಂಥಕಾರರು 'ಬ್ರಹ್ಮತ್ವೇ ಹೇತೂಕೃತಸ್ಯ' ಎಂದು ಹೇಳಿರುತ್ತಾರೆ.

**प्रकाशः** – एतेनैव प्राग् हेतूकृतेन अदृश्यत्वरूपब्रह्मधर्मेण ब्रह्म किं नाक्षरशब्देनोच्यते इत्याशङ्काया अप्यनवकाशः । ''अदृश्येऽनात्म्ये'' इत्यादिटीकादि तु फलपरमिति भावः ।

ಹೀಗೆ ಹೇಳಿದ್ದರಿಂದ ಮತ್ತೊಂದು ಶಂಕೆಯನ್ನು ನಿರಾಕರಿಸಿದಂತಾಯಿತು. ಹಿಂದೆ ಬ್ರಹ್ಮನ ವಿಷಯದಲ್ಲಿ ಅದೃಶ್ಯತ್ವವೆಂಬ ಧರ್ಮವನ್ನು ಹೇತುವನ್ನಾಗಿ ಹೇಳಲಾಯಿತು. ಅಂತಹ ಹೇತುವನ್ನು ಪ್ರಕೃತ ಅಧಿಕರಣದಲ್ಲಿ ಆಕ್ಷೇಪಿಸಲಾಗಿದೆ. ಆದ್ದರಿಂದ ಅದೃಶ್ಯತ್ವವೆಂಬ ಬ್ರಹ್ಮನ ಧರ್ಮದಿಂದ ಬ್ರಹ್ಮನು ಅಕ್ಷರ ಶಬ್ದವಾಚ್ಯನಾಗಬಹುದೆಂದು ಹೇಳಲು ಸಾಧ್ಯವಿಲ್ಲ.

ವಸ್ತುತಃ ಹಿಂದಿನ ಅಧಿಕರಣದಿಂದಲೇ ಸಂಗತಿಯನ್ನು ತೋರಿಸಬೇಕು. ಆದರೆ ತತ್ವಪ್ರಕಾಶಿಕೆಯಲ್ಲಿರುವ ''ಅದೃಶ್ಯೇಽನಾತ್ಮ್ಯೇ'' ಇತ್ಯಾದಿ ವಾಕ್ಯವು ಆನಂದಮಯಾಧಿಕರಣದಿಂದ ಸಂಗತಿಯನ್ನು ತೋರಿಸುವುದಕ್ಕಾಗಿ ಹೊರಟಿರುವುದಲ್ಲ ಹೊರತು, ಈ ಅಧಿಕರಣದ ಫಲವನ್ನು ಹೇಳಲು ಹೊರಟಿದೆ ಎಂದು ತಿಳಿಯಬೇಕು.

ಪರಿಪೂರ್ಣಚಂದ್ರಿಕಾ

**प्रकाशः** – ननु पूर्वं तद्धर्मभिलापाभावेन प्रधाननिरासेऽपि नेह तथा, पृथिव्यादिदृष्टान्तपूर्वं विश्वोपादानत्वरूपतद्धर्माभिलापादिति वा, पूर्वत्र अविदितत्व-रूपादृश्यत्वादिबाधकेन शरीरशब्दे रूढित्यागवदत्र अक्षरशब्दे नादृश्यत्वादिलिङ्गेन रूढित्यागः, ''अक्षरात्परः परः'' इत्युत्कर्षावधित्वश्रवणादिति वा पूर्ववैषम्येणापि सङ्गतिरस्तीति चेत्,

ಆಕ್ಷೇಪ - ಗ್ರಂಥಕಾರರು ಮತ್ತೊಂದು ಬಗೆಯಲ್ಲಿಯೂ ಸಂಗತಿಯನ್ನು ತೋರಿಸಬಹುದಿತ್ತು. ಈ ಹಿಂದಿನ ಅಧಿಕರಣದಲ್ಲಿ ಪ್ರಧಾನದ ಧರ್ಮಗಳು ಕೇಳಿಸದ ಕಾರಣ ಪ್ರಧಾನ ಪೂರ್ವಪಕ್ಷವನ್ನು ನಿರಾಕರಿಸಿದ್ದು ಯುಕ್ತವಾಗಿದೆ. ಆದರೆ ಇಲ್ಲಿ ಹಾಗೆ ಪ್ರಧಾನ ಪಕ್ಷವನ್ನು ನಿರಾಕರಿಸಲು ಸಾಧ್ಯವಿಲ್ಲ. ಏಕೆಂದರೆ "ಯಥಾ ಪೃಥಿವ್ಯಾತ್ ಓಷಧಯಃ ಸಂಭವಂತಿ ಯಥಾ ಸತಃ ಪುರುಷಾತ್ ಕೇಶಲೋಮಾನಿ ತಥಾಕ್ಷರಾತ್ ಸಂಭವಂತೀಹ ವಿಶ್ವಂ' ಎಂಬುದಾಗಿ 'ಯತ್ತ ದದ್ರೇಶ್ಯಂ' ಎಂಬ ವಾಕ್ಯದ ಮುಂದಿನ ವಾಕ್ಯದಲ್ಲಿ ಪೃಥಿವ್ಯಾದಿದೃಷ್ಟಾಂತವನ್ನು ನೀಡುತ್ತಾ ವಿಶ್ವೋಪಾದಾನತ್ವವೆಂಬ ಪ್ರಕೃತಿಯ ಧರ್ಮವನ್ನು ಹೇಳಲಾಗಿದೆ. ಇಂತಹ ಪ್ರಕೃತಿಯ ಅಸಾಧಾರಣ ಧರ್ಮದಿಂದ ಪ್ರಕೃತಿಯೇ ಅದೃಶ್ಯತ್ವಾದಿಗುಣವುಳ್ಳದ್ದೆಂದು ಪೂರ್ವಪಕ್ಷ ಮಾಡಬಹುದು.

ಅಥವಾ ಈ ಹಿಂದೆ ಅವಿದಿತತ್ವರೂಪವಾದ ಅದೃಶ್ಯತ್ವವೆಂಬ ಬಾಧಕಧರ್ಮವು ಇರುವ ಕಾರಣ ಶರೀರಶಬ್ದಕ್ಕೆ ದೇಹವೆಂಬ ರೂಢ್ಯರ್ಥವನ್ನು ಬಿಟ್ಟು ಕೇವಲ ನಿಯಮ್ಯ ಎಂಬರ್ಥವನ್ನು ಸ್ವೀಕರಿಸಲಾಯಿತು. ಆದರೆ ಇಲ್ಲಿ ಕೇಳಿಸುತ್ತಿರುವ ಅಕ್ಷರ ಶಬ್ದಕ್ಕೆ ಅದೃಶ್ಯತ್ವವೆಂಬ ಲಿಂಗದಿಂದ ರೂಢ್ಯರ್ಥವನ್ನು ಬಿಡಲು ಕಾರಣವಿಲ್ಲ. ಏಕೆಂದರೆ 'ಅಕ್ಷರಾತ್ಪರತಃ ಪರಃ' ಎಂಬುದಾಗಿ ಉತ್ಕರ್ಷಕ್ಕೆ ಅವಧಿಯನ್ನು ಹೇಳಿರುವುದರಿಂದ ಅಕ್ಷರ ಶಬ್ದದಿಂದ ವಿಷ್ಣುವನ್ನು ಸ್ವೀಕರಿಸಿದರೆ ಉತ್ಕರ್ಷ ಅವಧಿತ್ವವೇ ವಿಷ್ಣುವಿಗೆ ಬಾರದಿರಬೇಕಾದೀತು. ಆದ್ದರಿಂದ ಪ್ರಕೃತಿಯೇ ಅದೃಶ್ಯತ್ವಾದಿಗುಣವುಳ್ಳ ಅಕ್ಷರ ಎನಿಸುತ್ತದೆ. ಹೀಗೆ ಎರಡು ಬಗೆಯಲ್ಲಿ ಹಿಂದಿನ ಅಧಿಕರಣಕ್ಕಿಂತ ವಿಲಕ್ಷಣವಾದ ಮತ್ತು ಸುದೃಢವಾದ ಪೂರ್ವಪಕ್ಷವನ್ನು ಮಾಡಬಹುದಾದ್ದರಿಂದ ಸಂಗತಿಯನ್ನು ತೋರಿಸ ಬಹುದಲ್ಲವೇ?

**प्रकाशः** – सत्यं, प्रधानहेत्वाक्षेपसम्भवे तस्यैव वाच्यत्वात्, सिद्धान्तशङ्काबीज-निरासार्थत्वाच्च पूर्वहेत्वाक्षेप एवोक्तः ।

ಸಮಾಧಾನ - ಹೌದು, ನೀವು ಹೇಳಿದಂತೆಯೂ ಸಂಗತಿಯನ್ನು ತೋರಿಸಬಹುದಿತ್ತು. ಆದರೆ ಪ್ರಧಾನ ಹೇತುವಾಗಿರುವ ಸೂತ್ರದಲ್ಲಿ ಹೇಳಲ್ಪಟ್ಟ ಅದೃಶ್ಯತ್ವವೆಂಬ ಧರ್ಮವನ್ನೇ ಆಕ್ಷೇಪ ಮಾಡಲು ಬರುವಾಗ ಅದರ ಮೂಲಕವಾಗಿಯೇ ಸಂಗತಿಯನ್ನು ಹೇಳಬೇಕು; ಹೊರತು ಸೂತ್ರದಲ್ಲಿ ಹೇಳಲ್ಪಡದ ವಿಶ್ವೋಪಾದಾನತ್ವಾದಿ ಧರ್ಮಗಳನ್ನು ಆಕ್ಷೇಪಿಸುವುದು ಪ್ರಧಾನವಾಗುವುದಿಲ್ಲ. ಮತ್ತು ಕೇವಲ ಅದೃಶ್ಯತ್ವಧರ್ಮದಿಂದಲೇ ಸಿದ್ಧಾಂತಿಯು ವಿಷ್ಣುವನ್ನು ಅಕ್ಷರಶಬ್ದವಾಚ್ಯನೆಂದು ಸಮರ್ಥಿಸುತ್ತಾನೆ. ಇಂತಹ ಸಿದ್ಧಾಂತಿಗೆ ಮೂಲಭೂತವಾದ ಅದೃಶ್ಯತ್ವವೆಂಬ ಧರ್ಮವನ್ನೇ ಆಕ್ಷೇಪಿಸಿದಾಗ ಪ್ರಬಲವಾದ ಸಂಗತಿಯನ್ನು

ತೋರಿಸಿದಂತಾಗುತ್ತದೆ. ಆದಕ್ಕೋಸ್ಕರ ಗ್ರಂಥಕಾರರು ಅದೃಶ್ಯತ್ವಧರ್ಮರೂಪಹೇತ್ವಾಕ್ಷೇಪದಿಂದಲೇ ಸಂಗತಿಯನ್ನು ಹೇಳಿರುತ್ತಾರೆ.

**प्रकाशः** – विषयसंशयटीकां व्यनक्ति – अत्रेति । टीकायामेव अपेक्षितसमग्रविषयवाक्यं व्यक्तम् । यद्यपि गुणजातमेवात्र विषयः, लिङ्गपादत्वात्, टीकायां तथैवोक्तेश्च ।

ವಿಷಯ ಹಾಗೂ ಸಂಶಯಗಳನ್ನು ನಿರೂಪಿಸುವ ಟೀಕೆಯನ್ನು ವ್ಯಾಖ್ಯಾನಿಸುತ್ತಿದ್ದಾರೆ. 'ಅತ್ರ' ಇತ್ಯಾದಿ ಗ್ರಂಥದಿಂದ. ಟೀಕೆಯಲ್ಲಿಯೇ ಅಪೇಕ್ಷಿತವಾದ ಸಮಗ್ರವಿಷಯವಾಕ್ಯವನ್ನು ಉಲ್ಲೇಖಿಸಿರುತ್ತಾರೆ. ಆದ್ದರಿಂದ ಗ್ರಂಥಕಾರರು ಇಲ್ಲಿ ಪ್ರತ್ಯೇಕವಾಗಿ ಅದನ್ನು ಉಲ್ಲೇಖಿಸಿಲ್ಲ.

ವಸ್ತುತಃ ಈ ಅಧಿಕರಣದಲ್ಲಿ ಭಗವಂತನ ಗುಣಗಳನ್ನಷ್ಟೇ ಸಮನ್ವಯ ಮಾಡುತ್ತಿದ್ದಾರೆ. ಏಕೆಂದರೆ ಲಿಂಗಪಾದವಾದ್ದರಿಂದ. ಟೀಕೆಯಲ್ಲಿಯೂ ಸಹ ಅನೇಕ ಲಿಂಗಗಳ ಸಮನ್ವಯವೇ ಈ ಅಧಿಕರಣದ ಉದ್ದೇಶವೆಂದು ಹೇಳಿದ್ದಾರೆ. ಹೀಗಿರುವಾಗ ಅದೃಶ್ಯತ್ವಾದಿಗುಣವುಳ್ಳ ಅಕ್ಷರಶಬ್ದವಾಚ್ಯನು ವಿಷ್ಣುವೆಂದು ಏಕೆ ಸಮರ್ಥಿಸುತ್ತಿದ್ದೀರಿ?

**प्रकाशः** – तथाऽप्यक्षरस्य विशेष्यत्वात्तस्य चोपादानत्वात् न ब्रह्मेति पूर्वपक्षयुक्तिं सूचयितुं तथोक्तम् । अत एव टीकायाम् अक्षरशब्दसाहित्येन अन्यत्रप्रसिद्धिरदृश्यत्वादिलिङ्गानामुक्ता ।

ಈ ಪ್ರಶ್ನೆಗೆ ಅವಕಾಶವಿಲ್ಲ. ಅದೃಶ್ಯತ್ವಾದಿಗುಣಗಳುಳ್ಳವನು ಅಕ್ಷರನೇ ಆಗಿದ್ದಾನೆ. ಅನೇಕ ಗುಣಗಳಿಗೆ ಅಕ್ಷರನು ವಿಶೇಷ್ಯನಾದ್ದರಿಂದ ಇಲ್ಲಿ ಅಕ್ಷರಶಬ್ದದ ಸಮನ್ವಯವನ್ನು ಸ್ವೀಕರಿಸಲಾಗಿದೆ. ಅಂತಹ ಅಕ್ಷರವು ಉಪಾದಾನವೆಂದು ಹೇಳಲ್ಪಟ್ಟಿದ್ದರಿಂದ ಬ್ರಹ್ಮನು ಅದೃಶ್ಯನಲ್ಲ ಎಂಬ ಪೂರ್ವಪಕ್ಷಯುಕ್ತಿಯನ್ನು ಸೂಚಿಸುವುದಕ್ಕಾಗಿ ಅಕ್ಷರನನ್ನು ಸ್ವೀಕರಿಸಿದ್ದಾರೆ. ಆದ್ದರಿಂದಲೇ ಟೀಕೆಯಲ್ಲಿ ಅಕ್ಷರಶಬ್ದ ಸಹಿತವಾಗಿಯೇ ಅದೃಶ್ಯತ್ವಾದಿಲಿಂಗಗಳಿಗೆ ಅನ್ಯತ್ರಪ್ರಸಿದ್ಧಿಯನ್ನು ಹೇಳಿದ್ದಾರೆ.

**प्रकाशः** – नन्वेवमक्षरनामैव समन्वीयताम् । पादसङ्गतिस्तु उत्तराधिकरण इव अनेकलिङ्गसमन्वयार्थत्वात् फलतो भविष्यति । उपादानत्वादक्षरं न ब्रह्मेति पूर्वपक्षश्च ऋजुः । उपादानत्वादक्षरस्यान्यत्वेन तद्विशेषणत्वाद् गुणजातमप्यन्यस्येति पूर्वपक्षस्तु वक्रः –

ಶಂಕಾ - ಎಲ್ಲಾ ಗುಣಗಳು ಅಕ್ಷರನಲ್ಲಿ ವಿಶೇಷಣವಾಗಿರುವುದಾದರೆ ಅಕ್ಷರಶಬ್ದವನ್ನೇ ಈ ಅಧಿಕರಣದಲ್ಲಿ ಸಮನ್ವಯ ಮಾಡಬಹುದಲ್ಲವೇ? ಹೀಗೆ ಅಕ್ಷರ ಶಬ್ದವನ್ನು ಸಮನ್ವಯ ಮಾಡಿದಾಗ ಪಾದಸಂಗತಿಯು ಬೆಳೆಯುವುದಿಲ್ಲವೆಂಬ ಆತಂಕಕ್ಕೆ ಅವಕಾಶವಿಲ್ಲ. ಮುಂದಿನ ವೈಶ್ವಾನರಾಧಿಕರಣದಲ್ಲಿ

'ವೈಶ್ವಾನರ' ಎಂಬ ಒಂದು ನಾಮದ ಸಮನ್ವಯದಿಂದ ಅನೇಕ ಲಿಂಗಗಳ ಸಮನ್ವಯವು ಸಿದ್ಧವಾಗುವಂತೆ ಇಲ್ಲಿಯೂ ಸಹ ಒಂದು ಅಕ್ಷರ ನಾಮದ ಸಮನ್ವಯದಿಂದ ಅನೇಕ ಲಿಂಗಗಳ ಸಮನ್ವಯವಾಗಿ ಫಲತಃ ಪಾದಸಂಗತಿಯು ಸಿದ್ಧವಾಗುತ್ತವೆ. ಮತ್ತು ಅಕ್ಷರವು ಉಪಾದಾನವಾಗಿರುವುದರಿಂದ ಅಕ್ಷರನು ಬ್ರಹ್ಮನಲ್ಲ ಎಂಬ ಪೂರ್ವಪಕ್ಷ ಮಾಡುವುದೂ ಸಹ ನೇರವಾದ ಮಾರ್ಗ. ಒಂದು ವೇಳೆ ಗುಣಗಳ ಸಮನ್ವಯವೆಂದು ಹೇಳಿದರೆ ವಕ್ರವಾದ ಪೂರ್ವಪಕ್ಷವನ್ನು ತೋರಿಸಿದಂತಾಗುತ್ತದೆ. ಏಕೆಂದರೆ ಉಪಾದಾನವಾಗಿರುವ ಅಕ್ಷರವು ಬೇರೆಯಾಗಿದೆ. ಅದರ ವಿಶೇಷಣವಾಗಿರುವ ಗುಣಗಳೂ ಭಿನ್ನನಾದವನಿಗೇ ಯುಕ್ತ. ಹೀಗಿರುವಾಗ ಅಕ್ಷರವು ಉಪಾದಾನವಾದ ಮಾತ್ರದಿಂದ ಗುಣಗಳು ಬ್ರಹ್ಮನಲ್ಲಿವೆ ಎಂದು ಏಕೆ ಹೇಳಬಾರದು ? ಎಂಬುದಾಗಿ ಗೊಂದಲವಾಗುತ್ತದೆ. ಅದಕ್ಕೋಸ್ಕರ ಅಕ್ಷರಶಬ್ದದ ಸಮನ್ವಯ ಮಾಡುವುದೇ ಎಲ್ಲಾ ರೀತಿಯಿಂದಲೂ ಸೂಕ್ತವಾಗಿದೆಯಲ್ಲವೇ?

**प्रकाशः** – इति चेन्न, अक्षरशब्दसमन्वयस्याप्यक्षराधिकरणे सेत्स्यमानत्वात् । नच तेनैवेदं गतार्थं, परत्वावधित्वादिना बाधकेन तस्येहापवादेन पूर्वपक्षकरणात् ।

ಇದು ತಪ್ಪು. ಏಕೆಂದರೆ ಅಕ್ಷರ ಶಬ್ದದ ಸಮನ್ವಯವನ್ನೂ ಸಹ ಮುಂದೆ ಅಕ್ಷರಾಧಿಕರಣದಲ್ಲಿ ಮಾಡಿಯೇ ಮಾಡುತ್ತಾರೆ. ಆದ್ದರಿಂದ ಪ್ರತ್ಯೇಕವಾಗಿ ಇಲ್ಲಿ ಅಕ್ಷರಶಬ್ದದ ಸಮನ್ವಯದ ಅವಶ್ಯಕತೆ ಇರುವುದಿಲ್ಲ. ಹಾಗಾದರೆ ಮೂರನೇ ಪಾದದಲ್ಲಿರುವ ಅಕ್ಷರಾಧಿಕರಣದಿಂದಲೇ ಈ ಅಧಿಕರಣವು ಗತಾರ್ಥವಾಯಿತಲ್ಲವೇ? ಎಂದು ಪ್ರಶ್ನಿಸಬಾರದು. ಪರತ್ವ, ಅವಧಿತ್ವ ಮೊದಲಾದ ಬಾಧಕಗಳಿರುವುದರಿಂದ ಅದನ್ನು (ಅಕ್ಷರಾಧಿಕರಣವನ್ನು) ಅಪವಾದಿಸಿ ಇಲ್ಲಿ ಪೂರ್ವಪಕ್ಷ ಮಾಡಲಾಗಿದೆ.

**प्रकाशः** – अन्यत्रासमन्वितगुणजातसमन्वयस्यैवेह कार्यत्वात् । अस्मिन् पादे अन्यसाहित्येनैव अन्यत्रप्रसिद्धेराश्रितत्वात्, गुणसमन्वये च पूर्वसङ्गतेः साक्षाल्लाभाच्च गुणजातमेवात्र चिन्तितम् । **प्रकृत्यादीति** । चिदचित्प्रकृतिविरिञ्चरुद्रा इत्यर्थः ।

ಬೇರೆ ಅಧಿಕರಣಗಳಲ್ಲಿ ಸಮನ್ವಯ ಮಾಡದಿರುವ ಗುಣಗಳ ಸಮೂಹವನ್ನೇ ಇಲ್ಲಿ ಸಮನ್ವಯ ಮಾಡಬೇಕು. ಮತ್ತು ಈ ಪಾದದಲ್ಲಿ ಇರುವ ಪ್ರತಿಯೊಂದು ಅಧಿಕರಣಗಳಲ್ಲಿಯೂ ಮತ್ತೊಂದು ಶಬ್ದದ ಸಾಹಿತ್ಯದಿಂದ ಲಿಂಗಗಳಿಗೆ ಅನ್ಯತ್ರಪ್ರಸಿದ್ಧಿಯನ್ನು ಆಶ್ರಯಿಸಲಾಗಿದೆ. ಅದರಂತೆ ಈ ಅಧಿಕರಣದಲ್ಲಿಯೂ ಅಕ್ಷರಶಬ್ದದ ಸಾಹಿತ್ಯದಿಂದ ಅದೃಶ್ಯತ್ವಧರ್ಮಕ್ಕೆ ಅನ್ಯತ್ರಪ್ರಸಿದ್ಧಿಯನ್ನು ಆಶ್ರಯಿಸಲಾಗಿದೆ. ಆದ್ದರಿಂದ ಪ್ರತಿಯೊಂದು ಅಧಿಕರಣಗಳ ಆನುಪೂರ್ವೀಗಾಗಿ ಅದೃಶ್ಯತ್ವಾದಿಗುಣಗಳ ಸಮನ್ವಯವೇ ಈ ಅಧಿಕರಣದಲ್ಲಿ ಯುಕ್ತವಾಗುತ್ತವೆ. ಮತ್ತು ಅದೃಶ್ಯತ್ವಾದಿಗುಣಗಳ ಸಮನ್ವಯವನ್ನು ಮಾಡುವುದರಿಂದ ಹಿಂದಿನ ಅಧಿಕರಣದಿಂದ ಸಂಗತಿಯು ನೇರವಾಗಿ ದೊರೆಯುತ್ತದೆ. ಆದ್ದರಿಂದ ಅನೇಕ ಗುಣಗಳ ಸಮನ್ವಯವೇ ಈ ಅಧಿಕರಣದ ಉದ್ದೇಶವೆಂದು ತಿಳಿಯಬೇಕು.

ಗ್ರಂಥದಲ್ಲಿರುವ ಪ್ರಕೃತ್ಯಾದಿ ಎಂಬ ಪದಕ್ಕೆ ಚಿತ್‌ಪ್ರಕೃತಿ, ಅಚಿತ್‌ಪ್ರಕೃತಿ, ಬ್ರಹ್ಮ, ರುದ್ರ ಮೊದಲಾದವರು ಎಂದರ್ಥ.

ಅದೃಶ್ಯತ್ವಾಧಿಕರಣ (೧-೨-೬)

**प्रकाशः** – यद्यप्यत्र टीकायाम् ''अक्षरात्सम्भवतीह विश्वम्'' इति कारणवाक्यस्याक्षरब्रह्मशब्दानां विष्णाववकाशमाशङ्क्य परत्वावधित्वश्रवणेनोज्जीवनात्, तदनुरोधेन विष्णुरिति चिन्तानन्तरं कारणवाक्यस्याक्षरब्रह्मेशशब्दाः किं प्रकृत्यादिपरा अथ विष्णुपरा इति चिन्ता प्रदर्शनीया ।

ಶಂಕಾ - ಟೀಕೆಯಲ್ಲಿ 'ಅಕ್ಷರಾತ್ಸಂಭವತೀಹ ವಿಶ್ವಮ್'' ಎಂಬುದಾಗಿ ಕಾರಣವಾಕ್ಯದಲ್ಲಿರುವ ಅಕ್ಷರ ಬ್ರಹ್ಮ ಮೊದಲಾದ ಶಬ್ದಗಳಿಗೆ ವಿಷ್ಣುವಿನಲ್ಲಿ ಅವಕಾಶವನ್ನು ಆಶಂಕಿಸಿ ಪರತ್ವಾವಧಿತ್ವವು ಕೇಳಿಸುತ್ತಿರುವುದರಿಂದ ಅಕ್ಷರ, ಬ್ರಹ್ಮ ಮೊದಲಾದ ಶಬ್ದಗಳು ವಿಷ್ಣುವಿನಲ್ಲಿ ಬರುವುದಿಲ್ಲವೆಂದು ಪೂರ್ವಪಕ್ಷವನ್ನು ಉಜ್ಜೀವನಗೊಳಿಸಿದ್ದಾರೆ. ಆದ್ದರಿಂದ ಅದಕ್ಕೆ ಅನುಸಾರಿಯಾಗಿ ಪ್ರಕೃತ ಗ್ರಂಥಕಾರರು ವಿಷ್ಣುಃ ಎಂಬ ಚಿಂತೆಯ ಅನಂತರ ಕಾರಣವಾಕ್ಯದಲ್ಲಿರುವ ಅಕ್ಷರ, ಬ್ರಹ್ಮ, ಈಶ ಮೊದಲಾದ ಶಬ್ದಗಳು ಪ್ರಕೃತ್ಯಾದಿಗಳನ್ನು ಪ್ರತಿಪಾದಿಸುತ್ತವೋ? ಅಥವಾ ವಿಷ್ಣುವನ್ನು ಪ್ರತಿಪಾದಿಸುತ್ತವೋ ಎಂಬ ಸಂಶಯಕೋಟಿಯನ್ನು ತೋರಿಸಬೇಕಿತ್ತು. ಇದನ್ನು ಏಕೆ ತೋರಿಸಿಲ್ಲ?

**प्रकाशः** – तथाऽपि तुल्यन्यायतया सा चिन्ता स्पष्टेति वा,

ಸಮಾಧಾನ - ಹೌದು, ಸಮಾನನ್ಯಾಯದಿಂದ ಈ ಚಿಂತೆಯನ್ನು ಶಿಷ್ಯಂದಿರೇ ಸ್ವತಃ ಮಾಡಿಕೊಳ್ಳಬೇಕೆಂದು ಸ್ಪಷ್ಟವಾಗಿರುವುದರಿಂದ ಗ್ರಂಥಕಾರರು ಉಲ್ಲೇಖಿಸಿಲ್ಲ. ಗ್ರಂಥಕಾರರು ಹೇಳದಿದ್ದರೂ ಇದನ್ನು ಇಟ್ಟುಕೊಳ್ಳಬೇಕು.

**प्रकाशः** – वाक्यशेषस्थाक्षरस्य परत्वावधित्वेन निकृष्टत्वे तदनन्यप्राचीनाक्षरस्यापि न ब्रह्मत्वमिति हेतुहेतुमद्भावस्येव प्राचीनकारणवाक्यस्थब्रह्मेशशब्दयोः न ब्रह्मपरत्वमित्यत्र स्पष्टं हेतुहेतुमद्भावाप्रतीतेरक्षरस्यापि अब्रह्मत्वात्तद्युक्तकारणवाक्यस्य तत्समानाधिकरणब्रह्मेशशब्दयोरपि न ब्रह्मपरत्वमिति अक्षरस्य अब्रह्मत्वद्वारैव कारणवाक्यादेरब्रह्मपरत्वोक्त्यवश्यम्भावाद्वा,

ಸಮಾಧಾನಾಂತರ - ಅಥವಾ ಒಂದು ವೇಳೆ 'ಅಕ್ಷರಾತ್ಪರತಃ ಪರಃ' ಎಂಬ ವಾಕ್ಯಶೇಷದಲ್ಲಿ ಇರುವ ಅಕ್ಷರವು ಪರತ್ವಕ್ಕೆ ಅವಧಿಯಾದ ವಸ್ತುವಿಗಿಂತ ನಿಕೃಷ್ಟವಾಗಿದೆಯೆಂದು ಹೇಳಿದರೆ. ಈ ವಾಕ್ಯಶೇಷದ ಮೊದಲಿರುವ 'ಅಕ್ಷರಾತ್ಸಂಭವತೀಹ ವಿಶ್ವಮ್'' ಎಂಬಲ್ಲಿರುವ ವಾಕ್ಯಶೇಷದಲ್ಲಿರುವ ಅಕ್ಷರದಿಂದ ಅಭಿನ್ನವಾದ ಪೂರ್ವವಾಕ್ಯಸ್ಥವಾದ ಅಕ್ಷರಶಬ್ದವೂ ಸಹ ಬ್ರಹ್ಮನನ್ನು ಪ್ರತಿಪಾದಿಸುವುದಿಲ್ಲ. ನಿಕೃಷ್ಟವಾದ ವಸ್ತುವನ್ನೇ ಪ್ರತಿಪಾದಿಸುತ್ತದೆ ಎಂದಾಗುತ್ತದೆ. ಹೀಗೆ ಹೇತುಹೇತುಮದ್ಭಾವವು ಸ್ಪಷ್ಟವಾಗಿ ಇರುತ್ತದೆ. ಇಲ್ಲಿದ್ದಂತೆ ಹಿಂದಿನ ಕಾರಣವಾಕ್ಯದಲ್ಲಿರುವ ಬ್ರಹ್ಮ, ಈಶ ಮೊದಲಾದ ಶಬ್ದಗಳಿಗೆ ಬ್ರಹ್ಮಪರತ್ವವಿರುವುದಿಲ್ಲವೆನ್ನಲು ಸ್ಪಷ್ಟವಾಗಿ ಹೇತುಹೇತುಮದ್ಭಾವವು ಪ್ರತೀತವಾಗುತ್ತಿಲ್ಲ. ಆದ್ದರಿಂದ ಅಕ್ಷರವೂ ಬ್ರಹ್ಮವಾಗದಿದ್ದರೆ ಅಕ್ಷರಶಬ್ದದಿಂದ ಕೂಡಿರುವ ಕಾರಣವಾಕ್ಯಕ್ಕೆ ಹಾಗೂ ಅಕ್ಷರಶಬ್ದದ

ಸಾಮಾನಾಧಿಕರಣ್ಯವನ್ನು ಹೊಂದಿರುವ ಬ್ರಹ್ಮ, ಈಶ ಶಬ್ದಗಳಿಗೂ ಸಹ ಬ್ರಹ್ಮಪರತ್ವವು ಸಿದ್ಧವಾಗುವುದಿಲ್ಲ. ಆದ್ದರಿಂದ ಅಕ್ಷರವು ಬ್ರಹ್ಮವಲ್ಲದ ಕಾರಣ ಇದರ ಮೂಲಕ ಕಾರಣವಾಕ್ಯವೂ ಸಹ ಬ್ರಹ್ಮಪರವಾಗುವುದಿಲ್ಲವೆಂದು ಒಪ್ಪಬೇಕು. ಇದಕ್ಕಿಂತ ವಾಕ್ಯಶೇಷದಲ್ಲಿರುವ ಅಕ್ಷರಶಬ್ದವು ಬ್ರಹ್ಮವಾಗದಿದ್ದರೆ ಹಿಂದಿನ ವಾಕ್ಯದಲ್ಲಿರುವ ಅಕ್ಷರಶಬ್ದವೂ ಸಹ ಬ್ರಹ್ಮವಾಗುವುದಿಲ್ಲವೆಂದು ಹೇಳುವುದು ಸುಲಭವಾಗುತ್ತದೆ. ಆದ್ದರಿಂದ ಅಕ್ಷರಶಬ್ದದ ಮೂಲಕವೇ ಸಂಗತಿಯನ್ನು ತೋರಿಸಿದ್ದಾರೆ.

**प्रकाशः** – सङ्गतिभाष्यन्यायविवरणतट्टीकानुरोधाद्वा अक्षरमुखैव चिन्तोपदर्शिता ।

ಅಥವಾ ಸಂಗತಿಯನ್ನು ನಿರೂಪಣೆ ಮಾಡುವ ಭಾಷ್ಯ, ನ್ಯಾಯವಿವರಣ ಹಾಗೂ ನ್ಯಾಯವಿವರಣ ಟೀಕೆಗಳಲ್ಲಿ ಅಕ್ಷರಶಬ್ದದ ಮೂಲಕವೇ ಸಂಶಯವನ್ನು ತೋರಿಸಿದ್ದಾರೆ; ಹೊರತು, ಬ್ರಹ್ಮ, ಈಶ ಮೊದಲಾದ ಶಬ್ದಗಳಿಂದ ಸಂಶಯವನ್ನು ತೋರಿಸಿರುವುದಿಲ್ಲ. ಹೀಗೆ ಅನೇಕ ಕಾರಣಗಳಿರುವುದರಿಂದ ವಿಷ್ಣುಪರವಾದ ಚಿಂತಾಕ್ರಮವನ್ನು ಹೇಳದೇ ಅಕ್ಷರ ಶಬ್ದದ ಮೂಲಕ ಚಿಂತಾಕ್ರಮವನ್ನು ಹೇಳಿದ್ದಾರೆ.

फलफलिभावमस्फुटत्वादाह – **अनन्यत्व इति** । यदि वक्ष्यमाणदिशा प्रकृतहानाप्रकृतकल्पनादोषापत्त्या ''अक्षरात्परतः'' इत्युक्ताक्षरस्य ''अक्षरात्सम्भवतीह विश्वम्'' इति पूर्वोक्तस्य चाक्षरस्यैकत्वं, तदा अदृश्यत्वादिगुणकस्य विश्वकारणत्वेनोक्तस्यैव परत्वावधित्वात् तस्य च सर्वोत्तमे विष्णावयोगात्, यथायथं प्रकृत्यादीति पूर्वपक्षे फलम्,

ಫಲಫಲಿಭಾವವು ಅಸ್ಪಷ್ಟವಾಗಿರುವುದರಿಂದ ಅದನ್ನು ಸ್ವತಃ ಗ್ರಂಥಕಾರರೇ 'ಅನನ್ಯತ್ವೇ' ಎಂಬ ವಾಕ್ಯದಿಂದ ಹೇಳಿರುತ್ತಾರೆ. ಹೇಗೆಂದರೆ - ಒಂದು ವೇಳೆ ಮುಂದೆ ಹೇಳುವ ಪ್ರಕಾರ 'ಪ್ರಕೃತಹಾನ ಹಾಗೂ ಅಪ್ರಕೃತಕಲ್ಪನಾ' ಎಂಬ ದೋಷಗಳು ಬರುವುದರಿಂದ "ಅಕ್ಷರಾತ್ಪರತಃ ಪರಃ" ಎಂಬಲ್ಲಿ ಹೇಳಿದ ಅಕ್ಷರ ಶಬ್ದದಿಂದ ವಾಚ್ಯವಾದ ವಸ್ತುವೇ "ಅಕ್ಷರಾತ್ಸಂಭವತೀಹ ವಿಶ್ವಮ್" ಎಂಬ ಹಿಂದಿನ ವಾಕ್ಯದಲ್ಲಿರುವ ಅಕ್ಷರಶಬ್ದದಿಂದಲೂ ಪ್ರತಿಪಾದ್ಯವಾಗುತ್ತದೆಂದು ಎರಡು ಅಕ್ಷರಗಳಿಗೂ ಐಕ್ಯವನ್ನು ಹೇಳಬೇಕು. ಆದರೆ ಅದೃಶ್ಯತ್ವಾದಿಗುಣಗಳುಳ್ಳವೆಂದು, ವಿಶ್ವಕ್ಕೆ ಕಾರಣವಾಗಿರುವ ವಸ್ತುವೇ ಪರತ್ವಕ್ಕೆ ಅವಧಿಯಾಗಿದೆ. ಆದ್ದರಿಂದ ಇಂತಹ ಪರತ್ವಾವಧಿತ್ವವು ಸರ್ವೋತ್ತಮನಾದ ವಿಷ್ಣುವಿನಲ್ಲಿ ಕೂಡುವುದಿಲ್ಲ. ಆದ್ದರಿಂದ ಯಥಾ ಯೋಗ್ಯವಾಗಿ ಪ್ರಕೃತ್ಯಾದಿಗಳೇ ಅದೃಶ್ಯತ್ವಾದಿಗುಣಗಳುಳ್ಳವುಗಳು ಎಂದು ಪೂರ್ವಪಕ್ಷದ ಫಲ.

**प्रकाशः** – यदा तु ''अक्षरत्रयमीरितम्'' इति वक्ष्यमाणरीत्या अन्यत्वं, तदा ''अक्षरात्परतः'' इत्युक्ताक्षरस्यापरत्वात् परत्वावधित्वस्य ब्रह्मण्यभावात्, परविद्याविषयत्वेन विष्णुरेवेति सिद्धान्ते फलमित्यर्थः ।

ಒಂದು ವೇಳೆ ''ಅಕ್ಷರತ್ರಯಮೀರಿತಮ್'' ಇತ್ಯಾದಿಯಾಗಿ ಮುಂದೆ ಹೇಳುವ ಪ್ರಕಾರ 'ಅಕ್ಷರತ್ಸಂಭವತೀಹ ವಿಶ್ವಂ' ಎಂಬಲ್ಲಿರುವ ಅಕ್ಷರಶಬ್ದ ವಾಚ್ಯವಾದ ವಸ್ತು ಬೇರೆಯಾದರೆ ಆಗ 'ಅಕ್ಷರಾತ್ಪರತಃ' ಎಂಬಲ್ಲಿ ಹೇಳಲ್ಪಟ್ಟ ಅಕ್ಷರವೂ ಸಹ ಬೇರೆಯಾಯಿತು. ಆವಾಗ ಪರತ್ವಾವಧಿತ್ವವು ಬ್ರಹ್ಮನಲ್ಲಿ ಬಾರದ ಕಾರಣ ಪರವಿದ್ಯಾವಿಷಯನಾದ ವಿಷ್ಣುವೇ ಅದೃಶ್ಯತ್ವಾದಿಗುಣಗಳ್ಳುವನಾಗುತ್ತಾನೆಂಬುದು ಸಿದ್ಧಾಂತದ ಫಲ.




ಹಿಂದಿನ ಅಧಿಕರಣದಲ್ಲಿ ಅಂತರ್ಯಾಮಿಯು ವಿಷ್ಣುವೇ ಆಗಿದ್ದಾನೆನ್ನಲು ಸಾಕಲ್ಯೇನ ಅವಿದಿತತ್ವವನ್ನು ಹೇತುವನ್ನಾಗಿ ಮಾಡಿದರು. ಅಂದರೆ ಅದೃಶ್ಯತ್ವವನ್ನು ಹೇತುವೆಂದು ಹೇಳಿದಂತಾಯಿತು. ಮತ್ತು ಆನಂದಮಯಾಧಿಕರಣದಲ್ಲಿ ಆನಂದಮಯನಾದ ವಿಷ್ಣುವಿಗೆ 'ಅದೃಶ್ಯೇಽನಾತ್ಮ್ಯೇ' ಎಂಬ ತೈತ್ತೀರಿಯದಲ್ಲಿ ಹೇಳಲ್ಪಟ್ಟ ಅದೃಶ್ಯತ್ವಗುಣವನ್ನು ಹೇಳಿದ್ದಾರೆ. ಈ ಅದೃಶ್ಯತ್ವಗುಣವು ವಿಷ್ಣುವಿನಲ್ಲಿ ಬರುವುದಿಲ್ಲವೆಂದು ಈ ಅಧಿಕರಣದಲ್ಲಿ ಆಕ್ಷೇಪ ಮಾಡುತ್ತಿದ್ದಾರೆ. ಆದ್ದರಿಂದ ಹಿಂದಿನ ಅಧಿಕರಣದಿಂದ ಆನಂತರ್ಯ ಸಂಗತಿಯು ಇರುತ್ತದೆ. ಮತ್ತು ಆನಂದಮಯಾಧಿಕರಣದಿಂದಲೂ ಪರಂಪರಯಾ ಸಂಗತಿಯು ಇರುತ್ತದೆ.

'ಅಕ್ಷರಾತ್ಪರತಃ ಪರಃ' ಎಂಬುದಾಗಿ ಯಾವ ಅಕ್ಷರವು ಪ್ರಸಕ್ತವಾಗಿದೆಯೋ, ಅದೇ ಅಕ್ಷರವು 'ಅಕ್ಷರಾತ್ಸಂಭವಿತೀಹ ವಿಶ್ವಂ' ಎಂಬಲ್ಲಿರುವ ಅಕ್ಷರಶಬ್ದದಿಂದಲೂ ಪ್ರತಿಪಾದ್ಯವಾದರೆ ಅದೃಶ್ಯತ್ವಾದಿಗುಣವುಳ್ಳ ಜಗತ್ಕಾರಣತ್ವೇನ ಹೇಳಲ್ಪಟ್ಟ ಪರತ್ವಾವಧಿತ್ವವು ಸರ್ವೋತ್ತಮನಾದ ವಿಷ್ಣುವಿನಲ್ಲಿ ಬರುವುದಿಲ್ಲ. ಆದ್ದರಿಂದ ಪ್ರಕೃತ್ಯಾದಿಗಳೇ ಅಕ್ಷರಶಬ್ದವಾಚ್ಯರಾಗುತ್ತಾರೆಂಬುದು ಪೂರ್ವಪಕ್ಷದ ಗುರಿ.

'ಅಕ್ಷರತ್ರಯಮೀರಿತಮ್' ಎಂದು ಮುಂದೆ ಹೇಳುವ ಪ್ರಕಾರ 'ಅಕ್ಷರಾತ್ಪರತಃ' ಎಂಬಲ್ಲಿ ಹೇಳಲ್ಪಟ್ಟ ಅಕ್ಷರವೇ ಬೇರೆ. 'ಅಕ್ಷರತ್ಸಂಭವತೀಹ ವಿಶ್ವಂ' ಎಂಬಲ್ಲಿ ಹೇಳಲ್ಪಟ್ಟ ಅಕ್ಷರವೇ ಬೇರೆ ಎಂದು ವಿವಕ್ಷಿಸಿದರೆ ಪರತ್ವಾವಧಿತ್ವವು ವಿಷ್ಣುವಿನಲ್ಲಿ ಬರುವುದಿಲ್ಲ. ಆವಾಗ ಪರವಿದ್ಯೆಯ ವಿಷಯನಾದ್ದರಿಂದ ವಿಷ್ಣುವೇ ಅಕ್ಷರನೆನಿಸುತ್ತಾನೆಂಬುದು ಸಿದ್ಧಾಂತದ ಗುರಿ.



ಪ್ರಕೃತಿ, ಬ್ರಹ್ಮಾದಿಗಳೇ ಅದೃಶ್ಯರೆಂದು ಪೂರ್ವಪಕ್ಷ

**पूर्वपक्षस्तु – जडप्रकृतेरेवादृश्यत्वादि,**

**अदृश्यत्वादिगुणकेऽक्षरे पृथिव्यादिदृष्टान्तपूर्वकं ''तथाऽक्षरात्सम्भवतीह विश्वम्'' इति विश्वोपादानत्वोक्तेः ।**

ಅನುವಾದ - ಪೂರ್ವಪಕ್ಷ ಹೀಗಿದೆ - ಅದೃಶ್ಯತ್ವಾದಿ ಗುಣವುಳ್ಳದ್ದು ಜಡಪ್ರಕೃತಿಯೇ ಆಗಿದೆ. ಏಕೆಂದರೆ ಅದೃಶ್ಯತ್ವಾದಿ ಗುಣವುಳ್ಳ ಅಕ್ಷರಶಬ್ದ ಪ್ರತಿಪಾದ್ಯವಾದ ವಸ್ತುವಿನಲ್ಲಿ ಪೃಥಿವೀ ಮೊದಲಾದವುಗಳನ್ನು ದೃಷ್ಟಾಂತವನ್ನಾಗಿ ನೀಡುತ್ತಾ 'ತಥಾऽಕ್ಷರಾತ್ಸಂಭವತೀಹ ವಿಶ್ವಮ್'' ಎಂಬುದಾಗಿ ವಿಶ್ವೋಪಾದಾನತ್ವವನ್ನು ಶ್ರುತಿಯು ಹೇಳಿದೆ. ವಿಶ್ವಕ್ಕೆ ಉಪಾದಾನವಾಗಿರುವ ವಸ್ತು ಜಡಪ್ರಕೃತಿಯೇ ಆಗಿರುವುದರಿಂದ ಅದೇ ಅದೃಶ್ಯತ್ವಾದಿಗುಣವುಳ್ಳ ಅಕ್ಷರಶಬ್ದವಾಚ್ಯವಾಗಬೇಕು.

**नच कारणत्वमात्रेऽयं दृष्टान्तः, तस्य ''सम्भवतीह विश्वम्'' इत्यनेनैव सिद्ध्या दृष्टान्तवैयर्थ्यात् । अबाधेऽन्तरङ्गस्योपादानत्वस्य त्यागायोगाच्च ।**

'ತಥಾऽಕ್ಷರತ್ಸಂಭವತೀಹ ವಿಶ್ವಮ್' ಎಂಬ ಶ್ರುತಿಯು ಕೇವಲ ವಿಶ್ವಕ್ಕೆ ಕಾರಣವಾಗಿರುವ ಪದಾರ್ಥವನ್ನಷ್ಟೇ ಹೇಳುತ್ತಿದೆ ಹೊರತು, ಉಪಾದಾನಕಾರಣತ್ವವನ್ನು ಹೇಳುತ್ತಿಲ್ಲವೆಂದು ಆಶಂಕಿಸಬಾರದು. ಏಕೆಂದರೆ 'ಸಂಭವತೀಹ ವಿಶ್ವಮ್' ಎಂಬ ಮಾತಿನಿಂದಲೇ ಕಾರಣತ್ವವು ತಿಳಿಯುವಾಗ ಪುನಃ ಪೃಥಿವೀ ಮೊದಲಾದವುಗಳನ್ನು ದೃಷ್ಟಾಂತವನ್ನಾಗಿ ನೀಡಿದ್ದು ವ್ಯರ್ಥವಾಗುತ್ತದೆ. ದೃಷ್ಟಾಂತವು ಸಾರ್ಥಕವಾಗಬೇಕೆಂದರೆ ಉಪಾದಾನಕಾರಣವನ್ನೇ ಶ್ರುತಿಯು ಹೇಳುತ್ತಿದೆಯೆಂದು ಒಪ್ಪಬೇಕು.

ಮತ್ತು ನಿಮಿತ್ತಕಾರಣ ಹಾಗೂ ಉಪಾದಾನಕಾರಣಗಳಲ್ಲಿ ಉಪಾದಾನ ಕಾರಣವೇ ಅಂತರಂಗವಾಗಿದೆ. ಸ್ವತಃ ತಾನೇ ಕಾರ್ಯರೂಪವನ್ನು ತಾಳುವುದರಿಂದ ನಿಮಿತ್ತಕಾರಣಕ್ಕಿಂತ ಪ್ರಬಲವಾಗಿದೆ. ಅಂತರಂಗವನ್ನು ಸ್ವೀಕರಿಸಲು ಬಾಧವಿಲ್ಲದೇ ಇರುವಾಗ ಹೀಗೆ ಅಂತರಂಗವಾಗಿರುವ ಉಪಾದಾನಕಾರಣತ್ವ ಎಂಬರ್ಥವನ್ನು ಬಿಟ್ಟು ಬಹಿರಂಗವಾದ ನಿಮಿತ್ತಕಾರಣ ಎಂಬರ್ಥವನ್ನು ಒಪ್ಪುವುದು ತಪ್ಪಾಗುತ್ತದೆ.

**चित्प्रकृतेर्वाऽदृश्यत्वादिकम् तत्राक्षरशब्दस्य ''कूटस्थोऽक्षर उच्यते'' इत्यादिस्मृतिसिद्धत्वात् । न चाक्षराधिकरणन्यायेन ब्रह्मणि स सावकाश इति वाच्यं, विश्वोपादानत्वस्य तत्र असम्भवात् चित्प्रकृतौ तु विश्वोपादानाभिमानित्वेन तत्सम्भवात् ।**

ಅಥವಾ ಚಿತ್ಪ್ರಕೃತಿಯೇ ಅದೃಶ್ಯತ್ವಗುಣವುಳ್ಳದ್ದೆಂದು ಪೂರ್ವಪಕ್ಷ ಮಾಡಬಹುದು. ಚಿತ್ಪ್ರಕೃತಿಯೆನಿಸಿದ ಲಕ್ಷ್ಮೀದೇವಿಯಲ್ಲಿ "ಕೂಟಸ್ಥೋಽಕ್ಷರ ಉಚ್ಯತೇ" ಎಂಬುದಾಗಿ ಭಗವದ್ಗೀತೆಯು ಅಕ್ಷರಶಬ್ದಪ್ರತಿಪಾದ್ಯತ್ವವನ್ನು ಹೇಳುತ್ತಿದೆ. ಆದ್ದರಿಂದ ಅದೃಶ್ಯತ್ವಾದಿಗುಣವುಳ್ಳ ಅಕ್ಷರಶಬ್ದ-ವಾಚ್ಯಳಾದವಳು ಲಕ್ಷ್ಮೀದೇವಿಯೇ ಆಗುತ್ತಾಳೆ.

ಇನ್ನು ಅಕ್ಷರಾಧಿಕರಣದ ನ್ಯಾಯದಿಂದ ಬ್ರಹ್ಮನಲ್ಲಿ ಅಕ್ಷರಶಬ್ದವು ಸಾವಕಾಶವಾಗಿದೆಯಲ್ಲವೇ? ಎಂದು ಶಂಕಿಸಬಾರದು. ಏಕೆಂದರೆ ಬ್ರಹ್ಮನು ವಿಶ್ವಕ್ಕೆ ಉಪಾದಾನಕಾರಣನಾಗಲು ಸಾಧ್ಯವಿಲ್ಲ. ಶ್ರುತಿಯು ವಿಶ್ವಕ್ಕೆ ಉಪಾದಾನಕಾರಣವಾದ ವಸ್ತುವಿನಲ್ಲೇ ಅಕ್ಷರಶಬ್ದಪ್ರತಿಪಾದ್ಯತ್ವವನ್ನು ಹೇಳುತ್ತಿದೆ. ಹಾಗಾದರೆ ಲಕ್ಷ್ಮೀದೇವಿಯಲ್ಲಿಯೂ ಸಹ ಉಪಾದಾನಕಾರಣತ್ವವು ಅಸಂಭಾವಿತವಾಗಿದೆಯಲ್ಲವೇ? ಎಂದು ಪ್ರಶ್ನಿಸಬಾರದು. ವಿಶ್ವಕ್ಕೆ ಉಪಾದಾನಕಾರಣವಾದ ಜಡಪ್ರಕೃತಿಗೆ ಲಕ್ಷ್ಮೀದೇವಿಯು ಅಭಿಮಾನಿದೇವತೆಯಾಗಿದ್ದಾಳೆ. ಆದ್ದರಿಂದ ಅವಳಲ್ಲಿ ಉಪಾದಾನಕಾರಣತ್ವವನ್ನು ಹೇಳುವುದು ತಪ್ಪಾಗುವುದಿಲ್ಲ.

**चतुर्मुखो वाऽदृश्यत्वादिगुणकः, ''स ब्रह्मविद्यम्'' इति ब्रह्मशब्दात् । नच विष्णौ स मुख्य इति वाच्यं, पूर्वत्र ''ब्रह्मा देवानां प्रथमः सम्बभूव'' इति, उत्तरत्र च**

**'तस्मादेतद् ब्रह्म नाम रूपमन्नं च जायते ।'**

**इति जायमानत्वलिङ्गेन चतुर्मुखपरेण ब्रह्मशब्देन सन्दष्टस्य ''स ब्रह्मविद्याम्'' इति ब्रह्मशब्दस्य अन्यपरत्वायोगात् ।**

ಅಥವಾ ಅದೃಶ್ಯತ್ವಾದಿಗುಣಗಳುಳ್ಳವನು ಚತುರ್ಮುಖಬ್ರಹ್ಮನಾಗಿದ್ದಾನೆಂದು ಪೂರ್ವಪಕ್ಷ ಮಾಡಬಹುದು. "ಸ ಬ್ರಹ್ಮವಿದ್ಯಾಮ್" ಎಂಬುದಾಗಿ ಚತುರ್ಮುಖನಲ್ಲಿ ಪ್ರಸಿದ್ಧವಾದ ಬ್ರಹ್ಮಶಬ್ದವು ಕೇಳಿಸುತ್ತಿರುವುದೇ ಇದಕ್ಕೆ ಮುಖ್ಯ ಕಾರಣ.

ವಿಷ್ಣುವಿನಲ್ಲಿಯೂ ಬ್ರಹ್ಮಶಬ್ದವು ಮುಖ್ಯವಾಗಿಯೇ ಇದೆಯಲ್ಲವೇ? ಎಂದು ಪ್ರಶ್ನಿಸಬಾರದು. ಏಕೆಂದರೆ 'ಸ ಬ್ರಹ್ಮವಿದ್ಯಾಮ್' ಎಂಬ ಶ್ರುತಿಯ ಹಿಂದಿನ ವಾಕ್ಯದಲ್ಲಿ 'ಬ್ರಹ್ಮಾ ದೇವಾನಾಂ ಪ್ರಥಮಃ ಸಂಬಭೂವ' ಎಂಬುದಾಗಿ ಚತುರ್ಮುಖಬ್ರಹ್ಮನು ಮೊದಲು ಹುಟ್ಟಿದನು ಎಂದು ಹೇಳಲಾಗಿದೆ. ಮುಂದೆಯೂ ಸಹ 'ತಸ್ಮಾದೇತದ್ ಬ್ರಹ್ಮ ನಾಮ ರೂಪಮನ್ನಂ ಚ ಜಾಯತೇ ।' ಎಂಬುದಾಗಿ ಚತುರ್ಮುಖಬ್ರಹ್ಮನ ಉತ್ಪತ್ತಿಯನ್ನೇ ಹೇಳಲಾಗಿದೆ. ಈ ಜಾಯಮಾನತ್ವಲಿಂಗವು ಚತುರ್ಮುಖನಲ್ಲಿ ಉಪಪನ್ನವಾಗುತ್ತದೆ; ಹೊರತು ವಿಷ್ಣುವಿನಲ್ಲಿ ಕೂಡುವುದಿಲ್ಲ. ಆದ್ದರಿಂದ ಚತುರ್ಮುಖ ಪರವಾದ

ಬ್ರಹ್ಮಶಬ್ದದಿಂದ ಸಂದಷ್ಟವಾದ್ದರಿಂದ 'ಸ ಬ್ರಹ್ಮವಿದ್ಯಾಮ್' ಎಂಬ ಶ್ರುತಿಯಲ್ಲಿರುವ ಬ್ರಹ್ಮಶಬ್ದವೂ ಸಹ ಚತುರ್ಮುಖಬ್ರಹ್ಮನನ್ನೇ ಪ್ರತಿಪಾದಿಸಬೇಕು; ಹೊರತು ವಿಷ್ಣುವನ್ನು ಪ್ರತಿಪಾದಿಸಲು ಸಾಧ್ಯವಿಲ್ಲ.

**रुद्रो वाऽदृश्यत्वादिगुणकः, ''कर्तारमीशम्'' इति ईशशब्दात् । नच ''शब्दादेव प्रमितः'' इति वक्ष्यमाणन्यायेन स विष्णुपर इति वाच्यं, रुद्रे प्रसिद्धसर्वज्ञशब्दात् । न चासौ यौगिकत्वेन प्रकृताक्षरस्य विशेषणं, नतु रुद्राख्यविशेष्यपर इति वाच्यं, रूढेर्बलवत्त्वात् । ''सर्ववित्'' इत्यनेन पुनरुक्तेश्च ।**

ಅಥವಾ ಅದೃಶ್ಯತ್ವಾದಿಗುಣಗಳುಳ್ಳವನು ರುದ್ರನೆಂದು ಪೂರ್ವಪಕ್ಷ ಮಾಡಬಹುದು. 'ಕರ್ತಾರಮೀಶಮ್' ಎಂಬುದಾಗಿ ರುದ್ರನಲ್ಲಿ ಪ್ರಸಿದ್ಧವಾದ ಈಶಶಬ್ದವು ಕೇಳಿಸುತ್ತಿರುವುದೇ ಇದಕ್ಕೆ ಮುಖ್ಯಕಾರಣ.

'ಶಬ್ದಾದೇವ ಪ್ರಮಿತಃ' ಎಂಬ ಮುಂಬರುವ ಸೂತ್ರದಲ್ಲಿ ಹೇಳುವ ನ್ಯಾಯದಂತೆ ಈಶಶಬ್ದವು ಮುಖ್ಯವಾಗಿ ವಿಷ್ಣುಪರವಾಗುತ್ತದೆಯಲ್ಲವೇ? ಎಂದು ಪ್ರಶ್ನಿಸಬಾರದು. ರುದ್ರನಲ್ಲಿ ಪ್ರಸಿದ್ಧವಾಗಿರುವ ಸರ್ವಜ್ಞಶಬ್ದವನ್ನು ಶ್ರುತಿಯು ಉಲ್ಲೇಖಿಸುತ್ತಿದೆ. ಆದ್ದರಿಂದ ರುದ್ರನೇ ಈಶಪದವಾಚ್ಯನಾಗಿದ್ದಾನೆ.

ಸರ್ವಜ್ಞಶಬ್ದವು ಯೌಗಿಕವಾಗಿದೆ. ಆದ್ದರಿಂದ ಪ್ರಕೃತವಾಗಿರುವ ಅಕ್ಷರನಲ್ಲಿ ವಿಶೇಷಣವಾಗಿ ಪ್ರಯುಕ್ತವಾಗಿದೆ; ಹೊರತು ರುದ್ರನೆಂಬ ವಿಶೇಷ್ಯವನ್ನು ಹೇಳಲು ಸಾಧ್ಯವಿಲ್ಲವಲ್ಲವೇ? ಎಂದು ಪ್ರಶ್ನಿಸಬಾರದು. ಸರ್ವಜ್ಞಶಬ್ದಕ್ಕೆ ಯೋಗಾರ್ಥವನ್ನು ಅನುಸರಿಸುವುದಕ್ಕಿಂತ ರುದ್ರನೆಂಬ ರೂಢ್ಯರ್ಥವನ್ನು ಅನುಸರಿಸುವುದೇ ಸೂಕ್ತವಾಗಿದೆ. ಏಕೆಂದರೆ ಯೋಗಕ್ಕಿಂತ ರೂಢಿಯು ಪ್ರಬಲವಾಗಿರುತ್ತದೆ. ಅಷ್ಟೇ ಅಲ್ಲದೆ ಸರ್ವಜ್ಞಶಬ್ದಕ್ಕೆ ಎಲ್ಲವನ್ನು ತಿಳಿದವನು ಎಂಬ ಯೋಗಾರ್ಥವನ್ನು ವಿವಕ್ಷಿಸುವುದಾದರೆ 'ಸರ್ವವಿತ್' ಎಂಬ ಮುಂದಿನ ಪದದಿಂದ ಪುನರುಕ್ತಿಯೂ ಸಹ ಬರುತ್ತದೆ.

**तस्मादुक्तबाधकात् ''अक्षरात्परतः परः'' इति निकृष्टत्वेन श्रुतत्वाचाक्षरं न ब्रह्म ।**

ಆದ್ದರಿಂದ ಮೇಲೆ ಹೇಳಿದ ಬಾಧಕಗಳಿರುವುದರಿಂದ ಮತ್ತು "ಅಕ್ಷರಾತ್ಪರತಃ ಪರಃ" ಎಂಬುದಾಗಿ ಅಕ್ಷರಪದಾರ್ಥವನ್ನು ನಿಕೃಷ್ಟವಾಗಿ ಹೇಳಿರುವುದರಿಂದಲೂ ವಿಷ್ಣುವನ್ನು ಅಕ್ಷರನೆಂದು ವಿವಕ್ಷಿಸಲು ಸಾಧ್ಯವಿಲ್ಲ.

**नच ''तथाऽक्षरात्'' इत्यादावेवाक्षरशब्दो ब्रह्मपरः, ''अक्षरात्परतः परः'' इत्यत्र तु प्रकृतिपर इति वाच्यम्,**

ಪ್ರಶ್ನೆ:- ''ತಥಾऽಕ್ಷರಾತ್ಸಂಭವತೀಹ ವಿಶ್ವಮ್'' ಎಂಬಲ್ಲಿ ಮಾತ್ರ ಅಕ್ಷರಶಬ್ದವು ವಿಷ್ಣುಪರವಾಗಲಿ, ''ಅಕ್ಷರಾತ್ಪರತಃ ಪರಃ'' ಎಂಬಲ್ಲಿ ನಿಕೃಷ್ಟವಾಗಿ ಶ್ರುತವಾದ ಅಕ್ಷರಶಬ್ದವು ಪ್ರಕೃತಿಪರವಾಗಲಿ, ಎರಡೂ ಕಡೆ ಇರುವ ಅಕ್ಷರಶಬ್ದವು ಒಂದೇ ಪದಾರ್ಥವನ್ನು ಹೇಳಬೇಕೆಂಬ ನಿಯಮವೇನು?

**प्रकृतहानाप्रकृतस्वीकारापातात् ।**

ಸಮಾಧಾನ - ಹೀಗೆ ಹೇಳಬಾರದು. ಹೀಗೆ ಅರ್ಥೈಸಿದರೆ ಪ್ರಕೃತವಾದ ಬ್ರಹ್ಮನನ್ನು ಬಿಟ್ಟು ಅಪ್ರಕೃತವಾದ ಪ್ರಕೃತಿಯನ್ನು ಸ್ವೀಕರಿಸಿದಂತಾಗುತ್ತದೆ. ಆದ್ದರಿಂದ 'ಪ್ರಕೃತಹಾನ ಮತ್ತು ಅಪ್ರಕೃತಸ್ವೀಕಾರ' ಎಂಬೆರಡು ದೋಷಗಳು ಬರುವ ಕಾರಣ ಎರಡೂ ಕಡೆ ಒಂದೇ ವಸ್ತುವನ್ನೇ ಪ್ರತಿಪಾದ್ಯವೆನ್ನಬೇಕು.

**पूर्वपक्षे त्विदं निकृष्टत्वं चित्प्रकृतिपक्षे 'अक्षरात्परतः' इति पञ्चम्योस्सामानाधिकरण्येन, पक्षान्तरे तु वैयधिकरण्येन युक्तम् ।**

ಪೂರ್ವಪಕ್ಷ ಮಾಡುವಾಗ 'ಅಕ್ಷರಾತ್ಪರತಃ ಪರಃ' ಎಂಬ ವಾಕ್ಯವು ಅಸಂಗತವಾಗುವುದಿಲ್ಲ. ಏಕೆಂದರೆ ಚಿತ್ಪ್ರಕೃತಿಪಕ್ಷದಲ್ಲಿ 'ಅಕ್ಷರಾತ್ಪರತಃ' ಎಂಬ ಎರಡು ಪದಗಳ ಮುಂದೆ ಇರುವ ಎರಡು ಪಂಚಮೀ ವಿಭಕ್ತಿಗಳಿಗೆ ಸಮಾನಾಧಿಕರಣ್ಯವು ಇರುವ ಪ್ರಯುಕ್ತ ಅವು ಒಂದೇ ವಸ್ತುವನ್ನು ಪ್ರತಿಪಾದಿಸುತ್ತದೆ. ಅಂದರೆ ಪರತಃ ಅಕ್ಷರಾತ್ = ಅಕ್ಷರವೆನಿಸಿದ ಪರಶಬ್ದವಾಚ್ಯವಾದ ಲಕ್ಷ್ಮೀದೇವಿಗಿಂತಲೂ, ಪರಃ = ವಿಷ್ಣು ಉತ್ತಮನಾಗಿದ್ದಾನೆ ಎಂದು ವ್ಯಾಖ್ಯಾನಿಸಬೇಕು. ಉಳಿದ ಮೂರು ಪೂರ್ವಪಕ್ಷಗಳಲ್ಲಿ 'ಅಕ್ಷರಾತ್ಪರತಃ' ಎಂಬಲ್ಲಿರುವ ಎರಡು ಪಂಚಮೀವಿಭಕ್ತಿಗಳು ಒಂದೇ ವಸ್ತುವನ್ನು ಪ್ರತಿಪಾದಿಸದೇ ಬೇರೆ ಬೇರೆ ಪದಾರ್ಥವನ್ನು ವ್ಯಧಿಕರಣವಾಗಿ ಹೇಳುತ್ತವೆ. ಅಂದರೆ ಅಕ್ಷರಶಬ್ದವಾಚ್ಯವಾದ ಜಡಪ್ರಕೃತಿಗಿಂತ 'ಪರತಃ' ಉತ್ತಮಳಾದ ಲಕ್ಷ್ಮೀದೇವಿಗಿಂತ, 'ಪರಃ' ವಿಷ್ಣು ಉತ್ತಮನಾಗಿದ್ದಾನೆ. ಹೀಗೆ ವ್ಯಾಖ್ಯಾನಿಸಬೇಕು.

**न चाब्रह्मपक्षे परविद्याविषयत्वं बाधकम्,**

ಪ್ರಶ್ನೆ - ಚತುರ್ಮುಖಾದಿಗಳನ್ನು ಅದೃಶ್ಯತ್ವಾದಿಗುಣಗಳುಳ್ಳವರೆಂದು ಪೂರ್ವಪಕ್ಷ ಮಾಡಿದಾಗ ಪರವಿದ್ಯಾವಿಷಯತ್ವವು ಬಾಧಕವಾಗುತ್ತಲ್ಲವೇ? ಯಾರು ಅಕ್ಷರ ಶಬ್ದವಾಚ್ಯನಾಗಿದ್ದಾನೋ ಅವನನ್ನೇ ಶ್ರುತಿಯು ಪರವಿದ್ಯಾವಿಷಯನೆಂದು ಹೇಳುತ್ತಿದೆ. ಈ ಪರವಿದ್ಯಾವಿಷಯತ್ವವು ವಿಷ್ಣುವನ್ನು ಬಿಟ್ಟು ಬೇರೆ ಯಾರಲ್ಲಿಯೂ ಬಾರದಿದ್ದಾಗ ಹೇಗೆ ಅವರನ್ನು ಪೂರ್ವಪಕ್ಷ ಮಾಡುತ್ತೀರಿ?

**''परा चैवापरा च । तत्रापरा ऋग्वेदो यजुर्वेदः'' इत्यपरविद्यात्वेनोक्तऋगादिविषये शास्त्रयोनौ ब्रह्मण्येव तत्प्रतियोगिभूतपरविद्याविषयत्वासम्भवात् ।**

ಪರಿಹಾರ - ಪರವಿದ್ಯಾವಿಷಯತ್ವವು ಬಾಧಕವಾಗುವುದಿಲ್ಲ. ಇದನ್ನು ಸಿದ್ಧಾಂತಿಗಳು ಅಂಗೀಕರಿಸಿಲ್ಲ. ಏಕೆಂದರೆ "ಪರಾ ಚೈವಾಪರಾ ಚ ತತ್ರಾಪರಾ ಋಗ್ವೇದೋ ಯಜುರ್ವೇದಃ" ವಿದ್ಯೆಯು ಪರ ಮತ್ತು ಅಪರ ಎಂದು ಎರಡು ವಿಧವಾಗಿದೆ. ಋಗ್ವೇದ, ಯಜುರ್ವೇದ ಮೊದಲಾದವುಗಳೆಲ್ಲವೂ ಅಪರವಿದ್ಯಾ ಎನಿಸಿದೆ. ಅವುಗಳಿಂದೆಲ್ಲಾ ಮುಖ್ಯವಾಗಿ ಪ್ರತಿಪಾದ್ಯನಾದವನು ಎಂದರೆ ಶಾಸ್ತ್ರೈಕಸಮಧಿಗಮ್ಯನಾದವನು ವಿಷ್ಣುವೇ ಆಗಿದ್ದಾನೆಂದು ಶಾಸ್ತ್ರಯೋನಿತ್ವಾಧಿಕರಣದಲ್ಲಿ ಸಿದ್ಧಾಂತಿಗಳು ಸಮರ್ಥಿಸಿದ್ದಾರೆ. ಇದರಿಂದ ವಿಷ್ಣು ಅಪರವಿದ್ಯೆಗೆ ವಿಷಯನಾಗಿದ್ದಾನೆಂದು ಸಿದ್ಧವಾಗುತ್ತದೆ. ಹೀಗಿರುವಾಗ ಅದಕ್ಕೆ ವಿರುದ್ಧವಾದ ಪರವಿದ್ಯಾವಿಷಯತ್ವವನ್ನು ವಿಷ್ಣುವಿನಲ್ಲಿ ಹೇಗೆ ತಾನೆ ಒಪ್ಪಲು ಸಾಧ್ಯವಾಗುತ್ತದೆ ? ಆದ್ದರಿಂದ ವಿಷ್ಣು ಅಪರವಿದ್ಯೆಗೆ ವಿಷಯನಾಗಿದ್ದಾನೆ. ಪ್ರಕೃತ್ಯಾದಿಗಳೆಲ್ಲವೂ ಪರವಿದ್ಯೆಗೆ ವಿಷಯವಾಗಿದೆ ಎಂದೇ ಹೇಳಬೇಕು.

**''अथ परा यया तदक्षरमधिगम्यते'' इति श्रुत्या प्रकृतेरेव तत्सम्भवाच ॥**

ಅಷ್ಟೇ ಅಲ್ಲದೆ "ಅಥ ಪರಾ ಯಯಾ ತದಕ್ಷರಮಧಿಗಮ್ಯತೇ" ಎಂಬ ಶ್ರುತಿಯು ಋಗಾದಿಗಳು ಅಪರವಿದ್ಯೆ ಎನಿಸಿದೆ. ಇದಕ್ಕಿಂತ ಮತ್ತೊಂದು ವಿದ್ಯೆಯು ಪರವಿದ್ಯೆಯಾಗಿದೆ. ಅಂತಹ ಪರವಿದ್ಯೆಯಿಂದ ಅಕ್ಷರ ಪದಾರ್ಥವು ತಿಳಿಯಲ್ಪಡುತ್ತದೆ ಎಂದು ಹೇಳುತ್ತಿದೆ. ಇದರಿಂದ ಚಿತ್ಪ್ರಕೃತಿಯೇ ಪರವಿದ್ಯೆಗೆ ವಿಷಯವಾಗಿದೆಯೆಂದು ತಿಳಿಯುತ್ತದೆ. ವಿಷ್ಣುವೇ ಪರವಿದ್ಯೆಗೆ ವಿಷಯನಾಗಿದ್ದಲ್ಲಿ 'ಯಯಾ ತದಕ್ಷರಮಧಿಗಮ್ಯತೇ' ಎಂದು ಹೇಳದೇ 'ಯಯಾ ವಿಷ್ಣುಃ ಅಧಿಗಮ್ಯತೇ' ಎಂದು ಶ್ರುತಿಯು ಹೇಳಬೇಕಾಗಿತ್ತು. ಆದರೆ ಚಿತ್ಪ್ರಕೃತಿಯಲ್ಲಿ ಪ್ರಸಿದ್ಧವಾದ ಅಕ್ಷರಶಬ್ದವನ್ನು ಹೇಳಿರುವುದರಿಂದ ವಿಷ್ಣು ಪರವಿದ್ಯೆಗೆ ವಿಷಯನಾಗುವುದಿಲ್ಲವೆಂಬ ವಿಚಾರವು ಸ್ಪಷ್ಟವಾಗುತ್ತದೆ.

**प्रकाशः –**

उपादानत्वाक्षरब्रह्मेशशब्दान् क्रमेण प्रधानश्रीब्रह्मरुद्रप्रापकान् टीकोक्तान् व्यञ्जयन् चतुर्विधपूर्वपक्षटीकां व्यनक्ति – जडप्रकृतेरेवेत्यादिना ।

ವಿವರಣೆ - ಪೂರ್ವಪಕ್ಷದ ಟೀಕಾಭಾಗವನ್ನು ವಿವರಿಸುತ್ತಿದ್ದಾರೆ - ಶ್ರುತಿಯಲ್ಲಿ ಉಪಾದಾನತ್ವ, ಅಕ್ಷರ, ಬ್ರಹ್ಮ, ಈಶ ಮೊದಲಾದ ಶಬ್ದಗಳು ಕೇಳಿಸುತ್ತಿವೆ. ಇವೆಲ್ಲವೂ ಪೂರ್ವಪಕ್ಷಕ್ಕೆ ಪ್ರಾಪಕವಾದ ಲಿಂಗಗಳಾಗಿವೆ. ಜಡಪ್ರಕೃತಿಯು ಅದೃಶ್ಯತ್ವಗುಣವುಳ್ಳದ್ದೆಂದು ಸಾಧಿಸಲು ಉಪಾದಾನ ಶಬ್ದವಿದೆ. ಲಕ್ಷ್ಮೀದೇವಿಯೇ ಅದೃಶ್ಯತ್ವಗುಣವುಳ್ಳವಳೆಂದು ತಿಳಿಸಲು ಅಕ್ಷರಶಬ್ದವಿದೆ. ಬ್ರಹ್ಮ, ರುದ್ರಾದಿಗಳು ಅದೃಶ್ಯತ್ವಾದಿಗುಣವುಳ್ಳವರೆಂದು ತಿಳಿಸಲು, ಬ್ರಹ್ಮ, ಈಶ ಮೊದಲಾದ ಶಬ್ದಗಳಿವೆ. ಹೀಗೆ ಟೀಕೆಯಲ್ಲಿ ಹೇಳಲ್ಪಟ್ಟ ಕಾರಣಗಳನ್ನು ಸ್ಪಷ್ಟಪಡಿಸುತ್ತಾ ಪೂರ್ವಪಕ್ಷ ಟೀಕೆಯನ್ನು ನಾಲ್ಕು ಪೂರ್ವಪಕ್ಷಗಳನ್ನು ಮಾಡುವ ಮುಖಾಂತರ ವ್ಯಾಖ್ಯಾನಿಸುತ್ತಿದ್ದಾರೆ 'ಜಡಪ್ರಕೃತೇರೇವ' ಇತ್ಯಾದಿ ವಾಕ್ಯದಿಂದ.

**प्रकाशः** – ननु अत्र निर्धारित एक एवादृश्यत्वादिगुणक इति पूर्वपक्षः, उत अनिर्धारितो यः कश्चिदिति, सर्वेऽपीति वा ।

ಆಕ್ಷೇಪ - ಪೂರ್ವಪಕ್ಷವನ್ನು ಏನೆಂದು ಮಾಡುತ್ತೀರಿ ? ವಿಷ್ಣುವನ್ನು ಬಿಟ್ಟು ಯಾರಾದರೂ ಒಬ್ಬನು ಮಾತ್ರ ಅದೃಶ್ಯತ್ವಾದಿಗುಣವುಳ್ಳವನೆಂದೋ? ಅಥವಾ ವಿಷ್ಣುಗಿಂತ ಬೇರೆಯಾದವರಲ್ಲಿ ಯಾರಾದರೂ ಸಹ ಅದೃಶ್ಯತ್ವಾದಿಗುಣವುಳ್ಳವರು ಆಗಬಹುದೆಂದೋ ? ಅಥವಾ ವಿಷ್ಣುವನ್ನು ಬಿಟ್ಟು ಎಲ್ಲರೂ ಅದೃಶ್ಯತ್ವಾದಿ-ಗುಣವುಳ್ಳವರಾಗುತ್ತಾರೆಂದೋ ?

**प्रकाशः** – नाद्यः, अनेकप्रापकसत्त्वेन निर्धारणायोगात् ।

ಮೊದಲನೆಯ ಪಕ್ಷ ಸರಿಯಿಲ್ಲ. ಏಕೆಂದರೆ ಒಬ್ಬನನ್ನೇ ಪೂರ್ವಪಕ್ಷಕ್ಕೆ ವಿಷಯನೆಂದು ಸಾಧಿಸಲಾಗದು. ಅನೇಕರನ್ನು ಪೂರ್ವಪಕ್ಷವಿಷಯವನ್ನಾಗಿ ಹೇಳಲು ಲಿಂಗಗಳಿರುವಾಗ ಒಬ್ಬನನ್ನೇ ಪೂರ್ವಪಕ್ಷವಿಷಯನೆಂದು ನಿರ್ಧರಿಸುವುದು ತಪ್ಪಾಗುತ್ತದೆ.

**प्रकाशः** – न द्वितीयः, संशयादविशेषापत्तेः ।

ಎರಡನೆಯ ಪಕ್ಷವೂ ತಪ್ಪು. ಅನಿರ್ಧಾರಿತರಾದ ಯಾರಾದರೊಬ್ಬರು ಅದೃಶ್ಯತ್ವಗುಣವುಳ್ಳವರಾಗ-ಬಹುದೆಂಬ ಎರಡನೆಯ ಪಕ್ಷವನ್ನು ಒಪ್ಪಿದರೆ ಈ ಪಕ್ಷದಲ್ಲಿ ಯಾರನ್ನೂ ನಿಶ್ಚಯ ಮಾಡಿ ಹೇಳಿಲ್ಲವಾದ್ದರಿಂದ ರುದ್ರನು ಅದೃಶ್ಯತ್ವ ಗುಣವುಳ್ಳವನು ಎಂದು ಹೇಳಿದರೆ ಬ್ರಹ್ಮ ಏಕಾಗಬಾರದು ? ಎಂಬ ಪ್ರಶ್ನೆ ಬರುತ್ತದೆ. ಅವನನ್ನು ಹೇಳಿದರೆ ಪ್ರಕೃತಿ ಏಕಲ್ಲ ? ಎಂದು ಹೀಗೆ ಸಂಶಯ ಬರುವ ಕಾರಣ ಸಂಶಯ ಹಾಗೂ ಪೂರ್ವಪಕ್ಷಗಳಿಗೆ ವ್ಯತ್ಯಾಸವಿಲ್ಲದಂತಾಗಿ ಅವು ಒಂದೇ ಆಗಬೇಕಾಗುತ್ತವೆ. ಸಂಶಯದಂತೆ ಪೂರ್ವಪಕ್ಷವನ್ನು ಮಾಡಿದಂತಾಗುತ್ತದೆ.

**प्रकाशः** – न तृतीयः, वाक्यभेदापातात्

ಮೂರನೆಯ ಪಕ್ಷವೂ ತಪ್ಪು. ಒಂದುವೇಳೆ ಎಲ್ಲರೂ ಅದೃಶ್ಯತ್ವಾದಿಗುಣವುಳ್ಳವರಾಗಬಹುದೆಂದು ಹೇಳಿದರೆ ವಾಕ್ಯಭೇದಾಪತ್ತಿಯು ಬರುತ್ತದೆ. ಅಂದರೆ ಒಂದೇ ವಾಕ್ಯವು ಬೇರೆ ಬೇರೆ ವ್ಯಕ್ತಿಗಳನ್ನು ಪ್ರತಿಪಾದಿಸಿದಂತಾಗುತ್ತದೆ.

**प्रकाशः** – इति चेन्न, अक्षरब्रह्मेशशब्दानाम् अन्यप्रापकाणाम् अविनाशित्वेन "मम योनिर्महद्ब्रह्म" इत्यादिवचनेन कार्यस्य कारणाधीनतयेशितृत्वेन प्रधान एवोपपत्तेरित्यादिरूपेण पक्षचतुष्टयेऽप्यवधारणसम्भवेन आद्यस्य युक्तत्वादिति भावेन – **प्रकृतेरेवेत्युक्तम्** । "चित्प्रकृतेर्वा" इत्यादिवाशब्दात् द्वितीयतृतीयावपि युक्ताविति सूचितम् ।

ಸಮಾಧಾನ - ಇದು ತಪ್ಪು. ಏಕೆಂದರೆ ಜಡಪ್ರಕೃತಿಯು ನಿತ್ಯವಾಗಿದೆ. ಆದ್ದರಿಂದ ಅಕ್ಷರಶಬ್ದದಿಂದ

ಪ್ರತಿಪಾದ್ಯವಾಗುತ್ತದೆ. ''ಮಮ ಯೋನಿರ್ಮಹದ್ಬ್ರಹ್ಮ' ಎಂಬ ಶ್ರುತಿಯು ಜಡಪ್ರಕೃತಿಯನ್ನೇ ಬ್ರಹ್ಮ ಎಂದು ಹೇಳುತ್ತಿದೆ. ಮತ್ತು ಕಾರ್ಯವು ಕಾರಣದ ಅಧೀನವಾದ್ದರಿಂದ ಸಕಲಕಾರ್ಯರೂಪವಾದ ಪ್ರಪಂಚಕ್ಕೆ ಕಾರಣವಾಗಿರುವ ಜಡಪ್ರಕೃತಿಯು ನಿಯಾಮಕವಾಗಿದೆ. ಆದ್ದರಿಂದಲೇ ಈಶಿತೃತ್ವವನ್ನು ಹೇಳಿದಂತಾಗಿ ಈಶಶಬ್ದ ಪ್ರತಿಪಾದ್ಯತ್ವವೂ ಸಹ ಜಡಪ್ರಕೃತಿಯಲ್ಲಿ ಯುಕ್ತವಾಗುತ್ತದೆ. ಹೀಗೆ ಜಡಪ್ರಕೃತಿಯನ್ನು ಪೂರ್ವಪಕ್ಷ ವಿಷಯವನ್ನಾಗಿ ಸ್ವೀಕರಿಸಿದಾಗ ಅಕ್ಷರ, ಬ್ರಹ್ಮ, ಈಶ ಮೊದಲಾದ ಎಲ್ಲ ಶಬ್ದಗಳೂ ಉಪಪನ್ನವಾಗುತ್ತದೆ. ಆದ್ದರಿಂದ ಮೊದಲನೆಯ ಪೂರ್ವಪಕ್ಷ ಕೋಟಿಯಲ್ಲಿ ಯಾವುದೇ ಗೊಂದಲವಿಲ್ಲ. ಇದರಂತೆ ಚಿತ್ಪ್ರಕೃತಿಯನ್ನು ಅಥವಾ ಚತುರ್ಮುಖಬ್ರಹ್ಮನನ್ನು ಅಥವಾ ರುದ್ರನನ್ನು ಪೂರ್ವಪಕ್ಷ ವಿಷಯವನ್ನಾಗಿ ಪರಿಗಣಿಸಿದಾಗ ಈ ಅಕ್ಷರ, ಬ್ರಹ್ಮ, ಈಶ ಶಬ್ದಗಳೆಲ್ಲವೂ ಯುಕ್ತವಾಗುತ್ತವೆಂಬುದನ್ನು ತಿಳಿದುಕೊಳ್ಳಬೇಕು. ಆದ್ದರಿಂದ ಯಾವುದೇ ಪೂರ್ವಪಕ್ಷ ಕೋಟಿಯನ್ನು ಸ್ವೀಕರಿಸಿದಾಗಲೂ ಅವಧಾರಣಪುರಸ್ಸರವಾಗಿ ಪೂರ್ವಪಕ್ಷ ಮಾಡಲು ಬಂದಂತಾಗುತ್ತದೆ. ಹೀಗಿರುವಾಗ ಗೊಂದಲಕ್ಕೆ ಅವಕಾಶವೇ ಇಲ್ಲ. ಆದ್ದರಿಂದ ನೀವು ಪ್ರಶ್ನಿಸಿದ ಮೂರು ವಿಕಲ್ಪಗಳಲ್ಲಿ ಮೊದಲನೆಯ ವಿಕಲ್ಪದಂತೆ ಎಂದರೆ ನಿರ್ಧಾರಿತವಾದ ಒಂದೇ ವಸ್ತು ಪೂರ್ವಪಕ್ಷಕ್ಕೆ ವಿಷಯವಾಗಿದೆಯೆಂದು ಹೇಳುತ್ತೇವೆ.

ಆದ್ದರಿಂದಲೇ ಗ್ರಂಥಕಾರರು ಪೂರ್ವಪಕ್ಷಗಳನ್ನು ತೋರಿಸುವಾಗ ಮೊದಲು 'ಪ್ರಕೃತೇರೇವ' ಎಂಬುದಾಗಿ (ಏವಕಾರ) ಅವಧಾರಣಪುರಸ್ಸರವಾಗಿ ಪೂರ್ವಪಕ್ಷವನ್ನು ತೋರಿಸಿದ್ದಾರೆ. ಮುಂದೆ 'ಚಿತ್ಪ್ರಕೃತೇರ್ವಾ' ಇತ್ಯಾದಿಯಾಗಿ 'ವಾ' ಶಬ್ದದಿಂದ ಎರಡು ಹಾಗೂ ಮೂರನೆಯ ಪೂರ್ವಪಕ್ಷಗಳೂ ಸಹ ಯುಕ್ತವಾಗುತ್ತವೆಂಬುದನ್ನು ತೋರಿಸಿದ್ದಾರೆ. ಈ ಸೂಕ್ಷ್ಮವನ್ನು ಗಮನಿಸಬೇಕು.

**प्रकाशः** – द्वितीये विष्ण्वन्यत्वेन अवधारणसम्भवात् न सन्देहादविशेषः । अत एव टीकायां ''विष्णोरन्यस्य'' इति संशयोक्तिः, ''न विष्णोरदृश्यत्वादीति तावत्पूर्वपक्षः'' इत्युक्तिः, ''न विष्णुरदृश्यत्वादिगुणकः'' इत्युपसंहारश्च ।

ಅಥವಾ ಅನಿರ್ಧಾರಿತವಾದ ಯಾರಾದರೂ ಒಬ್ಬರು ಅದೃಶ್ಯತ್ವಾದಿಗುಣಗಳುಳ್ಳವರೆಂದು ಪೂರ್ವಪಕ್ಷ ಮಾಡಬಹುದು. ಈ ಪಕ್ಷದಲ್ಲಿ ವಿಷ್ಣುವಿಗಿಂತ ಅನ್ಯರೇ ಅದೃಶ್ಯತ್ವಾದಿಗುಣಗಳ್ಳುವರೆಂದು ಅವಧಾರಣ ಮಾಡಬಹುದು. ಆದ್ದರಿಂದ ಸಂದೇಹಕ್ಕಿಂತ ಪೂರ್ವಪಕ್ಷವು ವಿಲಕ್ಷಣವಾಗಿದೆಯೆಂದು ಹೇಳಿದಂತಾಗುತ್ತದೆ. ಏಕೆಂದರೆ ಸಂದೇಹದಲ್ಲಿ ನಿರ್ಧಾರವಿರುವುದಿಲ್ಲ. ಪ್ರಕೃತ ಪೂರ್ವಪಕ್ಷದಲ್ಲಿ ವಿಷ್ಣುವನ್ನು ಬಿಟ್ಟು ಬೇರೆಯವರೇ ಅದೃಶ್ಯತ್ವಾದಿಗುಣವುಳ್ಳವರೆಂದು ಹೇಳುವುದರಿಂದ ನಿರ್ಧಾರಣವಿರುತ್ತದೆ. ಆದ್ದರಿಂದಲೇ ಟೀಕೆಯಲ್ಲಿ ''ವಿಷ್ಣೋರನ್ಯಸ್ಯ ವಾ'' ಎಂದು ಸಂಶಯವನ್ನು ತೋರಿಸಿದ್ದಾರೆ. ಮತ್ತು ''ನ ವಿಷ್ಣೋರದೃಶ್ಯತ್ವಾದಿ ಇತಿ ತಾವತ್ ಪೂರ್ವಪಕ್ಷಃ'' ವಿಷ್ಣುವಿನಲ್ಲಿ ಅದೃಶ್ಯತ್ವಾದಿಗಳು ಬರುವುದಿಲ್ಲವೆಂದಷ್ಟೇ ಪೂರ್ವಪಕ್ಷ ಎಂದು ಪ್ರಾರಂಭದಲ್ಲಿ ಹೇಳಿದ್ದು; ಹಾಗೂ ''ನ ವಿಷ್ಣುರದೃಶ್ಯತ್ವಾದಿಗುಣಕಃ'' ವಿಷ್ಣು ಅದೃಶ್ಯತ್ವಾದಿಗುಣಗಳುಳ್ಳವನಲ್ಲ ಎಂದು ಉಪಸಂಹಾರದಲ್ಲಿ ಹೇಳಿದ್ದಾರೆ.

**प्रकाशः** – तृतीये वाक्यभेदस्य न्यायप्राप्तत्वादिति ।

ಅಥವಾ ಎಲ್ಲರೂ ಅದೃಶ್ಯತ್ವಾದಿಗುಣಗಳುಳ್ಳವರು ಎಂದು ಪೂರ್ವಪಕ್ಷ ಮಾಡಬಹುದು. ಹಾಗಾದರೆ ವಾಕ್ಯಭೇದ ರೂಪ ದೋಷವು ಬರುತ್ತದಲ್ಲವೆ? ಎಂದರೆ ನ್ಯಾಯಪ್ರಾಪ್ತವಾದ್ದರಿಂದ ವಾಕ್ಯಭೇದವನ್ನು ದೋಷವೆಂದು ಪರಿಗಣಿಸಬಾರದು.

**प्रकाशः** – यद्वा – ''न विष्णोरदृश्यत्वादि'' इति टीकोक्तान्यवच्छेदाभिप्रायं जडप्रकृतेरेवेत्यवधारणं, नतु कोऽप्यन्तरव्यवच्छेदाशयम् ।

ಅಥವಾ ಮೊದಲನೆಯ ಪಕ್ಷವನ್ನು ಬಿಟ್ಟು 'ಅನಿರ್ಧಾರಿತ' ಎಂಬ ಹಾಗೂ 'ಯಃಕಶ್ಚಿತ್' ಎಂಬ ಎರಡನೆಯ ಮತ್ತು ಮೂರನೆಯ ಪಕ್ಷವನ್ನಷ್ಟೇ ಒಪ್ಪುತ್ತೇವೆ. ಹಾಗಾದರೆ 'ಜಡಪ್ರಕೃತೇರೇವ' ಎಂಬುದಾಗಿ ಅವಧಾರಣವನ್ನು ಹೇಗೆ ಮಾಡಿದ್ದಾರೆ ಎಂದರೆ 'ನ ವಿಷ್ಣೋರದೃಶ್ಯತ್ವಾದಿ' ಎಂಬ ಟೀಕೆಯಲ್ಲಿ ಹೇಳಲ್ಪಟ್ಟ ವಿಷ್ಣುವನ್ನು ವ್ಯವಚ್ಛೇದ ಮಾಡುವುದಕ್ಕಾಗಿ 'ಜಡಪ್ರಕೃತೇರೇವ' ಎಂದು ಏವಕಾರವನ್ನು ಹೇಳಿದ್ದಾರೆ ಹೊರತು, ಲಕ್ಷ್ಮೀ, ಚತುರ್ಮುಖಬ್ರಹ್ಮ ಇವರನ್ನು ವ್ಯವಚ್ಛೇದ ಮಾಡುವುದಕ್ಕಾಗಿ ಏವಕಾರವನ್ನು ಹೇಳಿದ್ದಲ್ಲ. ಆ ವಿಷಯದಲ್ಲಿ ಅಭಿಪ್ರಾಯವಿಲ್ಲ.

**प्रकाशः** – तेन ''न विष्णोरदृश्यत्वादि'' इति टीकोक्तस्य ''अदृश्यत्वादिकं जडप्रकृतेर्भवेत्'' इति टीकोक्तस्य च सङ्ग्रहः कृतो भवति ।

ಹೀಗೆ ಹೇಳಿದ್ದರಿಂದ ''ನ ವಿಷ್ಣೋರದೃಶ್ಯತ್ವಾದಿ'' ಎಂಬ ಟೀಕೆಯಲ್ಲಿ ಹೇಳಲ್ಪಟ್ಟ ಮತ್ತು ''ಅದೃಶ್ಯತ್ವಾದಿಕಂ ಜಡಪ್ರಕೃತೇರ್ಭವೇತ್'' ಎಂಬ ಟೀಕೆಯಲ್ಲಿ ಹೇಳಲ್ಪಟ್ಟ ಪ್ರಮೇಯವನ್ನು ಸಂಗ್ರಹಿಸಿದಂತಾಗುತ್ತದೆ.

**प्रकाशः** – तेन विष्णोर्न चेन्निर्विषयतया वाक्यमिदममानं स्यादिति शङ्का च निरस्ता भवति ।

ಹೀಗೆ ಹೇಳಿದ್ದರಿಂದ ಒಂದು ವೇಳೆ ವಿಷ್ಣು ಅದೃಶ್ಯತ್ವಾದಿಗುಣಗಳುಳ್ಳವನಾಗದಿದ್ದರೆ ವಾಕ್ಯವು ನಿರ್ವಿಷಯಕವಾಗಿ ಅಪ್ರಮಾಣವಾಗಬೇಕಾಗುತ್ತದಲ್ಲವೇ? ಎಂಬ ಆಕ್ಷೇಪವನ್ನು ನಿರಾಸ ಮಾಡಿದಂತಾಯಿತು.

**प्रकाशः** – ''अस्य पृथिव्यादिदृष्टान्तेनोपादानतया जगत्कारणत्वोक्तेः'' इति टीकां व्यनक्ति – **अदृश्यत्वेति** । 'दृष्टान्ते' इत्येतदुपादानत्वसिध्यर्थमुक्तम् । ऊर्णनाभेरादित्वेऽपि 'पृथिव्यादि' इत्युक्तेर्गतिर्वक्ष्यते ।

'ಅಸ್ಯ ಪೃಥಿವ್ಯಾದಿದೃಷ್ಟಾಂತೇನೋಪಾದಾನತಯಾ ಜಗತ್ಕಾರಣತ್ವೋಕ್ತೇಃ' ಎಂಬ ಟೀಕೆಯನ್ನು 'ಅದೃಶ್ಯತ್ವ' ಎಂಬ ವಾಕ್ಯದಿಂದ ವ್ಯಾಖ್ಯಾನಿಸುತ್ತಿದ್ದಾರೆ. 'ದೃಷ್ಟಾಂತೇ' ಎಂದು ಏಕೆ ಹೇಳಿದ್ದಾರೆಂದರೆ ಉಪಾದಾನತ್ವವನ್ನು ಸಮರ್ಥಿಸುವುದಕ್ಕಾಗಿ. ವಸ್ತುತಃ ಶ್ರುತಿಯಲ್ಲಿ ಊರ್ಣನಾಭ್ಯಾದಿ ದೃಷ್ಟಾಂತವು ಮೊದಲಿದೆ. ಅದಕ್ಕನುಸಾರಿಯಾಗಿ ಗ್ರಂಥಕಾರರು 'ಪೃಥಿವ್ಯಾದಿ' ಎಂದು ಹೇಳುವ ಮೊದಲು

'ಊರ್ಣನಾಭ್ಯಾದಿಃ' ಎಂದು ಹೇಳಬೇಕಿತ್ತು. ಆದರೆ ಹೀಗೆ ವ್ಯತ್ಯಾಸ ಮಾಡಿ ಹೇಳಲು ಕಾರಣವೇನೆಂಬುದನ್ನು ಮುಂದೆ ಸ್ಪಷ್ಟಪಡಿಸಲಾಗುತ್ತದೆ.

**प्रकाशः** – उपादानत्वमेव शङ्कापूर्वं व्यनक्ति – **नचेति** । 'तस्य' कारणत्वमात्रस्य । **अन्तरङ्गस्येति** । कार्यानुस्यूतत्वादुपादानस्येति भावः ।

ಜಡಪ್ರಕೃತಿಗೆ ಹೇಳಲ್ಪಟ್ಟ ಉಪಾದಾನತ್ವವನ್ನೇ ಶಂಕಾಪೂರ್ವಕವಾಗಿ ವ್ಯಾಖ್ಯಾನಿಸುತ್ತಿದ್ದಾರೆ. 'ನಚ' ಇತ್ಯಾದಿ ವಾಕ್ಯದಿಂದ. 'ತಸ್ಯ' ಎಂಬ ಪದಕ್ಕೆ 'ಕೇವಲ ಕಾರಣತ್ವಕ್ಕೆ' ಎಂದರ್ಥ. ಉಪಾದಾನತ್ವವು ಅಂತರಂಗವಾಗಿದೆಯೆಂದು ಗ್ರಂಥದಲ್ಲಿ ಹೇಳಿರುತ್ತಾರೆ. ಏಕೆಂದರೆ ಯಾವುದು ಉಪಾದಾನಕಾರಣವಾಗಿರುತ್ತದೋ, ಅದು ಕಾರ್ಯದ ಜೊತೆಗೆ ಅನುಸ್ಯೂತವಾಗಿ ಹೆಣೆದುಕೊಂಡಿರುತ್ತದೆ. ನಿಮಿತ್ತಕಾರಣವು ಕಾರ್ಯಕ್ಕಿಂತ ಭಿನ್ನವಾಗಿರುವುದರಿಂದ ಬಹಿರಂಗವಾಗಿದೆಯೆಂದು ತಿಳಿಯಬೇಕು.

**प्रकाशः** – एतेन टीकायामेवमाशङ्क्य, तथाऽक्षरब्रह्मेशशब्दानां च विष्णाववकाशमाशङ्क्य सर्वत्र परतः पराभिधानेनैवोज्जीवनं यत्कृतं तदुपलक्षणमिति सूचितम् । तथा च वक्ष्यति ''इति निकृष्टत्वेन श्रुतत्वाच्च'' इति ।

ತತ್ತ್ವಪ್ರಕಾಶಿಕಾ ಟೀಕೆಯಲ್ಲಿ ಚಂದ್ರಿಕಾ ಗ್ರಂಥದಲ್ಲಿ ಹೇಳಿದ ಪ್ರಕಾರ ಆಶಂಕೆ ಮಾಡಿ ಅಕ್ಷರ, ಬ್ರಹ್ಮ, ಈಶ ಮೊದಲಾದ ಪೂರ್ವಪಕ್ಷಪ್ರಾಪಕ ಲಿಂಗಗಳಿಗೆ ವಿಷ್ಣುವಿನಲ್ಲಿ ಸಾವಕಾಶತ್ವವನ್ನು ಆಶಂಕಿಸಿದ್ದಾರೆ. ಅನಂತರ 'ಅಕ್ಷರಾತ್ಪರತಃ ಪರಃ' ಎಂಬುದಾಗಿ ಅಕ್ಷರಶಬ್ದವಾಚ್ಯವಾದ ಪದಾರ್ಥಕ್ಕೆ ನಿಕೃಷ್ಟತ್ವವು ಕೇಳಿಸುತ್ತಿರುವುದರಿಂದ ವಿಷ್ಣು ಅಕ್ಷರನಾಗುವುದಿಲ್ಲವೆಂದು ಪೂರ್ವಪಕ್ಷವನ್ನು ದೃಢಪಡಿಸಿದ್ದಾರೆ. ಅಂದರೆ ಅಕ್ಷರ, ಬ್ರಹ್ಮ ಮೊದಲಾದ ಶಬ್ದಗಳಿಗೆ ಎಲ್ಲಾ ಸಾವಕಾಶತ್ವವನ್ನು ಆಶಂಕಿಸಿದರೆ ಅದನ್ನೂ ಕೇವಲ ಪರತಃ ಪರಾಭಿಧಾನವೆಂಬ ಒಂದೇ ಹೇತುವಿನಿಂದ ನಿರಾಕರಿಸಿದ್ದಾರೆ. ಟೀಕೆಯಲ್ಲಿ ಹೀಗೆ ಹೇಳಿದ್ದು ಕೇವಲ ಉಪಲಕ್ಷಣವಾಗಿದೆಯೆಂದು ಗ್ರಂಥಕಾರರು ಇಲ್ಲಿ ಸೂಚಿಸಿದ್ದಾರೆ. ಅಂದರೆ ಜಡಪ್ರಕೃತಿ, ಲಕ್ಷ್ಮೀ, ಚತುರ್ಮುಖಬ್ರಹ್ಮ, ರುದ್ರ ಎಲ್ಲರಲ್ಲಿಯೂ ಸಹ ಉಪಾದಾನತ್ವ, ಬ್ರಹ್ಮ ಮೊದಲಾದ ಶಬ್ದಗಳೆಲ್ಲವೂ ನಿರವಕಾಶವಾಗಿಯೇ ಇರುತ್ತವೆಂಬುದನ್ನೂ ಸಹ ಗ್ರಂಥದಿಂದ ಸ್ಪಷ್ಟವಾಗಿ ತಿಳಿದುಕೊಳ್ಳಬೇಕು. ಆದ್ದರಿಂದ ಮುಂದೆ 'ಇತಿ ನಿಕೃಷ್ಟತ್ವೇನ ಶ್ರುತತ್ವಾಚ್ಚ' ಎಂಬುದಾಗಿ 'ಚ' ಶಬ್ದವನ್ನು ಹೇಳುತ್ತಾರೆ.

**प्रकाशः** – ''चेतनप्रकृतेर्वा'' इत्यादिटीकां व्यनक्ति – **चित्प्रकृतेर्वेति** । **अक्षराधिकरणन्यायेनेति** । ''अक्षरमम्बरान्तधृतेः'' इत्यत्र ''एतस्मिन् खल्वक्षरे गार्ग्याकाश ओतश्च प्रोतश्च'' इति श्रुतमक्षरं किं चित्प्रकृतिरथ विष्णुरिति संशये, ''ये त्वक्षरमनिर्देश्यमव्यक्तम्'' इत्यादौ श्रीतत्त्वे अक्षरशब्दप्रयोगात्, क्षराक्षरातीते विष्णौ तदयोगात् श्रीतत्त्वमेवेति प्राप्ते, चतुर्विधनाशरहिते विष्णावेव अक्षरशब्दप्रवृत्तिनिमित्तस्य पौष्कल्यात्, ''तस्मादक्षरं तस्मादक्षरमित्याचक्षते एतमेव

**सन्तम्'' इति श्रुत्यादौ तस्य प्रयोगाच्च विष्णुरेव अक्षरशब्दमुख्यार्थ इति तृतीयपादे वक्ष्यमाणन्यायेनेत्यर्थः ।**

'ಚೇತನಪ್ರಕೃತೇರ್ವಾ' ಇತ್ಯಾದಿ ಟೀಕೆಯನ್ನು 'ಚಿತ್ಪ್ರಕೃತೇರ್ವಾ' ಎಂಬ ಗ್ರಂಥದಿಂದ ವ್ಯಾಖ್ಯಾನಮಾಡುತ್ತಿದ್ದಾರೆ. 'ಅಕ್ಷರಾಧಿಕರಣನ್ಯಾಯೇನ' ಎಂದು ಗ್ರಂಥದಲ್ಲಿ ಹೇಳಿದ್ದಾರೆ. ಮುಂದೆ ಮೂರನೆಯ ಪಾದದಲ್ಲಿ ಹೇಳುವ ಅಕ್ಷರಾಧಿಕರಣದ ನ್ಯಾಯವನ್ನು ಹೀಗೆ ತಿಳಿಯಬೇಕು.

'ಓಂ ಅಕ್ಷರಮಂಬರಾಂತಧೃತೇಃ ಓಂ' ಎಂದು ಅಕ್ಷರಾಧಿಕರಣ ಪ್ರಾರಂಭವಾಗುತ್ತದೆ.

''ಏತಸ್ಮಿನ್ ಖಲ್ವಕ್ಷರೇ ಗಾರ್ಗ್ಯಾಕಾಶ ಓತಶ್ಚ ಪ್ರೋತಶ್ಚ'' ಎಂಬುದು ಈ ಅಕ್ಷರಾಧಿಕರಣದ ವಿಷಯವಾಕ್ಯ. ಇದರಲ್ಲಿ 'ಅಕ್ಷರ' ಎಂಬ ಶಬ್ದವು ಕೇಳಿಸುತ್ತಿದೆ. ಈ ಶಬ್ದದಿಂದ ಚಿತ್ಪ್ರಕೃತಿಯು ಹೇಳಲ್ಪಟ್ಟಿದೆಯೋ? ಅಥವಾ ವಿಷ್ಣುವೋ? ಎಂದು ಸಂಶಯ.

''ಯೇ ತ್ವಕ್ಷರಮನಿರ್ದೇಶ್ಯಮವ್ಯಕ್ತಮ್'' ಇತ್ಯಾದಿಯಾಗಿ ಚಿತ್ಪ್ರಕೃತಿಯಲ್ಲಿಯೇ ಅಂದರೆ ಲಕ್ಷ್ಮೀದೇವಿಯಲ್ಲಿಯೇ ಅಕ್ಷರಶಬ್ದವನ್ನು ಪ್ರಯೋಗಿಸಲಾಗಿದೆ. ಮತ್ತು ಕ್ಷರಾಕ್ಷರಪದಾರ್ಥಗಳಿಗಿಂತ ಮಿಗಿಲಾದ ವಿಷ್ಣುವಿನಲ್ಲಿ ಅಕ್ಷರಶಬ್ದದ ಪ್ರಯೋಗವು ಅಯುಕ್ತವಾಗುತ್ತದೆ. ಏಕೆಂದರೆ ಶ್ರುತಿಯಲ್ಲಿ ಅಕ್ಷರವನ್ನು ನಿಕೃಷ್ಟಪದಾರ್ಥವೆಂದು ಪರಿಗಣಿಸಲಾಗಿದೆ. ಆದ್ದರಿಂದ ಲಕ್ಷ್ಮೀದೇವಿಯೇ ಅಕ್ಷರಶಬ್ದದಿಂದ ಪ್ರತಿಪಾದ್ಯಳಾಗುತ್ತಾಳೆಂದು ಪೂರ್ವಪಕ್ಷ.

ವಿಷ್ಣುವೇ ಅಕ್ಷರಶಬ್ದದ ಮುಖ್ಯಪ್ರತಿಪಾದ್ಯನು. ಏಕೆಂದರೆ ನಾಲ್ಕು ಬಗೆಯ ನಾಶರಹಿತನಾದ ವಿಷ್ಣುವಿನಲ್ಲೇ ನಾಶರಾಹಿತ್ಯವನ್ನೇ ಹೇಳುವ ಅಕ್ಷರಶಬ್ದದ ಪ್ರಯೋಗವನ್ನು ಮಾಡುವುದು ಅತ್ಯಂತ ಸಮಂಜಸವಾಗಿದೆ. ಏಕೆಂದರೆ ಅಕ್ಷರಶಬ್ದದ ಪ್ರವೃತ್ತಿನಿಮಿತ್ತವು ವಿಷ್ಣುವಿನಲ್ಲಿ ಮಾತ್ರ ಪುಷ್ಕಳವಾಗಿ ಬರುತ್ತಿವೆ. ಅಷ್ಟೇ ಅಲ್ಲದೆ ''ತಸ್ಮಾದಕ್ಷರಂ ತಸ್ಮಾದಕ್ಷರಮಿತ್ಯಾಚಕ್ಷತೇ ಏತಮೇವ ಸಂತಮ್'' ಎಂಬುದಾಗಿ ಶ್ರುತಿಯಲ್ಲಿ ಭಗವಂತನಲ್ಲಿಯೇ ಅಕ್ಷರಶಬ್ದವನ್ನು ಪ್ರಯೋಗಿಸಿದ್ದು ಕಾಣಿಸುತ್ತಿದೆ. ಆದ್ದರಿಂದ ವಿಷ್ಣುವೇ ಮುಖ್ಯವಾಗಿ ಅಕ್ಷರಶಬ್ದ ಪ್ರತಿಪಾದ್ಯನೆಂದು ಸಿದ್ಧಾಂತ. ಹೀಗೆ ಮೂರನೇ ಪಾದದಲ್ಲಿ ಈ ವಿಷಯವನ್ನು ಸಮರ್ಥಿಸಿದ್ದಾರೆ.

**प्रकाशः** – निर्विकारे श्रीतत्वेऽपि कथमुपादानत्वमित्यतः ''तस्या विकाराभिमानित्वाद्युज्यते'' इति टीकोक्तमेव व्यक्तमाह – **चित्प्रकृतौ त्विति ।** ''हिरण्यगर्भस्य वा'' इत्यादिटीकां व्यनक्ति – **चतुर्मुखो वेति ।**

ಚಿತ್ಪ್ರಕೃತಿಯು ನಿರ್ವಿಕಾರವಾಗಿದೆ. ಹೀಗಿರುವಾಗ ಉಪಾದಾನ ಕಾರಣತ್ವವನ್ನು ಶ್ರೀತತ್ತ್ವಕ್ಕೆ ಹೇಗೆ ಹೇಳುತ್ತೀರಿ ? ಎಂಬ ಪ್ರಶ್ನೆಗೆ ''ತಸ್ಯಾ ವಿಕಾರಾಭಿಮಾನಿತ್ವಾದ್ಯುಜ್ಯತೇ'' ಲಕ್ಷ್ಮೀದೇವಿಯು ವಿಕಾರವನ್ನು ಹೊಂದುವ ಜಡಪ್ರಕೃತಿಗೆ ಅಭಿಮಾನಿದೇವತೆಯಾಗಿರುವುದರಿಂದ ಉಪಾದಾನಕಾರಣಳೆನಿಸುತ್ತಾಳೆ ಎಂದು ಉತ್ತರವನ್ನು ಟೀಕೆಯಲ್ಲಿ ಹೇಳಿದ್ದಾರೆ. ಅದನ್ನೇ ಸ್ಪಷ್ಟ ಪಡಿಸುತ್ತಾ ಗ್ರಂಥಕಾರರು 'ಚಿತ್‌ಪ್ರಕೃತೌ ತು' ಎಂದು ಹೇಳುತ್ತಿದ್ದಾರೆ.

**ಪರಿಪೂರ್ಣಚಂದ್ರಿಕಾ**

"ಹಿರಣ್ಯಗರ್ಭಸ್ಯ ವಾ" ಇತ್ಯಾದಿ ಟೀಕೆಯನ್ನು 'ಚತುರ್ಮುಖೋ ವಾ' ಎಂಬ ವಾಕ್ಯದಿಂದ ವ್ಯಾಖ್ಯಾನಿಸುತ್ತಿದ್ದಾರೆ.

**स ब्रह्मेति ।**

'ब्रह्मा देवानां प्रथमस्सम्बभूव विश्वस्य कर्ता भुवनस्य गोप्ता ।
स ब्रह्मविद्यां सर्वविद्याप्रतिष्ठामथर्वाय ज्येष्ठपुत्राय प्राह ।।'

इति वाक्ये ब्रह्मशब्दादित्यर्थः । तस्य चतुर्मुखपरत्व एवैतद्विद्यायास्तत्परत्वमिप्यतस्तत्साधयति – **न चेत्यादिना ।**

'ಸ ಬ್ರಹ್ಮ' ಎಂಬ ಗ್ರಂಥದಿಂದ ಮುಂದೆ ಹೇಳುವ ವಾಕ್ಯವನ್ನು ಗ್ರಹಣ ಮಾಡಬೇಕು.

ಈ ವಾಕ್ಯದಲ್ಲಿ ಚತುರ್ಮುಖಬ್ರಹ್ಮನನಲ್ಲಿ ಬ್ರಹ್ಮಶಬ್ದದ ಪ್ರಯೋಗವು ಬಹಳವಾಗಿ ಇದೆ.

ಬ್ರಹ್ಮಾ ದೇವಾನಾಂ ಪ್ರಥಮಸ್ಸಂಬಭೂವ ವಿಶ್ವಸ್ಯ ಕರ್ತಾ ಭುವನಸ್ಯ ಗೋಪ್ತಾ ।
ಸ ಬ್ರಹ್ಮವಿದ್ಯಾಂ ಸರ್ವವಿದ್ಯಾಪ್ರತಿಷ್ಠಾಮಥರ್ವಾಯ ಜ್ಯೇಷ್ಠಪುತ್ರಾಯ ಪ್ರಾಹ ॥

ಎಂಬುದಾಗಿ. ಇಲ್ಲಿ ಎಲ್ಲ ದೇವತೆಗಳ ಮೊದಲು ಬ್ರಹ್ಮದೇವರೇ ಹುಟ್ಟಿದರು ಎಂದು ಹೇಳಲಾಗಿದೆ. ಈ ವಾಕ್ಯದಲ್ಲಿ ಮೊದಲು ಹುಟ್ಟಿದನೆಂದು ಹೇಳಿದ ಕಾರಣ ಚತುರ್ಮುಖನೇ ಬ್ರಹ್ಮಶಬ್ದದಿಂದ ಪ್ರತಿಪಾದ್ಯನು. ಈ ಬ್ರಹ್ಮನು ಚತುರ್ಮುಖನಾದರೆ ಮಾತ್ರ 'ಸ ಬ್ರಹ್ಮವಿದ್ಯಾಂ' ಎಂಬಂತಹ ವಾಕ್ಯವು ಚತುರ್ಮುಖ ಪರವಾಗುತ್ತದೆ ಆದ್ದರಿಂದ ಅದನ್ನು 'ನಚ' ಇತ್ಯಾದಿ ವಾಕ್ಯದಿಂದ ಪ್ರತಿಪಾದಿಸುತ್ತಿದ್ದಾರೆ.

**प्रकाशः – पूर्वत्रेति ।** अत एव तत्वप्रदीपे "ब्रह्मा देवानाम्" इति पूर्ववाक्यमप्युदाहृतमिति भावः ।

'ಪೂರ್ವತ್ರ' ಎಂದರೆ 'ಸ ಬ್ರಹ್ಮವಿದ್ಯಾಂ' ಎಂಬ ವಾಕ್ಯದ ಹಿಂದೆಯೂ ಸಹ ಚತುರ್ಮುಖಬ್ರಹ್ಮದೇವನೇ ಪ್ರಸ್ತುತನಾಗಿದ್ದಾನೆ. ಇದನ್ನು ತಿಳಿಸುವುದಕ್ಕಾಗಿಯೇ ತತ್ವಪ್ರದೀಪದಲ್ಲಿ 'ಬ್ರಹ್ಮಾದೇವಾನಾಂ' ಎಂಬ ಹಿಂದಿನ ವಾಕ್ಯವನ್ನೂ ಸಹ ಉದಾಹರಿಸಿದ್ದಾರೆ.

**प्रकाशः – जायमानत्वेति ।** 'सम्बभूव जायते' इति च पदाभ्यामुक्तेनेत्यर्थः । उपादानत्वं च तदभिमानित्वेनेति भावः । एवमग्रेऽपि ।

ಗ್ರಂಥದಲ್ಲಿ ಜಾಯಮಾನತ್ವವು ಚತುರ್ಮುಖನ ಲಿಂಗವೆಂದು ಹೇಳಿದ್ದಾರೆ. ಇದು 'ಸಂಬಭೂವ' ಹಾಗೂ 'ಜಾಯತೇ' ಎಂಬೆರಡು ಪದಗಳಿಂದ ಸ್ಪಷ್ಟವಾಗುತ್ತದೆ. ಉಪಾದಾನಕಾರಣತ್ವವನ್ನು ಚತುರ್ಮುಖನಿಗೆ ಅಭಿಮಾನಿದೇವತೆಯಾದ ಕಾರಣ ಕೂಡಿಸಬೇಕು. ಮುಂದೆಯೂ ಸಹ ರುದ್ರಾದಿ ದೇವತೆಗಳಲ್ಲಿ ಅವರು ಅಭಿಮಾನಿದೇವತೆಗಳಾದ್ದರಿಂದಲೇ ಉಪಾದಾನಕಾರಣತ್ವವನ್ನು ಕೂಡಿಸಬೇಕೆಂಬುದನ್ನೂ ತಿಳಿದುಕೊಳ್ಳಬೇಕು.

ಅದೃಶ್ಯತ್ವಾಧಿಕರಣ (೧-೨-೬)

**प्रकाशः** – ''रुद्रस्य वा'' इत्यादिटीकां व्यनक्ति – रुद्रो वेति । ईशशब्दादिति । प्रकृतादृश्यत्वादिगुणकाक्षर एव ''यदा पश्यःपश्यते रुग्मवर्णं कर्तारमीशम्'' इत्युत्तरवाक्ये श्रुतत्वादित्यर्थः ।

'ರುದ್ರಸ್ಯ ವಾ' ಇತ್ಯಾದಿ ಟೀಕೆಯನ್ನು 'ರುದ್ರೋ ವಾ' ಎಂಬುದುದರಿಂದ ವ್ಯಾಖ್ಯಾನಿಸುತ್ತಿದ್ದಾರೆ. 'ಈಶಶಬ್ದಾತ್' ಎಂದು ಗ್ರಂಥದಲ್ಲಿ ಹೇಳಿದ್ದಾರೆ. ಅಂದರೆ ಪ್ರಕೃತವಾದ ಅದೃಶ್ಯತ್ವಾದಿಗುಣಗಳುಳ್ಳ ಅಕ್ಷರನೇ 'ಯದಾ ಪಶ್ಯಃಪಶ್ಯತೇ ರುಗ್ಮವರ್ಣಂ ಕರ್ತಾರಮೀಶಮ್' ಎಂಬುದಾಗಿ ಮುಂದಿನ ವಾಕ್ಯದಲ್ಲಿಯೂ ಶ್ರುತನಾಗಿದ್ದಾನೆ. ಆದ್ದರಿಂದ ಎಂದು ಅರ್ಥ.

**प्रकाशः** – शब्दादेवेति । अत्रैव तृतीयपादे ''ईशानो भूतभव्यस्य'' इति श्रुत ईशानो वायुरुत विष्णुरिति सन्देहे, ''ऊर्ध्वं प्राणमुन्नयति'' इति प्राणव्यवस्थापकत्वस्य, ''मध्ये वामनमासीनम्'' इति मध्यमत्वस्य, ''विश्वेदेवा उपासते'' इति विश्वदेवोपास्यत्वस्य च श्रवणात्तेषां च 'एवमेवैष प्राण इतरान्प्राणान्पृथक्पृथगेव सन्निधत्ते'' ''योऽयं मध्यमः प्राणः'' ''कुविन्दङ्ग'' इति श्रुतिभिर्वायुधर्मत्वाद्वायुरिति प्राप्ते, लिङ्गसहस्रादपि श्रुतेर्बलवत्त्वात् निरवकाशवामनश्रुत्या ईशानपदप्रवृत्तिनिमित्तस्य प्रेरकत्वादेर्विष्णावेव पौष्कल्यादीशानो विष्णुरेवेति वक्ष्यते, ईशशब्दस्य चेशानशब्दपर्यायत्वादिति भावः ।

'ಶಬ್ದಾದೇವ' ಎಂದು ಗ್ರಂಥದಲ್ಲಿದೆ ಎಂಬ ಇದೇ ಅಧ್ಯಾಯದ ಮೂರನೇ ಪಾದದಲ್ಲಿ

ಓಂ ಶಬ್ದಾದೇವ ಪ್ರಮಿತಃ ಓಂ

ಎಂಬ ಸೂತ್ರವು ಪ್ರಸಕ್ತವಾಗಿದೆ. ಈ ಸೂತ್ರದಲ್ಲಿ ಹೇಳಿದ ನ್ಯಾಯ ಹೀಗಿದೆ - "ಈಶಾನೋ ಭೂತಭವ್ಯಸ್ಯ" ಎಂಬುದು ಈ ಅಧಿಕರಣದ ವಿಷಯವಾಕ್ಯವಾಗಿದೆ. ಇದರಲ್ಲಿ ಕೇಳಿಸುತ್ತಿರುವ 'ಈಶಾನ' ಎಂಬ ಶಬ್ದವು ವಾಯುಪರವೋ? ಅಥವಾ ವಿಷ್ಣುಪರವೋ? ಎಂದು ಸಂಶಯ.

"ಊರ್ಧ್ವಂ ಪ್ರಾಣಮುನ್ನಯತಿ" ಪ್ರಾಣವ್ಯವಸ್ಥಾಪಕತ್ವ ಎಂಬ ಲಿಂಗವು ಕೇಳಿಸುತ್ತಿದೆ. "ಮಧ್ಯೇ ವಾಮನಮಾಸೀನಂ" ಎಂಬುದಾಗಿ ಮಧ್ಯಮತ್ವಲಿಂಗವು ಕೇಳಿಸುತ್ತಿದೆ. "ವಿಶ್ವೇದೇವಾ ಉಪಾಸತೇ" ಎಂಬುದಾಗಿ ವಿಶ್ವದೇವೋಪಾಸ್ಯತ್ವವು ಕೇಳಿಸುತ್ತಿದೆ. ಈ ಮೂರೂ ಲಿಂಗಗಳು ವಾಯುವಿನ ಧರ್ಮವೇ ಆಗಿದೆ. ಏಕೆಂದರೆ 'ಏವಮೇವ ಏಷ ಪ್ರಾಣಃ ಇತರಾನ್‌ಪ್ರಾಣಾನ್ ಪೃಥಕ್ ಪೃಥಗೇವ ಸನ್ನಿಧತ್ತೇ" ಎಂಬುದರಿಂದ ವಾಯುದೇವನೇ ಪ್ರಾಣವ್ಯವಸ್ಥಾಪಕನೆಂದು ತಿಳಿಯುತ್ತದೆ. "ಯೋಽಯಂ ಮಧ್ಯಮಃ ಪ್ರಾಣಃ" ಎಂಬ ವಾಕ್ಯದಿಂದ ಮಧ್ಯಮತ್ವವು ಮುಖ್ಯಪ್ರಾಣನ ಲಿಂಗವೆಂದು ತಿಳಿಯುತ್ತದೆ. "ಕುವಿದಂಗ" ಎಂಬ ಶ್ರುತಿಯಿಂದ ವಿಶ್ವದೇವೋಪಾಸ್ಯತ್ವವೂ ಸಹ ವಾಯುವಿನ ಲಿಂಗವೆಂದು ತಿಳಿಯುತ್ತದೆ. ಆದ್ದರಿಂದ

ಈಶಾನ ಶಬ್ದದಿಂದ ಪ್ರತಿಪಾದ್ಯನಾದವನು ವಾಯುದೇವನೇ ಆಗಿದ್ದಾನೆಂದು ಪೂರ್ವಪಕ್ಷ.

ಸಾವಿರಲಿಂಗಗಳಿಗಿಂತಲೂ ಶ್ರುತಿಯೇ ಬಲಿಷ್ಠ. ಆದ್ದರಿಂದ ನಿರವಕಾಶವಾಗಿರುವ ವಾಮನಶ್ರುತಿಯ ಬಲದಿಂದ ಮತ್ತು 'ಈಶಾನ' ಪದದ ಪ್ರೇರಕತ್ವವೆಂಬ ಪ್ರವೃತ್ತಿನಿಮಿತ್ತದಿಂದ ವಿಷ್ಣುವೇ 'ಈಶಾನ' ಶಬ್ದದಿಂದ ಪ್ರತಿಪಾದ್ಯನಾಗಿದ್ದಾನೆಂದು ನಿರ್ಣಯವಾಗುತ್ತದೆ. ಹೀಗೆ ಮುಂದೆ ಹೇಳುತ್ತಾರೆ. 'ಈಶ' ಶಬ್ದ ಹಾಗೂ 'ಈಶಾನ' ಶಬ್ದಗಳು ಪರ್ಯಾಯಪದಗಳಾದ್ದರಿಂದ ಈ ಅಧಿಕರಣದಲ್ಲಿ 'ಈಶಾನ' ಶಬ್ದವನ್ನು ವಿಷ್ಣುವಿನಲ್ಲಿ ಸಮರ್ಥಿಸಿದಾಗ 'ಈಶ' ಶಬ್ದವೂ ಸಮನ್ವಿತವಾದಂತೆ ಆಗುತ್ತದೆ ಎಂದು ತಿಳಿಯಬೇಕು.

**प्रकाशः** – यद्यपि ''सर्वत्र'' इति नये, ''अत्ता'' इति नये च आदित्यादिति-श्रुत्योरिवान्तर्नन्यायेनेशशब्दस्यापि सावकाशत्वशङ्का सुशका ।

ಪ್ರಶ್ನೆ - ಸರ್ವಗತತ್ವಾಧಿಕರಣದಲ್ಲಿ ಮತ್ತು ಅತ್ತೃತ್ವಾಧಿಕರಣದಲ್ಲಿ ಆದಿತ್ಯಶ್ರುತಿ ಹಾಗೂ ಅದಿತಿಶ್ರುತಿಗಳು ವಿಷ್ಣುಪರವೆಂದು ಸಮರ್ಥಿಸಲಾಗಿದೆ. ಅದರಂತೆ ಅಂತರಧಿಕರಣದ ನ್ಯಾಯದಿಂದ ಈಶ ಶಬ್ದವೂ ಸಹ ಸಾವಕಾಶವಾಗಿದೆಯೆಂದು ಶಂಕಿಸಬಹುದಲ್ಲವೇ? ಅಂದರೆ ಅಂತರಧಿಕರಣದ ನ್ಯಾಯದಿಂದಲೇ ಈಶ ಶಬ್ದವು ಭಗವತ್ಪರವಾಗಿದೆಯೆಂದು ಸುಲಭವಾಗಿ ತಿಳಿಯುವಾಗ ಪುನಃ 'ಶಬ್ದಾದೇವ ಪ್ರಮಿತಃ' ಎಂಬ ಅಧಿಕರಣದಿಂದ ಸಾವಕಾಶವಾಗಿದೆಯೆಂದು ಏಕೆ ಶಂಕಿಸುತ್ತಿದ್ದಾರೆ ?

**प्रकाशः** – तथाऽपि तदधिकरणविषयवाक्ये ईशशब्दस्य तत्पर्यायस्य वा श्रवणाभावाद्वा, तत्रेव अत्र वाक्ये निरवकाशविष्णुलिङ्गाभावेन तन्न्यायाविषयत्वाद्वा, तत्र तात्पर्यमात्रमेवाधिदैवगतशब्दानामुक्तं, नतु शक्तिरपीति भावेन वा, ''शब्दादेव'' इत्यत्रेशशब्दपर्यायस्येशानशब्दस्य साक्षादेव समन्वयोक्तेर्वा – ''शब्दादेव प्रमितः'' इति वक्ष्यमाणन्यायेनेत्युक्तम् ।

ಸಮಾಧಾನ - ಹೌದು, ಆದರೆ ಅಂತರಧಿಕರಣದ ವಿಷಯವಾಕ್ಯದಲ್ಲಿ 'ಈಶ' ಶಬ್ದವಾಗಲೀ 'ಈಶ' ಶಬ್ದಕ್ಕೆ ಪರ್ಯಾಯಪದವಾದ 'ಈಶಾನ' ಶಬ್ದವಾಗಲೀ ಕೇಳಿಸುತ್ತಿಲ್ಲ. ಆದ್ದರಿಂದ ಇಲ್ಲಿ ಅಂತರಧಿಕರಣ ನ್ಯಾಯವನ್ನು ಉಲ್ಲೇಖಿಸಿಲ್ಲ. ಅಥವಾ ಅಂತರಧಿಕರಣದ ವಿಷಯವಾಕ್ಯದಲ್ಲಿ ನಿರವಕಾಶವಾದ ವಿಷ್ಣುಲಿಂಗಗಳಿರುವಂತೆ ಪ್ರಕೃತ ವಾಕ್ಯದಲ್ಲಿ ಅಂತಹ ವಿಷ್ಣುಲಿಂಗಗಳು ಇರುವುದಿಲ್ಲ. ಆದ್ದರಿಂದ ಆ ಅಧಿಕರಣದ ನ್ಯಾಯಕ್ಕೆ ಇದು ವಿಷಯವಾಗುವುದಿಲ್ಲ. ಅಥವಾ ಅಂತರಧಿಕರಣದಲ್ಲಿ ಎಲ್ಲಾ ಆಧಿದೈವಿಕ ಪದಗಳಿಗೆ ವಿಷ್ಣುವಿನಲ್ಲಿ ತಾತ್ಪರ್ಯವನ್ನಷ್ಟೇ ಹೇಳಿರುತ್ತಾರೆ ಹೊರತು, ಶಕ್ತಿವೃತ್ತಿಯನ್ನು ಹೇಳಿರುವುದಿಲ್ಲ. ಅಥವಾ 'ಶಬ್ದಾದೇವ' ಎಂಬ ಸೂತ್ರದಲ್ಲಿ 'ಈಶ' ಶಬ್ದಕ್ಕೆ ಪರ್ಯಾಯಪದವಾಗಿರುವ 'ಈಶಾನ' ಶಬ್ದವನ್ನು ನೇರವಾಗಿ ಸಮನ್ವಯ ಮಾಡಿರುತ್ತಾರೆ. ಈ ಎಲ್ಲ ಕಾರಣಗಳಿಂದ ಗ್ರಂಥಕಾರರು 'ಶಬ್ದಾದೇವ ಪ್ರಮಿತಃ' ಎಂಬ ಮುಂದಿನ ನ್ಯಾಯದಿಂದಲೇ ಸಾವಕಾಶತ್ವವನ್ನು 'ಈಶ' ಎಂಬ ಶಬ್ದಕ್ಕೆ ಆಶಂಕಿಸಿದ್ದಾರೆ.

ಅದೃಶ್ಯತ್ವಾಧಿಕರಣ (೧-೨-೬)

**प्रकाशः – प्रसिद्धेति ।**

**'यस्सर्वज्ञः सर्वविद्यस्य ज्ञानमयं तपः ।**
**तस्मादेतद्ब्रह्म नाम रूपमन्नं च जायते ।।'**

**इति श्रुतसर्वज्ञशब्दात्, तस्य च**

**'कृशानुरेतास्सर्वज्ञो धूर्जटिर्नीललोहितः ।'**

**इत्यमरोक्त्या रुद्रे प्रसिद्धत्वादित्यर्थः ।**

ಗ್ರಂಥದಲ್ಲಿ 'ಪ್ರಸಿದ್ಧೇತಿ' ಎಂದರೆ ಸರ್ವಜ್ಞ ಶಬ್ದವು ರುದ್ರನಲ್ಲಿ ಪ್ರಸಿದ್ಧವಾಗಿದೆಯೆಂದು ಹೇಳಿದ್ದಾರೆ. ಅದು ಹೀಗೆ -

'ಯಸ್ಸರ್ವಜ್ಞಃ ಸರ್ವವಿದ್ಯಸ್ಯ ಜ್ಞಾನಮಯಂ ತಪಃ।
ತಸ್ಮಾದೇತದ್ಬ್ರಹ್ಮ ನಾಮ ರೂಪಮನ್ನಂ ಚ ಜಾಯತೇ॥'

ಎಂಬ ಶ್ರುತಿಯಲ್ಲಿ ಕೇಳಿಸುತ್ತಿರುವ 'ಸರ್ವಜ್ಞ' ಶಬ್ದವು

'ಕೃಶಾನುರೇತಾಸ್ಸರ್ವಜ್ಞೋ ಧೂರ್ಜಟಿರ್ನೀಲಲೋಹಿತಃ।'

ಎಂಬ ಅಮರಕೋಶದ ಮಾತಿನಂತೆ ರುದ್ರನಲ್ಲಿಯೇ ಪ್ರಸಿದ್ಧವಾಗಿದೆಯೆಂದರ್ಥ.

**प्रकाशः** – यौगिकत्वे दोषमाह – **सर्वविदिति** । प्रातिस्विकबाधकोक्त्या अन्यप्रापकाणां निरवकाशत्वमुक्त्वा टीकाद्युक्तेन साधारणबाधकान्तरेणापि तदाह – **अक्षरादिति** ।

ಸರ್ವಜ್ಞಶಬ್ದವು ಯೌಗಿಕವಾದರೆ ದೋಷ ಬರುತ್ತದೆಂಬುದನ್ನು 'ಸರ್ವವಿತ್' ಎಂಬ ವಾಕ್ಯದಿಂದ ಹೇಳಿರುತ್ತಾರೆ. ಹಿಂದೆ (ಮೇಲ್ನೋಟಕ್ಕೆ ತೋರುವ) ಪ್ರಾತಿಸ್ವಿಕವಾದ ಬಾಧಕಗಳನ್ನು ಹೇಳುವ ಮೂಲಕ ಪೂರ್ವಪಕ್ಷಪ್ರಾಪಕವಾದ ಎಲ್ಲಾ ಲಿಂಗಗಳಿಗೆ ನಿರವಕಾಶತ್ವವನ್ನು ಹೇಳಿದರು. ಪ್ರಕೃತ ಟೀಕೆಯಲ್ಲಿ ಹೇಳಲ್ಪಟ್ಟ ಎಲ್ಲ ಪೂರ್ವಪಕ್ಷಲಿಂಗಗಳಿಗೆ ಸಾಧಾರಣವಾದ ಒಂದು ಬಾಧಕವನ್ನು 'ಅಕ್ಷರಾತ್' ಎಂಬ ಒಂದು ವಾಕ್ಯದಿಂದ ಹೇಳುತ್ತಿದ್ದಾರೆ.

**प्रकाशः** – यद्यपि टीकायां कारणत्वस्य अक्षरब्रह्मेशशब्दानां च सावकाशत्वमाशङ्क्य, ''अक्षरात्परतः परः'' इतिश्रुतनिकृष्टत्वेनैव तेषां निरवकाशत्वमुक्तं, नतु दृष्टान्तोक्तविश्वोपादानत्वादिना ।

ಟೀಕೆಯಲ್ಲಿ ಕಾರಣತ್ವ, ಅಕ್ಷರಶಬ್ದ, ಬ್ರಹ್ಮಶಬ್ದ, ಈಶಶಬ್ದ ಇವುಗಳಿಗೆಲ್ಲಾ ಸಾವಕಾಶತ್ವವನ್ನು ಆಶಂಕಿಸಿ ''ಅಕ್ಷರಾತ್ಪರತಃ ಪರಃ'' ಎಂಬ ಶ್ರುತಿಯಿಂದ ತಿಳಿಯುತ್ತಿರುವ ನಿಕೃಷ್ಟತ್ವದಿಂದಲೇ ಅವುಗಳಿಗೆಲ್ಲಾ

ನಿರವಕಾಶತ್ವವನ್ನು ಸಮರ್ಥಿಸಿದ್ದಾರೆ ಹೊರತು, ಶ್ರುತಿಯಲ್ಲಿ ಹೇಳಲ್ಪಟ್ಟ ವಿಶ್ವೋಪಾದಾನತ್ವವೇ ಮೊದಲಾದ ದೃಷ್ಟಾಂತ ಮಾತುಗಳಿಂದ ನಿರವಕಾಶತ್ವವನ್ನು ಸಮರ್ಥಿಸಿರುವುದಿಲ್ಲ.

**प्रकाशः** – तथाऽपि सति बाधके त्यागायोगात् – "अक्षरात्परतः परः इति श्रुतेरपि" इति न्यायविवरणगतापिशब्दस्य बाधकान्तरसमुच्चयार्थत्वमुपेत्य प्रातिस्विकबाधकोक्त्या च निरवकाशत्वमुक्तमिति ज्ञेयम् ।

ಆದರೂ ಸಹ ಬಾಧಕವಿದ್ದಾಗ ಬಿಡುವುದು ತಪ್ಪಾಗುತ್ತದೆ. ಆದ್ದರಿಂದ ಮತ್ತು 'ಅಕ್ಷರಾತ್ಪರತಃ ಪರಃ ಇತಿ ಶ್ರುತೇರಪಿ' ಎಂಬ ನ್ಯಾಯವಿವರಣದಲ್ಲಿರುವ 'ಅಪಿ' ಶಬ್ದವು ಮತ್ತೊಂದು ಬಾಧಕಕ್ಕೆ ಸಮುಚ್ಚಾಯಕವಾಗಿದೆ ಎಂಬ ಅರ್ಥವನ್ನು ಅಂಗೀಕರಿಸಿ ಪ್ರಾತಿಸ್ವಿಕವಾದ ಬಾಧಕವನ್ನು ಹೇಳುವ ಮೂಲಕ ನಿರವಕಾಶತ್ವವನ್ನು ಗ್ರಂಥಕಾರರು ಹೇಳಿದ್ದಾರೆಂದು ತಿಳಿಯಬೇಕು.

**प्रकाशः** – अन्त्यचिन्तास्थानन्यत्वकोटिं साधयितुं निकृष्टत्वेन श्रुतत्वं शङ्कापूर्वं साधयति – **नचेति** ।।

ತದರ್ಥ ಚಿಂತೆಗಳನ್ನು ತೋರಿಸುವಾಗ ಕೊನೆಯ ಚಿಂತೆಯಲ್ಲಿ ಅನನ್ಯತ್ವಕೋಟಿಯನ್ನು ಸಾಧಿಸಲು ಹೊರಟಿದ್ದಾರೆ. ಅಂದರೆ 'ಅಕ್ಷರತ್ಸಂಭವತೀಹ ವಿಶ್ವಮ್' ಎಂಬಲ್ಲಿ ಕೇಳಿಸುತ್ತಿರುವ ಅಕ್ಷರಶಬ್ದದ ಅರ್ಥ ಹಾಗೂ 'ಅಕ್ಷರಾತ್ಪರತಃ ಪರಃ' ಎಂಬಲ್ಲಿ ಕೇಳಿಸುತ್ತಿರುವ ಅಕ್ಷರಶಬ್ದದ ಅರ್ಥ ಒಂದೇ ಆಗಿರುವುದರಿಂದ ವಿಷ್ಣು ಪ್ರತಿಪಾದ್ಯನಾಗುವುದಿಲ್ಲ ಎಂದು ಪೂರ್ವಪಕ್ಷವನ್ನು ಮಾಡಲು ಹೊರಟಿದ್ದಾರೆ. ಇಲ್ಲಿ ನಿಕೃಷ್ಟತ್ವೇನ ಕೇಳಿಸುತ್ತಿರುವ ಅಕ್ಷರಶಬ್ದವನ್ನು ಶಂಕಾಪೂರ್ವಕವಾಗಿ ಸಾಧಿಸುತ್ತಿದ್ದಾರೆ 'ನಚ' ಇತ್ಯಾದಿ ವಾಕ್ಯಗಳಿಂದ. ಶ್ರುತಹಾನ ಅಶ್ರುತಕಲ್ಪನಾಗಳೆಂಬ ದೋಷವು ಬರುವ ಕಾರಣ ಎರಡೂ ಕಡೆಯಿರುವ ಅಕ್ಷರಶಬ್ದ ಪ್ರತಿಪಾದ್ಯನು ಒಬ್ಬನೇ ಆಗಿದ್ದಾನೆಂದು ಒಪ್ಪಬೇಕೆಂದು ಈ ವಾಕ್ಯದ ಅಭಿಪ್ರಾಯ.

**प्रकाशः** – विष्णोरिव पूर्वपक्षकोटीनामपि निकृष्टत्वेन श्रुतत्वमयुक्तं, श्रीतत्त्वापेक्षया विष्णोरर्वागन्यस्य अभावात्, तत्र सामानाधिकरण्येनान्वये चतुर्मुखादावयोगादित्यतः, "तस्यां सामानाधिकरण्येन उपपन्नम्" इति टीकोपलक्षणमिति भावेन "तस्मात्परस्याः प्रकृतेः परस्य हरेरभिधानादेव च" इति तत्त्वप्रदीपोक्तं हृदि कृत्वा सर्वत्र तदुपपत्तिमाह – **पूर्वपक्ष इति** ।।

ವಿಷ್ಣುವಿನಲ್ಲಿ ನಿಕೃಷ್ಟತ್ವವು ಇಲ್ಲದ ಕಾರಣ ಅಕ್ಷರಶಬ್ದ ಪ್ರತಿಪಾದ್ಯತ್ವವು ಹೇಗೆ ಬರುವುದಿಲ್ಲವೋ, ಅದರಂತೆ ಉಳಿದ ಪೂರ್ವಪಕ್ಷಕೋಟಿಗಳಲ್ಲಿಯೂ ನಿಕೃಷ್ಟವಾಗಿ ಕೇಳಿಸುತ್ತಿರುವ ಅಕ್ಷರಶಬ್ದ ಪ್ರತಿಪಾದ್ಯತ್ವವು ಬರುವುದಿಲ್ಲ. ಏಕೆಂದರೆ ಲಕ್ಷ್ಮೀದೇವಿಗಿಂತ ಉತ್ತಮನು, ವಿಷ್ಣುವಿಗಿಂತ ಅಧಮನೂ ಆದ ಒಬ್ಬ ವ್ಯಕ್ತಿಯು ಇದ್ದಿದ್ದರೆ ಆವಾಗ ಅಕ್ಷರಶಬ್ದದಿಂದ ಲಕ್ಷ್ಮಿಯು ಪ್ರತಿಪಾದ್ಯಳು. ಅವಳಿಗಿಂತ ಪರನಾದವನು ಇನ್ನೊಬ್ಬನು, ಅವನಿಗಿಂತ ಉತ್ತಮನಾದವನು ವಿಷ್ಣುವೆಂದು ಹೇಳಬಹುದಿತ್ತು. ಆದರೆ ಅಂತಹ ಒಬ್ಬ ವ್ಯಕ್ತಿಯು ಇರಲು

ಸಾಧ್ಯವಿಲ್ಲ. ಇನ್ನು ಸಾಮಾನಾಧಿಕರಣ್ಯದಿಂದ 'ಅಕ್ಷರಾತ್ಪರತಃ' ಎಂಬೆರಡು ಪದಗಳು ಒಂದೇ ವಸ್ತುವನ್ನು ಹೇಳುತ್ತವೆಂದು ಒಪ್ಪಿದರೆ ಚತುರ್ಮುಖಾದಿಗಳಲ್ಲಿ ಅಕ್ಷರಶಬ್ದ ಪ್ರತಿಪಾದ್ಯತ್ವವು ಕೂಡುವುದಿಲ್ಲ. ಈ ಪ್ರಶ್ನೆಗೆ ಟೀಕೆಯಲ್ಲಿ 'ತಸ್ಯಾಂ ಸಾಮಾನಾಧಿಕರಣ್ಯೇನ ಉಪಪನ್ನಮ್' ಎಂದು ಉತ್ತರಿಸಿದ್ದಾರೆ. ಇದು ಕೇವಲ ಉಪಲಕ್ಷಣವಾಗಿದೆಯೆಂಬ ಅಭಿಪ್ರಾಯದಿಂದ "ತಸ್ಮಾತ್ ಪರಸ್ಯಾಃ ಪ್ರಕೃತೇಃ ಪರಸ್ಯ ಹರೇರಭಿಧಾನಾದೇವ ಚ" ಎಂಬ ತತ್ತ್ವಪ್ರದೀಪದ ಮಾತನ್ನು ಮನಸ್ಸಿನಲ್ಲಿಟ್ಟುಕೊಂಡು ಎಲ್ಲ ಪೂರ್ವಪಕ್ಷಕೋಟಿಗಳಲ್ಲಿಯೂ ಅಕ್ಷರಾತ್ಪರತಃ ಪರತ್ವವು ಯುಕ್ತವಾಗುತ್ತದೆಂದು 'ಪೂರ್ವಪಕ್ಷೇ' ಎಂಬ ಗ್ರಂಥದಿಂದ ಪ್ರತಿಪಾದಿಸುತ್ತಿದ್ದಾರೆ.

**प्रकाशः – पक्षान्तरे त्विति ।** 'अक्षरात्' चतुर्मुखात् 'परतः' श्रीतत्त्वात् पर इति चतुर्मुखपक्षे; रुद्रपक्षे तु 'अक्षरात्' रुद्रात् 'परतः' चतुर्मुखात् पर इति पुम्मात्रविवक्षया ध्येयमिति भावः ।

ಚತುರ್ಮುಖಪಕ್ಷದಲ್ಲಿ ಶ್ರುತಿಗೆ ಹೀಗರ್ಥ - ಅಕ್ಷರಾತ್ = ಚತುರ್ಮುಖನಿಗಿಂತ, ಪರತಃ = ಲಕ್ಷ್ಮೀದೇವಿಗಿಂತಲೂ, ಪರಃ = ವಿಷ್ಣು ಉತ್ತಮನಾಗಿದ್ದಾನೆ ಎಂದು. ಮತ್ತು ರುದ್ರಪಕ್ಷದಲ್ಲಿ ಹೀಗರ್ಥ - ಅಕ್ಷರಾತ್ = ರುದ್ರನಿಗಿಂತ, ಪರತಃ = ಉತ್ತಮನಾದ ಚತುರ್ಮುಖನಿಗಿಂತ, ಪರಃ = ವಿಷ್ಣು ಸರ್ವೋತ್ತಮನು ಎಂದು. ರುದ್ರಪಕ್ಷದಲ್ಲಿ ಕೇವಲ ಪುರುಷಪರನ್ನೇ ವಿವಕ್ಷಿಸಬೇಕು. ಇಲ್ಲದಿದ್ದರೆ ಸರಸ್ವತಿ, ಲಕ್ಷ್ಮೀ ಮೊದಲಾದವರು ಮಧ್ಯದಲ್ಲಿರುವುದರಿಂದ ವಿಷ್ಣುವಿಗೆ 'ಅಕ್ಷರತ್ ಪರತಃ' ಪರತ್ವವನ್ನು ಹೇಳಲು ಬರುವುದಿಲ್ಲವೆಂದು ತಿಳಿಯಬೇಕು.

**प्रकाशः** – ननु यथा सिद्धान्ते निकृष्टत्वश्रवणं बाधकं तथा पूर्वपक्षेऽपि परविद्याविषयत्वं बाधकमित्याशङ्क्य, "यदा वेदादि अन्यविषयतया योज्यते, तदा तस्यापरविद्यात्वम्" इत्यादिसिद्धान्तटीकाव्यावर्त्यं च परापरविद्ययोः भिन्नार्थत्वमुपेत्याह – **नचेति ।**

ಯಾವರೀತಿಯಾಗಿ ಸಿದ್ಧಾಂತದಲ್ಲಿ ನಿಕೃಷ್ಟತ್ವವು ಬಾಧಕವಾಗಿದೆಯೋ ಅದರಂತೆ ಪೂರ್ವಪಕ್ಷದಲ್ಲಿಯೂ ಸಹ ಪರವಿದ್ಯಾವಿಷಯತ್ವವು ಬಾಧಕವಾಗಿದೆಯಲ್ಲವೇ? ಎಂದು ಆಶಂಕಿಸಿ "ಯದಾ ವೇದಾದಿ ಅನ್ಯವಿಷಯತಯಾ ಯೋಜ್ಯತೇ, ತದಾ ತಸ್ಯಾಪರವಿದ್ಯಾತ್ವಮ್" ಎಂಬ ಸಿದ್ಧಾಂತ ಟೀಕೆಯಿಂದ ವ್ಯಾವರ್ತ್ಯವಾದ ಪೂರ್ವಪಕ್ಷವನ್ನು 'ನಚ' ಇತ್ಯಾದಿ ಗ್ರಂಥದಿಂದ ತೋರಿಸುತ್ತಿದ್ದಾರೆ. ಮತ್ತು ಪರವಿದ್ಯೆ ಹಾಗೂ ಅಪರವಿದ್ಯೆಗಳು ಭಿನ್ನಾರ್ಥವಾಗಿವೆ ಎಂದು ಅಂಗೀಕರಿಸಿ ಪೂರ್ವಪಕ್ಷ ಮಾಡುತ್ತಿದ್ದಾರೆ. (ಸಿದ್ಧಾಂತದಲ್ಲಿ ಪರವಿದ್ಯೆಗೆ ವಿಷಯವಾದ ಋಗಾದಿಗಳೇ ಅಪರವಿದ್ಯೆಗೂ ಸಹ ವಿಷಯವಾಗಿವೆ ಎಂದು ಸಮಾನಾರ್ಥಕತ್ವವನ್ನು ಹೇಳುತ್ತಾರೆ. ಆದರೆ ಪೂರ್ವಪಕ್ಷದಲ್ಲಿ ಪರವಿದ್ಯೆಯೇ ಬೇರೆ ಅಪರವಿದ್ಯೆಯೇ ಬೇರೆ ಎಂದು ಒಪ್ಪಿರುತ್ತಾರೆಂದು ತಿಳಿಯಬೇಕು.)

**प्रकाशः** – ऋगादिविषयत्वोपपादनाय 'शास्त्रयोनौ' इत्युक्तम्, शास्त्रयोनिसूत्रे तथोक्तत्वादिति भावः । **प्रतियोगीति** । विरोधीत्यर्थः । **प्रकृतेरिति** । प्रकृत्यादेरेवेत्यर्थः ।

ವಿಷ್ಣು ಋಗಾದಿವೇದಗಳಿಗೆ ವಿಷಯನಾಗಿದ್ದಾನೆಂಬುದನ್ನು ಉಪಪಾದಿಸುವುದಕ್ಕಾಗಿ 'ಶಾಸ್ತ್ರಯೋನೌ' ಎಂದು ಹೇಳಿದ್ದಾರೆ. ಅಂದರೆ 'ಶಾಸ್ತ್ರಯೋನಿತ್ವಾತ್' ಎಂಬ ಸೂತ್ರದಲ್ಲಿ ಅಪರವಿದ್ಯೆಗೆ ವಿಷಯನಾಗಿದ್ದಾನೆಂದು ಹೇಳಿರುತ್ತಾರೆ ಎಂದರ್ಥ. 'ಪ್ರತಿಯೋಗಿ' ಶಬ್ದಕ್ಕೆ 'ವಿರೋಧಿ' ಎಂದರ್ಥ. 'ಪ್ರಕೃತೇಃ' ಎಂದರೆ ಪ್ರಕೃತ್ಯಾದಿಗಳಿಗೆ ಎಂದರ್ಥ. ಆದ್ದರಿಂದ ಅಪರವಿದ್ಯೆಗೆ ವಿಷಯನಾದ ವಿಷ್ಣು ವಿರೋಧಿಯಾದ ಪರವಿದ್ಯೆಗೆ ವಿಷಯನಾಗುವುದಿಲ್ಲ. ಅನಿವಾರ್ಯವಾಗಿ ಪ್ರಕೃತ್ಯಾದಿಗಳೇ ಪರವಿದ್ಯೆಗೆ ವಿಷಯವಾಗಿವೆಯೆಂದು ಒಪ್ಪಬೇಕು.

**प्रकाशः** – ननु ''अक्षरात्परतः परः'' इति वाक्योक्तपरवस्तु किञ्चिदुपेत्य अत्र प्रकृत्यादिरिति पूर्वपक्षकरणे,

'चित्त्वे तु तेन कार्त्स्न्येनावेद्यत्वं नेश्वरं विना ।'

इति प्रागुक्तदिशा अपरिच्छिन्नवैभवत्वपर्यवसन्नं मुख्यमदृश्यत्वं निकृष्टत्वेनाभ्युपेते प्रकृत्यादौ पूर्वपक्षिणा शङ्कितुमशक्यमिति कथमेतादृश्यस्य आनन्दमयादावुक्तस्य विष्णुधर्मस्य पूर्वपक्षे आक्षेपः स्यात् ।

ಪ್ರಧಾನ ಆಕ್ಷೇಪ - ಈ ಅಧಿಕರಣದಲ್ಲಿ ಪ್ರಕೃತ್ಯಾದಿಗಳೇ ಅಕ್ಷರಶಬ್ದವಾಚ್ಯರಾಗುತ್ತಾರೆಂದು ಪೂರ್ವಪಕ್ಷ ಮಾಡಲಾಗಿದೆ. ಇದು ಎಷ್ಟು ಸರಿ? ಎಂಬುದನ್ನು ವಿಚಾರ ಮಾಡಬೇಕು. ಏಕೆಂದರೆ ಪೂರ್ವಪಕ್ಷದ ಫಲವೇನೆಂದರೆ ಹಿಂದಿನ ಅಧಿಕರಣದಲ್ಲಿ ಹೇಳಲ್ಪಟ್ಟ ಪೃಥಿವ್ಯಾದ್ಯವಿದಿತತ್ವವೆಂಬ ಧರ್ಮವು ವಿಷ್ಣುವಿನಲ್ಲಿ ಕೂಡುವುದಿಲ್ಲವೆಂದು ತಿಳಿಸುವಿಕೆ. ಅಂದರೆ ಸಂಪೂರ್ಣವಾಗಿ ವಿಷ್ಣು ತಿಳಿಯಲಾರನೆಂದು ಹಿಂದಿನ ಅಧಿಕರಣದಲ್ಲಿ ನಿರ್ಣಯಿಸಲಾಯಿತು. ಈ ಧರ್ಮವು ಪ್ರಕೃತ್ಯಾದಿಗಳಲ್ಲಿಯೂ ಸಹ ಬರುತ್ತದೆಂದು ಈ ಪೂರ್ವಪಕ್ಷದ ಫಲವೆಂದು ಹೇಳಬೇಕು; ಆದರೆ 'ಅಕ್ಷರಾತ್ಪರತಃ ಪರಃ' ಎಂಬ ವಾಕ್ಯದಿಂದ ಮತ್ತೊಬ್ಬ ಉತ್ತಮಪುರುಷನನ್ನು ಒಪ್ಪಿ ಪ್ರಕೃತ್ಯಾದಿಗಳು ನಿಕೃಷ್ಟವಾಗಿವೆ; ಆದ್ದರಿಂದ ಅಕ್ಷರಶಬ್ದ ಪ್ರತಿಪಾದ್ಯವಾಗಿವೆಯೆಂದು ಪೂರ್ವಪಕ್ಷ ಮಾಡುತ್ತಿದ್ದೀರಿ. ಹೀಗೆ ಹೇಳಿದರೆ, 'ಚಿತ್ತ್ವೇ ತು ತೇನ ಕಾರ್ತ್ಸ್ನ್ಯೇನಾವೇದ್ಯತ್ವಂ ನೇಶ್ವರಂ ವಿನಾ ।' ಎಂದು ಹಿಂದಿನ ಅಧಿಕರಣದಲ್ಲಿ ಹೇಳಲ್ಪಟ್ಟ ಅಪರಿಚ್ಛಿನ್ನವೈಭವತ್ವದಲ್ಲಿ ಪರ್ಯವಸಾನವಾಗುವ ಮುಖ್ಯ ಅದೃಶ್ಯತ್ವವನ್ನು ನಿಕೃಷ್ಟವಾದ ಪ್ರಕೃತ್ಯಾದಿಗಳಲ್ಲಿ ಪೂರ್ವಪಕ್ಷಿಯು ಹೇಳಲು ಸಾಧ್ಯವಿಲ್ಲ. ಅಂದರೆ ಪೂರ್ವಪಕ್ಷಕಾರನ ಉದ್ದೇಶವೇ ಪೂರ್ಣವಾಗುವುದಿಲ್ಲ. ಆದ್ದರಿಂದ ಆನಂದಮಯಾಧಿಕರಣದಲ್ಲಿ ಹೇಳಲ್ಪಟ್ಟ ಅಥವಾ ಹಿಂದಿನ ಅಧಿಕರಣದಲ್ಲಿ ಹೇಳಲ್ಪಟ್ಟ ಅದೃಶ್ಯತ್ವವೆಂಬ ವಿಷ್ಣುವಿನ ಧರ್ಮವನ್ನು ಪೂರ್ವಪಕ್ಷದಲ್ಲಿ ಆಕ್ಷೇಪ ಮಾಡಲು ಬರುವುದಿಲ್ಲವಲ್ಲವೇ?

**प्रकाशः – न चात्र श्रुतनिकृष्टत्वस्य परत्वस्य च अक्षरत्वेनाभिमते प्रकृत्यादावेव कथञ्चिदुपपन्नताऽभिप्रेतेति ईश्वरपरत्वमेव नोपेयते पूर्वपक्षिणेति वाच्यं,**

ಅವಾಂತರ ಸಮಾಧಾನ - ಶ್ರುತಿಯಲ್ಲಿ 'ಅಕ್ಷರಾತ್ಪರತಃ ಪರಃ' ಎಂಬುದಾಗಿ ಪರತ್ವಕ್ಕೆ ಅವಧಿ ಭೂತವಾದ ಪ್ರಕೃತ್ಯಾದಿಗಳು ಅಕ್ಷರಶಬ್ದ ಪ್ರತಿಪಾದ್ಯವಾಗಿವೆ. ಇಂತಹ ಪ್ರಕೃತ್ಯಾದಿಗಳು ನಿಕೃಷ್ಟವಾದ್ದರಿಂದಲೇ ಅಕ್ಷರಶಬ್ದ ಪ್ರತಿಪಾದ್ಯವೆಂದು ಒಪ್ಪುತ್ತೇವೆ. ಆದರೂ ಪರತ್ವವನ್ನೂ ಸಹ ನಿಕೃಷ್ಟವಾದ ಪ್ರಕೃತ್ಯಾದಿಗಳಲ್ಲಿಯೇ ಒಪ್ಪುತ್ತೇವೆ. ಇದನ್ನು ಅನಿವಾರ್ಯವಾಗಿ ಕೂಡಿಸಲೇಬೇಕು. ಏನೇ ಆದರೂ ಈಶ್ವರನನ್ನು ಸರ್ವೋತ್ತಮನೆಂದು ಮಾತ್ರ ಒಪ್ಪಲು ಸಾಧ್ಯವಿಲ್ಲವೆಂದು ಪೂರ್ವಪಕ್ಷಿಗಳ ಅಭಿಪ್ರಾಯ . ಇದು ತಪ್ಪು.

**प्रकाशः – तथात्वे पूर्वत्र निर्णीतादृश्यत्वरूपविष्णुलिङ्गेन अक्षरस्य विष्णुत्वमेवोपेत्य परापरत्वोपपत्तिरुच्यताम् ।**

ಏಕೆಂದರೆ ಹೀಗೆ ಅಪರತ್ವ ಪರತ್ವಗಳನ್ನು ಪ್ರಕೃತಿಯಲ್ಲೇ ಒಪ್ಪುವುದಾದರೆ ಹಿಂದಿನ ಅಧಿಕರಣಗಳಲ್ಲಿ ನಿರ್ಣಯಿಸಲ್ಪಟ್ಟ ಅದೃಶ್ಯತ್ವವೆಂಬ ವಿಷ್ಣುಲಿಂಗದ ಬಲದಿಂದಲೇ ಅಕ್ಷರಶಬ್ದವಾಚ್ಯನು ವಿಷ್ಣುವೇ ಆಗಿದ್ದಾನೆಂದು ನಿರ್ಣಯಿಸೋಣ. ಪರವತ್ವಾವಧಿತ್ವವನ್ನು ವಿಷ್ಣುವಿನಲ್ಲಿ ಹೇಳಲು ಹೇಗೆ ಸಾಧ್ಯವೆಂದು ಪ್ರಶ್ನಿಸಬಾರದು. ನೀವು ಪರತ್ವವನ್ನು ನಿಕೃಷ್ಟತ್ವವನ್ನು ಪ್ರಕೃತಿಯೆಂಬ ಒಂದೇ ಪದಾರ್ಥದಲ್ಲಿ ಒಪ್ಪಿದಂತೆ ನಾವೂ ಸಹ ವಿಷ್ಣುವಿನಲ್ಲಿ ಅನಿವಾರ್ಯವಾಗಿ ಪರತ್ವಾವಧಿತ್ವವನ್ನು ಮತ್ತು ಅಕ್ಷರಶಬ್ದ ಪ್ರತಿಪಾದ್ಯತ್ವವನ್ನು ಒಪ್ಪುತ್ತೇವೆ.

**प्रकाशः – नच ''अक्षरात्'' इत्यादिना श्रुतोपादानत्वादिना विष्णुनिरासेन प्रकृत्यादिरुच्यत इति वाच्यं,**

ಅವಾಂತರ ಆಕ್ಷೇಪ - ಹಾಗಾದರೆ 'ಅಕ್ಷರಾತ್ಪರತಃ ಪರಃ' ಇತ್ಯಾದಿ ವಾಕ್ಯದಲ್ಲಿ ಕೇಳಿಸುತ್ತಿರುವ ನಿಕೃಷ್ಟತ್ವವನ್ನು ತ್ಯಾಗ ಮಾಡೋಣ. ಅಲ್ಲೇ ಕೇಳಿಸುತ್ತಿರುವ ಉಪಾದಾನತ್ವ, ಬ್ರಹ್ಮಶಬ್ದ ಮೊದಲಾದ ಲಿಂಗಗಳಿಂದ ಪ್ರಕೃತ್ಯಾದಿಗಳೇ ಅಕ್ಷರಶಬ್ದವಾಚ್ಯವಾಗಿವೆಯೆಂದು ಸಮರ್ಥಿಸೋಣ. ಈ ಪೂರ್ವಪಕ್ಷಲಿಂಗಗಳಿಂದಲೂ ವಿಷ್ಣುಪಕ್ಷವನ್ನು ನಿರಾಸ ಮಾಡಬಹುದು. ಆದ್ದರಿಂದ ಪ್ರಕೃತ್ಯಾದಿಗಳಿಗೇ ಪರತ್ವಾವಧಿತ್ವಾದಿಗಳು ಬರುತ್ತದೆ. ಇದು ತಪ್ಪು.

**प्रकाशः – टीकायां परत्वावधित्वबाधकबलेन पूर्वपक्षप्रापकाणां निरवकाशत्वोक्तेरिति चेत्**

ಅವಾಂತರ ಸಮಾಧಾನ - ಹೀಗೆ ನಿಕೃಷ್ಟತ್ವವನ್ನು ಬಿಡುವುದಾದರೆ ಟೀಕೆಯನ್ನೇ ಬಿಟ್ಟಂತಾಗುತ್ತದೆ. ಏಕೆಂದರೆ ಟೀಕೆಯಲ್ಲಿ ಪರತ್ವಾವಧಿತ್ವವೆಂಬ ಪ್ರಬಲವಾದ ಬಾಧಕಯುಕ್ತಿ ಬಲದಿಂದ ಪೂರ್ವಪಕ್ಷಪ್ರಾಪಕ-ಯುಕ್ತಿಗಳಿಗೆ ನಿರವಕಾಶತ್ವವನ್ನು ಸಮರ್ಥಿಸಿದ್ದಾರೆ. ಟೀಕಾ ಮಾತನ್ನೇ ಬಿಟ್ಟಂತಾಗುವುದರಿಂದ ನಿಕೃಷ್ಟತ್ವವನ್ನು ವಿವಕ್ಷೆ ಮಾಡದೇ ಇರಬಾರದು.

ಪರಿಪೂರ್ಣಚಂದ್ರಿಕಾ

ಒಟ್ಟಾರೆ ಪೂರ್ವಪಕ್ಷಿಯು ಅಕ್ಷರಶಬ್ದವಾಚ್ಯತ್ವವನ್ನು ಪ್ರಕೃತ್ಯಾದಿಗಳಲ್ಲಿ ಒಪ್ಪಿದಾಗ ಹಿಂದಿನ ಅಧಿಕರಣದಲ್ಲಿ ನಿರ್ಣಯಿಸಲ್ಪಟ್ಟ ಸಾಕಲ್ಯೇನ ಅವಿದಿತತ್ವ, ಅಪರಿಚ್ಛಿನ್ನವೈಭವತ್ವ, ಸರ್ವೋತ್ತಮತ್ವ ಮೊದಲಾದ ಲಿಂಗಗಳನ್ನೂ ಸಹ ಪ್ರಕೃತ್ಯಾದಿಗಳಲ್ಲಿಯೇ ಒಪ್ಪಬೇಕಾಗುತ್ತದೆ ಹಾಗೇ ಒಪ್ಪಿದಾಗ ಇಲ್ಲಿ ನಿಕೃಷ್ಟತ್ವವನ್ನು ಒಪ್ಪಿ ಅಕ್ಷರಶಬ್ದಪ್ರತಿಪಾದ್ಯತ್ವವನ್ನು ಸಮರ್ಥಿಸಲು ಹೇಗೆ ಸಾಧ್ಯ ? ಎಂದು ಆಕ್ಷೇಪದ ಸಾರಾಂಶ.

**प्रकाशः** – मैवम्, अदृश्यत्वं चक्षुरगोचरत्वमित्युपेत्य ''अदृश्येऽनात्म्ये'' इत्युक्तादृश्यत्वस्यापि प्रकृत्यादावाशङ्कनात् । पूर्वाक्षेपचन्द्रिका त्वर्थान्तराभिप्राया ।

ಪ್ರಧಾನ ಸಮಾಧಾನ - ಈ ಆಕ್ಷೇಪವು ಸರಿಯಿಲ್ಲ. ಏಕೆಂದರೆ ಅದೃಶ್ಯತ್ವ ಶಬ್ದಕ್ಕೆ ಅಪರಿಚ್ಛಿನ್ನವೈಭವವೆಂದಾಗಲೀ, ಸಾಕಲ್ಯೇನ ತಿಳಿಯಲು ಸಾಧ್ಯವಿಲ್ಲವೆಂದಾಗಲೀ ಹೇಳಬಾರದು. ಕೇವಲ ಚಕ್ಷುರಿಂದ್ರಿಯಕ್ಕೆ ಗೋಚರನಾಗುವುದಿಲ್ಲವೆಂದಷ್ಟೇ ಅರ್ಥವನ್ನು ವಿವಕ್ಷಿಸಬೇಕು. ಪ್ರಕೃತ್ಯಾದಿಗಳು ಅತ್ಯಂತ ಸೂಕ್ಷ್ಮವಾದ್ದರಿಂದ ಚಕ್ಷುರಿಂದ್ರಿಯಕ್ಕೆ ಗೋಚರವಾಗುತ್ತಿಲ್ಲ. ಆದ್ದರಿಂದಲೇ "ಅದೃಶ್ಯೇಽನಾತ್ಮ್ಯೇ" ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ಅದೃಶ್ಯತ್ವವನ್ನೂ ಪ್ರಕೃತ್ಯಾದಿಗಳಲ್ಲಿ ಪೂರ್ವಪಕ್ಷಿಯು ಆಶಂಕಿಸಿದ್ದಾನೆ. ಮತ್ತು ಹಿಂದಿನ ಅಧಿಕರಣದಿಂದ ಆಕ್ಷೇಪವನ್ನು ತೋರಿಸುವ ಚಂದ್ರಿಕಾ ವಾಕ್ಯಕ್ಕೂ ಸಹ ಬೇರೆಯಾಗಿಯೇ ಅರ್ಥೈಸಬೇಕು.

**प्रकाशः** – न चैवमपि ब्रह्मरुद्रयोर्जीवत्वेन ''अचक्षुश्श्रोत्रं तदपाणिपादम्'' इत्युक्तजीवधर्मभूतचक्षुरादिराहित्यं कथं घटताम् येन ''अदृश्येऽनात्म्ये'' इत्यनात्म्यपदोक्तस्य जीवगुणराहित्यस्य टीकोक्त आक्षेप उपपद्येतेति वाच्यं,

ಆಕ್ಷೇಪ - ಬ್ರಹ್ಮ ಹಾಗೂ ರುದ್ರ ಇಬ್ಬರೂ ಸಹ ಜೀವರಾಗಿದ್ದಾರೆ. ಹೀಗಿರುವಾಗ "ಅಚಕ್ಷುಃಶ್ರೋತ್ರಂ ತದಪಾಣಿಪಾದಂಮ್" ಎಂಬಲ್ಲಿ ಹೇಳಲ್ಪಟ್ಟ ಜೀವನ ಧರ್ಮವೆನಿಸಿದ ಚಕ್ಷುರಾದಿರಾಹಿತ್ಯವನ್ನು ಹೇಗೆ ಕೂಡಿಸುವುದು? ಏಕೆಂದರೆ, ಬ್ರಹ್ಮ ರುದ್ರಾದಿಗಳು ಜೀವರಾದ ಮೇಲೆ ಚಕ್ಷುರಾದಿಂದ್ರಿಯಗಳು ಇರಬೇಕಲ್ಲವೇ? ಒಂದು ವೇಳೆ ಇದನ್ನು ಕೂಡಿಸುವುದಾದರೆ ಮಾತ್ರ 'ಅದೃಶ್ಯೇಽನಾತ್ಮ್ಯೇ' ಎಂಬಲ್ಲಿ 'ಅನಾತ್ಮ್ಯೇ' ಎಂಬ ಪದದಿಂದ ಹೇಳಲ್ಪಟ್ಟ ಜೀವಗುಣರಾಹಿತ್ಯವು ಟೀಕೆಯಲ್ಲಿ ಹೇಳಲ್ಪಟ್ಟ ಆಕ್ಷೇಪದ ಅಭಿಪ್ರಾಯವಾಗುತ್ತಿತ್ತು. ಆದರೆ ಜೀವಗುಣರಾಹಿತ್ಯವನ್ನು ಆಕ್ಷೇಪದ ಅಭಿಪ್ರಾಯವೆಂದೇ ಹೇಳಲು ಸಾಧ್ಯವಿಲ್ಲವಲ್ಲವೇ?

**प्रकाशः** – तयोर्जीवत्वमेव नेतीति वा, जीवोत्तमत्वेनेतरजीववैलक्षण्येन वा तदुपपत्तिरित्याशयादिति ।

ಸಮಾಧಾನ - ಇದು ತಪ್ಪು. ಬ್ರಹ್ಮ ಹಾಗೂ ರುದ್ರನಿಗೆ ಜೀವತ್ವವನ್ನೇ ಪೂರ್ವಪಕ್ಷಕಾರನು ಒಪ್ಪುವುದಿಲ್ಲ. ಅಂದರೆ ಪೂರ್ವಪಕ್ಷಕಾರನು ಬ್ರಹ್ಮ ಹಾಗೂ ರುದ್ರಾದಿಗಳನ್ನು ಪರಮಾತ್ಮನೆಂದೇ ಒಪ್ಪುತ್ತಾನೆ. ಅಥವಾ ಅವರು ಜೀವೋತ್ತಮರಾಗಿರುವುದರಿಂದ ಇತರ ಜೀವರುಗಳಿಗಿಂತ ವಿಲಕ್ಷಣರಾಗಿರುತ್ತಾರೆ. ಆದ್ದರಿಂದಲೂ ಚಕ್ಷುರಾದಿರಾಹಿತ್ಯವನ್ನು ಶ್ರುತಿ ಹೇಳುವಂತೆ ಅವರಲ್ಲಿ ಕೂಡಿಸಬಹುದು ಎಂದು ಪೂರ್ವಪಕ್ಷದ ಅಭಿಪ್ರಾಯ.

ಇಲ್ಲಿಗೆ ಪೂರ್ವಪಕ್ಷವು ಮುಗಿಯಿತು.

**गुरुराजीयम्** – ।। ॐ अदृश्यत्वादिगुणको धर्मोक्तेः ॐ ।। पूर्वपक्षसिद्धान्तयोः फलफलिभावमाह – **अनन्यत्व इति** ।। **अक्षराधिकरणन्यायेनेति** ।। 'अक्षरमम्बरान्तधृतेः' इत्यधिकरणन्यायेनेत्यर्थः । नन्वेवं चित्प्रकृतेरप्यदृश्यत्वमित्यपि न स्यात् । तस्या अपि विश्वोपादनत्वासम्भवादित्यत आह – **चित्प्रकृतौ त्विति** ।। **रूढेरिति** ।। 'कृशानुरेतास्सर्वज्ञः' इत्यभिधानादिति भावः ।। **सामानाधिकरण्येनेति** ।। परं यदक्षरं तस्मादिति सामानाधिकरण्येनेत्यर्थः ।।




ಪೂರ್ವಪಕ್ಷ ಹೀಗಿದೆ - ಆನಂದಮಯಾಧಿಕರಣದಲ್ಲಿ 'ಅದೃಶ್ಯೇऽನಾತ್ಮ್ಯೇ' ಎಂದು ತೈತ್ತಿರೀಯ ವಾಕ್ಯವನ್ನು ಉಲ್ಲೇಖಮಾಡಿ ವಿಷ್ಣುವಿನಲ್ಲಿ ಅದೃಶ್ಯತ್ವಗುಣವನ್ನು ಹೇಳಲಾಗಿದೆ. ಮತ್ತು ಹಿಂದಿನ ಅಂತರ್ಯಾಮ್ಯಧಿಕರಣದಲ್ಲಿ "ಸ ಯೋऽತೋऽಶ್ರುತೋಽಮತೋ" ಇತ್ಯಾದಿ ಐತರೇಯೋಪನಿಷತ್ತಿನ ವಾಕ್ಯದಿಂದ ವಿಷ್ಣುವಿಗೆ ಅದೃಶ್ಯತ್ವ ಗುಣವನ್ನು ನಿರ್ಣಯಿಸಲಾಗಿದೆ. ಆದರೆ ಮಾಂಡೂಕ್ಯೋಪನಿಷತ್ತಿನಲ್ಲಿ ಇದೇ ಅದೃಶ್ಯತ್ವಗುಣವನ್ನು ಅಕ್ಷರತತ್ತ್ವಕ್ಕೆ ಹೇಳಲಾಗಿದೆ. ಈ ಅಕ್ಷರತತ್ವವನ್ನು ವಿಷ್ಣುವೆಂದು ನಿರ್ಣಯಿಸಲಾಗದು. ಏಕೆಂದರೆ 'ಅಕ್ಷರಾತ್ಸಂಭವತೀಹ ವಿಶ್ವಮ್' ಅಕ್ಷರತತ್ವದಿಂದ ಜಗತ್ತು ಹುಟ್ಟಿತು ಎಂದು ಹೇಳಿ. 'ಅಕ್ಷರಾತ್ಪರತಃ ಪರಃ' ಎಂಬುದಾಗಿ ಅಕ್ಷರತತ್ತ್ವಕ್ಕಿಂತಲೂ ವಿಷ್ಣು ಉತ್ತಮೋತ್ತಮನಾಗಿದ್ದಾನೆಂದು ಶ್ರುತಿ ಹೇಳುತ್ತಿದೆ. ಒಂದು ವೇಳೆ ವಿಷ್ಣುವೇ ಅಕ್ಷರನಾದರೆ ಅವನಿಗಿಂತ ಉತ್ತಮನಾದವನನ್ನು ಹೇಳಬೇಕಾಗುತ್ತದೆ. ಆವಾಗ ವಿಷ್ಣು ಸರ್ವೋತ್ತಮತ್ವವೇ ಭಗ್ನವಾಗುವ ಪ್ರಸಂಗ ಬರುತ್ತದೆ. ಆದ್ದರಿಂದ ಅಕ್ಷರತತ್ತ್ವ ವಿಷ್ಣುವಲ್ಲವೆಂಬುದನ್ನು ಒಪ್ಪಬೇಕು.

ಹಾಗಾದರೆ ಅಕ್ಷರತತ್ವ ಎಂದರೆ ಯಾವುದು ? ಜಡಪ್ರಕೃತಿಯಾಗಬಹುದು. ಶ್ರುತಿಯು 'ತಥಾಕ್ಷರಾತ್ಸಂಭವತೀಹ ವಿಶ್ವಮ್' ಎಂದು ಜಗತ್ತಿಗೆ ಉಪಾದಾನ ಕಾರಣವಾಗಿರುವುದನ್ನು ಅಕ್ಷರ ಎಂದು ಹೇಳುತ್ತಿದೆ. ಜಡಪ್ರಕೃತಿಪಕ್ಷದಲ್ಲಿ ಈ ಉಪಾದಾನಕಾರಣತ್ವವು ಸಮಂಜಸವಾಗುತ್ತದೆ. ಶ್ರುತಿಯಲ್ಲಿ ಕಾರಣತ್ವವನ್ನಷ್ಟೇ ಹೇಳಿರುವುದರಿಂದ ನಿಮಿತ್ತಕಾರಣವೆಂದು ವಿವಕ್ಷಿಸಬಹುದಲ್ಲವೇ? ಎಂದು ಪ್ರಶ್ನಿಸಬಾರದು. ನಿಮಿತ್ತಕಾರಣಕ್ಕಿಂತ ಉಪಾದಾನಕಾರಣವು ಅಂತರಂಗವಾದ್ದರಿಂದ ಬಹಿರಂಗವಾದ ನಿಮಿತ್ತಕಾರಣಯೆಂಬರ್ಥವನ್ನು ಬಿಡಬೇಕಾಗುತ್ತದೆ.

ಅಥವಾ ಚೇತನಪ್ರಕೃತಿಯನ್ನು ಅಕ್ಷರವೆನ್ನಬಹುದು. ಗೀತೆಯಲ್ಲಿ ಲಕ್ಷ್ಮೀದೇವಿಯನ್ನು ಅಕ್ಷರವೆಂದು ಹೆಸರಿಸಲಾಗಿದೆ. ವಿಶ್ವಕ್ಕೆ ಉಪಾದಾನಕಾರಣವಾದ ಜಡಪ್ರಕೃತಿಗೆ ಇವಳು ಅಭಿಮಾನಿಯಾದ್ದರಿಂದ ಲಕ್ಷ್ಮೀದೇವಿಯನ್ನು ಉಪಾದಾನಕಾರಣವೆಂದು ಹೇಳಬಹುದು.

ಅಥವಾ ಚತುರ್ಮುಖನೂ ಸಹ ಅಕ್ಷರನಾಗಬಹುದು. ಶ್ರುತಿಯಲ್ಲಿ ಬ್ರಹ್ಮ ಎಂಬ ಹೆಸರು ಪ್ರಸ್ತುತವಾಗಿದೆ. ಜಾಯಮಾನತ್ವ ಮೊದಲಾದ ಲಿಂಗಗಳ ಬಲದಿಂದ ಬ್ರಹ್ಮಶಬ್ದವು ಚತುರ್ಮುಖನನ್ನೇ ಪ್ರತಿಪಾದಿಸುತ್ತದೆ ಹೊರತು

ವಿಷ್ಣುವನ್ನಲ್ಲ. ಚತುರ್ಮುಖನು ಜಗತ್ತಿಗೆ ಕಾರಣನೂ ಆಗಿದ್ದಾನೆ. ಆದ್ದರಿಂದ ಅವನೂ ಸಹ ಇಲ್ಲಿ ಅಕ್ಷರನೆಂದು ಪ್ರಸ್ತುತನಾಗಿರಬಹುದು.

ಅಥವಾ ರುದ್ರನಲ್ಲಿ ಪ್ರಸಿದ್ಧವಾದ ಈಶ ಶಬ್ದವು ಈ ಪ್ರಕರಣದಲ್ಲಿ ಕೇಳಿಸುತ್ತಿರುವುದರಿಂದ ರುದ್ರನು ಅದೃಶ್ಯತ್ವಾದಿಗುಣಗಳುಳ್ಳ ಅಕ್ಷರನಾಗಬಹುದು.

ಹೀಗೆ ನಾಲ್ಕು ಬಗೆಯಲ್ಲಿ ಪೂರ್ವಪಕ್ಷ ಮಾಡಬಹುದು. ವಿಚಾರ ಮಾಡಿದರೆ ವಿಷ್ಣುವನ್ನು ಅಕ್ಷರನೆಂದು ಒಪ್ಪಲು ತೊಂದರೆಯೇ ಇದೆ. ಶ್ರುತಿಯಲ್ಲಿ ಯಾವುದು ಅಕ್ಷರತತ್ತ್ವವಾಗಿದೆಯೋ? ಅದು ಅಧಮವೆಂದು ಹೇಳಿದೆ. ವಿಷ್ಣು ಸರ್ವೋತ್ತಮನಾದ್ದರಿಂದ ಅಧಮನಾಗಲು ಸಾಧ್ಯವಿಲ್ಲ. ಪರವಿದ್ಯಾವಿಷಯತ್ವವನ್ನು ಶ್ರುತಿ ಹೇಳುತ್ತಿರುವುದರಿಂದ ವಿಷ್ಣುವೇ ಅಕ್ಷರನಾಗಿದ್ದಾನೆಂದು ಒಪ್ಪಬೇಕಲ್ಲವೇ? ಎಂಬ ಪ್ರಶ್ನೆಗೂ ಸಹ ಅವಕಾಶವಿಲ್ಲ. ಶಾಸ್ತ್ರಯೋನಿತ್ವಾಧಿಕರಣದಲ್ಲಿ ಋಗ್ವೇದಾದಿಗಳನ್ನು ಅಪರವಿದ್ಯೆಯೆಂದು ಅಂಗೀಕರಿಸಿ ಅಂತಹ ಶಾಸ್ತ್ರಗಳಿಂದೆಲ್ಲಾ ವಿಷ್ಣು ಪ್ರತಿಪಾದ್ಯನೆಂದು ಸಿದ್ಧಾಂತಿಗಳೇ ಒಪ್ಪಿದ್ದಾರೆ. ಅಪರವಿದ್ಯೆಗೆ ವಿಷಯನಾದ ಮೇಲೆ ಅದಕ್ಕೆ ವಿರುದ್ಧವಾದ ಪರವಿದ್ಯೆಗೆ ವಿಷ್ಣು ವಿಷಯನಾಗಲಾರನು. ಹಾಗಾಗಿ ಬೇರೆ ಜಡಪ್ರಕೃತ್ಯಾದಿಗಳನ್ನೇ ಪರವಿದ್ಯೆಗೆ ವಿಷಯವೆಂದು ಒಪ್ಪಬೇಕಾಗುತ್ತದೆ.




## ಮತ ತ್ರಯಗಳಲ್ಲಿ ಪರವಿದ್ಯಾ ವಿಚಾರ

### तात्पर्यचन्द्रिका

**सिद्धान्तस्तु – परविद्याविषयत्वं तावद्भाष्योक्तश्रुत्यादिभिर्विष्णोरेव । युक्तं च ऋगादिवेद्यस्यापि विष्णोः परविद्याविषयत्वं,**

ಅನುವಾದ - ಸಿದ್ಧಾಂತ ಹೀಗಿದೆ - ಪರವಿದ್ಯೆಗೆ ವಿಷಯನಾದವನು ವಿಷ್ಣುವೇ ಆಗಿದ್ದಾನೆಂದು ಭಾಷ್ಯದಲ್ಲಿ ಉದಾಹರಿಸಿದ ಅನೇಕ ಶ್ರುತಿ, ಸ್ಮೃತಿಗಳಿಂದ ಸಿದ್ಧವಾಗಿದೆ. ಮತ್ತು ಋಗ್ವೇದವೇ ಮೊದಲಾದ ವಿದ್ಯೆಗಳಿಂದ ವಿಷ್ಣುವು ವೇದ್ಯನಾಗಿದ್ದರೂ ಅವನು ಪರವಿದ್ಯೆಗೆ ವಿಷಯನಾಗುತ್ತಾನೆಂಬುದು ಯುಕ್ತವೇ ಆಗಿದೆ.

**यतः,**

**प्रवृत्तं च निवृत्तं च यथैकं कर्म कथ्यते ।**
**उपाधिभेदाद्विद्याऽपि तथैवैका पराऽपरा ।।**

ಏಕೆಂದರೆ 'ಪ್ರವೃತ್ತಿಂ ಚ ನಿವೃತ್ತಂ ಚ ಯಥೈಕಂ ಕರ್ಮ ಕಥ್ಯತೇ । ಉಪಾಧಿಭೇದಾದ್ವಿದ್ಯಾSಪಿ ತಥೈವೈಕಾ ಪರಾSಪರಾ ॥' ಹೇಗೆ ಒಂದೇ ಕರ್ಮವು ಉಪಾಧಿಭೇದದಿಂದ ಪ್ರವೃತ್ತಿಕರ್ಮ ಹಾಗೂ

ಇಲ್ಲಿಗೆ ಪೂರ್ವಪಕ್ಷವು ಮುಗಿಯಿತು.

**गुरुराजीयम् –** ।। ॐ अदृश्यत्वादिगुणको धर्मोक्तेः ॐ ।। पूर्वपक्षसिद्धान्तयोः फलफलिभावमाह – **अनन्यत्व इति** ।। **अक्षराधिकरणन्यायेनेति** ।। 'अक्षरमम्बरान्तधृतेः' इत्यधिकरणन्यायेनेत्यर्थः । नन्वेवं चित्प्रकृतेरप्यदृश्यत्वमित्यपि न स्यात् । तस्या अपि विश्वोपादनत्वासम्भवादित्यत आह – **चित्प्रकृतौ त्विति** ।। **रूढेरिति** ।। 'कृशानुरेतास्सर्वज्ञः' इत्यभिधानादिति भावः ।। **सामानाधिकरण्येनेति** ।। परं यदक्षरं तस्मादिति सामानाधिकरण्येनेत्यर्थः ।।



ಪೂರ್ವಪಕ್ಷ ಹೀಗಿದೆ - ಆನಂದಮಯಾಧಿಕರಣದಲ್ಲಿ 'ಅದೃಶ್ಯೇಽನಾತ್ಮ್ಯೇ' ಎಂದು ತೈತ್ತಿರೀಯ ವಾಕ್ಯವನ್ನು ಉಲ್ಲೇಖಮಾಡಿ ವಿಷ್ಣುವಿನಲ್ಲಿ ಅದೃಶ್ಯತ್ವಗುಣವನ್ನು ಹೇಳಲಾಗಿದೆ. ಮತ್ತು ಹಿಂದಿನ ಅಂತರ್ಯಾಮ್ಯಧಿಕರಣದಲ್ಲಿ "ಸ ಯೋಽತೋಽಶ್ರುತೋಽಮತೋ" ಇತ್ಯಾದಿ ಐತರೇಯೋಪನಿಷತ್ತಿನ ವಾಕ್ಯದಿಂದ ವಿಷ್ಣುವಿಗೆ ಅದೃಶ್ಯತ್ವ ಗುಣವನ್ನು ನಿರ್ಣಯಿಸಲಾಗಿದೆ. ಆದರೆ ಮಾಂಡೂಕ್ಯೋಪನಿಷತ್ತಿನಲ್ಲಿ ಇದೇ ಅದೃಶ್ಯತ್ವಗುಣವನ್ನು ಅಕ್ಷರತತ್ತ್ವಕ್ಕೆ ಹೇಳಲಾಗಿದೆ. ಈ ಅಕ್ಷರತತ್ತ್ವವನ್ನು ವಿಷ್ಣುವೆಂದು ನಿರ್ಣಯಿಸಲಾಗದು. ಏಕೆಂದರೆ 'ಅಕ್ಷರತ್ಸಂಭವತೀಹ ವಿಶ್ವಮ್' ಅಕ್ಷರತತ್ತ್ವದಿಂದ ಜಗತ್ತು ಹುಟ್ಟಿತು ಎಂದು ಹೇಳಿ. 'ಅಕ್ಷರತ್ಪರತಃ ಪರಃ' ಎಂಬುದಾಗಿ ಅಕ್ಷರತತ್ತ್ವಕ್ಕಿಂತಲೂ ವಿಷ್ಣು ಉತ್ತಮೋತ್ತಮನಾಗಿದ್ದಾನೆಂದು ಶ್ರುತಿ ಹೇಳುತ್ತಿದೆ. ಒಂದು ವೇಳೆ ವಿಷ್ಣುವೇ ಅಕ್ಷರನಾದರೆ ಅವನಿಗಿಂತ ಉತ್ತಮನಾದವನನ್ನು ಹೇಳಬೇಕಾಗುತ್ತದೆ. ಆವಾಗ ವಿಷ್ಣು ಸರ್ವೋತ್ತಮತ್ವವೇ ಭಗ್ನವಾಗುವ ಪ್ರಸಂಗ ಬರುತ್ತದೆ. ಆದ್ದರಿಂದ ಅಕ್ಷರತತ್ತ್ವ ವಿಷ್ಣುವಲ್ಲವೆಂಬುದನ್ನು ಒಪ್ಪಬೇಕು.

ಹಾಗಾದರೆ ಅಕ್ಷರತತ್ತ್ವ ಎಂದರೆ ಯಾವುದು ? ಜಡಪ್ರಕೃತಿಯಾಗಬಹುದು. ಶ್ರುತಿಯು 'ತಥಾಕ್ಷರಾತ್ಸಂಭವತೀಹ ವಿಶ್ವಮ್' ಎಂದು ಜಗತ್ತಿಗೆ ಉಪಾದಾನ ಕಾರಣವಾಗಿರುವುದನ್ನು ಅಕ್ಷರ ಎಂದು ಹೇಳುತ್ತಿದೆ. ಜಡಪ್ರಕೃತಿಪಕ್ಷದಲ್ಲಿ ಈ ಉಪಾದಾನಕಾರಣತ್ವವು ಸಮಂಜಸವಾಗುತ್ತದೆ. ಶ್ರುತಿಯಲ್ಲಿ ಕಾರಣತ್ವವನ್ನಷ್ಟೇ ಹೇಳಿರುವುದರಿಂದ ನಿಮಿತ್ತಕಾರಣವೆಂದು ವಿವಕ್ಷಿಸಬಹುದಲ್ಲವೇ? ಎಂದು ಪ್ರಶ್ನಿಸಬಾರದು. ನಿಮಿತ್ತಕಾರಣಕ್ಕಿಂತ ಉಪಾದಾನಕಾರಣವು ಅಂತರಂಗವಾದ್ದರಿಂದ ಬಹಿರಂಗವಾದ ನಿಮಿತ್ತಕಾರಣಯೆಂಬರ್ಥವನ್ನು ಬಿಡಬೇಕಾಗುತ್ತದೆ.

ಅಥವಾ ಚೇತನಪ್ರಕೃತಿಯನ್ನು ಅಕ್ಷರವೆನ್ನಬಹುದು. ಗೀತೆಯಲ್ಲಿ ಲಕ್ಷ್ಮೀದೇವಿಯನ್ನು ಅಕ್ಷರವೆಂದು ಹೆಸರಿಸಲಾಗಿದೆ. ವಿಶ್ವಕ್ಕೆ ಉಪಾದಾನಕಾರಣವಾದ ಜಡಪ್ರಕೃತಿಗೆ ಇವಳು ಅಭಿಮಾನಿಯಾದ್ದರಿಂದ ಲಕ್ಷ್ಮೀದೇವಿಯನ್ನು ಉಪಾದಾನಕಾರಣವೆಂದು ಹೇಳಬಹುದು.

ಅಥವಾ ಚತುರ್ಮುಖನೂ ಸಹ ಅಕ್ಷರನಾಗಬಹುದು. ಶ್ರುತಿಯಲ್ಲಿ ಬ್ರಹ್ಮ ಎಂಬ ಹೆಸರು ಪ್ರಸ್ತುತವಾಗಿದೆ. ಜಾಯಮಾನತ್ವ ಮೊದಲಾದ ಲಿಂಗಗಳ ಬಲದಿಂದ ಬ್ರಹ್ಮಶಬ್ದವು ಚತುರ್ಮುಖನನ್ನೇ ಪ್ರತಿಪಾದಿಸುತ್ತದೆ ಹೊರತು

ವಿಷ್ಣುವನ್ನಲ್ಲ. ಚತುರ್ಮುಖನು ಜಗತ್ತಿಗೆ ಕಾರಣನೂ ಆಗಿದ್ದಾನೆ. ಆದ್ದರಿಂದ ಅವನೂ ಸಹ ಇಲ್ಲಿ ಅಕ್ಷರನೆಂದು ಪ್ರಸ್ತುತನಾಗಿರಬಹುದು.

ಅಥವಾ ರುದ್ರನಲ್ಲಿ ಪ್ರಸಿದ್ಧವಾದ ಈಶ ಶಬ್ದವು ಈ ಪ್ರಕರಣದಲ್ಲಿ ಕೇಳಿಸುತ್ತಿರುವುದರಿಂದ ರುದ್ರನು ಅದೃಶ್ಯತ್ವಾದಿಗುಣಗಳುಳ್ಳ ಅಕ್ಷರನಾಗಬಹುದು.

ಹೀಗೆ ನಾಲ್ಕು ಬಗೆಯಲ್ಲಿ ಪೂರ್ವಪಕ್ಷ ಮಾಡಬಹುದು. ವಿಚಾರ ಮಾಡಿದರೆ ವಿಷ್ಣುವನ್ನು ಅಕ್ಷರನೆಂದು ಒಪ್ಪಲು ತೊಂದರೆಯೇ ಇದೆ. ಶ್ರುತಿಯಲ್ಲಿ ಯಾವುದು ಅಕ್ಷರತತ್ತ್ವವಾಗಿದೆಯೋ? ಅದು ಅಧಮವೆಂದು ಹೇಳಿದೆ. ವಿಷ್ಣು ಸರ್ವೋತ್ತಮನಾದ್ದರಿಂದ ಅಧಮನಾಗಲು ಸಾಧ್ಯವಿಲ್ಲ. ಪರವಿದ್ಯಾವಿಷಯತ್ವವನ್ನು ಶ್ರುತಿ ಹೇಳುತ್ತಿರುವುದರಿಂದ ವಿಷ್ಣುವೇ ಅಕ್ಷರನಾಗಿದ್ದಾನೆಂದು ಒಪ್ಪಬೇಕಲ್ಲವೇ? ಎಂಬ ಪ್ರಶ್ನೆಗೂ ಸಹ ಅವಕಾಶವಿಲ್ಲ. ಶಾಸ್ತ್ರಯೋನಿತ್ವಾಧಿಕರಣದಲ್ಲಿ ಋಗ್ವೇದಾದಿಗಳನ್ನು ಅಪರವಿದ್ಯೆಯೆಂದು ಅಂಗೀಕರಿಸಿ ಅಂತಹ ಶಾಸ್ತ್ರಗಳಿಂದೆಲ್ಲಾ ವಿಷ್ಣು ಪ್ರತಿಪಾದ್ಯನೆಂದು ಸಿದ್ಧಾಂತಿಗಳೇ ಒಪ್ಪಿದ್ದಾರೆ. ಅಪರವಿದ್ಯೆಗೆ ವಿಷಯನಾದ ಮೇಲೆ ಅದಕ್ಕೆ ವಿರುದ್ಧವಾದ ಪರವಿದ್ಯೆಗೆ ವಿಷ್ಣು ವಿಷಯನಾಗಲಾರನು. ಹಾಗಾಗಿ ಬೇರೆ ಜಡಪ್ರಕೃತ್ಯಾದಿಗಳನ್ನೇ ಪರವಿದ್ಯೆಗೆ ವಿಷಯವೆಂದು ಒಪ್ಪಬೇಕಾಗುತ್ತದೆ.



## ಮತ ತ್ರಯಗಳಲ್ಲಿ ಪರವಿದ್ಯಾ ವಿಚಾರ

**तात्पर्यचन्द्रिका**

**सिद्धान्तस्तु – परविद्याविषयत्वं तावद्भाष्योक्तश्रुत्यादिभिर्विष्णोरेव । युक्तं च ऋगादिवेद्यस्यापि विष्णोः परविद्याविषयत्वं,**

ಅನುವಾದ - ಸಿದ್ಧಾಂತ ಹೀಗಿದೆ - ಪರವಿದ್ಯೆಗೆ ವಿಷಯನಾದವನು ವಿಷ್ಣುವೇ ಆಗಿದ್ದಾನೆಂದು ಭಾಷ್ಯದಲ್ಲಿ ಉದಾಹರಿಸಿದ ಅನೇಕ ಶ್ರುತಿ, ಸ್ಮೃತಿಗಳಿಂದ ಸಿದ್ಧವಾಗಿದೆ. ಮತ್ತು ಋಗ್ವೇದವೇ ಮೊದಲಾದ ವಿದ್ಯೆಗಳಿಂದ ವಿಷ್ಣುವು ವೇದ್ಯನಾಗಿದ್ದರೂ ಅವನು ಪರವಿದ್ಯೆಗೆ ವಿಷಯನಾಗುತ್ತಾನೆಂಬುದು ಯುಕ್ತವೇ ಆಗಿದೆ.

**यतः,**

**प्रवृत्तं च निवृत्तं च यथैकं कर्म कथ्यते ।**
**उपाधिभेदाद्विद्याऽपि तथैवैका पराऽपरा ॥**

ಏಕೆಂದರೆ 'ಪ್ರವೃತ್ತಂ ಚ ನಿವೃತ್ತಂ ಚ ಯಥೈಕಂ ಕರ್ಮ ಕಥ್ಯತೇ । ಉಪಾಧಿಭೇದಾದ್ವಿದ್ಯಾಽಪಿ ತಥೈವೈಕಾ ಪರಾಽಪರಾ ॥' ಹೇಗೆ ಒಂದೇ ಕರ್ಮವು ಉಪಾಧಿಭೇದದಿಂದ ಪ್ರವೃತ್ತಿಕರ್ಮ ಹಾಗೂ

ನಿವೃತ್ತಕರ್ಮವೆಂಬ ಪ್ರಭೇದವನ್ನು ಹೊಂದಿದೆಯೋ, ಅದೇ ರೀತಿಯಾಗಿ ಒಂದೇ ವಿದ್ಯೆಯು ಉಪಾಧಿ ಭೇದದಿಂದ ಪರವಿದ್ಯೆ ಹಾಗೂ ಅಪರವಿದ್ಯೆಯೆನಿಸುತ್ತದೆ.

**यथैकमेव कर्म निष्कामज्ञानपूर्वकत्वोपाधिना निवृत्तं, सकामत्वाद्युपाधिना च प्रवृत्तम्,**

**'निष्कामं ज्ञानपूर्वं च निवृत्तमिति चोच्यते ।'**

**इत्यादिस्मृतेः, यथा चैकमेवान्नमुपाधिभेदात् पथ्यमपथ्यं च, तथा ऋगादिरूपैकैव विद्या सन्न्यायैः प्रमितब्रह्मविषयकशक्तितात्पर्योपाधिना परा, मोक्षसाधनप्रमाहेतुत्वात् अन्यथा त्वपरा, तदहेतुत्वात् ।**

ಯಾವರೀತಿಯಾಗಿ ಒಂದೇ ಕರ್ಮವು 'ನಿಷ್ಕಾಮಜ್ಞಾನಪೂರ್ವಕತ್ವ' ಎಂಬ ಉಪಾಧಿಯಿಂದ ನಿವೃತ್ತಕರ್ಮವೆಂದೂ ಸಕಾಮಜ್ಞಾನಪೂರ್ವಕತ್ವವೆಂಬ ಉಪಾಧಿಯಿಂದ ಪ್ರವೃತ್ತಕರ್ಮವೆಂದೂ 'ನಿಷ್ಕಾಮಂ ಜ್ಞಾನಪೂರ್ವಂ ಚ ನಿವೃತ್ತಮಿತಿ ಚೋಚ್ಯತೇ' ಇತ್ಯಾದಿ ಸ್ಮೃತಿಯಿಂದ ಕರೆಸಿಕೊಳ್ಳುತ್ತದೋ, ಅಥವಾ ಯಾವರೀತಿಯಾಗಿ ಒಂದೇ ಅನ್ನವು ಬೇರೆ ಬೇರೆ ಉಪಾಧಿಗಳಿಂದ ಪಥ್ಯವೂ ಅಪಥ್ಯವೂ ಆಗುತ್ತದೋ, (ಆರೋಗ್ಯಕ್ಕೆ ಹಿತಕರವಾದ ಪದಾರ್ಥಗಳನ್ನು ಅನ್ನದ ಜೊತೆಗೆ ಸೇರಿಸಿ ತಿಂದಾಗ ಅನ್ನವು ಪಥ್ಯವಾಗುತ್ತದೆ. ಆರೋಗ್ಯಕ್ಕೆ ಅಹಿತವಾದ ಪದಾರ್ಥಗಳನ್ನು ಅನ್ನದ ಜೊತೆಗೆ ಸೇರಿಸಿ ತಿಂದಾಗ ಆ ಅನ್ನವು ಅಪಥ್ಯವಾಗುತ್ತದೆ.) ಅದೇ ರೀತಿಯಾಗಿ ಋಗ್ವೇದವೇ ಮೊದಲಾದ ಒಂದೇ ವಿದ್ಯೆಯು ಸನ್ನ್ಯಾಯಗಳಿಂದ ಪ್ರಮಿತವಾದ ಬ್ರಹ್ಮವಿಷಯಕವಾದ ಶಕ್ತಿತಾತ್ಪರ್ಯವೆಂಬ ಉಪಾಧಿ ಯಿಂದ ಪರವಿದ್ಯೆಯೆನಿಸುತ್ತದೆ. ಏಕೆಂದರೆ ಮೋಕ್ಷಕ್ಕೆಸಾಧನವಾದ ಯಥಾರ್ಥಜ್ಞಾನಕ್ಕೆ ಕಾರಣವಾಗಿರುವುದರಿಂದ. ಯಾವಾಗ ಋಗ್ವೇದಾದಿಗಳು ಸನ್ನ್ಯಾಯಗಳಿಗೆ ವಿಷಯವಾಗುವುದಿಲ್ಲವೋ, ಆವಾಗ ಅವೇ ಅಪರವಿದ್ಯೆಯೆನಿಸುತ್ತವೆ. ಮೋಕ್ಷಕ್ಕೆ ಸಾಧನವಾದ ಯಥಾರ್ಥಜ್ಞಾನಕ್ಕೆ ಕಾರಣವಾಗದ್ದರಿಂದ.

**तदुक्तम् –**

**'ऋगाद्या अपरा विद्या यदा विष्णोर्न वाचकाः ।**
**ता एव परमा विद्या यदा विष्णोस्तु वाचकाः ।।' इति ।**

ಇದನ್ನೇ ಆಥರ್ವಣೋಪನಿಷದ್ ಭಾಷ್ಯದಲ್ಲಿ ಹೀಗೆ ಹೇಳಿದ್ದಾರೆ -

'ಋಗಾದ್ಯಾ ಅಪರಾ ವಿದ್ಯಾ ಯದಾ ವಿಷ್ಣೋರ್ನ ವಾಚಕಾಃ ।
ತಾ ಏವ ಪರಮಾ ವಿದ್ಯಾ ವಿಷ್ಣೋಸ್ತು ವಾಚಕಾಃ ।।'

ಪರಿಪೂರ್ಣಚಂದ್ರಿಕಾ

ಋಗ್ವೇದಾದಿಗಳು ಯಾವಾಗ ವಿಷ್ಣುವನ್ನು ಪ್ರತಿಪಾದಿಸುವುದಿಲ್ಲವೋ, ಆವಾಗ ಅಪರವಿದ್ಯೆಯೆನಿಸುತ್ತದೆ. ಯಾವಾಗ ವಿಷ್ಣುವನ್ನು ಪ್ರತಿಪಾದಿಸುತ್ತದೋ, ಆವಾಗಲೇ ಪರವಿದ್ಯೆಯೆನಿಸುತ್ತದೆ ಎಂಬುದಾಗಿ ಜಿಜ್ಞಾಸಾಧಿಕರಣ ಅನುವ್ಯಾಖ್ಯಾನ ಟೀಕೆಯಲ್ಲಿಯೂ ಇದರ ಬಗ್ಗೆ ಹೆಚ್ಚಿನ ವಿಚಾರ ಮಾಡಲಾಗಿದೆ.

**यत्त्वन्यैरुक्तं परशब्द ऋगादिविशेषरूपोपनिषत्परः, तत्सन्निधानाच्चापरशब्दो गोबलीवर्दन्यायेनोपनिषदितरऋगादिपर इति,**

ಅದ್ವೈತಿಗಳು ಪರಾಪರ ವಿದ್ಯೆಯ ಬಗ್ಗೆ ಹೀಗೆ ಹೇಳುತ್ತಾರೆ - ಋಗ್ವೇದಾದಿಗಳ ಖಿಲ ಭಾಗವೆನಿಸಿದ ಉಪನಿಷತ್ತುಗಳು ಪರವಿದ್ಯೆಯೆನಿಸುತ್ತದೆ. ಅವುಗಳ ಸನ್ನಿಧಾನದಿಂದ ಗೋಬಲೀವರ್ದನ್ಯಾಯದಿಂದ ಉಪನಿಷತ್ತನ್ನು ಬಿಟ್ಟು ಉಳಿದ ಋಗ್ವೇದಾದಿಗಳು ಅಂದರೆ ಮಂತ್ರಭಾಗವು ಅಪರವಿದ್ಯೆಯೆನಿಸುತ್ತದೆ. ಗೋಬಲೀವರ್ದನ್ಯಾಯದಲ್ಲಿ ಬಲಿವರ್ದ ಶಬ್ದವಿರುವುದರಿಂದ ಗೋ ಶಬ್ದಕ್ಕೆ ಕೇವಲ ಹಸುವೆಂದು ಅರ್ಥೈಸುವಂತೆ ಪರಶಬ್ದವು ಪ್ರತ್ಯೇಕವಾಗಿರುವುದರಿಂದ ಅಪರಶಬ್ದದಿಂದ ಉಪನಿಷತ್ತುಗಳನ್ನು ಬಿಟ್ಟು ಕೇವಲ ಋಗ್ವೇದಾದಿಗಳನ್ನು ವಿವಕ್ಷಿಸಬೇಕು.

**तन्न, ''सर्वे वेदा यत्पदमामनन्ति'' ''वेदैश्च सर्वैरहमेव वेद्यः'' इत्यादिश्रुतिस्मृतिर्ब्रह्मणः सर्ववेदवेद्यत्वात् ।**

ಇದು ತಪ್ಪು. "ಸರ್ವೇ ವೇದಾ ಯತ್ಪದಮಾಮನಂತಿ" ಇವೇ ಮೊದಲಾದ ಶ್ರುತಿಗಳು ಹಾಗೂ "ವೇದೈಶ್ಚ ಸರ್ವೈರಹಮೇವ ವೇದ್ಯಃ" ಮೊದಲಾದ ಸ್ಮೃತಿಗಳು ಬ್ರಹ್ಮನು ಸಕಲವೇದಗಳಿಂದ ವೇದ್ಯನಾಗಿದ್ದಾನೆಂದು ಪ್ರತಿಪಾದಿಸುತ್ತಿವೆ.

**उपनिषत्स्वपि ज्ञेयशुद्धब्रह्माविषयाणाम् उपासनादिवाक्यानां बहूनां, मन्त्रेष्वपि ज्योतिरधिरणोक्तन्यायेन ब्रह्मपरभागस्य च दर्शनाच्च ।**

ಉಪನಿಷತ್ತುಗಳು ಪರವಿದ್ಯೆಯೆಂದು ಹೇಳಿದ್ದೇ ತಪ್ಪು. ಏಕೆಂದರೆ ಉಪನಿಷತ್ತಿನಲ್ಲಿ ಜ್ಞೇಯನಾದ ಶುದ್ಧಬ್ರಹ್ಮನನ್ನು ವಿಷಯೀಕರಿಸದ ಉಪಾಸನಾದಿಗಳನ್ನು ಹೇಳುವ ಅನೇಕ ವಾಕ್ಯಗಳು ಇರುತ್ತವೆ. ಶುದ್ಧಬ್ರಹ್ಮನನ್ನಷ್ಟೇ ಪ್ರತಿಪಾದಿಸುತ್ತಿದ್ದರೆ ಪರವಿದ್ಯೆಯೆಂದು ಹೇಳಬಹುದಿತ್ತು. ಮತ್ತು ಮಂತ್ರಭಾಗದಲ್ಲಿಯೂ ಜ್ಯೋತಿರಧಿಕರಣದಲ್ಲಿ ಹೇಳಲ್ಪಟ್ಟ ನ್ಯಾಯದಿಂದ ಅನೇಕ ಬ್ರಹ್ಮಪ್ರತಿಪಾದಕವಾದ ಭಾಗಗಳಿವೆಯೆಂದು ಕಾಣಸುತ್ತಿದೆ.

**'रूपं द्विविधं नीलमनीलं च' इतिवत्, ''द्वे विद्ये परा चैवापरा च'' इत्यत्र परापरशब्दयोर्विरुद्धार्थत्वप्रतीतेश्च । नहि नीलपदमनीलविशेषपरं भवति ।**

ಅದೃಶ್ಯತ್ವಾಧಿಕರಣ (೧-೨-೬)

'ರೂಪವು ಎರಡುವಿಧವಾಗಿದೆ. ನೀಲ ಮತ್ತು ಅನೀಲ ಎಂದು' ವಿರುದ್ಧಾರ್ಥ ಪ್ರತಿಪಾದಕ ವಾಕ್ಯದಲ್ಲಿ ಹೇಳಿದಂತೆ 'ಎರಡು ವಿದ್ಯೆಗಳನ್ನು ತಿಳಿಯಬೇಕು. ಪರವಿದ್ಯೆ ಅಪರವಿದ್ಯೆಯೆಂದು' ಎಂಬ ವಾಕ್ಯದಲ್ಲಿಯೂ ಪರಾಪರಶಬ್ದಗಳಿಗೆ ಪರಸ್ಪರವಾಗಿ ವಿರುದ್ಧಾರ್ಥವೇ ಪ್ರತೀತವಾಗುತ್ತಿದೆ. ನೀಲ ಮತ್ತು ಅನೀಲವೆಂದು ಹೇಳಿದಾಗ ನೀಲಪದಕ್ಕೆ ಅನೀಲದ ವಿಶೇಷರೂಪವನ್ನು ಹೇಳುತ್ತಿದೆಂದು ಯಾರೂ ವ್ಯಾಖ್ಯಾನಿಸುವುದಿಲ್ಲ. ಆದ್ದರಿಂದ ಪರವಿದ್ಯೆಯ ವಿಶೇಷ ಅಪರವಿದ್ಯೆ ಎಂದು ಹೇಳಲಾಗಿದು.

**यत्तु कैश्चिदुक्तं – परोक्षज्ञानमपरविद्या, भक्तिरूपमपरोक्षज्ञानं तु परविद्येति,**

ರಾಮಾನುಜರು ಹೀಗೆ ಹೇಳುತ್ತಾರೆ - ಪರೋಕ್ಷಜ್ಞಾನವು ಅಪರವಿದ್ಯೆ, ಭಕ್ತಿರೂಪವಾದ ಅಪರೋಕ್ಷಜ್ಞಾನವು ಪರವಿದ್ಯೆಯೆಂದು.

**तन्न, श्रुतौ ऋगादीनामपरविद्यात्वेनोक्तत्वात्, ''यया तदक्षरमधिगम्यते'' इति,**

**'येनाक्षरं पुरुषं वेद सत्यं प्रोवाच तां तत्त्वतो ब्रह्मविद्याम् ।'**

**इति च ज्ञानकरणस्यैव परविद्यात्वेनोक्तत्वाच्चेह विद्याशब्दस्य ज्ञानार्थत्वायोगात् ।**

ಇದು ತಪ್ಪು. ಶ್ರುತಿಯಲ್ಲಿ ಋಗಾದಿಗಳನ್ನು ಅಪರವಿದ್ಯೆಯೆಂದು ಹೇಳಿದ್ದಾರೆ. "ಯಯಾ ತದಕ್ಷರಮಧಿಗಮ್ಯತೇ" ಎಂದೂ, ಮತ್ತು "ಯೇನಾಕ್ಷರಂ ಪುರುಷಂ ವೇದ ಸತ್ಯಂ ಪ್ರೋವಾಚ ತಾಂ ತತ್ತ್ವತೋ ಬ್ರಹ್ಮವಿದ್ಯಾಮ್" ಎಂಬುದಾಗಿಯೂ ಜ್ಞಾನಕ್ಕೆ ಕರಣವಾದದ್ದೇ ಪರವಿದ್ಯೆಯೆಂದು ಹೇಳಿರುವುದರಿಂದ ಪ್ರಕೃತ ವಿದ್ಯಾಶಬ್ದಕ್ಕೆ ಜ್ಞಾನವೆಂಬರ್ಥವನ್ನು ಹೇಳುವುದು ತಪ್ಪಾಗುತ್ತದೆ.

**नच 'अधिगम्यते' इत्यस्य प्राप्यत इत्यर्थः, अधिपूर्वस्य गमेर्ज्ञाने प्रसिद्धेः ।**

'ಅಧಿಗಮ್ಯತೇ' ಎಂಬ ಶಬ್ದಕ್ಕೆ ಹೊಂದಲ್ಪಡುತ್ತಾನೆ ಎಂದರ್ಥವೂ ಸರಿಯಲ್ಲ. ಏಕೆಂದರೆ ಅಧಿಪೂರ್ವಕವಾದ ಗಮು ಧಾತುವಿಗೆ ಜ್ಞಾನವೆಂಬರ್ಥವು ಪ್ರಸಿದ್ಧವಾಗಿದೆ.

**यद्यपि ''व्रजयजोर्भावे क्यप्'' इत्यनेन सूत्रेण भावे क्यप्प्रत्ययो विहितः । तथाऽपि ''सञ्ज्ञायां समजनिषदनिपतमनविद'' इति सूत्रे वृत्तौ 'भाव इति न स्वर्यते' इत्युक्तत्वात्, समजन्ति तस्यामिति समज्या, निषीदन्ति तस्यामिति निषद्येति समज्यादिशब्दानां भावार्थत्वाभावस्योक्तत्वाच्च क्यबन्तोऽपि विद्याशब्दो वेदनकरणेऽपि मुख्य एव ।**

ವಸ್ತುತಃ ವಿದ್ಯಾಶಬ್ದವನ್ನು ಜ್ಞಾನವೆಂಬರ್ಥದಲ್ಲಿಯೇ ಉಪಯೋಗಿಸಬೇಕು. ಏಕೆಂದರೆ ''ವ್ರಜಯಜೋರ್ಭಾವೇ ಕ್ಯಪ್'' ಎಂಬ ಸೂತ್ರದಿಂದ ಭಾವಾರ್ಥದಲ್ಲಿ ಕ್ಯಪ್‌ಪ್ರತ್ಯಯವು ವಿಧಾನ ಮಾಡಲ್ಪಟ್ಟಿದೆ. ಆದ್ದರಿಂದ ವಿದ್‌ಧಾತುಗಿಗೆ ಕ್ಯಪ್ ಪ್ರತ್ಯಯ ಬಂದು ವಿದ್ಯಾ ಎಂಬ ಶಬ್ದವು ಭಾವಾರ್ಥದಲ್ಲಿ ನಿಷ್ಪನ್ನವಾಗಿದೆ. ಆದರೂ ಸಹ 'ಸಂಜ್ಞಾಯಾಂಸಮಜನಿಷದ' ಎಂಬ ಸೂತ್ರದಲ್ಲಿ 'ಭಾವ ಇತಿ ನ ಸ್ವರ್ಯತೇ' ಭಾವ ಎಂಬುದು ಅನುವೃತ್ತವಾಗುವುದಿಲ್ಲ ಎಂದು ಹೇಳಿರುವುದರಿಂದ 'ಸಮಜಂತಿ ತಸ್ಯಾಮಿತಿ ಸಮಜ್ಯಾ' 'ನಿಷೀದಂತಿ ತಸ್ಯಾಮಿತಿ ನಿಷದ್ಯಾ' ಎಂಬುದಾಗಿ ಸಮಜ್ಯಾದಿ ಶಬ್ದಗಳಿಗೆ ಭಾವಾರ್ಥತ್ವವು ಇರುವುದಿಲ್ಲವೆಂದು ಹೇಳಿದ್ದರಿಂದಲೂ ಕ್ಯಬಂತವಾದರೂ ಸಹ (ಭಾವಾರ್ಥಕವಾದರೂ) ವಿದ್ಯಾಶಬ್ದ ಅದನ್ನು ಜ್ಞಾನಕರಣ ಎಂಬ ಮುಖ್ಯವಾದ ಅರ್ಥದಲ್ಲಿಯೂ ಹೇಳಬಹುದು.

'आगमोत्थं विवेकाच्च द्विधा ज्ञानं तथोच्यते ।।'

इति पराशरवचनं तु आगमोत्थत्वविवेकोत्थत्वाभ्यां ज्ञानस्य द्वैविध्यमाह, न त्वत्रत्यपरापरशब्दयोः परोक्षापरोक्षज्ञानार्थताम् । ऊर्णनाभ्यादिरपि निमित्तमेवेत्यन्यत्रोक्तम् ।

''स ब्रह्मविद्याम्'' इत्यत्र च ब्रह्मशब्दो न चतुर्मुखपरः, ''सर्वविद्याप्रतिष्ठां येनाक्षरं पुरुषं वेद सत्यम्'' इति परविद्याविषयत्वादिब्रह्मलिङ्गात् ।

'ಆಗಮೋತ್ಥಂ ವಿವೇಕಾಚ್ಚ ದ್ವಿಧಾ ಜ್ಞಾನಂ ತಥೋಚ್ಯತೇ' ಎಂಬ ಪರಾಶರರ ಮಾತಿನಲ್ಲಿ ಆಗಮದಿಂದ ಹುಟ್ಟಿದ ಜ್ಞಾನ ಹಾಗೂ ವಿವೇಕದಿಂದ ಹುಟ್ಟಿದ ಜ್ಞಾನವೆಂದು ದ್ವೈವಿಧ್ಯವನ್ನು ಹೇಳಿದ್ದಾರೆ ಹೊರತು, ಇಲ್ಲಿರುವ ಪರಾಪರಶಬ್ದಗಳಿಗೆ ಪರೋಕ್ಷಜ್ಞಾನ, ಅಪರೋಕ್ಷಜ್ಞಾನವೆಂಬರ್ಥವನ್ನು ಹೇಳಿರುವುದಿಲ್ಲ.

ಊರ್ಣನಾಭ್ಯಾದಿ ದೃಷ್ಟಾಂತಗಳೂ ಸಹ ಉಪಾದಾನಕಾರಣಕ್ಕೆ ಉದಾಹರಣೆಯಾಗುವುದಿಲ್ಲ. ಊರ್ಣನಾಭಿಯು ತಾನು ರಚಿಸಿದ ಬಲೆಗೆ ನಿಮಿತ್ತ ಕಾರಣವೇ ಆಗಿದೆಯೆಂಬ ವಿಚಾರವನ್ನು ಪ್ರಕೃತ್ಯಧಿಕರಣದ ನ್ಯಾಯಸುಧಾ ಗ್ರಂಥದಲ್ಲಿ ಸ್ಪಷ್ಟಪಡಿಸಲಾಗಿದೆ.

'ಸ ಬ್ರಹ್ಮವಿದ್ಯಾಮ್' ಎಂಬಲ್ಲಿರುವ ಬ್ರಹ್ಮಶಬ್ದವು ಚತುರ್ಮುಖಪರವಲ್ಲ. ಏಕೆಂದರೆ ''ಸರ್ವವಿದ್ಯಾಪ್ರತಿಷ್ಠಾಂ ಯೇನಾಕ್ಷರಂ ಪುರುಷಂ ವೇದ ಸತ್ಯಮ್'' ಎಂಬುದಾಗಿ ಪರವಿದ್ಯಾವಿಷಯತ್ವವೇ ಮೊದಲಾದ ವಿಷ್ಣುವಿನ ಲಿಂಗಗಳು ಕೇಳಿಸುತ್ತಿರುವುದರಿಂದ.

## ಅದೃಶ್ಯತ್ವಾಧಿಕರಣ (೧-೨-೬)

**प्रकाशः –**

''धर्मोक्तेः'' इति सूत्रोपात्तनिरवकाशपरविद्याविष्यत्वरूपभगव-ल्लिङ्गादिनाऽन्यप्रापकाणां सावकाशत्वात्, ''अक्षरात्परतः'' इत्युक्ताक्षरस्यान्यत्वेन बाधकाभावाच्च विष्णुरेवादृश्यत्वादिगुणकं अक्षरमिति भावेन, लिङ्गनिरवकाशत्वं तावत् ''परविद्याविषयत्वस्य श्रुतिस्मृतिभिर्विष्णुधर्मत्वेनावगतत्वात्'' इति टीकोक्तं व्यनक्ति – **परविद्येति** ।

ವಿವರಣೆ - 'ಅದೃಶ್ಯತ್ವಾದಿಗುಣಕೋಧರ್ಮೋಕ್ತೇಃ' ಎಂಬ ಸೂತ್ರದಲ್ಲಿ 'ಧರ್ಮೋಕ್ತೇಃ' ಎಂಬ ಸೂತ್ರಭಾಗದಿಂದ ನಿರವಕಾಶರೂಪವಾದ ಪರವಿದ್ಯಾವಿಷಯತ್ವವೆಂಬ ಪರಮಾತ್ಮನ ಲಿಂಗವನ್ನು ಹೇಳಿರುತ್ತಾರೆ. ಈ ಲಿಂಗದಿಂದ ಪೂರ್ವಪಕ್ಷ ಪ್ರಾಪಕವಾದ ಲಿಂಗಗಳೆಲ್ಲವೂ ಸಾವಕಾಶವಾಗಿವೆಯೆಂದು ತಿಳಿಯುತ್ತದೆ. ಮತ್ತು 'ಅಕ್ಷರಾತ್ಪರತಃ ಪರಃ' ಎಂಬಲ್ಲಿ ಹೇಳಲ್ಪಟ್ಟ ಅಕ್ಷರವು ಬೇರೆಯಾಗಿರುವುದರಿಂದ ಬಾಧಕವೂ ಸಹ ಇರುವುದಿಲ್ಲ. ಆದ್ದರಿಂದ ವಿಷ್ಣುವೇ ಅದೃಶ್ಯತ್ವಾದಿಗುಣಗಳುಳ್ಳ ಅಕ್ಷರನಾಗಿದ್ದಾನೆ. ಈ ಅಭಿಪ್ರಾಯದಿಂದ ಸೂತ್ರದಲ್ಲಿ ಹೇಳಲ್ಪಟ್ಟ ಲಿಂಗವು ನಿರವಕಾಶವಾಗಿದೆಯೆಂಬುದನ್ನು ''ಪರವಿದ್ಯಾವಿಷಯತ್ವಸ್ಯ ಶ್ರುತಿಸ್ಮೃತಿಭಿ-ರ್ವಿಷ್ಣುಧರ್ಮತ್ವೇನಾವಗತತ್ವಾತ್'' ಎಂಬ ಟೀಕೆಯಿಂದ ಸ್ಪಷ್ಟಪಡಿಸಿದ್ದಾರೆ. ಅದನ್ನೇ 'ಪರವಿದ್ಯಾ' ಇತ್ಯಾದಿ ಗ್ರಂಥದಿಂದ ಇಲ್ಲಿ ವಿವರಿಸುತ್ತಾರೆ.

**प्रकाशः** – ''अथ परा यया तदक्षरमधिगम्यते'' इत्युक्तमित्यर्थः । मोक्षसाधनविद्याया एव परविद्यात्वात्, तद्विषयत्वस्य च ''तमेवं विद्वानमृत इह भवति''

'तत्कर्म हरितोषं यत्सा विद्या तन्मतिर्यया ।'

''द्वे विद्ये वेदितव्ये परा चैवापरा च । तत्र ये वेदा यान्यङ्गानि यानि प्रत्यङ्गानि सा परा । अथपरा यया स हरिर्वेदितव्यो योऽसावदृश्यो निर्गुणः परः परमात्मा'' इत्यादिभिर्विष्णोरेव सिद्धमित्यर्थः ।

ಪರವಿದ್ಯೆಯೆಂದರೆ ''ಅಥ ಪರಾ ಯಯಾ ತದಕ್ಷರಮಧಿಗಮ್ಯತೇ'' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ವಿದ್ಯೆಯೆಂದರ್ಥ. ಯಾವ ವಿದ್ಯೆಯು ಮೋಕ್ಷಕ್ಕೆ ಸಾಧನವಾಗಿದೆಯೋ, ಅದೇ ಪರವಿದ್ಯೆಯೆನಿಸುತ್ತದೆ. ಈ ಪರವಿದ್ಯೆಗೆ ವಿಷ್ಣುವೇ ವಿಷಯನಾಗಿದ್ದಾನೆಂದು ಪ್ರಮಾಣಗಳಿಂದ ಸಿದ್ಧವಾಗಿವೆ - ''ತಮೇವಂ ವಿದ್ವಾನಮೃತ ಇಹ ಭವತಿ'' ''ತತ್ಕರ್ಮ ಹರಿತೋಷಂ ಯತ್ಸಾ ವಿದ್ಯಾ ತನ್ಮತಿರ್ಯಯಾ ।'' ''ದ್ವೇ ವಿದ್ಯೇ ವೇದಿತವ್ಯೇ ಪರಾ ಚೈವಾಪರಾ ಚ । ತತ್ರ ಯೇ ವೇದಾ ಯಾನ್ಯಂಗಾನಿ ಯಾನಿ ಪ್ರತ್ಯಂಗಾನಿ ಸಾ ಪರಾ । ಅಥಾ ಪರಾ

ಯಯಾ ಸ ಹರಿರ್ವೇದಿತವ್ಯೋ ಯೋಽಸಾವದೃಶ್ಯೋ ನಿರ್ಗುಣಃ ಪರಃ ಪರಮಾತ್ಮಾ'' ಈ ಎಲ್ಲಾ ವಾಕ್ಯಗಳಿಂದ ಪರವಿದ್ಯೆಗೆ ವಿಷ್ಣುವೇ ವಿಷಯನಾಗಿದ್ದಾನೆಂದು ಸ್ಪಷ್ಟವಾಗುತ್ತದೆ.

**प्रकाशः** – ननूक्तमपरविद्याविषयस्य परविद्याविषयत्वमयुक्तमित्यतो ''– ''द्वे विद्ये वेदितव्ये'' इत्यत्र च'' इत्यादिटीकां विवृण्वन्नाह – **युक्तं चेति** ।

ಆಕ್ಷೇಪ - ವಿಷ್ಣು ಅಪರವಿದ್ಯೆಗೆ ವಿಷಯನಾಗಿರುವುದರಿಂದ ಪರವಿದ್ಯೆಗೆ ಹೇಗೆ ವಿಷಯನಾಗುತ್ತಾನೆ ?

ಸಮಾಧಾನ - ಈ ಆಕ್ಷೇಪಕ್ಕೆ "-"ದ್ವೇ ವಿದ್ಯೇ ವೇದಿತವ್ಯೇ'' ಇತ್ಯತ್ರ ಚ'' ಎಂಬ ಟೀಕೆಯನ್ನು ವ್ಯಾಖ್ಯಾನಿಸುತ್ತಾ 'ಯುಕ್ತಂ ಚ' ಎಂಬ ಗ್ರಂಥದಿಂದ ಉತ್ತರಿಸುತ್ತಿದ್ದಾರೆ.

**प्रकाशः** – कुत इत्यतः, ऋगादेरेव परविद्यात्वादिति भावेनाह – **यत इति** । श्लोकेनान्वयः । 'अतः' इति योज्यम् । पूर्वार्धं व्यनक्ति – **यथेति** ।

ವಿಷ್ಣು ಪರವಿದ್ಯೆಗೆ ವಿಷಯನಾಗಿದ್ದಾನೆಂದು ಯಾವ ಪ್ರಮಾಣದಿಂದ ಹೇಳುತ್ತೀರಿ? ಎಂದರೆ ಋಗ್ವೇದಾದಿಗಳೇ ಪರವಿದ್ಯೆಯೆನಿಸಿವೆ. ಆದ್ದರಿಂದ ವಿಷ್ಣು ಪರವಿದ್ಯೆಗೂ ವಿಷಯಾಗಿದ್ದಾನೆ ಎಂದು ಹೇಳುತ್ತೇವೆ ಎಂಬ ಅಭಿಪ್ರಾಯದಿಂದ 'ಯತಃ' ಎಂದು ಹೇಳಿದ್ದಾರೆ. 'ಯತಃ' ಎಂಬುದನ್ನು ಶ್ಲೋಕದಜೊತೆಗೆ ಅನ್ವಯ ಮಾಡಿಕೊಳ್ಳಬೇಕು. ಆದ್ದರಿಂದ 'ಅತಃ' ಎಂಬುದನ್ನು ಶ್ಲೋಕದಲ್ಲಿ ಇಟ್ಟುಕೊಳ್ಳಬೇಕು. ಶ್ಲೋಕದ ಪೂರ್ವಾರ್ಧವನ್ನು 'ಯಥಾ' ಇತ್ಯಾದಿ ಗ್ರಂಥದಿಂದ ಸ್ವತಃ ಗ್ರಂಥಕಾರರೇ ವ್ಯಾಖ್ಯಾನಿಸುತ್ತಿದ್ದಾರೆ.

**प्रकाशः** –

'निष्कामं ज्ञानपूर्वं तु निवृत्तमिति चोच्यते ।
निवृत्तं सेवमानस्तु ब्रह्माभ्येति सनातनम् ।।'

इति व्यासस्मृतेरित्यर्थः । स्वर्गादिफलकामनां विनेत्यर्थः । 'कर्म' इत्युपलक्षणं श्लोक इति भावेनाह – **यथा चेति** ।

ನಿಷ್ಕಾಮಂ ಜ್ಞಾನಪೂರ್ವಂ ತು ನಿವೃತ್ತಮಿತಿ ಚೋಚ್ಯತೇ ।
ನಿವೃತ್ತಂ ಸೇವಮಾನಸ್ತು ಬ್ರಹ್ಮಾಭ್ಯೇತಿ ಸನಾತನಮ್ ॥

ನಿಷ್ಕಾಮ ಜ್ಞಾನಪೂರ್ವಕವಾಗಿ ಮಾಡುವ ಕರ್ಮವು ನಿವೃತ್ತಕರ್ಮವೆನಿಸುತ್ತದೆ. ಹೀಗೆ ನಿವೃತ್ತಕರ್ಮವನ್ನು ಆಚರಿಸುವವರು ಬ್ರಹ್ಮನನ್ನು ಪಡೆಯುತ್ತಾನೆ ಎಂದು ವ್ಯಾಸಸ್ಮೃತಿಯಲ್ಲಿ ಹೇಳಲಾಗಿದೆ. ನಿಷ್ಕಾಮಕರ್ಮಯೆಂದರೆ ಸ್ವರ್ಗಾದಿಫಲಗಳನ್ನು ಅಪೇಕ್ಷೆಪಡದೆ ಮಾಡಲ್ಪಡುವ ಕರ್ಮಗಳೆಂದರ್ಥ. ಶ್ಲೋಕದಲ್ಲಿರುವ ಕರ್ಮವೆಂಬ ಪದವು ಉಪಲಕ್ಷಣವಾಗಿದೆಯೆಂಬ ಅಭಿಪ್ರಾಯದಿಂದ 'ಯಥಾ ಚ' ಇತ್ಯಾದಿ ವಾಕ್ಯದಲ್ಲಿ ಮತ್ತೊಂದು ದೃಷ್ಟಾಂತವನ್ನು ಹೇಳಿರುತ್ತಾರೆ.

**प्रकाशः** – उत्तरार्धं स्पष्टयति – **तथेति** । **सन्न्यायैरिति** । बलाबलवत्त्वादिना सम्यगवधृतोपक्रमादिभिरित्यर्थः । **प्रमितेति** । नित्यसापेक्षत्वात्समासः । **तदुक्तमिति** । आथर्वणभाष्ये ।

ಶ್ಲೋಕದ ಉತ್ತರಾರ್ಧವನ್ನು ವ್ಯಾಖ್ಯಾನಿಸುತ್ತಿದ್ದಾರೆ. 'ತಥಾ' ಇತ್ಯಾದಿ ವಾಕ್ಯದಿಂದ. 'ಸನ್ನ್ಯಾಯೈಃ' ಎಂಬ ಪದಕ್ಕೆ ಪ್ರಾಬಲ್ಯ-ದೌರ್ಬಲ್ಯ ಮುಂತಾದ್ದರಿಂದ ಚೆನ್ನಾಗಿ ನಿರ್ಣಯಿಸಿದ ಉಪಕ್ರಮಾದಿಗಳಿಂದ ಎಂದರ್ಥ. 'ಪ್ರಮಿತಬ್ರಹ್ಮವಿಷಯಕಶಕ್ತಿತಾತ್ಪರ್ಯೋಪಾಧಿನಾ' ಎಂಬುದು ಸಮಸ್ತಪದವಾಗಿದೆ. ವಸ್ತುತಃ ಪ್ರಮಿತಪದಕ್ಕೆ ಸಮಾಸವನ್ನು ಮಾಡಲು ಸಾಮರ್ಥ್ಯವಿರುವುದಿಲ್ಲ. ಆದರೂ ಸಹ ನಿತ್ಯಸಾಪೇಕ್ಷವಾದ್ದರಿಂದ 'ದೇವದತ್ತಸ್ಯಗುರುಕುಲಂ' ಎಂಬಲ್ಲಿ ಹೇಗೋ ಹಾಗೇ ಸಮಾಸವನ್ನು ಮಾಡಿದ್ದಾರೆಂದು ತಿಳಿಯಬೇಕು. 'ತದುಕ್ತಂ' ಎಂದರೆ ಆಥರ್ವಣಭಾಷ್ಯದಲ್ಲಿ ಹೇಳಲಾಗಿದೆ ಎಂದರ್ಥ.

**प्रकाशः** – स्वमते परापरविद्यात्वमुपाधिभेदेनैकत्रैव टीकाद्युक्तं व्युत्पाद्य, प्रसङ्गात् परभाष्याद्युक्तिमनूद्य निराह – **यत्त्विति** ।

ಇಲ್ಲಿಯ ತನಕ ಒಂದೇ ವಿದ್ಯೆಯಲ್ಲಿಯೇ ಉಪಾಧಿಬೇಧದಿಂದ ಪರವಿದ್ಯೆ ಅಪರವಿದ್ಯೆಗಳನ್ನು ಕೂಡಿಸಬೇಕೆಂದು ಸಿದ್ಧಾಂತದ ಪ್ರಕಾರ ವ್ಯಾಖ್ಯಾನಿಸಿದರು. ಈಗ ಪ್ರಾಸಂಗಿಕವಾಗಿ ಅದ್ವೈತಿಗಳ ಭಾಷ್ಯದಲ್ಲಿ ಹೇಳಲ್ಪಟ್ಟ ಪರವಿದ್ಯಾ ಹಾಗೂ ಅಪರವಿದ್ಯೆಗಳ ಸ್ವರೂಪವನ್ನು ಅನುವಾದ ಮಾಡಿ ನಿರಾಕರಿಸಲು ಹೊರಟಿದ್ದಾರೆ. 'ಯತ್' ಇತ್ಯಾದಿ ಗ್ರಂಥದಿಂದ.

**प्रकाशः** – ननु ऋगादीनां कर्मबोधकत्वात् कथं ब्रह्मपरतेति चेत्, किमेकदेशस्यान्यपरत्वम् उत कृत्स्नस्य । आद्य आह – **उपनिषत्स्वपीति** । द्वितीय आह – **मन्त्रेष्वपीति** । "ज्योतिश्चरणाभिधानात्" इत्यत्र स्वप्रदर्शितन्यायेनेत्यर्थः ।

ಋಗ್ವೇದಾದಿಗಳು ಕರ್ಮಬೋಧಕಗಳಾಗಿವೆ. ಹೀಗಿರುವಾಗ ಅವುಗಳಿಗೆ ಬ್ರಹ್ಮಪರತ್ವವನ್ನು ಹೇಗೆ ಒಪ್ಪುತ್ತೀರಿ ? ಎಂದರೆ ವೇದದ ಏಕದೇಶಕ್ಕೆ ಕರ್ಮಪರತ್ವವನ್ನು ಒಪ್ಪುತ್ತೀರೋ? ಅಥವಾ ಸಮಸ್ತವೇದಕ್ಕೂ ಕರ್ಮಪರತ್ವವನ್ನು ಒಪ್ಪುತ್ತೀರೋ? ಮೊದಲನೆಯ ಪಕ್ಷದಲ್ಲಿ 'ಉಪನಿಷತ್ಸ್ವಪಿ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. ಎರಡನೆಯ ಪಕ್ಷದಲ್ಲಿ 'ಮಂತ್ರೇಷು' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. "ಜ್ಯೋತಿಶ್ಚರಣಾಭಿಧಾನಾತ್" ಎಂಬ ಸೂತ್ರದಲ್ಲಿ ಸಿದ್ಧಾಂತಿಗಳು ತೋರಿಸಿರುವ ನ್ಯಾಯದಿಂದ ಮಂತ್ರಭಾಗವೂ ಸಹ ಬ್ರಹ್ಮಪರವಾಗಿದೆಯೆಂಬುದನ್ನು ತಿಳಿಯಬೇಕು.

**प्रकाशः** – परापरशब्दयोर्विशेषसामान्यभावेन अर्थवर्णनमयुक्तमित्याह – **रूपमिति** ।

ಪರಶಬ್ದವು ವಿದ್ಯಾವಿಶೇಷವನ್ನು ಹೇಳುತ್ತಿದೆ. ಅಪರಶಬ್ದವು ಸಾಮಾನ್ಯವನ್ನು ಹೇಳುತ್ತಿದೆಯೆಂಬ ವ್ಯಾಖ್ಯಾನವೂ ಅಯುಕ್ತವಾಗಿದೆಯೆಂದು 'ರೂಪಂ' ಎಂಬ ವಾಕ್ಯದಿಂದ ಸ್ಪಷ್ಟಪಡಿಸುತ್ತಿದ್ದಾರೆ.

**प्रकाशः** – 'द्वे विद्ये वेदितव्ये' ब्रह्मविषये परोक्षापरोक्षरूपे द्वे ज्ञाने उपादेये इत्यर्थ इति रामानुजभाष्योक्तमनूद्य प्रत्याह – **यत्त्विति** ।

'ದ್ವೇ ವಿದ್ಯೇ ವೇದಿತವ್ಯೇ' ಬ್ರಹ್ಮವಿಷಯೇ ಪರೋಕ್ಷಾಪರೋಕ್ಷರೂಪೇ ದ್ವೇ ಜ್ಞಾನೇ ಉಪಾದೇಯೇ ಇತ್ಯರ್ಥಃ' 'ದ್ವೇ ವಿದ್ಯೇ ವೇದಿತವ್ಯೇ' ಎಂದರೆ ಬ್ರಹ್ಮವಿಷಯಕವಾದ ಪರೋಕ್ಷಜ್ಞಾನ ಹಾಗೂ ಅಪರೋಕ್ಷಜ್ಞಾನಗಳನ್ನು ಸ್ವೀಕರಿಸಬೇಕು ಎಂದರ್ಥ' ಹೀಗೆ ರಾಮಾನುಜಭಾಷ್ಯದಲ್ಲಿ ಮಾಡಲ್ಪಟ್ಟ ವ್ಯಾಖ್ಯಾನವನ್ನು ಅನುವಾದ ಮಾಡಿ ನಿರಾಕರಿಸುತ್ತಿದ್ದಾರೆ 'ಯತ್ತು' ಇತ್ಯಾದಿ ಗ್ರಂಥದಿಂದ

**प्रकाशः** – विद्याशब्दस्य ज्ञानार्थत्वसम्भवेऽपि इह तद्ग्रहणमयुक्तमित्याह – **ययेति** । 'यया' विद्यया 'अधिगम्यते' प्राप्यत इत्यर्थसम्भवान्न ज्ञानकरणमिह विद्याशब्दार्थ इत्यत आह – **नचेति** ।

ವಿದ್ಯಾಶಬ್ದಕ್ಕೆ ಜ್ಞಾನವೆಂಬರ್ಥವು ಇರಬಹುದು. ಆದರೆ ಪರವಿದ್ಯಾ ಮತ್ತು ಅಪರವಿದ್ಯಾ ಎಂಬಲ್ಲಿರುವ ವಿದ್ಯಾಶಬ್ದವು ಜ್ಞಾನವೆಂಬರ್ಥದಲ್ಲಿ ಇರುವುದಿಲ್ಲವೆಂದು 'ಯಯಾ' ಇತ್ಯಾದಿ ವಾಕ್ಯದಿಂದ ಸಮರ್ಥಿಸುತ್ತಿದ್ದಾರೆ. 'ಯಯಾ' ಯಾವ ವಿದ್ಯೆಯಿಂದ 'ಅಧಿಗಮ್ಯತೇ' ಬ್ರಹ್ಮನು ಹೊಂದಲ್ಪಡುತ್ತಾನೋ ಅವನೇ ಅಕ್ಷರನು ಎಂಬರ್ಥವನ್ನು ಮಾಡಬಹುದಾದ್ದರಿಂದ ಜ್ಞಾನಕರಣವೆಂಬರ್ಥದಲ್ಲಿ ವಿದ್ಯಾಶಬ್ದವನ್ನು ಏಕೆ ಪ್ರಯೋಗಿಸಬೇಕು? ಎಂಬ ಪ್ರಶ್ನೆಗೆ 'ನಚ' ಇತ್ಯಾದಿ ವಾಕ್ಯದಿಂದ ಉತ್ತರಿಸಿರುತ್ತಾರೆ.

**प्रकाशः** – ननु ''व्रजयजोर्भावे क्यप्'' इति पूर्वसूत्रादनुवृत्तस्य भावार्थकस्यैव क्यपः ''सञ्ज्ञायां समजनिषदनिपतमनविदषुञ्शीङ्भृञिणः'' इति सूत्रे विहितत्वात्,

'तत्प्राप्तिहेतुर्ज्ञानं च कर्म चोक्तं महामुने ।
आगमोत्थं विवेकाच्च द्विधा ज्ञानं तथोच्यते ॥'

इति पराशरवचने प्रयोगाच्च ज्ञानमेव विद्याशब्दार्थ इत्याशङ्क्याह – **यद्यपीति** ।

ಆಕ್ಷೇಪ - ವಿದ್ಯಾಶಬ್ದವು ಜ್ಞಾನವೆಂಬರ್ಥದಲ್ಲಿಯೇ ಸಾಧುವಾಗುತ್ತದೆ. ಏಕೆಂದರೆ ''ವ್ರಜಯಜೋರ್ಭಾವೇ ಕ್ಯಪ್'' ಎಂಬ ಹಿಂದಿನ ಸೂತ್ರದಿಂದ 'ಸಂಜ್ಞಾಯಾಂ ಸಮಜನಿಷದನಿಪತಮನವಿದಷುಞ್ಶೀಙ್ಭೃಞಿಣಃ' ಎಂಬ ಮುಂದಿನ ಸೂತ್ರದಲ್ಲಿ ಭಾವಾರ್ಥಕದಲ್ಲಿರುವ 'ಕ್ಯಪ್' ಪ್ರತ್ಯಯವು ಅನುವೃತ್ತವಾಗುತ್ತದೆ. ಭಾವಾರ್ಥದಲ್ಲಿ ವಿದ್ ಧಾತುವಿಗೆ 'ಕ್ಯಪ್' ಪ್ರತ್ಯಯ ಬಂದು ವಿದ್ಯಾಶಬ್ದವು ನಿಷ್ಪನ್ನವಾಗಿದೆ. ಆದ್ದರಿಂದ ಜ್ಞಾನವೆಂಬರ್ಥವನ್ನೇ ಹೇಳಬೇಕು. ಇದನ್ನೇ

'ತತ್ಪ್ರಾಪ್ತಿಹೇತುರ್ಜ್ಞಾನಂ ಚ ಕರ್ಮ ಚೋಕ್ತಂ ಮಹಾಮುನೇ।
ಆಗಮೋತ್ಥಂ ವಿವೇಕಾಚ್ಚ ದ್ವಿಧಾ ಜ್ಞಾನಂ ತಥೋಚ್ಯತೇ ॥'

ಎಂಬುದಾಗಿ ಪರಾಶರರ ಮಾತಿನಲ್ಲಿ ಜ್ಞಾನವೆಂಬರ್ಥದಲ್ಲಿ ವಿದ್ಯಾಶಬ್ದವನ್ನು ಪ್ರಯೋಗಿಸಿದ್ದು ಕಾಣಸುತ್ತಿದೆ. ಆದ್ದರಿಂದ ಪರವಿದ್ಯಾ ಹಾಗೂ ಅಪರವಿದ್ಯಾ ಎಂಬಲ್ಲಿರುವ ವಿದ್ಯಾಶಬ್ದಕ್ಕೆ ಜ್ಞಾನವೆಂದೇ ಅರ್ಥ.

ಸಮಾಧಾನ - ಈ ಆಕ್ಷೇಪಕ್ಕೆ 'ಯದ್ಯಪಿ' ಎಂಬ ಗ್ರಂಥದಿಂದ ಉತ್ತರಿಸುತ್ತಿದ್ದಾರೆ.

**प्रकाशः** – भाव इतीति । ''व्रजयजोर्भावे'' इत्यन्यवहितं भावपदं न स्वर्यते, व्यवहितं त्वनुवर्त्यत इति भावः । तथा च – 'भावे अकर्तरि च कारके सञ्ज्ञायाम्' इत्येतत् ''कृत्यल्युटो बहुलम्'' इति सूत्रपर्यन्तमनुवर्तते ।

'ವ್ರಜಯಜೋರ್ಭಾವೇ' ಎಂಬ ಹಿಂದಿನ ಸೂತ್ರದಿಂದ ಭಾವ ಎಂಬ ಪದವನ್ನು ಅನುವೃತ್ತಿ ಮಾಡಿಕೊಂಡಿದ್ದಲ್ಲಿ ಜ್ಞಾನವೆಂಬರ್ಥವನ್ನು ಮಾತ್ರ ವಿದ್ಯಾಶಬ್ದಕ್ಕೆ ವಿವಕ್ಷಿಸಬಹುದಿತ್ತು. ಆದರೆ ವ್ಯವಹಿತವಾದ 'ಭಾವೇ ಅಕರ್ತರಿ ಚ ಕಾರಕೇ ಸಂಜ್ಞಾಯಾಮ್' ಎಂಬ ಸೂತ್ರದಲ್ಲಿರುವ 'ಭಾವೇ' ಎಂಬ ಪದವನ್ನು ಅನುವೃತ್ತಿ ಮಾಡಿಕೊಳ್ಳಲಾಗಿದೆ. ಏಕೆಂದರೆ ಈ ಸೂತ್ರವು 'ಕೃತ್ಯಲ್ಯುಟೋ ಬಹುಲಮ್' ಎಂಬ ಸೂತ್ರದ ತನಕ ಎಲ್ಲಾ ಸೂತ್ರಗಳಲ್ಲಿಯೂ ಅನುವೃತ್ತವಾಗುತ್ತದೆ. ಆದ್ದರಿಂದ ವಿದ್ಯಾಶಬ್ದಕ್ಕೆ ಕೇವಲ ಜ್ಞಾನವೆಂಬರ್ಥವನ್ನು ಹೇಳಲು ಸಾಧ್ಯವಿಲ್ಲ.

**प्रकाशः** – एवं चेह 'भावे' इत्यनुर्तमाने ''व्रजयजोर्भावे'' इति पुनर्भावग्रहणम् 'अकर्तरि च कारके' इत्यस्य व्यावर्तनेन भाव एव यथा स्यादित्येवमर्थम् ।

ಆದ್ದರಿಂದ ಇಲ್ಲಿ 'ಭಾವೇ ಅಕರ್ತರಿ ಚ ಕಾರಕೇ ಸಂಜ್ಞಾಯಾಮ್' ಎಂಬ ಸೂತ್ರದಿಂದಲೇ 'ಭಾವೇ' ಎಂಬ ಪದವು ಅನುವೃತ್ತವಾಗುತ್ತದೆ. ಹೀಗಿದ್ದರೂ 'ವ್ರಜಯಜೋರ್ಭಾವೇ' ಎಂಬ ಸೂತ್ರದಲ್ಲಿ ಪುನಃ ಭಾವೇ ಎಂದೇಕೆ ಹೇಳಿದರು ? ಎಂಬ ಪ್ರಶ್ನೆ ಸಹಜವಾಗಿ ಬರುತ್ತದೆ. 'ವ್ಯರ್ಥಮಪಿ ಕಂಚಿದರ್ಥಂ ಜ್ಞಾಪಯತಿ' ಎಂಬ ನಿಯಮದ ಪ್ರಕಾರ ಏನೋ ಒಂದು ಸಾರ್ಥಕ್ಯವನ್ನು ತಿಳಿಸುವುದಕ್ಕಾಗಿ 'ವ್ರಜಯಜೋರ್ಭಾವೇ' ಎಂಬ ಸೂತ್ರದಲ್ಲಿ ಭಾವೇ ಎಂಬ ಪದವನ್ನು ಪ್ರಯೋಗಿಸಲಾಗಿದೆ. ಅದೇನೆಂದರೆ 'ಅಕರ್ತರಿ ಚ ಕಾರಕೇ ಸಂಜ್ಞಾಯಾಮ್' ಎಂಬಲ್ಲಿ ಹೇಳಲಾದ ಕರ್ತೃಭಿನ್ನವಾದ ಕಾರಕಗಳಲ್ಲಿ ಎಂಬುದನ್ನು ವ್ಯಾವರ್ತ್ಯ ಮಾಡುವುದಕ್ಕಾಗಿ; ಕೇವಲ ಭಾವಾರ್ಥದಲ್ಲಿ ಮಾತ್ರ ಕ್ಯಪ್ ಪ್ರತ್ಯಯವು ಬರುತ್ತದೆಂದು ತಿಳಿಸುವುದಕ್ಕಾಗಿ ಪುನಃ 'ಭಾವೇ' ಎಂಬ ಪದವನ್ನು ಪ್ರಯೋಗಿಸಲಾಗಿದೆ. ಆದ್ದರಿಂದ ಅನುವೃತ್ತಿಯಿಂದ ಸಿದ್ಧವಾಗುತ್ತಿದ್ದರೂ ಪುನಃ 'ಭಾವೇ' ಎಂದು ಹೇಳಿದ್ದರಿಂದ ಕ್ಯಪ್ ಪ್ರತ್ಯಯವು ಕೇವಲ ಭಾವಾರ್ಥದಲ್ಲಿ ಬರುತ್ತದೆಂಬ ಪ್ರಯೋಜನವನ್ನು ಸೂತ್ರಕಾರನು ವಿವಕ್ಷಿಸಿದ್ದಾನೆಂದು ತಿಳಿಯಬೇಕು.

**प्रकाशः** – अस्य च भावपदस्य 'सञ्ज्ञायाम्' इत्यत्र अनुवृत्तौ हि विद्याशब्दो ज्ञान एव मुख्यः स्यात् ।

ಪ್ರಕೃತ 'ವ್ರಜಯಜೋರ್ಭಾವೇ' ಎಂಬ ಸೂತ್ರದಲ್ಲಿರುವ ಭಾವಪದವನ್ನು 'ಸಂಜ್ಞಾಯಾಂ ಸಮಜನಿಷದ'' ಎಂಬ ಸೂತ್ರದಲ್ಲಿ ಅನುವೃತ್ತಿಮಾಡಿಕೊಂಡಿದ್ದರೆ ವಿದ್ಯಾಶಬ್ದವು ಜ್ಞಾನವೆಂಬರ್ಥದಲ್ಲಿಯೇ ಮುಖ್ಯವಾಗಿ ಪ್ರಯುಕ್ತವಾಗುತ್ತಿತ್ತು.

**प्रकाशः** – तत्तु 'न स्वर्यते' स्वरितत्वेन नोच्चार्यते नानुवर्त्यत इत्युक्तत्वात् ''संज्ञायां समजनिषद'' इति सूत्रे क्यबेवानुवर्तते । नतु 'अकर्तरि च कारके' इत्येतद्व्यावर्तकं 'भावे' इत्येतत् पदं,

ಆದರೆ 'ಭಾವೇ' ಎಂಬ ಪದವನ್ನು 'ವ್ರಜಯಜೋರ್ಭಾವೇ' ಎಂಬ ಸೂತ್ರದಿಂದ ಅನುವೃತ್ತಿ ಮಾಡಿಕೊಂಡಿಲ್ಲ. ಏಕೆಂದರೆ 'ನ ಸ್ವರ್ಯತೇ' ಎಂದರೆ ಸ್ವರಿತಸ್ವರದಲ್ಲಿ 'ವ್ರಜಯಜೋರ್ಭಾವೇ' ಎಂಬಲ್ಲಿರುವ 'ಭಾವೇ' ಎಂಬ ಪದವನ್ನು ಉಚ್ಚಾರ ಮಾಡಿಲ್ಲ. ಆದ್ದರಿಂದ ಅದನ್ನು ಅನುವೃತ್ತಿ ಮಾಡಿಕೊಳ್ಳಲು ಸಾಧ್ಯವಿಲ್ಲ ಎಂದು ಹೇಳಿದ್ದರಿಂದ 'ಸಂಜ್ಞಾಯಾಂ ಸಮಜನಿಷದ' ಎಂಬ ಸೂತ್ರದಲ್ಲಿ 'ವ್ರಜಯಜೋರ್ಭಾವೇ' ಎಂಬ ಸೂತ್ರದಲ್ಲಿರುವ 'ಕ್ಯಪ್' ಎಂಬ ಪ್ರತ್ಯಯವನ್ನೇ ಅನುವೃತ್ತಿ ಮಾಡಿಕೊಳ್ಳಬೇಕು ಹೊರತು 'ಅಕರ್ತರಿ ಚ ಕಾರಕೇ' ಎಂಬುದನ್ನು ವ್ಯಾವೃತ್ತಿ ಮಾಡುವ 'ಭಾವೇ' ಎಂಬ ಪದವನ್ನು ಅನುವೃತ್ತಿ ಮಾಡಿಕೊಳ್ಳಬಾರದು.

**प्रकाशः** – स्वरितत्वाभावेन ''स्वरितेनाधिकारः'' इत्युक्तस्वरितनिबन्धनाधिकार-शब्दितानुवृत्तेरयोगात् । उत्तरत्र ''कृत्यल्युटः'' इति सूत्रपर्यन्तं सामान्यतोऽनुवर्तमाने भावे कर्तृव्यतिरिक्तकारके च क्यपो विधानात्, वेदनरूपभाव इव वेदनकरणेऽपि मुख्य एवेत्यर्थः ।

ಯಾವುದಾದರೂ ಪದವನ್ನು ಪಾಣಿನಿಸೂತ್ರದಲ್ಲಿ ಅನುವೃತ್ತಿ ಮಾಡಿಕೊಳ್ಳಬೇಕಾದರೆ ಅಂತಹ ಪದವನ್ನು ಸೂತ್ರಕಾರನು ಸ್ವರಿತಸ್ವರದಲ್ಲಿ ಉಚ್ಛರಿಸಿರುತ್ತಾನೆ. ಆದ್ದರಿಂದಲೇ ''ಸ್ವರಿತೇನಾಧಿಕಾರಃ'' ಸ್ವರಿತಸ್ವರದಲ್ಲಿ ಉಚ್ಚರಿಸಲ್ಪಟ್ಟದ್ದು ಅಧಿಕಾರಸೂತ್ರವಾಗುತ್ತದೆಂದು ಪಾಣಿನಿಯೇ ಹೇಳಿದ್ದಾನೆ. 'ಭಾವೇ' ಎಂಬುದು ಹಾಗೂ 'ಅಕರ್ತರಿ ಚ ಕಾರಕೇ ಸಂಜ್ಞಾಯಾಮ್' ಎಂಬುದು ಸ್ವರಿತಸ್ವರದಲ್ಲಿ ಉಚ್ಚರಿಸಲ್ಪಟ್ಟಿಲ್ಲ. ಆದ್ದರಿಂದ 'ಕೃತ್ಯಲ್ಯುಟೋ ಬಹುಲಮ್' ಎಂಬ ಸೂತ್ರದ ತನಕ ಎಲ್ಲೆಡೆಯೂ 'ಭಾವೇ' ಎಂಬುದೂ 'ಅಕರ್ತರಿ ಚ ಕಾರಕೇ ಸಂಜ್ಞಾಯಾಮ್' ಎಂಬುದೂ ಅನುವೃತ್ತವಾಗುತ್ತದೆ. ಇದರಿಂದ ಭಾವಾರ್ಥದಲ್ಲಿ ಮತ್ತು ಕರ್ತೃವ್ಯತಿರಿಕ್ತವಾದ ಕಾರಕದಲ್ಲಿ 'ಕ್ಯಪ್' ಪ್ರತ್ಯಯವನ್ನು 'ಸಂಜ್ಞಾಯಾಂ ಸಮಜನಿಷದ' ಎಂಬ ಸೂತ್ರವು ವಿಧಾನ ಮಾಡುತ್ತಿದೆ ಎಂದು ಹೇಳಿದಂತಾಗುತ್ತದೆ. ಅಂದರೆ 'ಕ್ಯಪ್' ಪ್ರತ್ಯಯವು ಭಾವಾರ್ಥದಲ್ಲಿಯೂ ಬರುತ್ತದೆ. ಹಾಗೂ ಕರ್ತೃವ್ಯತಿರಿಕ್ತವಾದ, ಕರಣ, ಅಧಿಕರಣ, ಕರ್ಮ ಮೊದಲಾದ ಅರ್ಥಗಳಲ್ಲಿಯೂ 'ಕ್ಯಪ್' ಪ್ರತ್ಯಯವು ಬರುತ್ತದೆಂದು ಹೇಳಿದಂತಾಯಿತು. ಆದ್ದರಿಂದ ವಿದ್ಯಾಶಬ್ದವು ಜ್ಞಾನವೆಂಬರ್ಥವನ್ನು ಹೇಳುವಂತೆ ಜ್ಞಾನಕರಣ ಎಂಬರ್ಥವನ್ನೂ ಸಹ ಮುಖ್ಯವಾಗಿಯೇ ಹೇಳುತ್ತದೆ.

ಅದೃಶ್ಯತ್ವಾಧಿಕರಣ (೧-೨-೬)

**प्रकाशः** – उक्तं च प्रक्रियाप्रसादेऽपि ''अनन्तरभावग्रहणं न स्वर्यते । तेन भावादावर्थे'' इति । अत एवोक्तं सुधायां जिज्ञासानये – ''यथार्थज्ञानतत्साधनयो र्विद्याशब्दस्य योगरूढिभ्यां प्रवृत्तत्वात्'' इति ।

ಇದೇ ವಿಷಯವನ್ನು ಪ್ರಕ್ರಿಯಾಪ್ರಸಾದವೆಂಬ ವ್ಯಾಕರಣ ಗ್ರಂಥದಲ್ಲಿ ಹೀಗೆ ಹೇಳಿದ್ದಾರೆ - ''ಅನಂತರಭಾವಗ್ರಹಣಂ ನ ಸ್ವರ್ಯತೇ । ತೇನ ಭಾವಾದಾವರ್ಥೇ'' ಅನಂತರವಿರುವ ಭಾವಶಬ್ದವು ಸ್ವರಿತಸ್ವರದಲ್ಲಿ ಉಚ್ಚರಿಸಲ್ಪಟ್ಟಿಲ್ಲ. ಆದ್ದರಿಂದ ಭಾವಾದ್ಯರ್ಥಗಳಲ್ಲಿಯೇ 'ಕ್ಯಪ್' ಪ್ರತ್ಯಯವು ಬರುತ್ತದೆ ಎಂದು. ಆದ್ದರಿಂದಲೇ ನ್ಯಾಯಸುಧೆಯ ಜಿಜ್ಞಾಸಾಧಿಕರಣದಲ್ಲಿಯೂ ''ಯಥಾರ್ಥಜ್ಞಾನತತ್ಸಾಧನಯೋ-ರ್ವಿದ್ಯಾಶಬ್ದಸ್ಯ ಯೋಗರೂಢಿಭ್ಯಾಂ ಪ್ರವೃತ್ತತ್ವಾತ್'' ಎಂದು ಹೇಳಲಾಗಿದೆ.

**प्रकाशः** – पराशरवचनस्य गतिमाह – **आगमोत्थमिति** । **परोक्षेति** । यथायोग्यमन्वयः ।

ಪರಾಶರರ ಮಾತಿನ ಅಭಿಪ್ರಾಯವನ್ನು 'ಆಗಮೋತ್ಥಮ್' ಇತ್ಯಾದಿ ವಾಕ್ಯದಿಂದ ವಿವರಿಸುತ್ತಿದ್ದಾರೆ. ಪರೋಕ್ಷ, ಅಪರೋಕ್ಷ ಎಂಬೆರಡು ಪದಗಳು ಕ್ರಮವಾಗಿ ಪರ ಮತ್ತು ಅಪರಶಬ್ದಗಳಲ್ಲಿ ಅನ್ವಯವನ್ನು ಹೊಂದುತ್ತವೆ.

**प्रकाशः** – एवं परविद्याविषयत्वमन्यत्र अनवकाशतया समर्थ्य प्रसङ्गात्परोक्तं च व्युदस्येदानीं पूर्वपक्षप्रापकाणां क्रमेण सावकाशत्वमाह – **ऊर्णनाभ्यादिरिति** ।

ಇಲ್ಲಿಯ ತನಕ ಪರವಿದ್ಯಾವಿಷಯತ್ವವನ್ನು ನಿರವಕಾಶವಾದ ಲಿಂಗವೆಂದು ಸಮರ್ಥಿಸಿದರು. ಪ್ರಾಸಂಗಿಕವಾಗಿ ಅದ್ವೈತಿಗಳ ಪರಾಪರವಿದ್ಯೆಯ ವಿಚಾರವನ್ನು ವಿಮರ್ಶಿಸಿದರು. ಪ್ರಕೃತ ಪೂರ್ವಪಕ್ಷ ಪ್ರಾಪಕವಾದ ಲಿಂಗಗಳೆಲ್ಲವೂ ಸಾವಕಾಶವಾಗಿವೆಯೆಂದು ಕ್ರಮವಾಗಿ ಪ್ರತಿಪಾದಿಸುತ್ತಿದ್ದಾರೆ. ಊರ್ಣನಾಭ್ಯಾದಿ' ಇತ್ಯಾದಿ ವಾಕ್ಯದಿಂದ.

**प्रकाशः** – 'अन्यत्र' प्रकृत्यधिकरणानुव्याख्यानादौ । तथा च तद्बलात् ''अक्षरात्सम्भवति'' इत्यत्र पञ्चम्या नोपादानत्वमर्थः, किन्तु निमित्तत्वमेवेत्यर्थः ।

'ಅನ್ಯತ್ರ' ಎಂದರೆ ಪ್ರಕೃತ್ಯಧಿಕರಣದ ಅನುವ್ಯಾಖ್ಯಾನಾದಿಗಳಲ್ಲಿ ಎಂದರ್ಥ. ಊರ್ಣನಾಭ್ಯಾದಿಗಳಲ್ಲಿ ನಿಮಿತ್ತಕಾರಣವೇ ಕಂಡಿರುವುದರಿಂದ 'ಅಕ್ಷರಾತ್ಸಂಭವತೀ' ಎಂಬಲ್ಲಿರುವ ಪಂಚಮೀವಿಭಕ್ತಿಗೆ ಉಪಾದಾನಕಾರಣವೆಂದರ್ಥವಲ್ಲ; ಹೊರತಾಗಿ ಅಕ್ಷರವು ಜಗತ್ತಿಗೆ ನಿಮಿತ್ತಕಾರಣವೆಂದೇ ಅರ್ಥ.

**प्रकाशः** – एतेनोपादानत्वरूपबाधकाभावेन अक्षरशब्दोऽक्षराधिकरणन्यायेन सावकाश इति न चित्प्रकृतिरिति पक्षोऽपि युज्यत इति सिद्धत्वान्नोक्तम् । चतुर्मुखप्रापकं सावकाशयति – **स इति** । आदिपदेन सार्वज्ञ्यादिलिङ्गं गृह्यते ।

ಹೀಗೆ ಹೇಳಿದ್ದರಿಂದ ಉಪಾದಾನತ್ವವೆಂಬ ಬಾಧಕವಿಲ್ಲದ ಕಾರಣ ಅಕ್ಷರಶಬ್ದವು ಅಕ್ಷರಾಧಿಕರಣದ ನ್ಯಾಯದಿಂದ ವಿಷ್ಣುವಿನಲ್ಲಿ ಸಾವಕಾಶವಾಯಿತು. ಇಂತಹ ಅಕ್ಷರಶ್ರುತಿಯ ಬಲದಿಂದ ಚಿತ್ಪ್ರಕೃತಿಯ ಪಕ್ಷವನ್ನು ಸಮರ್ಥಿಸಲಾಗದೆಂಬ ವಿಚಾರವು ಸಿದ್ಧವಾಯಿತು. ಆದ್ದರಿಂದಲೇ ಪ್ರತ್ಯೇಕವಾಗಿ ಇದನ್ನು ಹೇಳಿರುವುದಿಲ್ಲ. ಚತುರ್ಮುಖಬ್ರಹ್ಮನಿಗೆ ಪ್ರಾಪಕವಾದ ಬ್ರಹ್ಮಶಬ್ದವನ್ನು ಆದಿಪದದಿಂದ ಸರ್ವಜ್ಞತ್ವಾದಿಲಿಂಗಗಳನ್ನು ಸಾವಕಾಶ ಮಾಡುತ್ತಿದ್ದಾರೆ. 'ಸಃ' ಇತ್ಯಾದಿ ವಾಕ್ಯದಿಂದ.

**गुरुराजीयम् – पक्षान्तरे त्विति ।। चतुर्मुखरुद्रपक्ष इत्यर्थः । न स्वर्यते नानुवर्तत इत्यर्थः । अन्यत्र न्यायामृते । उपादानत्वभङ्ग इत्यर्थः ।**



ಸಿದ್ಧಾಂತವನ್ನು ಪ್ರಾರಂಭಿಸುತ್ತಿದ್ದಾರೆ. ಮೊದಲು ಪರವಿದ್ಯಾವಿಷಯತ್ವವು ವಿಷ್ಣುವಿನ ಅಸಾಧಾರಣ-ಲಿಂಗವಾಗಿದೆಯೆಂಬುದನ್ನು ಸಮರ್ಥಿಸುತ್ತಿದ್ದಾರೆ. ಪೂರ್ವಪಕ್ಷ ಮಾಡುವಾಗ ಅಪರವಿದ್ಯೆಗೆ ವಿಷ್ಣುವು ವಿಷಯನಾಗಿದ್ದಾನೆ ಹೊರತು, ಪರವಿದ್ಯೆಗೆ ವಿಷಯನಾಗುವುದಿಲ್ಲವೆಂದು ಸಮರ್ಥಿಸಿದ್ದರು. ಇದು ತಪ್ಪು. ಯಾವ ಋಗ್ವೇದಾದಿಗಳು ಅಪರವಿದ್ಯೆಯೆಂದು ಪೂರ್ವಪಕ್ಷಕಾರರು ಹೇಳಿದರೋ ಅದೇ ಋಗ್ವೇದಾದಿಗಳು ಪರವಿದ್ಯೆಯೆಂದೂ ಆಗುತ್ತವೆ. ಉಪಾಧಿಭೇದದಿಂದ ಒಂದೇ ಶಾಸ್ತ್ರವು ಪರವಿದ್ಯೆಯೂ ಆಗುತ್ತದೆ. ಅಪರವಿದ್ಯೆಯೂ ಆಗುತ್ತದೆ. ಯಾವರೀತಿಯಾಗಿ ಒಂದೇ ಕರ್ಮವು ನಿಷ್ಕಾಮಭಾವನೆಯಿಂದ ಆಚರಿಸಿದಾಗ ನಿವೃತ್ತಕರ್ಮವಾಗುತ್ತದೆ. ಸಕಾಮ ಭಾವನೆಯಿಂದ ಆಚರಿಸಿದಾಗ ಪ್ರವೃತ್ತಕರ್ಮವಾಗುತ್ತದೆ. ಅಥವಾ ನಾವು ತಿನ್ನುವ ಅನ್ನವು ಆರೋಗ್ಯಕ್ಕೆ ಹಿತವಾದ ಪದಾರ್ಥಗಳನ್ನು ಸೇರಿಸಿ ತಿಂದಾಗ ಪಥ್ಯವಾಗುತ್ತದೆ. ಆರೋಗ್ಯಕ್ಕೆ ಅಹಿತವಾದ ಪದಾರ್ಥವನ್ನು ಸೇರಿಸಿ ತಿಂದಾಗ ಅಪಥ್ಯವಾಗುತ್ತದೆ. ಇದರಂತೆ ಒಂದೇ ಋಗ್ವೇದಾದಿ ಶಾಸ್ತ್ರಗಳು ಉಪಕ್ರಮಾದಿ ತಾತ್ಪರ್ಯಲಿಂಗಗಳಿಂದ ವಿಚಾರಮಾಡಿ ಬ್ರಹ್ಮನನ್ನು ತಿಳಿದಾಗ ಪರವಿದ್ಯೆಯೆನಿಸುತ್ತದೆ, ಇಲ್ಲದಿದ್ದರೆ ಅಪರವಿದ್ಯೆಯೆನಿಸುತ್ತದೆ. ಆದ್ದರಿಂದ ಶ್ರೀಮದಾಚಾರ್ಯರ ಮಾತು 'ಋಗಾದ್ಯಾ ಅಪರಾ ವಿದ್ಯಾ ಯದಾ ವಿಷ್ಣೋರ್ನ ವಾಚಕಾಃ । ತಾ ಏವ ಪರಮಾ ವಿದ್ಯಾ ಯದಾ ವಿಷ್ಣೋಸ್ತು ವಾಚಕಾಃ ॥' 'ಯಾವಾಗ ಋಗ್ವೇದಾದಿಗಳು ವಿಷ್ಣುವನ್ನು ಪ್ರತಿಪಾದಿಸದೆ, ಉಪಾಸನಾ, ಕರ್ಮ ಮೊದಲಾದವನ್ನಷ್ಟೇ ಪ್ರತಿಪಾದಿಸುತ್ತವೋ ಆವಾಗ ಅಪರವಿದ್ಯೆಯೆನಿಸುತ್ತವೆ. ಯಾವಾಗ ವಿಷ್ಣುವನ್ನು ಪ್ರತಿಪಾದಿಸುತ್ತವೋ ಆವಾಗ ಪರವಿದ್ಯೆಯೆನಿಸುತ್ತಿವೆ' ಎಂದು. ಈ ಮಾತನ್ನು ಎಂದೂ ಮರೆಯಬಾರದು.

ಈ ಸಂದರ್ಭದಲ್ಲಿ ಅದ್ವೈತಿಗಳು ಏನು ಹೇಳುತ್ತಾರೆಂಬುದನ್ನು ತಿಳಿಯಬೇಕು. ವೇದವು ಮಂತ್ರ ಹಾಗೂ ಉಪನಿಷತ್ತು ಎಂದು ಎರಡುವಿಧ. ಉಪನಿಷತ್ ಭಾಗವು ಪರವಿದ್ಯೆಯಾಗುತ್ತದೆ, ಮಂತ್ರಭಾಗವು ಅಪರವಿದ್ಯೆಯಾಗುತ್ತದೆ. ಏಕೆಂದರೆ ಉಪನಿಷತ್‌ಭಾಗವು ಶುದ್ಧಬ್ರಹ್ಮನನ್ನು ಪ್ರತಿಪಾದಿಸುವ ಮೂಲಕ ಮೋಕ್ಷಕಾರಣವಾಗಿದೆ. ಮಂತ್ರಭಾಗವು ಉಪಾಸನಾ, ಕರ್ಮ ಮೊದಲಾದವುಗಳನ್ನೆಲ್ಲಾ ಪ್ರತಿಪಾದನೆ ಮಾಡುವುದರಿಂದ ಮೋಕ್ಷಸಾಧನವಾಗಿಲ್ಲ ಎಂದು ಅದ್ವೈತಿಗಳ ಅಭಿಪ್ರಾಯ.

ಇದು ಸರಿಯಲ್ಲ. ಏಕೆಂದರೆ ಸಕಲ ಶ್ರುತಿಸ್ಮೃತಿಗಳಿಂದ ಮುಖ್ಯವಾಗಿ ಬ್ರಹ್ಮನೊಬ್ಬನೇ ಪ್ರತಿಪಾದ್ಯನಾಗಿದ್ದಾನೆ. ಆದ್ದರಿಂದ ಕೇವಲ ಉಪನಿಷತ್‌ಭಾಗದಿಂದ ಪ್ರತಿಪಾದ್ಯನೆಂಬ ನಿರ್ಣಯ ತಪ್ಪಾಗುತ್ತದೆ. ವಿಚಾರ ಮಾಡಿದರೆ

ಮಂತ್ರಭಾಗವು ಉಪಾಸನಾದಿಗಳನ್ನು ವಿವರಿಸುವಂತೆ ಉಪನಿಷತ್ತಿನಲ್ಲಿಯೂ ಅನೇಕ ಕಡೆ ಬ್ರಹ್ಮವಿಚಾರವು ಇರದ ಉಪಾಸನಾದಿಗಳ ವಿಚಾರವೇ ಇರುವುದು ಕಾಣಸುತ್ತದೆ. ಇನ್ನು ಮಂತ್ರಭಾಗದಲ್ಲಿಯೂ ಅನೇಕಕಡೆ ಬ್ರಹ್ಮವಿಚಾರವು ಪ್ರಸಕ್ತವಾಗಿದೆ. ಆದ್ದರಿಂದ ಅದ್ವೈತಿಗಳ ಅಭಿಪ್ರಾಯ ಸರಿಯಲ್ಲ.

ಇನ್ನು ರಾಮಾನುಜರು ಪರೋಕ್ಷಜ್ಞಾನವನ್ನು ಅಪರವಿದ್ಯೆಯೆಂದೂ, ಭಕ್ತಿರೂಪವಾದ ಅಪರೋಕ್ಷಜ್ಞಾನವನ್ನು ಪರವಿದ್ಯೆಯೆಂದೂ ಹೇಳುತ್ತಾರೆ. ಇದೂ ಸಹ ತಪ್ಪು. ವಿದ್ಯಾಶಬ್ದಕ್ಕೆ ಜ್ಞಾನಕರಣವೆಂದರ್ಥ. ಏಕೆಂದರೆ 'ಯಯಾ ತದಕ್ಷರಮಧಿಗಮ್ಯತೇ' ಎಂಬ ಶ್ರುತಿಯಿಂದ ಇದು ಸ್ಪಷ್ಟವಾಗುತ್ತದೆ. ಮತ್ತು ವ್ಯಾಕರಣದ ಪ್ರಕಾರ 'ವಿದ್' ಧಾತುವಿಗೆ 'ಕ್ಯಪ್' ಪ್ರತ್ಯಯವು ಬಂದು ವಿದ್ಯಾ ಎಂಬ ರೂಪವು ನಿಷ್ಪನ್ನವಾಗಿದೆ. ಈ 'ಕ್ಯಪ್' ಪ್ರತ್ಯಯವು ಭಾವಾರ್ಥದಲ್ಲಿರುವಂತೆ ಕರಣ, ಅಧಿಕರಣ ಮೊದಲಾದ ಅರ್ಥಗಳಲ್ಲಿಯೂ ಬರುತ್ತದೆ. ಆದ್ದರಿಂದ ಜ್ಞಾನವೆಂಬರ್ಥವನ್ನು ಹೇಳುವಂತೆ ಜ್ಞಾನಕರಣವೆಂಬರ್ಥವನ್ನೂ ಸಹ ವಿದ್ಯಾಶಬ್ದಕ್ಕೆ ಹೇಳಬಹುದು. ಪ್ರಕೃತ ಜ್ಞಾನಕರಣವೆಂಬರ್ಥವನ್ನೇ ವಿವಕ್ಷಿಸಬೇಕು.

ಪೂರ್ವಪಕ್ಷ ಮಾಡುವಾಗ ಊರ್ಣನಾಭಿ ಮೊದಲಾದ ದೃಷ್ಟಾಂತಗಳನ್ನು ನೀಡಿ ಶ್ರುತಿಯಲ್ಲಿ ಉಪಾದಾದನಕಾರಣತ್ವವೇ ಪ್ರಸಕ್ತವಾಗಿದೆಯೆಂದು ಹೇಳಿದ್ದರು ಇದೂ ಸಹ ತಪ್ಪು. ಊರ್ಣನಾಭಿ, ಪೃಥಿವೀ ಮೊದಲಾದವುಗಳೆಲ್ಲವೂ ನಿಮಿತ್ತಕಾರಣವೇ ಆಗಿವೆ ಹೊರತು, ಉಪಾದಾನಕಾರಣವಾಗಿರುವುದಿಲ್ಲವೆಂಬ ವಿಚಾರವನ್ನು ಪ್ರಕೃತ್ಯಧಿಕರಣದ ಅನುವ್ಯಾಖ್ಯಾನ ಸುಧಾದಿಗ್ರಂಥಗಳನ್ನು ಓದಿ ತಿಳಿದುಕೊಳ್ಳಬೇಕು. ಆದ್ದರಿಂದ ಶ್ರುತಿಯು ನಿಮಿತ್ತಕಾರಣವನ್ನೇ ಹೇಳುತ್ತಿದೆ. ಇದು ಬ್ರಹ್ಮನಲ್ಲಿ ಯುಕ್ತವಾಗುತ್ತದೆ. ಇದರ ಜೊತೆಗೆ ಸರ್ವಜ್ಞತ್ವ, ಪರವಿದ್ಯಾವಿಷಯತ್ವ ಮೊದಲಾದ ಲಿಂಗಗಳೆಲ್ಲವೂ ವಿಷ್ಣುವಿನದ್ದೇ ಆಗಿರುತ್ತವೆಂದು ತಿಳಿಯಬೇಕು.



## ವಿಶೇಷಣ ಹಾಗೂ ಭೇದವ್ಯಪದೇಶ ಹೇತುಗಳಲ್ಲಿರುವ ಸ್ವಾರಸ್ಯ ವರ್ಣನೆ

### तात्पर्यचन्द्रिका

**यच्चोक्तं सर्वज्ञपदं रुद्राख्यविशेष्यपरमिति, तन्न, तस्य चतुर्मुखजन्यतया तज्जनकत्वायोगात् । किन्तु प्रकृतस्याक्षरस्य सर्वज्ञत्वविशेषणपरम् ।**

ಅನುವಾದ - ಹಿಂದೆ ಪೂರ್ವಪಕ್ಷ ಮಾಡುವಾಗ ಶ್ರುತಿಯಲ್ಲಿರುವ ಸರ್ವಜ್ಞಪದವು ರುದ್ರನೆಂಬ ವಿಶೇಷ್ಯಪದಾರ್ಥವನ್ನು ಹೇಳುತ್ತಿದೆ ಹೊರತು, ವಿಶೇಷಣವಾಚಕವಾಗಿಲ್ಲವೆಂದು ಹೇಳಲಾಗಿತ್ತು. ಇದು ತಪ್ಪು. ಒಂದು ವೇಳೆ ಸರ್ವಜ್ಞಪದವು ರುದ್ರನೆಂಬ ವಿಶೇಷ್ಯನನ್ನು ಹೇಳುವುದಾದರೆ ಮುಂದೆ ಅದೇ ಶ್ರುತಿಯಲ್ಲಿ ಸರ್ವಜ್ಞನಿಂದ ಚತುರ್ಮುಖನು ಹುಟ್ಟಿದನೆಂದು ಹೇಳಲಾಗಿದೆ. ರುದ್ರನು ಚತುರ್ಮುಖನಿಂದ ಹುಟ್ಟಿದ್ದಾನೆ ಹೊರತು, ಚತುರ್ಮುಖನಿಗೆ ಜನಕನಾಗಿಲ್ಲ. ಆದ್ದರಿಂದ ಸರ್ವಜ್ಞಪದವು ರುದ್ರನನ್ನು ಹೇಳುವುದಿಲ್ಲ ಹೊರತಾಗಿ, ಹಿಂದೆ ಪ್ರಕೃತವಾಗಿರುವ ಅಕ್ಷರನಲ್ಲಿ ಸರ್ವಜ್ಞತ್ವವನ್ನು ವಿಶೇಷಣವನ್ನಾಗಿ ಹೇಳುತ್ತಿದೆ.

ಪರಿಪೂರ್ಣಚಂದ್ರಿಕಾ

**अत एव सूत्र विशेषणपदम् ।**

ಆದ್ದರಿಂದಲೇ 'ವಿಶೇಷಣಭೇದವ್ಯಪದೇಶಾಭ್ಯಾಂ ಚ ನೇತರೌ' ಎಂಬ ಸೂತ್ರದಲ್ಲಿ 'ವಿಶೇಷಣ' ಎಂಬ ಪದವನ್ನು ಸೂತ್ರಕಾರರು ಬಳಸಿದ್ದಾರೆ. ಸರ್ವಜ್ಞಪದವು ವಿಶೇಷ್ಯವಾಚಕವಾಗಿಲ್ಲ ಹೊರತು, ವಿಶೇಷಣವಾಚಕವೇ ಆಗಿದೆ ಎಂಬುದು ಇದರ ಆಂತರ್ಯ.

**'सर्ववित्' इत्यनेन पौनरुक्त्यं च टीकायामेव त्रेधा परिहृतम् ।**

ಮತ್ತು ಹಿಂದೆ ಪೂರ್ವಪಕ್ಷ ಮಾಡುವಾಗ ಸರ್ವಜ್ಞಪದವು ವಿಶೇಷಣವಾಚಕವಾದಲ್ಲಿ 'ಸರ್ವವಿತ್' ಎಂಬ ಮುಂದಿನ ಪದದಿಂದ ಪುನರುಕ್ತಿ ಬರುತ್ತದೆಂದು ಆಕ್ಷೇಪಿಸಿದ್ದರು. ಈ ಪುನರುಕ್ತಿ ದೋಷವನ್ನು ಟೀಕೆಯಲ್ಲಿಯೇ ಮೂರು ಪ್ರಕಾರದಲ್ಲಿ ಪರಿಹರಿಸಿದ್ದಾರೆ. 'ಸರ್ವವಿತ್' ಎಂಬ ಪದವು ಸರ್ವಜ್ಞತ್ವವನ್ನು ಹೇಳುತ್ತಿಲ್ಲ; ಸರ್ವೋತ್ಪಾದಕತ್ವಾದಿಗಳನ್ನು ಹೇಳುತ್ತಿದೆ ಇತ್ಯಾದಿಯಾಗಿ.

**यद्यपि सर्वज्ञत्वविशेषणं चित्प्रकृतिचतुर्मुखरुद्राणाम् अक्षरत्वनिषेधेऽपि हेतूकर्तुं शक्यं, विष्णोरन्यस्य मुख्यसार्वज्ञ्याभावात् ।**

ಮತ್ತೇನೆಂದರೆ ಭಾಷ್ಯದಲ್ಲಿ ಜಡಪ್ರಕೃತಿಯನ್ನು ಅಕ್ಷರವಲ್ಲವೆಂದು ನಿಷೇಧಮಾಡುವುದಕ್ಕಾಗಿ ಮಾತ್ರ ಸರ್ವಜ್ಞತ್ವವಿಶೇಷಣವನ್ನು ಹೇಳಿರುತ್ತಾರೆ. ವಾಸ್ತವಿಕವಾಗಿ ಚಿತ್ಪ್ರಕೃತಿ, ಚತುರ್ಮುಖಬ್ರಹ್ಮ, ರುದ್ರ ಮೊದಲಾದವರೂ ಸಹ ಅಕ್ಷರಶಬ್ದವಾಚ್ಯರಲ್ಲ ಎಂದು ನಿಷೇಧ ಮಾಡುವುದಕ್ಕಾಗಿಯೂ ಸರ್ವಜ್ಞತ್ವ ಎಂಬ ವಿಶೇಷಣವನ್ನು ಹೇತುವನ್ನಾಗಿ ಮಾಡಬಹುದು. ಏಕೆಂದರೆ ವಿಷ್ಣುವನ್ನು ಬಿಟ್ಟು ಬೇರೆ ಯಾರಲ್ಲಿಯೂ ಮುಖ್ಯವಾದ ಸರ್ವಜ್ಞತ್ವವು ಇರುವುದಿಲ್ಲವಾದ್ದರಿಂದ.

**तथाऽपि चित्प्रकृत्यादीनामक्षरत्वे विश्वकर्तृत्वेन सर्वज्ञत्वस्यापि शक्यशङ्कत्वात्, श्रुतेरमुख्यसार्वज्ञ्यविषयत्वसम्भवाच्च जडप्रकृतिमात्रनिषेधे भाष्ये हेतूकृतम् ।**

ಆದರೂ ಸಹ ಚಿತ್ಪ್ರಕೃತಿ, ಚತುರ್ಮುಖಬ್ರಹ್ಮ, ರುದ್ರ ಮೊದಲಾದವರೂ ಅಕ್ಷರಶಬ್ದವಾಚ್ಯರಾಗಿದ್ದರೆ ವಿಶ್ವಕರ್ತೃತ್ವ ಎಂಬ ಹೇತುವಿನಿಂದ ಸರ್ವಜ್ಞತ್ವವನ್ನೂ ಸಹ ಪೂರ್ವಪಕ್ಷಕಾರನು ಅವರಲ್ಲಿ ಆಶಂಕಿಸುತ್ತಾ. ಹೀಗಿರುವಾಗ ವಿವಾದಾಸ್ಪದವಾದ ಸರ್ವಜ್ಞತ್ವವನ್ನು ಹೇತುವನ್ನಾಗಿ ಮಾಡಲು ಸಾಧ್ಯವಿಲ್ಲ. ಮತ್ತು ಶ್ರುತಿಯು ಅಮುಖ್ಯವಾದ ಸಾರ್ವಜ್ಞ್ಯವನ್ನು ಹೇಳಬಹುದು. ಇಂತಹ ಅಮುಖ್ಯವಾದ ಸಾರ್ವಜ್ಞ್ಯವು ಚಿತ್ಪ್ರಕೃತ್ಯಾದಿಗಳಲ್ಲಿ ಬರುತ್ತದೆ. ಆದ್ದರಿಂದ ಭಾಷ್ಯಕಾರರು ಜಡಪ್ರಕೃತಿಯನ್ನು ಮಾತ್ರ ನಿಷೇಧಮಾಡುವುದಕ್ಕಾಗಿ ಭಾಷ್ಯದಲ್ಲಿ ಸರ್ವಜ್ಞತ್ವವನ್ನು ಹೇತುವನ್ನಾಗಿ

ಹೇಳಿರುತ್ತಾರೆ. ಜಡಪ್ರಕೃತಿಯಲ್ಲಿ ಜ್ಞಾನಕ್ಕೆ ಪ್ರಸಕ್ತಿಯೇ ಇಲ್ಲದ ಕಾರಣ ಅಮುಖ್ಯವಾದ ಸರ್ವಜ್ಞತ್ವವನ್ನೂ ಸಹ ಹೇಳಲು ಸಾಧ್ಯವಿಲ್ಲ.

**यद्यपि च भेदव्यपदेशः चित्प्रकृतिनिषेधेऽपि हेतूकर्तुं शक्यः, ''अक्षरात्परतः परः'' इति चित्प्रकृतितोऽपि भेदव्यपदेशात् ।**

ವಾಸ್ತವಿಕವಾಗಿ ಭಾಷ್ಯಕಾರರು ಭೇದವ್ಯಪದೇಶವೆಂಬ ಹೇತುವನ್ನು ಚತುರ್ಮುಖ ಹಾಗೂ ರುದ್ರರನ್ನು ನಿಷೇಧಮಾಡುವುದಕ್ಕಾಗಿ ಮಾತ್ರ ಬಳಸಿದ್ದಾರೆ. ವಿಚಾರ ಮಾಡಿದರೆ ಚಿತ್ಪ್ರಕೃತಿಯನ್ನು ನಿಷೇಧಮಾಡುವುದಕ್ಕಾಗಿಯೂ ಬಳಸಬಹುದು. ಏಕೆಂದರೆ 'ಅಕ್ಷರಾತ್ಪರತಃ ಪರಃ' ಎಂಬುದಾಗಿ ಶ್ರುತಿಯು ಅಕ್ಷರನಾಮಕಳಾದ ಲಕ್ಷ್ಮೀದೇವಿಗಿಂತ ಉತ್ತಮತ್ವವನ್ನು ಹೇಳುವ ಮೂಲಕ ಚಿತ್ ಪ್ರಕೃತಿಯಿಂದಲೂ ಭೇದವನ್ನು ಹೇಳುತ್ತಿದೆ.

**तथाऽपि नाक्षरस्याक्षरात्परतः परत्वं, विरोधादिति शङ्कोदयादक्षरभेदोक्तिं विना चित्प्रकृतितो भेदव्यपदेशो न सिद्ध्यतीति चतुर्मुखरुद्रमात्रनिषेधे भाष्ये हेतूकृतः ।**

ಆದರೂ ಸಹ ಅಕ್ಷರನಿಗೆ ಅಕ್ಷರಕ್ಕಿಂತ ಉತ್ತಮತ್ವವು ತಿಳಿಯುವುದಿಲ್ಲ. ತಾನೇ ತನ್ನಿಂದ ಉತ್ತಮನೆಂದು ಹೇಳಿದಂತಾಗಿ ವಿರೋಧ ಬರುತ್ತದೆ. ಇದನ್ನು ಪರಿಹರಿಸಬೇಕೆಂದರೆ ಅಕ್ಷರದಲ್ಲಿಯೇ ಅವಾಂತರ ಪ್ರಭೇದವನ್ನು ಹೇಳಬೇಕು. ಅಂದರೆ ಅಧಮಾಕ್ಷರ, ಮಧ್ಯಮಾಕ್ಷರ, ಉತ್ತಮಾಕ್ಷರವೆಂಬ ಭೇದವನ್ನು ಹೇಳಿ ಮಧ್ಯಮಾಕ್ಷರಳೆನಿಸಿದ ಲಕ್ಷ್ಮೀದೇವಿಗಿಂತಲೂ ಉತ್ತಮಾಕ್ಷರನೆನಿಸಿದ ಭಗವಂತನು ಶ್ರೇಷ್ಠನಾಗಿದ್ದಾನೆಂಬ ಅರ್ಥವನ್ನು 'ಅಕ್ಷರಾತ್ಪರತಃ ಪರಃ' ಎಂಬ ಶ್ರುತಿಗೆ ಹೇಳಬೇಕು. ಹೀಗೆ ಅಕ್ಷರರಲ್ಲಿ ಭೇದವನ್ನು ಹೇಳದೇ ಸುಲಭವಾಗಿ ಚಿತ್ಪ್ರಕೃತಿಗಿಂತ ಭಗವಂತನಲ್ಲಿ ಭೇದವನ್ನು ತಿಳಿಯಲು ಸಾಧ್ಯವಿಲ್ಲ. ಅದಕ್ಕೋಸ್ಕರ ಭಾಷ್ಯದಲ್ಲಿ ಚತುರ್ಮುಖಬ್ರಹ್ಮ, ರುದ್ರ ಇವರಿಬ್ಬರನ್ನು ಮಾತ್ರ ನಿಷೇಧ ಮಾಡುವುದಕ್ಕಾಗಿ ಭೇದವ್ಯಪದೇಶವೆಂಬ ಹೇತುವನ್ನು ಉಪಯೋಗಿಸಿದ್ದಾರೆ.

**यद्यपि चात्र सौत्र इतरशब्दो जडप्रकृतिचतुर्मुखरुद्रपरः, तथाऽपि चतुर्मुख-रुद्रयोश्चेतनत्वेनैकीकृतत्वात् द्विवचनं युक्तम् ।**

ವಾಸ್ತವಿಕವಾಗಿ 'ವಿಶೇಷಣಭೇದವ್ಯಪದೇಶಾಭ್ಯಾಂ ಚ ನೇತರೌ' ಎಂಬಲ್ಲಿರುವ ಇತರ ಶಬ್ದವು ಜಡಪ್ರಕೃತಿ, ಚತುರ್ಮುಖ, ರುದ್ರ ಮೂವರನ್ನು ಹೇಳುತ್ತಿದೆ. ಆದ್ದರಿಂದ 'ಇತರೇ' ಎಂಬುದಾಗಿ ಬಹುವಚನವನ್ನು ಪ್ರಯೋಗಿಸಬೇಕಿತ್ತು.

ಆದರೂ ಚತುರ್ಮುಖ ಹಾಗೂ ರುದ್ರರನ್ನು ಚೇತನತ್ವವೆಂಬ ಧರ್ಮದಿಂದ ಒಂದೇ ಪದಾರ್ಥವನ್ನಾಗಿ ಸ್ವೀಕರಿಸಿ ದ್ವಿವಚನವನ್ನು ಪ್ರಯೋಗಿಸಿದ್ದಾರೆಂದು ತಿಳಿಯಬೇಕು. ಚತುರ್ಮುಖಬ್ರಹ್ಮ,

ರುದ್ರ ಇವರಿಬ್ಬರನ್ನೂ ಒಂದು ವಸ್ತುವನ್ನಾಗಿ ಪರಿಗಣಿಸಿ ಜಡಪ್ರಕೃತಿಯನ್ನು ಮತ್ತೊಂದು ವಸ್ತುವನ್ನಾಗಿ ಪರಿಗಣಿಸಿ 'ಇತರೌ' ಎಂದು ಸೂತ್ರಕಾರರು ಹೇಳಿರುತ್ತಾರೆ.

**''अक्षरत्रयमीरितम्'' इति भाष्योक्तस्मृत्या चाक्षरव्यक्तीनां भेदव्यपदेशात्,**

'ಅಕ್ಷರತ್ರಯಮೀರಿತಮ್' ಎಂದು ಭಾಷ್ಯದಲ್ಲಿ ಉದಾಹರಿಸಿದ ಸ್ಮೃತಿಯ ಆಧಾರದಿಂದ ಅಕ್ಷರ ವ್ಯಕ್ತಿಗಳಲ್ಲಿ ಭೇದವಿದೆಯೆಂದು ತಿಳಿಯುತ್ತದೆ. ಅಂದರೆ ಈಗಾಗಲೇ ಹೇಳಿದಂತೆ, ಅಧಮಾಕ್ಷರ, ಮಧ್ಯಮಾಕ್ಷರ, ಉತ್ತಮಾಕ್ಷರವೆಂಬ ಭೇದವಿದೆಯೆಂದು ತಿಳಿಯಬೇಕು.

**पाण्डवस्यार्जुनस्येव कार्तवीर्यार्जुनादिव ।**
**ब्रह्माक्षरस्य परता स्यादब्रह्माक्षराद्ध्रुवम् ॥**

**तदुक्तं न्यायविवरणे – ''अक्षरात्परतः परस्याप्यक्षरान्तरत्ववचनात्'' इति ।**

ಕಾರ್ತವೀರ್ಯಾರ್ಜುನ, ಪಾಂಡವಾರ್ಜುನ ಎಂಬುದಾಗಿ ಇಬ್ಬರು ಅರ್ಜುನರಿದ್ದಾರೆ. ಕಾರ್ತವೀರ್ಯಾರ್ಜುನನಿಗಿಂತ ಪಾಂಡವಾರ್ಜುನನು ಉತ್ತಮನಾಗಿದ್ದಾನೆ. ಈ ವಿವಕ್ಷೆಯಿಂದ ಅರ್ಜುನನಿಗಿಂತ ಅರ್ಜುನನು ಉತ್ತಮನು ಎಂಬ ವಾಕ್ಯವನ್ನು ಪ್ರಯೋಗಿಸಬಹುದು. ಅದರಂತೆ ಅಕ್ಷರವು ಎರಡು ವಿಧ - ಬ್ರಹ್ಮಾಕ್ಷರ, ಅಬ್ರಹ್ಮಾಕ್ಷರ ಎಂದು. ಅಬ್ರಹ್ಮಾಕ್ಷರಕ್ಕಿಂತ ಬ್ರಹ್ಮಾಕ್ಷರವು ಉತ್ತಮವಾದ್ದರಿಂದ ಅಕ್ಷರಕ್ಕಿಂತ ಅಕ್ಷರವು ಉತ್ತಮವಾಗಿದೆ ಎಂಬ ವಾಕ್ಯವನ್ನು ಪ್ರಯೋಗಿಸಬಹುದು.

ಇದನ್ನೇ ನ್ಯಾಯವಿವರಣೆಯಲ್ಲಿ "ಅಕ್ಷರಾತ್ಪರತಃ ಪರಸ್ಯಾಪ್ಯಕ್ಷರಾಂತರತ್ವವಚನಾತ್" 'ಅಕ್ಷರಕ್ಕಿಂತ ಅಕ್ಷರವು ಉತ್ತಮವಾಗಿದೆಯೆಂದು ಹೇಳಬಹುದು' ಎಂದಿದ್ದಾರೆ.

**'प्रकृताप्रकृतत्यागस्वीकारौ बाधके सति ।**
**दोषाय नैवैतस्यैव रेवतीष्विति वाक्यवत् ॥**

ಅಕ್ಷರಶಬ್ದದಿಂದ ವಿಷ್ಣುವನ್ನು ಸ್ವೀಕರಿಸಿದರೆ ಪ್ರಕೃತಹಾನ ಅಪ್ರಕೃತಸ್ವೀಕಾರಗಳೆಂಬ ದೋಷಗಳಿಗೆ ಅವಕಾಶವಿದೆಯಲ್ಲವೇ? ಎಂದು ಪ್ರಶ್ನಿಸಬಾರದು. ಬಾಧಕವಿದ್ದಾಗ ಪ್ರಕೃತಹಾನ ಅಪ್ರಕೃತ ಸ್ವೀಕಾರಮಾಡುವುದು ತಪ್ಪಾಗುವುದಿಲ್ಲ. ಪೂರ್ವಮೀಮಾಂಸೆಯಲ್ಲಿ ಬರುವ 'ರೇವತೀಷು' ಎಂಬ ವಾಕ್ಯವೇ ಇದಕ್ಕೆ ಉದಾಹರಣೆ.

**यथा ''एतस्यैव रेवतीषु वारवन्तीयमग्निष्टोमसाम कृत्वा पशुकामो ह्येतेन यजेत'' इत्यत्र यजेः प्रकृतवाचिन्येतच्छब्दे सत्यपि प्रकृताग्निष्टुदाख्ययागत्यागः अप्रकृतयागान्तरस्वीकारश्च दोषाय नैव भवतः, प्रकृतपरत्वे वाक्यभेदात्,**

ಅದೃಶ್ಯತ್ವಾಧಿಕರಣ (೧-೨-೬)

अपरोक्षं योगजन्यम् । तयोर्ब्रह्मप्राप्त्युपायभूतमपरोक्षं ज्ञानम् । तच्च भवितरूपापन्नम् । 'यमेवैष वृणुते तेन लभ्यः' इत्यत्रैव विशेष्यमाणत्वात् । तदुपायश्चागमजन्यं विवेकादि-साधनसप्तकानुगृहीतं ज्ञानम् । 'तमेतं वेदानुवचनेन ब्राह्मणा विविदिषन्ति यज्ञेन दानेन तपसाऽनाशकेन' इति श्रुतेः । आह च भगवान् पराशरः 'तत्प्राप्तिहेतुर्ज्ञानं च कर्म चोक्तं महामुने । आगमोत्थं विवेकाच्च द्विधा ज्ञानं तथोच्यते ।।' इति ।।

'तत्रापरा ऋग्वेदो यजुर्वेदः' इत्यादिना 'धर्मशास्त्राणि' इत्यन्तेन आगमोत्थं ब्रह्मसाक्षात्कारहेतुभूतं परोक्षज्ञानमुक्तम् । साङ्गस्य सेतिहासपुराणस्य सधर्मशास्त्रस्य समीमांसस्य वेदस्य ब्रह्मज्ञानोत्पत्तिहेतुत्वात् । 'अथ परा यया तदक्षरमधिगम्यते' इत्युपासनाख्यं ब्रह्मसाक्षात्कारलक्षणं भक्तिरूपापन्नं ज्ञानम् । 'यत् तदद्रेश्यमग्राह्यम्' इत्यादिना परोक्षापरोक्षरूपज्ञानद्वयविषयस्य परस्य ब्रह्मणः स्वरूपमुच्यते । 'यथोर्णनाभिः सृजते गृह्णते च' इत्यादिना यथोक्तस्वरूपात् परस्माद् ब्रह्मणोऽक्षरात् कृत्स्नस्य चेतनाचेत नात्मकप्रपञ्चस्योत्पत्तिरुक्ता । विश्वमिति वचनान्नाचेतनमात्रस्य । 'तपसा चीयते ब्रह्म ततोऽन्नमभिजायते । अन्नात्प्राणो मनस्सत्यं लोकाः कर्मसु चामृतम्' इति ब्रह्मणो विश्वोत्पत्तिप्रकार उच्यते । तपसा ज्ञानेन । 'यस्य ज्ञानमयं तपः' इति वक्ष्यमाणत्वात् । चीयते उपचीयते । 'बहु स्याम्' इति सङ्कल्परूपेण ज्ञानेन ब्रह्म सृष्ट्युन्मुखं भवतीत्यर्थः । 'ततोऽन्नमभिजायते', अद्यत इत्यन्नम् । विश्वस्य भोक्तृवर्गस्य भोग्यभूतं भूतसूक्ष्ममव्याकृतं परस्माद् ब्रह्मणो जायत इत्यर्थः । प्राणमनःप्रभृति च स्वर्गापवर्गरूप-फलसाधनभूतकर्मपर्यन्तं सर्वं विकारजातं तस्मादेव जायते ।।

'यः सर्वज्ञः सर्ववित्' इत्यादिना सृष्ट्युपकरणभूतं सार्वज्ञ्यसत्यसङ्कल्पत्वादिकमुक्तम् । सर्वज्ञात् सत्यसङ्कल्पात् परस्माद् ब्रह्मणोऽक्षरादेतत् कार्याकारं ब्रह्म नामरूपविभक्तं भोक्तृभोग्यरूपं च जायते । 'तदेतत् सत्यम्' इति परस्य ब्रह्मणो निरुपाधिक-सत्यत्वमुच्यते । 'मन्त्रेषु कर्माणि कवयो यान्यपश्यंस्तानि त्रेतायां बहुधा सन्ततानि । तान्याचरत नियतं सत्यकामाः' इति सार्वज्ञ्यसत्यसङ्कल्पत्वादिकल्याणगुणाकरमक्षरं पुरुषं स्वतस्सत्यं कामयमानास्तत्प्राप्तये फलान्तरेभ्यो विरक्ता ऋग्यजुस्सामाथर्वसुकविभिर्दृष्टानि वर्णाश्रमोचितानि त्रक्षेताग्निषु बहुधा सन्ततानि कर्माण्याचरतेति 'एष वः पन्थाः' इत्यारभ्य 'एष वः पुण्यस्सुकृतो ब्रह्मलोकः' इत्यन्तेन कर्मानुष्ठानप्रकारं, श्रुतिस्मृतिचोदितेषु कर्मस्वेकतरकर्मवैधुर्येऽपीतरेषामनुष्ठितानामपि निष्फलत्वम्, अयथानुष्ठितस्य चाननुष्ठित-समत्वम् अभिधाय 'प्लवा ह्येते अदृढा यज्ञरूपा अष्टादशोक्तमवरं येषु कर्म । एतच्छ्रेयो येऽभिनन्दन्ति मूढा जरामृत्यू ते पुनरेवापि यन्ति' इत्यादिना फलाभिसन्धिपूर्वकत्वेन ज्ञानविधुरतया चावरं कर्माचरतां पुनरावृत्तिमुक्त्वा 'तपःश्रद्धे ये ह्युपवसन्ति' इत्यादिना

ಈ ಅಧಿಕರಣದಲ್ಲಿಯೂ ಸಹ ಅದ್ವೈತಿಗಳಿಗೆ ಅನುಕೂಲವಾದ ವಿಚಾರ ಇರುವುದಿಲ್ಲ. ಹೇಗೆಂದರೆ 'ಅದೃಶ್ಯತ್ವಾದಿಗುಣಕಃ' ಎಂಬ ಸೂತ್ರವು ಗುಣವನ್ನು ಹೇಳುತ್ತಿದೆ. 'ವಿಶೇಷಣಭೇದವ್ಯಪದೇಶಾಭ್ಯಾಂ' ಎಂಬ ಸೂತ್ರವು ಜೀವಾದಿಗಳಿಗಿಂತ ಬ್ರಹ್ಮನಿಗೆ ಭೇದವನ್ನು ಹೇಳುತ್ತಿದೆ. ಗುಣವಚನವು ನಿರ್ಗುಣತ್ವಕ್ಕೆ ಪ್ರತಿಕೂಲವಾಗಿದೆ. ಭೇದವಚನವು ಅದ್ವೈತಕ್ಕೆ ಪ್ರತಿಕೂಲವಾಗಿದೆಯೆಂಬ ವಿಚಾರವನ್ನು ಸ್ಪಷ್ಟವಾಗಿ ತಿಳಿಯಬೇಕು.

**प्रकाशः —**

**अन्ये त्विति ।। अदृश्यत्वादिगुणको भूतयोनिः किं प्रधानमुतजीवोऽथ परमात्मेति सन्देहे, नूपुरादेर्हैमपरिणामस्य हेमसरूपत्वस्य दर्शनात्, रज्जुविवर्तस्य**

---

पुनरपि फलाभिसन्धिरहितं ज्ञानिनाऽनुष्ठितं कर्म ब्रह्मप्राप्तये भवतीति प्रशस्य 'परीक्ष्य लोकान्' इत्यादिना केवलकर्मफलेषु विरक्तस्य यथोदितकर्मानुगृहीतं ब्रह्मप्राप्त्युपायभूतं ज्ञानं जिज्ञासमानस्य च आचार्योपसदनं विधाय 'तदेतत् सत्यं यथा सुदीप्तात्' इत्यादिना 'सोऽविद्याग्रन्थिं विकिरतीह सोम्य' इत्यन्तेन पूर्वोक्तस्याक्षरस्य भूतयोनेः परस्य ब्रह्मणः परमपुरुषस्यानुक्तैस्स्वरूपगुणैस्सह सर्वभूतान्तरात्मतया विश्वशरीरत्वेन विश्वरूपत्वम् । तस्माद् विश्वसृष्टिं च विस्पष्टमभिधाय 'आविः सन्निहितम्' इत्यादिना तस्यैवाक्षरस्याव्याकृतात् परतोऽपि पुरुषात् परभूतस्य परस्य ब्रह्मणः परमव्योम्नि प्रतिष्ठित स्यानवधिकातिशयानन्दस्वरूपस्य हृदयगुहायामुपासनप्रकारम् उपासनस्य च परभक्तिरूपत्व मुपासीनस्याविद्याविमोकपूर्वकं ब्रह्मसमं ब्रह्मानुभवफलं चोपदिश्योपसंहृतम् ।

अत एवं विशेषणाद् भेदव्यपदेशाच्च नास्मिन् प्रकरणे प्रधानपुरुषौ प्रतिपाद्येते ।

भेदव्यपदेशोऽपि हि ताभ्यां परस्य ब्रह्मणोऽत्र विद्यते । 'दिव्यो ह्यमूर्तः पुरुषः स बाह्याभ्यन्तरो ह्यजः । अप्राणो ह्यमनाः शुभ्रो ह्यक्षरात् परतः परः' इत्यादिभिः अक्षरादव्याकृतात्परो यः समष्टिपुरुषः, तस्मादपि परभूतोऽदृश्यत्वादिगुणकोऽक्षर-शब्दाभिहितः परमात्मेत्यर्थः । अश्नुत इति वा, न क्षरतीति वाऽक्षरम् । तदव्याकृतेऽपि स्वविकारव्याप्त्या वा, महदादिवन्नामान्तराभिलापयोग्यक्षरणाभावाद्वाऽक्षरत्वं कथञ्चिदुपपद्यते ।। २३ ।।

**ॐ रूपोपन्यासाच्च ॐ ।। २४ ।।**

'अग्निर्मूर्धा चक्षुषी चन्द्रसूर्यौ दिशः श्रोत्रे वाग्विवृताश्च वेदाः । वायुः प्राणो हृदयं विश्वमस्य पद्भ्यां पृथिवी ह्येष सर्वभूतान्तरात्मा' इतीदृशं रूपं सर्वभूतान्तरात्मनः परमात्मन एव सम्भवति, अतश्च परमात्मा ।। २४ ।।

भुजङ्गादे रज्जुसारूप्यदर्शनात्, जगतो जडस्य चेतनब्रह्मसारूप्यायोगेन ब्रह्मपरिणाम-विवर्तत्वायोगात् ''अक्षरात्सम्भवतीह विश्वम्'' इत्यचेतनं प्रधानमेव जगदुपादानतयोच्यते ।

ವಿವರಣೆ - ಅದ್ವೈತಿಗಳ ಅಧಿಕರಣಶರೀರ ಹೀಗಿದೆ - ಅದೃಶ್ಯತ್ವಾದಿಗುಣಗಳುಳ್ಳ ಪದಾರ್ಥವು ಜಗತ್ತಿಗೆ ಕಾರಣವಾಗಿದೆಯೆಂದು ಶ್ರುತಿ ಹೇಳುತ್ತಿದೆ. ಈ ಪದಾರ್ಥವು ಪ್ರಧಾನವೋ? ಜೀವನೋ? ಅಥವಾ ಪರಮಾತ್ಮನೋ? ಎಂದು ಸಂಶಯ.

ಗೆಜ್ಜೆ, ಬಳೆ ಮೊದಲಾದವು ಬಂಗಾರದ ಪರಿಣಾಮವಾಗಿದೆ. ಆದ್ದರಿಂದ ಬಂಗಾರದಲ್ಲಿರುವ ಸಾದೃಶ್ಯವು ಗೆಜ್ಜೆ, ಬಳೆ ಮೊದಲಾದವುಗಳಲ್ಲಿ ಕಾಣಿಸುತ್ತಿದೆ. ಇದರಂತೆ ಹಗ್ಗದ ವಿವರ್ತವೆನಿಸಿದ ಸರ್ಪ ಮೊದಲಾದವುಗಳಲ್ಲಿ ಹಗ್ಗದಲ್ಲಿರುವ ಸಾರೂಪ್ಯವು ಕಾಣಿಸುತ್ತಿದೆ. ಆದರೆ ಜಗತ್ತು ಬ್ರಹ್ಮನ ಪರಿಣಾಮವೆಂದು ಹೇಳಬೇಕಾದರೆ ಬ್ರಹ್ಮನ ಸಾರೂಪ್ಯವು ಜಗತ್ತಿನಲ್ಲಿ ಇರಬೇಕು. ಆದರೆ ಜಡವೆನಿಸಿದ ಜಗತ್ತು ಪರಿಣಾಮಿತ್ವೇನ ಅಥವಾ ಪರಿವರ್ತತ್ವೇನ ಚೇತನಬ್ರಹ್ಮನ ಸಾರೂಪ್ಯವನ್ನು ಹೊಂದಿರುವುದಿಲ್ಲ. ಆದ್ದರಿಂದ ಬ್ರಹ್ಮನ ಪರಿಣಾಮವೆಂದಾಗಲೀ ವಿವರ್ತವೆಂದಾಗಲೀ ಹೇಳಲು ಸಾಧ್ಯವಿಲ್ಲ. ಆದ್ದರಿಂದ 'ಅಕ್ಷರಾತ್ಸಂಭವತೀಹ ವಿಶ್ವಮ್' ಎಂಬ ಶ್ರುತಿಯು ಅಚೇತನವಾಗಿರುವ ಪ್ರಕೃತಿಯನ್ನೇ ಜಗತ್ತಿಗೆ ಉಪಾದಾನಕಾರಣವೆಂದು ಹೇಳುತ್ತಿದೆ.

**प्रकाशः** – 'भूतयोनिः' इति योनिशब्दो यदि निमित्तमात्रवाची, तदा जीव एवादृष्टद्वारा विश्वहेतुतयोच्यते ।

'ಭೂತಯೋನಿಃ' ಎಂಬಲ್ಲಿರುವ ಯೋನಿಶಬ್ದವು ನಿಮಿತ್ತಕಾರಣವನ್ನು ಮಾತ್ರ ಹೇಳುವುದಾದರೆ ಅದೃಷ್ಟದ ಮೂಲಕ ಜೀವನೇ ಸಕಲಜಗತ್ತಿಗೆ ಕಾರಣನಾಗುತ್ತಾನೆ.

**प्रकाशः** – उक्तञ्च –

परिणामो विवर्तो वा सरूपस्योपलक्ष्यते ।
चिदात्मना तु सारूप्यं जडानां नोपपद्यते ।।
जडं प्रधानमेवातो जगद्योनिः प्रतीयताम् ।
योनिशब्दो निमित्तं चेत्कुतो जीवनिराक्रिया ।।

इति । एवं प्राप्ते,

ಅದ್ವೈತಿಗಳು ಇದನ್ನು ಹೀಗೆ ಹೇಳುತ್ತಾರೆ -

ಪರಿಣಾಮೋ ವಿವರ್ತೋ ವಾ ಸರೂಪಸ್ಯೋಪಲಕ್ಷ್ಯತೇ।
ಚಿದಾತ್ಮನಾ ತು ಸಾರೂಪ್ಯಂ ಜಡಾನಾಂ ನೋಪಪದ್ಯತೇ ॥
ಅದೃಶ್ಯತ್ವಾಧಿಕರಣ (೧-೨-೬)

ಜಡಂ ಪ್ರಧಾನಮೇವಾತೋ ಜಗದ್ಯೋನಿಃ ಪ್ರತೀಯತಾಮ್ ।
ಯೋನಿಶಬ್ದೋ ನಿಮಿತ್ತಂ ಚೇತ್ ಕುತೋ ಜೀವನಿರಾಕ್ರಿಯಾ ॥

ಸಾರೂಪ್ಯವನ್ನು ಹೇಳಬೇಕಾದರೆ ಆ ಎರಡು ವಸ್ತುಗಳಲ್ಲಿ ಪರಿಣಾಮ ಅಥವಾ ವಿವರ್ತತ್ವ ಇರಬೇಕು. ಅಂದರೆ ಜಗತ್ತು ಬ್ರಹ್ಮನ ಪರಿಣಾಮವೆಂದಾಗಲೀ, ವಿವರ್ತವಾಗಿದೆಯೆಂದಾಗಲೀ ಹೇಳಬೇಕೆಂದರೆ ಬ್ರಹ್ಮನ ಸಾರೂಪ್ಯವು ಜಗತ್ತಿನಲ್ಲಿರಬೇಕಾಗುತ್ತದೆ. ಆದರೆ ಜಡಭೂತವಾದ ಜಗತ್ತಿನಲ್ಲಿ ಚೇತನನಾದ ಬ್ರಹ್ಮನ ಸಾರೂಪ್ಯವನ್ನು ಹೇಳಲಾಗದು. ಆದ್ದರಿಂದ ಜಡವಾಗಿರುವ ಪ್ರಕೃತಿಯೇ ಜಗತ್ತಿಗೆ ಕಾರಣವಾಗಿದೆ. ಒಂದು ವೇಳೆ ಯೋನಿಶಬ್ದಕ್ಕೆ ನಿಮಿತ್ತಕಾರಣವೆಂಬರ್ಥವನ್ನು ವಿವಕ್ಷಿಸಿದರೆ ಪ್ರಕೃತಿಯು ನಿಮಿತ್ತಕಾರಣವಾಗುವುದಿಲ್ಲ. ಆದರೆ ಅದೃಷ್ಟದ ಮೂಲಕ ಜೀವನು ಜಗತ್ತಿಗೆ ಕಾರಣನಾಗಿದ್ದಾನೆಂದು ಹೇಳಬಹುದು. ಇಷ್ಟು ಪೂರ್ವಪಕ್ಷ.

**प्रकाशः** – अक्षरं भूतयोनिं प्रक्रम्य वाक्यशेषे ''यः सर्वज्ञस्सर्ववित्'' इत्यादिना सर्वज्ञस्य विश्वहेतुत्वावगमात् न जडं प्रधानमदृश्यत्वादिगुणकमक्षरम् ।

ಅಕ್ಷರವು ಸಕಲಭೂತಗಳಿಗೆ ಕಾರಣವಾಗಿದೆಯೆಂದು ಪ್ರಾರಂಭದಲ್ಲಿ ಪ್ರಸ್ತಾಪ ಮಾಡಿ ಮುಂದಿನ ವಾಕ್ಯದಲ್ಲಿ 'ಯಃ ಸರ್ವಜ್ಞಸ್ಸರ್ವವಿತ್' ಎಂಬುದಾಗಿ ವಿಶ್ವಕ್ಕೆ ಕಾರಣವಾಗಿರುವ ವಸ್ತು ಸರ್ವಜ್ಞವಾಗಿದೆಯೆಂದು ಹೇಳಲಾಗಿದೆ. ಅಂದರೆ ಯಾರೂ ಸರ್ವಜ್ಞನೋ ಅವನೇ ವಿಶ್ವಕ್ಕೆ ಕಾರಣನಾಗಿದ್ದಾನೆಂದು ತಿಳಿಯುತ್ತದೆ. ಆದ್ದರಿಂದ ಜಡವಾಗಿರುವ ಪ್ರಕೃತಿಯು ಸರ್ವಜ್ಞವಾಗದ ಕಾರಣ ಅದೃಶ್ಯತ್ವಾದಿಗುಣಗಳುಳ್ಳದ್ದು ಆಗುವುದಿಲ್ಲ. ಆದ್ದರಿಂದ ಅಕ್ಷರವೂ ಸಹ ಆಗುವುದಿಲ್ಲ.

**प्रकाशः** – नच ''अक्षरात्परतः परः'' इत्ययुक्तं, तत्राक्षरशब्देन मायाशक्त्यपरपर्यायस्याव्याकृतस्य अश्नुते स्वकार्यमिति व्युत्पत्त्या अक्षरपदेनाभिधानात्, ब्रह्मैव ''अक्षरात्सम्भवतीह विश्वम्'' इत्यत्रोच्यते ।

ಹಾಗಾದರೆ 'ಅಕ್ಷರಾತ್ಪರತಃ ಪರಃ' ಎಂದು ಹೇಳಿದ್ದು ಹೇಗೆ ಕೂಡುತ್ತದೆ ಎಂದರೆ ಅಕ್ಷರಶಬ್ದಕ್ಕೆ ಅವ್ಯಾಕೃತ ಎಂದರ್ಥ. ಮಾಯಾಶಕ್ತಿಯನ್ನು 'ಅವ್ಯಾಕೃತ' ಎಂದು ಕರೆಯುತ್ತಾರೆ. ಅಂತಹ ಅವ್ಯಾಕೃತವು 'ಅಶ್ನುತೇ ಸ್ವಕಾರ್ಯಮ್' ಎಂಬ ವ್ಯುತ್ಪತ್ತಿಯಿಂದ ಅಕ್ಷರವೆನಿಸಿದೆ. ಆದ್ದರಿಂದ ಬ್ರಹ್ಮನೇ 'ಅಕ್ಷರಾತ್‌ಸಂಭವತೀಹ ವಿಶ್ವಮ್' ಎಂಬ ವಾಕ್ಯದಿಂದ ಪ್ರತಿಪಾದ್ಯನಾಗುತ್ತಾನೆ.

**प्रकाशः** – तदुक्तं भामत्यां –

अक्षरं सर्वविद्विश्वयोनिर्नाचेतनं भवेत् ।
'अक्षरात्परतः' इति श्रुतिस्त्वव्याकृते मता ।
अश्नुते यत्स्वकार्याणि ततोऽव्याकृतमक्षरम् ॥

इति ।

ಪರಿಪೂರ್ಣಚಂದ್ರಿಕಾ

ಇದನ್ನೇ ಭಾಮತಿಯಲ್ಲಿ ಹೀಗೆ ಹೇಳಿದೆ -

ಅಕ್ಷರಂ ಸರ್ವವಿದ್ವಿಷ್ಟಯೋರ್ನಿನಾಚೇತನಂ ಭವೇತ್ ।
'ಅಕ್ಷರಾತ್ಪರತಃ' ಇತಿ ಶ್ರುತಿಸ್ತ್ವವ್ಯಾಕೃತೇ ಮತಾ ।
ಅಶ್ನುತೇ ಯತ್ ಸ್ವಕಾರ್ಯಾಣಿ ತತೋಽವ್ಯಾಕೃತಮಕ್ಷರಮ್ ॥

ಅಕ್ಷರವು ಸರ್ವಜ್ಞವೆಂದು ಹೇಳಿರುವುದರಿಂದ ಜಗತ್ತಿಗೆ ಕಾರಣವಾದ ಅಕ್ಷರವೆಂದರೆ ಅಚೇತನವಾಗಿರುವ ಪ್ರಧಾನವಾಗಿರುವುದಿಲ್ಲ. ಆದ್ದರಿಂದ 'ಅಕ್ಷರಾತ್ಪರತಃ ಪರಃ' ಎಂಬ ಶ್ರುತಿಯು ಅವ್ಯಾಕೃತವನ್ನೇ ಹೇಳುತ್ತದೆ. 'ಯತ್ ಸ್ವ ಕಾರ್ಯಾಣಿ ಅಶ್ನುತೇ' ಎಂಬ ವ್ಯುತ್ಪತ್ತಿಯಂತೆ ಅಕ್ಷರವೇ 'ಅವ್ಯಾಕೃತ' ಎನಿಸುತ್ತದೆ ಎಂದು.

**प्रकाशः** – यत्तु सारूप्याभावान्न चिदात्मनः परिणामः प्रपञ्च इति, सत्यम्, विश्वं न ब्रह्मविकारः, येन सारूप्यापेक्षा, विवर्तस्तु स्यात्, विसदृशेऽपि शङ्खेपीतिमारोपदर्शनात् सारूप्यनियमाभावादिति सिद्धान्त इत्याहुरित्यर्थः ।

ಇನ್ನು ಸಾರೂಪ್ಯವಿಲ್ಲದ ಕಾರಣ ಜಗತ್ತು ಬ್ರಹ್ಮನ ಪರಿಣಾಮವಾಗುವುದಿಲ್ಲವೆಂದು ಹೇಳಿದರು. ಹೌದು, ಜಗತ್ತು ಬ್ರಹ್ಮನ ವಿಕಾರವಲ್ಲ. ಹಾಗಾಗಿದ್ದಲ್ಲಿ ಸಾರೂಪ್ಯದ ಅಪೇಕ್ಷೆಯು ಇರುತ್ತಿತ್ತು. ಹೊರತಾಗಿ, ವಿವರ್ತಭೂತವಾಗಿದೆ. ಯಾವುದು ವಿವರ್ತಕಾರಣವೋ ಅದು ವಿಸದೃಶವಾಗಿದ್ದರೂ ಸಹ ಕಾರಣವಾಗಬಹುದು. ಪೀತಿಮಾ ಸಾದೃಶ್ಯವಿಲ್ಲದಿದ್ದರೂ ಸಹ ಶಂಖದಲ್ಲಿ ಪೀತಿಮಾರೂಪವನ್ನು ಆರೋಪ ಮಾಡುವುದು ಕಂಡಿದೆ. ಆದ್ದರಿಂದ ಆರೋಪ ಮಾಡುವಾಗ ಸಾರೂಪ್ಯದ ನಿಯಮವಿರುವುದಿಲ್ಲ. ಇಷ್ಟು ಅದ್ವೈತಿಗಳ ಸಿದ್ಧಾಂತ.

**प्रकाशः** – **अनादिवासनेति** । हेतुमति विभ्रमे सादृश्याभावादनुयोगो युज्यते, अनाद्यविद्यातद्वासनाप्रवाहपतितस्तु नानुयोगमर्हन्तीत्यर्थः ।

'ಅನಾದಿವಾಸನಾ' ಎಂಬ ಗ್ರಂಥದ ಅಭಿಪ್ರಾಯ ಹೀಗಿದೆ - ಹೇತುವಿನಿಂದ ಎಂದರೆ ಸಕಾರಣವಾದ ಭ್ರಮೆಯು ಎಲ್ಲಿ ಬರುತ್ತದೋ? ಅಂತಹ ಸ್ಥಳದಲ್ಲಿ ಸಾದೃಶ್ಯವಿಲ್ಲವಲ್ಲ ? ಎಂದು ಪ್ರಶ್ನೆಯನ್ನು ಮಾಡಬಹುದು. ಆದರೆ ಅನಾದಿಯಾದ ಅಜ್ಞಾನ ಹಾಗೂ ಅದರ ಸಂಸ್ಕಾರದ ಪ್ರವಾಹದಿಂದ ಮುಳುಗಿಹೋದ ಪ್ರಪಂಚದ ಆರೋಪದಲ್ಲಿ ಈ ಪ್ರಶ್ನೆಯೇ ಕೂಡುವುದಿಲ್ಲ. ಅಂದರೆ ಶುಕ್ತಿಯಲ್ಲಿ ರಜತವು ಆರೋಪಿತವಾಗಿದೆಯೆಂದು ಹೇಳಿದಾಗ ಶುಕ್ತಿಯಲ್ಲಿ ರಜತಾರೋಪಭ್ರಮೆಯು ಏಕೆ ಬರುತ್ತದೆಂದು ಪ್ರಶ್ನಿಸಬಹುದು ಸಾದೃಶ್ಯವಿರುವುದರಿಂದ. ಆದರೆ ಅಜ್ಞಾನ ಹಾಗೂ ಅಜ್ಞಾನವಾಸನೆಯಿಂದ ಜಗತ್ತಿನ ಭ್ರಮೆ ಬರುತ್ತಿದೆಯೆಂದು ಹೇಳಿದಾಗ ಕಾರಣವಿಲ್ಲದೆ ಭ್ರಮೆ ಬರುತ್ತಿದೆ ಎಂದು ಹೇಳಿದಂತಾಯಿತು. ಇಂತಹ ಸ್ಥಳದಲ್ಲಿ ಪ್ರಶ್ನೆ ಮಾಡುವುದು ತಪ್ಪಾಗುತ್ತದೆ.

**प्रकाशः** – **ज्ञेयं ब्रह्मैव**, नतु प्रधानं जीवात्मा वा, उपास्यत्वेनेत्यर्थः । **पादेति** । तृतीये पाद एव निवेशापत्तेरिति भावः ।

ಅದೃಶ್ಯತ್ವಾಧಿಕರಣ (೧-೨-೬)

'ಜ್ಞೇಯಂ ಬ್ರಹ್ಮೈವ' ಎಂದು ಗ್ರಂಥದಲ್ಲಿದೆ. ಜ್ಞೇಯನಾದವನು ಬ್ರಹ್ಮನೇ ಹೊರತು, ಪ್ರಧಾನವಾಗಲೀ, ಜೀವಾತ್ಮನಾಗಲೀ, ಉಪಾಸ್ಯತ್ವೇನ ಜ್ಞೇಯರಾಗುವುದಿಲ್ಲ. ಪಾದಸಂಗತಿಯಿಲ್ಲವೆಂದು ಗ್ರಂಥದಲ್ಲಿ ಹೇಳಿದ್ದಾರೆ. ಅಂದರೆ ಈ ಅಧಿಕರಣವನ್ನು ಮೂರನೇ ಪಾದದಲ್ಲಿಯೇ ಹಾಕಬೇಕು ಹೊರತು, ಇಲ್ಲಿ ಅಯುಕ್ತವಾಗುತ್ತದೆ ಎಂದರ್ಥ.

**प्रकाशः** – **आरम्भणेति** । ''तदनन्यत्वमारम्भणशब्दादिभ्यः'' इत्यत्र ''कारणाद्ब्रह्मणः परमार्थतोऽनन्यत्वं व्यतिरेकेणाभावः कार्यस्यावगम्यते'' इत्यादिना त्वद्भाष्यादौ विवर्तत्वस्य वर्णितत्वादिति भावः । आदिपदेन प्रकृत्यधिकरणादि ग्राह्यम् ।

'ಆರಂಭಣಾಧಿಕರಣಾದಿಷು' ಎಂದು ಗ್ರಂಥದಲ್ಲಿದೆ. ಎಂದರೆ 'ತದನನ್ಯತ್ವಮಾರಂಭಣಶಬ್ದಾದಿಭ್ಯಃ' ಎಂಬ ಸೂತ್ರದಲ್ಲಿ ಕಾರಣಭೂತನಾದ ಬ್ರಹ್ಮನ ದೆಸೆಯಿಂದ ಪಾರಮಾರ್ಥಿಕವಾಗಿ ಭಿನ್ನವಾದ ಕಾರ್ಯಭೂತವಾದ ಜಗತ್ತು ಇರುವುದಿಲ್ಲ ಎಂದು ಹೇಳುತ್ತಾರೆ. ಹೀಗೆ ಶಾಂಕರಭಾಷ್ಯದಲ್ಲಿ ವಿವರ್ತತ್ವವನ್ನು ವರ್ಣಿಸಲಾಗಿದೆಯಾದ್ದರಿಂದ ಎಂದರ್ಥ. ಆದಿಪದದಿಂದ ಪ್ರಕೃತ್ಯಧಿಕರಣ ಮುಂತಾದ್ದನ್ನು ವಿವಕ್ಷಿಸಬೇಕು.

**प्रकाशः** – उपलक्षणमेतत्, ''न विलक्षणत्वात्'' इत्यधिकरणे जगतोऽचेतनत्वादिना ब्रह्मविलक्षणत्वेन न ब्रह्मोपादानकत्वमिति प्राप्ते, वैलक्षण्येऽपि गोमयवृश्चिकादेः कार्यकारणभावोपलम्भात्, तदुपादानकत्वं युक्तमिति सिद्धान्तितत्वेन परिणामत्यागेन विवर्तत्वाङ्गीकारायोगात्,

ಉಪಲಕ್ಷಣಯಾ ಇದನ್ನು ತಿಳಿಯಬೇಕು. ಅದ್ವೈತಿಗಳು 'ನ ವಿಲಕ್ಷಣತ್ವಾಧಿಕರಣ'ದಲ್ಲಿ ಹೀಗೆ ಹೇಳಿದ್ದಾರೆ - ಅಚೇತನವಾದ ಕಾರಣ ಜಗತ್ತು ಬ್ರಹ್ಮನಿಗಿಂತ ವಿಲಕ್ಷಣವಾಗಿದೆ. ಇಂತಹ ಜಡವಾದ ಜಗತ್ತಿಗೆ ಚೇತನನಾದ ಬ್ರಹ್ಮನು ಉಪಾದಾನಕಾರಣನಾಗಲು ಸಾಧ್ಯವಿಲ್ಲವೆಂದು ಪೂರ್ವಪಕ್ಷ. ವಿಲಕ್ಷಣವಾಗಿದ್ದರೂ ಸಹ ಗೋಮಯದಿಂದ ಚೇಳು ಹುಟ್ಟುವುದು ಕಾಣಿಸುತ್ತಿದೆ. ಅಂದರೆ ಚೇತನವಾದ ಚೇಳಿಗೆ ಜಡವಾದ ಗೋಮಯವು ಕಾರಣವಾಗಿರುವುದು ಕಾಣಿಸುತ್ತಿದೆ. ಅದರಂತೆ ಜಡವಾದ ಜಗತ್ತಿಗೆ ಬ್ರಹ್ಮನು ಉಪಾದಾನಕಾರಣನಾಗಬಹುದೆಂದು ಸಿದ್ಧಾಂತ. ಹೀಗೆ ನ ವಿಲಕ್ಷಣತ್ವಾಧಿಕರಣದಲ್ಲಿ ಅದ್ವೈತಿಗಳು ಬ್ರಹ್ಮನಿಗೆ ಉಪಾದಾನಕಾರಣತ್ವವನ್ನು ಸಮರ್ಥಿಸಿರುತ್ತಾರೆ. ಆದ್ದರಿಂದ ಅದಕ್ಕೆ ವಿರುದ್ಧವಾಗಿ ಈ ಅಧಿಕರಣದಲ್ಲಿ ವಿವರ್ತಕಾರಣತ್ವವನ್ನು ಒಪ್ಪುವುದು ತಪ್ಪಾಗುತ್ತದೆ.

**प्रकाशः** – एतच्छङ्कायाः तत्र सूत्र एव त्वन्मते निरासेनेहापि तथा पूर्वपक्षकरणायोगाच्चेत्यपि ध्येयम् । श्रुत्यनानुगुण्यं चाह – **विवर्तेति** ।

ಮತ್ತು ಈ ಅಧಿಕರಣದಲ್ಲಿ ಬ್ರಹ್ಮನಿಗೆ ಉಪಾದಾನಕಾರಣತ್ವವೆಂಬ ಆಶಂಕೆಯನ್ನು ನಿರಾಕರಿಸುತ್ತಿದ್ದೀರಿ. ಇದನ್ನು ನ ವಿಲಕ್ಷಣತ್ವಾಧಿಕರಣದ ಸೂತ್ರದಲ್ಲಿಯೇ ನಿರಾಕರಿಸಿರುವಾಗ ಅದೇ ಪೂರ್ವಪಕ್ಷವನ್ನು ಇಲ್ಲಿಯೂ

ಮಾಡುವುದು ಅಯುಕ್ತವಾಗುತ್ತದೆಂದು ತಿಳಿಯಬೇಕು. ಬ್ರಹ್ಮನು ಜಗತ್ತಿಗೆ ವಿವರ್ತಕಾರಣನಾಗಿದ್ದಾನೆಂದು ಸೂತ್ರಕ್ಕೆ ವ್ಯಾಖ್ಯಾನಿಸುವುದಾದರೆ ಸೂತ್ರವು ಶ್ರುತಿಗೆ ಅನನುಗುಣವಾಗುತ್ತದೆಂದು 'ವಿವರ್ತಪರತ್ವೇ' ಎಂಬ ವಾಕ್ಯದಿಂದ ಸಮರ್ಥಿಸುತ್ತಿದ್ದಾರೆ.

**प्रकाशः** –'अन्यत्र' न्यायामृतादौ । **योनिपदादीति** । "सम्भवतीह विश्वम्" इति सम्भवशब्दः, "अन्नं च जायते" इत्यादिशब्द आदिपदार्थः । तेषां कारणत्वप्रत्यायकत्वादिति भावः ।

'ಅನ್ಯತ್ರ' ಎಂದರೆ ನ್ಯಾಯಾಮೃತಾದಿ ಗ್ರಂಥಗಳಲ್ಲಿ ಎಂದರ್ಥ. 'ಯೋನಿಪದಾದಿ' ಎಂಬಲ್ಲಿರುವ ಆದಿಪದದಿಂದ 'ಸಂಭವತೀಹ ವಿಶ್ವಮ್' ಎಂಬಲ್ಲಿರುವ 'ಸಂಭವ' ಶಬ್ದವು, 'ಅನ್ನಂ ಚ ಜಾಯತೇ'' ಎಂಬಲ್ಲಿರುವ 'ಜಾಯತೇ' ಎಂಬ ಪದ ಮುಂತಾದ್ದು ಅನುಪಪನ್ನವಾಗುತ್ತದೆಂದು ತಿಳಿಯಬೇಕು. 'ಯೋನಿ' ಪದದಂತೆ 'ಸಂಭವ' ಎಂಬ ಶಬ್ದ ಹಾಗೂ 'ಜಾಯತೇ' ಎಂಬ ಶಬ್ದ ಕಾರಣತ್ವವನ್ನೇ ತಿಳಿಸುತ್ತಿದೆ ಎಂದು ಅಭಿಪ್ರಾಯ.

**प्रकाशः** – आदिसूत्रार्थं सिद्धान्ताननुगुणतया दूषयति – **किञ्चेति** ।

ಅದ್ವೈತಿಗಳ ಪ್ರಥಮಸೂತ್ರಾರ್ಥವು ಸಿದ್ಧಾಂತಕ್ಕೆ ಅನನುಗುಣವಾಗಿದೆಯೆಂದು ನಿರಾಕರಿಸುತ್ತಿದ್ದಾರೆ 'ಕಿಂಚ' ಇತ್ಯಾದಿ ವಾಕ್ಯದಿಂದ.

**प्रकाशः** – एवं हि सूत्रार्थः – अदृश्यत्वादिगुणको भूतयोनिः परमात्मैव, "यस्सर्वज्ञः सर्ववित्" इत्यादिना सार्वज्ञ्यादिधर्मोक्तेरिति ।

ಅದ್ವೈತಿಗಳ ಪ್ರಥಮ ಸೂತ್ರಾರ್ಥ ಹೀಗಿದೆ -

'ಅದೃಶ್ಯತ್ವಾದಿಗುಣಕೋ ಧರ್ಮೋಕ್ತೇಃ' ಅದೃಶ್ಯತ್ವಾದಿ ಗುಣಗಳುಳ್ಳವನು ಜಗತ್ತಿಗೆ ಕಾರಣನಾಗಿದ್ದಾನೆ. ಅಂತಹ ವ್ಯಕ್ತಿಯು ಪರಮಾತ್ಮನೇ ಆಗಿದ್ದಾನೆ. ಏಕೆಂದರೆ 'ಯಸ್ಸರ್ವಜ್ಞಃ ಸರ್ವವಿತ್' ಇತ್ಯಾದಿಯಾಗಿ ಸರ್ವಜ್ಞತ್ವವೇ ಮೊದಲಾದ ಧರ್ಮಗಳನ್ನು ಹೇಳಿರುವುದರಿಂದ.

**प्रकाशः** – तथा चैवंविधं ब्रह्म कथमधिष्ठानमित्यर्थः ।

ಅದ್ವೈತಿಗಳ ಈ ಸೂತ್ರ ವ್ಯಾಖ್ಯಾನವು ಅವರ ಸಿದ್ಧಾಂತಕ್ಕೆ ಮುಳ್ಳಾಗಿದೆ. ಏಕೆಂದರೆ ಸರ್ವಜ್ಞತ್ವಾದಿ ವಿಶಿಷ್ಟನಾದ ಬ್ರಹ್ಮನನ್ನು ಜಗತ್ತಿಗೆ ಕಾರಣನಾಗಿದ್ದಾನೆಂದು ಸೂತ್ರವು ಹೇಳುತ್ತಿದೆ. ಆದರೆ ಶುದ್ಧಬ್ರಹ್ಮನು ಜಗತ್ತಿನ ಅಧ್ಯಾಸಕ್ಕೆ ಅಧಿಷ್ಠಾನನಾಗಿದ್ದಾನೆ. ವಿಶಿಷ್ಟಬ್ರಹ್ಮನನ್ನು ಅಧಿಷ್ಠಾನನೆಂದು ಹೇಳಲು ಹೇಗೆ ಸಾಧ್ಯ?

**प्रकाशः** – ननु एते धर्मा अतात्त्विकाः, अतो न दोष इति चेत्, तर्हि तैः प्रधानादिनिरासायोगात् सिद्धान्तानुत्थित्तिरिति भावः ।

ಸರ್ವಜ್ಞತ್ವಾದಿಧರ್ಮಗಳೆಲ್ಲವೂ ಅತಾತ್ವಿಕವಾಗಿವೆ, ಆದ್ದರಿಂದ ಅಧಿಷ್ಠಾನನಾಗಲು ಬಾಧಕವಿಲ್ಲವೆಂದು ಅದ್ವೈತಿಗಳು ಉತ್ತರಿಸಬಹುದು. ಹಾಗಾದರೆ ಪ್ರಧಾನಾದಿಗಳನ್ನು ನಿರಾಸ ಮಾಡಿ ಸಿದ್ಧಾಂತವನ್ನು ಸ್ಥಾಪನೆ ಮಾಡಲು ಸಾಧ್ಯವಿಲ್ಲ. ಅತಾತ್ವಿಕವಾದ ಧರ್ಮಗಳಿಂದ ಪ್ರಧಾನಾದಿಗಳನ್ನು ನಿರಾಕರಿಸಲು ಹೇಗೆ ಸಾಧ್ಯ ?

**प्रकाशः – यच्चोक्तमिति ।**

'दिव्यो ह्यमूर्तः पुरुषः स बाह्याभ्यन्तरो ह्यजः ।
अप्राणो ह्यमनाश्शुभ्र अक्षरात् परतः परः ।।'

इत्यदृश्यत्वादिगुणकभूतयोनेः शारीराद्विलक्षणत्वेन दिव्यत्वामूर्तत्वादिना विशेषणान्न जीवः । तथा प्रकृतस्य भूतयोने "अक्षरात्परतःपरः" इत्यक्षरात्परतः प्रधानात्पञ्चमीनिर्दिष्टात्पर इति प्रथमान्तत्वेन भेदव्यपदेशान्न प्रधानं भूतयोनिरित्यर्थ इत्युक्तमित्यर्थः ।

ಅದ್ವೈತಿಗಳ 'ವಿಶೇಷಣಭೇದವ್ಯಪದೇಶಾಭ್ಯಾಂ ಚ ನೇತರೌ' ಎಂಬ ಎರಡನೆಯ ಸೂತ್ರ ವ್ಯಾಖ್ಯಾನ ಹೀಗಿದೆ -

'ದಿವ್ಯೋ ಹ್ಯಮೂರ್ತಃ ಪುರುಷಃ ಸ ಬಾಹ್ಯಾಭ್ಯಂತರೋ ಹ್ಯಜಃ । ಅಪ್ರಾಣೋ ಹ್ಯಮನಾಶ್ಶುಭ್ರಃ' ಇತ್ಯಾದಿಯಾಗಿ ಶ್ರುತಿಯು ದಿವ್ಯತ್ವ, ಅಮೂರ್ತತ್ವ ಮೊದಲಾದ ಧರ್ಮಗಳನ್ನು ಅಕ್ಷರತತ್ತ್ವದಲ್ಲಿ ಹೇಳುತ್ತಿದೆ. ಈ ವಿಶೇಷಣಗಳನ್ನು ಅಕ್ಷರನಿಗೆ ಕೊಟ್ಟಿದ್ದರಿಂದ ಜೀವನು ಅಕ್ಷರನಲ್ಲ. ಅಂದರೆ ದಿವ್ಯ ಎಂದರೆ ಸ್ವತಃ ಪ್ರಕಾಶಮಾನನಾದವನು ಎಂದರ್ಥ. ಜೀವನು ಸ್ವತಃ ಪ್ರಕಾಶಮಾನನಾಗದ ಕಾರಣ ಅಕ್ಷರನಾಗಲು ಸಾಧ್ಯವಿಲ್ಲ. ಪ್ರಕೃತಿಯೂ ಸಹ ಅಕ್ಷರತತ್ತ್ವವಲ್ಲ. ಏಕೆಂದರೆ "ಅಕ್ಷರಾತ್ಪರತಃ ಪರಃ" ಎಂಬುದಾಗಿ ಪ್ರಕೃತಿಗಿಂತ ಇಲ್ಲಿ ಪ್ರಕೃತವಾದ ಅಕ್ಷರತತ್ತ್ವವು ಭಿನ್ನವಾಗಿವೆಯೆಂದು ಹೇಳಲಾಗಿದೆ. 'ಅಕ್ಷರಾತ್ಪರತಃ' ಎಂಬುದಾಗಿ ಪಂಚಮೀ ನಿರ್ದಿಷ್ಟವಾದ ವಸ್ತುವಿಗಿಂತ ಪರಃ ಎಂದು ಪ್ರಥಮ ನಿರ್ದಿಷ್ಟವಾಗಿ ಭೇದವನ್ನು ಹೇಳಿದ್ದರಿಂದ ಪ್ರಧಾನವು ಅಕ್ಷರವಾಗುವುದಿಲ್ಲ. ಆದ್ದರಿಂದ ನಾಮರೂಪಾತ್ಮಕವಾದ ಪ್ರಪಂಚಕ್ಕೆ ಉಪಾದಾನಕಾರಣವಾದ ಭೂತಸೂಕ್ಷ್ಮವು ಪರ ಅಕ್ಷರ ಎನಿಸಿದೆ. ಪ್ರಕೃತಿಗಿಂತ ಉತ್ತಮವಾದ್ದರಿಂದ ಭೂತಸೂಕ್ಷ್ಮವು ಪರ ಅಕ್ಷರವಾಗುತ್ತದೆ. ವಿಕಾರ ಹೊಂದದ ಪರಬ್ರಹ್ಮನು, ವಿಕಾರ ಹೊಂದುವ ಪರ ಅಕ್ಷರಕ್ಕಿಂತ ಭಿನ್ನನಾಗಿದ್ದಾನೆ ಎಂದು 'ಅಕ್ಷರಾತ್ಪರತಃ ಪರಃ' ಎಂಬ ಶ್ರುತಿಯು ಹೇಳುತ್ತಿದೆ. ಅಂದರೆ ಭೂತಸೂಕ್ಷ್ಮಕ್ಕಿಂತ ಪರಬ್ರಹ್ಮನು ಭಿನ್ನನಾಗಿದ್ದಾನೆಂದು ಹೇಳಿದ್ದರಿಂದ ಪ್ರಕೃತಿಯಾಗಲೀ, ಭೂತಸೂಕ್ಷ್ಮವಾಗಲೀ ಅಕ್ಷರತತ್ತ್ವವೆನಿಸಲು ಸಾಧ್ಯವಿಲ್ಲ. ಇಷ್ಟು ಅದ್ವೈತಿಗಳ ವ್ಯಾಖ್ಯಾನ.

**प्रकाशः** – तत्र एतदधिकरणबोध्ये निर्विशेषे भूतयोनिशब्दार्थे ब्रह्मणि तत्त्वतो दिव्यत्वादिविशेषणस्य भेदस्य च अभावेन ताभ्यां जीवप्रधानव्यावृत्त्ययोगात् ।

ಪರಿಪೂರ್ಣಚಂದ್ರಿಕಾ

आरोपितयोस्तयोस्तत्र सम्भवोऽस्तीति चेत्तत्राह – वस्तुत इति ।

ಅದ್ವೈತಿಗಳ ಈ ವ್ಯಾಖ್ಯಾನವು ಅಸಾಧುವಾಗಿದೆ - ಏಕೆಂದರೆ ನಿರ್ವಿಶೇಷನಾದ ಶುದ್ಧಬ್ರಹ್ಮನು ಈ ಅಧಿಕರಣದಿಂದ ಪ್ರತಿಪಾದ್ಯನಾಗಿದ್ದಾನೆ. ಯಾವುದೇ ಧರ್ಮಗಳಿಲ್ಲದ ಭೂತಯೋನಿ ಶಬ್ದಾರ್ಥನಾದ ಬ್ರಹ್ಮನಲ್ಲಿ ತಾತ್ವಿಕವಾದ ದಿವ್ಯತ್ವಾದಿವಿಶೇಷಣಗಳಾಗಲೀ, ಭೇದವನ್ನಾಗಲೀ ಹೇಳಲು ಸಾಧ್ಯವಿಲ್ಲ. ಹೀಗಿರುವಾಗ ದಿವ್ಯತ್ವಾದಿವಿಶೇಷಣಗಳಿಂದ ಹಾಗೂ ಭೇದದಿಂದ ಜೀವ ಮತ್ತು ಪ್ರಕೃತಿಯನ್ನು ವ್ಯಾವೃತ್ತಿ ಮಾಡಲು ಸಾಧ್ಯವಿಲ್ಲ.

ಆರೋಪಿತವಾದ ದಿವ್ಯತ್ವಾದಿವಿಶೇಷಣಗಳಿಂದ ಜೀವ ಮತ್ತು ಪ್ರಧಾನರನ್ನು ವ್ಯಾವೃತ್ತಿ ಮಾಡಬಹುದಲ್ಲವೇ? ಎಂದು ಆಶಂಕಿಸಿದರೆ ಅದಕ್ಕೆ 'ವಸ್ತುತಃ' ಎಂಬ ಗ್ರಂಥದಿಂದ ಉತ್ತರಿಸುತ್ತಿದ್ದಾರೆ.

**प्रकाशः** – ''विशेषण'' इत्यादिकं लक्षणया शुद्धं बोधयतीति भेदभेदकोभयभ्रमोऽपि निवर्तयिष्यत इत्यत आह – **शुद्धबोधनेनेति** ।

ಸೂತ್ರದಲ್ಲಿ 'ವಿಶೇಷಣ' ಹಾಗೂ 'ಭೇದಪದಗಳು' ಲಕ್ಷಣಯಾ ಶುದ್ಧ ಬ್ರಹ್ಮನನ್ನು ಪ್ರತಿಪಾದಿಸುತ್ತಿವೆ. ಇದರಿಂದ ಭೇದಭ್ರಮ ಹಾಗೂ ಭೇದಕಭ್ರಮಗಳೂ ಸಹ ನಿವೃತ್ತಿಯಾಗುತ್ತವೆಂದು ಆಕ್ಷೇಪಿಸಿದರ 'ಶುದ್ಧಬೋಧನೇನ' ಎಂಬುದರಿಂದ ಉತ್ತರಿಸುತ್ತಿದ್ದಾರೆ.

**प्रकाशः** – उपलक्षणमेतत्, त्वन्मते मन्मत इव विशेषहेतोरनुपन्यासेन दिव्यपुरुषत्वादिविशेषणेन प्रधानेऽप्ययुक्तेन द्वयोरपि निराससम्भवात् ''स कारणं कारणाधिपाधिपः'' इतिवदक्षरात्परतो जीवादित्यपि वक्तुं शक्यत्वेन भेदव्यपदेशेनापि द्वयोर्निराससम्भवेन प्रत्येकमेकैकनिरासायोगात् ।

ಉಪಲಕ್ಷಣಯಾ ಇದನ್ನು ತಿಳಿಯಬೇಕು. ನಮ್ಮ ಮತದಲ್ಲಿ ಸೂತ್ರದಲ್ಲಿರುವ ವಿಶೇಷಣ ಹಾಗೂ ಭೇದಪದಗಳು ವಿಶೇಷಹೇತುಗಳನ್ನು ಹೇಳುವ ಮೂಲಕ ಸಾರ್ಥಕಗಳಾಗಿವೆ. ಆದರೆ ನಿಮ್ಮ ಮತದಲ್ಲಿ ಯಾವುದೇ ವಿಶೇಷಹೇತುಗಳನ್ನು ಹೇಳದ ಕಾರಣ ವ್ಯರ್ಥವಾಗಿವೆ. ಕೇವಲ ವಿಶೇಷಣಪದವಷ್ಟೇ ಸಾಕು. ಆದರಿಂದಲೇ 'ದಿವ್ಯಪುರುಷತ್ವ' ಮುಂತಾದ ವಿಶೇಷಣದಿಂದ ಜೀವನನ್ನು ನಿರಾಕರಿಸಿದಂತೆ ಪ್ರಧಾನನ್ನೂ ಸಹ ನಿರಾಕರಿಸಬಹುದು. ಹೀಗಿರುವಾಗ ಭೇದವ್ಯಪದೇಶಕಪದವು ವ್ಯರ್ಥವಾಗುತ್ತದೆ. ಅಥವಾ 'ಸ ಕಾರಣಂ ಕಾರಣಾಧಿಪಾಧಿಪಃ' ಎಂಬ ಶ್ರುತಿಗೆ ನೀವು ಕಾರಣವಾಗಿರುವ ಪ್ರಧಾನಕ್ಕೆ ಜೀವನು ಅಧಿಪತಿಯಾಗಿದ್ದಾನೆ. ಅಂತಹ ಜೀವನಿಗೆ ಬ್ರಹ್ಮನು ಅಧಿಪತಿಯಾಗಿದ್ದಾನೆಂದು ವ್ಯಾಖ್ಯಾನಿಸುತ್ತೀರಿ. ಇದರಂತೆ 'ಅಕ್ಷರಾತ್ಪರತಃ ಪರಃ' ಎಂಬಲ್ಲಿಯೂ ಅಕ್ಷರವೆಂದರೆ ಪ್ರಕೃತಿ, ಅದಕ್ಕಿಂತ ಪರನಾದವನು ಜೀವ, ಜೀವನಿಗಿಂತಲೂ ಪರನಾದವನು ಬ್ರಹ್ಮನೆಂದು ಹೇಳಬಹುದು. ಹೀಗೆ ವ್ಯಾಖ್ಯಾನಿಸುವುದರಿಂದ ಅಕ್ಷರದಿಂದ ಭೇದವು ಸಿದ್ಧವಾಗುವಂತೆ, ಜೀವನಿಂದ ಭೇದವು ಸಿದ್ಧವಾಗುತ್ತದೆ. ಆದ್ದರಿಂದ ಭೇದವ್ಯಪದೇಶವೆಂಬ ಹೇತುವಿನಿಂದಲೇ ಪ್ರಕೃತಿ ಹಾಗೂ ಜೀವರನ್ನು ನಿರಾಸ ಮಾಡಬಹುದು. ಆದ್ದರಿಂದ ಪ್ರತ್ಯೇಕವಾಗಿ ಒಂದೊಂದನ್ನು ಮಾತ್ರ ನಿರಾಸ ಮಾಡುವುದು

ಅಯುಕ್ತವಾಗುತ್ತದೆ.

**प्रकाशः** – विशेषणभेदाभ्यां क्रमेण जीवप्रधाननिरासे सूत्रे 'नेतरे' इत्येव स्त्रीलिङ्गेन नपुंसकलिङ्गेन वा निर्देष्टव्यत्वेन 'नेतरौ' इत्यस्य अस्वारस्यं च ।

ಮತ್ತು ವಿಶೇಷಣ ಹಾಗೂ ಭೇದಪದಗಳಿಂದ ಜೀವ ಮತ್ತು ಪ್ರಧಾನವನ್ನು ಕ್ರಮವಾಗಿ ನೀವು ನಿರಾಕರಿಸುತ್ತೀರಿ. ಹಾಗಾದರೆ ಸೂತ್ರದಲ್ಲಿ 'ನೇತರೇ' ಎಂದು ಹೇಳಬೇಕಿತ್ತು. 'ನೇತರೌ' ಎಂಬುದು ತಪ್ಪಾಗುತ್ತದೆ. ಏಕೆಂದರೆ ಜೀವನನ್ನು ನಿರಾಕರಿಸುವುದಕ್ಕಾಗಿ 'ಇತರಃ' ಎನ್ನಬೇಕು. ಪ್ರಧಾನವನ್ನು ನಿರಾಕರಿಸುವುದಕ್ಕಾಗಿ 'ಇತರಂ' ಎನ್ನಬೇಕು. 'ಇತರಶ್ಚ ಇತರಂ ಚ ನೇತರೇ' ಎಂದು ರೂಪವಾಗುತ್ತದೆ. ಅಥವಾ ಪ್ರಕೃತಿಯನ್ನು ವಿವಕ್ಷಿಸಿದಾಗ 'ಇತರಶ್ಚ ಇತರಾಚ ಇತರೇ' ಎಂದೇ ಆಗುತ್ತದೆ. ಆದ್ದರಿಂದ 'ನೇತರೇ' ಎಂಬುದಾಗಿ ಸ್ತ್ರೀಲಿಂಗಪ್ರಯೋಗವನ್ನಾಗಲೀ, ನಪುಂಸಕಪ್ರಯೋಗವನ್ನಾಗಲೀ ಮಾಡಬೇಕಿತ್ತು. 'ನೇತರೌ' ಎಂಬ ಪುಲ್ಲಿಂಗಪ್ರಯೋಗವು ತಪ್ಪಾಗುತ್ತದೆ. 'ವಿಶೇಷಣ' 'ಭೇದ' ಎಂಬೆರಡು ಪದಗಳಿಂದ ಜೀವಪ್ರಧಾನರನ್ನು ಕ್ರಮವಾಗಿ ನಿರಾಕರಿಸಬೇಕಾದರೆ ಅದಕ್ಕನುಗುಣವಾಗಿ 'ಇತರ' ಶಬ್ದವನ್ನೂ ಸಹ ಪ್ರತ್ಯೇಕ ಪ್ರಯೋಗಿಸಬೇಕು ಹೊರತು ವಿಪರೀತವಾಗಿ 'ಇತರಂ ಚ ಇತರಶ್ಚ' ಎಂದು ಹೇಳಬಾರದೆಂದು ಅಭಿಪ್ರಾಯ. ಹಾಗಾಗಿ ಸೂತ್ರದಲ್ಲಿರುವ 'ಇತರೌ' ಎಂಬುದು ನಿಮ್ಮ ಮತದಲ್ಲಿ ಅಸ್ವರಸವಾದ ಅರ್ಥವುಳ್ಳದ್ದಾಗಿದೆ.

**प्रकाशः** – मन्मते तु द्वाभ्यां हेतुभ्यां क्रमेण प्रधानचेतनयोर्निरास इति 'नेतरौ' इति पुल्लिङ्गस्य स्वारस्यमित्यपि ध्येयम् ।

ನಮ್ಮ ಮತದಲ್ಲಿ ಎರಡು ಹೇತುಗಳಿಂದ ಕ್ರಮವಾಗಿ ಪ್ರಧಾನ ಹಾಗೂ ಚೇತನರನ್ನು ನಿರಾಸ ಮಾಡುವುದಕ್ಕಾಗಿ 'ಇತರೌ' ಎಂದು ಹೇಳಲಾಗಿದೆ. ಚೇತನವು ಅನಂತರ ಪ್ರಸಕ್ತವಾಗುವುದರಿಂದ ಪುಲ್ಲಿಂಗ ನಿರ್ದೇಶವೂ ಸ್ವರಸವಾಗುತ್ತದೆಂದು ತಿಳಿಯಬೇಕು.

**प्रकाशः** – 'रूपशब्दाप्रयोगात्' इत्युपलक्षणं, त्वन्मते पूर्वसूत्रयोरन्यतर-विवक्षितैकविज्ञाननिबन्धनसर्वविज्ञानानन्तर्गतत्वात्सर्वात्मभावस्येत्यपि ध्येयम् ।। इदमधिकरणं परैर्नारभ्यमेवेत्याह – **अत्रापीति** ।

ಅದ್ವೈತಿಗಳು 'ರೂಪೋಪನ್ಯಾಸಾಚ್ಚ' ಎಂಬ ಮೂರನೆಯ ಸೂತ್ರಕ್ಕೆ ಹೀಗೆ ವ್ಯಾಖ್ಯಾನಿಸುತ್ತಾರೆ -

ಈ ಸೂತ್ರದಲ್ಲಿ ಅಕ್ಷರತತ್ತ್ವದಿಂದ ಪ್ರಪಂಚದ ಸೃಷ್ಟಿಯನ್ನು ಹೇಳಲಾಗಿದೆ. ಅಂತಹ ಅಕ್ಷರನ ಅಂಗಾಂಗಗಳ ಸ್ವರೂಪವನ್ನು 'ಅಗ್ನಿರ್ಮೂರ್ಧಾ' ಎಂಬ ಶ್ರುತಿಯು ವರ್ಣಿಸುತ್ತಿದೆ. ಜೀವನಲ್ಲಿ ಇಂತಹ ವರ್ಣನೆಯು ಕೂಡುವುದಿಲ್ಲ. ಜಡವಾದ ಪ್ರಕೃತಿಯು ಸರ್ವಭೂತಗಳ ಅಂತರಾತ್ಮವಾಗಲು ಸಾಧ್ಯವಿಲ್ಲ. ಆದ್ದರಿಂದ ಬ್ರಹ್ಮನೇ ಅಕ್ಷರನಾಗಿದ್ದಾನೆ ಎಂದು.

ಈ ಸೂತ್ರ ವ್ಯಾಖ್ಯಾನವೂ ಸಹ ಅಸಾಧುವಾಗಿದೆ. ಸರ್ವಾತ್ಮಕತ್ವವೆಂಬ ಅರ್ಥದಲ್ಲಿ ರೂಪಶಬ್ದವನ್ನು ಯಾರೂ ಸಹ ಪ್ರಯೋಗಿಸುವುದಿಲ್ಲ ಎಂದು ಒಂದು ದೋಷ. ಗ್ರಂಥದಲ್ಲಿ ಹೇಳಲ್ಪಟ್ಟ ಈ ದೋಷವು

ಉಪಲಕ್ಷಣವೆಂದು ತಿಳಿಯಬೇಕು. ನಿಮ್ಮ ಮತದಲ್ಲಿ ಹಿಂದಿನೆರಡು ಸೂತ್ರಗಳಲ್ಲಿ ಸಮಸ್ತ ಜಗತ್ತಿಗೆ ಬ್ರಹ್ಮನು ಉಪಾದಾನಕಾರಣನೆಂದು ಹೇಳಿದ್ದರಿಂದ ಅವನ ಜ್ಞಾನದಿಂದಲೇ ಎಲ್ಲವನ್ನೂ ತಿಳಿದಂತಾಗುತ್ತದೆಂದು ಹೇಳಿದಂತಾಗುತ್ತದೆ. ಆದರಿಂದಲೇ ಸರ್ವಾತ್ಮಕತ್ವವು ತಿಳಿಯುವಾಗ ಈ ಸೂತ್ರವು ಪುನಃ ಅದನ್ನೇ ಸಮರ್ಥಿಸಿದರೆ ಪುನರುಕ್ತವಾಗುತ್ತದೆಂಬ ಮತ್ತೊಂದು ದೋಷವನ್ನು ತಿಳಿಯಬೇಕು.

ಅದ್ವೈತಿಗಳಿಗೆ ಹಿಂದಿನ ಅಧಿಕರಣಗಳಂತೆ ಈ ಅಧಿಕರಣವೂ ಸಹ ಅನಾರಂಭಣೀಯವಾಗಿದೆ ಎಂಬ ವಿಚಾರವನ್ನು 'ಅತ್ರಾಪಿ' ಎಂಬ ಗ್ರಂಥದಿಂದ ಪ್ರತಿಪಾದಿಸಿದ್ದಾರೆ.

**गुरुराजीयम् – न सारूप्यनियम इति ।।** न खलु बाह्यसारूप्यनिबन्धन-तस्सर्वो विभ्रम इति नियमनिमित्तमस्ति । आन्तरादपि कामक्रोधोन्मादस्वाप्नादेर्मानसापचारात्सारूप्यानपेक्षात्तस्यापि भ्रमस्य दर्शनात् । अपि च हेतुमति विभ्रमे तदभावादनुयोगो युज्यते । 'अनाद्यविद्यातद्वासना-प्रवाहमध्यपतितस्तु नानुयोगमर्हति' इति तदुक्तेरिति भावः । नन्वेतदधिकरण-पूर्वपक्षदशायामारम्भाधिकरणसिद्धान्तानुन्मेषान्न तेनास्य गतार्थतेत्यत आह – **विवर्तपरत्व इति ।। अन्यत्रेति ।।** न्यायामृत इत्यर्थः ।। इति **भाष्यार्थ इत्यर्थ इति ।।** न चैवं टीकागतसूत्रखण्डस्येति खण्डशब्दो व्यर्थः । 'नेतरा'वित्यस्य व्याख्यातत्वेन व्यावर्त्यत्वोपपत्तेरिति ज्ञेयम् ।।

## ಸಾರ

ಶಾಂಕರಭಾಷ್ಯದಲ್ಲಿ ಅದೃಶ್ಯತ್ವಾಧಿಕರಣದ ರಚನೆ ಹೀಗಿದೆ - 'ಯತ್ತದದ್ರೇಶ್ಯಮ್' ಎಂಬ ಆಥರ್ವಣೋಪನಿಷತ್ತಿನ ವಾಕ್ಯವು ವಿಷಯವಾಗಿದೆ. ಈ ಶ್ರುತಿಯಲ್ಲಿ ಕೇಳಿಸುತ್ತಿರುವ ಅದೃಶ್ಯತ್ವಾದಿಗುಣಗಳು ಪ್ರಧಾನದಲ್ಲಿ ಬರುತ್ತವೆ. ಏಕೆಂದರೆ ಅದೇ ಶ್ರುತಿಯಲ್ಲಿ ಮುಂದೆ 'ಯದ್ಭೂತಯೋನಿಮ್' ಎಂಬುದಾಗಿ ಭೂತಯೋನಿ ಶಬ್ದವನ್ನು ಪ್ರಯೋಗಿಸಲಾಗಿದೆ. ಯೋನಿ ಶಬ್ದಕ್ಕೆ ಉಪಾದಾನಕಾರಣವೆಂದರ್ಥ. ಆದ್ದರಿಂದಲೇ ಶ್ರುತಿಯು 'ಯಥೋರ್ಣನಾಭಿಃ' ಎಂಬುದಾಗಿ ಜೇಡರ ಹುಳುವಿನ ದೇಹ, ಭೂಮಿ, ಪುರುಷದೇಹಗಳನ್ನು ಉದಾಹರಣೆಯನ್ನಾಗಿ ನೀಡಿದೆ. ಆದ್ದರಿಂದ ಜಗತ್ತಿಗೆ ಉಪಾದಾನಕಾರಣವಾದ ಜಡಪ್ರಕೃತಿಯು ಭೂತಯೋನಿಯೆಂದು ಕರೆಯಲ್ಪಡುತ್ತದೆ. ಆದ್ದರಿಂದ ಅದೃಶ್ಯತ್ವಾದಿಗುಣವುಳ್ಳ ಅಕ್ಷರವೆಂದರೆ ಜಡಪ್ರಕೃತಿಯಾಗುತ್ತದೆಂದು ತಿಳಿಯಬೇಕು. 'ಅಕ್ಷರಾತ್ಪರತಃ ಪರಃ' ಎಂದು ಅಕ್ಷರತತ್ತ್ವಕ್ಕಿಂತ ಬ್ರಹ್ಮನು ಭಿನ್ನನಾಗಿದ್ದಾನೆಂದು ಹೇಳಿರುವುದರಿಂದ ಬ್ರಹ್ಮನನ್ನು ಅಕ್ಷರನೆಂದು ಹೇಳಲು ಸಾಧ್ಯವಿಲ್ಲ. ಅಥವಾ ಭೂತಯೋನಿ ಶಬ್ದಕ್ಕೆ ನಿಮಿತ್ತಕಾರಣವೆಂದು ಅರ್ಥೈಸಿದರೆ ಪುಣ್ಯಪಾಪಗಳ ಮೂಲಕ ಜಗತ್ತಿಗೆ ಕಾರಣನಾದ ಜೀವಾತ್ಮನು ಅಕ್ಷರಶಬ್ದವಾಚ್ಯನಾಗುತ್ತಾನೆ. ಇಷ್ಟು ಪೂರ್ವಪಕ್ಷ.

ಶಾಂಕರಭಾಷ್ಯದಂತೆ ಸಿದ್ಧಾಂತ - ಜಗತ್ತು ಬ್ರಹ್ಮನ ಪರಿಣಾಮವೆಂದು ನಾವು ಹೇಳುವುದಿಲ್ಲ ಹೊರತು, ಬ್ರಹ್ಮನವಿವರ್ತವಾಗಿದೆ. ಯಾವರೀತಿಯಾಗಿ ರಜ್ಜುವಿಗೆ ಸರ್ಪವು ವಿವರ್ತಕಾರಣವಾಗಿದೆಯೋ, ಅದರಂತೆ ಜಗತ್ತಿಗೆ ಬ್ರಹ್ಮನು ವಿವರ್ತಕಾರಣನಾಗಿದ್ದಾನೆ. ಇಂತಹ ವಿವರ್ತಕಾರಣವನ್ನು ಭೂತಯೋನಿಶಬ್ದವು ಪ್ರತಿಪಾದಿಸುತ್ತಿದೆ. ಮತ್ತು 'ಅಕ್ಷರಾತ್ಸಂಭವತೀಹ ವಿಶ್ವಮ್' ಎಂಬುದಾಗಿ ಅಕ್ಷರತತ್ತ್ವವನ್ನು ಜಗತ್ಕಾರಣವೆಂದು ಹೇಳಿ, ಅದೇ ಅಕ್ಷರತತ್ತ್ವವನ್ನು 'ಯಃ ಸರ್ವಜ್ಞಃ' ಎಂಬುದಾಗಿ ಸರ್ವಜ್ಞವೆಂದು ಶ್ರುತಿ ಹೇಳಿದೆ. ಸರ್ವಜ್ಞತ್ವಾದಿಗಳು ಬ್ರಹ್ಮನ ಧರ್ಮವೇ ಹೊರತು, ಪ್ರಕೃತಿಯ ಧರ್ಮವಲ್ಲ. ಆದ್ದರಿಂದ ಅದೃಶ್ಯತ್ವಾದಿಗುಣಗಳುಳ್ಳವನು ಬ್ರಹ್ಮನೇ ಆಗುತ್ತಾನೆ. ಮತ್ತು 'ಯಯಾ ತದಕ್ಷರಮಧಿಗಮ್ಯತೇ' ಎಂಬುದಾಗಿ ಪರವಿದ್ಯೆಗೆ ಅಕ್ಷರತತ್ತ್ವವು ವಿಷಯವಾಗಿದೆಯೆಂದು ತಿಳಿಯುತ್ತಿದೆ. ಅಕ್ಷರನು ಬ್ರಹ್ಮನಾಗದಿದ್ದರೆ ಪರವಿದ್ಯೆಗೆ ವಿಷಯನೂ ಸಹ ಆಗಲಾರನು. ಆದ್ದರಿಂದ ಜಗತ್ತಿನ ಅಧ್ಯಾಸಕ್ಕೆ ಅಧಿಷ್ಠಾನನಾದ ಶುದ್ಧಬ್ರಹ್ಮನೇ ಅದೃಶ್ಯತ್ವಾದಿಗುಣಗಳುಳ್ಳವನು.

ಅದ್ವೈತಿಗಳ ಈ ಅಧಿಕರಣ ಶರೀರ ಸರಿಯಿಲ್ಲ. ಏಕೆಂದರೆ ಸರ್ಪದ ಆರೋಪಕ್ಕೆ ಹಗ್ಗವು ಹೇಗೆ ಅಧಿಷ್ಠಾನವೋ, ಅದರಂತೆ ಪ್ರಪಂಚದ ಆರೋಪಕ್ಕೆ ಬ್ರಹ್ಮನು ಅಧಿಷ್ಠಾನನಾಗಿದ್ದಾನೆ. ಅಂತಹ ಬ್ರಹ್ಮನು ವಾಚ್ಯನಾದರೆ ನಿರ್ಧರ್ಮಕನಾದ ಶುದ್ಧಬ್ರಹ್ಮನಲ್ಲಿ 'ಧರ್ಮೋಕ್ತೇಃ' ಎಂಬ ಸೂತ್ರೋಕ್ತ ಕಾರಣ ವಚನವು ತಪ್ಪಾಗುತ್ತದೆ. ಮತ್ತು 'ಸೂರ್ಯದ್ವಾರೇಣ ವಿರಜಾಃ ಪ್ರಯಾಂತಿ' ಎಂಬುದಾಗಿ ಸೂರ್ಯನ ಮಾರ್ಗದಲ್ಲಿ ಬ್ರಹ್ಮನನ್ನು ಹೊಂದುತ್ತಾರೆಂದು ಶ್ರುತಿ ಹೇಳುತ್ತಿದೆ. ಅಂತಹ ಬ್ರಹ್ಮನು ಕಾರ್ಯಬ್ರಹ್ಮನಾಗಿದ್ದಾನೆ ಹೊರತು, ಅಧಿಷ್ಠಾನನಾದ ಬ್ರಹ್ಮನಲ್ಲ. ಆದುದರಿಂದ ನಿರ್ಗುಣನಿಗೆ ಇವೆಲ್ಲವೂ ಬಾಧಕವಾಗುತ್ತವೆ. ಆದ್ದರಿಂದ ಅದ್ವೈತಿಗಳ ಅಧಿಕರಣಶರೀರವು ಅಸಾಧುವಾಗಿದೆ.

● ● ● ● ●

## ರಾಮಾನುಜರ ಅಧಿಕರಣ ವಿಮರ್ಶೆ ಮತ್ತು ಟೀಕೆಯ ಕಠಿಣಪದಾರ್ಥಗಳು

### तात्पर्यचन्द्रिका

**केचित्तु – अदृश्यत्वादिगुणकत्वं प्रधानस्य, अक्षरात्परतः परत्वं तु जीवस्येति प्राप्ते, द्वयमपि परमात्मन इति सिद्धान्त इत्याहुः ।**

ಅನುವಾದ - ರಾಮಾನುಜರು ಹೀಗೆ ಹೇಳುತ್ತಾರೆ - ಅದೃಶ್ಯತ್ವಾದಿಗುಣಕತ್ವವು ಪ್ರಕೃತಿಯ ಧರ್ಮವಾಗಿದೆ. ಮತ್ತು ಅಕ್ಷರಾತ್ಪರತಃ ಪರತ್ವವೆಂಬುದು ಜೀವನ ಧರ್ಮವಾಗಿದೆಯೆಂಬುದು ಪೂರ್ವಪಕ್ಷ. ಎರಡೂ ಸಹ ಪರಮಾತ್ಮನ ಧರ್ಮಗಳೇ ಆಗಿವೆಯೆಂದು ಸಿದ್ಧಾಂತ.

ಪರಿಪೂರ್ಣಚಂದ್ರಿಕಾ

तन्न,

'दिव्यो ह्यमूर्तः पुरुषः स बाह्याभ्यन्तरो ह्यजः ।
अप्राणो ह्यमनाश्शुभ्रो अक्षरात्परतः परः ॥'

इति अमूर्तत्वव्याप्तत्वाप्राणत्वादिविशिष्टत्वेन श्रुतेऽक्षरात्परतः परे जीवत्वशङ्कानुदयादिति ॥

ರಾಮಾನುಜರ ಈ ಅಭಿಪ್ರಾಯವು ಅಸಾಧುವಾಗಿದೆ.

'ದಿವ್ಯೋ ಹ್ಯಮೂರ್ತಃ ಪುರುಷಃ ಸ ಬಾಹ್ಯಾಭ್ಯಂತರೋ ಹ್ಯಜಃ । ಅಪ್ರಾಣೋ ಹ್ಯಮನಾಶ್ಶುಭ್ರೋ ಅಕ್ಷರಾತ್ಪರತಃ ಪರಃ' ಎಂಬುದಾಗಿ ದಿವ್ಯತ್ವ, ಅಮೂರ್ತತ್ವ ವ್ಯಾಪ್ತತ್ವ, ಪ್ರಾಣತ್ವ ಮೊದಲಾದ ಧರ್ಮಗಳಿಂದ ಅಕ್ಷರಾತ್ಪರತಃ ಪರವು ವಿಶಿಷ್ಟವಾಗಿದೆಯೆಂದು ಶ್ರುತಿ ಹೇಳುತ್ತಿದೆ. ಆದರೆ ಜೀವನಲ್ಲಿ ಅಮೂರ್ತತ್ವ ಮೊದಲಾದ ಯಾವುದೇ ಧರ್ಮಗಳು ಇರುವುದಿಲ್ಲ. ಆದ್ದರಿಂದ ಜೀವನು ಅಕ್ಷರಾತ್ಪರತಃ ಪರನಾಗುತ್ತಾನೆಂದು ಶಂಕೆಯೇ ಹುಟ್ಟುವುದಿಲ್ಲ.

टीकाक्षरार्थस्तु – पृथिव्यादिदृष्टान्तेनेति । श्रुतौ ऊर्णनाभिदृष्टान्तस्य प्राथम्येऽपि तत्र 'सृजते' इत्यनेन कर्तृत्वप्रतीतेः 'पृथिव्यादि' इत्युक्तम् ।

ಟೀಕೆಯಲ್ಲಿರುವ ಕೆಲವು ಕಠಿಣಪದಗಳ ಅರ್ಥ ಹೀಗಿದೆ - 'ಪೃಥಿವ್ಯಾದಿದೃಷ್ಟಾಂತೇನ' ಎಂದು ಹೇಳಿದ್ದಾರೆ. ವಸ್ತುತಃ 'ಯಥೋರ್ಣನಾಭಿಃ ಸೃಜತೇ ಗೃಹ್ಣತೇ ಚ ಯಥಾ ಪೃಥಿವ್ಯಾಮ್ ಓಷಧಯಃ ಸಂಭವಂತಿ' ಎಂಬುದಾಗಿ ಊರ್ಣನಾಭಿದೃಷ್ಟಾಂತವು ಮೊದಲು ಪ್ರಸಕ್ತವಾಗಿದೆ. ಆನಂತರ ಪೃಥಿವೀ ದೃಷ್ಟಾಂತವು ಪ್ರಸಕ್ತವಾಗಿದೆ. ಅದಕ್ಕನುಗುಣವಾಗಿ ಟೀಕೆಯಲ್ಲಿಯೂ 'ಊರ್ಣನಾಭಿದೃಷ್ಟಾಂತೇನ' ಎಂದೇ ಹೇಳಬೇಕಿತ್ತು. ಆದರೆ ಊರ್ಣನಾಭಿದೃಷ್ಟಾಂತವನ್ನು ನೀಡುವಾಗ 'ಸೃಜತೇ' ಎಂಬ ಪದದಿಂದ ಕರ್ತೃತ್ವದ ಪ್ರತೀತಿಯು ಬರುತ್ತದೆ. ಆದ್ದರಿಂದ ಉಪಾದಾನಕಾರಣವೆಂಬರ್ಥವನ್ನು ಸುಲಭವಾಗಿ ಹೇಳಬಹುದು. ಆದರೆ ಪೃಥಿವ್ಯಾದಿದೃಷ್ಟಾಂತವನ್ನು ನೀಡುವಾಗ 'ಸೃಜತೇ' ಎಂಬ ಪದವು ಇಲ್ಲವಾದ್ದರಿಂದ ಕರ್ತೃತ್ವ ಪ್ರತೀತಿ ಬರುವುದಿಲ್ಲ. ಈ ಅಭಿಪ್ರಾಯದಿಂದ 'ಪೃಥಿವ್ಯಾದಿದೃಷ್ಟಾಂತೇನ' ಎಂದು ಹೇಳಿರುತ್ತಾರೆ.

सामानाधिकरण्येनेति । चित्प्रकृतेरुत्तमादुत्तमस्याभावेन 'अक्षरात्परतः' इति पञ्चम्योर्वैयधिकरण्यायोगादिति भावः ।

'ಸಾಮಾನಾಧಿಕರಣ್ಯೇನ' ಎಂಬ ಟೀಕೆಗೆ ಹೀಗರ್ಥ - ಚಿತ್ಪ್ರಕೃತಿಗಿಂತ ಉತ್ತಮವಾದ ವಸ್ತು ಯಾವುದಿದೆಯೋ ಅದಕ್ಕಿಂತ ಉತ್ತಮವಾದ ಮತ್ತೊಂದು ವಸ್ತು ಇರುವುದಿಲ್ಲ. ಆದ್ದರಿಂದ 'ಅಕ್ಷರಾತ್' 'ಪರತಃ' ಎಂಬಲ್ಲಿರುವ ಎರಡು ಪಂಚಮೀ ವಿಭಕ್ತಿಗಳಿಗೆ ಸಾಮಾನಾಧಿಕರಣ್ಯವನ್ನು ವಿವಕ್ಷಿಸಬೇಕು. ಅಂದರೆ ಶ್ರೇಷ್ಠವಾದ ಚಿತ್ಪ್ರಕೃತಿಗಿಂತ ಎಂದು ಹೊರತು, ವೈಯಧಿಕರಣ್ಯದಿಂದ ಅರ್ಥವನ್ನು ಹೇಳಬಾರದು. ಅಂದರೆ ಅಕ್ಷರಶಬ್ದವಾಚ್ಯವಾದ ಚಿತ್ಪ್ರಕೃತಿಗಿಂತ ಉತ್ತಮೋತ್ತಮವೆಂಬ ಅರ್ಥವನ್ನು ವಿವಕ್ಷಿಸಬಾರದೆಂದು ಅಭಿಪ್ರಾಯ.

**उक्तार्थे हेतुतयेति । "तपसा चीयते" इत्यत्रालोचनार्थेन तपश्शब्देनाज्ञानप्रतीतौ तन्निरासाय "यस्य ज्ञानमयं तपः" इत्यनेनोक्ते पूर्णज्ञानत्वे हेतुतया सार्वज्ञ्योक्तेरित्यर्थः ।**

ಟೀಕೆಯಲ್ಲಿ 'ಉಕ್ತಾರ್ಥೇ ಹೇತುತಯಾ' ಎಂದು ಹೇಳಿದ್ದಾರೆ. ಇದರ ಅರ್ಥ ಹೀಗಿದೆ - 'ತಪಸಾ ಚೀಯತೇ ಬ್ರಹ್ಮ' ಎಂಬ ಶ್ರುತಿಯನ್ನು ಹೇಳಿದಾಗ ಚತುರ್ಮುಖಬ್ರಹ್ಮದೇವರು ಆಲೋಚನಾಪೂರ್ವಕವಾದ ತಪಸ್ಸನ್ನು ಮಾಡಿದರೆಂದು ತಿಳಿಯುತ್ತದೆ. ಹೀಗೆ ಆಲೋಚನಾರ್ಥವನ್ನು ವಿವಕ್ಷಿಸಿದರೆ ಚತುರ್ಮುಖಬ್ರಹ್ಮದೇವರಿಗೆ ಅಜ್ಞಾನವಿದೆಯೆಂದು ಹೇಳಿದಂತಾಗುತ್ತದೆ. ಇದನ್ನು ನಿರಾಕರಿಸುವುದಕ್ಕೋಸ್ಕರ 'ಯಸ್ಯ ಜ್ಞಾನಮಯಂ ತಪಃ' ಎಂದು ತಪಶ್ಶಬ್ದಕ್ಕೆ ಪೂರ್ಣಜ್ಞಾನತ್ವವೆಂಬ ಅರ್ಥವನ್ನು ಹೇಳಿದ್ದಾರೆ. ಇದರಿಂದ ಸರ್ವಜ್ಞತ್ವಕ್ಕೆ ಹೇತುವನ್ನು ಹೇಳಿದಂತಾಗುತ್ತದೆ. 'ಉಕ್ತಾರ್ಥೇ ಹೇತುತಯಾ' ಎಂದರೆ ಪೂರ್ಣಜ್ಞಾನತ್ವಕ್ಕೆ ಕಾರಣವನ್ನಾಗಿ ಹೇಳಲ್ಪಟ್ಟ ಸಾರ್ವಜ್ಞೋಕ್ತಿಯಿಂದ ಎಂದರ್ಥ.

**सूत्रखण्डस्यार्थान्तरमाहेति । सूत्रे विशेषणशब्दस्य न केवलं सर्वज्ञत्व-विशेषणादित्येवार्थः, किन्तु अक्षरात्परतः परत्वविशेषणादित्यप्यर्थः । एवं भेदशब्दस्य हिरण्यगर्भाद्रुद्राद्वा भेदमात्रं नार्थः, किन्त्वक्षरव्यक्तीनां भेदोऽपि । तथा चाक्षराणां भेदव्यपेशादक्षरात्परतः परत्वमक्षरस्यैव विशेषणमित्यपि सूत्रयोजनेति भाष्यार्थ इत्यर्थः ।**

ಟೀಕೆಯಲ್ಲಿ 'ಸೂತ್ರಖಂಡಸ್ಯಾರ್ಥಾಂತರಮಾಹ' ಎಂದು ಹೇಳಿದ್ದಾರೆ. ಇದರ ಅರ್ಥ ಹೀಗಿದೆ - ಸೂತ್ರದಲ್ಲಿರುವ ವಿಶೇಷಣಪದವು ಕೇವಲ ಸರ್ವಜ್ಞತ್ವ ಮೊದಲಾದ ವಿಶೇಷಣಗಳಿರುವುದರಿಂದ ಎಂದಷ್ಟೇ ಅರ್ಥವನ್ನು ಹೇಳುತ್ತಿಲ್ಲ ಹೊರತಾಗಿ, 'ಅಕ್ಷರಾತ್ ಪರತಃ ಪರತ್ವ' ಎಂಬ ವಿಶೇಷಣವಿರುವುದರಿಂದ ಎಂಬರ್ಥವನ್ನೂ ಹೇಳುತ್ತಿದೆ. ಇದರಂತೆ ಸೂತ್ರದಲ್ಲಿರುವ ಭೇದವೆಂಬ

ಶಬ್ದವು ಹಿರಣ್ಯಗರ್ಭನಿಂದ, ಅಥವಾ ರುದ್ರನಿಂದಷ್ಟೇ ಭೇದವನ್ನು ಹೇಳುತ್ತಿಲ್ಲ ಹೊರತಾಗಿ ಅಕ್ಷರವ್ಯಕ್ತಿಗಳ ಭೇದವನ್ನೂ ಸಹ ಹೇಳುತ್ತಿದೆ. ಆದ್ದರಿಂದ ಅಕ್ಷರವ್ಯಕ್ತಿಗಳಲ್ಲಿ ಭೇದವ್ಯಪದೇಶವಿರುವುದರಿಂದ ಅಕ್ಷರಾತ್ಪರತಃ ಪರತ್ವವು ಅಕ್ಷರನಾಮಕನಾದ ಭಗವಂತನಿಗೇ ವಿಶೇಷಣವಾಗಿದೆ ಎಂದೂ ಸೂತ್ರವನ್ನು ಯೋಜನೆ ಮಾಡಬೇಕು. ಹೀಗೆ ಭಾಷ್ಯಕಾರರ ಅಭಿಪ್ರಾಯವಿದೆಯೆಂದು 'ಸೂತ್ರಖಂಡಸ್ಯ' ಎಂಬ ಟೀಕೆಯ ಅಭಿಪ್ರಾಯ.

**'इत्युक्त्वा प्रतीयते' इति भाष्ये क्रिययोस्समानकर्तृकत्वाभावेऽपि क्त्वाप्रत्ययः**

**'यदोर्वंशं नरः श्रुत्वा सर्वपापैः प्रमुच्यते ।'**

**इतिवद्द्रष्टव्यः ।।**

**।। इति श्रीब्रह्मण्यतीर्थपूज्यश्रीपादशिष्यव्यासतीर्थविरचितायां तात्पर्यचन्द्रिकायाम् अदृश्यत्वाधिकरणं सम्पूर्णम् ।।**

'ಇತ್ಯುಕ್ತ್ವಾ ಪ್ರತೀಯತೇ' ಎಂದು ಭಾಷ್ಯದಲ್ಲಿ ಹೇಳಿದ್ದಾರೆ. 'ಇತ್ಯುಕ್ತ್ವಾ' ಎಂದರೆ ಶ್ರುತಿಯು ಹೀಗೆ ಹೇಳಿ, 'ಪ್ರತೀಯತೇ' ಎಂದರೆ ನಮಗೆ ತೋರುತ್ತದೆ ಎಂದರ್ಥ. ಕ್ರಿಯೆಯು ಶ್ರುತಿಯಲ್ಲಿದೆ, ಪ್ರತೀತಿಯು ನಮ್ಮಲ್ಲಿದೆ. ಹೀಗಿರುವಾಗ ಕ್ರಿಯೆಗೆ ಸಮಾನಕರ್ತೃಕತ್ವವನ್ನು ಹೇಳಿದಂತಾಗಲಿಲ್ಲ. ಎಲ್ಲಿ ಸಮಾನಕರ್ತೃಕತ್ವವಿರುತ್ತದೋ ಅಲ್ಲಷ್ಟೇ 'ಕ್ತ್ವಾ' ಪ್ರತ್ಯಯವನ್ನು ಪ್ರಯೋಗಿಸಬೇಕಲ್ಲವೇ? ಎಂದು ಪ್ರಶ್ನಿಸಬಹುದು. 'ಯದೋರ್ವಂಶಂ ನರಃ ಶ್ರುತ್ವಾ ಸರ್ವಪಾಪೈಃ ಪ್ರಮುಚ್ಯತೇ'' ಮನುಷ್ಯನು ಯದುವಂಶವನ್ನು ಕೇಳಿ ಸರ್ವಪಾಪಗಳಿಂದ ಮುಕ್ತನಾಗುತ್ತಾನೆ ಎಂಬ ಪ್ರಯೋಗದಂತೆ ಇದೂ ಸಹ ಸಾಧುವಾಗುತ್ತದೆಂದು ತಿಳಿಯಬೇಕು.

ಇಲ್ಲಿಗೆ ತಾತ್ಪರ್ಯಚಂದ್ರಿಕೆಯ ಕನ್ನಡಾನುವಾದದಲ್ಲಿ ಅದೃಶ್ಯತ್ವಾಧಿಕರಣವು ಸಮಾಪ್ತವಾಯಿತು.

**प्रकाशः —**

**केचित्त्विति ।।** अत्र ''अथ परा'' इत्यादिवाक्ये प्रधानपुरुषौ प्रतिपाद्येते उत परमात्मेति संशये,

ವಿವರಣೆ - ರಾಮಾನುಜರ ಅಧಿಕರಣ ಶರೀರ ಹೀಗಿದೆ - 'ಅಥ ಪರಾ' ಇತ್ಯಾದಿ ವಾಕ್ಯದಲ್ಲಿ ಪ್ರತಿಪಾದ್ಯರಾದವರು ಪ್ರಕೃತಿ ಹಾಗೂ ಪುರುಷರೋ? ಅಥವಾ ಪರಮಾತ್ಮನೋ ? ಎಂದು ಸಂದೇಹ.

**प्रकाशः** – ''यत्तदद्रेश्यम्'' इत्यादिना पृथिव्याद्यचेतनगतदृश्यत्वादीनां निषेधात्, तज्जातीयमचेतनं प्रधानमेवादृश्यत्वादिगुणकं भूतयोन्यक्षरम्, ''अक्षरात्परतः परः'' इति तु तस्याधिष्ठाता पुरुष एवेति तावेवात्र प्रतिपाद्याविति प्राप्ते,

'ಯತ್ತದದ್ರೇಶ್ಯಮ್' ಇತ್ಯಾದಿ ವಾಕ್ಯದಿಂದ ಪೃಥಿವೀ ಮೊದಲಾದ ಜಡಪದಾರ್ಥಗಳಲ್ಲಿ ದೃಶ್ಯತ್ವ ಮೊದಲಾದ ಧರ್ಮಗಳನ್ನು ನಿಷೇಧ ಮಾಡಲಾಗಿದೆ. ಅಂತಹ ದೃಶ್ಯತ್ವಾದಿಗಳಿಗೆ ಅಧಿಷ್ಠಾನವಾದದ್ದೂ ಸಹ ಪೃಥಿವ್ಯಾದಿಗಳಿಗೆ ಸಮಾನಜಾತೀಯವಾದ ಜಡಪದಾರ್ಥವೇ ಆಗಬೇಕು. ಅಂದರೆ ಪ್ರಕೃತಿಯೇ ಅದೃಶ್ಯತ್ವಾದಿಗುಣಗಳಿಗೆ ಆಧಾರವಾಗಿದೆಯೆಂದು ಹೇಳಬೇಕು. ಅಂತಹ ಪ್ರಕೃತಿಯು ಭೂತಗಳಿಗೆ ಕಾರಣವಾಗಿದೆ. ಮತ್ತು ಅಕ್ಷರಶಬ್ದವಾಚ್ಯವಾಗಿದೆ. 'ಅಕ್ಷರಾತ್ಪರತಃ ಪರಃ' ಎಂದರೆ ಅಕ್ಷರನಾಮಕವಾದ ಪ್ರಕೃತಿಗೆ ಅಧಿಷ್ಠಾನನಾದ ಜೀವನೆಂದರ್ಥ. ಹೀಗೆ ಪ್ರಕೃತಿ ಹಾಗೂ ಜೀವರು 'ಅಥ ಪರಾ' ಎಂಬ ಶ್ರುತಿಯಿಂದ ಪ್ರತಿಪಾದ್ಯರಾಗಿದ್ದಾರೆಂದು ಪೂರ್ವಪಕ್ಷ.

**प्रकाशः** – प्रधानपुरुषयोरसम्भावितस्य सार्वज्ञ्यादिधर्मस्योक्तेः फलाभिसन्धि-रहितकर्माराध्यत्वपरापरविद्याविषयत्वादिना विशेष्यमाणत्वात्, अक्षराद् अव्याकृताद् भूतसूक्ष्मात्परतः समष्टिपुरुषात् पर इति भेदव्यपदेशात्, ''अग्निर्मूर्धा'' इत्यादिना जगद्रूपोपन्यासाच्च न प्रधानजीवावत्रोच्येते, किन्तु परमात्मैवेत्याहुरित्यर्थः ।

ಪ್ರಕೃತಿ ಹಾಗೂ ಪುರುಷರಲ್ಲಿ ಅಸಂಭಾವಿತವಾದ ಸರ್ವಜ್ಞತ್ವ ಮೊದಲಾದ ಧರ್ಮಗಳನ್ನು ಶ್ರುತಿ ಹೇಳುತ್ತಿದೆ. ಹಾಗೂ ಫಲದ ಅಭಿಲಾಷೆಯಿಲ್ಲದೆ ಮಾಡಲ್ಪಟ್ಟ ಕರ್ಮದಿಂದ ಆರಾಧ್ಯನಾಗಿರುವಿಕೆ. ಪರಾಪರವಿದ್ಯೆಗೆ ವಿಷಯನಾಗಿರುವಿಕೆ ಮೊದಲಾದ ಗುಣಗಳನ್ನು ಹೇಳಿರುವುದರಿಂದ ಪ್ರಕೃತಿ ಹಾಗೂ ಪುರುಷರು ಶ್ರುತಿಪ್ರತಿಪಾದ್ಯರಾಗುವುದಿಲ್ಲ. ಹೊರತಾಗಿ ಪರಮಾತ್ಮನೇ ಪ್ರತಿಪಾದ್ಯನಾಗುತ್ತಾನೆ. 'ಅಕ್ಷರಾತ್ಪರತಃ ಪರಃ ಎಂಬ ಶ್ರುತಿಗೆ ಹೀಗರ್ಥ - ಅಕ್ಷರಾತ್ = ಅವ್ಯಾಕೃತವಾದ ಭೂತಸೂಕ್ಷ್ಮಕ್ಕಿಂತ, ಪರತಃ = ಶ್ರೇಷ್ಠನಾದ ಸಮಷ್ಟಿಪುರುಷನಿಗಿಂತ (ನಿತ್ಯಮುಕ್ತಜೀವನಿಗಿಂತ) ಪರಃ = ಶ್ರೇಷ್ಠನಾದವನು ಎಂದು. ಹೀಗೆ ಭೂತಸೂಕ್ಷ್ಮಕ್ಕಿಂತ ಮತ್ತು ಪುರುಷನಿಗಿಂತ ಭೇದವು ಹೇಳಲ್ಪಟ್ಟಿರುವುದರಿಂದ ಪ್ರಕೃತಿಪುರುಷರು ಪ್ರತಿಪಾದ್ಯರಾಗುವುದಿಲ್ಲ. ಮತ್ತು 'ಅಗ್ನಿರ್ಮೂರ್ಧಾ' ಇತ್ಯಾದಿ ವಾಕ್ಯದಿಂದ ಜಗದ್ರೂಪವು ಹೇಳಲ್ಪಟ್ಟಿದೆ. ಪ್ರಕೃತಿ ಹಾಗೂ ಜೀವರಿಗೆ ಜಗದ್ರೂಪತ್ವವು ಕೂಡುವುದಿಲ್ಲ. ಆದ್ದರಿಂದ ಪರಮಾತ್ಮನೇ ಶ್ರುತಿಪ್ರತಿಪಾದ್ಯನೆಂದು ಸಿದ್ಧಾಂತ.

**प्रकाशः** – तदुक्तं –

दृश्यत्वादेर्निषेधो विकृतिमति भवत्यक्षरे सन्निकर्षा-
त्पञ्चायुक्ताक्षरं यत्तदवधिकपरः पञ्चविंशोऽस्तु मा भूत् ।

ಪರಿಪೂರ್ಣಚಂದ್ರಿಕಾ

सर्वज्ञत्वादिदृष्टेः प्रथमसमुदितं त्वक्षरं ब्रह्म शुद्धं
पश्चादुक्तं तु जीवादिकमवधितया भेदतस्तत्परोक्तेः ।। इति ।

ತಮ್ಮ ಸಿದ್ಧಾಂತವನ್ನು ರಾಮಾನುಜರು ಶ್ಲೋಕದಲ್ಲಿ ಹೀಗೆ ಸಂಗ್ರಹಿಸಿದ್ದಾರೆ -

ದೃಶ್ಯತ್ವಾದೇರ್ನಿಷೇಧೋ ವಿಕೃತಿಮತಿ ಭವತ್ಯಕ್ಷರೇ ಸನ್ನಿಕರ್ಷಾತ್
ಪಂಚಾಯುಕ್ತಾಕ್ಷರಂ ಯತ್ತದವಧಿಕಪರಃ ಪಂಚವಿಂಶೋಽಸ್ತು ಮಾ ಭೂತ್ ।
ಸರ್ವಜ್ಞತ್ವಾದಿದೃಷ್ಟೇಃ ಪ್ರಥಮಸಮುದಿತಂ ತ್ವಕ್ಷರಂ ಬ್ರಹ್ಮ ಶುದ್ಧಂ
ಪಶ್ಚಾದುಕ್ತಂ ತು ಜೀವಾದಿಕಮವಧಿತಯಾ ಭೇದತಸ್ತತ್ಪರೋಕ್ತೇಃ ॥

ಎಂಬುದಾಗಿ ಪೃಥಿವ್ಯಾದಿಗಳಲ್ಲಿರುವ ದೃಶ್ಯತ್ವಾದಿಗಳ ನಿಷೇಧವನ್ನು ವಿಕಾರವುಳ್ಳ ಅಕ್ಷರವೆನಿಸಿದ ಪ್ರಧಾನದಲ್ಲೇ ಮಾಡಬೇಕು. ಏಕೆಂದರೆ ಪೃಥೀವೀ ಪದದ ಮುಂದೆ ಹತ್ತಿರದಲ್ಲಿ ಪ್ರಧಾನವು ಪ್ರಸಕ್ತವಾಗಿರುವುದರಿಂದ. ಹತ್ತಿರದಲ್ಲಿರುವುದರಿಂದಲೇ ಪಂಚಮ್ಯಂತವಾದ ಅಕ್ಷರಶಬ್ದದಿಂದಲೂ ಪ್ರಧಾನವೇ ಪ್ರತಿಪಾದ್ಯವಾಗುತ್ತದೆ. ಪ್ರಧಾನವೇ ಅವಧಿಯಾಗಿವುಳ್ಳ ಉತ್ತಮನು ಯಾರೆಂದರೆ ಇಪ್ಪತ್ತೈದನೆಯ ತತ್ತ್ವವೆನಿಸಿದ ಜೀವನು.

ಈ ಪೂರ್ವಪಕ್ಷ ಸರಿಯಿಲ್ಲ. ಮೊದಲು ಸರ್ವಜ್ಞತ್ವಾದಿ ಧರ್ಮಗಳಿಂದ ಪ್ರಸಕ್ತನಾದ ಅಕ್ಷರವೆಂದರೆ ಶುದ್ಧಬ್ರಹ್ಮನೇ ಆಗುತ್ತಾನೆ. ಅನಂತರ ಭಿನ್ನತ್ವೇನ ಪ್ರಸಕ್ತವಾದ ಅಕ್ಷರವೆಂದರೆ ಪ್ರಧಾನ ಅಥವಾ ಜೀವಾದಿಗಳು ಆಗುತ್ತವೆ. ಏಕೆಂದರೆ 'ಪರತಃ' ಎಂಬ ಅವಧಿಪೂರ್ವಕವಾಗಿ ಭೇದವನ್ನು ಹೇಳಿರುವುದರಿಂದ.

**प्रकाशः** – जीवत्वशङ्केति । उपलक्षणमेतत्, मन्मतरीत्या निरवकाशोपादानत्वादिना पूर्वपक्षसम्भवे सावकाशदृश्यत्वादिनिषेधेनेह नियमेन अचेतनोपस्थित्ययोगात्,

ಗ್ರಂಥದಲ್ಲಿ ಜೀವನೆಂಬ ಶಂಕೆ ಕೂಡುವುದಿಲ್ಲವೆಂದು ಹೇಳಿದ್ದು ಕೇವಲ ಉಪಲಕ್ಷಣವಾಗಿದೆ - ನಮ್ಮ ಮತದ ಪ್ರಕಾರ ನಿರವಕಾಶವಾದ ಉಪಾದಾನತ್ವಾದಿಗಳಿಂದಲೇ ಸುಲಭವಾಗಿ ಪೂರ್ವಪಕ್ಷವನ್ನು ಮಾಡಲು ಬರುವಾಗ ಸಾವಕಾಶವಾದ ದೃಶ್ಯತ್ವಾದಿಧರ್ಮಗಳನ್ನು ನಿಷೇಧ ಮಾಡುವ ಮೂಲಕ ಪೂರ್ವಪಕ್ಷ ಮಾಡುವುದು ತಪ್ಪಾಗುತ್ತದೆ. ಅಂದರೆ ಜಡಭೂತವಾದ ವಸ್ತುವಿನಲ್ಲಿರುವ ದೃಶ್ಯತ್ವವನ್ನು ನಿಷೇಧಮಾಡಿದ ಮಾತ್ರದಿಂದ ನಿಯಮೇನ ಜಡದ ಉಪಸ್ಥಿತಿಯೇ ಬರುತ್ತದೆಂಬ ನಿಯಮವಿರುವುದಿಲ್ಲ.

**प्रकाशः** –"अवर्णमचक्षुःश्रोत्रम्" इत्यादिना चेतनधर्मब्राह्मणत्वादिवर्णचक्षुरादि-करणनिषेधेनेह भूतयोनिश्चेतन इत्यपि वक्तुं शक्यत्वेन तेन प्रधानमात्रपूर्वपक्षा-योगात् । द्वितीयसूत्रे अक्षरव्यक्तीनां भेदव्यपदेशासिद्धेः तेन प्रकृतिनिरासस्य क्लिष्टत्वादित्यपि ज्ञेयम् ।।

ಮತ್ತು ಅಚೇತನಧರ್ಮವನ್ನು ನಿಷೇಧ ಮಾಡುವ ಪ್ರಯುಕ್ತ ಅದಕ್ಕೆ ಆಶ್ರಯವಾದದ್ದೂ ಸಹ ಅಚೇತನವೇ ಆಗುತ್ತದೆಂಬ ನಿಯಮವನ್ನು ನೀವು ಹೇಳುವುದಾದರೆ ಅದೇ ಶ್ರುತಿಯಲ್ಲಿಯೇ

"ಅವರ್ಣಮಚಕ್ಷುಃಶ್ರೋತ್ರಮ್" ಇತ್ಯಾದಿಯಾಗಿ ಚೇತನನ ಧರ್ಮವೆನಿಸಿದ ಬ್ರಾಹ್ಮಣತ್ವವೇ ಮೊದಲಾದ ವರ್ಣಗಳು, ಚಕ್ಷುರಿಂದ್ರಿಯಾದಿ ಇಂದ್ರಿಯಗಳು ಮೊದಲಾದ ಚೇತನನ ಧರ್ಮವನ್ನು ನಿಷೇಧ ಮಾಡಲಾಗಿದೆ. ಆದ್ದರಿಂದ ಅದಕ್ಕೆ ಆಶಯವಾಗಿ ಚೇತನವೇ ಅಕ್ಷರನಾಗಿದ್ದಾನೆಂದೂ ಸಹ ಹೇಳಬಹುದು. ಆದ್ದರಿಂದ ನಿಷೇಧಮಾಡುವ ಪ್ರಯುಕ್ತ ಪ್ರಧಾನವು ಮಾತ್ರವೇ ಪೂರ್ವಪಕ್ಷಕ್ಕೆ ವಿಷಯವಾಗಲು ಸಾಧ್ಯವಿಲ್ಲ.

ಮತ್ತು ಎರಡನೆಯ ಸೂತ್ರವನ್ನು ವ್ಯಾಖ್ಯಾನಿಸುವಾಗ ಅಕ್ಷರವ್ಯಕ್ತಿಗಳಿಗೆ ಈವರೆಗೂ ಭೇದವ್ಯಪದೇಶವು ಸಿದ್ಧವಾಗಿಲ್ಲ. ಆದ್ದರಿಂದ ಪ್ರಕೃತಿಯನ್ನು ನಿರಾಸಮಾಡುವುದೂ ಸಹ ಅತ್ಯಂತ ಕ್ಲಿಷ್ಟವಾಗಿದೆಯೆಂದು ತಿಳಿಯಬೇಕು.

**प्रकाशः** – यत्तु कश्चिदाह – अदृश्यत्वादिगुणकं प्रधानं जीवो वा शिवो वेति विशये, महदादिपरिणामिनो भूतयोनित्वसम्भवात् प्रधानमक्षरं, "प्रधानममृताक्षरम्" इति श्वेताश्वतरश्रुतौ अमृतशब्दे जीवेऽक्षरपदप्रयोगात् जीवो वेति प्राप्ते, सार्वज्ञ्यादितद्धर्मोक्तेः शिव एवेति,

ಶೈವರ ಅಧಿಕರಣ ಶರೀರ ಹೀಗಿದೆ - ಅದೃಶ್ಯತ್ವಾದಿಗುಣಗಳುಳ್ಳದ್ದು ಪ್ರಧಾನವೋ, ಜೀವನೋ, ಅಥವಾ ಶಿವನೋ ಎಂದು ಸಂಶಯ. ಮಹದಾದಿತತ್ವರೂಪದಲ್ಲಿ ಪರಿಣಾಮವನ್ನು ಹೊಂದಿರುವ ವಸ್ತುವೇ ಭೂತಯೋನಿಯಾಗುತ್ತದೆ. ಆದ್ದರಿಂದ ಪ್ರಕೃತಿಯು ಅಕ್ಷರಶಬ್ದವಾಚ್ಯವಾಗುತ್ತದೆ. 'ಪ್ರಧಾನಮಮೃತಾಕ್ಷರಮ್' ಎಂದು ಶ್ವೇತಾಶ್ವತರಶ್ರುತಿಯಲ್ಲಿ ಅಮೃತಶಬ್ದದಿಂದ ಪ್ರತಿಪಾದ್ಯನಾದ ಜೀವನಲ್ಲಿ ಅಕ್ಷರಪದವನ್ನು ಪ್ರಯೋಗಿಸಲಾಗಿದೆ. ಇದರಿಂದ ಜೀವನೂ ಸಹ ಅಕ್ಷರನಾಗಬಹುದು. ಇಷ್ಟು ಪೂರ್ವಪಕ್ಷ. ಸಾರ್ವಜ್ಞ ಮೊದಲಾದ ಧರ್ಮಗಳನ್ನು ಶ್ರುತಿ ಹೇಳುತ್ತಿರುವುದರಿಂದ ಶಿವನೇ ಅದೃಶ್ಯತ್ವಾದಿಗುಣವುಳ್ಳ ಅಕ್ಷರನಾಗಿದ್ದಾನೆಂದು ಸಿದ್ಧಾಂತ.

**प्रकाशः** – तन्न, "नारायणाद्ब्रह्मा जायते" "नारायणाद्रुद्रो जायते" "रुद्रस्य शिर उत्पिपेष"

'न यस्येन्द्रो वरुणो न मित्रो व्रतमर्यमा न मिनन्ति रुद्रः' । इत्यादिना जननमरणाज्ञानादिमति रुद्रे मुख्यसार्वज्ञ्यायोगात् ।

ಇದು ತಪ್ಪು. "ನಾರಾಯಣಾದ್ಬ್ರಹ್ಮಾ ಜಾಯತೇ" "ನಾರಾಯಣಾದ್ರುದ್ರೋ ಜಾಯತೇ" ಇತ್ಯಾದಿ ಶ್ರುತಿಯಿಂದ ನಾರಾಯಣನಿಂದ ರುದ್ರನು ಜನಿಸಿದ್ದಾನೆಂದು ತಿಳಿಯುತ್ತದೆ. "ರುದ್ರಸ್ಯ ಶಿರ ಉತ್ಪಿಪೇಷ" ಎಂಬ ಶ್ರುತಿಯಿಂದ ರುದ್ರನಿಗೆ ಮರಣವೂ ತಿಳಿಯುತ್ತಿದೆ. 'ನ ಯಸ್ಯೇಂದ್ರೋ ವರುಣೋ ನ ಮಿತ್ರೋ ವ್ರತಮರ್ಯಮಾ ನ ಮಿನಂತಿ ರುದ್ರಃ' ಎಂಬುದರಿಂದ ಅಜ್ಞಾನವು ರುದ್ರನಲ್ಲಿ ಪ್ರತೀತವಾಗುತ್ತಿದೆ. ಹೀಗೆ ಜನನ, ಮರಣ, ಅಜ್ಞಾನಾದಿ ದೋಷಗಳಿಂದ ಯುಕ್ತನಾದ ರುದ್ರನಲ್ಲಿ ಮುಖ್ಯವಾದ ಸರ್ವಜ್ಞತ್ವವನ್ನು ಹೇಳಲು ಸಾಧ್ಯವಿಲ್ಲ.

**प्रकाशः –**

'तत्कर्म हरितोषं यत्सा विद्या तन्मतिर्यया ।'

"अथ परा यया स हरिर्वेदितव्यो योऽसावदृश्यो निर्गुणः परः परमात्मा" "ऋगाद्या अपराः विद्याः" इत्यादिवचनसिद्धपरविद्याविषयत्वरूपविष्णुलिङ्गविरोधेन, शिव इति सिद्धान्तस्यानुदयात् ।

ಮತ್ತು 'ತತ್ಕರ್ಮ ಹರಿತೋಷಂ ಯತ್ಸಾ ವಿದ್ಯಾ ತನ್ಮತಿರ್ಯಯಾ ।' 'ಅಥ ಪರಾ ಯಯಾ ಸ ಹರಿರ್ವೇದಿತವ್ಯೋ ಯೋಽಸಾವದೃಶ್ಯೋ ನಿರ್ಗುಣಃ ಪರಃ ಪರಮಾತ್ಮಾ'' ''ಋಗಾದ್ಯಾ ಅಪರಾಃ ವಿದ್ಯಾಃ'' ಇವೇ ಮೊದಲಾದ ಶ್ರುತಿಗಳಿಂದ ಪರವಿದ್ಯಾವಿಷಯನಾದವನೇ ಅಕ್ಷರಶಬ್ದವಾಚ್ಯನಾಗಿದ್ದಾನೆಂದು ಸಿದ್ಧವಾಗುತ್ತದೆ. ಪರವಿದ್ಯಾವಿಷಯತ್ವವು ವಿಷ್ಣುವಿನ ಲಿಂಗವೇ ಆಗಿದೆ. ಹೀಗೆ ವಿಷ್ಣುಲಿಂಗದ ವಿರೋಧವಿರುವ ಪ್ರಯುಕ್ತ ಶಿವನು ಅಕ್ಷರಶಬ್ದವಾಚ್ಯನಾಗುತ್ತಾನೆಂಬ ಸಿದ್ಧಾಂತವು ಹುಟ್ಟುವುದಿಲ್ಲ.

**प्रकाशः** – "अन्यम्" इति प्रसिद्धेशशब्दिताद्रुद्रादस्य भूतयोन्यक्षरस्य भेदोक्तेश्च ।

'तामक्षरं परं प्राहुः परतः परमक्षरम् ।
हरिमेव........................ ॥'

इत्यादिस्मृतिविरोधाच्च । आथर्वणभाष्योदाहृतानेकवचनजातविरोधाच्चेत्यादि ध्येयम् ।

ಮತ್ತು 'ಅನ್ಯಮೀಶಮ್' ಎಂಬುದಾಗಿ ಶ್ರುತಿಯು ಈಶಶಬ್ದದಿಂದ ಪ್ರತಿಪಾದ್ಯನಾದ ರುದ್ರನಿಗಿಂತ ಭೂತಯೋನಿಗೆ ಕಾರಣನಾದ ಅಕ್ಷರನಿಗೆ ಭೇದವನ್ನು ಹೇಳುತ್ತಿದೆ. ಮತ್ತು 'ತಾಮಕ್ಷರಂ ಪರಂ ಪ್ರಾಹುಃ ಪರತಃ ಪರಮಕ್ಷರಮ್ । ಹರಿಮೇವ .................. ॥' ಇತ್ಯಾದಿ ಗೀತಾತಾತ್ಪರ್ಯದಾಹೃತ ಸ್ಮೃತಿಯು ಅಕ್ಷರಾತ್ಪರತಃ ಪರನಾದವನು ವಿಷ್ಣುವೇ ಎಂದು ಪ್ರತಿಪಾದಿಸುತ್ತಿದೆ. ಇದರ ವಿರೋಧವೂ ಸಹ ಬರುತ್ತದೆ. ಇದರ ಜೊತೆಗೆ ಆಥರ್ವಣಭಾಷ್ಯದಲ್ಲಿ ಉದಾಹರಿಸಲ್ಪಟ್ಟ ಅನೇಕ ವಚನಗಳ ವಿರೋಧವೂ ಸಹ ಬರುತ್ತದೆಂದು ತಿಳಿಯಬೇಕು.

**प्रकाशः** – "यथोर्णनाभिस्सृजते गृह्णते च" इति श्रवणात् 'ऊर्णनाभ्यादिदृष्टान्तेन' इति वाच्ये 'पृथिवी' इत्याद्युक्तिः टीकायां न युक्तेत्याशङ्क्याह – श्रुताविति ।

ಟೀಕೆಯ ಕೆಲವು ಕಠಿಣಪದಗಳ ಅರ್ಥವನ್ನು ಗ್ರಂಥಕಾರರು ಬರೆಯುತ್ತಿದ್ದಾರೆ. 'ಪೃಥಿವ್ಯಾದಿದೃಷ್ಟಾಂತೇನ' ಎಂದು ಗ್ರಂಥದಲ್ಲಿ ಹೇಳಿದ್ದಾರೆ. ಆದರೆ 'ಯಥೋರ್ಣನಾಭಿಸ್ಸೃಜತೇ ಗೃಹ್ಣತೇ ಚ' ಎಂದು ಶ್ರುತಿಯ

ಪ್ರಾರಂಭವಿರುವುದರಿಂದ 'ಊರ್ಣನಾಭ್ಯಾದಿದೃಷ್ಟಾಂತೇನ' ಎಂದು ಹೇಳಬೇಕಿತ್ತಲ್ಲವೇ? ಎಂಬ ಪ್ರಶ್ನೆಗೆ 'ಶ್ರುತೌ' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

**प्रकाशः** – ''ऊर्णनाभिपृथिव्यादिदृष्टान्तेन अक्षरस्य जगदुपादानत्वमुक्त्वा'' इति तत्त्वप्रदीपवाक्यं तु अतद्गुणसंविज्ञानाश्रयेण वा, ऊर्णनाभिदेहस्योपादानत्वाभिप्रायेण वा कथञ्चिन्नेयमिति भावः ।

ಹಾಗಾದರೆ ತತ್ತ್ವಪ್ರದೀಪದಲ್ಲಿ ''ಊರ್ಣನಾಭಿಪೃಥಿವ್ಯಾದಿದೃಷ್ಟಾಂತೇನ ಅಕ್ಷರಸ್ಯ ಜಗದುಪಾದಾನತ್ವಮುಕ್ತ್ವಾ'' ಊರ್ಣನಾಭಿ, ಪೃಥಿವೀ ಮೊದಲಾದ ದೃಷ್ಟಾಂತಗಳನ್ನು ಹೇಳುವ ಮೂಲಕ ಅಕ್ಷರನಿಗೆ ಜಗದುಪಾದಾನತ್ವವನ್ನು ಹೇಳಿ ಎಂದು ವ್ಯಾಖ್ಯಾನಿಸಿದ್ದಾರೆ. ಈ ವಾಕ್ಯಕ್ಕೆ ಹೇಗೆ ಅರ್ಥೈಸುವುದು ಎಂದರೆ ಹೀಗೆ - 'ಅತದ್‌ಗುಣಸಂವಿಜ್ಞಾನ ಬಹುವ್ರೀಹಿ ಸಮಾಸ'ವನ್ನು ಆಶ್ರಯಿಸಿದಾಗ ಊರ್ಣನಾಭಿಯನ್ನು ಬಿಟ್ಟು ಪೃಥಿವ್ಯಾದಿದೃಷ್ಟಾಂತದಿಂದ ಎಂಬರ್ಥವು ತಿಳಿಯುತ್ತದೆ. ಅಥವಾ ಜೇಡರ ಬಲೆಗೆ ಜೇಡರಹುಳುವಿನ ಶರೀರವು ಉಪಾದಾನಕಾರಣವಾಗಿದೆಯೆಂದು ಕಥಂಚಿತ್ ವ್ಯಾಖ್ಯಾನಿಸಬೇಕೆಂದು ತಿಳಿಯಬೇಕು.

**प्रकाशः** – ''तच्च तस्याम् अक्षरात्परत इति सामानाधिकरण्येनोपपन्नम्'' इति वाक्यं सामानाधिकरण्ये हेतूक्त्या व्यनक्ति – **चित्प्रकृतेरिति ।**

''ತಚ್ಚ ತಸ್ಯಾಮ್ ಅಕ್ಷರಾತ್ಪರತ ಪರಃ ಇತಿ ಸಾಮಾನಾಧಿಕರಣ್ಯೇನೋಪಪನ್ನಮ್'' ಎಂದು ಟೀಕಾ ವಚನವನ್ನು ಸಾಮಾನಾಧಿಕರಣ್ಯದಲ್ಲಿ ಹೇತುವನ್ನಾಗಿ ಹೇಳಿದ್ದಾರೆಂದು ಗ್ರಂಥಕಾರರು 'ಚಿತ್ಪ್ರಕೃತೇಃ' ಎಂಬ ವಾಕ್ಯದಿಂದ ವ್ಯಾಖ್ಯಾನಿಸುತ್ತಿದ್ದಾರೆ.

**प्रकाशः** – द्वितीयसूत्रे – ''तपसा चीयते ब्रह्म'' इत्यत्र अज्ञानप्रतीतौ तन्निरासाय ''यस्य ज्ञानमयं तपः'' इत्युक्तार्थे हेतुतया अदृश्यत्वादिगुणकस्य सार्वज्ञ्यविशेषणोक्तेः'' इति वाक्यं व्यनक्ति – **तपसेति ।**

ಎರಡನೆಯ ಸೂತ್ರದಲ್ಲಿ - ''ತಪಸಾ ಚೀಯತೇ ಬ್ರಹ್ಮ'' ಇತ್ಯತ್ರ ಅಜ್ಞಾನಪ್ರತೀತೌ ತನ್ನಿರಾಸಾಯ 'ಯಸ್ಯ ಜ್ಞಾನಮಯಂ ತಪಃ' ಇತ್ಯುಕ್ತಾರ್ಥೇ ಹೇತುತಯಾ ಅದೃಶ್ಯತ್ವಾದಿಗುಣಕಸ್ಯ ಸಾರ್ವಜ್ಞ್ಯವಿಶೇಷಣೋಕ್ತೇಃ' ''ತಪಸಾ ಚೀಯತೇ ಬ್ರಹ್ಮ'' ಎಂಬ ವಾಕ್ಯದಿಂದ ಬ್ರಹ್ಮದೇವರಿಗೆ ಅಜ್ಞಾನವಿದೆಯೆಂಬ ಪ್ರತೀತಿಯು ಬರುತ್ತದೆ. ಅದನ್ನು ನಿರಾಕರಿಸುವುದಕ್ಕಾಗಿ 'ಯಸ್ಯ ಜ್ಞಾನಮಯಂ ತಪಃ' ಎಂಬುದಾಗಿ ಹಿಂದೆ ಹೇಳಿದ ಅರ್ಥದಲ್ಲಿ ಹೇತುವನ್ನಾಗಿ ಅದೃಶ್ಯತ್ವಾದಿಗುಣಗಳಿಗೆ ಸಾರ್ವಜ್ಞ್ಯವಿಶೇಷಣವನ್ನು ಹೇಳಲಾಗಿದೆ'' ಎಂಬ ಟೀಕೆಯಲ್ಲಿರುವ ಈ ವಾಕ್ಯವನ್ನು 'ತಪಸಾ' ಎಂಬ ಗ್ರಂಥದಿಂದ ವ್ಯಾಖ್ಯಾನಿಸುತ್ತಿದ್ದಾರೆ.

**प्रकाशः** – तपसा सम्बध्यते, ब्रह्म कर्तृ, अतपदिति फलितोऽर्थः । अर्थान्तरं विशदयति – **सूत्रेति** । पूर्वपक्षभाष्ये अनुपपत्तिं समाधत्ते – **इत्युक्त्वेति** ।

ಪರಿಪೂರ್ಣಚಂದ್ರಿಕಾ

ತಪಸ್ಸಿನಿಂದ ಬ್ರಹ್ಮನು ಸಂಬಂಧವನ್ನು ಹೊಂದುತ್ತಾನೆಂದು 'ತಪಸಾ ಚೀಯತೇ ಬ್ರಹ್ಮ' ಎಂಬ ಶ್ರುತಿಗೆ ಅರ್ಥ. ಅಂದರೆ ಬ್ರಹ್ಮನು ಕರ್ತೃ ತಪಸ್ಸನ್ನು ಆಚರಿಸಿದನು ಎಂದು ಫಲಿತಾರ್ಥ. ಮತ್ತೊಂದು ವ್ಯಾಖ್ಯಾನವನ್ನು 'ಸೂತ್ರ' ಎಂಬುದರಿಂದ ಸ್ಪಷ್ಟಪಡಿಸುತ್ತಿದ್ದಾರೆ. ಪೂರ್ವಪಕ್ಷಭಾಷ್ಯದಲ್ಲಿರುವ ಅನುಪಪತ್ತಿಗೆ ಸಮಾಧಾನವನ್ನು ನೀಡುತ್ತಿದ್ದಾರೆ 'ಇತ್ಯುಕ್ತ್ವಾ' ಎಂಬುದಾಗಿ.

**प्रकाशः** – तत्र यथा 'वर्तमानः' इत्यधाहारस्तथाऽत्रापि, 'इत्युक्त्वा' 'श्रुते वाक्ये' इति वा ''इत्यभिधानात् परतः परः प्रतीयते'' इति वा अध्याहारेण योज्यमिति भावः ।।

**।। इति श्रीमत्सर्वतन्त्रस्वतन्त्रसुधीन्द्रतीर्थगुरुपादशिष्यराघवेन्द्रयतिकृते चन्द्रिकाप्रकाशे अदृश्यत्वाधिकरणं सम्पूर्णम् ।।**

ಭಾಗವತದಲ್ಲಿರುವ 'ಯದೋರ್ವಂಶಂ ನರಃ ಶ್ರುತ್ವಾ ಸರ್ವಪಾಪೈಃ ಪ್ರಮುಚ್ಯತೇ' ಎಂಬಲ್ಲಿ 'ಶ್ರುತ್ವಾ' ಎಂಬ ಪದದ ಅನಂತರ 'ವರ್ತಮಾನಃ' ಎಂಬ ಪದವನ್ನು ಅಧ್ಯಾಹಾರ ಮಾಡಿಕೊಳ್ಳುತ್ತೇವೋ, ಆದರಂತೆ 'ಇತ್ಯುಕ್ತ್ವಾ ಪ್ರತೀಯತೇ' ಎಂಬಲ್ಲಿಯೂ ಸಹ 'ಇತ್ಯುಕ್ತ್ವಾ' ಎಂಬ ಪದದ ಅನಂತರ 'ಶ್ರುತೇ ವಾಕ್ಯೇ' ಎಂಬುದಾಗಿ ಅಥವಾ 'ಇತ್ಯಭಿಧಾನಾತ್ ಪರತಃ ಪರಃ ಪ್ರತೀಯತೇ' ಎಂಬುದಾಗಿ ಅಧ್ಯಾಹಾರ ಮಾಡಿಕೊಂಡು ಭಾಷ್ಯದ ಅರ್ಥವನ್ನು ತಿಳಿದುಕೊಳ್ಳಬೇಕು.

ಇಲ್ಲಿಗೆ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ ಪ್ರಕಾಶಟಿಪ್ಪಣಿಯ ಕನ್ನಡಾನುವಾದದಲ್ಲಿ ಅದೃಶ್ಯತ್ವಾಧಿಕರಣವು ಮುಕ್ತಾಯವಾಯಿತು.

* * * * * * *

ಶ್ರೀಕೃಷ್ಣಾರ್ಪಣಮಸ್ತು.

**गुरुराजीयम्** – नन्वित्युक्त्वा प्रतीयत इति वचनं प्रति श्रुतेः कर्तृत्वात्प्रतीतिं प्रति पुरुषस्य कर्तृत्वेन समानकृत्वाभावात् क्त्वाप्रत्ययानुपपत्तिरित्यत आह – इत्युक्त्वेति ।। श्रवणं प्रति पुरुषस्य मोचनं प्रति च पापानां कर्तृत्वेन समानकर्तृत्वाभावेन क्त्वाप्रत्ययानुपपत्तिः । यदि च तत्र श्रुत्वा स्थित इति

शेषपूरणेन समानकर्तृत्वं तर्हि प्रकृतेऽपि विचार्यमाण इति शेषपूरणेन समानकर्तृत्वमित्यभिप्रायः ॥

॥ इति श्रीकेशवभट्टारकेण विरचितायां भावदीपिकायाम्
अदृश्यत्वाधिकरणं सम्पूर्णम् ॥ ६ ॥




ಅದೃಶ್ಯತ್ವಾದಿಗುಣವುಳ್ಳದ್ದು ಪ್ರಕೃತಿ, ಅಕ್ಷರಾತ್ಪರತಃ ಪರನಾದವನು ಜೀವನೆಂದು ಪೂರ್ವಪಕ್ಷಮಾಡಿ ಎರಡೂ ಸಹ ಪರಮಾತ್ಮನೇ ಎಂದು ರಾಮಾನುಜರು ಸಿದ್ಧಾಂತ ಮಾಡಿದ್ದಾರೆ. ಇದು ತಪ್ಪು. ಏಕೆಂದರೆ

'ದಿವ್ಯೋ ಹ್ಯಮೂರ್ತಃ ಪುರುಷಃ ಸ ಬಾಹ್ಯಾಭ್ಯಂತರೋ ಹ್ಯಜಃ ।
ಅಪ್ರಾಣೋ ಹ್ಯಮನಾಶ್ಶುಭ್ರೋ ಅಕ್ಷರಾತ್ಪರತಃ ಪರಃ' ॥

ಎಂಬುದಾಗಿ ದಿವ್ಯತ್ವ, ಅಮೂರ್ತತ್ವ ವ್ಯಾಪ್ತತ್ವ, ಪ್ರಾಣತ್ವ ಮೊದಲಾದ ಧರ್ಮಗಳಿಂದ ಅಕ್ಷರಾತ್ಪರತಃ ಪರವು ವಿಶಿಷ್ಟವಾಗಿದೆಯೆಂದು ಶ್ರುತಿ ಹೇಳುತ್ತಿದೆ. ಆದರೆ ಜೀವನಲ್ಲಿ ಅಮೂರ್ತತ್ವ ಮೊದಲಾದ ಯಾವುದೇ ಧರ್ಮಗಳು ಇರುವುದಿಲ್ಲ. ಆದ್ದರಿಂದ ಜೀವನು ಅಕ್ಷರಾತ್ಪರತಃ ಪರನಾಗುತ್ತಾನೆಂದು ಶಂಕೆಯೇ ಹುಟ್ಟುವುದಿಲ್ಲ.



# ಅದೃಶ್ಯತ್ವಾಧಿಕರಣ

(೧-೨-೬)

## ಭಾಗ -೩

ನ್ಯಾಯವಿವರಣ, ನ್ಯಾಯವಿವರಣಪಂಚಿಕಾ,
ಅಣುಭಾಷ್ಯ, ತತ್ವಮಂಜರೀ,
ತಂತ್ರದೀಪಿಕಾ, ನ್ಯಾಯಮುಕ್ತಾವಳಿ ಗ್ರಂಥಗಳ
ಸರಳ ಕನ್ನಡ ಅನುವಾದ

* * *

ಸೂತ್ರಾರ್ಥರತ್ನಾವಳಿ ಗ್ರಂಥದ ಸಂಸ್ಕೃತ ಮೂಲ

॥ ಶ್ರೀಗುರುಭ್ಯೋ ನಮಃ ॥

श्रीमदानन्दतीर्थभगवत्पादाचार्यविरचितम्

# न्यायविवरणम्

श्री जयतीर्थविरचिता

# न्यायविवरणपञ्चिका

## अदृश्यत्वाधिकरणम् (१।२।६)

**न्यायविवरणम् – 'अक्षरात् परतः परः' इति श्रुतेरपि नाक्षरात् सम्भवतीत्यस्याः निरवकाशत्वम् । अक्षरात् परतः परस्याप्यक्षरान्तरत्ववचनात् ॥**

ಅಕ್ಷರಾತ್ ಪರತಃ ಪರಃ' ಎಂಬ ಶ್ರುತಿಗಿಂತಲೂ ಅಕ್ಷರಾತ್ ಸಂಭವತೀಹ ವಿಶ್ವಮ್ ಎಂಬ ಶ್ರುತಿಗೆ ನಿರವಕಾಶತ್ವವನ್ನು ಹೇಳಬಾರದು. ಏಕೆಂದರೆ ಜಗತ್ತಿಗೆ ಕಾರಣವಾದ ಅಕ್ಷರಕ್ಕೆ ಈ ಶ್ರುತಿಯಲ್ಲಿ ಅಕ್ಷರನಿಂದ ಉತ್ತಮೋತ್ತಮತ್ವವು ಹೇಳಲ್ಪಟ್ಟಿದೆ. ಅಕ್ಷರನಿಂದ ಉತ್ತಮೋತ್ತಮತ್ವ, ಹಾಗೂ ಅಕ್ಷರಶಬ್ದಪ್ರತಿಪಾದ್ಯತ್ವ ಒಬ್ಬನೇ ವ್ಯಕ್ತಿಗೆ ಅಸಂಭಾವಿತವಲ್ಲ. ಮೂರು ಬಗೆಯ ಅಕ್ಷರಗಳಿರುವುದರಿಂದ ಮುಖ್ಯವಾದ ಅಕ್ಷರಶಬ್ದವಾಚ್ಯನು ವಿಷ್ಣುವಾಗಿದ್ದಾನೆಂದಭಿಪ್ರಾಯ.

**टीका – ॐ अदृश्यत्वादिगुणको धर्मोक्तेः ॐ ॥ 'यत् तदद्रेश्यम्' इत्युक्तं विष्णोरन्यत्रैव स्यात् । तस्मिन् 'अक्षरात् सम्भवतीह विश्वम्' इत्यक्षरशब्दश्रवणात् । तस्य च प्रधानादौ रूढत्वात् ।**

'ಅಕ್ಷರಾತ್ ಸಂಭವತೀಹ ವಿಶ್ವಮ್' ಎಂಬಲ್ಲಿ ಅಕ್ಷರಶಬ್ದವು ಪ್ರಕೃತ್ಯಾದಿಗಳಲ್ಲಿ ರೂಢವಾಗಿದೆ. ಆದ್ದರಿಂದ 'ಯತ್ ತದದ್ರೇಶ್ಯಮ್' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ಅದೃಶ್ಯತ್ವವು ವಿಷ್ಣುವಿಗೆ ಯುಕ್ತವಾಗುವುದಿಲ್ಲ; ಹೊರತು ಅಂತಹ ಪ್ರಕೃತ್ಯಾದಿಗಳೇ ಅದೃಶ್ಯತ್ವಾದಿಗುಣಗಳುಳ್ಳವುಗಳು. ಏಕೆಂದರೆ, ಅಕ್ಷರಶಬ್ದವು ಪ್ರಕೃತ್ಯಾದಿಗಳಲ್ಲಿ ರೂಢವಾಗಿದೆ.

**यद्यपि पूर्ववददृश्यत्वादिबलेन रूढिं परित्यज्य योगवृत्त्याऽक्षरशब्दो विष्णौ सम्भवति । तथाप्यत्र न विष्णुविषयोऽङ्गीकर्तुं शक्यते ।**

ವಸ್ತುತಃ ಹಿಂದಿನಅಧಿಕರಣದಲ್ಲಿ ಅದೃಶ್ಯತ್ವಾದಿಲಿಂಗಗಳ ಬಲದಿಂದ ರೂಢಿಯನ್ನು ಬಿಟ್ಟು ಯೌಗಿಕವೃತ್ತಿಯಿಂದ ವಿಷ್ಣುವಿನಲ್ಲಿ ಅಕ್ಷರಶಬ್ದಪ್ರತಿಪಾದ್ಯತ್ವವನ್ನು ಹೇಳಬಹುದು. ಆದರೂ ಸಹ ಪ್ರಕೃತ ಅಕ್ಷರಶಬ್ದವಾಚ್ಯತ್ವವನ್ನು ವಿಷ್ಣುವಿಗೆ ಹೇಳಲು ಸಾಧ್ಯವಿಲ್ಲ.

**'अक्षरात् परतः परः' इत्युत्तरश्रुत्या अस्माददृश्यत्वादिगुणकाद् विश्वयोनेरक्षरात् परतः परस्याभिधानात् । न हि विष्णोः परोऽङ्गीक्रियते । इत्येवं प्राप्ते**

ಏಕೆಂದರೆ 'ಅಕ್ಷರಾತ್ ಪರತಃ ಪರಃ' ಎಂಬ ಮುಂದಿನ ಶ್ರುತಿಯಿಂದ ಅದೃಶ್ಯತ್ವಾದಿಗುಣಗಳುಳ್ಳ ಜಗತ್ತಿಗೆ ಕಾರಣವಾದ ಅಕ್ಷರದಿಂದ ಉತ್ತಮೋತ್ತಮತ್ವವನ್ನು ವಿಷ್ಣುವಿನಲ್ಲಿ ಹೇಳಲಾಗಿದೆ. ಅಕ್ಷರಶಬ್ದದಿಂದ ವಿಷ್ಣು ಪ್ರತಿಪಾದ್ಯನಾದರೆ ಅವನಿಗಿಂತ ಉತ್ತಮನಾದ ಮತ್ತೊಬ್ಬ ವ್ಯಕ್ತಿಯು ಇರಬೇಕಾಗುತ್ತದೆ. ಇಷ್ಟು ಪೂರ್ವಪಕ್ಷ.

**समाधत्ते – अक्षरादिति ।। 'श्रुतेः' इति पञ्चमी । अस्याः श्रुतेरिति वर्तते ।**

ಈ ಪೂರ್ವಪಕ್ಷಕ್ಕೆ 'ಅಕ್ಷರಾತ್ ಪರತಃ ಪರಃ' ಎಂಬ ಶ್ರುತಿಯಿಂದ ಸಮಾಧಾನವನ್ನು ಹೇಳುತ್ತಿದ್ದಾರೆ. 'ಶ್ರುತೇಃ' ಎಂಬುದು ಪಂಚಮ್ಯಂತವಾದ ಪದವಾಗಿದೆ. 'ಅಸ್ಯಾಃ ಶ್ರುತೇಃ' ಎಂದು ಶೇಷಪೂರಣಮಾಡಿಕೊಂಡು ಅನ್ವಯ ಹೇಳಬೇಕು.

**अक्षरात् परतः पराभिधात्र्यामुक्तश्रुतौ विद्यमानायामपि 'अक्षरात् सम्भवतीह विश्वम्' इत्यक्षरश्रुतेः विष्णौ निरवकाशत्वं नास्तीत्यर्थः ।**

ಅಕ್ಷರನಿಂದ ಉತ್ತಮೋತ್ತಮತ್ವವನ್ನು ಹೇಳುವ ಅಕ್ಷರಾತ್ ಪರತಃ ಪರ ಎಂಬ ಶ್ರುತಿರಬಹುದು. ಆದರೂ ಸಹ 'ಅಕ್ಷರಾತ್ ಸಂಭವತೀಹ ವಿಶ್ವಮ್' ಅಕ್ಷರನಿಂದ ಈ ಜಗತ್ತು ಹುಟ್ಟುತ್ತದೆ ಎಂಬಅಕ್ಷರ ಶ್ರುತಿಯು ವಿಷ್ಣುವಿನಲ್ಲಿ ನಿರವಕಾಶವಾಗುವುದಿಲ್ಲ. ಅಂದರೆ ಈ ಶ್ರುತಿಯಲ್ಲಿರುವ ಅಕ್ಷರಶಬ್ದದಿಂದಲೂ ವಿಷ್ಣುವೇ ವಾಚ್ಯನಾಗುತ್ತಾನೆಂದರ್ಥ.

**कुतः? अस्यैव विश्वयोनेरक्षरस्याक्षरात् परतः परत्वमुत्तरश्रुत्योच्यते । न त्वेतत्प्रतियोगिकपरत्वं वाऽनन्य इत्यङ्गीकारात् ।**

ಏಕೆಂದರೆ, 'ಅಕ್ಷರಾತ್ ಸಂಭವತೀಹ ವಿಶ್ವಮ್' ಎಂಬ ಶ್ರುತಿಯು ಯಾವ ವ್ಯಕ್ತಿಗೆ ಜಗತ್ಕಾರಣತ್ವವನ್ನು ಹೇಳುತ್ತಿದೆಯೋ ಅದೇ ವ್ಯಕ್ತಿಗೇ 'ಅಕ್ಷರಾತ್ ಪರತಃ ಪರಃ' ಎಂಬ ಶ್ರುತಿಯು

ಉತ್ತಮೋತ್ತಮತ್ವವನ್ನು ಹೇಳುತ್ತಿದೆ. ಹೊರತು ಜಗತ್ಕಾರಣನಾದ ವ್ಯಕ್ತಿಪ್ರತಿಯೋಗಿಕವಾದ ಪರತ್ವವನ್ನು ಬೇರೆಯವರಿಗೆ ಹೇಳುತ್ತಿಲ್ಲ ಎಂದು ಅಂಗೀಕರಿಸಲಾಗಿದೆ.

**अक्षरात् परतः परत्वं चाक्षरत्वं चैकस्यैव व्याहतमित्यत आह – अक्षरादिति ।।**

ಒಬ್ಬನೇ ವ್ಯಕ್ತಿಗೆ ಅಕ್ಷರನಿಂದ ಉತ್ತಮೋತ್ತಮತ್ವವು ಹಾಗೂ ಉತ್ತಮತ್ವವು ಕೂಡುವುದಿಲ್ಲವೆಂದು ಹೇಳಬಾರದು. ಏಕೆಂದರೆ, ವ್ಯಾಹತಿ ಬರುತ್ತದೆಂಬ ಆಕ್ಷೇಪಕ್ಕೆ 'ಅಕ್ಷರಾತ್ ಪರತಃ ಪರಃ' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

**स्यादियं व्याहतिर्यदि 'यस्मादक्षरात् परतः परः, तदेवाक्षरं स्वयमिति ब्रूमः । न चैवम् । 'अपरं त्वक्षरं या सा' इत्यादिनाऽक्षरत्रयाभिधानेनाक्षरात् परतः परस्याप्यक्षरान्तरत्ववचनात् ।**

ಈ ವ್ಯಾಹತಿದೋಷವು ಬರುತ್ತಿತ್ತು. ಒಂದು ವೇಳೆ ಯಾವ ವ್ಯಕ್ತಿಯು ಅಕ್ಷರನಿಗಿಂತ ಉತ್ತಮೋತ್ತಮನಾಗಿದ್ದಾನೋ ಅವನೇ ಸ್ವತಃ ಅಕ್ಷರನೂ ಆಗಿದ್ದಾನೆಂದು ಹೇಳಿದ್ದರೆ. ಹಾಗೆ ಹೇಳುವುದಿಲ್ಲ. ಹೊರತಾಗಿ 'ಅಪರಂ ತ್ವಕ್ಷರಂ ಯಾ ಸಾ' ಇತ್ಯಾದಿಯಾಗಿ ಪ್ರಮಾಣವಿದೆ. ಮೂರುಪದಾರ್ಥಗಳು ಅಕ್ಷರವೆನಿಸಿವೆ. ಅವುಗಳಲ್ಲಿ ಮೊದಲನೆಯ ಅಕ್ಷರವು ಜಡರೂಪವಾಗಿದೆ. ಅದಕ್ಕಿಂತ ಉತ್ತಮವಾದ ಅಕ್ಷರವೆಂದರೆ ಲಕ್ಷ್ಮೀದೇವಿ. ಅವಳಿಗಿಂತ ಉತ್ತಮನಾದ ಅಕ್ಷರನೆಂದರೆ ಭಗವಂತನೆಂದು ತಿಳಿಯಬೇಕು. ಹೀಗೆ ಪ್ರಮಾಣವಚನದಲ್ಲಿ ಹೇಳಿದ್ದರಿಂದ ಅಕ್ಷರನಿಂದ ಉತ್ತಮೋತ್ತಮನಿಗೂ ಅಕ್ಷರಾಂತರತ್ವವು ಯುಕ್ತವಾಗುತ್ತದೆ. ಆದ್ದರಿಂದ ಮುಖ್ಯತಃ ಅಕ್ಷರಶಬ್ದವಾಚ್ಯನಾದವನು ವಿಷ್ಣುವೇ ಆಗುತ್ತಾನೆ.

**परविद्याविषयत्वबलेन प्रकृतिपरित्यागाप्रकृतग्रहणयोरुपपत्तेरिति ।।**

ಹೀಗೆ ಅರ್ಥವನ್ನು ಹೇಳಿದರೆ ಪ್ರಕೃತವಾದ ಪ್ರಧಾನವೆಂಬ ಅಕ್ಷರಶಬ್ದಾರ್ಥವನ್ನು ಬಿಟ್ಟು ಅಪ್ರಕೃತವಾದ ವಿಷ್ಣುವೆಂಬರ್ಥವನ್ನು ಸ್ವೀಕರಿಸಿದಂತಾಗಿ ಪ್ರಕೃತಹಾನ ಹಾಗೂ ಅಪ್ರಕೃತಕಲ್ಪನಾ ಎಂಬ ದೋಷಗಳು ಬರುತ್ತವಲ್ಲವೇ? ಎಂದು ಪ್ರಶ್ನಿಸಬಾರದು. ಪರವಿದ್ಯಾವಿಷಯತ್ವವೆಂಬ ಲಿಂಗದ ಬಲದಿಂದ ಇದು ದೋಷವಾಗುವುದಿಲ್ಲ. ಪ್ರಬಲವಾದ ಬಾಧಕವಿದ್ದಾಗ ಪ್ರಕೃತಹಾನ, ಅಪ್ರಕೃತಕಲ್ಪನೆಗಳು ದೋಷವಾಗುವುದಿಲ್ಲವೆಂದರ್ಥ.

ಶ್ರೀಜಯತೀರ್ಥಭಿಕ್ಷುಗಳಿಂದ ರಚಿತವಾದ ನ್ಯಾಯವಿವರಣೆಯ ಟೀಕೆಯ
ಕನ್ನಡಾನುವಾದದಲ್ಲಿ ಅದೃಶ್ಯತ್ವಾಧಿಕರಣವು ಸಮಾಪ್ತವಾಯಿತು.
ಪರಿಪೂರ್ಣಚಂದ್ರಿಕಾ

श्रीमदानन्दतीर्थभगवत्पादाचार्यविरचितम्

# अणुभाष्यम्

## अदृश्यत्वाधिकरणम् (१।२।६)

दृश्यत्वावुज्झीतस्तदा

ಅಣುಭಾಷ್ಯ - ಅದೃಶ್ಯತ್ವಾದಿಗುಣಗಳಿಂದ ಕೂಡಿದವನೂ ಸಹ ಪರಮಾತ್ಮನೇ ಆಗಿದ್ದಾನೆ.

***

श्री आनन्दतीर्थभगवत्पादाचार्यविरचितम्

ब्रह्मसूत्राणुभाष्यम्

श्रीराघवेन्द्रतीर्थविरचिता

ब्रह्मसूत्राणुभाष्यविवृतिः

# तत्वमञ्जरी

## अदृश्यत्वाधिकरणम् (१।२।६)

नन्वथापि यदुक्तं 'यं पृथिवी न वेद', 'अदृयेऽनात्म्ये' इत्यादिना विष्णोरदृश्यत्वादिकं तदाथर्वणे 'अथ परा यया तदक्षरमधिगम्यते', 'यत्तदद्रेश्यमग्राह्यम्' इत्यादिनाऽक्षरस्योच्यते ।

ಹಿಂದಿನ ಅಧಿಕರಣದಲ್ಲಿ 'ಯಂ ಪೃಥಿವೀ ನ ವೇದ' ಎಂಬ ಶ್ರುತಿಯಿಂದ ಆನಂದಮಯಾಧಿಕರಣದಲ್ಲಿ 'ಅದೃಶ್ಯೇऽನಾತ್ಮ್ಯೇ' ಎಂಬ ಶ್ರುತಿಯಿಂದ ಅದೃಶ್ಯತ್ವಾದಿಗಳು ವಿಷ್ಣುವಿನ ಧರ್ಮವೆಂದು ಪ್ರತಿಪಾದಿಸಲಾಯಿತು. ಇದು ತಪ್ಪು. ಏಕೆಂದರೆ ಅಥರ್ವಣೋಪನಿಷತ್ತಿನಲ್ಲಿ 'ಅಥ ಪರಾ ಯಯಾ ತದಕ್ಷರಮಧಿಗಮ್ಯತೇ'

ಎಂಬುದಾಗಿ ಮತ್ತು 'ಯತ್ತದದ್ರೇಶ್ಯಮಗ್ರಾಹ್ಯಮ್' ಎಂಬುದಾಗಿ ಅದೃಶ್ಯತ್ವಾದಿಗಳು ಅಕ್ಷರದ ಧರ್ಮವಾಗಿವೆ ಎಂದು ಹೇಳಲಾಗಿದೆ.

**तच्चाक्षरं 'यथा पृथिव्यामोषधयः सम्भवन्ति' इति दृष्टान्तपूर्वकं 'अक्षरात्सम्भवतीह विश्वम्' इति विश्वोपादानकारणत्वेनाक्षरात्परतः पर इत्युत्कर्षावधित्वेन च श्रुतमित्यनुपादाने सर्वोत्कृष्टे विष्णावनुपपन्नं सत् चिदचित्प्रकृतिविरिञ्चिरुद्रा वा तदन्यतममेव वा ब्रह्म ईशश्रुत्यादिप्रापकवशादुपेयमित्यतः प्राप्तम् - अदृश्यत्वादिगुणक इत्यादियोगत्रयम् ।**

ಅಂತಹ ಅಕ್ಷರವು 'ಯಥಾ ಪೃಥಿವ್ಯಾಮೋಷಧಯಃ ಸಂಭವಂತಿ' ಎಂಬುದಾಗಿ ದೃಷ್ಟಾಂತಪೂರ್ವಕವಾಗಿ 'ಅಕ್ಷರಾತ್ ಸಂಭವತೀಹ ವಿಶ್ವಮ್' ಎಂದು ವಿಶ್ವಕ್ಕೆ ಉಪಾದಾನಕಾರಣವಾಗಿದೆಯೆಂದು ಹೇಳಲ್ಪಟ್ಟಿದೆ. ಅಷ್ಟೇ ಅಲ್ಲದೆ 'ಅಕ್ಷರಾತ್ ಪರತಃ ಪರಃ' ಎಂಬುದಾಗಿ ಪರಮೋತ್ಕೃಷ್ಟವಾದ ಮತ್ತೊಂದು ವಸ್ತುವಿಗೆ ಅಕ್ಷರವು ಅವಧಿಯಾಗಿದೆಯೆಂದು ಶ್ರುತವಾಗಿದೆ. ಆದ್ದರಿಂದ ವಿಶ್ವಕ್ಕೆ ಉಪಾದಾನಕಾರಣನಾಗದ ಪರಮೋತ್ಕೃಷ್ಟನಾದ ವಿಷ್ಣು ಅಕ್ಷರಶಬ್ದದಿಂದ ವಾಚ್ಯನಾಗುವುದಿಲ್ಲ. ಆದ್ದರಿಂದಲೇ ಅದೃಶ್ಯತ್ವವು ವಿಷ್ಣುವಿನ ಧರ್ಮವಾಗುವುದಿಲ್ಲ. ಹೊರತಾಗಿ ಚಿತ್ಪ್ರಕೃತಿ, ಅಚಿತ್‌ಪ್ರಕೃತಿ, ಚತುರ್ಮುಖಬ್ರಹ್ಮ, ರುದ್ರ, ಇವರುಗಳು ಅದೃಶ್ಯತ್ವಾದಿಧರ್ಮಗಳಿಗೆ ಆಶ್ರಯರಾಗುತ್ತಾರೆ. ಅಥವಾ ಇವರಲ್ಲಿ ಯಾರಾದರೊಬ್ಬರೂ ಸಹ ಅದೃಶ್ಯತ್ವಾದಿಧರ್ಮವುಳ್ಳವರು ಆಗಬಹುದು. ಏಕೆಂದರೆ, ಬ್ರಹ್ಮಶ್ರುತಿ ಈಶಶ್ರುತಿ ಮೊದಲಾದವುಗಳು ಆಧಾರವಾಗಿವೆ. ಎಂಬ ಶಂಕೆಗೆ ಉತ್ತರಿಸುವುದಕ್ಕಾಗಿ ''ಅದೃಶ್ಯತ್ವಾದಿಗುಣಕಃ'' ಇವೇ ಮೊದಲಾದ ಮೂರು ಸೂತ್ರಗಳು ಹೊರಟಿವೆ.

**तदर्थः - दृश्यत्वाद्युज्झितः सदेति । पूर्ववदनुवषङ्गः । स प्राक् 'अदृश्येऽनात्म्ये' इत्यादिनोक्तः एको विष्णुरेव दृश्यत्वाद्युज्झितः । न तु चित्प्रकृत्यादिरनेकः ।**

ಈ ಅದೃಶ್ಯತ್ವಾಧಿಕರಣದ ಸಾರವನ್ನು 'ದೃಶ್ಯತ್ವಾದ್ಯುಜ್ಝಿತಃ ಸದಾ' ಎಂಬ ಅಣುಭಾಷ್ಯದಿಂದ ಸಂಗ್ರಹಿಸಿದ್ದಾರೆ. 'ಸ ಏಕಃ ವಿಷ್ಣುರೇವ ದೃಶ್ಯತ್ವಾದ್ಯುಜ್ಝಿತಃ' ಎಂಬುದನ್ನು ಹಿಂದಿನಂತೆ ಇಲ್ಲಿಯೂ ಸಹ ಅನುಷಂಗ ಮಾಡಬೇಕು. ಹಿಂದೆ ಅದೃಶ್ಯೇऽನಾತ್ಮ್ಯೇ' ಎಂಬ ಶ್ರುತಿಯಲ್ಲಿ ಅದೃಶ್ಯತ್ವಾದಿಧರ್ಮಗಳಿಂದ ವಿಶಿಷ್ಟನಾದ ವಿಷ್ಣುವೇ 'ಯತ್ತದದ್ರೇಶ್ಯಮ್' ಎಂಬ ಪ್ರಕೃತ ಶ್ರುತಿಯಲ್ಲಿಯೂ ಸಹ ಅದೃಶ್ಯತ್ವಾದಿಧರ್ಮಗಳುಳ್ಳವನೆಂದು ಶ್ರುತನಾಗಿದ್ದಾನೆ. ಅಂದರೆ ಅದೃಶ್ಯತ್ವಾದಿಧರ್ಮಗಳುಳ್ಳ ಅಕ್ಷರಪದವಾಚ್ಯನಾಗಿದ್ದಾನೆಂದರ್ಥ; ಹೊರತು ಚಿತ್‌ಪ್ರಕೃತ್ಯಾದಿಗಳಲ್ಲ.

**कुतः । लिङ्गैः सर्वैर्युतो हि । 'अथ परा यया तदक्षरमधिगम्यते' इति, 'यः सर्वज्ञः' इति, 'रुग्मवर्णं कर्तारमीशम्' इति परविद्याविष्यत्वसार्वज्ञरूपान्तरा – मिश्ररुग्मवर्णाद् एतत्प्रकरणस्थसर्वलिङ्गयुतत्वादित्यर्थः ।**

ಚಿತ್‌ಪ್ರಕೃತಿ, ಅಚಿತ್‌ಪ್ರಕೃತಿ ಮೊದಲಾದವುಗಳು ಏಕೆ ಅಕ್ಷರಪದವಾಚ್ಯವಲ್ಲ? ಎಂಬ ಪ್ರಶ್ನೆಗೆ 'ಲಿಂಗೈಃ ಸರ್ವೈರ್ಯುತೋ ಹಿ' ಎಂಬುದರಿಂದ ಉತ್ತರಿಸಲಾಗಿದೆ. ಅಂದರೆ 'ಅಥ ಪರಾ ಯಯಾ ತದಕ್ಷರಮಧಿಗಮ್ಯತೇ' 'ಯಃ ಸರ್ವಜ್ಞಃ' 'ರುಗ್ಮವರ್ಣಂ ಕರ್ತಾರಮ್' ಇವೇ ಮೊದಲಾದ ಶ್ರುತಿಗಳಲ್ಲಿ ಪರವಿದ್ಯಾವಿಷಯತ್ವ, ಸರ್ವಜ್ಞತ್ವ, ಬೇರೆ ರೂಪಗಳಿಂದ ಮಿಶ್ರವಾಗದ ಭಂಗಾರವರ್ಣ ಮೊದಲಾದ ಲಿಂಗಗಳಿಂದ ಕೂಡಿರುವ ಈ ಪ್ರಕರಣವು ವಿಷ್ಣುವನ್ನೇ ಪ್ರತಿಪಾದಿಸುತ್ತಿದೆ. ಈ ಎಲ್ಲ ಧರ್ಮಗಳು ವಿಷ್ಣುವಿನಲ್ಲಿ ಅಸಾಧಾರಣವಾಗಿವೆ ಎಂದರ್ಥ.

एतैर्लिङ्गैर्युतो दृश्यत्वाद्युज्झितो विष्णुरेव । तेषां लिङ्गानां भाष्योक्तश्रुत्यादिभिः विष्णौ प्रसिद्धेरिति वाऽर्थः ।

ಈ ವಿಷ್ಣುವಿನ ಅಸಾಧಾರಣಧರ್ಮಗಳ ಬಲದಿಂದ ಅದೃಶ್ಯತ್ವಧರ್ಮವುಳ್ಳವನು ವಿಷ್ಣುವೇ ಆಗಿದ್ದಾನೆಂದು ನಿರ್ಣಯಿಸಬಹುದು. ಏಕೆಂದರೆ ಆ ಎಲ್ಲಾ ಲಿಂಗಗಳೂ ಭಾಷ್ಯದಲ್ಲಿ ಉದಾಹರಿಸಿದ ಶ್ರುತಿ ಸ್ಮೃತಿಗಳ ಆಧಾರದಿಂದ ವಿಷ್ಣುವಿನಲ್ಲೇ ಪ್ರಸಿದ್ಧವಾಗಿವೆ. 'ಲಿಂಗೈಃ ಸರ್ವೈರ್ಯುತೋ ಹಿ' ಎಂಬುದಕ್ಕೆ ಹೀಗೆಯೂ ಅರ್ಥೈಸಬಹುದು.

अक्षरशब्दस्य नपुंसकलिङ्गत्वेन दृश्यत्वाद्युज्झितमिति वाच्ये पुल्लिङ्गोक्तिः विष्णुपदान्वयाय वा, 'परतः परः' इत्युक्तपरवस्त्वपेक्षया वा ।

ಅಕ್ಷರಶಬ್ದವು ನಪುಂಸಕಲಿಂಗವಾದ್ದರಿಂದ 'ದೃಶ್ಯತ್ವಾದ್ಯುಜ್ಝಿತಮ್' ಎಂದು ಆಚಾರ್ಯರು ಹೇಳಬೇಕಿತ್ತು. ಆದರೂ ಸಹ ಪುಲ್ಲಿಂಗವನ್ನು ಪ್ರಯೋಗಿಸಿದ್ದರಿಂದ ವಿಷ್ಣುಪದದ ಜೊತೆಗೆ ದೃಶ್ಯತ್ವಾದ್ಯುಜ್ಝಿತ ಎಂಬ ಪದಕ್ಕೆ ಅನ್ವಯ ಎಂಬುದನ್ನು ಸೂಚಿಸಿದ್ದಾರೆ. ಅಥವಾ 'ಪರತಃ ಪರಃ' ಎಂದು ಹೇಳಲ್ಪಟ್ಟ ಪರವಸ್ತುವನ್ನು ಅಪೇಕ್ಷಿಸಿಯೂ ಸಹ ಪುಲ್ಲಿಂಗವನ್ನು ಪ್ರಯೋಗಿಸಿದ್ದಾರೆ.

तेन 'यत्तदद्रेश्यम्' इत्यादिना दृश्यत्वादिहीनं, 'अक्षरात्सम्भवति' इति कारणत्वेनोक्तम् 'अक्षरात्परतः परः' इति परत्वेनोक्तं च वस्त्वेकमिति दर्शितत्वरत् परावध्यक्षरमन्यदिति सूचनान्न परावधित्वं दृश्यत्वाद्युज्झिताक्षरस्य विष्णुत्वे बाधकम् । 'अक्षरात्संभवति' इति पञ्चम्यपि कारणत्वमात्रे नतूपादनत्व इति भावः ।

ಹೀಗೆ ಹೇಳಿದ್ದರಿಂದ ಮತ್ತೊಂದು ಪ್ರಯೋಜನವನ್ನು ಸೂಚಿಸಿದಂತಾಯಿತು. ಅದೇನೆಂದರೆ 'ಯತ್ತದದ್ರೇಶ್ಯಮ್' ಇತ್ಯಾದಿಯಾದ ಶ್ರುತಿಯಲ್ಲಿ ದೃಶ್ಯತ್ವಾದಿಗುಣಗಳಿಂದ ರಹಿತನೆಂದು ಪ್ರತಿಪಾದಿತನಾದ 'ಅಕ್ಷರಾತ್ ಸಂಭವತಿ' ಇತ್ಯಾದಿ ಶ್ರುತಿಯಲ್ಲಿ ಜಗತ್ಕಾರಣನೆಂದು ಪ್ರತಿಪಾದಿತನಾದ, 'ಅಕ್ಷರಾತ್ ಪರತಃ ಪರಃ' ಎಂಬ ಶ್ರುತಿಯಲ್ಲಿ ಸರ್ವೋತ್ಕೃಷ್ಟನೆಂದು ಪ್ರತಿಪಾದಿತನಾದ ವ್ಯಕ್ತಿಯು ಒಬ್ಬನೇ ಆಗಿದ್ದಾನೆಂದು ತೋರಿಸಿದ್ದಾರೆ. ಇಂತಹ ಸರ್ವೋತ್ಕೃಷ್ಟವಾದ ವಸ್ತುವಿಗೆ ಅವಧಿಯಾಗಿರುವ ಅಕ್ಷರವು ಬೇರೆಯಾಗಿದೆಯೆಂದು ಸೂಚಿಸಿದ್ದರಿಂದಲೂ, ಅಕ್ಷರವು ಸರ್ವೋತ್ಕೃಷ್ಟವಾದ ವಸ್ತುವಿಗೆ ಅವಧಿಯಾಗಿದೆ. ದೃಶ್ಯತ್ವಾದಿರಹಿತವಾದ ಅಕ್ಷರಪದವಾಚ್ಯತ್ವವು ವಿಷ್ಣುವಿಗೆ ಬಾಧಕವಾಗುವುದಿಲ್ಲ. ಇನ್ನು 'ಅಕ್ಷರಾತ್ ಸಂಭವತಿ' ಎಂಬಲ್ಲಿರುವ

ಪಂಚಮೀವಿಭಕ್ತಿಯು ಕೇವಲ ಕಾರಣತ್ವವನ್ನು ಸೂಚಿಸುತ್ತದೆ; ಹೊರತು ಉಪಾದಾನಕಾರಣತ್ವವನ್ನು ಸೂಚಿಸುವುದಿಲ್ಲವೆಂದು ಅಭಿಪ್ರಾಯ.

**अत्र यद्यपि श्रुतौ दृश्यत्वाद्युज्झितत्ववत् 'नित्यं विभुं सर्वगतं सुसूक्ष्मं यद्भूतयोनिम्' इति भावरूपगुणान्तरमपि श्रुतम् ।**

ವಸ್ತುತಃ ಈ ಶ್ರುತಿಯಲ್ಲಿ ದೃಶ್ಯತ್ವಾಭಾವವೆಂಬ ಧರ್ಮವನ್ನು ಸಮನ್ವಯಮಾಡುತ್ತಿರುವಂತೆ 'ನಿತ್ಯಂ ವಿಭುಂ ಸರ್ವಗತಂ ಸುಸೂಕ್ಷ್ಮಂ ಯದ್ಭೂತಯೋನಿಮ್' ಇತ್ಯಾದಿಯಾಗಿ ಭಾವರೂಪವಾದ ಗುಣಾಂತರಗಳೂ ಸಹ ಕೇಳಿಸುತ್ತಿವೆ.

**सूत्रे च 'अदृश्यत्वादिगुणकः' इति भावाभावसाधारण्येन गुणपरम् । तथाऽपि सर्वगतत्वसुसूक्ष्मत्वादेः 'सर्वत्र सिद्धः' इत्यादौ हरौ सिद्धत्वाद् इहादृश्यत्वादिसमन्वय एव तात्पर्यात् 'दृश्यत्वाद्युज्झितः' इत्युक्तम् ।**

ಮತ್ತು ಸೂತ್ರದಲ್ಲಿಯೂ ಸಹ 'ಅದೃಶ್ಯತ್ವಾದಿಗುಣಕಃ' ಎಂದು ಭಾವ ಹಾಗೂ ಅಭಾವಗಳಲ್ಲಿ ಸಾಧಾರಣವಾದ ಗುಣವನ್ನು ಪ್ರತಿಪಾದಿಸುವ ಪದವನ್ನು ಬಳಸಲಾಗಿದೆ. ಆದರೂ ಸಹ ಸರ್ವಗತತ್ವ, ಸುಸೂಕ್ಷ್ಮತ್ವ ಮೊದಲಾದ ಧರ್ಮಗಳು 'ಸರ್ವತ್ರಪ್ರಸಿದ್ಧೋಪದೇಶಾತ್' ಎಂಬ ಸೂತ್ರದಲ್ಲಿಯೇ ಶ್ರೀಹರಿಯಲ್ಲಿ ಸಿದ್ಧವಾಗಿವೆ. ಆದ್ದರಿಂದ ಪುನಃ ಇಲ್ಲಿ ಅದೃಶ್ಯತ್ವಾದಿ ಧರ್ಮಗಳ ಸಮನ್ವಯವನ್ನು ತೋರಿಸುವುದರಲ್ಲಿ ಮಾತ್ರ ತಾತ್ಪರ್ಯವಿರುವುದರಿಂದ "ದೃಶ್ಯತ್ವಾದ್ಯುಜ್ಝಿತಃ" ಎಂದು ಹೇಳಿದ್ದಾರೆ.

**अनुभाष्ये च 'दृश्यत्वाद्यभावाख्यम्' इति । यद्वा भावधर्माणां बहुत्वादभावधर्माणाम् अल्पत्वाद् भावान्तरोपलक्षकतया इहानुवर्त्य सर्वज्ञः सर्वगतः सन् दृश्यत्वाद्युज्झित इति व्याख्येयम् ।**

ಅನುವ್ಯಾಖ್ಯಾನದಲ್ಲಿಯೂ ಸಹ "ದೃಶ್ಯತ್ವಾದ್ಯಭಾವಾಖ್ಯಂ" ಎಂದು ಹೇಳಿದ್ದಾರೆ. ಅಥವಾ ಭಾವಧರ್ಮಗಳು ಬಹಳವಾಗಿವೆ; ಅಭಾವಧರ್ಮಗಳು ಸ್ವಲ್ಪಮಾತ್ರ ಇವೆ. ಭಾವಧರ್ಮಗಳನ್ನು ಉಪಲಕ್ಷಣ ಮಾಡುವುದಕ್ಕಾಗಿ 'ದೃಶ್ಯತ್ವಾದ್ಯುಜ್ಝಿತಃ' ಎಂದು ಹೇಳಿದ್ದಾರೆ. ಅಥವಾ ಸರ್ವಗತಃ ಎಂಬುದನ್ನು ಇಲ್ಲಿಯೂ ಅನುವೃತ್ತಿಮಾಡಿಕೊಂಡು ಸರ್ವಜ್ಞನಾಗಿ, ಸರ್ವಗತನಾಗಿ ದೃಶ್ಯತ್ವಾದಿಧರ್ಮಗಳಿಂದ ರಹಿತನಾಗಿದ್ದಾನೆಂದು ಈ ಪಕ್ಷದಲ್ಲಿ ವ್ಯಾಖ್ಯಾನ ಮಾಡಬೇಕು.

**अत्र दृश्यत्वाद्युज्झितत्वं नाम साकल्येन चक्षुर्मनःप्रभृत्यगोचरत्वमपरिच्छेद्य-वैभवत्वं इति यावत् । तत् न कदाचिद् हीयत इति भावेनोक्तं – सदा दृश्यत्वाद्युज्झित इति ।**

ಇಲ್ಲಿ ದೃಶ್ಯತ್ವಾದ್ಯುಜ್ಝಿತನೆಂದರೆ ಚಕ್ಷುರಿಂದ್ರಿಯ, ಮನಸ್ಸುಮೊದಲಾದವುಗಳಿಗೆ ಸಂಪೂರ್ಣವಾಗಿ ತಿಳಿಯಲಾರನು; ಅಪರಿಮಿತವಾದ ವೈಭವವುಳ್ಳವನು ಎಂದರ್ಥ. ಈ ಅಪರಿಮಿತವಾದ ವೈಭವವು

ಭಗವಂತನಿಗೆ ಯಾವ ಕಾಲದಲ್ಲಿಯೂ ನಾಶವಾಗುವುದಿಲ್ಲವೆಂದು ಸೂಚಿಸಲು "ಸದಾ ದೃಶ್ಯತ್ವಾದ್ಯುಜ್ಝಿತಃ" ಎಂದು ಹೇಳಿರುತ್ತಾರೆ.

तेन श्रुतौ नित्यपदम् अदृश्यत्वादेरपि विशेषणमिति दर्शितम् । यद्वा सदेति अत्ता नियन्ता चेत्यत्राप्यन्वेति । तथाच ईश्वरक्रियाऽपि नित्येत्युक्तं भवाति । विवृतं चानुव्याख्याने क्रियानित्यत्वम् ।।६।।

ಹೀಗೆ ಹೇಳಿದ್ದರಿಂದ ಶ್ರುತಿಯಲ್ಲಿರುವ ನಿತ್ಯ ಎಂಬ ಪದವು ಅದೃಶ್ಯತ್ವಾದಿಗಳಲ್ಲಿಯೂ ಅನ್ವಯವನ್ನು ಹೊಂದುತ್ತದೆಂದು ಸ್ಪಷ್ಟವಾಗುತ್ತದೆ. ಅಥವಾ ಸದಾ ಎಂಬ ಪದವು ಅತ್ತಾ ನಿಯಂತಾ ಎಂಬುದರ ಜೊತೆಗೂ ಅನ್ವಯವನ್ನು ಹೊಂದುತ್ತದೆ. ಸದಾ ಅತ್ತಾ, ಸದಾ ನಿಯಂತಾ ಎಂದು ಹೇಳಿದಾಗ ಭಗವಂತನ ಕ್ರಿಯೆಯು ನಿತ್ಯವಾಗಿದೆಯೆಂದೂ ಹೇಳಿದಂತಾಗುತ್ತದೆ. ಭಗವತ್‌ಕ್ರಿಯೆಯು ಹೇಗೆ ನಿತ್ಯವಾಗುತ್ತದೆಯೆಂಬ ವಿಚಾರವನ್ನು ಅನುವ್ಯಾಖ್ಯಾನದಲ್ಲಿ ಸ್ಪಷ್ಟಪಡಿಸಲಾಗಿದೆ.

ಶ್ರೀರಾಘವೇಂದ್ರತೀರ್ಥಶ್ರೀಪಾದಂಗಳವರಿಂದ ವಿರಚಿತವಾದ

ತತ್ವಮಂಜರಿಯ ಕನ್ನಡಾನುವಾದದಲ್ಲಿ ಅದೃಶ್ಯತ್ವಾಧಿಕರಣವು ಮುಗಿಯಿತು.

***

।। श्रीजानकीवदनाम्भोजराजहंसाय रामचन्द्राय नमः ।।

।। श्री गुरुभ्यो नमः ।। हरिः ॐ ।।

श्री राघवेन्द्रतीर्थविरचिता

# तन्त्रदीपिका

## अदृश्यत्वाधिकरणम् (१।२।६)

।। ॐ अदृश्यत्वादिगुणको धर्मोक्तेः ॐ ।। १-२-२१ ।।

अत्र नये अभावात्मकलिङ्गं समन्वीयते । अदृश्यत्वादयो गुणा यस्य "अक्षरात्परतः परः" इत्युक्तपरस्य स तथा । "शेषाद्विभाषा" इति कः ।

ಈ ಅಧಿಕರಣದಲ್ಲಿ 'ಯತ್ತದದ್ರೇಶ್ಯಮ್' ಇತ್ಯಾದಿ ಶ್ರುತಿಯಲ್ಲಿರುವ ಅಭಾವರೂಪವಾದ ಲಿಂಗಗಳನ್ನು ವಿಷ್ಣುವಿನಲ್ಲಿ ಸಮನ್ವಯಮಾಡುತ್ತಿದ್ದಾರೆ. ಅದೃಶ್ಯತ್ವವೇ ಮೊದಲಾದ ಗುಣಗಳು ಅಕ್ಷರಾತ್ ಪರತಃ ಪರಃ' ಎಂಬ ಶ್ರುತಿಪ್ರತಿಪಾದ್ಯನಾದ ವ್ಯಕ್ತಿಯಲ್ಲಿ ಹೇಳಲ್ಪಟ್ಟಿವೆ. ಅವನೇ ಅಕ್ಷರಕ್ಕಿಂತ ಪರಮೋತ್ಕೃಷ್ಟವಾದ ವ್ಯಕ್ತಿಯೇ ಅದೃಶ್ಯತ್ವಾದಿಗುಣಕಃ = ಅದೃಶ್ಯತ್ವಾದಿಗುಣಗಳುಳ್ಳವನು. ಇಲ್ಲಿ ಗುಣಶಬ್ದದ ಮುಂದೆ 'ಶೇಷಾದ್ವಿಭಾಷಾ' ಎಂಬ ಪಾಣಿನಿಯ ಸೂತ್ರದ ಪ್ರಕಾರ ಕಪ್ರತ್ಯಯವು ಬಂದಿದೆ.

''यत्तददेद्रश्यमग्राह्यम्'' इत्युक्तदृश्यत्वादिगुणकमक्षरं ब्रह्मैव । न तु चिदचित्प्रकृतिविरिञ्चरुद्राः । ''अथ परा यया तदक्षरमधिगम्यते'' इति ऋगादिपरविद्याविषयत्वरूपधर्मोक्तेरित्यर्थः ।

ಸೂತ್ರಾರ್ಥ ಹೀಗಿದೆ - 'ಯತ್ತದದ್ರೇಶ್ಯಮಗ್ರಾಹ್ಯಮ್' ಇತ್ಯಾದಿ ಶ್ರುತಿಯಲ್ಲಿ ಹೇಳಲ್ಪಟ್ಟಿರುವ ಅದೃಶ್ಯತ್ವಾದಿಗುಣಗಳುಳ್ಳ ಅಕ್ಷರನು ಬ್ರಹ್ಮನೇ ಆಗಿದ್ದಾನೆ. ಚಿತ್‌ಪ್ರಕೃತಿಯಾಗಲೀ, ಅಚಿತ್ ಪ್ರಕೃತಿಯಾಗಲೀ ಚತುರ್ಮುಖಬ್ರಹ್ಮರುದ್ರಾದಿಗಳಾಗಲೀ ಪ್ರತಿಪಾದ್ಯರಲ್ಲ. ಏಕೆಂದರೆ 'ಅಥ ಪರಾ ಯಯಾ ತದಕ್ಷರಮಧಿಗಮ್ಯತೇ' ಎಂಬುದಾಗಿ ಋಗ್ವೇದಾದಿ ಪರವಿದ್ಯಾವಿಷಯತ್ವವೆಂಬ ಧರ್ಮವನ್ನು ಹೇಳಿರುವುದರಿಂದ ಎಂದು.

''परतः परः'' इति श्रुत्यनुसारात्पुंनिर्देशः । तेनादृश्यत्वादिगुणकमक्षरं परतः पर इत्युक्तपरवस्तु चैकमित्युक्त्या परत्वावध्यक्षरमन्यदिति प्राप्तेर्न सिद्धान्तेऽक्षरात् परत्वं बाधकमिति ज्ञापितम् ।

'ಪರತಃ ಪರಃ' ಎಂಬ ಶ್ರುತಿಯಲ್ಲಿ ಪುಲ್ಲಿಂಗನಿರ್ದೇಶವಿದೆ. ಇದಕ್ಕನುಸಾರಿಯಾಗಿ ಸೂತ್ರದಲ್ಲಿಯೂ 'ಅದೃಶ್ಯತ್ವಾದಿಗುಣಕಃ' ಎಂದು ಪುಲ್ಲಿಂಗಪ್ರಯೋಗವನ್ನು ಮಾಡಿರುತ್ತಾರೆ. ಇದರಿಂದ ಅದೃಶ್ಯತ್ವಾದಿ ಗುಣಗಳುಳ್ಳ ಅಕ್ಷರವು ಹಾಗೂ 'ಪರತಃ ಪರಃ' ಎಂದು ಹೇಳಲ್ಪಟ್ಟ ಸರ್ವೋತ್ಕೃಷ್ಟವಸ್ತುವು ಒಂದೇ ಆಗಿದೆ ಎಂದು ಹೇಳಿದಂತಾಯಿತು. ಪರತ್ವಕ್ಕೆ ಅವಧಿಯಾದ ಅಕ್ಷರವೇ ಬೇರೆ ಎಂದು ಹೇಳಿದಂತಾಯಿತು. ಆದ್ದರಿಂದ ಅಕ್ಷರದಿಂದ ಸರ್ವೋತ್ಕೃಷ್ಟವಾಗಿರುವಿಕೆಯು ಸಿದ್ಧಾಂತದಲ್ಲಿ ಬಾಧಕವಾಗುವುದಿಲ್ಲವೆಂದು ಸೂಚಿಸಿದ್ದಾರೆ.

अदृश्यत्वादिरिति वाच्ये गुणेत्युक्तिः दृश्यादन्यददृश्यमिति विग्रहेण दृश्याद्यन्योन्याभावश्च गुण इति विधिरूपत्वादीशाख्यधर्मिस्वरूपत्वं न विरुद्धमिति द्योतयितुम् । तथापि विशेषाद्धर्मधर्मित्वमिति सूचयितुं बहुव्रीह्यर्थः कः ।

ಪರಿಪೂರ್ಣಚಂದ್ರಿಕಾ

ಅದೃಶ್ಯತ್ವಾದಿ ಎಂದು ಹೇಳಬಹುದಿತ್ತು; ಆದರೂ ಸಹ 'ಗುಣ'ವೆಂದು ಏಕೆ ಹೇಳಿದ್ದಾರೆಂದರೆ 'ದೃಶ್ಯಾತ್ ಅನ್ಯತ್ ಅದೃಶ್ಯಮ್' ಎಂಬ ವಿಗ್ರಹದಿಂದ ದೃಶ್ಯಾದಿಗಳ ಭೇದವು ಗುಣವಾದ್ದರಿಂದ ವಿಧಿ ರೂಪವಾಗಿದೆ. ಹಾಗಾಗಿ ಈಶ ಎಂಬ ಧರ್ಮಿತ್ವರೂಪತ್ವವು ವಿರುದ್ಧವಾಗುವುದಿಲ್ಲವೆಂದು ಸೂಚಿಸುವುದಕ್ಕೋಸ್ಕರ. ಹೀಗೆ ಈಶನಿಗಿಂತ ಅಭಿನ್ನವಾಗಿದ್ದರೂ ವಿಶೇಷಬಲದಿಂದ ಅದೃಶ್ಯತ್ವಾದಿಗಳಿಗೂ ಧರ್ಮಿಗೂ ಧರ್ಮಧರ್ಮಿಭಾವವು ಯುಕ್ತವಾಗುತ್ತದೆಂದು ಸೂಚಿಸಲು ಬಹುವ್ರೀಹಿಸಮಾಸವನ್ನು ತಿಳಿಸುವ ಕಪ್ರತ್ಯಯವನ್ನು ಸೇರಿಸಿದ್ದಾರೆ.

अवधारणव्यावर्त्यं विशेषयुक्त्या निरस्यति –

**।। ॐ विशेषणभेदव्यपदेशाभ्यां च नेतरौ ॐ ।। १-२-२२ ।।**

ವಿಶೇಷಯುಕ್ತಿಯಿಂದ ಅವಧಾರಣದಿಂದ ವ್ಯಾವರ್ತ್ಯವಾದ ಪೂರ್ವಪಕ್ಷವನ್ನು ನಿರಾಕರಿಸುವುದಕ್ಕಾಗಿ ಮುಂದಿನ ಸೂತ್ರ ಹೊರಟಿದೆ. "ಓಂ ವಿಶೇಷಣಭೇದವ್ಯಪದೇಶಾಭ್ಯಾಂ ಚ ನೇತರೌ ಓಂ"

विरिञ्चरुद्रयोः चेतनत्वेनैकीकारेण जडप्रकृतिविरिञ्चरुद्राणामितराविति द्विवचनेनात्र ग्रहणम् ।

ಇತರೌ ಎಂಬಲ್ಲಿರುವ ದ್ವಿವಚನವು ತಪ್ಪಲ್ಲ. ಏಕೆಂದರೆ, ಚತುರ್ಮುಖಬ್ರಹ್ಮ ಹಾಗೂ ರುದ್ರ ಇಬ್ಬರನ್ನೂ ಚೇತನತ್ವಧರ್ಮದಿಂದ ಸಂಗ್ರಹಿಸಿದ್ದರಿಂದ. ಹೀಗೆ ಜಡಪ್ರಕೃತಿ, ಚತುರ್ಮುಖಬ್ರಹ್ಮ, ರುದ್ರ ಮೂವರನ್ನೂ 'ಇತರೌ' ಎಂಬ ದ್ವಿವಚನಪ್ರತ್ಯಯದಿಂದಲೇ ಸಂಗ್ರಹಿಸಿದ್ದಾರೆ.

इतरौ नादृश्यत्वादिगुणकौ । कुतः? ''यः सर्वज्ञः'' इति सार्वज्ञविशेषणात् । परतः परत्वविशेणाच्च जडप्रकृतिर्न । ''तस्मादेतद् ब्रह्म'' इति च विरिञ्चरुद्रयोरदृश्य त्वादिगुणकाक्षराद् भेदव्ययदेशाच्च न विरिञ्चरुद्राविति यथाक्रमं हेतू । चशब्दस्य न केवलं धर्मोक्तेः किन्त्वाभ्यां हेतुभ्यां चेत्यर्थः । तेनान्यत्रापि सिद्धान्तहेतोः परपक्षनिरासेऽपि व्यापार इति सूचितम् ।

ಸೂತ್ರಾರ್ಥ ಹೀಗಿದೆ -- ಇತರೌ = ಪ್ರಕೃತ್ಯಾದಿಗಳು, ನ = ಅದೃಶ್ಯತ್ವಾದಿಗುಣಗಳುಳ್ಳವರಲ್ಲ. ಏಕೆಂದರೆ ವಿಶೇಷಣಭೇದವ್ಯಪದೇಶಾಭ್ಯಾಮ್ = ಯಃ ಸರ್ವಜ್ಞಃ ಎಂಬುದಾಗಿ ಸರ್ವಜ್ಞತ್ವವು ವಿಶೇಷಣವಾಗಿದೆ. ಅಕ್ಷರಾತ್ ಪರತಃ ಪರಃ' ಎಂಬುದಾಗಿ ಪರತಃಪರತ್ವವು ವಿಶೇಷಣವಾಗಿದೆ. ಈ ಎರಡು ಹೇತುಗಳಿಂದ ಜಡಪ್ರಕೃತಿಯು ಅದೃಶ್ಯತ್ವಧರ್ಮವುಳ್ಳದ್ದಲ್ಲ. 'ತಸ್ಮಾದೇತದ್‌ಬ್ರಹ್ಮ' ಎಂಬುದಾಗಿ 'ಅನ್ಯಮೀಶಮ್' ಎಂಬುದಾಗಿಯೂ ವಿರಿಂಚ ಹಾಗೂ ರುದ್ರರನ್ನು ಅದೃಶ್ಯತ್ವಾದಿಗುಣವುಳ್ಳ

ಅಕ್ಷರನಿಂದ ಭಿನ್ನವೆಂದು ಶ್ರುತಿ ಹೇಳಿದೆ. ಆದ್ದರಿಂದ ಚತುರ್ಮುಖಬ್ರಹ್ಮ, ಹಾಗೂ ರುದ್ರದೇವರು ಅದೃಶ್ಯತ್ವಾದಿಗುಣಗಳುಳ್ಳವರಲ್ಲ. ಹೀಗೆ ಇಲ್ಲಿ ವಿಶೇಷಣ ಹಾಗೂ ಭೇದವ್ಯಪದೇಶಗಳು ಕ್ರಮವಾಗಿ ಹೇತುವಾಗಿವೆಯೆಂದು ತಿಳಿಯಬೇಕು. ಸೂತ್ರದಲ್ಲಿರುವ ಚಶಬ್ದವು ಧರ್ಮೋಕ್ತಿಯಿಂದ ಮಾತ್ರವಲ್ಲದೇ ಹಿಂದೆ ಹೇಳಿದ ಎರಡು ಯುಕ್ತಿಗಳಿಂದಲೂ ಸಹ ಎಂಬರ್ಥದಲ್ಲಿ ಪ್ರಯುಕ್ತವಾಗಿದೆ. ಇದರಿಂದ ಬೇರೆ ಸ್ಥಳದಲ್ಲಿಯೂ ಸಿದ್ಧಾಂತಸ್ಥಾಪಕವಾದ ಹೇತು ಪರಪಕ್ಷನಿರಾಕರಣೆಗೂ ಸಹ ಸಾಧನವಾಗುತ್ತದೆಂದು ಸೂಚಿಸಿದಂತಾಯಿತು.

चिदचितोः प्रकृतित्वेनैक्यं जीवत्वेन च ब्रह्मरुद्रयोरिति इतराविति चत्वारोऽपि गृह्यन्त इत्यप्याहुः ।।

ಚಿತ್‌ಪ್ರಕೃತಿ ಹಾಗೂ ಅಚಿತ್‌ಪ್ರಕೃತಿಗಳನ್ನು ಪ್ರಕೃತಿತ್ವಧರ್ಮದಿಂದ ಏಕೀಕರಿಸಿ ಮತ್ತು ಚತುರ್ಮುಖಬ್ರಹ್ಮ ರುದ್ರರನ್ನು ಜೀವತ್ವೇನ ಏಕೀಕರಿಸಿ, ಇತರೌ ಎಂಬ ಪದದಿಂದ ನಾಲ್ವರನ್ನು ಸಂಗ್ರಹಿಸಿದ್ದಾರೆಂದೂ ಸಹ ಹೇಳುತ್ತಾರೆ.

इतश्चैवमित्याह -

**।। ॐ रूपोपन्यासाच्च ॐ ।। १-२-२३ ।।**

ಮತ್ತೊಂದು ಕಾರಣದಿಂದಲೂ ಅದೃಶ್ಯತ್ವಾದಿಗುಣಗಳುಳ್ಳವನು ಮಹಾವಿಷ್ಣುವೇ ಆಗಿದ್ದಾನೆಂದು ಸಮರ್ಥಿಸುತ್ತಿದ್ದಾರೆ. 'ಓಂ ರೂಪೋಪನ್ಯಾಸಾಚ್ಚ ಓಂ''.

''यदा पश्यः पश्यते रुग्मवर्णम्'' इति रुग्मवर्णोपन्यासाच्च अदृश्यत्वादिगुणको ब्रह्मैवेत्यर्थः । अन्येषां मिश्ररूपत्वेन विष्णोरेव शुद्धरूपतया तस्यैवात्र ग्रहणादिति भावः ।।६।।

ಸೂತ್ರಾರ್ಥಹೀಗಿದೆ - 'ಯದಾ ಪಶ್ಯಃ ಪಶ್ಯತೇ ರುಗ್ಮವರ್ಣಮ್' ಎಂಬುದಾಗಿ ಶುದ್ಧವಾದ ಭಂಗಾರವರ್ಣವನ್ನು ಶ್ರುತಿ ಹೇಳಿದೆ. ಆದ್ದರಿಂದ ಅದೃಶ್ಯತ್ವಾದಿಗುಣಗಳುಳ್ಳವನು ಅಂತಹ ಬ್ರಹ್ಮನೇ ಆಗಬೇಕೆಂದರ್ಥ. ಬೇರೆಯವರಿಗೆ ಮಿಶ್ರರೂಪವಿರುವುದರಿಂದ ವಿಷ್ಣುವಿಗೆ ಮಾತ್ರ ಶುದ್ಧವಾದ ಭಂಗಾರದ ರೂಪವಿರುವುದರಿಂದ ವಿಷ್ಣುವನ್ನೇ ಸ್ವೀಕರಿಸಬೇಕೆಂದು ಅಭಿಪ್ರಾಯ.

ಶ್ರೀರಾಘವೇಂದ್ರತೀರ್ಥಶ್ರೀಪಾದಂಗಳವರಿಂದ ರಚಿತವಾದ
ತಂತ್ರದೀಪಿಕಾದ ಕನ್ನಡಾನುವಾದದಲ್ಲಿ ಅದೃಶ್ಯತ್ವಾಧಿಕರಣವು ಸಮಾಪ್ತವಾಯಿತು.

श्री राघवेन्द्रतीर्थविरचिता

# श्रीन्यायमुक्तावलिः

## अदृश्यत्वाधिकरणम् (१।२।६)

।। ॐ अदृश्यत्वादिगुणको धर्मोक्तेः ॐ ।। ६ ।।

।। ॐ विशेषणभेदव्यपदेशाभ्यां च नेत्तरौ ॐ ।।

।। ॐ रूपोपन्यासाच्च ॐ ।।

अत्र ''यं पृथिवी न वेदे''त्युक्तादृश्यत्वाख्यप्राचीनहेत्वाक्षेपात्संगतिः । आथर्वणे ''द्वे विद्ये वेदितव्ये'' इत्युपक्रम्य ''अथ परा यया तदक्षरमधिगम्यते'' ''यत्तदद्रेश्यमग्राह्यमगोत्रमवर्णम्'' इत्यादिनोक्तादृश्यत्वादिगुणकम् अक्षरात्संभवतीह विश्वमिति विश्वकारणतया श्रुतमक्षरं किं चिदचित्प्रकृतिविरिंचिरुद्राः उत विष्णुरिति संदेहः ।

ಈ ಅಧಿಕರಣದಲ್ಲಿ 'ಯಂ ಪೃಥಿವೀ ನ ವೇದ' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ಅದೃಶ್ಯತ್ವವೆಂಬ ಹಿಂದಿನ ಅಧಿಕರಣದ ಧರ್ಮವನ್ನು ಆಕ್ಷೇಪಮಾಡುತ್ತಿರುವುದರಿಂದ ಸಂಗತಿಯು ಇರುತ್ತದೆ.

ಆಥರ್ವಣೋಪನಿಷತ್ತಿನಲ್ಲಿ 'ದ್ವೇ ವಿದ್ಯೇ ವೇದಿತವ್ಯೇ' ಎಂದು ಪ್ರಾರಂಭಮಾಡಿ 'ಅಥ ಪರಾ ಯಯಾ ತದಕ್ಷರಮಧಿಗಮ್ಯತೇ' 'ಯತ್ತದದ್ರೇಶ್ಯಮಗ್ರಾಹ್ಯಮ್' ಇತ್ಯಾದಿವಾಕ್ಯದಿಂದ ಅದೃಶ್ಯತ್ವಾದಿ-ಗುಣಗಳುಳ್ಳ ವ್ಯಕ್ತಿಯು ಅಕ್ಷರನಾಗಿದ್ದಾನೆಂದು ಹೇಳಲಾಗಿದೆ. ಹಾಗೂ 'ಅಕ್ಷರಾತ್ ಸಂಭವತೀಹ ವಿಶ್ವಮ್' ಎಂಬುದಾಗಿ ವಿಶ್ವಕ್ಕೆ ಕಾರಣನಾದ ಅಕ್ಷರನು ಅದೃಶ್ಯತ್ವಾದಿಗುಣಗಳುಳ್ಳವನೆಂದು ಹೇಳಲಾಗಿದೆ.

ಅದೃಶ್ಯತ್ವಾದಿಗುಣಗಳುಳ್ಳ ಈ ಅಕ್ಷರನು ಚಿತ್‌ಪ್ರಕೃತಿ ಅಚಿತ್‌ಪ್ರಕೃತಿ ಚತುರ್ಮುಖಬ್ರಹ್ಮ ಅಥವಾ ರುದ್ರ ಇವರುಗಳೋ ಅಥವಾ ವಿಷ್ಣುವೋ ಎಂದು ಸಂದೇಹ.

''यथा पृथिव्यामोषधयः'' इत्युपादानदृष्टान्तबलेनाबाधेन अन्तरङ्गत्यागायोगेन च अक्षरादितिश्रुतोपादानकारणत्वरूपलिंगात् जडप्रकृतिरित्येकः पूर्वः पक्षः ।।

'ಯಥಾ ಪೃಥಿವ್ಯಾಮೋಷಧಯಃ' ಎಂಬುದಾಗಿ ಉಪಾದಾನಕಾರಣವನ್ನು ದೃಷ್ಟಾಂತವನ್ನಾಗಿ ನೀಡಿದ್ದರಿಂದ ಇದಕ್ಕೆ ಬಾಧವಿಲ್ಲದ ಕಾರಣ ಅಂತರಂಗನ್ಯಾಯವಾಗಿದೆ. ಇದನ್ನು ಬಿಟ್ಟು ಬಹಿರಂಗವಾದ

ನಿಮಿತ್ತಕಾರಣವೆಂಬರ್ಥವನ್ನು ಸ್ವೀಕರಿಸಬಾರದು. ನಿಮಿತ್ತಕಾರಣಕ್ಕಿಂತ ಉಪಾದಾನಕಾರಣವು ಬಲಿಷ್ಠವಾಗಿದೆ. ಇದರ ಆಧಾರದಿಂದ 'ಅಕ್ಷರಾತ್ ಸಂಭವತೀಹ ವಿಶ್ವಮ್' ಎಂಬ ಶ್ರುತಿಯೂ ಸಹ ಉಪಾದಾನಕಾರಣತ್ವವನ್ನೇ ಹೇಳುತ್ತದೆ. ಈ ಉಪಾದಾನಕಾರಣತ್ವವೆಂಬ ಲಿಂಗದ ಬಲದಿಂದ ಜಡಪ್ರಕೃತಿಯು ಅದೃಶ್ಯತ್ವಗುಣವುಳ್ಳ ಅಕ್ಷರಶಬ್ದವಾಚ್ಯವಾಗಿದೆಯೆಂದು ಮೊದಲನೆಯ ಪೂರ್ವಪಕ್ಷ.

''कूटस्थोऽक्षर उच्यते''इति स्मृतावक्षरपदस्य श्रीतत्त्वे प्रयोगादुपादानाभिमानित्वेन उपादानत्वस्यापि संभवाच्चित्प्रकृतिरित्यन्यः ।।

'ಕೂಟಸ್ಥೋऽಕ್ಷರ ಉಚ್ಯತೇ' ಎಂದು ಭಗವದ್ಗೀತೆಯಲ್ಲಿ ಲಕ್ಷ್ಮೀದೇವಿಯಲ್ಲಿ ಅಕ್ಷರಪದವನ್ನು ಪ್ರಯೋಗಿಸಲಾಗಿದೆ. ಲಕ್ಷ್ಮೀದೇವಿಯು ಉಪಾದಾನಕ್ಕೆ ಅಭಿಮಾನಿದೇವತೆಯಾದ್ದರಿಂದ ಅವಳಲ್ಲಿಯೂ ಗೌಣವಾದ ಉಪಾದಾನತ್ವವನ್ನು ಹೇಳಬಹುದು. ಆದರಿಂದ ಅದೃಶ್ಯತ್ವಾದಿಗುಣಗಳುಳ್ಳ ಅಕ್ಷರಳು ಲಕ್ಷ್ಮೀದೇವಿಯು ಆಗಿದ್ದಾಳೆ ಎಂದು ಇನ್ನೊಂದು ಪೂರ್ವಪಕ್ಷ.

''स ब्रह्मविद्याम्'' इत्युपक्रमे ब्रह्मशब्दाच्चतुर्मुखो वा कर्तारमीशमित्युत्तरत्रेशपदश्रवणाद्रुद्रो वेत्यपरौ ।

'ಸ ಬ್ರಹ್ಮವಿದ್ಯಾಮ್' ಎಂದು ಪ್ರಾರಂಭದಲ್ಲಿ ಬ್ರಹ್ಮಶಬ್ದವಿರುವುದರಿಂದ ಚತುರ್ಮುಖನು ಅಕ್ಷರಶಬ್ದವಾಚ್ಯನಾಗಿದ್ದಾನೆಂದು ಮೂರನೆಯ ಪೂರ್ವಪಕ್ಷ.

'ಕರ್ತಾರಮೀಶಮ್' ಎಂಬುದಾಗಿ ಮುಂದೆ ಈಶಶಬ್ದವು ಕೇಳಿಸುತ್ತಿರುವುದರಿಂದ ರುದ್ರನು ಅದೃಶ್ಯತ್ವಾದಿಗುಣಗಳುಳ್ಳ ಅಕ್ಷರನಾಗಿದ್ದಾನೆಂಬುದು ನಾಲ್ಕನೆಯ ಪೂರ್ವಪಕ್ಷ.

न चाक्षरादिशब्दा विष्णौ सावकाशाः । अक्षरात्परतः पर इत्युत्कर्षावधितया निर्देशेनोक्ताक्षरस्य निकृष्टत्वेन विष्णुत्वायोगात् ।

ಅಕ್ಷರಾದಿಶಬ್ದಗಳು ವಿಷ್ಣುವಿನಲ್ಲಿ ಸಾವಕಾಶವಾಗಿವೆಯೆಂದು ಹೇಳಬಾರದು. ಅಕ್ಷರಾತ್ ಪರತಃ ಪರಃ ಎಂಬುದಾಗಿ ಅಕ್ಷರತತ್ವಕ್ಕಿಂತ ವಿಷ್ಣು ಸರ್ವೋತ್ಕೃಷ್ಟನಾಗಿದ್ದಾನೆಂದು ಹೇಳಲಾಗಿದೆ. ಇದರಿಂದ ಅಕ್ಷರತತ್ವವು ನಿಕೃಷ್ಟವೆಂದು ತಿಳಿಯುತ್ತದೆ. ಪರಮೋತ್ಕೃಷ್ಟನಾದ ಮಹಾವಿಷ್ಣುವು ನಿಕೃಷ್ಟನಾಗಲು ಸಾಧ್ಯವಿಲ್ಲ.

अत एव च कारणत्वमात्रे अक्षरात्सम्भवतीति पञ्चमीति प्रत्युक्तम् ।

ಆದ್ದರಿಂದಲೇ ಅಕ್ಷರಾತ್ ಸಂಭವತಿ ಎಂಬಲ್ಲಿರುವ ಪಂಚಮೀವಿಭಕ್ತಿಯು ಕಾರಣತ್ವವನ್ನಷ್ಟೇ ಹೇಳುತ್ತಿದೆ ಹೊರತು ಉಪಾದಾನಕಾರಣವನ್ನುಹೇಳುತ್ತಿಲ್ಲವೆಂಬ ವಾದವನ್ನು ನಿರಾಕರಿಸಿದಂತಾಯಿತು.

ಪರಿಪೂರ್ಣಚಂದ್ರಿಕಾ

चित्प्रकृतिपक्षे अक्षरात्परत इति पञ्चम्योः सामानाधिकरण्येन पक्षान्तरेषु वैयधिकरण्येनोपपत्तेरिति ।।

ಚಿತ್‌ಪ್ರಕೃತಿಯು ಅಕ್ಷರವೆಂದು ವಿವಕ್ಷಿಸಿದಾಗ ಅಕ್ಷರಾತ್ ಪರತಃ ಎಂಬಲ್ಲಿರುವ ಎರಡು ಪಂಚಮೀವಿಭಕ್ತಿಗಳು ಅಕ್ಷರನಾಮಕಳಾದ ಉತ್ತಮಳಾದ ಲಕ್ಷ್ಮೀದೇವಿ ಎಂಬುದಾಗಿ ಒಂದೇ ಅರ್ಥದಲ್ಲಿ ಸಮಾನಾಧಿಕರಣದಿಂದ ಪ್ರಯುಕ್ತವಾಗಿವೆ. ಇತರ ಪಕ್ಷಗಳಲ್ಲಿ ವೈಯಧಿಕರಣ್ಯೇನ ಪ್ರಯುಕ್ತವಾಗಿವೆ. ಅಂದರೆ 'ಅಕ್ಷರಾತ್' ಎಂದರೆ ಜಡಪ್ರಕೃತಿಗಿಂತ 'ಪರತಃ' ಉತ್ತಮಳಾದ ಲಕ್ಷ್ಮೀದೇವಿ ಅವಳಿಗಿಂತ 'ಪರಃ' ಮಹಾವಿಷ್ಣುವು ಉತ್ತಮನಾಗಿದ್ದಾನೆ ಹೀಗೆ ಅಕ್ಷರಶಬ್ದವೇ ಬೇರೆ ಪದಾರ್ಥವನ್ನು ಪರಶಬ್ದವೇ ಮತ್ತೊಂದು ಪದಾರ್ಥವನ್ನು ಪ್ರತಿಪಾದಿಸುತ್ತದೆಂದು ತಿಳಿಯಬೇಕು.

सिद्धान्तस्तु ।। ''अत परा यया स हरिर्वेदितव्यः'' ''सा विद्या तन्मतिर्यया'' इत्यादिश्रुतिस्मृतिभिः विष्ण्वेकनिष्ठऋगादिपरविद्याविषयत्वरूपतद्धर्मात् ।

ಸಿದ್ಧಾಂತ ಹೀಗಿದೆ - 'ಅಥ ಪರಾ ಯಯಾ ಸ ಹರಿರ್ವೇದಿತವ್ಯಃ' ಎಂಬ ಶ್ರುತಿಯಿಂದ 'ಸಾ ವಿದ್ಯಾ ತನ್ಮತಿರ್ಯಯಾ' ಎಂಬ ಸ್ಮೃತಿಯಿಂದ ಋಗ್ವೇದಾದಿ ಪರವಿದ್ಯಾವಿಷಯತ್ವವು ವಿಷ್ಣುವಿನ ಅಸಾಧಾರಣಧರ್ಮವಾಗಿದೆಯೆಂದು ತಿಳಿಯುತ್ತದೆ.

''यदा पश्यः पश्यते रुग्मवर्णम्'' इति रूपोपन्यासात् । अन्येषां ''विमिश्राणि व्यमिश्रयत्'' इत्यादिश्रुत्या मिश्ररूपत्वेन शुद्धरूपस्य तदेकनिष्ठत्वात् ।

'ಯದಾ ಪಶ್ಯಃ ಪಶ್ಯತೇ ರುಗ್ಮವರ್ಣಮ್' ಎಂಬುದಾಗಿ ಶುದ್ಧವಾದ ಭಂಗಾರವರ್ಣವನ್ನು ಅಕ್ಷರನಲ್ಲಿ ಶ್ರುತಿ ಹೇಳುತ್ತಿದೆ. ಆದರೆ ವಿಷ್ಣುವನ್ನು ಬಿಟ್ಟು ಉಳಿದೆಲ್ಲ ದೇವತೆಗಳಿಗೆ ವಿಮಿಶ್ರಾಣಿ ವಿಮಿಶ್ರಯತ್ ಇತ್ಯಾದಿ ಶ್ರುತಿಯಿಂದ ಮಿಶ್ರಬಣ್ಣ ಇರುತ್ತದೆಂದು ತಿಳಿಯುತ್ತದೆ. ಮಿಶ್ರವಲ್ಲದ ಶುದ್ಧವಾದ ಭಂಗಾರವರ್ಣ ಇರುವುದು ವಿಷ್ಣುವಿಗೆ ಮಾತ್ರ.

अक्षरत्रयमीरितमितिस्मृत्या (स्कान्द.पु.) परावधित्वेनोक्ताक्षरस्यान्यत्वेना-विष्णुतया परावाधित्वेन निर्देशस्याबाधकत्वात् ।

'ಅಕ್ಷರತ್ರಯಮೀರಿತಮ್' ಎಂಬ ಸ್ಕಾಂದಪುರಾಣದ ಸ್ಮೃತಿಯಿಂದ ಸರ್ವೋತ್ಕೃಷ್ಟನಿಗೆ ಅವಧಿ ಯಾದ ಅಕ್ಷರವು ಮತ್ತೊಂದಿದೆ ಎಂದು ತಿಳಿಯುತ್ತದೆ. ಆದ್ದರಿಂದ ವಿಷ್ಣುವನ್ನು ಸರ್ವೋತ್ಕೃಷ್ಟವಸ್ತುವಿಗೆ ಅವಧಿ- ಯೆಂದು ಹೇಳಬೇಕಾಗಿಲ್ಲ. ಆದ್ದರಿಂದಲೇ ಪರಾವಧಿತ್ವವನ್ನು ಅಕ್ಷರಕ್ಕೆ ನಿರ್ದೇಶಿಸಿದ್ದೂ ಸಹ ಬಾಧಕವಾಗುವುದಿಲ್ಲ. ಅಂದರೆ ಮೂರು ಬಗೆಯ ಅಕ್ಷರಗಳಿವೆ. ಅವುಗಳಲ್ಲಿ ನೀಚ ಮಧ್ಯಮ ಉತ್ತಮ ಎಂಬ ಪ್ರಭೇದವಿದೆ. ನೀಚವಾದ ಅಕ್ಷರತತ್ವವು ಪರತ್ವಕ್ಕೆ ಅವಧಿಯಾಗುತ್ತದೆಂದು ತಿಳಿಯಬೇಕು.

## ಅದೃಶ್ಯತ್ವಾಧಿಕರಣ (೧-೨-೬)

पृथिव्यादिदृष्टान्तस्य कारणत्वमात्रे तात्पर्यसम्भवात् । ब्रह्मेशादिशब्दस्य विष्णावेव मुख्यत्वात् ।

ಪೃಥಿವ್ಯಾದಿ ದೃಷ್ಟಾಂತವನ್ನು ಕಾರಣತ್ವವಿಷಯದಲ್ಲಷ್ಟೇ ತಿಳಿಯಬೇಕು. ಬ್ರಹ್ಮ ಈಶ ಮೊದಲಾದ ಶಬ್ದಗಳೆಲ್ಲವೂ ವಿಷ್ಣುವಿನಲ್ಲಿ ಮಾತ್ರವೇ ಮುಖ್ಯವಾಗಿರುತ್ತವೆ.

जडपक्षे यः सर्वज्ञ इत्युक्तसार्वज्ञरूपविशेषणायोगात् । ''तस्मादेतद्ब्रह्म नामरूपमन्नं च जायत'' इति ''जुष्टं यदा पश्यत्यन्यमीशम्'' इति ब्रह्मरुद्रयोरक्षराद्भेदव्यपदेशाच्च अदृश्यत्वादिगुणकं परतः परत्वेन श्रुतमक्षरं विष्णुरेवेति ।। फले तु अदृश्यत्वादिगुणयुक्तानन्दमयाक्षेपतत्समाधी ।।६।।

ಜಡವಾದ ಪದಾರ್ಥವು ಅಕ್ಷರವೆಂದು ವಿವಕ್ಷಿತವಾದಾಗ 'ಯಃ ಸರ್ವಜ್ಞಃ' ಇತ್ಯಾದಿಯಿಂದ ಹೇಳಲ್ಪಟ್ಟ ಸರ್ವಜ್ಞತ್ವಾದಿಗಳು ವಿಶೇಷಣವಾಗಲು ಸಾಧ್ಯವಿಲ್ಲ. 'ತಸ್ಮಾದೇತದ್ ಬ್ರಹ್ಮ ನಾಮರೂಪಮನ್ನಂ ಚ ಜಾಯತೇ' ಎಂಬುದಾಗಿ ಅಕ್ಷರತತ್ವಕ್ಕೆ ಭೇದವನ್ನು ಹೇಳಲಾಗಿದೆ. 'ಜುಷ್ಟಂ ಯದಾ ಪಶ್ಯತ್ಯನ್ಯಮೀಶಮ್' ಎಂಬುದಾಗಿ ರುದ್ರನಿಂದಲೂ ಭೇದವನ್ನು ಹೇಳಲಾಗಿದೆ. ಆದ್ದರಿಂದ ಅಕ್ಷರತತ್ವವನ್ನೇ ರುದ್ರಾದಿಗಳೆಂದು ಹೇಳಲು ಸಾಧ್ಯವಿಲ್ಲ. ಆದ್ದರಿಂದ ಪರತಃ ಪರತ್ವೇನ ಪ್ರತಿಪಾದ್ಯನಾದ ಅದೃಶ್ಯತ್ವಾದಿ ಗುಣಗಳುಳ್ಳ ಅಕ್ಷರನು ಮಹಾವಿಷ್ಣುವೇ ಆಗುತ್ತಾನೆಂದು ನಿರ್ಣಯವಾಗುತ್ತದೆ.

ಅದೃಶ್ಯತ್ವಾದಿಗುಣಗಳುಳ್ಳ ಆನಂದಮಯನು ವಿಷ್ಣುವಾಗುವುದಿಲ್ಲವೆಂದು ಪೂರ್ವಪಕ್ಷದ ಫಲ. ಅದರ ನಿರಾಕರಣೆಯೇ ಸಿದ್ಧಾಂತದ ಫಲ.

ಶ್ರೀರಾಘವೇಂದ್ರತೀರ್ಥಶ್ರೀಪಾದಂಗಳವರಿಂದ ರಚಿತವಾದ

ನ್ಯಾಯಮುಕ್ತಾವಳಿಯ ಕನ್ನಡಾನುವಾದದಲ್ಲಿ ಅದೃಶ್ಯತ್ವಾಧಿಕರಣವು ಸಮಾಪ್ತವಾಯಿತು.

# सूत्रार्थरत्नावलिः

## अदृश्यत्वाधिकरणम् (१।२।६)

अत्रादृश्यत्वाद्यभावाख्यलिङ्गं ब्रह्मणि समन्वीयते –

**ॐ।। अदृश्यत्वादिगुणको धर्मोक्तेः ।। ॐ**

ननु 'यत्तदद्रेश्यम्' (मु.१।१।६) इत्युक्तादृश्यत्वादिगुणको न विष्णुः किन्तु जडप्रकृतिः । 'अक्षरात् सम्भवतीह' इति अक्षरशब्दश्रवणात् । नचाक्षरशब्दो विष्णावपि सावकाशः । तत्परतः पराभिधानात् । नच विष्णोः परोऽस्ति । पृथिव्यादिदृष्टान्तेनोपादानतया जगत्कारणत्वाभिधानाच्च । चित्प्रकृतेरेवैतदृश्यत्वादिकम् । तस्यामक्षरशब्दस्य 'कूटस्थः' इति (भ.गी.१५।१६) स्मृतिसिद्धत्वात् । विकारित्वेन जगत्कारणत्ववचनं विकाराभिमानित्वाद्युज्यते । 'अक्षरात् परतः' (मुं.२।१।२) इत्येतदपि परतोऽक्षरादिति सामानाधिकरण्येनोपपद्यते । हिरण्यगर्भस्य वा एतददृश्यत्वादिकम् । 'स ब्रह्मविद्याम्' (मुं.१।१।१) इत्यादि ब्रह्मशब्दात् । रुद्रस्य वा एतददृश्यत्वादिकम् । 'कर्तारमीशम्' (मुं. ३।१।३) इतीशशब्दश्रवणादिति प्राप्ते सूचितम् –

**ॐ ।। अदृश्यत्वादिगुणको धर्मोक्तेरिति ।।** अस्यार्थः – अदृश्यत्वादिगुणकः 'यत् तदद्रेश्यम्' इति श्रुत्युक्तादृश्यत्वादिधर्मविशिष्टाक्षरशब्दवाच्यो विष्णुरेव । न प्रकृत्यादिः । कुतः? धर्मोक्तेः ऋगादिपरविद्याविषयत्वरूपविष्णुधर्मस्य 'यया' इति श्रुत्युक्तत्वादित्यर्थः ।।

एवञ्च 'अथ परा यया' इत्यदृश्यत्वादिगुणकस्य परविद्याविषयत्वाभिधानात् अदृश्यत्वादिगुणको विष्णुरेवेति सिद्धम् ।

ಅದೃಶ್ಯತ್ವಾಧಿಕರಣ (೧-೨-೬)

**ॐ ।। विशेषणभेदव्यपदेशाभ्यां च नेतरौ ।। ॐ**

ननु विष्णुप्रापकपरविद्याविषयत्ववत् जडप्रकृतिविरिञ्चरुद्रप्रापकानामपि भावात् 'त एव अदृश्यत्वादिगुणकाः किं न स्युः?' इत्यतो विशेषयुक्त्या पराकुर्वत् सूत्रं पठति –

**ॐ ।। विशेषणभेदव्यपदेशाभ्यां च नेतराविति ।।** अस्यार्थः । चः समुच्चये । इतरौ प्रकृतिद्वयं विरिञ्चरुद्रौ च । नादृश्यत्वादिगुणकौ । कुतः? विशेषणभेदव्यपदेशाभ्याम् । प्रतिज्ञाद्वये क्रमेणैकैकहेत्वन्वयः । 'यः सर्वज्ञः' इति (मुं.१।१।९) सार्वज्ञ्यादिविशेषणात् । 'तस्मादेतत्' इति (मुं.१।१।९) अदृश्यत्वादिगुणकाक्षराद् विरिञ्चरुद्रयोर्भेदोक्तेश्चेत्यर्थः ।।

एवञ्च जडप्रकृतित्वविरोधिसार्वज्ञ्यादिविशेषणस्य 'तस्मादेतत्' इति विरिञ्चत्वविरोधि 'जुष्टं यदा पश्यत्यन्यम्' इति रुद्रत्वविरोधिभेदव्यपदेशस्य चाभावेनासम्भवात् । नच परतः पराभिधानान्न विष्णुरिति वाच्यम् । 'अपरं त्वक्षरम्' इति त्र्यक्षराभिधानेन परतो मध्यमाक्षरात् परत्वसम्भवेनाविरोधाददृश्यत्वादिगुणको विष्णुरेवेति सिद्धम् ।

**ॐ।। रूपोपन्यासाच्च ।।ॐ**

युक्त्यन्तरेण, विष्णोरेवादृश्यत्वादिगुणकत्वं साधयत् सूत्रमवतारयति –

**ॐ।। रूपोपन्यासाच्चेति ।।** अस्यार्थः – 'यदा पश्यः पश्यत'(मुं. ३।१।३) इति विष्ण्वसाधारणस्वर्णरूपप्रतिपादनाच्चादृश्यत्वादिगुणको विष्णुरेवेत्यर्थः ।।

एवञ्च विष्ण्वसाधारणरुक्मरूपप्रतिपादनात् । 'एको नारायणः' इत्यत्र शुक्लादिरूपाणां मनुष्यादौ मिश्रीकरणस्योक्तत्वात् अदृश्यत्वादिगुणको विष्णुरेवेति सिद्धम् ।।

।। इति सूत्रार्थरत्नावळ्यां अदृश्यत्वाधिकरणम् ।।

।। ಪರಿಪೂರ್ಣಚಂದ್ರಿಕೆಯಲ್ಲಿ ಅದೃಶ್ಯತ್ವಾಧಿಕರಣವು ಮುಗಿಯಿತು ।।

।। ಶ್ರೀಮಧ್ವೇಶಾರ್ಪಣಮಸ್ತು ।।

# ವೈಶ್ವಾನರಾಧಿಕರಣ

(೧-೨-೭)

## ಭಾಗ -೧

ಬ್ರಹ್ಮಸೂತ್ರ, ಸೂತ್ರದೀಪಿಕಾ, ಬ್ರಹ್ಮಸೂತ್ರಭಾಷ್ಯ,
ಸತ್ತರ್ಕದೀಪಾವಳಿ, ತತ್ವಪ್ರಕಾಶಿಕಾ,
ಭಾವದೀಪ ಇವುಗಳ ವಿವರಣೆಯೊಂದಿಗೆ
ಸರಳ ಕನ್ನಡ ಅನುವಾದ

* * *

ಭಾಷ್ಯದೀಪಿಕಾ ಹಾಗೂ ವಾಕ್ಯಾರ್ಥಮಂಜರೀ -
ಸಂಪೂರ್ಣ ಸಂಸ್ಕೃತ ಮೂಲ.

॥ ಶ್ರೀಗುರುಭ್ಯೋ ನಮಃ ॥

# ವೈಶ್ವಾನರಾಧಿಕರಣ

ದೇವದೇವೋತ್ತಮ ದೇವತಾಸಾರ್ವಭೌಮ
ಅಖಿಲಾಂಡಕೋಟಿಬ್ರಹ್ಮಾಂಡನಾಯಕ, ಚತುರ್ದಶಲೋಕಗುರುಗಳಾದ
ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ

## ಬ್ರಹ್ಮಮೀಮಾಂಸಾಶಾಸ್ತ್ರ

## 'ವೈಶ್ವಾನರ' ಎಂಬ ಹೆಸರು ಮಹಾವಿಷ್ಣುವಿಗೆ ಮಾತ್ರ

**।। अथ वैश्वानराधिकरणम् ।।**

**सू – ॐ ॥ वैश्वानरः साधारणशब्दविशेषात् ॥ ॐ ॥ २४ ॥**

ಸೂತ್ರಾರ್ಥ - 'ಅಯಮಗ್ನಿಃ ವೈಶ್ವಾನರಃ' ಇತ್ಯಾದಿ ವಾಕ್ಯಗಳಲ್ಲಿ ಉಲ್ಲೇಖಿಸಲ್ಪಟ್ಟ ವೈಶ್ವಾನರನು ವಿಷ್ಣುವೇ ಆಗಿದ್ದಾನೆ. ಏಕೆಂದರೆ ಅಗ್ನಿ ಮತ್ತು ವಿಷ್ಣು ಇಬ್ಬರಲ್ಲಿಯೂ ಸಾಧಾರಣವಾದ ವೈಶ್ವಾನರ ಎಂಬ ಶಬ್ದದಲ್ಲಿ 'ಆತ್ಮ' ಎಂಬ ವಿಶೇಷಣವನ್ನು ನೀಡಿದ್ದರಿಂದ.

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

सूत्रदीपिका — वैश्वानरः 'यस्त्वेतम्' इत्यादि वाक्यगतवैश्वानरादि-शब्दवाच्यो विष्णुरेव न त्वग्निः । कुतः? साधारणशब्दविशेषात् अग्नाविष्ण्वोः साधारणस्य वैश्वानरशब्दस्य 'आत्मानं वैश्वानरम्' इति श्रुतावात्मशब्देन विशेषितत्वादित्यर्थः ।

ಅರ್ಥ - ವೈಶ್ವಾನರಃ = 'ಯಸ್ತ್ವೇತಮ್' ಇತ್ಯಾದಿಯಾಗಿ ಛಾಂದೋಗ್ಯದಲ್ಲಿರುವ ವೈಶ್ವಾನರಶಬ್ದದಿಂದ ವಾಚ್ಯನಾದವನು ವಿಷ್ಣುವೇ; ಹೊರತು ಅಗ್ನಿಯಲ್ಲ. ಏಕೆಂದರೆ, ಸಾಧಾರಣಶಬ್ದವಿಶೇಷಾತ್ = ಅಗ್ನಿ ಹಾಗೂ ವಿಷ್ಣು ಇಬ್ಬರಲ್ಲಿಯೂ ಸಾಧಾರಣವಾದ ವೈಶ್ವಾನರಶಬ್ದಕ್ಕೆ 'ಆತ್ಮಾನಂ ವೈಶ್ವಾನರಮ್' ಎಂಬ ಶ್ರುತಿಯಲ್ಲಿ ಆತ್ಮಶಬ್ದವನ್ನು ವಿಶೇಷಣವನ್ನಾಗಿ ಹೇಳಲಾಗಿದೆ.

## श्रीमदानन्दतीर्थभगवत्पादाचार्यविरचित-

# ब्रह्मसूत्रभाष्यम्

**भाष्यम् – अदृश्यत्वादिगुणेषु सर्वगतत्वं 'यस्त्वेतमेवं प्रादेशमात्रमभिविमानमात्मानं वैश्वानरमुपास्ते' (छां. ५-१८-१.)इति वैश्वानरस्योक्तमिति ॥**

ಅನುವಾದ- ಹಿಂದಿನಅಧಿಕರಣದಲ್ಲಿಅದೃಶ್ಯತ್ವವೆಂಬಗುಣದಸಮನ್ವಯವನ್ನುಮಾಡುವಾಗ ಸರ್ವಗತತ್ವವನ್ನು ವಿಷ್ಣುವಿನಲ್ಲಿ ಹೇಳಲಾಯಿತು. ಆದರೆ ಛಾಂದೋಗ್ಯಶ್ರುತಿಯು ಅದೇ ಸರ್ವಗತತ್ವಗುಣವನ್ನು ವೈಶ್ವಾನರನಲ್ಲಿ ಹೇಳುತ್ತಿದೆ. 'ಯಾವ ಅಧಿಕಾರಿಯು ಒಂಭತ್ತುಅಂಗುಲದಷ್ಟು ಪರಿಮಾಣವುಳ್ಳ, ಎಲ್ಲ ದಿಕ್ಕುಗಳಲ್ಲಿ ಸಂಚಾರಮಾಡುತ್ತಿರುವ ಎಲ್ಲರ ಹೃದಯದಲ್ಲಿ ನೆಲೆಸಿರುವ ವೈಶ್ವಾನರ ಎಂಬ ಶಬ್ದದಿಂದ ಪ್ರತಿಪಾದ್ಯನಾದವನನ್ನು ಉಪಾಸನೆ ಮಾಡುತ್ತಾನೋ' ಹೀಗೆ ವೈಶ್ವಾನರನಿಗೆ ಸರ್ವಗತತ್ವವು ಹೇಳಲ್ಪಟ್ಟಿದೆ.

ಪ್ರತಿಪದಾರ್ಥ-- ಈ ಅಧಿಕರಣದಲ್ಲಿ ಪಾಚಕತ್ವವೇ ಮೊದಲಾದ ಅನೇಕ ಲಿಂಗಗಳನ್ನು ಸಮನ್ವಯ ಮಾಡುವುದಕ್ಕಾಗಿ ಬ್ರಹ್ಮನಲ್ಲಿ ವೈಶ್ವಾನರ ಎಂಬ ನಾಮಾತ್ಮಕಶಬ್ದದ ಸಮನ್ವಯವನ್ನು ಮಾಡುತ್ತಿದ್ದಾರೆ. ಹಿಂದಿನ ಅಧಿಕರಣದಿಂದ ಸಂಗತಿಯನ್ನು ತೋರಿಸುತ್ತಾ ವಿಷಯವಾಕ್ಯವನ್ನು ಉದಾಹರಿಸುವ ಮೂಲಕ ವಿಷಯಾದಿಗಳನ್ನು ಸೂಚನೆ ಮಾಡುತ್ತಿದ್ದಾರೆ.

ಅದೃಶ್ಯತ್ವಾದಿಗುಣೇಷು = ವಿಷ್ಣುವಿನಲ್ಲಿ ಸಮನ್ವಯಿಸಿದ ಅದೃಶ್ಯತ್ವ ಮೊದಲಾದ ಗುಣಗಳ ಮಧ್ಯದಲ್ಲಿ, ಸರ್ವಗತತ್ವಂ = ಸರ್ವಗತತ್ವ ಎಂಬ ಧರ್ಮವನ್ನೂ, ಸಮನ್ವಯ ಮಾಡಲಾಯಿತು. ಆದರೆ ಈ ಗುಣವನ್ನು ಛಾಂದೋಗ್ಯದಲ್ಲಿ ಯಃ = ಯಾವ ಅಧಿಕಾರಿಯು, ಪ್ರಾದೇಶಮಾತ್ರಂ = ಒಂಭತ್ತು ಅಂಗುಲದಷ್ಟು ಪರಿಮಾಣವುಳ್ಳ, ಅಭಿವಿಮಾನಂ = ಎಲ್ಲ ದಿಕ್ಕುಗಳಲ್ಲಿ ಸಂಚರಿಸುತ್ತಿರುವ, ಆತ್ಮಾನಂ = ಎಲ್ಲರ ಸ್ವಾಮಿಯಾದ, ವೈಶ್ವಾನರಂ = ವೈಶ್ವಾನರ ಎಂಬ ಶಬ್ದದಿಂದ ವಾಚ್ಯನಾದವನನ್ನು, ಉಪಾಸ್ತೇ = ಉಪಾಸನೆ ಮಾಡುತ್ತಾನೋ, ಇತಿ = ಹೀಗೆ, ವೈಶ್ವಾನರಸ್ಯ = ವೈಶ್ವಾನರನಿಗೆ, ಉಕ್ತಮ್ = (ಸರ್ವಗತತ್ವವನ್ನು) ಹೇಳಲಾಗಿದೆ.[1]

(१) **भाष्यदीपिका -** अत्राधिकरणे पाचकत्वाद्यनेकलिङ्गसमन्वयसिद्ध्यर्थं ब्रह्मणि वैश्वानरनामसमन्वयः क्रियते । पूर्वाधिकरणसङ्गतिं विषयवाक्योदाहरणपूर्वकं विषयादिकं

**भाष्यम् – अत आह –**

**सू – ॐ ॥ वैश्वानरः साधारणशब्दविशेषात् ॥ ॐ ॥ २४ ॥**

**अग्नाविष्णवोः साधारणस्य वैश्वानरशब्दस्य विष्णावेव प्रसिद्धात्मशब्देन विशेषणाद् वैश्वानरो विष्णुरेव ॥ २४ ॥**

ವೈಶ್ವಾನರ 'ಯಾರು? ಎಂಬುದನ್ನು ನಿರ್ಧರಿಸುವುದಕ್ಕಾಗಿ ಸೂತ್ರಕಾರರು ವೈಶ್ವಾನರಃ ಇತ್ಯಾದಿಯಾಗಿ ಹೇಳುತ್ತಿದ್ದಾರೆ. ಅಗ್ನಿ ಮತ್ತು ವಿಷ್ಣು ಇಬ್ಬರನ್ನೂ ಪ್ರತಿಪಾದನೆ ಮಾಡುವ ವೈಶ್ವಾನರ ಎಂಬ ಪದಕ್ಕೆ ವಿಷ್ಣುವಿನಲ್ಲೇ ಮುಖ್ಯಪ್ರತಿಪಾದ್ಯತ್ವವನ್ನು ಹೇಳಬೇಕು. ಏಕೆಂದರೆ ವಿಷ್ಣುವಿನಲ್ಲೇ ಪ್ರಸಿದ್ಧವಾದ ಆತ್ಮಶಬ್ದದಿಂದ ಗುಣವನ್ನು ಹೇಳಿರುವುದರಿಂದ ವಿಷ್ಣುವೇ ವೈಶ್ವಾನರನಾಗುತ್ತಾನೆ.

ಪ್ರತಿಪದಾರ್ಥ -- ಸಿದ್ಧಾಂತವನ್ನು ತೋರಿಸುವುದಕ್ಕಾಗಿ ಸೂತ್ರವನ್ನು ಪಠಿಸಿ ವ್ಯಾಖ್ಯಾನಿಸುತ್ತಿದ್ದಾರೆ. ಅತಃ= ಈ ಪೂರ್ವಪಕ್ಷವನ್ನು ಪರಿಹರಿಸಲು, ಆಹ= ಸೂತ್ರಕಾರರು ಈ ಸೂತ್ರವನ್ನು ಹೇಳುತ್ತಿದ್ದಾರೆ. ಅಗ್ನಾವಿಷ್ಣ್ವೋಃ = ಅಗ್ನಿ ಹಾಗೂ ವಿಷ್ಣು ಇವರಿಬ್ಬರಲ್ಲಿ, ಸಾಧಾರಣಸ್ಯ = ಸಮಾನವಾದ ವಾಚಕತ್ವವು ತೋರಿದರೂ, ವೈಶ್ವಾನರಶಬ್ದಸ್ಯ = ವೈಶ್ವಾನರ ಎಂಬ ಪದಕ್ಕೆ, ವಿಷ್ಣಾವೇವ = ವಿಷ್ಣುವಿನಲ್ಲೇ ಮುಖ್ಯಪ್ರತಿಪಾದ್ಯತ್ವವನ್ನು ಹೇಳಬೇಕು. ಏಕೆಂದರೆ ಪ್ರಸಿದ್ಧಆತ್ಮಶಬ್ದೇನ = ಶ್ರೀಹರಿಯಲ್ಲಿಯೇ ಪ್ರಸಿದ್ಧವಾದ ಆತ್ಮಶಬ್ದದಿಂದ, ವಿಶೇಷಣಾತ್ = ವಿಶೇಷಣವನ್ನಾಗಿಸಿರುವುದರಿಂದ,

---

सूचयति – अदृश्यत्वादीति ।। उक्तमित्यस्याऽवृत्तिः श्रुताविति शेषः । तथा च – गताधिकरणोदाहृतमुण्डकश्रुत्युक्तादृश्यत्वादिगुणेषु मध्ये 'नित्यं विभुं सर्वगतम्' (मुं.१-१-६) इत्यनेन यत्सर्वगतत्वमुक्तं तच्छन्दोगश्रुतौ 'यस्त्वेतम्' इत्यनेन वैश्वानरस्योक्तमिति योजना । अनेन छन्दोगश्रुतिस्थवैश्वानरशब्दस्यान्यनिष्ठत्वाक्षेपमुखेन पूर्वोक्तसर्वगतत्वादेरन्यनिष्ठत्वाक्षेपात् पूर्वेणास्याऽक्षेपिकी सङ्गतिरुक्ता भवति । वैश्वानरो विषयः, विष्णुरन्यो वेति सन्देहश्च सूचितः ।

श्रुत्यर्थस्तु – 'यस्तु' अधिकारी 'प्रादेशमात्रं' देहहृदये तावत्परिमाणकम् । तत्त्वप्रदीपरीत्याऽधिकार्यपेक्षया प्रादेशमात्रमिति वा । 'अभिविमानम्' अभितो विगतं मानं मर्यादा यस्य तं, सर्वगतम् इति यावत् । 'आत्मानम्' आततगुणम् 'एतं' शरीरस्थं 'वैश्वानरं' तदाख्यविष्णुम् 'एवं' वक्ष्यमाणरीत्या उपास्ते 'सोऽन्नमत्ति' (छां.५.१८.१) स्वयोग्यभोग्यमनुभवतीति ।

ವೈಶ್ವಾನರಃ = ವೈಶ್ವಾನರಶಬ್ದದಿಂದ, ಮುಖ್ಯವಾಚ್ಯನಾದವನು, ವಿಷ್ಣುರೇವ = ವಿಷ್ಣುವೇ ಆಗುತ್ತಾನೆ.(१)

## श्रीपद्मनाभतीर्थविरचितसत्तर्कदीपावळ्याम्ः

## ॐ वैश्वानरः साधारणशब्दविशेषात् ॐ ॥ १-२-२४ ॥

गताधिकरणेनोत्तराधिकरणस्याक्षेपिकीं सङ्गतिं दर्शयति – अदृश्यत्वेति ।। 'नित्यं विभुं सर्वगतम्' इति यत् सर्वगतत्वमुक्तं तन्न विष्णोरेव । श्रुत्यन्तरे वैश्वानरस्योच्यमानत्वात् । अभितो विगतमानत्वेनाभिविमानमात्मानं वैश्वानरमिति वैश्वानराग्नाविव

(१) भाष्यदीपिका – सिद्धान्तयत्सूत्रमवतारयति – अत इति ।। साधारणस्येत्यनन्तरमपीति शेषः । साधारण्यं साम्यम् । तत्र श्रुतेर्नोभयत्र प्रसिद्धत्वरूपं, वैश्वानरशब्दस्यान्यत्रैव प्रसिद्धत्वात् । किन्तु श्रुतेः प्रसिद्धतो लिङ्गेन साम्यरूपं, तदपि निरवकाशत्वेन प्रकारेण, वैश्वानरश्रुतेः विष्णौ प्रसिद्ध्यभावेन तत्र निरवकाशत्वात् पूर्वोक्तसर्वगतत्वस्यापि विष्णोरन्यत्र निरवकाशत्वात् । तथा च – यद्यपि अग्निविष्ण्वोः प्रतिज्ञाविषययोः सतोः पूर्वपक्षसाधकवैश्वानरशब्दो निरवकाशत्वेन प्रकारेणोत्तरपक्षसाधकलिङ्गसाधारणः । श्रुतिलिङ्गयोर्निरवकाशत्वेन साम्येऽपि लिङ्गाच्छ्रुतिः प्रबला । तस्मादग्निरेवेति प्राप्तम् । तथाऽपि साधारणस्यापि वैश्वानरशब्दस्य विष्ण्वेकनिष्ठतया श्रुत्यादिसिद्धेन 'आत्मानं वैश्वानरम्' इत्यात्मशब्देन 'विशेषणात्' विशेषितत्वाद् विष्णुपरत्वसम्भवात् । प्रसिद्ध्यादेरन्यथोपपन्नत्वेन निर्णयकारणाभावाच्छब्दविशेषादात्मशब्दाद् वैश्वानरो विष्णुरेव, 'न देवताभूतं च' इत्यावृत्त्या सूत्रभाष्ययोर्योजना । अनेन निर्णयेनैव पूर्वपक्षः सूचितः । अत्र पक्षे लिङ्गप्राबल्यनिरासाय साधारण्योक्तिः । सिद्धान्तश्रुतेः सावकाशत्वज्ञापनाय साधारण्योक्तिरिति केचित् ।।
यद्वा – भाष्यटीकास्वारस्यादनिर्णयेनैव पूर्वपक्षः । अत्र पक्षे साधारण्यं प्रति धर्मित्वं शब्दस्यैव, न लिङ्गस्यापि । अग्निविष्ण्वोरिति विषयसप्तमी । तथा च यतोऽग्निविष्ण्वोर्यद्यपि वैश्वानरशब्दः साधारणः सम्भवद् वृत्तिकः । तथाऽपि प्रसिद्धिमुखेन निरवकाशत्वेन लिङ्गस्य साधारणश्च । ततः पूर्वोत्तरपक्षसाधकयोः समबलत्वादनिर्णयः । तथाऽप्युभयत्र साधारणस्यापि वैश्वानरशब्दस्येत्यादिका योजना द्रष्टव्या ।।

**विष्णावपि । 'स एष वैश्वानरो विश्वरूपः' इत्यादिना प्रयुक्तत्वात्साधारणो न विष्णोरेवावगमक इति प्राप्ते सूत्रं पठित्वा व्याचष्टे – वैश्वानर इत्यादिना ।।**

ಹಿಂದಿ ಅಧಿಕರಣದಿಂದ ಈ ಅಧಿಕರಣಕ್ಕೆ ಆಕ್ಷೇಪಿಕೀಸಂಗತಿಯನ್ನು ತೋರಿಸುತ್ತಿದ್ದಾರೆ. 'ಅದೃಶ್ಯತ್ವ' ಇತ್ಯಾದಿ ಭಾಷ್ಯದಿಂದ. 'ನಿತ್ಯಂ ವಿಭುಂ ಸರ್ವಗತಮ್' ಎಂಬ ಶ್ರುತಿಯಿಂದ ಹೇಳಲ್ಪಟ್ಟ ಸರ್ವಗತತ್ವವು ವಿಷ್ಣುವಿನಲ್ಲಿ ಯುಕ್ತವಾಗುವುದಿಲ್ಲ. ಏಕೆಂದರೆ ಮತ್ತೊಂದು ಶ್ರುತಿಯು ವೈಶ್ವಾನರನನ್ನು ಸರ್ವಗತನೆಂದು ಹೇಳುತ್ತಿದೆ.

ಶ್ರುತಿಯಲ್ಲಿರುವ ಅಭಿವಿಮಾನಂ ಎಂಬ ಪದದಿಂದ 'ಅಭಿತಃ ವಿಗತಂ ಮಾನಂ' ಎಂಬ ನಿಷ್ಪತ್ತಿಯನ್ನು ವಿವಕ್ಷಿಸಿದಾಗ ಸರ್ವಗತನೆಂಬ ಅರ್ಥವು ದೊರೆಯುತ್ತದೆ. 'ಅಭಿವಿಮಾನಂ ಆತ್ಮಾನಂ ವೈಶ್ವಾನರಂ' ಎಂದು ವೈಶ್ವಾನರಶಬ್ದವು ಅಗ್ನಿಯಲ್ಲಿ ಪ್ರಸಿದ್ಧವಾಗಿರುವಂತೆ ವಿಷ್ಣುವಿನಲ್ಲಿಯೂ ಪ್ರಸಿದ್ಧವಾಗಿದೆ. ಆದ್ದರಿಂದ ಉಭಯತ್ರ ಸಾಧಾರಣವಾದ ಈ ಶಬ್ದವು ವಿಷ್ಣು ಒಬ್ಬನನ್ನೇ ಪ್ರತಿಪಾದಿಸುತ್ತದೆಂದು ನಿರ್ಣಯಿಸಲಾಗದು. ಇದನ್ನು ಪರಿಹರಿಸುವುದಕ್ಕಾಗಿ ಸೂತ್ರವನ್ನು ಪಠಿಸಿ ವ್ಯಾಖ್ಯಾನಿಸುತ್ತಿದ್ದಾರೆ ''ವೈಶ್ವಾನರಃ'' ಇತ್ಯಾದಿ ಭಾಷ್ಯದಿಂದ.

**तत्वप्रकाशिका –**

**।। ॐ वैश्वानरः साधारणशब्दविशेषात् ॐ ।।**

**अत्र लोकतोऽन्यत्रप्रसिद्धवैश्वानरनाम्नः पाचकत्वाद्यनेकलिङ्गसमन्वयसिद्धये ब्रह्मणि समन्वयप्रतिपादनादस्ति शास्त्रादिसङ्गतिः ।**

ಈ ಅಧಿಕರಣದಲ್ಲಿ ಲೋಕತಃ ಅನ್ಯತ್ರಪ್ರಸಿದ್ಧವಾದ ವೈಶ್ವಾನರ ಎಂಬ ನಾಮಾತ್ಮಕಶಬ್ದದ ಸಮನ್ವಯವನ್ನು ವಿಷ್ಣುವಿನಲ್ಲಿ ಸಮನ್ವಯಿಸುತ್ತಿದ್ದಾರೆ. ಹೀಗೆ ಒಂದು ನಾಮಾತ್ಮಕಶಬ್ದದ ಸಮನ್ವಯವನ್ನು ಮಾಡುವುದರಿಂದ ಪಾಚಕತ್ವವೇ ಮೊದಲಾದ ಅನೇಕ ಲಿಂಗಗಳ ಸಮನ್ವಯವು ಬ್ರಹ್ಮನಲ್ಲಿ ಸಿದ್ಧವಾಗುತ್ತದೆ. ಹೀಗೆ ಅನೇಕ ಲಿಂಗಗಳ ಸಮನ್ವಯವನ್ನು ಮಾಡುವುದರ ದೊಡ್ಡ ಲಾಭವನ್ನು ಉದ್ದೇಶಿಸಿ ''ವೈಶ್ವಾನರ'' ಎಂಬ ನಾಮದ ಸಮನ್ವಯವನ್ನು ಈ ಅಧಿಕರಣದಲ್ಲಿ ಮಾಡುತ್ತಿರುವುದರಿಂದ ಶಾಸ್ತ್ರಸಂಗತಿ, ಅಧ್ಯಾಯಸಂಗತಿ ಹಾಗೂ ಪಾದಸಂಗತಿಗಳು ಇರುತ್ತವೆಂದು ತಿಳಿಯಬೇಕು.

**तत्वप्रकाशिका – श्रुत्यादिसङ्गतिं विषयवाक्योदाहरणपूर्वकं विषयादिकं च सूचयति – अदृश्यत्वादीति ।।**

ಇನ್ನು ಶ್ರುತಿಸಂಗತಿ ಹಾಗೂ ಅಧಿಕರಣ ಸಂಗತಿಗಳನ್ನು ವಿಷಯವಾಕ್ಯವನ್ನು ಉದಾಹರಿಸುವ ಮೂಲಕ "ಅದೃಶ್ಯತ್ವಾದಿ" ಎಂಬ ಭಾಷ್ಯದ ವಾಕ್ಯ ತೋರಿಸುತ್ತಿದೆ. ಈ ವಾಕ್ಯದಿಂದ ಈ ಅಧಿಕರಣದ ವಿಷಯವೂ ಸಹ ತಿಳಿಯುತ್ತದೆ.

**तत्वप्रकाशिका – गताधिकरणेऽदृश्यत्वादिगुणा विष्णोरुक्तास्तेषु सर्वगतत्वं चोक्तं 'नित्यं विभुं सर्वगतम्' इति ।**

ಹಿಂದಿನ ಅಧಿಕರಣದಲ್ಲಿ ಅದೃಶ್ಯತ್ವಾದಿ ಗುಣಗಳಿಗೆ ಆಶ್ರಯನಾದವನು ವಿಷ್ಣುವೇ ಆಗಿದ್ದಾನೆಂದು ನಿರ್ಣಯಿಸಿದ್ದಾಯಿತು. ಆದರೆ ಯಾವ ವಾಕ್ಯದಲ್ಲಿ ಅದೃಶ್ಯತ್ವಾದಿಗುಣಗಳು ಹೇಳಲ್ಪಟ್ಟವೆಯೋ ಅದೇ ವಾಕ್ಯದಲ್ಲಿ ಸರ್ವಗತತ್ವವೂ ಸಹ ಹೇಳಲಾಗಿದೆ "ನಿತ್ಯಂ ವಿಭುಂ ಸರ್ವಗತಮ್" ಎಂಬುದಾಗಿ.

**तत्वप्रकाशिका – तददृश्यत्वादिगुणेषूक्तं सर्वगतत्वं च छन्दोगश्रुतौ 'अभिविमान'पदेन वैश्वानरस्योक्तम् ।**

ಈ ಅದೃಶ್ಯತ್ವಾದಿಗುಣಗಳ ಮಧ್ಯದಲ್ಲಿ ಸರ್ವಗತತ್ವವೆಂಬುದೂ ಸಹ ಒಂದುಗುಣವಾಗಿದೆ. ಇದನ್ನು ಪಂಚಮಾಧ್ಯಾಯದ ಛಾಂದೋಗ್ಯಶ್ರುತಿಯಲ್ಲಿ 'ಅಭಿವಿಮಾನ' ಎಂಬ ಪದದಿಂದ ವೈಶ್ವಾನರನೇ ಸರ್ವಗತನಾಗಿದ್ದಾನೆಂದು ಹೇಳಲಾಗಿದೆ.

**तत्वप्रकाशिका – अभितो विगतं मानं मर्यादा यस्येति । 'मानं ज्ञानं लयश्चैव मर्यादा चैव (चापि) कथ्यते' इत्यभिधानात् ।**

ಅಭಿವಿಮಾನಶಬ್ದಕ್ಕೆ ಯಾವ ರೀತಿಯಿಂದಲೂ ಪರಿಮಾಣ ಇಲ್ಲದವನೆಂದು ಅರ್ಥ. "ಮಾನಂ ಜ್ಞಾನಂ ಲಯಶ್ಚೈವ ಮರ್ಯಾದಾ ಚೈವ ಕಥ್ಯತೇ" ಎಂಬ ಕೋಶದ ಆಧಾರದಿಂದ ಮಾನಶಬ್ದಕ್ಕೆ ಮರ್ಯಾದಾ = ಪರಿಮಿತಿ ಎಂಬರ್ಥವು ಸ್ಪಷ್ಟವಾಗುತ್ತದೆ. ಹೀಗೆ ಅಭಿವಿಮಾನ ಪದದಿಂದ ಸರ್ವಗತತ್ವವು ತಿಳಿಯುತ್ತದೆ. ಇದು ವೈಶ್ವಾನರನಲ್ಲಿ ಇದೆಯೆಂದು ಛಾಂದೋಗ್ಯವು ಹೇಳುತ್ತಿದೆ.

**तत्वप्रकाशिका – तस्य च वैश्वनरस्य विष्णोरितरत्वे सर्वगतत्वमप्यन्यस्य प्रसज्येत इत्यवश्यनिर्णेयत्वम् ।**

ಹೀಗೆ ಛಾಂದೋಗ್ಯದಲ್ಲಿ ಹೇಳಲ್ಪಟ್ಟ ವೈಶ್ವಾನರನು ವಿಷ್ಣುವಿಗಿಂತ ಬೇರೆಯವನಾದರೆ ಸರ್ವಗತನೂ ಅವನೇ ಆಗಬೇಕು; ಆದ್ದರಿಂದ ವೈಶ್ವಾನರಶಬ್ದದಿಂದ ವಾಚ್ಯನಾದವನು ಯಾರೆಂದು ಅವಶ್ಯವಾಗಿ ನಿರ್ಣಯಿಸಬೇಕು.

ವೈಶ್ವಾನರಾಧಿಕರಣ (೧-೨-೭)

**तत्वप्रकाशिका – स वैश्वानरो विषयः । किं विष्णुरन्यो वा? इति संशयः । सर्वगतत्वमन्यत्र प्रसिद्धिश्च सन्देहबीजम् ।**

ಆದ್ದರಿಂದ ಈ ಅಧಿಕರಣಕ್ಕೆ ವೈಶ್ವಾನರನೇ ವಿಷಯನಾಗಿದ್ದಾನೆ. ಇವನು ವಿಷ್ಣುವೇ ಆಗಿದ್ದಾನೋ ಅಥವಾ ಬೇರೆಯವನೇ ಆಗಿದ್ದಾನೋ ಎಂದು ಸಂಶಯ. ಸರ್ವಗತತ್ವವು ಬೇರೆಯವನಲ್ಲಿ ಹಾಗೂ ವಿಷ್ಣುವಿನಲ್ಲಿ ಪ್ರಸಿದ್ಧವಾಗಿರುವಿಕೆಯೇ ಸಂದೇಹಕ್ಕೆ ಕಾರಣವಾಗಿದೆ.

**तत्वप्रकाशिका – नायं वैश्वानरो विष्णुः किन्त्वग्निदेवता तेजोभूतं वा स्यादिति पूर्वः पक्षः । वैश्वानरश्रुतेः ।**

ಇಂತಹ ವೈಶ್ವಾನರನು ವಿಷ್ಣುವಾಗಲು ಸಾಧ್ಯವಿಲ್ಲ. ಹೊರತಾಗಿ ಅಗ್ನಿದೇವತೆ ಅಥವಾ ಭೌತಿಕವಾದ ತೇಜಸ್ಸು ವೈಶ್ವಾನರ ಎನಿಸಿದೆಯೆಂದು ಪೂರ್ವಪಕ್ಷ. ಈ ವಿಷಯದಲ್ಲಿ ವೈಶ್ವಾನರ ಶ್ರುತಿಯೇ ಆಧಾರವಾಗಿದೆ.

**तत्वप्रकाशिका – नच वाच्यं सर्वगतत्वलिङ्गाद्वैश्वानरो विष्णुरिति । लिङ्गस्य श्रुतितो दुर्बलत्वात् ।**

ಸರ್ವಗತತ್ವವೆಂಬ ಲಿಂಗದ ಆಧಾರದಿಂದ ವಿಷ್ಣುವೇ ವೈಶ್ವಾನರನಾಗಿದ್ದಾನೆಂದು ಏಕೆನಿರ್ಣಯಿಸಬಾರದು ಎಂದು ಪ್ರಶ್ನಿಸಬಾರದು. ಲಿಂಗವು ಶ್ರುತಿಗಿಂತ ದುರ್ಬಲವಾಗಿದೆ. ಅಗ್ನಿದೇವತೆಯಲ್ಲಿ ಶ್ರುತಿಯು ಪ್ರಮಾಣವಾಗಿರುವುದರಿಂದ ಅವನನ್ನೇ ವೈಶ್ವಾನರನೆಂದು ಹೇಳಬೇಕು.

**तत्वप्रकाशिका – नच लिङ्गस्य निरवकाशत्वेन प्राबल्याच्छ्रुतिबाधकत्वमिति मन्तव्यम् । श्रुतेरपि प्रसिद्धितो निरवकाशत्वात् ।**

ಲಿಂಗವು ನಿರವಕಾಶವಾಗಿರುವುದರಿಂದ ಬಲಿಷ್ಠವಾಗಿದೆ. ಇದು ಶ್ರುತಿಯನ್ನು ಬಾಧಿಸಬಹುದಲ್ಲವೇ ಎಂದು ಪ್ರಶ್ನಿಸಬಾರದು. ಶ್ರುತಿಗಿಂತಲೂ ಲಿಂಗವು ಲೋಕಪ್ರಸಿದ್ಧಿಯಿಂದ ನಿರವಕಾಶವಾಗಿದೆ. ಆದ್ದರಿಂದ ಅತ್ಯಂತಬಲಿಷ್ಠವಾದ ಶ್ರುತಿಯನ್ನು ಲಿಂಗವು ಬಾಧಿಸಲು ಸಾಧ್ಯವಿಲ್ಲ.

**तत्वप्रकाशिका – श्रुतेः विष्णुविषयत्वेऽग्न्यादिविषयतया लोकप्रसिद्धिबाधाद् वैदिकविद्याभेदव्यवहारविरोधाच्च ।**

ವೈಶ್ವಾನರಶ್ರುತಿಯು ವಿಷ್ಣುವನ್ನು ಪ್ರತಿಪಾದಿಸುವುದಾದರೆ ಲೋಕದಲ್ಲಿ ಅಗ್ನಿವಿಷಯಕವಾಗಿಮಾಡುವ ಪ್ರಯೋಗಕ್ಕೆ ಬಾಧವು ಬರುತ್ತದೆ. ಅಷ್ಟೇ ಅಲ್ಲದೆ ಇದು ಅಗ್ನಿವಿದ್ಯೆ ಇದು ಆತ್ಮವಿದ್ಯೆ ಎಂಬ ಭೇದವ್ಯವಹಾರದ ವಿರೋಧವೂ ಸಹ ಬರುತ್ತದೆ.

**तत्वप्रकाशिका – नहि वैश्वानरश्रुतेरग्न्यादिविषयत्वाभावे व्यवहारस्य गत्यन्तरमस्ति। अतः प्रसिद्धिलिङ्गयोरुभयोरपि निरवकाशत्वेन वैश्वानरश्रुतेरग्निविष्णवोः साधारण्यमेव स्यान्न तु लिङ्गेन विष्णुपरतानिश्चयः। अतो न वैश्वानरो विष्णुरिति न सर्वगतत्वं तस्येति भावः।**

ವೈಶ್ವಾನರ ಶ್ರುತಿಯು ಅಗ್ನಿಮೊದಲಾದವರನ್ನು ವಿಷಯೀಕರಿಸದೇ ಇದ್ದಲ್ಲಿ ಲೋಕವ್ಯವಹಾರಕ್ಕೆ ಬೇರೆ ಗತಿಯಿಲ್ಲ. ಆದ್ದರಿಂದ ಲೋಕಪ್ರಸಿದ್ಧಿ ಹಾಗೂ ಲಿಂಗ ಎರಡೂ ಸಹ ನಿರವಕಾಶವಾಗಿವೆ. ಆದ್ದರಿಂದ ವೈಶ್ವಾನರಶ್ರುತಿಯು ಅಗ್ನಿ ಹಾಗೂ ವಿಷ್ಣು ಇಬ್ಬರಲ್ಲಿಯೂ ಸಾಧಾರಣವಾಗಿದೆಯೆಂದು ಹೇಳಿದಂತಾಯಿತು. ಹೀಗಿರುವಾಗ ಕೇವಲ ಸರ್ವಗತತ್ವವೆಂಬ ಲಿಂಗದ ಬಲದಿಂದ ವಿಷ್ಣುವೇ ವೈಶ್ವಾನರನಾಗಿದ್ದಾನೆಂದು ನಿಶ್ಚಯಿಸಲು ಸಾಧ್ಯವಿಲ್ಲ. ಆದ್ದರಿಂದ ವೈಶ್ವಾನರನು ವಿಷ್ಣುವಲ್ಲ. ಆದ್ದರಿಂದ ಸರ್ವಗತನೂ ಸಹ ವಿಷ್ಣುವಾಗುವುದಿಲ್ಲವೆಂದು ಅಭಿಪ್ರಾಯ.

**तत्वप्रकाशिका – सिद्धान्तयत्सूत्रमवतार्य व्याचष्टे – अत इति ।। अयं वैश्वानरो विष्णुरेव ।**

ಈ ಪೂರ್ವಪಕ್ಷವನ್ನು ನಿರಾಕರಿಸುತ್ತಾ ಸಿದ್ಧಾಂತವನ್ನು ಸ್ಥಾಪನೆ ಮಾಡುವುದಕ್ಕಾಗಿ ಸೂತ್ರಕ್ಕೆ ಅವತಾರಿಕೆಯನ್ನು ಕೊಡುವ ಮೂಲಕ ವ್ಯಾಖ್ಯಾನಿಸುತ್ತಿದ್ದಾರೆ "ಅತಃ" ಇತ್ಯಾದಿಯಾಗಿ. ಈ ಶ್ರುತಿಯಲ್ಲಿ ಕೇಳಿಸುತ್ತಿರುವ ವೈಶ್ವಾನರನು ವಿಷ್ಣುವೇ ಆಗಿದ್ದಾನೆ.

**तत्वप्रकाशिका – 'आत्मानं वैश्वानरम्' इत्यात्मशब्दात् । न चोक्तरीत्या साधारणवैश्वानर- श्रुतिसद्भावादनिर्णय इति वाच्यम् ।**

'ಆತ್ಮಾನಂ ವೈಶ್ವಾನರಮ್' ಎಂಬುದಾಗಿ ಆತ್ಮಶಬ್ದವು ಪ್ರಯುಕ್ತವಾಗಿದೆ. ವಿಷ್ಣುವಿನಲ್ಲಷ್ಟೇ ಪ್ರಸಿದ್ಧವಾದ ಈ ಆತ್ಮಶಬ್ದದ ಬಲದಿಂದ ವೈಶ್ವಾನರನು ವಿಷ್ಣುವೇ ಆಗಿದ್ದಾನೆಂದು ನಿರ್ಣಯಿಸಬೇಕು. ಹಿಂದೆ ಹೇಳಿದ ಪ್ರಕಾರ ವೈಶ್ವಾನರ ಶಬ್ದವು ಅಗ್ನಿ ಹಾಗೂ ವಿಷ್ಣುವಿನಲ್ಲಿ ಸಾಧಾರಣವಾಗಿರುವುದರಿಂದ ನಿರ್ಣಯಿಸಲು ಸಾಧ್ಯವಿಲ್ಲವಲ್ಲವೇ ಎಂದು ಪ್ರಶ್ನಿಸಬಾರದು.

**तत्वप्रकाशिका – साधारणस्यापि वैश्वानरशब्दस्य 'आत्मशब्दः परे विष्णौ नान्यत्र क्वचि-दिष्यते' इत्यादौ विष्णावेव प्रसिद्धत्वेनान्यत्रानवकाशात्माशब्दसामान ाधिकरण्येन विष्णुपरत्वस्य सम्भवात् ।**

ಹೌದು; ಇಬ್ಬರಲ್ಲಿಯೂ ಸಾಧಾರಣವಾಗಿರಬಹುದು. ಆದರೂ "ಆತ್ಮಶಬ್ದಃ ಪರೇ ವಿಷ್ಣೌ ನಾನ್ಯತ್ರ ಕ್ವಚಿದಿಷ್ಯತೇ" ಇತ್ಯಾದಿಯಾಗಿ ವಿಷ್ಣುವಿನಲ್ಲಷ್ಟೇ ಪ್ರಸಿದ್ಧವಾಗಿದ್ದು, ಬೇರೆಯವರಲ್ಲಿ ಕಥಂಚಿದಪಿ

ಪ್ರಯೋಗಿಸಲು ಸಾಧ್ಯವಿಲ್ಲದ ಆತ್ಮಶಬ್ದದ ಸಾಮಾನಾಧಿಕರಣ್ಯದ ಬೆಂಬಲದಿಂದ ವೈಶ್ವಾನರಶಬ್ದದಿಂದ ಪ್ರತಿಪಾದ್ಯನಾದವನು ವಿಷ್ಣುವೇ ಆಗಿದ್ದಾನೆಂದು ನಿರ್ಣಯಿಸಬಹುದು.

**तत्वप्रकाशिका – प्रसिद्ध्यादेरन्यथाऽपि सिद्ध्या सावकाशत्वस्य वक्ष्यमाणत्वादिति भावः ।।२४।।**

ಇನ್ನು ಲೋಕಪ್ರಸಿದ್ಧಿ ಮೊದಲಾದವುಗಳನ್ನು ಬೇರೆ ರೀತಿಯಲ್ಲಿಯೂ ಉಪಪಾದಿಸಬಹುದು. ಆ ಪ್ರಸಿದ್ಧಿಯು ಸಾವಕಾಶವಾಗಿದೆಯೆಂಬ ವಿಚಾರವನ್ನು ಮುಂದೆ ಸ್ಪಷ್ಟಪಡಿಸುತ್ತೇವೆ.

**भावदीपः – ॐ वैश्वानरः साधारणशब्दविशेषात् ॐ ।। नाम्न इति ।।** 'श्रुतिर्लिङ्गाधिका परा' इत्यनुभाष्योक्तेः । आपाततोऽन्यत्र रूढत्वात् ।

॥ ಓಂ ವೈಶ್ವಾನರಃ ಸಾಧಾರಣಶಬ್ದವಿಶೇಷಾತ್ ಓಂ ॥

ವೈಶ್ವಾನರಾಧಿಕರಣದಲ್ಲಿ ವೈಶ್ವಾನರವೆಂಬ ನಾಮಾತ್ಮಕಶಬ್ದದ ಸಮನ್ವಯವನ್ನು ವಿಷ್ಣುವಿನಲ್ಲಿ ತೋರಿಸುತ್ತಿದ್ದಾರೆ. "ಶ್ರುತಿರ್ಲಿಂಗಾಧಿಕಾ ಪರಾಃ" ಎಂದು ಒಂದು ವೈಶ್ವಾನರ ಶಬ್ದದ ಸಮನ್ವಯದಿಂದ ಅನೇಕ ಲಿಂಗಗಳ ಸಮನ್ವಯವು ಸಿದ್ಧವಾಗುತ್ತದೆಂಬ ಅನುವ್ಯಾಖ್ಯಾನದ ಮಾತನ್ನು ಇಲ್ಲಿ ಸ್ಮರಿಸಿಕೊಳ್ಳಬೇಕು. "ವೈಶ್ವಾನರ" ಎಂಬ ಶಬ್ದವು ಲೋಕದಲ್ಲಿ ಆಪಾತತಃ ಅನ್ಯತ್ರಪ್ರಸಿದ್ಧವಾಗಿದೆ.

**भावदीपः – 'विश्वजीवान्तरत्वाद्यैः' इत्यणुभाष्योक्तिस्तु सिद्धान्तदिशा ब्रह्मणि यौगिकत्वाभिप्रायेणेति भावः ।**

ವಸ್ತುತಃ ಅಣುಭಾಷ್ಯದಲ್ಲಿ "ವಿಶ್ವಜೀವಾಂತರತ್ವಾದ್ಯೈಃ" ಎಂದು ವೈಶ್ವಾನರ ಶಬ್ದವನ್ನು ಲಿಂಗಾತ್ಮಕವೆಂದು ಹೇಳಿದ್ದಾರೆ. ಆದರ ವಿರೋಧವು ಬರುತ್ತದಲ್ಲವೇ? ಎಂದು ಸಹಜವಾಗಿ ಪ್ರಶ್ನೆ ಬರುತ್ತದೆ. ಆದರೆ ಅಣುಭಾಷ್ಯದಲ್ಲಿ ಸಿದ್ಧಾಂತದ ಪ್ರಕಾರ ವೈಶ್ವಾನರ ಶಬ್ದವು ಯೌಗಿಕವಾಗಿದೆ ಎಂದು ತಿಳಿಸಿದ್ದಾರೆ. ಇಲ್ಲದಿದ್ದರೆ "ವೈಶ್ವಾನರತ್ವಾದ್ಯೈಃ" ಎಂದೇ ಹೇಳುತ್ತಿದ್ದರು. ಹೀಗೆ ಹೇಳದ ಕಾರಣ ಲಿಂಗಾತ್ಮಕಶಬ್ದದ ಸಮನ್ವಯವು ಇಲ್ಲಿ ವಿವಕ್ಷಿತವಾಗಿಲ್ಲವೆಂದು ತಿಳಿಯುತ್ತದೆ.

**भावदीपः – कथं तर्ह्यत्र पादे निवेश? इत्यतः, फलतः पादसङ्गतिरन्तर्नय इवेत्याह – पाचकत्वेति ।।**

ಹಾಗಾದರೆ ವೈಶ್ವಾನರ ಶಬ್ದವು ನಾಮಾತ್ಮಕವಾದಲ್ಲಿ ಇದನ್ನು ಪ್ರಥಮಪಾದದಲ್ಲಿ ಸೇರಿಸಬೇಕಿತ್ತಲ್ಲವೆ? ಲಿಂಗ ಪಾದದಲ್ಲಿ ಇದರ ಸಮನ್ವಯವು ಅಪ್ರಸ್ತುತವಲ್ಲವೆ? ಎಂಬ ಪ್ರಶ್ನೆ ಬರುತ್ತದೆ. ಆದರೆ ನೇರವಾಗಿ ಲಿಂಗದ ಸಮನ್ವಯವನ್ನು ಈ ಪಾದದಲ್ಲಿ ಮಾಡದಿದ್ದರೂ ಫಲತಃ ಲಿಂಗದ ಸಮನ್ವಯವು

ಸಿದ್ಧವಾಗುತ್ತಿರುವುದರಿಂದ ಪಾದಸಂಗತಿಯು ಯುಕ್ತವಾಗುತ್ತದೆಂದು ತಿಳಿಯಬೇಕು. ಯಾವ ರೀತಿಯಾಗಿ ನಾಮಪಾದದಲ್ಲಿ ಅಂತರಾಧಿಕರಣವು ಲಿಂಗಸಮನ್ವಯವನ್ನು ಮಾಡುತ್ತಿದ್ದರೂ ಫಲತಃ ನಾಮಸಮನ್ವಯದಲ್ಲಿ ಪರ್ಯವಸನವಾಗುವುದರಿಂದ ಪಾದಸಂಗತಿಯನ್ನು ಹೊಂದಿದೆಯೋ ಅದರಂತೆ ಇಲ್ಲಿಯೂ ತಿಳಿಯಬೇಕು. ಈ ಅಭಿಪ್ರಾಯದಿಂದ ಟೀಕೆಯಲ್ಲಿ "ಪಾಚಕತ್ವಾದಿ" ಎಂಬ ಮಾತು ಹೊರಟಿದೆ.

**भावदीपः –** 'तद् यद् भक्तं प्रथममागच्छेत् तद्धोमीयम्' इति 'वैश्वानरे तद् हुतं भवति' इत्यादिना पाचकत्वहोमाधारत्वगार्हपत्याद्यङ्गकत्वादिश्रवणादिति भावः ।

"ತದ್ಯದ್ ಭಕ್ತಂ ಪ್ರಥಮಮಾಗಚ್ಛೇತ್ ತದ್ಧೋಮೀಯಂ" ಎಂಬುದಾಗಿ ಮತ್ತು "ವೈಶ್ವಾನರೇ ತದ್ ಹುತಂ ಭವತಿ" ಎಂದು ಪಾಚಕತ್ವ ಹೋಮಾಧಾರತ್ವ ಗಾರ್ಹಪತ್ಯಾದ್ಯಂಗತ್ವ ಮೊದಲಾದ ಅನೇಕ ಲಿಂಗಗಳು ವೈಶ್ವಾನರ ಪ್ರಕರಣದಲ್ಲಿ ಹೇಳಲ್ಪಟ್ಟಿವೆ. ಆದ್ದರಿಂದ ವೈಶ್ವಾನರವೆಂಬ ಒಂದು ನಾಮಾತ್ಮಕ ಶಬ್ದವನ್ನು ಸಮನ್ವಯ ಮಾಡುವುದರಿಂದ ಪಾಚಕತ್ವವೇ ಮೊದಲಾದ ಅನೇಕ ಲಿಂಗಗಳ ಸಮನ್ವಯವು ಸುಲಭವಾಗಿ ಸಿದ್ಧವಾಗುತ್ತದೆಂದು ತಿಳಿಯಬೇಕು.

**भावदीपः –** यद्यपि पाचकत्वं कर्मेति वक्ष्यति । तथापि लिङ्गत्वमप्यस्तीति वा तदन्यलिङ्गापेक्षया वा एवमुक्तिः । अधिकं चन्द्रिकायाम् ।

ವಸ್ತುತಃ ಪಾಚಕತ್ವವು "ಕರ್ಮವಾಗಿದೆ" ಎಂದು ಮುಂದೆ ಹೇಳುತ್ತಾರೆ. ಆದರೂ ಲಿಂಗವೂ ಸಹ ಆಗಿದೆ ಎಂಬ ಅಂಶವನ್ನು ಗಮನಿಸಬೇಕು. ಅಥವಾ ಪಾಚಕತ್ವವು ಕರ್ಮವಷ್ಟೇ ಆಗಿದೆ ಎಂದು ವಿವಕ್ಷಿಸುವುದಾದರೆ ಪಾಚಕತ್ವವನ್ನು ಬಿಟ್ಟು ಉಳಿದ ಲಿಂಗಗಳ ಸಮನ್ವಯಕ್ಕಾಗಿ ಈ ಅಧಿಕರಣವು ಹೊರಟಿದೆ ಎಂದೂ ಸಹ ತಿಳಿಯಬಹುದು. ಹೆಚ್ಚಿನ ವಿಷಯವನ್ನು ಚಂದ್ರಿಕೆಯಲ್ಲಿ ತಿಳಿಯಬಹುದು.

**भावदीपः –** इत्यन्तं भाष्यं सङ्गतिपरत्वेन तावद् व्याकर्तुं परिष्करोति – गतेति ।। भाष्यं व्याचष्टे – अदृश्यत्वादिगुणेषूक्तमिति ।।

"ಇತಿ" ಎಂಬಲ್ಲಿಯತನಕ ಇರುವ ಭಾಷ್ಯವನ್ನು ಸಂಗತಿಪರವಾಗಿ ವ್ಯಾಖ್ಯಾನಿಸುವುದಕ್ಕಾಗಿ "ಗತಾಧಿಕರಣೇ" ಎಂಬ ಟೀಕೆಯು ಹೊರಟಿದೆ. "ಅದೃಶ್ಯತ್ವಾದಿಗುಣೇಷೂಕ್ತಂ" ಎಂಬ ಟೀಕೆಯು ಭಾಷ್ಯವನ್ನು ವ್ಯಾಖ್ಯಾನಿಸುತ್ತಿದೆ.

**भावदीपः –** 'यस्त्वेतम्' इत्यादेरर्थः – छन्दोगेति ।। पञ्चमे वैश्वानरविद्यायामित्यर्थः । प्रथमबृहद्भाष्योक्तमाह – मानमिति ।।

"ಯಸ್ತ್ವೇತಮೇವಂ" ಎಂದು ಭಾಷ್ಯದಲ್ಲಿ ಉದಾಹರಿಸಿದ ಛಾಂದೋಗ್ಯಶ್ರುತಿಯನ್ನು ಟೀಕೆಯಲ್ಲಿ "ಛಂದೋಗಶ್ರುತೌ" ಎಂಬುದಾಗಿ ವ್ಯಾಖ್ಯಾನಿಸುತ್ತಿದ್ದಾರೆ. ಈ ಛಾಂದೋಗ್ಯದ ಮಾತು ಐದನೆಯ

ಅಧ್ಯಾಯದ ವೈಶ್ವಾನರವಿದ್ಯೆಯಲ್ಲಿ ಪ್ರಸಕ್ತವಾಗಿದೆ. ಬೃಹದಾರಣ್ಯಕಭಾಷ್ಯದ ಪ್ರಥಮಾಧ್ಯಾಯದಲ್ಲಿ ಹೇಳಿದ ಮಾತನ್ನು "ಮಾನಂ ಜ್ಞಾನಂ" ಎಂಬುದರಿಂದ ತೋರಿಸುತ್ತಿದ್ದಾರೆ.

**भावदीपः – भावमाह – तस्येति ।। वक्ष्यमाणन्यायेनेतरत्व इत्यर्थः । इति सङ्गतिसम्भवादिति हेत्वर्थोऽत्रेति शब्दः**

ಒಟ್ಟು ಅಭಿಪ್ರಾಯವನ್ನು "ತಸ್ಯ ಚ" ಎಂಬ ವಾಕ್ಯದಿಂದ ತೋರಿಸಿದ್ದಾರೆ. ಮುಂದೆ ಹೇಳುವ ನ್ಯಾಯದಿಂದ ವೈಶ್ವಾನರನು ವಿಷ್ಣುವಾಗದಿದ್ದಲ್ಲಿ ಎಂದು "ತಸ್ಯಚ" ಎಂಬ ವಾಕ್ಯದ ಅಭಿಪ್ರಾಯ. "ಪ್ರಸಜ್ಯೇತೇತ್ಯವಶ್ಯನಿರ್ಣಯತ್ವಂ" ಎಂಬಲ್ಲಿ "ಇತಿ" ಶಬ್ದವು ಹೀಗೆ ಸಂಗತಿಯು ಕೂಡುವುದರಿಂದ ಎಂಬುದಾಗಿ ಹೇತ್ವರ್ಥದಲ್ಲಿದೆ ಎಂದು ತಿಳಿಯಬೇಕು.

**भावदीपः – किं विष्णुरिति ।। किं विष्णुरेव वाऽन्योऽपि वा इत्यर्थः । विष्णुरेव वेति सिद्धान्तकोटेः शेषो वा**

ಟೀಕೆಯಲ್ಲಿ "ಕಿಂ ವಿಷ್ಣುಃ" ಎಂದು ಹೇಳಿದ್ದಾರೆ. ಅಂದರೆ ವಿಷ್ಣುವೊಬ್ಬನೇ ವೈಶ್ವಾನರ ಶಬ್ದದಿಂದ ಪ್ರತಿಪಾದ್ಯನೊ? ಅಥವಾ ವಿಷ್ಣುವಿನ ಜೊತೆಗೆ ಬೇರೆಯವರೂ ಸಹ ಪ್ರತಿಪಾದ್ಯರಾಗಿದ್ದಾರೊ? ಎಂದರ್ಥ. ವಿಷ್ಣುವೊಬ್ಬನೇ ವೈಶ್ವಾನರಶಬ್ದದಿಂದ ಪ್ರತಿಪಾದ್ಯನಾಗಿದ್ದಾನೆ ಎಂಬುದು ಸಿದ್ಧಾಂತ ಕೋಟಿಯ ಅಂಶವಾಗಿದೆ.

**भावदीपः – तदेव भाष्यं पूर्वपक्षतद्युक्तितत्फलोक्तिपरत्वेन व्याचष्टे – नायमिति ।। विष्णुरित्यस्य विष्णुरेवेत्यर्थः । देवताभऊतं चेति सूत्रमनुरुद्ध्याऽह – किन्त्विति ।।**

ಸಂಗತಿ ಪರವಾಗಿ ವ್ಯಾಖ್ಯಾನಿಸಿದ ಭಾಷ್ಯವನ್ನೇ ಪೂರ್ವಪಕ್ಷ, ಪೂರ್ವಪಕ್ಷಯುಕ್ತಿ, ಪೂರ್ವಪಕ್ಷಫಲ ಇವುಗಳ ಪರವಾಗಿಯೂ ವ್ಯಾಖ್ಯಾನಿಸುತ್ತಿದ್ದಾರೆ "ನಾಯಂ" ಇತ್ಯಾದಿ ವಾಕ್ಯದಿಂದ. "ವಿಷ್ಣುರಿತ್ಯಸ್ಯ" ಎಂಬ ಶಬ್ದಕ್ಕೆ ವಿಷ್ಣುವೊಬ್ಬನೇ ಎಂದು ಅರ್ಥೈಸಬೇಕು. "ನ ದೇವತಾ ಭೂತಂ ಚ" ಎಂಬ ಸೂತ್ರದಲ್ಲಿರುವ ದೇವತಾ ಹಾಗೂ ಭೂತಪದಗಳನ್ನು ಅನುಸರಿಸಿ ಅದರಿಂದ ನಿರಾಸವಾಗುವ ಪೂರ್ವಪಕ್ಷವನ್ನು "ಕಿಂತು" ಎಂಬ ಮಾತಿನಿಂದ ತೋರಿಸುತ್ತಿದ್ದಾರೆ.

**भावदीपः –** विष्णुरित्यप्यनुकर्षः । 'वैश्वानरस्य' इति भाष्यसूचितं तावदाह – **वैश्वानरेति ।।**

"ಕಿಂತು" ಎಂಬ ವಾಕ್ಯದಲ್ಲಿ "ವಿಷ್ಣುಃ" ಎಂಬುದನ್ನೂ ಸಹ ಅನುಕರ್ಷ ಮಾಡಬೇಕು. "ವೈಶ್ವಾನರಸ್ಯ" ಎಂಬ ಭಾಷ್ಯದಲ್ಲಿರುವ ಪದದಿಂದ ಸೂಚಿತವಾದ ಪ್ರಮೇಯವನ್ನು "ವೈಶ್ವಾನರಶ್ರುತೇಃ" ಎಂಬುದರಿಂದ ಹೇಳಿದ್ದಾರೆ.

**भावदीपः** – अग्राविष्ण्वोः साधारणस्येति भाष्योक्तं साधारण्यमग्राविष्ण्वोः विवरिष्यन् श्रुतिलिङ्गयोस्तुल्यबलत्वं वक्तुमाह – **नचेति** ।। **प्राबल्यादिति** ।। अन्तरादिनयन्यायेनेति भावः ।

"ಅಗ್ನಾವಿಷ್ಣ್ವೋಃ ಸಾಧಾರಣಸ್ಯೇತಿ" ಎಂಬುದಾಗಿ ಭಾಷ್ಯದಲ್ಲಿ ಹೇಳಿರುವ ಸಾಧಾರಣ್ಯವನ್ನು ಅಗ್ನಿ ಮತ್ತು ವಿಷ್ಣುವಿನಲ್ಲಿ ವಿವರಿಸುತ್ತಿದ್ದಾರೆ. ಮತ್ತು ಅಗ್ನಿಶ್ರುತಿ ಹಾಗೂ ಲಿಂಗಗಳು, ವಿಷ್ಣುಶ್ರುತಿ ಹಾಗೂ ಲಿಂಗಗಳು ಎರಡೂ ಕಡೆ ಸಮಾನವಾದ ಬಲವನ್ನು ಹೊಂದಿವೆ ಎಂದು ತಿಳಿಸುವುದಕ್ಕಾಗಿ "ನ ಚ ವಾಚ್ಯಂ" ಎಂಬ ಟೀಕಾಪಂಕ್ತಿಯು ಹೊರಟಿದೆ. "ಪ್ರಾಬಲ್ಯಾತ್" ಎಂದರೆ ಅಂತರಾಧಿಕರಣದ ನ್ಯಾಯದಿಂದ ಪ್ರಬಲವಾಗಿದೆ ಎಂದು ತಿಳಿಯಬೇಕು.

**भावदीपः** – श्रुतेरपीत्युक्तमेव साक्षादपीति सूत्रव्यावर्त्यं व्यनक्ति – **श्रुतेरिति** ।। **लोकप्रसिद्धीति** ।। लोकव्यवहाराभावापातादित्यर्थः । नैष्फल्यं स्यादिति भावः ।

"ಶ್ರುತೇರಪಿ" ಎಂಬ ವಾಕ್ಯದಿಂದ ಹೇಳಲ್ಪಟ್ಟ ವಿಷಯವನ್ನೇ "ಸಾಕ್ಷಾದಪ್ಯವಿರೋಧಂ" ಎಂಬ ಸೂತ್ರದಿಂದ ವ್ಯಾವರ್ತ್ಯವಾದ ಪೂರ್ವಪಕ್ಷವನ್ನು "ಶ್ರುತೇಃ ವಿಷ್ಣುವಿಷಯತ್ವೇ" ಎಂಬ ವಾಕ್ಯದಿಂದ ಸ್ಪಷ್ಟವಾಗಿ ತೋರಿಸುತ್ತಿದ್ದಾರೆ. "ಲೋಕಪ್ರಸಿದ್ಧಿಬಾಧಾತ್" ಎಂದರೆ ಲೋಕವ್ಯವಹಾರವೇ ಇಲ್ಲದಂತಾಗಬೇಕಾಗುತ್ತದೆ ಎಂದು ಅಭಿಪ್ರಾಯ. ಅಂದರೆ ವೈಶ್ವಾನರಶಬ್ದವು ವಿಷ್ಣುವನ್ನು ಪ್ರತಿಪಾದಿಸಿದರೆ ಲೋಕದಲ್ಲಿ ಅಗ್ನಿಯಲ್ಲಿ ಮಾಡುವ ಪ್ರಯೋಗವು ನಿಷ್ಫಲವಾಗಬೇಕಾಗುತ್ತದೆ ಎಂದು ಅಭಿಪ್ರಾಯ.

**भावदीपः** – एतेनान्तरादिनयेष्वपि निरवकाशलिङ्गेनोक्तः श्रुतिबाधो न सम्मत इति पूर्वोक्तसर्वाक्षेपो दर्शितः । 'अभिव्यक्तेः' इत्यादिसूत्राणां व्यावर्त्यचोद्यमाह – **वैदिकेति** ।।

ಹೀಗೆ ಹೇಳಿದ್ದರಿಂದ ಅಂತರಾದ್ಯಧಿಕರಣಗಳಲ್ಲಿ ನಿರವಕಾಶಲಿಂಗದಿಂದ ಹೇಳಲ್ಪಟ್ಟ ಶ್ರುತಿಬಾಧವು ಸಮ್ಮತವಲ್ಲ ಎಂದು ಪೂರ್ವಪಕ್ಷಿಗಳು ಅಭಿಪ್ರಾಯ ಪಡುತ್ತಾರೆಂದು ತಿಳಿಯುತ್ತದೆ. ಆದ್ದರಿಂದ ಈ ಅಧಿಕರಣದಲ್ಲಿ ಮಾಡುತ್ತಿರುವ ಆಕ್ಷೇಪದಿಂದ ಹಿಂದಿನ ಅಧಿಕರಣಗಳ ಪ್ರಮೇಯವನ್ನೂ ಸಹ ಆಕ್ಷೇಪಿಸುತ್ತಿದ್ದಾರೆಂದು ತಿಳಿಸಿದಂತಾಯಿತು. "ಅಭಿವ್ಯಕ್ತೇರಿತ್ಯಾಶ್ಮರಥ್ಯಾಃ" ಎಂಬ ಸೂತ್ರದಿಂದ ವ್ಯಾವರ್ತ್ಯವಾದ ಪೂರ್ವಪಕ್ಷವನ್ನು "ವೈದಿಕವಿದ್ಯಾಭೇದ" ಎಂಬ ಮಾತಿನಿಂದ ತೋರಿಸುತ್ತಿದ್ದಾರೆ.

**भावदीपः** – अग्न्यादिसर्वशब्दानां विष्णौ मुख्यत्वे सर्वस्य विष्णुविद्यात्वेनेयमग्निविद्या इयमात्मविद्येति भेदव्यवहारो न स्यात् । अस्ति च व्यवहारः । तेन तेषामग्न्यादिवाचित्वं सिद्धमिति तद्विरोधान्न वैश्वानरादिशब्दानां विष्णुविषयत्वमित्यर्थः ।

ಅಗ್ನಿ ಮೊದಲಾದ ಸಕಲ ಶಬ್ದಗಳು ವಿಷ್ಣುವನ್ನೇ ಮುಖ್ಯವಾಗಿ ಪ್ರತಿಪಾದಿಸುವುದಾದರೆ ಎಲ್ಲವೂ ಸಹ ವಿಷ್ಣುವಿದ್ಯೆ ಎಂದು ಹೇಳಿದಂತಾಯಿತು. ಆವಾಗ "ಇದು ಅಗ್ನಿವಿದ್ಯೆ", "ಇದು ಆತ್ಮವಿದ್ಯೆ" ಎಂಬ ಭೇದವ್ಯವಹಾರವೇ ತಪ್ಪಾದೀತು. ಆದರೆ ವಿದ್ಯಾಭೇದದ ವ್ಯವಹಾರವು ಲೋಕದಲ್ಲಿ ಪ್ರಸಿದ್ಧವಾಗಿದೆ. ಇದರಿಂದ ಅಗ್ನಿ ಮೊದಲಾದ ಶಬ್ದಗಳಿಗೆ ಅಗ್ನಿಪ್ರತಿಪಾದಕತ್ವವನ್ನು ಒಪ್ಪಲೇಬೇಕಾಗುತ್ತದೆ. ಇದರ ವಿರೋಧವು ಬರುವುದರಿಂದ ವೈಶ್ವಾನರಾದಿಶಬ್ದಗಳಿಗೆ ವಿಷ್ಣುವಿಷಯತ್ವವನ್ನು ಹೇಳಲು ಬರುವುದಿಲ್ಲ ಎಂದು ನಿರ್ಣಯವಾಯಿತು.

**भावदीपः** – व्यवहारस्य निरवकाशत्वं व्यनक्ति – **नहीति** ।। एवं च सिद्धं साधारण्यमित्याह – **अत इति** ।। व्यवहारस्याग्न्यादिविषयत्वं विना गत्यन्तराभावादित्यर्थः ।

**भावदीपः** –ಲೋಕವ್ಯವಹಾರವು ನಿರವಕಾಶವಾಗಿದೆಯೆಂದು "ನಹಿ" ಎಂಬ ವಾಕ್ಯದಿಂದ ವ್ಯಾಖ್ಯಾನಿಸುತ್ತಿದ್ದಾರೆ. ಹೀಗೆ ಸಿದ್ಧವಾದ ಪ್ರಮೇಯವು ಎರಡೂ ಕಡೆ ಸಮಾನವಾಗಿದೆ ಎಂಬ ವಿಷಯವನ್ನು "ಅತಃ" ಎಂಬ ವಾಕ್ಯವು ಪ್ರತಿಪಾದಿಸುತ್ತಿದೆ. ವ್ಯವಹಾರಕ್ಕೆ ಅಗ್ನಿ ಮೊದಲಾದ ದೇವತೆಗಳೇ ವಿಷಯವೆಂದು ಒಪ್ಪದಿದ್ದರೆ ಬೇರೆ ಗತಿ ಇಲ್ಲವೆಂದು ತಿಳಿಯಬೇಕು.

**भावदीपः** – अग्नाविष्ण्वोरिति 'देवताद्वन्द्वे च' इत्यनङादेशः । अन्तर्नय इवोभयबाधेनैक्यं तु नाऽशङ्क्यम् ।

ಭಾಷ್ಯದಲ್ಲಿರುವ "ಅಗ್ನಾವಿಷ್ಣ್ವೋಃ" ಎಂಬ ಪ್ರಯೋಗವು ತಪ್ಪಲ್ಲ. ಏಕೆಂದರೆ "ದೇವತಾದ್ವಂದ್ವೇ ಚ" ಎಂಬ ಸೂತ್ರದಿಂದ ಅನ ಆದೇಶವು ಬರುವುದರಿಂದ "ಅಗ್ನಾವಿಷ್ಣ್ವೋಃ" ಎಂಬ ರೂಪವು ಸಿದ್ಧವಾಗಿದೆ.

**भावदीपः** – भूतसाधारणश्रुत्या प्राप्तं जडेनाभेदायोगात् ।

ಅಂತರಾಧಿಕರಣದ ನ್ಯಾಯದಂತೆ ಎರಡಕ್ಕೂ ಬಾಧ ಬರುವುದರಿಂದ ಐಕ್ಯವನ್ನು ಒಪ್ಪುವುದು ಸುಲಭವಲ್ಲವೇ? ಎಂದು ಶಂಕಿಸಬಾರದು. ಏಕೆಂದರೆ ಅಗ್ನಿದೇವತೆಯಲ್ಲಷ್ಟೇಲ್ಲದೆ ಜಡವಾದ ಅಗ್ನಿಯಲ್ಲೂ ಪ್ರಯೋಗವಿರುವುದರಿಂದ ಜಡಭೂತವಾದ ಅಗ್ನಿಯ ಜೊತೆಗೆ ಐಕ್ಯವನ್ನು ಹೇಳುವುದು ಅಯುಕ್ತವಾಗುತ್ತದೆ.

**भावदीपः** – कथं तर्हि वैश्वानरस्योक्तमिति भाष्यमित्यतो भावमाह – **अत इति** ।। श्रुतेः साधारण्यादित्यर्थः ।

**भावदीपः** – ಹಾಗಾದರೆ "ವೈಶ್ವಾನರಸ್ಯೋಕ್ತಂ ಇತಿ"ಎಂಬುದಾಗಿ ಭಾಷ್ಯದಲ್ಲಿ ಹೇಗೆ ಹೇಳಿದರು? ಎಂಬ ಪ್ರಶ್ನೆಗೆ "ಅತಃ" ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. ಶ್ರುತಿಯು ಎರಡೂ ಕಡೆ ಸಾಧಾರಣವಾಗಿರುವುದರಿಂದ ಎಂದು ಇದರ ಅರ್ಥ.

ಪರಿಪೂರ್ಣಚಂದ್ರಿಕಾ

**भावदीपः – सर्वगतत्वमित्यन्तवाक्यस्य तात्पर्यम् – न सर्वेति ।।** विष्णुरितीत्यनन्तरं तस्येतीत्यनन्तरं च निश्चय इत्यनुषङ्गः ।

"ಸರ್ವಗತತ್ವಂ" ಎಂಬಲ್ಲಿಯತನಕದ ವಾಕ್ಯದ ತಾತ್ಪರ್ಯವನ್ನು "ನ ಸರ್ವ" ಎಂಬುದರಿಂದ ಸ್ಪಷ್ಟಪಡಿಸುತ್ತಿದ್ದಾರೆ. ವಿಷ್ಣುಃ ಎಂಬುದರ ಅನಂತರ ಮತ್ತು "ತಸ್ಯ" ಎಂಬುದರ ಅನಂತರ "ನಿಶ್ಚಯಃ" ಎಂಬ ಪದವನ್ನು ಅನುಷಂಗ ಮಾಡಿಕೊಳ್ಳಬೇಕು.

**भावदीपः – व्युत्क्रमेण भाष्यं व्याचष्टे – अयमिति ।।** श्रुतिसाधारण्ये विशेषश्रुत्यादेः निश्चय इति न्यायविवरणादिना हेत्वंशं व्याचष्टे – **आत्मानमिति ।।**

ಭಾಷ್ಯವನ್ನು ವ್ಯುತ್ಕ್ರಮವಾಗಿ ವ್ಯಾಖ್ಯಾನಿಸುತ್ತಿದ್ದಾರೆ "ಅಯಂ ವೈಶ್ವಾನರಃ" ಇತ್ಯಾದಿಯಾಗಿ. ಶ್ರುತಿಯು ಉಭಯ ಸಾಧಾರಣವಾದಾಗ ವಿಶೇಷ ಶ್ರುತಿಯು ನಿಶ್ಚಾಯಕವಾಗುತ್ತದೆ ಎಂಬ ನ್ಯಾಯವಿವರಣದ ಪ್ರಕಾರ ಹೇತ್ವಂಶವನ್ನು ವ್ಯಾಖ್ಯಾನಿಸುತ್ತಿದ್ದಾರೆ "ಆತ್ಮಾನಂ" ಇತ್ಯಾದಿಯಾಗಿ.

**भावदीपः – विशेषणपदकृत्यं व्यावर्त्य पूर्वमाह – नचेति ।।** वक्ष्यमाणत्वात् साक्षादपीत्यादि सूत्रेष्विति भावः ।।

ಸೂತ್ರದಲ್ಲಿರುವ 'ವಿಶೇಷಣ' ಪದದ ಸಾರ್ಥಕ್ಯವನ್ನು ಹೇಳುವ ಮೂಲಕ ವ್ಯಾವರ್ತ್ಯವಾದ ಪೂರ್ವಪಕ್ಷವನ್ನು "ನ ಚ" ಎಂಬ ವಾಕ್ಯದಿಂದ ತೋರಿಸುತ್ತಿದ್ದಾರೆ. "ವಕ್ಷ್ಯಮಾಣತ್ವಾತ್" ಎಂದರೆ "ಸಾಕ್ಷಾದಪ್ಯವಿರೋಧಂ ಜೈಮಿನಿಃ" ಎಂಬ ಸೂತ್ರದಲ್ಲಿ ಹೇಳುತ್ತಾರೆಂದು ತಿಳಿಯಬೇಕು.

**वाक्यार्थमञ्जरी – अन्यत्र प्रसिद्धेति ।।** नच सूत्रभाष्ययोरस्याग्निविष्ण्वोः साधारण्योक्त्योभयत्र प्रसिद्धत्वमिति वाच्यम् । वैश्वानरशब्दादी....न्यत्रप्रसिद्धिसर्वगतत्वाख्यविष्णु-लिङ्गयोरुभयोरपि निरवकाशत्वेन तुल्यबलत्वाभिप्रायेणैव तत्र साधारण्योक्त्योभयत्र प्रसिद्ध्यभिप्रायेण तदनभिधानादिति भावः ।। **वैश्वानरनाम्न इति ।।** नच 'विश्वजीवान्तरत्वाद्यैर्लिङ्गैः' इत्यणुभाष्येऽस्य लिङ्गत्वोक्त्या कथं नामत्वमिति वाच्यम् । तस्य सिद्धान्ते वैश्वानरशब्दस्य यौगिकत्वप्रदर्शनायावयवार्थकथन एव तात्पर्येणालिङ्गत्वकथनं तात्पर्याभावात् । अन्यथा वैश्वानरत्वाद्यैरिति ब्रूयादिति भावः । पादसङ्गत्यर्थमाह – **पाचकत्वाद्यनेकलिङ्गसमन्वयसिद्ध्यर्थ इति ।।** यद्यपि पाचकत्वं कर्मेति वक्ष्यति, तथापि लिङ्गत्वमप्यस्तीतीयमुक्तिः ।। **अभिविमानपदेनेति ।।** नच प्रादेशत्वमात्रोक्तिविरोधः, व्योमवच्चेति वक्ष्यमाणत्वात् । तेजोभूतं भूताग्निः । प्रसिद्धितः लौकिकवैदिकप्रसिद्धितः । तदेव

क्रमेणोपपादयति – **श्रुतेरित्यादिना** ।। **वैदिकेति** ।। वेदप्रसिद्धो योऽयं विद्याभेदव्यवहारः, इयं वैश्वानरविद्या, नेयमित्यादिरूपस्तस्माद्विरोधादित्यर्थः । 'देवता द्वन्द्वे च' इत्यनङादेशोऽग्नावैष्णवं च रुक्ममित्यादिवदग्नाविष्ण्वोरित्युपपन्नम् ।। **ॐ वैश्वानरः साधारणशब्दविशेषात् ॐ** ।। वैश्वानरमुपास्ते इत्याद्युक्तवैश्वानरो विष्णुरेव । अग्निविष्णुसाधारणवैश्वानरशब्दस्यात्मशब्देन विशेषणादित्यर्थः । वैश्वानरशब्दस्य विष्णु..सम्भवादित्यन्वयः । कुत इत्यत उक्तम् – **आत्मशब्दसामानाधिकरण्येनेति** ।। आत्मानं वैश्वानरमिति सामानाधिकरण्येनेत्यर्थः । तस्याप्यन्यपरत्वं किन्न स्यादित्यत उक्तम् – **अन्यत्रानवकाशेति** ।। तत्कुत इत्यत उक्तम् – **आत्मशब्द इति** ।। २४ ।।

## ಬ್ರಹ್ಮಮೀಮಾಂಸಾಶಾಸ್ತ್ರ

### ಭಗವದ್ಗೀತೆಯ ಆಧಾರದಿಂದ ವೈಶ್ವಾನರನನ್ನು ತಿಳಿಯಬೇಕು

**सू -ॐ।। स्मर्यमाणमनुमानं स्यादिति ।। ॐ ।।२५।।**

ಸೂತ್ರಾರ್ಥ -- 'ಅಹಂ ವೈಶ್ವಾನರೋ ಭೂತ್ವಾ' ಎಂಬುದಾಗಿ ಭಗವದ್ಗೀತೆಯಲ್ಲಿ ವಿಷ್ಣುವನ್ನೇ ವೈಶ್ವಾನರನೆಂದು ಹೇಳಿರುವುದರಿಂದ ಈ ಸ್ಮೃತಿಯು ಛಾಂದೋಗ್ಯದಲ್ಲಿ ಹೇಳಲ್ಪಟ್ಟ ವೈಶ್ವಾನರನೂ ಸಹ ಬ್ರಹ್ಮನೇ ಆಗಿದ್ದಾನೆಂಬುದಕ್ಕೆ ಜ್ಞಾಪಕವಾಗಿದೆ.

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका** – इति स्मर्यमाणम् 'अहं वैश्वानरो भूत्वा' इति स्मृत्युक्तं विष्णोर्वैश्वानरत्वम्, अनुमानं वैश्वानरविद्यायाः गीतोक्तभगवत्परत्वस्यानुमापकं स्याद् भवेदित्यर्थः ।

ಪರಿಪೂರ್ಣಚಂದ್ರಿಕಾ

ಅರ್ಥ - ಇತಿ ಸ್ಮರ್ಯಮಾಣಂ = 'ಅಹಂ ವೈಶ್ವಾನರೋ ಭೂತ್ವಾ' ಎಂಬುದಾಗಿ ಭಗವದ್ಗೀತೆಯಲ್ಲಿ ವಿಷ್ಣುವಿಗೆ ಹೇಳಲ್ಪಟ್ಟ ವೈಶ್ವಾನರತ್ವವು, ಅನುಮಾನಂ = ಛಾಂದೋಗ್ಯದಲ್ಲಿ ಹೇಳಲ್ಪಟ್ಟ ವೈಶ್ವಾನರನೂ ಸಹ ಬ್ರಹ್ಮನೇ ಆಗಿದ್ದಾನೆಂಬುದಕ್ಕೆ ಜ್ಞಾಪಕವು, ಸ್ಯಾತ್ = ಆಗುತ್ತದೆ.

## श्रीमदानन्दतीर्थभगवत्पादाचार्यविरचित-
# ब्रह्मसूत्रभाष्यम्

**भाष्यम् – 'अहं वैश्वानरो भूत्वा प्राणिनां देहमाश्रितः ।'(भ.गी.१५-१४) इति स्मर्यमाणमत्रापि स एवोच्यत इत्यस्यानुमापकम् । समाख्यानात् । इतिशब्दः समाख्याप्रदर्शकः ॥ २५ ॥**

''ನಾನು ವೈಶ್ವಾನರನಾಗಿ ಎಲ್ಲ ಪ್ರಾಣಿಗಳ ದೇಹದಲ್ಲಿ ನೆಲೆಸಿದ್ದೇನೆ' ಹೀಗೆ ಭಗವದ್ಗೀತೆಯಲ್ಲಿ ಶ್ರೀಕೃಷ್ಣನು ಹೇಳಿದ್ದಾನೆ. ಇದರಿಂದ ಪ್ರಕೃತದಲ್ಲಿಯೂ ವಿಷ್ಣುವೇ ವೈಶ್ವಾನರನೆಂದು ಊಹಿಸಬೇಕು. ಗೀತೆಯು ಛಾಂದೋಗ್ಯದ ಈ ಮಾತಿಗೆ ಸಮಾಖ್ಯಾಪ್ರಮಾಣವಾಗಿದೆ ಎಂಬುದನ್ನು ಸೂಚಿಸುವುದಕ್ಕಾಗಿ ಸೂತ್ರದಲ್ಲಿ ''ಇತಿ'' ಎಂಬ ಶಬ್ದವನ್ನು ಹೇಳಿದ್ದಾರೆ.

ಪ್ರತಿಪದಾರ್ಥ-- ವೈಶ್ವಾನರ ಎಂಬ ಶಬ್ದವು ಅಗ್ನಿ ಹಾಗೂ ವಿಷ್ಣು ಇಬ್ಬರಲ್ಲಿಯೂ ಸಾಧಾರಣವಾಗಿದೆಯಲ್ಲವೇ ಎಂಬ ಆಶಂಕೆಗೆ ಮತ್ತೊಂದು ಹೇತುವನ್ನು ಹೇಳುವ ಮೂಲಕ ವಿಷ್ಣುವೇ ವೈಶ್ವಾನರನೆಂದು ಸಾಧಿಸುವುದಕ್ಕಾಗಿ ಸೂತ್ರವನ್ನು ಪಠಿಸುತ್ತಿದ್ದಾರೆ.

ಅಹಂ = ನಾನು, ವೈಶ್ವಾನರಃ = ವೈಶ್ವಾನರನೆಂಬ, ಭೂತ್ವಾ = ರೂಪವನ್ನು ತಾಳಿ, ಪ್ರಾಣಿನಾಂ = ಸಕಲ ಪ್ರಾಣಿಗಳ, ದೇಹಂ = ದೇಹವನ್ನು, ಆಶ್ರಿತಃ = ಪ್ರವೇಶಿಸಿದ್ದೇನೆ. ಇತಿ = ಹೀಗೆ, ಸ್ಮರ್ಯಮಾಣಂ = ಗೀತೆಯೆಂಬ ಸ್ಮೃತಿಯಲ್ಲಿ ಶ್ರೀಕೃಷ್ಣನು ಹೇಳಿದ್ದಾನೆ. ಅತ್ರಾಪಿ = ವೈಶ್ವಾನರ ಸೂತ್ರದಲ್ಲಿಯೂ, ಸ ಏವ = ಆ ಶ್ರೀಕೃಷ್ಣನೇ, ಉಚ್ಯತೇಜ = ವೈಶ್ವಾನರನೆಂದು ಪ್ರತಿಪಾದ್ಯನಾಗುತ್ತಾನೆ. ಇತ್ಯಸ್ಯ = ಈ ವಿಷಯದಲ್ಲಿ, ಅನುಮಾಪಕಂ = ಜ್ಞಾಪಕವಾದ ಯುಕ್ತಿಯಾಗಿದೆ, ಸಮಾಖ್ಯಾನಾತ್ = ವೈಶ್ವಾನರವಿದ್ಯೆ ಮತ್ತು ಭಗವದ್ಗೀತೆ ಎರಡರಲ್ಲಿಯೂ ಒಂದೇ ವೈಶ್ವಾನರಶಬ್ದವು ಕೇಳಿಸುತ್ತಿರುವುದರಿಂದ. ಇತಿ ಶಬ್ದಃ = ಸೂತ್ರದಲ್ಲಿರುವ ಇತಿಶಬ್ದವು, ಸಮಾಖ್ಯಾಪ್ರದರ್ಶಕಃ = ಸಮಾಖ್ಯಾ ಎಂಬ ಪ್ರಮಾಣವನ್ನು ತೋರಿಸುತ್ತಿದೆ.[१]

(१) भाष्यदीपिका – नन्वात्मशब्दस्याग्न्यादिष्वमुख्यत्वाभ्युपगमेन सामानाधिकरण्याविरोधात् तेषामेव वैश्वानरत्वं किं न स्यादित्याशङ्कां परिहर्तुं समाख्यारूपहेत्वन्तरेण वैश्वानरस्य विष्णुत्वं निश्चाययत्सूत्रं पठित्वा व्याचष्टे – स्मर्यमाणमिति ॥ सूत्रभाष्ययोः 'स्मर्यमाणम्'

**श्रीपद्मनाभतीर्थविरचितसत्तर्कदीपावळ्याम्ः**

**ॐ स्मर्यमाणमनुमानं स्यादिति ॐ ॥ १-२-२५ ॥**

**वैश्वानरशब्दप्रतिपाद्यो विष्णुरेवेत्येतद् भगवद्वाक्यसंवादेन दर्शयत्सूत्रं पठित्वा व्याचष्टे – स्मर्यमाणमित्यादिना ॥ समाख्यानं व्याख्यानम् ॥**

ವೈಶ್ವಾನರಶಬ್ದದಿಂದ ಪ್ರತಿಪಾದ್ಯನಾದವನು ವಿಷ್ಣುವೇ ಆಗಿದ್ದಾನೆ. ಈ ವಿಷಯದಲ್ಲಿ ಭಗವದ್ವಾಕ್ಯವು ಸಂವಾದವಾಗಿದೆಯೆಂದು ತೋರಿಸುತ್ತಾ ಸೂತ್ರವನ್ನು ಪಠಿಸಿ ವ್ಯಾಖ್ಯಾನಿಸುತ್ತಿದ್ದಾರೆ 'ಸ್ಮರ್ಯಮಾಣಮಿತಿ' ಇತ್ಯಾದಿಯಾಗಿ. ಸಮಾಖ್ಯಾನ ಶಬ್ದಕ್ಕೆ ವ್ಯಾಖ್ಯಾನ ಎಂದರ್ಥ.

**तत्वप्रकाशिका –**

**ॐ स्मर्यमाणमनुमानं स्यादिति ॐ ॥ १-२-२५ ॥**

**नन्वात्मशब्दस्यामुख्यवृत्तिमभ्युपेत्याग्न्यादीनामेव वैश्वानरत्वं किं न स्यादित्याशङ्कां परिहर्तुं हेत्वन्तरेण वैश्वानरस्य विष्णुत्वं निश्चाययत्सूत्रमुपन्यस्य व्याचष्टे – स्मर्यमाणमिति ॥**

ಆತ್ಮಶಬ್ದದ ಆಧಾರದಿಂದ ವಿಷ್ಣುವೇ ವೈಶ್ವಾನರನೆನ್ನಬೇಕೆಂದು ಹಿಂದಿನ ಸೂತ್ರದಲ್ಲಿ ಸಮರ್ಥಿಸಿದ್ದಾಯಿತು. ಆದರೆ ಆತ್ಮಶಬ್ದಕ್ಕೆ ಅಮುಖ್ಯವೃತ್ತಿಯನ್ನು ಸ್ವೀಕರಿಸಿ ಅಗ್ನಿದೇವತೆ, ಭೌತಿಕವಾದ ಅಗ್ನಿ ಮೊದಲಾದ ಅರ್ಥದಲ್ಲಿ ವೈಶ್ವಾನರಶಬ್ದವನ್ನು ಏಕೆ ಪ್ರಯೋಗಿಸಬಾರದು? ಎಂಬ ಶಂಕೆಯನ್ನು

---

'अहं वैश्वानरो भूत्वा' इति गीतास्मृत्युक्तं विष्णोर्वैश्वानरत्वम् 'अत्र' वैश्वानरविद्यायामपि 'सः' गीतोक्तो भगवानेव वैश्वानरपदेनोच्यते 'इत्यस्य' एवंरूपस्यार्थस्य 'अनुमानम्' अनुमापकं 'स्यात्' भवेदिति योजना । नन्वहमिति विष्णुना कृष्णेनोक्तेः स्मृत्युक्तवैश्वानरस्य विष्णुत्वेऽपि अत्रोक्तवैश्वानरस्य कुतो विष्णुत्वमित्यत आह – समाख्यानादिति ॥ अस्याः स्मृतेरिति शेषः । तथा च गीतास्मृतेः वैश्वानरविद्यासमानोक्ति रूपत्वादस्यास्तत्समाख्यानान्निश्चयो भवतीत्यर्थः । समाख्यायुक्तिर्न सूत्रोक्तेत्यत आह – इतिशब्द इति ॥ 'प्रदर्शकः' सूचकः । तथा च - इति स्मर्यमाणमित्यस्य इति समाख्याय मानमित्यर्थाभ्युपगमादितिशब्दः समानोक्तिरूपसमाख्यालिङ्गज्ञापक इति भावः । अत्र सूत्रे समाख्यारूपहेत्वन्तरोक्तावपि तस्याऽत्मशब्दाख्यपूर्वहेतोरनिश्चायकत्वशङ्कामुखेन तन्निरासाय प्रवृत्तत्वाच्चशब्दाभावः ॥

ಪರಿಹರಿಸುವುದಕ್ಕಾಗಿ ಮುಂದಿನ ಸೂತ್ರವು ಹೊರಟಿದೆ. ಈ ವಿಷಯದಲ್ಲಿಮತ್ತೊಂದು ಹೇತುವನ್ನು ಹೇಳುವ ಮೂಲಕ ವಿಷ್ಣುವೇ ವೈಶ್ವಾನರನಾಗಿದ್ದಾನೆಂದು ಈ ಸೂತ್ರದಿಂದ ಸಾಧಿಸುತ್ತಿದ್ದಾರೆ. ಅದಕ್ಕಾಗಿ ಸೂತ್ರವನ್ನು ಉಪನ್ಯಾಸ ಮಾಡಿ "ಸ್ಮರ್ಯಮಾಣಮ್" ಇತ್ಯಾದಿಯಾಗಿ ಭಾಷ್ಯಕಾರರು ವ್ಯಾಖ್ಯಾನಿಸುತ್ತಿದ್ದಾರೆ.

**तत्वप्रकाशिका – 'अहं वैश्वानरो भूत्वा' इति स्मृत्युक्तं विष्णोः वैश्वानरत्वमत्र वैश्वानरविद्यायामपि स गीतोक्तो भगवानेव वैश्वानरपदेनोच्यत इत्यस्यार्थस्यानुमापकं भवति ।**

'ಅಹಂ ವೈಶ್ವಾನರೋ ಭೂತ್ವಾ' ಎಂಬುದಾಗಿ ಭಗವದ್ಗೀತೆಯಲ್ಲಿ ವಿಷ್ಣುವೇ ವೈಶ್ವಾನರನಾಗಿದ್ದಾನೆ ಎಂದು ಹೇಳಲಾಗಿದೆ. ಇದರಿಂದ ಗೀತೋಕ್ತನಾದ ವಿಷ್ಣುವೇ ಪ್ರಕೃತ ವೈಶ್ವಾನರವಿದ್ಯೆಯಲ್ಲಿಯೂ ಪ್ರತಿಪಾದ್ಯನಾಗಿದ್ದಾನೆಂದು ಅನುಮಾನದಿಂದ ಸಾಧಿಸಿದಂತಾಗುತ್ತದೆ.

**तत्वप्रकाशिका – स्मृतौ विष्णोर्वैश्वानरत्वोक्तेर्वैश्वानरविद्यायामप्यसावुच्यत इति भावः । स्मृत्युक्तवैश्वानरस्य विष्णुत्वेऽप्यत्रोक्तस्य कुतो विष्णुत्वम्? इत्यत आह – समाख्यानादिति ।। समाख्यानयुक्तिर्न सूत्रितेत्यत आह – इतीति ।। अनेन 'इति स्मर्यमाणम्' इत्यन्वयः सूचितो भवति ।।२५।।**

ಭಗವದ್ಗೀತೆಯಲ್ಲಿ ವಿಷ್ಣುವನ್ನು ವೈಶ್ವಾನರನೆಂದು ಹೇಳಲಾಗಿದೆ. ಆದ್ದರಿಂದ ಅವನೇ ವೈಶ್ವಾನರವಿದ್ಯೆಯಲ್ಲಿಯೂ ಪ್ರತಿಪಾದ್ಯನಾಗಿದ್ದಾನೆಂದು ಸೂತ್ರದ ಅಭಿಪ್ರಾಯ. ಗೀತೆಯಲ್ಲಿ ಹೇಳಲ್ಪಟ್ಟ ವೈಶ್ವಾನರನು ವಿಷ್ಣುವೆಂದು ನಿಶ್ಚಯವಾದರೂ ವೈಶ್ವಾನರವಿದ್ಯೆಯಲ್ಲಿ ಹೇಳಲ್ಪಟ್ಟವನು ವಿಷ್ಣುವೇ ಆಗಿದ್ದಾನೆಂದು ಏಕೆ ನಿಶ್ಚಯವಾಗಬೇಕು? ಎಂಬ ಪ್ರಶ್ನೆಗೆ "ಸಮಾಖ್ಯಾನಾತ್" ಎಂಬುದರಿಂದ ಉತ್ತರಿಸಿದ್ದಾರೆ. ಆ ಸಮಾಖ್ಯಾಪ್ರಮಾಣವನ್ನು ಸೂತ್ರಕಾರರು ಹೇಳಿಲ್ಲವಲ್ಲವೇ? ಎಂಬ ಪ್ರಶ್ನೆಗೆ "ಇತಿ" ಎಂಬುದರಿಂದ ಉತ್ತರಿಸಿದ್ದಾರೆ. ಹೀಗೆ ಈ ಭಾಷ್ಯದಿಂದ 'ಇತಿ ಸ್ಮರ್ಯಮಾಣಂ' ಎಂಬುದಾಗಿ ಸೂತ್ರದಲ್ಲಿ ಅನ್ವಯವನ್ನು ವಿವಕ್ಷಿಸಿ ಸೂತ್ರಾರ್ಥವನ್ನು ಭಾಷ್ಯಕಾರರು ಸ್ಪಷ್ಟಪಡಿಸಿದ್ದಾರೆ.

भावदीपः – ॐ स्मर्यमाणमनुमानं स्यादिति ॐ ।। सूत्रे चशब्दाभावाच्छङ्का-निवर्तकत्वेन सूत्रमवतारयति – नन्विति ।।

॥ ಓಂ ಸ್ಮರ್ಯಮಾಣಮನುಮಾನಂ ಸ್ಯಾದಿತಿ ಓಂ ॥

ಸೂತ್ರದಲ್ಲಿ "ಚ" ಶಬ್ದವು ಇರುವುದಿಲ್ಲ ಆದ್ದರಿಂದ ಶಂಕಾಪರಿಹಾರಕವಾಗಿ ಸೂತ್ರಕ್ಕೆ ಅವತಾರಿಕೆ ನೀಡುತ್ತಿದ್ದಾರೆ "ನನು" ಇತ್ಯಾದಿಯಾಗಿ.

ವೈಶ್ವಾನರಾಧಿಕರಣ (೧-೨-೭)

**भावदीपः – अग्न्यादीनामेवेति ।।** अग्निदेवतातेजोभूतविष्णूनां त्रयाणामेवेत्यर्थः । यद्वोपलक्षितविद्यान्तराभिप्रायेण बहुवचनोक्तिः ।

"ಅಗ್ನ್ಯಾದೀನಾಮೇವ" ಎಂಬ ಶಬ್ದಕ್ಕೆ ಅಗ್ನಿದೇವತೆ, ಭೌತಿಕವಾದ ತೇಜಸ್ಸು, ವಿಷ್ಣು ಮೂರರಲ್ಲಿಯೂ ಸಹ ಎಂದರ್ಥ. ಅಥವಾ ಉಪಲಕ್ಷಿತವಾದ ಮತ್ತೊಂದು ವಿದ್ಯೆಯನ್ನು ವಿವಕ್ಷಿಸಿ "ಅಗ್ನ್ಯಾದೀನಾಂ" ಎಂದು ಬಹುವಚನವನ್ನು ಪ್ರಯೋಗಿಸಿದ್ದಾರೆ.

**भावदीपः – वैश्वानरत्वमित्युपलक्षणम् ।** इन्द्राकाशप्राणगायत्रीत्यादिकमित्यर्थः । स्मृतिसमाख्याप्युपलक्षणं 'यो देवानां नामधा एक एव' 'नामानि सर्वाणि' इत्यादेरिति भावः ।

"ವೈಶ್ವಾನರತ್ವಂ" ಎಂಬುದು ಉಪಲಕ್ಷಣವಾಗಿದೆ. ಇಂದ್ರ, ಆಕಾಶ, ಪ್ರಾಣ, ಗಾಯತ್ರೀ ಇವುಗಳನ್ನು ಇಲ್ಲಿ ವಿವಕ್ಷಿಸಬೇಕು. ಸ್ಮೃತಿಸಮಾಖ್ಯಾವೂ ಸಹ ಇಲ್ಲಿ ಉಪಲಕ್ಷಣವಾಗಿದೆ. "ಯೋ ದೇವಾನಾಂ ನಾಮಾಧಾ ಏಕ ಏವ" ಎಂಬುದನ್ನು ಮತ್ತು "ನಾಮಾನಿ ಸರ್ವಾಣಿ" ಇತ್ಯಾದಿಗಳನ್ನು ಇಲ್ಲಿ ವಿವಕ್ಷಿಸಬೇಕೆಂದು ಅಭಿಪ್ರಾಯ.

**भावदीपः – क्रमेण भाष्यपदानामर्थमाह – अहमिति ।।** इत्यन्वय इति सूत्र इति योज्यम् । भाष्ये 'अहं वैश्वानरो भूत्वा प्राणिनां देहमाश्रितः' इति स्मर्यमाणमित्युक्तेरिति भावः ।

ಕ್ರಮವಾಗಿ ಭಾಷ್ಯದಲ್ಲಿರುವ ಪದಗಳ ಅರ್ಥವನ್ನು "ಅಹಂ" ಇತ್ಯಾದಿ ವಾಕ್ಯದಿಂದ ಸ್ಪಷ್ಟಪಡಿಸುತ್ತಿದ್ದಾರೆ. "ಇತಿ ಅನ್ವಯಃ ಎಂದು ಸೂತ್ರದಲ್ಲಿ ಅನ್ವಯ ಮಾಡಿಕೊಳ್ಳಬೇಕು. ಭಾಷ್ಯದಲ್ಲಿ "ಅಹಂ ವೈಶ್ವಾನರೋ ಭೂತ್ವಾ ಪ್ರಾಣಿನಾಂ ದೇಹಮಾಶ್ರಿತಃ" ಎಂದು "ಸ್ಮರ್ಯಮಾಣಂ" ಎಂದು ಹೇಳಿರುವುದರಿಂದ ಎಂದು ವಿವಕ್ಷಿಸಬೇಕು.

**भावदीपः –** तथाच वैश्वानरो विष्णुरेव । 'अहं वैश्वानरः' इति गीतायां स्मर्यमाणत्वादिति भावः । एतेन न्यायविवरणोक्तस्य विशेषश्रुत्यादेरित्यादिपदस्य समाख्यानामित्यर्थः । तत्कृत्यं च दर्शितं भवति ।।

ಆದ್ದರಿಂದ ವಿಷ್ಣುವೆ ವೈಶ್ವಾನರನಾಗಿದ್ದಾನೆ. ಏಕೆಂದರೆ "ಅಹಂ ವೈಶ್ವಾನರಃ" ಎಂಬುದಾಗಿ ಗೀತೆಯ ಆಧಾರವಿರುವುದರಿಂದ. ಹೀಗೆ ಹೇಳಿದ್ದರಿಂದ ನ್ಯಾಯವಿವರಣದಲ್ಲಿ ಹೇಳಲ್ಪಟ್ಟ "ವಿಶೇಷಶ್ರುತ್ಯಾದೇಃ" ಎಂಬಲ್ಲಿರುವ "ಆದಿ" ಪದದದಿಂದ ಸಮಾಖ್ಯಾ ಪ್ರಮಾಣವನ್ನು ವಿವಕ್ಷಿಸಬೇಕೆಂದು ತಿಳಿಯುತ್ತದೆ. ಇದರ ಕೃತ್ಯವನ್ನು ಈಗ ತೋರಿಸಿದಂತಾಯಿತು.

ಪರಿಪೂರ್ಣಚಂದ್ರಿಕಾ

**वाक्यार्थमञ्जरी – ॐ स्मर्यमाणमनुमानं स्यादिति ॐ ।।** इत्यहं वैश्वानरो भूत्वेत्येवं स्मर्यमाणं गीतास्मृत्युक्तं विष्णोरेव वैश्वानरत्वम् । एतत्स्मृत्युक्तवैश्वानरस्य विष्णुत्वस्यानुमानमनुमापकम् । समाख्यारूपेण साधकं स्यादित्यर्थः ।। समाख्यानाश्वितीति ।। निर्णीतस्थले समानोक्तिरूपसमाख्याया 'इदं वाक्यमेतत्परम्, एतत्समाख्यावत्त्वाद्' इत्यनुमानरूपेण वाक्यतात्पर्य-निर्णायकत्वादिति भावः ।। इति **स्मर्यमाणेति** ।। स्मृतेर्बुद्धिस्थत्वादिति भावः ।।२५।।

## ಬ್ರಹ್ಮಮೀಮಾಂಸಾಶಾಸ್ತ್ರ

## 'ವೈಶ್ವಾನರ' ಎಂಬ ಉಪಾಸನೆ ಅತ್ಯವಶ್ಯ

**सू - ॐ ।। शब्दादिभ्योऽन्तःप्रतिष्ठानान्नेति चेन्न तथा दृष्ट्युपदेशादसम्भवात् पुरुषविधमपि चैनमधीयते ।। ॐ ।। २६ ।।**

ಸೂತ್ರಾರ್ಥ - 'ಅಯಮಗ್ನಿಃ' ಎಂಬಲ್ಲಿ ವೈಶ್ವಾನರನಿಗೆ ಅಗ್ನಿಶಬ್ದವನ್ನು ಪ್ರಯೋಗಿಸಿರುವುದರಿಂದ ಮತ್ತು 'ವೈಶ್ವಾನರೇ ತದ್ಧುತಮ್' ಎಂಬಲ್ಲಿ ಹೋಮಾಧಾರತ್ವ ಗಾರ್ಹಪತ್ಯ ಮೊದಲಾದ ಪ್ರಭೇದಗಳನ್ನು ಹೇಳಿರುವುದರಿಂದ, 'ಯೋ ಯಮ್ ಅಂತಃಪುರುಷೇ' ಎಂಬುದಾಗಿ ದೇಹದಲ್ಲಿ ಕುಳಿತು ಆಹಾರವನ್ನು ಜೀರ್ಣಮಾಡುವಂತಹ ಕ್ರಿಯೆಯನ್ನು ಹೇಳಿರುವುದರಿಂದ ವೈಶ್ವಾನರನು ವಿಷ್ಣುವಲ್ಲ ಎಂದು ಆಕ್ಷೇಪ.

ಇದು ತಪ್ಪು. ಏಕೆಂದರೆ ಅಗ್ನಿ ಮೊದಲಾದ ಹೆಸರುಗಳಿಂದ ಮತ್ತು ಆಯಾ ಕ್ರಿಯೆಗಳಿಂದ ಭಗವಂತನನ್ನು ಉಪಾಸನೆ ಮಾಡುವುದಕ್ಕಾಗಿ ಶ್ರುತಿಗಳಲ್ಲಿ ಹಾಗೆ ಹೇಳಲಾಗಿದೆ. ಲಿಂಗಗಳು ಆದ್ದರಿಂದ ಅಗ್ನಿಶ್ರುತಿ ಹಾಗೂ ಅಗ್ನಿಯ ಲಿಂಗಗಳು ಸಾವಕಾಶಗಳಾಗಿವೆ. ಮತ್ತು ಈ ಪ್ರಕರಣದ ಪ್ರಾರಂಭದಲ್ಲಿ ಹೇಳಲ್ಪಟ್ಟ 'ಕೋ ನ ಆತ್ಮಾ' ಇತ್ಯಾದಿಯಾಗಿ ಆತ್ಮಾದಿ ಶಬ್ದಗಳು ಅಗ್ನಿಯಲ್ಲಿ ಅಸಂಭಾವಿತಗಳಾದ್ದರಿಂದಲೂ ಅಗ್ನಿಯು ವೈಶ್ವಾನರನಲ್ಲ. ಅಷ್ಟೇ ಅಲ್ಲದೆ ಈ ವೈಶ್ವಾನರನಿಗೆ ಪುರುಷಸೂಕ್ತದಲ್ಲಿ ಪ್ರತಿಪಾದ್ಯನಾದ ನಾರಾಯಣನ ಗುಣಗಳನ್ನು ಹೇಳಿರುವುದರಿಂದಲೂ ವೈಶ್ವಾನರನು ವಿಷ್ಣುವೇ ಆಗಿದ್ದಾನೆಂದು ನಿರ್ಣಯವಾಗುತ್ತದೆ.

ವೈಶ್ವಾನರಾಧಿಕರಣ (೧-೨-೭)

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका** — युक्तिसमुच्चये चशब्दः । शब्दादिभ्यः अग्निशब्दहोमाधिकरणत्वलिङ्गादित्यर्थः । अन्तःप्रतिष्ठानात् पाचकत्वेन शरीरान्तरावस्थानाच्च वैश्वानरो न विष्णुः, किन्तु अग्निरेवेति चेन्न । कुतः? तथा दृष्ट्युपदेशात् तथा अग्न्यादिनामलिङ्गकर्मवत्त्वेन दृष्ट्युपदेशात् उपासनोपदेशादित्यर्थः । तथा च अग्न्यादिश्रुतिलिङ्गानां विष्णौ सावकाशत्वान्न तद्विरोध इति भावः । किञ्चात्रोक्तात्मत्वब्रह्मत्वादीनाम् अग्न्यादावसम्भवाच्च वैश्वानरो विष्णुरेव । अपि च यतः छन्दोगाः एनम् वैश्वानरं पुरुषविधं पुरुषसूक्तप्रतिपाद्यनारायणसमानगुणकमेवाधीयतेऽभिदधति । अतोऽपि विष्णुरेवेत्यर्थः । चशब्देन पुरुषसूक्तस्य विष्णुपरत्वं बहुप्रमाणसिद्धमिति सूचितम् ।।

ಅರ್ಥ -- ಚಶಬ್ದವು ಯುಕ್ತಿಸಮುಚ್ಚಯವನ್ನು ಮಾಡುತ್ತಿದೆ. ಶಬ್ದಾದಿಭ್ಯಃ = ಅಗ್ನಿಶಬ್ದ ಹೋಮಾಧಿಕರಣತ್ವ ಮೊದಲಾದ ಲಿಂಗಗಳಿರುವುದರಿಂದ, ಅಂತಃಪ್ರತಿಷ್ಠಾನಾತ್ = ಪಾಚಕತ್ವದಿಂದ ಶರೀರದ ಒಳಗಡೆ ಇದ್ದಾನೆಂದು ಹೇಳಿರುವುದರಿಂದ ವೈಶ್ವಾನರನು ನ= ವಿಷ್ಣುವಾಗುವುದಿಲ್ಲ. ಹೊರತಾಗಿ ಅಗ್ನಿಯೇ ಆಗುತ್ತಾನೆ. ಇತಿ ಚೇನ್ನ = ಹೀಗೆ ಹೇಳಿದರೆ, ಇದು ತಪ್ಪು. ಏಕೆಂದರೆ ತಥಾ = ಹಾಗೆ ಅಗ್ನಿ ಮೊದಲಾದ ಶಬ್ದಗಳು, ಲಿಂಗಗಳು, ದೃಷ್ಟ್ಯುಪದೇಶಾತ್ = ಉಪಾಸನೆಗೋಸ್ಕರ ಹೇಳಲ್ಪಟ್ಟವೆ. ಆದ್ದರಿಂದ ಅಗ್ನಿ ಮೊದಲಾದ ಶ್ರುತಿಗಳು ಹಾಗೂ ಅಗ್ನಿಯ ಲಿಂಗಗಳು ವಿಷ್ಣುವಿನಲ್ಲಿ ಸಾವಕಾಶವಾಗುವುದರಿಂದ ಅದರ ವಿರೋಧವು ಬರುವುದಿಲ್ಲವೆಂದು ಅಭಿಪ್ರಾಯ. ಮತ್ತು ಇಲ್ಲಿ ಹೇಳಲ್ಪಟ್ಟ ಆತ್ಮತ್ವ, ಬ್ರಹ್ಮತ್ವ ಮೊದಲಾದವುಗಳು ಅಗ್ನಿಯಲ್ಲಿ ಅಸಂಭಾವಿತವಾದ್ದರಿಂದ ವೈಶ್ವಾನರನು ವಿಷ್ಣುವೇ ಆಗುತ್ತಾನೆ ಮತ್ತು ಯಾವ ಕಾರಣದಿಂದ ಛಂದೋಗರು, ಏನಮ್ = ಈ ವೈಶ್ವಾನರನನ್ನು ಪುರುಷವಿಧಂ = ಪುರುಷಸೂಕ್ತ ಪ್ರತಿಪಾದ್ಯನಾದ ನಾರಾಯಣನಿಗೆ ಸಮಾನವಾದ ಗುಣಗಳುಳ್ಳವನೆಂದು ಅಧೀಯತೇ = ಅಧ್ಯಯನ ಮಾಡುತ್ತಾರೆ. ಆ ಕಾರಣದಿಂದಲೂ ವಿಷ್ಣುವೇ ವೈಶ್ವಾನರನಾಗುತ್ತಾನೆ. ಚಶಬ್ದದಿಂದ ಪುರುಷಸೂಕ್ತಕ್ಕೆ ಹೇಳಲ್ಪಟ್ಟ ವಿಷ್ಣುಪರತ್ವವು ಬಹುಪ್ರಮಾಣಗಳಿಂದ ಸಿದ್ಧವಾಗಿದೆಯೆಂದು ಸೂಚಿಸಿದ್ದಾರೆ.

श्रीमदानन्दतीर्थभगवत्पादाचार्यविरचित-

# ब्रह्मसूत्रभाष्यम्

भाष्यम् – 'अयमग्निर्वैश्वानरः (बृ.७ -९-१.)

'वैश्वानरमृत आजातमग्निम्' (ऋ.६-७-१)इत्यादिशब्दः ।

'वैश्वानरे तद्धुतं भवति'(छां.५- २४-४ )

'हृदयं गार्हपत्यो मनोऽन्वाहार्यपचन आस्यमाहवनीयः' (छां. ५-१८-२.) इत्याद्यग्निलिङ्गमादिशब्दोक्तम् ।

'येनेदमन्नं पच्यते' (बृ.७-९-१.)

'तद्यद् भक्तं प्रथममागच्छेत् तद्धोमीयम्' (छां. ५-१९-१.)इत्यादिना पाचकत्वेनान्तःप्रतिष्ठानं च प्रतीयते । तस्मान्न विष्णुरिति चेत् –

ಅನುವಾದ - 'ಅಂತಃಸ್ಥನಾದ ಅಗ್ನಿಯು ವೈಶ್ವಾನರನಾಗಿದ್ದಾನೆ' ಎಂದು ಬೃಹದಾರಣ್ಯಕದಲ್ಲಿ ಹೇಳಲಾಗಿದೆ. 'ಅಕಾರವಾಚ್ಯನಾದ ತನ್ನ ಜ್ಞಾನವು ದೇವತೆಗಳಿಗೆ ಬರುವುದಕ್ಕೋಸ್ಕರ ವೈಶ್ವಾನರನ್ನು ಅಗ್ನಿಯೆಂದು ತಿಳಿ' ಇವೇ ಮೊದಲಾದ ಆಧಾರಗಳಿಂದ ಸೂತ್ರದಲ್ಲಿ ಹೇಳಿರುವ ಶಬ್ದ ಎಂಬ ಪದದಿಂದ ಈ ಅರ್ಥವು ದೊರೆಯುತ್ತದೆ.

ಮತ್ತು ಛಾಂದೋಗ್ಯದಲ್ಲಿ 'ವೈಶ್ವಾನರೇ ತದ್ಧುತಮ್' ಎಂಬ ಹೋಮಾಧಾರತ್ವವು, 'ಹೃದಯಂ ಗಾರ್ಹಪತ್ಯಃ' ಎಂಬ ಗಾರ್ಹಪತ್ಯಾದಿ ಪ್ರಭೇದಗಳು ಸೂತ್ರದ ಆದಿಶಬ್ದದಿಂದ ಹೇಳಲ್ಪಟ್ಟ ಅಗ್ನಿಯ ಧರ್ಮಗಳು.

ಇದರಂತೆ ಬೃಹದಾರಣ್ಯಕದಲ್ಲಿ 'ಯಾರಿಂದ ಅನ್ನವು ಪಚನವಾಗುತ್ತಿದೆಯೋ' ಎಂದು ಹೇಳಲಾಗಿದೆ ಮತ್ತು ಛಾಂದೋಗ್ಯದಲ್ಲಿ 'ಏನೇನು ತಿನ್ನುತ್ತೇವೋ ಮೊದಲು ಅದು ಹೊರಬರುತ್ತದೆ. ಅದೇ ಹೋಮದ್ರವ್ಯವೆನಿಸಿಕೊಳ್ಳುತ್ತದೆ' ಎನ್ನಲಾಗಿದೆ. ಇವೇ ಮೊದಲಾದ ಪ್ರಮಾಣಗಳಿಂದ ಅಗ್ನಿಗೆ ಸಕಲ ಪಾಚಕರೂಪನಾಗಿ ಶರೀರದಲ್ಲಿ ಇರುವಿಕೆಯು ಶ್ರುತಿಗಳಿಂದ ತಿಳಿಯುತ್ತದೆ. ಆದ್ದರಿಂದ ವಿಷ್ಣುವು ವೈಶ್ವಾನರನಲ್ಲ. ಇಷ್ಟು ಆಕ್ಷೇಪ.

ಪ್ರತಿಪದಾರ್ಥ -- ವೈಶ್ವಾನರನು ವಿಷ್ಣುವೇ ಅಲ್ಲ ಎಂದು ಆಕ್ಷೇಪಿಸಿ ಸಮಾಧಾನವನ್ನು ಹೇಳುವುದಕ್ಕಾಗಿ ಸೂತ್ರದಲ್ಲಿರುವ ಆಕ್ಷೇಪಾಂಶವನ್ನು ವ್ಯಾಖ್ಯಾನಿಸುತ್ತಿದ್ದಾರೆ.

ಅಯಮಗ್ನಿಃ = ಈ ಅಗ್ನಿಶಬ್ದವು, ವೈಶ್ವಾನರಃ = ವೈಶ್ವಾನರನನ್ನು ಪ್ರತಿಪಾದಿಸುತ್ತಿದೆ.

**भावदीपः** – तत्त्वप्रदीपे तु प्रधानलिङ्गत्वात् पृथगुक्तिरित्युक्तम् । अन्तःप्रतिष्ठान॰ यत्त्यर्थं पूर्वशेषमाह – अयमिति ।।

ತತ್ವಪ್ರದೀಪದಲ್ಲಿ "ಅಂತಃ ಪ್ರತಿಷ್ಠಾನಾತ್" ಎಂಬುದಾಗಿ ಪಾಚಕತ್ವ ಧರ್ಮವನ್ನು ಪ್ರತ್ಯೇಕವಾಗಿ ಸಂಗ್ರಹಿಸಲು ಬೇರೆ ಕಾರಣವನ್ನೇ ಹೇಳಿದ್ದಾರೆ. ಪಾಚಕತ್ವವು ಪ್ರಧಾನವಾದ ಲಿಂಗವಾಗಿರುವುದರಿಂದ ಸೂತ್ರಕಾರರು ಪ್ರತ್ಯೇಕವಾಗಿ ವಿವಕ್ಷಿಸಿದ್ದಾರೆಂದು ಹೇಳಿದ್ದಾರೆ. ಅಂತಃ ಪ್ರತಿಷ್ಠಾನತ್ವವು ಸ್ಪಷ್ಟವಾಗಿ ತಿಳಿಯಬೇಕೆಂಬ ಉದ್ದೇಶದಿಂದ ಶ್ರುತಿಯ ಹಿಂದಿನ ವಾಕ್ಯವನ್ನು "ಅಯಮಗ್ನಿಃ" ಎಂಬುದರಿಂದ ಉಲ್ಲೇಖಿಸಿದ್ದಾರೆ.

**भावदीपः** – आगच्छेदास्यं छान्दोग्ये च पचनरूपाग्निकर्म श्रूयत इत्यर्थः । तस्मादिति भाष्यपदमनूद्यार्थमाह – तस्मादिति ।। उक्तहेत्वन्वयाय न विष्णुरित्येतत् सावधारणं व्याचष्टे – न विष्णुरेवेति ।।

ಛಾಂದೋಗ್ಯದಲ್ಲಿಯೂ ಪಚನರೂಪವಾದ ಅಗ್ನಿ ಕ್ರಿಯೆಯು ಕೇಳಿಸುತ್ತಿದೆ ಎಂದು ತಿಳಿಯಬೇಕು. "ತಸ್ಮಾತ್" ಎಂಬ ಭಾಷ್ಯದ ಪದವನ್ನು ಅನುವಾದ ಮಾಡಿ "ತಸ್ಮಾತ್" ಎಂಬ ವಾಕ್ಯದಿಂದಲೇ ಅರ್ಥವನ್ನು ಹೇಳುತ್ತಿದ್ದಾರೆ. ಹಿಂದೆ ಹೇಳಿದ ಹೇತುವಿಗೆ ಅನ್ವಯವನ್ನು ತಿಳಿಸುವುದಕ್ಕಾಗಿ "ನ ವಿಷ್ಣುಃ" ಎಂಬುದನ್ನು ಸಾವಧಾರಣವಾಗಿ ವ್ಯಾಖ್ಯಾನಿಸುತ್ತಿದ್ದಾರೆ "ನ ವಿಷ್ಣುರೇವ" ಎಂಬುದಾಗಿ.

**भावदीपः** – समाख्येति ।। तत्तद्वाक्योद्धार इत्यनुषङ्गः । सिद्धान्ते 'अहं वैश्वानरो भूत्वा' इति यथा समाख्या तथा वैश्वानरोऽग्निरित्यप्यस्ति । 'अयमग्निः' इति समाख्येति वक्तुमित्यर्थः ।

ಟೀಕೆಯಲ್ಲಿರುವ "ಸಮಾಖ್ಯಾರೂಪೇಣ" ಎಂಬುದರಿಂದ ಆಯಾ ವಾಕ್ಯಗಳನ್ನು ವಿವಕ್ಷಿಸಬೇಕೆಂದು ತಿಳಿಯಬೇಕು. ಅಂದರೆ ಸಿದ್ಧಾಂತದಲ್ಲಿ ಯಾವರೀತಿಯಾಗಿ "ಅಯಂ ವೈಶ್ವಾನರೋ ಭೂತ್ವಾ" ಎಂದು ಸಮಾಖ್ಯಾಪ್ರಮಾಣವು ಕೇಳಿಸುತ್ತಿದೆಯೋ, ಅದೇ ರೀತಿಯಾಗಿ ಪೂರ್ವಪಕ್ಷದಲ್ಲಿಯೂ ಅಗ್ನಿಯು ವೈಶ್ವಾನರನಾಗಿದ್ದಾನೆನ್ನಲು "ಅಯಂ ಅಗ್ನಿಃ" ಎಂಬುದಾಗಿ ಸಮಾಖ್ಯಾಪ್ರಮಾಣವು ಇರುತ್ತದೆ ಎಂದು ತಿಳಿಯಬೇಕು.

**भावदीपः** – इति मन्त्रेति ।। 'मूर्धानं दिवो अरतिं पृथिव्या वैश्वानरमृत आजातमग्निम् । कविं सम्राजमतिथिं जनानामासन्नापात्रं जनयन्त देवाः ।।' इति मन्त्रस्यार्थ उच्यत इत्यर्थः ।

ಟೀಕೆಯಲ್ಲಿ "ಇತಿ ಮಂತ್ರಾರ್ಥಃ" ಎಂದು ಹೇಳಿದ್ದಾರೆ - "ಮೂರ್ಧಾನಂ ದಿವೋ ಅರತಿಂ ಪೃಥಿವ್ಯಾ ವೈಶ್ವಾನರಮೃತ ಆಜಾತಮಗ್ನಿಮ್ । ಕವಿಂ ಸಮ್ರಾಜಮತಿಥಿಂ ಜನಾನಾಮಾಸನ್ನಾ ಪಾತ್ರಂ ಜನಯಂತ ದೇವಾಃ" ಎಂದು ಮಂತ್ರದ ಅರ್ಥವನ್ನು ಹೇಳುತ್ತಾರೆಂದು ತಿಳಿಯಬೇಕು.

ವೈಶ್ವಾನರಾಧಿಕರಣ (೧-೨-೭)

**भावदीपः – पुरुषसूक्तेनैकार्थत्वायार्थोक्तिः** । ऋते सम्यग् ज्ञानाय, सम्यगित्याङोऽर्थः । जनानामित्यत्राप्याकर्षः । जातं 'जनि प्रादुर्भावे' अभिव्यक्तमित्यर्थः । कविमित्यादेरर्थः सर्वज्ञमित्यादि । पात्रं पातारम् । आसन् आस्ये । आस्यतयेति यावत् । आजनयन्त आकुर्वन् ।

ಪುರುಷಸೂಕ್ತದ ಜೊತೆಗೆ ಶ್ರುತಿಗೆ ಒಂದೇ ಅರ್ಥವನ್ನು ತಿಳಿಸುವುದಕ್ಕಾಗಿ "ದಿವಃ" ಇತ್ಯಾದಿಯಾಗಿ ಶ್ರುತ್ಯರ್ಥವನ್ನು ಹೇಳುತ್ತಿದ್ದಾರೆ. ಋತೇ = ಸಮಿಚೀನವಾದ ಜ್ಞಾನಕ್ಕೋಸ್ಕರ. "ಆಙ್" ಎಂಬ ಉಪಸರ್ಗದ ಅರ್ಥವನ್ನು "ಸಮ್ಯಗ್" ಎಂದು ಹೇಳಿದ್ದಾರೆ. "ಜನಾನಾಂ" ಎಂಬುದನ್ನು ಇಲ್ಲೂ ಸಹ ಇಟ್ಟುಕೊಳ್ಳಬೇಕು. "ಜಾತಂ" ಎಂಬ ಪದವು "ಜನೀ ಪಾದುರ್ಭಾವೇ" ಎಂಬ ಧಾತುವಿನಿಂದ ನಿಷ್ಪನ್ನವಾದ್ದರಿಂದ "ಅಭಿವ್ಯಕ್ತವಾಗಿದೆ" ಎಂಬರ್ಥದಲ್ಲಿ ಇದೆ. "ಕವಿಂ" ಎಂಬುದರ ಅರ್ಥ "ಸರ್ವಜ್ಞಂ" ಎಂದು ಹೇಳಿದ್ದಾರೆ. ಪಾತ್ರಂ = ರಕ್ಷಿಸುವವನನ್ನು, ಆಸನ್ = ಮುಖದಲ್ಲಿ. ಅಂದರೆ ತಮ್ಮ ಮುಖವನ್ನಾಗಿ ಮಾಡಿಕೊಂಡರು ಎಂದರ್ಥ. "ಅಜನಯಂತ" ಎಂದರೆ 'ಮಾಡಿದರು' ಎಂದರ್ಥ.

**भावदीपः – गतीति** ।। लोके गमनेनारतिदर्शनाद् रतिविरुद्धगतिसाधनत्वात् पादोऽरतिशब्दार्थ इत्यर्थः ।। **तादर्थ्य इति** ।। 'चर्मणि द्वीपिनं हन्ति दन्तयोर्हन्ति कुञ्जरम्' इत्यादाविवेति भावः

ಲೋಕದಲ್ಲಿ ಗಮನದಿಂದ ಅರತಿಯು ಕಾಣಿಸುತ್ತಿದೆ. ರತಿಗೆ ವಿರುದ್ಧವಾದ್ದರಿಂದ ಅಂದರೆ ಗಮನಕ್ಕೆ ಸಾಧನವಾದ್ದರಿಂದ ಅರತಿ ಶಬ್ದಕ್ಕೆ ಪಾದವೆಂಬ ಅರ್ಥವು ಲಭಿಸುತ್ತದೆ. "ಋತಾಯ ಜಾತಂ" ಎಂಬಲ್ಲಿ ತಾದರ್ಥ್ಯದಲ್ಲಿ ಸಪ್ತಮೀವಿಭಕ್ತಿಯು ಬಂದಿದೆ. "ಚರ್ಮಣಿ ದ್ವೀಪಿನಂ ಹಂತಿ ದಂತಯೋರ್ಹಂತಿ ಕುಂಜರಂ" ಎಂಬ ದೃಷ್ಟಾಂತದಂತೆ ತಿಳಿಯಬೇಕು.

**भावदीपः – एवंविदिति** ।। वैश्वानरज्ञानी । यद्यपि यदि, तस्मान्न विष्णुरितीत यन्तभाष्यमनुवर्त्य तेन नञोऽन्वयमुपेत्यर्थमाह – **उभयत्रेति** । कुत इत्याकाङ्क्षायां 'तस्यैव दृष्ट्युपदेशाद्' इति भाष्यस्य साक्षादनन्वयान्न्यायविवरणोक्तं हेतुं संयोज्य तदुपपादकत्वेन भाष्यं योजयति – **उभयत्रेति** ।। ।।

"ಏವಂ ವಿತ್" ಎಂಬ ಪದಕ್ಕೆ ವೈಶ್ವಾನರನನ್ನು ತಿಳಿದವನು ಎಂದರ್ಥ. "ಯದ್ಯಪಿ" = ಒಂದು ವೇಳೆ. "ತಸ್ಮಾನ್ನವಿಷ್ಣುಃ" ಎಂಬಲ್ಲಿಯ ತನಕದ ಭಾಷ್ಯವನ್ನು ಅನುವೃತ್ತಿ ಮಾಡಿಕೊಂಡು "ನಞ್" ಗೆ ಅನ್ವಯವನ್ನು ಅಂಗೀಕರಿಸಿ ಅರ್ಥವನ್ನು "ಉಭಯತ್ರ" ಎಂಬ ವಾಕ್ಯದಿಂದ ಹೇಳುತ್ತಿದ್ದಾರೆ. ಏನು ಕಾರಣ? ಎಂಬ ಆಶಂಕೆಗೆ "ತಸ್ಯೈವ ದೃಷ್ಟ್ಯುಪದೇಶಾತ್" ಎಂಬ ಭಾಷ್ಯಕ್ಕೆ ನೇರವಾಗಿ ಅನ್ವಯವಿಲ್ಲದ ಕಾರಣ ನ್ಯಾಯವಿವರಣದಲ್ಲಿ ಹೇಳಿದ ಹೇತುವನ್ನು ಸಂಯೋಜನೆ ಮಾಡಿ ಅದಕ್ಕೆ ಉಪಪಾದಕವಾಗಿ ಭಾಷ್ಯವನ್ನು ಯೋಜನೆ ಮಾಡುತ್ತಿದ್ದಾರೆ "ಉಭಯತ್ರ" ಇತ್ಯಾದಿ ವಾಕ್ಯದಿಂದ.

ಪರಿಪೂರ್ಣಚಂದ್ರಿಕಾ

**भावदीपः** – एवञ्च गायत्रीनये 'तथा चेतोऽर्पण' इत्यनेन गायत्र्याद्यप्रसिद्धशब्दस्य विष्णौ प्रयोगे प्रयोजनोक्तिरिह तु वैश्वानरनामादेः सावकाशत्वोक्तिरित्यपौनरुक्त्यमिति भावः ।। **नचेति** ।।

ಟೀಕೆಯಲ್ಲಿ "ಉಭಯತ್ರ ಶ್ರುತ್ಯಾದಿ" ಎಂಬ ವಾಕ್ಯದಿಂದ ಗಾಯತ್ರ್ಯಧಿಕರಣದಿಂದ ಪುನರುಕ್ತಿದೋಷವನ್ನು ಪರಿಹರಿಸಿದ್ದಾರೆ. ಗಾಯತ್ರ್ಯಧಿಕರಣದಲ್ಲಿ "ತಥಾ ಚೇತೋಽರ್ಪಣಾತ್" ಎಂಬ ಸೂತ್ರದಿಂದ ಗಾಯತ್ರೀ ಮೊದಲಾದ ಶಬ್ದಗಳನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡುವುದರ ಪ್ರಯೋಜನವನ್ನು ಸಾಧಿಸಿದ್ದಾರೆ. ಆದರೆ ಈ ಅಧಿಕರಣದಲ್ಲಿ ವೈಶ್ವಾನರ ಮೊದಲಾದ ಶಬ್ದಗಳಿಗೆ ಸಾವಕಾಶತ್ವವನ್ನು ಸಮರ್ಥಿಸುತ್ತಿದ್ದಾರೆ. ಹೀಗೆ ಎರಡು ಅಧಿಕರಣಗಳು ಭಿನ್ನವಿಷಯಕವಾಗಿರುವುದರಿಂದ ಪುನರುಕ್ತಿಯು ಬರುವುದಿಲ್ಲವೆಂದು ತಿಳಿಯಬೇಕು.

**भावदीपः** – 'अनात्तत्वादनात्मानः' इत्यादेरिति भावः । **बलादित्युक्तिलब्धमाह – अत इति** ।। उपासना हि ज्ञानादन्या अर्थहीनाऽपि स्यादित्याशङ्कापनुत्तये सूत्रभाष्ययोः दृष्टीत्युक्तं तद् व्यनक्ति – **नच वाच्यमिति** ।।

ಆತ್ಮಶಬ್ದಕ್ಕೆ "ಅನಾತ್ತತ್ವಾದನಾತ್ಮಾನಃ" ಎಂಬ ನಿರ್ವಚನವನ್ನು ಅಪೇಕ್ಷಿಸಿ ಬೇರೆ ಕಡೆ ಪ್ರಯೋಗಿಸಬಹುದಲ್ಲವೆ? ಎಂಬುದನ್ನು "ನಚ" ಎಂಬ ವಾಕ್ಯದಿಂದ ನಿರಾಕರಿಸುತ್ತಿದ್ದಾರೆ. "ಬಲಾತ್" ಎಂಬುದರಿಂದ ಲಭ್ಯವಾದ ಅರ್ಥವನ್ನು "ಅತಃ" ಎಂಬ ವಾಕ್ಯದಿಂದ ಹೇಳುತ್ತಿದ್ದಾರೆ. ಉಪಾಸನೆಯು ಜ್ಞಾನಕ್ಕಿಂತ ಭಿನ್ನವಾಗಿದೆ ಮತ್ತು ಅರ್ಥಹೀನವಾಗಿದೆ ಎಂಬ ಆಶಂಕೆಯನ್ನು ಪರಿಹರಿಸುವುದಕ್ಕಾಗಿ ಸೂತ್ರ ಹಾಗೂ ಭಾಷ್ಯದಲ್ಲಿ "ದೃಷ್ಟಿ" ಎಂಬ ಪದವನ್ನು ಪ್ರಯೋಗಿಸಿದ್ದಾರೆ. ಅದನ್ನು "ನಚ ವಾಚ್ಯಂ" ಎಂದು ಟೀಕೆಯಲ್ಲಿ ವ್ಯಾಖ್ಯಾನಿಸುತ್ತಿದ್ದಾರೆ.

**भावदीपः** – नाविद्यमानमिति तैत्तिरीयभाष्योक्तस्मृतिः । आदिपदेन 'नच रमन्त्यहो असदुपासनया' इत्यादि गृह्यते ।। **वाक्यान्तरस्येति** ।। 'अहं वैश्वानरो भूत्वा' इति समाख्यात्वेनोक्तवाक्यान्तरस्याविरोधेन योऽर्थः स्थाप्यते तदर्थत्वाच्चास्य वाक्यस्य नासदर्थकत्वमित्यर्थः ।

"ನಾವಿದ್ಯಮಾನಂ" ಎಂಬುದು ತೈತ್ತಿರೀಯಭಾಷ್ಯದಲ್ಲಿ ಹೇಳಿದ ಸ್ಮೃತಿವಾಕ್ಯವೆಂದು ತಿಳಿಯಬೇಕು. ಆದಿ ಪದದಿಂದ "ನಚ ರಮಂತ್ಯಹೋ ಅಸದುಪಾಸನಯಾ" ಇವೇ ಮೊದಲಾದ ಪ್ರಮಾಣಗಳನ್ನು ವಿವಕ್ಷಿಸಬೇಕು. "ವಾಕ್ಯಾಂತರಸ್ಯ" ಎಂದರೆ "ಅಹಂ ವೈಶ್ವಾನರೋ ಭೂತ್ವಾ" ಎಂಬ ಸಮಾಖ್ಯಾಪ್ರಮಾಣದಿಂದ ಹೇಳಲ್ಪಟ್ಟ ವಾಕ್ಯಾಂತರದಿಂದ ವಿರೋಧವಿಲ್ಲವೆಂದು ಅರ್ಥ. ಈ ವಾಕ್ಯಕ್ಕೆ ಅದೇ ಅರ್ಥವನ್ನು ಸ್ಥಾಪನೆ ಮಾಡುವುದರಿಂದ ಅಸದರ್ಥಕತ್ವವನ್ನು ಒಪ್ಪಬಾರದು.

ವೈಶ್ವಾನರಾಧಿಕರಣ (೧-೨-೭)

**भावदीपः** – यद्वा ननु 'मूर्धैव सुतेजाः' इत्यादिना द्रव्यादितादात्म्यमविद्यमानमुच्यत इत्यत आह – **वाक्यान्तरस्येति** ।। 'शीर्ष्णो द्यौः समवर्तत' इत्यस्य विवरिष्यते चैतदग्रे । यद्वा 'हृदयं गार्हपत्यो मनोऽनन्वाहार्यपचन' इत्यादिना वैश्वानराङ्गानां गार्हपत्याद्यैक्यमविद्यमानमेवोच्यत इत्यत आह – **वाक्यान्तरस्येति** ।।

ಅಥವಾ "ಮೂರ್ಧೈವ ಸುತೇಜಾಃ" ಎಂಬುದಾಗಿ ದ್ರವ್ಯಾದಿತಾದಾತ್ಮ್ಯವನ್ನು ಹೇಳಲಾಗಿದೆ. ಇದು ಅವಿದ್ಯಮಾನವಾಗಿದೆಯಲ್ಲವೆ? ಎಂಬ ಪ್ರಶ್ನೆಗೆ "ವಾಕ್ಯಾಂತರಸ್ಯ" ಎಂಬುದರಿಂದ ಉತ್ತರಿಸಿದ್ದಾರೆ. ವಾಕ್ಯಾಂತರಸ್ಯ ಎಂದರೆ " ಶೀರ್ಷ್ಣೋ ದ್ಯೌಃ ಸಮವರ್ತತ" ಎಂದು ಪುರುಷಸೂಕ್ತದಲ್ಲಿ ಭಗವಂತನಿಗೆ ದ್ಯುಲೋಕವೇ ತಲೆಯೆಂದು ಹೇಳಲಾಗಿದೆ. ಈ ವಿಷಯವನ್ನು ಮುಂದೆ ಸ್ಪಷ್ಟಪಡಿಸುತ್ತಾರೆ. ಅಥವಾ "ಹೃದಯಂ ಗಾರ್ಹಪತ್ಯೋ ಮನೋಽನ್ವಾಹಾರ್ಯಪಚನಃ" ಇತ್ಯಾದಿಯಾಗಿ ವೈಶ್ವಾನರನಿಗೆ ಅಂಗವಾದ ಗಾರ್ಹಪತ್ಯಾದಿಗಳಿಂದ ಐಕ್ಯವನ್ನು ಹೇಳುತ್ತಿದ್ದೀರಿ ಇದು ಅವಿದ್ಯಮಾನವಾಗಿದೆಯಲ್ಲವೇ? ಎಂಬ ಪ್ರಶ್ನೆಗೆ "ವಾಕ್ಯಾಂತರಸ್ಯ" ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆಂದು ತಿಳಿಯಬೇಕು.

**भावदीपः** – 'मूर्धैव सुतेजाः' इत्यादेरविरोधेन यस्तादात्म्यादन्योऽर्थः 'यस्माद् यद् जायते चाङ्गाद्' इत्यादिना स्थाप्यते, तदर्थत्वाच्च हृदयमित्यादेरिति नासदर्थकत्वमित्यर्थः । कोऽर्थस्तर्हि योषिततमग्निमित्यस्येत्यतोऽपि ।। **वाक्यान्तरस्येति** ।।

ಮೂರ್ಧೈವ ಸುತೇಜಾಃ" ಎಂಬ ವಚನಗಳಿಗೆ ವಿರೋಧವಿಲ್ಲದಂತೆ ತಾದಾತ್ಮ್ಯಕ್ಕಿಂತ ಬೇರೆ ಅರ್ಥವನ್ನು ಹೇಳಬಹುದು. ದ್ಯುಲೋಕಾದಿಗಳು ಭಗವಂತನ ಯಾವ ಅಂಗಗಳಿಂದ ಹುಟ್ಟುತ್ತವೋ ಆ ಪದಾರ್ಥಗಳಿಗೆ ಭಗವಂತನ ಆ ಅಂಗಗಳಿಂದ ಐಕ್ಯವನ್ನು ಹೇಳಲಾಗಿದೆ. ಆದರೂ ಸಹ ಅಸದರ್ಥಕತ್ವವನ್ನು ಹೇಳಿದಂತಾಗುವುದಿಲ್ಲವೆಂದು ತಿಳಿಯಬೇಕು. ಹಾಗಾದರೆ "ಯೋಷಿತಮಗ್ನಿಂ" ಎಂಬಲ್ಲಿ ಹೇಗೆ ಅರ್ಥೈಸಬೇಕೆಂಬುದಕ್ಕೆ "ವಾಕ್ಯಾಂತರಸ್ಯ" ಎಂಬುದರಿಂದಲೇ ಉತ್ತರಿಸುತ್ತಿದ್ದಾರೆ.

**भावदीपः** – 'तस्मिन्नेतस्मिन्नग्नौ देवा रेतो जुह्वति' इति वाक्यान्तरस्य योऽर्थः रेतोरूपाहुत्याधारत्वं तदर्थत्वाच्च योषितमिति वाक्यस्येति । प्रकृतश्रुत्यैक्यार्थाय स्वहृदय इत्युक्तिः ।

ಯೋಷಿತವೆಂಬ ಅಗ್ನಿಯಲ್ಲಿ ದೇವತೆಗಳು ರೇತಸ್ಸಿನಿಂದ ಹೋಮಿಸುತ್ತಾರೆ. ಹೀಗೆ ವಾಕ್ಯಾಂತರವೆನಿಸಿದ "ಯೋಷಿತಮಗ್ನಿಂ" ಎಂಬುದಕ್ಕೆ ಅರ್ಥವನ್ನು ಹೇಗೆ ಮಾಡುತ್ತೇವೋ ಅಂದರೆ "ರೇತಸ್" ಎಂಬ ಆಹುತಿಗೆ ಆಧಾರವಾಗಿದೆ. ಆದ್ದರಿಂದ "ಯೋಷಿತಂ" ಎಂಬ ವಾಕ್ಯವು ಉಪಪನ್ನವಾಗುತ್ತದೆ ಎಂದು ತಿಳಿಯಬೇಕು. ಪ್ರಕೃತ ಶ್ರುತಿಯಿಂದ ಐಕಾರ್ಥ್ಯವನ್ನು ಹೇಳುವುದುಕ್ಕೋಸ್ಕರ "ಸ್ವಹೃದಯ" ಎಂದು ಹೇಳಿದ್ದಾರೆ.

ಪರಿಪೂರ್ಣಚಂದ್ರಿಕಾ

**भावदीपः** – श्रुतौ सर्वकर्मा 'न ऋते त्वत् क्रियते' इत्यादेः । वज्रधरत्वादीनि सर्वाणि लिङ्गानि चास्यैवेति सर्वलिङ्ग. । तदिच्छयैव सर्वमिति सर्वकामः ।

ಶ್ರುತಿಯಲ್ಲಿರುವ "ಸರ್ವಕರ್ಮಾ", "ನ ಋತೇ ತ್ವತ್ ಕ್ರಿಯತೇ" ಇತ್ಯಾದಿಗಳನ್ನು ವಿವಕ್ಷಿಸಬೇಕು. ಈ ಎಲ್ಲಾ ಶ್ರುತಿಗಳು ವಿಷ್ಣುವನ್ನೇ ಪ್ರತಿಪಾದಿಸುತ್ತವೆ. ವಜ್ರಧರತ್ವವೇ ಮೊದಲಾದ ಸಕಲ ಲಿಂಗಗಳೆಲ್ಲವೂ ವಿಷ್ಣುವಿನದ್ದೇ ಆಗಿವೆ. "ಸರ್ವಕಾಮಃ" ಎಂದರೆ ಭಗವಂತನ ಇಚ್ಛೆಯಿಂದಲೇ ಎಲ್ಲವೂ ಎಂದರ್ಥ.

**भावदीपः** – गुणाः ज्ञानादयः । धर्माः सर्वज्ञादयः । संयोगवियोगादिधर्माः तदधीना इति वा सर्वधमः । सर्वत्र रूपमस्येति वा सर्वमस्य रूपं प्रतिमेति वा सर्वरूपः ।

"ಗುಣಾಃ" = ಜ್ಞಾನಾದಿ ಗುಣಗಳು. ಧರ್ಮಾಃ = ಸರ್ವಜ್ಞತ್ವಾದಿಗಳು. ಸಂಯೋಗ ಹಾಗೂ ವಿಯೋಗ ಮೊದಲಾದ ಧರ್ಮಗಳು ಭಗವದಧೀನವಾಗಿವೆ ಎಂಬರ್ಥದಲ್ಲಿಯೂ "ಸರ್ವಧರ್ಮಾಃ" ಎಂಬ ಪದವನ್ನು ಪ್ರಯೋಗಿಸಿದ್ದಾರೆ. "ಸರ್ವರೂಪಃ" ಎಂಬ ಪದಕ್ಕೆ ಎಲ್ಲಾಕಡೆ ಭಗವಂತನ ರೂಪವಿದೆ ಎಂದರ್ಥ. ಅಥವಾ ಎಲ್ಲವೂ ಭಗವಂತನ ಪ್ರತಿಮೆಯಾಗಿದೆ ಎಂದರ್ಥ.

**भावदीपः** – अलं सम्यगिति अवशिष्टपदार्थस्तत्त्वप्रदीपोक्तः । शब्दादेवेत्यत्र श्रुत्यादेरुपक्रमोपसंहारयोः श्रुतत्वे तन्निश्चायकतया लिङ्गत्वमिति वक्ष्यमाणदिशा अन्तरनय इवात्मब्रह्मशब्दयोरुपक्रमे श्रुतत्वेन तस्य वैष्णवत्वं निश्चाययदात्मादिशब्दद्वयं प्रकरणस्य वैष्णवत्वं निर्धार्य तत्रस्थवैश्वानरनाम्नो विष्ण्वर्थत्वमवधारयतीति भावेनासम्भवादिति सूत्रखण्डभाष्यं व्यनक्ति – प्रकरणबलाच्चेति ।।

"ಅಲಂ" ಎಂಬ ಪದಕ್ಕೆ ಚೆನ್ನಾಗಿ ಎಂದರ್ಥ. ಉಳಿದ ಪದಗಳ ಅರ್ಥವು ತತ್ವಪ್ರದೀಪದಲ್ಲಿ ಸ್ಪಷ್ಟವಾಗಿದೆ. "ಶಬ್ದಾದೇವ" ಎಂಬ ಸೂತ್ರದಲ್ಲಿ ಶ್ರುತಿಗಳ ಉಪಕ್ರಮ ಹಾಗೂ ಉಪಸಂಹಾರಗಳಲ್ಲಿ ಭಗವಂತನ ಲಿಂಗಗಳೇ ಕೇಳಿಸುತ್ತಿರುವುದರಿಂದ ಲಿಂಗಗಳೆಲ್ಲವೂ ಭಗವತ್ಪರವಾಗಿವೆ ಎಂದು ತಿಳಿಯಬೇಕು. ಯಾವರೀತಿಯಾಗಿ ಅಂತರಾಧಿಕರಣದಲ್ಲಿ ಉಪಕ್ರಮ ಹಾಗೂ ಉಪಸಂಹಾರದ ಬಲದಿಂದ ವಿಷ್ಣುಪರವೆಂದು ನಿರ್ಣಯಿಸಿದರೋ, ಅದೇರೀತಿಯಾಗಿ ಆತ್ಮ, ಬ್ರಹ್ಮ ಮೊದಲಾದ ಶಬ್ದಗಳು ಉಪಕ್ರಮದಲ್ಲಿ ಕೇಳಿಸುತ್ತಿರುವುದರಿಂದ ಸಮಗ್ರ ವೈಶ್ವಾನರಪ್ರಕರಣವು ಭಗವಂತನನ್ನೇ ಪ್ರತಿಪಾದಿಸುತ್ತದೆ ಎಂದು ಸ್ಪಷ್ಟವಾಗುತ್ತದೆ. ಈ ಅಭಿಪ್ರಾಯದಿಂದ "ಅಸಂಭವಾತ್" ಎಂಬ ಸೂತ್ರಭಾಗವನ್ನು ಮತ್ತು ಭಾಷ್ಯವನ್ನು "ಪ್ರಕರಣಬಲಾಚ್ಚ" ಎಂಬ ವಾಕ್ಯದಿಂದ ವ್ಯಾಖ್ಯಾನಿಸುತ್ತಿದ್ದಾರೆ.

ವೈಶ್ವಾನರಾಧಿಕರಣ (೧-೨-೭)

**भावदीपः** – न केवलमात्मशब्दस्मृतिसमाख्याभ्यामिति चार्थः । भाष्ये इत्यादिनेत्यस्यान्येषामसम्भवादित्यनेनान्वयः आरम्भाच्चेत्यस्य विष्णुरित्यादिनाऽन्वय मुपेत्य व्याचष्टे – को न इति ।। आरमभाच्चेत्यस्यार्थः आरभ्य उपक्रम्याधीतत्वेन ।

ಕೇವಲ ಆತ್ಮಶಬ್ದ ಮತ್ತು ಸ್ಮೃತಿಸಮಾಖ್ಯಾಗಳಿಂದಷ್ಟೇ ಭಗವಂತನೇ ವೈಶ್ವಾನರನೆಂದು ಸಿದ್ಧವಾಗುವುದಿಲ್ಲ ಹೊರತಾಗಿ ಬೇರೆಯವರಲ್ಲಿ ಈ ಆತ್ಮಶಬ್ದ ಹಾಗೂ ಸ್ಮೃತಿಸಮಾಖ್ಯಾಗಳು ಅಸಂಭಾವಿತವಾಗಿರುವುದರಿಂದಲೂ ಭಗವಂತನೇ ವೈಶ್ವಾನರನಾಗಿದ್ದಾನೆಂದು ತಿಳಿಯಬೇಕು. ಈ ಅಭಿಪ್ರಾಯದಿಂದಲೇ "ಅನ್ಯೇಷಾಮಸಂಭವಾತ್" ಎಂಬುದರ ಜೊತೆಗೆ ಭಾಷ್ಯದಲ್ಲಿರುವ "ಇತ್ಯಾದಿನಾ" ಎಂಬುದಕ್ಕೆ ಅನ್ವಯವನ್ನು ಮಾಡಬೇಕು. "ಆರಂಭಾಚ್ಚ" ಎಂಬುದಕ್ಕೆ "ವಿಷ್ಣುಃ" ಮೊದಲಾದವುಗಳ ಜೊತೆಗೆ ಅನ್ವಯವನ್ನು ಅಂಗೀಕರಿಸಿ "ಕೋ ನ" ಎಂಬುದಾಗಿ ವ್ಯಾಖ್ಯಾನಿಸುತ್ತಿದ್ದಾರೆ. "ಆರಂಭಾಚ್ಚ "ಎಂಬುದಕ್ಕೆ 'ಆರಂಭಿಸಿ' ಎಂದರ್ಥ. ಅಂದರೆ ಉಪಕ್ರಮದಲ್ಲಿ ಅಧ್ಯಯನ ಮಾಡಿರುವುದರಿಂದ ಎಂದರ್ಥ.

**भावदीपः** – प्रकरणत्वाच्चेति ।। तेन सूत्रे अग्रेतनापिपदमसम्भवीत्यत्राप्याकृष्यत इति सूचितम् । वचनेनेत्यनेनेत्यादिना वचनेनेत्यस्य भाष्यस्यार्थः सूचितः

"ಪ್ರಕರಣತ್ವಾಚ್ಚ" ಎಂಬುದರಿಂದ ಸೂತ್ರದಲ್ಲಿ ಮುಂದಿರುವ "ಅಪಿ" ಪದವು "ಅಸಂಭವಾಚ್ಚ" ಎಂಬಲ್ಲಿಯೂ ಸಹ ಅನ್ವಯವನ್ನು ಹೊಂದುತ್ತದೆ ಎಂದು ಸೂಚಿಸಿದ್ದಾರೆ. "ವಚನೇನ" ಎಂದು ಹೇಳಿದ್ದರಿಂದ "ಇತ್ಯಾದಿನಾ ವಚನೇನ" ಎಂಬ ಭಾಷ್ಯದ ಅರ್ಥವನ್ನು ಸೂಚಿಸಿದ್ದಾರೆ.

**भावदीपः** – श्रुतीति ।। तथाच न 'स्मर्यमाणम्' इत्यनेन पौनरुक्त्यमिति भावः । समाख्या चात्रार्थतः । नतु जिज्ञासानयोक्तपरो दिवेति समाख्यावच्छब्दत इति ज्ञेयम् ।

ಟೀಕೆಯಲ್ಲಿ "ಶ್ರುತಿ" ಎಂದು ಹೇಳಿದ್ದರಿಂದ "ಸ್ಮರ್ಯಮಾಣಂ" ಎಂಬ ಸೂತ್ರದಿಂದ ಪುನರುಕ್ತಿಯು ಬರುವುದಿಲ್ಲವೆಂದು ತಿಳಿಯಬೇಕು. ಸಮಾಖ್ಯಾಪ್ರಮಾಣವು ಇಲ್ಲಿ ಆರ್ಥಿಕವಾಗಿ ಬರುತ್ತದೆ ಹೊರತು ಜಿಜ್ಞಾಸಾಧಿಕರಣದಲ್ಲಿ ಹೇಳಿರುವ "ಪರೊ ದಿವಾ"ಎಂಬ ಸಮಾಖ್ಯಾದಂತೆ ನೇರವಾಗಿ ಶಬ್ದದಿಂದ ತಿಳಿಯುವುದಿಲ್ಲ.

**भावदीपः** – चन्द्रमा इति भाष्यं वाक्यप्रतीकमिति मत्वाऽनुरूपवाक्यानि पठति – शीर्ष्ण इति ।। सुतेजा इत्यादेर्द्र्व्यादिरर्थो बोध्यः । भावार्थमाह – अत इति ।।

"ಚಂದ್ರಮಾ ಮನಸೋ ಜಾತಃ" ಎಂಬ ಭಾಷ್ಯದ ಮಾತನ್ನು ಶ್ರುತಿವಾಕ್ಯಕ್ಕೆ ಪ್ರತೀಕವೆಂದು ತಿಳಿದು ಅನುರೂಪವಾದ ವಾಕ್ಯಗಳೆಲ್ಲವನ್ನು "ಶೀರ್ಷ್ಣಃ" ಎಂಬುದರಿಂದ ಪಠಿಸುತ್ತಿದ್ದಾರೆ. "ಸುತೇಜಾಃ" ಮೊದಲಾದವುಗಳಿಂದ ದ್ರವ್ಯಾದಿಗಳು ಎಂಬ ಅರ್ಥವು ತಿಳಿಯುತ್ತದೆ. ಒಟ್ಟು ಅಭಿಪ್ರಾಯವನ್ನು "ಅತಃ" ಎಂಬುದರಿಂದ ಹೇಳಿದ್ದಾರೆ.

ಪರಿಪೂರ್ಣಚಂದ್ರಿಕಾ

**भावदीपः – समाख्ययाऽपीत्यनेन सूत्रे पुरुषविधमपीत्यपिशब्दः असम्भवादित्युक्तप्रकरणसमुच्चय इति दर्शितम् । अनन्वयादाह – प्रसिद्धमितीति ।। उक्तसमुच्चयार्थोऽयमेतमर्थं कथं सूचयेदित्यत आह – अपीति ।।**

"ಸಮಾಖ್ಯಯಾಪಿ" ಎಂಬುದರಿಂದ ಸೂತ್ರದಲ್ಲಿರುವ "ಪುರುಷವಿಧಮಪಿ"ಎಂಬಲ್ಲಿರುವ 'ಅಪಿ' ಶಬ್ದವು "ಅಸಂಭವಾತ್" ಎಂಬ ಪ್ರಕರಣಕ್ಕೆ ಸಮುಚ್ಚಯವಾಗಿದೆಂದು ತಿಳಿಸಿದ್ದಾರೆ. ಅನ್ವಯವು ಸ್ಪಷ್ಟವಾಗಿ ತಿಳಿಯದ ಕಾರಣ "ಪ್ರಸಿದ್ಧಮಿತಿ" ಎಂದು ಹೇಳಿದ್ದಾರೆ. ಹಿಂದೆ ಹೇಳಿರುವುದನ್ನು ಸಮುಚ್ಚಯ ಮಾಡುವುದಕ್ಕಾಗಿ ಇರುವ ಈ ಪದವು ನೀವು ಹೇಳಿದ ಅರ್ಥವನ್ನು ಹೇಗೆ ಸೂಚಿಸುತ್ತದೆ? ಎಂಬ ಪ್ರಶ್ನೆಗೆ "ಅಪಿ" ಎಂಬುದರಿಂದ ಉತ್ತರಿಸಿದ್ದಾರೆ.

**भावदीपः – प्रकरणसमाख्यारूपोभयेत्यर्थः । दृष्ट्युपदेशादित्यस्य तु श्रुत्यादिसावकाशत्वरूपहेतुसाधकत्वेन साक्षात्प्रकृतसाध्ये हेतुत्वाभावादुभयेत्युक्तम् । परः परम इत्यनयोरपौनरुक्त्यायाऽऽह – पर इति**

ಪ್ರಕರಣ ಹಾಗೂ ಸಮಾಖ್ಯಾ ಎರಡನ್ನೂ ಸಹ ಸೂಚಿಸುತ್ತಿದೆ ಎಂದು ಅಭಿಪ್ರಾಯ. ಸೂತ್ರದಲ್ಲಿರುವ "ದೃಷ್ಟ್ಯುಪದೇಶಾತ್" ಎಂಬುದಕ್ಕೆ ಅಗ್ನಿಶ್ರುತ್ಯಾದಿಗಳು ಸಾವಕಾಶವಾಗಿವೆ ಎಂಬ ಹೇತುವನ್ನು ಸಾಧಿಸುವುದಕ್ಕಾಗಿ ಹೇಳಿದ್ದಾರೆಂದು ತಿಳಿಯಬೇಕು. ಹೊರತು ಸಾಕ್ಷಾತ್ತಾಗಿ ಪ್ರಕೃತವಾದ ಸಾಧ್ಯಕ್ಕೆ ಹೇತುವಾಗಿಲ್ಲವೆಂದು "ಉಭಯ" ಎಂದು ತಿಳಿಸಿದ್ದಾರೆ. 'ಪರಃ' ಮತ್ತು 'ಪರಮ' ಎಂಬ ಎರಡು ಪದಗಳಿಗೆ ಪುನರುಕ್ತಿ ಬರಬಾರದೆಂಬ ಉದ್ದೇಶದಿಂದ "ಪರಃ" ಎಂದು ಹೇಳಿದ್ದಾರೆ.

**भावदीपः – पुराणादिष्विति भाष्यस्यादिपदार्थमाह – आदिपदेनेति ।। ब्रह्मतर्केति ।। तृतीये पुरुषविद्यायामित्यत्र भाष्योक्तमेतद्वाक्यं स्मृतौ तत्तज्जनकत्वेनतत्तन्नामवत्त्वोक्तावपि श्रुतावभेदोक्तेः कस्समाधिरुक्त इत्यतोऽभिप्रायमाह – वैश्वानराङ्गानामिति ।**

"ಪುರಾಣಾದಿಷು" ಎಂದು ಭಾಷ್ಯದಲ್ಲಿರುವ 'ಆದಿ' ಪದದ ಅರ್ಥವನ್ನು "ಆದಿಪದೇನ" ಇತ್ಯಾದಿಯಾಗಿ ಹೇಳಿದ್ದಾರೆ. ಬ್ರಹ್ಮತರ್ಕ ಎಂದರೆ ಮೂರನೆಯ ಪಾದದ "ಪುರುಷವಿದ್ಯಾಯಾಂ" ಎಂಬ ಸೂತ್ರದ ಭಾಷ್ಯದಲ್ಲಿ ಈ ವಾಕ್ಯವನ್ನು ಹೇಳಿದ್ದಾರೆಂದು ತಿಳಿಯಬೇಕು. ಸ್ಮೃತಿಯಲ್ಲಿ ಆಯಾ ಪದಾರ್ಥಗಳಿಗೆ ಭಗವಂತನು ಜನಕನಾದ್ದರಿಂದ ಆಯಾ ಹೆಸರುಗಳನ್ನು ಪಡೆದಿದ್ದಾನೆಂಬ ಅರ್ಥವನ್ನು ಹೇಳಿದ್ದಾರೆ. ಆದರೆ ಅಭೇದದ ವಿವಕ್ಷೆಯಿಂದ ಇರುವ ಶ್ರುತಿಗಳಿಗೆ ಏನು ಅರ್ಥವನ್ನು ಹೇಳಿದಂತಾಯಿತು? ಎಂಬ ಪ್ರಶ್ನೆಗೆ "ವೈಶ್ವಾನರಾಂಗಾನಾಂ" ಎಂಬುದರಿಂದ ಉತ್ತರಿಸಿದ್ದಾರೆ.

**भावदीपः – तज्जन्येति ।। सुतेजःप्रभृतिशब्दोक्तद्युप्रभृतिजनकत्वं वक्तुं तदभेदः श्रुतावुच्यते । तथाचैकार्थ्यं श्रुत्योरित्यर्थः ।**

'ಸುತೇಜಃ' ಮೊದಲಾದ ಶಬ್ದಗಳಿಂದ ದ್ಯುಲೋಕವೇ ಮೊದಲಾದವುಗಳಿಗೆ ಭಗವಂತನು ಜನಕನಾದ್ದರಿಂದ ಅವುಗಳಿಂದ ಅಭೇದವು ಶ್ರುತಿಯಲ್ಲಿ ಹೇಳಲ್ಪಟ್ಟಿದೆ. ಆದ್ದರಿಂದ ಎಲ್ಲಾ ಶ್ರುತಿಗೂ ಒಂದೇ ಅರ್ಥದ ವಿವಕ್ಷೆ ಇದೆ ಎಂದು ತಿಳಿಯಬೇಕು.

**भावदीपः** – छान्दोग्यभाष्ये तु 'क्रीडात्मकत्वाद् द्युचाख्यं च सुतेजाश्चातितेजसा । स्वर्गाधारं शिरो विष्णोः सर्वरूपातिदर्शनात् ।। चक्षुस्तु विश्वरूपाख्यम्' इत्यादिना स्वर्गाद्याधाराङ्गविशेषस्यातितेजस्त्वादिनिमित्तेन सुतेजःप्रभृतिशब्दवाच्यत्वमुक्तम् ।

ಛಾಂದೋಗ್ಯ ಭಾಷ್ಯದಲ್ಲಿಯಾದರೂ "ಕ್ರೀಡಾತ್ಮಕತ್ವಾದ್ ದ್ಯುಾಖ್ಯಂ ಚ ಸುತೇಜಾಶ್ಚಾತಿತೇಜಸಾ । ಸ್ವರ್ಗಾಧಾರಂ ಶಿರೋ ವಿಷ್ಣೋಃ ಸರ್ವರೂಪಾತಿದರ್ಶನಾತ್ । ಚಕ್ಷುಸ್ತು ವಿಶ್ವರೂಪಾಖ್ಯಂ" ಇತ್ಯಾದಿಯಾಗಿ ಸ್ವರ್ಗಾದ್ಯಾಧಾರಾಂಗವಿಶೇಷವು ಅತಿತೇಜಸ್ತ್ವಾದಿ ನಿಮಿತ್ತದಿಂದ 'ಸುತೇಜಃ' ಮೊದಲಾದ ಶಬ್ದವಾಚ್ಯವಾಗಿದೆಯೆಂದು ಹೇಳಿದ್ದಾರೆ.

**भावदीपः** – तत्राधाराधेयभावविवक्षा जन्यजनकभावविवक्षाया अप्युपलक्षणम् । यतो जनिस्तत्रैव स्थितिलयाविति प्रसिद्धेः । अत एवात्र तत्त्वप्रदीपे यस्माद् यद् जायते तदाश्रित्य तिष्ठति लीयते चेत्यादिनाऽप्याधाराधेयभावादिविवक्षाऽप्युपलक्षिता ।।

ಭಗವಂತನಿಗೂ ದ್ಯುಲೋಕಕ್ಕೂ ಆಧಾರಾಧೇಯಭಾವದ ವಿವಕ್ಷೆಯು ಜನ್ಯಜನಕಭಾವದ ವಿವಕ್ಷೆಗೆ ಉಪಲಕ್ಷಣವಾಗಿದೆ ಎಂದು ತಿಳಿಯಬೇಕು. ಏಕೆಂದರೆ ಯಾರಿಂದ ಜನ್ಮವಾಗುತ್ತದೋ ಅವನಿಂದಲೇ ಸ್ಥಿತಿ ಹಾಗೂ ಲಯಗಳಾಗುತ್ತವೆ ಎಂಬುದು ಪ್ರಸಿದ್ಧವಾಗಿದೆ. ಆದ್ದರಿಂದಲೇ ತತ್ವಪ್ರದೀಪದಲ್ಲಿ ಯಾವ ಅಂಗದಿಂದ ಹುಟ್ಟುತ್ತದೆಯೋ ಆ ಅಂಗವನ್ನೇ ಆಶ್ರಯಿಸಿರುತ್ತದೆ ಮತ್ತು ಅದರಲ್ಲಿ ಲಯ ಹೊಂದುತ್ತದೆ ಎಂದು ಆಧಾರಾಧೇಯಭಾವಾದಿ ವಿವಕ್ಷೆಯನ್ನು ಉಪಲಕ್ಷಣವನ್ನಾಗಿ ವಿವಕ್ಷಿಸಿದ್ದಾರೆ.

**वाक्यार्थमञ्जरी – ॐ शब्दादिभ्योऽन्तःप्रतिष्ठानान्नेति चेन्न तथा दृष्ट्युपदेशादसम्भवात्पुरुषविधमपि चैनमधीयते ॐ ।।** अग्न्यादिशब्दाद् आदिपदोक्तं होमाधिकरणत्वाद्यग्निलिङ्गेभ्यः अन्तःप्रतिष्ठानादन्तः प्रविश्य पचनरूपाग्निव्यापाराच्च वैश्वानरोऽग्निरेव, न विष्णुरिति चेन्न । तेषां हरौ सावकाशत्वात् । कथमग्न्यादिनामलिङ्गकर्मत्वेन रूपेण दृष्ट्युपदेशाद् विष्णोरुपासनोपदेशाद् असम्भवात् न आत्मा किं ब्रह्मेत्युपक्रमोक्तं ब्रह्म शब्दस्याग्नावसम्भवाच्च । नासौ वैश्वानरः अग्निः । अपिच 'मूर्धैव सुतेजाः' इत्यादिना छन्दोगाः एनं वैश्वानरं पुरुषविधं 'शीर्ष्णो द्यौः

समवर्ततेति पुरुषसूक्तोक्तगुणवन्तमधीयते प्रतिपादयन्ति । अतस्तत्समाख्याबलादपि विष्णुरेव वैश्वानरो, नाग्निरित्यर्थः । समानाधिकृतत्वं सामानाधिकरण्यम् । ऋचि ऋग्वेद वैश्वानरे श्रूयत इति सम्बन्धः ।। गार्हपत्याद्यङ्गत्त्वमिति ।। वैशअवानरस्य गार्हपत्याग्निर्हृदयम् । अन्वाहार्यपचनाग्निर्मनः । आहवनीयाग्निरास्यमिति तदर्थादिति भावः ।। अग्निकर्म चेति ।। अस्य लिङ्गत्वेऽपि ब्राह्मणपरिव्राजकन्यायेन पृथगुक्तिः ।। अयमग्निरिति ।। योऽयं प्रसिद्धोऽन्तः पुरुषे पुरुषस्यान्तर्वर्तते, अयमग्निर्जाठराग्निस्थो भगवान् वैश्वानरो विश्वगुणवत्त्वाद् वैश्वः, आसम्यङ् नरीयते न क्षीयत इत्यानरः वैश्वश्चासावानरश्चेति वैश्वानरः, तस्य व्यापारमाह – येनेति ।। यदिदं प्रसिद्धं पुरुषैरद्यते, इदमन्नं येन पच्यत इत्यर्थः । ननु छान्दोग्यवैश्वानरविचारपरेऽस्मिन्नधिकरणे बृहदारण्यकादिवाक्योदाहरणं कथमित्यत आह – अत्रेति ।। अत्र सूत्राणां विश्वतोमुखत्वादिति भावः ।। समाख्यारूपेणेति ।। तत्प्रयोजनं च विष्णुपक्षवदग्निपक्षे समाख्यास्तीति भावः ।। मूर्धानं दिव इति ।। 'मूर्धानं दिवोऽरतिं पृथिव्या वैश्वानरमृत आजातमग्निम् । कविं सम्राजमतिथिं जनानामासन्नापात्रं जनयन्त देवाः ।।' इति मन्त्रस्येत्यर्थः । दिव इत्यादि षष्ठ्यर्थो जन्यजनकभाव इत्याशयेनाह – दिवः कारणभूतेत्यादि ।। जनानां सम्यग्ज्ञानायेति ।। जनानामित्येतदृत आजातमित्यत्रापि सम्बद्ध्यत इत्युक्तं भवति । सम्यङित्याङोऽर्थः अरतिशब्दस्य पादमिति ऋत इति सप्तम्यन्तस्य ज्ञानायेति थशब्दस्यान्नमिति आसन्नित्यस्य मुखमिति च व्याख्यानानि क्रमेण समर्थयति – गतिसाधनत्वादित्यादिना ।। लोकेन मनो नारतिदर्शनाद् रतिविरुद्धगतिसाधनत्वात्पादो अरतिशब्दार्थ इत्यर्थः । यद्वा करणसाधनाद् 'ऋ गतौ' इत्यतस्मादतिप्रत्यये गुणे च सति, निष्पन्नोऽरतिशब्दः पादवाचक इत्यर्थः ।। तादर्थ्यमिति ।। 'चर्मणि द्वीपिनं हन्ति दन्तयोर्हन्ति कुञ्जरम्' इत्यादाविवेति भावः । इति वाक्यार्थ इति वाक्यादवगन्तव्य इति सम्बन्धः । तथाहि तस्माद् वैश्वानरज्ञानस्य सर्वं पापक्षयहेतुत्वादेव एवंविद् उक्तरीत्या वैश्वानरज्ञानी, यद्यपि चाण्डालाय स्मरणायोग्यायापि स्वोच्छिष्टं दद्यान्न तत्तस्य पापहेतुः, किन्तु तद्दत्तमुच्छिष्टमस्य चण्डालस्यान्तर्यामिण वैश्वानरे आत्मन्येव हुतं स्यादिति हि छान्दोग्यवाक्यार्थः । तदनुसारेण वैश्वानरे तद् हुतं भवतीत्यस्यापि यदि वैश्वानरज्ञानी यस्मैकस्मैचिदन्नं दद्यात्तर्हि तदन्तर्गतवैश्वानर एव हुतं भवतीति

व्याख्यानं कार्यमिति । छान्दोग्यवाक्यस्थभक्तशब्दार्थमाह – **अन्नमिति** ।। ततश्च तत्तदा भोजनवेलायां यद्भक्तमन्नं प्रथममास्यं प्रत्यागच्छेत्, तद्धोमीयं होमद्रव्यमिति तद्वाक्यार्थः । योषितं स्त्रियं वैदिकाः वेदानुकूलग्रन्थवचनात् तैत्तिरीयभाष्ये । वाक्यान्तरस्य योषितमित्यादेः – **योऽर्थ इति** ।। 'अङ्गारसदृशी नारी घृतकुम्भसमः पुमान्' इत्यादिप्रमाणान्तरसिद्धाग्निसादृश्यरूपार्थेत्यर्थः । प्रकृतश्रुत्यर्थैक्याय स्वहृदय इत्युक्तिः । श्रुतौ गुणाः ज्ञानादयः धर्माः सर्वज्ञत्वादयः अरमित्यस्यालमित्यर्थः रलयोरेकार्थत्वात् । अत एव तत्त्वप्रदीपे रमित्यस्य सम्यगित्यर्थ इत्यभिहितम् आरभ्य उपक्रम्य अधीतत्वेन पठितत्वेन शीर्ष्णः शिरसः सकाशात् समवर्तत अजायत प्राणात् श्वासात् तद्विधं तत्प्रकारम् ।। **मूर्धैवेति** ।। सुतेजाः शोभनकान्तिमान् द्युलोकः मूर्धा स्वसमाननामवद्भगवच्छिरसो जातः विश्वरूपः सर्वरूपादिदर्शनाद् विश्वरूपाख्यः सूर्यश्चक्षुः स्वसमाननामोपेतभगवच्चक्षुषो जातः पृथग् विलक्षणो मार्गो यस्यासौ वायुः प्राणः स्वसमाननामोपेतभगवत्प्राणाज्जातः पृथ्वीपादौ स्वसमाननामोपेतभगवत्पादजातेत्यर्थः । ननु समाख्यासमुच्चयोपक्षीणच-शब्दस्य कथं प्रसिद्धिसूचकत्वमित्यत आह – **अपिपदेनेति** ।। **उभयेति** ।। प्रकरणसमाख्यारूपोभयेत्यर्थः ।। **परो विलक्षण इति** ।। तेन न परम इत्यनेन पुनरुक्तिरिति भावः ।। **आदिपदेनेति** ।। सकलवेदतन्त्रपुराणादिष्वित्यत्रत्यादिपदेनेत्यर्थः तदभेदः द्युभ्वाद्यभेदः ।। २६ ।।

## ಅಗ್ನಿದೇವತೆ ಹಾಗೂ ಜಡವಾದ ಅಗ್ನಿ ವೈಶ್ವಾನರನಲ್ಲ

**भाष्यम् – सू–ॐ ॥ अत एव न देवता भूतं च ॥ ॐ ॥२७॥**

ನಿರವಕಾಶವಾದ ಆತ್ಮಶಬ್ದ ಮೊದಲಾದ ಕಾರಣಗಳಿರುವುದರಿಂದ ಅಗ್ನಿದೇವತೆಯಾಗಲೀ ಜಡವಾದ ಅಗ್ನಿಯಾಗಲೀ ವೈಶ್ವಾನರಶಬ್ದದಿಂದ ಪ್ರತಿಪಾದ್ಯರಾಗುವುದಿಲ್ಲ.

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका** – देवता अग्निरूपा । भूतं तदभिमन्यमानतेजोभूतं च वैश्वानरशब्दवाच्यं न । कुतः? अत एव निरवकाशत्वशब्दादिहेतोरेवेत्यर्थः ॥

ಅರ್ಥ - ದೇವತಾ = ಅಗ್ನಿ ಮೊದಲಾದ ದೇವತೆಯು, ಚ = ಮತ್ತು, ಭೂತಂ = ಜಡವಾದ ಅಗ್ನಿಯು, ನ = ವೈಶ್ವಾನರಶಬ್ದದಿಂದ ವಾಚ್ಯರಲ್ಲ, ಏಕೆಂದರೆ ಅತ ಏವ = ನಿರವಕಾಶವಾದ ಆತ್ಮಶಬ್ದ ಮೊದಲಾದ ಹೇತುಗಳಿರುವುದರಿಂದಲೇ.

**श्रीमदानन्दतीर्थभगवत्पादाचार्यविरचित-**

## ब्रह्मसूत्रभाष्यम्

**भाष्यम् – अग्निवैश्वानरादिशब्दस्तेजसि भूतेऽग्निदेवतायां च प्रसिद्धोऽप्यतः पूर्वोक्तहेतुत एवात्र न सा तच्चाभिधीयते ॥ २७ ॥**

ಅನುವಾದ - ಅಗ್ನಿ, ವೈಶ್ವಾನರ, ಜಾತವೇದ ಮೊದಲಾದ ಶಬ್ದಗಳು ಭೌತಿಕತೇಜಸ್ಸುಳ್ಳ ಅಗ್ನಿದೇವತೆಯನ್ನು ಪ್ರತಿಪಾದಿಸುತ್ತದೆಂದು ಲೋಕದಲ್ಲಿ ಪ್ರಸಿದ್ಧವಾಗಿರಬಹುದು. ಆದರೆ, ಹಿಂದೆ ಹೇಳಿದ ಆತ್ಮಶಬ್ದಪ್ರಯೋಗವೆಂಬ ಕಾರಣದಿಂದ ವೈಶ್ವಾನರಪ್ರಕರಣದಲ್ಲಿ ಅಗ್ನಿದೇವತೆಯು ಅಥವಾ ಭೌತಿಕವಾದ ಅಗ್ನಿಯು ಪ್ರತಿಪಾದ್ಯವಾಗುವುದಿಲ್ಲ.

ಪ್ರತಿಪದಾರ್ಥ -- ವೈಶ್ವಾನರಶಬ್ದವು ಅಗ್ನಿದೇವತೆಯಲ್ಲಿ ಹಾಗೂ ಜಡವಾದ ಅಗ್ನಿಯಲ್ಲಿ ಲೋಕತಃ ಪ್ರಸಿದ್ಧವಾಗಿರುವುದರಿಂದ ವೈಶ್ವಾನರಪ್ರಕರಣವು ಅಗ್ನಿದೇವತೆಯನ್ನು,

ಅಥವಾ ಜಡವಾದ ಬೆಂಕಿಯನ್ನು ಪ್ರತಿಪಾದಿಸಬಹುದಲ್ಲವೇ? ಎಂದು ಆಶಂಕಿಸಿ ಪರಿಹಾರ ನೀಡುತ್ತಿದ್ದಾರೆ.

ಅಗ್ನಿವೈಶ್ವಾನರಾದಿಶಬ್ದಃ = ಅಗ್ನಿ, ವೈಶ್ವಾನರ, ಜಾತವೇದ ಮೊದಲಾದ ಶಬ್ದಗಳು ತೇಜಸಿ ಭೂತೇ = ತೇಜಸ್ಸಂಬ ಜಡವಾದ ಅಗ್ನಿಯಲ್ಲಿ ಅಗ್ನಿದೇವತೆಯಲ್ಲಿ, ಪ್ರಸಿದ್ಧೋಽಪಿ = ಲೌಕಿಕವಾಗಿ ಪ್ರಸಿದ್ಧವಾಗಿದ್ದರೂ, ಅತಃ ಪೂರ್ವೋಕ್ತಹೇತುತಃ ಏವ = ಹಿಂದೆ ಹೇಳಿದ ಆತ್ಮಶಬ್ದ ಮೊದಲಾದ ಕಾರಣಗಳಿಂದಲೇ, ಅತ್ರ = ಈ ಶ್ರುತಿಯಲ್ಲಿ, ಸಾ = ಆ ಅಗ್ನಿದೇವತೆಯು, ತಚ್ಚ = ಭೌತಿಕವಾದ ಅಗ್ನಿಯು, ನ ಅಭಿಧೀಯತೇ = ಪ್ರತಿಪಾದ್ಯವಾಗುವುದಿಲ್ಲ.(१)

## श्रीपद्मनाभतीर्थविरचितसत्तर्कदीपावल्याम्ः

## ॐ अत एव न देवता भूतं च ॐ ॥ १-२-२७ ॥

**अग्निवैश्वानरादिशब्दानां याऽर्थान्तरे प्रसिद्धिः सा सूत्रोक्तहेतुना बाध्यते इत्येतत्प्रतिपादकं सूत्रं पठित्वा व्याचष्टे– अत एवेत्यादिना ॥ इतोऽप्यग्न्यादिशब्दैरभिधेयो विष्णुः मुख्यार्थत्वात् । अगं नेता ह्यग्निः । विश्वनरनेतृत्वाद् वैश्वानरः । स च मुख्यतो विष्णुरेव ॥**

(१) **भाष्यदीपिका** – ननु वैश्वानरशब्दस्य देवताभूतयोः प्रसिद्धत्वादत्राप्यसौ तत्परः किं न स्यादित्याशङ्कां परिहरत्सूत्रमुपन्यस्यति – अत एवेति ॥ अत्र चशब्दस्य समुच्चयार्थत्वं यद्यपि तथाऽपीत्यर्थत्वं चाऽश्रित्य सूत्रं व्याचष्टे – अग्नीति ॥ समुदायैकवचनमेतत् । आदिशब्देन जातवेदआदिशब्दो गृह्यते । विद्यान्तरोपलक्षणयाऽग्निशब्दादिशब्दयोर्ग्रहणम् । न चाग्न्यादीत्यनेनैवोपलक्षणसम्भवात् किं शब्दद्वयग्रहणेनेति वाच्यम् । वैश्वानरशब्दस्येह विचार्यत्वेन अतिप्रसिद्धत्वादग्निशब्दस्य च ग्रहणोपपत्तेः । यद्वा – आदिशब्दस्योभयत्रान्वयेन अग्न्यादीति आधिभौतिकविद्यान्तरस्य वैश्वानरादीत्याध्यात्मिकविद्यान्तरस्योपलक्षणार्थमग्न्यादि-वैश्वानरादिग्रहणम् । 'तेजसि भूते' इति सामानाधिकरण्यम् । चः समुच्चये । 'प्रसिद्धः' इत्यनेन पूर्वपक्षे प्रसिद्धत्वादिति युक्तिः सूचिता । सौत्रमतःशब्दमनूद्य व्याख्याति – अत इति ॥ पूर्वोक्तेति ॥ आत्मशब्दादिति हेतुत इत्यर्थः । न तत्र हेत्वन्तरं गवेषणीयमित्येवार्थः । 'अत्र' वैश्वानरविद्यायां विद्यान्तरे च 'सा' अग्निदेवता 'तत्' तेजोभूतम् । प्रसिद्धिप्राधान्याभ्यां निर्देशव्यत्यासः । चशब्दः समुच्चये । अभिधीयते 'तेन' इति शेषः । वैश्वानरादिशब्देनेति तदर्थः । 'अत्र' इति पाठाभावे तदप्यध्याहार्यम् ॥

ಅಗ್ನಿ, ವೈಶ್ವಾನರ ಮೊದಲಾದ ಶಬ್ದಗಳಿಗೆ ಅರ್ಥಾಂತರದಲ್ಲಿ ಪ್ರಸಿದ್ಧಿ ಇದೆ. ಅವುಗಳು ಸೂತ್ರದಲ್ಲಿ ಹೇಳಲ್ಪಟ್ಟ ಹೇತುವಿನಿಂದ ಬಾಧ್ಯವಾಗಿದೆ ಎಂಬುದನ್ನು ಪ್ರತಿಪಾದಿಸುವುದಕ್ಕಾಗಿ ಸೂತ್ರವನ್ನು ಪಠಿಸಿ ವ್ಯಾಖ್ಯಾನಿಸುತ್ತಿದ್ದಾರೆ "ಅತ ಏವ" ಇತ್ಯಾದಿಯಾಗಿ. ಮತ್ತೊಂದು ಕಾರಣದಿಂದಲೂ ಅಗ್ನಿ ಮೊದಲಾದ ಶಬ್ದಗಳಿಂದ ಪ್ರತಿಪಾದ್ಯನಾದವನು ವಿಷ್ಣುವೇ ಆಗಿದ್ದಾನೆ ಮುಖ್ಯಾರ್ಥನಾದ್ದರಿಂದ. ಅಗ್ನಿಯೆಂದರೆ ಅಗಂ ನೇತಾ ಎಂಬ ವ್ಯುತ್ಪತ್ತಿಯಿಂದ ಗಮನವಿಲ್ಲದವನೆಂದು ನಿಯಂತ್ರಿಸುವ ಪರಮಾತ್ಮನೆಂದರ್ಥ. ವೈಶ್ವಾನರಶಬ್ದಕ್ಕೆ ಜಗತ್ತಿನಲ್ಲಿರುವ ಎಲ್ಲ ನರರನ್ನೂ ನಿಯಮಮಾಡುತ್ತಾನೆ ಎಂದರ್ಥ. ಅಂತಹವನು ಮುಖ್ಯವಾಗಿ ವಿಷ್ಣುವೇ ಆಗಿದ್ದಾನೆ.

**तत्वप्रकाशिका –**

**ॐ अत एव न देवता भूतं च ॐ ।। १-२-२७ ।।**

**यद्यपि वैश्वानरशब्दोऽन्यत्र प्रसिद्धस्तथापि नात्र तेनान्यदभिधीयते । आत्मशब्दादिहेतोरेव । तस्य चान्यत्र निरवकाशत्वादिति भावः । अत्राग्न्यादिग्रहणं विद्यान्तरोपलक्षणार्थम् ।। २७ ।।**

ಸಾಮಾನ್ಯತಃ ವೈಶ್ವಾನರಶಬ್ದವು ಅಗ್ನಿದೇವತೆಯಲ್ಲಿ ಹಾಗೂ ಭೌತಿಕವಾದ ಅಗ್ನಿಯಲ್ಲಿ ಪ್ರಸಿದ್ಧವಾಗಿರಬಹುದು. ಆದರೂ ಸಹ ವೈಶ್ವಾನರಪ್ರಕರಣದಲ್ಲಿ ಅಗ್ನಿದೇವತೆಯಾಗಲೀ ಭೌತಿಕವಾದ ಅಗ್ನಿಯಾಗಲೀ ಪ್ರತಿಪಾದ್ಯವಾಗುವುದಿಲ್ಲ. ಏಕೆಂದರೆ ಆತ್ಮಶಬ್ದವಿರುವ ಪ್ರಬಲವಾದ ಶ್ರುತಿಯು ಆಧಾರವಾಗಿರುವುದರಿಂದ ಹಾಗೂ ಈ ಆತ್ಮಶಬ್ದವನ್ನು ವಿಷ್ಣುವನ್ನು ಬಿಟ್ಟು ಬೇರೆಕಡೆ ಕಥಂಚಿದಪಿ ಕೂಡಿಸಲು ಬರುವುದಿಲ್ಲ. ಅಂದರೆ ಆತ್ಮಶಬ್ದವು ಬೇರೆ ಕಡೆ ನಿರವಕಾಶವಾಗಿದೆಯೆಂದು ಅಭಿಪ್ರಾಯ. ಇಲ್ಲಿಯೂ ಸಹ ಅಗ್ನಿ, ವೈಶ್ವಾನರ ಮೊದಲಾದ ಶಬ್ದಗಳಿಂದ ಅಗ್ನಿ, ಆದಿತ್ಯ, ಆಕಾಶ ಮೊದಲಾದ ಬೇರೆ ವಿದ್ಯೆಗಳನ್ನು ಉಪಲಕ್ಷಣಯಾ ಸ್ವೀಕರಿಸಬೇಕು; ಆ ಆದಿತ್ಯ ಮೊದಲಾದ ಶಬ್ದಗಳಿಂದಲೂ ವಿಷ್ಣುವೇ ಪ್ರತಿಪಾದ್ಯನಾಗಿದ್ದಾನೆಂಬುದನ್ನು ಹೇಳಲು ವೈಶ್ವಾನರಶಬ್ದವು ಉಪಲಕ್ಷಣವಾಗಿದೆಯೆಂದು ಭಾಷ್ಯಕಾರರು ಅಭಿಪ್ರಾಯ ಪಟ್ಟಿದ್ದಾರೆ.

**भावदीपः – ॐ अत एव न देवता भूतं च ॐ ।। प्रसिद्धोऽपीति** भाष्यस्थापिपदार्थं व्यनक्ति – **यद्यपीति** ।। तेजसीत्यादेरर्थः – **अन्यत्रेति** ।। अत्र न सा इत्यादेरर्थः – **नात्रेति** ।। तेनेति शेषोक्तिः । अत इत्यादेरर्थः – **आत्मेति** ।।

।। ಓಂ ಅತ ಏವ ನ ದೇವತಾ ಭೂತಂ ಚ ಓಂ ।।

"ಪ್ರಸಿದ್ಧೋಽಪಿ" ಎಂಬ ಭಾಷ್ಯದಲ್ಲಿರುವ 'ಅಪಿ' ಪದದ ಅರ್ಥವನ್ನು "ಯದ್ಯಪಿ" ಎಂಬುದರಿಂದ ವ್ಯಾಖ್ಯಾನಿಸುತ್ತಿದ್ದಾರೆ. ಭಾಷ್ಯದಲ್ಲಿರುವ "ತೇಜಸಿ" ಇತ್ಯಾದಿ ಪದಗಳ ಅರ್ಥವನ್ನು "ಅನ್ಯತ್ರ" ಇತ್ಯಾದಿಯಾಗಿ

ಹೇಳಿದ್ದಾರೆ. "ಅತ್ರ ನ ಸಾ" ಇತ್ಯಾದಿಗಳ ಭಾಷ್ಯದ ಪದಗಳಿಗೆ ಟೀಕೆಯಲ್ಲಿ ಅರ್ಥವನ್ನು "ನ ಅತ್ರ" ಇತ್ಯಾದಿ ಪದಗಳಿಂದ ಹೇಳಿದ್ದಾರೆ. ತೇನ ಎಂಬ ಪದವನ್ನು ಶೇಷಪೂರಣ ಮಾಡಿಕೊಂಡು ಅರ್ಥವನ್ನು ಹೇಳಿದ್ದಾರೆ. 'ಅತಃ' ಇತ್ಯಾದಿ ಪದಗಳ ಅರ್ಥವನ್ನು "ಆತ್ಮಶಬ್ದಾದಿ" ಇತ್ಯಾದಿಯಾಗಿ ಹೇಳಿದ್ದಾರೆ.

**भावदीपः – 'अत एव प्राणः' इत्यत्रेव 'शब्दादेव' इत्यत्रेव चैवकारो निरवकाशत्वावाचीत्युपेत्याह – तस्य चेति ।।**

ಯಾವರೀತಿಯಾಗಿ "ಅತ ಏವ" ಎಂಬ ಸೂತ್ರದಲ್ಲಿ ಮತ್ತು " ಶಬ್ದಾದೇವ" ಎಂಬ ಸೂತ್ರದಲ್ಲಿ ಏವಕಾರವು ನಿರವಕಾಶತ್ವವನ್ನು ಹೇಳುತ್ತಿದೆಯೋ ಅದೇರೀತಿಯಾಗಿ ಇಲ್ಲಿಯೂ ಸಹ ನಿರವಕಾಶವಾಗಿದೆ ಎಂಬ ಅರ್ಥವನ್ನು ಅಂಗೀಕರಿಸಿ "ತಸ್ಯಚ" ಇತ್ಯಾದಿಯಾಗಿ ಹೇಳುತ್ತಿದ್ದಾರೆ.

**भावदीपः – अत्राग्न्यादीति ।। अग्निवैश्वानरादीति भाष्यस्थाग्निशब्दादिशब्दयोर्ग्रहणं 'वि मे कर्णा पतयतो विचक्षुः' इति अग्निसावित्रबार्हस्पत्येन्द्रवरुणगायत्री-प्राणाकाशाक्षरादिविद्यास्वप्यग्न्यादिशब्दानामप्यन्यत्र सिद्धिविद्याभेदव्यवहारविरोधमा-शङ्क्य तत्र तत्र स्थितनिरवकाशविष्णुश्रुत्यादिना देवताभूतादिपरत्वं निरसनीयं वक्ष्यमाणन्यायैश्च सूक्तभेदो विद्याभेदश्च समर्थनीय इति सूचनार्थमित्यर्थः ।।**

ಟೀಕೆಯಲ್ಲಿ "ಅತ್ರಾಗ್ನ್ಯಾದಿ" ಎಂದು ಹೇಳಿದ್ದಾರೆ. ಅಂದರೆ "ಅಗ್ನಿ ವೈಶ್ವಾನರಾದಿ" ಎಂಬುದಾಗಿ ಭಾಷ್ಯದಲ್ಲಿರುವ ಅಗ್ನಿ ಶಬ್ದ ಹಾಗೂ ಆದಿ ಶಬ್ದವನ್ನು ಗ್ರಹಣ ಮಾಡಿದ್ದರ ಪ್ರಯೋಜನ ಹೀಗಿದೆ - "ವಿಮೇ ಕರ್ಣಾ ಪತಯತೋ ವಿಚಕ್ಷುಃ" ಎಂಬುದಾಗಿ ಅಗ್ನಿ, ಸೂರ್ಯ, ಬೃಹಸ್ಪತಿ,ಇಂದ್ರ, ವರುಣ, ಗಾಯತ್ರೀ, ಪ್ರಾಣ, ಆಕಾಶ ಅಕ್ಷರ ಮೊದಲಾದ ವಿದ್ಯೆಗಳಲ್ಲಿಯೂಜ ಅಗ್ನಿ ಮೊದಲಾದ ಶಬ್ದಗಳು ಹಾಗೂ ಅನ್ಯತ್ರಪ್ರಸಿದ್ಧವಾದ ವಿದ್ಯಾಭೇದದ ವಿರೋಧವು ಬರುತ್ತದೆ ಎಂದು ಆಶಂಕೆ ಬರುತ್ತದೆ. ಆದರೆ ಅಂತಹ ದೇವತೆಗಳನ್ನು ಪ್ರತಿಪಾದಿಸುವ ವಿದ್ಯೆಯಲ್ಲಿ ನಿರವಕಾಶವಾದ ವಿಷ್ಣುಸ್ತುತಿಯ ಬಲದಿಂದ ದೇವತೆಗಳಾಗಲಿ ಭೌತಿಕವಾದ ಪದಾರ್ಥಗಳಾಗಲಿ ಪ್ರತಿಪಾದ್ಯವಾಗುವುದಿಲ್ಲವೆಂದು ನಿರಾಕರಿಸಬೇಕು. ಮತ್ತು ಮುಂದೆ ಹೇಳುವ ನ್ಯಾಯದಿಂದ ಸೂಕ್ತಭೇದದ ವ್ಯವಸ್ಥೆಯನ್ನಾಗಲಿ, ವಿದ್ಯಾ ಭೇದದ ವ್ಯವಸ್ಥೆಯನ್ನಾಗಲಿ ಸಮರ್ಥನೆ ಮಾಡಬೇಕು. ಇದನ್ನು "ಆದಿ" ಶಬ್ದದಿಂದ ಸೂಚನೆ ಮಾಡಿದ್ದಾರೆಂದು ತಿಳಿಯಬೇಕು.

**वाक्यार्थमञ्जरी – ॐ अत एव न देवताभूतं च ॐ ।।** आत्मशब्दादिहेतोरे-वाग्निदेवता तेजोभूतं च वैश्वानरो न भवतीत्यर्थः । ननु वैश्वानरशब्दसमन्वयस्यैव प्रकृतत्वादग्न्यादिशब्दग्रहणमनर्थकमित्यत आह – अत्राग्न्यादिग्रहणमिति ।। अग्निशब्दादित्यशब्दयोर्ग्रहणमित्यर्थः ।। २७ ।।

## ಲೌಕಿಕ ವ್ಯವಹಾರಕ್ಕಾಗಿ ಸೂಕ್ತ ನಿಯಮವೆಂದು ಜೈಮಿನಿಗಳ ಅಭಿಪ್ರಾಯ

**सू—ॐ ॥ साक्षादप्यविरोधं जैमिनिः ॥ ॐ ॥२८॥**

ಮುಖ್ಯವೃತ್ತಿಯಿಂದ ವಿಷ್ಣುವು ಅಗ್ನ್ಯಾದಿ ಶಬ್ದಗಳಿಂದ ಪ್ರತಿಪಾದ್ಯನಾದರೂ ಲೌಕಿಕವ್ಯವಹಾರದ ವಿರೋಧವು ಬರುವುದಿಲ್ಲವೆಂದು ಜೈಮಿನಿ ಋಷಿಗಳು ಹೇಳುತ್ತಾರೆ.

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

सूत्रदीपिका — साक्षात् मुख्यवृत्त्या । अपि ब्रह्मणोऽग्न्यादिशब्द-वाच्यत्वेऽपि अविरोधम् अज्ञानादिनिमित्तान्तरेण अग्न्यादौ तत्तच्छब्दविरोधभावं जैमिनिराचार्यो वक्तीत्यर्थः ॥

ಸಾಕ್ಷಾತ್ = ಮುಖ್ಯವೃತ್ತಿಯಿಂದ, ಅಪಿ = ಬ್ರಹ್ಮನಿಗೆ ಅಗ್ನ್ಯಾದಿಶಬ್ದವಾಚ್ಯತ್ವವನ್ನು ಹೇಳಿದರೂ ಸಹ, ಅವಿರೋಧಂ = ಅಜ್ಞಾನ ಮೊದಲಾದ ಬೇರೆ ಕಾರಣಗಳಿಂದ ಅಗ್ನಿ ಮೊದಲಾದವರಲ್ಲಿ ಆಯಾಶಬ್ದಗಳ ವಿರೋಧವಿಲ್ಲವೆಂದು, ಜೈಮಿನಿಃ = ಜೈಮಿನಿ ಋಷಿಗಳು ಹೇಳುತ್ತಾರೆ.

**श्रीमदानन्दतीर्थभगवत्पादाचार्यविरचित-**

## ब्रह्मसूत्रभाष्यम्

**भाष्यम् — नाग्न्यादयः शब्दा अग्न्यादिवाचकाः । तथाऽपि साक्षादेवानन्ययोगेन ब्रह्मवाचकैः शब्दैः व्यवहारार्थमनभिज्ञानाच्चान्यत्र व्यवहरन्तीत्यभ्युपगमेऽविरोधं जैमिनिर्वक्ति ।**

ಅಗ್ನಿ ಮೊದಲಾದ ಶಬ್ದಗಳು ಜಡವಾದ ಅಗ್ನಿಯನ್ನಾಗಲೀ ಅಗ್ನಿದೇವತೆಯನ್ನಾಗಲೀ ಪ್ರತಿಪಾದಿಸುವುದಿಲ್ಲ. ಮಹಾಯೋಗರೂಢಿವೃತ್ತಿಯಿಂದ ವಿಷ್ಣುವಿಂದ ಬೇರೆಯಾದವರಲ್ಲಿ

ಹೇಳಿದ್ದಾರೆ. "ಅತ್ರ ನ ಸಾ" ಇತ್ಯಾದಿಗಳ ಭಾಷ್ಯದ ಪದಗಳಿಗೆ ಟೀಕೆಯಲ್ಲಿ ಅರ್ಥವನ್ನು "ನ ಅತ್ರ" ಇತ್ಯಾದಿ ಪದಗಳಿಂದ ಹೇಳಿದ್ದಾರೆ. ತೇನ ಎಂಬ ಪದವನ್ನು ಶೇಷಪೂರಣ ಮಾಡಿಕೊಂಡು ಅರ್ಥವನ್ನು ಹೇಳಿದ್ದಾರೆ. 'ಆತಃ' ಇತ್ಯಾದಿ ಪದಗಳ ಅರ್ಥವನ್ನು "ಆತ್ಮಶಬ್ದಾದಿ" ಇತ್ಯಾದಿಯಾಗಿ ಹೇಳಿದ್ದಾರೆ.

**भावदीपः – 'अत एव प्राणः' इत्यत्रेव 'शब्दादेव' इत्यत्रेव चैवकारो निरवकाशत्वावाचीत्युपेत्याह – तस्य चेति ॥**

ಯಾವರೀತಿಯಾಗಿ "ಅತ ಏವ" ಎಂಬ ಸೂತ್ರದಲ್ಲಿ ಮತ್ತು " ಶಬ್ದಾದೇವ" ಎಂಬ ಸೂತ್ರದಲ್ಲಿ ಏವಕಾರವು ನಿರವಕಾಶತ್ವವನ್ನು ಹೇಳುತ್ತಿದೆಯೋ ಅದೇರೀತಿಯಾಗಿ ಇಲ್ಲಿಯೂ ಸಹ ನಿರವಕಾಶವಾಗಿದೆ ಎಂಬ ಅರ್ಥವನ್ನು ಅಂಗೀಕರಿಸಿ "ತಸ್ಯಚ" ಇತ್ಯಾದಿಯಾಗಿ ಹೇಳುತ್ತಿದ್ದಾರೆ.

**भावदीपः – अत्राग्न्यादीति ॥ अग्निवैश्वानरादीति भाष्यस्याग्निशब्दादिशब्दयोर्ग्रहणं 'वि मे कर्णा पतयतो विचक्षुः' इति अग्निसावित्रबार्हस्पत्येन्द्रवरुणगायत्री-प्राणाकाशाक्षरादिविद्यास्वप्यग्न्यादिशब्दानामप्यन्यत्र सिद्धिविद्याभेदव्यवहारविरोधमाशङ्क्य तत्र तत्र स्थितनिरवकाशविष्णुश्रुत्यादिना देवताभूतादिपरत्वं निरसनीयं वक्ष्यमाणन्यायैश्च सूक्तभेदो विद्याभेदश्च समर्थनीय इति सूचनार्थमित्यर्थः ॥**

ಟೀಕೆಯಲ್ಲಿ "ಅತ್ರಾಗ್ನ್ಯಾದಿ" ಎಂದು ಹೇಳಿದ್ದಾರೆ. ಅಂದರೆ "ಅಗ್ನಿ ವೈಶ್ವಾನರಾದಿ" ಎಂಬುದಾಗಿ ಭಾಷ್ಯದಲ್ಲಿರುವ ಅಗ್ನಿ ಶಬ್ದ ಹಾಗೂ ಆದಿ ಶಬ್ದವನ್ನು ಗ್ರಹಣ ಮಾಡಿದ್ದರ ಪ್ರಯೋಜನ ಹೀಗಿದೆ - "ವಿಮೇ ಕರ್ಣಾ ಪತಯತೋ ವಿಚಕ್ಷುಃ" ಎಂಬುದಾಗಿ ಅಗ್ನಿ, ಸೂರ್ಯ, ಬೃಹಸ್ಪತಿ,ಇಂದ್ರ, ವರುಣ, ಗಾಯತ್ರೀ, ಪ್ರಾಣ, ಆಕಾಶ ಅಕ್ಷರ ಮೊದಲಾದ ವಿದ್ಯೆಗಳಲ್ಲಿಯೂಜ ಅಗ್ನಿ ಮೊದಲಾದ ಶಬ್ದಗಳು ಹಾಗೂ ಅನ್ಯತ್ರಪ್ರಸಿದ್ಧವಾದ ವಿದ್ಯಾಭೇದದ ವಿರೋಧವು ಬರುತ್ತದೆ ಎಂದು ಆಶಂಕೆ ಬರುತ್ತದೆ. ಆದರೆ ಅಂತಹ ದೇವತೆಗಳನ್ನು ಪ್ರತಿಪಾದಿಸುವ ವಿದ್ಯೆಯಲ್ಲಿ ನಿರವಕಾಶವಾದ ವಿಷ್ಣುಸ್ತುತಿಯ ಬಲದಿಂದ ದೇವತೆಗಳಾಗಲಿ ಭೌತಿಕವಾದ ಪದಾರ್ಥಗಳಾಗಲಿ ಪ್ರತಿಪಾದ್ಯವಾಗುವುದಿಲ್ಲವೆಂದು ನಿರಾಕರಿಸಬೇಕು. ಮತ್ತು ಮುಂದೆ ಹೇಳುವ ನ್ಯಾಯದಿಂದ ಸೂಕ್ತಭೇದದ ವ್ಯವಸ್ಥೆಯನ್ನಾಗಲಿ, ವಿದ್ಯಾ ಭೇದದ ವ್ಯವಸ್ಥೆಯನ್ನಾಗಲಿ ಸಮರ್ಥನೆ ಮಾಡಬೇಕು. ಇದನ್ನು "ಆದಿ" ಶಬ್ದದಿಂದ ಸೂಚನೆ ಮಾಡಿದ್ದಾರೆಂದು ತಿಳಿಯಬೇಕು.

वाक्यार्थमञ्जरी – ॐ अत एव न देवताभूतं च ॐ ॥ आत्मशब्दादिहेतोरेवाग्निदेवता तेजोभूतं च वैश्वानरो न भवतीत्यर्थः । ननु वैश्वानरशब्दसमन्वयस्यैव प्रकृतत्वादग्न्यादिशब्दग्रहणमनर्थकमित्यत आह – अत्राग्न्यादिग्रहणमिति ॥ अग्निशब्दादित्यशब्दयोर्ग्रहणमित्यर्थः ॥ २७ ॥

## ಲೌಕಿಕ ವ್ಯವಹಾರಕ್ಕಾಗಿ ಸೂಕ್ತ ನಿಯಮವೆಂದು ಜೈಮಿನಿಗಳ ಅಭಿಪ್ರಾಯ

**सू—ॐ ॥ साक्षादप्यविरोधं जैमिनिः ॥ ॐ ॥२८॥**

ಮುಖ್ಯವೃತ್ತಿಯಿಂದ ವಿಷ್ಣುವು ಅಗ್ನ್ಯಾದಿ ಶಬ್ದಗಳಿಂದ ಪ್ರತಿಪಾದ್ಯನಾದರೂ ಲೌಕಿಕವ್ಯವಹಾರದ ವಿರೋಧವು ಬರುವುದಿಲ್ಲವೆಂದು ಜೈಮಿನಿ ಋಷಿಗಳು ಹೇಳುತ್ತಾರೆ.

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

सूत्रदीपिका — साक्षात् मुख्यवृत्त्या । अपि ब्रह्मणोऽग्न्यादिशब्द-वाच्यत्वेऽपि अविरोधम् अज्ञानादिनिमित्तान्तरेण अग्न्यादौ तत्तच्छब्दविरोधभावं जैमिनिराचार्यो वक्तीत्यर्थः ॥

ಸಾಕ್ಷಾತ್ = ಮುಖ್ಯವೃತ್ತಿಯಿಂದ, ಅಪಿ = ಬ್ರಹ್ಮನಿಗೆ ಅಗ್ನ್ಯಾದಿಶಬ್ದವಾಚ್ಯತ್ವವನ್ನು ಹೇಳಿದರೂ ಸಹ, ಅವಿರೋಧಂ = ಅಜ್ಞಾನ ಮೊದಲಾದ ಬೇರೆ ಕಾರಣಗಳಿಂದ ಅಗ್ನಿ ಮೊದಲಾದವರಲ್ಲಿ ಆಯಾಶಬ್ದಗಳ ವಿರೋಧವಿಲ್ಲವೆಂದು, ಜೈಮಿನಿಃ = ಜೈಮಿನಿ ಋಷಿಗಳು ಹೇಳುತ್ತಾರೆ.

**श्रीमदानन्दतीर्थभगवत्पादाचार्यविरचित-**

## ब्रह्मसूत्रभाष्यम्

**भाष्यम् — नाग्न्यादयः शब्दा अग्न्यादिवाचकाः । तथाऽपि साक्षादेवानन्ययोगेन ब्रह्मवाचकैः शब्दैः व्यवहारार्थमनभिज्ञानाच्चान्यत्र व्यवहरन्तीत्यभ्युपगमेऽविरोधं जैमिनिर्वक्ति ।**

ಅಗ್ನಿ ಮೊದಲಾದ ಶಬ್ದಗಳು ಜಡವಾದ ಅಗ್ನಿಯನ್ನಾಗಲೀ ಅಗ್ನಿದೇವತೆಯನ್ನಾಗಲೀ ಪ್ರತಿಪಾದಿಸುವುದಿಲ್ಲ. ಮಹಾಯೋಗರೂಢಿವೃತ್ತಿಯಿಂದ ವಿಷ್ಣುವಿಂದ ಬೇರೆಯಾದವರಲ್ಲಿ

ಈ ಅರ್ಥವು ಅಸಂಭಾವಿತವಾಗಿದೆ. ಆದ್ದರಿಂದ ಪರಬ್ರಹ್ಮನನ್ನೇ ಪ್ರತಿಪಾದಿಸುವ ಇಂತಹ ಶಬ್ದಗಳಿಂದ ಲೋಕವ್ಯವಹಾರದ ಸಿದ್ಧಿಗಾಗಿ ತಿಳಿವಳಿಕೆ ಇಲ್ಲದೆ ಜನರು ಇಂತಹ ವಸ್ತುಗಳನ್ನು ವ್ಯವಹರಿಸುತ್ತಾರೆ. ಹೀಗೆ ಅಂಗೀಕರಿಸಿದರೆ ಬೇರೆ ವಸ್ತುಗಳಲ್ಲಿ ಆ ಶಬ್ದವನ್ನು ಪ್ರಯೋಗಿಸುವುದು ತಪ್ಪಾಗುವುದಿಲ್ಲವೆಂದು ಜೈಮಿನಿಋಷಿಗಳು ಹೇಳುತ್ತಾರೆ.

ಪ್ರತಿಪದಾರ್ಥ -- ಹಾಗಾದರೆ ಲೋಕದಲ್ಲಿ ಬೇರೆಡೆ ಅಗ್ನಿ ಮೊದಲಾದ ಶಬ್ದಗಳ ಪ್ರಯೋಗಕ್ಕೆ ಏನು ಗತಿ? ಎಂಬ ಪ್ರಶ್ನೆಗೆ ಮುಂದಿನ ಸೂತ್ರದಿಂದ ಉತ್ತರಿಸುತ್ತಿದ್ದಾರೆ.

ಅಗ್ನ್ಯಾದಯಃ ಶಬ್ದಾಃ = ಅಗ್ನಿಮೊದಲಾದ ಶಬ್ದಗಳು, ನ ಅಗ್ನ್ಯಾದಿವಾಚಕಾಃ = ಅಗ್ನಿ ಮೊದಲಾದವರನ್ನು ಪ್ರತಿಪಾದಿಸುವದಿಲ್ಲ. ತಥಾಪಿ = ಆದರೂ ಸಹ, ಸಾಕ್ಷಾತ್ = ಮಹಾಯೋಗವೃತ್ತಿಯಿಂದ, ಅನನ್ಯಯೋಗೇನ = ಬೇರೆಯವರಲ್ಲಿ ಆ ಅರ್ಥವು ಅಸಂಭಾವಿತವಾಗಿರುವುದರಿಂದ, ಬ್ರಹ್ಮವಾಚಕೈಃ = ಪರಬ್ರಹ್ಮನನ್ನೇ ಪ್ರತಿಪಾದಿಸುವ ಶಬ್ದೈಃ = ಶಬ್ದಗಳಿಂದ, ವ್ಯವಹಾರಾರ್ಥಂ = ವ್ಯವಹಾರಕ್ಕಾಗಿ, ಅನಭಿಜ್ಞಾನಾಚ್ಚ = ತಿಳಿವಳಿಕೆ ಇಲ್ಲದಿರುವುದರಿಂದ, ಅನ್ಯತ್ರ = ಭಗವಂತನನ್ನು ಬಿಟ್ಟು ಜಗತ್ತಿನ ವಿಷಯದಲ್ಲಿ, ವ್ಯವಹರಂತಿ = ವ್ಯವಹಾರಮಾಡುತ್ತಾರೆ.

ಇತಿ ಅಭ್ಯುಪಗಮೇ = ಹೀಗೆ ಅಂಗೀಕಾರ ಮಾಡಿದರೆ, ಅವಿರೋಧಂ = ವಿರೋಧವಿಲ್ಲ ಎಂಬುದನ್ನು, ಜೈಮಿನಿಃ = ಜೈಮಿನಿ ಋಷಿಗಳು, ವಕ್ತಿ = ಪ್ರಮಾಣಪುರಸ್ಸರ ಹೇಳುತ್ತಾರೆ.(१)

---

(१) **भाष्यदीपिका** – ननु लोके वेदे चाग्न्यादिपदानाम् ईशादन्यत्र व्यवहारप्रसिद्धिदर्शनात् तस्य च कारणान्तराभावात्तदन्यथानुपपत्त्याऽन्येषां वाच्यमङ्गीकार्यम् । अन्यथा तद्विरोधः स्यादित्याशङ्कां परिहरत्सूत्रमुपन्यस्य व्याचष्टे – **साक्षादिति** ।। अत्र तथाऽपीत्यपिशब्दव्याख्यानाद् यद्यपीति लभ्यते । अग्निशब्दः स्वपरः । अग्निशब्द एव आदिर्येषां तेऽग्न्यादय इति विग्रहः । अपिरवधारणेऽपीत्याशयेन साक्षादेवेत्युक्तम् । अर्थान्तराव्यवधानेनेत्यर्थः । फलितार्थमाह – **अनन्येति** ।। शक्यरूपान्यसम्बन्धमन्तरेण मुख्यवृत्त्येत्यर्थः । यद्वा – तत्त्वप्रदीपरीत्याऽन्यत्र योगवृत्त्यभावेन ब्रह्मणि सम्यग् योगेनेत्यर्थः । ब्रह्मवाचकैरपीत्यपिशब्दान्वयः । 'तैरग्न्यादिशब्दैः' इति शेषः । 'व्यवहारार्थं' हानादिव्यवहारसिद्ध्यर्थम् 'अनभिज्ञानात्' मुख्यवाच्यज्ञानाभावात् । चशब्दो न केवलं व्यवहारार्थं किन्त्वनभिज्ञानाच्चेति समुच्चये । 'अन्यत्र' अग्न्यादिषु तान् तत्र व्यवहरन्ति ज्ञानिनोऽज्ञानिनश्चेति क्रमेण शेषः । 'इत्यभ्युपगमे' इति निमित्तसप्तमी । एवमङ्गीकारात् 'अविरोधं' ज्ञान्यज्ञानिव्यवहारविरोधाभावं जैमिनिराचार्यो वक्तीत्यर्थः । 'यत्रानवसरः' इत्युक्तेर्वक्तीत्युक्तम् । अनेनाग्न्यादिशब्दाः नाग्न्यादिवाचकाः, किन्तु ब्रह्मवाचका एव । तथाऽपि नान्यत्र प्रसिद्धिविरोधः । न वाऽन्यथानुपपत्त्याऽन्येषां वाच्यत्वं कल्प्यम् । कुतः ? यतो वाच्यार्थधीव्यवहितं लक्षणादिकं विना साक्षान्मुख्यवृत्त्याऽपि

**भाष्यम् –**

**'व्यासचित्तस्थिताकाशादवच्छिन्नानि कानिचित् ।**
**अन्ये व्यवहरन्त्येतान्यूरीकृत्य गृहादिवत् ॥'**

**इति स्कान्दवचनान्न मतानां परस्परविरोधः ॥ २८ ॥**

**ಆಕಾಶವು ವಿಶಾಲವಾಗಿದೆ ಆದರೂ ನಮ್ಮ ಮನೆಯಲ್ಲಿರುವ ಆಕಾಶವು ನಮ್ಮದು ಎಂದು ಹೇಗೆ ಹೇಳುತ್ತೇವೋ ಅದರಂತೆ ವೇದವ್ಯಾಸರ ಮನಸ್ಸು ಬಹಳ ವಿಶಾಲವಾಗಿದೆ. ಆ ಮನಸ್ಸಿನಲ್ಲಿರುವ ಒಂದೊಂದು ಅಭಿಪ್ರಾಯವನ್ನೂ ಒಬ್ಬೊಬ್ಬ ಶಿಷ್ಯರು ಗ್ರಹಣ ಮಾಡಿರುವುದರಿಂದ ತಮ್ಮ ತಮ್ಮ ಮತವೆಂದು ಹೇಳುತ್ತಾರೆ. ಹೀಗೆ ಸ್ಕಾಂದಪುರಾಣದ ವಚನದ ಆಧಾರದಿಂದ ಜೈಮಿನಿಋಷಿಗಳ ಅಭಿಪ್ರಾಯಕ್ಕೂ ವೇದವ್ಯಾಸರ ಅಭಿಪ್ರಾಯಕ್ಕೂ ಪರಸ್ಪರ ವಿರೋಧವಿಲ್ಲವೆಂದು ಸ್ಪಷ್ಟವಾಗುತ್ತದೆ.**

ಪ್ರತಿಪದಾರ್ಥ -- ವ್ಯಾಸಚಿತ್ತಸ್ಥಿತಾಕಾಶಾತ್ = ವೇದವ್ಯಾಸದೇವರ ಮನಸ್ಸೆಂಬ ವಿಶಾಲವಾದ ಆಕಾಶದಲ್ಲಿ , ಅವಚ್ಛಿನ್ನಾನಿ = ಪರಿಮಿತವಾದ, ಕಾನಿಚಿತ್ = ಕೆಲವೇ ವಿಷಯಗಳನ್ನು, ಅನ್ಯೇ = ಜೈಮಿನಿ, ಕಾಶಕೃತ್ಸ್ನ ಮೊದಲಾದ ಋಷಿಗಳು, ಏತಾನಿ = ವೇದವ್ಯಾಸರ ಹೃದಯದಲ್ಲಿರುವ ವಿಷಯವನ್ನೇ ಪ್ರತ್ಯೇಕಮಾಡಿ, ವ್ಯವಹರಂತಿ = ತಮ್ಮ ಅಭಿಪ್ರಾಯವೆಂದು ವ್ಯವಹಾರ ಮಾಡುತ್ತಾರೆ. ಯಾವ ರೀತಿಯಾಗಿ, ಗೃಹಾದಿವತ್ = ವಿಶಾಲವಾದ ಮನೆ ಒಂದೇ ಆಗಿದ್ದರೂ ದೇವರ ಮನೆ ಅಡಿಗೆ ಮನೆ ಎಂದು ವ್ಯವಹರಿಸುವಂತೆ, ಸ್ಕಾಂದವಚನಾತ್ = ಸ್ಕಾಂದಪುರಾಣದ ಮಾತಿನಿಂದ, ಮತಾನಾಂ = ವೇದವ್ಯಾಸರ ಹಾಗೂ ಜೈಮಿನಿಗಳ ಅಭಿಪ್ರಾಯಕ್ಕೆ, ನ ವಿರೋಧಃ = ಪರಸ್ಪರವಿರೋಧವು ಬರುವುದಿಲ್ಲವೆಂದು ತಿಳಿಯಬೇಕು.[१]

---

ब्रह्मवाचकानग्न्यादिशब्दान् मुख्यार्थज्ञानिनः अजामिलचरमतनये नारायणशब्दमिव हानादिसिद्ध्यर्थं तदज्ञानिनस्त्वनभिज्ञानादेव तान् ज्वलनादिषु व्यवहरन्तीत्यभ्युपगमेनान्यत्र ाविरोधं व्यवहारविरोधाभावं प्रसिद्धिविलोपाभावं वक्ति । त इति सूत्रार्थ उक्तो भवति ॥

(१) भाष्यदीपिका – ननु जैमिन्यादिमतानां भगवन्मताविरोधित्वे जैमिन्यादिग्रहणवैयर्थ्यात् तद्विरोधित्वे वा कथं विरुद्धराद्धान्तेन परिहार इत्यत आह – व्यासेति ॥ व्यासचित्तस्थितं मतापरपर्यायं ज्ञानाख्यमहाऽकाशमपेक्ष्य गृहाद्यवच्छिन्नाकाशवत् 'अवच्छिन्नानि' विविक्तानि परिमितविषयाणि कानिचिदेतानि मतान्यूरीकृत्य 'अन्ये' केचन जैमिन्याद्याः व्यवहरन्तीत्यर्थः । यथोक्तं सत्तर्कदीपावल्याम् – आकाशवद् व्याप्तत्वात् प्रकाशमानत्वाच्च व्यासचित्तस्थितमताख्याकाशात् 'अवच्छिन्नानि' स्वस्वमत्या विविक्तानि तानि मतानि इदं

## श्रीपद्मनाभतीर्थविरचितसत्तर्कदीपावळ्याम्:

### ॐ साक्षादप्यविरोधं जैमिनिः ॐ ॥ १-२-२८ ॥

**नहि असति बाधके मुख्यार्थः परित्यज्यते इत्येतत्प्रतिपादकं सूत्रमनूद्य व्याचष्टे – साक्षादित्यादिना ॥ अर्थान्तराव्यवधानेन विष्णुवाचिनामग्न्यादिशब्दानां ज्वलनादिष्वेव प्रयोगस्तु मुख्यार्थविष्ण्वपरिज्ञानात् । मुख्यार्थज्ञानिनस्तु अजामिलश्चरमसुते नारायणशब्दवद् अग्न्यादिशब्दान् ज्वलनादिषु व्यवहारार्थं प्रयुञ्जत इत्यर्थः ।**

ಬಾಧಕವಿಲ್ಲದಿದ್ದಾಗ ಮುಖ್ಯಾರ್ಥವನ್ನು ಪರಿತ್ಯಾಗಮಾಡಬಾರದು ಎಂಬುದನ್ನು ಪ್ರತಿಪಾದಿಸುವ ಸೂತ್ರವನ್ನು ಅನುವಾದ ಮಾಡಿ ವ್ಯಾಖ್ಯಾನಿಸುತ್ತಿದ್ದಾರೆ "ಸಾಕ್ಷಾತ್" ಇತ್ಯಾದಿಯಾಗಿ. ಅಗ್ನ್ಯಾದಿ ಶಬ್ದಗಳೆಲ್ಲವೂ ಮತ್ತೊಂದು ಅರ್ಥದ ವ್ಯವಧಾನವಿಲ್ಲದೆ ನೇರವಾಗಿ ವಿಷ್ಣುವಾಚಿಯಾಗಿವೆ. ಆದರೂ ಸಹ ಬೆಂಕಿ ಮೊದಲಾದವುಗಳಲ್ಲಿ ಏಕೆ ಪ್ರಯೋಗಿಸುತ್ತಾರೆಂದರೆ ವಿಷ್ಣುವೇ ಮುಖ್ಯಾರ್ಥ ಎಂಬ ಪರಿಜ್ಞಾನವಿಲ್ಲದ್ದರಿಂದ. ಯಾರಿಗೆ ಮುಖ್ಯಾರ್ಥಜ್ಞಾನವು ಇರುತ್ತದೋ ಅಂತಹವರಿಗೆ ಅಜಾಮಿಳನು ಕೊನೆಯ ಮಗನಲ್ಲಿ ನಾರಾಯಣ ಎಂಬ ಶಬ್ದವನ್ನು ವ್ಯವಹರಿಸಿದಂತೆ ಅಗ್ನ್ಯಾದಿಶಬ್ದಗಳನ್ನು ಬೆಂಕಿ ಮೊದಲಾದವುಗಳಲ್ಲಿ ಕೇವಲ ವ್ಯವಹಾರಕ್ಕೋಸ್ಕರ ಪ್ರಯೋಗಿಸುತ್ತಾರೆಂದರ್ಥ.

**'साक्षादप्यविरोधं जैमिनिः' इत्यादिमतानुवादः स्वमतैकदेशत्वेन क्रियते न पूर्वपक्षत्वेन । अनिराकृतत्वात् । तथाहि पुराणवचनम् – व्यासेति ॥ आकाशवद् व्यासस्य प्रकाशमानस्य वेदव्यासस्य मतस्यैकदेशान् स्वस्वमत्या व्यवच्छेद्येदं मदीयमिदं मदीयमित्यन्ये जैमिन्यादयो व्यवहरन्ति । यथा गृहमठाद्याकाशप्रदेशानवच्छिद्य अयं मदीयप्रदेशोऽयं मदीयप्रदेश इति जना व्यवहरन्ति इत्यर्थः ॥**

'ಸಾಕ್ಷಾದಪ್ಯವಿರೋಧಂ ಜೈಮಿನಿಃ' ಎಂಬುದಾಗಿ ಜೈಮಿನಿ ಋಷಿಗಳ ಮತವನ್ನು ಅನುವಾದ ಮಾಡಿದ್ದಾರೆ. ಹಾಗೂ ಆತ್ರೇಯ ಮೊದಲಾದವರ ಮತವನ್ನೂ ಸಹ. ಈ ಮತಗಳೆಲ್ಲ ಸಹ ತಮಗೆ ಸಮ್ಮತವಾಗಿದೆ; ಹೊರತು ಪೂರ್ವಪಕ್ಷವನ್ನಾಗಿ ವಿವಕ್ಷಿಸಬಾರದು. ಈ ವಿಷಯದಲ್ಲಿ ಪುರಾಣವಾಕ್ಯದ

मदीयं इदं मदीयम् इत्यूरीकृत्यान्ये व्यवहरन्ति । यथा गृहनगरादिभिराकाशप्रदेशानवच्छिद्यायं मदीयः प्रदेशोऽयं मदीयः प्रदेश इति जनाः व्यवहरन्तीति । मतानामिति बहुवचनं वक्ष्यमाणमतविवक्षया । तथा च जैमिन्यादिमतानां व्यासमतेन परस्परं चाविरोध इत्यर्थः ।

ಆಧಾರವನ್ನು "ವ್ಯಾಸಚಿತ್ತ" ಇತ್ಯಾದಿ ಶ್ಲೋಕದಿಂದ ಹೇಳಿರುತ್ತಾರೆ. ವ್ಯಾಪ್ತವಾದ ಆಕಾಶವು ಘಟ, ಮಠಗಳ ಉಪಾಧಿಯಿಂದ ಪ್ರತ್ಯೇಕ ಆಕಾಶವೆಂದು ಪರಿಗಣಿಸುವಂತೆ ವೇದವ್ಯಾಸರ ಮನಸ್ಸಿನಲ್ಲಿರುವ ಅಭಿಪ್ರಾಯಗಳನ್ನು ಜೈಮಿನಿ ಆಶ್ಮರಥ್ಯ ಮೊದಲಾದ ಋಷಿಗಳು ಅಭಿಪ್ರಾಯಭೇದದಿಂದ ತಿಳಿದಿರುತ್ತಾರೆ. ವೇದವ್ಯಾಸರ ಮನಸ್ಸಿನಲ್ಲಿರುವ ಏಕದೇಶಾಭಿಪ್ರಾಯವನ್ನೇ ಜೈಮಿನ್ಯಾದಿಗಳು ತಮ್ಮ ತಮ್ಮ ಅಭಿಪ್ರಾಯವೆಂದು ಪರಿಗಣಿಸಿದ್ದಾರೆ.

**तत्वप्रकाशिका – ननु अग्न्यादिशब्दानामग्न्यादिवाचित्वाभावे ब्रह्मैकवाचित्वे च प्रसिद्धिविरोधः स्यात् । तस्याः कारणान्तराभावात् । अतः प्रसिद्ध्यन्यथानुपपत्त्याऽन्येषां वाचित्वमित्याशङ्कां परिहरत्सूत्रमुपन्यस्य व्याचष्टे – साक्षादिति ।।**

ಶಂಕಾ -- ಅಗ್ನಿ ಮೊದಲಾದ ಶಬ್ದಗಳು ಅಗ್ನಿದೇವತೆಯನ್ನಾಗಲೀ, ಭೌತಿಕವಾದ ಅಗ್ನಿಯನ್ನಾಗಲೀ ಪ್ರತಿಪಾದಿಸದಿದ್ದಲ್ಲಿ ಕೇವಲ ಬ್ರಹ್ಮನನ್ನೇ ಪ್ರತಿಪಾದಿಸುತ್ತದೆಂದು ಹೇಳಿದಂತಾಗುತ್ತದೆ. ಆವಾಗ ಲೋಕಪ್ರಸಿದ್ಧಿಗೆ ವಿರೋಧ ಬರುತ್ತದೆ. ಲೋಕಪ್ರಸಿದ್ಧಿಗಾದರೂ ವಾಚಕತ್ವವನ್ನು ಬಿಟ್ಟು ಬೇರೆ ಕಾರಣವನ್ನು ಹೇಳಲು ಬರುವುದಿಲ್ಲ. ಆದ್ದರಿಂದ ಲೋಕಪ್ರಸಿದ್ಧಿಯ ಅನ್ಯಥಾನುಪಪತ್ತಿಯಿಂದ ಅಗ್ನಿ ಮೊದಲಾದ ದೇವತೆಗಳು ಅಗ್ನಿ ಮೊದಲಾದ ಶಬ್ದಗಳಿಂದ ಪ್ರತಿಪಾದ್ಯರಾಗುತ್ತಾರೆಂದು ಹೇಳಲೇಬೇಕಾಗುತ್ತದಲ್ಲವೇ? ಈ ಆಶಂಕೆಯನ್ನು ಪರಿಹರಿಸುವುದಕ್ಕಾಗಿ ಸೂತ್ರವನ್ನು ಪಠಿಸಿ ವ್ಯಾಖ್ಯಾನಿಸುತ್ತಿದ್ದಾರೆ "ಸಾಕ್ಷಾತ್" ಇತ್ಯಾದಿಯಾಗಿ.

**तत्वप्रकाशिका – यद्यपि अग्न्यादिशब्दा नाग्न्यादिवाचकाः किन्तु ब्रह्मवाचका एव । तथापि न प्रसिद्धिविरोधः । अनन्ययोगेन ब्रह्मवाचकैरपि तैर्ज्ञानिनो हानादिसिध्यर्थमन्यत्राग्न्यादौ व्यवहरन्ति ।**

ಸಮಾಧಾನ -- ಅಗ್ನಿ ಮೊದಲಾದ ಶಬ್ದಗಳು ಅಗ್ನಿದೇವತೆ ಮೊದಲಾದವರನ್ನು ಮುಖ್ಯವಾಗಿ ಪ್ರತಿಪಾದಿಸುವುದಿಲ್ಲ. ಹೊರತಾಗಿ ವಿಷ್ಣುವನ್ನೇ ಮುಖ್ಯವಾಗಿ ಪ್ರತಿಪಾದಿಸುತ್ತವೆ. ಆದರೂ ಸಹ ಲೋಕಪ್ರಸಿದ್ಧಿಗೆ ವಿರೋಧ ಬರುವುದಿಲ್ಲ. ಈ ಎಲ್ಲ ಶಬ್ದಗಳು ಬೇರೆಲ್ಲೂ ಬಾರದೆ ಬ್ರಹ್ಮನನ್ನಷ್ಟೇ ಪ್ರತಿಪಾದಿಸಿದರೂ ಜ್ಞಾನಿಗಳು ಅನಾದಿಸಿದ್ಧವಾದ ವ್ಯವಹಾರವನ್ನು ಕೂಡಿಸುವುದಕ್ಕಾಗಿ ಅಮುಖ್ಯವೃತ್ತಿಯಿಂದ ಅಗ್ನಿದೇವತೆ ಮೊದಲಾದವರಲ್ಲಿ ಆ ಶಬ್ದಗಳನ್ನು ಪ್ರಯೋಗಿಸುತ್ತಾರೆ.

**तत्वप्रकाशिका – तदन्ये तु ज्ञानभावादेवेत्यभ्युपगमात् । एवमभ्युपगमे च प्रसिद्धेरन्यथोपपत्तिसिद्धेर्न तद्विरोध इति जैमिनिराचार्यो वक्तीत्यर्थः ।**

ಜ್ಞಾನಿಗಳಲ್ಲದವರು ಈ ವಿಷಯವನ್ನು ತಿಳಿಯದೇ ಅಜ್ಞಾನದಿಂದ ಭಗವಂತನನ್ನು ಬಿಟ್ಟು ಬೇರೆಡೆಯೇ ಮುಖ್ಯವಾಗಿ ವ್ಯವಹಾರ ಮಾಡುತ್ತಾರೆ. ಹೀಗೆ ಆ ಎಲ್ಲ ಶಬ್ದಗಳಿಂದ ವಿಷ್ಣುವೇ ಮುಖ್ಯಪ್ರತಿಪಾದ್ಯನೆಂದು

ಒಪ್ಪಿದಾಗ ಲೋಕಪ್ರಸಿದ್ಧಿಯು ಅನ್ಯಥಾ ಉಪಪನ್ನವಾಗುತ್ತದೆ. ಆದ್ದರಿಂದ ಯಾವುದೇ ವಿರೋಧಕ್ಕೂ ಅವಕಾಶವಿಲ್ಲವೆಂದು ಜೈಮಿನ್ಯಾಚಾರ್ಯರು ಹೇಳುತ್ತಾರೆಂದು ಸೂತ್ರದ ಅಭಿಪ್ರಾಯ.

**तत्वप्रकाशिका – ननु जैमिन्यादिमतानां भगवन्मताविरोधित्वे जैमिन्यादिग्रहणवैयर्थ्याद्विरोधित्वे च कथं विरुद्धराद्धान्तेन परिहार इत्यत आह – व्यासेति ।।**

ಸೂತ್ರಕಾರರು ಜೈಮಿನ್ಯಾಚಾರ್ಯರ ಮತವನ್ನು ಏಕೆ ಉಲ್ಲೇಖಿಸಿದ್ದಾರೆ? ಏಕೆಂದರೆ ಒಂದು ವೇಳೆ ಜೈಮಿನಿ ಋಷಿ ಮುಂತಾದವರ ಮತಗಳು ವೇದವ್ಯಾಸರ ಅಭಿಪ್ರಾಯಕ್ಕೆ ವಿರೋಧವಾಗದಿದ್ದರೆ ಸೂತ್ರದಲ್ಲಿ ಜೈಮಿನ್ಯಾದಿಶಬ್ದಗಳ ಉಲ್ಲೇಖವು ವ್ಯರ್ಥವಾಗುತ್ತದೆ. ಒಂದು ವೇಳೆ ವೇದವ್ಯಾಸ ಮತಕ್ಕೆ ವಿರುದ್ಧವಾಗುವುದಾದರೆ ವಿರುದ್ಧವಾದ ಸಿದ್ಧಾಂತದಿಂದ ಪೂರ್ವಪಕ್ಷವು ಹೇಗೆ ಪರಿಹಾರವಾಗುತ್ತದೆ ಎಂಬ ಗೊಂದಲವನ್ನು ಪರಿಹರಿಸುವುದಕ್ಕಾಗಿ "ವ್ಯಾಸಚಿತ್ತ" ಎಂಬ ಸ್ಕಾಂದಪುರಾಣವನ್ನು ಉಲ್ಲೇಖಿಸುತ್ತಿದ್ದಾರೆ.

**तत्वप्रकाशिका – जैमिन्यादिमतानां न व्यासमतविरोधस्तथापि तन्मतैकदेशोररीकाराभिप्रायेण जैमिन्यादिग्रहणोपपत्तिरिति भावः । चित्तस्थिताऽकाशादिति चित्तस्थितज्ञानाख्यकाशात् । बहुवचनं वक्ष्यमाणमतविवक्षया ।। २८ ।।**

ಜೈಮಿನ್ಯಾಚಾರ್ಯ ಮುಂತಾದವರ ಮತಕ್ಕೂ ವೇದವ್ಯಾಸರ ಮತಕ್ಕೂ ವಿರೋಧವು ಬರುವುದಿಲ್ಲ. ಏಕೆಂದರೆ ಜೈಮಿನಿ ಋಷಿಗಳು ಹಾಗೂ ಇತರರು ವೇದವ್ಯಾಸರ ಮತದ ಏಕದೇಶವನ್ನು ಅಂಗೀಕಾರ ಮಾಡಿರುವುದರಿಂದ ಸೂತ್ರದಲ್ಲಿ ಜೈಮಿನಿ ಇತ್ಯಾದಿ ಶಬ್ದಗಳ ಉಲ್ಲೇಖವು ಉಪಪನ್ನವಾಗುತ್ತದೆ. 'ಚಿತ್ತಸ್ಥಿತಆಕಾಶಾತ್' ಎಂಬ ಪದಕ್ಕೆ ಚಿತ್ತದಲ್ಲಿರುವ ಜ್ಞಾನವೆಂಬ ಆಕಾಶದಿಂದ ಎಂದರ್ಥ. ಭಾಷ್ಯದಲ್ಲಿ 'ಮತಾನಾಂ' ಎಂಬ ಬಹುವಚನವು ಮುಂದೆ ಹೇಳುವ ಶುಕಾಚಾರ್ಯರ ಮತವೇ ಮೊದಲಾದವನ್ನು ವಿವಕ್ಷಿಸಿ ಪ್ರಯೋಗಿಸಲ್ಪಟ್ಟಿದೆ.

**भावदीपः – ॐ साक्षादप्यविरोधं जैमिनिः ॐ ।। प्रसिद्धीति ।। व्यवहारविरोधः स्यादित्यर्थः । आकाङ्क्षितपूर्त्या भाष्यं व्याचष्टे – यद्यपीति ।।**

॥ ಓಂ ಸಾಕ್ಷಾದಪ್ಯವಿರೋಧಂ ಜೈಮಿನಿಃ ಓಂ ॥

"ಪ್ರಸಿದ್ಧಿ" ಎಂದರೆ ವ್ಯವಹಾರವಿರೋಧ ಬರುತ್ತದೆ ಎಂದರ್ಥ. ಆಕಾಂಕ್ಷಿತವಾದದ್ದನ್ನು ಪೂರ್ಣ ಮಾಡುತ್ತಾ ಭಾಷ್ಯವನ್ನು "ಯದ್ಯಪಿ" ಇತ್ಯಾದಿಯಾಗಿ ವ್ಯಾಖ್ಯಾನಿಸುತ್ತಿದ್ದಾರೆ.

**भावदीपः – सौत्रसाक्षात्पदार्थः – अनन्ययोगेनेति ।।** वाच्यार्थधीव्यवहितलक्षणादिकं विना मुख्यवृत्त्येत्यर्थः ।

ಸೂತ್ರದಲ್ಲಿರುವ "ಸಾಕ್ಷಾತ್" ಎಂಬ ಪದಕ್ಕೆ "ಅನನ್ಯಯೋಗೇನ" ಎಂದರ್ಥ. ವಾಚ್ಯಾರ್ಥಜ್ಞಾನದಿಂದ ವ್ಯವಹಿತವಾದ ಲಕ್ಷಣಾದಿಗಳನ್ನು ಮಾಡದೆ ಮುಖ್ಯವೃತ್ತಿಯಿಂದ ಎಂದು "ಸಾಕ್ಷಾತ್" ಪದದ ಅರ್ಥ.

**भावदीपः** – यद्यपीत्यादिना विवृतं सौत्रापिपदमनुवदति – **ब्रह्मवाचकैरपीति** ।। ज्ञानिन इति तदन्य इति च भाष्यशेषोक्तिः । **व्यवहारार्थमित्यस्यार्थः** – **हानादीति** ।। अनभिज्ञानाच्चेत्यस्यार्थः – **ज्ञानाभावादेवेति** ।। चस्त्ववधारण इति भावः ।

"ಯದ್ಯಪಿ" ಇತ್ಯಾದಿ ವಾಕ್ಯದಿಂದ ವಿವರಿಸಲ್ಪಟ್ಟ ಸೂತ್ರದಲ್ಲಿರುವ "ಅಪಿ" ಪದವನ್ನು ಅನುವಾದ ಮಾಡುತ್ತಿದ್ದಾರೆ "ಬ್ರಹ್ಮವಾಚಕೈರಪಿ" ಎಂಬುದಾಗಿ. "ಜ್ಞಾನಿನಃ" ಎಂಬುದಾಗಿ ಮತ್ತು "ತದನ್ಯಃ" ಎಂಬುದಾಗಿ ಭಾಷ್ಯದಲ್ಲಿ ಶೇಷಪೂರಣ ಮಾಡಿಕೊಳ್ಳಬೇಕು. "ವ್ಯವಹಾರಾರ್ಥಂ" ಎಂಬುದರ ಅರ್ಥವನ್ನು "ಹಾನ" ಇತ್ಯಾದಿಯಾಗಿ ಹೇಳಿದ್ದಾರೆ. "ಅನಭಿಜ್ಞಾನಾಚ್ಚ" ಎಂಬ ಭಾಷ್ಯದ ಪದಕ್ಕೆ "ಜ್ಞಾನಾಭಾವಾದೇವ" ಎಂದು ವ್ಯಾಖ್ಯಾನಿಸಿದ್ದಾರೆ. ಇಲ್ಲಿರುವ "ಚ" ಶಬ್ದವು ಅವಧಾರಣಾರ್ಥದಲ್ಲಿದೆ.

**भावदीपः** – हानादिसिद्ध्यर्थमग्न्यादौ व्यवहरन्तीत्यनुषङ्गः ।। **अन्यथेति** ।। ज्ञानिनां हानादिप्रयोजनोपाधिनाऽन्येषां तु विष्णौ मुख्यत्वाज्ञानेनेत्यर्थः ।। **बहुवचनमिति** ।। मतानामिति अन्ये इति च बहुवचनमित्यर्थः ।।

ಉಪಾದಾನಾದಿಗಳು ಹಾಗೂ ಹಾನಾದಿಗಳು ಸಿದ್ಧವಾಗಬೇಕೆಂದು 'ಅಗ್ನ್ಯಾದಿಗಳಲ್ಲಿ ವ್ಯವಹರಿಸುತ್ತಾರೆ' ಎಂದು ಅನುಷಂಗ ಮಾಡಬೇಕು. "ಅನ್ಯಥಾ" ಎಂದರೆ ಜ್ಞಾನಿಗಳಿಗೆ ಹಾನಾದಿಪ್ರಯೋಜನವೆಂಬ ಉಪಾಧಿ ಯಿಂದ ಬೇರೆಯವರಿಗೆ ವಿಷ್ಣುವಿನಲ್ಲಿ ಮುಖ್ಯವಾದ ಪ್ರಯೋಗವು ತಿಳಿಯದಿರುವುದರಿಂದ ಎಂದರ್ಥ. "ಬಹುವಚನಂ" ಎಂಬ ಟೀಕೆಗೆ "ಮತಾನಾಂ" ಎಂಬಲ್ಲಿರುವ ಬಹುವಚನವೆಂದು, ಮತ್ತು "ಅನ್ಯೇ" ಎಂಬಲ್ಲಿರುವ ಬಹುವಚನವೆಂದು ಅರ್ಥ.

**वाक्यार्थमञ्जरी** – ॐ **साक्षादप्यविरोधं जैमिनिः** ॐ ।। साक्षाद् अन्यवाचकत्वत्यागेन ब्रह्मणो वैश्वानरादिशब्दवाच्यत्वेऽप्यत्र व्यवहाराविरोधं जैमिनिराहेत्यर्थः । नाग्न्यादिवाचकाः परममुख्यवृत्त्या । किं ज्ञानिप्रसिद्धिविरोध उताज्ञानिनाम् । आद्य आह – **अनन्ययोगेनेति** ।। अनन्यवाचकत्वं विनेत्यर्थः । द्वितीये त्वाह – **तदन्यत्वे त्विति** ।। **न तद्विरोध इति** ।। ज्ञानिप्रसिद्धेरौपचारिकत्व ादज्ञानिप्रसिद्धेरज्ञानमूलत्वेन तद्विरोधस्याकिञ्चित्करत्वादिति भावः । भाष्ये अवच्छिद्यानि परिच्छिन्नानि ऊरीकृत्य अङ्गीकृत्य ग्रहादिवद् यथा यथा महागृहवत् परिच्छिन्नान्यवान्तरगृहाणि महानसादिशब्दैर्व्यवह्रियन्ते, तथेत्यर्थः । प्रसिद्धाकाशोक्तेः प्रकृतासङ्गतत्वादाह – **ज्ञानेति** ।। आकाशवज्ज्ञानस्यापरिच्छिन्नत्वादेवमुक्तिः ।।२८।।

ವೈಶ್ವಾನರಾಧಿಕರಣ (೧-೨-೭)

ಬ್ರಹ್ಮಮೀಮಾಂಸಾಶಾಸ್ತ್ರ

## ಉಪಾಸನೆಗಾಗಿ ಸೂಕ್ತ ನಿಯಮವೆಂದು ಆಶ್ಮರಥ್ಯರು

**भाष्यम् – सू-ॐ ॥ अभिव्यक्तेरित्याश्मरथ्यः ॥ ॐ ॥२९॥**

ಸೂತ್ರಾರ್ಥ - ಅಗ್ನ್ಯಾದಿ ಸೂಕ್ತಗಳಿಂದ ವಿಷ್ಣುವನ್ನು ಉಪಾಸನೆ ಮಾಡಿದರೆ ಅಗ್ನ್ಯಾದಿಗಳಲ್ಲೇ ವಿಷ್ಣುವು ಪ್ರತ್ಯಕ್ಷನಾಗುತ್ತಾನೆ. ಈ ದೃಷ್ಟಿಯಿಂದ ಅಗ್ನಿಸೂಕ್ತ, ವಾಯುಸೂಕ್ತವೆಂಬ ನಿಯಮವು ಉಪಪನ್ನವಾಗುತ್ತದೆಂದು ಆಶ್ಮರಥ್ಯಾಚಾರ್ಯರು ಹೇಳಿದ್ದಾರೆ.

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका –** अभिव्यक्तेः अग्न्यादिषु ब्रह्मोपास्तौ कृतायां तेषु ब्रह्मणोऽभिव्यक्तेः । तन्निमित्तोऽग्न्यादिसूक्तनियम इति आश्मरथ्याचार्यो मन्यत इत्यर्थः ॥

ಅಭಿವ್ಯಕ್ತೇಃ = ಅಗ್ನ್ಯಾದಿಗಳಲ್ಲಿ ಬ್ರಹ್ಮನನ್ನು ಉಪಾಸನೆ ಮಾಡಿದರೆ ಅಂತಹ ಅಗ್ನ್ಯಾದಿಗಳಲ್ಲಿ ಬ್ರಹ್ಮನು ಪ್ರತ್ಯಕ್ಷನಾಗುತ್ತಾನೆಂದು ಹೇಳಿರುವುದರಿಂದ, ಇತಿ = ತನ್ನಿಮಿತ್ತವಾಗಿ ಅಗ್ನಿ ಮೊದಲಾದ ಸೂಕ್ತಗಳ ವ್ಯವಸ್ಥೆಯು ಉಪಪನ್ನವಾಗುತ್ತದೆ ಎಂದು, ಆಶ್ಮರಥ್ಯಃ = ಆಶ್ಮರಥ್ಯಾಚಾರ್ಯರು ಹೇಳುತ್ತಾರೆ.

**श्रीमदानन्दतीर्थभगवत्पादाचार्यविरचित-**

## ब्रह्मसूत्रभाष्यम्

**भाष्यम् – तत्र तत्र प्रसिद्धावप्यग्न्यादिषु ब्रह्मणोऽभिव्यक्तेरग्न्यादिसूक्तनियम इत्याश्मरथ्यः ॥ २९ ॥**

ಅಗ್ನಿ, ವಾಯು ಮೊದಲಾದ ಸೂಕ್ತಗಳಿಂದಲೂ ವಿಷ್ಣುವೇ ಪ್ರತಿಪಾದ್ಯನಾಗಿದ್ದಾನೆ. ಆದರೂ ಸಹ ಅಗ್ನಿ ಮೊದಲಾದ ಸೂಕ್ತಗಳ ಉಪಾಸನೆಯಿಂದ ಸ್ವೇಚ್ಛೆಯಿಂದ ವಿಷ್ಣುವೇ ಪ್ರಾದುರ್ಭೂತನಾಗುತ್ತಾನೆ. ಈ ಕಾರಣದಿಂದ ಅಗ್ನಿಸೂಕ್ತ, ವಾಯುಸೂಕ್ತ ಎಂಬ ನಿಯಮವು ಯೋಗ್ಯವಾಗಿದೆಯೆಂದು ಆಶ್ಮರಥ್ಯಾಚಾರ್ಯರು ಹೇಳುತ್ತಾರೆ.

ಪರಿಪೂರ್ಣಚಂದ್ರಿಕಾ

ಪ್ರತಿಪದಾರ್ಥ -- ಲೌಕಿಕ ಪ್ರಸಿದ್ಧಿಯು ಅಜ್ಞಾನಮೂಲವಾಗಿರಬಹುದು. ಆದರೆ ವೇದದಲ್ಲಿ ಅಗ್ನಿಸೂಕ್ತ, ವಾಯುಸೂಕ್ತ ಇತ್ಯಾದಿ ಪ್ರಭೇದಿಂದ ಅಗ್ನ್ಯಾದಿಗಳೂ ಸಹ ಪ್ರತಿಪಾದ್ಯರಾಗಬಹುದಲ್ಲವೇ ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ.

ಆಶ್ಮರಥ್ಯಃ = ಆಶ್ಮರಥ್ಯಾಚಾರ್ಯರು, ತತ್ರ ತತ್ರ = ಆಯಾ ಅಗ್ನಿ ವಾಯು ಮೊದಲಾದವರ ಸೂಕ್ತಗಳಲ್ಲಿ, ಪ್ರಸಿದ್ಧಾವಪಿ = ಅಗ್ನಿ,ವಾಯು ಮುಂತಾದ ಶಬ್ದಗಳು ಅನ್ಯತ್ರಪ್ರಸಿದ್ಧವಾಗಿದ್ದರೂ, ಅಗ್ನ್ಯಾದಿಷು = ಅಗ್ನಿಮೊದಲಾದ ದೇವತೆಗಳಲ್ಲಿ, ಸನ್ನಿಹಿತನಾಗಿದ್ದರಿಂದ, ಅಭಿವ್ಯಕ್ತೇಃ = ಭಗವಂತನು ಅಭಿವ್ಯಕ್ತನಾಗುತ್ತಾನೆ. ಆದ್ದರಿಂದ ಅಗ್ನ್ಯಾದಿಸೂಕ್ತನಿಯಮಃ = ಅಗ್ನಿಸೂಕ್ತ, ವಾಯುಸೂಕ್ತ ಇತ್ಯಾದಿ ಪ್ರಭೇದವು ಸೂಕ್ತವಾಗುತ್ತದೆ. ಇತಿ = ಹೀಗೆ ಹೇಳಿದ್ದಾರೆ.(१)

## श्रीपद्मनाभतीर्थविरचितसत्तर्कदीपावळ्याम्ः

### ॐ अभिव्यक्तेरित्याश्मरथ्यः ॐ ॥ १-२-२९ ॥

छान्दोग्यादिवैश्वानरविद्यावदग्न्यादिसूक्तानां विष्णुपरत्वमभ्युपगतं 'विश्वे देवाः अनवः सन् अभियानः त्वमग्ने त्वमसि तस्थिवांसम् ।' 'नकिरिन्द्र त्वदुत्तरो न ज्यायाम् अस्ति वृत्रहन्' इत्यादिविष्णुलिङ्गादेव । सर्वोत्तमत्वादिधर्माणामिन्द्रादिष्वसम्भवात् ।

(१) **भाष्यदीपिका** – ननु लौकिकप्रसिद्धेरज्ञानादिमूलत्वेनान्यथोपपत्तावपि वैदिकाग्न्यादिसूक्तमन्त्रादिप्रसिद्ध्यन्यथानुपपत्त्याऽग्न्यादीनां सूक्तादिगताग्न्यादिशब्दवाच्यत्वं स्यात्, तत्राज्ञानादिमूलकत्वकल्पनाऽयोगेनान्यथोपपत्त्यभावात् । नापि व्यवहारार्थत्वेन अन्यथोपपत्तिः, अनादित्वादित्याशङ्कां परिहरत्सूत्रं पठति – अभिव्यक्तेरिति ॥ अत्र पूर्वस्मादपिरनुवर्तनीयः । तच्छब्दश्चानुवृत्तोऽनेकधा विपरिणेतव्य इत्याशयेन तद् व्याचष्टे – तत्रेति ॥ 'तत्र तत्र' सूक्तादौ तस्य ब्रह्मण एव 'प्रसिद्धावपि' प्रतिपाद्यत्वेऽपि अग्न्यादीनामप्रतिपाद्यत्वेऽपीत्यर्थः । अग्न्यादिष्विति सावधारणम् । सूत्रेऽविरोधमित्यनुषक्तपदतात्पर्यमाह – अग्न्यादीति ॥ आदिशब्दः उभयत्र योज्यः । युज्यत इति ॥ वक्तीति शेषः । अनेनापि – तत्तत्सूक्तादौ ब्रह्मण एव प्रतिपाद्यत्वेऽपि अग्निवाय्वादीनामप्रतिपाद्यत्वेऽपि अविरोधः । अग्न्यादिसूक्तनियमः इदमग्निसूक्तम् इदं वायुसूक्तम् इति सूक्तनियमः, इयमग्निविद्या इयं वायुविद्येति विद्यानियमश्च युज्यते । कथम् ? तैरग्न्यादिसूक्तादिभिस्तस्य ब्रह्मणस्तस्यामुपास्तौ कृतायां तत्राग्न्यादिष्वेव तस्य ब्रह्मणः 'अभि' स्वेच्छयाऽभिव्यक्तिनियमात् तदभिप्रायेण तत्प्रसिद्धेरुपपत्तेरित्येवं वैदिकाग्न्यादिसूक्तादिप्रसिद्ध्यविरोधमाश्मरथ्याचार्यो वक्तीति सूत्रार्थ उक्तो भवति ॥

ಛಾಂದೋಗ್ಯದಲ್ಲಿರುವ ವೈಶ್ವಾನರವಿದ್ಯೆಯು ಹೇಗೆ ವಿಷ್ಣುಪರವಾಗಿದೆಯೋ ಅದರಂತೆ ಅಗ್ನ್ಯಾದಿಸೂಕ್ತಗಳೂ ಸಹ ವಿಷ್ಣುಪರವೇ ಆಗಿದೆ. "ವಿಶ್ವೇ ದೇವಾಃ ಅನವಃ ಸನ್ ಅಭಿಯಾನಃ ತ್ವಮಗ್ನೇ ತ್ವಮಸಿ ತಸ್ಥಿವಾಂಸಮ್" 'ನಕಿರಿಂದ್ರ ತ್ವದುತ್ತರೋ ನ ಜ್ಯಾಯಾಮ್ ಅಸ್ತಿ ವೃತ್ರಹನ್' ಇತ್ಯಾದಿ ವಾಕ್ಯದಲ್ಲಿ ಹೇಳಲ್ಪಟ್ಟ ವಿಷ್ಣುಲಿಂಗವೇ ಈ ವಿಷಯದಲ್ಲಿ ಆಧಾರವಾಗಿದೆ. ಸರ್ವೋತ್ತಮತ್ವವೇ ಮೊದಲಾದ ಧರ್ಮಗಳು ಇಂದ್ರಾದಿಗಳಲ್ಲಿ ಅಸಂಭಾವಿತವಾಗಿವೆ.

**एवं सति सर्वं विष्णुसूक्तमेव स्यात् ।। न त्वग्निसूक्तमिदमिदमिन्द्रसूक्तमित याशङ्कां परिहरति – अभिव्यक्तेरित्यादिना ।। अग्न्यादिसूक्तेषु मुख्यतो विष्णोः अभिधेयत्वसिद्धावपि अग्न्यादिसूक्तोपास्यमानस्याग्न्यादिषु प्रादुर्भूयमानत्वाद् अग्न्यादिष्वनुस्मर्यमाणत्वाद् अग्न्यादिसूक्तैरग्न्याधिष्ठितविष्णूपासकस्याग्न्याद्यधिष्ठित-विष्णुप्राप्तेरग्न्यादिसूक्तव्यवस्थेत्यर्थः ।।**

ಹಾಗಾದರೆ ಎಲ್ಲವೂ ಸಹ ವಿಷ್ಣುಸೂಕ್ತವೇ ಎಂದಾಗಬೇಕಾದೀತು ಹೊರತು ಇದು ಅಗ್ನಿಸೂಕ್ತ ಇದು ಇಂದ್ರಸೂಕ್ತ ಎಂಬ ವ್ಯವಸ್ಥೆಯೇ ಇಲ್ಲದಂತಾಗಬೇಕಾದೀತು. ಈ ಆಶಂಕೆಯನ್ನು ಪರಿಹರಿಸಲು "ಅಭಿವ್ಯಕ್ತೇಃ" ಎಂಬ ಸೂತ್ರವು ಹೊರಟಿದೆ. ಅಗ್ನ್ಯಾದಿಸೂಕ್ತಗಳಲ್ಲಿ ಮುಖ್ಯವಾಗಿ ವಿಷ್ಣುವೇ ಪ್ರತಿಪಾದ್ಯನು ಸಿದ್ಧವಾದರೂ ಸಹ ಅಗ್ನ್ಯಾದಿಸೂಕ್ತಗಳಿಂದ ಯಾರು ಹೇಗೆ ಉಪಾಸನೆ ಮಾಡುತ್ತಾರೋ ಅವರಿಗೆ ಭಗವಂತನು ಅಂತಹ (ಪ್ರತೀಕದಲ್ಲಿ) ದೇವತೆಗಳಲ್ಲಿಯೇ ಪ್ರಾದುರ್ಭೂತನಾಗಿ ಅನುಗ್ರಹಿಸುತ್ತಾನೆ. ಹಾಗೂ ಅಗ್ನ್ಯಾದಿಅಧಿಷ್ಠಾನದಲ್ಲಿ ಉಪಾಸನೆ ಮಾಡುವವರಿಗೆ ಆಯಾಯಾ ಅಧಿಷ್ಠಾನಗತ ಭಗವಂತನ ಪ್ರಾಪ್ತಿಯಾಗುತ್ತದೆ. ಹೀಗೆ ಉಪಾಸನೆಗೋಸ್ಕರ ಸೂಕ್ತಾದಿಗಳ ವ್ಯವಸ್ಥೆಯು ಉಪಪನ್ನವಾಗಿದೆ.

ಇಲ್ಲಿಗೆ ಪದ್ಮನಾಭತೀರ್ಥಭಟ್ಟಾರಕರಿಂದ ವಿರಚಿತವಾದ ಸತ್ತರ್ಕದೀಪಾವಳಿಯ ಕನ್ನಡಾನುವಾದದಲ್ಲಿ
ಪ್ರಥಮಾಧ್ಯಾಯದ ದ್ವಿತೀಯಪಾದವು ಸಂಪೂರ್ಣವಾಯಿತು ॥
॥ಶ್ರೀಕೃಷ್ಣಾರ್ಪಣಮಸ್ತು ॥

* * * * *

**तत्वप्रकाशिका –**

**ननु लौकिकप्रसिद्धेरज्ञानादिमूलत्वेनान्यथोपपत्तावपि वैदिकाग्न्यादिसूक्तविद्यादि प्रसिद्ध्यन्यथानुपपत्त्याऽग्न्यादीनां वाच्यत्वं स्यात् । तत्राज्ञानादिमूलत्वकल्पनाऽ-योगेनान्यथोपपत्त्यभावात् । नापि व्यवहारर्थत्वेनान्यथोपपत्तिरनादित्वादित्या-शङ्कां परिहरत्सूत्रं पठित्वा, व्याचष्टे – अभिव्यक्तेरिति ।। न वैदिकाग्न्यादिसूक्तादि**

**प्रसिद्ध्यन्यथानुपपत्त्याऽन्येषां सूक्तादिप्रतिपाद्यत्वम् । तत्र तत्र सूक्तादौ परब्रह्मण एव प्रतिपाद्यत्वेऽग्न्यादीनामप्रतिपाद्यत्वेऽप्यग्न्यादिसूक्तादिभिर्ब्रह्मोपास्तावगन्यादिष्वेव स्वेच्छयाब्रह्मणोऽभिव्यक्तिनियमात्तदभिप्रायेण प्रसिद्धेरुपपत्तेरित्याश्मरथ्याचार्यो वक्तीत्यर्थः ।। २९ ।।**

ಪ್ರಶ್ನೆ - ಅಜ್ಞಾದಿಶಬ್ದವಿಷಯದಲ್ಲಿ ಲೋಕಪ್ರಸಿದ್ಧಿಯು ಅಜ್ಞಾನ ಮೂಲಕವೆಂಬ ಕಲ್ಪನೆಯಿಂದಾ ಅನ್ಯಥಾ ವ್ಯವಹಾರವನ್ನು ಮಾಡಬಹುದೆಂದು ಸಮರ್ಥಿಸಲಾಯಿತು. ಆದರೂಸಹ ಇದು ಅಗ್ನಿಸೂಕ್ತ, ಇದು ವಾಯುಸೂಕ್ತ, ಇತ್ಯಾದಿಯಾದ ವೈದಿಕ ವ್ಯವಹಾರ ಪ್ರಸಿದ್ಧಿಗೆ ಅನ್ಯತಾ ಉಪಪತ್ತಿಯನ್ನು ಹೇಳಲು ಸಾಧ್ಯವಿಲ್ಲ. ಆದ್ದರಿಂದ ಅಗ್ನ್ಯಾದಿ ಶಬ್ದಗಳು ಅಗ್ನಿಮೊದಲಾದ ಪದಾರ್ಥವಾಚಕವೆಂದು ಒಪ್ಪಬೇಕಲ್ಲವೆ? ಏಕೆಂದರೆ ಇಂತಹ ವ್ಯವಹಾರಕ್ಕೆ ಅಜ್ಞಾನ ಮೂಲಕತ್ವವನ್ನು ಹೇಳಲು ಸಾಧ್ಯವಿಲ್ಲ. ಆಯಾ ಪದಾರ್ಥಗಳ ವಾಚಕವೆಂದೇ ಹೇಳಬೇಕು. ಇನ್ನು ಕೇವಲ ಹಾನ - ಉಪಾದಾನ ಮೊದಲಾದ ವ್ಯವಹಾರಕ್ಕೋಸ್ಕರ ಜ್ಞಾನಿಗಳು ಹಾಗೆ ಕಲ್ಪನೆ ಮಾಡಿದ್ದಾರೆಂಬ ಸಮಾಧಾನವನ್ನೂ ಸಹ ಹೇಳಲಾಗದು. ವೇದವು ಅಪೌರುಷೇಯವಾದ್ದರಿಂದ ವೈದಿಕವ್ಯವಹಾರ ವಿಷಯದಲ್ಲಿ ಹೀಗೆ ಕಲ್ಪಿಸುವುದು ತಪ್ಪಾಗುತ್ತದಲ್ಲವೆ?

ಉತ್ತರ - ಈ ಪ್ರಶ್ನೆಗೆ ಪರಿಹಾರವನ್ನು ಹೇಳುವುದಕ್ಕಾಗಿ ಸೂತ್ರವನ್ನು ಪಠಿಸುತ್ತಾ ವ್ಯಾಖ್ಯಾನಿಸುತ್ತಿದ್ದಾರೆ. 'ಅಭಿವ್ಯಕ್ತೇಃ' ಇತ್ಯಾದಿಯಾಗಿ.

**भावदीपः – ॐ अभिव्यक्तेरित्याश्मरथ्यः ॐ ।। अज्ञानादीति ।। अन्यत्र मुख्यत्वभ्रान्तिरादिपदार्थः ।। व्यवहारेति ।। इदं सूक्तमत्रोपादेयम् इदमत्र हेयमित्यादिव्यवहारार्थत्वेनेत्यर्थः**

॥ ಓಂ ಅಭಿವ್ಯಕ್ತೇರಿತ್ಯಾಶ್ಮರಥ್ಯಃ ಓಂ ॥

ಟೀಕಾದಲ್ಲಿರುವ "ಅಜ್ಞಾನಾದಿ" ಎಂಬಲ್ಲಿರುವ 'ಆದಿ' ಪದಕ್ಕೆ ಬೇರೆಕಡೆಯೂ ಮುಖ್ಯಾರ್ಥವನ್ನೇ ಹೇಳುತ್ತದೆ ಎಂಬ ಭ್ರಾಂತಿ ಎಂದರ್ಥ. "ವ್ಯವಹಾರ" ಇತ್ಯಾದಿ ಟೀಕೆಗೆ "ಇದಂ ಸೂಕ್ತಮತ್ರೋಪಾದೇಯಮ್ ಇದಮತ್ರ ಹೇಯಂ" - ಅಂದರೆ ಈ ಸೂಕ್ತವು ಈ ವಿಷಯದಲ್ಲಿ ಸ್ವೀಕಾರಕ್ಕೆ ಯೋಗ್ಯವಾಗಿದೆ, ಕೆಲವೆಡೆ ಸ್ವೀಕಾರಕ್ಕೆ ಯೋಗ್ಯವಲ್ಲವೆಂಬ ಮೊದಲಾದ ವ್ಯವಹಾರ ಎಂದರ್ಥ.

**भावदीपः – तत्र तत्र प्रसिद्धावपीत्युक्तिलब्धमाह – वैदिकेति ।। तत्र तत्रेत्यादिभाष्यस्योत्तरवाक्येन साक्षादन्वयायापिपदसमुच्चयं वदन्नर्थमाह – तत्र तेति ।।**

ಭಾಷ್ಯದಲ್ಲಿರುವ "ತತ್ರ ತತ್ರ ಪ್ರಸಿದ್ಧಾವಪಿ" ಎಂಬ ಮಾತಿನ ತಾತ್ಪರ್ಯವನ್ನು "ವೈದಿಕಾಗ್ನ್ಯಾದಿ" ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ. "ತತ್ರ ತತ್ರ ಇತ್ಯಾದಿ" ಎಂಬ ಭಾಷ್ಯದ ಮುಂದಿನ ವಾಕ್ಯಗಳಿಗೆ ನೇರವಾಗಿ ಅನ್ವಯ ತಿಳಿಯದಿರುವುದರಿಂದ ಪದಸಮುಚ್ಚಯ ಮಾಡಿ ಅರ್ಥವನ್ನು "ತತ್ರ ತತ್ರ" ಎಂಬ ಟೀಕಾ ಗ್ರಂಥದಿಂದ ಹೇಳುತ್ತಿದ್ದಾರೆ.

**भावदीपः – कर्माधीनत्वं वा अन्यत्राभिव्यक्तावशक्तत्वं वा निराह – स्वेच्छयेति ।। वक्तीति पदमनुवृत्त्यान्वयमाह – वक्तीत्यर्थ इति ।।**

ಅಗ್ನಿಯೇ ಮೊದಲಾದ ಸೂಕ್ತಗಳು ಕರ್ಮಪರವಾಗಿವೆ ಅಥವಾ ಅವುಗಳಲ್ಲಿ ಬ್ರಹ್ಮನನ್ನು ಉಪಾಸನೆ ಮಾಡಿದವರಿಗೆ ಅಲ್ಲಿ ಅವನು ವ್ಯಕ್ತನಾಗಲು ಶಕ್ತನಲ್ಲ ಎಂಬ ಶಂಕೆಯನ್ನು ನಿರಾಕರಣೆ ಮಾಡುತ್ತಿದ್ದಾರೆ "ಸ್ವೇಚ್ಛಯಾ" ಎಂಬುದರಿಂದ. ಭಾಷ್ಯದ ಮಾತಿಗೆ 'ವಕ್ತಿ' ಎಂಬ ಪದವನ್ನು ಸೇರಿಸಿ ಅನ್ವಯವನ್ನು "ವಕ್ತೀತ್ಯರ್ಥಃ" ಎಂದು ಹೇಳಿದ್ದಾರೆ.

**वाक्यार्थमञ्जरी – अनादित्वादिति ।। वैदकत्वादेवेति भावः ।। ॐ अभिव्यक्तेरित्याश्मरथ्यः ॐ ।। अग्न्यादिसूक्तादिभिः ब्रह्मोपास्तावग्न्यादिष्वेव तस्याभिव्यक्तेरग्न्यादिसूक्तादिनियमः सम्भवतीत्याश्मरथ्यो मत इत्यर्थः । अव्यक्तस्य कथं व्यक्तिरित्यत उक्तम् – स्वेच्छयेति ।। इच्छारूपप्रसादेनेत्यर्थः ।। २९ ।।**

## ಬ್ರಹ್ಮಮೀಮಾಂಸಾಶಾಸ್ತ್ರ

## ಶುಕಾಚಾರ್ಯರ ಪ್ರಕಾರ ಉಪಾಸಕರಿಗೆ ಅಧಿಷ್ಠಾನವನ್ನು ತಿಳಿಸಲು ಸೂಕ್ತ ನಿಯಮ

**सू – ॐ ।। अनुस्मृतेर्बादरिः ।। ॐ ।। ३० ।।**

ಸೂತ್ರಾರ್ಥ -- ಅಗ್ನಿಮೊದಲಾದ ಸೂಕ್ತವನ್ನು ಉಪಾಸನೆಮಾಡುವವರು ಅಗ್ನಿ ಮೊದಲಾದವರ ಮಾಧ್ಯಮದಲ್ಲೇ ಧ್ಯಾನಮಾಡಬೇಕೆಂದು ತಿಳಿಸಲು ಅಗ್ನಿಸೂಕ್ತ ವಾಯುಸೂಕ್ತ ಮೊದಲಾದ ವ್ಯವಸ್ಥೆಯು ಉಪಪನ್ನವಾಗುತ್ತದೆಂದು ಶುಕಾಚಾರ್ಯರು ಹೇಳುತ್ತಾರೆ.

ಪರಿಪೂರ್ಣಚಂದ್ರಿಕಾ

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका** — अनुस्मृतेः तत्तत्सूक्ताद्युपासकैरग्न्यादिष्वेव ब्रह्मणोऽनुस्मृतेः अनुसन्धानाद्धेतोरग्न्यादिसूक्तव्यवस्थेति बादरिर्वक्तीत्यर्थः ।।

ಅರ್ಥ -- ಅನುಸ್ಮೃತೇಃ = ಅಗ್ನಿಸೂಕ್ತ, ವಾಯುಸೂಕ್ತ ಮೊದಲಾದವುಗಳಿಂದ ಉಪಾಸನೆ ಮಾಡುವವರು ಅಗ್ನ್ಯಾದಿ ಮಾಧ್ಯಮಗಳಲ್ಲೇ ಧ್ಯಾನಮಾಡಬೇಕಾದ್ದರಿಂದ ಅಗ್ನಿ ಮೊದಲಾದ ಸೂಕ್ತಗಳ ವ್ಯವಸ್ಥೆಯು ಉಪಪನ್ನವಾಗುತ್ತದೆ ಎಂದು, ಬಾದರಿಃ = ಶುಕಾಚಾರ್ಯರು ಹೇಳುತ್ತಾರೆ.

**श्रीमदानन्दतीर्थभगवत्पादाचार्यविरचित-**

## ब्रह्मसूत्रभाष्यम्

**भाष्यम् — तत्र तत्रोक्तस्य विष्णोरग्न्यादिष्वनुस्मर्यमाणत्वात्तन्नियम इति बादरिः ॥३०॥**

ಅನುವಾದ - ಅಗ್ನಿಸೂಕ್ತ, ವಾಯುಸೂಕ್ತ ಮೊದಲಾದವುಗಳಲ್ಲಿ ಹೇಳಲ್ಪಟ್ಟ ಗುಣಗಳಿಂದ ಕೂಡಿರುವವನು ವಿಷ್ಣುವೇ ಆಗಿದ್ದಾನೆ. ಅಂತಹ ವಿಷ್ಣುವನ್ನು ಅಗ್ನಿ, ವಾಯು ಮೊದಲಾದ ಪ್ರತೀಕಗಳಲ್ಲಿ ಉಪಾಸನೆ ಮಾಡಬೇಕಾದ್ದರಿಂದ ಅಗ್ನಿಸೂಕ್ತ, ವಾಯುಸೂಕ್ತ ಎಂಬ ನಿಯಮವು ಸೂಕ್ತವಾಗುತ್ತದೆಂದು ಬಾದರಿ ಆಚಾರ್ಯರು ಹೇಳುತ್ತಾರೆ.

ಪ್ರತಿಪದಾರ್ಥ -- ಮತ್ತೊಂದು ಪ್ರಕಾರದಿಂದ ಅಗ್ನಿಸೂಕ್ತ ವಾಯುಸೂಕ್ತ ಮೊದಲಾದ ನಿಯಮವು ಯುಕ್ತವಾಗುತ್ತದೆಂದು ಸಮರ್ಥಿಸುತ್ತಿದ್ದಾರೆ.

ತತ್ರ ತತ್ರ = ಆಯಾ ಸೂಕ್ತಗಳಲ್ಲಿ, ಉಕ್ತಸ್ಯ = ಹೇಳಲ್ಪಟ್ಟ, ವಿಷ್ಣೋಃ = ಪರಮಾತ್ಮನಿಗೆ, ಅಗ್ನ್ಯಾದಿಷು = ಅಗ್ನಿ ಮೊದಲಾದ ದೇವತೆಗಳಲ್ಲಿ, ಅನುಸ್ಮರ್ಯಮಾಣತ್ವಾತ್ = ಆಯಾ ಪ್ರತೀಕಗಳಿಂದ ಭಗವಂತನ ಆಯಾ ರೂಪಗಳ ಉಪಾಸನೆಯನ್ನು ಹೇಳಿರುವುದರಿಂದ, ತನ್ನಿಯಮಃ = ಅಗ್ನಿಸೂಕ್ತ ವಾಯುಸೂಕ್ತ ಇತ್ಯಾದಿ ನಿಯಮವು ಯುಕ್ತವಾಗಿದೆ, ಇತಿ = ಈ ಕ್ರಮದಲ್ಲಿ, ಬಾದರಿಃ = ಶುಕಾಚಾರ್ಯರು ಹೇಳುತ್ತಾರೆ.[१]

(१) **भाष्यदीपिका** — प्रकारान्तरेण सूक्तादिनियमस्यान्यथोपपत्तिं कथयत्सूत्रमुपन्यस्य व्याचष्टे — **अनुस्मृतेरिति** ।। अत्र पूर्ववदध्याहारादिः । 'तत्र तत्र' अग्न्यादिविद्यासु । सूत्रेऽ

**तत्त्वप्रकाशिका –**

**ॐ ।। अनुस्मृतेर्बादरिः ।। ॐ**

**प्रकारान्तरेण सूक्तादिनियमस्यान्यथोपपत्तिं वदत्सूत्रमुपन्यस्य व्याचष्टे – अनुस्मृतेरिति ।। विष्णोरेव अग्न्यादिविद्याप्रतिपाद्यत्वेऽपि तस्य तत्तत्सू(क्तोपास) कत्ताद्युपासकैरग्न्यादिष्वेव प्रतिपत्त्यत्वाभिप्रायेणाग्न्यादिसूक्तादिनियमोपपत्तेर्न तदन्यथानुपपत्त्याऽन्येषां वाच्यत्वं वाच्यमिति बादरिराचार्यो वक्तीत्यर्थः ।।३०।।**

ಮತ್ತೊಂದು ಬಗೆಯಲ್ಲಿ ಅಗ್ನ್ಯಾದಿಸೂಕ್ತಗಳ ನಿಯಮಕ್ಕೆ ಅನ್ಯಥೋಪಪತ್ತಿಯನ್ನು ಹೇಳುವ ಸೂತ್ರವನ್ನು ಪಠಿಸಿ ವ್ಯಾಖ್ಯಾನಿಸುತ್ತಿದ್ದಾರೆ "ಅನುಸ್ಮೃತೇಃ" ಇತ್ಯಾದಿಯಾಗಿ. ವಸ್ತುತಃ ಅಗ್ನಿವಿದ್ಯಾಂ ಮೊದಲಾದ ವಿದ್ಯೆಗಳಿಂದ ವಿಷ್ಣುವೇ ಪ್ರತಿಪಾದ್ಯನಾಗಿದ್ದಾನೆ. ಆದರೂ ಸಹ ಆಯಾ ಸೂಕ್ತಗಳಿಂದ ಉಪಾಸನೆ ಮಾಡುವವರಿಗೆ ಭಗವಂತನು ಆಯಾ ದೇವತೆಗಳಲ್ಲಿಯೇ ಅನುಸಂಧಾನಮಾಡಲು ಅರ್ಹನಾಗಿದ್ದಾನೆಂಬ ಅಭಿಪ್ರಾಯದಿಂದ ಅಗ್ನ್ಯಾದಿಸೂಕ್ತಗಳ ನಿಯಮವು ಉಪಪನ್ನವಾಗುತ್ತದೆ. ಆದ್ದರಿಂದ ಅಗ್ನ್ಯಾದಿಸೂಕ್ತಗಳ ನಿಯಮದ ಅನ್ಯಥಾನುಪಪತ್ತಿಯಿಂದ ಬೇರೆಯವರಿಗೆ ಆಯಾ ಶಬ್ದಗಳ ವಾಚ್ಯತ್ವವನ್ನು ಒಪ್ಪಬೇಕು ಎಂದು ಬಾದರಿಆಚಾರ್ಯರು ಅಂದರೆ ಶುಕಾಚಾರ್ಯರು ಹೇಳುತ್ತಾರೆ.

**भावदीपः – ॐ अनुस्मृतेर्बादरिः ॐ ।। तत्र तत्रोक्तस्य विष्णोरित्यस्यार्थः – विष्णोरेवेति ।। अग्न्यादीनामप्रतिपाद्यत्वेऽपीत्येवार्थः ।।**

॥ ಓಂ ಅನುಸ್ಮೃತೇರ್ಬಾದರಿಃ ಓಂ ॥

"ತತ್ರ ತತ್ರೋಕ್ತಸ್ಯ ವಿಷ್ಣೋಃ" ಎಂಬ ಭಾಷ್ಯದ ಪದಗಳಿಗೆ "ವಿಷ್ಣೋರೇವ" ಎಂಬುದರಿಂದ ವ್ಯಾಖ್ಯಾನಿಸಿದ್ದಾರೆ. ಅಂದರೆ ಅಗ್ನಿ ಮೊದಲಾದವರು ಪ್ರತಿಪಾದ್ಯರಾಗದಿದ್ದರೂ ಸಹ ಎಂದರ್ಥ.

---

विरोधमित्यनुषक्तपदतात्पर्यमाह – तन्नियम इति ।। अनेनापि – विष्णोरेव अग्न्यादिविद्याप्रतिपाद्यत्वेऽपि यतस्तस्याग्न्यादिविद्यासु उक्तस्य विष्णोस्तैस्तत्तत्सूक्ताद्युपासकैस्तत्राग्न्यादिष्वेव 'अनुस्मृतेः' अनुस्मर्तव्यत्वाद् प्रतिपत्तव्यत्वात् अविरोधस्तन्नियमः अग्न्यादिसूक्तादिव्यवस्था युज्यते । अतो नैतदन्यथानुपपत्त्याऽन्येषां वाच्यत्वं कल्प्यमिति सूक्तादिप्रसिद्ध्यविरोधं 'बादरिः' बादरात्मजः शुकाचार्यो वक्तीति सूत्रवृत्तिर्दर्शिता भवति ।।

ಪರಿಪೂರ್ಣಚಂದ್ರಿಕಾ

## ಉಪಾಸಕನಿಗೆ ತಕ್ಕ ಫಲವು ಪ್ರಾಪ್ತವಾಗುತ್ತದೆಂದು ಜೈಮಿನಿಗಳ ಭರವಸೆ

**सू – ॐ ॥ सम्पत्तेरिति जैमिनिस्तथा हि दर्शयति ॥ ॐ ॥ ३१ ॥**

**ಅಗ್ನ್ಯಾದಿಸೂಕ್ತಗಳನ್ನು ಉಪಾಸನೆ ಮಾಡುವವರಿಗೆ 'ಸಂಪತ್ತೇಃ' ಅಗ್ನ್ಯಾದಿಗಳ ಪ್ರಾಪ್ತಿಯು ಆಗುವುದರಿಂದ ಸೂಕ್ತನಿಯಮವು ಕೂಡುತ್ತದೆ; ಹೀಗೆ ಜೈಮಿನಿಋಷಿಗಳು ಹೇಳುತ್ತಾರೆ. 'ಭಗವಂತನನ್ನು ಹೇಗೆ ಉಪಾಸನೆ ಮಾಡುತ್ತಾನೋ ಅಂತಹ ಫಲವನ್ನೇ ಹೊಂದುತ್ತಾನೆ' ಎಂಬ ಶ್ರುತಿಯು ಜೈಮಿನಿಋಷಿಗಳ ಅಭಿಪ್ರಾಯವನ್ನು ಅನುಮೋದಿಸುತ್ತದೆ.**

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका –** हि यस्मात् । 'तं यथा' इति हि प्रसिद्धा श्रुतिः तथा दर्शयति यथा जैमिनिमतं तथा प्रतिपादयति । तस्माज्जैमिनिः स्वोक्त्यनुकूलश्रुत्यनुसारेण। सम्पत्तेः अग्न्यादिसूक्तोपासकानामग्न्यादिप्राप्तिहेतोस्तद्विवक्षया सूक्तादिनियम इत्याहेत्यर्थः ।।

ಅರ್ಥ -- ಹಿ = ಯಾವ ಕಾರಣದಿಂದ, ಭಗವಂತನನ್ನು ಹೇಗೆ ಉಪಾಸನೆ ಮಾಡುತ್ತಾನೋ ಅಂತಹ ಫಲವನ್ನೇ ಪಡೆಯುತ್ತಾನೆಂಬ 'ತಂ ಯಥಾ' ಎಂಬ ಶ್ರುತಿಪ್ರಸಿದ್ಧಿಯು ಇರುವುದರಿಂದ, ತಥಾ ದರ್ಶಯತಿ = ಯಾವ ರೀತಿಯಾಗಿ ಜೈಮಿನಿ ಮತವು ಇರುತ್ತದೋ ಹಾಗೆ ಪ್ರತಿಪಾದಿಸಿದ್ದಾರೆ. ಆದ್ದರಿಂದ ಜೈಮಿನಿ ಋಷಿಗಳು ತಾವು ಹೇಳಿದ ಅಭಿಪ್ರಾಯಕ್ಕೆ ಅನುಕೂಲವಾದ ಶ್ರುತ್ಯಂತರದಿಂದ, ಸಂಪತ್ತೇಃ = ಅಗ್ನಿಮೊದಲಾದ ಸೂಕ್ತಗಳನ್ನು ಉಪಾಸನೆ ಮಾಡುವವರಿಗೆ ಅಗ್ನ್ಯಾದಿಗಳ ಪ್ರಾಪ್ತಿಯು ಆಗುತ್ತದೆ, ಇತಿ = ಎಂದು ವಿವಕ್ಷಿಸಿದ್ದಾರೆ. ಈ ದೃಷ್ಟಿಯಿಂದ ಸೂಕ್ತಾದಿ ನಿಯಮವು ಯುಕ್ತವಾಗುತ್ತದೆ.

श्रीमदानन्दतीर्थभगवत्पादाचार्यविरचित-

# ब्रह्मसूत्रभाष्यम्

**भाष्यम् – साक्षादप्यविरोधं वदन् जैमिनिः सूक्तादिनियममग्न्यादि-सम्प्राप्त्या मन्यते ।**

ನೇರವಾಗಿ ವಿಷ್ಣುವನ್ನೇ ಪ್ರತಿಪಾದಿಸುವ ಶಬ್ದಗಳನ್ನು ಲೌಕಿಕ ವಸ್ತುಗಳಲ್ಲಿ ಪ್ರಯೋಗಿಸುವುದು ತಪ್ಪಲ್ಲ. ಹೀಗೆ ಜೈಮಿನಿ ಋಷಿಗಳು ಅಗ್ನ್ಯಾದಿಪ್ರಾಪ್ತಿನಿಮಿತ್ತಕವಾಗಿ ಸೂಕ್ತದ ವ್ಯವಸ್ಥೆಯನ್ನು ಅಂಗೀಕರಿಸುತ್ತಾರೆ.

ಪ್ರತಿಪದಾರ್ಥ -- ಮತ್ತೊಂದು ಕ್ರಮದಿಂದಲೂ ಸೂಕ್ತಾದಿಗಳ ನಿಯಮವು ಯುಕ್ತವಾಗಿದೆಯೆಂದು ಸಮರ್ಥಿಸುತ್ತಿದ್ದಾರೆ.

ಸಾಕ್ಷಾದಪಿ = ನೇರವಾಗಿ ಪರಮಾತ್ಮನನ್ನೇ ಪ್ರತಿಪಾದಿಸದಿದ್ದರೂ, ಅವಿರೋಧಂ = ವಿರೋಧವಿಲ್ಲವೆಂದು, ವದನ್ = ಹೇಳುವ, ಜೈಮಿನಿಃ = ಜೈಮಿನಿ ಋಷಿಗಳು, ಅಗ್ನ್ಯಾದಿಸಂಪ್ರಾಪ್ತ್ಯಾ = ಅಗ್ನಿ ಮೊದಲಾದ ಪ್ರತೀಕದಲ್ಲಿ ಅನುಷ್ಠಾನಭೇದದಿಂದ, ಸಂಪ್ರಾಪ್ತ್ಯಾ = ಫಲಭೇದವು ಇರುವುದರಿಂದ, ಸೂಕ್ತಾದಿನಿಯಮಃ = ಅಗ್ನಿಸೂಕ್ತ ವಾಯುಸೂಕ್ತ ಎಂಬ ನಿಯಮವು ಯುಕ್ತವಾಗುತ್ತದೆ. ಇತಿ = ಹೀಗೆ, ಮನ್ಯತೇ = ತಿಳಿಯುತ್ತಾರೆ.(१)

**भाष्यम् – 'तं यथा यथोपासते तदेव भवति' इति दर्शयति ॥३१॥**

'ಉಪಾಸಕನು ಭಗವಂತನನ್ನು ಹೇಗೆ ಉಪಾಸನೆ ಮಾಡುತ್ತಾನೋ ಅಂತಹ ಫಲವನ್ನೇ ಹೊಂದುತ್ತಾನೆ ಎಂದು ಶ್ರುತಿ ಹೇಳಿದೆ.

ಪ್ರತಿಪದಾರ್ಥ -- ಅಗ್ನ್ಯಾದಿಗಳಲ್ಲಿ ಭಗವಂತನನ್ನು ಉಪಾಸನೆ ಮಾಡಿದರೆ ಅಗ್ನಿ ಮೊದಲಾದ ದೇವತೆಗಳ ಪ್ರಾಪ್ತಿಯು ಹೇಗಾಗುತ್ತದೆ ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ.

---

(१) भाष्यदीपिका – रीत्यन्तरेण सूक्तादिनियमस्यान्यथोपपत्तिं कथयत्सूत्रमुपन्यस्यति – सम्पत्तेरिति ।। जैमिनिमतस्य पूर्वमुपन्यस्तत्वात् किमर्थं पुनर्वचनमिति मन्दाशङ्का-निरासायोभयान्वयीति शब्दपरामृष्टपूर्वोक्तानुवादेन विषयभेदं दर्शयन् सूत्रं व्याचष्टे – साक्षादिति ।। अग्न्यादिशब्दानां मुख्यतो ब्रह्मवाचकत्वेऽपि 'अविरोधं' लौकिकव्यवहारविरोधाभावं वदन्नित्यर्थः । अत्राप्यनुवृत्तस्य अविरोधमित्यस्यार्थमाह – सूक्तादीति ।। नियमो व्यवस्था । सम्प्राप्त्या निमित्तभूतयेति शेषः ।

ತಂ = ಅಂತಹ ಪರಮಾತ್ಮನನ್ನು, ಯಥಾ ಯಥಾ ಉಪಾಸತೇ = ಯಾವ ಪ್ರತೀಕದಲ್ಲಿ ಯಾವ ರೂಪದಿಂದ ಉಪಾಸನೆ ಮಾಡುತ್ತಾನೋ, ತದೇವ ಭವತಿ = ಆಯಾ ರೂಪಗಳನ್ನೇ ಫಲವನ್ನಾಗಿ ಪಡೆಯುತ್ತಾನೆ, ಇತಿ = ಹೀಗೆ, ದರ್ಶಯತಿ = ಶ್ರುತಿಪ್ರಮಾಣವಿದೆ.(१)

---

(१) भाष्यदीपिका – नन्वग्न्यादिषु भगवदुपास्तौ अग्न्यादिप्राप्तिर्भवतीत्येतत्कुत इत्यतः सूत्रसूचितां श्रुतिमुदाहरति – तमिति ।। 'तं' परमात्मानं येन येन प्रकारेण उपासते अधिकारिणः तेन प्रकारेण तदेव रूपं 'भवति' प्राप्नुवन्तीत्यर्थः । तत्त्वप्रदीपेऽपि 'यादृशो भावितस्त्वीशस्तादृशो जीव आभवेत्' इति तृतीयतात्पर्योक्तेः 'तदेव भवति' तथैव भवति । यत्प्रकारेणोपास्ते तत्प्रकारेण भवतीत्ययमेवार्थ उक्तः । तत्त्वप्रदीपकारपक्षे उपासते इत्येकवचनं धात्वन्तरमेतत् । अनेन यतोऽग्न्यादिसूक्तादिषु मुख्यतः परब्रह्मण एव प्रतिपाद्यत्वेऽप्यविरोधः, सूक्तादिनियमो युज्यते । अतो न तदन्यथानुपपत्त्याऽन्येषां वाच्यत्वं मन्तव्यम् । कथमिदं युज्यते? तैरग्न्यादिषु भगवदुपासकानाम् अग्न्यादिसम्पत्तेः प्राप्तेः । नच तदसिद्धिः । 'हि' यस्मात् तमिति प्रसिद्धा श्रुतिः । 'तथा' अग्न्याद्यधिकरणकोपास्त्या अग्न्यादिप्राप्तिर्भवतीति 'दर्शयति' प्रतिपादयति । साक्षादिति लौकिकव्यवहारेऽविरोधं वदन् जैमिनिः सूत्रेषु 'अविरोधम्' अनियमाख्यविरोधाभावं नियमं 'मन्यते' वर्णयतीति सूत्रार्थ उक्तो भवति । यद्यप्युत्तरसूत्रद्वये साधकव्यापारोक्तेरल्पाक्षरत्वाच्च दृष्टेरिति वाच्यम्, न त्वभिव्यक्तेरिति, तस्या ईश्वरव्यापारत्वात् । तथाऽप्यभिव्यक्तिं विना दृष्टेरयोगात् तद्ग्रहणेनोभयलाभात् प्राधान्यादीश्वरव्यापार एवोक्तः । यद्यप्यनुस्मृतिशब्दितोपास्त्यनन्तरमभिव्यक्तेः तदनन्तरं तत्सम्पत्तेः प्रथममनुस्मृतेरिति वक्तव्यम् । तथाऽप्यभिव्यक्तिसम्पत्त्युभयानन्तरमप्युपास्तिः कार्येति दर्शयितुमनुस्मृतेर्मध्ये निवेश इति द्रष्टव्यम् ।।

यद्यपि ऋग्भाष्ये -

'पृथग्रूपाणि विष्णोस्तु देवतान्तरगाणि तु ।
अग्न्यादिशब्दवाच्यानि नाम्ना सूक्तभिदा भवेत् ।।'

इत्यग्न्याद्यन्तर्गतविष्णुवाचकाग्न्यादिशब्दयोगः सूक्तस्य व्यवस्थापक उक्तः । तथा चाग्न्यादिशब्दास्तत्तत्सूक्तानि च अग्न्यादिगतब्रह्मरूपेष्वेव मुख्यानि । एवं बहिर्गतरूपेषु चातीतानागतवर्तमानाग्न्यादिष्वमुख्यानीति व्यवस्था सिद्ध्यति । तथाऽपीहाभिव्यक्तिर्वाऽग्न्यादि-सूक्तोपासकैरग्न्यादिगतत्वेनानुस्मर्तव्यत्वं वा सम्प्राप्तिर्वा तत्तत्सूक्तव्यवस्थापकमित्यनुष्ठान-विशेषोपयोगितया सौरसावित्रवामनविष्ण्वादिसूक्तादिव्यवस्थार्थं च व्यवस्थापकान्तर-मुक्तमित्यविरोधः । लौकिकवैदिकव्यवहारयोरग्न्यादावुपचरितत्वबीजं तु तयोस्तत्र

**तत्वप्रकाशिका –**

**ॐ सम्पत्तेरिति जैमिनिः ॐ ।।**

**रीत्यन्तरेण सूक्तादिनियमस्यान्यथोपपत्तिं कथयत्सूत्रमुपन्यस्य, व्याचष्टे – सम्पत्तेरिति।।अग्न्यादिसूक्तादिषुपरब्रह्मणएवप्रतिपाद्यत्वेऽपिअग्न्यादिसूक्तादिभिरग्न्यादौ भगवदुपास्त्या अग्न्यादिप्राप्त्यभिप्रायेण सूक्तादिनियमोपपत्तेर्न तदन्यथानुपपत्त्याऽन्येषां वाच्यत्वं मन्तव्यमिति जैमिनिराचार्यो मन्यत इत्यर्थः ।**

ಮತ್ತೊಂದು ಬಗೆಯಲ್ಲಿ ಅಗ್ನ್ಯಾದಿಸೂಕ್ತಗಳ ನಿಯಮವು ಅನ್ಯಥಾ ಉಪಪನ್ನವಾಗುತ್ತದೆಂದು ಹೇಳುವಂತಹ ಸೂತ್ರವನ್ನು ಪಠಿಸಿ ವ್ಯಾಖ್ಯಾನಿಸುತ್ತಿದ್ದಾರೆ "ಸಂಪತ್ತೇಃ" ಇತ್ಯಾದಿಯಾಗಿ. ಅಗ್ನಿಮೊದಲಾದ ಸೂಕ್ತಗಳಲ್ಲಿ ಪರಬ್ರಹ್ಮನೇ ಪ್ರತಿಪಾದ್ಯನಾಗಿದ್ದಾನೆ. ಆದರೂ ಸಹ ಆಯಾ ಸೂಕ್ತಗಳಿಂದ ಅಗ್ನಿಮೊದಲಾದವರಲ್ಲಿ ಭಗವಂತನೇ ಉಪಾಸನೆಮಾಡಲು ಅರ್ಹನಾಗಿದ್ದಾನೆ. ಹಾಗೆ ಉಪಾಸನೆ ಮಾಡಿದಾಗ ಅಗ್ನ್ಯಾದಿಗಳ ಪ್ರಾಪ್ತಿಯು ಆಗುತ್ತದೆಂಬ ಅಭಿಪ್ರಾಯದಿಂದ ಅಗ್ನಿಸೂಕ್ತ, ವಾಯುಸೂಕ್ತ ಇತ್ಯಾದಿ ನಿಯಮಗಳು ಉಪಪನ್ನವಾಗುತ್ತವೆ. ಆದ್ದರಿಂದ ಇಂತಹ ಸೂಕ್ತವ್ಯವಸ್ಥೆಯ ಅನ್ಯಥಾನುಪಪತ್ತಿಯಿಂದ ಬೇರೆಯವರಿಗೆ ಆಯಾ ಶಬ್ದಗಳ ವಾಚ್ಯತ್ವವನ್ನು ಒಪ್ಪಬೇಕು ಎಂದು ಜೈಮಿನಿ ಆಚಾರ್ಯರು ಹೇಳುತ್ತಾರೆ.

**तत्वप्रकाशिका – जैमिनिमतं किमर्थं पुनरुच्यते इति मन्दाशङ्कानिवृत्त्यर्थं लौकिकव्यवहारे साक्षाद्ब्रह्मवाचकत्वेऽपि शब्दानामविरोधं वदन् जैमिनिः सूक्तादिव्यवहारस्याग्न्यादिप्राप्त्याऽन्यथोपपत्तिं वर्णयतीत्युक्तम् ।**

ಸೂತ್ರಕಾರರು ಜೈಮಿನಿ ಆಚಾರ್ಯರ ಮತವನ್ನು ಮತ್ತೆ ಏಕೆ ಹೇಳಿದ್ದಾರೆ? ಎಂಬ ಪ್ರಶ್ನೆಯು ಮಂದರಿಗೆ ಬರುತ್ತದೆ. ಇದನ್ನು ನಿರಾಕರಿಸುವುದಕ್ಕಾಗಿ ಲೌಕಿಕವ್ಯವಹಾರದಲ್ಲಿ ಸಕಲಶಬ್ದಗಳು ನೇರವಾಗಿ ಬ್ರಹ್ಮನನ್ನು ಪ್ರತಿಪಾದಿಸಬಹುದು. ಆದರೂ ಸಹ ಶಬ್ದಗಳಿಗೆ ವಿರೋಧವಿಲ್ಲವೆಂದು ಹೇಳುವ ಜೈಮಿನ್ಯಾಚಾರ್ಯರು ಸೂಕ್ತಾದಿಗಳ ವಿಷಯದಲ್ಲಿ ವೈದಿಕವ್ಯವಹಾರದ ಮೂಲಕ ಅಗ್ನ್ಯಾದಿಗಳ ಪ್ರಾಪ್ತಿಯು ಆಗುತ್ತದೆಂದು ಅನ್ಯಥಾ ಉಪಪನ್ನವಾಗುತ್ತದೆಂದು ವರ್ಣಿಸುತ್ತಾರೆ ಎಂದು ಹೇಳಲಾಗಿದೆ.

---

मुख्यत्वाङ्गीकारे 'तथा दृष्ट्युपदेशात्' इत्यनेन सूचितः । 'सर्वनाम' इत्यादिश्रुतिविरोधादि-रूपप्रागुक्तानुपपत्तिरिति टीकायामेवोक्तम् ।।

**तत्वप्रकाशिका – नन्वग्न्यादिषु भगवदुपास्तावग्न्यादिप्राप्तिर्भवतीत्येतत् कुत इत्यतः सूत्रसूचितां श्रुतिमुदाहरति – तमिति ।। तदेव भवति प्राप्नुवन्ति । अत्र व्यवहारस्योपचरितत्वाङ्गीकारे प्रागुक्तैवानुपपत्तिः ।। ३१ ।।**

ಅಗ್ನಿ ಮೊದಲಾದ ಅಧಿಷ್ಠಾನಗಳಲ್ಲಿ ಭಗವಂತನನ್ನು ಉಪಾಸನೆ ಮಾಡಿದರೆ ಅಗ್ನ್ಯಾದಿಗಳ ಪ್ರಾಪ್ತಿಯು ಆಗುತ್ತದೆಂದು ಯಾವ ಪ್ರಮಾಣದಿಂದ ಹೇಳುತ್ತೀರಿ? ಎಂಬ ಪ್ರಶ್ನೆಗೆ ಸೂತ್ರದಲ್ಲೇ ಸೂಚಿತವಾದ ಶ್ರುತಿಯನ್ನು "ತಂ ಯಥಾ" ಇತ್ಯಾದಿಯಾಗಿ ಉದಾಹರಿಸುತ್ತಿದ್ದಾರೆ. 'ತದೇವ ಭವತಿ' ಎಂದರೆ ಅವನನ್ನೇ ಹೊಂದುತ್ತಾರೆ ಎಂದರ್ಥ. ಇಲ್ಲಿ ವ್ಯವಹಾರಕ್ಕೆ ಔಪಚಾರಿಕತ್ವವನ್ನು ಅಂಗೀಕರಿಸಲು ಹಿಂದೆ ಹೇಳಿದ ಅನುಪಪತ್ತಿಯೇ ಕಾರಣವಾಗಿದೆಯೆಂದು ವಿವಕ್ಷಿಸಬೇಕು.

**भावदीपः – ॐ सम्पत्तेरिति जैमिनिः ॐ ।। तत्र तत्रोक्तस्य विष्णोरित्यतस्तदनुवृत्त्यार्थमाह – अग्न्यादीति ।। परब्रह्मण एवेति ।। अग्न्यादीनामप्रतिपाद्यत्वेऽपीत्यर्थतयाऽवधारणोक्तिः । अर्थभेदस्यस्पष्टत्वान्मन्दाशङ्केत्युक्तम् ।। प्राप्नुवन्तीति ।। 'भू प्राप्तौ' इति धातोः परस्मैपदमेकवचनं च छान्दसमिति भावः ।**

॥ ಓಂ ಸಂಪತ್ತೇರಿತಿ ಜೈಮಿನಿಸ್ತಥಾ ಹಿ ದರ್ಶಯತಿ ಓಂ ॥

ಹಿಂದಿನ ಸೂತ್ರದ "ತತ್ರ ತತ್ರೋಕ್ತಸ್ಯ ವಿಷ್ಣೋಃ" ಎಂಬ ಭಾಷ್ಯವನ್ನು ಇಲ್ಲಿಯೂ ಸಹ ಅನುವೃತ್ತಿ ಮಾಡಿಕೊಂಡು ಅರ್ಥವನ್ನು ಹೇಳುತ್ತಿದ್ದಾರೆ "ಅಗ್ನ್ಯಾದಿ" ಇತ್ಯಾದಿಯಾಗಿ. "ಪರಬ್ರಹ್ಮಣ ಏವ" ಎಂಬಲ್ಲಿ ಅಗ್ನ್ಯಾದಿಗಳು ಪ್ರತಿಪಾದ್ಯರಾಗದಿದ್ದರೂ ಸಹ ಎಂಬ ಅರ್ಥವನ್ನು ವಿವಕ್ಷಿಸುವುದಕ್ಕಾಗಿ "ಏವ" ಕಾರವನ್ನು ಹೇಳಿದ್ದಾರೆ. ಅರ್ಥಭೇದವು ಸ್ಪಷ್ಟವಾಗಿ ತಿಳಿಯದಿರುವುದರಿಂದ "ಮಂದಾ ಶಂಕಾ" ಎಂಬ ಪದವನ್ನು ಬಳಸಿದ್ದಾರೆ. "ಪ್ರಾಪ್ನುವಂತಿ" ಎಂಬ ಧಾತು "ಭೂಪ್ರಾಪ್ತೌ" ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. ಪರಸ್ಮೈಪದದ ಏಕವಚನ ರೂಪವೇ ಆಗಿದೆ ಎಂದು ಛಾಂದಸಪ್ರಯೋಗದಿಂದ ತಿಳಿಯಬೇಕು.

**भावदीपः – ननु मञ्चक्रोशनमिति व्यवहारस्य क्रोशनवत् पुरुषसम्बन्धादुपचरितत्वमिव अग्निसूक्तमित्यादिव्यवहारस्य सूक्तवत् पुरुषाभिव्यक्त्यनुस्मृतिसम्पत्त्यधिष्ठानत्वादुपचरितत्वमुक्तं तदयुक्तं निर्बीजत्वात् । अग्न्यादिप्रतिपादकत्वरूपमुख्यार्थेऽनुपपत्त्यभावादित्यत आह – अत्रेति ।।**

"ಮಂಚಾಃ ಕ್ರೋಶಂತಿ" ಎಂಬ ವ್ಯವಹಾರದಲ್ಲಿ ಯಾವ ರೀತಿಯಾಗಿ ಅಳುವ ಪುರುಷರ ಸಂಬಂಧವು ಮಂಚದಲ್ಲಿರುವುದರಿಂದ ಔಪಚಾರಿಕವಾಗಿ "ಮಂಚವೇ ಅಳುತ್ತಿದೆ" ಎಂದು ಪ್ರಯೋಗಿಸುತ್ತಾರೋ ಅದರಂತೆ "ಅಗ್ನಿಸೂಕ್ತಂ" "ಇಂದ್ರಸೂಕ್ತಂ" ಇತ್ಯಾದಿ ವ್ಯವಹಾರವೂ ಸಹ ಸೂಕ್ತವುಳ್ಳಂತಹ ಪುರುಷನ ಅಭಿವ್ಯಕ್ತಿ, ಅನುಸ್ಮೃತಿ ಮತ್ತು ಸಂಪ್ರಾಪ್ತಿಗಳ ಅಧಿಷ್ಠಾನನೆಂದು ಔಪಚಾರಿಕವಾಗಿ ಪ್ರಯೋಗಿಸಬಹುದೆಂದು

ಹೇಳಿದರೆ ಇದು ತಪ್ಪು. ಏಕೆಂದರೆ ಅಗ್ನಿ ಮೊದಲಾದವರನ್ನು ಸೂಕ್ತವು ಪ್ರತಿಪಾದಿಸುತ್ತದೆ ಎಂದು ಹೇಳಿದಾಗ ಮುಖ್ಯಾರ್ಥದಲ್ಲಿ ಅನುಪಪತ್ತಿಯು ಇರುವುದಿಲ್ಲ. ಹೀಗಿರುವಾಗ ಮುಖ್ಯಾರ್ಥವನ್ನು ಬಿಟ್ಟು ಲಕ್ಷಣಾ ಮಾಡುವುದರಲ್ಲಿ ಅರ್ಥವಿಲ್ಲವೆಂಬ ಆಕ್ಷೇಪಕ್ಕೆ "ಅತ್ರ" ಇತ್ಯಾದಿ ವಾಕ್ಯಗಳಿಂದ ಉತ್ತರಿಸುತ್ತಿದ್ದಾರೆ.

**भावदीपः** – यथा हि वामनशब्दादिरूपनिरवकाशश्रुत्यादेरन्यत्रानुपपत्त्या अन्यत्यागेन विष्णुमेवोपेत्याङ्गुष्ठमात्रत्वमङ्गुष्ठपरिमितहृदयाकाशे स्थितत्वेन हेतुनोपचरितमिति हृद्यपेक्षया तु मनुष्याधिकारत्वादित्यत्र वक्ष्यते, तथा तत्र तत्र सूक्तेषु अग्न्यादेरेव प्रतिपाद्यत्वे निरवकाशविष्णुश्रुतिलिङ्गादेः 'सर्वनामा सर्वकर्मा' इत्यादिश्रुत्यादेश्चानुपपत्तिरेव सूक्तस्य विष्णुपरत्वं मुख्यमुपेत्य व्यवहारस्योपचरतत्त्वाङ्गीकारे बीजमित्यर्थः ।

ಯಾವರೀತಿಯಾಗಿ ವಾಮನ ಶಬ್ದ ಮೊದಲಾದ ನಿರವಕಾಶ ಶ್ರುತಿಗಳ ಆಧಾರದಿಂದ ಬೇರೆ ಕಡೆ ಅನುಪಪತ್ತಿ ಇರುವ ಕಾರಣ ಅನ್ಯಾರ್ಥಗಳನ್ನು ಬಿಟ್ಟು ವಿಷ್ಣುವೇ ಅಂಗುಷ್ಠಪರಿಮಾಣದಿಂದ ಹೃದಯಾಕಾಶದಲ್ಲಿರುವ ಕಾರಣ ವಿಷ್ಣುವೆಂಬ ಅರ್ಥವನ್ನೇ ಅಂಗೀಕರಿಸಲಾಗುತ್ತದೆ. "ಅಂಗುಷ್ಠಪರಿಮಿತಹೃದಯಾಕಾಶೇ ಸ್ಥಿತತ್ವ" ಮೊದಲಾದ ಹೇತುಗಳಿಂದ ಬೇರೆ ಅರ್ಥಗಳಲ್ಲಿ ಔಪಚಾರಿಕವಾಗಿ ಪ್ರಯೋಗವನ್ನು ಮಾಡಲಾಗಿದೆ. ಈ ವಿಷಯವನ್ನು "ಹೃದ್ಯಪೇಕ್ಷಯಾ ತು ಮನುಷ್ಯಾಧಿಕಾರತ್ವಾತ್" ಎಂಬ ಸೂತ್ರದಲ್ಲಿ ಮುಂದೆ ಹೇಳುತ್ತಾರೆ. ಅದರಂತೆ ಆಯಾ ಸೂತ್ರಗಳಲ್ಲಿ ಅಗ್ನಿ ಮೊದಲಾದ ದೇವತೆಗಳೇ ಪ್ರತಿಪಾದ್ಯರಾದರೆ ನಿರವಕಾಶವಾದ ವಿಷ್ಣುಶ್ರುತಿ, ವಿಷ್ಣುವಿನ ಲಿಂಗ, "ಸರ್ವನಾಮಾ, ಸರ್ವಕರ್ಮಾ" ಇತ್ಯಾದಿ ಶ್ರುತಿಗಳೂ ಸಹ ಅನುಪಪನ್ನವಾಗುತ್ತವೆ. ಆದ್ದರಿಂದ ಅಗ್ನಿಸೂಕ್ತವೇ ಮೊದಲಾದವುಗಳು ವಿಷ್ಣುವನ್ನೇ ಮುಖ್ಯವಾಗಿ ಪ್ರತಿಪಾದಿಸುತ್ತವೆ ಎಂದು ಒಪ್ಪಬೇಕು. ಲೋಕದ ವ್ಯವಹಾರಕ್ಕಾಗಿ ಔಪಚಾರಿಕತ್ವವನ್ನು ಅಂಗೀಕರಿಸಲು ಇದೇ ಮುಖ್ಯಕಾರಣವೆಂದು ತಿಳಿಯಬೇಕು.

**भावदीपः** – यत्तु ऋग्भाष्ये 'पृथग् रूपाणि विष्णोस्तु देवतान्तरगाणि च । अग्न्यादिसूक्तवाच्यानि नाम्ना सूक्तमिधा भवेत् ॥' इत्यग्न्यादिशब्दयोगः सूक्तादिव्यवस्थापक इत्युक्तम् । तत्तु सौरसावित्रविष्णुवामनादिसूक्तव्यवस्थार्थमिति ज्ञेयम् ॥

ಋಗ್‌ಭಾಷ್ಯದಲ್ಲಿ "ಪೃಥಗ್ರೂಪಾಣಿ ವಿಷ್ಣೋಸ್ತು ದೇವತಾಂತರಗಾಣಿ ಚ । ಅಗ್ನ್ಯಾದಿ ಸೂಕ್ತವಾಚ್ಯಾನಿ ನಾಮ್ನಾ ಸೂಕ್ತಭಿಧಾ ಭವೇತ್" । ಎಂಬುದಾಗಿ ಅಗ್ನಿ ಮೊದಲಾದ ಶಬ್ದಗಳ ಯೋಗವೇ ಸೂಕ್ತಾದಿಗಳಿಗೆ ವ್ಯವಸ್ಥಾಪಕವಾಗಿದೆ ಎಂದು ಹೇಳಿದ್ದಾರೆ. ಈ ಮಾತು ಸೌರ, ಸಾವಿತ್ರ, ವಿಷ್ಣು, ವಾಮನ ಮೊದಲಾದ ಸೂಕ್ತಗಳ ವ್ಯವಸ್ಥೆಗೋಸ್ಕರ ಹೇಳಿದ್ದೆಂದು ತಿಳಿಯಬೇಕು. ವಸ್ತುತಃ ಸೂರ್ಯ ಸವಿತೃ ಶಬ್ದಗಳು ಒಬ್ಬನೇ ವ್ಯಕ್ತಿಯನ್ನು ಪ್ರತಿಪಾದಿಸಿವುದಾದರೂ ಸೂಕ್ತದಲ್ಲಿ ಭೇದವಿದೆ. ಏಕೆಂದರೆ ಆಯಾ ಶಬ್ದಗಳ ಯೋಗಾರ್ಥವು ಭಿನ್ನಭಿನ್ನವಾದ್ದರಿಂದ ಸೂಕ್ತಾರ್ಥವೂ ಸಹ ಭಿನ್ನಭಿನ್ನವಾಗಿದೆ ಎಂದು ಋಗ್‌ಭಾಷ್ಯದ ಪ್ರಕಾರ ತಿಳಿಯಬೇಕು.

ಪರಿಪೂರ್ಣಚಂದ್ರಿಕಾ .

**वाक्यार्थमञ्जरी – ॐ सम्पत्तेरिति जैमिनिस्तथा हि दर्शयति ॐ ।।** अग्न्यादिसूक्ताद्युपासकानामग्न्यादिप्राप्तेर्निमित्तात्तत्सूक्तादिनियम इति जैमिनिर्मन्यते। तदुपास्तौ तत्प्राप्तिः कुत इत्यत उक्तम् – **तथाहि दर्शयतीति ।।** हि यस्मात् 'तं यथा यथा' इति श्रुतिर्जैमिनेर्मतं यथा, तथा दर्शयतीत्यर्थः ।। **मन्दाशङ्केति ।।** सम्पत्तेरिति शब्दार्थं जानताम् उक्तशङ्कानुदयादिति भावः । उपासत इति बहुवचनात् प्राप्नुवन्तीति बहुवचनोक्तिः । ननु यथा 'साक्षादप्यविरोधं जैमिनिः' इति सूत्रे लौकिकव्यवहारस्यौपचारिकत्वमङ्गीकृत्य अग्न्यादिशब्दानां भगवद्वाचकत्वं समर्थितम्। तथा सूक्तादिव्यवहारस्याप्युपचरितत्वमङ्गीकृत्य सूक्तानां विष्णुपरत्वं व्यवस्थाप्तम्, किमनेन, एतैः सूत्रैः सूक्तादिव्यवहारस्य मुख्यार्थत्वसमर्थनेनेत्यत आह – **अत्र व्यवहारस्येति ।।** सूक्तादिविषयमित्यर्थः । प्रागुक्तैवानुपपत्तिः, नापि व्यवहारार्थत्वेनान्यथोपपत्तिरनादित्वादिति प्रागुपपत्तिरुक्तैव न पुनर्वक्तव्येत्यर्थः ।।३१।।

## ಬ್ರಹ್ಮಮೀಮಾಂಸಾಶಾಸ್ತ್ರ

## ಅಗ್ನ್ಯಾದಿ ದೇವತೆಗಳಲ್ಲಿ ಆಯಾ ಹೆಸರಿನಿಂದಲೇ ವಿಷ್ಣುವಿನ ಸನ್ನಿಧಾನ

**सू – ॐ।। आमनन्ति चैनमस्मिन् ।। ॐ ।।३२।।**

ಈ ವಿಷ್ಣುವನ್ನು ಅಗ್ನ್ಯಾದಿಗಳಲ್ಲಿ 'ಯೋऽಗ್ನೌ ತಿಷ್ಠನ್' ಇತ್ಯಾದಿಯಾಗಿ ವೇದಗಳು ಹೇಳುತ್ತವೆ.

### ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका –** चः शङ्कानिवर्तकः । यस्माद् एनं विष्णुम् । अग्न्यादावामनन्ति तत्स्थतया 'योऽग्नौ तिष्ठन्' इत्याद्याः श्रुतयः प्रतिपादयन्ति । तस्मात् कथमग्न्यादिषु विष्णूपास्त्या अग्न्यादिप्राप्तिर्भवतीति शङ्का निवृत्ता । कुतः? अग्न्यादिपदेन तत्स्थभगवत्प्राप्तेरेवाभिप्रेतत्वादित्यर्थः ।।

'ಚ' ಶಬ್ದವು ಆಶಂಕೆಯನ್ನು ಪರಿಹರಿಸುತ್ತಿದೆ. ಯಾವ ಕಾರಣದಿಂದ ಏನಂ = ವಿಷ್ಣುವನ್ನು, ಅಸ್ಮಿನ್ = ಅಗ್ನ್ಯಾದಿಗಳಲ್ಲಿ, ಆಮನಂತಿ = ಇದ್ದಾನೆಂದು ಹೇಳುತ್ತಾರೋ 'ಯೋಽಗ್ನೌ ತಿಷ್ಠನ್' ಇತ್ಯಾದಿ ಶ್ರುತಿಗಳು ಹಾಗೆ ಪ್ರತಿಪಾದಿಸುತ್ತವೆಯೋ; ಆ ಕಾರಣದಿಂದ ಅಗ್ನ್ಯಾದಿಗಳಲ್ಲಿ ವಿಷ್ಣೂಪಾಸನೆಯಿಂದ ಅಗ್ನಿಯ ಪ್ರಾಪ್ತಿಯು ಆಗುತ್ತದೆಂಬ ಶಂಕೆಯು ಪರಿಹೃತವಾಯಿತು. ಏಕೆಂದರೆ ಅಗ್ನ್ಯಾದಿ ಪದಗಳಿಂದ ಭಗವಂತನ ಪ್ರಾಪ್ತಿಯೇ ಸಮ್ಮತವಾದ್ದರಿಂದ.

## श्रीमदानन्दतीर्थभगवत्पादाचार्यविरचित-
## ब्रह्मसूत्रभाष्यम्

**भाष्यम् — न ह्यन्योपासकोऽन्यं प्राप्नुत इति युज्यत इत्यत आह — ॐ॥ आमनन्ति चैनमस्मिन् ॥ ॐ एनं विष्णुमस्मिन्नग्न्यादावामनन्ति ।**

ಅನುವಾದ - ಒಬ್ಬನನ್ನು ಉಪಾಸನೆ ಮಾಡಿದರೆ ಮತ್ತೊಬ್ಬನನ್ನು ಪಡೆಯುತ್ತಾನೆಂಬುದು ತಪ್ಪಲ್ಲವೇ? ಎಂದರೆ ಸೂತ್ರಕಾರರು ಉತ್ತರಿಸುತ್ತಿದ್ದಾರೆ. ಈ ವಿಷ್ಣುವನ್ನು ಅಗ್ನ್ಯಾದಿಗಳಲ್ಲಿ ಯಾರು ಇದ್ದಾನೆಂದು ತಿಳಿಯುತ್ತಾರೋ ಎಂಬುದಾಗಿ 'ಯೋ ಅಗ್ನೌ ತಿಷ್ಠನ್' ಇತ್ಯಾದಿ ಶ್ರುತಿಗಳು ಹೇಳುತ್ತಿವೆ. ಎಂದರೆ ಅಗ್ನ್ಯಾದಿದೇವತೆಗಳಲ್ಲಿ ತೇಜೋರೂಪನಾದ ಅಮೃತಸ್ವರೂಪನಾದ ಕ್ಷರಾಕ್ಷರಪುರುಷಶಬ್ದವಾಚ್ಯನಾದ ಪರಮಾತ್ಮನೇ ನೆಲೆಸಿದ್ದಾನೆಂದು ಶ್ರುತಿಗಳು ಹೇಳುತ್ತಿವೆ.

ಪ್ರತಿಪದಾರ್ಥ -- ಅನ್ಯೋಪಾಸಕಃ = ಬೇರೊಬ್ಬನನ್ನು ಉಪಾಸನೆ ಮಾಡುವವನು, ಅನ್ಯಂ = ಮತ್ತೊಬ್ಬನನ್ನು, ಪ್ರಾಪ್ನುತೇ = ಹೊಂದುತ್ತಾನೆ, ಇತಿ = ಹೀಗೆ ಹೇಳುವುದು, ನ ಯುಜ್ಯತೇ = ಯುಕ್ತವಾಗುವುದಿಲ್ಲ. ಇತ್ಯತ ಆಹ = ಈ ಪ್ರಶ್ನೆಗೆ ಸೂತ್ರಕಾರರೇ ಉತ್ತರಿಸುತ್ತಿದ್ದಾರೆ.

ಏನಂ = ಈ ವಿಷ್ಣುವನ್ನು, ಅಸ್ಮಿನ್ ಅಗ್ನ್ಯಾದೌ = ಈ ಅಗ್ನ್ಯಾದಿ ದೇವತೆಗಳಲ್ಲಿ, ಆಮನಂತಿ = ಇದ್ದಾನೆಂದು 'ಯೋಽಗ್ನೌ ತಿಷ್ಠನ್' ಇತ್ಯಾದಿ ಶ್ರುತಿಗಳು ಹೇಳುತ್ತಿವೆ.

**भाष्यम् — 'योऽग्नौ तिष्ठन्' (बृ. ५-७-५.) 'य एष एतस्मिन्नग्नौ तेजोमयोऽमृतमयः पुरुषः' (छां. ४-५-३.) इत्यादिना ॥ ३२ ॥**

।। इति वैश्वानराधिकरणम् ।। ७ ।।

।। इति श्रीमदानन्दतीर्थभगवत्पादाचार्यविरचिते ब्रह्मसूत्रभाष्ये प्रथमाध्यायस्य द्वितीयः पादः ।।

ಪರಿಪೂರ್ಣಚಂದ್ರಿಕಾ

ಅನುವಾದ - "ಯಾವಾತನು ಅಗ್ನ್ಯಾದಿ ದೇವತೆಗಳಲ್ಲಿ ಇದ್ದಾನೋ ಅವನು ಪರಮಾತ್ಮ"ನೆಂದು ಬೃಹದಾರಣ್ಯಕಶ್ರುತಿಯು ಹೇಳುತ್ತಿದೆ. ಅಗ್ನಿಯಲ್ಲಿತೇಜೋರೂಪನಾಗಿ, ಅಮೃತಸ್ವರೂಪನಾಗಿಯೂ, ಕ್ಷರಾಕ್ಷರಪುರುಷಶಬ್ದವಾಚ್ಯನಾಗಿಯೂ ಪರಮಾತ್ಮನೇ ಇದ್ದಾನೆಂದು ಬೃಹದಾರಣ್ಯಕಶ್ರುತಿಯು ಹೇಳುತ್ತಿದೆ.

ಪ್ರತಿಪದಾರ್ಥ -- ಆ ಶ್ರುತಿಗಳನ್ನು ಉದಾಹರಿಸುತ್ತಿದ್ದಾರೆ. ಯಃ = ಆ ಭಗವಂತನೇ ಅಗ್ನೌ = ಅಗ್ನ್ಯಾದಿಗಳಲ್ಲಿ, ತಿಷ್ಠನ್ = ಇರುವವನಾಗಿ ಎಂದು ಬೃಹದಾರಣ್ಯಕ ಶ್ರುತಿಯು ಹೇಳಿದೆ, ಮತ್ತು ಯಃ = ಯಾವ, ಏಷಃ = ಈ ಭಗವಂತನು, ಏತಸ್ಮಿನ್ = ಈ, ಅಗ್ನೌ = ಅಗ್ನಿಯಲ್ಲಿ, ತೇಜೋಮಯಃ = ಜ್ಯೋತಿಸ್ವರೂಪನು, ಅಮೃತಮಯಃ = ಅಮೃತಸ್ವರೂಪನು, ಪುರುಷಃ = ಕ್ಷರಾಕ್ಷರಪುರುಷಶಬ್ದವಾಚ್ಯನು, ಇತ್ಯಾದಿನಾ = ಇವೇ ಮೊದಲಾದ ಶ್ರುತಿಗಳಿಂದ ಮೇಲೆ ಹೇಳಿದ ವಿಷಯವೆಲ್ಲವೂ ನಿರ್ಣಯವಾಗುತ್ತವೆ. ಈ ಎಲ್ಲ ಕಾರಣಗಳಿಂದ ಭಗವಂತನೇ ವೈಶ್ವಾನರ ಎಂಬ ನಾಮಾತ್ಮಕಶಬ್ದದಿಂದ ಪ್ರತಿಪಾದ್ಯನಾಗುತ್ತಾನೆಂದು ನಿರ್ಧಾರವಾಯಿತು.(१)

---

(१) **भाष्यदीपिका** – यदुक्तमग्न्यादिसूक्तादिभिः ब्रह्मोपासकस्याग्न्यादि-प्राप्तिर्भवतीति तच्छ्रुत्युक्तमपि न युक्तम् । 'मद्भक्ता यान्ति मामपि' इत्यादेरन्योपासकस्यान्यप्राप्तेरयोगात् । 'श्रुतोपनिषत्कगत्यभिधानात्' इत्यादौ तदनभ्युपगमाच्चेति भावेनाऽऽशङ्क्य तत्परिहारतया सूत्रमवतार्य व्याचष्टे – न हीति ।। टीकायामाशङ्क्यावतार्येत्यन्वयः । शङ्कारूपसूत्रावतारिकां प्रदर्श्येत्यर्थः । 'हि' यस्मादन्योपासकोऽन्यं प्राप्नुत इत्येतत्प्रमाणविरोधान्न युज्यते । तस्मादुक्तमयुक्तमित्यर्थः । एनमित्यनुवादेन विष्णुमिति व्याकृतम् । अस्मिन्नित्यस्य व्याख्यानमग्न्यादाविति । 'आमनन्ति' प्रतिपादयन्ति श्रुतय इति शेषः । चशब्दः विष्णूपासकस्याग्न्यादिप्राप्तिरयुक्तेति पूर्वपक्षिशङ्काव्यावर्तकः । तेन सिद्धान्तिप्रतिज्ञा, अग्न्यादिप्राप्तिपदेन तदन्तर्गतभगवत्प्राप्तेरेव विवक्षितत्वादिति साक्षाद्धेतुश्च सूचितः । तत्त्वप्रदीपे तु – न केवलमेकत्रैवाऽऽमनन्ति पठन्ति वाजसनेयाः, किन्त्वन्यत्र 'स यश्चायमस्मिन्' इत्यादौ, एवमन्ये आमनन्ति 'य एष एतस्मिन्' इत्यादौ, अन्ये चाऽऽमनन्ति 'एतस्याम्' इत्यादौ, अन्ये च 'तत् सृष्ट्वा। तदेवानुप्राविशत्' इत्यादौ । स्मरन्ति च स्मृतिकर्तारः 'यच्चन्द्रमसि यच्चाग्नौ' इत्यादीनि । समुच्चयार्थश्चशब्द इत्युक्तम् । ताः श्रुतीः दर्शयति – य इति ।। 'योऽग्नौ तिष्ठन्' इत्येकं वाजसनेयं वाक्यम् । 'य एषः' इत्यपरं छान्दोग्यवाक्यम् । उभयत्र यच्छब्दस्य तत्रत्यतच्छब्देनान्वयः । 'तेजोमयः' तेजोरूपः 'अमृतमयः' नित्याऽऽत्मा । आदिशब्देन 'एतमग्नावध्वर्यवः' इत्यादिकं गृह्यते । इत्यादिना आमनन्तीत्यन्वयः । अनेन – न विष्णूपासकस्याग्न्यादिप्राप्त्युक्तिरयुक्ता । कुतः ? अग्न्यादिप्राप्तिपदेन तदन्तर्गतभगवत्प्राप्तेर्विव क्षितत्वात् । नच विष्णोरग्न्याद्यन्तर्गतत्वासिद्धिः । यतः 'एनं' विष्णुम् 'अस्मिन्' अग्न्यादौ

तत्वप्रकाशिका –

ॐ ।। आमनन्ति चैनमस्मिन् ।। ॐ

यदुक्तम् 'अग्न्यादिसूक्तादिभिर्ब्रह्मोपासकस्याग्न्यादिप्राप्तिः' इति तच्छ्रुत्युक्तमपि न युक्तम् । 'मद्भक्ता यान्ति मामपि' इत्यादेरन्योपासकस्यान्यप्राप्तेरयोगात् । 'श्रुतोपनिषत्कगत्यभिधानाच्च' इत्यादौ तदनभ्युपगमाच्चेति भावेनाऽऽशङ्क्य, तत्परिहाराय(रतया) सूत्रमवतार्य व्याचष्टे – न हीति ।।

ಹಿಂದೆ ಅಗ್ನಿ ಮೊದಲಾದ ಸೂಕ್ತಗಳಿಂದ ಬ್ರಹ್ಮನನ್ನು ಯಾರು ಉಪಾಸನೆ ಮಾಡುತ್ತಾರೋ ಅಂತಹವರಿಗೆ ಅಗ್ನ್ಯಾದಿ ದೇವತೆಗಳು ಪ್ರಾಪ್ತರಾಗುತ್ತಾರೆಂದು ಜೈಮಿನಿಗಳ ಅಭಿಪ್ರಾಯವೆಂದು ಹೇಳಲಾಯಿತು. ಈ ವಿಷಯವು ಶ್ರುತಿಯಲ್ಲಿ ಹೇಳಲ್ಪಟ್ಟಿದ್ದರೂ ಸಹ ಅಯುಕ್ತವಾಗಿದೆ. ಏಕೆಂದರೆ ಮದ್ಭಕ್ತಾ ಯಾಂತಿ ಮಾಮಪಿ' ನನ್ನ ಭಕ್ತರು ನನ್ನನ್ನೇ ಹೊಂದುತ್ತಾರೆ ಹೀಗೆ ಭಗವಂತನ ಮಾತಿನಿಂದ ಮತ್ತೊಬ್ಬನನ್ನು ಉಪಾಸನೆ ಮಾಡುವವನಿಗೆ ಇನ್ನೊಬ್ಬನು ದೊರೆಯಲಾರನು. 'ಶ್ರುತೋಪನಿಷತ್ಕಗತ್ಯಭಿಧಾನಾಚ್ಚ' ಎಂಬ ಸೂತ್ರದಲ್ಲಿಯೂ ಇದೇ ವಿಷಯವನ್ನು ಹೇಳಿದ್ದಾರೆ. ಈ ಅಭಿಪ್ರಾಯದ ಶಂಕೆಯನ್ನು ಪರಿಹಾರಮಾಡುವುದಕ್ಕಾಗಿ ಸೂತ್ರವನ್ನು ಪಠಿಸಿ ವ್ಯಾಖ್ಯಾನಿಸುತ್ತಿದ್ದಾರೆ ''ನಹಿ'' ಇತ್ಯಾದಿಯಾಗಿ.

तत्वप्रकाशिका – न विष्णूपासकस्याग्न्यादिप्राप्त्युक्तिरयुक्ता । अग्न्यादिप्राप्तिपदेन तदन्तर्गतभगवत्प्राप्तेर्विवक्षितत्वात् । यतोऽग्न्यादावपि विष्णुमामनन्ति श्रुतय इति भावः । चशब्दः शङ्काव्यावर्तकः । अतोऽयं वैश्वानरो विष्णुरेवेति तस्यैव सर्वगतत्वमिति सिद्धम् ।। ३२ ।।

।। इति श्रीमज्जयतीर्थभिक्षुविरचितायां तत्वप्रकाशिकायाम्
वैश्वनराधिकरणम् प्रथमाध्यायस्य द्वितीयः पादः।।

---

आमनन्ति श्रुतयोऽत इति सूत्रार्थ उक्तो भवति ।

।। इति वैश्वानराधिकरणम् ।। ७ ।।

।। श्रीमद्रघुनाथतीर्थपूज्यपादानां शिष्येण
श्रीमज्जगन्नाथयतिना कृतायां श्रीमद्ब्रह्मसूत्रभाष्यदीपिकायां
प्रथमाध्यायस्य द्वितीयः पादः ।।

ಪರಿಪೂರ್ಣಚಂದ್ರಿಕಾ

ವಿಷ್ಣುವನ್ನು ಉಪಾಸನೆಮಾಡುವ ಭಕ್ತನಿಗೆ ಅಗ್ನಿ ಮೊದಲಾದವರ ಪ್ರಾಪ್ತಿಯಾಗುವುದು ಎಂದು ಹೇಳಿದ್ದು ಅಯುಕ್ತವಲ್ಲ. ಏಕೆಂದರೆ ಅಗ್ನ್ಯಾದಿಪ್ರಾಪ್ತಿ ಎಂಬ ಪದದಿಂದ ಅಗ್ನ್ಯಾದ್ಯಂತರ್ಗತನಾದ ಭಗವಂತನು ದೊರೆಯುತ್ತಾನೆಂಬ ವಿವಕ್ಷೆಯು ಇರುತ್ತದೆ. ಏಕೆಂದರೆ ಶ್ರುತಿಯು ಅಗ್ನ್ಯಾದಿಗಳಲ್ಲಿ ವಿಷ್ಣುವೇ ಅಂತರ್ಯಾಮಿಯಾಗಿದ್ದಾನೆಂದು ಹೇಳುತ್ತಿದೆ. ಸೂತ್ರದಲ್ಲಿರುವ ಚಶಬ್ದವು ಈ ಶಂಕೆಯನ್ನು ಪರಿಹರಿಸುತ್ತಿದೆ. ಆದ್ದರಿಂದ ವೈಶ್ವಾನರ ಎಂಬ ನಾಮಾತ್ಮಕಶಬ್ದದಿಂದ ಪ್ರತಿಪಾದ್ಯನಾದವನು ವಿಷ್ಣುವೇ ಆಗಿದ್ದಾನೆ. ಆದ್ದರಿಂದ ಅವನೇ ಸರ್ವಗತನೆಂದು ಸಿದ್ಧವಾಗುತ್ತದೆ.

ಇಲ್ಲಿಗೆ ಶ್ರೀಜಯತೀರ್ಥಭಿಕ್ಷುಗಳಿಂದ ವಿರಚಿತವಾದ ತತ್ವಪ್ರಕಾಶಿಕೆಯ ಕನ್ನಡಾನುವಾದದಲ್ಲಿ ಪ್ರಥಮಾಧ್ಯಾಯದ ದ್ವಿತೀಯಪಾದವು ಸಮಾಪ್ತವಾಯಿತು.

**भावदीपः – ॐ आमनन्ति चैनमस्मिन् ॐ ।। तदनभ्युपगमाच्चेति ।। 'नह्यन्यविद्ययाऽन्यगतिर्युक्ता' इति कगत्यन्यथानुपपत्त्या कशब्दितब्रह्मण एव प्रकरणित्वाभ्युपगमादिति भावः । सौत्रचशब्दार्थमाह – न विष्ण्वित्यादिना ।।**

॥ ಓಂ ಆಮನಂತಿ ಚೈನಮಸ್ಮಿನ್ ಓಂ ॥

ಟೀಕೆಯಲ್ಲಿ "ತದನಭ್ಯುಪಗಮಾಚ್ಚ"ಎಂದು ಹೇಳಿದ್ದಾರೆ, ಏಕೆಂದರೆ ಒಬ್ಬನ ವಿದ್ಯೆಯಿಂದ ಮತ್ತೊಬ್ಬನ ಗತಿಯು ಯುಕ್ತವಾಗುವುದಿಲ್ಲ. ಹೀಗೆ ಕಗತ್ಯನ್ಯಥಾನುಪಪತ್ತಿಯಿಂದ "ಕ" ಎಂಬ ಶಬ್ದದಿಂದ ಪ್ರತಿಪಾದ್ಯನಾದ ಬ್ರಹ್ಮನೇ ಪ್ರಕರಣದಲ್ಲಿ ಪ್ರತಿಪಾದ್ಯನಾಗಿದ್ದಾನೆಂದು ಅಂಗೀಕರಿಸಿರುವುದರಿಂದ ಎಂದು ಅಭಿಪ್ರಾಯ. ಸೂತ್ರದಲ್ಲಿರುವ "ಚ" ಶಬ್ದದ ಅರ್ಥವನ್ನು "ನ ವಿಷ್ಣೂಪಾಸಕ" ಇತ್ಯಾದಿ ವಾಕ್ಯಗಳಿಂದ ಸ್ಪಷ್ಟಪಡಿಸಿದ್ದಾರೆ.

**भावदीपः – उपपादकत्वेन सूत्रखण्डभाष्यं व्याचष्टे – यत इति ।। आमनन्ति नामनन्ति चेति भ्रान्तिनिरासायाऽह – चशब्द इति ।। यद्वा समुच्चेयाभावाद् व्यर्थोऽयं चशब्द इत्यत आह – चशब्द इति ।। तत्प्रकारः प्राग् विवृत इति भावः ।**

ಈ ವಿಷಯದಲ್ಲಿ ಉಪಪಾದಕವಾಗಿ ಸೂತ್ರದ ಒಂದು ಭಾಗದ ಭಾಷ್ಯವನ್ನು "ಯತಃ" ಎಂಬುದರಿಂದ ವ್ಯಾಖ್ಯಾನಿಸಿದ್ದಾರೆ. ಸೂತ್ರದಲ್ಲಿರುವ ಚ ಶಬ್ದದಿಂದ "ಆಮನಂತಿ ನಾಮನಂತಿ ಚ" ಎಂಬುದಾಗಿ ಭ್ರಾಂತಿಯು ಬರುತ್ತದೆ. ಅದನ್ನು ನಿರಾಕರಿಸುವುದಕ್ಕಾಗಿ "ಚ ಶಬ್ದಃ" ಎಂದು ಹೇಳಿದ್ದಾರೆ. ಅಥವಾ "ಚ" ಶಬ್ದಕ್ಕೆ ಸಮುಚ್ಚಯವೆಂಬ ಅರ್ಥವಿಲ್ಲದ ಕಾರಣ ಸೂತ್ರದಲ್ಲಿರುವ ಚ ಶಬ್ದವು ವ್ಯರ್ಥವಾಗುತ್ತದಲ್ಲವೆ? ಎಂಬ ಪ್ರಶ್ನೆಗೂ ಸಹ ಉತ್ತರಿಸುವುದಕ್ಕಾಗಿ "ಚ ಶಬ್ದಃ" ಎಂದು ಹೇಳಿದ್ದಾರೆ. ಇದರ ಬಗ್ಗೆ ಹಿಂದೆಯೇ ವಿವರಿಸಿದ್ದಾಗಿದೆ.

ವೈಶ್ವಾನರಾಧಿಕರಣ (೧-೨-೭)

**भावदीपः** – तत्त्वप्रदीपे तु 'नैकत्रैवामनन्ति वाजसनेयिनः । चकारादन्यत्रच 'यश्चायमस्मिन्' इत्यादौ अन्ये चामनन्ति 'एतमस्याम् एतं दिवि' इत्यादि अन्यत्र 'तत् सृष्ट्वा तदवानुप्राविशद्' इत्यादि स्मरन्ति च । यच्चन्द्रमसि यच्चाग्नौ इत्यादीत्युक्तम् ।

ತತ್ವಪ್ರದೀಪದಲ್ಲಿಯಾದರು "ಬೃಹದಾರಣ್ಯಕದಲ್ಲಿ ಮಾತ್ರ ಹೀಗೆ ಹೇಳುವುದಲ್ಲ, ಸೂತ್ರದಲ್ಲಿ "ಚ" ಶಬ್ದವನ್ನು ಹೇಳಿದ್ದರಿಂದ ಬೇರೆ ವೇದಾಧ್ಯಯನವನ್ನು ಮಾಡುವವರೂ ಸಹ "ಯಶ್ಚಾಯಮಸ್ಮಿನ್" ಇತ್ಯಾದಿಯಾಗಿ ಹೇಳುತ್ತಾರೆ. "ಏತಮಸ್ಯಾಮ್ ಏತಂ ದಿವಿ" ಇತ್ಯಾದಿಯಾಗಿ ಮತ್ತು "ತತ್ಸೃಷ್ಟ್ವಾ ತದೇವಾನುಪ್ರಾವಿಶಾತ್" ಇತ್ಯಾದಿಯಾಗಿ ಬೇರೆ ಶ್ರುತಿಯಲ್ಲಿಯೂ ಮತ್ತು "ಯಚ್ಚಂದ್ರಮಸಿ ಯಚ್ಚಾಗ್ನೌ" ಇತ್ಯಾದಿ ಸ್ಮೃತಿಯಲ್ಲಿಯೂ ಭಗವಂತನೇ ಅಗ್ನಿ ಮೊದಲಾದವರಲ್ಲಿ ನೆಲಸಿದ್ದಾನೆಂದು ಹೇಳಲಾಗಿದೆ" ಹೀಗೆ ವ್ಯಾಖ್ಯಾನಿಸಿದ್ದಾರೆ.

**भावदीपः** – अत इति ।। आत्मशब्दश्रुतिस्मृतिसमाख्याप्रकरणरूप-साधकभावात् । परकीयश्रुतिलिङ्गविद्याभेदव्यवहारविरोधादिबाधकाभावाच्चेति सर्वसौत्रहेतुभागार्थः । वैश्वानरो विष्णुरिति साध्यभागार्थः । एवेति 'अत एव न देवता भूतं च' इति सूत्रार्थः ।

"ಅತಃ" ಎಂಬ ಪದಕ್ಕೆ ಆತ್ಮಶಬ್ದ, ಶ್ರುತಿ, ಸ್ಮೃತಿ, ಸಮಾಖ್ಯಾ, ಪ್ರಕರಣ ಎಂಬ ಸಾಧಕ ಪ್ರಮಾಣವಿರುವುದರಿಂದ ಎಂದರ್ಥ. ಪರಕೀಯರು ಹೇಳುವ ಶ್ರುತಿ,ಲಿಂಗ, ವಿದ್ಯಾಭೇದ, ವ್ಯವಹಾರವಿರೋಧ ಮೊದಲಾದ ಯಾವುದೇ ಬಾಧಕಗಳೂ ಸಹ ಇಲ್ಲದ ಕಾರಣದಿಂದ ಎಂಬುದಾಗಿ ಸಕಲ ಸೂತ್ರಗಳಲ್ಲಿರುವ ಹೇತುಭಾಗದ ಅರ್ಥವಾಗಿದೆ. ವೈಶ್ವಾನರನಾದವನು ವಿಷ್ಣುವೇ ಆಗಿದ್ದಾನೆಂಬುದು ಸಾಧ್ಯಭಾಗದ ಅರ್ಥವಾಗಿದೆ. "ಏವ" ಎಂಬುದು "ಅತ ಏವ ನ ದೇವತಾ ಭೂತಂ ಚ " ಎಂಬ ಸೂತ್ರದ ಅರ್ಥವಾಗಿದೆ.

**भावदीपः** – वाजसनेयेत्यादिवक्यस्याप्यत्र प्रागुक्तत्वात् तत्रत्यस्य विष्णुत्वोपसंहारे तत्र तत्र सर्वगतत्वाभावेन सर्वगतत्वाक्षेपसमाध्य-योगादयमित्युक्तम् । छान्दोग्यस्य इत्यर्थः ।

ಬೃಹದಾರಣ್ಯಕವಾಕ್ಯವನ್ನು ಹಿಂದೆ ಹೇಳಿದ್ದರಿಂದ ಆ ವಾಕ್ಯವು ವಿಷ್ಣುಪರವೆಂದು ಉಪಸಂಹಾರ ಮಾಡಿದರೆ ಆ ವಾಕ್ಯಗಳಲ್ಲಿ ಸರ್ವಗತತ್ವವು ಕೇಳಿಸದ ಕಾರಣ ಸರ್ವಗತತ್ವದ ಆಕ್ಷೇಪಕ್ಕೆ ಸಮಾಧಾನವನ್ನು ಹೇಳಿದಂತಾಗುವುದಿಲ್ಲ. ಆದ್ದರಿಂದ "ಅಯಂ" ಎಂಬ ಪದಕ್ಕೆ ಛಾಂದೋಗ್ಯದಲ್ಲಿ ಹೇಳಲ್ಪಟ್ಟ ವೈಶ್ವಾನರನು ಎಂದು ಅರ್ಥವನ್ನು ತಿಳಿಯಬೇಕು.

ಪರಿಪೂರ್ಣಚಂದ್ರಿಕಾ

**भावदीपः** – सर्वगतत्वमिति फलोक्तिः । अत्राभिविमानपदोक्तं पूर्वत्र ततमपदोक्तं सर्वगतत्वमित्यर्थः । प्रादेशमात्रत्वं तु सर्वगतस्याप्यङ्गुष्ठमात्रत्वमिव अधिकार्याद्यपेक्षया हृद्यपेक्षया त्वित्यत्र समाहितं भविष्यति ।

"ಸರ್ವಗತತ್ವಂ" ಎಂದು ಕೊನೆಯಲ್ಲಿ ಈ ಅಧಿಕರಣದ ಫಲವನ್ನು ಹೇಳಿದ್ದಾರೆ. ಪ್ರಕೃತ "ಅಭಿವಿಮಾನ"ಎಂಬ ಪದದಿಂದ ಹಿಂದೆ ಹೇಳಿದ "ತತಂ" ಎಂಬ ಪದದಿಂದ ಹೇಳಲ್ಪಟ್ಟ ಸರ್ವಗತತ್ವವು ಸಿದ್ಧವಾಯಿತೆಂದು ತಿಳಿಯಬೇಕು. ಆದರೂ ಸಹ ಭಗವಂತನಿಗೆ ಪ್ರಾದೇಶಪರಿಮಾಣವು ಹೇಗೆ ಕೂಡುತ್ತದೆ? ಎಂದರೆ, ಸರ್ವಗತನಾದರೂ ಅಂಗುಷ್ಠಪರಿಮಾಣವು ಹೇಗೆ ಬರುತ್ತದೋ ಆದರಂತೆ ಅಧಿಕಾರಿಯ ವಿವಕ್ಷೆಯಿಂದ "ಹೃದ್ಯಪೇಕ್ಷಯಾ ತು" ಎಂಬಲ್ಲಿ ಪ್ರಾದೇಶ ಪರಿಮಾಣವನ್ನು ಭಗವಂತನಿಗೆ ಸಮರ್ಥಿಸುತ್ತಾರೆ.

**भावदीपः** – केचित् स्वदेहान्तर्हृदयावकाशे प्रादेशमात्रं पुरुषं वसन्तमित्यादिस्मृतेरिति भावः ।

ಕೆಲವರು ತಮ್ಮ ದೇಹದ ಹೃದಯಾಕಾಶದಲ್ಲಿ ಪ್ರಾದೇಶ ಪರಿಮಾಣದಿಂದ ವಾಸಿಸುವ ಪುರುಷನನ್ನು "ಪ್ರಾದೇಶಮಾತ್ರಂ ಪುರುಷಂ ವಸಂತಂ" ಇತ್ಯಾದಿ ಶ್ರುತಿಗಳಿರುವುದರಿಂದ ಯುಕ್ತವಾಗುತ್ತದೆಂದು ಹೇಳುತ್ತಾರೆ.

**भावदीपः** – यत्त्वत्र केनचिद् वैश्वानरो भूत्वेत्यत्र वैश्वानराग्न्यभेदादिविकल्पपूर्वं दूषणमुक्तम्, तन्न । वैश्वानरनामको वैश्वानररूपविशेषो भूत्वेत्यर्थोक्तौ दोषाभावात् ।

**भावदीपः** – ಕೆಲವರು 'ವೈಶ್ವಾನರ' ಎಂಬಲ್ಲಿ ವೈಶ್ವಾನರನಿಗೆ ಅಗ್ನಿಯಿಂದ ಅಭೇದವನ್ನು ಆಶಂಕಿಸಿ ದೋಷವನ್ನು ಹೇಳಿದ್ದಾರೆ. ಇದು ತಪ್ಪು. "ವೈಶ್ವಾನರೋ ಭೂತ್ವಾ" ಎಂಬಲ್ಲಿ ವೈಶ್ವಾನರನೆಂಬ ಹೆಸರುಳ್ಳ ಭಗವಂತನ ರೂಪವಿಶೇಷವೇ ಹೇಳಲ್ಪಟ್ಟಿದೆ. ಹೀಗೆ ಅರ್ಥೈಸಿದಾಗ ಯಾವುದೇ ದೋಷ ಇರುವುದಿಲ್ಲ.

**भावदीपः** – यच्च तृतीये प्रकरणादित्येव वाच्ये असम्भवादित्युक्तिरयुक्तेति, तच्च न । प्रकरणस्य निरवकाशत्वोक्त्यर्थत्वात्तथोक्तेः ।

ಮೂರನೆಯ ಸೂತ್ರದಲ್ಲಿ "ಪ್ರಕರಣಾತ್" ಎಂದಷ್ಟೇ ಹೇಳಬಹುದಾಗಿತ್ತು "ಅಸಂಭವಾತ್" ಎಂಬ ಪದವನ್ನು ಹೇಳಬೇಕಾಗಿರಲಿಲ್ಲವೆಂದು ಕೆಲವರು ಹೇಳುತ್ತಾರೆ. ಇದೂ ಸಹ ತಪ್ಪು. ಏಕೆಂದರೆ ಪ್ರಕರಣವು ನಿರವಕಾಶವಾಗಿದೆ ಎಂಬುದನ್ನು ತಿಳಿಸಲು "ಅಸಂಭವಾಚ್ಚ" ಎಂಬುದಾಗಿ ಹೇಳಿದ್ದಾರೆ.

**भावदीपः** – यच्च पुरुषसूक्तवैश्वानरविद्ययोर्भिन्नार्थत्वेन वैश्वानरस्य पुरुषविधत्वायोग इति, तन्न । टीकायामेव पूर्वं समाधानाद्

ಪುರುಷಸೂಕ್ತ ಹಾಗೂ ವೈಶ್ವಾನರವಿದ್ಯೆ ಇವೆರಡು ಬೇರೆಬೇರೆಯಾಗಿರುವುದರಿಂದ ವೈಶ್ವಾರನಿಗೆ ಪುರುಷರೂಪವು ಕೂಡುವುದಿಲ್ಲವೆಂದು ಹೇಳುತ್ತಾರೆ. ಇದೂ ಸಹ ತಪ್ಪು. ಏಕೆಂದರೆ, ಈ ವಿಷಯವನ್ನು ಈ ಹಿಂದೆ ಟೀಕೆಯಲ್ಲಿ ನಿರಾಕರಿಸಿದ್ದಾರೆ.

**भावदीपः** – यदपि शब्दानां ब्रह्मणि समन्वयेऽप्यन्यत्र वृत्तेः सूत्रे प्रतिषिद्धत्वाभावेनान्यत्र व्यवहारविरोधशङ्कानुदयात्तत्समाधानार्थं साक्षादित्यादि-पञ्चसूत्री व्यर्थेत्यादि । तदप्यसारम् । प्रतिनयं तत्त्वित्यध्याहारेणान्यत्र वृत्तेः प्रतिषिद्धत्वात् । अतो यथा भाष्यटीकायामुक्त एव सूत्रार्थः समञ्जस इति ॥

॥ इति श्रीराघवेन्द्रयतिकृते भावदीपे वैश्वनराधिकरणम् ॥

ಎಲ್ಲಾ ಸೂತ್ರಗಳಲ್ಲಿ ಶಬ್ದಗಳು ಬ್ರಹ್ಮನಲ್ಲಿ ಸಮನ್ವಯವಾಗುತ್ತಿವೆಯೆಂದಷ್ಟೇ ಹೇಳುತ್ತಿದ್ದಾರೆ; ಬೇರೆ ಕಡೆ ಶಬ್ದಗಳು ಬರುವುದೇ ಇಲ್ಲವೆಂದು ಎಲ್ಲಿಯೂ ನಿಷೇಧ ಮಾಡಿಲ್ಲ. ಹೀಗಿರುವಾಗ ವ್ಯವಹಾರವಿರೋಧದ ಶಂಕೆಗೆ ಅವಕಾಶವಿಲ್ಲದ್ದರಿಂದ ಅದನ್ನು ಸಮಾಧಾನ ಮಾಡುವುದಕ್ಕಾಗಿ "ಸಾಕ್ಷಾತ್" ಇತ್ಯಾದಿಯಾದ ಐದು ಸೂತ್ರಗಳು ಹೊರಟಿದ್ದು ವ್ಯರ್ಥವಲ್ಲವೇ? ಎಂದು ಆಕ್ಷೇಪಿಸಬಹುದು. ಇದೂ ಸಹ ತಪ್ಪು. ಪ್ರತಿಯೊಂದು ಅಧಿಕರಣಗಳಲ್ಲಿಯೂ, 'ತತ್ತು' ಎಂಬ ಪದದ ಅಧ್ಯಾಹಾರವಿರುವುದರಿಂದ ವಿಷ್ಣು ಒಬ್ಬನೇ ಆಯಾ ಶಬ್ದಗಳಿಂದ ಪ್ರತಿಪಾದ್ಯನಾಗುತ್ತಾನೆ ಬೇರೆಯವರು ಪ್ರತಿಪಾದ್ಯರಾಗುವುದಿಲ್ಲವೆಂದು ನಿಷೇಧ ಮಾಡಲಾಗಿದೆ. ಆದ್ದರಿಂದ ಭಾಷ್ಯ ಹಾಗೂ ಟೀಕೆಗಳಲ್ಲಿ ವ್ಯಾಖ್ಯಾನ ಮಾಡಿದ ಅರ್ಥವೇ ಸೂತ್ರಗಳ ನಿಜವಾದ ಅರ್ಥವಾಗಿದೆ, ಅತ್ಯಂತ ಸಮಂಜಸವೂ ಆಗಿದೆ.

॥ ಇಲ್ಲಿಗೆ ಭಾವದೀಪದ ಕನ್ನಡಾನುವಾದದಲ್ಲಿ ವೈಶ್ವಾನರಾಧಿಕರಣವು ಮುಗಿಯಿತು ॥

वाक्यार्थमञ्जरी – अन्तरङ्गानुपपत्तिं चाह – श्रुतेति ॥ तत्र द्वितीया विद्या परिज्ञानेन ब्रह्मप्राप्तेरुक्त्या ब्रह्मण एव तद्विद्याविषयत्वम्, नाग्नेरिति वदतान्यज्ञानेनान-यप्राप्तेरभ्युपगमादित्यर्थः ॥ ॐ आमनन्ति चैनमस्मिन् ॐ ॥ एनं विष्णुम् अस्मिन्नग्नौ 'योऽग्नौ तिष्ठन्' इत्यादिश्रुतय आमनन्ति प्रतिपादयन्तीत्यर्थः । व्यावर्तकः व्यावृत्तिसमुच्चायकः एतदाशङ्कानिराससमुचितस्यैवोक्तहेतोः स्वार्थसाधकत्वादिति भावः ॥ ३२ ॥

॥ इति श्रीशर्कराश्रीनिवासाविरचितायां वाक्यार्थमञ्जर्याम् वैश्वनराधिकरणम् ॥ ७ ॥

ವೈಶ್ವಾನರಾಧಿಕರಣ
(೧-೩-೨)

# ಭಾಗ - ೨

## ತಾತ್ಪರ್ಯಚಂದ್ರಿಕಾ, ಪ್ರಕಾಶ,

ಪ್ರತಿಯೊಂದು ವಾಕ್ಯಗಳ ವಿಶೇಷ ವಿವರಣೆಯೊಂದಿಗೆ

ಸರಳ ಅನುವಾದ

* * *

ಮತ್ತು

ಗುರುರಾಜೀಯಮ್, ಭಾಟ್ಟಸಂಗ್ರಹ,
ಶಾಂಕರಭಾಷ್ಯ, ಭಾಮತೀ,
ರಾಮಾನುಜಭಾಷ್ಯ ಇವುಗಳ ಸಂಪೂರ್ಣ ಅಡಿಟಿಪ್ಪಣಿಯೊಂದಿಗೆ

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥
॥ ಶ್ರೀಮಧ್ವರಾಜೋ ವಿಜಯತೇತರಾಮ್ ॥
॥ ಶ್ರೀಗುರುಭ್ಯೋ ನಮಃ ॥

ಶ್ರೀಬ್ರಹ್ಮಣ್ಯತೀರ್ಥಶ್ರೀಪಾದಶಿಷ್ಯ ಶ್ರೀವ್ಯಾಸತೀರ್ಥವಿರಚಿತಾ

# ತಾತ್ಪರ್ಯಚಂದ್ರಿಕಾ

## अथ वैश्वानराधिकरणम्

ವೈಶ್ವಾನರಶಬ್ದವು ಉಭಯತ್ರಪ್ರಸಿದ್ಧವಲ್ಲ

**।। ॐ वैश्वानरः साधरणशब्दविशेषात् ॐ ।।**

**अत्र यद्यपि वैश्वानरनाम्नः सूत्र एवाग्नाविष्णवोः साधारण्यस्योक्ततयोभयत्रप्रसिद्धता,**

ಅನುವಾದ - ವೈಶ್ವಾನರಾಧಿಕರಣವು ಪ್ರಾರಂಭವಾಗುತ್ತಿದೆ. ಈ ಅಧಿಕರಣದ ಸಂಗತಿಯನ್ನು ಕೆಲವರು ಹೀಗೆ ಉಪಪಾದನೆ ಮಾಡುತ್ತಾರೆ - ಈ ಅಧಿಕರಣದಲ್ಲಿ ಉಭಯತ್ರಪ್ರಸಿದ್ಧವಾದ 'ವೈಶ್ವಾನರ' ಎಂಬ ನಾಮಾತ್ಮಕಶಬ್ದದ ಸಮನ್ವಯವನ್ನು ಮಾಡುತ್ತಿದ್ದಾರೆ. ಆದ್ದರಿಂದಲೇ ಸೂತ್ರಕಾರರು ಅಗ್ನಿ ಹಾಗೂ ವಿಷ್ಣು ಇಬ್ಬರಲ್ಲಿಯೂ 'ವೈಶ್ವಾನರ' ಶಬ್ದವು ಸಾಧಾರಣವಾಗಿದೆಯೆಂದು ಹೇಳಿದ್ದಾರೆ. ವಾಸ್ತವಿಕವಾಗಿ ಅನ್ಯತ್ರಪ್ರಸಿದ್ಧವಾದ ಲಿಂಗಾತ್ಮಕಶಬ್ದಗಳನ್ನಷ್ಟೇ ಈ ಅಧಿಕರಣದಲ್ಲಿ ಸಮನ್ವಯ ಮಾಡಬೇಕು. ಹೀಗಿರುವಾಗ ನಾಮಾತ್ಮಕವೂ ಮತ್ತು ಉಭಯತ್ರಪ್ರಸಿದ್ಧವೂ ಆಗಿರುವಂತಹ 'ವೈಶ್ವಾನರ' ಎಂಬ ಶಬ್ದವನ್ನು ಸಮನ್ವಯ ಮಾಡುವುದು ಅಸಂಗತವಲ್ಲವೇ?

**तथाऽप्यन्यत्रप्रसिद्धपाचकत्वादिबहुलिङ्गसमन्वयस्याप्यत्रोक्तेर्बह्वनुग्रहस्य च न्याय्यत्वात् प्रथमातिक्रमे कारणाभावाच्च पादसङ्गतिरित्येके ।**

ಈ ಪ್ರಶ್ನೆಗೆ ಉತ್ತರ ಹೀಗಿದೆ - ಅನ್ಯತ್ರಪ್ರಸಿದ್ಧವಾದ ಪಾಚಕತ್ವವೇ ಮೊದಲಾದ ಅನೇಕ ಲಿಂಗಗಳ ಸಮನ್ವಯವೂ ಸಹ ಈ ಅಧಿಕರಣದಲ್ಲಿ ಮಾಡುತ್ತಿದ್ದಾರೆ. ಮತ್ತು ಉಭಯತ್ರಪ್ರಸಿದ್ಧವಾದ ನಾಮಾತ್ಮಕಶಬ್ದಗಳ ಸಮನ್ವಯವನ್ನೂ ಸಹ ಮಾಡುತ್ತಿದ್ದಾರೆ. ಒಂದು ನಾಮಾತ್ಮಕಶಬ್ದದ ಸಮನ್ವಯವು ಅನೇಕೈತಾದೃಶ ಶಬ್ದಸಮನ್ವಯಕ್ಕೆ ಅನುಗ್ರಾಹಕವಾದ್ದರಿಂದ ಈ ಪಾದದಲ್ಲಿ ಇದರ ಸಮನ್ವಯ ಸಂಗತ

ಎಂದು ಒಂದು ಕಾರಣ. ಮತ್ತೊಂದು ಕಾರಣ - ಇಲ್ಲಿ ನಾಮಾತ್ಮಕವಾದ ಉಭಯತ್ರಪ್ರಸಿದ್ಧಶಬ್ದದ ಸಮನ್ವಯವನ್ನು ಮಾಡುತ್ತಿರುವುದರಿಂದ ಈ ಅಧಿಕರಣ ತೃತೀಯಪಾದದಲ್ಲಿ ಸೇರಬೇಕೋ? ಅಥವಾ ಲಿಂಗಾತ್ಮಕಶಬ್ದದ ಸಮನ್ವಯವನ್ನು ಮಾಡುತ್ತಿರುವುದರಿಂದ ಎರಡನೆಯ ಪಾದದಲ್ಲಿ ಸೇರಬೇಕೋ? ಎಂಬ ಪ್ರಶ್ನೆಯು ಪ್ರಾಪ್ತವಾದಾಗ 'ಪ್ರಥಮಾತಿಕ್ರಮೇ ಕಾರಣಾಭಾವಾತ್' 'ಮೊದಲು ಪ್ರಸಕ್ತವಾದದ್ದನ್ನು ಬಿಡಲು ಕಾರಣವಿಲ್ಲ' ಎಂಬ ನ್ಯಾಯವನ್ನು ಅನುಸರಿಸಿ ಉತ್ತರಿಸಬೇಕು. ಅಂದರೆ ಎರಡನೆಯ ಪಾದ ಹಾಗೂ ಮೂರನೆಯ ಪಾದ ಎರಡರಲ್ಲೂ ಸಂಬಂಧವಿದ್ದರೂ ಸಹ ಮೊದಲು ಪ್ರಸಕ್ತವಾದ ಎರಡನೆಯ ಲಿಂಗಪಾದದಲ್ಲಿ ಇದನ್ನು ನಿವೇಶಮಾಡದೇ ಇರುವುದಕ್ಕೆ ಕಾರಣವಿರುವುದಿಲ್ಲ. ಆದ್ದರಿಂದಲೇ ಎರಡನೆಯ ಪಾದದಲ್ಲಿ ಸೇರಿಸಿದ್ದಾರೆ.

**इतरे तु – अन्यत्रप्रसिद्धलिङ्गांशेन द्वितीयपादसम्बन्धात्, उभयत्रप्रसिद्धनामांशेन च तृतीयपादसम्बन्धादुभयानुग्रहाय पादद्वयमध्येऽस्य निवेश इत्याहुः ।**

ಮತ್ತೆ ಕೆಲವರ ಸಮಾಧಾನ ಹೀಗಿದೆ - ಅನ್ಯತ್ರಪ್ರಸಿದ್ಧವಾದ ಲಿಂಗವನ್ನು ಸಮನ್ವಯ ಮಾಡುತ್ತಿರುವುದರಿಂದ ಈ ಅಧಿಕರಣಕ್ಕೆ ಎರಡನೆಯ ಪಾದದಿಂದಲೂ ಸಂಗತಿಯಿರುತ್ತದೆ. ಉಭಯತ್ರಪ್ರಸಿದ್ಧವಾದ ನಾಮಾತ್ಮಕಶಬ್ದದ ಸಮನ್ವಯವೂ ಇರುವುದರಿಂದ ಮೂರನೆಯ ಪಾದದಿಂದಲೂ ಸಂಗತವಾಗುತ್ತದೆ. ಹೀಗಿರುವಾಗ ಯಾವ ಪಾದದಲ್ಲಿ ಸೇರಿಸಬೇಕೆಂಬ ಗೊಂದಲವನ್ನು ಪರಿಹರಿಸುವುದಕ್ಕಾಗಿ ಸೂತ್ರಕಾರರು ಎರಡು ಪಾದಗಳ ಮಧ್ಯದಲ್ಲಿ ಈ ಅಧಿಕರಣವನ್ನು ನಿವೇಶ ಮಾಡಿದ್ದಾರೆ.

**तन्न, "अन्यत्रप्रसिद्धवैश्वानरनाम्नः" इति टीकाविरोधात् । सूत्रोपात्तवैश्वानर-शब्दस्यैवान्यत्रप्रसिद्धिसम्भवे उक्तकल्पनाद्वयायोगाच्च ।**

ಇವರಿಬ್ಬರ ಅಭಿಪ್ರಾಯವು ಕೇವಲ ಆಪಾತರಮಣೀಯವಾಗಿದೆ. ಏಕೆಂದರೆ "ಅನ್ಯತ್ರಪ್ರಸಿದ್ಧ-ವೈಶ್ವಾನರನಾಮ್ನಃ" ಅನ್ಯತ್ರಪ್ರಸಿದ್ಧವಾದ ವೈಶ್ವಾನರ ಎಂಬ ನಾಮಾತ್ಮಕಶಬ್ದದ ಸಮನ್ವಯವೆಂದು ಟೀಕೆಯಲ್ಲಿ ಹೇಳಿರುವಾಗ ಉಭಯತ್ರಪ್ರಸಿದ್ಧವಾದ ನಾಮಾತ್ಮಕಶಬ್ದ ಸಮನ್ವಯವೆಂಬ ಅಭಿಪ್ರಾಯವು ಟೀಕಾ ವಿರುದ್ಧವಾದ್ದರಿಂದ ಅಸಾಧುವಾಗುತ್ತದೆ. ಮತ್ತು ಸೂತ್ರದಲ್ಲಿ 'ವೈಶ್ವಾನರ' ಎಂಬ ಶಬ್ದದ ಉಲ್ಲೇಖದಿಂದಲೇ ಅನ್ಯತ್ರಪ್ರಸಿದ್ಧವಾಗಿದೆಯೆಂದು ತಿಳಿಯುತ್ತಿರುವಾಗ ಎರಡು ಬಗೆಯ ಕಲ್ಪನೆಗಳು ಅಯುಕ್ತವಾಗುತ್ತವೆ.

**तस्मादित्थं पादसङ्गतिः– वैश्वानरशब्दस्य श्रुत्यन्तरेऽग्नौ प्रयोगाद्वा, विषयवाक्येऽग्निशब्दसामानाधिकरण्याद्वाऽन्यत्रप्रसिद्धता नाभिप्रेता,**

ಆದ್ದರಿಂದ ವೈಶ್ವಾನರಾಧಿಕರಣಕ್ಕೆ ಪಾದಾಂತರ್ಭಾವಸಂಗತಿಯನ್ನು ಹೀಗೆ ಹೇಳಬೇಕು - ಒಂದು ವೇಳೆ ವೈಶ್ವಾನರ ಶಬ್ದಕ್ಕೆ ನ್ಯಾಯತೌಲ್ಯದಿಂದ ಅಥವಾ ಪ್ರಮಾಣತೌಲ್ಯದಿಂದ ಅನ್ಯತ್ರಪ್ರಸಿದ್ಧಿಯನ್ನು ಹೇಳಿದ್ದರೆ ಉಭಯತ್ರಪ್ರಸಿದ್ಧಿಯನ್ನು ಹೇಳಬಹುದಿತ್ತು. ಆದರೆ ಶ್ರುತ್ಯಂತರದಲ್ಲಿ ಅಗ್ನಿಯಲ್ಲಿ ವೈಶ್ವಾನರಶಬ್ದದ ಪ್ರಯೋಗವಿದೆಯೆಂದಾಗಲೀ, ಅಥವಾ ವಿಷಯವಾಕ್ಯದಲ್ಲಿ ಅಗ್ನಿಶಬ್ದದ ಸಾಮಾನಾಧಿಕರಣ್ಯವಿದೆಯೆಂದಾಗಲೀ ಅನ್ಯತ್ರಪ್ರಸಿದ್ಧಿಯನ್ನು ಹೇಳಿರುವುದಿಲ್ಲ.

**येन ''स्थूलभुग्वैश्वानरः प्रथमः पादः'' इति श्रुत्यन्तरे विष्णावपि प्रयोगाद्वा, ''आत्मानं वैश्वानरम्'' इति विषयवाक्ये ''गौणश्चेन्नात्मशब्दात्'' इत्यत्र विष्णव-साधारणतयोक्तात्मशब्दसामानाधिकरण्याद्वोभयत्रप्रसिद्धता स्यात् । किन्तु लोकतः ।**

ಒಂದು ವೇಳೆ ಹಾಗೇ ಹೇಳಿದ್ದರೆ 'ಸ್ಥೂಲಭುಗ್ವೈಶ್ವಾನರಃ ಪ್ರಥಮಃ ಪಾದಃ' ಎಂಬುದಾಗಿ ವಿಷ್ಣುವಿನಲ್ಲಿಯೂ ಶ್ರುತ್ಯಂತರದಲ್ಲಿ ವೈಶ್ವಾನರಶಬ್ದದ ಪ್ರಯೋಗವಿರುವುದರಿಂದ ಪ್ರಮಾಣತೌಲ್ಯ ಪ್ರಯುಕ್ತವಾಗಿ ಉಭಯತ್ರಪ್ರಸಿದ್ಧಿಯನ್ನು ಹೇಳಬಹುದಿತ್ತು. ಅಥವಾ ''ಆತ್ಮಾನಂ ವೈಶ್ವಾನರಮ್'' ಎಂಬುದಾಗಿ ವಿಷಯವಾಕ್ಯದಲ್ಲಿ ''ಗೌಣಶ್ಚೇನ್ನಾತ್ಮಶಬ್ದಾತ್'' ಎಂಬ ಸೂತ್ರದಲ್ಲಿ ವಿಷ್ಣುವಿನಲ್ಲಿ ಅಸಾಧಾರಣವಾಗಿ ಪ್ರಯುಕ್ತವಾದ ಆತ್ಮಶಬ್ದದ ಸಾಮಾನಾಧಿಕರಣ್ಯದಿಂದ ಅಂದರೆ ನ್ಯಾಯಸಾಮ್ಯದಿಂದ ಉಭಯತ್ರಪ್ರಸಿದ್ಧಿಯನ್ನು ವೈಶ್ವಾನರಶಬ್ದಕ್ಕೆ ಹೇಳಬಹುದಿತ್ತು. ಆದರೆ ಹಾಗೆ ನಾವು ಹೇಳಿರುವುದಿಲ್ಲ. (ನ್ಯಾಯತೌಲ್ಯದಿಂದ ಅಥವಾ ಪ್ರಮಾಣತೌಲ್ಯದಿಂದ ಅನ್ಯತ್ರಪ್ರಸಿದ್ಧಿಯನ್ನು ಹೇಳಿದರೆ ಮಾತ್ರ ಉಭಯತ್ರಪ್ರಸಿದ್ಧವಾದ ಶಬ್ದಗಳ ಗುಂಪಿನಲ್ಲಿ ಸೇರಿಸಲು ಸಾಧ್ಯವೆಂಬುದನ್ನು ಗಮನಿಸಬೇಕು.) ಮತ್ತೇನೆಂದರೆ ಪ್ರಕೃತ ವೈಶ್ವಾನರ ಶಬ್ದವನ್ನು ಅಗ್ನಿಯಲ್ಲಿ ಲೋಕರೂಢಿಯಿಂದಷ್ಟೇ ಪ್ರಸಿದ್ಧವಾಗಿದೆಯೆಂದು ಹೇಳಲಾಗಿದೆ. ಆದ್ದರಿಂದ ಉಭಯತ್ರಪ್ರಸಿದ್ಧಶಬ್ದಗಳ ಗುಂಪಿನಲ್ಲಿ ಇದು ಸೇರುವುದಿಲ್ಲ.

**अत एव टीकायां ''लोकतोऽन्यत्रप्रसिद्ध'' इत्युक्तम् । सूत्रोक्तं साधारण्यं तु अन्यत्रप्रसिद्धेर्विष्णुलिङ्गानां च निरवकाशत्वेन तुल्यबलतया, नतु वैश्वानर-शब्दस्योभयत्रप्रसिद्धतेत्यन्यत्रप्रसिद्ध्यविघातेनैव टीकायां दर्शितम् ।**

ಆದ್ದರಿಂದಲೇ ಟೀಕೆಯಲ್ಲಿ ''ಲೋಕತಃ ಅನ್ಯತ್ರಪ್ರಸಿದ್ಧ'' ಎಂದು ಹೇಳಿರುತ್ತಾರೆ. ಹಾಗಾದರೆ ಸೂತ್ರಕಾರರು ಉಭಯಸಾಧಾರಣ ಎಂಬರ್ಥದಲ್ಲಿ ಸಾಧಾರಣ ಎಂಬ ಶಬ್ದವನ್ನು ಏಕೆ ಪ್ರಯೋಗಿಸಿದರು ? ಎಂದರೆ ವೈಶ್ವಾನರಶಬ್ದವು ಅಗ್ನಿಯಲ್ಲಿ ಲೋಕರೂಢಿಯಿಂದ ಪ್ರಸಿದ್ಧವಾದ್ದರಿಂದ ರೂಢಿಪ್ರಯುಕ್ತವಾಗಿ ಬಲಿಷ್ಠವಾಗಿದೆ. ವಿಷ್ಣುಲಿಂಗಗಳು ನಿರವಕಾಶಪ್ರಯುಕ್ತವಾಗಿ ಬಲಿಷ್ಠವಾಗಿವೆ. ಹೀಗೆ ಒಂದೊಂದು ಮುಖದಲ್ಲಿ ಎರಡೂ ಕಡೆಯೂ ವೈಶ್ವಾನರಶಬ್ದವು ಸಮಾನಬಲವನ್ನು ಹೊಂದಿರುವ

ಪ್ರಯುಕ್ತ ಸೂತ್ರಕಾರರು ಉಭಯಸಾಧಾರಣವಾಗಿದೆಯೆಂದು ಹೇಳಿರುತ್ತಾರೆ; ಹೊರತು, ವೈಶ್ವಾನರಶಬ್ದವು ಉಭಯತ್ರಪ್ರಸಿದ್ಧವಾಗಿದೆಯೆಂಬ ದೃಷ್ಟಿಯಿಂದ ಸಾಧಾರಣಶಬ್ದವನ್ನು ಪ್ರಯೋಗಿಸಿಲ್ಲ. ಹೀಗೆ ಅನ್ಯತ್ರಪ್ರಸಿದ್ಧವಾಗಲು ತೋಂದರೆ ಬಾರದಂತೆ ಟೀಕೆಯಲ್ಲಿ ಸಾಧಾರಣಶಬ್ದವನ್ನು ವ್ಯಾಖ್ಯಾನಿಸಿರುತ್ತಾರೆ.

**अत्रानुव्याख्याने "श्रुतिर्लिङ्गाऽधिका परा" इति वैश्वानरशब्दस्य नामत्वोक्तेर्लोकेऽग्नौ रूढत्वाच्च टीकायां नामतोक्ता । "विश्वजीवान्तरत्वाद्यैर्लिङ्गैः" इति सङ्क्षेपभाष्यकारीया लिङ्गत्वोक्तिस्तु सिद्धान्ते ब्रह्मणि यौगिकत्वाभिप्राया ।**

ಈ ಅಧಿಕರಣದ ಅನುವ್ಯಾಖ್ಯಾನದಲ್ಲಿ 'ಶ್ರುತಿರ್ಲಿಂಗಾಽಧಿಕಾ ಪರಾ' ಎಂಬುದಾಗಿ ಅನೇಕ ಲಿಂಗಗಳ ಸಮನ್ವಯದ ಉದ್ದೇಶದಿಂದ ಮತ್ತೊಂದು ನಾಮಾತ್ಮಕಶಬ್ದದ ಸಮನ್ವಯವನ್ನು ಈ ಅಧಿಕರಣದಲ್ಲಿ ಮಾಡುತ್ತಿದ್ದಾರೆಂದು ವೈಶ್ವಾನರಶಬ್ದಕ್ಕೆ ನಾಮಾತ್ಮಕತ್ವವನ್ನು ಹೇಳಿರುತ್ತಾರೆ. ಆದರೆ ಅಣುಭಾಷ್ಯದಲ್ಲಿ "ವಿಶ್ವಜೀವಾಂತರತ್ವಾದ್ಯೈರ್ಲಿಂಗೈಃ" ವಿಶ್ವಜೀವಾಂತರತ್ವವೇ ಮೊದಲಾದ ಅನೇಕ ಲಿಂಗಗಳ ಸಮನ್ವಯವನ್ನು ಇಲ್ಲಿ ಮಾಡುತ್ತಿದ್ದಾರೆಂದು ಹೇಳಿದ್ದಾರೆ. ಹಾಗಾಗಿ ಎರಡೂ ಗ್ರಂಥಗಳಿಗೆ ಪರಸ್ಪರ ವಿರೋಧಬರುತ್ತದಲ್ಲವೇ? ಎಂಬ ಪ್ರಶ್ನೆ ಸಹಜವಾಗಿ ಬರುತ್ತದೆ. ಆದರೆ ಲೋಕರೂಢಿಯಿಂದ ವೈಶ್ವಾನರಶಬ್ದವು ಅಗ್ನಿಯಲ್ಲಿ ಪ್ರಸಿದ್ಧವಾಗಿದೆಯೆಂಬುದನ್ನು ವಿವಕ್ಷಿಸಿ ಟೀಕೆಯಲ್ಲಿ ನಾಮಾತ್ಮಕತ್ವವನ್ನು ಹೇಳಿದ್ದಾರೆ. ಇನ್ನು ಅಣುಭಾಷ್ಯದಲ್ಲಿ ಲಿಂಗಾತ್ಮಕವೆಂದು ಹೇಳಿದ್ದೇಕೆಂದರೆ ಸಿದ್ಧಾಂತ ಮಾಡುವಾಗ ಬ್ರಹ್ಮನಲ್ಲಿ ವೈಶ್ವಾನರಶಬ್ದವು ಯೌಗಿಕವಾಗಿದೆಯೆಂಬ ಅಭಿಪ್ರಾಯದಿಂದ. ಆದ್ದರಿಂದ ಪರಸ್ಪರ ವಿರೋಧಕ್ಕೆ ಅವಕಾಶವಿಲ್ಲ.

**अनन्तरसङ्गतिस्तु, गतधिकरणोक्तसर्वगतत्वाक्षेपेण पूर्वपक्षोत्थानादिति भाष्य एवोक्ता ।**

ಈ ಅಧಿಕರಣಕ್ಕೆ ಅನಂತರಸಂಗತಿಯನ್ನು ಹೀಗೆ ತಿಳಿಯಬೇಕು. ಹಿಂದಿನ ಅಧಿಕರಣದಲ್ಲಿ ಹೇಳಲ್ಪಟ್ಟ ಸರ್ವಗತತ್ವವನ್ನು ಆಕ್ಷೇಪಿಸಿ ಪೂರ್ವಪಕ್ಷಮಾಡುತ್ತಿರುವುದರಿಂದ ಅನಂತರ-ಸಂಗತಿಯಿರುತ್ತದೆಂದು ಭಾಷ್ಯದಲ್ಲಿಯೇ ಹೇಳಿರುತ್ತಾರೆ.

# ಶ್ರೀರಾಘವೇಂದ್ರತೀರ್ಥವಿರಚಿತ
# ಪ್ರಕಾಶ

**प्रकाश** –

**ॐ वैश्वानरः साधारणशब्दविशेषात् ॐ** ।। अत्र टीकायां "लोकतोऽन्यत्रप्रसिद्ध-वैश्वानरनाम्नः पाचकत्वाद्यनेकलिङ्गसमन्वयसिद्धये" इत्यादिना अस्य नयस्य अत्र पादे अन्तर्भाव उक्तः ।

ವಿವರಣೆ - 'ಓಂ ವೈಶ್ವಾನರಃ ಸಾಧಾರಣಶಬ್ದವಿಶೇಷಾತ್ ಓಂ' ವೈಶ್ವಾನರಾಧಿಕರಣಕ್ಕೆ ಟೀಕೆಯಲ್ಲಿ ಸಂಗತಿಯನ್ನು ಹೀಗೆ ಹೇಳಿದ್ದಾರೆ - 'ಲೋಕತಃ ಅನ್ಯತ್ರಪ್ರಸಿದ್ಧ ವೈಶ್ವಾನರನಾಮ್ನಃ ಪಾಚಕತ್ವಾದ್ಯನೇಕ-ಲಿಂಗಸಮನ್ವಯಸಿದ್ಧಯೇ'' 'ವೈಶ್ವಾನರ' ಶಬ್ದವು ಲೋಕತಃ ಅನ್ಯತ್ರಪ್ರಸಿದ್ಧವಾದ ನಾಮಾತ್ಮಕ ಶಬ್ದವಾಗಿದೆ. ಇದರ ಸಮನ್ವಯ ಹಾಗೂ ಪಾಚಕತ್ವವೇ ಮೊದಲಾದ ಅನೇಕ ಲಿಂಗಗಳ ಸಮನ್ವಯದ ಸಿದ್ಧಿಗೋಸ್ಕರ ಈ ಅಧಿಕರಣ ಹೊರಟಿರುವುದರಿಂದ ಲಿಂಗಪಾದದಲ್ಲಿ ಇದು ಅಂತರ್ಭಾವಸಂಗತಿಯನ್ನು ಹೊಂದುತ್ತದೆಂದು ಹೇಳಿದ್ದಾರೆ.

**प्रकाशः** – स च सुधायां – "आद्याधिकरणस्य नात्रान्तर्भावः सम्भवति, नामात्मकशब्दसमन्वयार्थत्वात् । नापि पूर्वत्र, लिङ्गसमन्वयस्याप्यत्र सिद्धत्वात् । न चोभयबहिर्भावः, अन्यत्रप्रसिद्धशब्दविषयत्वात् । न चावक्तव्यता, समन्वयासिद्धि-प्रसङ्गात् । तत्कथमित्यतः – "लिङ्गाधिका" इत्यत्र अन्तर्भावः समर्थितः । यद्वा – पादद्वयार्थत्वेन एकत्र प्रवेशानुपपत्तेः; पादद्वयशेषोऽयम्" इत्यादिना ग्रन्थेन विवृतः ।

ನ್ಯಾಯಸುಧೆಯಲ್ಲಿ ಸಂಗತಿಯನ್ನು ಹೀಗೆ ಹೇಳಿದ್ದಾರೆ - "ಆದ್ಯಾಧಿಕರಣಸ್ಯ ನಾತ್ರಾಂತರ್ಭಾವಃ ಸಂಭವತಿ, ನಾಮಾತ್ಮಕಶಬ್ದಸಮನ್ವಯಾರ್ಥತ್ವಾತ್ । ನಾಪಿ ಪೂರ್ವತ್ರ, ಲಿಂಗಸಮನ್ವಯಸ್ಯಾಪ್ಯತ್ರ ಸಿದ್ಧತ್ವಾತ್ । ನ ಚೋಭಯಬಹಿರ್ಭಾವಃ, ಅನ್ಯತ್ರಪ್ರಸಿದ್ಧಶಬ್ದವಿಷಯತ್ವಾತ್ । ನ ಚಾವಕ್ತವ್ಯತಾ, ಸಮನ್ವಯಾಸಿದ್ಧಿಪ್ರಸಂಗಾತ್ । ತತ್ಕಥಮಿತ್ಯತಃ ಲಿಂಗಾಧಿಕಾ'' ಇತ್ಯತ್ರ ಅಂತರ್ಭಾವಃ ಸಮರ್ಥಿತಃ । ಯದ್ವಾ - ಪಾದದ್ವಯಾರ್ಥತ್ವೇನ ಏಕತ್ರ ಪ್ರವೇಶಾನುಪಪತ್ತೇಃ; ಪಾದದ್ವಯಶೇಷೋಽಯಮ್'' ವಸ್ತುತಃ ವೈಶ್ವಾನರಾಧಿಕರಣಕ್ಕೆ ಲಿಂಗಪಾದದಲ್ಲಿ ಅಂತರ್ಭಾವಸಂಗತಿಯು ಯುಕ್ತವಾಗುವುದಿಲ್ಲ. ಏಕೆಂದರೆ ನಾಮಾತ್ಮಕಶಬ್ದದ ಸಮನ್ವಯಕ್ಕೋಸ್ಕರ ಈ ಅಧಿಕರಣವು ಹೊರಟಿರುತ್ತದೆ. ಹಿಂದಿನ ಪಾದದಲ್ಲಿಯೂ ಸಂಗತವಾಗುವುದಿಲ್ಲ. ಲಿಂಗಸಮನ್ವಯವನ್ನೂ ಸಹ ಇಲ್ಲಿ ಮಾಡುತ್ತಿರುವುದರಿಂದ. ಮತ್ತು ಎರಡೂ

ಪಾದದಲ್ಲಿಯೂ ಸಂಗತವಾಗುವುದಿಲ್ಲವೆಂದೂ ಸಹ ಹೇಳಲಾಗದು. ಅನ್ಯತ್ರಪ್ರಸಿದ್ಧವಾದ ಶಬ್ದವನ್ನು ಸಮನ್ವಯ ಮಾಡುತ್ತಿದೆ. ಇನ್ನು ಈ ಅಧಿಕರಣವನ್ನು ಆರಂಭಮಾಡುವುದೇ ಬೇಡವೆಂದು ಹೇಳಲಾಗದು. ಹಾಗಾದರೆ ವೈಶ್ವಾನರ ಮೊದಲಾದ ಶಬ್ದಗಳ ಸಮನ್ವಯವು ಸಿದ್ಧವಾಗದೇ ಇರಬೇಕಾದೀತು. ಹೀಗಿರುವಾಗ ಈ ಅಧಿಕರಣಕ್ಕೆ ಹೇಗೆ ಸಂಗತಿಯು ಬರುತ್ತದೆ ಎಂಬ ಪ್ರಶ್ನೆಗೆ ಶ್ರೀಮದಾಚಾರ್ಯರು 'ಲಿಂಗಾಧಿಕಾ' ಎಂಬ ಪದದಿಂದ ಲಿಂಗ ಪಾದದಲ್ಲಿ ಅಂತರ್ಭಾವಸಂಗತಿಯನ್ನು ಸಮರ್ಥಿಸಿದ್ದಾರೆ. ಅಂದರೆ ಅನೇಕ ಲಿಂಗಗಳ ಸಮನ್ವಯವು ಉದ್ದೇಶವಾಗಿರುವುದರದಿಂದ ಅಸಂಗತವಲ್ಲ. ಅಥವಾ ನಾಮಪಾದದ ಹಾಗೂ ಲಿಂಗಪಾದದ ಅರ್ಥವನ್ನು ಸಮರ್ಥಿಸುತ್ತಿರುವುದರಿಂದ ಒಂದು ಪಾದದಲ್ಲಿ ಸಂಗತಿಯನ್ನು ತೋರಿಸುವ ಮೂಲಕ ಅಂತರ್ಭಾವವನ್ನು ಮಾಡಲಾಗದು. ಆ ಕಾರಣದಿಂದಲೇ ಎರಡೂ ಪಾದಗಳ ಕೊನೆಯಲ್ಲಿ ನಿವೇಶ ಮಾಡಿ ಪಾದದ್ವಯಗಳಿಗೆ ಶೇಷಭೂತವಾಗಿ ಉಲ್ಲೇಖಿಸಿದ್ದಾರೆ. ಹೀಗೆ ನ್ಯಾಯಸುಧಾಗ್ರಂಥದಲ್ಲಿ ಎರಡು ಬಗೆಯ ಸಂಗತಿಗಳನ್ನು ವಿವರಿಸಿದ್ದಾರೆ.

**प्रकाशः –** तत्र ''लोकतोऽन्यत्रप्रसिद्ध'' इत्यंशस्य सूत्रविरोधाशङ्कां समाधातुमाह – **अत्र यद्यपीति** । उत्तानदृशां समाधिद्वयमनूद्य निराह – **तथाऽपीति** । नाम्न उभयत्रप्रसिद्धत्वेऽपीत्यर्थः ।

ಈ ಸಂದರ್ಭದಲ್ಲಿ ವೈಶ್ವಾನರ ಶಬ್ದವು ಲೋಕತಃ ಅನ್ಯತ್ರಪ್ರಸಿದ್ಧವಾಗಿದೆಯೆಂದು ಟೀಕೆಯಲ್ಲಿ ಹೇಳಿದ್ದಾರೆ. ಇದು ಸೂತ್ರಕ್ಕೆ ವಿರುದ್ಧವಾಗಿದೆಯೆಂಬ ಆಶಂಕೆಯನ್ನು ಸಮಾಧಾನ ಮಾಡುವುದಕ್ಕಾಗಿ 'ಅತ್ರ ಯದ್ಯಪಿ' ಎಂಬ ಗ್ರಂಥವು ಹೊರಟಿದೆ. ಮೇಲ್ನೋಟದ ಅರ್ಥವನ್ನು ಮಾತ್ರ ತಿಳಿಯುವ ಇಬ್ಬರೂ ವಿದ್ವಾಂಸರ ಅಭಿಪ್ರಾಯವನ್ನು ಅನುವಾದ ಮಾಡಿ ನಿರಾಕರಿಸುತ್ತಿದ್ದಾರೆ 'ತಥಾಽಪಿ' ಇತ್ಯಾದಿ ವಾಕ್ಯದಿಂದ. ಅಂದರೆ 'ವೈಶ್ವಾನರ' ಎಂಬ ನಾಮಾತ್ಮಕ ಶಬ್ದವು ಉಭಯತ್ರಪ್ರಸಿದ್ಧವಾಗಿದ್ದರೂ ಸಹ ಎಂದರ್ಥ.

**प्रकाशः – प्रथमेति** । नामांशेन तृतीये, लिङ्गांशेन लिङ्गपादे अन्तर्भावप्राप्तौ प्रथमस्य लिङ्गपादान्तर्भावस्य अतिक्रमे कारणाभावाच्चेत्यर्थः । 'सम्भवे' इत्युक्तसम्भवप्रकारमाह – **तस्मादिति** । 'सङ्गतिः' अन्तर्भावरूपा ।

ಗ್ರಂಥದಲ್ಲಿ 'ಪ್ರಥಮಾತಿಕ್ರಮಣೇ ಕಾರಣಾಭಾವಾತ್' ಎಂಬ ನ್ಯಾಯವನ್ನು ಹೇಳಿದ್ದಾರೆ. ಇದರ ಅಭಿಪ್ರಾಯ ಹೀಗಿದೆ - ವೈಶ್ವಾನರ ಶಬ್ದವು ನಾಮಾತ್ಮಕವಾಗಿರುವ ಕಾರಣ ಮೂರನೆಯ ಪಾದದಲ್ಲಿ ಸೇರಬೇಕೋ? ಅಥವಾ ಅನೇಕ ಲಿಂಗಗಳನ್ನು ಸಮನ್ವಯಮಾಡುತ್ತಿರುವುದರಿಂದ ಲಿಂಗಪಾದದಲ್ಲಿ ಸೇರಬೇಕೋ? ಎಂಬ ಗೊಂದಲವುಂಟಾದಾಗ 'ಪ್ರಥಮಾತಿಕ್ರಮಣೇ ಕಾರಣಾಭಾವಾತ್' ಪ್ರಥಮಪ್ರಾಪ್ತವಾದ ಲಿಂಗಪಾದದಲ್ಲಿ ಅಂತರ್ಭಾವ ಹೊಂದದೇ ಇರಲು ಕಾರಣವಿಲ್ಲ ಎಂದರ್ಥ. 'ಸಂಭವೇ' ಎಂದು ಹೇಳಲ್ಪಟ್ಟ ಸಂಭವ ಪ್ರಕಾರವನ್ನೇ 'ತಸ್ಮಾತ್' ಎಂಬ ಗ್ರಂಥದಿಂದ ಪ್ರತಿಪಾದಿಸುತ್ತಿದ್ದಾರೆ. 'ಸಂಗತಿಃ' ಎಂದರೆ ಅಂತರ್ಭಾವರೂಪವಾದ ಸಂಗತಿಯೆಂದರ್ಥ.

ವೈಶ್ವಾನರಾಧಿಕರಣ (೧-೨-೭)

**प्रकाशः** – यदि "आकाशोऽर्थान्तर" इत्यादाविव "वैश्वानरमृत आजातमग्निम्" इत्यन्यत्र प्रयोगेण वा, सर्वगतत्वादेरदित्यादिशब्दसामानाधिकरण्येन वा, श्रुत्यन्तरसामानाधिकरण्येन वा अन्यत्रप्रसिद्धता स्यात्, तदा "स्थूलभुग्वैश्वानरः" इत्यादौ प्रयोगादितौल्यस्य विष्णावपि सत्त्वेन "श्रुत्यन्तरादिभिः तुल्या" इत्युक्त-लक्षणसत्त्वेनोभयत्रप्रसिद्धता स्यात् । नचैवं, किन्तु लोकप्रयोगात् । सच विष्णौ नेति नोभयत्रप्रसिद्धतेत्यर्थः ।

ಒಂದು ವೇಳೆ ವೈಶ್ವಾನರ ಶಬ್ದವು ಪ್ರಯೋಗತೌಲ್ಯವನ್ನು ಅಥವಾ ಶಬ್ದಸಾಮಾನಾಧಿಕರಣ್ಯವನ್ನು ಹೊಂದಿದ್ದರೆ ಉಭಯತ್ರಪ್ರಸಿದ್ಧವಾಗುತ್ತಿತ್ತು. 'ಆಕಾಶೋಽರ್ಥಾಂತರವ್ಯಪದೇಶಾಚ್ಚ' ಇತ್ಯಾದಿ ಸೂತ್ರಗಳಲ್ಲಿ ಹೇಳಿದಂತೆ 'ವೈಶ್ವಾನರಮೃತ ಆಜಾತಮಗಿಮ್' ಎಂಬಲ್ಲಿಯೂ ಸಹ ವೈಶ್ವಾನರಶಬ್ದವು ಅಗ್ನಿಯಲ್ಲಿ ಪ್ರಯೋಗವನ್ನು ಹೊಂದಿದ್ದರೆ; ಅಥವಾ ಸರ್ವಗತತ್ವಾದಿಲಿಂಗಗಳು ಅದಿತಿ ಮುಂತಾದ ಶಬ್ದದ ಸಾಮಾನಾಧಿಕರಣ್ಯವನ್ನು ಹೊಂದಿ ಅನ್ಯತ್ರಪ್ರಸಿದ್ಧವಾದಂತೆ ಆಗಿದ್ದರೆ ವೈಶ್ವಾನರಶಬ್ದಕ್ಕೆ ಶ್ರುತ್ಯಂತರ-ಸಾಮಾನಾಧಿಕರಣ್ಯವಿದ್ದಿದ್ದರೆ. ಅಂದರೆ ಪ್ರಯೋಗ, ಶಬ್ದಸಮಾನಾಧಿಕರಣ್ಯ, ಶ್ರುತ್ಯಂತರ ಸಾಮಾನಾಧಿಕರಣ್ಯ ಇವುಗಳ ಮುಖೇನ ಅನ್ಯತ್ರಪ್ರಸಿದ್ಧವಾಗಿದ್ದರೆ, ಆವಾಗ "ಸ್ಥೂಲಭುಗ್ವೈಶಾನರಃ' ಇತ್ಯಾದಿ ವಾಕ್ಯಗಳಿಂದ ವಿಷ್ಣುವಿನಲ್ಲಿ ಪ್ರಯೋಗವು ಸಮಾನವಾಗಿರುವ ಕಾರಣ 'ಶ್ರುತ್ಯಂತರಾದಿಭಿಃ ತುಲ್ಯಾ' ಎಂಬ ಉಭಯಪ್ರಸಿದ್ಧದ ಲಕ್ಷಣವು ಬರುವುದರಿಂದ ಉಭಯತ್ರಪ್ರಸಿದ್ಧ ಎಂದಾಗುತ್ತಿತ್ತು. ಆದರೆ ಹಾಗಿಲ್ಲ. ಲೋಕಪ್ರಯೋಗದಿಂದಷ್ಟೇ ವೈಶ್ವಾನರಶಬ್ದವು ಅಗ್ನಿಯಲ್ಲಿ ಪ್ರಸಿದ್ಧವಾಗಿದೆ. ಆದರೆ ವಿಷ್ಣುವಿನಲ್ಲಿ ಲೋಕಪ್ರಯೋಗವಿರುವುದಿಲ್ಲ. ವಿಷ್ಣುವಿನಲ್ಲಿರುವ ಶ್ರುತಿಪ್ರಸಿದ್ಧಿಯು ಅಗ್ನಿಯಲ್ಲಿರುವುದಿಲ್ಲ. ಹೀಗಿರುವಾಗ ವೈಶ್ವಾನರಶಬ್ದವು ಹೇಗೆ ಉಭಯತ್ರಪ್ರಸಿದ್ಧವಾಗಲು ಸಾಧ್ಯ?

**प्रकाशः** – सौत्रोक्तेष्टीकारीत्या गतिमाह – **सूत्रोक्तमिति** । "अतः प्रसिद्धिलिङ्गयोरुभयोरपि निरवकाशत्वेन वैश्वानरश्रुतेरग्निविष्ण्वोस्साधारण्यमेव स्यात्" इति टीकायामित्यर्थः ।

ಸೂತ್ರದಲ್ಲಿ ಹೇಳಿದ ಸಾಧಾರಣಶಬ್ದಕ್ಕೆ ಏನರ್ಥ? ಎಂಬ ಆಕಾಂಕ್ಷೆಯು ಪ್ರಾಪ್ತವಾದರೆ ಟೀಕೆಯಲ್ಲಿ ಹೇಳಿದಂತೆ ಸಾಮಾಧಾನವನ್ನು ನೀಡುತ್ತಿದ್ದಾರೆ 'ಸೂತ್ರೋಕ್ತಮ್' ಇತ್ಯಾದಿ ವಾಕ್ಯದಿಂದ. ಟೀಕೆಯಲ್ಲಿ 'ಅತಃ ಪ್ರಸಿದ್ಧಿಲಿಂಗಯೋರುಭಯೋರಪಿ ನಿರವಕಾಶತ್ವೇನ ವೈಶ್ವಾನರಶ್ರುತೇರಗ್ನಾವಿಷ್ಣೋಸ್ಸಾಧಾರಣ್ಯಮೇವ ಸ್ಯಾತ್'' ಲೋಕಪ್ರಸಿದ್ಧಿ ಹಾಗೂ ಲಿಂಗ ಇವೆರಡೂ ನಿರವಕಾಶವಾಗಿರುವುದರಿಂದ ವೈಶ್ವಾನರಶ್ರುತಿಯು ಅಗ್ನಿ ಹಾಗೂ ವಿಷ್ಣು ಇಬ್ಬರಲ್ಲಿಯೂ ಸಾಧಾರಣವೇ ಆಗುತ್ತದೆ. ಹೀಗೆ ಟೀಕೆಯಲ್ಲಿ ಹೇಳಿರುತ್ತಾರೆ ಹೊರತು; ಎರಡೂ ಕಡೆ ಪ್ರಮಾಣತೌಲ್ಯವಾಗಲೀ, ನ್ಯಾಯತೌಲ್ಯವಾಗಲೀ ಇರುವುದಿಲ್ಲವೆಂದು ತಿಳಿಯಬೇಕು.

ಪರಿಪೂರ್ಣಚಂದ್ರಿಕಾ

**प्रकाशः** – या तु न्यायविवरणटीकायां रूढ्याऽन्तरधिकरणन्यायेन च विष्णौ तदितरत्र श्रुतेः साधारण्योक्तिः, सा अभ्युपेत्यवादेन नेया ।

ಇನ್ನು ನ್ಯಾಯವಿವರಣ ಟೀಕೆಯಲ್ಲಿ ಅಜ್ಞಾನಿಗಳ ರೂಢಿಯಿಂದ ಹಾಗೂ ಅಂತರಧಿಕರಣದ ನ್ಯಾಯದಿಂದ ವಿಷ್ಣುವಿನಲ್ಲಿ ಹಾಗೆ ಬೇರೆಕಡೆ ಶ್ರುತಿಯು ಉಭಯಸಾಧಾರಣವಾಗಿದೆ ಎಂದು ಹೇಳಿರುತ್ತಾರೆ. ಈ ಮಾತನ್ನು ಯಾರಾದರೂ ಉಭಯತ್ರಪ್ರಸಿದ್ಧವಾಗಿದೆಯೆಂದು ಪೂರ್ವಪಕ್ಷ ಮಾಡಿದರೆ ಅವರ ಮತವನ್ನು ಅಂಗೀಕಾರ ಮಾಡಿ ಹೇಳಿದ್ದಾರೆ ಹೊರತು, ಸಿದ್ಧಾಂತ ಪ್ರಕಾರ ಹೇಳಿರುವುದಿಲ್ಲವೆಂದು ತಿಳಿಯಬೇಕು.

**प्रकाशः** – याऽपि तत्त्वप्रदीपे "पूर्वत्रान्यत्रप्रसिद्धिमात्रप्रतिषेधात् ज्वलनजनार्दनयोः साधारणस्य वैश्वानरशब्दस्य विष्णावेव प्रवृत्तिप्रदर्शनेन उभयत्रप्रसिद्धोभयविधपदकदम्बकसमन्वयावसरसूचनमाचरति अग्नाविष्ण्वोरित्यादिना" इत्युक्तिः, साऽपि टीकानुसारात्, यद्यप्येवं साधारण्यं, तथाऽपि लोकतोऽन्त्रप्रसिद्धत्वादत्र निवेश इत्याद्यभिप्रायेण योज्येति भावः ।

ತತ್ತ್ವಪ್ರದೀಪದಲ್ಲಿ ಹೀಗೆ ಹೇಳಿದ್ದಾರೆ - "ಪೂರ್ವತ್ರಾನ್ಯತ್ರಪ್ರಸಿದ್ಧಿಮಾತ್ರಪ್ರತಿಷೇಧಾತ್ ಜ್ವಲನಜನಾರ್ದನಯೋಃ ಸಾಧಾರಣಸ್ಯ ವೈಶ್ವಾನರಶಬ್ದಸ್ಯ ವಿಷ್ಣಾವೇವ ಪ್ರವೃತ್ತಿಪ್ರದರ್ಶನೇನ ಉಭಯಪ್ರಸಿದ್ಧೋಭಯವಿಧಪದಕದಂಬಕಸಮನ್ವಯಾವಸರಸೂಚನಮಾಚರತಿಅಗ್ನಾವಿಷ್ಣ್ವೋರಿತ್ಯಾದಿನಾ" "ಮೊದಲನೆಯ ಪಾದದಲ್ಲಿ ಅನ್ಯತ್ರಪ್ರಸಿದ್ಧವಾದ ಶಬ್ದಗಳನ್ನು ಮಾತ್ರ ನಿಷೇಧ ಮಾಡಲಾಗಿದೆ. ಅಗ್ನಿ ಹಾಗೂ ಜನಾರ್ದನರಲ್ಲಿ ವೈಶ್ವಾನರ ಶಬ್ದವು ಸಾಧಾರಣವಾಗಿದೆ. ಇಂತಹ ವೈಶ್ವಾನರಶಬ್ದವನ್ನು ಕೇವಲ ವಿಷ್ಣುವಿನಲ್ಲಿ ಸಮನ್ವಯಗೊಳಿಸುವುದಕ್ಕಾಗಿ ಈ ಅಧಿಕರಣ ಹೊರಟಿದೆ. ಮುಂದಿನ ಪಾದದಲ್ಲಿ ಉಭಯತ್ರಪ್ರಸಿದ್ಧವಾದ ಶಬ್ದಗಳನ್ನು ಸಮನ್ವಯ ಮಾಡುತ್ತಾರೆ. ಅದಕ್ಕೆ ಉಪೋದ್ಘಾತರೂಪದಲ್ಲಿ ಈ ಅಧಿಕರಣದಲ್ಲಿ ಅಗ್ನಿ ಹಾಗೂ ವಿಷ್ಣು ಇಬ್ಬರಲ್ಲಿಯೂ ಸಾಧಾರಣವಾದ 'ವೈಶ್ವಾನರ' ಎಂಬ ಶಬ್ದವನ್ನು ಸಮನ್ವಯ ಮಾಡಲಾಗಿದೆಯೆಂದು 'ಅಗ್ನಾವಿಷ್ಣ್ವೋ' ಇತ್ಯಾದಿ ಭಾಷ್ಯದಿಂದ ಸಮರ್ಥಿಸುತ್ತಿದ್ದಾರೆ ಎಂದು. ತತ್ವಪ್ರದೀಪದ ಈ ವಾಕ್ಯವನ್ನೂ ಸಹ ಟೀಕೆಗೆ ಅನುಸಾರಿಯಾಗಿ ವ್ಯಾಖ್ಯಾನಿಸಬೇಕು. ಅಂದರೆ ಸಾಮಾನ್ಯತಃ ವೈಶ್ವಾನರಶಬ್ದವು ಉಭಯಸಾಧಾರಣವಾಗಿದೆ. ಆದರೂ ಲೋಕತಃ ಅನ್ಯತ್ರಪ್ರಸಿದ್ಧವಾಗಿರುವುದರಿಂದ ಲಿಂಗಪಾದದಲ್ಲಿ ಇದರ ನಿವೇಶನವು ಅತ್ಯಂತ ಸಮಂಜಸವಾಗಿದೆ.

**प्रकाशः** – टीकायां वैश्वानरशब्दस्य नामत्वोक्तेर्मूलं वदन् अणुभाष्यविरोधशङ्कां च निराह – **अत्रेति । लोकेऽग्नौ रूढत्वाचेति ।** "बहुभी रूढनाममिः" इत्यणुभाष्योक्तेः, "श्रुतेरपि प्रसिद्धितो निरवकाशत्वात्" इति टीकोक्तेः, "श्रुतेर्देवताभूतविशेषयो रूढत्वात्" इति न्यायविवरणटीकोक्तेः, "वैश्वानरशब्दस्य अविद्वद्रूढ्या अग्निविषयस्यापि" इति सन्न्यायरत्नावल्युक्तेश्चेति भावः ।

ಟೀಕೆಯಲ್ಲಿ ವೈಶ್ವಾನರಶಬ್ದವನ್ನು ನಾಮಾತ್ಮಕವೆಂದು ಹೇಳಿದ್ದಾರೆ. ಇದಕ್ಕೆ ವ್ಯಾಖ್ಯೇಯವಾದ ಮೂಲವನ್ನು ತೋರಿಸುತ್ತಾ ಅನುವ್ಯಾಖ್ಯಾನದ ವಿರೋಧಾಶಂಕೆಯನ್ನು ನಿರಾಕರಿಸುತ್ತಿದ್ದಾರೆ 'ಅತ್ರ' ಇತ್ಯಾದಿ ವಾಕ್ಯದಿಂದ. ಗ್ರಂಥದಲ್ಲಿ 'ಲೋಕೇಽಗ್ನೌ ರೂಢತ್ವಾಚ್ಚ' ಅಗ್ನಿಶಬ್ದವು ಲೋಕದಲ್ಲಿ ರೂಢವಾಗಿರುವುದರಿಂದಲೂ ಎಂದು ಹೇಳಿದ್ದಾರೆ. ಈ ವಿಚಾರವು ಅನೇಕ ಮಾತುಗಳಿಂದ ಸ್ಪಷ್ಟವಾಗುತ್ತದೆ. ಅನುವ್ಯಾಖ್ಯಾನದಲ್ಲಿ "ಬಹುಭೀ ರೂಢನಾಮಭಿಃ" 'ಅನೇಕ ರೂಢವಾದ ನಾಮಗಳಿಂದ' ಎಂದು 'ವೈಶ್ವಾನರ' ಶಬ್ದವನ್ನು ನಾಮಾತ್ಮಕವೆಂದು ಹೇಳಿದ್ದಾರೆ. ಟೀಕೆಯಲ್ಲಿ "ಶ್ರುತೇರಪಿ ಪ್ರಸಿದ್ಧಿತೋ ನಿರವಕಾಶತ್ವಾತ್" ಎಂಬುದಾಗಿ; ನ್ಯಾಯವಿವರಣ ಟೀಕೆಯಲ್ಲಿ "ಶ್ರುತೇರ್ದೇವತಭೂತವಿಶೇಷಯೋಃ ರೂಢತ್ವಾತ್" ಎಂಬುದಾಗಿ; ಸನ್ನ್ಯಾಯರತ್ನಾವಳಿಯಲ್ಲಿ "ವೈಶ್ವಾನರಶಬ್ದಸ್ಯ ಅವಿದ್ವದ್ರೂಢ್ಯಾ ಅಗ್ನಿವಿಷಯಸ್ಯಾಪಿ" ಎಂಬುದಾಗಿ ಶ್ರುತಿ ಹಾಗೂ ಶಬ್ದಗಳಿಂದ 'ವೈಶ್ವಾನರ' ಶಬ್ದವನ್ನು ನಾಮಾತ್ಮಕವೆಂದು ಹೇಳಿರುತ್ತಾರೆ. ಆದ್ದರಿಂದ ಲಿಂಗಾತ್ಮಕವೆಂದು ತಿಳಿಯಬಾರದು.

**प्रकाशः** – एतेन नामत्वे फलतः, लिङ्गत्वं साक्षादेवैतत्पादान्तर्भावोऽस्य सूचितः ।

ಹೀಗೆ ಹೇಳಿದ್ದರಿಂದ ವೈಶ್ವಾನರ ಶಬ್ದವು ನಾಮಾತ್ಮಕವಾಗಿದ್ದರೂ ಸಹ ಫಲತಃ ಅನೇಕ ಲಿಂಗಗಳ ಸಮನ್ವಯದಲ್ಲಿ ಪರ್ಯವಸಾನವಾಗುವುದರಿಂದ ಲಿಂಗಪಾದದಲ್ಲಿ ಅಂತರ್ಭಾವಸಂಗತಿಯನ್ನು ಹೊಂದುತ್ತದೆಂದು ಹೇಳಿದಂತಾಯಿತು. ಇದರ ಜೊತೆಗೆ ನಾಮಾತ್ಮಕವಾಗಿದ್ದರೂ ಸಹ ಸಿದ್ಧಾಂತದಲ್ಲಿ ಯೌಗಿಕವೆಂದು ಒಪ್ಪಿದ್ದರಿಂದ ಅದೇ ವೈಶ್ವಾನರ ಶಬ್ದವು ಲಿಂಗಾತ್ಮಕವೂ ಸಹ ಆಗಿರುತ್ತದೆ. ಇದರಿಂದ ನೇರವಾಗಿಯೇ ಲಿಂಗಪಾದದಲ್ಲಿ ಅಂತರ್ಭಾವಸಂಗತಿಯನ್ನು ಹೇಳಿದಂತಾಯಿತೆಂದು ಸೂಚಿಸಿದ್ದಾರೆ.

**प्रकाशः** – एवं ''लोकतोऽन्यत्र'' इत्यादिटीकां व्याख्याय ''श्रुत्यादिसङ्गतिम्'' इत्यादिटीकां व्यनक्ति – अनन्तरेति । पूर्वाधिकरणतद्विषयवाक्याभ्यां एतधिकरणैताद्विषयवाक्ययोरित्यर्थः । आक्षेपप्रकाराश्चाग्रे स्पष्टः । नच तद्भाष्यं प्रयोजनमात्रपरम्, उभयपरत्वे बाधकाभावादिति भावः ।

ಹೀಗೆ 'ಲೋಕತಃ ಅನ್ಯತ್ರ' ಇತ್ಯಾದಿ ಟೀಕೆಯನ್ನು ವ್ಯಾಖ್ಯಾನ ಮಾಡಿ 'ಶ್ರುತ್ಯಾದಿಸಂಗತಿಮ್' ಇತ್ಯಾದಿಟೀಕೆಯನ್ನು 'ಅನಂತರ' ಇತ್ಯಾದಿ ವಾಕ್ಯದಿಂದ ವ್ಯಾಖ್ಯಾನಿಸುತ್ತಿದ್ದಾರೆ. 'ಅನಂತರಸಂಗತಿಸ್ತು' ಎಂಬ ಗ್ರಂಥಕ್ಕೆ ಹೀಗರ್ಥ - ಹಿಂದಿನ ಅಧಿಕರಣದಿಂದ ಸಂಗತಿಯನ್ನು ಹಾಗೂ ಮುಂದಿನ ಅಧಿಕರಣದ ವಿಷಯವಾಕ್ಯದಿಂದ ಈ ಅಧಿಕರಣದ ವಿಷಯವಾಕ್ಯಕ್ಕೆ ಸಂಗತಿಯನ್ನುತಿಳಿಯಬೇಕು. ಹಿಂದಿನ ಅಧಿಕರಣದ ಮೇಲೆ ಬರುವ ಆಕ್ಷೇಪ ಪ್ರಕಾರವನ್ನು ಪೂರ್ವಪಕ್ಷ ಸಂದರ್ಭದಲ್ಲಿ ಗ್ರಂಥಕಾರರೇ ಸ್ಪಷ್ಟಪಡಿಸುತ್ತಾರೆ. ಸಂಗತಿಯನ್ನು ಹೇಳುವ ಭಾಷ್ಯವು ಕೇವಲ ಪ್ರಯೋಜನಪರವಾಗಬಹುದಲ್ಲವೇ? ಎಂದರೆ ಉಭಯಪರವಾದರೂ ಬಾಧಕವಿಲ್ಲ. ಅದೇ ಭಾಷ್ಯವು ಸಂಗತಿಪರವೂ ಆಗುತ್ತದೆ. ಪ್ರಯೋಜನಪರವೂ ಆಗುತ್ತದೆಂದು ತಿಳಿಯಬೇಕು.

**प्रकाशः** – एतेन –

'सार्वात्म्यरूपोपन्यासादक्षरं ब्रह्म वर्णितम् ।
जाठरादावनैकान्त्यशङ्का तस्य निरस्यते ॥'

इति कल्पतरूक्तसङ्गतिर्निरस्ता वेदितव्या । वैश्वानरनामसन्निहितोन्मानत्वमुखेन पूर्वत्र प्रधानसूत्रप्रतिज्ञोपात्तसर्वगतत्वाक्षेपसम्भवेऽपि ईदृशस्यायुक्तत्वात् । सार्वात्म्यरूपशब्दाप्रयोगेण तद्रीत्या सार्वात्म्यस्य ''रूपोपन्यासात्'' इति सूत्रार्थतया वर्णनायोगस्योक्तत्वाच्चेति ।

ಹೀಗೆ ಹೇಳಿದ್ದರಿಂದ ಕಲ್ಪತರುಕಾರ ಹೇಳಿದ ಸಂಗತಿಯನ್ನು ನಿರಾಕರಿಸಿದಂತಾಯಿತು. ಕಲ್ಪತರುವಿನಲ್ಲಿ ಹೀಗಿದೆ -

'ಸಾರ್ವಾತ್ಮ್ಯರೂಪೋಪನ್ಯಾಸದಕ್ಷರಂ ಬ್ರಹ್ಮ ವರ್ಣಿತಮ್ ।
ಜಾಠರಾದವನೈಕಾಂತ್ಯಶಂಕಾ ತಸ್ಯ ನಿರಸ್ಯತೇ ॥'

ಹಿಂದಿನ ಅಧಿಕರಣದಲ್ಲಿ ಅಕ್ಷರನಾಮಕನಾದ ಬ್ರಹ್ಮನಿಗೆ 'ಸರ್ವಾತ್ಮ್ಯ' ಎಂಬ ರೂಪವನ್ನು ಹೇಳಲಾಯಿತು. ಅದೇ ರೂಪವು ವೈಶ್ವಾನರನಲ್ಲಿ ಕೇಳಿಸುತ್ತಿರುವುದರಿಂದ ಜಾಠರಾಗ್ನಿಯಲ್ಲಿ ಅನೈಕಾಂತ್ಯ ದೋಷವು ಬರುತ್ತದೆ. ಹೀಗೆ ಆಕ್ಷೇಪಿಕೀ ಸಂಗತಿಯನ್ನು ತಿಳಿಯಬೇಕು ಎಂಬ ಕಲ್ಪತರುವಿನ ಸಂಗತಿಯು ಅಯುಕ್ತವಾಗಿದೆ. ಏಕೆಂದರೆ ವೈಶ್ವಾನರ ಎಂಬ ನಾಮಾತ್ಮಕಶಬ್ದಕ್ಕೆ ಸನ್ನಿಹಿತವಾದ ಪ್ರಧಾನಸೂತ್ರದಲ್ಲಿ ಪ್ರತಿಜ್ಞಾತವಾದ ಸರ್ವಗತತ್ವದ ಆಕ್ಷೇಪ ಮಾಡುವ ಮೂಲಕವಾಗಿಯೇ ಸಂಗತಿಯನ್ನು ತೋರಿಸಲು ಬರುವಾಗ ಹೀಗೆ ಸಾರ್ವತ್ಮ್ಯರೂಪದಿಂದ ಸಂಗತಿಯನ್ನು ತೋರಿಸುವುದು ಅಯುಕ್ತವಾಗುತ್ತದೆ. ಮತ್ತು ಸಾರ್ವತ್ಮ್ಯ ಎಂಬರ್ಥದಲ್ಲಿ ರೂಪ ಶಬ್ದದ ಪ್ರಯೋಗವಿಲ್ಲದ ಕಾರಣ ಅದ್ವೈತಿಗಳು 'ರೂಪೋಪನ್ಯಾಸಾತ್' ಎಂಬ ಸೂತ್ರಕ್ಕೆ 'ಸಾರ್ವಾತ್ಮ್ಯ' ಎಂಬರ್ಥವನ್ನು ಹೇಳುವುದೇ ತಪ್ಪಾಗುತ್ತದೆಂದು ತಿಳಿಯಬೇಕು.




ಈ ಅಧಿಕರಣದಲ್ಲಿ ನೇರವಾಗಿ ಲಿಂಗವನ್ನು ಸಮನ್ವಯ ಮಾಡುತ್ತಿಲ್ಲ. 'ವೈಶ್ವಾನರ' ಎಂಬ ನಾಮವನ್ನು ಸಮನ್ವಯ ಮಾಡುತ್ತಿದ್ದಾರೆ. ಹಾಗಾದರೆ ಲಿಂಗಸಮನ್ವಯ ಮಾಡುವ ಈ ಪಾದದಲ್ಲಿ ವೈಶ್ವಾನರಾಧಿಕರಣವು ಅಸಂಗತವಾಗುತ್ತದೆಂಬುದು ಮೊದಲನೆಯ ಪ್ರಶ್ನೆ. ಇಂತಹ 'ವೈಶ್ವಾನರ' ಎಂಬ ನಾಮವು ವಿಷ್ಣುವಿನಲ್ಲಿ ಹಾಗೂ ಅಗ್ನಿಯಲ್ಲಿ ಸಾಧಾರಣವಾಗಿರುವುದರಿಂದ ಉಭಯತ್ರಪ್ರಸಿದ್ಧವಾಗಿದೆ. ಈ ಪಾದದಲ್ಲಿ ಅನ್ಯತ್ರಪ್ರಸಿದ್ಧಶಬ್ದವನ್ನು ಸಮನ್ವಯ ಮಾಡುತ್ತಿರುವುದರಿಂದಲೂ ಈ ಅಧಿಕರಣಕ್ಕೆ ಇಲ್ಲಿ ಸಂಗತಿ ಇರುವುದಿಲ್ಲವೆಂಬುದು ಎರಡನೆಯ ಪ್ರಶ್ನೆ.

ವೈಶ್ವಾನರಾಧಿಕರಣ (೧-೨-೭)

ಟೀಕೆಯಲ್ಲಿ ವೈಶ್ವಾನರಶಬ್ದವನ್ನು ನಾಮಾತ್ಮಕವೆಂದು ಹೇಳಿದ್ದಾರೆ. ಇದಕ್ಕೆ ವ್ಯಾಖ್ಯೇಯವಾದ ಮೂಲವನ್ನು ತೋರಿಸುತ್ತಾ ಅನುವ್ಯಾಖ್ಯಾನದ ವಿರೋಧಾಶಂಕೆಯನ್ನು ನಿರಾಕರಿಸುತ್ತಿದ್ದಾರೆ 'ಅತ್ರ' ಇತ್ಯಾದಿ ವಾಕ್ಯದಿಂದ. ಗ್ರಂಥದಲ್ಲಿ 'ಲೋಕೇಽಗ್ನೌ ರೂಢತ್ವಾಚ್ಚ' ಅಗ್ನಿಶಬ್ದವು ಲೋಕದಲ್ಲಿ ರೂಢವಾಗಿರುವುದರಿಂದಲೂ ಎಂದು ಹೇಳಿದ್ದಾರೆ. ಈ ವಿಚಾರವು ಅನೇಕ ಮಾತುಗಳಿಂದ ಸ್ಪಷ್ಟವಾಗುತ್ತದೆ. ಅನುವ್ಯಾಖ್ಯಾನದಲ್ಲಿ "ಬಹುಭೀ ರೂಢನಾಮಭಿಃ" 'ಅನೇಕ ರೂಢವಾದ ನಾಮಗಳಿಂದ' ಎಂದು 'ವೈಶ್ವಾನರ' ಶಬ್ದವನ್ನು ನಾಮಾತ್ಮಕವೆಂದು ಹೇಳಿದ್ದಾರೆ. ಟೀಕೆಯಲ್ಲಿ "ಶ್ರುತೇರಪಿ ಪ್ರಸಿದ್ಧಿತೋ ನಿರವಕಾಶತ್ವಾತ್" ಎಂಬುದಾಗಿ; ನ್ಯಾಯವಿವರಣ ಟೀಕೆಯಲ್ಲಿ "ಶ್ರುತೇರ್ದೇವತಭೂತವಿಶೇಷಯೋಃ ರೂಢತ್ವಾತ್" ಎಂಬುದಾಗಿ; ಸನ್ನ್ಯಾಯರತ್ನಾವಳಿಯಲ್ಲಿ "ವೈಶ್ವಾನರಶಬ್ದಸ್ಯ ಅವಿದ್ವದ್ರೂಢ್ಯಾ ಅಗ್ನಿವಿಷಯಸ್ಯಾಪಿ" ಎಂಬುದಾಗಿ ಶ್ರುತಿ ಹಾಗೂ ಶಬ್ದಗಳಿಂದ 'ವೈಶ್ವಾನರ' ಶಬ್ದವನ್ನು ನಾಮಾತ್ಮಕವೆಂದು ಹೇಳಿರುತ್ತಾರೆ. ಆದ್ದರಿಂದ ಲಿಂಗಾತ್ಮಕವೆಂದು ತಿಳಿಯಬಾರದು.

**प्रकाशः** – एतेन नामत्वे फलतः, लिङ्गत्वं साक्षादेवैतत्पादान्तर्भावोऽस्य सूचितः ।

ಹೀಗೆ ಹೇಳಿದ್ದರಿಂದ ವೈಶ್ವಾನರ ಶಬ್ದವು ನಾಮಾತ್ಮಕವಾಗಿದ್ದರೂ ಸಹ ಫಲತಃ ಅನೇಕ ಲಿಂಗಗಳ ಸಮನ್ವಯದಲ್ಲಿ ಪರ್ಯವಸಾನವಾಗುವುದರಿಂದ ಲಿಂಗಪಾದದಲ್ಲಿ ಅಂತರ್ಭಾವಸಂಗತಿಯನ್ನು ಹೊಂದುತ್ತದೆಂದು ಹೇಳಿದಂತಾಯಿತು. ಇದರ ಜೊತೆಗೆ ನಾಮಾತ್ಮಕವಾಗಿದ್ದರೂ ಸಹ ಸಿದ್ಧಾಂತದಲ್ಲಿ ಯೌಗಿಕವೆಂದು ಒಪ್ಪಿದ್ದರಿಂದ ಅದೇ ವೈಶ್ವಾನರ ಶಬ್ದವು ಲಿಂಗಾತ್ಮಕವೂ ಸಹ ಆಗಿರುತ್ತದೆ. ಇದರಿಂದ ನೇರವಾಗಿಯೇ ಲಿಂಗಪಾದದಲ್ಲಿ ಅಂತರ್ಭಾವಸಂಗತಿಯನ್ನು ಹೇಳಿದಂತಾಯಿತೆಂದು ಸೂಚಿಸಿದ್ದಾರೆ.

**प्रकाशः** – एवं ''लोकतोऽन्यत्र'' इत्यादिटीकां व्याख्याय ''श्रुत्यादिसङ्गतिम्'' इत्यादिटीकां व्यनक्ति – अनन्तरेति । पूर्वाधिकरणतद्विषयवाक्याभ्यां एतधिकरणैताद्विषयवाक्ययोरित्यर्थः । आक्षेपप्रकाराश्चाग्रे स्पष्टः । नच तद्भाष्यं प्रयोजनमात्रपरम्, उभयपरत्वे बाधकाभावादिति भावः ।

ಹೀಗೆ 'ಲೋಕತಃ ಅನ್ಯತ್ರ' ಇತ್ಯಾದಿ ಟೀಕೆಯನ್ನು ವ್ಯಾಖ್ಯಾನ ಮಾಡಿ 'ಶ್ರುತ್ಯಾದಿಸಂಗತಿಮ್' ಇತ್ಯಾದಿಟೀಕೆಯನ್ನು 'ಅನಂತರ' ಇತ್ಯಾದಿ ವಾಕ್ಯದಿಂದ ವ್ಯಾಖ್ಯಾನಿಸುತ್ತಿದ್ದಾರೆ. 'ಅನಂತರಸಂಗತಿಸ್ತು' ಎಂಬ ಗ್ರಂಥಕ್ಕೆ ಹೀಗರ್ಥ - ಹಿಂದಿನ ಅಧಿಕರಣದಿಂದ ಸಂಗತಿಯನ್ನು ಹಾಗೂ ಮುಂದಿನ ಅಧಿಕರಣದ ವಿಷಯವಾಕ್ಯದಿಂದ ಈ ಅಧಿಕರಣದ ವಿಷಯವಾಕ್ಯಕ್ಕೆ ಸಂಗತಿಯನ್ನುತಿಳಿಯಬೇಕು. ಹಿಂದಿನ ಅಧಿಕರಣದ ಮೇಲೆ ಬರುವ ಆಕ್ಷೇಪ ಪ್ರಕಾರವನ್ನು ಪೂರ್ವಪಕ್ಷ ಸಂದರ್ಭದಲ್ಲಿ ಗ್ರಂಥಕಾರರೇ ಸ್ಪಷ್ಟಪಡಿಸುತ್ತಾರೆ. ಸಂಗತಿಯನ್ನು ಹೇಳುವ ಭಾಷ್ಯವು ಕೇವಲ ಪ್ರಯೋಜನಪರವಾಗಬಹುದಲ್ಲವೇ? ಎಂದರೆ ಉಭಯಪರವಾದರೂ ಬಾಧಕವಿಲ್ಲ. ಅದೇ ಭಾಷ್ಯವು ಸಂಗತಿಪರವೂ ಆಗುತ್ತದೆ. ಪ್ರಯೋಜನಪರವೂ ಆಗುತ್ತದೆಂದು ತಿಳಿಯಬೇಕು.

ಪರಿಪೂರ್ಣಚಂದ್ರಿಕಾ

**प्रकाशः** – एतेन –

‘सार्वात्म्यरूपोपन्यासादक्षरं ब्रह्म वर्णितम् ।
जाठरादावनैकान्त्यशङ्का तस्य निरस्यते ॥’

इति कल्पतरूक्तसङ्गतिर्निरस्ता वेदितव्या । वैश्वानरनामसन्निहितोन्मानत्वमुखेन पूर्वत्र प्रधानसूत्रप्रतिज्ञोपात्तसर्वगतत्वाक्षेपसम्भवेऽपि ईदृशस्यायुक्तत्वात् । सार्वात्म्यरूपशब्दाप्रयोगेण तद्रीत्या सार्वात्म्यस्य ‘‘रूपोपन्यासात्’’ इति सूत्रार्थतया वर्णनायोगस्योक्तत्वाच्चेति ।

ಹೀಗೆ ಹೇಳಿದ್ದರಿಂದ ಕಲ್ಪತರುಕಾರ ಹೇಳಿದ ಸಂಗತಿಯನ್ನು ನಿರಾಕರಿಸಿದಂತಾಯಿತು. ಕಲ್ಪತರುವಿನಲ್ಲಿ ಹೀಗಿದೆ -

‘ಸಾರ್ವಾತ್ಮ್ಯರೂಪೋಪನ್ಯಾಸದಕ್ಷರಂ ಬ್ರಹ್ಮ ವರ್ಣಿತಮ್ ।
ಜಾಠರಾದವನೈಕಾಂತ್ಯಶಂಕಾ ತಸ್ಯ ನಿರಸ್ಯತೇ ॥’

ಹಿಂದಿನ ಅಧಿಕರಣದಲ್ಲಿ ಅಕ್ಷರನಾಮಕನಾದ ಬ್ರಹ್ಮನಿಗೆ ‘ಸರ್ವಾತ್ಮ್ಯ’ ಎಂಬ ರೂಪವನ್ನು ಹೇಳಲಾಯಿತು. ಅದೇ ರೂಪವು ವೈಶ್ವಾನರನಲ್ಲಿ ಕೇಳಿಸುತ್ತಿರುವುದರಿಂದ ಜಾಠರಾಗ್ನಿಯಲ್ಲಿ ಅನ್ಯಕಾಂತ್ಯ ದೋಷವು ಬರುತ್ತದೆ. ಹೀಗೆ ಆಕ್ಷೇಪಿಕೀ ಸಂಗತಿಯನ್ನು ತಿಳಿಯಬೇಕು ಎಂಬ ಕಲ್ಪತರುವಿನ ಸಂಗತಿಯು ಅಯುಕ್ತವಾಗಿದೆ. ಏಕೆಂದರೆ ವೈಶ್ವಾನರ ಎಂಬ ನಾಮಾತ್ಮಕಶಬ್ದಕ್ಕೆ ಸನ್ನಿಹಿತವಾದ ಪ್ರಧಾನಸೂತ್ರದಲ್ಲಿ ಪ್ರತಿಜ್ಞಾತವಾದ ಸರ್ವಗತತ್ವದ ಆಕ್ಷೇಪ ಮಾಡುವ ಮೂಲಕವಾಗಿಯೇ ಸಂಗತಿಯನ್ನು ತೋರಿಸಲು ಬರುವಾಗ ಹೀಗೆ ಸಾರ್ವತ್ಮ್ಯರೂಪದಿಂದ ಸಂಗತಿಯನ್ನು ತೋರಿಸುವುದು ಅಯುಕ್ತವಾಗುತ್ತದೆ. ಮತ್ತು ಸಾರ್ವತ್ಮ್ಯ ಎಂಬರ್ಥದಲ್ಲಿ ರೂಪ ಶಬ್ದದ ಪ್ರಯೋಗವಿಲ್ಲದ ಕಾರಣ ಅದ್ವೈತಿಗಳು ‘ರೂಪೋಪನ್ಯಾಸಾತ್’ ಎಂಬ ಸೂತ್ರಕ್ಕೆ ‘ಸಾರ್ವಾತ್ಮ್ಯ’ ಎಂಬರ್ಥವನ್ನು ಹೇಳುವುದೇ ತಪ್ಪಾಗುತ್ತದೆಂದು ತಿಳಿಯಬೇಕು.




ಈ ಅಧಿಕರಣದಲ್ಲಿ ನೇರವಾಗಿ ಲಿಂಗವನ್ನು ಸಮನ್ವಯ ಮಾಡುತ್ತಿಲ್ಲ. ‘ವೈಶ್ವಾನರ’ ಎಂಬ ನಾಮವನ್ನು ಸಮನ್ವಯ ಮಾಡುತ್ತಿದ್ದಾರೆ. ಹಾಗಾದರೆ ಲಿಂಗಸಮನ್ವಯ ಮಾಡುವ ಈ ಪಾದದಲ್ಲಿ ವೈಶ್ವಾನರಾಧಿಕರಣವು ಅಸಂಗತವಾಗುತ್ತದೆಂಬುದು ಮೊದಲನೆಯ ಪ್ರಶ್ನೆ. ಇಂತಹ ‘ವೈಶ್ವಾನರ’ ಎಂಬ ನಾಮವು ವಿಷ್ಣುವಿನಲ್ಲಿ ಹಾಗೂ ಅಗ್ನಿಯಲ್ಲಿ ಸಾಧಾರಣವಾಗಿರುವುದರಿಂದ ಉಭಯತ್ರಪ್ರಸಿದ್ಧವಾಗಿದೆ. ಈ ಪಾದದಲ್ಲಿ ಅನ್ಯತ್ರಪ್ರಸಿದ್ಧಶಬ್ದವನ್ನು ಸಮನ್ವಯ ಮಾಡುತ್ತಿರುವುದರಿಂದಲೂ ಈ ಅಧಿಕರಣಕ್ಕೆ ಇಲ್ಲಿ ಸಂಗತಿ ಇರುವುದಿಲ್ಲವೆಂಬುದು ಎರಡನೆಯ ಪ್ರಶ್ನೆ.

ವೈಶ್ವಾನರಾಧಿಕರಣ (೧-೨-೭)

ಒಂದು 'ವೈಶ್ವಾನರ' ಎಂಬ ನಾಮವನ್ನು ಸಮನ್ವಯ ಮಾಡುವುದರಿಂದ ವೈಶ್ವಾನರನೆನಿಸಿದ ವಿಷ್ಣುವಿಗೆ ಸಂಬಂಧಪಟ್ಟ ಎಲ್ಲ ಲಿಂಗಗಳನ್ನು ಸಮನ್ವಯ ಮಾಡಿದಂತಾಗುವುದರಿಂದ ಈ ಅಧಿಕರಣವು ಇಲ್ಲಿ ಸಂಗತವಾಗುತ್ತದೆ. ಮತ್ತು ಉಭಯತ್ರಪ್ರಸಿದ್ಧವೂ ಆಗುವುದಿಲ್ಲ. ಪ್ರಮಾಣತೌಲ್ಯ ಹಾಗೂ ನ್ಯಾಯತೌಲ್ಯಗಳಿದ್ದರೆ ಮಾತ್ರ ಉಭಯತ್ರಪ್ರಸಿದ್ಧವಾಗುತ್ತದೆ. ಅಂದರೆ ಶ್ರುತಿಯಿಂದ ವಿಷ್ಣುವಿನಲ್ಲಿ ಪ್ರಸಿದ್ಧಿಯನ್ನು ಹೇಳಿದರೆ ಅಂತಹ ಶ್ರುತಿಯಿಂದಲೇ ಅಗ್ನಿಯಲ್ಲಿಯೂ ಪ್ರಸಿದ್ಧಿಯನ್ನು ಹೇಳಬೇಕು. ಅಥವಾ ಲೋಕರೂಢಿಯನ್ನು ಅಗ್ನಿಯಲ್ಲಿ ಹೇಳಿದರೆ ಅಂತಹ ಲೋಕರೂಢಿಯನ್ನೇ ವಿಷ್ಣುವಿನಲ್ಲಿ ಹೇಳಬೇಕು. ಹೀಗಿದ್ದರೆ ಮಾತ್ರ ಉಭಯತ್ರಪ್ರಸಿದ್ಧವೆನಿಸುತ್ತದೆ. ಆದರೆ ಪ್ರಕೃತ ವೈಶ್ವಾನರ ಶಬ್ದವು ಲೋಕರೂಢಿಯಿಂದ ಅಗ್ನಿಯಲ್ಲಿ ಪ್ರಸಿದ್ದವಾಗಿದೆ. ಶ್ರುತಿಯಿಂದ ವಿಷ್ಣುವಿನಲ್ಲಿ ಪ್ರಸಿದ್ಧವಾಗಿದೆ. ಹೀಗಿರುವಾಗ ಉಭಯತ್ರಪ್ರಸಿದ್ಧವೆನ್ನಲು ಸಾಧ್ಯವಿಲ್ಲ. ಹೊರತಾಗಿ, ಲೋಕರೂಢಿಯನ್ನು ವಿವಕ್ಷಿಸಿ ಅನ್ಯತ್ರಪ್ರಸಿದ್ಧವೇ ಆಗುತ್ತದೆ.

'ವೈಶ್ವಾನರ' ಶಬ್ದವು ಲಿಂಗಾತ್ಮಕವೆಂದು 'ವಿಶ್ವಜೀವಾಂತರತ್ವಾದ್ಯೈರ್ಲಿಂಗೈಃ' ಎಂಬ ಅಣುಭಾಷ್ಯದಲ್ಲಿ ಹೇಳಿದಂತೆ ಕಾಣಿಸುತ್ತದೆ. ಇದು ಸಿದ್ಧಾಂತದಲ್ಲಿ 'ವೈಶ್ವಾನರ' ಶಬ್ದವನ್ನು ಯೌಗಿಕವೆಂದು ಹೇಳಿದ್ದಾರೆ ಎಂಬ ಅಭಿಪ್ರಾಯದಿಂದ; ಹೊರತು, ಉಳಿದ ಶಬ್ದಗಳಂತೆ ಪೂರ್ವಪಕ್ಷ ಸಂದರ್ಭದಲ್ಲಿ ಲಿಂಗಾತ್ಮಕವಾಗಿರುವುದಿಲ್ಲ ; ನಾಮಾತ್ಮಕವೇ ಆಗಿರುತ್ತದೆ.

ಈ ಅಧಿಕರಣಕ್ಕೆ ಹಿಂದಿನ ಅದೃಶ್ಯತ್ವಾಧಿಕರಣದ ಜೊತೆಗೆ ಆಕ್ಷೇಪಿಕೀ ಸಂಗತಿಯನ್ನು ತಿಳಿಯಬೇಕು. ಅದೃಶ್ಯತ್ವಾದಿಗುಣಗಳು ವಿಷ್ಣುವಿನ ಧರ್ಮವೆಂದು ಅಲ್ಲಿ ಹೇಳಲಾಗಿದೆ. ಅಂತಹ ಅದೃಶ್ಯತ್ವಾದಿಗುಣಗಳನ್ನು ಹೇಳುವ ಉಪನಿಷತ್ತಿನಲ್ಲಿ ಸರ್ವಗತತ್ವವನ್ನೂ ಸಹ ಹೇಳಲಾಗಿದೆ. ಅದೇ ಸರ್ವಗತತ್ವಧರ್ಮವನ್ನು ಛಾಂದೋಗ್ಯೋಪನಿಷತ್ತು ವೈಶ್ವಾನರನಲ್ಲಿ ಹೇಳುತ್ತಿದೆ. ವೈಶ್ವಾನರನು ವಿಷ್ಣುವಲ್ಲದಿದ್ದರೆ ಅದೃಶ್ಯತ್ವಾದಿಗುಣಗಳೂ ಸಹ ವಿಷ್ಣುವಿನ ಧರ್ಮವಾಗುವುದಿಲ್ಲ. ಹೀಗೆ ಹಿಂದಿನ ಅಧಿಕರಣದ ಸಿದ್ಧಾಂತವು ಅಯುಕ್ತವಾಗುತ್ತದೆ. ಈ ಉದ್ದೇಶಕ್ಕೋಸ್ಕರ ಸೂತ್ರಕಾರರು 'ವೈಶ್ವಾನರ' ಎಂಬ ನಾಮಾತ್ಮಕಶಬ್ದವನ್ನು ವಿಷ್ಣುವಿನಲ್ಲಿ ಸಮರ್ಥಿಸಲು ಹೊರಟಿದ್ದಾರೆ.



## ಸಂಶಯ ಹಾಗೂ ಪೂರ್ವಪಕ್ಷ

## तात्पर्यचन्द्रिका

**अत्र वैश्वानरः किमग्न्यादिः किं वा ब्रह्मेति चिन्ता । तदर्थम् अग्निवैश्वानरादिशब्दानां ब्रह्मणि मुख्यत्वेऽग्न्यादिशब्दानां प्रसिद्धाग्न्यादौ लौकिकव्यवहारः, तत्तत्सूक्तानां तत्तद्विद्यानां च ब्रह्मपरत्वे वैदिकसूक्तव्यवस्था विद्याव्यवस्था च न युक्ता उत युक्तेति ।**

ಪರಿಪೂರ್ಣಚಂದ್ರಿಕಾ

ಅನುವಾದ - ಸಂಶಯ ಕೋಟಿ ಹೀಗಿದೆ - ವೈಶ್ವಾನರ ಶಬ್ದದಿಂದ ಪ್ರತಿಪಾದ್ಯರಾದವರು ಅಗ್ನ್ಯಾದಿಗಳೋ, ಅಥವಾ ಬ್ರಹ್ಮನೋ? ಒಂದುವೇಳೆ ಅಗ್ನಿ, ವೈಶ್ವಾನರ ಮೊದಲಾದ ಶಬ್ದಗಳು ಬ್ರಹ್ಮನಲ್ಲಿ ಮುಖ್ಯವಾಗಿ ಇರುವುದಾದರೆ ಪ್ರಸಿದ್ಧವಾದ ಅಗ್ನಿ ಮೊದಲಾದವರಲ್ಲಿ ಮಾಡಲ್ಪಡುವ ಲೌಕಿಕವ್ಯವಹಾರವು ಯುಕ್ತವೋ? ಅಯುಕ್ತವೋ? ಬ್ರಹ್ಮನಲ್ಲಿಯೇ ವೈಶ್ವಾನರಾದಿ ಶಬ್ದಗಳು ಮುಖ್ಯವಾಗಿ ಇರುವುದಾದರೆ ಎಲ್ಲಾ ಸೂಕ್ತಗಳು ಹಾಗೂ ವಿದ್ಯೆಗಳೆಲ್ಲವೂ ಬ್ರಹ್ಮಪರವಾದವು, ಆವಾಗ ಇದು ಅಗ್ನಿಸೂಕ್ತ, ಇದು ವಾಯುಸೂಕ್ತ ಎಂಬ ವ್ಯವಸ್ಥೆಯು ಅಯುಕ್ತವಾಗುತ್ತದೋ? ಅಥವಾ ಯುಕ್ತವಾಗುತ್ತದೋ? ಇದರಂತೆ ಎಲ್ಲ ವಿದ್ಯೆಗಳೂ ಬ್ರಹ್ಮಪರವಾದರೆ ಇದು ವೈಶ್ವಾನರವಿದ್ಯೆ, ಇದು ಅಗ್ನಿವಿದ್ಯೆ ಎಂಬ ವ್ಯವಸ್ಥೆಯೂ ಸಹ ಅಯುಕ್ತವಾಗುತ್ತದೋ? ಯುಕ್ತವಾಗುತ್ತದೋ? ಎಂದು ಸಂಶಯ ಬರುತ್ತದೆ.

**पूर्वपक्षस्तु – "आत्मानं वैश्वानरमुपास्ते" "अयमग्निर्वैश्वानरः" इत्यादौ श्रुतो वैश्वानरोऽग्निदेवता वा भूतं वा, वैश्वानरश्रुतेस्तत्र प्रसिद्धेः ।**

ಪೂರ್ವಪಕ್ಷ ಹೀಗಿದೆ - "ಆತ್ಮಾನಂ ವೈಶ್ವಾನರಮುಪಾಸ್ತೇ" "ಅಯಮಗ್ನಿರ್ವೈಶ್ವಾನರಃ" ಎಂಬ ವಿಷಯವಾಕ್ಯದಲ್ಲಿ ಕೇಳಿಸುತ್ತಿರುವ ವೈಶ್ವಾನರನು ಅಗ್ನಿದೇವತೆ ಅಥವಾ ಜಡವಾದ ಅಗ್ನಿಯೆಂದು ಹೇಳಬೇಕು. ಏಕೆಂದರೆ ಲೋಕದಲ್ಲಿ ಈ ಎರಡು ಪದಾರ್ಥಗಳಲ್ಲೇ ವೈಶ್ವಾನರಶಬ್ದವನ್ನು ಎಲ್ಲರೂ ಪ್ರಯೋಗಿಸುತ್ತಾರೆ.

**नच "अहं वैश्वानरः" इति स्मृतिसमाख्यानात्पुरुषसूक्तसमाख्यानात् "को न आत्मा किं ब्रह्म" इति प्रकरणात् "सर्वे पाप्मानः प्रदूयन्ते" इति स्वज्ञानेन सर्वपाप्मप्रदाहसर्वगत्वादिलिङ्गाच्च वैश्वानरो ब्रह्मेति वाच्यं,**

ಪ್ರಶ್ನೆ - ಕೇವಲ ಲೋಕರೂಢಿಯಿಂದ ಅಗ್ನಿದೇವತೆಯನ್ನು ಅಥವಾ ಜಡವಾದ ಅಗ್ನಿಯನ್ನು ವೈಶ್ವಾನರವೆಂದು ಹೇಳಲು ಸಾಧ್ಯವಿಲ್ಲ. ಏಕೆಂದರೆ 'ಅಹಂ ವೈಶ್ವಾನರಃ' ಎಂಬ ಗೀತಾಸ್ಮೃತಿಯ ಸಮಾಖ್ಯಾಪ್ರಮಾಣವು ವಿಷ್ಣುವಿನ ವಿಷಯದಲ್ಲಿದೆ. ಮತ್ತು ಪುರುಷಸೂಕ್ತದಲ್ಲಿ ಯಾವ ಪುರುಷನು ವರ್ಣಿಸಲ್ಪಟ್ಟಿದ್ದಾನೋ? ಅವನೇ ವೈಶ್ವಾನರ ಪ್ರಕರಣದಲ್ಲಿ ಪ್ರತಿಪಾದ್ಯನಾಗಿದ್ದಾನೆಂದು ತಿಳಿಯುತ್ತಿದೆ. ಹೀಗೆ ಪುರುಷಸೂಕ್ತ ಸಮಾಖ್ಯಾಪ್ರಮಾಣವು ವಿಷ್ಣುವಿನ ವಿಷಯದಲ್ಲಿ ಆಧಾರವಾಗಿದೆ. ಮತ್ತು "ಕೋ ನ ಆತ್ಮಾ ಕಿಂ ಬ್ರಹ್ಮ" ಎಂಬುದಾಗಿ ವೈಶ್ವಾನರ ಪ್ರಕರಣವು ವಿಷ್ಣುವಿನಲ್ಲಿ ಪ್ರಸಿದ್ಧವಾದ ಆತ್ಮ ಹಾಗೂ ಬ್ರಹ್ಮಶಬ್ದಗಳಿಂದ ಪ್ರಾರಂಭವಾಗುತ್ತಿದೆ. ಮತ್ತು "ಸರ್ವೇ ಪಾಪ್ಮಾನಃ ಪ್ರದೂಯಂತೇ" ಎಂಬುದಾಗಿ ಅವನ ವೈಶ್ವಾನರನ ಜ್ಞಾನದಿಂದ ಸಕಲ ಪಾಪಗಳು ಪರಿಹಾರವಾಗುತ್ತವೆಂದು ಹೇಳಲಾಗಿದೆ. ಮತ್ತು ಸರ್ವಗತತ್ವಾದಿಲಿಂಗಗಳೂ ಸಹ ವೈಶ್ವಾನರನ ಪ್ರಕರಣದಲ್ಲಿ ಕೇಳಿಬರುತ್ತಿವೆ. ಇವುಗಳ ಆಧಾರದಿಂದ ವೈಶ್ವಾರನು ವಿಷ್ಣುವೇ ಆಗಬೇಕಲ್ಲವೇ?

**समाख्याप्रकरणलिङ्गानां श्रुतितो दुर्बलत्वात् । बहुत्वप्रयुक्तप्राबल्यादपि स्वभावप्राबल्यस्य बलवत्त्वाच ।**

**उक्तं हि –**

**'द्विविधं बलवत्त्वं च बहुत्वाच स्वभावतः ।**
**तयोस्स्वभावो बलवान् उपजीव्यादिकश्च सः ॥'**

**इति ।**

ಉತ್ತರ - ಇದು ತಪ್ಪು. ವಿಷ್ಣುವಿನ ವಿಷಯದಲ್ಲಿ ನೀವು ಹೇಳಿದ ಸಮಾಖ್ಯಾ, ಪ್ರಕರಣ, ಲಿಂಗಗಳೆಲ್ಲವೂ ಶ್ರುತಿಗಿಂತ ದುರ್ಬಲವಾಗಿದೆ. ಬಹುತ್ವಪ್ರಯುಕ್ತವಾಗಿ ಅವುಗಳೆಲ್ಲವೂ ಪ್ರಬಲವಾಗಿವೆಯಲ್ಲವೇ? ಎಂಬ ಪ್ರಶ್ನೆಗೂ ಅವಕಾಶವಿಲ್ಲ. ಏಕೆಂದರೆ ಬಹುತ್ವಪ್ರಯುಕ್ತವಾದ ಪ್ರಾಬಲ್ಯಕ್ಕಿಂತ ಸ್ವಭಾವಪ್ರಯುಕ್ತವಾದ ಪ್ರಾಬಲ್ಯವೇ ಶ್ರೇಷ್ಠವಾಗಿದೆ. ಇದನ್ನು ವಿಷ್ಣುತತ್ತ್ವನಿರ್ಣಯದಲ್ಲಿ ಉದಾಹರಿಸಲ್ಪಟ್ಟ ಬ್ರಹ್ಮತರ್ಕವಾಕ್ಯದಲ್ಲಿ ಹೀಗೆ ಹೇಳಿದ್ದಾರೆ -

'ದ್ವಿವಿಧಂ ಬಲವತ್ತ್ವಂ ಚ ಬಹುತ್ವಾಚ್ಚ ಸ್ವಭಾವತಃ ।
ತಯೋಸ್ಸ್ವಭಾವೋ ಬಲವಾನ್ ಉಪಜೀವ್ಯಾದಿಕಶ್ಚ ಸಃ ॥'

ಎಂದರೆ ಪ್ರಾಬಲ್ಯವು ಸ್ವಭಾವಪ್ರಯುಕ್ತವಾಗಿ ಮತ್ತು ಬಹುತ್ವಪ್ರಯುಕ್ತವಾಗಿ ಎರಡು ವಿಧ. ಇವುಗಳ ಮಧ್ಯೆ ಸ್ವಭಾವಪ್ರಯುಕ್ತವಾದ ಪ್ರಾಬಲ್ಯವೇ ಉಪಜೀವ್ಯವಾದ್ದರಿಂದ ಶ್ರೇಷ್ಠವಾಗಿರುತ್ತದೆಂದು.

**प्रकाशः –**

**प्रकाशः – विषयसंशयटीकां व्यनक्ति – अत्रेति ।** छान्दोग्ये पञ्चमेऽध्याये वैश्वानरविद्यायां **"प्राचीनशालसत्ययज्ञेन्द्रद्युम्नजनबुडिलोद्दालकाः समेत्य मीमासां चक्रुः को न आत्मा किं ब्रह्मेति । ते मीमांसमाना निश्चयमलभमानाः केकयं राजानमुपसद्योचुः आत्मानमेव वैश्वानरं सम्प्रत्यध्येषि । तमेव नो ब्रूहि"** इत्युपक्रम्य श्रूयते

ವಿವರಣೆ - ಈ ಅಧಿಕರಣದ ವಿಷಯ ಹಾಗೂ ಸಂಶಯಗಳನ್ನು ನಿರೂಪಿಸುವ ಟೀಕೆಯನ್ನು ವ್ಯಾಖ್ಯಾನಿಸುತ್ತಿದ್ದಾರೆ 'ಅತ್ರ' ಇತ್ಯಾದಿ ಗ್ರಂಥದಿಂದ. ಛಾಂದೋಗ್ಯದ ಪಂಚಮಾಧ್ಯಾಯದ ವೈಶ್ವಾನರವಿದ್ಯೆಯು ಹೀಗೆ ಪ್ರಾರಂಭವಾಗುತ್ತದೆ - "ಪ್ರಾಚೀನಶಾಲಸತ್ಯಯಜ್ಞೇಂದ್ರದ್ಯುಮ್ನಜನಬುಡಿಲೋದ್ದಾಲಕಾಃ ಸಮೇತ್ಯ ಮೀಮಾಸಾಂ ಚಕ್ರುಃ ಕೋ ನ ಆತ್ಮಾ ಕಿಂ ಬ್ರಹ್ಮೇತಿ । ತೇ ಮಿಮಾಂಸಮಾನಾ ನಿಶ್ಚಯಮಲಭಮಾನಾಃ

ಕೇಕಯಂ ರಾಜಾನಮುಪಸದ್ಯೋಚುಃ ಆತ್ಮಾನಮೇವ ವೈಶ್ವಾನರಂ ಸಂಪ್ರತ್ಯಧ್ಯೇಷಿ । ತಮೇವ ನೋ ಬ್ರೂಹಿ'' ಉಪಮನ್ಯುವಿನ ಮಗನಾದ ಪ್ರಾಚೀನಶಾಲನು, ಪುರುಷನ ಮಗನಾದ ಸತ್ಯಯಜ್ಞನು, ಪಲ್ಲವಿಯೆಂಬುವನ ಮಗನಾದ ಇಂದ್ರದ್ಯುಮನು, ಶರ್ಕರಾಕ್ಷನ ಮಗನಾದ ಜನ ಎಂಬುವನು, ಅಶ್ವತರಾಶ್ವನ ಮಗನಾದ ಬುಡಿಲನು ಇವರೆಲ್ಲರೂ ಪ್ರತಿವರ್ಷದಲ್ಲಿ ಚೆನ್ನಾಗಿ ಯಜ್ಞವನ್ನು ಆಚರಿಸುತ್ತಿದ್ದರು ಮತ್ತು ಸರಿಯಾದ ವೇದಾರ್ಥಗಳನ್ನು ತಿಳಿದಿದ್ದರು. ಈ ಐವರು ಒಂದು ಕಡೆ ಸೇರಿ ನಮ್ಮ ಉಪಾಸ್ಯನಾದ ವೈಶ್ವಾನರನ ಲಕ್ಷಣವೇನು? ಬ್ರಹ್ಮನಾಮಕನಾದ ಪರಮಾತ್ಮನ ಲಕ್ಷಣವೇನು ? ಎಂಬ ವಿಮರ್ಶೆಯಲ್ಲಿ ತೊಡಗಿದರು.

ಹೀಗೆ ಪರಮಾತ್ಮನ ಬಗ್ಗೆ ವಿಮರ್ಶೆಗೆ ತೊಡಗಿದ ಇವರಿಗೆ ಸ್ವತಃ ತಮಗೇ ವಿಶೇಷ ನಿರ್ಣಯವನ್ನು ಮಾಡಲು ಸಾಧ್ಯವಾಗಲಿಲ್ಲ. ಆವಾಗ ಐವರೂ ಸೇರಿ ಉದ್ದಾಲಕರನ್ನು ಸ್ಮರಿಸಿಕೊಂಡು ಅರುಣನ ಮಗನಾದ ಉದ್ದಾಲಕರು ವೈಶ್ವಾನರನಾಮಕನಾದ ಪರಮಾತ್ಮನನ್ನು ಚೆನ್ನಾಗಿ ತಿಳಿಸಿದ್ದಾರೆ. ಆದ್ದರಿಂದ ಅವರ ಬಳಿ ಹೋಗಿ ಕೇಳೋಣ ಎಂದು ಉದ್ದಾಲಕರನ್ನು ಸಮೀಪಿಸಿದರು. ಅನಂತರ ಉದ್ದಾಲಕರು ಅವರೆಲ್ಲರನ್ನೂ ಕರೆದುಕೊಂಡು ಕೇಕಯದೇಶದ ರಾಜನಾದ ಅಶ್ವಪತಿಯ ಬಳಿ ತೆರಳಿದರು. ಅವರೆಲ್ಲರೂ ಸೇರಿ ಕೇಕಯರಾಜನ ಬಳಿ ವೈಶ್ವಾನರನಾಮಕ ಪರಮಾತ್ಮನನ್ನು ತಾವು ಚೆನ್ನಾಗಿ ತಿಳಿದಿದ್ದೀರಿ, ಅವನನ್ನು ನಮಗೆ ತಿಳಿಸಿಕೊಡಿ ಎಂದು ವಿಜ್ಞಾಪಿಸಿದರು. ಹೀಗೆ ವೈಶ್ವಾನರ ಪ್ರಕರಣವು ಪ್ರಾರಂಭವಾಗುತ್ತದೆ.

**प्रकाशः** – ''यस्त्वेतमेवं प्रादेशमात्रमभिविमानं वैश्वानरमुपास्ते स सर्वेषु लोकेषु सर्वेषु भूतेषु सर्वेष्वात्मस्वन्नमत्ति तस्य ह वा एतस्यात्मनो वैश्वानरस्य मूर्धैव सुतेजाः चक्षुर्विश्वरूपः प्राणः पृथग्वर्त्मा सन्दोहो बहुलो वस्तिरेव रयिः पृथव्येव पादावुर एव वेदिर्लोमानि बर्हिर्हृदयं गार्हपत्यो मनोऽन्वाहार्यपचन आस्यमाहवनीयः'' इत्यादि ।

''ಯಸ್ತ್ವೇತಮೇವಂ ಪ್ರಾದೇಶಮಾತ್ರಮಭಿವಿಮಾನಂ ವೈಶ್ವಾನರಮುಪಾಸ್ತೇ ಸ ಸರ್ವೇಷು ಲೋಕೇಷು ಸರ್ವೇಷು ಭೂತೇಷು ಸರ್ವೇಷ್ವಾತ್ಮಸ್ವನ್ನಮತ್ತಿ ತಸ್ಯ ಹ ವಾ ಏತಸ್ಯಾತ್ಮನೋ ವೈಶ್ವಾನರಸ್ಯ ಮೂರ್ಧೈವ ಸುತೇಜಾಃ ಚಕ್ಷುರ್ವಿಶ್ವರೂಪಃ ಪ್ರಾಣಃ ಪೃಥಗ್ವರ್ತ್ಮಾ ಸಂದೋಹೋ ಬಹುಲೋ ವಸ್ತಿರೇವ ರಯಿಃ ಪೃಥಿವ್ಯೇವ ಪಾದಾವುರ ಏವ ವೇದಿರ್ಲೋಮಾನಿ ಬರ್ಹಿರ್ಹೃದಯಂ ಗಾರ್ಹಪತ್ಯೋ ಮನೋಽನ್ವಾಹಾಯರ್ಪಚನ ಆಸ್ಯಮಾಹವನೀಯಃ'' ಮುಂದೆ ವೈಶ್ವಾನರ ಪ್ರಕರಣದಲ್ಲಿ ಹೀಗಿದೆ - ನೀವೆಲ್ಲರೂ ವೈಶ್ವಾನರನಾಮಕನ ಅವಯವಗಳನ್ನು ಮಾತ್ರ ತಿಳಿದು ಅದರ ಫಲವಾಗಿ ಯಥೇಷ್ಟವಾಗಿ ಅನ್ನವನ್ನು ತಿನ್ನುತ್ತಿದ್ದೀರಿ. ಯಾರು ಪ್ರಾದೇಶದ ಪರಿಮಾಣದಲ್ಲಿರುವ ಹೃದಯಕಮಲದಲ್ಲಿ ಪ್ರಾದೇಶಪರಿಮಾಣದಿಂದಲೇ ನೆಲೆಸಿ ಪ್ರಾದೇಶನೆಂದು ಕರೆಸಿಕೊಳ್ಳುವ ಸರ್ವತ್ರವ್ಯಾಪ್ತನಾದ ವೈಶ್ವಾನರನನ್ನು ಮುಂದೆ ಹೇಳುವಂತೆ 'ಸುತೇಜಾಃ' ಮೊದಲಾದ ಎಲ್ಲಾ ಅವಯವಗಳಿಂದ ಕೂಡಿ ಆರಾಧಿಸುತ್ತಾನೋ, ಅವನು ದೇವತಾಪುರುಷನಾಗಿದ್ದರೆ ಎಲ್ಲ ಲೋಕಗಳಲ್ಲಿ ಎಲ್ಲಾ ಜಡ ಹಾಗೂ ಚೇತನರಲ್ಲಿ ಸನ್ನಿಹಿತನಾಗಿ ಎಲ್ಲ ಅನ್ನವನ್ನು ತಿನ್ನುತ್ತಾನೆ. ವೈಶ್ವಾನರನ ಶಿರಸ್ಸು ಸುತೇಜಾ, ಕಣ್ಣು ವಿಶ್ವರೂಪ, ಪ್ರಾಣವಾಯುವು ಪೃಥಗ್ವರ್ತ್ಮಾ, ಮಧ್ಯದೇಹವು ಬಹುಲ, ಕಟಿಪ್ರದೇಶವು ರಯಿ, ಪಾದಗಳು ಪೃಥಿವೀ, ಎದೆಯು ಯಜ್ಞವೇದಿಯ

ಅಭಿಮಾನಿದೇವತೆಗೆ ಯಜ್ಞಕುಂಡಕ್ಕೆ ಆಶ್ರಯವಾಗಿದ್ದು ಯಜ್ಞವೇದಿಕೆಯಲ್ಲಿರುತ್ತದೆ. ಅದರಂತೆ ರೋಮಗಳು ಬರ್ಹಿಯಲ್ಲಿ; ಹೃದಯವು ಗಾರ್ಹಪತ್ಯಾಗ್ನಿಯಲ್ಲಿ; ಮನಸ್ಸು ಅನ್ವಾಹರ್ಯಪಚನಾಗ್ನಿಯಲ್ಲಿ, ಮುಖವು ಆಹಾವನೀಯಾಗ್ನಿಯಲ್ಲಿ ಇರುತ್ತದೆಂದು ತಿಳಿಯಬೇಕು. ಹೀಗೆ ವೈಶ್ವಾನರನ ವರ್ಣನೆಯು ಇರುತ್ತವೆ. ಛಾಂದೋಗ್ಯದ ಈ ವಾಕ್ಯಗಳು ವೈಶ್ವಾನರಾಧಿಕರಣಕ್ಕೆ ವಿಷಯವಾಗಿದೆ.

**प्रकाशः** – तथा वाजसनेये सप्तमे ''अयमग्निर्वैश्वानरो योऽयमन्तः पुरुषे येनेदमन्नं पच्यते यदिदमद्यते'' इत्यादि । तथा वैश्वानरसूक्ते –

'मूर्धानं दिवो अरतिं पृथिव्या वैश्वानरमृत आजातमग्निम् ।
कविं सम्राजमतिथिं जनानामासन्ना पात्रं जनयन्त देवाः ॥'

इत्यादि । तत्र सर्वत्र श्रुतौ वैश्वानरो विषय इत्यर्थः ।

ಇದರಂತೆ ಬೃಹದಾರಣ್ಯಕದ ಏಳನೇ ಅಧ್ಯಾಯದಲ್ಲಿ "ಅಯಮಗ್ನಿರ್ವೈಶ್ವಾನರೋ ಯೋಽಯಮಂತಃ ಪುರುಷೇ ಯೇನೇದಮನ್ನಂ ಪಚ್ಯತೇ ಯದಿದಮದ್ಯತೇ" ಯಾವ ಅಗ್ನಿಯು ಸಕಲಪುರುಷರ ಒಳಗಡೆ ನಿಂತು ತಿನ್ನುವ ಅನ್ನವನ್ನು ಪಚನ ಮಾಡುತ್ತಾನೋ, ಅವನೇ ವೈಶ್ವಾನರನಾಗಿದ್ದಾನೆ ಎಂದು ಹೇಳಲಾಗಿದೆ. ಮತ್ತು ವೈಶ್ವಾನರ ಸೂಕ್ತದಲ್ಲಿ - "ಮೂರ್ಧಾನಂ ದಿವೋ ಅರತಿಂ ಪೃಥಿವ್ಯಾ ವೈಶ್ವಾನರಮೃತ ಆಜಾತಮಗ್ನಿಮ್ । ಕವಿಂ ಸಮ್ರಾಜಮತಿಥಿಂ ಜನಾನಾಮಾಸನ್ನಾ ಪಾತ್ರಂ ಜನಯಂತ ದೇವಾಃ ॥" ಎಂದು ವೈಶ್ವಾನರನನ್ನು ವರ್ಣಿಸಲಾಗಿದೆ. ಈ ವಾಕ್ಯಗಳಲ್ಲಿ ಕೇಳಿಸುತ್ತಿರುವ ವೈಶ್ವಾನರನು ಅಧಿಕರಣಕ್ಕೆ ವಿಷಯನಾಗಿದ್ದಾನೆಂದರ್ಥ.

**प्रकाशः** – अत एव टीकायां 'सः वैश्वानरः'' इति तच्छब्देन सङ्गत्यर्थं पूर्वप्रकृतच्छान्दोग्यस्थवैश्वानरप्रतीतावपि तदुपलक्षणमिति भावेन ''वैश्वानरः'' इति सामान्योक्तिः । 'वैश्वानरः' इत्युपलक्षणं, प्राक् पादद्वयेन समन्विता अशेषविद्यागताः अशेषसूक्तस्था अग्न्यादिनानाशब्दा अपि उदाहरणमिति ध्येयम्, प्राचीन-सर्वनयोक्ताक्षेपसमाधानार्थत्वादस्याधिकरणस्य ।

ಆದ್ದರಿಂದಲೇ ಟೀಕೆಯಲ್ಲಿ 'ಸಃ ವೈಶ್ವಾನರಃ' ಎಂಬುದಾಗಿ 'ತತ್' ಶಬ್ದದಿಂದ ಹಿಂದಿನ ಅಧಿಕರಣದಿಂದ ಸಂಗತಿಯು ದೊರೆಯುವುದಕ್ಕಾಗಿ ಹಿಂದಿನ ಅಧಿಕರಣದಲ್ಲಿ ಪ್ರಸಕ್ತವಾದ ಛಾಂದೋಗ್ಯವನ್ನೇ ವಿಷಯವಾಕ್ಯವನ್ನಾಗಿ ಉಲ್ಲೇಖಿಸಿದ್ದಾರೆ. ವಸ್ತುತಃ ಬೃಹದಾರಣ್ಯಕಾದಿ ವಚನಗಳೂ ಸಹ ವಿಷಯವಾಗಿದ್ದರೂ ಕೇವಲ ಸಂಗತಿಗೋಸ್ಕರ ಟೀಕೆಯಲ್ಲಿ ಛಾಂದೋಗ್ಯಉಪನಿಷತ್ತನ್ನು ಉಲ್ಲೇಖಿಸಿದ್ದಾರೆ. ಅದು ಕೇವಲ ಉಪಲಕ್ಷಣವಾಗಿದೆ. ಈ ಅಭಿಪ್ರಾಯದಿಂದಲೇ ಗ್ರಂಥಕಾರರು ಎಲ್ಲ ಶ್ರುತಿಗಳಲ್ಲಿ ಸಾಧಾರಣವಾದ 'ವೈಶ್ವಾನರಃ' ಎಂಬ ಸಾಮಾನ್ಯವಾದ ಪದವನ್ನಷ್ಟೇ ಪ್ರಯೋಗಿಸಿದ್ದಾರೆ.

ಪರಿಪೂರ್ಣಚಂದ್ರಿಕಾ

'ವೈಶ್ವಾನರ' ಎಂಬುದು ಉಪಲಕ್ಷಣವಾಗಿದೆ. ಅಂದರೆ ಹಿಂದಿನ ಎರಡು ಪಾದಗಳಲ್ಲಿ ಸಮನ್ವಯ ಮಾಡಲ್ಪಟ್ಟ ಎಲ್ಲ ವಿದ್ಯೆಗಳಲ್ಲಿರುವ, ಎಲ್ಲ ಸೂಕ್ತಗಳಲ್ಲಿರುವ ಅಗ್ನಿ ಮೊದಲಾದ ಅನೇಕಶಬ್ದಗಳ ಸಮನ್ವಯವೂ ಮತ್ತೊಂದು ದೊಡ್ಡ ಉದ್ದೇಶವಾಗಿದೆ. ಎಲ್ಲಾ ಅಧಿಕರಣಗಳ ಸೂಕ್ತ ಹಾಗೂ ವಿದ್ಯೆಗಳಲ್ಲಿ ಪ್ರಸಕ್ತವಾದ ಶಬ್ದಗಳೆನ್ನೆಲ್ಲ ಸಮನ್ವಯ ಮಾಡುವುದಕ್ಕಾಗಿಯೇ ಈ ಅಧಿಕರಣವನ್ನು ಕೊನೆಯಲ್ಲಿ ಹೇಳಿರುತ್ತಾರೆಂಬುದನ್ನು ಗಮನಿಸಬೇಕು. ಆದ್ದರಿಂದ ಹಿಂದಿನ ಎಲ್ಲ ಅಧಿಕರಣಗಳ ಪ್ರಮೇಯವನ್ನು ಆಕ್ಷೇಪ ಮಾಡಿ ಸಮಾಧಾನಮಾಡುವುದಕ್ಕಾಗಿಯೇ ಈ ಅಧಿಕರಣ ಹೊರಟಿರುತ್ತದೆ.

**प्रकाशः** – अत एवाग्रे ''अग्निवैश्वानरादिशब्दानाम्'' इत्युक्तिः, ''वैश्वानरादयश्शब्दा अपि तद्वाचिनः'' इत्यनुव्याख्याने सुधायां – 'वैश्वानरादयः' इत्यादिशब्दप्रयोगाद्वैश्वानरशब्दस्योपलक्षणत्वमिति दर्शयति'' इत्युक्तम् ।

ಈ ಉದ್ದೇಶದಿಂದಲೇ ಮುಂದೆ 'ಅಗ್ನಿವೈಶ್ವಾನರಾದಿಶಬ್ದಾನಾಮ್' ಎಂಬುದಾಗಿ ಆದಿಪದವನ್ನು ಗ್ರಂಥಕಾರರು ಬಳಸಿದ್ದಾರೆ. ಅನುವ್ಯಾಖ್ಯಾನದಲ್ಲಿಯೂ "ವೈಶ್ವಾನರಾದಯಃ ಶಬ್ದಾ ಅಪಿ ತದ್ವಾಚಿನಃ' ಎಂಬುದಾಗಿ; ಮತ್ತು ನ್ಯಾಯಸುಧೆಯಲ್ಲಿ 'ವೈಶ್ವಾನರಾದಯಃ' ಇತ್ಯಾದಿಶಬ್ದಪ್ರಯೋಗಾತ್ ವೈಶ್ವಾನರ-ಶಬ್ದಸ್ಯೋಪಲಕ್ಷಣತ್ವಮಿತಿ ದರ್ಶಯತಿ'' ಎಂಬುದಾಗಿ ಆದಿಪದವನ್ನು ಪ್ರಯೋಗಿಸಿದ್ದರಿಂದ ವೈಶ್ವಾನರ ಶಬ್ದವು ಉಪಲಕ್ಷಣವಾಗಿದೆಯೆಂದು ತಿಳಿಯಬೇಕು ಎಂದು ಹೇಳಿರುತ್ತಾರೆ. ಇದರಿಂದ ಸಕಲ ಪಾದಗಳಲ್ಲಿ ಪ್ರಸಕ್ತವಾದ ಸೂಕ್ತ ಹಾಗೂ ವಿದ್ಯೆಗಳಲ್ಲಿರುವ ಶಬ್ದಗಳ ಸಮನ್ವಯವು ಈ ಅಧಿಕರಣದ ಉದ್ದೇಶವೆಂದು ಸ್ಪಷ್ಟವಾಗುತ್ತದೆ.

**प्रकाशः** – आत्मशब्दादिसाधकोपेतत्वेन प्राधान्यात्सूत्रादौ तस्यैवोक्तिः । अग्नीति । देवतेत्यर्थः । आदिपदेन भूताग्निः । एतेन टीकायाम् ''अन्यो वा'' इत्युक्तान्यशब्दार्थो विवृतः ।

ಹಾಗಾದರೆ ವೈಶ್ವಾನರ ಶಬ್ದವನ್ನೇ ಏಕೆ ಸ್ವೀಕರಿಸಿದಿರಿ ? ಎಂಬ ಪ್ರಶ್ನೆ ಬರುತ್ತದೆ. 'ವೈಶ್ವಾನರ' ಶಬ್ದವನ್ನೇ ಉಲ್ಲೇಖಿಸಲು ಕಾರಣವಿದೆ. ಆತ್ಮಶಬ್ದ, ಶ್ರುತಿ, ಸ್ಮೃತಿಗಳ ಸಮಾಖ್ಯಾ ಇವೆಲ್ಲವೂ ಬಹಳವಾಗಿ ಇರುವುದರಿಂದ ಸೂತ್ರದಲ್ಲಿ ಪ್ರಧಾನವಾಗಿ ವೈಶ್ವಾನರ ಶಬ್ದವನ್ನೇ ಸ್ವೀಕರಿಸಿದ್ದಾರೆ. ಗ್ರಂಥದಲ್ಲಿ 'ಅಗ್ನ್ಯಾದಿಃ' ಎಂಬಲ್ಲಿರುವ ಅಗ್ನಿಶಬ್ದಕ್ಕೆ ದೇವತೆಯೆಂದರ್ಥ. ಆದಿಪದದಿಂದ ಜಡವಾದ ಅಗ್ನಿಯನ್ನು ಸ್ವೀಕರಿಸಬೇಕು. ಹೀಗೆ ಹೇಳಿದ್ದರಿಂದ ಟೀಕೆಯಲ್ಲಿರುವ 'ಅನ್ಯೋ ವಾ' ಎಂಬ ಮಾತಿಗೆ ಅಗ್ನಿದೇವತೆಯೋ? ಜಡವಾದ ಅಗ್ನಿಯೋ? ಎಂಬುದಾಗಿ ಅನ್ಯಶಬ್ದದ ಅರ್ಥವನ್ನು ವಿವರಿಸಿದಂತಾಯಿತು.

**प्रकाशः** – अत्र 'ब्रह्म' इति चिन्तानन्तरं, वैश्वानरश्रुतेरन्यत्रप्रसिद्ध्यनुसारेण समाख्याप्रकरणलिङ्गानि विष्णुप्रापकाण्यग्नौ नेयानि उत तदनुसारेण प्रसिद्धिर्नेयेति चिन्ता, तदर्थं समाख्याद्यनुरोधेन प्रसिद्धेर्नयने बाधकमस्त्युत नेति चिन्ता टीकायां पूर्वोत्तरप्रापकयोस्तौल्योक्तेस्तामनुसृत्य नोक्ता । स्वरीत्या तु वक्तव्यैव ।

ಗ್ರಂಥದಲ್ಲಿ ಸಂಶಯಕೋಟಿಗಳನ್ನು ತೋರಿಸುವ 'ಕಿಂ ವಾ ಬ್ರಹ್ಮ' ಎಂಬ ಸಂಶಯದ ಅನಂತರ ವೈಶ್ವಾನರ ಶ್ರುತಿಯನ್ನು ಅನ್ಯತ್ರಪ್ರಸಿದ್ಧಿಗೆ ಅನುಸಾರಿಯಾಗಿ ಸಮಾಖ್ಯಾ, ಪ್ರಕರಣ ಹಾಗೂ ಲಿಂಗಗಳೆಂಬ ವಿಷ್ಣುಪ್ರಾಪಕಗಳನ್ನು ಅಗ್ನಿಯಲ್ಲಿ ಸಮನ್ವಯ ಮಾಡಬೇಕೋ? ಅಥವಾ ಸಮಾಖ್ಯಾ, ಪ್ರಕರಣ, ಲಿಂಗಗಳಿಗೆ ಅನುಸಾರಿಯಾಗಿ ಲೋಕಪ್ರಸಿದ್ಧಿಯನ್ನು ಸಮನ್ವಯಗೊಳಿಸಬೇಕೋ? ಒಂದು ವೇಳೆ ಸಮಾಖ್ಯಾದಿ ತಾತ್ಪರ್ಯಗಳಿಗೆ ಅನುಸಾರಿಯಾಗಿ ಲೋಕಪ್ರಸಿದ್ಧಿಯನ್ನು ಅನುಸರಿಸುವುದಾದರೆ ಬಾಧಕವು ಇರುತ್ತದೋ? ಅಥವಾ ಇಲ್ಲವೋ? ಎಂಬ ಸಂಶಯವನ್ನು ತೋರಿಸಬೇಕಿತ್ತು. ಆದರೆ ಟೀಕೆಯಲ್ಲಿ ಪೂರ್ವಪ್ರಾಪಕ ಹಾಗೂ ಸಿದ್ಧಾಂತಪ್ರಾಪಕ ಲಿಂಗಗಳಿಗೆ ಸಮಾನಬಲವನ್ನು ಹೇಳಿರುವುದರಿಂದ ಅದಕ್ಕನುಸಾರಿಯಾಗಿ ಗ್ರಂಥಕಾರರು ಈ ಸಂಶಯಗಳನ್ನು ತೋರಿಸಿರುವುದಿಲ್ಲ. ಒಂದು ವೇಳೆ ನಿರ್ಣಯಾತ್ಮಕವಾದ ಪೂರ್ವಪಕ್ಷವನ್ನು ಮಾಡಿದ್ದರೆ ಒಂದಕ್ಕೆ ಅನುಸಾರಿಯಾಗಿ ಮತ್ತೊಂದನ್ನು ಕೊಂಡೊಯ್ಯಬಹುದಿತ್ತು. ಆದರೆ ಸಮಾನಬಲವಿರುವುದರಿಂದ ವಿಷ್ಣು ಹಾಗೂ ಅಗ್ನಿಯೆಂಬ ನಿರ್ಣಯವನ್ನು ಮಾಡಲು ಸಾಧ್ಯವಿಲ್ಲವೆಂದು ಟೀಕೆಯಲ್ಲಿ ಹೇಳಿದ್ದಾರೆ. ಗ್ರಂಥಕಾರರ ಪ್ರಕಾರವಂತೂ ಈ ಚಿಂತೆಗಳನ್ನು ತೋರಿಸಲೇಬೇಕು. ಏಕೆಂದರೆ ಮುಂದೆ ಪೂರ್ವಪಕ್ಷವನ್ನು ಮಾಡುವಾಗ ನಿರ್ಣಯಾತ್ಮಕವಾದ ಪೂರ್ವಪಕ್ಷವನ್ನು ಮಾಡಿರುತ್ತಾರೆ.

**प्रकाशः** – रीतिद्वयसाधारण्येन तु श्रुत्यादिकं ब्रह्मणि नेतुं न शक्यम् उत शक्यमिति चिन्ता ध्येया । एतदुपयुक्तां प्रसिद्धेर्निरवकाशत्वरूपां चिन्तामाह – तदर्थमिति । मुख्यत्व इति । सिद्धान्तिना लक्षणादेरनङ्गीकारादेवमुक्तम् ।

ಟೀಕಾಕಾರರ ಮತ್ತು ಗ್ರಂಥಕಾರರ ಪ್ರಕಾರ ಉಭಯಸಾಧಾರಣವಾದ ಸಂಶಯವನ್ನು ತೋರಿಸಬೇಕೆಂದರೆ ಶ್ರುತ್ಯಾದಿಗಳು ಬ್ರಹ್ಮನಲ್ಲಿ ಸಮನ್ವಯಗೊಳ್ಳಲು ಸಮರ್ಥವಾಗುವುದಿಲ್ಲವೋ? ಅಥವಾ ಸಮರ್ಥವಾಗುತ್ತವೋ? ಎಂಬ ಸಂಶಯವನ್ನು ತೋರಿಸಬೇಕು. ಈ ಸಂಶಯಕ್ಕೆ ಉಪಯುಕ್ತವಾದ ಲೋಕಪ್ರಸಿದ್ಧಿಗೆ ನಿರವಕಾಶತ್ವವನ್ನು ಹೇಳುವ ಸಂಶಯವನ್ನು 'ತದರ್ಥಮ್' ಎಂಬ ಗ್ರಂಥದಿಂದ ತೋರಿಸುತ್ತಿದ್ದಾರೆ. ಸಿದ್ಧಾಂತಿಗಳು ಲಕ್ಷಣಾದಿಗಳನ್ನು ಅಂಗೀಕಾರ ಮಾಡದ ಕಾರಣ 'ಮುಖ್ಯತ್ವೇ' ಎಂಬುದಾಗಿ ಹೇಳಿದ್ದಾರೆ.

**प्रकाशः** – यदि वक्ष्यमाणदिशा न युक्ता, तदा निरवकाशलोकप्रसिद्ध्यादिवशाद-ग्न्यादिरेव वैश्वानरादिशब्दार्थः । यदा तु "साक्षादप्यविरोधम्" "अभिव्यक्तेः" इत्यादिवक्ष्यमाणदिशा युक्ता, तदा बाधकाभावत्समाख्यादिवशाद् ब्रह्मैवेति सिद्धान्ते फलफलिभावोऽग्रे पूर्वपक्षादिविवरणरीत्या स्पष्ट इति भावः ।

ಒಂದು ವೇಳೆ ಮುಂದೆ ಹೇಳುವ ಪ್ರಕಾರ ಸೂತ್ರಾದಿ ವ್ಯವಸ್ಥೆಗಳು ಅಯುಕ್ತವಾದರೆ ಆಗ ನಿರವಕಾಶವಾದ ಲೋಕಪ್ರಸಿದ್ಧ್ಯಾದಿಗಳ ಬಲದಿಂದ ಅಗ್ನ್ಯಾದಿಗಳೇ ವೈಶ್ವಾನರ ಮೊದಲಾದ ಶಬ್ದಗಳಿಂದ ಪ್ರತಿಪಾದ್ಯರಾಗುತ್ತಾರೆ. ಇದು ಪೂರ್ವಪಕ್ಷದ ಫಲಫಲಿಭಾವ.

ಪರಿಪೂರ್ಣಚಂದ್ರಿಕಾ

ಒಂದು ವೇಳೆ 'ಸಾಕ್ಷಾದಪ್ಯವಿರೋಧಮ್' 'ಅಭಿವ್ಯಕ್ತೇಃ' ಇತ್ಯಾದಿ ಮುಂದೆ ಹೇಳುವ ಸೂತ್ರಗಳಿಂದ ಹೇಳುವ ಪ್ರಕಾರ ಸೂಕ್ತಾದಿವ್ಯವಸ್ಥೆಯು ಯುಕ್ತವಾಗುವುದಾದರೆ ಆವಾಗ ಬಾಧಕವಿಲ್ಲದ ಕಾರಣ ಸಮಾಖ್ಯಾದಿತಾತ್ಪರ್ಯಲಿಂಗಗಳ ಆಧಾರದಿಂದ ಬ್ರಹ್ಮನೇ ವೈಶ್ವಾನರಶಬ್ದದಿಂದ ಪ್ರತಿಪಾದ್ಯನಾಗುತ್ತಾನೆಂಬುದು ಸಿದ್ಧಾಂತದ ಫಲಫಲಿಭಾವ.

ಈ ಫಲಫಲಿಭಾವಗಳು ಮುಂದೆ ಪೂರ್ವಪಕ್ಷವನ್ನು ವಿವರಣ ಮಾಡುವುದರಿಂದಲೇ ಸ್ಪಷ್ಟವಾಗುತ್ತದೆಂದು ಗ್ರಂಥಕಾರರು ತೋರಿಸಿರುವುದಿಲ್ಲ.

**प्रकाशः** – अत्र टीकायां ''श्रुतेरपि प्रसिद्धितो निरवकाशत्वात्'' इत्यादिना श्रुतेर्निरवकाशत्वमात्रप्रयुक्तप्राबल्योक्तिप्रतीतावपि ''लिङ्गस्य श्रुतितो दुर्बलत्वात्'' इति पूर्ववाक्येन श्रुतित्वप्रयुक्तप्राबल्यमपि अभिमतम् । एवञ्च वैश्वानरश्रुतेः श्रुतित्वनिरवकाशत्वरूपोभयप्रयुक्तप्राबल्यात्पाचकत्वादिलिङ्गस्य निरवकाशत्व-निमित्तप्राबल्यात्, एवं प्रबलश्रुतिलिङ्गबलेन समाख्याप्रकरणलिङ्गरूपविष्णु-प्रापकाणां बाधादग्निरेव वैश्वानरः ।

ಟೀಕೆಯಲ್ಲಿ ''ಶ್ರುತೇರಪಿ ಪ್ರಸಿದ್ಧಿತೋ ನಿರವಕಾಶತ್ವಾತ್'' 'ಲೋಕಪ್ರಸಿದ್ಧಿಗಿಂತ ಶ್ರುತಿಯು ನಿರವಕಾಶವಾಗಿದೆ'. ಇತ್ಯಾದಿ ಮಾತುಗಳಿಂದ ಶ್ರುತಿಗೆ ನಿರವಕಾಶತ್ವಮಾತ್ರಪ್ರಯುಕ್ತವಾದ ಪ್ರಾಬಲ್ಯವನ್ನು ಹೇಳಿದ್ದಾರೆಂದು ತೋರುತ್ತದೆ. ಆದರೆ 'ಲಿಂಗಸ್ಯ ಶ್ರುತಿತೋ ದುರ್ಬಲತ್ವಾತ್' ಎಂಬ ಹಿಂದಿನ ವಾಕ್ಯವನ್ನು ಗಮನಿಸಿದಾಗ ನಿರವಕಾಶತ್ವಪ್ರಯುಕ್ತವಷ್ಟೇ ಅಲ್ಲ; ಶ್ರುತಿತ್ವಪ್ರಯುಕ್ತವಾದ ಪ್ರಾಬಲ್ಯವೂ ಟೀಕಾಕಾರರಿಗೆ ಅಭಿಪ್ರೇತವಾಗಿದೆಯೆಂದು ತಿಳಿಯುತ್ತದೆ. ಆದ್ದರಿಂದ ವೈಶ್ವಾನರ ಶ್ರುತಿಗೆ ಶ್ರುತಿತ್ವ ಹಾಗೂ ನಿರವಕಾಶತ್ವವೆಂಬ ಉಭಯಪ್ರಯುಕ್ತವಾಗಿ ಪ್ರಾಬಲ್ಯವಿರುತ್ತದೆ. ಪಾಚಕತ್ವಾದಿಲಿಂಗಗಳಿಗೆ ಕೇವಲ ನಿರವಕಾಶತ್ವಪ್ರಯುಕ್ತವಾಗಿ ಪ್ರಾಬಲ್ಯವಿರುತ್ತದೆ. ಹೀಗಿರುವಾಗ ಪ್ರಬಲವಾದ ಶ್ರುತಿ ಹಾಗೂ ಲಿಂಗಗಳ ಬಲದಿಂದ ಅಗ್ನಿಯು ವೈಶ್ವಾನರನೆಂದು ನಿರ್ಣಯಿಸಬಹುದು. ಮತ್ತು ಇಂತಹ ಬಲಿಷ್ಠವಾದ ಶ್ರುತಿ ಹಾಗೂ ಲಿಂಗಗಳಿಂದ ವಿಷ್ಣುವಿನ ವಿಷಯದಲ್ಲಿರುವ ಸಮಾಖ್ಯಾ, ಪ್ರಕರಣ, ಲಿಂಗಗಳೆಲ್ಲವೂ ಬಾಧಿತವಾಗುತ್ತವೆ.

**प्रकाशः** – टीकायां पूर्वोत्तरपक्षप्रापकयोर्द्वयोरपि निरवकाशत्वेन तौल्योक्तिस्त्वभ्युपेत्यवादेनेति भावेन ''नायं वैश्वानरो विष्णुः; किन्तु'' इत्यादिटीकां विवृण्वन् पूर्वपक्षयति – **पूर्वपक्षस्त्विति** ।

ಆದರೆ ಟೀಕೆಯಲ್ಲಿ ಪೂರ್ವಪಕ್ಷಪ್ರಾಪಕವಾದ ಶ್ರುತಿ, ಲಿಂಗಾದಿಗಳನ್ನು ಸಿದ್ಧಾಂತಸ್ಥಾಪಕವಾದ ಸಮಾಖ್ಯಾದಿ ತಾತ್ಪರ್ಯಲಿಂಗಗಳನ್ನು ನಿರವಕಾಶವೆಂದು ಒಪ್ಪಿ ಸಮಾನಬಲವೆಂದು ಹೇಳಿರುತ್ತಾರೆ. ವಸ್ತುತಃ ಶ್ರುತಿ, ಲಿಂಗಾದಿಗಳು ಮಾತ್ರ ನಿರವಕಾಶವೆಂದು ಪೂರ್ವಪಕ್ಷಕಾರರ ಅಭಿಪ್ರಾಯ. ಟೀಕೆಯಲ್ಲಿ ಹಾಗೇ ಹೇಳಿದ್ದು ಅಭ್ಯುಗಮವಾದದಿಂದ ಎಂದು ತಿಳಿಯಬೇಕು. ಈ ಅಭಿಪ್ರಾಯದಿಂದ ಪ್ರಕೃತ ಗ್ರಂಥಕಾರರು 'ನಾಯಂ

ವೈಶ್ವಾನರೋ ವಿಷ್ಣುಃ; ಕಿಂತು' ಇತ್ಯಾದಿ ಟೀಕೆಯನ್ನು ವ್ಯಾಖ್ಯಾನಿಸುತ್ತಾ ಪೂರ್ವಪಕ್ಷ ಮಾಡುತ್ತಿದ್ದಾರೆ - 'ಪೂರ್ವಪಕ್ಷಸ್ತು' ಇತ್ಯಾದಿ ಗ್ರಂಥದಿಂದ.

**प्रकाशः** – टीकायाम् 'अयम्' इत्युक्त्वा प्राक् प्रकृतच्छान्दोग्यस्यस्य परामर्श उपलक्षणमिति भावेन च्छान्दोग्यबृहदारण्यकस्थयोर्वाक्यविशेषयोरुक्तिः ''आत्मानम्'' इति ''अयमग्निः'' इति च । आदिपदेन ''वैश्वानरमृत आजातमग्निम्'' इत्यस्यामृचीति गृह्यते ।

ಟೀಕೆಯಲ್ಲಿ 'ಅಯಮ್' ಎಂಬ ಶಬ್ದದಿಂದ 'ಅಯಮಗ್ನಿರ್ವೈಶ್ವಾನರಃ' ಎಂಬ ಛಾಂದೋಗ್ಯದ ಮಾತನ್ನು ಉಲ್ಲೇಖಿಸಿದ್ದಾರೆ. ಇದು ಹಿಂದೆ ಪ್ರಕೃತವಾದ ಛಾಂದೋಗ್ಯದ ಮಾತಿನಿಂದ ಸಂಗತಿಯು ದೊರೆಯುವುದಕ್ಕೋಸ್ಕರ. ಇದು ಕೇವಲ ಉಪಲಕ್ಷಣವಾಗಿದೆಯೆಂಬ ಅಭಿಪ್ರಾಯದಿಂದ ಗ್ರಂಥಕಾರರು ಛಾಂದೋಗ್ಯ ಹಾಗೂ ಬೃಹದಾರಣ್ಯಕದ ವಾಕ್ಯಗಳಲ್ಲಿರುವ 'ಆತ್ಮಾನಮ್' ಎಂಬ ಪದವನ್ನು ಹಾಗೂ 'ಅಯಮಗ್ನಿಃ' ಎಂಬ ವಾಕ್ಯವನ್ನೂ ಉಲ್ಲೇಖಿಸಿದ್ದಾರೆ. ಆದಿಪದದಿಂದ 'ವೈಶ್ವಾನರಮೃತ ಆಜಾತಮಗ್ನಿಮ್' ಎಂಬ ಋಗ್ವೇದದ ಮಾತನ್ನೂ ಸಹ ಸ್ವೀಕರಿಸಬೇಕು.

**प्रकाशः** – ''अत एव न देवता भूतं च'' इतिसूत्रव्यावर्त्यमाह – **अग्निदेवतेति । भूतमिति ।** तेजोरूपं जडमित्यर्थः । ''**नच वाच्यं सर्वगतत्वलिङ्गाद् वैश्वानरो विष्णुः**'' इति टीकोपलक्षणं सूत्रोक्तसाधकमात्रस्येति भावेन तां व्याचष्टे – **नचेति ।**

'ಅತ ಏವ ನ ದೇವತಾ ಭೂತಂ ಚ' ಎಂಬ ಸೂತ್ರದಿಂದ ನಿರಾಕೃತವಾಗುವ ಪೂರ್ವಪಕ್ಷವನ್ನು 'ಅಗ್ನಿದೇವತಾ' ಎಂಬ ಗ್ರಂಥದಿಂದ ತೋರಿಸುತ್ತಿದ್ದಾರೆ. 'ಭೂತಮ್' ಎಂದರೆ ತೇಜೋರೂಪವಾದ ಜಡವಾದ ಅಗ್ನಿಯೆಂದರ್ಥ.

ಟೀಕೆಯಲ್ಲಿ 'ನಚ ವಾಚ್ಯಂ ಸರ್ವಗತತ್ವಲಿಂಗಾದ್ ವೈಶ್ವಾನರೋ ವಿಷ್ಣುಃ' ಎಂದು ಸರ್ವಗತತ್ವಲಿಂಗವನ್ನು ಮಾತ್ರ ಸಿದ್ಧಾಂತಸಾಧಕವಾದ ಧರ್ಮವನ್ನಾಗಿ ವಿವಕ್ಷಿಸಿದ್ದಾರೆ. ಇದು ಉಪಲಕ್ಷಣವಾಗಿದೆ. ಸೂತ್ರದಲ್ಲಿ ಹೇಳಲ್ಪಟ್ಟ ಸಮಾಖ್ಯಾ ಹಾಗೂ ಶ್ರುತಿ, ಸ್ಮೃತಿಗಳ ಪ್ರಮಾಣವನ್ನೆಲ್ಲಾ ಉಪಲಕ್ಷಣಯಾ ಇದರಿಂದ ತಿಳಿದುಕೊಳ್ಳಬೇಕು. ಈ ಅಭಿಪ್ರಾಯದಿಂದ ಗ್ರಂಥಕಾರರು 'ನಚ' ಎಂಬ ವಾಕ್ಯದಿಂದ ಟೀಕೆಯನ್ನು ವ್ಯಾಖ್ಯಾನಿಸುತ್ತಿದ್ದಾರೆ.

**प्रकाशः** – ''स्मर्यमाणम्'' इति सूत्रोपात्तात् ''अहं वैश्वानरो भूत्वा'' इति स्मृतिसमाख्यानात्, ''पुरुषविधमपि'' इति सूत्रांशोक्तात् ''शीर्ष्णो द्यौः समवर्तत'' इति पुरुषसूक्तसमाख्यानात्, ''असम्भवात्'' इति सूत्रखण्डोक्तात् ''को न आत्मा'' इति ब्रह्मप्रकरणादित्यर्थः ।

'ಸ್ಮರ್ಯಮಾಣಮ್' ಎಂಬ ಸೂತ್ರದಲ್ಲಿ ಉಲ್ಲೇಖಿಸಿದ 'ಅಹಂ ವೈಶ್ವಾನರೋ ಭೂತ್ವಾ' ಎಂಬ ಸ್ಮೃತಿಯ ಸಮಾಖ್ಯಾವಿರುವುದರಿಂದ 'ಪುರುಷವಿಧಮಪಿ' ಎಂಬ ಸೂತ್ರದ ಭಾಗದಿಂದ ಉಲ್ಲೇಖಿಸಿದ "ಶೀರ್ಷ್ಣೋ ದ್ಯೌಃ ಸಮವರ್ತತ' ಎಂಬ ಪುರುಷಸೂಕ್ತದ ಸಮಾಖ್ಯಾಬಲದಿಂದ 'ಅಸಂಭವಾತ್' ಎಂಬ ಸೂತ್ರದ ಭಾಗದಿಂದ ತಿಳಿಯಲ್ಪಡುವ 'ಕೋ ನ ಆತ್ಮಾ' ಎಂಬ ಬ್ರಹ್ಮಪ್ರಕರಣವೆಂಬ ಪ್ರಮಾಣದಿಂದ ಎಂದು ಟೀಕೆಯ ಅರ್ಥ.

**प्रकाशः** – "असम्भवात्पुरुषविधमपि" इत्यंशोक्तप्रकरणश्रुतिसमाख्याभ्याम् उपलक्षणत्वेनोपात्तलिङ्गान्यप्याह – **सर्वे इति** । अभिविमानपदेन अभितो विगतं मानं मर्यादा यस्येति टीकोक्तव्युत्पत्त्योक्तं सर्वगतत्वम् ।

'ಅಸಂಭವತ್ಪುರುಷವಿಧಮಪಿ' ಎಂಬ ಸೂತ್ರದ ಭಾಗದಿಂದ ಪ್ರಕರಣ ಹಾಗೂ ಶ್ರುತಿ, ಸಮಾಖ್ಯಾಗಳೆಲ್ಲವೂ ಕೇವಲ ಉಪಲಕ್ಷಣವಾಗಿದೆ ಎಂಬುದಾಗಿ ತಿಳಿದು ಸರ್ವಪಾಪರಾಹಿತ್ಯವೆಂಬ ಲಿಂಗವನ್ನೂ ಸಹ ವಿವಕ್ಷಿಸಬೇಕೆಂದು 'ಸರ್ವ' ಇತ್ಯಾದಿ ಗ್ರಂಥದಿಂದ ಹೇಳುತ್ತಿದ್ದಾರೆ. ಅಂದರೆ ಯಾವ ವೈಶ್ವಾನರನನ್ನು ತಿಳಿಯುವುದರಿಂದ ಸಕಲಪಾಪಗಳಿಂದ ದೂರನಾಗುತ್ತಾನೋ, ಅಂತಹವನು ವೈಶ್ವಾನರನೆಂದು ಹೇಳಿದ್ದರಿಂದ ವಿಷ್ಣುವೇ ಎಂದು ನಿರ್ಣಯಿಸಬಹುದೆಂದು ಅಭಿಪ್ರಾಯ. 'ಅಭಿವಿಮಾನ' ಎಂಬ ಪದಕ್ಕೆ 'ಅಭಿತಃ ಮಾನಂ ಯಸ್ಯ' 'ಹೋಗಲ್ಪಟ್ಟ ಮಿತಿಯುಳ್ಳವನು' ಎಂಬ ವ್ಯುತ್ಪತ್ತಿಯಿಂದ ಪರಿಮಿತಿಯಿಲ್ಲದವನು ಎಂದರ್ಥವು ದೊರೆಯುತ್ತದೆ. ಇದರಿಂದ ಸರ್ವಗತನಾಗಿದ್ದಾನೆಂದು ಸರ್ವಗತತ್ವಧರ್ಮವನ್ನು ತಿಳಿದಂತಾಗುತ್ತದೆ.

**प्रकाशः** – एतेन "अन्तरधिकरणन्यायेन विष्णावपि श्रुतेर्वृत्तिरस्तीति चेत्" इति न्यायविवरणटीकोक्तन्यायो विष्णुप्रापकसत्त्वरूपो विवृतः ।

ಹೀಗೆ ಹೇಳಿದ್ದರಿಂದ 'ಅಂತರಧಿಕರಣನ್ಯಾಯೇನ ವಿಷ್ಣಾವಪಿ ಶ್ರುತೇರ್ವೃತ್ತಿರಸ್ತೀತಿ ಚೇತ್' ಎಂಬ ನ್ಯಾಯವಿವರಣಟೀಕೆಯಲ್ಲಿರುವ ನ್ಯಾಯಶಬ್ದಕ್ಕೆ ಸಮಾಖ್ಯಾ, ಶ್ರುತಿ, ಸ್ಮೃತಿ ಹಾಗೂ ಬ್ರಹ್ಮಪ್ರಕರಣಗಳೆಂಬ ವಿಷ್ಣುಪ್ರಾಪಕಲಿಂಗಗಳು ಎಂಬರ್ಥವನ್ನು ಹೇಳಿದಂತಾಯಿತು.

**प्रकाशः** – "लिङ्गस्य श्रुतितो दुर्बलत्वात्" इत्यपि टीकावाक्यमुपलक्षणत्वेन वा, कैमुत्यलब्धत्वाभिप्रायेण वा व्याचष्टे – **समाख्येति** ।

ಟೀಕೆಯಲ್ಲಿ 'ಲಿಂಗಸ್ಯ ಶ್ರುತಿತೋ ದುರ್ಬಲತ್ವಾತ್' ಶ್ರುತಿಗಿಂತ ವಿಷ್ಣುವಿನ ಲಿಂಗಗಳು ದುರ್ಬಲವಾಗಿವೆಯೆಂದು ಹೇಳಿದ್ದಾರೆ. ಇದು ಉಪಲಕ್ಷಣ ಎಂಬ ಅಭಿಪ್ರಾಯದಿಂದ; ಅಥವಾ ಲಿಂಗವೇ ದುರ್ಬಲವಾಗಿರಬೇಕಾದರೆ ಲಿಂಗಕ್ಕಿಂತ ಕನಿಷ್ಠವಾಗಿರುವ ಸಮಾಖ್ಯಾ ಮೊದಲಾದ ಪ್ರಮಾಣಗಳು ದುರ್ಬಲವೆಂದು ಪ್ರತ್ಯೇಕವಾಗಿ ಹೇಳಬೇಕೇನು ? ಎಂಬ ಕೈಮುತ್ಯದಿಂದ ಸಿಗುವ ಅಭಿಪ್ರಾಯವನ್ನು ಗ್ರಂಥಕಾರರು 'ಸಮಾಖ್ಯಾ' ಇತ್ಯಾದಿ ವಾಕ್ಯದಿಂದ ವ್ಯಾಖ್ಯಾನಿಸುತ್ತಿದ್ದಾರೆ.

ವೈಶ್ವಾನರಾಧಿಕರಣ (೧-೨-೭)

**प्रकाशः** – **श्रुतित इति । वैश्वानरश्रुतित इत्यर्थः । सर्वापेक्षया श्रुतिप्राबल्यस्य ''शब्दादेव प्रमितः'' इत्यत्र सेत्स्यमानत्वादिति भावः । अन्तर्नये तु निरवकाशलिङ्गेन श्रुतिबाधः नात्र तथेति भावः ।**

'ಶ್ರುತಿತಃ' ಎಂದರೆ ವೈಶ್ವಾನರಶ್ರುತಿಯಿಂದ ಎಂದರ್ಥ. ಸಕಲಪ್ರಮಾಣಗಳಿಗಿಂತಲೂ ಶ್ರುತಿಯೇ ಪ್ರಬಲವಾಗಿರುತ್ತದೆಂಬ ವಿಚಾರವನ್ನು 'ಶಬ್ದಾದೇವ ಪ್ರಮಿತಃ' ಎಂಬ ಸೂತ್ರದಲ್ಲಿ ಸಮರ್ಥಿಸುತ್ತಾರೆಂದು ತಿಳಿಯಬೇಕು. ನಿರವಕಾಶವಾದ ಲಿಂಗದಿಂದ ಶ್ರುತಿಯು ಬಾಧಿತವಾಗುತ್ತವೆಂದು ಅಂತರಧಿಕರಣದಲ್ಲಿ ಕೇವಲ ಸಮರ್ಥಿಸಿರುತ್ತಾರೆ. ಆದರೆ ಪ್ರಕೃತ ವಿಷ್ಣುಪ್ರಾಪಕವಾದ ಲಿಂಗಗಳಿಗೆ ಅಂತಹ ನಿರವಕಾಶತ್ವವು ಇರುವುದಿಲ್ಲವೆಂದು ತಿಳಿಯಬೇಕು.

**प्रकाशः** – **यद्यपि सिद्धान्ते समाख्यादिकमिव ''अभिविमानमात्मानम्'' इत्यात्मश्रुतिरप्यस्ति । तथाऽपि तदाच्छादनेन वा, वक्ष्यमाणदिशा निरवकाशया परप्राबल्यन्यायेन प्रबलया चरमवैश्वानरश्रुत्या पूर्वस्य आत्मशब्दस्य कथञ्चिन्नेयत्वादिति वा, तस्याप्यग्न्यादिशब्दवद्विष्णौ मुख्यत्वं नेति वाऽभिप्रायेण तदनुक्तिः । तथा च वक्ष्यति ''आत्मश्रुतेश्च न ब्रह्मणि मुख्यता'' इति ।**

ವಸ್ತುತಃ ಸಿದ್ಧಾಂತದಲ್ಲಿ ಸಮಾಖ್ಯಾ ಶ್ರುತಿ ಮೊದಲಾದ ಪ್ರಮಾಣಗಳಿರುವಂತೆ "ಅಭಿವಿಮಾನಮಾತ್ಮಾನಮ್'' ಎಂಬ ಆತ್ಮಶ್ರುತಿಯೂ ಸಹ ಇದೆ. ಇದನ್ನು ಪೂರ್ವಪಕ್ಷಕಾರನು ಉಲ್ಲೇಖಿಸಬೇಕಿತ್ತು. ಆದರೆ ತನಗೆ ಈ ಆತ್ಮಶ್ರುತಿಯು ಪ್ರಬಲವಾದ ಬಾಧಕವಾಗಿದೆಯೆಂಬ ವಿವಕ್ಷೆಯಿಂದ ಪೂರ್ವಪಕ್ಷಕಾರನು ಇದನ್ನು ಮುಚ್ಚಿ ತನ್ನ ಮತವನ್ನು ಸ್ಥಾಪಿಸುತ್ತಿದ್ದಾನೆ. ಅಥವಾ ಮುಂದೆ ಹೇಳುವ ಪ್ರಕಾರ ವೈಶ್ವಾನರಶ್ರುತಿಯು ನಿರವಕಾಶವಾಗಿದೆ. ಮತ್ತು ಆತ್ಮಶ್ರುತಿಗಿಂತ ಪರದಲ್ಲಿದೆ. ಪೂರ್ವಕ್ಕಿಂತ ಪರವು ಪ್ರಬಲವಾದ್ದರಿಂದ ಅಪಚ್ಛೇದನ್ಯಾಯದಂತೆ ಪರಪ್ರಬಲನ್ಯಾಯದಿಂದ ವೈಶ್ವಾನರಶ್ರುತಿಯೇ ಆತ್ಮಶ್ರುತಿಗಿಂತ ಬಲಿಷ್ಠವಾಗಿದೆ. ಆತ್ಮಶಬಕ್ಕೆ ಅಗ್ನ್ಯಾದಿಗಳಲ್ಲಿ ಕಥಂಚಿತ್ ಯೋಜನೆ ಮಾಡಬೇಕೆಂಬ ವಿವಕ್ಷೆಯಿಂದ ಆತ್ಮಶ್ರುತಿಯನ್ನು ಉಲ್ಲೇಖಿಸಿರುವುದಿಲ್ಲ. ಅಥವಾ ಅಗ್ನಿ ಮೊದಲಾದ ಶಬ್ದಗಳು ವಿಷ್ಣುವನ್ನು ಮುಖ್ಯವಾಗಿ ಹೇಗೆ ಪ್ರತಿಪಾದಿಸಲಾರವೋ? ಅದರಂತೆ ಆತ್ಮಶಬ್ದವೂ ಸಹ ವಿಷ್ಣುವನ್ನು ಮುಖ್ಯವಾಗಿ ಪ್ರತಿಪಾದಿಸುವುದಿಲ್ಲವೆಂಬ ಕಾರಣದಿಂದ ಆತ್ಮಶ್ರುತಿಯನ್ನು ಪೂರ್ವಪಕ್ಷಿಯು ಉಲ್ಲೇಖಿಸಿರುವುದಿಲ್ಲ. ಆದ್ದರಿಂದಲೇ 'ಆತ್ಮಶ್ರುತೇಶ್ಚ ನ ಬ್ರಹ್ಮಣಿ ಮುಖ್ಯತಾ' ಆತ್ಮಶ್ರುತಿಯು ಬ್ರಹ್ಮನಲ್ಲಿ ಮುಖ್ಯವಾಗಿರುವುದಿಲ್ಲವೆಂದು ಹೇಳುತ್ತಾರೆ.

**प्रकाशः** –''नच लिङ्गस्य निरवकाशत्वेन प्राबल्यात् श्रुतिबाधकत्वम्'' इति शङ्कोत्तरे अप्युपलक्षणमिति भावेन स्वयं समाख्यादीनां बहुत्वात् प्राबल्यमिति शङ्कान्तरं हृदि कृत्वा समाधिमाह – **बहुत्वेति ।**

ಟೀಕೆಯಲ್ಲಿ "ನಚ ಲಿಂಗಸ್ಯ ನಿರವಕಾಶತ್ವೇನ ಪ್ರಾಬಲ್ಯಾತ್ ಶುತಿಬಾಧಕತ್ವಮ್'' ಲಿಂಗವು ನಿರವಕಾಶವಾಗಿ ಬಲಿಷ್ಠವಾಗಿರುವುದರಿಂದ ಶ್ರುತಿಗೆ ಬಾಧಕವಾಗಿದೆ ಎಂಬ ಶಂಕೆ ಹಾಗೂ ಉತ್ತರಗಳನ್ನು

ಉಪಲಕ್ಷಣವಾಗಿ ಹೇಳಿದ್ದಾರೆ. ಅಂದರೆ ಸಮಾಖ್ಯಾ ಮೊದಲಾದವುಗಳು ಬಹಳವಾಗಿರುವುದರಿಂದ ಬಲಿಷ್ಠವಾಗಿದೆಯಲ್ಲವೇ? ಎಂಬ ಶಂಕೆಗೆ ಶ್ರುತಿಯು ಸ್ವಭಾವತಃ ಬಲಿಷ್ಠವಾಗಿದೆಯೆಂದು ಪೂರ್ವಪಕ್ಷಕಾರರು ಉತ್ತರಿಸುತ್ತಾರೆ. ಇದನ್ನು ಉಪಲಕ್ಷಣಯಾ ವಿವಕ್ಷಿಸಬೇಕು. ಈ ಅಭಿಪ್ರಾಯದಿಂದ 'ಬಹುತ್ವ' ಇತ್ಯಾದಿ ಗ್ರಂಥವು ಹೊರಟಿವೆ.

**प्रकाशः** – उक्तं हीति । विष्णुतत्त्वनिर्णयोदाहृतब्रह्मतर्कवाक्य इत्यर्थः । 'सः' स्वभावः उपजीव्यत्वनिरवकाशत्वश्रुतित्वरूप इत्यर्थः ।

'ಉಕ್ತಂ ಹಿ' ಎಂದರೆ ವಿಷ್ಣುತತ್ತ್ವನಿರ್ಣಯದಲ್ಲಿ ಉದಾಹರಿಸಲ್ಪಟ್ಟ ಬ್ರಹ್ಮತರ್ಕದ ವಾಕ್ಯದಲ್ಲಿ ಹೇಳಿದ್ದಾರೆಂದರ್ಥ. 'ಸಃ' ಎಂಬ ಶಬ್ದಕ್ಕೆ ಸ್ವಭಾವ ಎಂದರ್ಥ. ಸ್ವಭಾವತಃ ಪ್ರಬಲವೆಂದರೆ ಉಪಜೀವ್ಯತ್ವ, ನಿರವಕಾಶತ್ವ, ಶ್ರುತಿತ್ವ ರೂಪವಾದ ಪ್ರಾಬಲ್ಯವೆಂದು ಅಭಿಪ್ರಾಯ.

**प्रकाशः** – यद्यपि पूर्वपक्षेऽपि वैश्वानरश्रुतिरिव ''अयमग्निः'' इत्याद्यग्निश्रुतिः, ''वैश्वानरे तद् हुतं भवति हृदयं गार्हपत्यो मनोऽन्वहार्यपचन आस्यमाहवनीयः'' इति ''येनेदमन्नं पच्यते'' इत्यादिना श्रुतानि होमाधिकरणत्वागार्हपत्याद्यङ्गकत्व-पाचकत्वादिलिङ्गानि च सन्तीति प्रापकबाहुल्यमस्ति । तथाऽपि टीकायां ''श्रुतितः'' इत्युक्त्यनुरोधेन तन्मात्रेणैव बहुत्वकृतप्राबल्यस्य बाध उक्तः ।

ವಸ್ತುತಃ ಸಿದ್ಧಾಂತದಲ್ಲಿ ಅನೇಕ ಪ್ರಾಪಕಲಿಂಗಗಳಿರುವಂತೆ ಪೂರ್ವಪಕ್ಷದಲ್ಲಿಯೂ ಇರುತ್ತವೆ. ವೈಶ್ವಾನರ ಶ್ರುತಿಯಂತೆ 'ಅಯಮಗ್ನಿಃ' ಇತ್ಯಾದಿ ಅಗ್ನಿ ಶ್ರುತಿಗಳು 'ವೈಶ್ವಾನರೇ ತದ್ ಹುತಂ ಭವತಿ' ಎಂಬುದರಿಂದ ಹೋಮಾಧಿಕರಣತ್ವವೆಂಬ ಲಿಂಗ, 'ಹೃದಯಂ ಗಾರ್ಹಪತ್ಯೋ ಮನೋಽನ್ವಹಾರ್ಯಪಚನ ಆಸ್ಯಮಾಹವನೀಯಃ' ಎಂಬುದರಿಂದ 'ಗಾರ್ಹಪತ್ಯಾದ್ಯಂಗಕತ್ವ' 'ಯೇನೇದಮನ್ನಮ್' ಎಂಬುದರಿಂದ 'ಪಾಚಕತ್ವ' ಮೊದಲಾದ ಲಿಂಗಗಳೆಲ್ಲವೂ ಪೂರ್ವಪಕ್ಷವಿಷಯಗಳಲ್ಲಿ ಪ್ರಮಾಣಗಳಾಗಿವೆ. ಇದನ್ನೂ ಸಹ ಗ್ರಂಥಕಾರರು ಪೂರ್ವಪಕ್ಷದಲ್ಲಿ ತೋರಿಸಬೇಕಿತ್ತು. ಆದರೂ ಸಹ ಟೀಕೆಯಲ್ಲಿ ''ಶ್ರುತಿತಃ'' ಎಂದು ಹೇಳಿದ್ದರಿಂದ ಅದಕ್ಕನುಸಾರಿಯಾಗಿ ಗ್ರಂಥಕಾರರು ವ್ಯಾಖ್ಯಾನಿಸಿದ್ದಾರೆ. ಶ್ರುತಿಯಿಂದ ಎಂದು ಹೇಳಿದ್ದರಿಂದ ಲಿಂಗಬಾಹುಲ್ಯ ಪ್ರಯುಕ್ತ ಬರುವ ಪ್ರಾಬಲ್ಯಕ್ಕೆ ಬಾಧವನ್ನು ಹೇಳಿದಂತಾಗುತ್ತದೆ ಎಂದಭಿಪ್ರಾಯ. ಅಂದರೆ ಸಿದ್ಧಾಂತದಲ್ಲಿ ಅನೇಕ ಪ್ರಾಪಕಗಳಿದ್ದರೂ ಶ್ರುತಿಯು ಕೇವಲ ಸ್ವಭಾವಪ್ರಯುಕ್ತವಾಗಿ ಬಲಿಷ್ಠವಾಗಿ ಆ ಎಲ್ಲಾ ಲಿಂಗಗಳನ್ನು ಬಾಧಿಸುತ್ತದೆ. ಇಷ್ಟರಿಂದಲೇ ಪೂರ್ವಪಕ್ಷಕಾರನ ಅಭಿಪ್ರಾಯವು ಸಿದ್ಧವಾಗುವಾಗ ಸಿದ್ಧಾಂತದಂತೆ ಪೂರ್ವಪಕ್ಷದಲ್ಲಿಯೂ ಅನೇಕ ಪ್ರಾಪಕಗಳಿರುವಾಗ ಪೂರ್ವಪಕ್ಷಕಾರನ ಅಭಿಪ್ರಾಯವು ನಿರ್ಣಯವಾಗುತ್ತದೆಂದು ಪ್ರತ್ಯೇಕ ಹೇಳಬೇಕೇನು? ಎಂಬ ಕೈಮುತ್ಯವನ್ನು ಗ್ರಂಥಕಾರರು ತಿಳಿಸಿದ್ದಾರೆ.



ಛಾಂದೋಗ್ಯಾದಿ ಉಪನಿಷತ್ತುಗಳಲ್ಲಿ ಪ್ರಸ್ತುತನಾದ ವೈಶ್ವಾನರನು ಜಡವಾದ ಅಗ್ನಿ ಅಥವಾ ಅಗ್ನಿದೇವತೆ ಹೊರತು; ವಿಷ್ಣುವಲ್ಲ. ಏಕೆಂದರೆ ಲೋಕದಲ್ಲಿ ಶ್ರುತ್ಯುಕ್ತ 'ವೈಶ್ವಾನರ' ಶಬ್ದವನ್ನು ಇವರಿಬ್ಬರಲ್ಲಿಯೇ ಪ್ರಯೋಗಿಸುತ್ತಾರೆ. ಆದ್ದರಿಂದ ಶ್ರುತಿಯು ಅಗ್ನಿಯೇ ವೈಶ್ವಾನರನೆನ್ನಲು ಪ್ರಬಲವಾದ ಪ್ರಮಾಣವಾಗಿದೆ. ವಸ್ತುತಃ ಸರ್ವಗತತ್ವಧರ್ಮವು ವಿಷ್ಣುವಿನಲ್ಲಿರಬಹುದು. ಆದರೆ ಲಿಂಗಕ್ಕಿಂತ ಶ್ರುತಿಯು ಪ್ರಬಲವಾಗಿರುವುದರಿಂದ ಅಗ್ನಿಯೇ ವೈಶ್ವಾನರಶಬ್ದದಿಂದ ಪ್ರತಿಪಾದ್ಯನಾಗಬೇಕು. ಶ್ರುತಿಸಮಾಖ್ಯಾ, ಪುರುಷಸೂಕ್ತ ಸಮಾಖ್ಯಾ, ಆತ್ಮಶಬ್ದ, ಬ್ರಹ್ಮಪ್ರಕರಣ, ಸರ್ವಗತತ್ವಲಿಂಗ ಇವೇ ಮೊದಲಾದ ಅನೇಕ ಪ್ರಮಾಣಗಳು ಸಿದ್ಧಾಂತ ಸ್ಥಾಪಕಗಳಾಗಿವೆಯಲ್ಲವೇ? ಎಂದು ಪ್ರಶ್ನಿಸಬಾರದು. ಸ್ವಭಾವತಃ ಬಲಿಷ್ಠವಾದ ಒಂದೇ ಶ್ರುತಿಯು ಆ ಎಲ್ಲ ಲಿಂಗಗಳನ್ನು ಬಾಧಿಸುತ್ತದೆ. ಹೀಗೆ ಶ್ರುತಿಯ ಆಧಾರದಿಂದ ಅಗ್ನಿದೇವತೆಯು ವೈಶ್ವಾನರನಾಗಿದ್ದಾನೆಂದು ಪೂರ್ವಪಕ್ಷಕಾರನ ಅಭಿಪ್ರಾಯ.



• • • • •

ನಿರ್ಧಾರಿತ ಪೂರ್ವಪಕ್ಷವೋ ? ಅನಿರ್ಧಾರಿತ ಪೂರ್ವಪಕ್ಷವೋ ?

**तात्पर्यचन्द्रिका**

**न चान्तराद्यधिकरणन्यायेन वैश्वानराग्न्यादिश्रुतिः ब्रह्मणि मुख्येति सावकाशा, लिङ्गं तु निरवकाशमिति वाच्यं, तथात्वे श्रुतेरन्यत्रप्रसिद्ध्ययोगात् ।**

ಅನುವಾದ - ಪ್ರಶ್ನೆ - ಅಂತಃಸ್ಥತ್ವಾಧಿಕರಣದ ನ್ಯಾಯದಿಂದ ವೈಶ್ವಾನರ, ಅಗ್ನಿ ಮೊದಲಾದ ಶ್ರುತಿಗಳು ಬ್ರಹ್ಮನಲ್ಲಿ ಮುಖ್ಯವಾಗಿ ಸಮನ್ವಯಗೊಂಡಿವೆ. ಆದ್ದರಿಂದ ಅಜ್ಞಾನಿಗಳಲ್ಲಿ ಪ್ರಸಿದ್ಧವಾಗಿರುವ ವೈಶ್ವಾನರಾದಿಶಬ್ದಗಳು ಸಾವಕಾಶವಾದವು. ವಿಷ್ಣುವಿನಲ್ಲಿರುವ ಸರ್ವಗತತ್ವಾದಿ ಲಿಂಗಗಳು ನಿರವಕಾಶವಾಗಿವೆಯಲ್ಲವೇ?

ಉತ್ತರ - ಇದು ತಪ್ಪು. ಹಾಗಾದರೆ ಶ್ರುತಿಗೆ ಅನ್ಯತ್ರಪ್ರಸಿದ್ಧಿಯೇ ಕೂಡದೇ ಹೋಗಬೇಕಾಗುತ್ತದೆ. ಆಗ - 'ಶಬ್ದಗಳು ಅನ್ಯತ್ರಪ್ರಸಿದ್ಧವಾಗಿವೆ' ಎಂಬುದೇ ತಪ್ಪಾಗಬೇಕಾಗುತ್ತದೆ. ಅಗ್ನಿ ಮೊದಲಾದ ಶಬ್ದಗಳನ್ನು ಲೋಕದಲ್ಲಿ ವಿಷ್ಣುವನ್ನು ಬಿಟ್ಟು ಬೇರೆ ಕಡೆ ಪ್ರಯೋಗಿಸುತ್ತಾರೆ. ಇದೆಲ್ಲವೂ ನಿಮ್ಮ ಪ್ರಕಾರ ಅಯುಕ್ತವಾಗಬೇಕಾದೀತು ಎಂದಭಿಪ್ರಾಯ.

**नच ''जगद्वाचित्वात्'' इति वक्ष्यमाणन्यायेन लौकिकैरन्यत्रैव शब्दव्यवहारात् प्रसिद्ध्युपपत्तिरिति वाच्यं, ब्रह्मणि मुख्यत्वे अन्यत्रप्रसिद्धिव्यवहारस्यैवायोगात् ।**

ಪ್ರಶ್ನೆ - ಜ್ಞಾನಿಗಳು 'ಜಗದ್ವಾಚಿತ್ವಾತ್' ಎಂಬ ಮುಂದೆ ಹೇಳುವ ನ್ಯಾಯದಿಂದ ವಿಷ್ಣುವಿನಲ್ಲೇ ಪ್ರಸಿದ್ಧವಾಗಿರುವ ಶಬ್ದಗಳನ್ನು ಲೋಕವ್ಯವಹಾರಕ್ಕೋಸ್ಕರ ಬೇರೆ ಕಡೆ ಪ್ರಯೋಗಿಸುತ್ತಾರೆ. ಹೀಗೆ ಹೇಳುವುದರಿಂದಲೂ ಶಬ್ದಗಳಿಗೆ ಅನ್ಯತ್ರಪ್ರಸಿದ್ಧಿಯನ್ನು ಉಪಪಾದಿಸಬಹುದಲ್ಲವೇ?

ಉತ್ತರ - ಇದೂ ಸಹ ತಪ್ಪು. ಹಾಗಾದರೆ ಎಲ್ಲಾ ಶಬ್ದಗಳು ಬ್ರಹ್ಮನಲ್ಲಿ ಮುಖ್ಯವಾಗಿರುವುದರಿಂದ ಅನ್ಯತ್ರಪ್ರಸಿದ್ಧ ಎಂಬ ವ್ಯವಹಾರವೇ ಇಲ್ಲವಾದೀತು. ಆಗಬೇರೆ ಕಡೆ ವ್ಯವಹಾರ ಮಾಡುವುದೇ ಕೂಡುವುದಿಲ್ಲ.

**यदि च "शरीररूपकविन्यस्तगृहीतेः" इति वक्ष्यमाणन्यायेन मुख्यार्थभूतब्रह्म-सम्बन्धादन्यत्र प्रयोगः, तर्हि गङ्गादिशब्दानां तीरादाविव अन्यत्र लक्षणादिः स्यात् ।**

ಪ್ರಶ್ನೆ - "ಶರೀರರೂಪಕವಿನ್ಯಸ್ತಗೃಹಿತೇಃ" ಎಂಬ ಮುಂದೆ ಹೇಳುವ ನ್ಯಾಯದಿಂದ ಮುಖ್ಯಾರ್ಥನಾದ ಬ್ರಹ್ಮನ ಸಂಬಂಧದಿಂದಷ್ಟೇ ಬೇರೆ ಪದಾರ್ಥಗಳಲ್ಲಿ ಶಬ್ದಗಳನ್ನು ಪ್ರಯೋಗಿಸುತ್ತೇವೆ. ಹೀಗೆ ಹೇಳುವುದರಿಂದಲೂ ಅನ್ಯತ್ರಪ್ರಸಿದ್ಧಿಯನ್ನು ಉಪಪಾದಿಸಬಹುದು.

ಉತ್ತರ - ಹಾಗಾದರೆ ಗಂಗಾದಿ ಶಬ್ದಗಳಿಗೆ ತೀರಾದಿಗಳಲ್ಲಿ ಹೇಗೆ ಲಕ್ಷಣಾ ಮಾಡುತ್ತೇವೋ ಆದರಂತೆ ಸಕಲ ಶಬ್ದಗಳಿಗೆ ಲೋಕದಲ್ಲಿರುವ ಸರ್ವಪದಾರ್ಥಗಳಲ್ಲಿ ಲಕ್ಷಣಾಮಾಡಬೇಕಾದ ಪ್ರಸಂಗ ಬರುತ್ತದೆ.

**तथा च ब्रह्मणि मुख्यानामिन्द्रादिशब्दानाम् अग्न्यादौ, अग्न्यादिशब्दानां चेन्द्रादौ प्रयोगस्स्यात् ।**

**नहि तीरपुरुषमाणवकचित्रलिखितसिंहादौ गङ्गामञ्चाग्निसिंहशब्दा एव प्रयुज्यन्ते,**

**नतु रूढ्या योगेन वा गङ्गादिवाचिपदान्तराणीति नियमोऽस्ति । अन्यथाऽग्न्यादौ वह्न्यादिशब्दस्याप्यप्रयोगः स्यात् ।**

ಎಲ್ಲಾ ಶಬ್ದಗಳಿಗೆ ಹೀಗೆ ಲಕ್ಷಣಾ ಮಾಡುವುದಾದರೆ ಬ್ರಹ್ಮನಲ್ಲಿ ಮುಖ್ಯವಾದ ಇಂದ್ರಾದಿಶಬ್ದಗಳಿಗೆ ಅಗ್ನ್ಯಾದಿಗಳಲ್ಲಿಯೂ ಲಕ್ಷಣಾ ಮಾಡಬಹುದು. ಮತ್ತು ಅಗ್ನ್ಯಾದಿ ಶಬ್ದಗಳಿಗೆ ಇಂದ್ರಾದಿಗಳಲ್ಲಿಯೂ ಲಕ್ಷಣಾ ಮಾಡಿ ಪ್ರಯೋಗ ಮಾಡಬೇಕಾದೀತು ! ಅಂದರೆ ಅಗ್ನಿಯನ್ನು ಇಂದ್ರನೆಂದು, ಇಂದ್ರನನ್ನು ಅಗ್ನಿಯೆಂದು ಕರೆಯಬಹುದು. ಏಕೆಂದರೆ ತೀರ, ಪುರುಷ, ಮಾಣವಕ, ಚಿತ್ರಲಿಖಿತಸಿಂಹ, ಇವುಗಳಲ್ಲಿ, ಗಂಗಾಶಬ್ದ, ಮಂಚಶಬ್ದ, ಅಗ್ನಿಶಬ್ದ, ಸಿಂಹಶಬ್ದಗಳನ್ನೇ ಕ್ರಮವಾಗಿ ಪ್ರಯೋಗ ಮಾಡಬೇಕೆಂಬ ನಿಯಮವಿರುವುದಿಲ್ಲ ಎಂದರೆ ರೂಢಿಯಿಂದಲೋ ಅಥವಾ ಯೋಗದಿಂದಲೋ

ಗಂಗೆ ಮೊದಲಾದವುಗಳನ್ನು ಪ್ರತಿಪಾದಿಸುವ ಬೇರೆ ಶಬ್ದಗಳನ್ನೇ ಪ್ರಯೋಗಿಸಬೇಕೆಂಬ ನಿಯಮವೇ ಇರುವುದಿಲ್ಲ. ಹೀಗೊಪ್ಪದಿದ್ದರೆ ಅಂದರೆ ಈ ಶಬ್ದವನ್ನು ಇಲ್ಲಿಯೇ ಪ್ರಯೋಗಿಸಬೇಕೆಂದು ಆಗ್ರಹಿಸುವುದಿಲ್ಲವಾದರೆ ಅಗ್ನ್ಯಾದಿಗಳಲ್ಲಿ 'ವಹ್ನಿ' ಎಂಬ ಶಬ್ದವನ್ನು 'ಹುತಾಷನ' ಎಂಬ ಶಬ್ದವನ್ನೂ ಸಹ ಪ್ರಯೋಗ ಮಾಡದೇ ಇರಬೇಕಾದೀತು.

**नच ''समाकर्षात्'' इति वक्ष्यमाणन्यायेन । वाचकत्वाविशेषेऽपि राज्ञि भृत्ये च जयिशब्दस्येव, अग्न्यादिशब्दानां ब्रह्मणि मुख्यत्वमन्यत्रामुख्यत्वं चेति युक्तं,**

ಶಂಕಾ - ನಾಲ್ಕನೆಯ ಪಾದದಲ್ಲಿರುವ ಸಮಾಕರ್ಷಾಧಿಕರಣದ ನ್ಯಾಯದಂತೆ ಇಲ್ಲಿ ಪ್ರಯೋಗ ಮಾಡಬಹುದೇ? ಎಂದರೆ 'ಜಯೀ' ಎಂಬ ಶಬ್ದವನ್ನು ರಾಜನಲ್ಲಿ ಮತ್ತು ಭೃತ್ಯನಲ್ಲಿ ಪ್ರಯೋಗಿಸಲಾಗುತ್ತದೆ. ಇಬ್ಬರಲ್ಲಿಯೂ 'ಜಯೀ' ಎಂಬ ಶಬ್ದದ ವಾಚಕತ್ವವು ಸಾಧಾರಣವಾಗಿದೆ. ಆದರೆ ಈ ಶಬ್ದವು ಮುಖ್ಯವಾದ ಜಯವನ್ನು ರಾಜನಲ್ಲಿ ಹೇಳುತ್ತಿದೆ. ಅಮುಖ್ಯವಾದ ಜಯವನ್ನು ಭೃತ್ಯನಲ್ಲಿ ಹೇಳುತ್ತಿದೆ. ಇದು ಸಮಾಕರ್ಷಾಧಿಕರಣ ನ್ಯಾಯ ಇಲ್ಲಿ ಹೇಳಿದಂತೆ ಅಗ್ನ್ಯಾದಿಶಬ್ದಗಳು ಬ್ರಹ್ಮನಲ್ಲಿ ಮುಖ್ಯವಾಗಿರುತ್ತವೆ. ಅಗ್ನ್ಯಾದಿಗಳಲ್ಲಿ ಅಮುಖ್ಯವಾಗಿರುತ್ತದೆಂದು ಹೇಳಬಹುದಲ್ಲವೇ?

**'भृत्यो जयी' इत्यत्र हि भृत्यशब्दस्य भृत्ये मुख्यत्वात्तदन्वयाय जयिशब्दस्यामुख्यता । ब्रह्मणोऽन्यत्र तु कश्चिदपि शब्दो न मुख्योऽस्ति, यदन्वयाय शब्दान्तरस्यामुख्यता ।**

ಉತ್ತರ - ದೃಷ್ಟಾಂತವು ವಿಷಮವಾಗಿದೆ. ಏಕೆಂದರೆ 'ಭೃತ್ಯಃ ಜಯೀ' ಎಂದು ಹೇಳಿದಾಗ 'ಜಯೀ' ಎಂಬ ಶಬ್ದಕ್ಕೆ ಅಮುಖ್ಯಾರ್ಥವನ್ನು ಸ್ವೀಕರಿಸುವುದು ಅನಿವಾರ್ಯ. ಏಕೆಂದರೆ ಭೃತ್ಯಶಬ್ದಕ್ಕೆ ಭೃತ್ಯನಲ್ಲಿ ಮುಖ್ಯಾರ್ಥವಿರುತ್ತದೆ. ಅದರ ಜೊತೆಗೆ ಅನ್ವಯ ಮಾಡುವುದಕ್ಕಾಗಿ 'ಜಯೀ' ಎಂಬ ಶಬ್ದಕ್ಕೆ ಅಮುಖ್ಯಾರ್ಥವನ್ನು ಸ್ವೀಕರಿಸುತ್ತೇವೆ. ಅದರಂತೆ ಬ್ರಹ್ಮನ ವಿಷಯದಲ್ಲಿ ಹೇಳಲಾಗದು. ಏಕೆಂದರೆ ಬ್ರಹ್ಮನನ್ನು ಬಿಟ್ಟು ಬೇರೆ ಪದಾರ್ಥಗಳನ್ನು ಪ್ರತಿಪಾದಿಸಲು ಯಾವುದೇ ಶಬ್ದಗಳಿರುವುದಿಲ್ಲ. ಹಾಗೇನಾದರೂ ಅಗ್ನ್ಯಾದಿಗಳಲ್ಲಿ ಮುಖ್ಯವಾದ ಶಬ್ದವಿದ್ದಿದ್ದರೆ ಅದರ ಜೊತೆಗೆ ಅನ್ವಯ ಮಾಡುವುದಕ್ಕಾಗಿ ಮತ್ತೊಂದು ಶಬ್ದಕ್ಕೆ ಅಮುಖ್ಯಾರ್ಥವನ್ನು ಸ್ವೀಕರಿಸಬಹುದಿತ್ತು. ಉದಾಹರಣೆ - 'ಅಗ್ನಿಃ ಸ್ವಾಹಾಪತಿಃ' ಎಂದು ಹೇಳಿದಾಗ 'ಸ್ವಾಹಾಪತಿ' ಶಬ್ದವು ಮುಖ್ಯವಾಗಿ ಅಗ್ನಿಯಲ್ಲಿದ್ದರೆ 'ಅಗ್ನಿ' ಶಬ್ದಕ್ಕೆ ಅಮುಖ್ಯಾರ್ಥವನ್ನು ಮಾಡಬಹುದಿತ್ತು. ಆದರೆ ಎಲ್ಲಾ ಶಬ್ದಗಳು ವಿಷ್ಣುಪರವೆಂದೆಂದಾಗ 'ಸ್ವಾಹಾಪತಿ' ಶಬ್ದವೂ ಸಹ ವಿಷ್ಣು ಪರವೇ ಆಗುತ್ತದೆ.

**एतेन हानादिव्यवहाराय अन्यत्र प्रयोग इति परास्तम् । अग्निव्यहारस्याग्निशब्देनैव सिद्धेर्वह्न्यादिशब्दाप्रयोगापातात् ।**

ಪರಿಪೂರ್ಣಚಂದ್ರಿಕಾ

ಪ್ರಶ್ನೆ - ಹಾನಾದಿವ್ಯವಹಾರಕ್ಕೋಸ್ಕರ ಬೇರೆ ಕಡೆ ಶಬ್ದಗಳನ್ನು ಪ್ರಯೋಗಿಸುತ್ತೇವೆ. ಆದ್ದರಿಂದ ಅವ್ಯವಸ್ಥಾದೋಷವು ಹೇಗೆ ಬರುತ್ತದೆ?

ಉತ್ತರ - ಈ ಪ್ರಶ್ನೆಯೂ ಸಹ ನಿರಾಕೃತವಾಯಿತು. ಏಕೆಂದರೆ ಅಗ್ನಿವ್ಯವಹಾರವನ್ನು ಅಗ್ನಿಶಬ್ದದಿಂದಲೇ ಮಾಡಲು ಬರುವಾಗ ವಹ್ನ್ಯಾದಿಶಬ್ದಗಳನ್ನೇಕೆ ಪ್ರಯೋಗಿಸಬೇಕು. ಆದ್ದರಿಂದ ಅವ್ಯವಸ್ಥಾದೋಷವು ಇದ್ದೇ ಇರುತ್ತದೆ.

**अत एव पाचकत्वाद्यग्निलिङ्गानामात्मश्रुतेश्च न ब्रह्मणि मुख्यता, अन्यत्राप्रयोगापातात् ।**

ಇಲ್ಲಿಯ ತನಕ ಅನ್ಯತ್ರಪ್ರಸಿದ್ಧಿಯೆಂಬ ನಿರವಕಾಶಲಿಂಗದಿಂದ ಪೂರ್ವಪಕ್ಷ ಶ್ರುತಿಗೆ ಪ್ರಾಬಲ್ಯವನ್ನು ಸಮರ್ಥಿಸಿದರು. ಈ ಕಾರಣದಿಂದಲೇ ಸಿದ್ಧಾಂತ ಪ್ರಾಪಕವಾದ ಪಾಚಕತ್ವಾದಿ ಲಿಂಗಗಳು ಹಾಗೂ ಆತ್ಮಶ್ರುತಿ ಇವುಗಳೂ ಸಹ ಬ್ರಹ್ಮನಲ್ಲಿ ಮುಖ್ಯವಾಗಿ ಬರುವುದಿಲ್ಲವೆಂದು ತಿಳಿಯುತ್ತದೆ. ಹಾಗೇನಾದರೂಬ್ರಹ್ಮನಲ್ಲಿ ಮುಖ್ಯವಾಗುವುದಾದರೆ ಅನ್ಯತ್ರಪ್ರಯೋಗವು ಕೂಡದೇ ಇರಬೇಕಾದೀತು.

**किञ्चेन्द्राग्न्यादिशब्दानां ब्रह्मण्येव मुख्यत्वे सूक्तव्यवस्था, विद्याव्यवस्था च न स्यात्, अमुख्यवृत्त्या तद्व्यवस्थाया निरस्तत्वात् ।**

ಮತ್ತು ಇಂದ್ರ, ಅಗ್ನಿ ಮೊದಲಾದ ಶಬ್ದಗಳು ಬ್ರಹ್ಮನಲ್ಲಿಯೇ ಮುಖ್ಯವಾಗಿ ಇರುವುದಾದರೆ ಇದು ಅಗ್ನಿಸೂಕ್ತ, ಇದು ವಾಯುಸೂಕ್ತ ಎಂಬ ವ್ಯವಸ್ಥೆಯೂ, ಹಾಗೂ ಇದು ಅಗ್ನಿವಿದ್ಯೆ, ಇದು ವೈಶ್ವಾನರ ವಿದ್ಯೆ ಎಂಬ ವ್ಯವಸ್ಥೆಯೂ ತಪ್ಪಾಗಬೇಕಾದೀತು. ಅಮುಖ್ಯವೃತ್ತಿಯಿಂದ ಮಾಡಲ್ಪಡುವ ವ್ಯವಸ್ಥೆಯನ್ನು ಈಗಾಗಲೇ ನಿರಾಕರಿಸಿದ್ದೇವೆ.

**टीकादौ वैश्वानरश्रुतेस्साधारण्योक्तिस्तु श्रुतित्वप्रयुक्ते विशेषे सत्येव श्रुतिलिङ्गयोर्निरवकाशत्वप्रयुक्तसाधारण्यमभिप्रेत्य ।**

ಶ್ರುತಿತ್ವ ಪ್ರಯುಕ್ತವಾದ ವಿಶೇಷವಿದ್ದರೆ ಮಾತ್ರ ಶ್ರುತಿಗಾಗಿ ಲಿಂಗಗಳಿಗೆ ನಿರವಕಾಶತ್ವ ಪ್ರಯುಕ್ತವಾದ ಸಾಧಾರಣ್ಯವು ಬರುತ್ತದೆ ಎಂಬ ಅಭಿಪ್ರಾಯದಿಂದ ವೈಶ್ವಾನರಶ್ರುತಿ ಸಾಧಾರಣ ಎಂದು ಟೀಕಾದಿಗಳಲ್ಲಿ ಹೇಳಲಾಗಿದೆ. ಇದರ ಅಭಿಪ್ರಾಯ ಹೀಗಿದೆ - ಪೂರ್ವಪಕ್ಷಯುಕ್ತಿಯು ಸಿದ್ಧಾಂತ ಯುಕ್ತಿಗಿಂತ ಪ್ರಬಲವಾಗಿರುವುದಾದರೆ ಟೀಕೆ, ಭಾಷ್ಯ ಮತ್ತು ಸೂತ್ರಗಳಲ್ಲಿ ಪೂರ್ವಪಕ್ಷಿಯುಕ್ತಿಗೆ ಏಕೆ ಪ್ರಾಬಲ್ಯವನ್ನು ಹೇಳಿರುವುದಿಲ್ಲ ಎಂದರೆ ಸೂತ್ರದಲ್ಲಿ ಸಾಧಾರಣಶಬ್ದವನ್ನು ಬಳಸಿದ್ದಾರೆ. ಅದಕ್ಕನುಗುಣವಾಗಿ ಶ್ರುತಿಯಲ್ಲಿ ಶ್ರುತಿತ್ವಪ್ರಯುಕ್ತವಾಗಿರುವ ಪ್ರಾಬಲ್ಯವನ್ನು ವಿವಕ್ಷೆ ಮಾಡದೇ ಕೇವಲ ನಿರವಕಾಶಪ್ರಯುಕ್ತವಾದ ಪ್ರಾಬಲ್ಯವನ್ನು ವಿವಕ್ಷಿಸಿದ್ದಾರೆ. ಹೀಗೆ ಹೇಳಿದಾಗ ಮಾತ್ರವೇ ಸೂತ್ರದಲ್ಲಿರುವ 'ಸಾಧಾರಣ' ಎಂಬ ಶಬ್ದವನ್ನು ವ್ಯಾಖ್ಯಾನಿಸಿದಂತಾಗುತ್ತದೆ. ಪೂರ್ವಪಕ್ಷ ಶ್ರುತಿ ಹಾಗೂ ಸಿದ್ಧಾಂತದ

ಲಿಂಗಗಳಲ್ಲಿ ನಿರವಕಾಶತ್ವವು ಸಾಧಾರಣವಾಗಿರುವುದರಿಂದ ವಿಷ್ಣುವೇ ವೈಶ್ವಾನರವೆಂಬ ನಿಶ್ಚಯವನ್ನು ಮಾಡಲಾಗದೆಂದು ಪೂರ್ವಪಕ್ಷ ಮಾಡಿದ್ದಾರೆ.

**टीकायां लिङ्गस्य निरवकाशत्वोक्तिरपि स्वतोऽवकाशाभावाभिप्राया, अन्यथा 'सर्वगतत्वं च न तस्य' इति टीकाविरोधात् ।**

ಟೀಕೆಯಲ್ಲಿ ಸಿದ್ಧಾಂತ ಲಿಂಗಕ್ಕೆ ನಿರವಕಾಶತ್ವವನ್ನು ಹೇಳಿದ್ದಾರೆ. ಆದರೆ ಸ್ವತಃ ಅವಕಾಶವಿಲ್ಲವೆಂಬ ಅಭಿಪ್ರಾಯದಿಂದಷ್ಟೇ ಅದನ್ನು ಅರ್ಥೈಸಿಕೊಳ್ಳಬೇಕು. ಇಲ್ಲದಿದ್ದರೆ ಉಪಸಂಹಾರ ಮಾಡುವ ಟೀಕೆಯಲ್ಲಿ 'ಸರ್ವಗತತ್ವಂ ಚ ನ ತಸ್ಯ' ವಿಷ್ಣುವಿನಲ್ಲಿ ಸರ್ವಗತತ್ವವೂ ಸಹ ಬರುವುದಿಲ್ಲವೆಂದು ಹೇಳಿದ್ದು ವಿರುದ್ಧವಾಗುತ್ತದೆ.

**''नतु लिङ्गेन विष्णुपरतानिश्चयः'' इति टीकायामपि 'किन्तु प्रसिद्ध्याऽग्न्यादि परत्वनिश्चयः'' इति शेषः ।**

'ನ ತು ಲಿಂಗೇನ ವಿಷ್ಣುಪರತಾನಿಶ್ಚಯಃ' ಎಂಬ ಟೀಕೆಯನ್ನು ನೋಡಿದಾಗಲೂ ಸಂದೇಹಾತ್ಮಕವಾದ ಪೂರ್ವಪಕ್ಷವನ್ನೇ ಮಾಡಿದ್ದಾರೆಂದು ತೋರುತ್ತದೆ. ಆದರೆ ಆ ವಾಕ್ಯದ ಅನಂತರ 'ಕಿಂತು ಪ್ರಸಿದ್ಧ್ಯಾಽಗ್ನ್ಯಾದಿಪರತ್ವನಿಶ್ಚಯಃ' ಹೊರತಾಗಿ ಪ್ರಸಿದ್ಧಿಯಿಂದ ಅಗ್ನ್ಯಾದಿ ಪರತ್ವವೇ ನಿಶ್ಚಯವಾಗುತ್ತದೆ ಎಂಬುದನ್ನು ಶೇಷಪೂರ್ಣಮಾಡಿಕೊಳ್ಳಬೇಕು. ಹೀಗೆ ಮಾಡಿದಾಗ ಅಗ್ನಿಯೇ ವೈಶ್ವಾನರನಾಗಿದ್ದಾನೆಂಬ ನಿಶ್ಚಯಾತ್ಮಕವಾದ ಪೂರ್ವಪಕ್ಷವನ್ನು ಮಾಡಿದಂತಾಗುತ್ತದೆ.

**यद्वा – टीकादिस्वारस्याय विष्णुपरत्वानध्यवसायेन पूर्वपक्षोऽस्तु । एवञ्च पक्षद्वयेऽप्यतीतसर्वाधिकरणाक्षेपः । अत एवास्य पादद्वयान्त्यतेति ।।**

ಅಥವಾ ಟೀಕೆ, ಭಾಷ್ಯ, ಸೂತ್ರಗಳಿಗೆ ಸ್ವಾರಸ್ಯಕರವಾದ ಅರ್ಥವನ್ನು ತಿಳಿಯಬೇಕೆಂದರೆ ವಿಷ್ಣುವೇ ವೈಶ್ವಾನರನಾಗಿದ್ದಾನೆಂಬ ನಿರ್ಣಯವನ್ನು ಮಾಡಲಾಗದೆಂದು ವಿಷ್ಣುಪರತ್ವಾನಧ್ಯವಸಾಯದಿಂದ ಪೂರ್ವಪಕ್ಷವನ್ನು ವಿವಕ್ಷಿಸಬಹುದು.

ಈ ಎರಡು ವಿಧ ಪೂರ್ವಪಕ್ಷವನ್ನು ಇಟ್ಟುಕೊಂಡಾಗಲೂ ಪ್ರಥಮಪಾದ ಹಾಗೂ ದ್ವಿತೀಯಪಾದಗಳಲ್ಲಿರುವ ಎಲ್ಲ ಅಧಿಕರಣಗಳನ್ನು ಆಕ್ಷೇಪ ಮಾಡಿದಂತಾಗುತ್ತದೆ. ಅದಕ್ಕೋಸ್ಕರವೇ ಈ ಅಧಿಕರಣವು ಎರಡು ಪಾದಗಳ ಕೊನೆಯಲ್ಲಿ ಪ್ರಸಕ್ತವಾಗಿದೆ.

**प्रकाशः –**

एवं श्रुतेः श्रुतित्वप्रयुक्तप्राबल्यमुपपाद्य इदानीं निरवकाशत्वेनापि प्राबल्यं वक्तुम् 'अन्तरधिकरणन्यायेन विष्णावपि श्रुतेः वृत्तिरस्तीति चेत्' इति

**न्यायविवरणटीकोक्तमत्रापि ग्राह्यमिति भावेन 'नच लिङ्गस्य'' इत्यादिटीकां व्याचष्टे – न चेत्यादिना ।**

ವಿವರಣೆ - ಇಲ್ಲಿಯ ತನಕ ಶ್ರುತಿಗೆ ಶ್ರುತಿತ್ವಪ್ರಯುಕ್ತವಾದ ಪ್ರಾಬಲ್ಯವನ್ನು ಸಮರ್ಥಿಸಿದ್ದಾಯಿತು. ಈಗ ನಿರವಕಾಶತ್ವ ಪ್ರಯುಕ್ತವಾಗಿಯೂ ಸಹ ಪ್ರಾಬಲ್ಯವಿರುತ್ತದೆಂಬುದನ್ನು ಸಮರ್ಥಿಸಲು 'ಅಂತರಧಿಕರಣನ್ಯಾಯೇನ ವಿಷ್ಣಾವಪಿ ಶ್ರುತೇಃ ವೃತ್ತಿರಸ್ತೀತಿ ಚೇತ್' 'ಅಂತರಧಿಕರಣದ ನ್ಯಾಯದಿಂದ ವಿಷ್ಣುವಿನಲ್ಲಿಯೂ ಶ್ರುತಿಯು ಬರುವುದಾದರೆ' ಎಂಬ ನ್ಯಾಯವಿವರಣೆಯ ಟೀಕೆಯಲ್ಲಿ ಹೇಳಿದ್ದನ್ನು ಇಲ್ಲಿಯೂ ಸ್ವೀಕರಿಸಬೇಕೆಂಬ ಅಭಿಪ್ರಾಯದಿಂದ 'ನಚ ಲಿಂಗಸ್ಯ' ಇತ್ಯಾದಿ ಟೀಕೆಯನ್ನು ವ್ಯಾಖ್ಯಾನಿಸುತ್ತಿದ್ದಾರೆ - 'ನಚ' ಇತ್ಯಾದಿ ಗ್ರಂಥದಿಂದ.

**प्रकाशः – अन्तरादीति । ''अन्तस्तद्धर्म'' इत्यत्राधिदैवगताशेषनाम्नां निरवकाशलिङ्गेन विष्णौ मुख्यत्वोक्तेः, ''चेतोर्पणनिगदात्'' इत्यत्र अशेषनाम्नां विष्णावुपासनार्थत्वोक्तेः, ''ज्योतिश्चरण'' इत्यत्रशेषसूक्तस्याग्निज्योतिरादिशब्दानां विष्णौ मुख्यत्वोक्तेरिति भावः ।**

'ಅಂತರಾದ್ಯಧಿಕರಣೇನ' ಎಂಬುದಕ್ಕೆ ಹೀಗರ್ಥ - 'ಅಂತಸ್ತದ್ಧರ್ಮೋಪದೇಶಾತ್' ಎಂಬ ಸೂತ್ರದಲ್ಲಿ ಆಧಿದೈವಿಕವಾದ ಸಕಲಶಬ್ದಗಳ ಸಮನ್ವಯವನ್ನು ನಿರವಕಾಶಲಿಂಗದಿಂದ ವಿಷ್ಣುವಿನಲ್ಲಿ ಮುಖ್ಯವಾಗಿ ಸಮರ್ಥಿಸಿದ್ದಾರೆ. ಮತ್ತು 'ಚೇತೋರ್ಪಣನಿಗದಾತ್' ಎಂಬ ಸೂತ್ರದಲ್ಲಿ ನಾಮಾತ್ಮಕವಾದ ಸಕಲಶಬ್ದಗಳ ಸಮನ್ವಯವು ಉಪಾಸನೆಗೋಸ್ಕರ ವಿಷ್ಣುವಿನಲ್ಲಿ ಸಾರ್ಥಕಗಳಾಗುತ್ತವೆಂದು ಸಮರ್ಥಿಸಿದ್ದಾರೆ. 'ಜ್ಯೋತಿಶ್ಚರಣಾಭಿಧಾನಾತ್' ಎಂಬ ಸೂತ್ರದಲ್ಲಿ ಸಕಲ ಸೂಕ್ತಗಳಲ್ಲಿರುವ ಅಗ್ನಿ, ಜ್ಯೋತಿ ಮೊದಲಾದ ಶಬ್ದಗಳಿಗೆ ವಿಷ್ಣುವಿನಲ್ಲಿ ಮುಖ್ಯಪ್ರತಿಪಾದ್ಯತ್ವವನ್ನು ಸಮರ್ಥಿಸಿದ್ದಾರೆ. ಆದ್ದರಿಂದ ಎಂದರ್ಥ.

**प्रकाशः – केचित्तु – ''अन्तर उपपत्तेः'' इत्यत्राग्निप्रयुक्ताहंशब्दस्य विष्णौ मुख्यत्वोक्तेस्तन्न्यायेनेत्यर्थ इत्याहुः । तच्चिन्त्यं, ''शास्त्रदृष्ट्या'' इत्यत्रैव मुख्यत्वसिद्ध्या अत्र भाष्यादौ तस्यैव स्मरणात् । तावताऽग्निशब्दस्य विष्णौ मुख्यत्वासिद्धेश्चेति । ''अन्तरधिकरणन्यायेन'' इति क्वचित्पाठः ।**

ಕೆಲವರು 'ಅಂತರ ಉಪಪತ್ತೇಃ' ಎಂಬಲ್ಲಿ ಅಗ್ನಿಯಿಂದ ಪ್ರಯೋಗಿಸಲ್ಪಟ್ಟ 'ಅಹಂ' ಶಬ್ದಕ್ಕೆ ವಿಷ್ಣುವಿನಲ್ಲಿ ಮುಖ್ಯಾರ್ಥತ್ವವನ್ನು ಹೇಳಲಾಗಿದೆ. ಆ ನ್ಯಾಯದಿಂದ ಎಂಬರ್ಥವನ್ನು 'ಅಂತರಾದ್ಯಧಿಕರಣನ್ಯಾಯೇನ' ಎಂಬ ಪದಕ್ಕೆ ವ್ಯಾಖ್ಯಾನಿಸುತ್ತಾರೆ. ಇವರ ಅಭಿಪ್ರಾಯವು ಸರಿಯೋ? ಅಲ್ಲವೋ? ಎಂಬುದನ್ನು ಯೋಚನೆ ಮಾಡಬೇಕು. ಏಕೆಂದರೆ 'ಶಾಸ್ತ್ರದೃಷ್ಟ್ಯಾ' ಎಂಬ ಸೂತ್ರದಲ್ಲಿಯೇ 'ಅಹಂ' ಶಬ್ದವು ವಿಷ್ಣುವಿನಲ್ಲಿ ಮುಖ್ಯವಾಗಿದೆಯೆಂದು ಸಿದ್ಧವಾಗಿದೆ. ಈ ಭಾಷ್ಯದಲ್ಲಿ ಅದನ್ನು ಕೇವಲ ಸ್ಮರಿಸಿಕೊಳ್ಳುತ್ತಿದ್ದಾರೆ. ಮತ್ತು 'ಅಹಂ' ಶಬ್ದಕ್ಕೆ ವಿಷ್ಣುವಿನಲ್ಲಿ ಮುಖ್ಯತ್ವವನ್ನು ಹೇಳಿದ ಮಾತ್ರದಿಂದ ಅಗ್ನಿಶಬ್ದಕ್ಕೆ ವಿಷ್ಣುವಿನಲ್ಲಿ ಮುಖ್ಯತ್ವವನ್ನು ಸಾಧಿಸಿದಂತಾಗುವುದಿಲ್ಲ. ಇನ್ನೂ ಕೆಲವು ಪುಸ್ತಕಗಳಲ್ಲಿ 'ಅಂತರಧಿಕರಣನ್ಯಾಯೇನ' ಎಂಬ ಪಾಠವಿದೆ. ಈ ಪಕ್ಷದಲ್ಲಂತೂ ನಾವು ಹೇಳಿದ ಅರ್ಥವೇ ಸಾಧುವೆಂದು ತಿಳಿಯುತ್ತದೆ.

ವೈಶ್ವಾನರಾಧಿಕರಣ (೧-೨-೭)

**प्रकाशः** – तथात्व इति । लिङ्गनिरवकाशत्वेन श्रुतेर्ब्रह्मणि मुख्यत्व इत्यर्थः । तथा च निरवकाशया श्रुत्या लिङ्गमेवाग्नौ सावकाशयितव्यमिति भावः ।

'ತಥಾತ್ವೇ' ಎಂದರೆ ಲಿಂಗವು ನಿರವಕಾಶವಾದ್ದರಿಂದ ಶ್ರುತಿಯು ಬ್ರಹ್ಮನಲ್ಲಿ ಮುಖ್ಯವಾಗಿ ಸಂಭವಿಸುವುದಾದರೆ ಎಂದರ್ಥ. ಆದ್ದರಿಂದ ನಿರವಕಾಶವಾದ ಶ್ರುತಿಯಬಲದಿಂದ ಲಿಂಗವನ್ನೇ ಅಗ್ನಿಯಲ್ಲಿ ಸಾವಕಾಶಮಾಡಬೇಕೆಂದು ಅಭಿಪ್ರಾಯ.

**प्रकाशः** – यद्यपि प्राक् समाख्यादिकमपि प्रकृतम् । तथाऽपि टीकायां "लिङ्गस्य निरवकाशत्वे" इति लिङ्गमात्रोक्तेःस्तदनुरोधेन वा, लिङ्गनिरवकाशत्वेन निरवकाशश्रुतिबाधो नेति सिद्धौ तादृशसमाख्यानादिना नेति कैमुत्यसिद्धत्वाद्वा, पूर्वत्र 'अन्तस्तद्धर्मोपदेशात्'' "आकाशस्तल्लिङ्गात्" "अत एव प्राणः" इत्यादौ सर्वत्र लिङ्गनिरवकाशत्वमाश्रित्य श्रुतेर्ब्रह्मणि मुख्यत्वोक्तेस्तत्सर्वाक्षेपाय तत्साधारण्योक्त्यर्थत्वाद्वा लिङ्गमात्रोक्तिः ।

**प्रकाशः** – तथा च वक्ष्यति – "अतीतसर्वाधिकरणाक्षेपः" इति । टीकायां लिङ्गमात्रोक्ताविदमेव बीजमित्याहुः ।

ಮತ್ತೇನೆಂದರೆ ಹಿಂದೆ ಸಾಮಾಖ್ಯಾದಿಗಳೂ ಸಹ ಪ್ರಕೃತವಾಗಿವೆ. ಆದರೂ ಗ್ರಂಥಕಾರರು ಲಿಂಗವನ್ನಷ್ಟೇ ಉಲ್ಲೇಖಿಸುತ್ತಿದ್ದಾರೆ. ಇದಕ್ಕೇನು ಕಾರಣ? ಎಂದರೆ ಟೀಕೆಯಲ್ಲಿ ಲಿಂಗವು ನಿರವಕಾಶವೆಂದು ಲಿಂಗವನ್ನಷ್ಟೇ ಉಲ್ಲೇಖಿಸಿರುವುದರಿಂದ ಅದಕ್ಕನುಸಾರಿಯಾಗಿ ಇಲ್ಲಿಯೂ ಸಹ ಗ್ರಂಥಕಾರರು ಲಿಂಗವನ್ನು ಮಾತ್ರ ಉಲ್ಲೇಖಿಸುತ್ತಿದ್ದಾರೆ. ಅಥವಾ ನಿರವಕಾಶವಾದ ಲಿಂಗದಿಂದಲೇ ನಿರವಕಾಶವಾದ ಶ್ರುತಿಗೆ ಬಾಧವು ಬರುವುದಿಲ್ಲವೆಂದು ಸಿದ್ಧವಾದ ಮೇಲೆ ನಿರವಕಾಶವಾದ ಸಮಾಖ್ಯಾ ಮೊದಲಾದ ಪ್ರಮಾಣಗಳಿಂದಲೂ ಸಹ ಬಾಧವು ಬರುವುದಿಲ್ಲವೆಂದು ಪ್ರತ್ಯೇಕ ಹೇಳಬೇಕೇನು ? ಎಂಬ ಕೈಮುತ್ಯನ್ಯಾಯದಿಂದ ಸಿದ್ಧವಾಗಿರುವುದರಿಂದ ಪ್ರತ್ಯೇಕವಾಗಿ ಅವುಗಳನ್ನು ಹೇಳಿರುವುದಿಲ್ಲ. ಅಥವಾ ಹಿಂದೆ 'ಅಂತಸ್ತದ್ಧರ್ಮೋಪದೇಶಾತ್' 'ಆಕಾಶಸ್ತಲ್ಲಿಂಗಾತ್' 'ಅತ ಏವ ಪ್ರಾಣಃ' ಇತ್ಯಾದಿ ಸೂತ್ರಗಳಲೆಲ್ಲಾ ಲಿಂಗವು ನಿರವಕಾಶವಾಗಿದೆ ಎಂಬ ಪೂರ್ವಪಕ್ಷವನ್ನೇ ಆಶ್ರಯಿಸಿ ಬ್ರಹ್ಮನಲ್ಲಿ ಶ್ರುತಿಗೆ ಮುಖ್ಯಪ್ರತಿಪಾದ್ಯತ್ವವನ್ನು ಸಮರ್ಥಿಸಲಾಗಿದೆ. ಎಲ್ಲಾ ಅಧಿಕರಣಗಳಲ್ಲಿಯೂ ಲಿಂಗವೇ ಸಾಧಾರಣವಾಗಿರುವುದರಿಂದ ಇಲ್ಲಿಯೂ ಸಹ ಅದನ್ನೇ ಸ್ವೀಕರಿಸಿದ್ದಾರೆ. ಆದ್ದರಿಂದ ಈ ಎಲ್ಲ ಅಧಿಕರಣಗಳನ್ನು ಆಕ್ಷೇಪಿಸುವುದಕ್ಕೋಸ್ಕರ, ಅಥವಾ ಅವುಗಳಲ್ಲಿ ಸಾಧಾರಣವಾದ ಅಂಶವನ್ನು ಹೇಳುವುದಕ್ಕೋಸ್ಕರ ಕೇವಲ ಲಿಂಗವನ್ನು ಮಾತ್ರ ಹೇಳಿದ್ದು ಆದ್ದರಿಂದಲೇ ಮುಂದೆ 'ಅತೀತಸರ್ವಾಧಿಕರಣಾಕ್ಷೇಪಃ' ಎಂದು ಹೇಳುತ್ತಾರೆ. ಮೇಲೆ ಹೇಳಿದ ಕಾರಣಗಳಿರುವುದರಿಂದಲೇ ಟೀಕೆಯಲ್ಲಿಯೂ ಕೇವಲ ಲಿಂಗವನ್ನು ಸ್ವೀಕರಿಸಿದ್ದಾರೆ.

ಪರಿಪೂರ್ಣಚಂದ್ರಿಕಾ

**प्रकाशः** – ''न हि वैश्वानरश्रुतेरग्न्यादिविषयत्वाभावे व्यवहारस्य गत्यन्तरमस्ति'' इति टीकां विवरीतुं सम्भावितगत्यन्तरमाशङ्क्य निराह – नचेति ।

'ನ ಹಿ ವೈಶ್ವಾನರಶ್ರುತೇರಗ್ನ್ಯಾದಿವಿಷಯತ್ವಾಭಾವೇ ವ್ಯವಹಾರಸ್ಯ ಗತ್ಯಂತರಮಸ್ತಿ' ವೈಶ್ವಾನರ ಶ್ರುತಿಯು ಅಗ್ನ್ಯಾದಿಗಳನ್ನು ವಿಷಯೀಕರಿಸದಿದ್ದರೆ ವ್ಯವಹಾರಕ್ಕೆ ಬೇರೆ ಗತಿಯಿರುವುದಿಲ್ಲ ಎಂಬ ಟೀಕೆಯನ್ನು ವಿಸ್ತರಿಸುವುದಕ್ಕಾಗಿ ಗತ್ಯಂತರವನ್ನು ಆಕ್ಷೇಪಿಸಿ ಉತ್ತರಿಸುತ್ತಿದ್ದಾರೆ 'ನಚ' ಇತ್ಯಾದಿ ಗ್ರಂಥದಿಂದ.

**प्रकाशः** – चतुर्थपादे ''समाकर्षात्'' इत्याधिकरणे शब्दानां विष्णावेव मुख्यत्वेनान्यत्र अमुख्यत्वापत्त्या माणवकादावग्न्यादिशब्दप्रसिद्ध्यदर्शनेनान्यत्र-प्रसिद्ध्ययोगात्, विष्णावेव प्रसिद्ध्यापत्तेश्चेति शङ्कायां लोकस्य जगत्येव शब्द॰ यवहारेण तत्रैव तच्छ्रोतॄणां व्युत्पत्तेर्विष्णौ तथा बहुलव्यवहाराभावेन व्युत्पत्त्यभावाच्च जगति प्रसिद्धेः 'अग्निर्माणवकः' इति व्यवहारादनवगताग्निशब्दमुख्यार्थस्य माणवके अग्निशब्दव्युत्पत्त्या तस्य तत्रैव प्रसिद्धिवदनवगतभगवद्रूपमुख्यार्थस्य भगवद-ज्ञानमूलत्वेन अन्यथोपपत्तेरिति ''जगद्वाचित्वात्'' इति गुणसूत्रोक्तन्यायेनेत्यर्थः ।

ಪ್ರಥಮಾಧ್ಯಾಯದ ನಾಲ್ಕನೆಯ ಪಾದದಲ್ಲಿರುವ ಬರುವ 'ಸಮಾಕರ್ಷಾತ್' ಎಂಬ ಅಧಿಕರಣದಲ್ಲಿ ಹೀಗೆ ಹೇಳಿದ್ದಾರೆ. ಸಕಲ ಶಬ್ದಗಳೆಲ್ಲವೂ ವಿಷ್ಣುವನ್ನೇ ಪ್ರತಿಪಾದನೆ ಮಾಡುವುದಾದರೆ ಉಳಿದ ಪದಾರ್ಥಗಳಲ್ಲಿ ಅಮುಖ್ಯವಾಗಿರುತ್ತದೆಂದು ಹೇಳಿದಂತಾಯಿತು. ಆವಾಗ ಮಾಣವಕಾದಿಗಳಲ್ಲಿ ಅಗ್ನಿಶಬ್ದವನ್ನು ಅಮುಖ್ಯವಾಗಿ ಪ್ರಯೋಗಿಸುವುದರಿಂದ ಹೇಗೆ ಅಗ್ನಿಶಬ್ದವು ಮಾಣವಕಾದಿಗಳಲ್ಲಿ ಪ್ರಸಿದ್ಧವಾಗಿಲ್ಲವೋ? ಅದರಂತೆ ಅಮುಖ್ಯವಾದ ಸಕಲಪದಾರ್ಥಗಳಲ್ಲಿರುವ ಶಬ್ದಗಳೆಲ್ಲವೂ ಅನ್ಯತ್ರಪ್ರಸಿದ್ಧವಾಗದೇ ಇರಬೇಕಾದೀತು. ಮತ್ತು ವಿಷ್ಣುವಿನಲ್ಲಿ ಮುಖ್ಯವಾಗಿರುವುದರಿಂದ ಅವನಲ್ಲಿ ಮಾತ್ರವೇ ಶಬ್ದಗಳು ಪ್ರಸಿದ್ಧವಾಗಬೇಕಾದೀತು. ಹೀಗೆ ಆಕ್ಷೇಪ ಮಾಡಿಕೊಂಡು ಎಲ್ಲರೂ ಶಬ್ದಗಳನ್ನು ಜಗತ್ತಿನಲ್ಲೇ ವ್ಯವಹಾರ ಮಾಡುತ್ತಿದ್ದಾರೆ. ಆ ವ್ಯವಹಾರಕ್ಕೆ ಅನುಸಾರಿಯಾಗಿ ವ್ಯುತ್ಪತ್ತಿಯನ್ನೂ ಸಹ ಜಗತ್ತಿನಲ್ಲಿಯೇ ಹೇಳಿರುತ್ತಾರೆ. ಆ ಶಬ್ದವನ್ನು ಶ್ರವಣ ಮಾಡಿದವರಿಗೂ ಸಹ ಜಗತ್ತಿನಲ್ಲೇ ಆ ಶಬ್ದದ ವ್ಯುತ್ಪತ್ತಿ ಬರುತ್ತಿದೆ. ಆದರೆ ವಿಷ್ಣುವಿನಲ್ಲಿ ಹಾಗೆ ಬಹುಲವಾದ ವ್ಯವಹಾರವಿಲ್ಲದ ಕಾರಣ ವಿಷ್ಣುವಿನಲ್ಲಿ ಶಬ್ದಗಳ ವ್ಯುತ್ಪತ್ತಿಯನ್ನು ಲೌಕಿಕರು ತಿಳಿದಿರುವುದಿಲ್ಲ. ಯಾವರೀತಿಯಾಗಿ 'ಅಗ್ನಿರ್ಮಾಣವಕಃ' ಎಂಬ ವ್ಯವಹಾರದಿಂದ ಮಾಣವಕನಲ್ಲಷ್ಟೇ ಅಗ್ನಿಶಬ್ದದ ಪ್ರಯೋಗವನ್ನು ತಿಳಿದು ಅಗ್ನಿಶಬ್ದದ ಮುಖ್ಯಾರ್ಥವನ್ನು ಯಾರು ತಿಳಿದಿರುವುದಿಲ್ಲವೋ, ಅವನಿಗೆ ಅಗ್ನಿಶಬ್ದವನ್ನು ಕೇಳಿದಾಗ ಮಾಣವಕನ ಜ್ಞಾನವೇ ಬರುತ್ತದೆ. ಅಗ್ನಿಶಬ್ದವು ಅವನಿಗೆ ಮಾಣವಕನಲ್ಲಿಯೇ ಪ್ರಸಿದ್ಧವಾಗಿರುತ್ತದೆ. ಅದರಂತೆ ಲೌಕಿಕರಿಗೆ ಭಗವಂತನ ಅರಿವು ಇಲ್ಲದ ಕಾರಣ ಸಕಲಶಬ್ದಗಳು ಅವನನ್ನೇ ಪ್ರತಿಪಾದಿಸುತ್ತವೆಂಬ ವಿಚಾರವು ತಿಳಿದಿರುವುದಿಲ್ಲ. ಭಗವಂತನ ಅಜ್ಞಾನದ ಮೂಲಕವಾಗಿ ಸಕಲಶಬ್ದಗಳನ್ನು ಭಗವಂತನಲ್ಲಿ ವ್ಯವಹರಿಸದೇ ಲೋಕದಲ್ಲಿಯೇ ವ್ಯವಹರಿಸುತ್ತಾರೆ. ಈ ವಿಷಯವನ್ನು 'ಜಗದ್ವಾಚಿತ್ವಾತ್' ಎಂಬ ಗುಣಸೂತ್ರದಲ್ಲಿ ಪ್ರತಿಪಾದಿಸಿದ್ದಾರೆ.

**प्रकाशः – तथात्व इति । लिङ्गनिरवकाशत्वेन श्रुतेर्ब्रह्मणि मुख्यत्व इत्यर्थः । तथा च निरवकाशया श्रुत्या लिङ्गमेवाग्नौ सावकाशयितव्यमिति भावः ।**

'ತಥಾತ್ವೇ' ಎಂದರೆ ಲಿಂಗವು ನಿರವಕಾಶವಾದ್ದರಿಂದ ಶ್ರುತಿಯು ಬ್ರಹ್ಮನಲ್ಲಿ ಮುಖ್ಯವಾಗಿ ಸಂಭವಿಸುವುದಾದರೆ ಎಂದರ್ಥ. ಆದ್ದರಿಂದ ನಿರವಕಾಶವಾದ ಶ್ರುತಿಯಬಲದಿಂದ ಲಿಂಗವನ್ನೇ ಅಗ್ನಿಯಲ್ಲಿ ಸಾವಕಾಶಮಾಡಬೇಕೆಂದು ಅಭಿಪ್ರಾಯ.

**प्रकाशः – यद्यपि प्राक् समाख्यादिकमपि प्रकृतम् । तथाऽपि टीकायां "लिङ्गस्य निरवकाशत्वे" इति लिङ्गमात्रोक्तेःस्तदनुरोधेन वा, लिङ्गनिरवकाशत्वेन निरवकाशश्रुतिबाधो नेति सिद्धौ तादृशसमाख्यानादिना नेति कैमुत्यसिद्धत्वाद्वा, पूर्वत्र 'अन्तस्तद्धर्मोपदेशात्" "आकाशस्तल्लिङ्गात्" "अत एव प्राणः" इत्यादौ सर्वत्र लिङ्गनिरवकाशत्वमाश्रित्य श्रुतेर्ब्रह्मणि मुख्यत्वोक्तेस्तत्सर्वाक्षेपाय तत्साधारण्योक्त्यर्थत्वाद्वा लिङ्गमात्रोक्तिः ।**

**प्रकाशः – तथा च वक्ष्यति – "अतीतसर्वाधिकरणाक्षेपः" इति । टीकायां लिङ्गमात्रोक्ताविदमेव बीजमित्याहुः ।**

ಮತ್ತೇನೆಂದರೆ ಹಿಂದೆ ಸಾಮಾಖ್ಯಾದಿಗಳೂ ಸಹ ಪ್ರಕೃತವಾಗಿವೆ. ಆದರೂ ಗ್ರಂಥಕಾರರು ಲಿಂಗವನ್ನಷ್ಟೇ ಉಲ್ಲೇಖಿಸುತ್ತಿದ್ದಾರೆ. ಇದಕ್ಕೇನು ಕಾರಣ? ಎಂದರೆ ಟೀಕೆಯಲ್ಲಿ ಲಿಂಗವು ನಿರವಕಾಶವೆಂದು ಲಿಂಗವನ್ನಷ್ಟೇ ಉಲ್ಲೇಖಿಸಿರುವುದರಿಂದ ಅದಕ್ಕನುಸಾರಿಯಾಗಿ ಇಲ್ಲಿಯೂ ಸಹ ಗ್ರಂಥಕಾರರು ಲಿಂಗವನ್ನು ಮಾತ್ರ ಉಲ್ಲೇಖಿಸುತ್ತಿದ್ದಾರೆ. ಅಥವಾ ನಿರವಕಾಶವಾದ ಲಿಂಗದಿಂದಲೇ ನಿರವಕಾಶವಾದ ಶ್ರುತಿಗೆ ಬಾಧವು ಬರುವುದಿಲ್ಲವೆಂದು ಸಿದ್ಧವಾದ ಮೇಲೆ ನಿರವಕಾಶವಾದ ಸಮಾಖ್ಯಾ ಮೊದಲಾದ ಪ್ರಮಾಣಗಳಿಂದಲೂ ಸಹ ಬಾಧವು ಬರುವುದಿಲ್ಲವೆಂದು ಪ್ರತ್ಯೇಕ ಹೇಳಬೇಕೇನು ? ಎಂಬ ಕೈಮುತ್ಯನ್ಯಾಯದಿಂದ ಸಿದ್ಧವಾಗಿರುವುದರಿಂದ ಪ್ರತ್ಯೇಕವಾಗಿ ಅವುಗಳನ್ನು ಹೇಳಿರುವುದಿಲ್ಲ. ಅಥವಾ ಹಿಂದೆ 'ಅಂತಸ್ತದ್ಧರ್ಮೋಪದೇಶಾತ್' 'ಆಕಾಶಸ್ತಲ್ಲಿಂಗಾತ್' 'ಅತ ಏವ ಪ್ರಾಣಃ' ಇತ್ಯಾದಿ ಸೂತ್ರಗಳಲೆಲ್ಲಾ ಲಿಂಗವು ನಿರವಕಾಶವಾಗಿದೆ ಎಂಬ ಪೂರ್ವಪಕ್ಷವನ್ನೇ ಆಶ್ರಯಿಸಿ ಬ್ರಹ್ಮನಲ್ಲಿ ಶ್ರುತಿಗೆ ಮುಖ್ಯಪ್ರತಿಪಾದ್ಯತ್ವವನ್ನು ಸಮರ್ಥಿಸಲಾಗಿದೆ. ಎಲ್ಲಾ ಅಧಿಕರಣಗಳಲ್ಲಿಯೂ ಲಿಂಗವೇ ಸಾಧಾರಣವಾಗಿರುವುದರಿಂದ ಇಲ್ಲಿಯೂ ಸಹ ಅದನ್ನೇ ಸ್ವೀಕರಿಸಿದ್ದಾರೆ. ಆದ್ದರಿಂದ ಈ ಎಲ್ಲ ಅಧಿಕರಣಗಳನ್ನು ಆಕ್ಷೇಪಿಸುವುದಕ್ಕೋಸ್ಕರ, ಅಥವಾ ಅವುಗಳಲ್ಲಿ ಸಾಧಾರಣವಾದ ಅಂಶವನ್ನು ಹೇಳುವುದಕ್ಕೋಸ್ಕರ ಕೇವಲ ಲಿಂಗವನ್ನು ಮಾತ್ರ ಹೇಳಿದ್ದು ಆದ್ದರಿಂದಲೇ ಮುಂದೆ 'ಅತೀತಸರ್ವಾಧಿಕರಣಾಕ್ಷೇಪಃ' ಎಂದು ಹೇಳುತ್ತಾರೆ. ಮೇಲೆ ಹೇಳಿದ ಕಾರಣಗಳಿರುವುದರಿಂದಲೇ ಟೀಕೆಯಲ್ಲಿಯೂ ಕೇವಲ ಲಿಂಗವನ್ನು ಸ್ವೀಕರಿಸಿದ್ದಾರೆ.

ಪರಿಪೂರ್ಣಚಂದ್ರಿಕಾ

**प्रकाशः** – "न हि वैश्वानरश्रुतेरग्न्यादिविषयत्वाभावे व्यवहारस्य गत्यन्तरमस्ति" इति टीकां विवरीतुं सम्भावितगत्यन्तरमाशङ्क्य निराह – **नचेति ।**

'ನ ಹಿ ವೈಶ್ವಾನರಶ್ರುತೇರಗ್ನ್ಯಾದಿವಿಷಯತ್ವಾಭಾವೇ ವ್ಯವಹಾರಸ್ಯ ಗತ್ಯಂತರಮಸ್ತಿ' ವೈಶ್ವಾನರ ಶ್ರುತಿಯು ಅಗ್ನ್ಯಾದಿಗಳನ್ನು ವಿಷಯೀಕರಿಸದಿದ್ದರೆ ವ್ಯವಹಾರಕ್ಕೆ ಬೇರೆ ಗತಿಯಿರುವುದಿಲ್ಲ ಎಂಬ ಟೀಕೆಯನ್ನು ವಿಸ್ತರಿಸುವುದಕ್ಕಾಗಿ ಗತ್ಯಂತರವನ್ನು ಆಕ್ಷೇಪಿಸಿ ಉತ್ತರಿಸುತ್ತಿದ್ದಾರೆ 'ನಚ' ಇತ್ಯಾದಿ ಗ್ರಂಥದಿಂದ.

**प्रकाशः** – चतुर्थपादे "समाकर्षात्" इत्याधिकरणे शब्दानां विष्णावेव मुख्यत्वेनान्यत्र अमुख्यत्वापत्त्या माणवकादावग्न्यादिशब्दप्रसिद्ध्यदर्शनेनान्यत्र-प्रसिद्ध्ययोगात्, विष्णावेव प्रसिद्ध्यापत्तेश्चेति शङ्कायां लोकस्य जगत्येव शब्दव्यवहारेण तत्रैव तच्छ्रोतॄणां व्युत्पत्तेर्विष्णौ तथा बहुलव्यवहाराभावेन व्युत्पत्त्यभावाच्च जगति प्रसिद्धेः 'अग्निर्माणवकः' इति व्यवहारादनवगताग्निशब्दमुख्यार्थस्य माणवके अग्निशब्दव्युत्पत्त्या तस्य तत्रैव प्रसिद्धिवदनवगतभगवद्रूपमुख्यार्थस्य भगवद्-ज्ञानमूलत्वेन अन्यथोपपत्तेरिति "जगद्वाचित्वात्" इति गुणसूत्रोक्तन्यायेनेत्यर्थः ।

ಪ್ರಥಮಾಧ್ಯಾಯದ ನಾಲ್ಕನೆಯ ಪಾದದಲ್ಲಿರುವ ಬರುವ 'ಸಮಾಕರ್ಷಾತ್' ಎಂಬ ಅಧಿಕರಣದಲ್ಲಿ ಹೀಗೆ ಹೇಳಿದ್ದಾರೆ. ಸಕಲ ಶಬ್ದಗಳೆಲ್ಲವೂ ವಿಷ್ಣುವನ್ನೇ ಪ್ರತಿಪಾದನೆ ಮಾಡುವುದಾದರೆ ಉಳಿದ ಪದಾರ್ಥಗಳಲ್ಲಿ ಅಮುಖ್ಯವಾಗಿರುತ್ತದೆಂದು ಹೇಳಿದಂತಾಯಿತು. ಆವಾಗ ಮಾಣವಕಾದಿಗಳಲ್ಲಿ ಅಗ್ನಿಶಬ್ದವನ್ನು ಅಮುಖ್ಯವಾಗಿ ಪ್ರಯೋಗಿಸುವುದರಿಂದ ಹೇಗೆ ಅಗ್ನಿಶಬ್ದವು ಮಾಣವಕಾದಿಗಳಲ್ಲಿ ಪ್ರಸಿದ್ಧವಾಗಿಲ್ಲವೋ? ಅದರಂತೆ ಅಮುಖ್ಯವಾದ ಸಕಲಪದಾರ್ಥಗಳಲ್ಲಿರುವ ಶಬ್ದಗಳೆಲ್ಲವೂ ಅನ್ಯತ್ರಪ್ರಸಿದ್ಧವಾಗದೇ ಇರಬೇಕಾದೀತು. ಮತ್ತು ವಿಷ್ಣುವಿನಲ್ಲಿ ಮುಖ್ಯವಾಗಿರುವುದರಿಂದ ಅವನಲ್ಲಿ ಮಾತ್ರವೇ ಶಬ್ದಗಳು ಪ್ರಸಿದ್ಧವಾಗಬೇಕಾದೀತು. ಹೀಗೆ ಆಕ್ಷೇಪ ಮಾಡಿಕೊಂಡು ಎಲ್ಲರೂ ಶಬ್ದಗಳನ್ನು ಜಗತ್ತಿನಲ್ಲೇ ವ್ಯವಹಾರ ಮಾಡುತ್ತಿದ್ದಾರೆ. ಆ ವ್ಯವಹಾರಕ್ಕೆ ಅನುಸಾರಿಯಾಗಿ ವ್ಯುತ್ಪತ್ತಿಯನ್ನೂ ಸಹ ಜಗತ್ತಿನಲ್ಲಿಯೇ ಹೇಳಿರುತ್ತಾರೆ. ಆ ಶಬ್ದವನ್ನು ಶ್ರವಣ ಮಾಡಿದವರಿಗೂ ಸಹ ಜಗತ್ತಿನಲ್ಲೇ ಆ ಶಬ್ದದ ವ್ಯುತ್ಪತ್ತಿ ಬರುತ್ತಿದೆ. ಆದರೆ ವಿಷ್ಣುವಿನಲ್ಲಿ ಹಾಗೆ ಬಹುಲವಾದ ವ್ಯವಹಾರವಿಲ್ಲದ ಕಾರಣ ವಿಷ್ಣುವಿನಲ್ಲಿ ಶಬ್ದಗಳ ವ್ಯುತ್ಪತ್ತಿಯನ್ನು ಲೌಕಿಕರು ತಿಳಿದಿರುವುದಿಲ್ಲ. ಯಾವರೀತಿಯಾಗಿ 'ಅಗ್ನಿರ್ಮಾಣವಕಃ' ಎಂಬ ವ್ಯವಹಾರದಿಂದ ಮಾಣವಕನಲ್ಲಷ್ಟೇ ಅಗ್ನಿಶಬ್ದದ ಪ್ರಯೋಗವನ್ನು ತಿಳಿದು ಅಗ್ನಿಶಬ್ದದ ಮುಖ್ಯಾರ್ಥವನ್ನು ಯಾರು ತಿಳಿದಿರುವುದಿಲ್ಲವೋ, ಅವನಿಗೆ ಅಗ್ನಿಶಬ್ದವನ್ನು ಕೇಳಿದಾಗ ಮಾಣವಕನ ಜ್ಞಾನವೇ ಬರುತ್ತದೆ. ಅಗ್ನಿಶಬ್ದವು ಅವನಿಗೆ ಮಾಣವಕನಲ್ಲಿಯೇ ಪ್ರಸಿದ್ಧವಾಗಿರುತ್ತದೆ. ಅದರಂತೆ ಲೌಕಿಕರಿಗೆ ಭಗವಂತನ ಅರಿವು ಇಲ್ಲದ ಕಾರಣ ಸಕಲಶಬ್ದಗಳು ಅವನನ್ನೇ ಪ್ರತಿಪಾದಿಸುತ್ತವೆಂಬ ವಿಚಾರವು ತಿಳಿದಿರುವುದಿಲ್ಲ. ಭಗವಂತನ ಅಜ್ಞಾನದ ಮೂಲಕವಾಗಿ ಸಕಲಶಬ್ದಗಳನ್ನು ಭಗವಂತನಲ್ಲಿ ವ್ಯವಹರಿಸದೇ ಲೋಕದಲ್ಲಿಯೇ ವ್ಯವಹರಿಸುತ್ತಾರೆ. ಈ ವಿಷಯವನ್ನು 'ಜಗದ್ವಾಚಿತ್ವಾತ್' ಎಂಬ ಗುಣಸೂತ್ರದಲ್ಲಿ ಪ್ರತಿಪಾದಿಸಿದ್ದಾರೆ.

**प्रकाशः** – ''साक्षादप्यविरोधम्'' इति सूत्रव्यावर्त्यमाह – **ब्रह्मणीति** । एतेनात्र नयेऽन्यत्र व्यवहारे ''साक्षात्'' इति सूत्रेणोक्ते सति, तस्य गत्युक्तिस्तत्र युज्यते । स एवायमयुक्त इत्याक्षिप्यत इति तेन गतार्थत्वमपि नेति दर्शितम् । तथा चानुव्याख्यति ''समाकर्षात्'' इत्यत्र टीकायां ''सर्वशब्दानां परमात्मैकवाचित्वे अन्यत्र व्यवहाराभावात्'' इति ।

'ಸಾಕ್ಷಾದಪ್ಯವಿರೋಧಂ ಜೈಮಿನಿಃ' ಎಂಬ ಸೂತ್ರದಿಂದ ವ್ಯಾವರ್ತ್ಯವಾದ ಪೂರ್ವಪಕ್ಷವನ್ನು 'ಬ್ರಹ್ಮಣಿ' ಎಂಬ ವಾಕ್ಯದಿಂದ ತೋರಿಸುತ್ತಿದ್ದಾರೆ. ಹೀಗೆ ಹೇಳಿದ್ದರಿಂದ ಪುನರುಕ್ತಿದೋಷವನ್ನು ಪರಿಹರಿಸಿದಂತಾಯಿತು. 'ಜಗದ್ವಾಚಿತ್ವಾತ್' ಎಂಬ ಸೂತ್ರದಲ್ಲಿ ಅನ್ಯತ್ರವ್ಯವಹಾರಕ್ಕೆ ಗತಿಯನ್ನು ಹೇಳುತ್ತಾರೆ. ಅದೇ ವಿಷಯವನ್ನು 'ಸಾಕ್ಷಾದಪ್ಯವಿರೋಧಮ್' ಎಂಬ ಸೂತ್ರವೂ ಸಹ ಪ್ರತಿಪಾದನೆ ಮಾಡುತ್ತಿರುವುದರಿಂದ ಜಗದ್ವಾಚಿತ್ವ ಸೂತ್ರದಿಂದ ಇದಕ್ಕೆ ಪುನರುಕ್ತಿ ದೋಷವು ಬರುತ್ತದಲ್ಲವೇ? ಎಂದು ಪ್ರಶ್ನಿಸಬಾರದು. ಏಕೆಂದರೆ ಈ ಸೂತ್ರದಲ್ಲಿ ಭಗವಂತನನ್ನು ಪ್ರತಿಪಾದಿಸುವ ಶಬ್ದವನ್ನು ಬೇರೆಕಡೆ ವ್ಯವಹರಿಸಬಹುದೆಂದಷ್ಟೇ ಹೇಳುತ್ತಾರೆ. ಇದು ಹೇಗೆ ಕೂಡುತ್ತದೆ? ಎಂಬ ಪ್ರಶ್ನೆಗೆ 'ಜಗದ್ವಾಚಿತ್ವಾತ್' ಎಂಬ ಸೂತ್ರದಲ್ಲಿ ಮುಂದೆ ಉತ್ತರಿಸುತ್ತಾರೆ. ಅನ್ಯತ್ರ ವ್ಯವಹಾರವೇ ಅಯುಕ್ತವಾಗಿವೆ ಎಂಬ ಆಕ್ಷೇಪವನ್ನು ಈ ಸೂತ್ರದಲ್ಲಿ ಮಾಡುತ್ತಿರುವುದರಿಂದ ಅದರಿಂದ ಪುನರುಕ್ತಿದೋಷವನ್ನು ಹೇಳಲಾಗದು. ಈ ಸೂತ್ರದ ವಿಷಯವನ್ನು ಪ್ರತಿಪಾದಿಸಿದರೆ ಮಾತ್ರ ಆ ಸೂತ್ರವು ಹೊರಡಲು ಸಾಧ್ಯ. ಆದ್ದರಿಂದಲೇ ಸಮಾಕರ್ಷಾಧಿಕರಣದ ಟೀಕೆಯಲ್ಲಿ 'ಸರ್ವಶಬ್ದಾನಾಂ ಪರಮಾತ್ಮೈಕವಾಚಿತ್ವೇ ಅನ್ಯತ್ರ ವ್ಯವಹಾರಾಭಾವಾತ್' ಸಕಲಶಬ್ದಗಳು ಪರಮಾತ್ಮನನ್ನೇ ಪ್ರತಿಪಾದಿಸುವುದಾದರೆ ಲೋಕದಲ್ಲಿ ವ್ಯವಹಾರವನ್ನೇ ಮಾಡಲು ಸಾಧ್ಯವಿಲ್ಲ ಎಂದು ಆಕ್ಷೇಪ ಮಾಡಿದ್ದಾರೆ.

**प्रकाशः** – ''साक्षात्'' इति सूत्रव्यावर्त्यम् अन्यत्र व्यवहारायोगमाशङ्कते – **यदि चेति** । ''आनुमानिकमप्येकेषामिति चेन्न शरीररूपक'' इति नये अव्यक्तादिशब्दवाच्यं विष्णुरन्यद्वेति संशये, अव्यक्तादिशब्दानां प्रधानादावेव प्रसिद्धेः, परमात्मैकवाचित्वे प्रधानादौ तद्व्यवहाराभावापातात्, अवाचकत्वेऽप्यनभिज्ञानादिना व्यवहारे च अव्यवस्थापातात् अन्यदिति प्राप्ते, परमात्मतन्त्रत्वेन शरीरसमे प्रधानादौ तत्तच्छब्दवाच्यस्य परमात्मनो विन्यस्ततया तत्सम्बन्धेन तत्रापि शब्दप्रवृत्त्युपपत्तेः, प्रधानादितत्तद्वस्तुविशिष्टस्यैव विष्णोरव्यक्तादि-शब्दवाच्यत्वस्वीकारेण तत्तच्छब्दमुख्यार्थेश्वरसम्बन्धस्य तत्र तत्र व्यवस्थिततया अन्यत्र व्यवहाराव्यवस्थानापत्तेः, विष्णुरेवाव्यक्तादिशब्दमुख्यार्थ इति चतुर्थपादे वक्ष्यमाणन्यायेनेत्यर्थः ।

'ಸಾಕ್ಷಾತ್' ಎಂಬ ಸೂತ್ರದಿಂದ ವ್ಯಾವರ್ತ್ಯವಾದ ಅನ್ಯತ್ರ ವ್ಯವಹಾರವು ಹೇಗೆ ಕೂಡುತ್ತದೆ ? ಎಂಬ ಆಕ್ಷೇಪವನ್ನು 'ಯದಿ ಚ' ಎಂಬ ಗ್ರಂಥದಿಂದ ತೋರಿಸುತ್ತಿದ್ದಾರೆ.

ಪರಿಪೂರ್ಣಚಂದ್ರಿಕಾ

'ಆನುಮಾನಿಕಮಪ್ಯೇಕೇಷಾಮಿತಿ ಚೇನ್ನ ಶರೀರರೂಪಕವಿನ್ಯಸ್ತಗೃಹೀತೇರ್ದರ್ಶಯತೀತಿಚ' ಎಂಬ ಸೂತ್ರದಲ್ಲಿ ಹೀಗೆ ಹೇಳಿದ್ದಾರೆ. ಅವ್ಯಕ್ತಾದಿಶಬ್ದಗಳು ವಿಷ್ಣುವನ್ನು ಪ್ರತಿಪಾದಿಸುತ್ತವೋ, ಅಥವಾ ಪ್ರಕೃತ್ಯಾದಿಗಳನ್ನೋ ಎಂದು ಸಂಶಯ. ಪ್ರಕೃತ್ಯಾದಿಗಳಲ್ಲಿ ಪ್ರಸಿದ್ಧವಾಗಿರುವುದರಿಂದ ಅವ್ಯಕ್ತಾದಿಶಬ್ದಗಳು ವಿಷ್ಣುವನ್ನು ಪ್ರತಿಪಾದಿಸಲು ಸಾಧ್ಯವಿಲ್ಲ. ಎಲ್ಲಾ ಶಬ್ದಗಳು ಅವನೊಬ್ಬನನ್ನೇ ಪ್ರತಿಪಾದಿಸುವುದಾದರೆ ಪ್ರಕೃತ್ಯಾದಿಗಳಲ್ಲಿ ವ್ಯವಹಾರವನ್ನೇ ಮಾಡದೇ ಇರಬೇಕಾದ ಪ್ರಸಂಗ ಬರುತ್ತದೆ. ಮತ್ತು ಅವ್ಯಕ್ತಾದಿಶಬ್ದಗಳು ಪ್ರಧಾನಕ್ಕೆ ವಾಚಕವಾಗದಿದ್ದರೆ ಅಜ್ಞಾನದಿಂದ ವ್ಯವಹಾರವನ್ನು ಮಾಡಿದಂತಾಯಿತು. ಆವಾಗ ಘಟಶಬ್ದದಿಂದ ಪಟವನ್ನು, ಪಟಶಬ್ದದಿಂದ ಘಟವನ್ನು ವ್ಯವಹಾರ ಮಾಡಬೇಕಾಗುತ್ತದೆ. ಹೀಗೆ ಯಾವಶಬ್ದದಿಂದ ಏನನ್ನು ಪ್ರತಿಪಾದಿಸಬೇಕೆಂಬ ವ್ಯವಸ್ಥೆಯನ್ನೇ ಮಾಡಲಾಗದು. ಇಷ್ಟು ಪೂರ್ವಪಕ್ಷ.

ಸಿದ್ಧಾಂತ ಹೀಗಿದೆ - ಪ್ರಧಾನಾದಿಗಳು ಪರಮಾತ್ಮನಿಂದ ನಿಯಮ್ಯವಾಗಿವೆ. ಆದ್ದರಿಂದ ಅವನಿಗೆ ಶರೀರದಂತಿದೆ. ಆದ್ದರಿಂದಲೇ ಪ್ರಕೃತ್ಯಾದಿಶಬ್ದಗಳಿಂದ ಪ್ರತಿಪಾದ್ಯನಾದ ಪರಮಾತ್ಮನು ಪ್ರಧಾನಾದಿಗಳಲ್ಲಿ ನೆಲೆಸಿದ್ದರಿಂದ ಅವನ ಸಂಬಂಧದಿಂದ ಶಬ್ದಗಳು ಪ್ರಧಾನಾದಿಗಳನ್ನು ಪ್ರತಿಪಾದಿಸುತ್ತವೆ. ಯಾವ ಪದಾರ್ಥದಲ್ಲಿ ಭಗವಂತನು ಯಾವರೂಪದಿಂದ ಇರುತ್ತಾನೋ, ಅಂತಹ ರೂಪವನ್ನು ಪ್ರತಿಪಾದಿಸುವ ಶಬ್ದಗಳನ್ನೇ ಆಯಾ ವಸ್ತುಗಳಲ್ಲಿ ಪ್ರಯೋಗಿಸಲಾಗುತ್ತದೆ. ಆದ್ದರಿಂದ ಸಕಲಶಬ್ದಗಳಿಗೆ ಭಗವಂತನೇ ಮುಖ್ಯಾರ್ಥನಾಗಿದ್ದಾನೆ. ಹಾಗೂ ಅವನ ಸಂಬಂಧವು ಯಾವ ಪದಾರ್ಥದಲ್ಲಿಯೇ ಅಲ್ಲಿಯೇ ಆ ಶಬ್ದಕ್ಕೆ ಮುಖ್ಯಾರ್ಥವನ್ನು ಹೇಳುತ್ತೇವೆ. ಹಾಗೂ ಉಳಿದೆಲ್ಲಾ ಪದಾರ್ಥಗಳಲ್ಲಿ ಬೇರೆ ವ್ಯವಹಾರವನ್ನು ಮಾಡುತ್ತೇವೆ. ಹೀಗೆ ಅನ್ಯತ್ರ ವ್ಯವಹಾರವನ್ನು ಕೂಡಿಸಬಹುದು. ಆದ್ದರಿಂದ ವಿಷ್ಣುವೇ ಅವ್ಯಕ್ತಾದಿಶಬ್ದಗಳಿಂದ ಮುಖ್ಯವಾಗಿ ಪ್ರತಿಪಾದ್ಯನಾಗಿದ್ದಾನೆಂದು ಆನುಮಾನಿಕಾಧಿಕರಣದಲ್ಲಿ ಸಮರ್ಥಿಸುತ್ತಾರೆ.

**प्रकाशः** – ''तथा सति लोके लक्षणेतरवृत्त्यभावापत्तेः'' इति समाकर्षनयस्य-टीकावाक्यं हृदि कृत्वाऽऽह – **तर्हीति** । गौणीवृत्तिरादिपदार्थः । टीकोपलक्षणमिति सूचितम् ।

'ತಥಾ ಸತಿ ಲೋಕೇ ಲಕ್ಷಣೇತರವೃತ್ತ್ಯಭಾವಾಪತ್ತೇಃ' ಭಗವಂತನ ಸಂಬಂಧದಿಂದ ಇತರ ಪದಾರ್ಥಗಳು ಪ್ರತಿಪಾದ್ಯವಾಗುವುದಾದರೆ ಲಕ್ಷಣಾವೃತ್ತಿಯನ್ನು ಬಿಟ್ಟು ಉಳಿದ ವೃತ್ತಿಗಳೇ ಇಲ್ಲದಂತಾಯಿತು ಎಂಬ ಸಮಾಕರ್ಷಾಧಿಕರಣದ ಟೀಕಾವಾಕ್ಯವನ್ನು ಮನಸ್ಸಿನಲ್ಲಿಟ್ಟುಕೊಂಡು 'ತರ್ಹಿ' ಎಂಬುದರಿಂದ ಆಕ್ಷೇಪಿಸುತ್ತಿದ್ದಾರೆ. ಆದಿಪದದಿಂದ ಗೌಣೀವೃತ್ತಿಯನ್ನು ವಿವಕ್ಷಿಸಬೇಕು. ಟೀಕೆಯಲ್ಲಿ ಹೇಳಿದ ಲಕ್ಷಣಾ ಎಂಬ ಶಬ್ದವು ಉಪಲಕ್ಷಣವಾಗಿದೆಯೆಂದು ಇದರಿಂದ ಸೂಚಿಸಿದಂತಾಯಿತು. ಅಂದರೆ ಲಕ್ಷಣಾವೃತ್ತಿ ಹಾಗೂ ಗೌಣೀವೃತ್ತಿಗಳಷ್ಟೇ ಇರಬೇಕಾದೀತು ಎಂದಭಿಪ್ರಾಯ.

**प्रकाशः** – मुख्यार्थसम्बन्धनिमित्तेन शब्दप्रयोगस्य तादृशत्वादिति भावः । अस्तु को दोष इत्यत आह – **तथा चेति** ।

ಮುಖ್ಯಾರ್ಥಸಂಬಂಧನಿಮಿತ್ತದಿಂದ ಶಬ್ದಪ್ರಯೋಗವನ್ನು ಸಕಲಪದಾರ್ಥಗಳಲ್ಲಿ ಮಾಡುತ್ತಿದ್ದೀರಿ. ಹಾಗಾದರೆ ಗಂಗಾ ಸಂಬಂಧವು ತೀರದಲ್ಲಿರುವುದರಿಂದ ಲಕ್ಷಣಾ ಮಾಡಿದಂತೆ ಇಲ್ಲಿಯೂ ಸಹ ಲಕ್ಷಣಾವನ್ನು ಮಾಡಿದಂತಾಯಿತು. ಲಕ್ಷಣಾವೃತ್ತಿಯನ್ನೇ ಮಾಡೋಣ ಏನು ತಪ್ಪು? ಎಂಬ ಪ್ರಶ್ನೆಗೆ 'ತಥಾ ಚ' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

**प्रकाशः** – यद्यपि लोके शब्दव्यवहाराव्यवस्थानिवर्तकं ''शरीररूपकविन्यस्तगृहीतेः'' इत्येतदेव, न ततोऽन्यदस्ति । अत एव टीकायाम् ''अवाचकैर्व्यवहारेऽव्यवस्थापातात्'' इति समाकर्षनये, ''अवाचकत्वाविशेषेण घटादिशब्दानां पटादौ व्यवहारप्रसङ्गात्'' इत्यव्यक्तनये च अव्यवस्था ''शरीररूपक'' इत्यादिसूत्रांशव्यावर्त्यतयैवोक्ता, प्रागुक्तदिशा व्यवस्थासमर्थनं च सुशकम् ।

ವಾಸ್ತವಿಕವಾಗಿ ಲೋಕದಲ್ಲಿರುವ ಶಬ್ದವ್ಯವಹಾರದ ಅವ್ಯವಸ್ಥಾದೋಷವನ್ನು ಆನುಮಾನಿಕಾಧಿಕರಣದಲ್ಲಿರುವ 'ಶರೀರರೂಪಕವಿನ್ಯಸ್ತಗೃಹೀತೇಃ' ಎಂಬ ಸೂತ್ರವೇ ಪರಿಹರಿಸಬೇಕು. ಅವ್ಯವಸ್ಥೆಯ ಪರಿಹಾರವನ್ನು ಬೇರೆಲ್ಲಿಯೂ ಮಾಡಲಾಗುವುದಿಲ್ಲ. ಆದ್ದರಿಂದಲೇ ಟೀಕೆಯಲ್ಲಿ 'ಅವಾಚಕೈರ್ವ್ಯವಹಾರೇಽವ್ಯವಸ್ಥಾಪಾತಾತ್' ಶಬ್ದಗಳು ಲೌಕಿಕಪದಾರ್ಥಗಳಲ್ಲಿ ಅವಾಚಕವಾದರೆ ವ್ಯವಹಾರವು ಅವ್ಯವಸ್ಥೆಯಾಗಬೇಕಾದೀತು ಎಂದು ಹೇಳಿದ್ದಾರೆ. ಸಮಾಕರ್ಷಾಧಿಕರಣದಲ್ಲಿ 'ಅವಾಚಕತ್ವಾವಿಶೇಷೇಣ ಘಟಾದಿಶಬ್ದಾನಾಂ ಪಟಾದೌ ವ್ಯವಹಾರಪ್ರಸಂಗಾತ್' ಎಲ್ಲವೂ ವಿಷ್ಣುವನ್ನೇ ಪ್ರತಿಪಾದಿಸುವುದಾದರೆ ಘಟ-ಪಟಾದಿಗಳು ಶಬ್ದಗಳು ಅವನ್ನು ಪ್ರತಿಪಾದಿಸುವುದಿಲ್ಲವೆಂದಾಯಿತು. ಆವಾಗ ಅವಾಚಕತ್ವವು ಎಲ್ಲೆಡೆಯೂ ಇರುವುದರಿಂದ ಘಟಾದಿಶಬ್ದಗಳನ್ನು ಪಟಾದಿಗಳಲ್ಲಿಯೂ ವ್ಯವಹರಿಸುವ ಪ್ರಸಂಗ ಬರುತ್ತದೆಂದು ಹೇಳಿದ್ದಾರೆ. ಈ ಆಕ್ಷೇಪವನ್ನು ಸಮಾಕರ್ಷಾಧಿಕರಣದಲ್ಲಿ ಮಾಡಿಕೊಂಡು "ಶರೀರರೂಪಕ ವಿನ್ಯಸ್ತೇಗೃಹೀತೇಃ" ಎಂಬ ಆನುಮಾನಿಕಾಧಿಕರಣದಲ್ಲಿರುವ ಸೂತ್ರದ ಭಾಗದಿಂದಲೇ ಪರಿಹರಿಸಿದ್ದಾರೆ. ಮತ್ತು 'ಶರೀರರೂಪಕವಿನ್ಯಸ್ತ' ಇತ್ಯಾದಿ ಸೂತ್ರವೇ ಅವ್ಯವಸ್ಥೆಯನ್ನು ಹೇಗೆ ಪರಿಹರಿಸುತ್ತದೆಂಬ ವಿಚಾರವನ್ನು ಶರೀರರೂಪಕ ಸೂತ್ರವನ್ನು ವ್ಯಾಖ್ಯಾನಿಸುವಾಗ ನಾವೇ ತೋರಿಸಿದ್ದೇವೆ. ಹೀಗಿರುವಾಗ 'ಸಾಕ್ಷಾದಪ್ಯವಿರೋಧಮ್' ಎಂಬ ಸೂತ್ರದಲ್ಲಿ ಅವ್ಯವಸ್ಥಾಶಂಕೆಯನ್ನು ಏಕೆ ಮಾಡಿಕೊಂಡರು?

**प्रकाशः** – तथाऽपि टीकायाम् ''अवाचकैः'' इति ''अवाचकत्वाविशेषेण'' इति अव्यवस्थायामवाचकत्वस्य निमित्ततयोपादानात्, ''–''समाकर्षात्'' इति वक्ष्यमाणन्यायस्य अत्राभिप्रेतत्वेन लक्षणानाश्रयणात्'' इत्यानुमानिकसूत्रटीकोक्तदिशा ''शरीररूपक'' इत्याद्यंशतात्पर्यार्थानभिज्ञानेन, यथा ''तथा सति लोके लक्षणेतरवृत्त्यभावापत्तेः'' इति समाकर्षसूत्रे पूर्वपक्षिण आपादनं, तथा विशेषानभिज्ञस्य तत्तच्छब्दमुख्यार्थभूतेश्वरसम्बन्धस्य सर्वत्र सत्त्वादित्येतावन्मात्रं जानतः पूर्वपक्षिणः एतदव्यवस्थापादनमिति ध्येयम् ।

ಆದರೂ ಸಹ ಅವ್ಯಕ್ತಾಧಿಕರಣದಲ್ಲಿ ಹಾಗೂ ಸಮಾಕರ್ಷಾಧಿಕರಣದ ಟೀಕೆಯಲ್ಲಿ 'ಅವಾಚಕೈಃ' ಎಂದು ಮತ್ತು 'ಅವಾಚಕತ್ವಾವಿಶೇಷೇಣ' ಎಂದು ಅವಾಚಕತ್ವವನ್ನೇ ನಿಮಿತ್ತವನ್ನಾಗಿ ಹೇಳಿರುತ್ತಾರೆ. ಆದ್ದರಿಂದ ಇಷ್ಟು ಉತ್ತರವನ್ನು ತಿಳಿಯಬೇಕು. ''ಶರೀರರೂಪಕವಿನ್ಯಸ್ತಗೃಹೀತೇಃ'' ಎಂಬ ಸೂತ್ರದಲ್ಲಿ ಶಬ್ದದಿಂದ ಮುಖ್ಯವಾಗಿ ಪ್ರತಿಪಾದ್ಯನಾದ ಭಗವಂತನ ಸಂಬಂಧ ಅವ್ಯಕ್ತಾದಿಗಳಲ್ಲಿರುವುದರಿಂದ ಅವುಗಳು ಶಬ್ದಪ್ರತಿಪಾದ್ಯವಾಗುತ್ತವೆ ಎಂದು ಹೇಳುವುದಷ್ಟೇ ತಾತ್ಪರ್ಯವಲ್ಲ. 'ಸಮಾಕರ್ಷಾತ್' ಇತಿ ವಕ್ಷ್ಯಮಾಣನ್ಯಾಯಸ್ಯ ಅತ್ರಾಭಿಪ್ರೇತತ್ವೇನ ಲಕ್ಷಣಾನಾಶ್ರಯಣಾತ್' ಎಂಬ ಆನುಮಾನಿಕಸೂತ್ರದ ಟೀಕೆಯಲ್ಲಿ ಹೇಳಿದಂತೆ ಸಮಾಕರ್ಷಾಧಿಕರಣದಲ್ಲಿ ಹೇಳುವ ನ್ಯಾಯವನ್ನು ಅವ್ಯಕ್ತಾಧಿಕರಣದಲ್ಲಿಯೂ ವಿವಕ್ಷಿಸಬೇಕು. ಸಮಾಕರ್ಷಾಧಿಕರಣದಲ್ಲಿ ಶಬ್ದಗಳು ಪರಮಮುಖ್ಯವೃತ್ತಿಯಿಂದ ಭಗವಂತನನ್ನು; ಮುಖ್ಯವೃತ್ತಿಯಿಂದ ಇತರ ಪದಾರ್ಥಗಳನ್ನು ಪ್ರತಿಪಾದಿಸುತ್ತವೆಂದು ಹೇಳಲಾಗಿದೆ. ಆ ಉತ್ತರವನ್ನು ಆನುಮಾನಿಕಾಧಿಕರಣದಲ್ಲಿಯೂ ವಿವಕ್ಷಿಸಿದಾಗ 'ತಥಾ ಸತಿ ಲೋಕೇ ಲಕಣೇತರವೃತ್ತ್ಯಭಾವಾಪತೇಃ' ಲಕ್ಷಣಾವೃತ್ತಿಯನ್ನು ಬಿಟ್ಟು ಬೇರೆ ವೃತ್ತಿಯೇ ಇಲ್ಲದಂತಾಗಬೇಕಾದಿತೆಂಬ ಆಕ್ಷೇಪಕ್ಕೆ ಅವಕಾಶವಿರುವುದಿಲ್ಲ. ಆದ್ದರಿಂದ ಯಾವ ವ್ಯಕ್ತಿಯು ಭಗವಂತನ ಸಂಬಂಧದಿಂದಷ್ಟೇ ಉಳಿದಪದಾರ್ಥಗಳು ಶಬ್ದಪ್ರತಿಪಾದ್ಯವಾಗಿವೆಯೆಂದು ತಿಳಿದಿರುತ್ತಾನೋ, ಅಂತಹ ವ್ಯಕ್ತಿಯು ಮಾತ್ರ ಅವ್ಯವಸ್ಥೆಯನ್ನು ಆಶಂಕಿಸುತ್ತಾನೆ. ನಿಜವಾಗಿಯೂ ಯಾರು ಆನುಮಾನಿಕಾಧಿಕರಣದಲ್ಲಿ ಯಾವ ಅಭಿಪ್ರಾಯವನ್ನು ತಾಳಿದ್ದಾರೆಂಬುದನ್ನು ಅರ್ಥಮಾಡಿಕೊಂಡಿರುತ್ತಾನೋ? ಅಂತಹ ವ್ಯಕ್ತಿಯು ಹೀಗೆ ಅವ್ಯವಸ್ಥಾಪ್ರಸಂಗವನ್ನು ಆಕ್ಷೇಪಿಸಲು ಸಾಧ್ಯವಿಲ್ಲವೆಂದು ತಿಳಿಯಬೇಕು.

**प्रकाशः** – अत एव टीकादौ ''शरीररूपक'' इति सूत्रे न व्यवस्थासमर्थनं स्पष्टमुक्तम् । अस्माभिस्तु – पूर्वं विवेकार्थं स्पष्टमुक्तम् । अन्यथा लक्षणादिवृत्त्या-पादानस्यानिष्टत्वं न सिध्येत् ।

ಆದ್ದರಿಂದ ಈ ಟೀಕೆಯಲ್ಲಿ 'ಶರೀರರೂಪಕ' ಎಂಬ ಸೂತ್ರದಿಂದ ವ್ಯವಸ್ಥೆಯನ್ನು ಸಮರ್ಥಿಸಿಲ್ಲ ಎಂದು ಸ್ಪಷ್ಟವಾಗಿ ಹೇಳಿರುತ್ತಾರೆ. ನಾವೂ ಸಹ ಹಿಂದೆ ವಿವೇಕಕ್ಕೋಸ್ಕರ ಆನುಮಾನಿಕಾಧಿಕರಣವನ್ನು ಸ್ಪಷ್ಟವಾಗಿ ವಿವರಿಸಿದ್ದೇವೆ. ಹೀಗೊಪ್ಪದಿದ್ದರೆ ಲಕ್ಷಣಾವೃತ್ತಿಯೇ ಇರಬೇಕಾದೀತೆಂಬ ಆಕ್ಷೇಪಕ್ಕೆ ಅನಿಷ್ಟತ್ವವನ್ನು ಸಮರ್ಥಿಸಿದಂತಾಗುವುದಿಲ್ಲ.

**प्रकाशः** – अस्य समाधिस्तु ''कल्पनोपदेशात्'' इत्यादावन्यत्रापि वाचकत्वोक्त्या भविष्यति । अत एवाग्रे ''वाचकत्वाविशेषेऽपि'' इति वक्ष्यते ।

ಆದ್ದರಿಂದ ಅವ್ಯವಸ್ಥಾಪ್ರಸಂಗವೆಂಬ ಆಶಂಕೆಗೆ ಮುಂದೆ ಸಮಾಕರ್ಷಾಧಿಕರಣದಲ್ಲಿಯೇ ಸ್ಪಷ್ಟವಾದ ಉತ್ತರವು ದೊರೆಯಲು ಸಾಧ್ಯ. ಏಕೆಂದರೆ 'ಕಲ್ಪನೋಪದೇಶಾತ್' ಎಂಬ ಸಮಾಕರ್ಷಾಧಿಕರಣದ ಸೂತ್ರದಲ್ಲಿ ಬೇರೆಕಡೆಯೂ ಸಹ ವಾಚಕತ್ವವು ಇರುತ್ತದೆಂದು ವಿವರಿಸಿದ್ದಾರೆ. ಆದ್ದರಿಂದಲೇ ಮುಂದೆ 'ವಾಚಕತ್ವಾವಿಶೇಷೇऽಪಿ' ಎಂದು ಹೇಳುತ್ತಾರೆ. ಆದ್ದರಿಂದ ಈ ಅಧಿಕರಣದಲ್ಲಿರುವ 'ಸಾಕ್ಷದಪ್ಯವಿರೋಧಮ್' ಎಂಬ ಸೂತ್ರದಿಂದ ಅವ್ಯವಸ್ಥಾದೋಷವನ್ನು ಸಂಪೂರ್ಣ ಪರಿಹರಿಸಿರುವುದಿಲ್ಲ.

ವೈಶ್ವಾನರಾಧಿಕರಣ (೧-೨-೭)

**प्रकाशः** – 'तीर' इति सप्रयोजनलक्षणायाः, 'पुरुष' इति रूढलक्षणायाः, 'माणवक' इति सप्रयोजनोपचारस्य, ''चित्रलिखितसिंहादौ'' इति तु रूढोपचारस्योदाहरणम् । तीराद्यन्यलाक्षणिकादिरादिपदार्थः । एतेन 'लक्षणादिः' इत्यादिपदार्थो विवृतः ।

ಗ್ರಂಥದಲ್ಲಿ 'ತೀರ' 'ಪುರುಷ' 'ಮಾಣವಕ', 'ಚಿತ್ರಲಿಖಿತಸಿಂಹ' ಎಂದು ನಾಲ್ಕು ದೃಷ್ಟಾಂತಗಳನ್ನು ನೀಡಿದ್ದಾರೆ. ಒಂದೊಂದು ದೃಷ್ಟಾಂತಗಳಲ್ಲಿಯೂ ವೈಲಕ್ಷಣ್ಯವನ್ನು ತಿಳಿಯಬೇಕು. ತೀರದಲ್ಲಿ ಸಪ್ರಯೋಜನವಾದ ಲಕ್ಷಣಾವಿರುತ್ತದೆ. ಗಂಗಾಪದದಿಂದ ತೀರವನ್ನು ಹೇಳಲು ಪಾವಿತ್ರ್ಯ, ಶೀತಲತ್ವಾದಿ ಪ್ರಯೋಜಗಳಿರುತ್ತವೆಂದು ಅರ್ಥ. ಪುರುಷನಲ್ಲಿ ಮಂಚ ಶಬ್ದವನ್ನು ರೂಢಲಕ್ಷಣಾದಿಂದ ಕರೆಯಲಾಗುತ್ತದೆ. ಮಾಣವಕನಲ್ಲಿ ಅಗ್ನಿಶಬ್ದ ಪ್ರಯೋಗವನ್ನು ಪ್ರಯೋಜನೋಪಚಾರವೆಂಬ ಲಕ್ಷಣಾದಿಂದ ಮಾಡಲಾಗುತ್ತದೆ. ಅಂದರೆ ತೇಜಸ್ಸು ಮೊದಲಾದವುಗಳನ್ನು ತಿಳಿಸುವುದಕ್ಕಾಗಿ ಔಪಚಾರಿಕ ಪ್ರಯೋಗವನ್ನು ಮಾಡಲಾಗುತ್ತದೆಂದರ್ಥ. ಚಿತ್ರಲಿಖಿತಸಿಂಹದಲ್ಲಿ ಸಿಂಹ ಶಬ್ದವನ್ನು ರೂಢೋಪಚಾರದಿಂದ ಲಕ್ಷಣಾಮಾಡಲಾಗುತ್ತದೆಂದು ತಿಳಿಯಬೇಕು. 'ಚಿತ್ರಲಿಖಿತಸಿಂಹಾದೌ' ಎಂಬಲ್ಲಿರುವ ಆದಿಪದದಿಂದ ತೀರವನ್ನು ಬಿಟ್ಟು ಉಳಿದ ಲಾಕ್ಷಣಿಕಶಬ್ದಗಳನ್ನು ವಿವಕ್ಷಿಸಬೇಕು. ಹೀಗೆ ಹೇಳಿದ್ದರಿಂದ 'ಲಕ್ಷಣಾದಿಃ' ಎಂಬ ಟೀಕೆಯಲ್ಲಿರುವ ಆದಿಪದಾರ್ಥವನ್ನು ವಿವರಿಸಿದಂತಾಯಿತು.

**प्रकाशः – न त्विति ।** 'नद्यां घोषः, सुरसरिति घोषः' इत्यादेरपि दर्शनादिति भावः । **अन्यथेति ।** एक एव शब्दो लक्षणीये प्रयोज्यो, न तु तत्पर्याय इत्यङ्गीकार इत्यर्थः । **वह्न्यादीति ।** तस्यापि विष्णौ मुख्यस्यान्यत्र लक्षणादिनैव वृत्तेरिति भावः ।

'ನತು' ಎಂಬ ವಾಕ್ಯದ ಅಭಿಪ್ರಾಯ ಹೀಗಿದೆ - ತೀರದಲ್ಲಿ ಗಂಗಾಪದವನ್ನೇ ಪ್ರಯೋಗ ಮಾಡುತ್ತಾರೆ. ಗಂಗಾಪದಕ್ಕೆ ಪರ್ಯಾಯಶಬ್ದವೆನಿಸಿದ 'ನದೀ' ಶಬ್ದವನ್ನು ಅಥವಾ 'ಸುರಸರಿತ್' ಎಂಬ ಶಬ್ದವನ್ನು, ಪ್ರಯೋಗಮಾಡಬಾರದೆಂದೇನೂ ನಿಯಮವಿಲ್ಲ. ಲಕ್ಷಣಾ ಮಾಡುವುದು ನಿಶ್ಚಿತವಾದ ಮೇಲೆ ಗಂಗಾಪದದಿಂದಲೇ ಲಕ್ಷಣಾ ಮಾಡಬೇಕೆಂದು ನಿಯಮವಿಲ್ಲ. 'ನದ್ಯಾಂ ಘೋಷಃ' ಎಂದು, 'ಸುರಸರಿತಿ ಘೋಷಃ' ಎಂದೂ ಸಹ ಲೋಕದಲ್ಲಿ ಪ್ರಯೋಗ ಮಾಡುವುದು ಕಂಡಿದೆಯೆಂದು ತಿಳಿಯಬೇಕು. ಒಂದು ವೇಳೆ ಲಕ್ಷಣೀಯವಾದ ತೀರಾದಿಗಳಲ್ಲಿ ಒಂದೇ ಶಬ್ದವನ್ನು ಪ್ರಯೋಗಿಸಬೇಕೇ ಹೊರತು ಪರ್ಯಾಯಶಬ್ದಗಳನ್ನು ಪ್ರಯೋಗಿಸಬಾರದೆಂದು ಅಂಗೀಕರಿಸಿದರೆ ಬರುವ ಬಾಧಕವನ್ನು 'ಅನ್ಯಥಾ' ಎಂಬ ವಾಕ್ಯದಿಂದ ತೋರಿಸುತ್ತಿದ್ದಾರೆ. ಹಾಗಾದರೆ ಅಗ್ನಿದೇವತೆಯಲ್ಲಿ 'ವಹ್ನಿ' ಮೊದಲಾದ ಶಬ್ದಗಳನ್ನು ಪ್ರಯೋಗ ಮಾಡದೇ ಇರಬೇಕಾದೀತು. ಏಕೆಂದರೆ ವಹ್ನಿಶಬ್ದವೂ ಸಹ ವಿಷ್ಣುವಿನಲ್ಲಿ ಮುಖ್ಯವಾಗಿರುತ್ತದೆ. ಬೇರೆ ಕಡೆ ಲಕ್ಷಣಾ ಮಾಡಿಯೇ ಕೂಡಿಸಬೇಕು. ಲಕ್ಷಣೀಯವಾದ ಪದಾರ್ಥದಲ್ಲಿ ಪರ್ಯಾಯಶಬ್ದಗಳನ್ನು ಪ್ರಯೋಗಿಸಬಾರದೆಂದು ನೀವು ಹೇಳುವುದಾದರೆ ಅಗ್ನಿಯಲ್ಲಿ 'ವಹ್ನಿ' ಎಂಬ ಪರ್ಯಾಯ ಶಬ್ದವನ್ನು ಪ್ರಯೋಗ ಮಾಡದೇ ಇರಬೇಕಾದೀತೆಂದು ಅಭಿಪ್ರಾಯ. ಇದು 'ವಹ್ನ್ಯಾದಿ' ಎಂಬ ಗ್ರಂಥದ ಅಭಿಪ್ರಾಯ.

ಪರಿಪೂರ್ಣಚಂದ್ರಿಕಾ

**प्रकाशः** – ननु न शब्दानां ब्रह्मणि मुख्यत्वेऽप्यन्यत्र लक्षणादि, येनाव्यवस्था, किन्तु तत्रापि ''कल्पनोपदेशात्'' इति न्यायेन मुख्यत्वमेव । न चाक्षादि-शब्दवदुभयत्रसाम्यापत्तिः, न्यूनाधिकभाववत्त्वादिति भावेन शङ्कते – नचेति ।

ಪ್ರಶ್ನೆ - ಶಬ್ದಗಳೆಲ್ಲವೂ ಬ್ರಹ್ಮನಲ್ಲಿ ಮುಖ್ಯವಾಗಿರುತ್ತವೆಂದು ಹೇಳಿದ ಮಾತ್ರಕ್ಕೆ ಬೇರೆ ಪದಾರ್ಥಗಳಲ್ಲಿ ಲಕ್ಷಣಾ ಮಾಡಬೇಕಾದ ಪ್ರಸಂಗ ಬರುತ್ತದೆಂದು ಆಕ್ಷೇಪಿಸಬಾರದು. ಹಾಗೇನಾದರೂ ಸಿದ್ಧಾಂತಿಗಳು ಲಕ್ಷಣಾವನ್ನು ಒಪ್ಪಿದರೆ 'ಇಂದ್ರನಲ್ಲಿ ಅಗ್ನಿಶಬ್ದದ ಪ್ರಯೋಗವೂ ಬರಲಿ' ಎಂದು ಅವ್ಯವಸ್ಥೆಗೆ ಅವಕಾಶವಿರುತ್ತಿತ್ತು. ಆದರೆ ಬೇರೆ ಪದಾರ್ಥಗಳಲ್ಲಿಯೂ 'ಕಲ್ಪನೋಪದೇಶಾತ್' ಎಂಬ ಸೂತ್ರದಲ್ಲಿ ಹೇಳಿದ ನ್ಯಾಯದಂತೆ ಮುಖ್ಯತ್ವವನ್ನೇ ಒಪ್ಪುತ್ತೇವೆ. ಹಾಗಾದರೆ ಅಕ್ಷಾದಿ ಶಬ್ದಗಳಂತೆ ವಿಷ್ಣು ಹಾಗೂ ಬೇರೆ ಪದಾರ್ಥಗಳಲ್ಲಿ ಶಬ್ದವು ಸಮಾನವಾಗಿ ಬರುತ್ತದಲ್ಲವೇ? ಎಂಬ ಉಭಯತ್ರ ಸಾಮ್ಯವನ್ನು ಆಕ್ಷೇಪಿಸಬಾರದು. ವಿಷ್ಣುವಿನಲ್ಲಿ ಪರಮಮುಖ್ಯವೃತ್ತಿಯಿಂದ ಶಬ್ದವಿರುತ್ತದೆ. ಉಳಿದ ಪದಾರ್ಥಗಳಲ್ಲಿ ಮುಖ್ಯವೃತ್ತಿಯಿಂದ ಇರುತ್ತದೆಂದು ತಾರತಮ್ಯವನ್ನು ಹೇಳುತ್ತೇವೆ. ಹೀಗೆ ಹೇಳಿದರೆ ಯಾವುದೇ ಅವ್ಯವಸ್ಥೆಗೆ ಅವಕಾಶವಿಲ್ಲವೇ? ಎಂಬುದಾಗಿ 'ನಚ' ಎಂಬ ಗ್ರಂಥದಿಂದ ಸಿದ್ಧಾಂತಿಗಳು ಆಶಂಕಿಸುತ್ತಿದ್ದಾರೆ.

**प्रकाशः** – 'इति न्यायेन ब्रह्मणि मुख्यत्वमन्यत्रामुख्यत्वम्' इत्यन्वयः । तत्र हि, मुख्यता किमुभयत्र तुल्या किं ब्रह्मण्यधिका अन्यत्र हीनेति संशये, हीनत्वे मुख्यवृत्तित्वाभावात् तुल्येति प्राप्ते, योगरूढ्योरिव मुख्यत्वेऽपि न्यूनाधिकभावसम्भवात्, ब्रह्मणि परममुख्यत्वमन्यत्र त्वपरममुख्यवृत्तित्वमिति वक्ष्यते, तेन न्यायेनेत्यर्थः ।

ಗ್ರಂಥದಲ್ಲಿ 'ವಕ್ಷ್ಯಮಾಣನ್ಯಾಯೇನ' ಎಂಬುದಕ್ಕೆ 'ಬ್ರಹ್ಮಣಿ ಮುಖ್ಯತ್ವಮ್, ಅನ್ಯತ್ರಾಮುಖ್ಯತ್ವಮ್' ಎಂಬಲ್ಲಿ ಅನ್ವಯ ಮಾಡಬೇಕು. 'ಕಲ್ಪನೋಪದೇಶಾತ್' ಎಂಬ ಸೂತ್ರದಲ್ಲಿ ವಿಷ್ಣುವಿನಲ್ಲಿ ಹಾಗೂ ಲೋಕದಲ್ಲಿ ಎರಡೂ ಕಡೆ ಶಬ್ದಗಳಿಗೆ ವಾಚಕತ್ವವೇ ಇರುತ್ತದೆಂದು ಹೇಳಲಾಗಿದೆ. ಸಮಾಕರ್ಷಾಧಿಕರಣದಲ್ಲಿ ಅದನ್ನು ಹೀಗೆ ಆಕ್ಷೇಪಿಸಿದ್ದಾರೆ. ಹಿಂದೆ ಹೇಳಲ್ಪಟ್ಟ ವಾಚಕತ್ವವು ವಿಷ್ಣು ಹಾಗೂ ಬೇರೆ ಪದಾರ್ಥಗಳಲ್ಲಿ ಸಮಾನವಾಗಿರುತ್ತದೋ? ಅಥವಾ ಬ್ರಹ್ಮನಲ್ಲಿ ಅಧಿಕವಾಗಿದ್ದು ಬೇರೆಕಡೆ ನ್ಯೂನವಾಗಿರುತ್ತದೋ? ಎಂದು ಸಂಶಯವನ್ನು ತೋರಿಸಿ; ಒಂದು ವೇಳೆ ಬ್ರಹ್ಮನನ್ನು ಬಿಟ್ಟು ಬೇರೆ ಕಡೆ ನ್ಯೂನವಾಗಿರುವುದಾದರೆ ಮುಖ್ಯವೃತ್ತಿತ್ವವನ್ನು ಹೇಳಲು ಸಾಧ್ಯವಿಲ್ಲ. ಆದ್ದರಿಂದ ತಾರತಮ್ಯವನ್ನು ಒಪ್ಪದೇ ಎರಡೂ ಕಡೆ ಸಮಾನವಾಗಿರಬೇಕು. ಇಷ್ಟು ಆಕ್ಷೇಪ.

ಯಾವರೀತಿಯಾಗಿ ಯೋಗ ಹಾಗೂ ರೂಢಿಗಳೆರಡೂ ಮುಖ್ಯವೇ ಆಗಿದ್ದರೂ ಯೋಗಕ್ಕಿಂತ ರೂಢಿಯನ್ನು ಬಲಿಷ್ಠವೆಂದು ಎಲ್ಲರೂ ಒಪ್ಪಿದ್ದಾರೋ, ಅದರಂತೆ ಬ್ರಹ್ಮನಲ್ಲಿ ಪರಮಮುಖ್ಯವೃತ್ತಿಯಿಂದ; ಬೇರೆ ಪದಾರ್ಥಗಳಲ್ಲಿ ಅಮುಖ್ಯವೃತ್ತಿಯಿಂದ ಶಬ್ದಗಳಿರಬಹುದು. ಈ ವಿಷಯವನ್ನು ಆ ಅಧಿಕರಣದಲ್ಲಿ ಸಮರ್ಥಿಸುತ್ತೇವೆ. ಇದನ್ನು 'ವಕ್ಷ್ಯಮಾಣನ್ಯಾಯೇನ' ಎಂಬ ಪದದಿಂದ ಗ್ರಂಥಕಾರರು ಹೇಳಿದ್ದಾರೆ.

ವೈಶ್ವಾನರಾಧಿಕರಣ (೧-೨-೭)

**प्रकाशः** – 'तीर' इति सप्रयोजनलक्षणायाः, 'पुरुष' इति रूढलक्षणायाः, 'माणवक' इति सप्रयोजनोपचारस्य, ''चित्रलिखितसिंहादौ'' इति तु रूढोपचारस्योदाहरणम् । तीराद्यन्यलाक्षणिकादिरादिपदार्थः । एतेन 'लक्षणादिः' इत्यादिपदार्थो विवृतः ।

ಗ್ರಂಥದಲ್ಲಿ 'ತೀರ' 'ಪುರುಷ' 'ಮಾಣವಕ', 'ಚಿತ್ರಲಿಖಿತಸಿಂಹ' ಎಂದು ನಾಲ್ಕು ದೃಷ್ಟಾಂತಗಳನ್ನು ನೀಡಿದ್ದಾರೆ. ಒಂದೊಂದು ದೃಷ್ಟಾಂತಗಳಲ್ಲಿಯೂ ವೈಲಕ್ಷಣ್ಯವನ್ನು ತಿಳಿಯಬೇಕು. ತೀರದಲ್ಲಿ ಸಪ್ರಯೋಜನವಾದ ಲಕ್ಷಣಾವಿರುತ್ತದೆ. ಗಂಗಾಪದದಿಂದ ತೀರವನ್ನು ಹೇಳಲು ಪಾವಿತ್ರ್ಯ, ಶೀತಲತ್ವಾದಿ ಪ್ರಯೋಜಗಳಿರುತ್ತವೆಂದು ಅರ್ಥ. ಪುರುಷನಲ್ಲಿ ಮಂಚ ಶಬ್ದವನ್ನು ರೂಢಲಕ್ಷಣಾದಿಂದ ಕರೆಯಲಾಗುತ್ತದೆ. ಮಾಣವಕನಲ್ಲಿ ಅಗ್ನಿಶಬ್ದ ಪ್ರಯೋಗವನ್ನು ಪ್ರಯೋಜನೋಪಚಾರವೆಂಬ ಲಕ್ಷಣಾದಿಂದ ಮಾಡಲಾಗುತ್ತದೆ. ಅಂದರೆ ತೇಜಸ್ಸು ಮೊದಲಾದವುಗಳನ್ನು ತಿಳಿಸುವುದಕ್ಕಾಗಿ ಔಪಚಾರಿಕ ಪ್ರಯೋಗವನ್ನು ಮಾಡಲಾಗುತ್ತದೆಂದರ್ಥ. ಚಿತ್ರಲಿಖಿತಸಿಂಹದಲ್ಲಿ ಸಿಂಹ ಶಬ್ದವನ್ನು ರೂಢೋಪಚಾರದಿಂದ ಲಕ್ಷಣಾಮಾಡಲಾಗುತ್ತದೆಂದು ತಿಳಿಯಬೇಕು. 'ಚಿತ್ರಲಿಖಿತಸಿಂಹಾದೌ' ಎಂಬಲ್ಲಿರುವ ಆದಿಪದದಿಂದ ತೀರವನ್ನು ಬಿಟ್ಟು ಉಳಿದ ಲಾಕ್ಷಣಿಕಶಬ್ದಗಳನ್ನು ವಿವಕ್ಷಿಸಬೇಕು. ಹೀಗೆ ಹೇಳಿದ್ದರಿಂದ 'ಲಕ್ಷಣಾದಿಃ' ಎಂಬ ಟೀಕೆಯಲ್ಲಿರುವ ಆದಿಪದಾರ್ಥವನ್ನು ವಿವರಿಸಿದಂತಾಯಿತು.

**प्रकाशः** – **न त्विति** । 'नद्यां घोषः, सुरसरिति घोषः' इत्यादेरपि दर्शनादिति भावः । **अन्यथेति** । एक एव शब्दो लक्षणीये प्रयोज्यो, न तु तत्पर्याय इत्यङ्गीकार इत्यर्थः । **वह्न्यादीति** । तस्यापि विष्णौ मुख्यस्यान्यत्र लक्षणादिनैव वृत्तेरिति भावः ।

'ನತು' ಎಂಬ ವಾಕ್ಯದ ಅಭಿಪ್ರಾಯ ಹೀಗಿದೆ - ತೀರದಲ್ಲಿ ಗಂಗಾಪದವನ್ನೇ ಪ್ರಯೋಗ ಮಾಡುತ್ತಾರೆ. ಗಂಗಾಪದಕ್ಕೆ ಪರ್ಯಾಯಶಬ್ದವೆನಿಸಿದ 'ನದೀ' ಶಬ್ದವನ್ನು ಅಥವಾ 'ಸುರಸರಿತ್' ಎಂಬ ಶಬ್ದವನ್ನು, ಪ್ರಯೋಗಮಾಡಬಾರದೆಂದೇನೂ ನಿಯಮವಿಲ್ಲ. ಲಕ್ಷಣಾ ಮಾಡುವುದು ನಿಶ್ಚಿತವಾದ ಮೇಲೆ ಗಂಗಾಪದದಿಂದಲೇ ಲಕ್ಷಣಾ ಮಾಡಬೇಕೆಂದು ನಿಯಮವಿಲ್ಲ. 'ನದ್ಯಾಂ ಘೋಷಃ' ಎಂದು, 'ಸುರಸರಿತಿ ಘೋಷಃ' ಎಂದೂ ಸಹ ಲೋಕದಲ್ಲಿ ಪ್ರಯೋಗ ಮಾಡುವುದು ಕಂಡಿದೆಯೆಂದು ತಿಳಿಯಬೇಕು. ಒಂದು ವೇಳೆ ಲಕ್ಷಣೀಯವಾದ ತೀರಾದಿಗಳಲ್ಲಿ ಒಂದೇ ಶಬ್ದವನ್ನು ಪ್ರಯೋಗಿಸಬೇಕೇ ಹೊರತು ಪರ್ಯಾಯಶಬ್ದಗಳನ್ನು ಪ್ರಯೋಗಿಸಬಾರದೆಂದು ಅಂಗೀಕರಿಸಿದರೆ ಬರುವ ಬಾಧಕವನ್ನು 'ಅನ್ಯಥಾ' ಎಂಬ ವಾಕ್ಯದಿಂದ ತೋರಿಸುತ್ತಿದ್ದಾರೆ. ಹಾಗಾದರೆ ಅಗ್ನಿದೇವತೆಯಲ್ಲಿ 'ವಹ್ನಿ' ಮೊದಲಾದ ಶಬ್ದಗಳನ್ನು ಪ್ರಯೋಗ ಮಾಡದೇ ಇರಬೇಕಾದೀತು. ಏಕೆಂದರೆ ವಹ್ನಿಶಬ್ದವೂ ಸಹ ವಿಷ್ಣುವಿನಲ್ಲಿ ಮುಖ್ಯವಾಗಿರುತ್ತದೆ. ಬೇರೆ ಕಡೆ ಲಕ್ಷಣಾ ಮಾಡಿಯೇ ಕೂಡಿಸಬೇಕು. ಲಕ್ಷಣೀಯವಾದ ಪದಾರ್ಥದಲ್ಲಿ ಪರ್ಯಾಯಶಬ್ದಗಳನ್ನು ಪ್ರಯೋಗಿಸಬಾರದೆಂದು ನೀವು ಹೇಳುವುದಾದರೆ ಅಗ್ನಿಯಲ್ಲಿ 'ವಹ್ನಿ' ಎಂಬ ಪರ್ಯಾಯ ಶಬ್ದವನ್ನು ಪ್ರಯೋಗ ಮಾಡದೇ ಇರಬೇಕಾದೀತೆಂದು ಅಭಿಪ್ರಾಯ. ಇದು 'ವಹ್ನ್ಯಾದಿ' ಎಂಬ ಗ್ರಂಥದ ಅಭಿಪ್ರಾಯ.

**प्रकाशः** – ननु न शब्दानां ब्रह्मणि मुख्यत्वेऽप्यन्यत्र लक्षणादि, येनाव्यवस्था, किन्तु तत्रापि ''कल्पनोपदेशात्'' इति न्यायेन मुख्यत्वमेव । न चाक्षादिशब्दवदुभयत्रसाम्यापत्तिः, न्यूनाधिकभाववत्त्वादिति भावेन शङ्कते – नचेति ।

ಪ್ರಶ್ನೆ - ಶಬ್ದಗಳೆಲ್ಲವೂ ಬ್ರಹ್ಮನಲ್ಲಿ ಮುಖ್ಯವಾಗಿರುತ್ತವೆಂದು ಹೇಳಿದ ಮಾತ್ರಕ್ಕೆ ಬೇರೆ ಪದಾರ್ಥಗಳಲ್ಲಿ ಲಕ್ಷಣಾ ಮಾಡಬೇಕಾದ ಪ್ರಸಂಗ ಬರುತ್ತದೆಂದು ಆಕ್ಷೇಪಿಸಬಾರದು. ಹಾಗೇನಾದರೂ ಸಿದ್ಧಾಂತಿಗಳು ಲಕ್ಷಣಾವನ್ನು ಒಪ್ಪಿದರೆ 'ಇಂದ್ರನಲ್ಲಿ ಅಗ್ನಿಶಬ್ದದ ಪ್ರಯೋಗವೂ ಬರಲಿ' ಎಂದು ಅವ್ಯವಸ್ಥೆಗೆ ಅವಕಾಶವಿರುತ್ತಿತ್ತು. ಆದರೆ ಬೇರೆ ಪದಾರ್ಥಗಳಲ್ಲಿಯೂ 'ಕಲ್ಪನೋಪದೇಶಾತ್' ಎಂಬ ಸೂತ್ರದಲ್ಲಿ ಹೇಳಿದ ನ್ಯಾಯದಂತೆ ಮುಖ್ಯತ್ವವನ್ನೇ ಒಪ್ಪುತ್ತೇವೆ. ಹಾಗಾದರೆ ಅಕ್ಷಾದಿ ಶಬ್ದಗಳಂತೆ ವಿಷ್ಣು ಹಾಗೂ ಬೇರೆ ಪದಾರ್ಥಗಳಲ್ಲಿ ಶಬ್ದವು ಸಮಾನವಾಗಿ ಬರುತ್ತದಲ್ಲವೇ? ಎಂಬ ಉಭಯತ್ರ ಸಾಮ್ಯವನ್ನು ಆಕ್ಷೇಪಿಸಬಾರದು. ವಿಷ್ಣುವಿನಲ್ಲಿ ಪರಮಮುಖ್ಯವೃತ್ತಿಯಿಂದ ಶಬ್ದವಿರುತ್ತದೆ. ಉಳಿದ ಪದಾರ್ಥಗಳಲ್ಲಿ ಮುಖ್ಯವೃತ್ತಿಯಿಂದ ಇರುತ್ತದೆಂದು ತಾರತಮ್ಯವನ್ನು ಹೇಳುತ್ತೇವೆ. ಹೀಗೆ ಹೇಳಿದರೆ ಯಾವುದೇ ಅವ್ಯವಸ್ಥೆಗೆ ಅವಕಾಶವಿಲ್ಲವೇ? ಎಂಬುದಾಗಿ 'ನಚ' ಎಂಬ ಗ್ರಂಥದಿಂದ ಸಿದ್ಧಾಂತಿಗಳು ಆಶಂಕಿಸುತ್ತಿದ್ದಾರೆ.

**प्रकाशः** – 'इति न्यायेन ब्रह्मणि मुख्यत्वमन्यत्रामुख्यत्वम्' इत्यन्वयः । तत्र हि, मुख्यता किमुभयत्र तुल्या किं ब्रह्मण्यधिका अन्यत्र हीनेति संशये, हीनत्वे मुख्यवृत्तित्वाभावात् तुल्येति प्राप्ते, योगरूढ्योरिव मुख्यत्वेऽपि न्यूनाधिकभावसम्भवात्, ब्रह्मणि परममुख्यत्वमन्यत्र त्वपरममुख्यवृत्तित्वमिति वक्ष्यते, तेन न्यायेनेत्यर्थः ।

ಗ್ರಂಥದಲ್ಲಿ 'ವಕ್ಷ್ಯಮಾಣನ್ಯಾಯೇನ' ಎಂಬುದಕ್ಕೆ 'ಬ್ರಹ್ಮಣಿ ಮುಖ್ಯತ್ವಮ್, ಅನ್ಯತ್ರಾಮುಖ್ಯತ್ವಮ್' ಎಂಬಲ್ಲಿ ಅನ್ವಯ ಮಾಡಬೇಕು. 'ಕಲ್ಪನೋಪದೇಶಾತ್' ಎಂಬ ಸೂತ್ರದಲ್ಲಿ ವಿಷ್ಣುವಿನಲ್ಲಿ ಹಾಗೂ ಲೋಕದಲ್ಲಿ ಎರಡೂ ಕಡೆ ಶಬ್ದಗಳಿಗೆ ವಾಚಕತ್ವವೇ ಇರುತ್ತದೆಂದು ಹೇಳಲಾಗಿದೆ. ಸಮಾಕರ್ಷಾಧಿಕರಣದಲ್ಲಿ ಅದನ್ನು ಹೀಗೆ ಆಕ್ಷೇಪಿಸಿದ್ದಾರೆ. ಹಿಂದೆ ಹೇಳಲ್ಪಟ್ಟ ವಾಚಕತ್ವವು ವಿಷ್ಣು ಹಾಗೂ ಬೇರೆ ಪದಾರ್ಥಗಳಲ್ಲಿ ಸಮಾನವಾಗಿರುತ್ತದೋ? ಅಥವಾ ಬ್ರಹ್ಮನಲ್ಲಿ ಅಧಿಕವಾಗಿದ್ದು ಬೇರೆಕಡೆ ನ್ಯೂನವಾಗಿರುತ್ತದೋ? ಎಂದು ಸಂಶಯವನ್ನು ತೋರಿಸಿ; ಒಂದು ವೇಳೆ ಬ್ರಹ್ಮನನ್ನು ಬಿಟ್ಟು ಬೇರೆ ಕಡೆ ನ್ಯೂನವಾಗಿರುವುದಾದರೆ ಮುಖ್ಯವೃತ್ತಿತ್ವವನ್ನು ಹೇಳಲು ಸಾಧ್ಯವಿಲ್ಲ. ಆದ್ದರಿಂದ ತಾರತಮ್ಯವನ್ನು ಒಪ್ಪದೇ ಎರಡೂ ಕಡೆ ಸಮಾನವಾಗಿರಬೇಕು. ಇಷ್ಟು ಆಕ್ಷೇಪ.

ಯಾವರೀತಿಯಾಗಿ ಯೋಗ ಹಾಗೂ ರೂಢಿಗಳೆರಡೂ ಮುಖ್ಯವೇ ಆಗಿದ್ದರೂ ಯೋಗಕ್ಕಿಂತ ರೂಢಿಯನ್ನು ಬಲಿಷ್ಠವೆಂದು ಎಲ್ಲರೂ ಒಪ್ಪಿದ್ದಾರೋ, ಅದರಂತೆ ಬ್ರಹ್ಮನಲ್ಲಿ ಪರಮಮುಖ್ಯವೃತ್ತಿಯಿಂದ; ಬೇರೆ ಪದಾರ್ಥಗಳಲ್ಲಿ ಅಮುಖ್ಯವೃತ್ತಿಯಿಂದ ಶಬ್ದಗಳಿರಬಹುದು. ಈ ವಿಷಯವನ್ನು ಆ ಅಧಿಕರಣದಲ್ಲಿ ಸಮರ್ಥಿಸುತ್ತೇವೆ. ಇದನ್ನು 'ವಕ್ಷ್ಯಮಾಣನ್ಯಾಯೇನ' ಎಂಬ ಪದದಿಂದ ಗ್ರಂಥಕಾರರು ಹೇಳಿದ್ದಾರೆ.

**प्रकाशः** – **वाचकत्वाविशेषेऽपीति** । "कल्पनोपदेशात्" इति न्यायेन हरौ तदन्यत्र चेति भावः । **अमुख्यत्वमिति** । किञ्चिन्मुख्यत्वं न तु लक्षणादिरित्यर्थः । **न मुख्योऽस्तीति** । सर्वशब्दानां लोके तुल्यवृत्तित्वेन भृत्यजयिशब्दयोरिव भृत्ये वृत्तितारतम्याभाव इत्यर्थः । एतेनेत्युक्तं व्यनक्ति – **अग्नीति** ।

'ವಾಚಕತ್ವಾವಿಶೇಷೇಽಪಿ' ಎಂಬುದಕ್ಕೆ ಹೀಗರ್ಥ - 'ಕಲ್ಪನೋಪದೇಶಾತ್' ಎಂಬ ಸೂತ್ರದಲ್ಲಿ ಶ್ರೀಹರಿಯಲ್ಲಿ ಮತ್ತು ಬೇರೆ ಪದಾರ್ಥಗಳಲ್ಲಿ ವಾಚಕತ್ವವನ್ನು ಸಮಾನವಾಗಿ ಹೇಳಿದ್ದಾರೆಂದು. 'ಅಮುಖ್ಯತ್ವಮ್' ಎಂದರೆ ಭೃತ್ಯನಲ್ಲಿ 'ಜಯೀ' ಶಬ್ದವನ್ನು ಸ್ವಲ್ಪಮುಖ್ಯವೃತ್ತಿಯಿಂದ ಹೇಳುತ್ತೇವೆ ಹೊರತು, ಲಕ್ಷಣಾಮಾಡಬೇಕೆಂದರ್ಥವಲ್ಲ ಎಂದು. 'ನ ಮುಖ್ಯೋಽಸ್ತಿ' ಎಂದರೆ ಸಕಲಶಬ್ದಗಳು ಲೋಕದಲ್ಲಿ ಸಮಾನವಾಗಿರುವುದರಿಂದ ಭೃತ್ಯನಲ್ಲಿ 'ಜಯೀ' ಎಂಬ ಶಬ್ದದಂತೆ ಪ್ರಕೃತ ವೃತ್ತಿಯಲ್ಲಿ ತಾರತಮ್ಯವಿರುವುದಿಲ್ಲವೆಂದು ಅಭಿಪ್ರಾಯ. 'ಏತೇನ' ಎಂದು ಹೇಳಿದ್ದನ್ನೇ 'ಅಗ್ನಿ' ಇತ್ಯಾದಿ ಗ್ರಂಥದಿಂದ ಪ್ರತಿಪಾದಿಸುತ್ತಿದ್ದಾರೆ.

**प्रकाशः** – एवं श्रुतेर्निरवकाशतयाऽपि प्राबल्योपपादनेन "नहि वैश्वानर-श्रुतेरग्न्यादिविषयत्वाभावे व्यवहारस्य गत्यन्तरमस्ति" इति टीकाविवरणेन "साक्षात्" इति सूत्रव्यावर्त्यमुक्त्वेदानीं 'शब्दादिभ्योऽन्तः प्रतिष्ठानान्नेति चेत्" इति सूत्रांशोक्तलिङ्गनिरवकाशत्वमप्यत्र ग्राह्यमिति भावेनाह – **अत एवेति** ।

ಹೀಗೆ ಶ್ರುತಿಗೆ ನಿರವಕಾಶತ್ವವನ್ನು ಸಮರ್ಥಿಸುವ ಮೂಲಕವಾಗಿಯೂ ಪ್ರಾಬಲ್ಯವನ್ನು ಉಪಪಾದಿಸಿದರು. ಮತ್ತು "ನಹಿ ವೈಶ್ವಾನರಶ್ರುತೇಃ ಅಗ್ನ್ಯಾದಿವಿಷಯತ್ವಾಭಾವೇ ವ್ಯವಹಾರಸ್ಯ ಗತ್ಯಂತರಮಸ್ತಿ' ಎಂಬ ಟೀಕೆಯನ್ನು ವಿವರಣೆ ಮಾಡುವ ಮೂಲಕ 'ಸಾಕ್ಷಾತ್' ಎಂಬ ಸೂತ್ರದಿಂದ ವ್ಯಾವರ್ತ್ಯವಾದ ಪೂರ್ವಪಕ್ಷವನ್ನೂ ಸಹ ತೋರಿಸಿದರು. ಈಗ 'ಶಬ್ದಾದಿಭ್ಯೋಽಂತಃ ಪ್ರತಿಷ್ಠಾನಾನ್ನೇತಿ ಚೇತ್' ಎಂಬ ಸೂತ್ರಾಂಶದಿಂದ ಹೇಳಲ್ಪಟ್ಟ ಲಿಂಗಕ್ಕೆ ನಿರವಕಾಶತ್ವವನ್ನು ಕೂಡ ಇಲ್ಲಿ ವಿವಕ್ಷಿಸಬೇಕೆಂಬ ಅಭಿಪ್ರಾಯದಿಂದ 'ಅತ ಏವ' ಎಂಬ ಗ್ರಂಥವು ಹೊರಟಿರುತ್ತದೆ.

**प्रकाशः** – प्राग्विवृतान्यस्माभिर्लिङ्गानि । **आत्मश्रुतेश्चेति** । एतेन "शब्दादिभ्यः" इति सूत्रभाष्यटीकायां – "यथा खलु वैश्वानरस्य विष्णुत्वनिश्चायकात्मशब्दादि विद्यते" इत्यादिना लिङ्गानां विष्णुप्रापकात्मशब्दसमाख्यादिना साम्यमुक्तं, तत्त्वभ्युपेत्यवादेन वा, "साक्षात्" इत्यादावग्नेरन्यत्र प्रयोगोपपत्तेर्वक्ष्यमाणत्वेनात्म श्रुत्यादेः विष्णौ मुख्यत्वस्य निर्बाधादिति भावेन वेति भावः ।

ಲಿಂಗಗಳೆಲ್ಲವನ್ನೂ ಹಿಂದೆ ನಾವು ವಿವರಿಸಿದ್ದೇವೆ. 'ಆತ್ಮಶ್ರುತೇಶ್ಚ' ಎಂದು ಹೇಳಿದ್ದರಿಂದ ಇನ್ನೊಂದು ಆಕ್ಷೇಪವನ್ನು ಪರಿಹರಿಸಿದಂತಾಯಿತು. ಆಕ್ಷೇಪ ಹಿಗೀದೆ -'ಶಬ್ದಾದಿಭ್ಯಃ' ಎಂಬ ಸೂತ್ರಭಾಷ್ಯಟೀಕೆಯಲ್ಲಿ 'ಯಥಾ ಖಲು ವೈಶ್ವಾನರಸ್ಯ ವಿಷ್ಣುತ್ವನಿಶ್ಚಾಯಕಾತ್ಮಶಬ್ದಾದಿ ವಿದ್ಯತೇ'' ಇತ್ಯಾದಿ ವಾಕ್ಯಗಳಿಂದ ಲಿಂಗಗಳಿಗೆ ವಿಷ್ಣುಪ್ರಾಪಕವಾದ ಆತ್ಮಶಬ್ದ, ಸಮಾಖ್ಯಾ ಮುಂತಾದ್ದರಿಂದ ಸಾಮ್ಯವನ್ನು ಹೇಳಿದ್ದಾರೆ. ಇದು ಹೇಗೆ ಎಂದು?

ಈ ಆಕ್ಷೇಪಕ್ಕೆ ಎರಡು ಬಗೆಯಲ್ಲಿ ಉತ್ತರಿಸಬಹುದು. ಅಂಗೀಕಾರವಾದ ಮಾಡಿದ್ದರಿಂದ ಹಾಗೇ ಸಾಮ್ಯವನ್ನು ಹೇಳಿದ್ದಾರೆಂದು ಒಂದು ಸಮಾಧಾನ. ಮತ್ತೊಂದು 'ಸಾಕ್ಷಾದಪ್ಯವಿರೋಧಮ್'ಎಂಬ ಮುಂದಿನ ಸೂತ್ರದಲ್ಲಿ ಅಗ್ನಿಶಬ್ದಕ್ಕೆ ಅನ್ಯತ್ರಪ್ರಯೋಗವು ಹೇಗೆ ಉಪಪನ್ನವಾಗುತ್ತದೆಂಬುದನ್ನು ಸಮರ್ಥಿಸುವುದರಿಂದ ವಿಷ್ಣುವಿನಲ್ಲಿರುವ ಆತ್ಮಶ್ರುತಿಗೆ ಮುಖ್ಯತ್ವವು ಬಾಧವಿಲ್ಲದೇ ಉಪಪನ್ನವಾಗುತ್ತದೆಂದು ತಿಳಿಸುವುದಕ್ಕಾಗಿಯೂ ಸಾಮ್ಯವನ್ನು ಹೇಳಿದ್ದಾರೆಂದು ಮತ್ತೊಂದು ಸಮಾಧಾನವನ್ನು ತಿಳಿಯಬೇಕು.

**प्रकाशः** – अत एवोत्युक्तं व्यनक्ति – **अन्यत्रेति** । ''अभिव्यक्तेः'' इत्यादिसूत्र-व्यावर्त्योक्तिपरां ''वैदिकविद्याभेदव्यवहारविरोधाच्च'' इति टीकां विवृणोति – **किञ्चेत्यादिना** ।

'ಅತ ಏವ' ಎಂಬ ಗ್ರಂಥದಲ್ಲಿ ಹೇಳಿದ್ದನ್ನೇ 'ಅನ್ಯತ್ರ' ಎಂಬ ವಾಕ್ಯದಿಂದ ಸ್ಪಷ್ಟಪಡಿಸುತ್ತಿದ್ದಾರೆ. 'ಅಭಿವ್ಯಕ್ತೇಃ' ಇತ್ಯಾದಿ ಸೂತ್ರದಿಂದ ವ್ಯಾವರ್ತ್ಯವಾದ ಪೂರ್ವಪಕ್ಷವನ್ನು ಸಮರ್ಥಿಸುವ 'ವೈದಿಕವಿದ್ಯಾಭೇದ-ವ್ಯವಹಾರವಿರೋಧಾಚ್ಚ' ಎಂಬ ಟೀಕೆಯನ್ನು 'ಕಿಂಚ' ಇತ್ಯಾದಿ ವಾಕ್ಯದಿಂದ ವಿವರಿಸುತ್ತಿದ್ದಾರೆ.

**प्रकाशः** – इदमग्निसूक्तमिदं वायुसूक्तमित्यादिसूक्तव्यवस्था, तथा इयमात्मविद्या इयं वैश्वानरविद्या इयमक्षिविद्या इयं प्राणविद्या चेत्यादिविद्याव्यवस्था च न स्यादित्यर्थः । **निरस्तत्वादिति** । ''ब्रह्मणि मुख्यानामिन्द्रादिशब्दानाम्'' इत्यादिना निरस्तप्रायत्वादित्यर्थः ।

ಮಂತ್ರಭಾಗದಲ್ಲಿರುವ ಇದು ಅಗ್ನಿಸೂಕ್ತ, ಇದು ವಾಯುಸೂಕ್ತ ಎಂಬ ಸೂಕ್ತವ್ಯವಸ್ಥೆಯು ತಪ್ಪಾಗಬೇಕಾದೀತು. ಉಪನಿಷದ್ಭಾಗದಲ್ಲಿರುವ ಇದು ಆತ್ಮವಿದ್ಯೆ, ಇದು ವೈಶ್ವಾನರವಿದ್ಯೆ, ಇದು ಅಕ್ಷಿವಿದ್ಯೆ, ಇದು ಪ್ರಾಣವಿದ್ಯೆ ಎಂಬ ವಿದ್ಯಾವ್ಯವಸ್ಥೆಯೂ ಸಹ ತಪ್ಪಾಗಬೇಕಾದೀತೆಂದು 'ಕಿಂಚ' ಇತ್ಯಾದಿ ವಾಕ್ಯದ ಅಭಿಪ್ರಾಯವಾಗಿದೆ. 'ನಿರಸ್ತತ್ವಾತ್' ಎಂಬುದಕ್ಕೆ ಬ್ರಹ್ಮನಲ್ಲಿ ಮುಖ್ಯವಾಗಿರುವ ಇಂದ್ರಾದಿಶಬ್ದಗಳನ್ನು ಅಗ್ನ್ಯಾದಿಗಳಲ್ಲಿಯೂ ಪ್ರಯೋಗಿಸಬೇಕಾದೀತೆಂಬ ವಾಕ್ಯದಿಂದ ಹಿಂದೆಯೇ ನಿರಾಸ ಮಾಡಿದ್ದಾಗಿದೆ ಎಂದರ್ಥ.

**प्रकाशः** – नन्वग्निश्रुत्यादेर्विष्णुप्रापकात्प्राबल्योक्तौ सूत्रभाष्यटीकाविरोध इत्याशङ्क्याह – **टीकादाविति** । जात्या निरवकाशत्वेन च श्रुतेः प्राबल्यं स्वयमुक्तं,

ಅಗ್ನಿಶ್ರುತ್ಯಾದಿಗಳಿಗೆ ವಿಷ್ಣುಪ್ರಾಪಕವಾದ ಲಿಂಗಾದಿಗಳಿಗಿಂತಲೂ ಪ್ರಾಬಲ್ಯವನ್ನು ಗ್ರಂಥಕಾರರು ಹೇಳುತ್ತಿದ್ದಾರೆ. ಆದರೆ ಸೂತ್ರ, ಭಾಷ್ಯ, ಟೀಕೆಗಳಲ್ಲಿ ಪೂರ್ವಪಕ್ಷಪ್ರಾಪಕಲಿಂಗಕ್ಕೂ ಸಿದ್ಧಾಂತ ಪ್ರಾಪಕ ಲಿಂಗಕ್ಕೂ ಸಮಾನ ಬಲವನ್ನು ಹೇಳಿದ್ದಾರೆ. ಅವುಗಳ ವಿರೋಧವು ಬರುತ್ತದಲ್ಲವೇ? ಎಂಬ ಆಶಂಕೆಗೆ 'ಟೀಕಾದೌ' ಎಂಬುದರಿಂದ ಉತ್ತರಿಸುತ್ತಿದ್ದಾರೆ. ವೈಶ್ವಾನರಶ್ರುತಿಗೆ ವಾಸ್ತವಿಕವಾಗಿ ಸ್ವತಃ ಪ್ರಾಬಲ್ಯವಿದೆ ಮತ್ತು ನಿರವಕಾಶತ್ವ ಪ್ರಯುಕ್ತವಾಗಿಯೂ ಪ್ರಾಬಲ್ಯವಿದೆ. ಈ ಉದ್ದೇಶದಿಂದ ಗ್ರಂಥಕಾರರು ಪೂರ್ವಪಕ್ಷ ಪ್ರಾಪಕವಾದ ಶ್ರುತಿಗೆ ಪ್ರಾಬಲ್ಯವನ್ನು ಸ್ಥಾಪಿಸಿದ್ದಾರೆ.

**ಪ್ರಕಾಶಃ** – टीकादौ तु सौत्रसाधारणशब्दस्वारस्यमनुरुध्य जात्या प्राबल्यमनुपपाद्य श्रुतेर्लिङ्गस्य निरवकाशत्वेन साम्यमुपेत्य साधारण्यमुक्तं, जात्या बलवत्त्वमस्मदुक्तरीत्याऽनुमतमेव । अतो न विरोध इति भावः ।

ಟೀಕೆ, ಭಾಷ್ಯ ಮೊದಲಾದವುಗಳಲ್ಲಿ ಸೂತ್ರದಲ್ಲಿರುವ ಸಾಧಾರಣ ಶಬ್ದದ ಸ್ವಾರಸ್ಯವನ್ನು ಅನುಸರಿಸಿ ಕೇವಲ ನಿರವಕಾಶತ್ವ ಪ್ರಯುಕ್ತವಾದ ಪ್ರಾಬಲ್ಯವನ್ನಷ್ಟೇ ವಿವಕ್ಷಿಸಿದ್ದಾರೆ. ನಿರವಕಾಶತ್ವ ಪ್ರಯುಕ್ತವಾಗಿ ಪ್ರಾಬಲ್ಯವನ್ನು ವಿವಕ್ಷಿಸಿದಾಗ ಸಿದ್ಧಾಂತ ಪ್ರಾಪಕವಾದ ಯುಕ್ತಿಗಳಿಂದ ಸಾಮ್ಯವು ಬರುತ್ತದೆ. ಇದರಿಂದ ಉಭಯಸಾಧಾರಣವಾಗಿದೆಯೆಂದು ಸೂತ್ರದ ಪದಕ್ಕೆ ಸ್ವಾರಸ್ಯವನ್ನು ಹೇಳಿದಂತಾಗುತ್ತದೆ. ಜಾತ್ಯಾಪ್ರಾಬಲ್ಯವನ್ನು ಟೀಕಾದಿಗಳಲ್ಲಿ ಉಲ್ಲೇಖಿಸಿರುವುದಿಲ್ಲ. ಗ್ರಂಥಕಾರರು ಹೇಳಲ್ಪಟ್ಟ ಈ ಜಾತ್ಯಾ ಪ್ರಾಬಲ್ಯವು ಟೀಕಾದಿಗಳಿಗೆ ಸಮ್ಮತವೇ ಆಗಿದೆ. ಆದ್ದರಿಂದ ಯಾವುದೇ ವಿರೋಧಕ್ಕೂ ಅವಕಾಶವಿಲ್ಲವೆಂದು ತಿಳಿಯಬೇಕು.

**ಪ್ರಕಾಶಃ** – श्रुतिलिङ्गयोरिति । वैश्वानरश्रुतिसर्वगतत्वलिङ्गयोरित्यर्थः । ननु टीकोक्तरीत्या लिङ्गस्य निरवकाशत्वे वैश्वानरोऽग्निरेवेति कथं निर्णयेन पूर्वपक्षः, श्रुत्या लिङ्गबाधो वा कथमित्यत आह – टीकायामिति । सिद्धान्तदिशेत्यर्थः ।

ಗ್ರಂಥದಲ್ಲಿರುವ 'ಶ್ರುತಿಲಿಂಗಯೋಃ' ಎಂಬುದಕ್ಕೆ 'ವೈಶ್ವಾನರಶ್ರುತಿ' ಹಾಗೂ ಸರ್ವಗತತ್ವ ಎಂಬ ಲಿಂಗಗಳಿಗೆ ಎಂದರ್ಥ.

ಟೀಕೆಯಲ್ಲಿ ಹೇಳಿದ ಪ್ರಕಾರ ಲಿಂಗವು ನಿರವಕಾಶವಾದರೆ ವೈಶ್ವಾನರನಾದವನು ಅಗ್ನಿಯೇ ಆಗಿದ್ದಾನೆಂದು ನಿರ್ಣಯಿಸಲು ಹೇಗೆ ಸಾಧ್ಯ ? ಮತ್ತು ಶ್ರುತಿಯಿಂದ ಲಿಂಗವು ಬಾಧಿತವಾಗುತ್ತದೆಂದು ಪೂರ್ವಪಕ್ಷಕಾರನು ಹೇಳಲು ಹೇಗೆ ಸಮರ್ಥನಾಗುತ್ತಾನೆ ? ಎಂಬ ಪ್ರಶ್ನೆಗೆ 'ಟೀಕಾಯಾಮ್' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. ಸಿದ್ಧಾಂತದ ಪ್ರಕಾರ ಎಂದು ಇಲ್ಲಿ ಇಟ್ಟುಕೊಳ್ಳಬೇಕು.

**ಪ್ರಕಾಶಃ** – वस्तुतः पूर्वपक्षे सर्वगतत्वलिङ्गमग्नौ सावकाशमिति टीकाशयः ।

ಪೂರ್ವಪಕ್ಷಕಾರನು ಸಿದ್ಧಾಂತದ ಪ್ರಕಾರ ಅಂಗೀಕಾರ ಮಾಡಿ ಸಿದ್ಧಾಂತಪ್ರಾಪಕವಾದ ಲಿಂಗವನ್ನು ನಿರವಕಾಶವೆಂದು ಹೇಳಿದ್ದಾನೆ. ವಾಸ್ತವಿಕವಾಗಿ ಪೂರ್ವಪಕ್ಷದಲ್ಲಿ ಸರ್ವಗತತ್ವಾದಿಲಿಂಗಗಳು ಅಗ್ನಿಯಲ್ಲಿ ಸಾವಕಾಶವೇ ಆಗಿರುತ್ತದೆಂಬುದು ಟೀಕೆಯ ಅಭಿಪ್ರಾಯ.

ಪರಿಪೂರ್ಣಚಂದ್ರಿಕಾ

**प्रकाशः** – एवं तर्हि विष्णुरेवेति सिद्धान्त्यभिमतनिर्णयाक्षेपपरग्रन्थः कथमित्यत आह – **न त्वित्यादि ।**

ಹೀಗೆ ಪೂರ್ವಪಕ್ಷವನ್ನು ನಿರ್ಣಯಾತ್ಮಕವಾಗಿ ಮಾಡುವುದಾದರೆ ಟೀಕೆಯಲ್ಲಿ ವಿಷ್ಣುವೇ ವೈಶ್ವಾನರನಾಗಿದ್ದಾನೆಂಬ ಸಿದ್ಧಾಂತಿಗಳಿಗೆ ಅಭಿಮತವಾದ ನಿರ್ಣಯವು ಹೇಗೆ ಆಗುತ್ತದೆ ಎಂಬ ಆಕ್ಷೇಪವನ್ನು ಮಾಡಿದ್ದು ಹೇಗೆ ಕೂಡುತ್ತದೆ? ಏಕೆಂದರೆ ಟೀಕಾಮಾತನ್ನು ನೋಡಿದಾಗ ಅನಿರ್ಣಯಾತ್ಮಕವಾದ ಪೂರ್ವಪಕ್ಷವೇ ಸಮ್ಮತವೆಂದು ತಿಳಿಯುತ್ತದಲ್ಲವೇ? ಎಂಬ ಪ್ರಶ್ನೆಗೆ 'ನತು' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

**प्रकाशः** – एवं स्वोक्तरीत्या श्रुतित्वनिरवकाशत्वोभयप्रयुक्तप्राबल्यं टीकायामप्यभिमतमित्युपेत्य टीकावाक्यानि तदनुगुणतया व्याख्याय, इदानीं पक्षान्तरमाह – **यद्वेति ।**

ಇಲ್ಲಿಯ ತನಕ ತಾವು ಹೇಳಲ್ಪಟ್ಟ ಶ್ರುತಿತ್ವ ಹಾಗೂ ನಿರವಕಾಶತ್ವವೆಂಬ ಉಭಯಪ್ರಯುಕ್ತವಾದ ಪ್ರಾಬಲ್ಯವನ್ನು ಸಮರ್ಥಿಸಿ ಟೀಕೆಗೂ ಸಹ ಇದು ಅಭಿಮತವಾಗಿದೆಯೆಂದು ಅಂಗೀಕರಿಸಿ ಟೀಕಾವಾಕ್ಯಗಳನ್ನು ಅದಕ್ಕನುಗುಣವಾಗಿ ವ್ಯಾಖ್ಯಾನಿಸಿದರು. ಈಗ ಮತ್ತೊಂದು ಪಕ್ಷವನ್ನು 'ಯದ್ವಾ' ಇತ್ಯಾದಿ ಗ್ರಂಥದಿಂದ ಹೇಳುತ್ತಿದ್ದಾರೆ.

**प्रकाशः** – टीकादौ जात्या प्राबल्यं, श्रुतेरनुक्त्वा निरवकाशत्वमात्रेण श्रुतिलिङ्गयोः साम्यमुपेत्य विष्णुरेव वैश्वानर इति विष्णुपरतानिश्चयो न युक्त इत्युक्तं, तत्स्वारस्यानुरोधेनेत्यर्थः । पूवर्पक्षफलमाह – **एवञ्चेति ।**

ಟೀಕೆ, ಭಾಷ್ಯಾದಿಗಳಲ್ಲಿ ವೈಶ್ವಾನರಶ್ರುತಿಗೆ ಸ್ವಭಾವತಃ ಪ್ರಾಬಲ್ಯವನ್ನು ಹೇಳದೇ, ಕೇವಲ ನಿರವಕಾಶತ್ವಪ್ರಯುಕ್ತವಾದ ಪ್ರಾಬಲ್ಯವನ್ನು ಹೇಳಿ ಪೂರ್ವಪಕ್ಷಶ್ರುತಿ ಹಾಗೂ ಸಿದ್ಧಾಂತಲಿಂಗಗಳಿಗೆ ಸಾಮ್ಯವನ್ನು ಅಂಗೀಕರಿಸಲಾಗಿದೆ. ಅದರಿಂದ ವಿಷ್ಣುವೇ ವೈಶ್ವಾನರನಾಗಿದ್ದಾನೆಂದು ನಿಶ್ಚಯವನ್ನು ಮಾಡಲು ಸಾಧ್ಯವಿಲ್ಲವೆಂದು ಹೇಳಿದ್ದಾರೆ. ಅದಕ್ಕನುಸಾರಿಯಾಗಿ ಈ ವ್ಯಾಖ್ಯಾನವೂ ಹೊರಟಿದೆ. ಪೂರ್ವಪಕ್ಷಫಲವನ್ನು 'ಏವಂಚ' ಎಂಬ ಗ್ರಂಥದಿಂದ ತೋರಿಸುತ್ತಿದ್ದಾರೆ.

**प्रकाशः** – स्वाभिमतश्रुतेः द्वेधा प्राबल्यपक्षे निरवकाशत्वप्रयुक्तप्राबल्यपक्षे चेत्यर्थः । यथा नामधेयपादे उद्भिदादिचतुरधिकरण्या वाजपेयनयपूर्वपक्षे तथेति भावः ।

'ಏವಂಚ' ಎಂಬ ಗ್ರಂಥಕ್ಕೆ ಸ್ವಾಭಿಮತವಾದ ಶ್ರುತಿಗೆ ಎರಡು ಬಗೆಯಲ್ಲಿ ಪ್ರಾಬಲ್ಯವನ್ನು ವಿವಕ್ಷಿಸಿದಾಗ ಅಥವಾ ನಿರವಕಾಶತ್ವಪ್ರಯುಕ್ತವಾದ ಪ್ರಾಬಲ್ಯವನ್ನು ವಿವಕ್ಷಿಸಿದಾಗ ಎಂದರ್ಥ.

ಈ ವೈಶ್ವಾನರಾಧಿಕರಣವು ಎರಡು ಪಾದಗಳಲ್ಲಿರುವ ಎಲ್ಲಾ ಅಧಿಕರಣಗಳ ಸಿದ್ಧಾಂತ ಪ್ರಮೇಯವನ್ನು ಆಕ್ಷೇಪಿಸುತ್ತಿದೆ. ಯಾವ ರೀತಿಯಾಗಿ ಪೂರ್ವಮೀಮಾಂಸೆಯ ನಾಮಧೇಯಪಾದದಲ್ಲಿ ವಾಜಪೇಯಾಧಿಕರಣದ ಪೂರ್ವಪಕ್ಷವನ್ನು ಮಾಡುವಾಗ ಉದ್ಭಿದಾದಿ ನಾಲ್ಕು ಅಧಿಕರಣಗಳನ್ನು ಆಕ್ಷೇಪ ಮಾಡಲಾಗಿದೆಯೋ, ಅದರಂತೆ ಇಲ್ಲಿಯೂ ತಿಳಿಯಬೇಕು.

**प्रकाशः –** द्वितीयपक्षेऽपि सर्वत्र सिद्धान्त्यभिमतनिर्णयाक्षेपादिति भावः । टीकादौ पूर्वाधिकरणाक्षेपः सङ्गतिप्रदर्शनायेति भावः ।

ಎರಡನೆಯ ಪಕ್ಷದಲ್ಲಿಯೂ ಸಿದ್ಧಾಂತಗಳಿಗೆ ಅಭಿಮತವಾದ ಎಲ್ಲಾ ಅಧಿಕರಣಗಳ ನಿರ್ಣಯವನ್ನು ಆಕ್ಷೇಪಮಾಡಲಾಗಿದೆಯೆಂದು ತಿಳಿಯಬೇಕು. ಹಾಗಾದರೆ ಟೀಕಾದಿಗಳಲ್ಲಿ ಕೇವಲ ಹಿಂದಿನ ಅಧಿಕರಣವನ್ನಷ್ಟೇ ಏಕೆ ಆಕ್ಷೇಪ ಮಾಡಿದರು ಎಂದರೆ, ಕೇವಲ ಸಂಗತಿಯನ್ನು ತೋರಿಸುವುದಕ್ಕಾಗಿ ಎಂದು ತಿಳಿಯಬೇಕು.

**प्रकाशः –** उक्तं च तत्त्वप्रदीपे ''पादद्वयार्थनिगमनाय सर्वनाम्नां सर्वलिङ्गानां च समन्वयदृढीकरणात्मकोऽयमधिकरणराज आरभ्यते'' इति ।।

ಈ ವಿಷಯವನ್ನು ತತ್ತ್ವಪ್ರದೀಪದಲ್ಲಿಯೂ ಹೇಳಿದ್ದಾರೆ. 'ಪಾದದ್ವಯಾರ್ಥನಿಗಮನಾಯ ಸರ್ವನಾಮ್ನಾಂ ಸರ್ವಲಿಂಗಾನಾಂ ಚ ಸಮನ್ವಯದೃಢೀಕರಣಾತ್ಮಕೋಽಯಮಧಿಕರಣರಾಜ ಆರಭ್ಯತೇ' ಎರಡು ಪಾದಗಳಲ್ಲಿರುವ ಎಲ್ಲಾ ನಾಮಾತ್ಮಕ ಹಾಗೂ ಲಿಂಗಾತ್ಮಕಶಬ್ದಗಳ ಸಮನ್ವಯವನ್ನು ದೃಢಪಡಿಸುವುದಕ್ಕಾಗಿ ಈ ವೈಶ್ವಾನರಾಧಿಕರಣವು ಹೊರಟಿದೆ. ಎರಡು ಪಾದಗಳಲ್ಲಿರುವ ಎಲ್ಲಾ ಅಧಿಕರಣಗಳಿಗೆ ಇದು ರಾಜನ ಸ್ಥಾನದಲ್ಲಿದೆ ಎಂದು ಅಭಿಪ್ರಾಯ.

**गुरुराजीयम् – ॐ वैश्वानरस्साधरणशब्दविशेषात् ॐ ।। अन्यथेति ।।** ब्रह्मणि मुख्यानामिन्द्रादिशब्दानामग्न्यादावग्न्यादिशब्दानां चेन्द्रादौ **प्रयोगाभाव** इत्यर्थः । अग्निशब्दस्य लक्षणयाऽग्न्यादिपरत्वेनैव व्यवहारोपपत्तौ तत्पर्यायशब्दान्तरस्यापि लक्षणया तत्कथने मानाभावादिति भावः । **नच समाकर्षादिति वक्ष्यमाणन्यायेनेति** । कल्पनोपदेशादिति न्यायेनान्यत्रापि मुख्यामुख्यवृत्तीनामङ्गीकारात् । वाचकत्वाविशेषेऽपि तदधीनत्वादिति न्यायेन समाकर्षन्यायेन च ब्रह्मणि मुख्यत्वेऽप्यन्यत्राप्यमुख्यप्रयोगस्सम्भवतीति नच युक्तमित्यर्थः ।। **अत एवेति** । शास्त्रदृष्ट्येति न्यायेनेत्यर्थः ।। **निरस्तत्वादिति** ।। इन्द्रादिशब्दानामग्न्यादिशब्दानां चेन्द्रादौ प्रयोगापत्तिरूपबाधकोक्त्या निरस्तत्वादित्यर्थः । नन्वेवं वैश्वानरश्रुतेरन्यत्रैव प्रसिद्धत्वे टीकायां साधारण्योक्तिरयुक्तेत्यत आह – **टीकादाविति** ।। यद्वा श्रुतेः प्राबल्यमुपपाद्यावधारणेन पूर्वपक्षे टीकाभाष्यसूत्रविरोध इत्यत आह – **टीकादाविति** ।।

नन्वेवं सर्वगतत्वादिविष्णुलिङ्गानामग्नौ सावकाशत्वे 'प्रसिद्धिलिङ्गयोरुभयोरपि निरवकाशत्वेन' इत्यादिटीकाविरोध इत्यत आह – **टीकायामिति** । ननु टीकायां लिङ्गनिरवकाशत्वस्योक्तत्वादुभयोर्निरवकाशत्वस्य व्याहतत्वान्न निरवकाशत्वेन साम्यं श्रुतिलिङ्गयोष्टीकादावभिप्रेतमित्यतो वाऽऽह – **टीकेति** ।। नतु लक्षणादिनाऽपि कल्प्यावकाशाभावाभिप्रायेत्यर्थः ।। **अन्यथेति** ।। सर्वथा निरवकाशत्वभिप्रायत्व इत्यर्थः ।

ननु निश्चयेन पूर्वपक्षे 'न तु लिङ्गेन विष्णुपरतानिश्चय' इति टीकाविरोध इत्यत आह – **नन्विति** ।। अस्मिन्पक्षे प्रसिद्धाग्न्यादिपरत्व इति शेषपूरणे टीकास्वारस्यं न भवतीत्यतः पक्षान्तरमाह – **यद्वेति** ।। नच तर्हि टीकोक्त-सर्वगतत्वाक्षेपानुपपत्तिः । साधारणश्रुतिसाहचर्येण लिङ्गस्याप्यवकाशकल्पनायाः सम्भवान्न विष्णोरेवेदं सर्वगतत्वमिति निश्चयस्सम्भवतीत्यर्थपरत्वात्तदाक्षेपटीकाया इति भावः । ननु व्यवहारविलोपेन पूर्वपक्षस्य सर्वाधिकरणसाधारणत्वादत्रैव को विशेष इत्यत आह – **एवश्चेति** ।। एवं चेत्यनेनाक्षेपप्रकारो व्यवहारश्च परामृश्यते । तर्ह्यतीताधिकरणैरेव गतार्थतेत्यत आह – **अत एवेति** ।। एतदाक्षेपस्यातीतैर-परिहारादनेनैव परिहारादेवेत्यर्थः । तदपि कुत इत्यत आह – **अत एवेति** ।। एतदाक्षेपपरिहारस्यैवात्रैव योग्यत्वादतीताधिकरणेष्वयोग्यत्वादेवेत्यर्थः । यद्वाऽतीत-सर्वाधिकरणाक्षेपकत्वादेवेत्यर्थः । पादद्वयशेषस्य मध्ये प्रवेशायोगेनादावन्ते वा निवेशे कार्ये समन्वयात्पूर्वं प्रसक्तेरेवाभावेनान्त्य एव निवेशस्यौचित्यादिति यावत् ।। नन्विदमध्यायस्यान्ते स्यादित्यतो वाऽऽह – **एवश्चेति** ।। एतादृश इत्यर्थः । **अतीताधिकरणसाधारण एव** । नतु भाव्यधिकरणसाधारणः । **अत एव** एतत्परिहार्याक्षेपस्य भाव्यधिकरणेऽभावादेव । **अस्य पादद्वयान्त्यतैव** । नतु पादचतुष्टयरूपाध्यायान्त्यतेत्यर्थः । स्पष्टयिष्यते चैतत् ।।



ಅಗ್ನಿಯು ವೈಶ್ವಾನರನಾಗಿದ್ದಾನೆಂಬ ಪೂರ್ವಪಕ್ಷಕ್ಕೆ ಶ್ರುತಿಯು ಆಧಾರವಾಗಿದೆ. ವಿಷ್ಣು ವೈಶ್ವಾನರನಾಗಿದ್ದಾನೆಂಬ ಸಿದ್ಧಾಂತಕ್ಕೆ ಲಿಂಗವು ಆಧಾರವಾಗಿದೆ. ಇವೆರಡರಲ್ಲಿ ಯಾವುದು ಪ್ರಬಲ? ಯಾವುದು ದುರ್ಬಲ? ಎಂಬುದನ್ನು ಮೊದಲು ವಿಚಾರ ಮಾಡಬೇಕು. ವಾಸ್ತವಿಕವಾಗಿ ಅಂತಃಸ್ಥತ್ವಾಧಿಕರಣದ ನ್ಯಾಯವನ್ನು ಸ್ಮರಿಸಿಕೊಂಡರೆ ಅಗ್ನಿಶ್ರುತಿ

ಮೊದಲಾದವೆಲ್ಲ ವಿಷ್ಣುವನ್ನೇ ಪ್ರತಿಪಾದಿಸುತ್ತವೆಂದು ತಿಳಿಯುತ್ತದೆ. ಆವಾಗ ಶ್ರುತಿಯು ಸಾವಕಾಶವಾಗುವುದರಿಂದ ದುರ್ಬಲವಾಗುತ್ತದೆ. ಲಿಂಗವು ನಿರವಕಾಶವಾದ್ದರಿಂದ ಪ್ರಬಲವಾಗುತ್ತದೆ. ಆದರೆ ಪ್ರಕೃತ ಪೂರ್ವಪಕ್ಷಕಾರನು ತನ್ನ ವಾದವನ್ನು ಸಮರ್ಥವಾಗಿ ಮಂಡಿಸುತ್ತಿದ್ದಾನೆ. ಒಂದು ವೇಳೆ ಎಲ್ಲಾ ಶಬ್ದಗಳು ಭಗವಂತನನ್ನೇ ಪ್ರತಿಪಾದಿಸುವುದಾದರೆ ಲೋಕವ್ಯವಹಾರವೇ ಇಲ್ಲವಾಗುವ ಪ್ರಸಂಗ ಬರುತ್ತದೆ. ಆದಕ್ಕೋಸ್ಕರ ಅಗ್ನಿ ಮೊದಲಾದ ಶಬ್ದಗಳು ಮುಖ್ಯವಾಗಿ ದೇವತೆಗಳನ್ನು ಪ್ರತಿಪಾದಿಸುತ್ತವೆಂದು ಒಪ್ಪಬೇಕು.

ಇನ್ನು ಮುಖ್ಯಾರ್ಥನಾದವನು ಭಗವಂತ. ಅವನ ಸಂಬಂಧದಿಂದ ದೇವತೆಗಳು ಅಗ್ನಿ ಮೊದಲಾದ ಶಬ್ದಗಳಿಂದ ಪ್ರತಿಪಾದ್ಯರಾಗುತ್ತಾರೆಂದು ಸಿದ್ಧಾಂತಿಗಳು ಉತ್ತರಿಸಬಹುದು. ಹಾಗಾದರೆ ಸಕಲ ಶಬ್ದಗಳಿಗೆ ಎಲ್ಲಾ ಪದಾರ್ಥಗಳಲ್ಲಿ ಲಕ್ಷಣಾವೃತ್ತಿಯನ್ನು ಒಪ್ಪಿದಂತಾಗುತ್ತದೆ. ಹಾಗೇ ಲಕ್ಷಣಾವೃತ್ತಿಯನ್ನು ಒಪ್ಪಿದರೆ ಸಂಸ್ಕೃತ ಸಾಹಿತ್ಯದಲ್ಲಿರುವ ನಾಮಾತ್ಮಕ ಶಬ್ದಗಳೆಲ್ಲವೂ ಪರ್ಯಾಯಪದಗಳಾದವು. ಆವಾಗ ಇಂದ್ರ ಮೊದಲಾದ ಶಬ್ದಗಳು ಇಂದ್ರನನ್ನು ಪ್ರತಿಪಾದಿಸುವಂತೆ ಅಗ್ನ್ಯಾದಿಗಳನ್ನೂ ಸಹ ಪ್ರತಿಪಾದಿಸಬೇಕಾಗುತ್ತದೆ. ಲಕ್ಷಣಾ ಮಾಡಬೇಕಾದರೆ ಲಕ್ಷಣೀಯವಾದ ವಸ್ತುವನ್ನು ಒಂದೇ ಶಬ್ದದಿಂದ ತಿಳಿಯಬೇಕೆಂದೇನೂ ನಿಯಮವಿಲ್ಲ. ತೀರದಲ್ಲಿ ಗಂಗಾಪದಕ್ಕೆ ಲಕ್ಷಣಾ ಮಾಡುವಂತೆ ಪ್ರವಾಹ ಶಬ್ದಕ್ಕೂ ಮಾಡಬಹುದು. 'ದೇವಸರಿತ್' ಎಂಬ ಶಬ್ದಕ್ಕೂ ಮಾಡಬಹುದು. ಹೀಗೊಪ್ಪದಿದ್ದರೆ ಅಗ್ನಿಯಲ್ಲಿ ವಹ್ನಿ ಶಬ್ದವನ್ನೂ ಸಹ ಪ್ರಯೋಗ ಮಾಡದೇ ಇರುವಂತಹ ಸ್ಥಿತಿ ಬರುತ್ತದೆ.

ಇನ್ನು ಪರಮಾತ್ಮನು ಅಗ್ನಿ ಮೊದಲಾದ ಶಬ್ದಗಳಿಂದ ಮುಖ್ಯವಾಗಿ ವಾಚ್ಯನಾಗಿದ್ದಾನೆ. ದೇವತೆಗಳು ಅಮುಖ್ಯವಾಗಿ ವಾಚ್ಯರಾಗಿದ್ದಾರೆಂದು ಸಿದ್ಧಾಂತಿಗಳು ಉತ್ತರಿಸಬಹುದು. ಆದರೆ ಹಾಗೆ ಹೇಳಲು ಕಾರಣವಿಲ್ಲ. ಒಂದು ವೇಳೆ ಅಗ್ನ್ಯಾದಿ ದೇವತೆಗಳನ್ನು ಯಾವುದಾದರೂ ಶಬ್ದವು ಮುಖ್ಯವಾಗಿ ಪ್ರತಿಪಾದಿಸುವುದಾಗಿದ್ದರೆ ಆದರ ಅನ್ವಯಕ್ಕೋಸ್ಕರ ಉಳಿದ ಶಬ್ದವನ್ನು ಅಮುಖ್ಯವಾಗಿ ಕೂಡಿಸಬಹುದಿತ್ತು. ಆದರೆ ಸಿದ್ಧಾಂತದ ಪ್ರಕಾರ ಭಗವಂತನನ್ನು ಬಿಟ್ಟು ಬೇರೆ ಯಾರೂ ಸಹ ಮುಖ್ಯವಾಗಿ ಯಾವುದೇ ಶಬ್ದದಿಂದ ಪ್ರತಿಪಾದ್ಯರಾಗುವುದಿಲ್ಲ.

ಮತ್ತು ಇಂದ್ರಾದಿ ಶಬ್ದಗಳು ಬ್ರಹ್ಮನಲ್ಲಿ ಮುಖ್ಯವಾಗಿರುವುದಾದರೆ, ಅಗ್ನಿಸೂಕ್ತ, ವಾಯುಸೂಕ್ತ ಎಂಬ ಸೂಕ್ತ ವ್ಯವಸ್ಥೆಯು ಹಾಗೂ ವೈಶ್ವಾನರ ವಿದ್ಯೆ, ಅಗ್ನಿವಿದ್ಯೆಯೆಂಬ ವಿದ್ಯಾವ್ಯವಸ್ಥೆಯೂ ಸಹ ಅಯುಕ್ತವಾಗುತ್ತದೆ. ಈ ಎಲ್ಲ ಕಾರಣಗಳಿಂದ ಲೋಕವ್ಯವಹಾರವನ್ನು ಕೂಡಿಸಬೇಕೆಂದರೆ ವಿಷ್ಣುವನ್ನು ಬಿಟ್ಟು ಬೇರೆ ಪದಾರ್ಥಗಳಲ್ಲಿಯೂ ಮುಖ್ಯವಾಚ್ಯತ್ವವನ್ನೇ ನಾವು ಒಪ್ಪಬೇಕು. ಹಾಗೆ ಒಪ್ಪಿದಾಗ ವೈಶ್ವಾನರ ಶ್ರುತಿಯು ಪೂರ್ವಪಕ್ಷಿಯ ವಿಷಯದಲ್ಲಿ ಪ್ರಬಲವಾದ ಪ್ರಮಾಣವಾಗುತ್ತದೆ.

ಟೀಕೆ, ಭಾಷ್ಯಗಳನ್ನು ನೋಡಿದಾಗ ಅನಿರ್ಧಾರಿತ ಪೂರ್ವಪಕ್ಷವನ್ನು ಮಾಡಿದಂತೆ ಕಾಣಸುತ್ತದೆ. ಅಂದರೆ ಪೂರ್ವಪಕ್ಷಯುಕ್ತಿ ಹಾಗೂ ಸಿದ್ಧಾಂತಯುಕ್ತಿಯು ಸಮಬಲವಾಗಿರುವುದರಿಂದ ವಿಷ್ಣುವೇ ವೈಶ್ವಾನರನೆಂದು ನಿರ್ಣಯವಾಗುವುದಿಲ್ಲವೆಂದು ಪೂರ್ವಪಕ್ಷ ಮಾಡಿದ್ದಾರೆ. ಆದರೂ ಸಹ ಚಂದ್ರಿಕಾಚಾರ್ಯರು ನಿಶ್ಚಯಾತ್ಮಕವಾದ ಪೂರ್ವಪಕ್ಷವನ್ನೇ ಸಮರ್ಥಿಸಿದ್ದಾರೆ. ಸಿದ್ಧಾಂತಯುಕ್ತಿಗಿಂತಲೂ ಪೂರ್ವಪಕ್ಷಯುಕ್ತಿಯು ಪ್ರಬಲವಾಗಿದೆ. ಏಕೆಂದರೆ ಅನ್ಯತ್ರಪ್ರಸಿದ್ಧಿಯೆಂಬ ನಿರವಕಾಶಯುಕ್ತಿಯಿಂದ ವೈಶ್ವಾನರ ಶ್ರುತಿಯು ಪ್ರಬಲವಾದ ಪ್ರಮಾಣವಾಗಿದೆ. ಆದ್ದರಿಂದ ವಿಷ್ಣು ವೈಶ್ವಾನರನಾಗಲು ಸಾಧ್ಯವೇ ಇಲ್ಲ. ಅಗ್ನಿಯೇ ವೈಶ್ವಾನರನಾಗುತ್ತಾನೆಂಬ ಪೂರ್ವಪಕ್ಷವನ್ನು ನಿರ್ಣಯ ಮಾಡಿದ್ದಾರೆ. ಇದಕ್ಕನುಗುಣವಾಗಿಯೇ ಟೀಕೆ ಹಾಗೂ ಭಾಷ್ಯಗಳನ್ನು ಅರ್ಥೈಸಿಕೊಳ್ಳಬೇಕು. ನಿಶ್ಚಯ ಮಾಡಲು ಬರುವುದಿಲ್ಲವೆಂದು ಟೀಕೆಯಲ್ಲಿ ಹೇಳಿದ್ದರೂ ಸಹ ಅಗ್ನಿ ಪರವಾಗಿ ನಿಶ್ಚಯಿಸಬಹುದೆಂಬುದನ್ನು ಅಲ್ಲಿ ವಿವಕ್ಷಿಸಿದಾಗ ಸಮಸ್ಯೆಯು

ಪರಿಹಾರವಾಗುತ್ತದೆ. ಆದ್ದರಿಂದ ನಿಶ್ಚಯಾತ್ಮಕವಾದ ಪೂರ್ವಪಕ್ಷವನ್ನೇ ಮಾಡಲು ಬರುವಾಗ ಅನಿಶ್ಚಯಾತ್ಮಕವಾದ ಪೂರ್ವಪಕ್ಷವನ್ನೇಕೆ ಮಾಡಬೇಕು? ಅಥವಾ ಅನಿರ್ಧಾರಿತವಾದ ಪೂರ್ವಪಕ್ಷವನ್ನು ಇಟ್ಟುಕೊಂಡರೂ ಸಹ ವಿಷ್ಣುಪರತ್ವವಿಷಯದಲ್ಲಷ್ಟೇ ನಿಶ್ಚಯವಿಲ್ಲವೆಂದಭಿಪ್ರಾಯ. ಅಗ್ನಿವಿಷಯದಲ್ಲಿ ನಿಶ್ಚಯಾತ್ಮಕವಾಗಿ ಯುಕ್ತಿಗಳನ್ನು ಹೇಳಬಹುದು.

ಈ ವೈಶ್ವಾನರಾಧಿಕರಣವು ಹಿಂದಿನೆರಡು ಪಾದಗಳಲ್ಲಿ ಪ್ರಸಕ್ತವಾದ ಎಲ್ಲಾ ಅಧಿಕರಣಗಳ ಸಿದ್ಧಾಂತ ಪ್ರಮೇಯವನ್ನು ಆಕ್ಷೇಪಿಸುತ್ತಿರುವುದರಿಂದ ಎರಡು ಪಾದಗಳಲ್ಲಿರುವ ಎಲ್ಲಾ ಅಧಿಕರಣಗಳಿಗೆ ರಾಜನ ಸ್ಥಾನದಲ್ಲಿದೆ. ಆದ್ದರಿಂದಲೇ ವೈಶ್ವಾನರಾಧಿಕರಣವನ್ನು ಕೊನೆಯಲ್ಲಿ ಉಲ್ಲೇಖಿಸಿದ್ದಾರೆ.

• • • • •

## ವೈಶ್ವಾನರ ಶ್ರುತಿಯಿಂದ ವಿಷ್ಣುವೇ ಪ್ರತಿಪಾದ್ಯನೆಂದು ಸಿದ್ಧಾಂತ

**तात्पर्यचन्द्रिका**

**सिद्धान्तस्तु –**

**अज्ञास्त्वज्ञानतः शब्दानन्यत्रैव प्रयुञ्जते ।**
**ज्ञानिनोऽपि च हानादिव्यवहारप्रसिद्धये ।।**

ಅನುವಾದ - ಸಿದ್ಧಾಂತ ಹೀಗಿದೆ - ಅಜ್ಞಾನಿಗಳು ಅಜ್ಞಾನ ಪ್ರಯುಕ್ತವಾಗಿ ವಿಷ್ಣುಪರವಾದ ಶಬ್ದಗಳನ್ನು ಲೋಕದಲ್ಲಿ ಪ್ರಯೋಗಿಸುತ್ತಾರೆ. ಅದರಂತೆ ಜ್ಞಾನಿಗಳೂ ಸಹ ಹಾನ, ಉಪಾದಾನ ಮೊದಲಾದ ವ್ಯವಹಾರಕ್ಕೋಸ್ಕರ ಮಾತ್ರ ಲೋಕದಲ್ಲಿ ಪ್ರಯೋಗಿಸುತ್ತಾರೆ.

**अज्ञानिन इव ज्ञानिनोऽप्यन्यत्र हानादिव्यवहारस्यापेक्षितत्वात्, तस्य च शब्दप्रयोगाधीनत्वात्, ब्रह्मणमुख्यस्यान्यत्र मुख्यस्य च शब्दस्याभावादन्यगतिकतया अन्यत्रापि प्रयुञ्जते,**

ಅಜ್ಞಾನಿಗಳಂತೆ ಜ್ಞಾನಿಗಳೂ ಸಹ ಹಾನ, ಉಪಾದಾನ ಮೊದಲಾದ ವ್ಯವಹಾರಕ್ಕೋಸ್ಕರ ಶಬ್ದಪ್ರಯೋಗವನ್ನು ಅಪೇಕ್ಷೆ ಪಡುತ್ತಾರೆ. ಈ ವ್ಯವಹಾರಗಳು ಶಬ್ದಪ್ರಯೋಗವಿಲ್ಲದೇ ನಡೆಯಲು ಸಾಧ್ಯವಿಲ್ಲ. ಮತ್ತು ಬ್ರಹ್ಮನಲ್ಲಿ ಅಮುಖ್ಯವಾಗಿದ್ದು ಲೋಕದಲ್ಲಿ ಮುಖ್ಯವಾದ ಬೇರೆ ಶಬ್ದಗಳೂ ಸಹ ಇರುವುದಿಲ್ಲ. ಆದ್ದರಿಂದ ಬೇರೆ ಗತಿ ಇಲ್ಲದೆ ಜ್ಞಾನಿ ಜನರು ಭಗವಂತನ ವಾಚಕವಾದ ಶಬ್ದಗಳನ್ನೇ ಲೋಕದಲ್ಲಿಯೂ ಪ್ರಯೋಗಿಸುತ್ತಾರೆ.

**जातिश्शब्दार्थ इति मते जातौ मुख्यानपि शब्दान् हानादिव्यवहाराय व्यक्ताविव ।**

ಭಾಟ್ಟರು ಸಕಲಶಬ್ದಗಳು ಜಾತಿಯನ್ನೇ ಪ್ರತಿಪಾದಿಸುತ್ತವೆಂದು ಅಂಗೀಕರಿಸಿದ್ದಾರೆ. ಅವರೂ ಸಹ ಎಲ್ಲ ಶಬ್ದಗಳಿಗೆ ಜಾತಿಯಲ್ಲಿಯೇ ಮುಖ್ಯವಾಚ್ಯತ್ವವನ್ನು ಒಪ್ಪಿದ್ದರೂ ಸಹ ಹಾನ, ಉಪಾದಾನ ಮೊದಲಾದ ವ್ಯವಹಾರಕ್ಕೋಸ್ಕರ ವ್ಯಕ್ತಿಯಲ್ಲಿಯೂ ಆ ಶಬ್ದಗಳನ್ನು ಪ್ರಯೋಗಿಸುತ್ತಾರೆ. ಅದರಂತೆ ವಿಷ್ಣುವಿನಲ್ಲಿ ಮುಖ್ಯವಾದ ಶಬ್ದಗಳನ್ನು ವ್ಯವಹಾರಕ್ಕೋಸ್ಕರ ಅಮುಖ್ಯವಾಗಿ ಉಪಯೋಗಿಸಬಹುದು.

**अग्न्यादाविन्द्रादिशब्दप्रयोगे च व्यवहारव्यवस्था न स्यात् ।**

ಸಕಲ ಶಬ್ದಗಳು ವಿಷ್ಣುವಿನ ಪರ್ಯಾಯಶಬ್ದಗಳಾದ್ದರಿಂದ ಅಗ್ನಿಶಬ್ದವನ್ನು ಮಾತ್ರ ಅಗ್ನಿದೇವತೆಯಲ್ಲೇಕೆ ಪ್ರಯೋಗಿಸಬೇಕು. ಇಂದ್ರಶಬ್ದವನ್ನೇಕೆ ಪ್ರಯೋಗಿಸಬಾರದು? ಎಂಬ ಪೂರ್ವಪಕ್ಷವೂ ತಪ್ಪು. ಒಂದು ವೇಳೆ ಅಗ್ನಿ ಮೊದಲಾದವರಲ್ಲಿ ಇಂದ್ರ ಮೊದಲಾದ ಶಬ್ದಗಳನ್ನು ಪ್ರಯೋಗಿಸಿದರೆ ವ್ಯವಹಾರ ವ್ಯವಸ್ಥೆಯು ಹಾಳಾಗುತ್ತದೆ. ಅದಕ್ಕೋಸ್ಕರ ವ್ಯವಸ್ಥಿತವಾಗಿ ಒಬ್ಬೊಬ್ಬ ದೇವತೆಗಳಲ್ಲಿ ಒಂದೊಂದೇ ಹೆಸರುಗಳನ್ನು ಪ್ರಯೋಗಿಸಬೇಕು.

**न चाग्न्यादौ वह्न्यादिशब्दानामिवेन्द्रादिशब्दानामपि शक्तिरभिधानादिसिद्धा ।**

ಇಂದ್ರ ಶಬ್ದವನ್ನು ಅಗ್ನಿಯಲ್ಲಿ ಪ್ರಯೋಗ ಮಾಡದಿದ್ದರೆ ವಹ್ನಿ ಶಬ್ದವನ್ನೂ ಸಹ ಅಗ್ನಿಯಲ್ಲಿ ಪ್ರಯೋಗ ಮಾಡದಿರಬೇಕಾದೀತೆಂಬ ಆಕ್ಷೇಪವೂ ಸಹ ತಪ್ಪು. ಏಕೆಂದರೆ ಅಗ್ನಿಯಲ್ಲಿ ವಹ್ನಿ ಶಬ್ದದ ಪ್ರಯೋಗವು ಅಭಿಧಾನಾದಿಗಳಿಂದ ಸಿದ್ಧವಾಗಿದೆ. ಆದರೆ ಅದೇ ಅಗ್ನಿಯಲ್ಲಿ ಇಂದ್ರ ಮೊದಲಾದ ಶಬ್ದಗಳು ಅಭಿಧಾನದಿಂದ ಸಿದ್ಧವಾಗಿಲ್ಲ. ಹೀಗೆ ಕೋಶಾದಿಗಳಿಂದ ಸಿದ್ಧವಾಗಿದ್ದರಿಂದ ಆಯಾ ಶಬ್ದಗಳನ್ನು ಆಯಾ ಪದಾರ್ಥಗಳಲ್ಲಿಯೇ ಪ್ರಯೋಗಿಸಬೇಕು.

**'अग्निर्दुःखी' ''अग्निर्वै देवानामवमः'' इत्यादौ च तद्गतत्वेन विवक्षित-दुःखितत्वाद्यनुपपत्तेः भृत्ये जयिशब्दस्येवाग्निशब्दस्यान्यत्रामुख्यता ।**

'ಭೃತ್ಯಃ ಜಯೀ' ಎಂಬಲ್ಲಿ ಭೃತ್ಯಶಬ್ದವು ಮುಖ್ಯವಾದ ಅರ್ಥವುಳ್ಳದ್ದರಿಂದ 'ಜಯೀ' ಎಂಬ ಶಬ್ದಕ್ಕೆ ಅಮುಖ್ಯಾರ್ಥವನ್ನು ಸ್ವೀಕರಿಸುವುದು ಅನಿವಾರ್ಯವೆಂದು ಪೂರ್ವಪಕ್ಷಕಾರನು ಹೇಳಿದ್ದನು. ಹಾಗಾದರೆ 'ಅಗ್ನಿರ್ದುಃಖೀ' 'ಅಗ್ನಿರ್ವೈ ದೇವಾನಾಮವಮಃ' ಇತ್ಯಾದಿಯಾಗಿ ಶ್ರುತಿಯು ಹೇಳುತ್ತಿರುವುದರಿಂದ ವಿವಕ್ಷಿತವಾದ ದುಃಖಿತ್ವಾದಿಗಳನ್ನು ಪರಮಾತ್ಮನಲ್ಲಿ ಒಪ್ಪಲು ಸಾಧ್ಯವಿಲ್ಲ. ತದ್ಗತತ್ವವನ್ನು ಪ್ರವೃತ್ತಿನಿಮಿತ್ತವೆಂದು ಒಪ್ಪಿದಾಗ ದುಃಖಾದಿಗಳು ಪರಮಾತ್ಮನಲ್ಲಿ ಬರಬೇಕಾಗುತ್ತದೆ. ಆದ್ದರಿಂದ ದುಃಖವುಳ್ಳ ಅಗ್ನಿದೇವತೆಯನ್ನೇ 'ದುಃಖೀ' ಎಂಬ ಶಬ್ದವು ಮುಖ್ಯವಾಗಿ ಪ್ರತಿಪಾದಿಸಬೇಕು. ಅದಕ್ಕನುಗುಣವಾಗಿ ಜಯಿಶಬ್ದಕ್ಕೆ ಹೇಗೆ ಅಮುಖ್ಯಾರ್ಥವನ್ನು ನೀವು ಒಪ್ಪಿದಿರೋ ಅದರಂತೆ ಅಗ್ನಿಶಬ್ದಕ್ಕೂ ಸಹ ಅಮುಖ್ಯವಾದ ಅರ್ಥವನ್ನು ಒಪ್ಪುತ್ತೇವೆ.

ಪರಿಪೂರ್ಣಚಂದ್ರಿಕಾ

**अन्यथा अलौकिकमग्न्यादिस्वरूपमेव न सिध्येदिति कथं तत्र प्रयोगाभावापादनम् ।**

ಅಮುಖ್ಯವಾಗಿಯೂ ಸಹ ಅಗ್ನ್ಯಾದಿ ದೇವತೆಗಳಲ್ಲಿ ಅಗ್ನಿಶಬ್ದದ ಪ್ರಯೋಗವನ್ನು ಒಪ್ಪದಿದ್ದರೆ ಅಲೌಕಿಕವಾದ ಅಗ್ನಿದೇವತೆ ಮೊದಲಾದವರ ಸ್ವರೂಪವೇ ಸಿದ್ಧವಾಗದೇ ಇರಬೇಕಾದೀತು. ಅಲೌಕಿಕವಾದ್ದರಿಂದ ಪ್ರತ್ಯಕ್ಷಾದಿಗಳಿಂದಂತೂ ಅವರ ಸ್ವರೂಪವು ನಿರ್ಣಯವಾಗುವುದಿಲ್ಲ. ಹೀಗಿರುವಾಗ ಅಗ್ನ್ಯಾದಿ ಶಬ್ದಗಳ ಪ್ರಯೋಗವೇ ತಪ್ಪಾಗುತ್ತದೆಂಬ ನಿಮ್ಮ ಆಪಾದನೆಯಾದರೂ ಹೇಗೆ ಕೂಡುತ್ತದೆ ?

**सूक्तादिव्यवस्थायां तु अग्न्यादिसूक्तादिभिर्ब्रह्मोपासनायामग्न्यादावेव ब्रह्मणोऽभिव्यक्तिर्वा, अग्न्यादिसूक्ताद्युपासकैरग्न्यादावेव ब्रह्मणोऽनुस्मरणीयत्वं वा, तदुपासकानाम् अग्न्यादिस्थब्रह्मप्राप्तिर्वा निमित्तम् ।**

ಸಕಲ ಶಬ್ದಗಳಿಂದ ವಿಷ್ಣುವೇ ಪ್ರತಿಪಾದ್ಯನಾದರೂ ಸಹ ಸೂಕ್ತಾದಿ ವ್ಯವಸ್ಥೆಗಳು ಉಪಪನ್ನವಾಗುತ್ತವೆ. ಈ ವ್ಯವಸ್ಥೆಯಲ್ಲಿ ಅಗ್ನಿಸೂಕ್ತದಿಂದ ಬ್ರಹ್ಮನನ್ನು ಉಪಾಸನೆ ಮಾಡಿದರೆ ಅಗ್ನಿದೇವತೆಯಲ್ಲಿ ಬ್ರಹ್ಮನು ಅಭಿವ್ಯಕ್ತನಾಗುತ್ತಾನೆ. ಅಥವಾ ಅಗ್ನ್ಯಾದಿ ಸೂಕ್ತಗಳ ಉಪಾಸಕನಿಗೆ ಅಗ್ನ್ಯಾದಿಗಳಲ್ಲಿಯೇ ಬ್ರಹ್ಮನು ಧ್ಯಾನಕ್ಕೆ ವಿಷಯನಾಗುತ್ತಾನೆ. ಅಥವಾ ಅಗ್ನ್ಯಾದಿ ಸೂಕ್ತಗಳನ್ನು ಉಪಾಸನೆ ಮಾಡುವನಿಗೆ ಅಗ್ನ್ಯಾದಿಗಳಲ್ಲಿರುವ ಬ್ರಹ್ಮನೇ ಪ್ರಾಪ್ಯನಾಗುತ್ತಾನೆ. ಈ ಮೂರು ಕಾರಣಗಳಿಗೋಸ್ಕರ ಅಗ್ನಿಸೂಕ್ತ, ವಾಯುಸೂಕ್ತ ಇತ್ಯಾದಿ ವ್ಯವಸ್ಥೆಯು ಶ್ರುತಿಯಲ್ಲಿರುತ್ತದೆ.

**यद्यपि ऋग्भाष्ये –**

**'पृथग्रूपाणि विष्णोस्तु देवतान्तरगानि च ।**
**अग्न्यादिसूक्तवाच्यानि नाम्ना सूक्तभिदा भवेत् ॥'**

**इत्यग्न्यादिशब्दप्रयोगः सूक्तव्यवस्थापक उक्तः ।**

ಮತ್ತೇನೆಂದರೆ - ಸೂಕ್ತಾದಿವ್ಯವಸ್ಥೆಗೆ ಋಗ್ಭಾಷ್ಯದಲ್ಲಿ ಬೇರೆ ಕಾರಣವನ್ನೇ ಹೇಳಿದ್ದಾರೆ -

'ಪೃಥಗ್ರೂಪಾಣಿ ವಿಷ್ಣೋಸ್ತು ದೇವತಾಂತರಗಾನಿ ಚ ।
ಅಗ್ನ್ಯಾದಿಸೂಕ್ತವಾಚ್ಯಾನಿ ನಾಮ್ನಾ ಸೂಕ್ತಭಿದಾ ಭವೇತ್ ॥'

ಭಗವಂತನು ದೇವತಾಂತರ್ಗತನಾಗಿ ಹಾಗೂ ದೇವತೆಗಳಲ್ಲಿ ಅಂತರ್ಗತನಾಗದೇ ಇರುವವನಾಗಿ ಹೀಗೆ ಎರಡು ರೂಪಗಳಿಂದ ಅಗ್ನಿ ಮೊದಲಾದ ಶಬ್ದಗಳಿಂದ ಪ್ರತಿಪಾದ್ಯನಾಗಿದ್ದಾನೆ. ಈ ಎರಡು

ರೂಪಗಳ ಪ್ರಯೋಗ ಮಾಡುವ ಅಗ್ನ್ಯಾದಿ ಶಬ್ದಗಳನ್ನು ವಿವಕ್ಷಿಸಿ ಅಗ್ನಿಸೂಕ್ತ, ವಾಯುಸೂಕ್ತ ಇತ್ಯಾದಿ ವ್ಯವಸ್ಥೆಯು ಇರುತ್ತದೆ.

ಹೀಗೆ ಅಗ್ನಿ ಮೊದಲಾದ ಶಬ್ದಗಳ ಪ್ರಯೋಗವೇ ಸೂಕ್ತಾದಿಗಳಿಗೆ ವ್ಯವಸ್ಥಾಪಕವೆಂದು ಹೇಳಿದ್ದಾರೆ.

**एवञ्च यथा सामशब्दस्तद्विशेषबृहद्रथन्तरादिशब्दाश्च ऋगाश्रितगीतिविशेष एव मुख्याः, तदाश्रयनानाऋक्षु त्वमुख्याः, तथैव द्वितीये उक्तत्वात्, सप्तमे उपपादितत्वात्, नवमे स्मारितत्वाच्च,**

ಯಾವ ರೀತಿಯಾಗಿ ಪೂರ್ವಮೀಮಾಂಸೆಯಲ್ಲಿ ಸಾಮಶಬ್ದವು ಮತ್ತು ಸಾಮದ ವಿಶೇಷವಾದ ಬೃಹತ್, ರಥಂತರ ಮೊದಲಾದ ಶಬ್ದಗಳು ಋಜ್ ಮಂತ್ರದಲ್ಲಿರುವ ರಾಗವಿಶೇಷವನ್ನೇ ಮುಖ್ಯವಾಗಿ ಪ್ರತಿಪಾದಿಸುತ್ತವೆ. ಅಂತಹ ರಾಗವಿಶೇಷಕ್ಕೆ ಆಶ್ರಯವಾದ ಅನೇಕ ಋಜ್ ಮಂತ್ರಗಳನ್ನು ಅಮುಖ್ಯವಾಗಿ ಪ್ರತಿಪಾದಿಸುತ್ತವೆ. ಹೀಗೆ ಪೂರ್ವಮೀಮಾಂಸೆಯ ದ್ವಿತೀಯಾಧ್ಯಾಯದಲ್ಲಿ ಹೇಳಿ; ಏಳನೆಯ ಅಧ್ಯಾಯದಲ್ಲಿ ಅದನ್ನು ಸಮರ್ಥಿಸಿ; ಪುನಃ ಒಂಭತ್ತನೆಯ ಅಧ್ಯಾಯದಲ್ಲಿಯೂ ಸ್ಮರಣೆ ಮಾಡಿಕೊಂಡಿದ್ದಾರೆ. ಆದ್ದರಿಂದ ಸಾಮಶಬ್ದವು ರಾಗವಿಶೇಷವನ್ನು ಮುಖ್ಯವಾಗಿ ಪ್ರತಿಪಾದನೆ ಮಾಡಿ ರಾಗವಿಶಿಷ್ಟವಾದ ಮಂತ್ರವನ್ನು ಅಮುಖ್ಯವಾಗಿ ಪ್ರತಿಪಾದಿಸುತ್ತದೆ ಪ್ರಬಲವಾಗಿ ನಿರ್ಣಯವಾಗಿದೆ.

**एवमिन्द्राग्न्यादिशब्दास्तत्तत्सूक्तानि चेन्द्राग्न्यादिगतब्रह्मरूपेष्वेव मुख्यानि, अतीतानागतानेकेन्द्रादिषु त्वमुख्यानीत्येव व्यवस्था सिद्ध्यति ।**

ಹಿಂದೆ ಹೇಳಿದ ಪೂರ್ವಮೀಮಾಂಸೆಯ ದೃಷ್ಟಾಂತದಂತೆ ಇಂದ್ರ, ಅಗ್ನಿ ಮೊದಲಾದ ಶಬ್ದಗಳು ಹಾಗೂ ಇಂದ್ರಸೂಕ್ತ, ಅಗ್ನಿಸೂಕ್ತ ಮೊದಲಾದವು ಇಂದ್ರಾದಿಗಳಲ್ಲಿರುವ ಭಗವತ್‌ರೂಪವನ್ನೇ ಮುಖ್ಯವಾಗಿ ಪ್ರತಿಪಾದಿಸುತ್ತದೆ. ಅತೀತ, ಅನಾಗತರಾದ ಅನೇಕ ಇಂದ್ರಾದಿ ದೇವತೆಗಳನ್ನು ಅಮುಖ್ಯವಾಗಿ ಪ್ರತಿಪಾದಿಸುತ್ತವೆಂಬ ವ್ಯವಸ್ಥೆಯನ್ನು ತಿಳಿಯಬೇಕು. ಒಂದೇ ಸಾಮವು ಮುಖ್ಯವಾಗಿ ಒಂದು ರಾಗವನ್ನು ಪ್ರತಿಪಾದನೆ ಮಾಡಿ ಅನೇಕ ಮಂತ್ರಗಳನ್ನು ಅಮುಖ್ಯವಾಗಿ ಪ್ರತಿಪಾದಿಸುವಂತೆ; ಇಂದ್ರವೆಂಬ ಶಬ್ದವು ಮುಖ್ಯವಾಗಿ ಒಬ್ಬನೇ ಭಗವಂತನನ್ನು ಪ್ರತಿಪಾದನೆ ಮಾಡಿ, ಅಂತಹ ಭಗವದ್ರೂಪಕ್ಕೆ ಅಧಿಷ್ಠಾನರಾದ ಅನೇಕ ಹಿಂದಿನ ಮುಂದಿನ ಇಂದ್ರರನ್ನು ಅಮುಖ್ಯವಾಗಿ ಪ್ರತಿಪಾದಿಸುತ್ತದೆಂದು ದೃಷ್ಟಾಂತ-ದಾರ್ಷ್ಟಾಂತಿಕ ಭಾವವನ್ನು ತಿಳಿಯಬೇಕು.

**अन्यथा परमतेऽपि सौरसावित्रादेरेकदेवताकत्वात् 'इदं सौरम् इदं सावित्रम्' इति व्यवस्था न स्यात् ।**

ಒಂದು ವೇಳೆ ಸಂಜ್ಞಾಭೇದದಿಂದ ಸೂಕ್ತಭೇದವನ್ನು ಒಪ್ಪದೇ ದೇವತೆಗಳ ಭೇದದಿಂದಲೇ ಸೂಕ್ತ ಭೇದವೆಂದು ಆಗ್ರಹಿಸುವುದಾದರೆ ಸೌರಸೂಕ್ತ, ಸಾವಿತ್ರಸೂಕ್ತ ಎಂಬ ವ್ಯವಸ್ಥೆಯನ್ನು

ಪೂರ್ವಪಕ್ಷಕಾರರಿಗೂ ಸಹ ಮಾಡಲಾಗದು. ಲೋಕದಲ್ಲಿ ಇದು ಸೌರಸೂಕ್ತ, ಇದು ಸಾವಿತ್ರಸೂಕ್ತ ಎಂಬ ವ್ಯವಹಾರವಿದೆ. ಆದರೆ ಎರಡೂ ಸೂಕ್ತಗಳಿಗೆ ಸೂರ್ಯನೊಬ್ಬನೇ ದೇವತೆಯಾಗಿದ್ದಾನೆ. ಇದನ್ನು ಪೂರ್ವಪಕ್ಷಕಾರರು ಹೇಗೆ ಕೂಡಿಸುತ್ತಾರೆ? ಆದ್ದರಿಂದ ಸಂಜ್ಞಾಭೇದದಿಂದಲೇ ಸೂಕ್ತಭೇದವನ್ನು ಹೇಳಬೇಕು.

**तथाऽपीह सूत्रे आग्येयादिसूक्तोपासकैरग्न्यादिगतत्वेनानुस्मर्तव्यमित्यनुष्ठान-विशेषोपयोगिव्यवस्थापकमुक्तम् ।**

ಇಲ್ಲಿಯ ತನಕ ಹೇಳಿದಂತೆ ಋಗ್ಭಾಷ್ಯದಲ್ಲಿ ಸಂಜ್ಞಾಭೇದದಿಂದ ಸೂಕ್ತಭೇದದ ವ್ಯವಸ್ಥೆಯನ್ನು ಮಾಡಿದ್ದಾರೆ. ಅದರಂತೆ ಇಲ್ಲಿಯೂ ಹೇಳಬೇಕಿತ್ತು. ಆದರೆ ಪ್ರಕೃತ ಸೂತ್ರದಲ್ಲಿ ಆಗ್ನೇಯಾದಿಸೂಕ್ತಗಳಲ್ಲಿ ಉಪಾಸನೆ ಮಾಡುವವರಿಗೆ ಅಗ್ನ್ಯಾದಿ ದೇವತೆಗಳಲ್ಲಿರುವ ಭಗವಂತನೇ ಅನುಸ್ಮರಣೀಯನಾಗಿದ್ದಾನೆ. ಇಂತಹ ಅನುಷ್ಠಾನವಿಷಯಕತ್ವವನ್ನು ತಿಳಿಸುವುದಕ್ಕಾಗಿ ಮತ್ತೊಂದು ಬಗೆಯ ವ್ಯವಸ್ಥೆಯನ್ನು ನಿರೂಪಣೆ ಮಾಡಿದ್ದಾರೆ. ಆದ್ದರಿಂದ ಋಗ್ಭಾಷ್ಯದಲ್ಲಿ ಹೇಳಿದ ಕ್ರಮದಲ್ಲಿಯೂ ಸೂಕ್ತಭೇದವ್ಯವಸ್ಥೆಯನ್ನು ತಿಳಿಯಬಹುದು. ಸೂತ್ರಭಾಷ್ಯದಲ್ಲಿ ಹೇಳಿದ ಕ್ರಮದಿಂದಲೂ ಸೂಕ್ತಭೇದವ್ಯವಸ್ಥೆಯನ್ನು ತಿಳಿಯಬಹುದು.

**उक्तं चानुक्रमणिकायामपि सर्वसूक्तानां परमात्मदेवताकत्वं ''एकैव वा महानात्मा देवता'' इति ।**

ವೇದಕ್ಕೆ ಸಂಬಂಧಪಟ್ಟ ಕಾತ್ಯಾಯನನ ಅನುಕ್ರಮಣಿಕಾದಲ್ಲಿಯೂ ಈ ವಿಷಯವು ನಿರೂಪಿತವಾಗಿದೆ. 'ಏಕೈವ ವಾ ಮಹಾನಾತ್ಮಾ ದೇವತಾ' ಅಂದರೆ ವೇದದಲ್ಲಿರುವ ಸಕಲ ಮಂತ್ರಗಳಿಗೆ ಪರಮಾತ್ಮನೇ ದೇವತೆಯಾಗಿದ್ದಾನೆಂದು ಅನುಕ್ರಮಣಿಕೆಯನ್ನು ರಚಿಸಿದ ಋಷಿಗಳು ಒಪ್ಪಿಕೊಂಡಿದ್ದಾರೆ.

**एतेन यागव्यवस्थाऽपि सिद्धा,**

**'अहं हि सर्वयज्ञानां भोक्ता च प्रभुरेव च'**

**इत्यादिना सर्वयागानां विष्णुदेवताकत्वेऽपि आग्नेयादियागेषु अग्न्यादिगतस्यैव भगवतो अग्न्यादिशब्दैरेवोद्देश्यत्वादिना यागव्यवस्थोपपत्तेः ।**

ಹೀಗೆ ಸೂಕ್ತ ಭೇದದ ವ್ಯವಸ್ಥೆಯನ್ನು ಋಗ್ಭಾಷ್ಯದ ಪ್ರಕಾರ ಹಾಗೂ ಸೂತ್ರಭಾಷ್ಯದ ಪ್ರಕಾರ ಹೇಳಿದ್ದರಿಂದಲೇ ಯಾಗವ್ಯವಸ್ಥೆಯನ್ನೂ ಸಹ ಹೇಳಿದಂತಾಯಿತು. 'ಅಹಂ ಹಿ ಸರ್ವಯಜ್ಞಾನಾಂ ಭೋಕ್ತಾ ಚ ಪ್ರಭುರೇವ ಚ' ಇತ್ಯಾದಿ ಮಾತುಗಳಿಂದ ಸಕಲ ಯಾಗಗಳಿಗೆ ವಿಷ್ಣುವೊಬ್ಬನೇ ದೇವತೆಯಾಗಿದ್ದಾನೆಂದು ನಿರ್ಣಯವಾಗುತ್ತದೆ. ಆದರೂ ಸಹ ಆಗ್ನೇಯ ಯಾಗ, ಸೌರಯಾಗ

ಇತ್ಯಾದಿ ವ್ಯವಹಾರಗಳು ಹೇಗೆ ಉಪಪನ್ನವಾಗುತ್ತದೆಂದರೆ ಸಂಜ್ಞಾಭೇದದಿಂದ ಅಥವಾ ಅಗ್ನ್ಯಾದಿ ದೇವತೆಗಳಲ್ಲಿರುವ ಭಗವಂತನನ್ನೇ ಆಯಾ ಉಪಾಸಕನು ಉಪಾಸನೆ ಮಾಡಬೇಕೆಂಬ ಉದ್ದೇಶದಿಂದ ಅಗ್ನಿ ಮೊದಲಾದ ಶಬ್ದಗಳನ್ನು ಪ್ರಯೋಗಿಸಲಾಗಿದೆ. ಹೀಗೆ ಯಾಗವ್ಯವಸ್ಥೆಯನ್ನು ತಿಳಿಯಬೇಕು.

**अग्नीषोमीयादीनां द्विदेवताकत्वं च अधिष्ठानद्वित्वेन वा, अधिष्ठित-भगवद्रूपद्वित्वेन वेति द्रष्टव्यम् ॥**

ಸಕಲ ಯಾಗಗಳು ವಿಷ್ಣುದೇವತಾಕವಾಗಿದ್ದರೂ ಸಹ 'ಅಗ್ನಿ' 'ಸೋಮ' ಎಂಬ ಎರಡು ದೇವತೆಗಳುಳ್ಳ ಯಾಗವನ್ನು ಹೇಗೆ ಕೂಡಿಸುವುದು? ಎಂಬ ಪ್ರಶ್ನೆಗೆ ಭಗವದ್ರೂಪಕ್ಕೆ ಇಬ್ಬರು ಅಧಿಷ್ಠಾನವಾಗಿರುವುದರಿಂದ ಅಥವಾ ಅಧಿಷ್ಠಿತವಾದ ಭಗವದ್ರೂಪದಲ್ಲಿ ದ್ವಿತ್ವವಿರುವುದರಿಂದ ಇಬ್ಬರು ದೇವತೆಗಳುಳ್ಳ ಅಗ್ನೀಷೋಮೀಯ ಮೊದಲಾದ ಯಾಗಗಳನ್ನು ಕೂಡಿಸಬೇಕೆಂದು ಉತ್ತರಿಸಬೇಕು.

**प्रकाशः —**

आत्मशब्दश्रुतिस्मृतिसमाख्याप्रकरणाभिविमानत्वादिलिङ्गानां वैश्वानरस्य विष्णुत्वसाधकानां वैश्वानरादिश्रुत्यादेरन्यत्र व्यवहारान्यथानुपपत्त्या सूक्तादिभेदव्यवहरान्यथानुपपत्त्या च विष्णुत्वासाधकत्वोक्तेः व्यवहारास्य गत्युक्त्यैव आत्मशब्दादिबलाद्वैश्वानरो विष्णुरिति भाष्यटीकारीत्या सिद्ध्यतीति भावेन, व्यवहारस्य गत्युक्तिपराम् ''अनन्ययोगेन ब्रह्मवाचकैरपि तैर्ज्ञानिनो हानादिसिद्ध्यर्थमन्यत्र अग्न्यादौ व्यवहरन्ति'' इत्यादि ''साक्षात्'' इत्यादिसूत्रभाष्यटीकां विवृण्वन् तदुक्तप्रमेयं सङ्गृह्णाऽह — अग्न्यास्त्विति ।

ವಿವರಣೆ - ಸಿದ್ಧಾಂತವನ್ನು ಪ್ರಾರಂಭ ಮಾಡುತ್ತಿದ್ದಾರೆ. ಆತ್ಮಶಬ್ದ, ಶ್ರುತಿಸ್ಮೃತಿಗಳ ಸಮಾಖ್ಯಾನ, ಪ್ರಕರಣ ಹಾಗೂ ಅಭಿವಿಮಾನತ್ವವೇ ಮೊದಲಾದ ಲಿಂಗಗಳೆಲ್ಲವೂ ವೈಶ್ವಾನರನು ವಿಷ್ಣುವೇ ಆಗಿದ್ದಾನೆನ್ನಲು ಸಾಧಕ ಪ್ರಮಾಣಗಳಾಗಿವೆ. ಪೂರ್ವಪಕ್ಷಕಾರನು ಇವುಗಳನ್ನು ದುರ್ಬಲವೆಂದು ನಿರಾಕರಿಸಿದನು. ಏಕೆಂದರೆ ವೈಶ್ವಾನರ ಮೊದಲಾದ ಶ್ರುತಿಗಳಿಗೆ ಅನ್ಯತ್ರ ವ್ಯವಹಾರವನ್ನು ಕೂಡಿಸಬೇಕೆಂದರೆ, ಸೂಕ್ತಾದಿಭೇದವ್ಯವಸ್ಥೆಯನ್ನು ಮಾಡಬೇಕೆಂದರೆ ಇವುಗಳನ್ನು ವಿಷ್ಣುತ್ವಕ್ಕೆ ಸಾಧಕವಲ್ಲವೆಂದು ಹೇಳಬೇಕಾಗುತ್ತದೆ. ಅಂದರೆ ಅನ್ಯತ್ರವ್ಯವಹಾರದ ಅನ್ಯಥಾನುಪಪತ್ತಿಯಿಂದ ಹಾಗೂ ಸೂಕ್ತಾದಿಭೇದ ವ್ಯವಹಾರದಿಂದ, ಅನ್ಯಥಾನುಪಪತ್ತಿಯಿಂದ ಇವೆಲ್ಲಾ ಪ್ರಮಾಣಗಳು ಅಸಾಧಕವಾಗುತ್ತವೆಂದು ನಿರ್ಣಯವಾಗುತ್ತದೆ. ಹೀಗೆ ಹಿಂದೆ ಆಕ್ಷೇಪಿಸಲಾಗಿತ್ತು.

ಪರಿಪೂರ್ಣಚಂದ್ರಿಕಾ

ಪ್ರಕೃತ ಪೂರ್ವಪಕ್ಷಕಾರನ ಮೂಲಯುಕ್ತಿಯಾದ ಅನ್ಯತ್ರ ವ್ಯವಹಾರಕ್ಕೆ ಮೂಲಗತಿಯನ್ನು ಹೇಳುವ ಮೂಲಕ ಆಕ್ಷೇಪವನ್ನು ನಿರಾಕರಿಸುತ್ತಿದ್ದಾರೆ. 'ಆತ್ಮಶಬ್ದ', ಶ್ರುತಿಸ್ಮೃತಿ ಮೊದಲಾದ ಸಮಾಖ್ಯಾಪ್ರಮಾಣಗಳಿಂದ ವೈಶ್ವಾನರನು ವಿಷ್ಣುವೇ ಆಗಿದ್ದಾನೆಂದು ಭಾಷ್ಯ ಹಾಗೂ ಟೀಕೆಗಳಲ್ಲಿ ಸಮರ್ಥಿಸಿದ್ದು ಅತ್ಯಂತ ಯುಕ್ತವಾಗಿದೆ ಎಂಬುದಾಗಿ ಗ್ರಂಥಕಾರರು ಸಮರ್ಥಿಸಲು ಹೊರಟಿದ್ದಾರೆ. ಮತ್ತು ಅನ್ಯತ್ರವ್ಯವಹಾರಕ್ಕೆ ಗತಿಯನ್ನು ಹೇಳುವಂತಹ ಟೀಕಾ ವಾಕ್ಯ ಹೀಗಿದೆ - 'ಅನನ್ಯಯೋಗೇನ ಬ್ರಹ್ಮವಾಚಕೈರಪಿ ತೈರ್ಜ್ಞಾನಿನೋ ಹಾನಾದಿಸಿದ್ಧ್ಯರ್ಥಮನ್ಯತ್ರ ಅಗ್ನ್ಯಾದೌ ವ್ಯವಹರಂತಿ' ಸಕಲ ಶಬ್ದಗಳು ಮುಖ್ಯವಾಗಿ ಬ್ರಹ್ಮನನ್ನೇ ಪ್ರತಿಪಾದಿಸಿದರೂ ಹಾನಾದಿವ್ಯವಹಾರಕ್ಕೋಸ್ಕರ ಅಗ್ನ್ಯಾದಿ ದೇವತೆಗಳಲ್ಲಿ ಜ್ಞಾನಿಗಳು ವ್ಯವಹರಿಸುತ್ತಾರೆ ಎಂಬುದಾಗಿ. ಈ ವಾಕ್ಯವನ್ನು 'ಸಾಕ್ಷಾದಪ್ಯವಿರೋಧಂ' ಎಂಬ ಸೂತ್ರಭಾಷ್ಯದ ಟೀಕೆಯಲ್ಲಿ ಹೇಳಿರುತ್ತಾರೆ. ಈ ಮಾತನ್ನು ವಿವರಿಸುತ್ತಾ ಇದರಲ್ಲಡಗಿರುವ ಪ್ರಮೇಯವನ್ನು ಸಂಗ್ರಹಿಸಿ ಶ್ಲೋಕರೂಪದಿಂದ ಬಣ್ಣಿಸುತ್ತಿದ್ದಾರೆ. 'ಅಜ್ಞಾಸ್ತು' ಇತ್ಯಾದಿಯಾಗಿ

**प्रकाशः** – अज्ञानां मुख्यार्थाज्ञानतोऽन्यत्र प्रयोगेऽपि ज्ञानिनां कुतस्तत्र प्रयोगः, हानादिव्यवहारस्य अन्येनापि सम्भवादित्यत उत्तरार्धं व्यनक्ति – **अज्ञानिन इवेति** ।

ಅಜ್ಞಾನಿಗಳು ಮುಖ್ಯಾರ್ಥದ ಅರಿವಿಲ್ಲದ ಕಾರಣ ಶಬ್ದಾರ್ಥಗಳನ್ನು ಬೇರೆಡೆ ಪ್ರಯೋಗಿಸುತ್ತಾರೆ. ಆದರೆ ಜ್ಞಾನಿಗಳು ಬೇರೆಡೆ ಶಬ್ದಗಳನ್ನು ಪ್ರಯೋಗಿಸಲು ಏನು ಕಾರಣ? ಹಾನಾದಿವ್ಯವಹಾರವು ಬೇರೆ ನಿಮಿತ್ತದಿಂದಲೂ ಉಂಟಾಗುವಾಗ ಜ್ಞಾನಿಗಳ ಅನ್ಯತ್ರ ಪ್ರಯೋಗಕ್ಕೆ ಏನು ಉತ್ತರ? ಎಂಬ ಪ್ರಶ್ನೆಗೆ ಶ್ಲೋಕದ ಉತ್ತರಾರ್ಧದಿಂದ ಸಮಾಧಾನ ನೀಡುವುದಕ್ಕಾಗಿ 'ಅಜ್ಞಾನಿನ ಇವ' ಎಂಬ ಗ್ರಂಥದಿಂದ ಅದನ್ನೇ ವ್ಯಾಖ್ಯಾನಿಸುತ್ತಿದ್ದಾರೆ.

**प्रकाशः** – एतेन पूर्वार्धस्योपयोगो दर्शितः । तमग्रे स्पष्टयिष्यामः ।

ಗ್ರಂಥದಲ್ಲಿ 'ಅಜ್ಞಾನಿನ ಇವ' ಎಂದು ಹೇಳಿದ್ದರಿಂದ ಶ್ಲೋಕದ ಪೂರ್ವಾರ್ಧಕ್ಕೆ ಪ್ರಯೋಜನವನ್ನು ತೋರಿಸಿದರು. ಅಂದರೆ ಉದಾಹರಣೆಗೋಸ್ಕರ ಅಜ್ಞಾನಿಗಳ ಪ್ರಯೋಗವನ್ನು ಉಲ್ಲೇಖಿಸಿದ್ದಾರೆ. ಈ ವಿಷಯವು ಮುಂದೆ ಸ್ಪಷ್ಟವಾಗುತ್ತದೆ.

**प्रकाशः** – यद्वा – अत्र भाष्यादावनभिज्ञानादन्यत्र व्यवहारोक्तिः ''जगद्वाचित्वात्'' इति सूत्रसिद्धस्येह दृष्टान्तत्वेनेति सूचनाय ''अज्ञानिन इव'' इत्युक्तम् ।

ಅಥವಾ 'ಸಾಕ್ಷಾದಪ್ಯವಿರೋಧಂ ವದಂ ಜೈಮಿನಿಃ' ಎಂಬ ಸೂತ್ರದಲ್ಲಿ ಜ್ಞಾನಿಗಳ ವ್ಯವಹಾರಕ್ಕೆ ಕಾರಣವೇನೆಂಬುದನ್ನು ಸೂತ್ರಕಾರರು ಹೇಳಿದ್ದಾರೆ. ಆದರೆ ಭಾಷ್ಯದಲ್ಲಿ ಅಜ್ಞಾನಿಗಳ ಪ್ರಯೋಗವನ್ನು ನಿರೂಪಿಸಿದ್ದಾರೆ. ಸೂತ್ರದಲ್ಲಿ ಹೇಳದ್ದನ್ನು ಭಾಷ್ಯದಲ್ಲಿ ಹೇಳಿದಂತಾಯಿತಲ್ಲವೇ? ಎಂಬ ಪ್ರಶ್ನೆ ಬರುತ್ತದೆ. ಆದರೆ 'ಜಗದ್ವಾಚಿತ್ವಾತ್' ಎಂಬ ಸೂತ್ರದಲ್ಲಿ ಅಜ್ಞಾನಿಗಳ ಪ್ರಯೋಗಕ್ಕೆ ನಿಮಿತ್ತವನ್ನು ಹೇಳಲಾಗಿದೆ.

ಭಾಷ್ಯಕಾರರು ಅದನ್ನು ದೃಷ್ಟಾಂತವನ್ನಾಗಿ ಈ ಸೂತ್ರದಲ್ಲಿ ಹೇಳಿದ್ದಾರೆಂದು ಸೂಚಿಸುವುದಕ್ಕೋಸ್ಕರ ಗ್ರಂಥಕಾರರು 'ಅಜ್ಞಾನಿನ ಇವ' ಎಂದು ತಮ್ಮ ಶ್ಲೋಕವನ್ನು ವ್ಯಾಖ್ಯಾನಿಸಿದ್ದಾರೆ.

**प्रकाशः** – यद्वा – अन्यत्र व्यवहारो न स्यादित्येतदज्ञानिनो ज्ञानिनो वेति विकल्प्य श्लोके द्वयोर्गत्युक्तिः । 'नेदं रजतं तस्माज्जहीहि' 'इदं रजतमुपादत्स्व' इत्यादिव्यवहारस्य शब्दैकसाध्यत्वादित्यर्थः ।

ಅಥವಾ ಅನ್ಯತ್ರವ್ಯವಹಾರವಿಲ್ಲದಿರಬೇಕಾದೀತು ಎಂಬ ಆಕ್ಷೇಪವನ್ನು ಅಜ್ಞಾನಿಗಳ ವಿಷಯದಲ್ಲಿ ಮಾಡುತ್ತೀರೋ? ಅಥವಾ ಜ್ಞಾನಿಗಳ ವಿಷಯದಲ್ಲಿ ಮಾಡುತ್ತೀರೋ? ಎಂದು ಎರಡು ಬಗೆಯಲ್ಲಿ ವಿಕಲ್ಪ ಮಾಡಿ ಶ್ಲೋಕದಲ್ಲಿ ಎರಡಕ್ಕೂ ಕ್ರಮವಾಗಿ ಉತ್ತರಿಸಿದ್ದಾರೆ. 'ಇದು ರಜತವಲ್ಲವಾದ್ದರಿಂದ ಹೇಯವಾಗಿದೆ' 'ಇದು ರಜತವಾದ್ದರಿಂದ ಉಪಾದೇಯವಾಗಿದೆ' ಇತ್ಯಾದಿ ವ್ಯವಹಾರಗಳೆಲ್ಲವೂ ಶಬ್ದದಿಂದಷ್ಟೇ ಸಾಧ್ಯ. ಈ ದೃಷ್ಟಿಯಿಂದ ಜ್ಞಾನಿಗಳು ಅನ್ಯತ್ರಪ್ರಯೋಗ ಮಾಡುತ್ತಾರೆಂದು ತಿಳಿಯಬೇಕು.

**प्रकाशः** – अन्यत्रापीति । एतेन श्लोके चाऽप्यर्थोऽनुवृत्तेन 'अन्यत्र' इति एदेनान्वेतीति सूचितम् । मत इति । भट्टमते । प्रागुक्तातिप्रसङ्गं निराह – अग्न्यादाविति ।

'ಅನ್ಯತ್ರಾಪಿ' ಎಂದು ಹೇಳಿದ್ದರಿಂದ ಶ್ಲೋಕದ ಉತ್ತರಾರ್ಧದಲ್ಲಿರುವ 'ಚ' ಶಬ್ದವು 'ಅಪಿ' ಎಂಬರ್ಥದಲ್ಲಿದೆ. ಹಿಂದಿರುವ 'ಅನ್ಯತ್ರ' ಎಂಬ ಶಬ್ದದ ಜೊತೆಗೆ ಅನ್ವಯ ಮಾಡಿದಾಗ ಜ್ಞಾನಿಗಳು 'ಅನ್ಯತ್ರಾಪಿ' ಬೇರೆ ಕಡೆಯೂ ಪ್ರಯೋಗಿಸುತ್ತಾರೆಂದು ಹೇಳಿದಂತಾಗುತ್ತದೆ. 'ಮತೇ' ಎಂಬ ಶಬ್ದಕ್ಕೆ ಭಟ್ಟಮತದಲ್ಲಿ ಎಂದರ್ಥ. ಹಿಂದೆ ಹೇಳಲ್ಪಟ್ಟ ಅತಿಪ್ರಸಂಗವನ್ನು 'ಅಗ್ನ್ಯಾದೌ' ಎಂಬುದರಿಂದ ನಿರಾಕರಿಸುತ್ತಿದ್ದಾರೆ.

**प्रकाशः** – अज्ञानां सर्वशब्दमुख्यार्थेश्वराज्ञानतः अन्यत्रैव शब्दव्यवहारात् तस्य चासङ्कीर्णत्वाय व्यवस्थयैव शब्दप्रयोगात्, प्राज्ञा अपि तत्प्रहाणेन शब्दान्तरोपादाने कृत्याभावात् बहुलप्रयोगानुसार्यभिधानादिसिद्धशब्दशक्त्यनुसाराच्च व्यवस्थयैव शब्दान् प्रयुञ्जते, तदर्थत्वाच्छब्दप्रयोगस्येत्यर्थः ।

ಅಜ್ಞಾನಿಗಳು ಸಕಲ ಶಬ್ದಗಳಿಂದ ಈಶ್ವರನೇ ಮುಖ್ಯಪ್ರತಿಪಾದ್ಯನೆಂದು ತಿಳಿದಿರುವುದಿಲ್ಲ. ಆದ್ದರಿಂದ ಬೇರೆ ಕಡೆ ಶಬ್ದಗಳನ್ನು ವ್ಯವಹರಿಸುತ್ತಾರೆ. ಅಸಂಕೀರ್ಣವು ಬರಬಾರದೆಂದು ಅಗ್ನಿಶಬ್ದವನ್ನು ಅಗ್ನಿಯಲ್ಲಿ ಮಾತ್ರ; ಇಂದ್ರ ಶಬ್ದವನ್ನು ಇಂದ್ರನಲ್ಲಿ ಮಾತ್ರ ವ್ಯವಸ್ಥೆಯಿಂದ ಪ್ರಯೋಗಿಸುತ್ತಾರೆ. ಪ್ರಾಜ್ಞರೂ ಸಹ ಅಜ್ಞಾನಿಗಳು ಉಪಯೋಗಿಸುವ ಶಬ್ದಗಳನ್ನು ಬಿಟ್ಟು ಬೇರೆ ಶಬ್ದಗಳನ್ನು ಅನ್ಯತ್ರವ್ಯವಹಾರ ಮಾಡಲು ಕಾರಣವಿಲ್ಲ. ಮತ್ತು ಬಹಳವಾಗಿ ಅಜ್ಞಾನಿಗಳ ಪ್ರಯೋಗವನ್ನೇ ಅನುಸರಿಸಿ ಕೋಶಾದಿಗಳಲ್ಲಿ ಶಬ್ದಗಳ ವ್ಯವಸ್ಥೆಯನ್ನು ಮಾಡಲಾಗಿದೆ. ಅಂತಹ ಕೋಶಾದಿಗಳಲ್ಲಿ ಸಿದ್ಧವಾದ ಶಬ್ದಶಕ್ತಿಯನ್ನು ಅನುಸರಿಸಿ ಜ್ಞಾನಿಗಳು

ವಿಷ್ಣುವನ್ನು ಬಿಟ್ಟು ಬೇರೆಡೆ ಶಬ್ದಗಳನ್ನು ವ್ಯವಸ್ಥೆಯಿಂದಲೇ ಪ್ರಯೋಗಿಸುತ್ತಾರೆ. ಶಬ್ದಪ್ರಯೋಗಗಳಿರುವುದೇ ಹಾನಾದಿ ಪ್ರಯೋಜನಕ್ಕೋಸ್ಕರ. ವ್ಯವಸ್ಥೆಯನ್ನು ಬಿಟ್ಟರೆ ಈ ಹಾನಾದಿ ವ್ಯವಹಾರಗಳೇ ಅಯುಕ್ತವಾಗುತ್ತವೆ.

**प्रकाशः – यदप्यग्न्यादौ वह्न्यादिशब्दस्याप्यप्रयोग इति तत्साम्यापादनं, तत्र तद्वैषम्यमाह – नचेति ।**

ಹಿಂದೆ ಪೂರ್ವಪಕ್ಷ ಮಾಡುವಾಗ ವಿಷ್ಣುವಿನ ವಿಷಯದಲ್ಲಿ ಪರ್ಯಾಯ ಶಬ್ದಗಳಾದ ಇಂದ್ರಾದಿ ಪದಗಳನ್ನು ಅಗ್ನ್ಯಾದಿಗಳಲ್ಲಿ ಪ್ರಯೋಗ ಮಾಡದಿದ್ದರೆ ಅಗ್ನಿಯಲ್ಲಿ ಅಗ್ನಿಶಬ್ದಕ್ಕೆ ಪರ್ಯಾಯವಾದ ವಹ್ನಿ ಪದವನ್ನೂ ಸಹ ಪ್ರಯೋಗಿಸದೇ ಇರಬೇಕಾದೀತು ಎಂಬುದಾಗಿ ಸಾಮ್ಯವನ್ನು ಆಕ್ಷೇಪಿಸಿದ್ದನು. ಪ್ರಕೃತ 'ನಚ' ಎಂಬ ಗ್ರಂಥದಿಂದ ದೃಷ್ಟಾಂತವು ವಿಷಮವಾಗಿದೆಯೆಂದು ಪ್ರತಿಪಾದಿಸುತ್ತಿದ್ದಾರೆ.

**प्रकाशः – एतेन जयिशब्दस्य राजभृत्ययोरिव वह्न्यादिशब्दानां "कल्पनोपदेशात्" इति न्यायेन जगद्ब्रह्मवाचकत्वाविशेषेऽपि न्यूनाधिकभावेन उभयत्र शक्तिरेवेति सूचितम् ।**

ಹೀಗೆ ಹೇಳಿದ್ದರಿಂದ 'ಜಯೀ' ಶಬ್ದಕ್ಕೆ ರಾಜ ಹಾಗೂ ಭೃತ್ಯರಲ್ಲಿ ಸಮಾನವಾದ ವಾಚಕತ್ವವು ಇರುತ್ತದೆ. ಆದರೂ ಸಹ ನ್ಯೂನಾಧಿಕಭಾವವಿರುವದು ಅನುಭವಸಿದ್ಧವಾಗಿದೆ. ಅದರಂತೆ ವಹ್ನ್ಯಾದಿ ಶಬ್ದಗಳೂ ಸಹ 'ಕಲ್ಪನೋಪದೇಶಾತ್' ಎಂಬ ಸೂತ್ರದಲ್ಲಿ ಹೇಳುವಂತೆ ಜಗತ್ತು ಹಾಗೂ ಬ್ರಹ್ಮ ಇಬ್ಬರನ್ನು ಸಮಾನವಾಗಿ ಪ್ರತಿಪಾದಿಸುತ್ತವೆ. ಆದರೂ ಸಹ ನ್ಯೂನಾಧಿಕಭಾವದಿಂದ ಇಬ್ಬರಲ್ಲಿ ಶಕ್ತಿಯೇ ಇರುತ್ತದೆಂದು ಸೂಚಿಸಿದಂತಾಯಿತು.

**प्रकाशः – यदत्रोक्तं जयिशब्दवैषम्यं, तत्राह – अग्निर्दुःखीति । दुःखादिस्वामित्वेन दुखित्वमीशेऽपि युक्तमित्यतः – तद्गतत्वेनेत्युक्तम् । तद्गतनीचत्वापादकत्वेनेत्यर्थः ।**

'ಭೃತ್ಯ' ಶಬ್ದವು ಭೃತ್ಯನಲ್ಲಿ ಮುಖ್ಯವಾಗಿರುವುದರಿಂದ 'ಜಯೀ' ಎಂಬ ಶಬ್ದಕ್ಕೆ ಅಮುಖ್ಯಾರ್ಥವನ್ನು ಸ್ವೀಕರಿಸಬೇಕು. ಇಂದ್ರಾದಿಶಬ್ದಗಳಲ್ಲಿ ಇಂತಹ ಸ್ಥಿತಿಯಿರುವುದಿಲ್ಲವೆಂದು 'ಜಯೀ' ಎಂಬ ಶಬ್ದದ ವೈಷಮ್ಯವನ್ನು ಪೂರ್ವಪಕ್ಷಕಾರನು ಹಿಂದೆ ಹೇಳಿದ್ದನು. ಅದಕ್ಕೆ 'ಅಗ್ನಿರ್ದುಃಖೀ' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. 'ಅಗ್ನಿರ್ದುಃಖೀ' ಇತ್ಯಾದಿ ಪ್ರಯೋಗಗಳು ವೇದದಲ್ಲಿ ಕಾಣಸುತ್ತವೆ, ಸ್ವಾಮಿತ್ವವನ್ನೇ ಎಲ್ಲೆಡೆ ಪ್ರವೃತ್ತಿನಿಮಿತ್ತವೆಂದು ಅಂಗೀಕರಿಸಿದರೆ ದುಃಖಾದಿಗಳಿಗೆ ಸ್ವಾಮಿಯಾದ್ದರಿಂದ ಈಶನಲ್ಲಿಯೂ ದುಃಖಿತ್ವವು ಬರಬೇಕಾದೀತು ಎಂಬ ಆಕ್ಷೇಪ ಬಂದರೆ ತದ್ಗತತ್ವವನ್ನು ಮತ್ತೊಂದು ಪ್ರವೃತ್ತಿನಿಮಿತ್ತವೆಂದು ಅಂಗೀಕರಿಸಲಾಗಿದೆ. ದುಃಖಾದಿ ಸ್ವಾಮಿತ್ವವು ಪರಮಾತ್ಮನಲ್ಲಿ ಬಂದರೂ ಸಹ ತದ್ಗತತ್ವವು ಈಶನಲ್ಲಿ ಇರುವುದಿಲ್ಲವಾದ್ದರಿಂದ ಈಶ್ವರನು ದುಃಖಿಯೆನಿಸುವುದಿಲ್ಲ. ಹೀಗೆ ದುಃಖಿ ಶಬ್ದದಿಂದ ಮುಖ್ಯವಾಗಿ ವಾಚ್ಯನಾದ ಅಗ್ನಿದೇವತೆಯಲ್ಲಿ ಅನ್ವಯವನ್ನು ಕೂಡಿಸುವುದಕ್ಕಾಗಿ ಅಗ್ನಿಶಬ್ದಕ್ಕೆ ಅಮುಖ್ಯವಾದ ವಾಚಕತ್ವವನ್ನು ಒಪ್ಪಬೇಕಾಗುತ್ತದೆ. ಆದ್ದರಿಂದ 'ಭೃತಃ ಜಯೀ' ಎಂಬ ದೃಷ್ಟಾಂತದಿಂದ ವಿಷಮವಾಗಿರುವುದರಿಂದ.

ಅಗ್ನ್ಯಾದಿಗಳಲ್ಲಿ ನೀಚತ್ವವನ್ನು ತಂದು ಕೊಡುವಂತಹ ಪ್ರವೃತ್ತಿನಿಮಿತ್ತವನ್ನು ವಿವಕ್ಷಿಸಿದಾಗ ಪರಮಾತ್ಮನಲ್ಲಿ ಅಂತಹ ಪ್ರವೃತ್ತಿನಿಮಿತ್ತವು ಬರಲು ಸಾಧ್ಯವಿಲ್ಲ. ಆದಕ್ಕೋಸ್ಕರ ಪ್ರಸಿದ್ಧರಾದ ಅಗ್ನ್ಯಾದಿಗಳನ್ನೇ ಸ್ವೀಕರಿಸಬೇಕು.

**प्रकाशः** – 'अन्यथा' अमुख्यतोऽपि तत्राप्रयोगे । प्रत्यक्षादिसिद्धतां निराह – **अलौकिकेति** ।

ಅನ್ಯಥಾ = ಎಂದರೆ, ಒಂದು ವೇಳೆ ಅಗ್ನ್ಯಾದಿಗಳಲ್ಲಿ ಅಮುಖ್ಯವೃತ್ತಿಯಿಂದಲೂ ಸಹ ಅಗ್ನಿಶಬ್ದವನ್ನು ಪ್ರಯೋಗ ಮಾಡದಿದ್ದರೆ ಅವರ ಸ್ವರೂಪವೇ ಸಿದ್ಧವಾಗದಿರುವ ಪ್ರಸಂಗ ಬರುತ್ತದೆ ಎಂದರ್ಥ. ಪ್ರತ್ಯಕ್ಷದಿಂದ ಸಿದ್ಧವಾಗಬಹುದಲ್ಲವೇ ಎಂಬ ಶಂಕೆಯನ್ನು 'ಅಲೌಕಿಕ' ಎಂಬ ವಾಕ್ಯದಿಂದ ನಿರಾಕರಿಸುತ್ತಿದ್ದಾರೆ.

**प्रकाशः** – एवं ''साक्षादप्यविरोधं जैमिनिः'' इति सूत्राभिप्रेतमन्यत्र व्यवहारसमर्थनमुपपाद्य ''अभिव्यक्तोरित्याश्मरथ्यः'' ''अनुस्मृतेर्बादरिः'' ''सम्पत्तेरिति जैमिनिः'' इति सूत्रैरुक्तान् सूक्तादिव्यवस्थाहेतून् तत्तत्सूत्रभाष्यटीकां विवृण्वन्नाह – **सूक्तादिति** ।

ಹೀಗೆ 'ಸಾಕ್ಷಾದಪ್ಯವಿರೋಧಂ ಜೈಮಿನಿಃ' ಎಂಬ ಸೂತ್ರದಿಂದ ಅಭಿಪ್ರೇತವಾದ ಅನ್ಯತ್ರವ್ಯವಹಾರವನ್ನು ಸಮರ್ಥನೆ ಮಾಡಿ, ಈಗ 'ಅಭಿವ್ಯಕ್ತೇರಿತ್ಯಾಶ್ಮರಥ್ಯಃ' 'ಅನುಸ್ಮೃತೇರ್ಬಾದರಿಃ' 'ಸಂಪತ್ತೇರಿತಿ ಜೈಮಿನಿಃ' ಇತ್ಯಾದಿ ಸೂತ್ರಗಳಲ್ಲಿ ಹೇಳಲ್ಪಟ್ಟ ಸೂಕ್ತಾದಿ ವ್ಯವಸ್ಥೆಯ ಕಾರಣವನ್ನು ಆಯಾ ಸೂತ್ರಭಾಷ್ಯದ ಟೀಕೆಯಲ್ಲಿ ಹೇಳಿದ್ದನ್ನೇ ವಿವರಿಸುತ್ತಿದ್ದಾರೆ. 'ಸೂಕ್ತಾದಿ' ಎಂಬ ವಾಕ್ಯದಿಂದ.

**प्रकाशः** – ननु ऋग्भाष्ये, विष्णोरग्न्याद्यन्तर्गतान्यग्न्यादिशब्दवाच्यानि कानिचिद् रूपाणि, कानिचित्तु तदनन्तर्गतानि पृथग्विद्यमानानि अग्नीन्द्रादिशब्दवाच्यानि सन्तीति भिन्नभिन्नशब्दवाच्यविष्णुरूपभेदबोधकत्वात्, विष्णुरूपैकदेवताकत्वेऽपि सञ्ज्ञाभेदात् सूक्तादिव्यवस्था युक्तेत्युक्तम् । अत्र पुनरग्न्यावधिष्ठाने अपरोक्षीभूतत्वादिकं निमित्तमुच्यते ।

ಆಕ್ಷೇಪ - ಋಗ್ಭಾಷ್ಯದಲ್ಲಿ ವಿಷ್ಣುವಿಗೆ ಅಗ್ನ್ಯಾದ್ಯಂತರ್ಗತವಾದ ರೂಪಗಳಿರುವುದರಿಂದ ಅಗ್ನ್ಯಾದಿ ಶಬ್ದವಾಚ್ಯತ್ವವು ಅವನಲ್ಲಿ ಬರುತ್ತದೆ. ಇನ್ನೂ ಕೆಲವು ರೂಪಗಳು ಅಗ್ನ್ಯಾದಿಗಳಲ್ಲಿ ಅಂತರ್ಗತವಾಗದೆ ಪ್ರತ್ಯೇಕವಾಗಿವೆ. ಅವುಗಳೂ ಸಹ ಅಗ್ನಿ, ಇಂದ್ರ ಮೊದಲಾದ ಶಬ್ದಗಳಿಂದ ಪ್ರತಿಪಾದ್ಯವಾಗಿದೆ. ಹೀಗೆ ಭಿನ್ನಭಿನ್ನವಾದ ಶಬ್ದಗಳಿಂದ ವಾಚ್ಯನಾದ ವಿಷ್ಣುವಿನ ರೂಪವನ್ನು ಪ್ರತಿಪಾದಿಸುವುದಾದರೂ ಹೇಗೆ ? ಅಂದರೆ ವಿಷ್ಣುವೊಬ್ಬನೇ ಆಗಿದ್ದರೂ ಅವನ ರೂಪಗಳು ಹಾಗೂ ಹೆಸರುಗಳು ಭಿನ್ನಭಿನ್ನವಾಗಿರುವುದರಿಂದ ಸೂಕ್ತಾದಿ ವ್ಯವಸ್ಥೆಯು ಯುಕ್ತವಾಗುತ್ತದೆಂದು ಹೇಳಿರುತ್ತಾರೆ. ಆದರೆ ಇಲ್ಲಿ ಅಗ್ನಿಯಲ್ಲಿ ಅಧಿಷ್ಠಿತರಾದ್ದರಿಂದ ಅಪರೋಕ್ಷವನ್ನು ಮಾಡಿಕೊಳ್ಳುವುದಕ್ಕಾಗಿ ಸೂಕ್ತಾದಿ ವ್ಯವಸ್ಥೆಗಳಿರುತ್ತದೆಂದು ಕಾರಣವನ್ನು ಹೇಳಿದ್ದಾರೆ. ಇದು ಅಯುಕ್ತವಾಗಿದೆ.

ಪರಿಪೂರ್ಣಚಂದ್ರಿಕಾ

**प्रकाशः** – एतच्चायुक्तं, तथात्वे 'इदं विष्णुसूक्तम् इदं वामनसूक्तम् इदं पुरुषसूक्तम्' इति व्यवस्थाभावापत्तेः, तत्राधिष्ठानस्यैवाभावात् । सौरसावित्रादि-सूक्तव्यंस्थाभावापत्तेश्च, तत्राधिष्ठानभेदाभावात् ।

ಇದು ಅಯುಕ್ತವಾಗಿದೆ. ಹಾಗೇ ಅಧಿಷ್ಠಾನದಲ್ಲಿ ಅಪರೋಕ್ಷಕ್ಕೋಸ್ಕರ ಸೂಕ್ತಾದಿ ವ್ಯವಸ್ಥೆಯು ಉಪಪನ್ನವಾಗುತ್ತದೆಂದು ಉತ್ತರಿಸುವುದಾದರೆ, ಇದು ವಿಷ್ಣುಸೂಕ್ತ, ಇದು ವಾಮನಸೂಕ್ತ, ಇದು ಪುರುಷಸೂಕ್ತವೆಂಬ ವ್ಯವಸ್ಥೆಯೂ ಸಹ ಇಲ್ಲದಂತಾಗುತ್ತದೆ. ಏಕೆಂದರೆ ವಿಷ್ಣು, ವಾಮನಾದಿಗಳಿಗೆ ಅಧಿಷ್ಠಾನವೇ ಇರುವುದಿಲ್ಲ. ಮತ್ತು ಸೌರಸೂಕ್ತ, ಸಾವಿತ್ರಸೂಕ್ತವೆಂಬ ವ್ಯವಸ್ಥೆಯೂ ಇಲ್ಲದಂತೆ ಆಗಬೇಕಾಗುತ್ತದೆ. ಸೂರ್ಯ ಹಾಗೂ ಸಾವಿತ್ರ ಇಬ್ಬರೂ ಒಬ್ಬನೇ ಸೂರ್ಯನಾದ್ದರಿಂದ ಬೇರೆ ಬೇರೆ ಅಧಿಷ್ಠಾನವನ್ನು ಹೇಳಲಾಗದು.

**प्रकाशः** – अतोऽन्यत्र भाष्यकृदुक्तमेव समाधानं वाच्यमिति तदेव सूत्रकृताऽत्र कुतो नोक्तमिति भावेन तत्रोक्तमाशङ्क्य, तत्समर्थनपूर्वमेतदुक्तेरभिप्रायमाह – **यद्यपीति** ।

ಆದ್ದರಿಂದ ಋಗ್ಭಾಷ್ಯದಲ್ಲಿ ಹೇಳಿದ ಸಮಾಧಾನವನ್ನೇ ಇಟ್ಟುಕೊಳ್ಳಬೇಕು. ಹೀಗಿರುವಾಗ ಸೂತ್ರಕಾರರು ಅದೇ ಸಮಾಧಾನವನ್ನು ಹೇಳಬಹುದಿತ್ತಲ್ಲವೇ? ಎಂಬ ಆಶಂಕೆಯನ್ನು ಮಾಡಿಕೊಂಡು ಅದಕ್ಕೆ ಮುಂದೆ ಉತ್ತರಿಸುತ್ತಾರೆ. ಮೊದಲು ಆಶಂಕೆಯನ್ನು 'ಯದ್ಯಪಿ' ಇತ್ಯಾದಿ ಗ್ರಂಥದಿಂದ ಸಮರ್ಥಿಸುತ್ತಿದ್ದಾರೆ.

**प्रकाशः** – द्विविधानि विष्णुरूपाणि देवतान्तर्गतानि तदनन्तर्गतानि च । सर्वाणि चाग्न्यादिनामवन्ति । तत्राद्ये रूपाणां नाम्ना अधिष्ठाननाम्ना च अग्न्यादिसूक्तभेदः, अन्त्ये रूपनाम्नैवेत्युक्तमित्यर्थः ।

ವಿಷ್ಣುವಿನ ರೂಪಗಳು ಎರಡು ವಿಧ. ದೇವತೆಗಳಲ್ಲಿ ಅಂತರ್ಗತವಾದದ್ದು ಹಾಗೂ ದೇವತೆಗಳಲ್ಲಿ ಅನಂತರ್ಗತವಾದದ್ದು ಎಂದು. ಎರಡು ವಿಧರೂಪಗಳಿಗೂ ಅಗ್ನಿ, ಇಂದ್ರ ಇತ್ಯಾದಿ ಹೆಸರುಗಳಿವೆ. ದೇವತೆಗಳಲ್ಲಿ ಅಂತರ್ಗತವಾದ ರೂಪಗಳಲ್ಲಿ ಇಂದ್ರ, ಅಗ್ನಿ ಮೊದಲಾದ ವಿಶೇಷವಾದ ಹೆಸರುಗಳು ಇರುತ್ತವೆ. ಆದ್ದರಿಂದ ಅಗ್ನ್ಯಾದಿ ಸೂಕ್ತಭೇದವು ಉಪಪನ್ನವಾಗುತ್ತದೆ. ಅಥವಾ ಅಂತಹ ಭಗವದ್ರೂಪಕ್ಕೆ ಅಧಿಷ್ಠಾನವಾದ ಇಂದ್ರಾದಿ ದೇವತೆಗಳು ವಿಶೇಷವಾದ ಹೆಸರುಗಳನ್ನು ಪಡೆದಿದ್ದಾರೆ. ಆದ್ದರಿಂದಲೂ ಅಗ್ನ್ಯಾದಿಸೂಕ್ತಭೇದವು ಉಪಪನ್ನವಾಗುತ್ತದೆ. ಎರಡನೆಯ ಪಕ್ಷದಲ್ಲಿ ಭಗವಂತನ ರೂಪಗಳಿಗೇ ಪುರುಷ, ಅಗ್ನಿ, ಇಂದ್ರ ಇತ್ಯಾದಿಯಾದ ಬೇರೆ ಬೇರೆ ಹೆಸರುಗಳಿರುತ್ತದೆ. ಆದರಿಂದಲೂ ಸಹ ಸೂಕ್ತಾದಿ ನಿಯಮಗಳನ್ನು ಕೂಡಿಸಬಹುದು.

**प्रकाशः** – तत्र नामादीनां भगवति मुख्यत्वमन्यत्र तत्सम्बन्धनिमित्तत्वम् इत्येतद् दृष्टान्तेन समर्थयते – एवञ्चेति ।

ದೇವತಾಂತರ್ಗತವಾದ ಭಗವದ್ರೂಪಗಳು ಇಂದ್ರಾದಿಶಬ್ದಗಳಿಂದ ಮುಖ್ಯವಾಗಿ ಪ್ರತಿಪಾದ್ಯವಾಗಿವೆ. ಅಂತಹ ಭಗವದ್ರೂಪಗಳಿಗೆ ಅಧಿಷ್ಠಾನವಾದ್ದರಿಂದ ಇಂದ್ರಾದಿದೇವತೆಗಳು ಅಮುಖ್ಯವಾಗಿ ವಾಚ್ಯರಾಗುತ್ತಾರೆ. ಈ ವಿಷಯದಲ್ಲಿ ದೃಷ್ಟಾಂತವನ್ನು ನೀಡುತ್ತಿದ್ದಾರೆ 'ಏವಂಚ' ಎಂಬ ವಾಕ್ಯದಿಂದ.

**प्रकाशः – द्वितीय इति ।** द्वितीये अध्याये आद्यपादे ''गीतिषु सामाख्या'' इति द्वादशोऽधिकरणे, यद्यपि प्रगीते मन्त्रे सामशब्दप्रयोगोऽभियुक्तानाम्, तथाऽपि मन्त्रनिष्ठा गीतिरेव सामशब्दार्थ इति एतावन्मात्रमुक्तम् ।

ಪೂರ್ವಮೀಮಾಂಸೆಯ ಎರಡನೆಯ ಅಧ್ಯಾಯದ ಮೊದಲನೆಯ ಪಾದದ ಹನ್ನೆರಡನೆಯ ಅಧಿಕರಣದಲ್ಲಿ 'ಗೀತಿಷು ಸಾಮಾಖ್ಯಾ' ಎಂಬ ಸೂತ್ರವಿದೆ. ಇದರಲ್ಲಿ ವಾಸ್ತವಿಕವಾಗಿ ಗಾನಕ್ಕೆ ಆಶ್ರಯವಾದ ಮಂತ್ರವಿಶೇಷದಲ್ಲಿ ಸಾಮಶಬ್ದವನ್ನು ಜ್ಞಾನಿಗಳು ಪ್ರಯೋಗಿಸುತ್ತಾರೆ. ಆದರೆ ಮಂತ್ರವೇ ಸಾಮಶಬ್ದದ ಅರ್ಥವಲ್ಲ. ಮಂತ್ರದಲ್ಲಿರುವ ಗೀತಿವಿಶೇಷವು ಸಾಮಶಬ್ದದ ಅರ್ಥವಾಗಿಯೆಂದಷ್ಟೇ ಈ ಅಧಿಕರಣದಲ್ಲಿ ಹೇಳಿರುತ್ತಾರೆ.

**प्रकाशः** – तत्कथमित्याकाङ्क्षायां सप्तमेऽध्याये द्वितीयपादे ''साम्नोऽभिधानशब्देन प्रवृत्तिः स्याद्यथा शिष्टम्'' इत्यधिकरणे ''कवतीषु रथन्तरं गायति'' इत्यनेन रथन्तरशब्देन कवतीषु ऋक्षु किमतिदिश्यत इति परिज्ञानार्थं, रथन्तरशब्दः किं गीतिविशिष्टानाम् ''अभि त्वा शूर नो नुमः'' इत्यादीनामृचां वाचकः, उत गीतिमात्रस्येति सन्देहे, अध्येतृप्रसिद्ध्या गीतिविशिष्टऋग्वाचक इति प्राप्ते,

'विशेष्यं नाभिधा गच्छेत् क्षीणशक्तिर्विशेषणे ।'

इति न्यायेन गीतिमात्रस्य वाचक इत्युपपादितत्वात्,

ಏಳನೆಯ ಅಧ್ಯಾಯದ ಎರಡನೇ ಪಾದದಲ್ಲಿ 'ಸಾಮ್ನೋ ಅಭಿಧಾನ...' ಎಂಬ ಅಧಿಕರಣದಲ್ಲಿ "ಕವತೀಷು ರಥಂತರಂ ಗಾಯತಿ" ಎಂಬ ವಾಕ್ಯವನ್ನು ವಿಚಾರ ಮಾಡುತ್ತಿದ್ದಾರೆ. ಇಲ್ಲಿ ಕೇಳಿಸುತ್ತಿರುವ ರಥಂತರ ಶಬ್ದದಿಂದ 'ಕವತೀ' ಎಂಬ ಋಙ್ಮಂತ್ರಗಳಲ್ಲಿ ಏನನ್ನು ಅತಿದೇಶ ಮಾಡುತ್ತಿದ್ದಾರೆಂಬುದನ್ನು ತಿಳಿಯಬೇಕು. ಆದ್ದರಿಂದ 'ರಥಂತರ' ಶಬ್ದವು 'ರಥಂತರ' ಎಂಬ ರಾಗದಿಂದ ಕೂಡಿರುವ "ಅಭಿ ತ್ವಾ ಶೂರ ನೋ ನುಮಃ" ಇವೇ ಮೊದಲಾದ ಋಙ್ಮಂತ್ರಗಳಿಗೆ ವಾಚಕವಾಗಿದೆಯೋ? ಅಥವಾ 'ರಥಂತರ' ಎಂಬ ರಾಗಕ್ಕೆ ಮಾತ್ರ ವಾಚಕವಾಗಿದೆಯೊ? ಎಂದು ಸಂಶಯ.

'ರಥಂತರ' ಎಂಬ ರಾಗದಿಂದ ಕೂಡಿರುವ ಋಙ್ಮಂತ್ರಗಳಲ್ಲಿಯೇ ಅಧ್ಯೇತೃಗಳ ಪ್ರಸಿದ್ಧಿಯು ಕಾಣಿಸುತ್ತದೆ. ಆದ್ದರಿಂದ ರಥಂತರಶಬ್ದವು ರಾಗವಿಶಿಷ್ಟವಾದ ಋಙ್ಮಂತ್ರಗಳಿಗೆ ವಾಚಕವಾಗಿದೆಯೆಂದು ಪೂರ್ವಪಕ್ಷ.

ಪರಿಪೂರ್ಣಚಂದ್ರಿಕಾ

"ವಿಶೇಷ್ಯಂ ನಾಭಿಧಾ ಗಚ್ಛೇತ್ ಕ್ಷೀಣಶಕ್ತಿರ್ವಿಶೇಷಣೇ" ಎಂಬ ನ್ಯಾಯದಂತೆ ಋಙ್‌ಮಂತ್ರಗಳಲ್ಲಿ ರಥಂತರವು ವಿಶೇಷಣವಾಗಿದೆ. ಮತ್ತು ಮಂತ್ರವು ವಿಶೇಷವಾಗಿದೆ. ಹೀಗಿರುವಾಗ ರಥಂತರ ಶಬ್ದವು ವಿಶೇಷಣವನ್ನು ಪ್ರತಿಪಾದಿಸುವುದರಿಂದಲೇ ಶಕ್ತಿಯನ್ನು ಕಳೆದುಕೊಂಡಿದೆ. ವಿಶೇಷ್ಯದ ತನಕ ಹೋಗುವುದೇ ಇಲ್ಲ. ಹೀಗೆ ರಥಂತರ ಶಬ್ದವು ಕೇವಲ ರಾಗವನ್ನೇ ಪ್ರತಿಪಾದಿಸುತ್ತದೆಂದು ಸಿದ್ಧಾಂತ.

**प्रकाशः** – नवमे द्वितीयपादे "सामानि मन्त्रमेके स्मृत्युपदेशाभ्याम्" इत्यधिकरणे सप्तमसिद्धस्यैव गीतिवाचकत्वस्योत्तरविवक्षया स्मारितत्वादित्यर्थः ।

ಹೀಗೆ ಎರಡನೆಯ ಅಧ್ಯಾಯದಲ್ಲಿ ಮಂತ್ರದಲ್ಲಿರುವ ಗೀತಿವಿಶೇಷವನ್ನು ಸಾಮಶಬ್ದವು ಪ್ರತಿಪಾದಿಸುತ್ತದೆಂದು ವಿಷಯ ಪ್ರಸ್ತಾವನೆ ಮಾಡಿ ಏಳನೆಯ ಅಧ್ಯಾಯದಲ್ಲಿ ಅದನ್ನು ಉಪಪಾದಿಸಿದ್ದಾರೆ. ಇದೇ ವಿಷಯವನ್ನು ಪುನಃ ನವಮಾಧ್ಯಾಯದ ದ್ವಿತೀಯ ಪಾದದಲ್ಲಿ 'ಸಾಮಾನಿ ಮಂತ್ರಮೇಕೇ ಸ್ಮೃತ್ಯುಪದೇಶಾಭ್ಯಾಮ್' ಎಂಬ ಮೊದಲನೆಯ ಅಧಿಕರಣದಲ್ಲಿ ಸಾಮಶಬ್ದವು ರಾಗವಿಶೇಷವನ್ನು ಪ್ರತಿಪಾದಿಸುತ್ತದೆಂಬುದನ್ನು ಸ್ಮರಣೆ ಮಾಡಿಕೊಂಡಿದ್ದಾರೆ. ಇಷ್ಟು 'ದ್ವಿತೀಯೇ' ಇತ್ಯಾದಿ ಚಂದ್ರಿಕಾಗ್ರಂಥದಲ್ಲಿರುವ ವಾಕ್ಯದ ಅಭಿಪ್ರಾಯವಾಗಿದೆ.

**प्रकाशः** – उक्तञ्च शाबरभाष्ये – 'तदेव पुनरभिधीयते स्मारणायोत्तरमधिकरणं चिन्तयितुम् । गीतिः सामेति स्थिते इदं चिन्त्यते, किं गीतिष्वृचः प्रधानभूताः किं वा गुणभूता इति । सामानि मन्त्रमेक इति पूर्वपक्षोऽपि तत्रत्यसिद्धान्तस्मारणार्थमेव इत्यादि ।

ಈ ವಿಚಾರವನ್ನು ಶಾಬರಭಾಷ್ಯದಲ್ಲಿಯೂ ಸಹ ಹೀಗೆ ಹೇಳಲಾಗಿದೆ - 'ತದೇವ ಪುನರಭಿಧೀಯತೇ ಸ್ಮಾರಣಾಯೋತ್ತರಮಧಿಕರಣಂ ಚಿಂತಯಿತುಮ್ । ಗೀತಿಃ ಸಾಮೇತಿ ಸ್ಥಿತೇ ಇದಂ ಚಿಂತ್ಯತೇ, ಕಿಂ ಗೀತಿಷ್ವೃಚಃ ಪ್ರಧಾನಭೂತಾಃ ಕಿಂ ವಾ ಗುಣಭೂತಾ ಇತಿ । ಸಾಮಾನಿ ಮಂತ್ರಮೇಕ ಇತಿ ಪೂರ್ವಪಕ್ಷೋಽಪಿ ತತ್ರತ್ಯಸಿದ್ಧಾಂತಸ್ಮರಣಾರ್ಥಮೇವ' ಎಂದರೆ ಹೀಗೆ ಹಿಂದಿನ ಅಧಿಕರಣದಲ್ಲಿ ಹೇಳಿದ್ದನ್ನೇ ಸ್ಮರಣೆ ಮಾಡಿಕೊಳ್ಳಲು ಮುಂದಿನ ಅಧಿಕರಣವು ಹೊರಟಿದೆ. ರಾಗವಿಶೇಷವೇ ಸಾಮಶಬ್ದದಿಂದ ಪ್ರತಿಪಾದ್ಯವಾದ ಮೇಲೆ ಅಂತಹ ಸಾಮದಲ್ಲಿ ಋಙ್‌ಮಂತ್ರವು ಪ್ರಧಾನವಾಗಿ ಅನ್ವಯವನ್ನು ಹೊಂದುತ್ತದೋ? ಅಥವಾ ಗೌಣವಾಗಿಯೋ? ಎಂದು ಸಂಶಯ. ಪ್ರಧಾನವಾಗಿ ಅನ್ವಯಹೊಂದುತ್ತದೆಂದು ಪೂರ್ವಪಕ್ಷ ಮಾಡಿರುವುದೂ ಸಹ ಅಲ್ಲಿರುವ ಸಿದ್ಧಾಂತವನ್ನು ಸ್ಮರಣೆ ಮಾಡಿಕೊಳ್ಳುವುದಕ್ಕಾಗಿ ಎಂದು.

**प्रकाशः** – अत्र त्रितयोक्तिर्दार्ढ्यायेति ज्ञातव्यम् ।

ಪ್ರಕೃತ ಗ್ರಂಥಕಾರರು ಪೂರ್ವಮೀಮಾಂಸೆಯಲ್ಲಿ ಮೂರು ಕಡೆ ಹೇಳಿದ್ದನ್ನೂ ಸಹ ಉಲ್ಲೇಖಿಸಿದ್ದಾರೆ. ಏಕೆಂದರೆ ಸಾಮಶಬ್ದವು ರಾಗವಿಶೇಷವನ್ನೇ ಮುಖ್ಯವಾಗಿ ಪ್ರತಿಪಾದಿಸುತ್ತದೆ. ರಾಗದಿಂದ ಕೂಡಿರುವ ಮಂತ್ರಗಳನ್ನು ಅಮುಖ್ಯವಾಗಿ ಪ್ರತಿಪಾದಿಸುತ್ತದೆಂಬ ವಿಷಯವನ್ನು ದೃಢಪಡಿಸುವುದಕ್ಕಾಗಿ. ಹೀಗೆ ಅನೇಕ ಬಾರಿ ಪೂರ್ವಮೀಮಾಂಸೆಯಲ್ಲಿ ಬಂದಿರುವುದನ್ನು ಉಲ್ಲೇಖಿಸಿದ್ದಾರೆ.

ವೈಶ್ವಾನರಾಧಿಕರಣ (೧-೨-೭)

**प्रकाशः** – यदत्र केनचिदुक्तं – ''विशेष्यं नाभिधा गच्छेत्'' इति न्यायाद् गानविशिष्टऋग्वाचित्वे ''कवतीषु रथन्तरं गायति'' इत्यतिदेशानुपपत्त्या तत्र तथाऽत्वेऽपि नेह तथात्वमिति,

ಇಲ್ಲಿ ಕೆಲವರ ಆಕ್ಷೇಪ ಹೀಗಿದೆ - 'ವಿಶೇಷ್ಯಂ ನಾಭಿಧಾ ಗಚ್ಛೇತ್' ಎಂಬ ನ್ಯಾಯಾನುಸಾರಿಯಾಗಿ ಸಾಮಶಬ್ದಕ್ಕೆ ಗೀತಿವಿಶೇಷದಲ್ಲಿ ಅರ್ಥವನ್ನು ಹೇಳಬೇಕು. ಮತ್ತು ಒಂದು ವೇಳೆ ಗೀತಿವಿಶೇಷ ವಿಶಿಷ್ಟವಾದ ಮಂತ್ರವನ್ನೇ ಸಾಮಶಬ್ದವು ಪ್ರತಿಪಾದನ ಮಾಡುವುದಾದರೆ 'ಕವತೀಷು ರಥಂತರಂ ಗಾಯತಿ' ಎಂಬ ಅತಿದೇಶವು ಅನುಪಪನ್ನವಾಗುತ್ತದೆ. ಏಕೆಂದರೆ 'ರಥಂತರ' ಶಬ್ದವೇ ಮಂತ್ರವನ್ನು ಪ್ರತಿಪಾದಿಸಿದಾಗ ಪುನಃ 'ಕವತೀಷು' ಎಂಬುದಾಗಿ ಕವತೀ ಮಂತ್ರಗಳಲ್ಲಿ ಎಂದು ಹೇಳುವುದು ತಪ್ಪಾಗುತ್ತದೆ. ಆದ್ದರಿಂದ ವಿಶೇಷವಾಚಕವಾದ 'ಕವತೀ' ಎಂಬ ಪದವು ಪ್ರತ್ಯೇಕವಾಗಿರುವ ಕಾರಣ 'ರಥಂತರ' ಶಬ್ದಕ್ಕೆ ಕೇವಲ ವಿಶೇಷಣಪರತ್ವವನ್ನು ಒಪ್ಪುವುದು ಅನಿವಾರ್ಯ. ಆದರೆ ಪ್ರಕೃತದಲ್ಲಿ ಇಂದ್ರಾದಿ ಶಬ್ದಗಳು ಭಗವದ್ರೂಪವನ್ನೇ ಮುಖ್ಯವಾಗಿ ಪ್ರತಿಪಾದಿಸುತ್ತವೆ; ಆದ್ದರಿಂದ ಅಧಿಷ್ಠಾನಭೂತರಾದ ದೇವತೆಗಳನ್ನು ಅಮುಖ್ಯವಾಗಿ ಪ್ರತಿಪಾದಿಸುತ್ತವೆನ್ನಲು ಏನು ಆಧಾರ?

**प्रकाशः** – तत्तुच्छम्,

'तत्तन्नाम्नोच्यते विष्णुः सर्वशास्तृत्वहेतुतः ।
न क्वापि किञ्चिन्नामास्ति तमृते पुरुषोत्तमम् ।।'

इत्यादिवचनजातेन ''समाकर्षात्'' इत्याद्युक्तन्यायेनैतत्सिद्धेरिति ।

ಇವರ ವಾದವು ತಪ್ಪು. ಏಕೆಂದರೆ ಇಂದ್ರಾದಿ ಶಬ್ದಗಳಿಂದ ಮುಖ್ಯವಾಗಿ ಪರಮಾತ್ಮನೇ ಪ್ರತಿಪಾದ್ಯನಾಗುತ್ತಾನೆನ್ನಲು ನಮ್ಮಲ್ಲಿಯೂ ಆಧಾರಗಳಿವೆ. ಅದು ಹೀಗೆ - 'ತತ್ತನ್ನಾಮ್ನೋಚ್ಯತೇ ವಿಷ್ಣುಃ ಸರ್ವಶಾಸ್ತೃತ್ವಹೇತುತಃ । ನ ಕ್ವಾಪಿ ಕಿಂಚಿನ್ನಾಮಾಸ್ತಿ ತಮೃತೇ ಪುರುಷೋತ್ತಮಮ್॥' 'ಸಕಲ ನಾಮಗಳು ಸರ್ವಶಾಸಕನಾದ ಭಗವಂತನನ್ನೇ ಪ್ರತಿಪಾದಿಸುತ್ತವೆ. ಅವನನ್ನು ಪ್ರತಿಪಾದನೆ ಮಾಡದೇ ಇರುವ ಯಾವ ಶಬ್ದಗಳೂ ಎಲ್ಲಿಯೂ ಇರುವುದಿಲ್ಲ ಇತ್ಯಾದಿ ಅನೇಕ ಪ್ರಮಾಣಗಳಿಂದ ಮತ್ತು ಸಮಾಕರ್ಷಾಧಿಕರಣದಲ್ಲಿ ಹೇಳಲ್ಪಟ್ಟ ನ್ಯಾಯದಿಂದಲೂ ಇಂದ್ರಾದಿ ಶಬ್ದಗಳಿಂದ ಪರಮಾತ್ಮನೇ ಮುಖ್ಯವಾಗಿ ವಾಚ್ಯನಾಗುತ್ತಾನೆ. ಇಂದ್ರಾದಿ ದೇವತೆಗಳು ಕಿಂಚಿತ್ = ಸ್ವಲ್ಪ ಮುಖ್ಯವಾಗಿ ಪ್ರತಿಪಾದ್ಯರಾಗುತ್ತಾರೆಂದು ಸಿದ್ಧವಾಗುತ್ತದೆ.

**प्रकाशः** – अन्यथेति । अग्न्यादिनानाशब्दप्रयोगात्सूक्तादिव्यवस्थाया अभाव इत्यर्थः । तथाऽपीति । नामभेदेन सूक्तव्यवस्थासिद्धावपीत्यर्थः ।

ಎಲ್ಲಾ ಸೂಕ್ತಗಳಿಂದ ಹಾಗೂ ಸಕಲ ನಾಮಗಳಿಂದ ಪರಮಾತ್ಮನೇ ಪ್ರತಿಪಾದ್ಯನಾಗಿದ್ದರೂ ಸಂಜ್ಞಾಭೇದದಿಂದ ಸೂಕ್ತಾದಿ ವ್ಯವಸ್ಥೆಯು ಉಪಪನ್ನವಾಗುತ್ತದೆಂದು ಹೇಳಬೇಕು. ಒಂದು ವೇಳೆ ಅಗ್ನಿ ಮೊದಲಾದ ಶಬ್ದಪ್ರಯೋಗಗಳ ಭೇದದಿಂದ ಸೂಕ್ತಾದಿ ವ್ಯವಸ್ಥೆಯನ್ನು ಒಪ್ಪದಿದ್ದರೆ ಬಾಧಕವನ್ನು 'ಅನ್ಯಥಾ'

ಎಂಬ ವಾಕ್ಯದಿಂದ ಪ್ರತಿಪಾದಿಸುತ್ತಿದ್ದಾರೆ. 'ತಥಾಽಪಿ' ಎಂದರೆ ಸಂಜ್ಞಾಭೇದದಿಂದ ಸೂಕ್ತವ್ಯವಸ್ಥಾಭೇದವನ್ನು ಒಪ್ಪಿದರೂ ಸಹ ಎಂದರ್ಥ.

**प्रकाशः –** परमात्मदेवताकत्वमिति । यद्यपि तत्र "एकैव वा महानात्मा देवता सूर्य इत्याचक्षते । स हि सर्वभूतात्मा । तदुक्तमृषिणा – सूर्य आत्मा जगतस्तस्थुषश्च" इत्युक्तेः सूर्यदेवताकत्वमेवोक्तं भाति ।

ಅನುಕ್ರಮಣಿಕೆಯಲ್ಲಿ ಸಕಲ ಮಂತ್ರಗಳಿಗೆ ಪರಮಾತ್ಮನೇ ದೇವತೆಯೆಂದು ಹೇಳಿದ್ದಾರೆಂದು ಗ್ರಂಥಕಾರರು ಹೇಳಿದರು. ಆದರೆ ಅಲ್ಲಿಯೇ ಮುಂದೆ 'ಏಕೈವ ವಾ ಮಹಾನಾತ್ಮಾ ದೇವತಾ ಸೂರ್ಯ ಇತ್ಯಾಚಕ್ಷತೇ । ಸ ಹಿ ಸರ್ವಭೂತಾತ್ಮಾ। ತದುಕ್ತಮೃಷಿಣಾ - ಸೂರ್ಯ ಆತ್ಮಾ ಜಗತಸ್ತಸ್ಥುಷಶ್ಚ' ಎಂಬುದಾಗಿ. ಇಲ್ಲಿ ಸೂರ್ಯನ ಉಲ್ಲೇಖವಿರುವುದರಿಂದ ಸೂರ್ಯನನ್ನೇ ಸಕಲ ಮಂತ್ರಗಳಿಗೆ ದೇವತೆಯೆಂದು ಹೇಳಿದ್ದಾರಲ್ಲವೇ? ಎಂಬ ಪ್ರಶ್ನೆ ಬರುತ್ತದೆ.

**प्रकाशः –** तथाऽपि स्थावरजङ्गमात्मकजगदात्मकत्वलिङ्गात् "तद्विभूतयो अन्या देवतास्तदप्येतदृषिणोक्तं – "इन्द्रंमित्रं वरुणमग्निमाहुः" इति तदीयोत्तरवाक्याच्च सूर्यशब्देन परमात्मैवाभिप्रेत इति भावः ।

ಅಲ್ಲಿರುವ ಸೂರ್ಯ ಶಬ್ದಕ್ಕೆ ಸೂರ್ಯದೇವತೆಯೆಂದರ್ಥವೇ ಅಲ್ಲ. ಹೊರತಾಗಿ ಸ್ಥಾವರಜಂಗಮಾತ್ಮಕವಾದ ಸಕಲ ಜಗತ್ತಿಗೆ ನಿಯಾಮಕನೆಂದು ಆ ಮಂತ್ರದಲ್ಲಿ ಹೇಳಿರುವುದರಿಂದ ವಿಷ್ಣುವೇ ಸೂರ್ಯಶಬ್ದದಿಂದ ಪ್ರತಿಪಾದ್ಯನಾಗುತ್ತಾನೆ. ಮತ್ತು ಅದೇ ಅನುಕ್ರಮಣಿಕೆಯ ಮುಂದಿನ ವಾಕ್ಯದಲ್ಲಿ "ತದ್ವಿಭೂತಯೋ ಅನ್ಯಾ ದೇವತಾಸ್ತದಪ್ಯೇತದೃಷಿಣೋಕ್ತಂ - ಇಂದ್ರಂಮಿತ್ರಂ ವರುಣಮಗ್ನಿಮಾಹುಃ' ಆ ಸೂರ್ಯನ ವಿಭೂತಿಗಳೇ ಬೇರೆ ದೇವತೆಗಳೆಂದು ಹೇಳಿರುವುದರಿಂದಲೂ ಪರಮಾತ್ಮನನ್ನೇ ಸೂರ್ಯಶಬ್ದದಿಂದ ವಿವಕ್ಷಿಸಬೇಕು. ಮತ್ತು ಪರಮಾತ್ಮ ಪರವಾದ 'ಇಂದ್ರಮಿತ್ರಂ ವರುಣಮಗ್ನಿಮಾಹುಃ' ಎಂಬ ಮಂತ್ರವನ್ನು ಉಲ್ಲೇಖಿಸಿರುವುದರಿಂದ ಅನುಕ್ರಮಣಿಕೆಯನ್ನು ರಚಿಸಿದ ಋಷಿಗಳಿಗೆ ಪರಮಾತ್ಮನೇ ಸಕಲ ಮಂತ್ರ ಪ್ರತಿಪಾದ್ಯನೆಂಬ ವಿವಕ್ಷೆಯಿರುತ್ತದೆ.

**प्रकाशः –** 'एतेन' इत्यनेन अत्रोक्तम् ऋग्भाष्योक्तं च हेतुद्वयं परामृश्यत इति भावेन तद्व्यनक्ति – अहं हीति ।

ಗ್ರಂಥದಲ್ಲಿರುವ 'ಏತೇನ' ಎಂಬ ಪದದಿಂದ ಸೂತ್ರಭಾಷ್ಯದಲ್ಲಿ ಹೇಳಲ್ಪಟ್ಟ ಹೇತುವನ್ನು ಹಾಗೂ ಋಗ್ಭಾಷ್ಯದಲ್ಲಿ ಹೇಳಲ್ಪಟ್ಟ ಹೇತುವನ್ನೂ ಸಹ ಪರಾಮರ್ಶ ಮಾಡಿಕೊಳ್ಳಬೇಕು. ಈ ಅಭಿಪ್ರಾಯದಿಂದ 'ಅಹಂ ಹಿ' ಎಂಬ ವಾಕ್ಯದಿಂದ ಅದನ್ನೇ ವ್ಯಾಖ್ಯಾನಿಸುತ್ತಿದ್ದಾರೆ.

**प्रकाशः –** अत्र उत्तमाधिकारिरूपकर्तॄणामधमाधिकारिरूपकर्तॄणामग्न्यादिगत-विष्णूद्देशप्रकारः, "गुहाशयायैव न देहमानिने"

**इत्यादिनेश्वरे स्मर्यमाणं त्रैलोक्यात्मकं रूपं मूलभूतां श्रुतिमनुमापयत्, समानविषयां "मूर्धैव सुतेजाः" इत्यादिवैश्वानरविद्यामनुमापयत्, वैश्वानरस्येश्वरत्वे लिङ्गमिति द्वितीयसूत्रार्थ इति,**

ಅನುವಾದ - ಅದ್ವೈತಿಗಳ ಎರಡನೆಯ ಸೂತ್ರವ್ಯಾಖ್ಯಾನ ಹೀಗಿದೆ -

'ಸ್ಮರ್ಯಮಾಣಂ ಅನುಮಾನಂ ಸ್ಯಾದಿತಿ'

ಯಸ್ಯಾಗ್ನಿರಾಸ್ಯಂ ದ್ಯೌರ್ಮೂರ್ಧಾ ಖಂ ನಾಭಿಶ್ಚರಣೌ ಕ್ಷಿತಿಃ ।
ಸೂರ್ಯಶ್ಚಕ್ಷುರ್ದಿಶಃ ಶ್ರೋತ್ರಂ ತಸ್ಮೈ ಲೋಕಾತ್ಮನೇ ನಮಃ...... ॥

ಯಾರಿಗೆ ಅಗ್ನಿಯು ಮುಖವಾಗಿದೆಯೋ, ಸ್ವರ್ಗಲೋಕವು ತಲೆಯಾಗಿದೆಯೋ, ಆಕಾಶವು ನಾಭಿಯಾಗಿದೆಯೋ, ಭೂಮಿಯು ಕಾಲುಗಳೋ, ಸೂರ್ಯನು ಚಕ್ಷುಸ್ಸೋ, ಸಕಲ ದಿಕ್ಕುಗಳು ಕಿವಿಯೋ, ಅಂತಹ ಲೋಕಸ್ವರೂಪನಿಗೆ ನಮಸ್ಕಾರ.

ಹೀಗೆ ಶ್ರುತಿ ವಾಕ್ಯದಿಂದ ಈಶ್ವರನು ತ್ರಿಲೋಕಸ್ವರೂಪನೆಂದು ತಿಳಿಯುತ್ತದೆ. ಈ ಸ್ಮೃತಿವಾಕ್ಯಕ್ಕೆ ಮೂಲಭೂತವಾಗಿ ಒಂದು ಶ್ರುತಿಯು ಇರಲೇಬೇಕು. ಆ ಶ್ರುತಿಯು ಈ ವಾಕ್ಯದಲ್ಲಿ ಹೇಳಲ್ಪಟ್ಟ ವಿಷಯವನ್ನೇ ಪ್ರತಿಪಾದಿಸಬೇಕು. ಅದು ಯಾವುದೆಂದರೆ 'ಮೂರ್ಧೈವ ಸುತೇಜಾಃ' ಇತ್ಯಾದಿಯಾಗಿ ವೈಶ್ವಾನರವಿದ್ಯೆಯಲ್ಲಿ ಪ್ರಸಕ್ತವಾಗುವ ಶ್ರುತಿವಾಕ್ಯ. ಸ್ಮೃತಿವಾಕ್ಯದಲ್ಲಿ ಬ್ರಹ್ಮನು ಪ್ರತಿಪಾದ್ಯನಾದ್ದರಿಂದ ಅದಕ್ಕೆ ಮೂಲಭೂತವಾದ ವೈಶ್ವಾನರ ಶ್ರುತಿಯೂ ಸಹ ಬ್ರಹ್ಮಪರವಾಗಬೇಕೆಂದು ಎರಡನೇ ಸೂತ್ರದ ಅರ್ಥ.

**तन्न, "चक्षुषी चन्द्रसूर्यौ दिशः श्रोत्रे" इत्यादिश्रुत्यन्तरस्यापि उक्तस्मृतिमूलत्वसम्भवेन वैश्वानरविद्यायास्तन्मूलत्वासिद्धेः ।**

ಇದು ತಪ್ಪು. 'ಚಕ್ಷುಷೀ ಚಂದ್ರಸೂರ್ಯೌ ದಿಶಃ ಶ್ರೋತ್ರೇ' ಇತ್ಯಾದಿಯಾಗಿ ಆಥರ್ವಣ ಶ್ರುತಿಯೂ ಸಹ ನೀವು ಉಲ್ಲೇಖಿಸಿದ ಸ್ಮೃತಿಗೆ ಮೂಲವಾಗಬಹುದು. ಹೀಗಿರುವಾಗ ವೈಶ್ವಾನರವಿದ್ಯೆಯೇ ಮೂಲಶ್ರುತಿಯೆಂದು ನಿರ್ಣಯಿಸಲಾಗದು.

**"अहं वैश्वानरः" इति साक्षादीश्वरस्य वैश्वानरत्वबोधकस्मृतौ सत्यां बकबन्धप्रयासायोगाच्च ॥**

ಮತ್ತು 'ಅಹಂ ವೈಶ್ವಾನರಃ' ಎಂಬ ಸ್ಮೃತಿವಾಕ್ಯವು ನೇರವಾಗಿ ಈಶ್ವರನಿಗೆ ವೈಶ್ವಾನರತ್ವವನ್ನು ಸಮರ್ಥಿಸುತ್ತಿರುವಾಗ ಬಕಬಂಧಪ್ರಯಾಸವು ಅಯುಕ್ತವಾಗಿದೆ. (ಬಕಪಕ್ಷಿಯನ್ನು ಹಿಡಿಯುವುದಕ್ಕಾಗಿ

ಬೆಣ್ಣೆಯನ್ನು ಬಕಪಕ್ಷಿಯ ತಲೆಯ ಮೇಲೆ ಇಟ್ಟು ಅದು ಕರಗಿ ಕಣ್ಣಲ್ಲಿ ಹೋದಾಗ ಅದನ್ನು ಹಿಡಿಯೋಣವೆಂದು ಯೋಚನೆ ಮಾಡುವುದು ಹೇಗೆ ಅತ್ಯಂತ ಪ್ರಯಾಸವೋ, ಅದರಂತೆ ನೇರವಾಗಿಯೇ ವಿಷ್ಣುವನ್ನು ವೈಶ್ವಾನರನೆಂದು ಹೇಳುವ ಸ್ಮೃತಿವಾಕ್ಯವು ಇರಬೇಕಾದರೆ ಅಸ್ಪಷ್ಟವಾದ ಮತ್ತೊಂದು ಸ್ಮೃತಿವಾಕ್ಯದ ಆಧಾರದ ಮೂಲಕ ವಿಷ್ಣುವೇ ವೈಶ್ವಾನರನಾಗಿದ್ದಾನೆಂದು ನಿರ್ಣಯಿಸುವುದು ಅತ್ಯಂತ ಪ್ರಯಾಸಕರವಾಗಿದೆ.)

**केचित्तु – द्युप्रभृतिपृथिव्यन्तं रूपं श्रुतिस्मृतिष्वीश्वरेऽभिज्ञातमिह प्रत्यभिज्ञायमानं वैश्वानरस्येश्वरत्वेऽनुमानं लिङ्गमित्यर्थ इत्याहुः ।**

ರಾಮಾನುಜರು ಎರಡನೆಯ ಸೂತ್ರವನ್ನು ಹೀಗೆ ವ್ಯಾಖ್ಯಾನಿಸಿದ್ದಾರೆ - ದ್ಯುಲೋಕದಿಂದ ಪ್ರಾರಂಭಿಸಿ ಪೃಥಿವೀಲೋಕದ ತನಕ ಎಲ್ಲ ಲೋಕಗಳನ್ನು ಶ್ರುತಿ, ಸ್ಮೃತಿಗಳಲ್ಲಿ ಈಶ್ವರನ ಅವಯವಗಳನ್ನಾಗಿ ನಿರೂಪಿಸಲಾಗಿದೆ. ಇಂತಹ ಅವಯವಗಳು ಬ್ರಹ್ಮನಿಗಿರುತ್ತದೆಂದು 'ಅಗ್ನಿರ್ಮೂರ್ಧಾ' ಇತ್ಯಾದಿ ಸ್ಮೃತಿಗಳು ಹೇಳುತ್ತಿದೆ. ಅದನ್ನೇ ವೈಶ್ವಾನರನಿಗೆ ಇಲ್ಲಿ ಹೇಳುತ್ತಿರುವುದರಿಂದ ವೈಶ್ವಾನರನು ವಿಷ್ಣುವೇ ಆಗಿದ್ದಾನೆನ್ನಲು ನಿರ್ಧಾರಕ ಪ್ರಮಾಣವಾಗಿದೆ.

**तन्न, स्मर्यमाणशब्दस्य प्रत्यभिज्ञायमानार्थत्वे स्वारस्यभङ्गात् । "अहं वैश्वानरः" इत्यादिषूक्तस्येह "आत्मानं वैश्वानरम्" इति श्रुतिप्रत्यभिज्ञासम्भवे लिङ्गप्रत्यभिज्ञोक्त्ययोगाच्च ॥**

ಇದೂ ಸಹ ತಪ್ಪು. ಸ್ಮರ್ಯಮಾಣಶಬ್ದಕ್ಕೆ ಗೀತಾಸ್ಮೃತಿಯ ಆಧಾರವಿದೆಯೆಂದು ಸುಲಭವಾಗಿ ವ್ಯಾಖ್ಯಾನಿಸಲು ಬರುವಾಗ 'ಪ್ರತ್ಯಭಿಜ್ಞಾಯಮಾನ' ಎಂಬರ್ಥವನ್ನು ಹೇಳಿದರೆ ಸ್ವಾರಸ್ಯವು ಭಂಗವಾಗುತ್ತದೆ. ಮತ್ತು 'ಅಹಂ ವೈಶ್ವಾನರಃ' ಇತ್ಯಾದಿ ಸ್ಮೃತಿಗಳಲ್ಲಿ ಹೇಳಿದ್ದನ್ನು 'ಆತ್ಮಾನಂ ವೈಶ್ವಾನರಮ್' ಎಂಬ ಶ್ರುತಿಯು ಪ್ರತ್ಯಭಿಜ್ಞಾ ಮಾಡುತ್ತಿದೆ. ಹೀಗೆ ಶ್ರುತಿಪ್ರತ್ಯಭಿಜ್ಞಾವನ್ನೇ ಹೇಳಲು ಬರುವಾಗ ಲಿಂಗಪ್ರತ್ಯಭಿಜ್ಞಾವನ್ನು ಹೇಳುವುದು ಅಯುಕ್ತವಾಗುತ್ತದೆ.

**प्रकाशः –**

मतद्वयेऽपि द्वितीयादिसूत्रार्थान् क्रमेणानूद्य निराह – यच्चोक्तमन्यैरिति । इत्यादिनेति ।

'द्यौर्मूर्धानं यस्य विप्रा वदन्ति खं चैव नाभिश्चन्द्रसूर्यौ च नेत्रे ।
दिशः श्रोत्रे विद्धि पादौ क्षितिं च सोऽचिन्त्यात्मा सर्वभूतप्रणेता ॥'

इत्यादिरादिपदार्थः ।

ವಿವರಣೆ - ಶಾಂಕರ ಮತ ಹಾಗೂ ರಾಮಾನುಜ ಮತದಲ್ಲಿ ದ್ವಿತೀಯಾದಿ ಸೂತ್ರಗಳನ್ನು ಹೇಗೆ ವ್ಯಾಖ್ಯಾನಿಸಿದ್ದಾರೆಂದು ಕ್ರಮವಾಗಿ ಅನುವಾದ ಮಾಡಿ ನಿರಾಕರಿಸುತ್ತಿದ್ದಾರೆ 'ಯಚ್ಚೋಕ್ತಂ' ಇತ್ಯಾದಿ ಗ್ರಂಥದಿಂದ. 'ಇತ್ಯಾದಿನಾ' ಎಂಬಲ್ಲಿರುವ ಆದಿಪದದಿಂದ

'ದ್ಯಾಮೂರ್ಧಾನಂ ಯಸ್ಯ ವಿಪ್ರಾ ವದಂತಿ ಖಂ ಚೈವ ನಾಭಿಶ್ಚಂದ್ರಸೂರ್ಯೌ ಚ ನೇತ್ರೇ।
ದಿಶಃ ಶ್ರೋತ್ರೇ ವಿದ್ಧಿ ಪಾದೌ ಕ್ಷಿತಿಂ ಚ ಸೋಽಚಿಂತ್ಯಾತ್ಮಾ ಸರ್ವಭೂತಪ್ರಣೇತಾ ॥'

ಎಂಬ ಸ್ಮೃತಿಯನ್ನು ಇಟ್ಟುಕೊಳ್ಳಬೇಕು.

प्रकाशः – मूलभूतामिति । स्मृतीनां श्रुतिमूलत्वस्य पूर्वतन्त्रे स्मृतिनये व्यवस्थापनात्, तुल्यार्थाया एव मूलत्वादत्र च द्युप्रभृतीनां वैश्वानरस्य मूर्धाद्यवयवत्वेन "मूर्धैव सुतेजाः" इत्यादिना उच्यमानत्वेन तुल्यार्थत्वादेतद्वाक्यमनुमापयति, स्मृतिश्च ब्रह्मविषयेति मूलभूतश्रुतेरपि तथात्वं गमयिष्यतीत्यर्थः ।

'ಮೂಲಭೂತಾಮ್' ಎಂಬುದರ ತಾತ್ಪರ್ಯ ಹೀಗಿದೆ - ಸಕಲ ಸ್ಮೃತಿಗಳು ಶ್ರುತಿ ಮೂಲವಾಗಿರುತ್ತವೆಂದು ಪೂರ್ವಮೀಮಾಂಸೆಯ ಸ್ಮೃತ್ಯಧಿಕರಣದಲ್ಲಿ ವ್ಯವಸ್ಥೆ ಮಾಡಿದ್ದಾರೆ. ಆದ್ದರಿಂದ ಸ್ಮೃತಿಯು ಯದ್ವಿಷಯಕವಾಗಿರುತ್ತದೋ ತದ್ವಿಷಯಕವಾದ ಶ್ರುತಿಯೂ ಸಹ ಇದ್ದೇ ಇರುತ್ತದೆ. ಮತ್ತು ಮೂಲವಾಗಿರುವುದು ಎಂದರೆ ಸಮಾನವಾದ ಅರ್ಥವನ್ನು ಹೊಂದಿರುವುದು ಎಂದರ್ಥ. ಪ್ರಕೃತ ಸ್ಮೃತಿವಾಕ್ಯದಲ್ಲಿ ಸ್ವರ್ಗ ಮೊದಲಾದ ಲೋಕಗಳು ವೈಶ್ವಾನರನ ಶಿರಸ್ಸು ಮೊದಲಾದ ಅವಯವಗಳಾಗಿವೆಯೆಂದು ವರ್ಣಿಸಲಾಗಿದೆ. ವೈಶ್ವಾನರವಿದ್ಯೆಯೂ ಸಹ 'ಮೂರ್ಧೈವ ಸುತೇಜಾಃ' ಇತ್ಯಾದಿಯಾಗಿ ವೈಶ್ವಾನರನನ್ನು ಅದೇ ಕ್ರಮದಲ್ಲಿ ವರ್ಣನೆ ಮಾಡಿ. ಇದರಿಂದ ವೈಶ್ವಾನರವಿದ್ಯೆಯಲ್ಲಿರುವ ವಾಕ್ಯವು ವಿಷ್ಣುಪರವೆಂದು ನಿರ್ಣಯವಾಗುತ್ತದೆ. ಸ್ಮೃತಿವಾಕ್ಯವು ಬ್ರಹ್ಮವಿಷಯಕವಾಗಿರುವುದರಿಂದ ಅದಕ್ಕೆ ಮೂಲಭೂತವಾದ ಶ್ರುತಿವಾಕ್ಯವೂ ಸಹ ಬ್ರಹ್ಮವಿಷಯವೇ ಆಗಬೇಕೆಂದರ್ಥ.

प्रकाशः – श्रुत्यन्तरस्यापीति । स्मृतिवचनं हि स्वमूलत्वेन श्रुतिं कल्पयति, न तु वैश्वानरविद्यामेव कल्पयितुं शक्नोति,

'अग्निर्मूर्धा चक्षुषी चन्द्रसूर्यौ दिशः श्रोत्रे वाग्विवृताश्च वेदाः ।
वायुः प्राणो हृदयं विश्वमस्य पद्भ्यां पृथिवी ........... ।।'

इत्याथर्वणवाक्यमूलत्वेनापि सम्भवेन कल्पकस्यान्यथासिद्धत्वादित्यर्थः ।

ಪರಿಪೂರ್ಣಚಂದ್ರಿಕಾ

ಶ್ರುತ್ಯಂತರಸ್ಯಾಪಿ ಎಂಬುದರ ತಾತ್ಪರ್ಯ ಹೀಗೆ - ಸ್ಮೃತಿವಚನವು ತನಗೆ ಮೂಲವಾದ ಶ್ರುತಿಯನ್ನು ಮಾತ್ರ ಊಹಿಸುತ್ತದೆ. ಆದರೆ ವೈಶ್ವಾನರವಿದ್ಯೆಯಲ್ಲಿರುವ ಶ್ರುತಿಯೇ ತನಗೆ ಮೂಲವಾಗಿದೆಯೆಂದು ಸ್ಮೃತಿವಾಕ್ಯದಿಂದ ಕಲ್ಪಿಸಲು ಸಾಧ್ಯವಿಲ್ಲ.

ಅಗ್ನಿರ್ಮೂರ್ಧಾ ಚಕ್ಷುಷೀ ಚಂದ್ರಸೂರ್ಯೌ ದಿಶಃ ಶ್ರೋತ್ರೇ ವಾಗ್ವಿವೃತಾಶ್ಚ ವೇದಾಃ।
ವಾಯುಃ ಪ್ರಾಣೋ ಹೃದಯಂ ವಿಶ್ವಮಸ್ಯ ಪದ್ಭ್ಯಾಂ ಪೃಥಿವೀ...... ॥

ಎಂಬ ಆಥರ್ವಣ ಶ್ರುತಿಯೂ ಸಹ ನೀವು ಉದಾಹರಿಸಿದ ಸ್ಮೃತಿಗೆ ಮೂಲವಾಗಬಹುದು. ಆದ್ದರಿಂದ ಆದ್ದರಿಂದ ನಿಮ್ಮ ಸ್ಮೃತಿವಾಕ್ಯದ ಕಲ್ಪನೆಯು ಅನ್ಯಥಾಸಿದ್ಧವಾಯಿತು.

**प्रकाशः** – ननु श्रुतौ "अग्निर्मूर्धा" इति श्रूयते, स्मृतौ च "द्यौः" इति । तथा च कथं तन्मूलकत्वमिति चेन्न,

ಶ್ರುತಿಯಲ್ಲಿ 'ಅಗ್ನಿರ್ಮೂರ್ಧಾ' ಎಂದು ಕೇಳಿಸುತ್ತಿದೆ. ಆದರೆ ನೀವು ಉದಾಹರಿಸಿದ ಆಥರ್ವಣ ಶ್ರುತಿಯಲ್ಲಿ 'ದ್ಯೌಃ ಮೂರ್ಧಾ' ಎಂದು ಕೇಳಿಸುತ್ತಿದೆ. ಹೀಗೆ ಭಿನ್ನ ವಿಷಯಕವಾದ್ದರಿಂದ ಆಥರ್ವಣ ಶ್ರುತಿಯು ಮೂಲವಾಗಲು ಹೇಗೆ ಸಾಧ್ಯ ?

**प्रकाशः** – "असौ वा व लोकोऽग्निर्गौतम" इति श्रुतेरग्नेर्द्युशब्द-पर्यायत्वादिति तात्पर्यात् । न केवलं तेन वैश्वानरविद्याया ब्रह्मविषयत्वसिद्धिः, गतिसम्भवे क्लिष्टकल्पनयोगश्चेत्याह – अहमिति ।।

ಇದು ತಪ್ಪು. 'ಅಸೌ ವಾ ವ ಲೋಕೋಽಗ್ನಿರ್ಗೌತಮ' ಎಂಬುದಾಗಿ ದ್ಯುಲೋಕವನ್ನೇ ಅಗ್ನಿಯೆಂದು ನೀವು ವ್ಯಾಖ್ಯಾನಿಸುತ್ತೀರಿ. ಆದ್ದರಿಂದ 'ದ್ಯು' ಶಬ್ದ ಹಾಗೂ 'ಅಗ್ನಿ' ಶಬ್ದಗಳು ಪರ್ಯಾಯಪದಗಳಾಗಿವೆ. ಆದ್ದರಿಂದ 'ಅಗ್ನಿರ್ಮೂರ್ಧಾ' ಎಂಬ ಶಬ್ದಕ್ಕೂ 'ದ್ಯೌಃ ಮೂರ್ಧಾ' ಎಂಬ ಶಬ್ದಕ್ಕೂ ಒಂದೇ ಅರ್ಥವಿರುವುದರಿಂದ ಆಥರ್ವಣ ಶ್ರುತಿಯು ಮೂಲವಾಗಬಹುದು.

ಕೇವಲ ಮೂಲವಾಗುವುದಿಲ್ಲವೆಂಬ ಕಾರಣದಿಂದಷ್ಟೇ ವೈಶ್ವಾನರವಿದ್ಯೆಗೆ ಬ್ರಹ್ಮವಿಷಯತ್ವವು ಸಿದ್ಧವಾಗುವುದೆಂದಲ್ಲ. ಸುಲಭವಾಗಿಯೇ ವೈಶ್ವಾನರ ವಿದ್ಯೆಗೆ ವಿಷ್ಣುಪರತ್ವವನ್ನು ಸಮರ್ಥಿಸಲು ಬರುವಾಗ ಕ್ಲಿಷ್ಟಕಲ್ಪನೆಯು ಅಯುಕ್ತವಾಗಿದೆಯೆಂಬುದಾಗಿ 'ಅಹಂ' ಇತ್ಯಾದಿ ವಾಕ್ಯದಿಂದ ಸಮರ್ಥಿಸುತ್ತಿದ್ದಾರೆ.

**प्रकाशः** – केचित्त्विति । सूत्रे इतिशब्दः प्रकारवचनः, "अनुमानशब्दः "श्रुतिलिङ्गवाक्य" इति श्रुत्यादिसहपठितासाधारणधर्मरूपलिङ्गपरः, स्मर्यमाणशब्दः प्रत्यभिज्ञायमानपरः ।

ರಾಮಾನುಜರ ಎರಡನೆಯ ಸೂತ್ರವ್ಯಾಖ್ಯಾನವನ್ನು 'ಕೇಚಿತ್ತು' ಇತ್ಯಾದಿ ವಾಕ್ಯದಿಂದ ಅನುವಾದ ಮಾಡುತ್ತಿದ್ದಾರೆ. ಇವರ ಪ್ರಕಾರ ಸೂತ್ರದಲ್ಲಿರುವ 'ಇತಿ' ಶಬ್ದವು 'ಪ್ರಕಾರ' ಎಂಬರ್ಥದಲ್ಲಿದೆ. ಅನುಮಾನ ಶಬ್ದವು 'ಶ್ರುತಿರ್ಲಿಂಗಂ ಸಮಾಖ್ಯಾಚ' ಎಂಬಲ್ಲಿರುವ ಶ್ರುತ್ಯಾದಿಗಳ ಜೊತೆಗೆ ಪಠಿತವಾದ

ಅಸಾಧಾರಣ ಧರ್ಮವೆಂಬ ಲಿಂಗವನ್ನು ಹೇಳುತ್ತಿದೆ. ಸ್ಮರ್ಯಮಾಣ ಶಬ್ದವು ಪ್ರತ್ಯಭಿಜ್ಞಾನವನ್ನು ಹೇಳುತ್ತಿದೆ.

**प्रकाशः** – तथा च ''अग्निर्मूर्धा चक्षुषी चन्द्रसूर्यौ'' ''द्यौर्मूर्धानं यस्य विप्रा वदन्ति'' इत्यादिश्रुतिस्मृतिषु 'इति' इत्थंभूतं द्युवादिरूपमीश्वरे अवगतम् 'इह' वैश्वानरविद्यायां ''मूर्धैव सुतेजाः'' इत्यादिना 'स्मर्यमाणं' प्रत्यभिज्ञायमानं लिङ्गं स्यात्, श्रुत्यादाववगतं द्युप्रभृत्यात्मकत्वरूपं लक्षणं लिङ्गमिह प्रत्यभिज्ञायत इत्यर्थः ।

ಆದ್ದರಿಂದ 'ಅಗ್ನಿಮೂರ್ಧಾ ಚಕ್ಷುಷೀ ಚಂದ್ರಸೂರ್ಯೌ', 'ದ್ಯೌರ್ಮೂರ್ಧಾನಂ ಯಸ್ಯ ವಿಪ್ರಾ ವದಂತಿ' ಇವೇ ಮೊದಲಾದ ಶ್ರುತಿ, ಸ್ಮೃತಿಗಳಲ್ಲಿ - ಇತಿ = ಈ ಪ್ರಕಾರವಾದ ದ್ಯುಲೋಕವೇ ರೂಪವಾಗಿರುವಿಕೆಯು ಈಶ್ವರನಲ್ಲಿ ತಿಳಿಯುತ್ತದೆ. ಪ್ರಕೃತ ಇಹ = ವೈಶ್ವಾನರ ವಿದ್ಯೆಯಲ್ಲಿ, 'ಮೂರ್ಧೈವ ಸುತೇಜಾಃ' ಇತ್ಯಾದಿ ವಾಕ್ಯದಿಂದ, ಸ್ಮರ್ಯಮಾಣಂ = ಪ್ರತ್ಯಭಿಜ್ಞಾ ಮಾಡಲ್ಪಟ್ಟದ್ದು ಲಿಂಗವಾಗಿ ಇರುತ್ತದೆ. ಶ್ರುತ್ಯಾದಿಯಲ್ಲಿ ತಿಳಿಯಲ್ಪಟ್ಟ ದ್ಯುಲೋಕವೇ ಮೊದಲಾದ ಸ್ವರೂಪವಾಗಿರುವಿಕೆಯೆಂಬ ಲಕ್ಷಣವು ವೈಶ್ವಾನರನು ಬ್ರಹ್ಮನೆನ್ನಲು ಗಮಕವಾಗಿದೆಯೆಂದು ಸೂತ್ರಾರ್ಥ.

''अनुस्मृतेश्च'' इत्यत्र 'अनुस्मृतिशब्दस्य प्रत्यभिज्ञापरत्वेन सूत्रकारैः प्रयुक्तत्वात्' इति श्रुतप्रकाशोक्तेः कथमेवं दूषणमित्यत – स्वारस्येत्युक्तम् । उक्तरीत्या स्वारस्यसम्भवे तत्त्यागायोगात् ।

ಗ್ರಂಥಕಾರರು 'ಸ್ಮರ್ಯಮಾಣ' ಶಬ್ದಕ್ಕೆ 'ಪ್ರತ್ಯಭಿಜ್ಞಾಯಮಾಣ' ಎಂಬರ್ಥವು ತಪ್ಪಾಗುತ್ತದೆಂದು ಹೇಳಿದ್ದಾರೆ. ಆದರೆ 'ಅನುಸ್ಮೃತೇಶ್ಚ' ಇತ್ಯತ್ರ 'ಅನುಸ್ಮೃತಿಶಬ್ದಸ್ಯ ಪ್ರತ್ಯಭಿಜ್ಞಾಪರತ್ವೇನ ಸೂತ್ರಕಾರೈಃ ಪ್ರಯುಕ್ತತ್ವಾತ್' ಎಂದರೆ ''ಅನುಸ್ಮೃತೇಶ್ಚ' ಎಂಬ ಸೂತ್ರದಲ್ಲಿ 'ಅನುಸ್ಮೃತಿ' ಶಬ್ದಕ್ಕೆ 'ಪ್ರತ್ಯಭಿಜ್ಞಾ' ಎಂಬರ್ಥವನ್ನೇ ಸೂತ್ರಕಾರರು ಹೇಳಿರುತ್ತಾರೆ'. ಹೀಗೆ ಶ್ರುತಪ್ರಕಾಶದಲ್ಲಿ ಹೇಳಲಾಗಿದೆ. 'ಅನುಸ್ಮೃತೇಶ್ಚ' ಎಂಬ ಸೂತ್ರದಲ್ಲಿ 'ಅನುಸ್ಮೃತಿ' ಶಬ್ದಕ್ಕೆ 'ಪ್ರತ್ಯಭಿಜ್ಞಾ' ಎಂಬರ್ಥವನ್ನು ಮಾಡಿರುವುದರಿಂದ ಇಲ್ಲಿಯೂ ಸಹ 'ಸ್ಮರ್ಯಮಾಣ' ಶಬ್ದಕ್ಕೆ 'ಪ್ರತ್ಯಭಿಜ್ಞಾ' ಎಂಬರ್ಥವನ್ನು ಮಾಡಬಹುದು. ಹೀಗಿರುವಾಗ 'ಸ್ಮರ್ಯಮಾಣ' ಶಬ್ದಕ್ಕೆ 'ಪ್ರತ್ಯಭಿಜ್ಞಾಮಾನ' ಎಂಬರ್ಥವು ತಪ್ಪಾಗುತ್ತದೆಂದು ಹೇಗೆ ಹೇಳಿದರು? ಎಂದರೆ, ಅದಕ್ಕೆ ಗ್ರಂಥದಲ್ಲಿ 'ಸ್ವಾರಸ್ಯ' ಎಂಬುದರಿಂದ ಉತ್ತರವನ್ನು ಹೇಳಿದ್ದಾರೆ. ಅಂದರೆ ನಾವು ಹೇಳುವಂತೆ ಗೀತಾಸ್ಮೃತಿಯು ಗಮಕವಾಗಿದೆಯೆಂಬರ್ಥವನ್ನು ಹೇಳುವ ಮುಖಾಂತರ ಸ್ವಾರಸ್ಯವಾಗಿ ವ್ಯಾಖ್ಯಾನಿಸಲು ಬರುತ್ತದೆ. ಅದನ್ನು ಬಿಟ್ಟು 'ಪ್ರತ್ಯಭಿಜ್ಞಾಮಾನ' ಎಂಬರ್ಥವನ್ನು ಹೇಳುವುದು ಅಸ್ವರಸವಾಗಿದೆಯೆಂಬುದು ಗ್ರಂಥಕಾರರ ಅಭಿಪ್ರಾಯ ಹೊರತು, 'ಸ್ಮರ್ಯಮಾಣ' ಶಬ್ದಕ್ಕೆ ಪ್ರತ್ಯಭಿಜ್ಞಾಯಮಾನವೆಂಬರ್ಥವೇ ತಪ್ಪಾಗುತ್ತದೆಂದು ಅಭಿಪ್ರಾಯವಲ್ಲ.

ಪರಿಪೂರ್ಣಚಂದ್ರಿಕಾ

**प्रकाशः** – सूत्रकारोक्तिस्तु अनुशब्दबलाद्वा, स्वारस्यासम्भवाद्वा प्रत्यभिज्ञार्थत्वाशयेति युक्तमिति भावः ।

ಹಾಗಾದರೆ 'ಅನುಸ್ಮೃತೇಃ' ಎಂಬ ಸೂತ್ರದಲ್ಲಿ 'ಪ್ರತ್ಯಭಿಜ್ಞಾನ' ಎಂಬರ್ಥದಲ್ಲಿ ಸೂತ್ರಕಾರರು 'ಅನುಸ್ಮೃತಿ' ಶಬ್ದವನ್ನು ಏಕೆ ಉಪಯೋಗಿಸಿದ್ದಾರೆ ? ಎಂದರೆ ಸ್ಮೃತಿ ಶಬ್ದವು 'ಸ್ಮರಣೆ' ಎಂಬರ್ಥದಲ್ಲಿ ಪ್ರಸಿದ್ಧವಾಗಿದೆ. 'ಅನು' ಶಬ್ದದ ಬಲದಿಂದ ಸ್ಮೃತಿಶಬ್ದವು 'ಪ್ರತ್ಯಭಿಜ್ಞಾನ' ಎಂಬರ್ಥವನ್ನು ಹೇಳುತ್ತದೆ. ಬೇರೆ ಅರ್ಥದಲ್ಲಿ ಅನುಸ್ಮೃತಿಶಬ್ದವು ಅಲ್ಲಿ ಅಸ್ವರಸವಾಗಿರುವುದರಿಂದ ಸ್ವಾರಸ್ಯಕ್ಕೋಸ್ಕರ 'ಪ್ರತ್ಯಭಿಜ್ಞಾ' ಎಂಬರ್ಥವನ್ನೇ ಸ್ವೀಕರಿಸುತ್ತಾರೆ. ಇಲ್ಲಿ 'ಸ್ಮೃತಿ' ಎಂಬರ್ಥವನ್ನೇ ತೆಗೆದುಕೊಳ್ಳಲು ಬರುವಾಗ 'ಪ್ರತ್ಯಭಿಜ್ಞಾ' ಎಂಬರ್ಥವನ್ನು ತೆಗೆದುಕೊಳ್ಳುವುದು ತಪ್ಪಾಗುತ್ತದೆ.

**प्रकाशः** – अहमिति । श्रुत्यादाववगतं द्युप्रभृत्यवयवत्वरूपं लिङ्गमिह प्रत्यभिज्ञायत इत्युक्तिवत्, "अहं वैश्वानरो भूत्वा" इति स्मृतौ विष्णाववगतवैश्वनारश्रुतिरिह प्रत्यभिज्ञायत इत्यपि वक्तुं शक्यत्वेन लिङ्गाब्दलवच्छ्रुति-प्रत्यभिज्ञोक्तिरेव ज्यायसीति तत्त्यागायोगात् ।

'ಅಹಂ ವೈಶ್ವಾನರಃ' ಇತ್ಯಾದಿ ಗ್ರಂಥಕ್ಕೆ ಹೀಗರ್ಥ - ಶ್ರುತ್ಯಾದಿಗಳಿಂದ ತಿಳಿಯಲ್ಪಡುವ ದ್ಯುಪ್ರಭೃತ್ಯವಯವ ಎಂಬ ಲಿಂಗವನ್ನು ಇಲ್ಲಿ ಪ್ರತ್ಯಭಿಜ್ಞಾನ ಮಾಡಬೇಕೆಂದು ನೀವು ಹೇಳುತ್ತಿದ್ದೀರಿ. ಆದರೆ 'ಅಹಂ ವೈಶ್ವಾನರೋ ಭೂತ್ವಾ' ಇತ್ಯಾದಿ ಸ್ಮೃತಿಯಲ್ಲಿ ವಿಷ್ಣುವಿನಲ್ಲಿ ತಿಳಿಯಲ್ಪಡುವ ವೈಶ್ವಾನರ ಶ್ರುತಿಯನ್ನೇ ಇಲ್ಲಿ ಪ್ರತ್ಯಭಿಜ್ಞಾ ಮಾಡಲು ಬರುತ್ತದೆಂದೂ ಸಹ ಹೇಳಲು ಸಾಧ್ಯವಿದೆ. ಮತ್ತು ಲಿಂಗವನ್ನು ಪ್ರತ್ಯಭಿಜ್ಞಾ ಮಾಡುವುದಕ್ಕಿಂತ ಬಲಿಷ್ಠವಾದ ಶ್ರುತಿಯನ್ನು ಪ್ರತ್ಯಭಿಜ್ಞಾ ಮಾಡುವುದೇ ಶ್ರೇಷ್ಠವಾಗಿದೆ. ಇಂತಹ ಶ್ರುತಿಯನ್ನು ತ್ಯಾಗಮಾಡುವುದರಲ್ಲಿ ಅರ್ಥವಿಲ್ಲ.

**प्रकाशः** – तथा च 'स्मर्यमाणा श्रुतिः" इत्येव सूत्रणं स्यात्, लघु चैवं सति सूत्रं स्यादित्यर्थः । किञ्चानुमानशब्दस्य लिङ्गपरत्वे "स्मर्यमाणं लिङ्गम्" इत्येव निर्देशस्स्याल्लाघवादिति ध्येयम् ।

ಆದ್ದರಿಂದ 'ಸ್ಮರ್ಯಮಾಣಾಮ್ ಶ್ರುತಿಃ' ಎಂದಷ್ಟೇ ಸೂತ್ರವನ್ನು ಹೇಳಿದ್ದರೆ ಸಾಕಾಗುತ್ತಿತ್ತು. ಹೀಗೆ ಹೇಳುವುದರಿಂದ ಸೂತ್ರವೂ ಲಘುವಾಗುತ್ತದೆ. ಹಾಗೂ ಶ್ರುತಿಯನ್ನು ಪ್ರತ್ಯಭಿಜ್ಞಾನ ಮಾಡಿದಂತಾಗುತ್ತದೆ. ಇದರಂತೆ ಅನುಮಾನ ಶಬ್ದಕ್ಕೆ ಲಿಂಗವೆಂಬರ್ಥವನ್ನು ವಿವಕ್ಷಿಸುವುದಾದರೆ 'ಸ್ಮರ್ಯಮಾಣಂ ಲಿಂಗಂ' ಎಂದೇ ಸೂತ್ರವನ್ನು ನಿರ್ದೇಶಿಸಬಹುದಿತ್ತು. ಹಾಗೇ ನಿರ್ದೇಶಿಸುವುದರಿಂದಲೂ ಸೂತ್ರವು ಲಘುವಾಗುತ್ತದೆ.



'ಯಸ್ಯಾಗ್ನಿರಸ್ಯಾಮ್' ಇತ್ಯಾದಿ ಶ್ರುತಿಗಳು ದ್ಯುಲೋಕಾದಿಗಳು ಬ್ರಹ್ಮನ ಅವಯವಗಳೆಂದು ಹೇಳಲ್ಪಟ್ಟಿದೆ. ಶ್ರುತಿಗೆ ಅನುಸಾರಿಯಾಗಿ ಸ್ಮೃತಿಯನ್ನು ವ್ಯಾಖ್ಯಾನಿಸಬೇಕಾದ್ದರಿಂದ ದ್ಯುಲೋಕಾದಿಗಳು ಬ್ರಹ್ಮನ ಅವಯವಗಳೆಂದೇ ಶ್ರುತಿಗಳೂ ಸಹ ಹೇಳುತ್ತಿವೆ. ಆದರೆ ಬ್ರಹ್ಮನೇ ವೈಶ್ವಾನರನೆಂದು ಅದ್ವೈತಿಗಳ ವ್ಯಾಖ್ಯಾನ.

ದ್ಯುಲೋಕದಿಂದ ಪೃಥಿವೀ ಲೋಕಪರ್ಯಂತ. ಸಕಲ ಲೋಕಗಳೂ ಬ್ರಹ್ಮನ ಅವಯವಗಳೇ ಆಗಿವೆಯೆಂದು 'ಅಗ್ನಿರ್ಮೂರ್ಧಾ' ಇತ್ಯಾದಿ ಶ್ರುತಿಗಳು ಪ್ರತಿಪಾದಿಸುತ್ತಿದೆ. ಅಂದರೆ ಶ್ರುತಿಯಲ್ಲಿ ಮಾಡಲ್ಪಟ್ಟ ಉಲ್ಲೇಖವೇ ವೈಶ್ವಾನರನು ಬ್ರಹ್ಮನಾಗಿದ್ದಾನೆನ್ನಲು ಕಾರಣವಾಗಿದೆ.ಯೆಂದು ರಾಮಾನುಜರು ವ್ಯಾಖ್ಯಾನಿಸುತ್ತಾರೆ.

ಇವರಿಬ್ಬರ ಅಭಿಪ್ರಾಯವೂ ಸರಿಯಿಲ್ಲ. ಚಕ್ಷುಷೀ ಚಂದ್ರಸೂರ್ಯೌ ಇತ್ಯಾದಿ ಶ್ರುತಿಯೂ ಸಹ ಸ್ಮೃತಿ ಮೂಲವಾಗಿದೆ. ಮತ್ತು 'ಅಹಂ ವೈಶ್ವಾನರಃ' ಎಂಬ ಶ್ರುತಿಯಲ್ಲಿ ನೇರವಾಗಿಯೇ ಈಶ್ವರನನ್ನು ವೈಶ್ವಾನರನೆಂದು ಹೇಳಿದ್ದಾರೆ. ರಾಮಾನುಜರು 'ಸ್ಮರ್ಯಮಾಣ' ಶಬ್ದಕ್ಕೆ 'ಪ್ರತ್ಯಭಿಜ್ಞಾನಮಾಯ' ಎಂಬರ್ಥವನ್ನು ಹೇಳಿದ್ದಾರೆ. ಈ ಅರ್ಥವು ಸೂತ್ರಾರ್ಥ ಸ್ವಾರಸ್ಯಕ್ಕೆ ಭಂಗವನ್ನುಂಟು ಮಾಡುತ್ತಿದೆ.



ಉಳಿದ ಸೂತ್ರಾರ್ಥಗಳ ವಿಮರ್ಶೆ

## तात्पर्यचन्द्रिका

**यच्चोक्तमन्यैः – "मनो ब्रह्मेत्युपासीत" इत्यादिवज्जाठरे वैश्वानरे ईश्वरदृष्ट्युपदेशो वा, "मनोमयः प्राणशरीरः" इत्यादिवद्वैश्वानरोपाधेरीश्वरस्य द्रष्टव्यत्वेनोपदेशो वा तृतीयसूत्रस्थतथादृष्ट्युपदेशशब्दार्थ इति,**

ಅನುವಾದ - 'ಶಬ್ದಾದಿಭ್ಯೋಽಂತಃ ಪ್ರತಿಷ್ಠಾನಾನ್ನೇತಿ ಚೇನ್ನ ತಥಾ ದೃಷ್ಟ್ಯುಪದೇಶಾದ ಸಂಭಾವತ್ಪುರುಷವಿಧಮಪಿ ಚೈನಮಧೀಯತೇ' ಎಂಬ ಮೂರನೆಯ ಸೂತ್ರಕ್ಕೆ ಅದ್ವೈತಿಗಳ ಸೂತ್ರವ್ಯಾಖ್ಯಾನ ಹೀಗಿದೆ - ಅಗ್ನಿ, ವೈಶ್ವಾನರ ಮೊದಲಾದ ಶಬ್ದಗಳು ಬ್ರಹ್ಮನನ್ನು ಬಿಟ್ಟು ಬೇರೆ ಪದಾರ್ಥವನ್ನೇ ಪ್ರತಿಪಾದಿಸುತ್ತಿದೆ. 'ತದ್ಯದ್‌ಭುಕ್ತಂ' ಎಂಬುದು ಪ್ರಾಣಾಹುತಿಗೆ ಅಧಿಕರಣವಾದ ಅಗ್ನಿಯನ್ನು ಹೇಳುತ್ತಿದೆ. 'ಪುರುಷೇ ಅಂತಃಪ್ರತಿಷ್ಠಿತಮ್' ಎಂಬ ವಾಕ್ಯವು ಉದರದಲ್ಲಿ ಇರುತ್ತದೆಂದು ಹೇಳಿದೆ. ಈ ಎಲ್ಲಾ ಕಾರಣಗಳಿಂದ ಇಲ್ಲಿ ಹೇಳಲ್ಪಟ್ಟ ವೈಶ್ವಾನರನು ಜಾಠರಾಗ್ನಿಯೇ ಆಗಬೇಕೆಂದು ಹೇಳುವುದು ಸರಿಯಲ್ಲ. 'ಮನೋ ಬ್ರಹ್ಮೇತಿ ಉಪಾಸೀತ' ಮನಸ್ಸನ್ನೇ ಬ್ರಹ್ಮನೆಂದು ಉಪಾಸನೆ

ಮಾಡಬೇಕೆಂದು ಹೇಳಿದಂತೆ, ಜಾಠರಾಗ್ನಿಯನ್ನೇ ಬ್ರಹ್ಮನೆಂದು ಉಪಾಸನೆ ಮಾಡುವುದಕ್ಕಾಗಿ ವೈಶ್ವಾನರನಲ್ಲಿ ಬ್ರಹ್ಮತ್ವವನ್ನು ಶ್ರುತಿ ಹೇಳುತ್ತಿದೆ.

ಅಥವಾ ಜಾಠರಾಗ್ನಿಯು ವೈಶ್ವಾನರನಿಗೆ ಉಪಾಧಿಯಾಗಿದೆ. 'ಮನೋಮಯಃ ಪ್ರಾಣಶರೀರಃ' ಇತ್ಯಾದಿಗಳಲ್ಲಿ ಮನೋಮಯತ್ವಾದಿಗಳು ಉಪಾಧಿಯಾದಂತೆ ಜಾಠರಾಗ್ನಿಯೂ ಸಹ ಉಪಾಧಿಯಾಗಿದೆ. ಕೇವಲ ಜಾಠರಾಗ್ನಿಯನ್ನು ಇಲ್ಲಿ ಹೇಳಿದರೆ 'ಸ ಏಷೋಽಗ್ನಿಃ ವೈಶ್ವಾನರಃ' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ಪುರುಷತ್ವವು ಅಸಂಭಾವಿತವಾಗುತ್ತದೆ. ಮತ್ತು 'ಮೂರ್ಧೈವ ಸುತೇಜಾಃ' ಇತ್ಯಾದಿಗಳೂ ಸಹ ಅಸಂಭಾವಿತವಾಗುತ್ತದೆ. ಬ್ರಹ್ಮನು ಸರ್ವಾತ್ಮಕನಾದ್ದರಿಂದ ಮತ್ತು ಪುರುಷನೂ, ಪುರುಷಾಂತರ್ಗತನೂ ಆಗಿರುವುದರಿಂದ ಇವೆಲ್ಲವೂ ಉಪಪನ್ನವಾಗುತ್ತದೆ. ಆದ್ದರಿಂದ ವೈಶ್ವಾನರನು ಬ್ರಹ್ಮನೇ ಆಗಿದ್ದಾನೆಂದು ನಿರ್ಣಯವಾಗುತ್ತದೆ.

ಹೀಗೆ ಅದ್ವೈತಿಗಳು ಮೂರನೆಯ ಸೂತ್ರವನ್ನು ವ್ಯಾಖ್ಯಾನಿಸುತ್ತಾ 'ತಥಾ ದೃಷ್ಟ್ಯುಪದೇಶಾತ್' ಎಂಬ ಪದಕ್ಕೆ ಎರಡು ಬಗೆಯಲ್ಲಿ ವ್ಯಾಖ್ಯಾನವನ್ನು ಮಾಡಿದ್ದಾರೆ.

**तत्र न तावदाद्यः, वैश्वानरस्य मनोवत् प्रतीकत्वे मनश्शब्दस्ये वैश्वानरशब्दस्यापि ब्रह्मणि समन्वयोक्त्ययोगात् । वैश्वानरज्ञानेन सर्वपाप्मप्रदाह-श्रवणायोगाच्च । अत एव न द्वितीयः । नहि सोपाधिकस्योपासनेन ज्ञानेन वा सर्वपाप्मदाहः ।**

ಹೀಗೆ ವೈಶ್ವಾನರನು ಬ್ರಹ್ಮನಿಗೆ ಪ್ರತೀಕ ಅಥವಾ ಉಪಾಧಿಯೆಂದು 'ತಥಾ ದೃಷ್ಟ್ಯುಪದೇಶಾತ್' ಎಂಬ ಸೂತ್ರದ ಭಾಗಕ್ಕೆ ಎರಡು ಬಗೆಯಲ್ಲಿ ವ್ಯಾಖ್ಯಾನಿಸಿದರು. ಇವುಗಳಲ್ಲಿ ಮೊದಲನೆಯ ಪಕ್ಷ ತಪ್ಪು. ವೈಶ್ವಾನರನು ಮನಸ್ಸಿನಂತೆ ಪ್ರತೀಕನಾದರೆ ಆ ಶಬ್ದವು ಬ್ರಹ್ಮನಿಗೆ ಹೇಗೆ ವಾಚಕವಾಗುತ್ತದೆ? 'ಮನ' ಎಂಬ ಶಬ್ದವು ಬ್ರಹ್ಮನನ್ನು ಹೇಗೆ ಪ್ರತಿಪಾದಿಸುವುದಿಲ್ಲವೋ ಅದರಂತೆ ವೈಶ್ವಾನರಶಬ್ದವೂ ಸಹ ಬ್ರಹ್ಮನನ್ನು ಪ್ರತಿಪಾದಿಸುವುದಿಲ್ಲ. ಮತ್ತು ಇಂತಹ ಪ್ರತೀಕಗಳಲ್ಲಿ ಬ್ರಹ್ಮೋಪಾಸನೆಯನ್ನು ಮಾಡುವುದರಿಂದ 'ಸರ್ವೇ ಪಾಪ್ಮಾನಃ ಪ್ರದೂಯಂತೇ' ಎಂಬುದಾಗಿ ಸಕಲ ಪಾಪಗಳು ಕ್ಷಯವಾಗುತ್ತವೆಂದು ಶ್ರುತಿ ಹೇಳಿದೆ. ಇದು ಕೇವಲ ಪ್ರತೀಕದ ಉಪಾಸನೆಯಿಂದ ಸಾಧ್ಯವಾಗುವುದಿಲ್ಲ. ಆದ್ದರಿಂದಲೇ ಎರಡನೆಯ ಪಕ್ಷವೂ ಸಹ ತಪ್ಪು. ಸೋಪಾಧಿಕಬ್ರಹ್ಮನ ಉಪಾಸನೆಯಿಂದ ಅಥವಾ ಜ್ಞಾನದಿಂದ ಸಕಲಪಾಪಗಳು ಕ್ಷಯವಾಗಲು ಸಾಧ್ಯವಿಲ್ಲ. ಅದು ನಿರ್ಗುಣೋಪಾಸನೆಯಿಂದಷ್ಟೇ ಸಾಧ್ಯ.

**यच्चोक्तं – पुरुषविधशब्देन द्युमूर्धत्वादिकमुच्यत इति, तन्न, त्वन्मते 'विशेषात्' इत्यत्रापि द्युमूर्धत्वादेरुक्तत्वेन पुनरुक्तेः ।**

ಇನ್ನು 'ಪುರುಷವಿಧಮಪಿ' ಎಂಬಲ್ಲಿರುವ ಪುರುಷವಿಧ ಶಬ್ದಕ್ಕೆ ಸ್ವರ್ಗಲೋಕವೇ ಶಿರಸ್ಸಾಗಿದೆಯೆಂದು ಅರ್ಥವನ್ನು ಹೇಳಿದ್ದಾರೆ. ಇದು ತಪ್ಪು. ಪ್ರಥಮಸೂತ್ರದಲ್ಲಿರುವ 'ವಿಶೇಷಾತ್' ಎಂಬ ಪದಕ್ಕೂ ಸಹ ಅದ್ವೈತಿಗಳು ಹೀಗೆಯೇ ವ್ಯಾಖ್ಯಾನ ಮಾಡಿದ್ದಾರೆ. ಅದೇ ದ್ಯುಮೂರ್ಧತ್ವವನ್ನು ಇಲ್ಲಿಯೂ ಹೇಳಿದರೆ ಪುನರುಕ್ತಿ ದೋಷವು ಬರುತ್ತಿದೆ.

**यच्चोक्तं – विनैव जाठराग्नेः प्रतीकोपाधिकल्पनाभ्यां साक्षात्केवलस्य ब्रह्मणः उपसनास्वीकारेऽप्यविरोधः । केवलेऽप्यग्निवैश्वानरशब्दावग्रणीत्वादिगुणयोगेन वर्तेते इति,**

'ಸಾಕ್ಷದಪ್ಯವಿರೋಧಮ್' ಎಂಬ ಸೂತ್ರಕ್ಕೆ ಹೀಗೆ ವ್ಯಾಖ್ಯಾನಿಸಿದ್ದಾರೆ - ಜಾಠರಾಗ್ನಿಯು ಬ್ರಹ್ಮನ ಪ್ರತೀಕವಾಗಿದೆ. ಅಥವಾ ಉಪಾಧಿಯಾಗಿದೆಯೆಂದು ಕಲ್ಪನೆ ಮಾಡದಿದ್ದರೂ ಸಾಕ್ಷಾತ್ತಾಗಿ ಅಂದರೆ ಕೇವಲ ಬ್ರಹ್ಮನ ಉಪಾಸೆಯನ್ನು ಸ್ವೀಕಾರ ಮಾಡಿದರೂ ಸಹ ವಿರೋಧ ಬರುವುದಿಲ್ಲ. ಕೇವಲ ಅಗ್ನಿ, ವೈಶ್ವಾನರ ಮೊದಲಾದ ಶಬ್ದಗಳಿಂದ ಬ್ರಹ್ಮನ ಗುಣವು ತಿಳಿಯುತ್ತಿದೆ. ಮೇಲಿನ ಸ್ಥಾನಕ್ಕೆ ಕರೆದೊಯ್ಯುತ್ತಾನಾದ್ದರಿಂದ ಅಗ್ನಿಯೆನಿಸಿದ್ದಾನೆ. ವಿಶ್ವನರನಿಗೆ ಸಂಬಂಧಿಸಿದ್ದನಾದ್ದರಿಂದ ವೈಶ್ವಾನರನೆನಿಸಿದ್ದಾನೆ. ಹೀಗೆ ಬ್ರಹ್ಮನನ್ನು ಉಪಾಸನೆ ಮಾಡಲು ಬರುತ್ತದೆಂದು ಸೂತ್ರದ ಅಭಿಪ್ರಾಯ.

**तन्न, साक्षाच्छब्दस्य कैवल्यार्थतायाः क्लिष्टत्वात् । अतीतानामाकाशादि-शब्दानामागामिनामक्षारादिशब्दानामपि यौगिकत्वापत्त्याऽस्माकं मत इव समन्वयाध्यायस्य तत्तच्छब्दप्रवृत्तिगुणपूर्त्यर्थत्वापाताच्च ।**

ಇದೂ ಸಹ ತಪ್ಪು. 'ಸಾಕ್ಷಾತ್' ಎಂಬ ಶಬ್ದಕ್ಕೆ 'ವ್ಯವಧಾನವಿಲ್ಲದೆ' ಎಂಬರ್ಥವು ಲೋಕಪ್ರಸಿದ್ಧವಾಗಿದೆ. ಅದನ್ನು ಬಿಟ್ಟು 'ಕೇವಲ' ಎಂಬರ್ಥವನ್ನು ಹೇಳುವುದು ಅತ್ಯಂತ ಕ್ಲಿಷ್ಟಕರವಾದದ್ದು. ಮತ್ತು ಇಲ್ಲಿರುವ ಅಗ್ನಿ, ವೈಶ್ವಾನರ ಶಬ್ದಗಳಿಗೆ ಯೌಗಿಕಾರ್ಥವನ್ನು ಅಂಗೀಕರಿಸಿದರೆ ಹಿಂದೆ ಪ್ರಸಕ್ತವಾದ ಆಕಾಶಾದಿಶಬ್ದಗಳಿಗೆ ಹಾಗೂ ಮುಂದೆ ಬರುವ ಅಕ್ಷರಾದಿಶಬ್ದಗಳಿಗೂ ಸಹ ಯೌಗಿಕಾರ್ಥವನ್ನು ಅದ್ವೈತಿಗಳು ಒಪ್ಪಬೇಕಾಗುತ್ತದೆ. ಆವಾಗ ನಮ್ಮ ಮತದಂತೆ ಸಮನ್ವಯಾಧ್ಯಾಯವು ಆಯಾ ಶಬ್ದಗಳ ಪ್ರವೃತ್ತಿನಿಮಿತ್ತವೆನಿಸಿದ ಗುಣಪೂರ್ಣತ್ವವನ್ನು ಸಮರ್ಥಿಸುವುದರಲ್ಲೇ ಪರ್ಯವಸಾನವಾಗಿ ಅದ್ವೈತಿಗಳು ಸಮನ್ವಯಾಧ್ಯಾಯದಿಂದ ಬ್ರಹ್ಮನಲ್ಲಿ ಸಕಲಗುಣಪರಿಪೂರ್ಣತ್ವವನ್ನು ಒಪ್ಪಿದಂತಾಗುತ್ತದೆ.

**यच्चोक्तं ब्रह्मपक्षे प्रादेशमात्रश्रुतिरयुक्तेति शङ्कानिरासार्थम् ''अभिव्यक्तेः'' इत्यादिसूत्राणीति, तन्न, ''अर्भकौकस्त्वान्नेति चेत्'' इत्यनेन, अत्रापि ''तथा दृष्टुयपदेशात्'' इत्यनेन चास्याः परिहृतत्वादिति दिक् ॥**

ಪರಿಪೂರ್ಣಚಂದ್ರಿಕಾ

ಬ್ರಹ್ಮನ ವಿಷಯದಲ್ಲಿ ಪ್ರಾದೇಶಮಾತ್ರಪರಿಮಾಣವನ್ನು ಹೇಳುವ ಶ್ರುತಿಯು ಅಯುಕ್ತವಾಗಿದೆಯಲ್ಲವೇ? ಎಂಬ ಆಶಂಕೆಯನ್ನು ಪರಿಹರಿಸುವುದಕ್ಕಾಗಿ 'ಅಭಿವ್ಯಕ್ತೇಃ' ಇತ್ಯಾದಿ ಸೂತ್ರಗಳು ಹೊರಟಿವೆಯೆಂದು ಅದ್ವೈತಿಗಳು ವ್ಯಾಖ್ಯಾನಿಸುತ್ತಾರೆ. ಇದೂ ಸಹ ತಪ್ಪು. ಏಕೆಂದರೆ ಹಿಂದೆ 'ಅರ್ಭಕೌಕಸ್ತ್ವಾನ್ನೇತಿ ಚೇನ್ನ' ಎಂಬ ಸೂತ್ರದಿಂದ ಹಾಗೂ ಈ ಅಧಿಕರಣದಲ್ಲಿರುವ 'ತಥಾ ದೃಷ್ಟ್ಯುಪದೇಶಾತ್' ಎಂಬ ಸೂತ್ರದ ಭಾಗದಿಂದಲೇ ಪ್ರಾದೇಶಪರಿಮಾಣವು ಬ್ರಹ್ಮನಲ್ಲಿ ಇರುತ್ತದೆಂದು ಸಾಧಿಸಿದ್ದಾಗಿದೆ. ಪುನಃ ಈ ಸೂತ್ರದಲ್ಲಿಯೂ ಅದನ್ನೇ ಹೇಳಿದರೆ ಪುನರುಕ್ತಿ ಬರುತ್ತದೆ. ಅದ್ವೈತಿಗಳ ಮತದ ಈ ನಿರಾಕರಣೆಯು ಕೇವಲ ದಿಕ್ಪ್ರದರ್ಶನವಾಗಿದೆ.

**अत्रापि परपक्षेऽपि वैश्वानरस्य जीवत्वं निषिध्य ब्रह्मेत्युक्तेस्तद्भेदार्थतैव ॥**

ಪ್ರತಿಯೊಂದು ಅಧಿಕರಣಗಳಂತೆ ಈ ಅಧಿಕರಣದಲ್ಲಿಯೂ ಅದ್ವೈತಿಗಳು ವೈಶ್ವಾನರನಿಗೆ ಜೀವತ್ವವನ್ನು ನಿಷೇಧ ಮಾಡಿ ಬ್ರಹ್ಮತ್ವವನ್ನು ಸಾಧಿಸಿದ್ದರಿಂದ ಜೀವಬ್ರಹ್ಮಭೇದವನ್ನೇ ಒಪ್ಪಿಕೊಂಡಿದ್ದಾರೆ.

**केचित्तु कथमपरिच्छिन्नस्य प्रादेशमात्रत्वमिति शङ्कानिरासकम् ''अभिव्यक्तेः'' इति सूत्रम् । उपासनार्थं प्रादेशमात्रत्वेनाभिव्यक्तेरिति च तस्यार्थः । मूर्धप्रभृत्यवयवैः पुरुषविधत्वोक्तिः किमर्थेति शङ्कानिरासकम् ''अनुस्मृतेः'' इति सूत्रम् । पुरुषविधत्वेनानुस्मृत्यर्थं तदुक्तिरिति च तस्यार्थः । कथमुरःप्रभृतीनां वेद्यादित्वोक्तिरिति शङ्कानिरासकं ''सम्पत्तेः'' इति सूत्रम् । प्राणाहुतेरग्निहोत्रत्व-सम्पादनाय उरःप्रभृतीनां वेद्यादित्वोक्तिरिति च तस्यार्थ इत्याहुः ।**

ರಾಮಾನುಜರ ಉಳಿದ ಸೂತ್ರಗಳ ವ್ಯಾಖ್ಯಾನ ಹೀಗಿದೆ -

'ಅಭಿವ್ಯಕ್ತೇರಿತ್ಯಾಶ್ಮರಥ್ಯಃ' - ವ್ಯಾಪ್ತನಾದ ಪರಮಾತ್ಮನು ಪ್ರಾದೇಶಪರಿಮಾಣದಲ್ಲಿರಲು ಹೇಗೆ ಸಾಧ್ಯ ? ಎಂಬ ಶಂಕೆಯನ್ನು ಪರಿಹರಿಸುವುದಕ್ಕಾಗಿ 'ಅಭಿವ್ಯಕ್ತೇಃ' ಎಂಬ ಸೂತ್ರವು ಹೊರಟಿದೆ. ಉಪಾಸನೆ ಮಾಡುವುದಕ್ಕಾಗಿ ಬುದ್ಧಿಯ ಸೌಕರ್ಯಕ್ಕೋಸ್ಕರ ಶ್ರುತಿಯು ವೈಶ್ವಾನರನನ್ನು 'ಪ್ರಾದೇಶ ಮಾತ್ರಮ್' ಎಂದು ಪರಿಚ್ಛೇದವನ್ನು ಹೇಳುತ್ತಿದೆ. ಇದು ಆಶ್ಮರಥ್ಯಾಚಾರ್ಯರ ಅಭಿಪ್ರಾಯ.

'ಅನುಸ್ಮೃತೇಃ ಬಾದರಿಃ' - ಪ್ರಕರಣದ ಕೊನೆಯಲ್ಲಿ 'ಯಸ್ತು ಏತಮ್ ಏವಮ್' ಎಂಬುದಾಗಿ ದ್ಯುಲೋಕವನ್ನೇ ಶಿರಸ್ಸನ್ನಾಗಿ ಉಳ್ಳವನೆಂದು ವೈಶ್ವಾರನನ್ನು ಉಪಾಸನೆ ಮಾಡಬೇಕೆಂದು ಹೇಳಲಾಗಿದೆ. ಅದಕ್ಕಾಗಿ ಈ ಪ್ರಕರಣದಲ್ಲಿ ಪುರುಷನಂತೆ ಅಂಗಾಂಗಗಳನ್ನು ವರ್ಣಿಸಲಾಗಿದೆ. ಇದು ಬಾದರಿಯ ಮತ. ಹೀಗೆ ಪುರುಷವಿಧತ್ವವನ್ನು ಏಕೆ ಹೇಳಿದ್ದು ಎಂಬ ಶಂಕೆಯನ್ನು ನಿರಾಕರಿಸುವುದಕ್ಕೋಸ್ಕರ ಈ ಸೂತ್ರವು ಹೊರಟಿದೆ.

'ಸಂಪತ್ತೇರಿತಿ ಜೈಮಿನಿಸ್ತಥಾಹಿ ದರ್ಶಯತಿ' - ವೈಶ್ವಾನರನ ಅನೇಕ ಅವಯವಗಳನ್ನು ಯಜ್ಞದ ಅಂಗಗಳೆಂದು ವರ್ಣಿಸಲಾಗಿದೆ. 'ಅವನ ಎದೆಯು ಯಜ್ಞವೇದಿಕೆ' ಇತ್ಯಾದಿಯಾಗಿ. ಇದಕ್ಕೆ ಕಾರಣವೇನೆಂದರೆ ನಾವು ಪ್ರತಿನಿತ್ಯ ಆಚರಿಸುವ ಪ್ರಾಣಾಗ್ನಿಹೋತ್ರವು ಸಫಲವಾಗಬೇಕೆಂದು ಶ್ರುತಿಯು ಹಾಗೇ ಹೇಳಿದೆ. ಹೀಗೆ ಪ್ರಾಣಾಹುತಿಗೆ ಅಗ್ನಿಹೋತ್ರತ್ವವೆಂಬ ಸಂಪತ್ತಿಗೋಸ್ಕರ ಯಜ್ಞಾಂಗ ಕಲ್ಪನೆಯು ಯುಕ್ತವಾಗಿದೆಯೆಂದು ಈ ಸೂತ್ರವು ಹೇಳುತ್ತಿದೆ. ಆದ್ದರಿಂದ ಭಗವಂತನ ಎದೆ ಮೊದಲಾದವು ಯಜ್ಞವೇದಿಕೆಯಾಗಲು ಹೇಗೆ ಸಾಧ್ಯ ? ಎಂಬ ಆಶಂಕೆಯನ್ನು ಪರಿಹರಿಸುವುದಕ್ಕಾಗಿ ಈ ಸೂತ್ರ ಹೊರಟಿದೆ.

'ಆಮನಂತಿ ಚೈನಮಸ್ಮಿನ್' ಪರಮಾತ್ಮನನ್ನು ಉಪಾಸಕನ ದೇಹದಲ್ಲಿ ಪ್ರಾಣಾಹುತಿಗೆ ಆಧಾರನನ್ನಾಗಿ ಛಾಂದೋಗರು ಹೇಳುತ್ತಾರೆ.

ಹೀಗೆ ರಾಮಾನುಜರು ಒಂಭತ್ತು ಸೂತ್ರಗಳನ್ನು ವ್ಯಾಖ್ಯಾನಿಸಿದ್ದಾರೆ.

**तन्न, अभिव्यक्त्यादिसूत्राणां भिन्नविषयत्वादाश्मरथ्यादिपदसूचितविकल्पो न स्यात् । प्रतिसूत्रं साध्याध्याहारश्च स्यात् ॥**

ಇದು ತಪ್ಪು. ರಾಮಾನುಜ ಭಾಷ್ಯದ ಪ್ರಕಾರ ಈ ಎಲ್ಲ ಸೂತ್ರಗಳು ಬೇರೆ ಬೇರೆ ವಿಷಯವನ್ನು ಸಮರ್ಥಿಸುತ್ತಿವೆ. ಹೀಗಿರುವಾಗ ಆಶ್ಮರಥ್ಯಾದಿ ಪದಗಳಿಂದ ಸೂಚಿತವಾದ ವಿಕಲ್ಪವು ಅಸ್ವರಸವಾಗುತ್ತದೆ. ಮತ್ತು ಪ್ರತಿಯೊಂದು ಸೂತ್ರಗಳಲ್ಲಿ ಸಾಧ್ಯವನ್ನು ಅಧ್ಯಾಹಾರ ಮಾಡಿಕೊಳ್ಳಬೇಕಾಗುತ್ತದೆ. ಆದರೆ ನಮ್ಮ ಪ್ರಕಾರ 'ಅಭಿವ್ಯಕ್ತೇರಿತ್ಯಾಶ್ಮರಥ್ಯಃ' ಇತ್ಯಾದಿ ಸೂತ್ರಗಳು ಬೇರೆ ಬೇರೆ ಋಷಿಗಳ ಹೆಸರುಗಳನ್ನು ಉಲ್ಲೇಖ ಮಾಡಿ ಒಂದೇ ವಿಷಯದಲ್ಲಿ ಅಭಿಪ್ರಾಯಭೇದವನ್ನು ಹೇಳುತ್ತಿವೆ. ಹೀಗೆ ವ್ಯಾಖ್ಯಾನಿಸುವುದೇ ಸ್ವರಸ.

**टीकाक्षरार्थस्तु – गतिसाधनत्वादरतिः पाद इति । लोके गमनेनारतिदर्शनाद् रतिविरुद्धगतिसाधनत्वात्पादोऽरतिशब्दार्थ इत्यर्थः ।**

ಟೀಕೆಯಲ್ಲಿ 'ಗತಿಸಾಧನತ್ವಾದರತಿಃ ಪಾದಃ' ಎಂದು ಹೇಳಿದ್ದಾರೆ. ಇಲ್ಲಿರುವ 'ಅರತಿ' ಶಬ್ದಕ್ಕೆ 'ಪಾದ' ಎಂದರ್ಥ. ಲೋಕದಲ್ಲಿ ನಡೆಯುವುದರಿಂದ ಸುಖವಾಗುವುದಿಲ್ಲ. ಹೀಗೆ ರತಿವಿರುದ್ಧವಾದ ಅಂದರೆ ಸುಖಕ್ಕೆ ವಿರುದ್ಧವಾದ ಗಮನಕ್ಕೆ ಪಾದವು (ಕಾಲುಗಳು) ಸಾಧನವಾಗಿದೆ. ಆದ್ದರಿಂದ 'ಅರತಿ' ಶಬ್ದಕ್ಕೆ 'ಪಾದ' ಎಂಬರ್ಥವನ್ನು ವಿವಕ್ಷಿಸಬೇಕು.

**वाक्यान्तरस्याविरोधेनेत्यादि । भाष्योदाहृतश्रुतौ "सर्वलिङ्गः सर्वगुणः" इत्यादौ श्रुतस्य सर्वशब्दस्य दुःखित्वादिजीवलिङ्गं नार्थः, निरवद्यत्वादिविरुद्धत्वादित्यर्थः ।**

'ವಾಕ್ಯಾಂತರಸ್ಯಾವಿರೋಧೇನೇ' ಎಂದು ಟೀಕೆಯಲ್ಲಿ ಹೇಳಿದ್ದಾರೆ. ಭಾಷ್ಯದಲ್ಲಿ ಉದಾಹರಿಸಲ್ಪಟ್ಟ ಶ್ರುತಿಯಲ್ಲಿ 'ಸರ್ವಲಿಂಗಃ ಸರ್ವಗುಣಃ' ಎಂಬುದಾಗಿ ಸರ್ವಶಬ್ದವು ಕೇಳಿಸುತ್ತಿದೆ. ಈ ಸರ್ವಶಬ್ದಕ್ಕೆ ದುಃಖಿತ್ವವೇ ಮೊದಲಾದ ಜೀವನ ಲಿಂಗಗಳನ್ನು ವಿವಕ್ಷಿಸಬಾರದು ಹೊರತಾಗಿ ನಿರವದ್ಯತ್ವ .....

**अपिपदेनोभयसमुच्चयसिद्धेरित्यादि । सूत्रे 'पुरुषविधम्' इत्यनेनैवोच्यमानायाः श्रुतिसमाख्यायाः द्वितीयसूत्रोक्तस्मृतिसमाख्यया, असम्भवशब्दोक्तप्रकरणेन च समुच्चयस्यापिशब्देनैव सिद्धेश्चशब्दः शङ्कानिवृत्त्यर्थः सन् भाष्योक्तस्यैव सूचक इत्यर्थः ।**

'ಅಪಿಪದೇನೋಭಯಸಮುಚ್ಚಯ ಸಿದ್ದೇನ' ಎಂದು ಟೀಕೆಯಲ್ಲಿ ಹೇಳಿದ್ದಾರೆ. ಇದರ ಅಭಿಪ್ರಾಯ ಹೀಗಿದೆ - ಸೂತ್ರದಲ್ಲಿ 'ಪುರುಷವಿಧಂ' ಎಂದು ಹೇಳಿರುವುದರಿಂದಲೇ ಶ್ರುತಿ ಸಮಾಖ್ಯಾ ಹಾಗೂ ಎರಡನೆಯ ಸೂತ್ರದಲ್ಲಿ ಹೇಳಲ್ಪಟ್ಟ ಸ್ಮೃತಿ ಸಮಾಖ್ಯೆಯೂ ಸಹ ತಿಳಿಯುತ್ತದೆ. 'ಸಂಭವ' ಶಬ್ದದಿಂದ ಹೇಳಲ್ಪಟ್ಟ ಪ್ರಕರಣದಿಂದ ಎಂಬ ಸಮುಚ್ಚಯವೂ ಸಹ ತಿಳಿಯುತ್ತದೆ. ಆದರೂ ಸಹ ಸೂತ್ರದಲ್ಲಿ 'ಚ' ಶಬ್ದವನ್ನೇಕೆ ಹೇಳಿದ್ದಾರೆಂದರೆ ಶಂಕೆಯನ್ನು ನಿವೃತ್ತಿ ಮಾಡುವ ಮೂಲಕ ಭಾಷ್ಯದಲ್ಲಿ ಹೇಳಿದ್ದನ್ನೆಲ್ಲಾ ಸೂಚನೆ ಮಾಡುವುದಕ್ಕಾಗಿ ಎಂದು ತಿಳಿಯಬೇಕು.

**प्रागुक्तैवानुपपत्तिरिति । वैदिकाग्न्यादिसूक्तादिव्यवहारस्याग्न्यादि-प्रतिपादकत्वनिमित्तकत्वेन मुख्यत्वाङ्गीकारे "सर्वनामा" इत्यादिश्रुतिविरोधादिरूप प्रागुक्तानुपपत्तिरेव व्यवहारस्याभिव्यक्त्यादिनिमित्तकत्वनोपचरितत्वाङ्गीकारे हेतुरित्यर्थः ।**

ಟೀಕೆಯಲ್ಲಿ 'ಪ್ರಾಗುಕ್ತೈವಾನುಪಪತ್ತಿಃ' ಎಂದಿದೆ. ಇದಕ್ಕೆ ಹೀಗರ್ಥ. ವೇದದಲ್ಲಿ ಅಗ್ನಿಸೂಕ್ತ, ವಾಯುಸೂಕ್ತ, ಇತ್ಯಾದಿ ವ್ಯವಹಾರಗಳಿವೆ. ಈ ಸೂಕ್ತವ್ಯವಸ್ಥೆಯನ್ನು ಆಯಾ ಸೂಕ್ತಗಳು ಅಗ್ನಿ ಮೊದಲಾದವರನ್ನು ಪ್ರತಿಪಾದಿಸುವ ಕಾರಣ ಮಾಡುವುದಾದರೆ ಅಗ್ನಿ ಮೊದಲಾದವರಲ್ಲಿ ಆಯಾ ಸೂಕ್ತಗಳಿಗೆ ಮುಖ್ಯಾರ್ಥವನ್ನು ಅಂಗೀಕರಿಸಿದಂತಾಗುತ್ತದೆ. ಆವಾಗ 'ಸರ್ವನಾಮಾ' ಇತ್ಯಾದಿ ಶ್ರುತಿಗಳ ವಿರೋಧವು ಪ್ರಾಪ್ತವಾಗುತ್ತದೆ. ಆದ್ದರಿಂದ ಹಿಂದೆ ಹೇಳಿದ ಪ್ರಕಾರ ಆಯಾ ಅಧಿಷ್ಠಾನಗಳಲ್ಲಿ ಭಗವಂತನ ಉಪಾಸನೆಗೋಸ್ಕರ ಸೂಕ್ತಾದಿ ವ್ಯವಸ್ಥೆಯಿರುತ್ತದೆಂದು ಔಪಚಾರಿಕವಾದ ಅರ್ಥವನ್ನು ಅಂಗೀಕರಿಸಬೇಕು ಎಂದರ್ಥ.

**भाष्योदाहृतश्रुतौ 'अरम्' इत्यस्य सम्यगित्यर्थ इति तत्त्वप्रदीप एवोक्तमिति ।।**

ವೈಶ್ವಾನರಾಧಿಕರಣ (೧-೨-೭)

।। इति श्रीमद्ब्रह्मण्यतीर्थपूज्यपादानां शिष्येण व्यासयतिना विरचितायां श्रीमद्भाष्यटीकाया विवृतौ तात्पर्यचन्द्रिकायां प्रथमाध्यायस्य द्वितीयः पादः ।।२।।

ಭಾಷ್ಯದಲ್ಲಿ ಉದಾಹರಿಸಲ್ಪಟ್ಟ ಶ್ರುತಿಯಲ್ಲಿ 'ಅರಮ್' ಎಂದಿದೆ. ಇದಕ್ಕೆ 'ಸಮ್ಯಕ್' (ಚೆನ್ನಾಗಿ) ಎಂಬರ್ಥವನ್ನು ತತ್ವಪ್ರದೀಪದಲ್ಲೇ ಹೇಳಿರುತ್ತಾರೆ.

ಇಲ್ಲಿಗೆ ಶ್ರೀಮದ್‌ಬ್ರಹ್ಮಣ್ಯತೀರ್ಥಪೂಜ್ಯಶ್ರೀಪಾದರ ಶಿಷ್ಯರಾದ
ಶ್ರೀವ್ಯಾಸತೀರ್ಥಯತಿಗಳಿಂದ ವಿರಚಿತವಾದ ಭಾಷ್ಯಟೀಕೆಯ ವಿವೃತಿಯಾದ ತಾತ್ಪರ್ಯಚಂದ್ರಿಕೆಯಲ್ಲಿ
ಪ್ರಥಮಾಧ್ಯಾಯದ ದ್ವಿತೀಯಪಾದವು ಸಮಾಪ್ತವಾಯಿತು.

॥ ಶ್ರೀ ಕೃಷ್ಣಾರ್ಪಣಮಸ್ತು ॥

**प्रकाशः –**

''शब्दादिभ्यः'' इति सूत्रे शङ्काभागार्थस्याविरोधात् सिद्धान्तांशार्थमनूद्य प्रत्याह **– यच्चेति** । 'अत एव' इत्याद्युक्तं व्यनक्ति **– न हीति** ।

ವಿವರಣೆ - 'ಶಬ್ದಾದಿಭ್ಯಃ' ಎಂಬ ಮೂರನೆಯ ಸೂತ್ರದಲ್ಲಿ ಪೂರ್ವಪಕ್ಷ ಭಾಗದಲ್ಲಿ ನಮಗೂ ಅದ್ವೈತಿಗಳಿಗೂ ವಿರೋಧವಿರುವುದಿಲ್ಲ. ಆದರೆ ಸಿದ್ಧಾಂತ ಭಾಗದಲ್ಲಿ ವಿರೋಧವಿದೆ. ಅದಕ್ಕೋಸ್ಕರ ಕೇವಲ ಸಿದ್ಧಾಂತ ಭಾಗವನ್ನು ಅನುವಾದ ಮಾಡಿ ನಿರಾಕರಿಸುತ್ತಿದ್ದಾರೆ 'ಯಚ್ಚ' ಇತ್ಯಾದಿ ವಾಕ್ಯದಿಂದ. 'ಅತ ಏವ' ಇತ್ಯಾದಿಯಾಗಿ ಹೇಳಿದ್ದನ್ನು ತಾವೇ ವ್ಯಾಖ್ಯಾನಿಸುತ್ತಿದ್ದಾರೆ. 'ನಹಿ' ಇತ್ಯಾದಿ ವ್ಯಾಕದಿಂದ

**सर्वपाप्मेति** । ''तद्यथैषीकातूलमग्नौ प्रोतं प्रदूयते एवं हैवास्य सर्वे पाप्मानः प्रदूयन्ते'' इत्युक्तब्रह्मज्ञानफलस्य प्रतीकज्ञानादसिद्धेरिति भावः ।

'ಸರ್ವಪಾಪ್ಮದಾಹಃ' ಎಂದು ಗ್ರಂಥದಲ್ಲಿದೆ. ಅಂದರೆ - 'ತದ್ಯಥೈಷೀಕಾತೂಲಮಗ್ನೌ ಪ್ರೋತಂ ಪ್ರದೂಯತೇ ಏವಂ ಹೈವಾಸ್ಯ ಸರ್ವೇ ಪಾಪ್ಮನಃ ಪ್ರದೂಯಂತೇ' ಎಂಬ ವಾಕ್ಯದಲ್ಲಿ ಬ್ರಹ್ಮಜ್ಞಾನದಿಂದ ಸರ್ವಪಾಪರಾಹಿತ್ಯವೆಂಬ ಫಲವು ದೊರೆಯುತ್ತದೆಂದು ಹೇಳಲಾಗಿದೆ. ಈ ಫಲವು ಬ್ರಹ್ಮಜ್ಞಾನದಿಂದಲೇ ದೊರೆಯಬೇಕು ಹೊರತು, ಪ್ರತೀಕಜ್ಞಾನದಿಂದ ದೊರೆಯಲು ಸಾಧ್ಯವಿಲ್ಲವೆಂದರ್ಥ.

**प्रकाशः – पुरुषविधशब्देनेति** । यद्यपि परभाष्ये 'पुरुषमपि चैनम्' इत्यपि सूत्रपाठ उक्तः, तथाऽपि स पाठोऽप्रामाणिक इति भावेनायमेव पाठोऽनूदितः, ये तु 'पुरुषविधमपि' इति पठन्ति, तेषां मते द्युमूर्धत्वादिपृथिवीप्रतिष्ठितत्वान्तं यत्पुरुषविधत्वं, तद्ब्रह्मत इत्युक्तेरिति भावः ।

ಗ್ರಂಥದಲ್ಲಿ 'ಪುರುಷವಿಧಶಬ್ದೇನ' ಎಂದು ಹೇಳಿದ್ದಾರೆ. ವಾಸ್ತವಿಕವಾಗಿ ಅದ್ವೈತ ಭಾಷ್ಯದಲ್ಲಿ 'ಪುರುಷವಿಧಮಪಿ' ಎಂಬ ಪಾಠದ ಬದಲು 'ಪುರುಷಮಪಿ ಚೈನಮ್' ಎಂಬ ಪಾಠವನ್ನು ಅನುಕರಿಸಿದ್ದಾರೆ. ಆದರೆ ಈ ಪಾಠವು ಅಪ್ರಾಮಾಣಿಕವಾಗಿದೆಯೆಂಬ ಅಭಿಪ್ರಾಯದಿಂದ ಗ್ರಂಥಕಾರರು ಅದರ ಅನುವಾದವನ್ನೇ ಮಾಡಿಲ್ಲ. 'ಪುರುಷವಿಧಮಪಿ' ಎಂಬ ಸಾಧುಪಾಠವನ್ನೇ ಅದ್ವೈತಿಗಳು ಅನುಸರಿಸಬೇಕೆಂದು 'ಪುರುಷವಿಧಶಬ್ದೇನ' ಎಂದು ಹೇಳಿದ್ದಾರೆ. ಏಕೆಂದರೆ 'ಯೇ ತು ಪುರುಷವಿಧಮಪಿ' ಇತಿ ಪಠಂತಿ, ತೇಷಾಂ ಮತೇ ದ್ಯುಮೂರ್ಧತ್ವಾದಿಪೃಥಿವೀಪ್ರತಿಷ್ಠಿತತ್ವಾಂತಂ ಯತ್ಪುರುಷವಿಧತ್ವಂತದ್‌ಗೃಹ್ಯತೇ' ಎಂದು ಹೇಳಿರುತ್ತಾರೆ. ಅಂದರೆ 'ಪುರುಷವಿಧಮ್' ಎಂಬ ಮತ್ತೊಂದು ಪಾಠವಿದೆ ಎಂಬುದಾಗಿ ಅವರೂ ಸಹ ಒಪ್ಪಿದ್ದಾರೆ. ಆದ್ದರಿಂದ 'ಪುರುಷವಿಧಮಪಿ' ಎಂಬ ಪಾಠವನ್ನು ಅನುಸರಿಸುವುದು ಸಾಧುವಾಗಿದೆ.

**प्रकाशः** – **विशेषादितीति** । आद्यसूत्रेऽपीत्यर्थः । ''अत एव'' इति सूत्रार्थो नातीव विरुद्ध इति तदुपेक्ष्य ''साक्षादपि'' इति सूत्रार्थं निराह – **यच्चोक्तमिति** ।

'ವಿಶೇಷಾತ್ ಇತ್ಯತ್ರಾಪಿ' ಎಂದು ಗ್ರಂಥದಲ್ಲಿ ಹೇಳಿದ್ದಾರೆ. ಮೊದಲನೆಯ ಸೂತ್ರದಲ್ಲಿಯೂ 'ಸಾಧಾರಣ ಶಬ್ದವಿಶೇಷಾತ್' ಎಂಬುದರಿಂದ ಪುನರುಕ್ತಿ ಬರುತ್ತದೆಂದು ತಿಳಿಯಬೇಕು. 'ಅತ ಏವ ನ ದೇವತಾ' ಎಂಬ ಸೂತ್ರಾರ್ಥದಲ್ಲಿ ಹೆಚ್ಚಿಗೆ ವಿರೋಧ ಕಾಣಿಸುವುದಿಲ್ಲವೆಂದು ಉಪೇಕ್ಷಿಸಿ 'ಸಾಕ್ಷಾದಪಿ' ಎಂಬ ಐದನೆಯ ಸೂತ್ರಾರ್ಥವನ್ನು ನಿರಾಕರಿಸುತ್ತಿದ್ದಾರೆ 'ಯಚ್ಚೋಕ್ತಂ' ಇತ್ಯಾದಿಯಾಗಿ.

'ಅತ ಏವ ನ ದೇವತಾ ಭೂತಂ ಚ' ಎಂಬುದರ ಅಭಿಪ್ರಾಯ ಹೀಗೆ -

ಜಡವಾದ ಅಗ್ನಿಯ ತಲೆಯು ದ್ಯುಲೋಕವಾಗಲು ಸಾಧ್ಯವಿಲ್ಲ. ಅಗ್ನಿದೇವತೆಗೂ ಸಹ ಅಂತಹ ಸಾಮರ್ಥ್ಯವಿಲ್ಲ. ಆದರೆ ಶ್ರುತಿಯು ವೈಶ್ವಾನರನು ದ್ಯುಲೋಕವನ್ನೇ ಶಿರಸ್ಸನ್ನಾಗಿ ಮಾಡಿಕೊಂಡಿದ್ದಾನೆಂದು ವಿಶಾಲರೂಪವನ್ನು ಮತ್ತು ಆತ್ಮಶಬ್ದ ಪ್ರತಿಪಾದ್ಯನೆಂದೂ ಹೇಳುತ್ತಿದೆ. ಈ ಕಾರಣದಿಂದ ಅಗ್ನಿದೇವತೆಯಾಗಲೀ, ಜಡವಾದ ಅಗ್ನಿಯಾಗಲೀ, ವೈಶ್ವಾನರನೆನಿಸಲು ಸಾಧ್ಯವಿಲ್ಲವೆಂದು ನಾಲ್ಕನೆಯ ಸೂತ್ರಕ್ಕೆ ವ್ಯಾಖ್ಯಾನಿಸುತ್ತಾರೆ.

ಇವರ ಈ ಸೂತ್ರವ್ಯಾಖ್ಯಾನದಲ್ಲಿ ಖಂಡಿಸಬೇಕಾದ ಅಂಶವೇನೂ ಇರುವುದಿಲ್ಲ.

**प्रकाशः** – पूर्वं जाठराग्निप्रतीको जाठराग्न्युपाधिको वा परमेश्वर उपास्य इत्युक्तम्, इदानीं विनैव प्रतीकोपाधिकल्पनाभ्यां केवलस्यैव अग्निवैश्वानर-शब्दवाच्यत्वमुच्यत इत्युक्तमित्यर्थः ।

**क्लिष्टत्वादिति** । अन्यवधानार्थत्वात्तस्येत्यर्थः । **गुणपूर्तीति** । तथा चैतत्सूत्रं त्वन्मतप्रतिकूलमिति भावः ।

'ಸಾಕ್ಷಾದಪ್ಯವಿರೋಧಂ ಜೈಮಿನಿಃ'

'ತಥಾದೃಷ್ಟ್ಯುಪದೇಶಾತ್' ಎಂಬುದಾಗಿ ಹಿಂದೆ ಜಾಠರಾಗ್ನಿಯು ಬ್ರಹ್ಮನಿಗೆ ಪ್ರತೀಕವಾಗಿದೆ. ಅಥವಾ ಉಪಾಧಿಯಾಗಿದೆಯೆಂದು ಹೇಳಿದರು. ಆದರೆ ಜೈಮಿನ್ಯಾಚಾರ್ಯರು ಪ್ರತೀಕ ಅಥವಾ ಉಪಾಧಿಗಳ ಕಲ್ಪನೆಯಿಲ್ಲದೆ ನೇರವಾಗಿ ಪರಬ್ರಹ್ಮನೇ ವೈಶ್ವಾನರಶಬ್ದದಿಂದ ವಾಚ್ಯನಾಗುತ್ತಾನೆಂದು ಹೇಳುತ್ತಾರೆ. 'ಮೂರ್ಧೈವ ಸುತೇಜಾಃ' ಎಂದು ಹೇಳಿದಂತೆ ಅವನ ಅಂಗಾಂಗಗಳ ವರ್ಣನೆಯಿರುವುದರಿಂದ ಪುರುಷವಿಧತ್ವವು ಅವನಿಗೆ ಉಪಪನ್ನವಾಗುತ್ತದೆ. ಬ್ರಹ್ಮನು ಸರ್ವಾತ್ಮಕನಾದ್ದರಿಂದ ಅನೇಕ ಅವಯವಗಳ ಸಮುದಾಯದಲ್ಲಿ ಅಂತಃಪ್ರವಿಷ್ಟನೂ ಆಗುತ್ತಾನೆ. ಹೀಗೆ ಪುರುಷತ್ವ ಹಾಗೂ ಪುರುಷಾಂತಃ ಪ್ರವಿಷ್ಟತ್ವಗಳೆರಡೂ ಉಪಪನ್ನವಾಗುವುದರಿಂದ ವ್ಯಾಪ್ತನಾದ ಬ್ರಹ್ಮನೇ ವೈಶ್ವಾರನಾಗುತ್ತಾನೆಂದು ಅರ್ಥ.

'ಕ್ಲಿಷ್ಟತ್ವಾತ್' ಎಂದರೆ ಈ ಬಗೆಯ ಅದ್ವೈತಿಗಳ ವ್ಯಾಖ್ಯಾನವು ಅತ್ಯಂತ ಕ್ಲಿಷ್ಟಕರವಾಗಿದೆ. 'ಸಾಕ್ಷಾತ್' ಎಂಬ ಶಬ್ದಕ್ಕೆ ಅವ್ಯವಧಾನವೆಂಬ ಅರ್ಥವಿರುತ್ತದೆ ಹೊರತು, 'ಕೇವಲ' ಎಂಬರ್ಥವು ಇರುವುದಿಲ್ಲ. 'ಗುಣಪೂರ್ತಿ' ಎಂಬ ಭಾಗಕ್ಕೆ ಗುಣಪೂರ್ಣತ್ವವನ್ನು ಈ ಸೂತ್ರವು ಹೇಳುತ್ತಿರುವುದರಿಂದ ಅದು ಅದ್ವೈತಮತಕ್ಕೆ ಪ್ರತಿಕೂಲವೇ ಆಗಿದೆಯೆಂದು ಅರ್ಥವನ್ನು ತಿಳಿಯಬೇಕು.

**प्रकाशः** – किञ्च ''तथा दृष्ट्युपदेशात्'' इत्यनेनैव शङ्कायाः परिहृतत्वात्, साक्षात्तत्प्रतिपादकत्वोक्तावतिशयाभावात्, प्रतिकूलत्वाच्च न वाच्यमेवैतदित्यपि ध्येयम् ।

**यच्चोक्तमिति** । ''यस्त्वेतं प्रादेशमात्रम्'' इति श्रुतप्रादेशमात्रश्रुतिः कथमित्याकाङ्क्षायाम् अतिमात्रस्यापीश्वरस्य प्रादेशमात्रपरिमाणहृदयादिस्थानेषु उपासकानामभिव्यज्यमानत्वाद्वा, हृदयादावनुस्मर्तव्यत्वाद्वा ''प्रादेशमात्रमिव ह वै देवास्संविदिता अभिसम्पन्नास्स्मः'' इति श्रुत्या प्रादेशमात्रत्वसम्पत्त्या वा प्रादेशमात्रत्वं युक्तमित्यर्थः ।

ಮತ್ತು ಈ ಸೂತ್ರವು ಹೊರಟಿದ್ದೇ ವ್ಯರ್ಥ. ಏಕೆಂದರೆ 'ತಥಾ ದೃಷ್ಟ್ಯುಪದೇಶಾತ್' ಎಂಬುದರಿಂದಲೇ ವೈಶ್ವಾನರನನ್ನು ಪ್ರತೀಕದಲ್ಲಿ ಅಥವಾ ಉಪಾಧಿಯಲ್ಲಿ ಉಪಾಸನೆ ಮಾಡಬೇಕೆಂದು ಹೇಳಿದ ಮೇಲೆ ಪುನಃ ಸಾಕ್ಷಾತ್ತಾಗಿ ಅಂತಹ ವೈಶ್ವಾನರನನ್ನು ಪ್ರತಿಪಾದನೆ ಮಾಡುವುದರಲ್ಲಿ ಏನೂ ಅತಿಶಯವಿಲ್ಲ. ಮತ್ತು ನಿರ್ಗುಣಬ್ರಹ್ಮನ ಪ್ರತಿಪಾದನೆಗೆ ಪ್ರತಿಕೂಲವೇ ಆಗಿರುತ್ತದೆ.

'ಅಭಿವ್ಯಕ್ತೇರಿತ್ಯಾಶ್ಮರಥ್ಯಃ'

ಬ್ರಹ್ಮನು ವ್ಯಾಪ್ತನಾಗಿರುವುದರಿಂದ ಪ್ರಾದೇಶಮಾತ್ರ ಶ್ರುತಿಯನ್ನು ಹೇಗೆ ಕೂಡಿಸುವುದು ? ಎಂಬ ಆಶಂಕೆಗೆ ಉತ್ತರಿಸುತ್ತಿದ್ದಾರೆ. ಈಶ್ವರನು ವ್ಯಾಪ್ತನಾಗಿದ್ದರೂ ಪ್ರಾದೇಶಮಾತ್ರ ಪರಿಮಾಣವಿರುವ ಹೃದಯ ಮೊದಲಾದ ಸ್ಥಾನಗಳಲ್ಲಿ ಉಪಾಸಕರಿಗೆ ಅಭಿವ್ಯಕ್ತನಾಗುತ್ತಾನಾದ್ದರಿಂದ, ಅಥವಾ ಆ ಸ್ಥಾನಗಳಲ್ಲಿ

ಧ್ಯಾನಯೋಗ್ಯನಾದ್ದರಿಂದ ಅಥವಾ - ಅಂಗುಷ್ಠ ಮಾತ್ರ ಪರಿಮಿತಿಯಲ್ಲಿ ಪ್ರತ್ಯಕ್ಷನಾಗುವುದರಿಂದ ವೈಶ್ವಾನರನಿಗೆ ಹೇಳಿದ 'ಪ್ರಾದೇಶಮಾತ್ರಮ್' ಎಂಬ ವಿಶೇಷಣವು ಯುಕ್ತವಾಗುತ್ತದೆಂದು ಆಶ್ಮರಥ್ಯರು ಹೇಳುತ್ತಾರೆ.

'ಅನುಸ್ಮೃತೇರ್ಬಾದರಿಃ'

ಅಂಗುಷ್ಠ ಗಾತ್ರದ ಹೃದಯಪ್ರದೇಶದಲ್ಲಿ ಬ್ರಹ್ಮನು ಇರುತ್ತಾನೆಂದು ಧ್ಯಾನ ಮಾಡಬೇಕು. ಆದ್ದರಿಂದ ವ್ಯಾಪ್ತನಾಗಿದ್ದರೂ 'ಪ್ರಾದೇಶಮಾತ್ರಮ್' ಎಂಬ ವಿಶೇಷಣವು ಯುಕ್ತವಾಗುತ್ತದೆಂದು ಬಾದರಿಯ ಋಷಿಗಳು ಹೇಳುತ್ತಾರೆ.

'ಸಂಪತ್ತೇರಿತಿ ಜೈಮಿನಿಸ್ತಥಾಹಿ ದರ್ಶಯತಿ'

ವೈಶ್ವಾನರನಿಗೆ ತಲೆಯಿಂದ ಒಂದು ಗೇಣಿನ ಕೆಳಗಡೆ ಅಂಗಗಳನ್ನು ಹೇಳಲಾಗಿದೆ. ಇದನ್ನೇ ಪ್ರಾದೇಶವೆಂದು ಕರೆಯುತ್ತಾರೆ. ಆದ್ದರಿಂದ ಅವನನ್ನು 'ಪ್ರಾದೇಶಮಾತ್ರಮ್' ಎಂದು ಶ್ರುತಿ ಹೇಳಿದೆ. ವಾಜಸನೇಯ ಶಾಖೆಯಲ್ಲಿಯೂ ಹೀಗೆಯೇ ಹೇಳಲಾಗಿದೆ - 'ಪ್ರಾದೇಶಮಾತ್ರಮಿವ ಹ ವೈ ದೇವಾಃ ಸಂವಿದಿತಾ ಅಭಿಸಂಪನ್ನಾಃ ಸ್ಮಃ' ದ್ಯುಲೋಕದಿಂದ ಪೃಥಿವಿಯ ತನಕದ ಸ್ಥಾನಗಳು ವ್ಯಾಪ್ತನಾದ ಬ್ರಹ್ಮನಿಗೆ ಪ್ರಾದೇಶಮಾತ್ರವಾಗಿವೆ ಎಂಬುದು ಜೈಮಿನ್ಯಾಚಾರ್ಯರ ಮತ.

'ಆಮನಂತಿ ಚೈನಮಸ್ಮಿನ್'

ಶ್ರುತಿಯು ಹುಬ್ಬಿನಿಂದ ಕೆಳತುಟಿಯ ತನಕದ ಮುಖಭಾಗವನ್ನು ಪ್ರಾದೇಶಪರಿಮಿತವಾಗಿದೆಯೆಂದು ಹೇಳಿ ಅದು ಜೀವನ ಸ್ಥಾನವಾಗಿದೆಯೆಂದು ಹೇಳಿದೆ. ಏನಂ = ಬ್ರಹ್ಮನನ್ನು, ಅಸ್ಮಿನ್ = ಈ ಪ್ರಾದೇಶ ಸ್ಥಾನದಲ್ಲಿ, ಆಮನಂತಿ = ಹೇಳುತ್ತಾರೆ.

ಹೀಗೆ ಅದ್ವೈತಿಗಳು ಒಂಭತ್ತು ಸೂತ್ರಗಳಿಗೂ ವ್ಯಾಖ್ಯಾನವನ್ನು ಮಾಡುತ್ತಾರೆ.

**प्रकाशः** – ''हृद्यपेक्षया'' इत्यग्रेतनेनापि परिहृतत्वं ध्येयमिति भावेनाह – इति दिगिति । यद्वा केषाञ्चिन्मते ''शब्दादिभ्यः'' इत्यादि सूत्रार्थदूषणं कुतो न कृतमित्यत आह – इति दिगिति ।

'ಅಭಿವ್ಯಕ್ತೇರಿತ್ಯಾಶ್ಮರಥ್ಯಃ' ಇತ್ಯಾದಿ ಸೂತ್ರಗಳಲ್ಲಿ ಬ್ರಹ್ಮನಿಗೆ ಪ್ರಾದೇಶಪರಿಮಾಣವನ್ನು ಸಮರ್ಥಿಸಲಾಗಿದೆಯೆಂದು ಅದ್ವೈತಿಗಳು ವ್ಯಾಖ್ಯಾನಿಸಿದ್ದಾರೆ. ಇದು 'ಅರ್ಭಕೌಕಸ್ತ್ವಾತ್' ಇತ್ಯಾದಿ ಸೂತ್ರದಲ್ಲಿ 'ತಥಾ ದೃಷ್ಟ್ಯುಪದೇಶಾತ್' ಎಂಬ ಭಾಗದಿಂದಲೇ ಸಮರ್ಥಿಸಿದ್ದಾರೆ. ಆದ್ದರಿಂದ ಪುನರುಕ್ತಿ ದೋಷ ಬರುತ್ತದೆ. ಮತ್ತು ಮುಂದೆ 'ಹೃದ್ಯಪೇಕ್ಷಯಾ' ಎಂಬುದರಿಂದಲೂ ಇದನ್ನು ಪರಿಹರಿಸುತ್ತಾರೆಂದು ತಿಳಿಯಬೇಕು. ಅಂದರೆ ಹಿಂದೆ 'ಅರ್ಭಕೌಕಸ್ತ್ವಾತ್' ಎಂಬ ಸೂತ್ರದಿಂದ; ಈಗ 'ತಥಾ ದೃಷ್ಟ್ಯುಪದೇಶಾತ್' ಎಂಬುದರಿಂದ; ಮುಂದೆ 'ಹೃದ್ಯಪೇಕ್ಷಯಾ' ಎಂಬುದರಿಂದ ಇವರ ಅಭಿಪ್ರಾಯವನ್ನು ನಿರಾಕರಿಸಿದ್ದಾರೆ. ಈ ಅಭಿಪ್ರಾಯದಿಂದ 'ಇತಿ ದಿಕ್' ಎಂದು ಗ್ರಂಥಕಾರರು ದಿಕ್‌ಪ್ರದರ್ಶನವನ್ನು ಮಾಡಿದ್ದಾರೆ. ಅಥವಾ

ರಾಮಾನುಜರ ಮತದಲ್ಲಿ 'ಶಬ್ದಾದಿಭ್ಯಃ' ಎಂಬ ಸೂತ್ರವನ್ನು 'ಸಾಕ್ಷಾದಪಿ' ಎಂಬ ಸೂತ್ರಾರ್ಥವನ್ನು ಏಕೆ ನಿರಾಕರಿಸಿಲ್ಲ ? ಎಂಬ ಪ್ರಶ್ನೆಗೂ 'ಇತಿ ದಿಕ್' ಎಂದು ಹೇಳಿರುತ್ತಾರೆ.

**प्रकाशः** – तथा हि – तत्सूत्रमग्न्यादिशब्दादिना जाठराग्नेर्वैश्वानरत्व-शङ्कानिरासकमित्युक्तमयुक्तं, जाठरस्य भूतत्वेन पृथक्शङ्कायोगात्, "अत एव" इति सूत्रे तन्निरासात् । अवश्यवक्तव्यपरसाधकसावकाशत्वोक्त्या बाधकोद्धारापरत्वसम्भवे अन्यथावर्णनायोगाच्च । 'पुरुषमपि' इति पाठस्य असाम्प्रदायिकत्वात् । अग्निशब्दस्य अगनयनादिना भगवद्वाचित्वं वक्तुं "साक्षादपि" इति सूत्रमित्यपि न, शब्दमात्रस्य विष्णुवाचित्वे अन्यत्रव्यवहारविरोधरूपबाधकोद्धारत्वसम्भवेऽन्यथोक्त्ययोगादित्यादि ज्ञेयमिति भावः । 'अत्रापि' एतदधिकरणेऽपीत्यर्थः ।।

ರಾಮಾನುಜರ ಸೂತ್ರವ್ಯಾಖ್ಯಾನವು ಅಸಾಧುವಾಗಿದೆಯೆಂದು ತಿಳಿಯುವ ಮೊದಲು ಅವರು ಮಾಡುವ ಸೂತ್ರ ವ್ಯಾಖ್ಯಾನ ಏನೆಂದು ತಿಳಿಯೋಣ.

'ಶಬ್ದಾದಿಭ್ಯೋಽಂತಃ ಪ್ರತಿಷ್ಠಾನಾನ್ನೇತಿ ಚೇನ್ನ ತಥಾ ದೃಷ್ಟ್ಯುಪದೇಶಾದಸಂಭವಾಯತ್ಪುರುಷ-ವಿಧಮಪಿ ಚೈನಮಮಧೀಯತೇ'

ಅಗ್ನಿಶಬ್ದ ಪ್ರಯೋಗ ಮೊದಲಾದ ಕಾರಣಗಳಿಂದ ವೈಶ್ವಾನರನು ಜಾಠರಾಗ್ನಿಯೆಂದು ಹೇಳಬಾರದು. ಏಕೆಂದರೆ ಜಾಠರಾಗ್ನಿಯು ಬ್ರಹ್ಮನ ಶರೀರವಾಗಿದೆಯೆಂದು ಉಪಾಸನೆ ಮಾಡುವುದಕ್ಕಾಗಿ ಅಗ್ನ್ಯಾದಿ ಶಬ್ದಗಳನ್ನು ವೈಶ್ವಾನರನಲ್ಲಿ ಹೇಳಲಾಗಿದೆ. ಜಾಠರಾಗ್ನಿಗೆ 'ಮೂರ್ಧೈವ ಸುತೇಜಾಃ' ಇತ್ಯಾದಿ ಹೇಳಲ್ಪಟ್ಟ ತ್ರೈಲೋಕ್ಯಶರೀರತ್ವಾದಿಗಳು ಅಸಂಭಾವಿತವಾಗಿವೆ. ಅಷ್ಟೇ ಅಲ್ಲದೆ 'ಸ ಏಷೋ ಅಗ್ನಿಃ ವೈಶ್ವಾನರಃ ಯತ್ಪುರುಷಃ' ಎಂಬುದಾಗಿ ವೈಶ್ವಾನರನನ್ನು 'ಪುರುಷ' ಎನ್ನಲಾಗಿದೆ. 'ಸಹಸ್ರ ಶೀರ್ಷಾ ಪುರುಷಃ' ಎಂದು ಪುರುಷಸೂಕ್ತದಿಂದ ಪರಬ್ರಹ್ಮನೇ ವಾಚ್ಯನಾಗಬೇಕಾದ್ದರಿಂದ ಅವನೇ ವೈಶ್ವಾನರನು.

ಹೀಗೆ ರಾಮಾನುಜರು ವ್ಯಾಖ್ಯಾನಿಸಿದ್ದಾರೆ. ಇದು ತಪ್ಪು. ಜಾಠರಾಗ್ನಿಯು ಭೌತಿಕಾಗ್ನಿಯಲ್ಲಿಯೇ ಸೇರುವುದರಿಂದ ಪ್ರತ್ಯೇಕವಾಗಿ ಆಕ್ಷೇಪ ಮಾಡಿ ಉತ್ತರಿಸಲು 'ಶಬ್ದಾದಿಭ್ಯಃ' ಎಂಬ ಸೂತ್ರವು ಹೊರಡಬೇಕಾಗಿಲ್ಲ. ಆದ್ದರಿಂದ ಮೂರನೆಯ ಸೂತ್ರವ್ಯಾಖ್ಯಾನವು ಅಸಾಧುವಾಗಿದೆ. ಹಾಗೂ 'ಅತ ಏವ ನ ದೇವತಾ' ಎಂಬ ಸೂತ್ರದಲ್ಲಿ ಈ ಆಕ್ಷೇಪವನ್ನು ನಿರಾಕರಿಸಲಾಗಿದೆ. ಆದ್ದರಿಂದ ಈ ಸೂತ್ರದಲ್ಲಿ ಜಾಠರಾಗ್ನಿಯ ನಿರಾಕರಣೆ ಸರಿಯಲ್ಲ.

'ಅತ ಏವ ನ ದೇವತಾ ಭೂತಂ ಚ'

ಹಿಂದೆ ಹೇಳಿದ ಕಾರಣಗಳಿಂದಲೇ ಅಗ್ನಿದೇವತೆಯಾಗಲೀ, ಭೂತಾಗ್ನಿಯಾಗಲಿ, ವೈಶ್ವಾನರರೆನಿಸುವುದಿಲ್ಲ.

ರಾಮಾನುಜರ ಈ ಸೂತ್ರವ್ಯಾಖ್ಯಾನವು ತಪ್ಪಾಗಿದೆ. ಏಕೆಂದರೆ ನಾವು ಹೇಳಿದಂತೆ ನಾಲ್ಕನೆಯ ಸೂತ್ರವು

ಪರಪಕ್ಷನಿರಾಸಕ್ಕೋಸ್ಕರ ಹೊರಟಿದೆ ಎಂದು ವ್ಯಾಖ್ಯಾನಿಸಲು ಬರುವಾಗ ಅನ್ಯಥಾ ವರ್ಣನೆಯು ಅಯುಕ್ತವಾಗಿದೆ. ಮತ್ತು ಮೂರನೆಯ ಸೂತ್ರದಲ್ಲಿ 'ಪುರುಷಮಪಿ' ಎಂಬ ಪಾಠವನ್ನು ಇವರೂ ಸಹ ಸ್ವೀಕರಿಸಿದ್ದಾರೆ. ಇದು ಅಸಂಪ್ರಾದಾಯಿಕವಾದ ಪಾಠ.

'ಸಾಕ್ಷಾದಪ್ಯವಿರೋಧಂ ಜೈಮಿನಿಃ'

ವಿಶ್ವ ನರರನ್ನು ನಿಯಮಿಸುವ ಕಾರಣ ವೈಶ್ವಾನರ ಶಬ್ದವು ಪರಬ್ರಹ್ಮವಾಚಕವಾಗುತ್ತದೆ. ಅದರಂತೆ ಶ್ರೇಷ್ಠಸ್ಥಾನಕ್ಕೆ ಕೊಂಡೊಯ್ಯುತ್ತಾನಾದ್ದರಿಂದ ಅಗ್ನಿಶಬ್ದವು ಪರಬ್ರಹ್ಮವಾಚಕವಾಗುತ್ತದೆ. ಇದು ಜೈಮಿನಿಗಳ ಅಭಿಪ್ರಾಯ.

ಐದನೆಯ ಈ ಸೂತ್ರವ್ಯಾಖ್ಯಾನವೂ ಸಹ ಅಸಾಧುವಾಗಿದೆ. ಸಕಲ ಶಬ್ದಗಳು ವಿಷ್ಣುವಾಚಿಯಾದರೆ ಅನ್ಯತ್ರವ್ಯವಹಾರವೇ ಕೂಡುವುದಿಲ್ಲವೆಂಬ ಬಾಧಕದ ಪರಿಹಾರಕ್ಕೋಸ್ಕರ ಐದನೆಯ ಸೂತ್ರವು ಹೊರಟಿದೆಯೆಂದು ವ್ಯಾಖ್ಯಾನಿಸಲು ಬರುವಾಗ ಬೇರೆ ರೀತಿಯಾದ ವ್ಯಾಖ್ಯಾನವು ಅಯುಕ್ತವಾಗಿದೆಯೆಂದು ತಿಳಿಯಬೇಕು.

'ಅತ್ರಾಪಿ' ಎಂದರೆ ಈ ಅಧಿಕರಣದಲ್ಲಿಯೂ ಎಂದರ್ಥ.

**प्रकाशः – अपरिच्छिन्नस्येति** । अभिविमानपदोक्तस्येत्यर्थः । **'अभिव्यक्तेः'** उपासकाभिव्यक्त्यर्थं तद्बुद्धिस्थतयेति यावत् । द्युप्रभृतिप्रदेशसम्बन्धिन्यामात्र या परिच्छिन्नत्वरूपं प्रादेशमात्रत्वमित्याश्मरथ्यो मन्यत इत्यर्थः । **'अनुस्मृत्यर्थं'** उपासनार्थम् ।

'ಅಪರಿಚ್ಛಿನ್ನಸ್ಯ' ಎಂದರೆ ಅಭಿವಿಮಾನಪದದಿಂದ ಹೇಳಲ್ಪಟ್ಟ ವ್ಯಾಪ್ತತ್ವಕ್ಕೆ ಎಂದರ್ಥ. 'ಅಭಿವ್ಯಕ್ತೇಃ' ಎಂದರೆ 'ಉಪಾಸಕನ ಅಭಿವ್ಯಕ್ತಿಗೋಸ್ಕರ' ಎಂದರ್ಥ. ಬುದ್ಧಿಸೌಕರ್ಯಕ್ಕಾಗಿ ಎಂದು ತಿಳಿಯಬೇಕು. ಅಂದರೆ ದ್ಯುಲೋಕವೇ ಮೊದಲಾದ ಪ್ರದೇಶಕ್ಕೆ ಸಂಬಂಧಪಟ್ಟ ಪ್ರಾದೇಶ ಎಂಬ ಪರಿಮಾಣವುಳ್ಳವನು. ಪ್ರಾದೇಶಮಾತ್ರ ಶಬ್ದದಿಂದ ಪ್ರತಿಪಾದ್ಯನಾಗುತ್ತಾನೆಂದು ಆಶ್ಮರಥ್ಯರು ಹೇಳುತ್ತಾರೆಂದು ತಿಳಿಯಬೇಕು. 'ಅನುಸ್ಮೃತ್ಯರ್ಥಮ್' ಎಂದರೆ 'ಉಪಾಸನೆಗೋಸ್ಕರ' ಎಂದರ್ಥ.

**प्रकाशः – विकल्प इति** । अस्मन्मतरीत्या सूक्तव्यवस्थारूपैकार्थ एव नानानिमित्तोक्त्या ''लोपः शाकल्यस्य'' इत्यादाविव मुनिग्रहणेन सूचितविकल्पो युज्यते, नान्यथेत्यर्थः । **साध्येति** । ''अभिव्यक्तेः'' इत्यत्र प्रादेशमात्रत्वमिति, ''अनुस्मृतेः'' इत्यत्र पुरुषविधत्वमिति, ''सम्पत्तेः'' इत्यत्र उरःप्रभृतीनाम्। वेदित्वाद्युपदेश इत्यध्याहार इत्यर्थः ।

'ವಿಕಲ್ಪಃ' ಎಂದರೆ ನಮ್ಮ ಮತದ ಪ್ರಕಾರ ಸೂಕ್ತವ್ಯವಸ್ಥೆಯೆಂಬ ಒಂದೇ ಅರ್ಥವನ್ನು ಸಮರ್ಥಿಸುವುದಕ್ಕಾಗಿ ಅನೇಕ ನಿಮಿತ್ತಗಳನ್ನು ಭಿನ್ನಭಿನ್ನ ಋಷಿಗಳ ಪ್ರಕಾರ ಹೇಳಲಾಗಿದೆ. ವ್ಯಾಕರಣದಲ್ಲಿ

ಒಂದೇ ವಿಚಾರವನ್ನು ಬೇರೆ ಬೇರೆ ಋಷಿಗಳು 'ಲೋಪಃ ಶಾಕಲ್ಯಸ್ಯ' ಇತ್ಯಾದಿ ಸೂತ್ರಗಳಿಂದ ಹೇಳುವಂತೆ ಇಲ್ಲಿಯೂ ಸಹ ವಿಕಲ್ಪವನ್ನು ಆಶ್ರಯಿಸಿದ್ದೇವೆ. ಹೀಗೆಯೇ ಅರ್ಥವನ್ನು ಹೇಳಬೇಕು ಹೊರತು, ನೀವು ಹೇಳುವ ಅರ್ಥದಲ್ಲಿ ಭಿನ್ನಭಿನ್ನ ಮುನಿಗಳ ಗ್ರಹಣವು ವ್ಯರ್ಥವಾಗುತ್ತದೆಂದು ತಿಳಿಯಬೇಕು. ಮತ್ತು 'ಅಭಿವ್ಯಕ್ತೇಃ' ಎಂಬಲ್ಲಿ ಪ್ರಾದೇಶಮಾತ್ರತ್ವವನ್ನು 'ಅನುಸ್ಮೃತೇಃ' ಪುರುಷವಿಧತ್ವವನ್ನು, 'ಸಂಪತ್ತೇಃ' ಎಂಬಲ್ಲಿ 'ಉರಃಪ್ರಭೃತೀನಾಂ ವೇದಿತ್ವಾದ್ಯುಪದೇಶವನ್ನು' ನೀವು ಅಧ್ಯಾಹಾರ ಮಾಡಿಕೊಳ್ಳಬೇಕು. ಇದು 'ಸಾಧ್ಯಾಧ್ಯಾಹಾರ' ಎಂಬುದರ ಅಭಿಪ್ರಾಯ.

**प्रकाशः** – यद्यप्यत्र भाष्यदिशा अभिव्यक्तेर्निमित्तादग्न्यादिसूक्तनियम इत्याश्मरथ्य इत्यर्थप्रतीत्या सिद्धान्तेऽप्यध्याहारः साध्यस्याविशिष्ट इत्यतः – **प्रतिसूत्रमित्युक्तम्** । अत एव भाष्ये प्रतिसूत्रमेतदेव साध्यमुक्तम् । तथा चैकत्र अध्याहृतमेव अनुवर्तिष्यते सर्वत्रेति भावः ।

ವಾಸ್ತವಿಕವಾಗಿ ನಮ್ಮ ಸಿದ್ಧಾಂತದಲ್ಲಿಯೂ ಸಹ ಭಾಷ್ಯದಲ್ಲಿ ಹೇಳಿದಂತೆ 'ಅಭಿವ್ಯಕ್ತೇರ್ನಿಮಿತ್ತಾಗ್ನ್ಯಾದಿಸೂಕ್ತನಿಯಮಃ' ಇತಿ ಆಶ್ಮರಥ್ಯಃ ಎಂದು ಅರ್ಥವನ್ನು ಹೇಳಿದ್ದರಿಂದ ಅಧ್ಯಾಹಾರವನ್ನು ಮಾಡಿಕೊಳ್ಳಲೇಬೇಕು. ಆದ್ದರಿಂದ ಪರರಿಗೆ ಮಾತ್ರ ದೋಷ ಹೇಳಿದ್ದು ಹೇಗೆ ಸರಿಯಾಗುತ್ತದೆ ? ಎಂದರೆ ಅದಕ್ಕೋಸ್ಕರ ಗ್ರಂಥಕಾರರು 'ಪ್ರತಿಸೂತ್ರಮ್' ಎಂಬ ಪದವನ್ನು ಹೇಳಿದ್ದಾರೆ. ಆದ್ದರಿಂದಲೇ ಭಾಷ್ಯದಲ್ಲಿ ಪ್ರತಿಯೊಂದು ಸೂತ್ರಗಳಲ್ಲಿ ಒಂದೇ ಸಾಧ್ಯವನ್ನು ಹೇಳಿದ್ದಾರೆ. ಆದ್ದರಿಂದ ಒಮ್ಮೆ ಅಧ್ಯಾಹಾರ ಮಾಡಿಕೊಂಡರೆ ಸಾಕು; ಎಲ್ಲಾ ಸೂತ್ರಗಳಲ್ಲಿ ಅದು ಅನುವೃತ್ತವಾಗುತ್ತದೆ. ಹೊರತು ಪ್ರತಿಯೊಂದು ಸೂತ್ರಗಳಲ್ಲಿಯೂ ಅನುವೃತ್ತಿಯನ್ನು ಮಾಡಿಕೊಳ್ಳಬೇಕಾಗಿಲ್ಲ.

**प्रकाशः** – यद्वा – 'अभिव्यक्तेः साक्षादप्यविरोध इत्याश्यरथ्यः' इत्यादिरूपेण प्रतिसूत्रमन्वयः । 'साक्षादपि' अनन्ययोगेन मुख्यवृत्त्यैव ब्रह्मणः सर्वसूक्तप्रतिपाद्यत्वेऽपि अग्न्यादिसूक्तव्यवस्थाया अविरोध इत्याश्मरथ्यादिर्मन्यते, अभिव्यक्त्यादेः निमित्तादित्येवं रूपेणार्थोपपत्तेः अनुवृत्तस्य पर्यवसितोक्तिर्भाष्ये ।। **सूक्तनियम इति** । अतोऽस्माकं न क्वाप्यध्याहारस्तव तु प्रतिसूत्रमिति भावः ।।

ಅಥವಾ ಅಧ್ಯಾಹಾರವೇ ಬೇಡ ಎಲ್ಲದಕ್ಕೂ 'ಸಾಕ್ಷಾದಪ್ಯವಿರೋಧಃ' ಎಂಬಲ್ಲಿಯೇ ಅನ್ವಯವನ್ನು ಮಾಡಬಹುದು. 'ಅಭಿವ್ಯಕ್ತೇಃ ಸಾಕ್ಷಾದಪ್ಯವಿರೋಧಃ' ಎಂದು 'ಅನುಸ್ಮೃತೇಃ ಸಾಕ್ಷಾದಪ್ಯವಿರೋಧಃ' ಎಂದು ಅನ್ವಯವನ್ನು ಸುಲಭವಾಗಿ ಮಾಡಬಹುದು. 'ಸಾಕ್ಷಾತ್' ಎಂದರೆ ಬೇರೆ ಅರ್ಥದ ವ್ಯವಧಾನವಿಲ್ಲದೆ; ಮುಖ್ಯವೃತ್ತಿಯಿಂದಲೇ ಬ್ರಹ್ಮನು ಸಕಲ ಸೂತ್ರಗಳಿಂದ ಪ್ರತಿಪಾದ್ಯನಾಗಿದ್ದರೂ ಸಹ ಅಗ್ನ್ಯಾದಿ ಸೂಕ್ತಗಳ ವ್ಯವಸ್ಥೆಗೆ ವಿರೋಧವಿಲ್ಲ. ಹೀಗೆ ಆಶ್ಮರಥ್ಯಾದಿ ಋಷಿಗಳು ಹೇಳುತ್ತಾರೆ. ಹಾಗಾದರೆ

ಆಚಾರ್ಯರು ಭಾಷ್ಯದಲ್ಲಿ ಅನುವೃತ್ತಿಯನ್ನು ಮಾಡಿದ್ದಾರಲ್ಲವೇ? ಎಂದರೆ ಪರ್ಯವಸಿತವಾದ ಅರ್ಥವನ್ನು ಹೇಳಿದ್ದಾರೆ ಹೊರತು, ಅನುವೃತ್ತಿಯನ್ನು ಮಾಡಿಲ್ಲ. ಸೂಕ್ತನಿಯಮಃ ಎಂದರೆ ಆದ್ದರಿಂದ ನಮ್ಮ ಸಿದ್ಧಾಂತದಲ್ಲಿ ಯಾವ ಸೂತ್ರದಲ್ಲಿಯೂ ಅಧ್ಯಾಹಾರವನ್ನು ಮಾಡಬೇಕಾಗಿಲ್ಲ. ನಿಮ್ಮ ಸಿದ್ಧಾಂತದಲ್ಲಿ ಪ್ರತಿಸೂತ್ರಗಳಲ್ಲಿಯೂ ಅಧ್ಯಾಹಾರವನ್ನು ಮಾಡಬೇಕೆಂದು ತಿಳಿಯಬೇಕು.

**प्रकाशः** – यत्तु उक्तरीत्या वैश्वानरशब्दस्य जाठरादिषु चतुर्षु साधारणस्य शिवासाधारणब्रह्माऽत्मादिशब्दैर्विशेषणाच्छिव एव वैश्वानर इति, तदप्येतेनैव निरस्तम्,

ಶೈವರ ಅಧಿಕರಣ ಶರೀರ ಹೀಗಿದೆ - ವೈಶ್ವಾನರ ಶಬ್ದವು ಜಾಠರಾಗ್ನಿ, ಭೂತಾಗ್ನಿ, ಅಗ್ನಿದೇವತೆ, ಜೀವ ಈ ನಾಲ್ಕರಲ್ಲಿ ಸಾಧಾರಣವಾಗಿದೆ. ಆದರೆ ಶಿವನಲ್ಲಿ ಅಸಾಧಾರಣವಾದ ಬ್ರಹ್ಮಶಬ್ದ, ಆತ್ಮಶಬ್ದಗಳನ್ನು ವಿಶೇಷಣವನ್ನಾಗಿ ಹೇಳಿರುವುದರಿಂದ ಶಿವನೇ ವೈಶ್ವಾನರನಾಗುತ್ತಾನೆಂದು ಸಿದ್ಧಾಂತ.

ಇವರ ಮತವೂ ಸಹ ಅದ್ವೈತಮತದ ನಿರಾಕರಣೆಯಿಂದಲೇ ನಿರಾಕೃತವಾಯಿತು.

**प्रकाशः** – जाठरस्य पार्थक्यायोगादेरुक्तत्वात् । ब्रह्माऽत्मादिशब्दस्य विष्ण्वेकनिष्ठताया भाष्यादौ बहुधा प्रतिपादनात् । "अहं वैश्वानरः" इति स्मृतिविरोधात् । पुरुषसूक्तविरोधाच्च, पुरुषसूक्तवैष्णवतायाश्च भाष्ये स्पष्टत्वात् । सूत्रार्थनिरासप्रकारस्तु केषाञ्चिन्मत इव ध्येयः अनतिभिन्नार्थत्वात् सूत्राणामिति ॥

ಜಾಠರಾಗ್ನಿಯು ಭೌತಿಕಾಗ್ನಿಯ ಪ್ರಭೇದವೇ ಆಗಿರುವುದರಿಂದ ಪ್ರತ್ಯೇಕವಾಗಿ ಅದನ್ನು ಪರಿಗಣಿಸಿದ್ದು ಅಯುಕ್ತವಾಗಿದೆ. ಮತ್ತು ಬ್ರಹ್ಮಶಬ್ದ, ಆತ್ಮಶಬ್ದ ಮೊದಲಾದವು ಕೇವಲ ವಿಷ್ಣುನಿಷ್ಠವಾಗಿವೆಯೆಂದು ಭಾಷ್ಯಾದಿಗಳಲ್ಲಿ ಅನೇಕ ಪ್ರಮಾಣಗಳಿಂದ ಸಾಧಿಸಲಾಗಿದೆ. ಮತ್ತು 'ಅಹಂ ವೈಶ್ವಾನರಃ' ಎಂಬುದಾಗಿ ಶ್ರೀಕೃಷ್ಣನು ತನ್ನನ್ನು ವೈಶ್ವಾನರನೆಂದು ಹೇಳಿಕೊಂಡಿದ್ದರಿಂದ ಶಿವನನ್ನು ವೈಶ್ವಾನರನೆಂದು ಹೇಳಿದರೆ ಗೀತಾಸ್ಮೃತಿಯ ವಿರೋಧವು ಬರುತ್ತದೆ. ಪುರುಷಸೂಕ್ತದ ವಿರೋಧವೂ ಸಹ ಬರುತ್ತದೆ. ಏಕೆಂದರೆ ಪುರುಷಸೂಕ್ತವು ವಿಷ್ಣುವನ್ನೇ ಪ್ರತಿಪಾದಿಸುತ್ತದೆಂದು ಭಾಷ್ಯದಲ್ಲಿ ಸ್ಪಷ್ಟಪಡಿಸಿದ್ದಾರೆ. ಶೈವರ ಸೂತ್ರಾರ್ಥ ನಿರಾಕರಣ ಪ್ರಕಾರವನ್ನು ರಾಮಾನುಜ ಮತದಂತೆ ತಿಳಿಯಬೇಕು. ಅವರಿಗಿಂತ ವಿಶೇಷವಾದ ಅರ್ಥವನ್ನೇನೂ ಇವರು ಹೇಳುವುದಿಲ್ಲವಾದ್ದರಿಂದ ಪ್ರತ್ಯೇಕವಾಗಿ ನಿರಾಕರಿಸಬೇಕಾಗಿಲ್ಲ.

**प्रकाशः** – "शब्दादिभ्यः" इति सूत्रे "मूर्धानं दिवोऽरतिं पृथिव्याः" इत्यस्यामृचि गतिसाधनत्वादरतिः पादः पृथिव्याः कारणमिति व्याख्यातम् । तद्व्यनक्ति – गतीति ।

ವೈಶ್ವಾನರಾಧಿಕರಣ (೧-೨-೭)

ಟೀಕೆಯ ಕಠಿಣಪದಾರ್ಥಗಳನ್ನು ಗ್ರಂಥದಲ್ಲಿ ಹೇಳುತ್ತಿದ್ದಾರೆ. 'ಶಬ್ದಾದಿಭ್ಯಃ' ಎಂಬ ಸೂತ್ರದಲ್ಲಿ 'ಮೂರ್ಧಾನಂ ದಿವೋಽರತಿಂ ಪೃಥಿವ್ಯಾಃ' ಎಂಬ ಋಜ್ ಮಂತ್ರದಲ್ಲಿ ಅರತಿ ಶಬ್ದಕ್ಕೆ ಗತಿಸಾಧನವಾದ್ದರಿಂದ ಪಾದ ಎಂಬರ್ಥವನ್ನು ವಿವಕ್ಷಿಸಬೇಕು. ಭಗವಂತನ ಪಾದವು ಪೃಥಿವಿಗೆ ಕಾರಣವಾಗಿದೆಯೆಂದು ಟೀಕೆಯಲ್ಲಿ ವ್ಯಾಖ್ಯಾನಿಸಿದ್ದಾರೆ. ಅದನ್ನೇ 'ಗತಿ' ಇತ್ಯಾದಿ ವಾಕ್ಯದಿಂದ ವ್ಯಾಖ್ಯಾನಿಸುತ್ತಿದ್ದಾರೆ.

**प्रकाशः** – अरतिशब्दे गतिरुच्यते । पादस्य तत्साधनत्वात्, कार्यगमनेन तत्साधनं पादो लक्ष्यते । अरतिशब्दार्थो गतिः कथमित्यतोऽवयवार्थेनेत्याह – लोक इति । नञो विरुद्धार्थत्वाद् रतिविरुद्धा अरतिरिति गतिरेवोच्यत इति ।

'ಅರತಿ' ಶಬ್ದಕ್ಕೆ ಗತಿ ಎಂದರ್ಥ. ಪಾದವು ಗಮನಕ್ಕೆ ಸಾಧನವಾದ್ದರಿಂದ ಲಕ್ಷಣಯಾ ಪಾದವನ್ನು ವಿವಕ್ಷಿಸಬೇಕು. ಅರತಿ ಶಬ್ದಕ್ಕೆ ಗತಿಯೆಂಬರ್ಥವನ್ನು ಹೇಗೆ ವಿವಕ್ಷಿಸುತ್ತೀರಿ? ಎಂಬ ಪ್ರಶ್ನೆಗೆ ಅವಯವಾರ್ಥದಿಂದ ಎಂದು 'ಲೋಕ' ಎಂಬ ವಾಕ್ಯದಲ್ಲಿ ಹೇಳಿದ್ದಾರೆ. 'ನಞ್'ಗೆ ವಿರುದ್ಧ ಎಂಬರ್ಥವನ್ನು ವಿವಕ್ಷಿಸಿದಾಗ ರತಿಗೆ ವಿರುದ್ಧವಾದ್ದರಿಂದ ಅಂದರೆ ಸುಖಕ್ಕೆ ವಿರುದ್ಧವಾದ್ದರಿಂದ ಅರತಿ ಶಬ್ದದಿಂದ ಗತಿಯು ವಾಚ್ಯವಾಗುತ್ತದೆಂದು ತಿಳಿಯಬೇಕು. ನಡೆಯುವುದರಿಂದ ದುಃಖವೇ ಆಗುತ್ತದೆ ಹೊರತು, ಸುಖವಾಗುವುದಿಲ್ಲ.

**प्रकाशः** – तत्वप्रदीपे तु – 'न रतिर्येनेति सोऽरतिः पादः इत्यर्थः' इत्युक्तम्'

ತತ್ತ್ವಪ್ರದೀಪದಲ್ಲಿ - 'ನ ರತಿಃ ಯೇನ ಸಃ ಅರತಿಃ' ಎಂದು ವ್ಯುತ್ಪತ್ತಿಯನ್ನು ಮಾಡಿದ್ದರಿಂದ 'ಅರತಿ' ಶಬ್ದಕ್ಕೆ 'ಪಾದ' ಎಂಬರ್ಥವನ್ನು ಹೇಳಿದ್ದಾರೆ. ಈ ಪಕ್ಷದಲ್ಲಿ ಲಕ್ಷಣಾ ಮಾಡಬೇಕಾಗಿಲ್ಲ.

**प्रकाशः** – ''सम्पत्तेः'' इति सूत्रव्याख्यायाम् । ''अत्र व्यवहारस्योपचरितत्वाङ्गीकारे प्रागुक्तैवानुपपत्तिः'' इत्येतद्दुर्गमार्थत्वाद्व्यनक्ति – वैदिकस्येति ।

'ಸಂಪತ್ತೇರಿತಿ ಜೈಮಿನಿಸ್ತಥಾಹಿದರ್ಶಯತಿ' ಎಂಬ ಸೂತ್ರವನ್ನು ವ್ಯಾಖ್ಯಾನ ಮಾಡುವಾಗ ಟೀಕೆಯಲ್ಲಿ 'ಅತ್ರ ವ್ಯವಹಾರಸ್ಯೋಪಚರಿತತ್ವಾಂಗೀಕಾರೇ ಪ್ರಾಗುಕ್ತೈವಾನುಪಪತ್ತಿಃ' ಎಂದು ಹೇಳಿದ್ದಾರೆ. ಈ ವಾಕ್ಯವು ಏನನ್ನು ಹೇಳಲು ಹೊರಟಿದೆ ಎಂದು ಸುಲಭವಾಗಿ ಅರ್ಥವಾಗುವುದಿಲ್ಲ. ಅದಕ್ಕೋಸ್ಕರ ಗ್ರಂಥಕಾರರು 'ವೈದಿಕಸ್ಯ' ಎಂದು ವ್ಯಾಖ್ಯಾನಿಸುತ್ತಿದ್ದಾರೆ.

**प्रकाशः** – ''विश्वं हरिमारादरमुपास्ते'' इति श्रुतौ 'अरम्'

इत्यस्यार्थाप्रतीतेराह – भाष्येति । एवेति टीकाकारानुक्तेर्निमित्तमेतदिति सूचितम् । शिष्टमुपन्यासमुखेन विशदीकृतमिति भावः । पेटिकासङ्गतिस्तु प्रागेवोक्तेति ॥

॥ इति वैश्वानराधिकरणम् ॥

**॥ इति श्रीमत्सर्वतन्त्रस्वतन्त्रसुधीन्द्रतीर्थगुरुपादशिष्यराघवेन्द्रयतिकृते चन्द्रिकाप्रकाशे प्रथमाध्यायस्य द्वितीयः पादः सम्पूर्णः ॥२॥**

'ವಿಶ್ವಂ ಹರಿಮಾರಾದರಮುಪಾಸ್ತೇ' ಎಂಬ ಶ್ರುತಿಯಲ್ಲಿ 'ಆರಮ್' ಎಂಬ ಪದದ ಅರ್ಥವು ಸ್ಪಷ್ಟವಾಗಿ ತಿಳಿಯದ ಕಾರಣ 'ಭಾಷ್ಯ' ಇತ್ಯಾದಿ ವಾಕ್ಯದಿಂದ ಅದನ್ನು ವಿವರಿಸುತ್ತಿದ್ದಾರೆ. 'ತತ್ವಪ್ರದೀಪೇ ಏವ' ಎಂದು ಹೇಳಿದ್ದರಿಂದ ಟೀಕೆಯಲ್ಲಿ ಹೇಳಿಲ್ಲವೆಂದು ಸೂಚಿಸಿದ್ದಾರೆ. ಟೀಕೆಯಲ್ಲಿರುವ ಉಳಿದ ಕಠಿಣಪದಗಳ ಅರ್ಥವನ್ನು ಉಪನ್ಯಾಸದಿಂದ ವ್ಯಾಖ್ಯಾನಿಸುವಾಗಲೇ ವಿವರಿಸಿದ್ದಾಗಿದೆ. ಪೇಟಿಕಾಸಂಗತಿಯನ್ನೂ ಸಹ ಹಿಂದೆಯೇ ಹೇಳಿದ್ದೇವೆ.

ಇಲ್ಲಿಗೆ ಸರ್ವತಂತ್ರ ಸ್ವತಂತ್ರರಾದ ಶ್ರೀಶ್ರೀಸುಧೀಂದ್ರತೀರ್ಥಗುರುಗಳ ಶಿಷ್ಯರಾದ
ಶ್ರೀರಾಘವೇಂದ್ರತೀರ್ಥಯತಿಗಳಿಂದ ರಚಿಸಲ್ಪಟ್ಟ ಚಂದ್ರಿಕಾಪ್ರಕಾಶದಲ್ಲಿ
ಪ್ರಥಮಾಧ್ಯಾಯದ ದ್ವಿತೀಯ ಪಾದವು ಸಮಾಪ್ತವಾಯಿತು.

* * * * * * *

ಶ್ರೀ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀಕೃಷ್ಣಾರ್ಪಣಮಸ್ತು.

गुरुराजीयम् – वैश्वानरोपाधेरिति बहुव्रीहिः ॥ गतिसाधनत्वादरतिरिति ॥ रतिशब्दस्य रमणे नञश्च विरोधे प्रसिद्धत्वात् क्लृप्तप्रसिद्धिबललब्धलक्षणाऽपि शक्तितुल्येति भावः । अत्र टीकायामासन्नित्यस्य तयेत्युक्तिः पश्यन् नित्यादिनाऽऽस्य शब्दस्यासन्नादेशविधानादासन्निति 'सुपां सुलुक्' इति विभक्तिलोपविधानाच्चेति ज्ञातव्यम् ॥ प्रगुक्तैवेति ॥ विष्णुसूक्तमित्यादौ सर्वत्र देवतासम्बन्धेनैव सूक्तव्यवहारात् प्रतिपाद्यप्रतिपादकसम्बन्ध एव मुख्यः सूक्तादिव्यवहारप्रयोजक इत्यभिप्रेत्याग्न्यादिसूक्तेषु मुख्यप्रयोजकस्य बाधादुपचारत्वं सूक्तानामुक्तम् । भावबोधे

तु षष्ठ्यर्थस्य सम्बन्धस्यैवाग्रेः सूक्तमित्यादौ निमित्तत्वात् । 'एकशतं षष्ठ्यर्थः' इति महाभाष्योक्तरीत्या सर्वेषामविशेषादेवदत्तस्य पुत्रः देवदत्तस्य पौत्रः देवदत्तस्य नप्तेत्यादाविव परम्परासम्बन्धस्यापि मुख्यत्वमभिप्रेत्य सूक्तानां मुख्यार्थतोक्तेति ज्ञेयम् ।। वैश्वानराधिकरणं सम्पूर्णम् ।।७।।

।। इति श्रीमद्विद्याधीशतीर्थपूज्यपादशिष्येण केशवभट्टारकेण विरचितायां चन्द्रिकावाक्यविवृतौ भावदीपिकायां प्रथमाध्यायस्य द्वितीयपादः समाप्तः ।। २ ।।

।। श्री मध्वेशार्पणमस्तु ।।




ವೈಶ್ವಾನರನು ಬ್ರಹ್ಮನ ಪ್ರತೀತ ಹಾಗೂ ಉಪಾಧಿಯೆಂದು 'ತಥಾ ದೃಷ್ಟ್ಯುಪದೇಶಾತ್' ಎಂಬ ಸೂತ್ರಕ್ಕೆ ಅರ್ಥೈಸುತ್ತಾರೆ. ಆದರೆ ವೈಶ್ವಾನರನು ಪ್ರತೀಕವಾದರೆ ಬ್ರಹ್ಮವಾಚಕವಾಗಲು ಹೇಗೆ ಸಾಧ್ಯ ? ಮನಸ್ಸು ಬ್ರಹ್ಮನಿಗೆ ಪ್ರತೀಕವಾದ ಮಾತ್ರದಿಂದ 'ಮನಸ್' ಶಬ್ದದಿಂದ ಬ್ರಹ್ಮನು ಪ್ರತಿಪಾದ್ಯನಾಗುತ್ತಾನೇನು? ಮತ್ತು ಅಂತಹ ಪ್ರತೀಕೋಪಾಸನೆಯಿಂದ ಯಾವುದೇ ಪಾಪಗಳೂ ಸಹ ಕ್ಷಯವಾಗುವುದಿಲ್ಲ. ಕೇವಲ ನಿರ್ಗುಣೋಪಾಸನೆಯಿಂದಷ್ಟೇ ಪಾಪಕ್ಷಯವಾಗುತ್ತದೆಂಬುದು ಅದ್ವೈತಿಗಳ ಸಿದ್ಧಾಂತ. 'ಅರ್ಭಕೌಕಸ್ತ್ವಾತ್' ಮತ್ತು 'ತಥಾದೃಷ್ಟ್ಯುಪದೇಶಾತ್' ಇತ್ಯಾದಿ ಸೂತ್ರಗಳಲ್ಲಿ ಬ್ರಹ್ಮನಿಗೆ ಪ್ರಾದೇಶ ಮಾತ್ರ ಪರಿಮಾಣವನ್ನು ಸಮರ್ಥಿಸಿದ್ದಾಗಿದೆ. ಪುನಃ ಇಲ್ಲಿಯೂ ಅದನ್ನೇ ಪ್ರತಿಪಾದಿಸಿದರೆ ಪುನರುಕ್ತಿ ಬರುತ್ತದೆಂದು ತಿಳಿಯಬೇಕು. ರಾಮಾನುಜ ಭಾಷ್ಯದಲ್ಲಿಯ 'ಅಭಿವ್ಯಕ್ತೇರಿತಿ' ಇತ್ಯಾದಿ ನಾಲ್ಕು ಸೂತ್ರಗಳು ಬೇರೆ ಬೇರೆ ವಿಷಯವನ್ನು ಪ್ರತಿಪಾದಿಸುತ್ತವೆಂದು ಹೇಳಿದ್ದಾರೆ. ಆದರೆ ಒಂದೇ ವಿಷಯದಲ್ಲಿ ಅಭಿಪ್ರಾಯ ಭೇದಗಳನ್ನು ಸೂಚಿಸುತ್ತಿದೆಯೆಂದು ಹೇಳುವುದೇ ಸ್ವರಸವಾಗುತ್ತದೆ.

# ವೈಶ್ವಾನರಾಧಿಕರಣ
(೧-೨-೭)

## ಭಾಗ -೩

ನ್ಯಾಯವಿವರಣ, ನ್ಯಾಯವಿವರಣಪಂಚಿಕಾ,
ಅಣುಭಾಷ್ಯ, ತತ್ವಮಂಜರೀ,
ತಂತ್ರದೀಪಿಕಾ, ನ್ಯಾಯಮುಕ್ತಾವಳಿ ಗ್ರಂಥಗಳ
ಸರಳ ಕನ್ನಡ ಅನುವಾದ

* * *

ಸೂತ್ರಾರ್ಥರತ್ನಾವಳಿ ಗ್ರಂಥದ ಸಂಸ್ಕೃತ ಮೂಲ

॥ ಶ್ರೀಗುರುಭ್ಯೋ ನಮಃ ॥

श्रीमदानन्दतीर्थभगवत्पादाचार्यविरचितम्

# न्यायविवरणम्

श्री जयतीर्थविरचिता

# न्यायविवरणपञ्चिका

## वैश्वानराधिकरणम् (१।२।७)

**न्यायविवरणम् – श्रुतिसाधारण्ये विशेषश्रुत्यादेर्निश्चयः । उभयत्र विशेषश्रुत्यादौ पुनः सावकाशत्वनिरवकाशत्वबलान्निश्चयः ॥७॥**

**॥ इति न्यायविवरणे प्रथमाध्यायस्य द्वितीयः पादः ॥**

ವೈಶ್ವಾನರಶ್ರುತಿಯು ಮಹಾವಿಷ್ಣುವಿನಲ್ಲಿ ಹಾಗೂ ಅಗ್ನ್ಯಾದಿದೇವತೆಗಳಲ್ಲಿ ಸಾಧಾರಣವಾಗಿದೆ. ಆದರೂ ಸಹ 'ಆತ್ಮಾನಂ ವೈಶ್ವಾನರಮುಪಾಸ್ತೇ' ಎಂಬುದಾಗಿ ವಿಷ್ಣುವಿನಲ್ಲಿ ಮಾತ್ರ ಪ್ರಸಿದ್ಧವಾದ ಆತ್ಮಪದವನ್ನು ವೈಶ್ವಾನರನಿಗೆ ವಿಶೇಷಣವನ್ನಾಗಿ ಹೇಳಿರುವುದರಿಂದ ಮತ್ತು 'ಅಹಂ ವೈಶ್ವಾನರಃ' ಇತ್ಯಾದಿಯಾದ ನಿರವಕಾಶಶ್ರುತಿಸ್ಮೃತಿಗಳ ಸಮಾಖ್ಯಾಬಲದಿಂದ ಮಹಾವಿಷ್ಣುವೇ ವೈಶ್ವಾನರನೆಂಬ ನಾಮಾತ್ಮಕಶಬ್ದದಿಂದ ಪ್ರತಿಪಾದ್ಯನಾಗುತ್ತಾನೆಂದು ನಿಶ್ಚಯಿಸಬಹುದು. ಎರಡು ಪಕ್ಷಗಳಲ್ಲಿಯೂ ವಿಶೇಷ- ಶ್ರುತಿಗಳಿದ್ದರೂ ಸಹ ಸಾವಕಾಶತ್ವ, ಹಾಗೂ ನಿರವಕಾಶತ್ವಗಳ ಬಲದಿಂದ ಭಗವಂತನೇ ಶ್ರುತಿಪ್ರತಿಪಾದ್ಯನೆಂದು ನಿಶ್ಚಯಿಸಬಹುದು.

ಇಲ್ಲಿಗೆ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತ ನ್ಯಾಯವಿವರಣದಲ್ಲಿ ಪ್ರಥಮಾಧ್ಯಾಯ ದ್ವಿತೀಯಪಾದವು ಸಮಾಪ್ತವಾಯಿತು.

श्रीमदानन्दतीर्थभगवत्पादाचार्यविरचितम्

# अणुभाष्यम्

## वैश्वानराधिकरणम् (१।२।७)

**विश्वजीवान्तरत्वाद्यैः लिङ्गैः सर्वैः युतः सः हि**

ಅಣುಭಾಷ್ಯ - ವಿಶ್ವಜೀವಾಂತರತ್ವವೆಂಬ ಲಿಂಗದಿಂದ ಯುಕ್ತನಾದ್ದರಿಂದ ಮಹಾವಿಷ್ಣುವೇ 'ವೈಶ್ವಾನರ' ಎನಿಸಿದ್ದಾನೆ. ಅಗ್ನಿ, ವಾಯು, ಸೂರ್ಯ ಮೊದಲಾದ ಪದಗಳಿಂದಲೂ ವಾಚ್ಯನಾಗಿದ್ದಾನೆ. ಅಗ್ನಿ ಸೂಕ್ತ, ಅಗ್ನಿವಿದ್ಯೆ ಮೊದಲಾದವುಗಳಿಂದಲೂ ಪ್ರತಿಪಾದ್ಯನಾಗಿದ್ದಾನೆ. ಹೀಗೆ ಅನ್ಯತ್ರಪ್ರಸಿದ್ಧವಾದ ಸಕಲ ಲಿಂಗಗಳಿಂದ ಕೂಡಿದವನೂ ಮಹಾವಿಷ್ಣುವೇ ಎಂದು ನಿರ್ಣಯವಾಯಿತು.

***

श्री आनन्दतीर्थभगवत्पादाचार्यविरचितम्

ब्रह्मसूत्राणुभाष्यम्

श्रीराघवेन्द्रतीर्थविरचिता

ब्रह्मसूत्राणुभाष्यविवृतिः

# तत्वमञ्जरी

## वैश्वानराधिकरणम् (१।२।७)

ननु दृश्यत्वाद्युज्झितः अक्षरात्परतः परो विष्णुरित्ययुक्तम् । तद्धर्मस्य सर्वगतत्वस्य छान्दोग्ये पञ्चमे 'यस्त्वेतं प्रादेशमात्रमभिविमानमात्मानं वैश्वानरमुपास्ते' इति वैश्वानरस्य अभितो विगतं मानं मर्यादा यस्येत्यभिविमानपदेन प्रतीतेः वैश्वानरशब्दस्य

**चाग्नौ रूढत्वात्, वैश्वानरे तद्धुतं, इति, 'हृदयं गार्हपत्ये' इत्यादिनोक्तहोमाधारत्व – गार्हपत्याद्यङ्गत्व - पाचकत्वाद्यनेकलिङ्गानां भावेन चाग्न्यर्थत्वात् ।**

ಹಿಂದಿನ ಅಧಿಕರಣದಲ್ಲಿ ಅದೃಶ್ಯತ್ವಗುಣವುಳ್ಳವನು ಅಕ್ಷರಾತ್ ಪರತಃ ಪರನು ವಿಷ್ಣುವೇ ಆಗಿದ್ದಾನೆಂದು ನಿರ್ಣಯಿಸಲಾಯಿತು. ಇದು ತಪ್ಪು. ಏಕೆಂದರೆ, ಅದೃಶ್ಯತ್ವಧರ್ಮವು ಮತ್ತು ಸರ್ವಗತತ್ವವು ವೈಶ್ವಾನರನ ಧರ್ಮವಾಗಿದೆಯೆಂದು ಛಾಂದೋಗ್ಯದ ಐದನೆಯ ಅಧ್ಯಾಯದಲ್ಲಿ ಹೇಳಲಾಗಿದೆ. 'ಯಸ್ತ್ವೇತಂ ಪ್ರಾದೇಶಮಾತ್ರಮಭಿವಿಮಾನಮಾತ್ಮಾನಂ ವೈಶ್ವಾನರಮುಪಾಸ್ತೇ' ಪ್ರಾದೇಶಪರಿಮಾಣವನ್ನು ಹೊಂದಿದ್ದರೂ ಎಲ್ಲೆಡೆ ವ್ಯಾಪ್ತನಾದ ವೈಶ್ವಾನರನನ್ನು ಯಾರು ಉಪಾಸನೆ ಮಾಡುತ್ತಾನೋ' ಎಂಬುದಾಗಿ. ಈ ಶ್ರುತಿಯಲ್ಲಿ ಅಭಿವಿಮಾನಂ ಎಂಬ ಪದಕ್ಕೆ 'ಅಭಿತಃ ವಿಗತಂ ಮಾನಂ ಯಸ್ಯ' ಎಂಬ ವ್ಯುತ್ಪತ್ತಿಯಿಂದ ಸರ್ವಗತನಾಗಿದ್ದಾನೆಂಬ ಅರ್ಥವು ಪ್ರತೀತವಾಗುತ್ತದೆ. ವೈಶ್ವಾನರಶಬ್ದವು ಅಗ್ನಿಯಲ್ಲಿ ರೂಢವಾಗಿದೆ. ಮತ್ತು ಹೋಮಾಧಾರತ್ವ, ಗಾರ್ಹಪತ್ಯಾದ್ಯಂಗತ್ವ, ಪಾಚಕತ್ವಮೊದಲಾದ ಅಗ್ನಿಯ ಲಿಂಗಗಳು ಈ ಪ್ರಕರಣದಲ್ಲಿ ಕೇಳಿಸುತ್ತಿವೆ. ಆದ್ದರಿಂದ ಛಾಂದೋಗ್ಯಶ್ರುತಿಯಲ್ಲಿ ಹೇಳಲ್ಪಟ್ಟ ವ್ಯಕ್ತಿಯು ಅಗ್ನಿಯೇ ಆಗಿದ್ದಾನೆ.

**विष्ण्वर्थत्वे च वैश्वानरादिशब्दानामग्न्यादौ प्रयोगस्य सूक्तविद्यान्यवस्थायाश्चायोगात् प्राचीनसर्वगतोऽप्यग्निदेवता भूतं वा । न च कालाऽकाशादेरिव अग्नाविष्णोरप्यस्तु सर्वगतत्वमिति शंक्यम् । बाधकाभावेन पूर्वत्र सर्वगतमित्यनेन अत्राभिविमानपदेन चानन्यात्तन्निरतिशयस्यैव सर्वगतत्वस्य प्रतीतेः । तस्य च द्वयोरयोगादित्यतः प्राप्तं - वैश्वानरः साधारणशब्दविशेषात् – इत्यादिसूत्रनवकम् ।**

ಒಂದು ವೇಳೆ ವೈಶ್ವಾನರನು ವಿಷ್ಣುವೇ ಆಗಿದ್ದಾನೆಂದು ಹೇಳುವುದಾದರೆ ವೈಶ್ವಾನರಾದಿಶಬ್ದಗಳನ್ನು ಅಗ್ನಿ ಮೊದಲಾದವರಲ್ಲಿ ಪ್ರಯೋಗಮಾಡುವ ವ್ಯವಸ್ಥೆಯು ಅಸಾಧುವಾಗುತ್ತದೆ. ಮತ್ತು ಇದು ಅಗ್ನಿಸೂಕ್ತ ಇದು ವಾಯುಸೂಕ್ತವೆಂಬ ವ್ಯವಸ್ಥೆಯೂ ಸಹ ತಪ್ಪಾಗುತ್ತದೆ. ಆದ್ದರಿಂದ ಹಿಂದೆ ಸರ್ವಗತನೆಂದು ಹೇಳಲ್ಪಟ್ಟವನೂ ಸಹ ಅಗ್ನಿದೇವತೆಯೇ ಆಗಲಿ. ಅಥವಾ ಜಡವಾದ ಅಗ್ನಿಯಾಗಲಿ.

ಕಾಲ ಹಾಗೂ ಆಕಾಶಗಳು ಎಲ್ಲೆಡೆ ವ್ಯಾಪ್ತವಾಗಿವೆ. ಅದರಂತೆ ಅಗ್ನಿ ಹಾಗೂ ವಿಷ್ಣು ಇಬ್ಬರೂ ಸಹ ಎಲ್ಲೆಡೆ ವ್ಯಾಪ್ತರಾಗಿರಬಹುದಲ್ಲವೇ? ಎಂದೂ ಶಂಕಿಸಬಾರದು. ಏಕೆಂದರೆ, ಹಿಂದೆ ಅದೃಶ್ಯತ್ವಗುಣವುಳ್ಳ ವ್ಯಕ್ತಿಯಲ್ಲಿ ಹೇಳಲ್ಪಟ್ಟ ಸರ್ವಗತತ್ವವು ಹಾಗೂ ಛಾಂದೋಗ್ಯದಲ್ಲಿ ಅಭಿವಿಮಾನ ಎಂಬ ಪದದಿಂದ ಹೇಳಲ್ಪಟ್ಟ ಸರ್ವಗತತ್ವವು ಮತ್ತೊಬ್ಬರ ಅಧೀನವಾಗದೇ ನಿರತಿಶಯವಾದ ಧರ್ಮವುಳ್ಳದ್ದಾಗಿದೆ. ಎಂದು ನಿರ್ಣಯಿಸಲಾಗಿದೆ. ಈ ಅರ್ಥವನ್ನು ಸ್ವೀಕರಿಸಲು ಯಾವುದೇ ಬಾಧಕಗಳು ಇರುವುದಿಲ್ಲ. ಸ್ವತಂತ್ರವಾದ ನಿರತಿಶಯವಾದ ಸರ್ವಗತತ್ವವು ಇಬ್ಬರಲ್ಲಿ ಬರಲು ಸಾಧ್ಯವಿಲ್ಲ. ಆದ್ದರಿಂದ ಲೋಕರೂಢಿಯಂತೆ ಮತ್ತು ಶ್ರುತಿಪ್ರಸಿದ್ಧಿಯಂತೆ ವೈಶ್ವಾನರಶಬ್ದವಾಚ್ಯನು ಮತ್ತು ಸರ್ವಗತನೂ ಅಗ್ನಿಯೇ ಆಗುತ್ತಾನೆ. ಸರ್ವಗತನಾದ್ದರಿಂದ ಅದೃಶ್ಯತ್ವಗುಣವುಳ್ಳವನೂ ಸಹ ಅಗ್ನಿಯೇ ಆಗುತ್ತಾನೆ.

ಈ ಪೂರ್ವಪಕ್ಷವನ್ನು ನಿರಾಕರಿಸುವುದಕ್ಕಾಗಿ 'ವೈಶ್ವಾನರಃ ಸಾಧಾರಣಶಬ್ದವಿಶೇಷಾತ್' ಎಂಬ ಒಂಭತ್ತು ಸೂತ್ರಗಳು ಹೊರಟಿವೆ.

**तदर्थः – विश्वजीवान्तरत्वाद्यैर्लिङ्गैः सर्वैर्युतः स हीति । एको विष्णुरेवेत्यन्वेति । स प्राक् सर्वगतत्वादिनोक्तः एको विष्णुरेव ।**

ಈ ಒಂಭತ್ತುಸೂತ್ರಗಳ ಅಭಿಪ್ರಾಯವನ್ನು "ವಿಶ್ವಜೀವಾಂತರತ್ವಾದ್ಯೈಃ ಲಿಂಗೈಃ ಸರ್ವೈರ್ಯುತಃ ಸ ಹಿ" ಎಂಬ ಮಾತಿನಿಂದ ಅಣುಭಾಷ್ಯದಲ್ಲಿ ಸಂಗ್ರಹಿಸಿದ್ದಾರೆ. 'ಏಕೋ ವಿಷ್ಣುರೇವ' ಎಂಬುದನ್ನು ಇದರ ಜೊತೆಗೆ ಅನ್ವಯಮಾಡಬೇಕು. ಹಿಂದೆ ಸರ್ವಗತತ್ವಾದಿ ಧರ್ಮಗಳಿಂದ ಪ್ರತಿಪಾದ್ಯನಾದ ಒಬ್ಬನೇ ವಿಷ್ಣು ವೈಶ್ವಾನರಾದಿಶಬ್ದಗಳಿಂದಲೂ ಸಹ ಪ್ರತಿಪಾದ್ಯನಾಗಿದ್ದಾನೆ.

**यौगिकवैश्वानरशब्दितविश्वजीवान्तरत्वाद्यैः होमाधारत्वगार्हपत्याद्यङ्गत्वाद्यैर्लिङ्गैर्युतो वैश्वानराग्न्यादिशब्दैस्तत्सूक्तैः तद्विद्याभिश्च प्रतिपाद्य इति यावत् । नत्वग्न्यादिदेवताभूतं चेत्यर्थः ।**

ಯೌಗಿಕವಾದ ವೈಶ್ವಾನರಮೊದಲಾದ ಶಬ್ದಗಳಿಂದ ತಿಳಿಯಲ್ಪಡುವ ವಿಶ್ವಜೀವಾಂತರತ್ವವೇ ಮೊದಲಾದ ಲಿಂಗಗಳಿಂದ ಹಾಗೂ ಹೋಮಾಧಾರತ್ವ, ಗಾರ್ಹಪತ್ಯಾದ್ಯಂಗತ್ವ ಮೊದಲಾದ ಲಿಂಗಗಳಿಂದ ಕೂಡಿದವನಾಗಿ ವೈಶ್ವಾನರ, ಅಗ್ನಿ, ಮೊದಲಾದ ನಾಮಾತ್ಮಕಶಬ್ದಗಳಿಂದ ವಿಷ್ಣುವೇ ಪ್ರತಿಪಾದ್ಯನಾಗಿದ್ದಾನೆ. ಅಷ್ಟೇ ಅಲ್ಲದೆ, ಅಂತಹ ಸೂಕ್ತಗಳಿಂದಲೂ ಸಹ ಪ್ರತಿಪಾದ್ಯನಾಗಿದ್ದಾನೆ. ಹೊರತು ಅಗ್ನಿದೇವತೆಯಾಗಲೀ, ಪಂಚಭೂತಗಳಲ್ಲಿ ಸೇರಿರುವ ಜಡವಾದ ಅಗ್ನಿಯಾಗಲೀ ವೈಶ್ವಾನರ ಮೊದಲಾದ ಶಬ್ದಗಳಿಂದ ಪ್ರತಿಪಾದ್ಯವಾಗುವುದಿಲ್ಲ.

**कुतः । लिङ्गै सर्वैर्युतो स हि - इत्यावृत्तिः । लिङ्गशब्दोऽत्र प्रमापकमात्रपरः । आत्मश्रुतिप्रकरणश्रुतिस्मृतिसमाख्याभिर्युतत्वादित्यर्थः ।**

ಏಕೆ ಎಂಬ ಪ್ರಶ್ನೆಗೆ "ಲಿಂಗೈಃ ಸರ್ವೈರ್ಯುತೋ ಹಿ" ಎಂಬುದನ್ನು ಆವೃತ್ತಿಮಾಡಿಕೊಂಡು ಉತ್ತರವನ್ನು ತಿಳಿಯಬೇಕು. ಲಿಂಗಶಬ್ದಕ್ಕೆ 'ಯಥಾರ್ಥಜ್ಞಾನವನ್ನು ಹುಟ್ಟಿಸುವ ಪ್ರಮಾಣಗಳು' ಎಂದರ್ಥ. ಆತ್ಮಶಬ್ದ, ಪ್ರಕರಣ, ಶ್ರುತಿ, ಸ್ಮೃತಿಗಳ ಸಮಾಖ್ಯಾಪ್ರಮಾಣ ಇವುಗಳಿಂದೆಲ್ಲ ಕೂಡಿರುವ ಕಾರಣ ವಿಷ್ಣುವೇ ವೈಶ್ವಾನರನಾಗುತ್ತಾನೆ.

'वैश्वानरमात्मानम्' इत्यात्मश्रुतेः, 'को न आत्मा किं ब्रह्म' इत्याद्युपक्रमेणास्य ब्रह्मप्रकरणत्वात्, 'शीर्ष्णो द्यौः समवर्तत' इत्यादिना पुरुषसूक्तोक्तस्य 'मूर्धैव सुतेजाः' इत्यादिना वैश्वानरविद्यायामाम्नानेनार्थतः पुरुषसूक्तोक्तसमाख्यानात्, 'अहं वैश्वानरो भूत्वा' इति गीतासमाख्यानाच्चेति च ।

'ವೈಶ್ವಾನರಮಾತ್ಮಾನಂ' ಎಂಬುದಾಗಿ ಆತ್ಮಶ್ರುತಿಯ ಬಲದಿಂದ, 'ಕೋ ನ ಆತ್ಮಾ ಕಿಂ ಬ್ರಹ್ಮ' ಎಂದು ಪ್ರಾರಂಭವಾಗುವ ಕಾರಣ ಇದು ಬ್ರಹ್ಮಪ್ರಕರಣವೇ ಆಗಿದೆಯಾದ್ದರಿಂದ, 'ಶೀರ್ಷ್ಣೋ ದ್ಯೌಃ ಸಮವರ್ತತ' ಎಂಬುದಾಗಿ ಪುರುಷಸೂಕ್ತದಲ್ಲಿ ಯಾವವ್ಯಕ್ತಿಯು ಪ್ರತಿಪಾದ್ಯನಾಗಿದ್ದಾನೋ ಅವನೇ 'ಮೂರ್ಧೈವ ಸುತೇಜಾಃ' ಇತ್ಯಾದಿಯಾದ ವೈಶ್ವಾನರವಿದ್ಯೆಯಲ್ಲಿ ಪ್ರಸಕ್ತವಾದ ವಾಕ್ಯಗಳಿಂದಲೂ ಸಹ ಪ್ರತಿಪಾದ್ಯನಾಗಿದ್ದಾನೆ. ಆದ್ದರಿಂದ ಪುರುಷಸೂಕ್ತದ ಸಮಾಖ್ಯಾಪ್ರಮಾಣವನ್ನು ಹೇಳಿದಂತಾಯಿತು. ಈ ಸಮಾಖ್ಯಾದಿಂದ ಅಷ್ಟೇ ಅಲ್ಲದೆ 'ಅಹಂ ವೈಶ್ವಾನರೋ ಭೂತ್ವಾ' ಎಂಬುದಾಗಿ ಭಗವದ್ಗೀತೆಯ ವಾಕ್ಯದ ಸಮಾಖ್ಯಾಪ್ರಮಾಣವೂ ಸಹ ಇರುತ್ತದೆಂದು ತಿಳಿಯಬೇಕು.

**अग्न्यादिलिङ्गानां विष्णावुपासनार्थत्वेन सावकाशत्वस्य विश्वजीवान्तरत्वोक्त्यैव सर्वशब्दमुख्यार्थविष्णुसम्बन्धादन्यत्र ह्यानाद्यर्थशब्दप्रयोगस्य तत्तत्सूक्तविद्याप्रतिपाद्यस्य विष्णोः उपासककर्तृकानु-स्मृत्यभिव्यक्तिप्राप्त्याऽधिष्ठानानाम् अग्न्यादीनां व्यवस्थया 'पृथग्रूपाणि विष्णोस्तु' इत्यादिऋग्भाष्योक्तदिशा नामरूपभेदव्यवस्थया च सूक्तादिव्यवस्थायाश्चोपपत्तेरिति भावः ।**

ವೈಶ್ವಾನರವಿದ್ಯೆಯಲ್ಲಿ ಅಗ್ನ್ಯಾದಿಲಿಂಗಗಳು ಏಕೆ ಹೇಳಲ್ಪಟ್ಟಿವೆ ಎಂದರೆ ವಿಷ್ಣುವನ್ನು ಆ ಕ್ರಮದಲ್ಲಿ ಉಪಾಸನೆ ಮಾಡಬೇಕೆಂದು ವಿವಕ್ಷೆಯಿರುವ ಕಾರಣದಿಂದ. ಹೀಗೆ ಅವೆಲ್ಲವೂ ವಿಷ್ಣುವಿನಲ್ಲಿ ಸಾವಕಾಶವಾಗಿವೆ. ವಿಶ್ವಜೀವಾಂತರತ್ವವೇ ಮೊದಲಾದ ಲಿಂಗಗಳಿಂದ ವೈಶ್ವಾನರವೇ ಮೊದಲಾದ ಶಬ್ದಗಳು ಮುಖ್ಯತಃ ಸರ್ವಶಬ್ದಪ್ರತಿಪಾದ್ಯನಾದ ವಿಷ್ಣುವಿನ ಪ್ರತಿಪಾದಕಗಳಾಗಿವೆಯೆಂದು ತಿಳಿಯುತ್ತದೆ. ಜ್ಞಾನಿಗಳು ಭಗವಂತನ ಸನ್ನಿಧಾನದಿಂದ ಲೌಕಿಕ ಪದಾರ್ಥಗಳಲ್ಲಿ ಆಯಾ ಶಬ್ದಗಳನ್ನು ಪ್ರಯೋಗಿಸುತ್ತಾರೆ. ಹಾಗೂ ಅಜ್ಞಾನಿಗಳು ಅಜ್ಞಾನದಿಂದ ಅಗ್ನ್ಯಾದಿಗಳಲ್ಲಿ ಪ್ರಯೋಗಿಸುತ್ತಾರೆ. ಮತ್ತು ಎಲ್ಲ ಸೂಕ್ತಗಳಿಂದಲೂ ವಿಷ್ಣುವೇ ಪ್ರತಿಪಾದ್ಯನಾಗಿದ್ದಾನೆ. ಆದರೂ ಸಹ ಉಪಾಸಕರ ಅನುಸಂಧಾನಕ್ಕೋಸ್ಕರ ಆಯಾ ರೂಪಗಳಲ್ಲಿ ವಿಷ್ಣುವಿನ ಸನ್ನಿಧಾನ ಹಾಗೂ ವಿಷ್ಣುವಿನ ಪ್ರಾಪ್ತಿ ದೇವತೆಗಳಲ್ಲಿರುವ ವಿಷ್ಣುವಿನ ಅಧಿಷ್ಠಾನಸಾಮರ್ಥ್ಯ ಇವುಗಳನ್ನು ಅನುಸರಿಸಿ ಅಗ್ನಿಸೂಕ್ತ, ವಾಯುಸೂಕ್ತ ಇತ್ಯಾದಿಯಾದ ವ್ಯವಸ್ಥೆಯನ್ನು ಮಾಡಲಾಗಿದೆ. 'ಪೃಥಗ್‌ರೂಪಾಣಿ ವಿಷ್ಣೋಸ್ತು' ಇತ್ಯಾದಿಯಾಗಿ ಋಗ್ಭಾಷ್ಯದಲ್ಲಿ ಹೇಳುವ ಪ್ರಕಾರ ಭಗವಂತನ ನಾಮ ಹಾಗೂ ರೂಪಗಳ ಭೇದವ್ಯವಸ್ಥೆಯಿಂದ ಸೂಕ್ತವ್ಯವಸ್ಥೆಯೂ ಸಹ ಯುಕ್ತವಾಗುತ್ತದೆಂದು ತಿಳಿಯಬೇಕು.

**स्थानैक्यैन तद्गतानामैक्योक्तिवद् वक्ष्यमाणदिशा हृदया-काशस्याङ्गुष्ठमात्रोक्तिवच्च प्रादेशमात्रत्वस्याप्युपपत्तेरिति भावः । 'हृदये सर्वशो व्यापी प्रादेशः पुरुषोत्तमः' इति षष्ठे बृहद्भाष्योक्तेः ।**

ಸ್ಥಾನೈಕ್ಯವನ್ನು ವಿವಕ್ಷಿಸಿ 'ಎಲ್ಲ ಹಸುಗಳು ಒಂದಾದವು' ಎಂಬ ಪ್ರಯೋಗವಿರುವಂತೆ ಮತ್ತು ಮುಂದೆ ಹೇಳುವ ಪ್ರಕಾರ ಹೃದಯಾಕಾಶವು ಅಂಗುಷ್ಠಪರಿಮಾಣದಲ್ಲಿರುವುದರಿಂದ ಅಲ್ಲಿರುವ ಪರಮಾತ್ಮನೂ ಸಹ ಅಂಗುಷ್ಠಪರಿಮಾಣವನ್ನು ಹೊಂದಿದ್ದಾನೆ ಎಂಬುದಾಗಿ ಪ್ರಾದೇಶಮಾತ್ರಪರಿಮಾಣವು ವಿಷ್ಣುವಿಗೆ ಸಂಬಂಧವಾಗುತ್ತದೆಂದು ತಿಳಿಯಬೇಕು. 'ಹೃದಯೇ ಸರ್ವಶೋ ವ್ಯಾಪೀ ಪ್ರಾದೇಶಃ ಪುರುಷೋತ್ತಮಃ'

ಎಲ್ಲೆಡೆ ವ್ಯಾಪ್ತನಾದ ಭಗವಂತನು ಹೃದಯದಲ್ಲಿ ಪ್ರಾದೇಶಪರಿಮಾಣದಲ್ಲಿದ್ದಾನೆಂದು ಬೃಹದಾರಣ್ಯಕದ ಆರನೆಯ ಅಧ್ಯಾಯದ ಭಾಷ್ಯದಲ್ಲಿ ಹೇಳಿರುತ್ತಾರೆ.

अत्र 'श्रुतिर्लिङ्गाधिका परा' इति अनुभाष्ये वैश्वानरशब्दस्य लोकतोऽग्नौ रूढिमाश्रित्य नामत्वोक्तावपि इह विष्णौ यौगिकत्वाल्लिङ्गत्वोक्तिरविरुद्धा ।

ಶ್ರೀಮದಾಚಾರ್ಯರು 'ಶ್ರುತಿರ್ಲಿಂಗಾಧಿಕಾ ಪರಾ' ಎಂಬುದಾಗಿ ಅನುವ್ಯಾಖ್ಯಾನದಲ್ಲಿ ವೈಶ್ವಾನರ ಶಬ್ದವನ್ನು ಲೌಕಿಕರೂಢಿಯಿಂದ ಅಗ್ನಿಯಲ್ಲಿರುವ ನಾಮಾತ್ಮಕವೆಂದು ಹೇಳಿದ್ದಾರೆ. ಆದರೆ ಅಣುಭಾಷ್ಯದಲ್ಲಿ ವಿಶ್ವಜೀವಾಂತರತ್ವವೇ ಮೊದಲಾದ ಲಿಂಗಗಳಿಂದ ಯೌಗಿಕವಾಗಿದೆಯೆಂದಿಟ್ಟುಕೊಂಡು ಲಿಂಗಾತ್ಮಕವೆಂದು ಹೇಳಿದ್ದಾರೆ. ಆದ್ದರಿಂದ ಎರಡೂ ಗ್ರಂಥಗಳಿಗೆ ವಿರೋಧವಿಲ್ಲ.

पादार्थमुपसंहरति – विश्वजीवेति । 'प्रसिद्धैरन्यवस्तुषु' इत्यस्ति । 'सर्वेषु भूतेष्वेतमेव ब्रह्म' इत्युक्तविश्वजीवान्तरस्थत्वाद्यैरन्यवस्तुषु प्रसिद्धैः सर्वलिङ्गैर्युतः स एको विष्णुरेव हि । नान्यत्र प्रसिद्ध इत्यर्थः ।। ७ ।।

इति श्रीमदानन्दतीर्थभगवत्पादाचार्यविरचितस्य ब्रह्मसूत्राणुभाष्यस्य
टीकायां राघवेन्द्रयतिकृतायां तत्वमञ्जर्याख्यायां प्रथमाध्यायस्य
द्वितीयः पादः ।। २ ।।

ಎರಡನೇ ಪಾದದ ಅರ್ಥವನ್ನು ಹೇಳುತ್ತಾ ಉಪಸಂಹಾರ ಮಾಡುತ್ತಿದ್ದಾರೆ. 'ಪ್ರಸಿದ್ಧೈರನ್ಯವಸ್ತುಷು' ಎಂಬುದನ್ನು 'ವಿಶ್ವಜೀವಾಂತರತ್ವಾದ್ಯೈಃ' ಎಂಬಲ್ಲಿ ಅನ್ವಯ ಮಾಡಬೇಕು. 'ಸರ್ವೇಷು ಭೂತೇಷು ಏತಮೇವ ಬ್ರಹ್ಮ' ಎಂಬಲ್ಲಿ ಹೇಳಲ್ಪಟ್ಟ ವಿಶ್ವಜೀವಾಂತರಸ್ಥತ್ವವೇ ಮೊದಲಾದ ಬೇರೆ ಪದಾರ್ಥಗಳಲ್ಲಿ ಪ್ರಸಿದ್ಧವಾದ ಸಕಲ ಲಿಂಗಗಳಿಂದ ಯುಕ್ತನಾದವನು ಒಬ್ಬನೇ ಆದ ಮಹಾವಿಷ್ಣುವೇ ಆಗಿದ್ದಾನೆ; ಹೊರತು ಇತರ ಯಾವುದೇ ಪದಾರ್ಥಗಳು ಪ್ರತಿಪಾದ್ಯವಾಗುವುದಿಲ್ಲ. ಆದ್ದರಿಂದ ಅನ್ಯತ್ರಪ್ರಸಿದ್ಧವಾದ ಲಿಂಗಾತ್ಮಕಶಬ್ದಗಳೆಲ್ಲವೂ ಭಗವತ್ಪರವೇ ಆಗಿವೆಯೆಂದು ನಿರ್ಣಯವಾಯಿತು.

ಇಲ್ಲಿಗೆ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ರಚಿತವಾದ ಬ್ರಹ್ಮಸೂತ್ರಾಣುಭಾಷ್ಯದ
ಶ್ರೀರಾಘವೇಂದ್ರತೀರ್ಥರಿಂದ ರಚಿಸಲ್ಪಟ್ಟ ತತ್ವಮಂಜರೀಗ್ರಂಥದ ಪ್ರಥಮಾಧ್ಯಾಯದ ಎರಡನೆಯ ಪಾದದ
ಕನ್ನಡಾನುವಾದವು ಸಮಾಪ್ತವಾಯಿತು.

***

।। श्रीजानकीवदनाम्भोजराजहंसाय रामचन्द्राय नमः ।।

।। श्री गुरुभ्यो नमः ।। हरिः ॐ ।।

श्री राघवेन्द्रतीर्थविरचिता

# तन्त्रदीपिका

प्रणम्य गुणसम्पूर्णं दोषातीतं रमापतिम् ।

पूर्णबोधं गुरूनन्यान् कुर्मः सूत्रार्थसङ्ग्रहम् ।।

प्रथमाध्यायस्य द्वितीयः पादः

## वैश्वानराधिकरणम् (१।२।७)

।। ॐ वैश्वानरः साधारणशब्दविशेषात् ॐ ।। १-२-२४ ।।

अत्र नये पाचकत्वाद्यनेकलिङ्गयुतं वैश्वानरनाम समन्वीयते ।

ಈ ಅಧಿಕರಣದಲ್ಲಿ ಪಾಚಕತ್ವವೇ ಮೊದಲಾದ ಅನೇಕ ಲಿಂಗಗಳಿಂದ ಕೂಡಿರುವ 'ವೈಶ್ವಾನರ' ಎಂಬ ನಾಮಾತ್ಮಕಶಬ್ದವನ್ನು ಸಮನ್ವಯಮಾಡುತ್ತಿದ್ದಾರೆ.

तत्त्वित्यस्ति । "आत्मानं वैश्वानरमुपास्ते", "अयमग्निर्वैश्वानरः" इत्यादौ श्रुतो वैश्वानरो ब्रह्मैव न त्वग्निः । कुतः? साधारणशब्दस्य अग्नाविष्णुसाधारणस्यापि वैश्वानरशब्दस्य विशेषादात्मपदेन विशेषणादित्यर्थः ।

ಈ ಸೂತ್ರದಲ್ಲಿ 'ತತ್ತು' ಎಂಬ ಪದಗಳು ಅನುವೃತ್ತವಾಗುತ್ತವೆ. 'ಆತ್ಮಾನಂ ವೈಶ್ವಾನರಮುಪಾಸ್ತೇ' 'ಅಯಮಗ್ನಿರ್ವೈಶ್ವಾನರಃ' ಇತ್ಯಾದಿ ವಾಕ್ಯಗಳಲ್ಲಿ ಶ್ರುತನಾದ ವೈಶ್ವಾನರನು ಬ್ರಹ್ಮನೇ ಆಗಿದ್ದಾನೆ; ಹೊರತು ಅಗ್ನಿಯಲ್ಲ. ಏಕೆಂದರೆ, ಸಾಧಾರಣಶಬ್ದಸ್ಯ = ಅಗ್ನಿ ಮತ್ತು ವಿಷ್ಣು ಇಬ್ಬರಲ್ಲಿಯೂ ವೈಶ್ವಾನರಶಬ್ದವು ಸಮಾನವಾಗಿರಬಹುದು. ಆದರೆ ಆ ವೈಶ್ವಾನರಶಬ್ದಕ್ಕೆ ವಿಶೇಷಾತ್ = ಆತ್ಮಪದವು ವಿಶೇಷಣವಾಗಿರುವುದರಿಂದ ಎಂದು.

आत्मशब्दः अग्नावमुख्योऽपि युज्यत इत्यतः समाख्यामाह -

**।। ॐ स्मर्यमाणमनुमानं स्यादिति ॐ ।। १-२-२५ ।।**

ಆತ್ಮಶಬ್ದವು ಅಗ್ನಿಯಲ್ಲಿ ಅಮುಖ್ಯವಾಗಿದ್ದರೂ ಸಹ ಅಮುಖ್ಯಪ್ರಯೋಗವನ್ನು ಮಾಡಬಹುದಲ್ಲವೇ ಎಂಬ ಆಕ್ಷೇಪಕ್ಕೆ ಸಮಾಧಾನ ನೀಡಲು ಸಮಾಖ್ಯಾಪ್ರಮಾಣವನ್ನು ಹೇಳುತ್ತಿದ್ದಾರೆ. "ಓಂ ಸ್ಮರ್ಯಮಾಣಂ ಅನುಮಾನಂ ಸ್ಯಾದಿತಿ ಓಂ".

वैश्वानरो ब्रह्मेत्यस्ति । तेन इतिशब्दान्वयः । अनुमीयतेऽनेनेत्यनुमानम् । "अहं वैश्वानरः" इति गीतायां स्मर्यमाणं विष्णोर्वैश्वानरत्वमत्रापि स एव वैश्वानर इत्यस्यानुमापकं स्यादित्यर्थः ।

'ವೈಶ್ವಾನರಃ ಬ್ರಹ್ಮ' ಎಂಬ ಎರಡು ಪದಗಳನ್ನು ಅನುವೃತ್ತಿಮಾಡಿಕೊಳ್ಳಬೇಕು. ಇವುಗಳ ಜೊತೆಗೆ ಇತಿ ಶಬ್ದವು ಅನ್ವಯವನ್ನು ಹೊಂದುತ್ತದೆ. ಯಾವುದರಿಂದ ಅನುಮಾನಮಾಡಲ್ಪಡುತ್ತದೋ ಅದು 'ಅನುಮಾನ' ಎನಿಸುತ್ತದೆ. 'ಅಹಂ ವೈಶ್ವಾನರಃ' ಎಂಬುದಾಗಿ ಗೀತೆಯಲ್ಲಿ ವಿಷ್ಣುವಿಗೆ ಹೇಳಲ್ಪಟ್ಟ ವೈಶ್ವಾನರತ್ವವೇ ವೈಶ್ವಾನರಪ್ರಕರಣದಲ್ಲಿಯೂ ಸಹ ವೈಶ್ವಾನರನು ವಿಷ್ಣುವೇ ಆಗಿದ್ದಾನೆ ಎಂಬುದಕ್ಕೆ ಅನುಮಾಪಕವಾಗಿದೆ ಎಂದರ್ಥ.

"अहं वैश्वानरः" इति स्मृतिसमाख्यानादिति भावः ।

'ಅಹಂ ವೈಶ್ವಾನರಃ' ಎಂಬ ಗೀತಾಸ್ಮೃತಿರೂಪಸಮಾಖ್ಯಾಪ್ರಮಾಣವಿರುವುದರಿಂದ ವೈಶ್ವಾನರವಿದ್ಯೆಯಲ್ಲಿ ಪ್ರತಿಪಾದ್ಯನಾದವನು ವಿಷ್ಣುವೇ ಆಗಿದ್ದಾನೆಂದು ನಿರ್ಣಯವಾಯಿತು.

उक्तमाक्षिप्याह -

**।। ॐ शब्दादिभ्योऽन्तः प्रतिष्ठानान्नेति चेन्न तथा दृष्ट्युपदेशादसम्भवात् पुरुषविधमपि चैनमधीयते ॐ ।। १-२-२६ ।।**

ಹಿಂದೆ ಹೇಳಿದ್ದನ್ನು ಆಕ್ಷೇಪಮಾಡಿ ಸಮಾಧಾನವನ್ನು ನೀಡುವ ಸೂತ್ರವನ್ನು ಪಠಿಸುತ್ತಿದ್ದಾರೆ. 'ಓಂ ಶಬ್ದಾದಿಭ್ಯೋಽಂತಃಪ್ರತಿಷ್ಠಾನಾನ್ನೇತಿ ಚೇನ್ನ ತಥಾ ದೃಷ್ಟ್ಯುಪದೇಶಾದಸಂಭವಾತ್ ಪುರುಷವಿಧಮಪಿ ಚೈನಮಧೀಯತೇ ಓಂ".

आदिपदाल्लिङ्गानि । अन्तःप्रतिष्ठानेन तत्कर्मोपलक्ष्यते । "अयमग्निः" इत्याद्यग्निशब्दात् "वैश्वानरे तद् हुतम्" इति "हृदयं गार्हपत्यम्" इत्यादिना होमाद्याधारत्वगार्हपत्याद्यङ्गत्वलिङ्गेभ्यो "योऽयमन्तःपुरुषे", "येनेदमन्नं पच्यते" इत्यन्तःप्रतिष्ठानेन पचनव्यापारात् पाचकत्वेनान्तःप्रतिष्ठानादिति वा वैश्वानरो न ब्रह्मेति चेत् ।

।। श्रीजानकीवदनाम्भोजराजहंसाय रामचन्द्राय नमः ।।

।। श्री गुरुभ्यो नमः ।। हरिः ॐ ।।

श्री राघवेन्द्रतीर्थविरचिता

# तन्त्रदीपिका

प्रणम्य गुणसम्पूर्णं दोषातीतं रमापतिम् ।

पूर्णबोधं गुरूनन्यान् कुर्मः सूत्रार्थसङ्ग्रहम् ।।

प्रथमाध्यायस्य द्वितीयः पादः

## वैश्वानराधिकरणम् (१।२।७)

।। ॐ वैश्वानरः साधारणशब्दविशेषात् ॐ ।। १-२-२४ ।।

अत्र नये पाचकत्वाद्यनेकलिङ्गयुतं वैश्वानरनाम समन्वीयते ।

ಈ ಅಧಿಕರಣದಲ್ಲಿ ಪಾಚಕತ್ವವೇ ಮೊದಲಾದ ಅನೇಕ ಲಿಂಗಗಳಿಂದ ಕೂಡಿರುವ 'ವೈಶ್ವಾನರ' ಎಂಬ ನಾಮಾತ್ಮಕಶಬ್ದವನ್ನು ಸಮನ್ವಯಮಾಡುತ್ತಿದ್ದಾರೆ.

तत्त्वित्यस्ति । "आत्मानं वैश्वानरमुपास्ते", "अयमग्निर्वैश्वानरः" इत्यादौ श्रुतो वैश्वानरो ब्रह्मैव न त्वग्निः । कुतः? साधारणशब्दस्य अग्नाविष्णुसाधारणस्यापि वैश्वानरशब्दस्य विशेषादात्मपदेन विशेषणादित्यर्थः ।

ಈ ಸೂತ್ರದಲ್ಲಿ 'ತತ್ತು' ಎಂಬ ಪದಗಳು ಅನುವೃತ್ತವಾಗುತ್ತವೆ. 'ಆತ್ಮಾನಂ ವೈಶ್ವಾನರಮುಪಾಸ್ತೇ' 'ಅಯಮಗ್ನಿರ್ವೈಶ್ವಾನರಃ' ಇತ್ಯಾದಿ ವಾಕ್ಯಗಳಲ್ಲಿ ಶ್ರುತನಾದ ವೈಶ್ವಾನರನು ಬ್ರಹ್ಮನೇ ಆಗಿದ್ದಾನೆ; ಹೊರತು ಅಗ್ನಿಯಲ್ಲ. ಏಕೆಂದರೆ, ಸಾಧಾರಣಶಬ್ದಸ್ಯ = ಅಗ್ನಿ ಮತ್ತು ವಿಷ್ಣು ಇಬ್ಬರಲ್ಲಿಯೂ ವೈಶ್ವಾನರಶಬ್ದವು ಸಮಾನವಾಗಿರಬಹುದು. ಆದರೆ ಆ ವೈಶ್ವಾನರಶಬ್ದಕ್ಕೆ ವಿಶೇಷಾತ್ = ಆತ್ಮಪದವು ವಿಶೇಷಣವಾಗಿರುವುದರಿಂದ ಎಂದು.

आत्मशब्दः अग्नावमुख्योऽपि युज्यत इत्यतः समाख्यामाह -

**।। ॐ स्मर्यमाणमनुमानं स्यादिति ॐ ।। १-२-२५ ।।**

ಆತ್ಮಶಬ್ದವು ಅಗ್ನಿಯಲ್ಲಿ ಅಮುಖ್ಯವಾಗಿದ್ದರೂ ಸಹ ಅಮುಖ್ಯಪ್ರಯೋಗವನ್ನು ಮಾಡಬಹುದಲ್ಲವೇ ಎಂಬ ಆಕ್ಷೇಪಕ್ಕೆ ಸಮಾಧಾನ ನೀಡಲು ಸಮಾಖ್ಯಾಪ್ರಮಾಣವನ್ನು ಹೇಳುತ್ತಿದ್ದಾರೆ. "ಓಂ ಸ್ಮರ್ಯಮಾಣಂ ಅನುಮಾನಂ ಸ್ಯಾದಿತಿ ಓಂ".

वैश्वानरो ब्रह्मेत्यस्ति । तेन इतिशब्दान्वयः । अनुमीयतेऽनेनेत्यनुमानम् । "अहं वैश्वानरः" इति गीतायां स्मर्यमाणं विष्णोवैश्वानरत्वमत्रापि स एव वैश्वानर इत्यस्यानुमापकं स्यादित्यर्थः ।

'ವೈಶ್ವಾನರಃ ಬ್ರಹ್ಮ' ಎಂಬ ಎರಡು ಪದಗಳನ್ನು ಅನುವೃತ್ತಿಮಾಡಿಕೊಳ್ಳಬೇಕು. ಇವುಗಳ ಜೊತೆಗೆ ಇತಿ ಶಬ್ದವು ಅನ್ವಯವನ್ನು ಹೊಂದುತ್ತದೆ. ಯಾವುದರಿಂದ ಅನುಮಾನಮಾಡಲ್ಪಡುತ್ತದೋ ಅದು 'ಅನುಮಾನ' ಎನಿಸುತ್ತದೆ. 'ಅಹಂ ವೈಶ್ವಾನರಃ' ಎಂಬುದಾಗಿ ಗೀತೆಯಲ್ಲಿ ವಿಷ್ಣುವಿಗೆ ಹೇಳಲ್ಪಟ್ಟ ವೈಶ್ವಾನರತ್ವವೇ ವೈಶ್ವಾನರಪ್ರಕರಣದಲ್ಲಿಯೂ ಸಹ ವೈಶ್ವಾನರನು ವಿಷ್ಣುವೇ ಆಗಿದ್ದಾನೆ ಎಂಬುದಕ್ಕೆ ಅನುಮಾಪಕವಾಗಿದೆ ಎಂದರ್ಥ.

"अहं वैश्वानरः" इति स्मृतिसमाख्यानादिति भावः ।

'ಅಹಂ ವೈಶ್ವಾನರಃ' ಎಂಬ ಗೀತಾಸ್ಮೃತಿರೂಪಸಮಾಖ್ಯಾಪ್ರಮಾಣವಿರುವುದರಿಂದ ವೈಶ್ವಾನರವಿದ್ಯೆಯಲ್ಲಿ ಪ್ರತಿಪಾದ್ಯನಾದವನು ವಿಷ್ಣುವೇ ಆಗಿದ್ದಾನೆಂದು ನಿರ್ಣಯವಾಯಿತು.

उक्तमाक्षिप्याह -

**।। ॐ शब्दादिभ्योऽन्तः प्रतिष्ठानान्नेति चेन्न तथा दृष्ट्युपदेशादसम्भवात् पुरुषविधमपि चैनमधीयते ॐ ।। १-२-२६ ।।**

ಹಿಂದೆ ಹೇಳಿದ್ದನ್ನು ಆಕ್ಷೇಪಮಾಡಿ ಸಮಾಧಾನವನ್ನು ನೀಡುವ ಸೂತ್ರವನ್ನು ಪಠಿಸುತ್ತಿದ್ದಾರೆ. 'ಓಂ ಶಬ್ದಾದಿಭ್ಯೋಽಂತಃಪ್ರತಿಷ್ಠಾನಾನ್ನೇತಿ ಚೇನ್ನ ತಥಾ ದೃಷ್ಟ್ಯುಪದೇಶಾದಸಂಭವಾತ್ ಪುರುಷವಿಧಮಪಿ ಚೈನಮಧೀಯತೇ ಓಂ".

आदिपदाल्लिङ्गानि । अन्तःप्रतिष्ठानेन तत्कर्मोपलक्ष्यते । "अयमग्निः" इत्याद्यग्निशब्दात् "वैश्वानरे तद् हुतम्" इति "हृदयं गार्हपत्यम्" इत्यादिना होमाद्याधारत्वगार्हपत्याद्यङ्गत्वलिङ्गेभ्यो "योऽयमन्तःपुरुषे", "येनेदमन्नं पच्यते" इत्यन्तःप्रतिष्ठानेन पचनव्यापारात् पाचकत्वेनान्तःप्रतिष्ठानादिति वा वैश्वानरो न ब्रह्मोति चेत् ।

'ಶಬ್ದಾದಿಭ್ಯಃ' ಎಂಬಲ್ಲಿರುವ ಆದಿಪದದಿಂದ ಲಿಂಗಗಳನ್ನು ವಿವಕ್ಷಿಸಬೇಕು. 'ಅಯಮಗ್ನಿರ್ವೈಶ್ವಾನರಃ ಯೋಽಯಮಂತಃಪುರುಷೇ' ಎಂಬ ಬೃಹದಾರಣ್ಯಕೋಪನಿಷತ್ತಿನಲ್ಲಿ ಅಂತಃಪ್ರತಿಷ್ಠಾನದಿಂದ ಅಗ್ನಿಯ ಕಾರ್ಯವನ್ನು ಉಪಲಕ್ಷಣಯಾ ವಿವಕ್ಷಿಸಬೇಕು. ಅಯಮಗ್ನಿಃ ಎಂಬಲ್ಲಿ ಅಗ್ನಿಶಬ್ದದಿಂದ 'ವೈಶ್ವಾನರೇ ತದ್ಧುತಂ ಭವತಿ' ಎಂಬುದಾಗಿ ಮತ್ತು 'ಹೃದಯಂ ಗಾರ್ಹಪತ್ಯೇ' ಎಂಬುದರಿಂದ ಹೇಳಲ್ಪಟ್ಟ ಹೋಮಾದ್ಯಾಧಾರತ್ವ ಗಾರ್ಹಪತ್ಯಾದ್ಯಂಗತ್ವ ಮೊದಲಾದ ಲಿಂಗಗಳಿಂದ ಮತ್ತು 'ಯೋಽಯಮಂತಃಪುರುಷೇ ಯೇನೇದಮನ್ನಂ ಪಚ್ಯತೇ' ಎಂಬುದಾಗಿ ಅಂತಃಪ್ರತಿಷ್ಠಿತನಾಗಿ ಮಾಡಲ್ಪಡುವ ಪಚನಕ್ರಿಯೆಯೆಂಬ ವ್ಯಾಪಾರದಿಂದ ಅಥವಾ ಪಾಚಕನಾಗಿ ಅಂತಃಪ್ರತಿಷ್ಠಿತನಾಗಿರುವುದರಿಂದ ವೈಶ್ವಾನರನು ಬ್ರಹ್ಮನಾಗಲು ಸಾಧ್ಯವಿಲ್ಲವೆಂದು ಆಕ್ಷೇಪ.

**न । कुतः? तथा अग्न्यादिनामलिङ्गकर्मवत्त्वेन दृष्ट्युपदेशाद् उपासनोपदेशात् तेषां सावकाशत्वादिति भावः । दृष्टिपदात् नाविद्यमानध्यानमिति सूचितम् ।**

ಇದು ಸರಿಯಲ್ಲ. ಏಕೆಂದರೆ, ತಥಾ = ಅಗ್ನ್ಯಾದಿನಾಮಗಳು ಲಿಂಗ ಮತ್ತು ಕ್ರಿಯೆ ಇವುಗಳು ವಿಷ್ಣುವಿನಲ್ಲಿಯೇ ಯುಕ್ತವಾಗುತ್ತವೆ. ಏಕೆಂದರೆ, ತಥಾ ದೃಷ್ಟ್ಯುಪದೇಶಾತ್ = ಉಪಾಸನೆಯನ್ನು ಉಪದೇಶಿಸುವುದಕ್ಕಾಗಿ ಹಾಗೆ ಹೇಳಿರುತ್ತಾರೆ. ಅಗ್ನ್ಯಾದಿನಾಮಗಳು, ಲಿಂಗಗಳು ಮತ್ತು ಕ್ರಿಯೆಗಳು ಹೀಗೆ ವಿಷ್ಣುವಿನಲ್ಲಿ ಸಾವಕಾಶವಾಗಿವೆಯೆಂದು ತಿಳಿಯಬೇಕು. ದೃಷ್ಟಿಪದದಿಂದ ಇಲ್ಲದಿರುವ ವಿಷಯವನ್ನು ಧ್ಯಾನಮಾಡಲು ಸಾಧ್ಯವಿಲ್ಲವೆಂದು ಸೂಚಿಸಿದ್ದಾರೆ.

**किञ्च ''को न आत्मा किं ब्रह्म'' इत्युपक्रमोक्तात्मत्वाद्यसम्भवात् । ब्रह्मप्रकरणाच्चेति यावत् । अपि किञ्चेत्यर्थः ।**

ಮತ್ತು 'ಕೋ ನ ಆತ್ಮಾ ಕಿಂ ಬ್ರಹ್ಮ' ಎಂಬುದಾಗಿ ಉಪಕ್ರಮದಲ್ಲಿ ಹೇಳಿರುವ ಆತ್ಮತ್ವಾದಿಗಳು ಅಯುಕ್ತವಾದ್ದರಿಂದ ಮತ್ತು ಬ್ರಹ್ಮಪ್ರಕರಣವಾಗಿರುವುದರಿಂದ ಎಂದು ಅಭಿಪ್ರಾಯ. ಅಪಿ = ಅಷ್ಟೇ ಅಲ್ಲದೆ ಎಂದರ್ಥ.

**एनं वैश्वानरं पुरुषविधं पुरुषो यद्विधस्तद्विधमधीयते छन्दोगा यतोऽतोऽपीति योज्यम् ।**

ಏನಂ = ಈ ವೈಶ್ವಾನರನನ್ನು, ಪುರುಷವಿಧಂ = ಪುರುಷನು ಯಾವ ವಿಧದಲ್ಲಿದ್ದಾನೋ ಆ ವಿಧದಲ್ಲಿ, ಅಧೀಯತೇ = ಛಂದೋಗರು ಯಾವ ಕಾರಣದಿಂದ ಅಧ್ಯಯನ ಮಾಡುತ್ತಾರೋ ಆ ಕಾರಣದಿಂದ ಎಂದು ಯೋಜನೆ ಮಾಡಿಕೊಳ್ಳಬೇಕು.

**''शीर्ष्णो द्यौः समवर्तत'' इत्यादिना पुरुषसूक्तोक्तपुरुषविधमेवैनं ''मूर्धैव सुतेजाः'' इत्यादिना अधीयत इति तत्समाख्यानादपीत्यर्थः । चशब्दः पुरुषसूक्तस्य वैष्णवत्वप्रसिद्धिद्योतकः ।**

'ಶೀರ್ಷ್ಣೋ ದ್ಯೌಃ ಸಮವರ್ತತ' ಇತ್ಯಾದಿಯಾಗಿ ಪುರುಷಸೂಕ್ತದಲ್ಲಿ ಹೇಳಲ್ಪಟ್ಟಿರುವ ಪುರುಷನಂತೆಯೇ ಈ ವೈಶ್ವಾನರನೂ ಸಹ 'ಮೂರ್ಧೈವ ಸುತೇಜಾಃ' ಇತ್ಯಾದಿಯಾಗಿ ಇರುತ್ತಾನೆಂದು ಅಧ್ಯಯನ ಮಾಡುತ್ತಾರೆ. ಆದ್ದರಿಂದ ಪುರುಷಸೂಕ್ತದ ಸಮಾಖ್ಯಾಪ್ರಮಾಣದಿಂದಲೂ ಸಹ ಎಂದು ಅರ್ಥ. ಚಶಬ್ದವು ಪುರುಷಸೂಕ್ತಕ್ಕೆ ವೈಷ್ಣವತ್ವಪ್ರಸಿದ್ಧಿಯನ್ನು ಸೂಚಿಸುತ್ತದೆ.

**अन्तःप्रतिष्ठानस्य कर्मत्वाद् पृथगुक्तिः । तत्वप्रदीपे तु प्रधानलिङ्गत्वात् पृथगुक्तमित्युक्तम् । तथा चेतोऽर्पणेत्यत्र प्रसिद्धशब्दत्यागे प्रयोजनोक्तिः । इह तु शब्दादेः सावकाशत्वोक्तिरिति भेदः ॥**

ಅಂತಃಪ್ರತಿಷ್ಠಾನವು ಕ್ರಿಯಾರೂಪವಾಗಿದೆ. ಆದ್ದರಿಂದ ಪ್ರತ್ಯೇಕವಾಗಿ ಹೇಳಿದ್ದಾರೆ. ತತ್ವಪ್ರದೀಪದಲ್ಲಾದರೋ ಪ್ರಧಾನಲಿಂಗವಾದ್ದರಿಂದ ಪ್ರತ್ಯೇಕವಾಗಿ ಉಲ್ಲೇಖಿಸಿದ್ದಾರೆಂದು ಹೇಳಿದ್ದಾರೆ.

'ತಥಾ ಚೇತೋಽರ್ಪಣ' ಎಂಬಲ್ಲಿ ಪ್ರಸಿದ್ಧಶಬ್ದವನ್ನು ಪರಿತ್ಯಾಗಮಾಡಲು ಪ್ರಯೋಜನವನ್ನು ಹೇಳಿದ್ದಾರೆ. ಆದರೆ ಇಲ್ಲಿ ಶಬ್ದಮೊದಲಾದವುಗಳಿಗೆ ಸಾವಕಾಶತ್ವವನ್ನು ಹೇಳಲಾಗಿದೆಯೆಂದು ಎರಡು ಸೂತ್ರಗಳಿಗೂ ವೈಲಕ್ಷಣ್ಯವಿದೆ.

**प्रसिद्धेर्देवता भूतं च किं न स्यादित्यत आह -**

**॥ ॐ अत एव न देवता भूतं च ॐ ॥ १-२-२७ ॥**

ಪ್ರಸಿದ್ಧಿಯ ಕಾರಣದಿಂದ ಅಗ್ನಿದೇವತೆಯಾಗಲೀ, ಜಡವಾದ ಅಗ್ನಿಯಾಗಲೀ, ಏಕೆ ವೈಶ್ವಾನರನೆನಿಸಬಾರದು? ಎಂಬ ಆಕ್ಷೇಪಕ್ಕೆ ಸಮಾಧಾನವನ್ನು ಹೇಳುತ್ತಿದ್ದಾರೆ. 'ಓಂ ಅತ ಏವ ನ ದೇವತಾ ಭೂತಂ ಚ ಓಂ'

**आत्मशब्दादिति हेतोरेवाग्निर्देवता तेजोभूतं च वैश्वानरो न भवतीत्यर्थः ।**

ಸೂತ್ರಾರ್ಥ ಹೀಗಿದೆ. ಆತ್ಮಶಬ್ದ ಮೊದಲಾದ ಹೇತುವಿನಿಂದಲೇ ಅಗ್ನಿದೇವತೆಯಾಗಲೀ ಜಡವಾದ ತೇಜಸ್ಸಿನ ರೂಪದಲ್ಲಿರುವ ಅಗ್ನಿಯಾಗಲೀ ವೈಶ್ವಾನರವಲ್ಲವೆಂದು ಅರ್ಥ.

**अग्न्यादिशब्दानां ब्रह्मैकवाचित्वेऽग्न्यादौ व्यवहारविरोधः फलाभावादित्यत आह -**

**॥ ॐ साक्षादप्यविरोधं जैमिनिः ॐ ॥ १-२-२८ ॥**

ಅಗ್ನ್ಯಾದಿಶಬ್ದಗಳು ಕೇವಲ ಬ್ರಹ್ಮನನ್ನು ಪ್ರತಿಪಾದಿಸುವುದಾದರೆ ನಿಷ್ಫಲವಾಗುತ್ತವೆ. ಆದ್ದರಿಂದ ಅಗ್ನ್ಯಾದಿಗಳಲ್ಲಿ ವ್ಯವಹಾರಮಾಡುವುದರ ವಿರೋಧಬರುತ್ತದಲ್ಲವೇ? ಈ ಆಕ್ಷೇಪಕ್ಕೆ ಸಮಾಧಾನವನ್ನು ನೀಡುವುದಕ್ಕಾಗಿ ಮುಂದಿನ ಸೂತ್ರ ಹೊರಟಿದೆ. 'ಓಂ ಸಾಕ್ಷಾದಪ್ಯವಿರೋಧಂ ಜೈಮಿನಿಃ ಓಂ'.

वाच्यार्थधीव्यवहितं लक्षणादिकं विना साक्षात् मुख्यवृत्त्या ब्रह्मणः अग्न्यादिशब्दार्थत्वेऽप्यन्यत्र व्यवहाराविरोधं जैमिनिराहेत्यर्थः । हानाद्यर्थत्वादिति भावः ।

ಸೂತ್ರಾರ್ಥ ಹೀಗಿದೆ -- ವಾಚ್ಯಾರ್ಥಜ್ಞಾನದಿಂದ ತಡೆಯಲ್ಪಟ್ಟ ಲಕ್ಷಣಾ ಮೊದಲಾದವುಗಳಿಲ್ಲದೆ ಸಾಕ್ಷಾತ್ = ಮುಖ್ಯವೃತ್ತಿಯಿಂದ ಬ್ರಹ್ಮನು ಅಗ್ನಿ ಮೊದಲಾದ ಪದಗಳ ಅರ್ಥನಾಗಿದ್ದಾನೆ. ಆದರೂ ಸಹ ಬೇರೆ ಕಡೆ ವ್ಯವಹಾರವನ್ನು ಮಾಡುವುದಕ್ಕಾಗಿ ಪ್ರಯೋಗಿಸಲಾಗಿದೆಯೆಂದು ಜೈಮಿನಿ ಋಷಿಗಳು ಹೇಳುತ್ತಾರೆಂದರ್ಥ. ಪರಿತ್ಯಾಗಮಾಡುವಿಕೆ, ಸ್ವೀಕರಿಸುವಿಕೆ ಮೊದಲಾದ ಪ್ರಯೋಜನಗಳಿರುವುದರಿಂದ ವ್ಯವಹಾರವು ನಿಷ್ಫಲವಲ್ಲವೆಂದು ಅಭಿಪ್ರಾಯ.

अग्न्यादिशब्दानां ब्रह्मणि मुख्यत्वे सूक्तादिव्यवस्था न स्यादित्यत आह -

**।। ॐ अभिव्यक्तेरित्याश्मरथ्यः ॐ ।। १-२-२९।।**

ಅಗ್ನಿಮೊದಲಾದ ಶಬ್ದಗಳು ಬ್ರಹ್ಮನಲ್ಲಿ ಮುಖ್ಯವಾಗಿ ಇರುತ್ತವೆಂದು ಹೇಳುವುದಾದರೆ ಇದು ಅಗ್ನಿಸೂಕ್ತ, ಇದು ವಾಯುಸೂಕ್ತ ಮೊದಲಾದ ವ್ಯವಸ್ಥೆಗಳು ತಪ್ಪಾಗುತ್ತವಲ್ಲವೇ? ಎಂಬ ಆಕ್ಷೇಪಕ್ಕೆ ಉತ್ತರಿಸುವುದಕ್ಕಾಗಿ ಮುಂದಿನ ಸೂತ್ರ ಹೊರಟಿದೆ. 'ಓಂಅಭಿವ್ಯಕ್ತೇರಿತ್ಯಾಶ್ಮರಥ್ಯಃ ಓಂ'.

अग्न्यादिसूक्तदिनियम इति शेषः । अग्न्यादिसूक्तादिभिर्ब्रह्मोपास्तावग्न्यादिष्वेव तस्याभिव्यक्तेरिति भावेनाग्न्यादिसूक्तादिनियम इत्याश्मरथ्यो मन्यत इत्यर्थः ।

ಸೂತ್ರಾರ್ಥ ಹೀಗಿದೆ -- ಅಗ್ನಿಸೂಕ್ತ, ವಾಯುಸೂಕ್ತ ಇತ್ಯಾದಿ ನಿಯಮವು ಎಂಬುದನ್ನು ಶೇಷಪೂರಣ ಮಾಡಿಕೊಳ್ಳಬೇಕು. ಅಗ್ನ್ಯಾದಿಸೂಕ್ತಗಳಿಂದ ಬ್ರಹ್ಮನನ್ನು ಉಪಾಸನೆ ಮಾಡಿದರೆ ಅಗ್ನ್ಯಾದಿಗಳಲ್ಲಿಯೇ ಬ್ರಹ್ಮನ ಅಭಿವ್ಯಕ್ತಿಯಾಗುತ್ತದೆಂಬ ಅಭಿಪ್ರಾಯದಿಂದ ಅಗ್ನ್ಯಾದಿಸೂಕ್ತ ಮೊದಲಾದ ನಿಯಮವು ಇರುತ್ತದೆಂದು ಆಶ್ಮರಥ್ಯಾಚಾರ್ಯರು ತಿಳಿಯುತ್ತಾರೆಂದರ್ಥ.

प्रकारान्तरेण व्यवस्थामाह -

**।। ॐ अनुस्मृतेर्बादरिः ॐ ।। १-२-३० ।।**

ಮತ್ತೊಂದು ಪ್ರಕಾರದಿಂದ ಸೂಕ್ತವ್ಯವಸ್ಥೆಯನ್ನು ಹೇಳಲು ಮುಂದಿನ ಸೂತ್ರವು ಹೊರಟಿದೆ 'ಓಂ ಅನುಸ್ಮೃತೇರ್ಬಾದರಿಃ ಓಂ'

तत्तत्सूक्ताद्युपासकैरग्न्यादिष्वेव ब्रह्मणोऽनुस्मृतेर्हेतोः सूक्तादिव्यवस्थेति बादरिर्मन्यते । अनुस्मृतेः पूर्वत्वेऽयभिव्यक्त्यनन्तरमपि सा कार्येति द्योतयितुं तदनन्तरमुक्तिः ।

ಆಯಾ ಸೂಕ್ತಗಳ ಉಪಾಸನೆ ಮಾಡುವುದರಿಂದ ಅಗ್ನ್ಯಾದಿಗಳಲ್ಲಿಯೇ ಬ್ರಹ್ಮನನ್ನು ಧ್ಯಾನಮಾಡಬೇಕು ಎಂಬ ಕಾರಣದಿಂದ ಸೂಕ್ತಾದಿಗಳ ವ್ಯವಸ್ಥೆಯು ಯುಕ್ತವಾಗಿದೆಯೆಂದು ಶುಕಾಚಾರ್ಯರು ತಿಳಿಯುತ್ತಾರೆ. ಅಭಿವ್ಯಕ್ತಿಗಿಂತ ಅನುಸ್ಮೃತಿಯನ್ನು ಮೊದಲು ಹೇಳಬೇಕಿತ್ತು; ಆದರೂ ಸಹ ಅಭಿವ್ಯಕ್ತಿಯ ಅನಂತರವೂ ಸಹ ಅನುಸ್ಮೃತಿಯನ್ನು ಮಾಡಬಹುದೆಂದು ಸೂಚಿಸುವುದಕ್ಕಾಗಿ ಮೊದಲು ಅಭಿವ್ಯಕ್ತಿಯನ್ನು ಹೇಳಿರುತ್ತಾರೆ.

ಪರಿಪೂರ್ಣಚಂದ್ರಿಕಾ

निमित्तान्तरमाह -

**।। ॐ सम्पत्तेरिति जैमिनिस्तथा हि दर्शयति ॐ ।। १-२-३१ ।।**

ಮತ್ತೊಂದು ಕಾರಣವನ್ನು ಹೇಳುವ ಸೂತ್ರ ಹೀಗಿದೆ - ಓಂ ಸಂಪತ್ತೇರಿತಿ ಜೈಮಿನಿಸ್ತಥಾ ಹಿ ದರ್ಶಯತಿ ಓಂ'

अग्न्यादिसूक्ताद्युपासकानामग्न्यादिप्राप्तेर्निमित्तादिति भावेन सूक्तादिनियम इति जैमिनिर्मन्यते । तदुपास्तौ तत्प्राप्तिः कुतः? तथा हि दर्शयति । ''तं यथा यथोपासते तदेव भवति'' इति हि प्रसिद्धा श्रुतिः जैमिनिमतं यथा तथा दर्शयतीत्यर्थः । भवतीत्यस्य प्राप्नुवन्तीत्यर्थः।

ಅಗ್ನ್ಯಾದಿ ಸೂಕ್ತಗಳಿಂದ ಉಪಾಸನೆ ಮಾಡುವವರಿಗೆ ಅಗ್ನ್ಯಾದಿಗಳ ಪ್ರಾಪ್ತಿಯಾಗುತ್ತದೆ. ಈ ಕಾರಣದಿಂದ ಸೂಕ್ತಾದಿಗಳ ನಿಯಮವು ಯುಕ್ತವಾಗುತ್ತದೆಂದು ಜೈಮಿನಿ ಋಷಿಗಳು ತಿಳಿಯುತ್ತಾರೆ. ಅಗ್ನ್ಯಾದಿ ಸೂಕ್ತಗಳಿಂದ ಉಪಾಸನೆ ಮಾಡಿದರೆ ಅಗ್ನ್ಯಾದಿಗಳು ದೊರೆಯುತ್ತಾರೆಂದು ಹೇಗೆ ತಿಳಿಯುತ್ತದೆ? ಎಂಬ ಪ್ರಶ್ನೆಗೆ 'ತಥಾ ಹಿ ದರ್ಶಯತಿ' ಎಂದು ಉತ್ತರಿಸಿದ್ದಾರೆ. ಅಂದರೆ ತಂ ಯಥಾ ಯಥಾ ಉಪಾಸತೇ ತದೇವ ಭವತಿ ಎಂದು ಪ್ರಸಿದ್ಧವಾದ ಶ್ರುತಿಯು ಜೈಮಿನಿಯ ಅಭಿಪ್ರಾಯವನ್ನು ಸಮ್ಮತಿಸುತ್ತದೆ. ಭವತಿ ಎಂಬುದಕ್ಕೆ ಹೊಂದುತ್ತಾರೆ ಎಂಬರ್ಥವು ಅರ್ಥಾತ್ ಸಿದ್ಧವಾಗುತ್ತದೆ.

ब्रह्मोपास्तावग्न्यादिप्राप्तिः कथमित्यत आह -

**।। ॐ आमनन्ति चैनमस्मिन् ॐ ।। १-२-३२ ।।**

ಬ್ರಹ್ಮನನ್ನು ಉಪಾಸನೆ ಮಾಡಿದರೆ ಅಗ್ನ್ಯಾದಿಗಳು ದೊರೆಯುತ್ತಾರೆಂದು ಹೇಗೆ ಹೇಳಲು ಸಾಧ್ಯ ? ಎಂಬ ಪ್ರಶ್ನೆಗೆ ಸಮಾಧಾನ ನೀಡಲು ಮುಂದಿನ ಸೂತ್ರ ಹೊರಟಿದೆ. 'ಓಂ ಆಮನಂತಿ ಚೈನಮಸ್ಮಿನ್ ಓಂ'

चशब्दः शङ्काव्यावर्तकः । एनं विष्णुमस्मिन्नग्न्यादौ । तस्य देवता भूतश्चेति प्रकृतत्वात् । ''योऽग्नौ तिष्ठन्'' इत्यादिना आमनन्ति श्रुतय इत्यर्थः । अग्न्यादिप्राप्तिपदेन तत्स्थब्रह्मप्राप्तेर्विवक्षितत्वादिति भावः । श्रुत्यनुसारादेनमिति पुंनिर्देशः ।

ಸೂತ್ರದಲ್ಲಿರುವ ಚಶಬ್ದವು ಆಕ್ಷೇಪವನ್ನು ವ್ಯಾವೃತ್ತಿ ಮಾಡುತ್ತಿದೆ. ಏನಂ = ವಿಷ್ಣುವನ್ನು ಅಸ್ಮಿನ್ = ಅಗ್ನ್ಯಾದಿಗಳಲ್ಲಿ. ಅಗ್ನ್ಯಾದಿಗಳು ದೇವತಾಭೂತಂ ಚ ಎಂಬುದಾಗಿ ಪ್ರಸಕ್ತರಾಗಿರುವುದರಿಂದ 'ಯೋಽಗ್ನೌ ತಿಷ್ಠನ್' ಇತ್ಯಾದಿಯಾಗಿ ಆಮನಂತಿ = ಶ್ರುತಿಗಳು ಹೇಳುತ್ತವೆ ಎಂದರ್ಥ. ಅಗ್ನ್ಯಾದಿಪ್ರಾಪ್ತಿ ಎಂಬ ಪದದಿಂದ ಅಗ್ನ್ಯಾದಿಗಳಲ್ಲಿರುವ ಬ್ರಹ್ಮನ ಪ್ರಾಪ್ತಿಯೇ ವಿವಕ್ಷಿತವಾಗಿದೆಯೆಂದು ಅಭಿಪ್ರಾಯ. ಶ್ರುತಿಯನ್ನು ಅನುಸರಿಸಿ ಏನಂ ಎಂಬುದಾಗಿ ಪುಲ್ಲಿಂಗ ಪ್ರಯೋಗವನ್ನು ಮಾಡಿದ್ದಾರೆ.

ವೈಶ್ವಾನರಾಧಿಕರಣ (೧-೨-೭)

जैमिन्याद्युक्तिस्तेषां प्रसिद्ध्यर्था । शब्दानां लोकव्यवहाराविरोधं वदन् सूक्तादिनियमं चाहेति जैमिनेर्द्विरुपादानम् ।।७।।

ಜೈಮಿನ್ಯಾದಿಗಳನ್ನು ಸೂತ್ರಕಾರರು ಏಕೆ ಉಲ್ಲೇಖಿಸಿದ್ದಾರೆಂದರೆ, ಶಿಷ್ಯರನ್ನು ಪ್ರಸಿದ್ಧಿಪಡಿಸುವುದಕ್ಕಾಗಿ. ಶಬ್ದಗಳಿಗೆ ಲೋಕವ್ಯವಹಾರದ ವಿರೋಧವಿಲ್ಲವೆಂದು ಹೇಳುತ್ತಾ, ಸೂಕ್ತಾದಿಗಳ ನಿಯಮವನ್ನೂ ಸಹ ಹೇಳುತ್ತಾರೆಂಬ ಕಾರಣದಿಂದ ಜೈಮಿನಿಗಳನ್ನು ಎರಡು ಬಾರಿ ಸೂತ್ರಕಾರರು ಉಲ್ಲೇಖಿಸಿದ್ದಾರೆ.

अत्राद्यनये विष्णोस्सर्वशक्तिप्रबोधकत्वं सर्वगतस्याप्यल्पस्थानस्थितत्वं च । अत्तेति नयेऽदनक्रिया । गुहानये सारभोक्तृत्वमेकस्याप्यनेकत्वं च । अन्तरनये ब्रह्मादेरीशं विना स्वावरनेतृत्वायोगः । अन्तर्यामिनये सर्वस्य तच्छीर्यत्वात् तत्तन्त्रत्वाद्वा तच्छरीरत्वम् । अदृश्यत्वनये गोत्राद्यभावस्येशाख्यधर्मितो भेदेऽपि दृश्याद्यन्योन्याभावस्य तत्स्वरूपत्वं सिद्धम् । अन्त्यनये सूक्तादिव्यवस्थेत्यादि ध्येयम् ।।

इति श्रीमद्राघवेन्द्रयतिकृतायां तन्त्रदीपिकायां प्रथमाध्यायस्य द्वितीयः पादः

ಈ ಪಾದದ ಮೊದಲನೆಯ ಅಧಿಕರಣದಲ್ಲಿ ವಿಷ್ಣುವಿಗೆ ಸರ್ವಶಕ್ತಿಪ್ರಬೋಧಕತ್ವ ಎಂಬ ಧರ್ಮವನ್ನು ಮತ್ತು ಸರ್ವಗತನಾದರೂ ಸಹ ಅಲ್ಪಸ್ಥಾನಸ್ಥಿತನಾಗಿದ್ದಾನೆಂದು ಹೇಳಲಾಗಿದೆ. ಅತ್ತ್ರತ್ವಾಧಿಕರಣದಲ್ಲಿ ಅದನರೂಪ ಕ್ರಿಯೆಯನ್ನು ಸಮನ್ವಯ ಮಾಡಲಾಗಿದೆ. ಗುಹಾಧಿಕರಣದಲ್ಲಿ ಸಾರಭೋಕ್ತೃತ್ವವನ್ನು ಹಾಗೂ ..ನಿಗೇ ಅನೇಕತ್ವವನ್ನೂ ಸಹ ಹೇಳಲಾಗಿದೆ.

ಅಂತರಾಧಿಕರಣದಲ್ಲಿ ಪರಮಾತ್ಮನನ್ನು ಬಿಟ್ಟು ಬ್ರಹ್ಮಾದಿಗಳಿಗೆ ತಮಗಿಂತ ನೀಚರನ್ನು ಪ್ರೇರಣೆ ಮಾಡುವ ಶಕ್ತಿಯು ಇಲ್ಲವೆಂದು ನಿರೂಪಿಸಲಾಗಿದೆ. ಅಂತರ್ಯಾಮ್ಯಧಿಕರಣದಲ್ಲಿ ಎಲ್ಲವೂ ಸಹ ಭಗವಂತನಿಂದ ನಾಶವಾಗುವುದರಿಂದ ಅಥವಾ ಅವನ ಅಧೀನವಾಗುವುದರಿಂದ ಅವನ ಶರೀರವಾಗಿದೆಯೆಂದು ನಿರೂಪಿಸಲಾಗಿದೆ. ಅದೃಶ್ಯತ್ವಾಧಿಕರಣದಲ್ಲಿ ಗೋತ್ರಾದ್ಯಭಾವರೂಪ ಧರ್ಮವು ಭಗವಂತನೆಂಬ ಧರ್ಮಿಯಿಂದ ಭಿನ್ನವಾಗಿದ್ದರೂ ದೃಶ್ಯಾದಿಗಳ ಭೇದರೂಪಧರ್ಮವು ಪರಮಾತ್ಮನ ಸ್ವರೂಪವೆಂದು ಸಾಧಿಸಲಾಗಿದೆ. ಕೊನೆಯ ಅಧಿಕರಣದಲ್ಲಿ ಸೂಕ್ತಾದಿವ್ಯವಸ್ಥೆಯನ್ನು ಮಾಡಲಾಗಿದೆಯೆಂದು ತಿಳಿಯಬೇಕು.

ಇಲ್ಲಿಗೆ ಶ್ರೀರಾಘವೇಂದ್ರತೀರ್ಥರಿಂದ ರಚಿತವಾದ ತಂತ್ರದೀಪಿಕಾ ಗ್ರಂಥದ ಕನ್ನಡಾನುವಾದದಲ್ಲಿ ಮೊದಲನೆಯ ಅಧ್ಯಾಯದ ಎರಡನೆಯ ಪಾದವು ಸಮಾಪ್ತವಾಯಿತು.

।। श्रीकृष्णार्पणमस्तु ।।

श्री राघवेन्द्रतीर्थविरचिता

# श्रीन्यायमुक्तावलिः

## वैश्वानराधिकरणम् (१।२।७)

**॥ ॐ वैश्वानरः साधारणशब्दविशेषात् ॐ ॥ ७ ॥**

**॥ ॐ स्मर्यमाणमनुमानं स्यादिति ॐ ॥ ॥ ॐ शब्दादिभ्योऽन्तःप्रतिष्ठानान्नेति चेन्न तथा दृष्ट्युपदेशादसम्भवात्पुरुषविधमपि चैनमधीयते ॐ ॥ ॥ॐ अत एव न देवता भूतं च ॐ ॥ ॥ साक्षादप्यविरोधं जैमिनिः ॐ ॥ ॥ ॐ अभिव्यक्तेरित्याश्मरथ्यः ॐ ॥ ॥ ॐ अनुस्मृतेर्बादरिः ॐ ॥ ॥ ॐ सम्पत्तेरिति जैमिनिस्तथा हि दर्शयति ॐ ॥ ॥ॐ आमनन्ति चैनमस्मिन् ॐ ॥**

अत्र प्राचीनादृश्यत्वादिगुणमध्यश्रुतसर्वगतत्वाक्षेपात्सङ्गतिः ।

ಈ ಅಧಿಕರಣದಲ್ಲಿ ಹಿಂದಿನ ಅಧಿಕರಣದಲ್ಲಿ ಹೇಳಲ್ಪಟ್ಟ ಅದೃಶ್ಯತ್ವಾದಿಗುಣಗಳ ಮಧ್ಯದಲ್ಲಿ ಕೇಳಿಸುತ್ತಿರುವ ಸರ್ವಗತತ್ವವನ್ನು ಆಕ್ಷೇಪಿಸಲಾಗಿದೆ. ಆದ್ದರಿಂದ ಸಂಗತಿಯು ಇರುತ್ತದೆ.

छान्दोग्ये पञ्चमेऽध्याये ''अभिविमानमात्मानं वैश्वानरमुपास्ते''(छां.५-१८-१) इति वाजसनेये च सप्तमेऽध्याये ''अयमग्निर्वैश्वनरो योऽयमन्तःपुरुषे येनेदमन्नं पच्यते'' इति (बृ.७-९-१) वैश्वानरविद्यागतः तथा ''वैश्वानरमृत आजातमग्निम्'' (ऋ.६-७-१) इत्यादिसूक्तगतो वैश्वानरः किं भूततदभिमानिदेवते वा विष्णुर्वेति सन्देहः ।

ಛಾಂದೋಗ್ಯದ ಐದನೆಯ ಅಧ್ಯಾಯದಲ್ಲಿ 'ಅಭಿವಿಮಾನಮಾತ್ಮಾನಂ ವೈಶ್ವಾನರಮುಪಾಸ್ತೇ' ಎಂಬ ವಾಕ್ಯವು ಕೇಳಿಸುತ್ತಿದೆ. ಮತ್ತು ಬೃಹದಾರಣ್ಯಕದ ಏಳನೆಯ ಅಧ್ಯಾಯದಲ್ಲಿ 'ಅಯಮಗ್ನಿರ್ವೈಶ್ವಾನರೋ ಯೋऽಯಮಂತಃಪುರುಷೇ ಯೇನೇದಮನ್ನಂ ಪಚ್ಯತೇ' ಎಂಬುದಾಗಿ ವೈಶ್ವಾನರವಿದ್ಯೆಯು ಪ್ರಸಕ್ತವಾಗಿದೆ. ಅದರಂತೆ ಋಗ್ವೇದದಲ್ಲಿ 'ವೈಶ್ವಾನರಮೃತ ಆಜಾತಮಗ್ನಿಮ್' ಎಂಬುದಾಗಿ ವೈಶ್ವಾನರನು ಶ್ರುತನಾಗಿದ್ದಾನೆ. ಈ ಎಲ್ಲ ವಾಕ್ಯಗಳು ಈ ಅಧಿಕರಣಕ್ಕೆ ವಿಷಯವಾಗಿವೆ.

ವೈಶ್ವಾನರಾಧಿಕರಣ (೧-೨-೭)

ಇಲ್ಲಿ ಕೇಳಿಸುತ್ತಿರುವ ವೈಶ್ವಾನರನು ಜಡವಾದ ಅಗ್ನಿ ಅಥವಾ ತದಭಿಮಾನಿದೇವತೆಯೋ ಅಥವಾ ವಿಷ್ಣುವೋ ಎಂದು ಸಂದೇಹ.

**वैश्वानराग्न्यादिशब्दानां अग्नावेव लोकप्रसिद्धे । छान्दोग्ये ''वैश्वानरे तद्धुतं भवति'' (छां.५-२४-४)''हृदयं गार्हपत्ये'' (छ.५-१८-२) इत्यादिना श्रुतहोमाधारत्वगार्हपत्याद्यङ्गकत्वस्य काण्वश्रुतौ पाचकत्वादेश्च लिङ्गस्य श्रवणात् ।**

ವೈಶ್ವಾನರ ಅಗ್ನಿ ಮೊದಲಾದ ಶಬ್ದಗಳು ಲೋಕರೂಢಿಯಿಂದ ಅಗ್ನಿಯಲ್ಲೇ ಪ್ರಸಿದ್ಧವಾಗಿವೆ. ಮತ್ತು ಛಾಂದೋಗ್ಯದಲ್ಲಿ ವೈಶ್ವಾನರೇ ತದ್ಧುತಂ ಭವತಿ' ಎಂಬುದಾಗಿ ಹೋಮಾಧಾರತ್ವವೆಂಬ ಲಿಂಗವು ಕೇಳಿಸುತ್ತಿದೆ. 'ಹೃದಯಂ ಗಾರ್ಹಪತ್ಯೇ' ಎಂಬ ಛಾಂದೋಗ್ಯದಲ್ಲಿ ಗಾರ್ಹಪತ್ಯಾದ್ಯಂಗತ್ವವು ಕೇಳಿಸುತ್ತಿದೆ. ಕಾಣ್ವಶ್ರುತಿಯಲ್ಲಿ ಪಾಚಕತ್ವಲಿಂಗವು ಕೇಳಿಸುತ್ತಿದೆ. ಇವೆಲ್ಲವೂ ಸಹ ಅಗ್ನಿದೇವತೆಯಲ್ಲೇ ಯುಕ್ತವಾಗುತ್ತವೆ.

**तेषां च विष्णौ मुख्यत्वे लोकव्यवहारविरोधात् । सर्वविद्याया वैष्णवत्वापत्त्या इयमग्निविद्या इयमन्यविद्येत्यादिव्यवस्थायोगाच्च वैश्वानरो भूतं देवता वा ।**

ಒಂದು ವೇಳೆ ವೈಶ್ವಾನರಾದಿಶಬ್ದಗಳನ್ನು ವಿಷ್ಣುವಿನಲ್ಲಿ ಮುಖ್ಯವಾಗಿ ಪ್ರಯೋಗಿಸುವುದಾದರೆ ಲೋಕವ್ಯವಹಾರದ ವಿರೋಧ ಬರುತ್ತದೆ. ಮತ್ತು ವೇದದಲ್ಲಿರುವ ಸಕಲವಿದ್ಯೆಗಳೂ ವೈಷ್ಣವವಿದ್ಯೆಗಳೆಂದಾಗಿ ಇದು ಅಗ್ನಿವಿದ್ಯೆ, ಇದು ವಾಯುವಿದ್ಯೆ ಎಂಬ ವ್ಯವಸ್ಥೆಯೇ ತಪ್ಪಾಗುತ್ತದೆ. ಆದ್ದರಿಂದ ಜಡವಾದ ಅಗ್ನಿಯಾಗಲೀ, ಅಭಿಮಾನಿದೇವತೆಯಾಗಲೀ ವೈಶ್ವಾನರಶಬ್ದವಾಚ್ಯವಾಗುತ್ತದೆಂದು ತಿಳಿಯಬೇಕು.

**न च सिद्धान्तीयलिङ्गसमाख्याप्रकरणानां बाहुल्यात् निरवकाशत्वाच्च अग्निरेवेत्यनिर्णयः इति शङ्क्यम् ।**

ಸಿದ್ಧಾಂತಕ್ಕೆ ಪ್ರಾಪಕವಾದ ಲಿಂಗ, ಸಮಾಖ್ಯಾ, ಪ್ರಕರಣಗಳು ಬಹಳವಾಗಿ ಇರುತ್ತವೆ. ಮತ್ತು ನಿರವಕಾಶವಾಗಿವೆ. ಆದ್ದರಿಂದ ಅಗ್ನಿಯೇ ವೈಶ್ವಾನರನಾಗಿದ್ದಾನೆಂದು ಹೇಗೆ ನಿರ್ಣಯಿಸುತ್ತೀರಿ? ಎಂದು ಪ್ರಶ್ನಿಸಬಾರದು.

**श्रुतेः स्वभावतो बलवत्त्वात् तावतापि अभिविमानपदेन अभितो विगतं मानं मर्यादा यस्येत्युक्तसर्वगतस्य वैश्वानरस्य अनिर्णये प्राचीनं सर्वगतमितिश्रुतमक्षरमपि विष्णुरेवेति सिद्धान्त्यभिमतनिर्णयायोग इति पूर्व पक्षः ।।**

ಪರಿಪೂರ್ಣಚಂದ್ರಿಕಾ

ಶ್ರುತಿಯು ಸ್ವಾಭಾವಿಕವಾಗಿ ಬಲಿಷ್ಠವಾಗಿರುತ್ತದೆ. ಅಂತಹ ಶ್ರುತಿಯಲ್ಲಿ ಕೇಳಿಸುತ್ತಿರುವ 'ಅಭಿವಿಮಾನ' ಪದದಿಂದ ತಿಳಿಯುವ ಸರ್ವಗತತ್ವವು ವೈಶ್ವಾನರನಲ್ಲಿದೆಯೆಂದು ನಿರ್ಣಯಿಸಲಾಗದು. ಆದ್ದರಿಂದ ಹಿಂದಿನ ಅಧಿಕರಣದಲ್ಲಿ ಸಮರ್ಥಿಸಲ್ಪಟ್ಟ ಸರ್ವಗತತ್ವವು ಮತ್ತು ಸರ್ವಗತತ್ವಧರ್ಮವುಳ್ಳ ಅಕ್ಷರನು ವಿಷ್ಣುವೇ ಆಗಿದ್ದಾನೆಂದು ಸಿದ್ಧಾಂತಿಗಳು ನಿರ್ಣಯಿಸಲು ಸಾಧ್ಯವಿಲ್ಲ. ಇಷ್ಟು ಪೂರ್ವಪಕ್ಷ.

सिद्धान्तस्तु ।। आत्मानमितिश्रुताऽत्मशब्दादभिविमानमित्युक्तसर्वगतत्वलिङ्गाद हं वैश्वानरो भूत्वेति स्मृतिसमाख्यानात् ''को न आत्मा किं ब्रह्म'' इति विचारपूर्वकमुपक्रम्यैतद्विद्याया अधीतत्वेन ब्रह्मप्रकरणत्वात् शीर्ष्णो द्यौः समवर्ततेति पुरुषसूक्तोक्तस्य द्युरादिजनकशीर्षाद्यवयवकस्यैव मूर्धैव सुतेजा इत्यर्थतोऽत्र विद्यायामुक्त्या पुरुषसूक्तसमाख्यानाच्च निरवकाशसाधकसद्भावाद् वैश्वानरादिशब्दानां अग्न्यादिलिङ्गानां च तथोपासनार्थतया ईशे सावकाशत्वाद्विष्णौ मुख्यानामपि शब्दानां अनन्यगतिकतया शब्दाधीनहानादिव्यवहारसिद्ध्यर्थमन्यत्र व्यवहाराविरोधात् ।

ಸಿದ್ಧಾಂತ ಹೀಗಿದೆ - ಆತ್ಮಾನಂ ಎಂಬ ಶ್ರುತಿಯಲ್ಲಿ ಕೇಳಿಸುತ್ತಿರುವ ಆತ್ಮಶಬ್ದದ ಬಲದಿಂದ ಅಭಿಮಾನಂ ಎಂಬ ಶ್ರುತಿಯಲ್ಲಿ ಕೇಳಿಸುತ್ತಿರುವ ಸರ್ವಗತತ್ವಲಿಂಗದಿಂದ ಅಹಂ ವೈಶ್ವಾನರೋ ಭೂತ್ವಾ ಎಂಬ ಸ್ಮೃತಿಸಮಾಖ್ಯಾಪ್ರಮಾಣದಿಂದ 'ಕೋ ನ ಆತ್ಮಾ ಕಿಂ ಬ್ರಹ್ಮ' ಎಂಬುದಾಗಿ ವಿಚಾರಪೂರ್ವಕವಾಗಿ ಉಪಕ್ರಮಮಾಡಿ ಈ ವಿದ್ಯೆಯನ್ನು ಅಧ್ಯಯನ ಮಾಡುತ್ತಿರುವ ಕಾರಣ ವೈಶ್ವಾನರವಿದ್ಯೆಯು ಬ್ರಹ್ಮಪ್ರಕರಣವಾಗಿದೆಯೆಂದು ಸ್ಪಷ್ಟವಾಗಿರುವುದರಿಂದ ಮತ್ತು ಶೀರ್ಷ್ಣೋ ದ್ಯೌಃ ಸಮವರ್ತತ ಎಂಬ ಪುರುಷಸೂಕ್ತದಲ್ಲಿ ಹೇಳಲ್ಪಟ್ಟ ದ್ಯುಲೋಕಾದಿಗಳಿಗೆ ಭಗವಂತನ ಅವಯವಗಳು ಜನಕವಾಗಿವೆ. ಅದನ್ನೇ ಮೂರ್ಧೈವ ಸುತೇಜಾಃ ಎಂಬುದಾಗಿ ವೈಶ್ವಾನರವಿದ್ಯೆಯು ಹೇಳುತ್ತಿದೆ. ಅಂದರೆ ಪುರುಷಸೂಕ್ತದಿಂದ ಭಗವಂತನೇ ಪ್ರತಿಪಾದ್ಯನೆಂಬ ವಿಚಾರವು ಪ್ರಸಿದ್ಧವಾಗಿದೆ. ಅಂತಹ ವ್ಯಕ್ತಿಯನ್ನೇ ವೈಶ್ವಾನರವಿದ್ಯೆಯು ಪ್ರತಿಪಾದಿಸುತ್ತಿರುವುದರಿಂದ ಭಗವಂತನೇ ಇಲ್ಲಿ ಪ್ರಸಕ್ತನಾಗಿದ್ದಾನೆಂದು ತಿಳಿಯುತ್ತದೆ. ಹೀಗೆ ನಿರವಕಾಶಸಾಧಕಪ್ರಮಾಣವು ಇರುತ್ತದೆ. ಹಾಗೂ ವೈಶ್ವಾನರ ಮೊದಲಾದ ಶಬ್ದಗಳನ್ನು ಅಗ್ನಿಮೊದಲಾದ ದೇವತೆಗಳ ಲಿಂಗಗಳನ್ನು ಕೇವಲ ಭಗವಂತನಲ್ಲಿ ಮಾಡುವ ಉಪಾಸನೆಗೋಸ್ಕರ ಶ್ರುತಿ ಹೇಳಿದೆ. ಆದ್ದರಿಂದ ಅಗ್ನ್ಯಾದಿ ಲಿಂಗಗಳು ಹಾಗೂ ಶ್ರುತಿಗಳು ಸಾವಕಾಶವಾಗಿವೆಯೆಂದು ತಿಳಿಯಬೇಕು. ವಸ್ತುತಃ ಸಕಲಶಬ್ದಗಳೂ ಭಗವಂತನನ್ನೇ ಪ್ರತಿಪಾದಿಸುತ್ತವೆ. ಆದರೂ ಬೇರೆ ಗತಿಯಿಲ್ಲದೆ ಉಳಿದ ಪದಾರ್ಥಗಳ ಹಾನಾದಿ ವ್ಯವಹಾರಕ್ಕೋಸ್ಕರ ಬೇರೆ ಕಡೆ ಅಮುಖ್ಯವಾಗಿ ಪ್ರಯೋಗಿಸುತ್ತಾರೆ. ಆದ್ದರಿಂದ ಲೋಕವ್ಯವಹಾರದ ವಿರೋಧಕ್ಕೆ ಅವಕಾಶವಿಲ್ಲ.

ವೈಶ್ವಾನರಾಧಿಕರಣ (೧-೨-೭)

अग्न्यादिविद्यादिभिः ब्रह्मोपासनया अग्न्यादावेव विष्णोः व्यक्तत्वानुस्मरणीयत्वप्राप्यत्वरूपनिमित्तैः विद्यादिव्यवस्थोपपत्तेः। बाधकाभावाद्वैश्वानरो विष्णुरेवेति प्राचीनोऽपि स एवेति ।। फले तु पूर्वाक्षेपसमाधी ।। ७ ।।

।। इति श्रीराघवेन्द्रयतिकृतायां न्यायमुक्तावल्याम् आद्येऽध्याये द्वितीयः पादः ।।

ಅಗ್ನಿಮೊದಲಾದ ವಿದ್ಯೆಗಳಿಂದ ಬ್ರಹ್ಮನನ್ನು ಉಪಾಸನೆ ಮಾಡಿದಾಗ ಅಂತಹ ದೇವತೆಗಳಲ್ಲೇ ವಿಷ್ಣು ಪ್ರಕಟನಾಗುತ್ತಾನೆ. ಈ ಕಾರಣಕ್ಕಾಗಿ ಅಂತಹ ಅಧಿಷ್ಠಾನಗಳಲ್ಲಿ ಭಗವಂತನನ್ನು ಉಪಾಸನೆಮಾಡಬೇಕೆಂದು ಅಗ್ನಿವಿದ್ಯೆ ವಾಯುವಿದ್ಯೆ ಇತ್ಯಾದಿಯಾದ ವ್ಯವಸ್ಥೆಯನ್ನು ಮಾಡಲಾಗಿದೆ.

ಈ ಎಲ್ಲ ಕಾರಣಗಳಿಂದ ಮತ್ತು ಯಾವುದೇ ಬಾಧಕಗಳಿಲ್ಲದ್ದರಿಂದ ವಿಷ್ಣುವೇ ವೈಶ್ವಾನರನಾಗಿದ್ದಾನೆ. ಆದ್ದರಿಂದ ಹಿಂದಿನ ಅಧಿಕರಣದಲ್ಲಿ ಸರ್ವಗತತ್ವಧರ್ಮಕ್ಕೆ ಆಶ್ರಯನಾದ ಅಕ್ಷರನೂ ಸಹ ವಿಷ್ಣುವೇ ಆಗಿದ್ದಾನೆಂದು ನಿರ್ಣಯವಾಗುತ್ತದೆ.

ಹಿಂದಿನ ಅಧಿಕರಣದ ಪ್ರಮೇಯವನ್ನು ಆಕ್ಷೇಪಿಸುವುದು ಪೂರ್ವಪಕ್ಷದ ಫಲ. ಅದನ್ನು ನಿರಾಕರಿಸುವುದು ಸಿದ್ಧಾಂತದ ಫಲ.

ಇಲ್ಲಿಗೆ ಶ್ರೀರಾಘವೇಂದ್ರಯತಿಗಳಿಂದ ವಿರಚಿತವಾದ ನ್ಯಾಯಮುಕ್ತಾವಳಿಯ ಕನ್ನಡಾನುವಾದದಲ್ಲಿ
ಪ್ರಥಮಾಧ್ಯಾಯದ ದ್ವಿತೀಯಪಾದವು ಮುಗಿಯಿತು.

# सूत्रार्थरत्नावलिः

## वैश्वानराधिकरणम् (१।२।७)

अत्र पाचकाद्यनेकलिङ्गसमन्वयसिद्ध्यर्थं ब्रह्मणि वैश्वानरनामसमन्वयः क्रियते ।

### ॐ।। वैश्वानरः साधारणशब्दविशेषात् ।।ॐ

ननु नायं वैश्वानरो विष्णुः । साधकशून्यत्वात् । सर्वगतत्वलिङ्गस्यान्यत्रप्रसिद्ध वैश्वानरश्रुत्या बाधितत्वात् । नच लिङ्गस्य निरवकाशत्वेन तेन श्रुतिबाधः । श्रुतेरपि निरवकाशत्वात् । वैश्वानरश्रुतेर्निर्बाधसाधकशून्यत्वेन अग्निविष्णोः साधारण्येन चान्यतर

निश्चायकत्वाभावात् । अतो वैश्वानरो न विष्णुरिति प्राप्ते सूत्रमाह –

**ॐ।। वैश्वानरः साधारणशब्दविशेषादिति ।। अस्यार्थः – वैश्वानरः 'यस्त्वेतम्' इत्यादि (छां. ५।१८।१) वाक्यगतवैश्वानरादिशब्दवाच्यो विष्णुरेव नत्वग्निः । कुतः? साधारणशब्दविशेषात् । अग्निविष्ण्वोः साधारणस्य वैश्वानरशब्दस्य 'आत्मानं वैश्वानरम्' इति श्रुतावात्मशब्देन विशेषितत्वादित्यर्थः ।।**

एवञ्च साधारणस्यापि वैश्वानरशब्दस्य विष्ण्वैकनिष्ठतया श्रुत्यादिसिद्धेन 'आत्मानं वैश्वानरम्' इत्यात्मशब्दविशेषितत्वाद् विष्णुपरत्वसम्भवात् । प्रसिद्ध्यादेरन्यथोपपन्नत्वेन निर्णयकारणाभावाच्छन्दोविशेषादात्मशब्दाद् वैश्वानरो विष्णुरेवेति सिद्धम् ।

**ॐ।। स्मर्यमाणमनुमानं स्यादिति ।।ॐ**

ननु नायं वैश्वानरो विष्णुरेवेति घटते । सामानाधिकरण्याविरोधात् । विष्णुत्वनिश्चायकवदग्निनिश्चायकसद्भावात् इति प्राप्ते सूत्रमाह –

**ॐ।। स्मर्यमाणमनुमानं स्यादितीति ।। अस्यार्थः – इति स्मर्यमाणम् 'अहं वैश्वानरो भूत्वा' (गी.१५।१४) इत्युक्तं विष्णोर्वैश्वानरत्वम् । अनुमानं वैश्वानरविद्यायाः गीतोक्तभगवत्परत्वस्यानुमापकम् । स्यात् भवेदित्यर्थः ।**

एवञ्च गीतास्मृतेर्वैश्वानरविद्यासमानोक्तिरूपत्वादस्याः तत्समाख्यानात् निर्णायकत्वात्वेन वैश्वानरो विष्णुवेति सिद्धम् ।

**ॐ।। शब्दादिभ्योऽन्तः प्रतिष्ठानान्नेति चेन्न तथा दृष्ट्युपदेशादसम्भवात् पुरुषविधमपि चैनमधीयते ।।ॐ**

ननु '' 'वैश्वानरमृत आजातमग्निम्' (ऋ. ६।७।१) इत्यग्निशब्दस्य 'वैश्वानरे तद्धुतं भवति । हृदयं गार्हपत्य' (छां.५।१८।२) इत्यग्निलिङ्गस्य 'येनेदमन्नं पच्यते' (बृ.७।९।१) इत्यादिना पाचकत्वेनान्तःप्रतिष्ठानस्य च श्रवणात् । एतेषां विष्णावनवकाशात्'' इत्यादिना वैश्वानरस्य विष्णुत्वमाक्षिप्य समादधत् सूत्रमाह –

**ॐ।। शब्दादिभ्योऽन्तः प्रतिष्ठानान्नेति चेन्न तथा दृष्ट्युपदेशादसम्भवात् पुरुषविधमपि चैनमधीयत इति ।। अस्यार्थः – युक्तिसमुच्चये चशब्दः ।**

**शब्दादिभ्यः अग्निशब्द होमाधिकरणत्वलिङ्गादित्यर्थः । अन्तःप्रतिष्ठानात् पाचकत्वेन शारीरान्तरावस्थानाच्च । वैश्वानरो न विष्णुः किन्तु अग्निरेवेति चेन्न । कुतः? तथा दृष्ट्युपदेशात् । अग्न्यादिनामलिङ्गकर्मवत्त्वेन दृष्ट्युपदेशात् उपासनोपदेशादित्यर्थः । तथा च अग्न्यादिश्रुतिलिङ्गानां विष्णौ सावकाशत्वान्न तद्विरोध इति भावः । किञ्च अत्रोक्तात्मत्वब्रह्मत्वादीनां अग्न्यादावसम्भवाच्च वैश्वानरो विष्णुरेव । अपि च यतः छन्दोगाः एनं वैश्वानरम् । पुरुषविधं पुरुषसूक्तप्रतिपाद्यनारायणसमानगुणकमेव । अधीयते अभिदधति । अतोऽपि विष्णुरेवेत्यर्थः । चशब्देन पुरुषसूक्तस्य विष्णुपरत्वं बहुप्रमाणसिद्धमिति सूचयति ।**

एवञ्च 'सर्वनामा सर्वकर्मा' इत्यादिना महोपनिषदि तत्तन्नामलिङ्गत्वेन दृष्ट्युपदेशात् । 'को न आत्मा किं ब्रह्म' इति (छां.५।११।१) विष्णोरेवारम्भात् । 'चन्द्रमा मनसो जातः; (तै.आ.३।१२) इत्यादिना, 'यः पुरुषाख्यो विष्णुरभिहितो मूर्धैव सुतेजा' (छां.५।१८।२) इत्यादिना वैश्वानरस्य तद्विधानत्वाभिधानाच्च । ततश्च वैश्वानरो विष्णुरेवेति सिद्धम् ।

**ॐ ।। अत एव न देवता भूतं च ।। ॐ**

ननु 'वैश्वानरशब्दस्य तेजसि भूतेऽग्निदेवतायां च प्रसिद्धत्वादत्राप्यसौ तत्परः स्यात्' इति प्राप्ते तन्निरासाय सूत्रमुपन्यस्यति –

**ॐ ।। अत एव न देवता भूतं चेति ।। अस्यार्थः – साक्षात् मुख्यवृत्त्या । अपि ब्रह्मणोऽग्न्यादिशब्दवाच्यत्वेऽपि । अविरोधम् अज्ञानादिनिमित्तान्तरेण अग्न्यादौ तत्तच्छब्दविरोधाभावम् । जैमिनिराचार्यो वक्तीत्यर्थः ।**

एवञ्चाग्न्यादिशब्दानां ब्रह्मवदग्न्याद्यवाचित्वेपि अग्न्यादिज्ञानार्थमभिज्ञैरन्यत्र व्यवहारात् । अनभिज्ञैस्तु परममुख्यार्थभगवदज्ञानादेव मुख्यार्थेऽग्न्यादावेव प्रयोगेण प्रसिद्ध्युपपत्तेरग्न्यादिशब्दा विष्णुवाचकाः । नच जैमिन्यादिमतानां व्यासमतेन परस्परं विरोधः । व्यासचित्तस्थितं मतापरपर्यायं ज्ञानाख्यमहाकाशमपेक्ष्य गृहाद्यव॰ ाच्छिन्नाकाशत्वपरिमितविषयाणि कानिचिदेतान्यूरीकृत्य जैमिन्याद्या व्यवहरन्ति । 'व्यासचित्तस्थिताकाशात्' इति स्मृतेः । अतस्तेषां मतानामविरोध इति सिद्धम् ।

ಪರಿಪೂರ್ಣಚಂದ್ರಿಕಾ

ॐ॥ अभिव्यक्तेरित्याश्मरथ्यः ॥ॐ (२९)

ननु "लौकिकप्रसिद्धेरज्ञानादिमूलत्वेनान्यथोपपत्तावपि वैदिकाग्न्यादिसूक्त- मन्त्रादिप्रसिद्ध्यन्यथाऽनुपपत्त्याऽग्न्यादीनां सूक्तादिगताग्न्यादिशब्दवाच्यत्वं स्यात् । तत्राज्ञानादिमूलकत्वकल्पनाऽयोगेनान्यथोपपत्त्यभावात् । नापि व्यवहारार्थत्वेनान्यथोपपत्तिः । अनादित्वात्" इति प्राप्ते, सूत्रितम् –

**ॐ॥ अभिव्यक्तेरित्याश्मरथ्य इति ॥ अस्यार्थः – अभिव्यक्तेः अग्न्यादिषु ब्रह्मोपास्तौ कृतायां तेषु ब्रह्मणोऽभिव्यक्तेः । तन्निमित्तोऽग्न्यादिसूक्तनियम इति आश्मरथ्याचार्यो मन्यत इत्यर्थः ।**

एवञ्च अग्न्यादिसूक्तैरुपासकानामग्न्यादौ च भगवभिव्यक्त्या सूक्तनियमसम्भवादग्न्यादिशब्दवाच्यो विष्णुरेवेति सिद्धम् । ततश्चाश्मरथ्याचार्यमतेनाविरोध इति सिद्धम् ॥

(३०) ॐ ॥ अनुस्मृतेर्बादरिः ॥ ॐ

प्रकारान्तरेण सूक्तादिनियमस्यान्यथोपपत्तिं कथयत् सूत्रमुपन्यस्यति –

**ॐ ॥ अनुस्मृतेर्बादरिरिति ॥ अस्यार्थः – अनुस्मृतेः तत्तसूक्ताद्युपासकैरग्न्यादिष्वेव ब्रह्मणोऽनुस्मृतेः अनुसन्धानाद्धेतोः । अग्न्यादिसूक्तव्यवस्थेति बादरिर्वक्तीत्यर्थः ।**

एवञ्च अग्न्यादिसूक्तैरुपासकानामग्न्यादौ विष्णोः स्मर्तव्यत्वान् सूक्तनियमसम्भवाद् अग्न्यादिशब्दवाच्यो विष्णुरेवेति सिद्धम् । तया च बदरात्मजस्य शुकाचार्यस्य मतस्याविरोध इति स्थितम् ।

(३१) ॐ ॥ सम्पत्तेरिति जैमिनिस्तथा हि दर्शयति ॥ ॐ

रीत्यन्तरेण सूक्तनियमस्यान्यथोपपत्तिं प्रतिपादयत् सूत्रं व्याचष्टे –

**ॐ॥ सम्पत्तेरिति जैमिनिस्तथा हि दर्शयतीति ॥ अस्यार्थः – हि यस्मात् । 'तं तथा' इति हि प्रसिद्धाश्रुतिः तथा दर्शयति यथा जैमिनिमतं तथा प्रतिपादयति । तस्मात् जैमिनिः स्वोक्त्यनुकूलश्रुत्यनुसारेण सम्पत्तेः अग्न्यादिसूक्तोपासकानामग्न्यादिप्राप्तिहेतोः । तद्विवक्षया सूक्तादिनियम इति आहेत्यर्थः ।**

एवञ्च अग्न्यादिसूक्तादिषु मुख्यतः परब्रह्मण एव प्रतिपाद्यत्वेऽपि सूक्तादिनियमो युज्यते । भगवदुपासकानामग्न्यादिप्राप्तिर्भवति । अतो लौकिकव्यवहाराविरोध इति जैमिनिर्मन्यते । अतः सूक्तनियमोऽभ्युपगन्तव्य इति सिद्धम् ।

**(३२) ॐ।। आमनन्ति चैनमस्मिन् ।।ॐ**

नन्वग्न्यादिसूक्तादिभिः ब्रह्मोपासकस्याग्न्यादिप्राप्तिर्भवतीति वक्तुं न युक्तम् । 'मद्भक्ता यान्ति' (गी.७।२३) इत्यादेरन्योपासकस्यान्यप्राप्त्ययोगात् । श्रुतेति सूत्रे तदनभ्युपगमाच्चेति प्राप्ते सूत्रमाह –

**ॐ।। आमनन्ति चैनमस्मिन्निति ।। अस्यार्थः – चः शङ्कानिवर्तकः । यस्मात् एनं विष्णुम् । अग्न्यादौ आमनन्ति तत्स्थतया 'योऽग्नौ तिष्ठन्' (बृ.५।७।५) इत्याद्याः श्रुतयः प्रतिपादयति । तस्मात् कथमग्न्यादिषु विष्णूपास्त्याऽग्न्यादि प्राप्तिर्भवतीति शङ्का निवृत्ता । कुतः? अग्न्यादिपदेन तत्स्थभगवत्प्राप्तेरेवाभिप्रेतत्वादित्यर्थः ।**

एवञ्च तत्तत्सूक्तोपासकानामग्न्यादिपदेन तदन्तर्गतविष्णुप्राप्तेर्विवक्षितत्वात् । विष्णूपासकस्य अग्न्यादिप्राप्त्युक्तेरयोगात् । नच विष्णोरग्न्याद्यन्तर्गतत्वासिद्धिः । 'योऽग्नौ तिष्ठन्' इत्यादिश्रुतेः । अतोऽग्न्यादिशब्दवाच्यो विष्णुरेवेति सिद्धम् ।।

।। इति सूत्रार्थरत्नावळ्यां वैश्वानराधिकरणम् प्रथमाध्यायस्य द्वितीयः पादः।।

।। ಪರಿಪೂರ್ಣಚಂದ್ರಿಕೆಯಲ್ಲಿ ವೈಶ್ವಾನರಾಧಿಕರಣವು ಮುಗಿಯಿತು ।।

।। ಶ್ರೀಮಧ್ವೇಶಾರ್ಪಣಮಸ್ತು ।।

# ದ್ಯುಭ್ವಾದ್ಯಧಿಕರಣ

(೧-೩-೧)

## ಭಾಗ -೧

ಬ್ರಹ್ಮಸೂತ್ರ, ಸೂತ್ರದೀಪಿಕಾ, ಬ್ರಹ್ಮಸೂತ್ರಭಾಷ್ಯ, ಭಾಷ್ಯದೀಪಿಕಾ,
ಸತ್ತರ್ಕದೀಪಾವಳಿ, ತತ್ವಪ್ರಕಾಶಿಕಾ,
ಭಾವದೀಪ, ವಾಕ್ಯಾರ್ಥಮಂಜರೀ

॥ ಶ್ರೀಗುರುಭ್ಯೋ ನಮಃ ॥

ದೇವದೇವೋತ್ತಮ ದೇವತಾಸಾರ್ವಭೌಮ
ಅಖಿಲಾಂಡಕೋಟಿಬ್ರಹ್ಮಾಂಡನಾಯಕ, ಚತುರ್ದಶಲೋಕಗುರುಗಳಾದ
ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ

ಬ್ರಹ್ಮಮೀಮಾಂಸಾಶಾಸ್ತ್ರ

# ದ್ಯುಭ್ವಾದ್ಯಧಿಕರಣ

## ಸ್ವರ್ಗಾದಿ ಲೋಕಗಳಿಗೆ ಮಹಾವಿಷ್ಣುವೇ ಆಧಾರ

।। अथ तृतीयः पादः ।।

।। अथ द्युभ्वादधिकरणम् ।।

**सू – ॐ ॥ द्युभ्वाद्यायतनं स्वशब्दात् ॥ ॐ ॥ १ ॥**

'ಯಸ್ಮಿನ್ ದ್ಯೌಃ' ಎಂಬ ಮಂತ್ರದಲ್ಲಿ ಸ್ವರ್ಗ, ಭೂಮಿ ಮೊದಲಾದವುಗಳಿಗೆ ಆಶ್ರಯನಾಗಿ ಹೇಳಲ್ಪಟ್ಟವನು ವಿಷ್ಣುವೇ ಆಗಿದ್ದಾನೆ. ವಿಷ್ಣುವಿಗೆ ಮಾತ್ರ ಸಂಬಂಧಿಸಿದ ಆತ್ಮಶಬ್ದವು ಈ ವಿಷಯದಲ್ಲಿ ಆಧಾರವಾಗಿದೆ.

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

सूत्रदीपिका – द्युभ्वाद्यायतनं 'यस्मिन्' इति वाक्योक्तस्वर्गभूम्यादिसर्वाश्रयो विष्णुरेव न त्वन्यः । कुतः? स्वशब्दात् । स्वेतिशब्दः स्वशब्दः स्वशब्दगृहीत-ब्रह्मवाचकात्मशब्दादिभ्यः ।।

ಅರ್ಥ --ದ್ಯುಭ್ವಾದ್ಯಾಯತನಂ = 'ಯಸ್ಮಿನ್' ಎಂಬ ಮಾಂಡೂಕ್ಯೋಪನಿಷತ್ತಿನವಾಕ್ಯದಲ್ಲಿ ಸ್ವರ್ಗ ಭೂಮಿ ಮೊದಲಾದುಗಳಿಗೆ ಆಶ್ರಯನಾಗಿ ಹೇಳಲ್ಪಟ್ಟಿರುವವನು ವಿಷ್ಣುವೇ ಆಗಿದ್ದಾನೆ ಹೊರತು ಬೇರೆಯವರಲ್ಲ. ಏಕೆಂದರೆ ಸ್ವಶಬ್ದಾತ್ = ಸ್ವ ಎಂಬ ಶಬ್ದವೇ ಸ್ವಶಬ್ದ ಎನಿಸುತ್ತದೆ. ವಿಷ್ಣುವಿಗೆ ಮಾತ್ರ ವಾಚಕವಾದ ಆತ್ಮಶಬ್ದದ ಆಧಾರದಿಂದ.

## श्रीमदानन्दतीर्थभगवत्पादाचार्यविरचित-

# ब्रह्मसूत्रभाष्यम्

**भाष्यम् – तत्र चान्यत्र च प्रसिद्धानां शब्दानां विष्णौ समन्वयं प्रायेणास्मिन् पादे दर्शयति ।**

ಅನುವಾದ - ಭಗವಂತನಲ್ಲಿ ಮತ್ತು ಬೇರೆಯವರಲ್ಲಿ ಪ್ರಸಿದ್ಧವಾಗಿರುವ ಶಬ್ದಗಳ ಸಮನ್ವಯವನ್ನು ವಿಷ್ಣುವಿನಲ್ಲಿ ಪರಮಮುಖ್ಯವೃತ್ತಿಯಿಂದ ಮಾಡಿ ತೋರಿಸುತ್ತಿದ್ದಾರೆ. ಮತ್ತು ಅದಕ್ಕೆ ಸಂಬಂಧಪಟ್ಟ ಕೆಲವುಬೇರೆ ವಿಷಯಗಳ ಪ್ರಸಕ್ತಿಯು ಈ ಪಾದದಲ್ಲಿ ಇರುತ್ತದೆ.

ಪ್ರತಿಪದಾರ್ಥ - ಉಭಯತ್ರಪ್ರಸಿದ್ಧವಾದ ನಾಮಲಿಂಗಾತ್ಮಕಶಬ್ದಗಳ ಸಮನ್ವಯ ಮಾಡುವುದಕ್ಕಾಗಿ ಮೂರನೆಯ ಪಾದವು ಹೊರಟಿದೆ. ಈ ವಿಷಯವನ್ನು ಭಾಷ್ಯಕಾರರು ಹೇಳುತ್ತಿದ್ದಾರೆ.

ತತ್ರ = ಭಗವಂತನಲ್ಲಿ, ಚ ಮತ್ತು ಅನ್ಯತ್ರ = ಬೇರೆಯವರಲ್ಲಿ, ಪ್ರಸಿದ್ಧಾನಾಂ ಶ್ರುತಿಯಿಂದ ಹಾಗೂ ವ್ಯವಹಾರದಿಂದ ಪ್ರಸಿದ್ಧವಾದ, ಶಬ್ದಾನಾಂ = ನಾಮಾತ್ಮಕಶಬ್ದಗಳ ಹಾಗೂ ಲಿಂಗಾತ್ಮಕಶಬ್ದಗಳ, ವಿಷ್ಣೌ = ನಾರಾಯಣನಲ್ಲಿ, ಸಮನ್ವಯಂ = ಪರಮಮುಖ್ಯವೃತ್ತಿಯಿಂದ ಸಮನ್ವಯವನ್ನು, ಅಸ್ಮಿನ್ = ಈ, ಪಾದೇ = ಮೂರನೆಯ ಪಾದದಲ್ಲಿ, ಪ್ರಾಯೇಣ = ಬಹುತೇಕವಾಗಿ, ದರ್ಶಯತಿ = ತೋರಿಸುತ್ತಿದ್ದಾರೆ. (ದೇವತಾಧಿಕರಣ ಹಾಗೂ ಅಪಶೂದ್ರಾಧಿಕರಣಗಳಲ್ಲಿ ಸಮನ್ವಯ ಮಾಡದ ಕಾರಣ ಪ್ರಾಯೇಣ ಎಂದು ಹೇಳಿದ್ದಾರೆ.)(१)

**भाष्यम् – विष्णोः परविद्याविषयत्वमुक्तम् । तत्र 'यस्मिन् द्यौः पृथिवी चान्तरिक्षमोतं मनः सह प्राणैश्च सर्वैः । तमेवैकं जानथ आत्मानम्'**

(१) भाष्यदीपिका – एतत्पादप्रतिपाद्यं दर्शयति – तत्रेति ।। अन्योन्यसमुच्चये चशब्दौ । देवताधिकरणापशूद्राधिकरणयोः समन्वयाकरणात् तद्व्यावृत्त्यर्थं – 'प्रायेण' प्राचुर्येणेति । तथा च प्रायेणास्मिन् तृतीये पादे 'तत्र' हरौ तस्मात् 'अन्यत्र' रुद्रप्रकृत्यादौ च श्रुतिलिङ्गादिभिः प्रसिद्धानां नामलिङ्गात्मकशब्दानां विष्णौ 'समन्वयं' परममुख्यया वृत्त्या तात्पर्यप्रबलहेतुभिः 'दर्शयति' प्रतिपादयति सूत्रकृदित्यर्थः ।

**(मुं. २-२-५.)इत्यत्र । 'प्राणानां ग्रन्थिरसि रुद्रो माऽऽविशान्तकः' (महाना-३५.)'प्राणेश्वरः कृत्तिवासाः पिनाकी' (घृतसूक्तम्) इत्यादिना रुद्रस्य प्राणाधारत्वप्रतीतेः 'स एषोऽन्तश्चरते बहुधा जायमानः' (मुं.२-२-६.)इति जीवलिङ्गाच्च तयोः प्राप्तिरिति ॥**

ಅದೃಶ್ಯತ್ವಾಧಿಕರಣದಲ್ಲಿ ಪರವಿದ್ಯೆಗೆ ವಿಷಯನಾದವನು ವಿಷ್ಣು ಎಂದು ಹೇಳಲಾಯಿತು. ಆದರೆ ಆ ಪರವಿದ್ಯಾವಿಷಯತ್ವವು ಆಥರ್ವಣಶ್ರುತಿಯಲ್ಲಿ ''ಯಸ್ಮಿನ್ ದ್ಯೌಃ'' ಇತ್ಯಾದಿಯಾಗಿ ಯಾವ ವ್ಯಕ್ತಿಯು ದ್ಯುಲೋಕ, ಭೂಲೋಕ ಮೊದಲಾದವುಗಳಿಗೆ ಆಶ್ರಯನಾಗಿದ್ದಾನೋ ಅಂತಹವನಲ್ಲಿ ಹೇಳಲ್ಪಟ್ಟಿದೆ. ಅಲ್ಲಿ ಹೇಳಲ್ಪಟ್ಟ ದ್ಯುಭ್ವಾದ್ಯಾಯತನತ್ವ ಎಂಬ ಲಿಂಗವು ರುದ್ರದೇವರಲ್ಲಿ ಅಥವಾ ಜೀವರಲ್ಲಿ ಹೇಳಬಹುದು. ಏಕೆಂದರೆ ಸ್ವರ್ಗಲೋಕ ಭೂಲೋಕ ಇವುಗಳಿಗೆ ಅಶ್ರಯನಾದವನು ಇಂದ್ರಿಯಗಳಿಗೆ ಆಧಾರನಾಗಿದ್ದಾನೆಂದು 'ಮನಃ ಸಹ ಪ್ರಾಣೈಶ್ಚ ಸರ್ವೈಃ ' ಎಂಬ ಶ್ರುತಿಯಲ್ಲಿ ಹೇಳಲಾಗಿದೆ. 'ಪ್ರಾಣಾನಾಂ ಗ್ರಂಥಿರಸಿ ರುದ್ರೋ ಮಾವಿಶಾಂತಕಃ' ಎಂಬ ಶ್ರುತಿಯಲ್ಲಿ ಪ್ರಾಣ ಮೊದಲಾದ ಇಂದ್ರಿಯಗಳಿಗೆ ಆಶ್ರಯನಾದವನು ರುದ್ರ ಎಂದು ತಿಳಿಯುತ್ತದೆ. ಮತ್ತು ಪ್ರಾಣೇಶ್ವರನೆಂದರೆ ರುದ್ರನೇ ಆಗಿದ್ದಾನೆಂದು 'ಪ್ರಾಣೇಶ್ವರಃ ಕೃತ್ತಿವಾಸಾ ಪಿನಾಕೀ' ಎಂಬ ಘೃತಸೂಕ್ತವು ಹೇಳುತ್ತಿದೆ.

ಅಥವಾ ದ್ಯುಭ್ವಾದಿಲೋಕಗಳಿಗೆ ಆಶ್ರಯನಾದವನು ಜೀವನೂ ಸಹ ಆಗಬಹುದು. 'ಸ 'ಏಷೋಽಂತಶ್ಚರತೇ ಬಹುಧಾ ಜಾಯಮಾನಃ' ಎಂಬ ಈ ಶ್ರುತಿಯು ಜೀವನು ಅನೇಕ ಶರೀರಗಳಲ್ಲಿ ಹುಟ್ಟಿ, ಅದರೊಳಗಿರುತ್ತಾನೆಂಬ ಜೀವನ ಧರ್ಮವನ್ನು ಹೇಳಿದೆ. ಆದ್ದರಿಂದ ರುದ್ರ ಅಥವಾ ಜೀವರುಗಳೇ ದ್ಯುಭ್ವಾದ್ಯಾಯತನತ್ವಎಂಬ ಲಿಂಗಕ್ಕೆ ಆಶ್ರಯರಾಗಿದ್ದಾರೆಂದು ಪೂರ್ವಪಕ್ಷ ಪ್ರಾಪ್ತವಾಗುತ್ತದೆ.

ಪ್ರತಿಪದಾರ್ಥ -- ಮೊದಲನೆಯ ಈ ಅಧಿಕರಣದಲ್ಲಿ ದ್ಯುಭ್ವಾದ್ಯಾಯತನತ್ವ (ಸ್ವರ್ಗಲೋಕ, ಭೂಲೋಕ ಮೊದಲಾದವುಗಳಿಗೆ ಆಶ್ರಯನಾಗಿರುವಿಕೆ) ಎಂಬ ಲಿಂಗಾತ್ಮಕಶಬ್ದವನ್ನು ಪರಮಾತ್ಮನಲ್ಲಿ ಸಮನ್ವಯ ಮಾಡಲಾಗಿದೆ. ಅದಕ್ಕಾಗಿ ಮೊದಲು ರುದ್ರ, ಅಥವಾ ಜೀವಸಾಮಾನ್ಯರೇ ದ್ಯುಭ್ವಾದ್ಯಾಯತನರಾಗಿದ್ದಾರೆಂಬ ಪೂರ್ವಪಕ್ಷವನ್ನು ತೋರಿಸುತ್ತಿದ್ದಾರೆ.

ವಿಷ್ಣೋಃ = ನಾರಾಯಣನಿಗೆ, ಪರವಿದ್ಯಾವಿಷಯತ್ವಂ = ಪರವಿದ್ಯೆಗೆ ವಿಷಯತ್ವವನ್ನು ಉಕ್ತಮ್ = ಹಿಂದಿನ ಅದೃಶ್ಯತ್ವಾಧಿಕರಣದಲ್ಲಿ ಹೇಳಲಾಯಿತು, ತತ್ರ = ಈ ಪರವಿದ್ಯಾವಿಷಯತ್ವವಿಷಯದಲ್ಲಿ ಅಥರ್ವಣೋಪನಿಷತ್ತಿನಲ್ಲಿ, ಯಸ್ಮಿನ್ = ಯಾವನಲ್ಲಿ ದ್ಯುಲೋಕವೆನಿಸಿದ ಸ್ವರ್ಗವು, ಚ = ಮತ್ತು, ಪೃಥಿವೀ = ಭೂಲೋಕವು, ಅಂತರಿಕ್ಷಂ = ಆಕಾಶವು ಓತಂ ಆಶ್ರಯಿಸಿಕೊಂಡಿವೆಯೋ ಮತ್ತು, ಸರ್ವೈಃ = ಎಲ್ಲಾ, ಪ್ರಾಣೈಃ = ಪ್ರಾಣ ಅಪಾನ ಮೊದಲಾದ ಪ್ರಾಣಗಳಿಂದ ಸಹ ಕೂಡಿರುವ, ಮನಃ = ಮನಸ್ಸು, ಓತಂ = ಯಾವ ವ್ಯಕ್ತಿಯನ್ನು ಆಶ್ರಯಿಸಿವೆಯೋ, ತಮೇವ = ಅವನನ್ನೇ,

ಏಕಂ = ಮುಖ್ಯವಾಗಿ, ಆತ್ಮಾನಃ = ಆತ್ಮಶಬ್ದವಾಚ್ಯನನ್ನಾಗಿ, ಜಾನಥ = ತಿಳಿಯಿರಿ. ಇತ್ಯತ್ರ = ಹೀಗೆ ಈ ಶ್ರುತಿಯಲ್ಲಿ, ಅಂತಹ ವ್ಯಕ್ತಿಯೇ ಪರವಿದ್ಯೆಗೆ ವಿಷಯನಾಗಿದ್ದಾನೆಂದು ಹೇಳಲಾಗಿದೆ.

ಮತ್ತು ಪ್ರಾಣಾನಾಂ = ಪ್ರಾಣಗಳಿಗೆ, ಗ್ರಂಥಿಃ = ನಿಯಾಮಕನು, ಅಸಿ = ಆಗಿರುವಿ. ಅಂತಕಃ = ಸಂಹಾರಕನೂ ಸಹ ನೀನೇ ಆಗಿರುವಿ. ಅಂತಹ ರುದ್ರನೇ ಮಾವಿಶ = ನನ್ನನ್ನು ಪ್ರವೇಶಿಸಬೇಡ. ಪ್ರಾಣೇಶ್ವರಃ = ಪ್ರಾಣಗಳಿಗೆ ಒಡೆಯನಾದ, ಕೃತ್ತಿವಾಸಾಃ = ಗಜಚರ್ಮಧಾರಿಯಾದ, ಪಿನಾಕೀ = ಪಿನಾಕವೆಂಬ ಧನುಸ್ಸನ್ನು ಧರಿಸಿದವನು, ಇತ್ಯಾದಿನಾ = ಇವೇ ಮೊದಲಾದ ವಾಕ್ಯಗಳಿಂದ, ಪ್ರಾಣಾಧಾರತ್ವಸ್ಯ = ಪ್ರಾಣಗಳಿಗೆ ಆಶ್ರಯವಾಗಿರುವಿಕೆ ಎಂಬ ಧರ್ಮವು, ರುದ್ರಸ್ಯ = ರುದ್ರದೇವರಿಗೆ, ಪ್ರತೀತೇಃ = ತೋರುತ್ತದೆ. ಆದಕಾರಣ;

ಮತ್ತು ಸ ಏಷಃ = ಇವನೇ, ಅಂತಃ = ಸಕಲಪ್ರಾಣಿಗಳ ಹೃದಯದಲ್ಲಿ, ಚರತೇ = ಸಂಚರಿಸುತ್ತಾನೆ. ಬಹುಧಾ = ಅನೇಕ ರೂಪಗಳನ್ನು ಹೊಂದಿ, ಜಾಯಮಾನಃ = ಹುಟ್ಟುತ್ತಾನೆ. ಇತಿ = ಹೀಗೆ, ಜೀವಲಿಂಗಾಚ್ಚ = ಜೀವನ ಲಿಂಗಗಳೂ ಸಹ ಇರುವುದರಿಂದ, ತಯೋಃ = ರುದ್ರ, ಹಾಗೂ ಜೀವರಿಗೆ, ಪ್ರಾಪ್ತಿಃ = ದ್ಯುಭ್ವಾದ್ಯಾಯತನತ್ವವೆಂಬ ಲಿಂಗವು ಪ್ರಾಪ್ತವಾಗುತ್ತದೆ. ಇತಿ = ಇಷ್ಟು ಪೂರ್ವಪಕ್ಷ.(१)

---

(१) **भाष्यदीपिका** – श्रुत्यादिसङ्गतिं विषयवाक्यमुदाहृत्य विषयसंशयसयुक्तिकपूर्वपक्षान् दर्शयति – **विष्णोरिति** ।। उक्तमित्यावर्तते । तत्रेत्यव्ययं तदित्यर्थेऽपि । अत्रेत्यप्यावर्तते । आदिशब्द उभयान्वयी । रुद्रस्येति शेषे षष्ठी । तयोरित्येतत् प्रधानवाय्वोरप्युपलक्षकम् । तथा चादृश्यत्वादिगुणकाक्षरस्य विष्णोः परविद्याविषयत्वं यत्रोक्तं तत्रैवाथर्वणे तत्परविद्याविषयत्वं

'यस्मिन् द्यौः पृथिवी चान्तरिक्षमोतं मनः सह प्राणैश्च सर्वैः ।
तमेवैकं जानथ आत्मानमन्या वाचो विमुञ्चथ ।।'(मुं.२–२–५)

'अमृतस्यैष सेतुः' इत्यत्र इति वाक्ये तत्र द्युभ्वाद्याश्रये उक्तमित्येका योजना । तत्र द्युभ्वाद्यायतनत्वे 'तयोः' रुद्रजीवयोः प्राप्तिः । कुतः? अत्र वाक्ये द्युभ्वाद्यायतने प्राणाधारत्वप्रतीतेः श्रवणात् । तथा 'स एषः' इति जीवलिङ्गश्रवणाच्च । न च प्राणाधारत्वश्रवणेऽपि कुतोऽत्र रुद्रस्य प्राप्तिरिति वाच्यम् । 'प्राणानां ग्रन्थिरसि रुद्रो माविशान्तकस्तेनान्नेनाप्यायस्व' (महाना. ३५.) इति तैत्तिरीयवाक्येन, तथा –

'यो ब्रह्म ब्रह्मण उज्जभार प्राणेश्वरः कृत्तिवासाः पिनाकी ।
ईशानो देवः स न आयुर्दधातु' (घृतसूक्तम्.)

इत्यादिखिलसंहितावाक्येन च रुद्रस्य प्राणाधारत्वप्रतीतेः, इत्यपरा योजना । यद्वा – अस्मिन्नेव पक्षे तयोरित्येतत् सप्तम्यन्तमाश्रित्य लिङ्गलिङ्गिरूपधर्मद्वयपरतया व्याख्येयम् । तथात्वे आदिशब्दो 'रुद्रो वाव लोकाधारः' इति वाक्यग्राही । एवं तत्र तयोः प्राप्तिरिति

**भाष्यम् – अत उच्यते –**

**सू – ॐ ॥ द्युभ्वाद्यायतनं स्वशब्दात् ॥ ॐ ॥ १ ॥**

**'तमेवैकं जानथ आत्मानम्' (मुं.२–२–५) इत्यात्मशब्दाद् द्युभ्वाद्याश्रयो विष्णुरेव ।**

**'आत्मब्रह्मादयः शब्दास्तमृते विष्णुमव्ययम् ।**
**न सम्भवन्ति यस्मात् तैर्नैवाऽस्मा गुणपूर्णता ॥' इति ब्रह्मवैवर्ते ॥ १ ॥**

ಹೀಗೆ ಪೂರ್ವಪಕ್ಷವು ಪ್ರಾಪ್ತವಾದರೆ ಸೂತ್ರಕಾರರು ನಿರಾಕರಿಸುತ್ತಿದ್ದಾರೆ.

'ತಮೇವೈಕಂ ಜಾನಥ' ಎಂಬ ಮಾಂಡೂಕ್ಯೋಪನಿಷತ್ತಿನ ಮಾತಿನಂತೆ ದ್ಯುಭ್ವಾದ್ಯಾಯತನನಾದವನು ಆತ್ಮನಾಗಿದ್ದಾನೆಂದು ತಿಳಿಯುತ್ತದೆ. ಆದ್ದರಿಂದ ವಿಷ್ಣುವೇ

---

दूरान्वयेन 'तत्र' परविद्याविषयत्वे तयो रुद्रजीवयोः प्राप्तिरित्यन्या योजना ।

तत्र आद्ययोजनायां द्युभ्वाद्यायतनत्वस्य विष्ण्वन्यत्वाक्षेपमुखेन 'तमेवम्' इत्यादिना 'अमृतस्यैष सेतुः' (मुं.२.२.५) इति वाक्यशेषबलात् प्रतीतस्य मोक्षजनकज्ञानजनक-विद्याविषयत्वरूपस्य तत्त्वप्रदीपरीत्याऽनन्ययोगेन प्राधान्येन ज्ञेयत्वरूपस्य वा परविद्याविषयत्वस्य पूर्वोक्तस्य विष्णोरितरत्वाक्षेपाद् अदृश्यत्वाधिकरणेनास्याऽक्षेपिकी सङ्गतिरुक्ता भवति । तथा द्युभ्वाद्यायतनत्वरूपो विषयः दर्शितः । द्विविधद्वितीययोजनायां सयुक्तिकपूर्वपक्षो दर्शितः । तृतीयायां तु पूर्वपक्षफलं दर्शितमिति द्रष्टव्यम् ।

'यस्मिन्' परमात्मनि द्व्यादिलोकाः 'मनः' तदभिमानी 'सर्वैः प्राणैः' इन्द्रियैस्तदभिमानिभिश्च सह 'तं' प्रविष्टं परमात्मानम् 'एकं' प्रधानं 'जानथ' जानीध्वम् इति श्रुत्यर्थः ।

रुद्र उ मा आविश इति पदच्छेदः । उ इत्यव्ययं सम्बुद्धिद्योतको निपातः । मा इत्यव्ययं, नास्मदादेशः माशब्दः । यद्वा मेत्यनेनास्मदादेशो माशब्दश्चेत्युभौ तन्त्रेणोपात्तौ । स च निषेधार्थः । तथा च – हे रुद्र त्वं 'प्राणानाम्' इन्द्रियाणां ग्रथ्यतेऽस्मिन्निति 'गन्थिः' आश्रयः 'अन्तकः' संहर्ता चासि । स त्वं 'मा' माम् 'आविश' प्रविश मयि सन्निधिं कुर्वित्यर्थः । यद्वा – हे रुद्र ! अन्तकस्त्वं मां मा प्रविशेत्यर्थः । 'तेन' आहुतिरूपेण दत्तेन 'अन्नेन' माम् 'आप्यायस्व' सुखय ।

यः 'ब्रह्मणे' चतुर्मुखाय 'ब्रह्म' वेदान् 'उज्जभार' उज्जहार, स 'प्राणेश्वरः' इन्द्रियेशः 'कृत्तिवासाः' कृत्तिश्चर्म वसनं यस्यासौ, 'पिनाकी' ईशानो न आयुः 'दधातु' पुष्णात्विति श्रुत्यन्तरार्थः । सिद्धान्ते तु रुद्रादिशब्दाः विष्णुपराः । य एष जीवो 'बहुधा' बहुशरीरेणोत्पद्यमानः शरीरान्तःसञ्चारीत्याथर्वणश्रुत्यर्थः ।

ದ್ಯುಭ್ವಾದ್ಯಾಯತನನಾಗುತ್ತಾನೆ; ಹೊರತು ರುದ್ರನಾಗಲೀ, ಜೀವನಾಗಲೀ ಆಗುವುದಿಲ್ಲ. ಏಕೆಂದರೆ ಆತ್ಮಾ, ಬ್ರಹ್ಮ ಮೊದಲಾದ ಶಬ್ದಗಳೆಲ್ಲವೂ ನಾಶರಹಿತನಾದ ವಿಷ್ಣುವನ್ನೇ ಪ್ರತಿಪಾದಿಸುತ್ತವೆ; ಹೊರತು ಬೇರೆಯವರನ್ನಲ್ಲ. ಚತುರ್ಮುಖಾದಿ ದೇವತೆಗಳೆಲ್ಲರೂ ಗುಣಪೂರ್ಣರಾಗದ ಕಾರಣ ಆತ್ಮಾದಿಶಬ್ದಗಳು ಅವರನ್ನು ಪ್ರತಿಪಾದಿಸುವುದಿಲ್ಲ. ಹೀಗೆ ಬ್ರಹ್ಮವೈವರ್ತಪುರಾಣವು ಹೇಳಿದೆ.

ಪ್ರತಿಪದಾರ್ಥ -- ಹೀಗೆ ಪೂರ್ವಪಕ್ಷವು ಪ್ರಾಪ್ತವಾದರೆ ಸಿದ್ಧಾಂತವನ್ನು ಸ್ಥಾಪನೆ ಮಾಡುವ ಸೂತ್ರವನ್ನು ಹೇಳಿದ ವ್ಯಾಖ್ಯಾನಿಸುತ್ತಿದ್ದಾರೆ.

ತಮೇವ = ವಿಷ್ಣುವನ್ನೇ, ಏಕಂ = ಪ್ರಧಾನವಾಗಿ, ಆತ್ಮಾನಂ = ಆತ್ಮಶಬ್ದವಾಚ್ಯನೆಂದು, ಜಾನಥ = ತಿಳಿಯಿರಿ. ಇತಿ = ಹೀಗೆ, ಆತ್ಮಶಬ್ದಾತ್ = ವಿಷ್ಣುವನ್ನೇ ಪ್ರತಿಪಾದಿಸುವ ಆತ್ಮಶಬ್ದವು ಕೇಳಿಸುತ್ತಿರುವುದರಿಂದ, ವಿಷ್ಣುರೇವ = ಮಹಾವಿಷ್ಣುವೇ, ದ್ಯುಭ್ವಾದ್ಯಾಶ್ರಯಃ = ಸ್ವರ್ಗ ಭೂಮಿ ಮೊದಲಾದ ಲೋಕಗಳಿಗೆ ಆಶ್ರಯನಾಗುತ್ತಾನೆ.

ಆತ್ಮಬ್ರಹ್ಮಾದಯಃ = ಆತ್ಮಾ ಬ್ರಹ್ಮ ಮೊದಲಾದ, ಶಬ್ದಾಃ = ಶಬ್ದಗಳು, ಅವ್ಯಯಂ = ನಾಶರಹಿತನಾದ, ವಿಷ್ಣುಂ = ವಿಷ್ಣುವನ್ನು, ಋತೇ = ಹೊರತಾಗಿ, ನ ಸಂಭವಂತಿ = ಚತುರ್ಮುಖಾದಿ ದೇವತೆಗಳಲ್ಲಿ ಕೂಡುವುದಿಲ್ಲ. ಯಸ್ಮಾತ್ = ಏಕೆಂದರೆ, ತೈಃ = ಚತುರ್ಮುಖಬ್ರಹ್ಮರುದ್ರಾದಿಗಳಿಂದ, ಗುಣಪೂರ್ಣತಾ = ಸಕಲಗುಣಪರಿಪೂರ್ಣತೆಯು, ನೈವಾಪ್ತಾ = ಹೊಂದಲ್ಪಟ್ಟಿರುವುದಿಲ್ಲ. ಇತಿ = ಹೀಗೆ ಬ್ರಹ್ಮವೈವರ್ತೇ = ಬ್ರಹ್ಮವೈವರ್ತಪುರಾಣದಲ್ಲಿ ಹೇಳಲಾಗಿದೆ.[೧]

---

(१) भाष्यदीपिका – सिद्धान्तयत्सूत्रमवतार्य व्याचष्टे – अत इति ।। सौत्रस्वशब्दस्य स्वशब्दपर्यायात्मशब्दादिति विष्णुतत्त्वनिर्णयोक्तेः, स्वेतिशब्दः स्वशब्द इति व्युत्पत्त्या स्वशब्दपर्यायात्मशब्दग्राहित्वं विष्णोः स्वरूपस्यैव साक्षाद्वाचको ह्ययमात्मशब्द इति तत्त्वप्रदीपोक्तेः, स्वस्य विष्णोरेव वाचकः शब्दः स्वशब्द इति विग्रहाश्रयेण चाऽत्मशब्दपरामर्शित्वमाश्रित्य स्वशब्दादित्येतदात्मशब्दादिति व्याख्यातम् । तथा च 'इत्यात्मशब्दात्' इत्यत्राऽत्मशब्दश्रवणादित्यर्थः । द्युभ्वाद्याश्रय इत्यनेनाऽयतनशब्दो व्याख्यातः । कचिदायतनशब्दस्यैव पाठः । विष्णुरेवेत्यनेन समन्वयसूत्रानुवृत्तं तत्त्वित्येतत् श्रुत्यनुसाराल्लिङ्गविपरिणामेन व्याख्यातम् । अनेन – 'स्वशब्दात्' विष्णु – वाचिस्वशब्दपर्यायात्मशब्दात्

स्वशब्दात् 'द्युभ्वाद्यायतनं' स्वर्गभूम्यादिसर्वाश्रयः 'तत्तु' विष्णुरेवेति सूत्रार्थ उक्तो भवति । आत्मशब्दादपि कुतोऽयं विष्णुरित्यत आह – आत्मेति ।। यस्मात् 'तैः' विष्णोरितरैश्चतुर्मुखादिजीवैः गुणपूर्णता 'नैवाऽप्ता' न सर्वथा प्राप्ता । तस्मादात्मब्रह्मादयः शब्दाः 'अव्ययं' नित्यनिरतिशयप्रवृत्तिनिमित्तवन्तं विष्णुम् 'ऋते' विना तदन्यं 'न सम्भवन्ति' न मुख्यतो वाचकत्वेन प्राप्नुवन्तीत्यर्थः । अनेनाऽत्मशब्दस्यापि गुणपूर्तिरर्थ इत्युक्तं भवति । ब्रह्मवैवर्त इत्यनन्तरमन्यत्र निरवकाशतयोक्तादिति शेषः । तस्याऽत्म-

**श्रीपद्मनाभतीर्थविरचितसत्तर्कदीपावळ्याम्ः**

**।। ॐ द्युभ्वाद्यायतनं स्वशब्दात् ॐ ।।**

**श्रीदशप्रमतिभ्यो नमः ।। 'विष्णौ तदितरत्रप्रसिद्धानां शब्दानां विष्णौ मुख्यवृत्तिः' अस्मिन् पादे बाहुल्येन प्रदर्श्यत इत्याह – तचेति ।।**

ವಿಷ್ಣುವಿನಲ್ಲಿ ಹಾಗೂ ಬೇರೆ ಪದಾರ್ಥಗಳಲ್ಲಿ ಪ್ರಸಿದ್ಧವಾದ ಶಬ್ದಗಳು ವಿಷ್ಣುವಿನಲ್ಲಿ ಮುಖ್ಯವೃತ್ತಿಯಿಂದ ಇರುತ್ತವೆಂದು ಈ ಪಾದದಲ್ಲಿ ಬಹಳವಾಗಿ ಸಮರ್ಥಿಸುತ್ತಿದ್ದಾರೆಂದು "ತತ್ರ" ಇತ್ಯಾದಿ ಗ್ರಂಥದಿಂದ ಹೇಳುತ್ತಿದ್ದಾರೆ.

**'यस्मिन् द्यौः' इत्याद्याम्नायते । तत्र श्रूयमाणो द्युभ्वा(द्या?)श्रयो रुद्रस्तावद्भवेत् । 'ओतं मनः सह प्राणैश्च सर्वैः' इति प्राणाधारत्वेनोच्यमानत्वात् । 'प्राणानां ग्रन्थिरसि प्राणेश्वरः' इति च श्रुत्यन्तरेण प्राणाधारत्वस्य रुद्रधर्मत्वेनोक्तत्वात् । 'ग्रथ्यते तस्मिन्' इति ग्रन्थिः = धारकः ।**

'ಯಸ್ಮಿನ್ ದ್ಯೌಃ' ಎಂಬುದು ಈ ಅಧಿಕರಣದ ವಿಷಯವಾಕ್ಯವಾಗಿದೆ. ಇದರಲ್ಲಿ ಕೇಳಿಸುತ್ತಿರುವ ದ್ಯುಭ್ವಾದ್ಯಾಯತನತ್ವವೆಂಬ ಧರ್ಮವು ರುದ್ರನಲ್ಲಿ ಬರುತ್ತದೆ. ಏಕೆಂದರೆ 'ಓತಂ ಮನಃ ಪ್ರಾಣೈಶ್ಚ ಸರ್ವೈಃ' ಎಂದು ಪ್ರಾಣಾಧಾರತ್ವಧರ್ಮವುಳ್ಳವನೇ ದ್ಯುಭ್ವಾದ್ಯಾಯತನನಾಗಿದ್ದಾನೆಂದು ಹೇಳಿರುವುದರಿಂದ. ಈ ಪ್ರಾಣಾಧಾರತ್ವವು 'ಪ್ರಾಣಾನಾಂ ಗ್ರಂಥಿರಸಿ ಪ್ರಾಣೇಶ್ವರಃ' ಎಂಬ ಮತ್ತೊಂದು ಶ್ರುತಿಯಿಂದ ರುದ್ರನ ಧರ್ಮವೆಂದು ಸಿದ್ಧವಾಗಿದೆ. ಗ್ರಂಥಿಶಬ್ದಕ್ಕೆ "ಗ್ರಥ್ಯತೇ ತಸ್ಮಿನ್" ಎಂಬ ವ್ಯುತ್ಪತ್ತಿಯಿಂದ ಧಾರಕನು ಎಂದರ್ಥ.

**'स एषोऽन्तरश्चरते बहुधा जायमानः' इति परामृष्टत्वात् द्युभ्वाद्याश्रयो जीवो वा भवेद् बहुधाजननस्य जीवलिङ्गत्वात् ।**

'ಸ ಏಷೋಽಂತಶ್ಚರತೇ ಬಹುಧಾ ಜಾಯಮಾನಃ' ಎಂಬುದಾಗಿ ಬಹುಧಾ ಜಾಯಮಾನತ್ವವೆಂಬ ಧರ್ಮವನ್ನು ಹೊಂದಿರುವ ಜೀವನನ್ನು ಪರಾಮರ್ಶಿಸಲಾಗಿದೆ. ಆದ್ದರಿಂದ ಇದು ಜೀವನ ಲಿಂಗವಾಗಿದೆ. ಆದ್ದರಿಂದ ಜಾಯಮಾನತ್ವವೆಂಬ ಲಿಂಗಕ್ಕೆ ಆಧಾರನಾದವನೇ ದ್ಯುಭ್ವಾದ್ಯಾಶ್ರಯನಾದ್ದರಿಂದ ಜೀವನು ದ್ಯುಭ್ವಾದ್ಯಾಶ್ರಯನಾಗುತ್ತಾನೆ.

**द्युभ्वाद्याश्रयस्यैव 'अथ परा यया तदक्षरमधिगम्यते' इत्युपक्रम्योक्तत्वात्**

---

शब्दादित्यनेनान्वयः ।

यदुक्तं 'परविद्याविषयत्वं विष्णुधर्मः' इति प्राक्, तदपि न सिद्ध्यति । तदाह – विष्णोरित्यादिना ।।

ಯಾವ ವ್ಯಕ್ತಿಯು ದ್ಯುಲೋಕ ಭೂಲೋಕಗಳಿಗೆ ಆಶ್ರಯನಾಗಿದ್ದಾನೋ 'ಅಥಪರಾ ಯಯಾ ತದಕ್ಷರಮಧಿಗಮ್ಯತೇ' ಎಂದು ಪರವಿದ್ಯೆಗೆ ವಿಷಯನಾಗಿದ್ದಾನೆಂದು ಹೇಳಿರುವುದರಿಂದ ವಿಷ್ಣುವೇ ದ್ಯುಭ್ವಾದ್ಯಾಶ್ರಯನಾಗಬೇಕೆಂದು ಹಿಂದೆ ಸಮರ್ಥಿಸಲಾಗಿತ್ತು. ಪರವಿದ್ಯೆಗೆ ವಿಷಯನಾದ್ದರಿಂದ ದ್ಯುಭ್ವಾದ್ಯಾಶ್ರಯನಾಗುತ್ತಾನೆಂಬ ಕಾರ್ಯಕಾರಣಭಾವವೂ ಸಹ ಸಿದ್ಧವಾಗುವುದಿಲ್ಲವೆಂದು "ವಿಷ್ಣೋಃ" ಇತ್ಯಾದಿಭಾಷ್ಯದಿಂದ ಹೇಳುತ್ತಿದ್ದಾರೆ. ಇಷ್ಟು ಪೂರ್ವಪಕ್ಷ.

एतन्निराकर्तुं सूत्रं पठित्वा व्याचष्टे – द्युभ्वेत्यादिना ।। 'तमेवेकं जानथ आत्मानम्' इत्यात्मशब्देन विशेषितत्वात् द्युभ्वाद्याश्रयो विष्णुरेव । गुणैराततत्ववाच्यात्मशब्दो न विष्णोरन्यत्र स्वार्थं लभते । तथाहि उक्तम् – आत्मब्रह्मेति ।। 'अमृतस्यैष सेतुः' इति मुक्ताधारत्वेनोच्यमानत्वादपि द्युभ्वाद्याश्रयो विष्णुः ।

ಈ ಪೂರ್ವಪಕ್ಷವನ್ನು ನಿರಾಕರಿಸುವುದಕ್ಕಾಗಿ ಸೂತ್ರವನ್ನು ಪಠಿಸುತ್ತಾ ವ್ಯಾಖ್ಯಾನಿಸುತ್ತಿದ್ದಾರೆ. 'ದ್ಯುಭ್ವಾದ್ಯಾಯತನಂ' ಇತ್ಯಾದಿಯಾಗಿ. 'ತಮೇವ ಜಾನಥ ಆತ್ಮಾನಂ' ಎಂಬುದಾಗಿ ಆತ್ಮಶಬ್ದವನ್ನು ವಿಶೇಷಣವನ್ನಾಗಿ ಹೇಳಿರುವುದರಿಂದ ಮಹಾವಿಷ್ಣುವೇ ದ್ಯುಭ್ವಾದ್ಯಾಶ್ರಯನಾಗುತ್ತಾನೆ. ಗುಣಗಳಿಂದ ಪೂರ್ಣನಾದವನೇ ಆತ್ಮಶಬ್ದವಾಚ್ಯನಾಗುತ್ತಾನೆ. ಆದ್ದರಿಂದ ವಿಷ್ಣುವನ್ನು ಬಿಟ್ಟು ಮತ್ತೊಂದು ಪದಾರ್ಥವು ಆತ್ಮಾ ಎನಿಸಲಾರದು. ಇದನ್ನೇ "ಆತ್ಮಬ್ರಹ್ಮಾದಯಃ" ಇತ್ಯಾದಿ ಶ್ಲೋಕದಲ್ಲಿ ಹೇಳಿರುತ್ತಾರೆ. 'ಅಮೃತಸ್ಯೈಷ ಸೇತುಃ' ಎಂಬಲ್ಲಿ ಮುಕ್ತರಿಗೆ ಆಧಾರನಾಗಿರುವಿಕೆ ಎಂಬ ಧರ್ಮವು ಹೇಳಲ್ಪಟ್ಟಿದೆ. ಇದರಿಂದಲೂ ದ್ಯುಭ್ವಾದ್ಯಾಶ್ರಯನಾದವನು ವಿಷ್ಣುವಾಗಿದ್ದಾನೆಂದು ನಿರ್ಣಯವಾಗುತ್ತದೆ.

तत्वप्रकाशिका –

श्रीमद्धनुमद्भीममध्वान्तर्गतरामकृष्णवेदव्यासात्मकलक्ष्मीहयग्रीवाय नमः।।ॐ।।

।। ॐ द्युभ्वाद्यायतनं स्वशब्दात् ॐ ।।

एतत्पादप्रतिपाद्यं दर्शयति – तत्र चेति ।। हरौ तदितरत्र च श्रुत्यादिप्रसिद्धन ामलिङ्गात्मकशब्दानां विष्ण्वेकवाचित्वं प्रबलहेतुभिः प्रतिपादयत्यस्मिन्पादे सूत्रकार इत्यर्थः ।

ಈ ಪಾದದಲ್ಲಿ ಪ್ರತಿಪಾದ್ಯವಾದ ವಿಷಯವನ್ನು ತತ್ರ ಚ ಎಂಬ ವಾಕ್ಯದಿಂದ ತೋರಿಸುತ್ತಿದ್ದಾರೆ.

ಶ್ರೀಹರಿಯಲ್ಲಿ ಮತ್ತು ಬೇರೆ ಕಡೆ ಶ್ರುತಿ ಮೊದಲಾದ ಪ್ರಮಾಣಗಳಿಂದ ಪ್ರಸಿದ್ಧವಾಗಿರುವ ನಾಮಾತ್ಮಕಶಬ್ದಗಳನ್ನು ಹಾಗು ಲಿಂಗಾತ್ಮಕಶಬ್ದಗಳನ್ನು ಕೇವಲ ವಿಷ್ಣುಪರವಾಗಿ ಅನೇಕ ಪ್ರಬಲವಾದ ಹೇತುಗಳಿಂದ ಈ ಪಾದದಲ್ಲಿ ಸೂತ್ರಕಾರರು ಪ್ರತಿಪಾದಿಸುತ್ತಿದ್ದಾರೆ.

**तत्वप्रकाशिका – चशब्दौ मिथःसमुच्चयार्थौ । देवताद्यधिकरणव्यावृत्त्यर्थम् – प्रायेणेति ॥**

ತತ್ರ ಚ ಅನ್ಯತ್ರ ಚ ಎಂಬಲ್ಲಿರುವ ಎರಡು ಚಶಬ್ದಗಳು ಪರಸ್ಪರ ಸಮುಚ್ಚಯವನ್ನು ತೋರಿಸುತ್ತಿವೆ. ದೇವತಾಧಿಕರಣ ಹಾಗೂ ಅಪಶೂದ್ರಾಧಿಕರಣಗಳು ಈ ನಿಯಮಕ್ಕೆ ಸಂಬಂಧಪಟ್ಟಿಲ್ಲವೆಂದು ತಿಳಿಸುವುದಕ್ಕಾಗಿ ಭಾಷ್ಯದಲ್ಲಿ ಪ್ರಾಯೇಣ ಎಂದು ಹೇಳಿದ್ದಾರೆ.

**तत्वप्रकाशिका – (अ)तत्र 'रुद्रो वाव लोकाधारः' 'वायुना वै गौतमसूत्रेणायं च लोकः परश्च लोकः सर्वाणि भूतानि सन्दृब्धानि भवन्ति' 'आकाश एव तदोतं च प्रोतं च' 'सर्वे वा एते प्राणाश्च प्राणिनश्च देवाश्च दिव्यानि च लोकाश्च लोकिनश्च अलोकाश्चालोकिनश्च विष्णावेवोताश्च प्रोताश्च' इत्यादिनोभयत्र प्रसिद्धद्युभ्वाद्यायतनत्वलिङ्गस्य भगवति समन्वयप्रतिपादनादस्ति शास्त्रादिसङ्गतिः ।**

ಈ ಅಧಿಕರಣದ ವಿಷಯವಾಕ್ಯ ಹೀಗಿದೆ "ರುದ್ರೋ ವಾವ ಲೋಕಾಧಾರಃ' ರುದ್ರನೇ ಸರ್ವಲೋಕಗಳಿಗೆ ಆಶ್ರಯನಾಗಿದ್ದಾನೆಂದು, ಮತ್ತು 'ವಾಯುನಾ ವೈ ಗೌತಮ ಸೂತ್ರೇಣಾಯಂಚ ಪರಶ್ಚ ಲೋಕಃ ಸರ್ವಾಣಿ ಭೂತಾನಿ ಸಂದೃಬ್ಧಾನಿ ಭವಂತಿ' ಯಾರನ್ನು ಆಶ್ರಯಿಸಿ ಸಕಲ ಜಗತ್ತು ನಿಂತಿದೆಯೋ ಅಂತಹ ವಾಯುವೇ ಈ ಲೋಕಕ್ಕೂ ಮತ್ತು ಪರಲೋಕಕ್ಕೂ, ಸಕಲಭೂತಗಳಿಗೂ ಆಶ್ರಯನಾಗಿದ್ದಾನೆ. ಮತ್ತು 'ಆಕಾಶ ಏವ ತದೋತಂ ಚ ಪ್ರೋತಂ ಚ' 'ಆಕಾಶದಲ್ಲಿಯೇ ಸಕಲ ಪ್ರಪಂಚವೂ ಓತಪ್ರೋತವಾಗಿ ಸೇರಿಕೊಂಡಿದೆ' ಎಂದು ಮತ್ತು 'ಸರ್ವೇ ವಾ ಏತೇ ಪ್ರಾಣಾಶ್ಚ ಪ್ರಾಣಿನಶ್ಚ ದೇವಾಶ್ಚ ದಿವ್ಯಾನಿ ಚ ಲೋಕಾಶ್ಚ ಲೋಕಿನಶ್ಚ ಅಲೋಕಾಶ್ಚ ಅಲೋಕಿನಶ್ಚ ವಿಷ್ಣಾವೇವ ಓತಾಶ್ಚ ಪ್ರೋತಾಶ್ಚ' ಸಕಲ ಇಂದ್ರಿಯಗಳು, ಪ್ರಾಣಿಗಳು, ದೇವತೆಗಳು, ಸ್ವರ್ಗದಲ್ಲಿರುವ ಸಕಲ ಪದಾರ್ಥಗಳು, ಭೂರ್ಭುವಾದಿ ಲೋಕಗಳು ಹಾಗೂ ಅಲ್ಲಿರುವ ಅಭಿಮಾನಿ ದೇವತೆಗಳು, ಲೋಕಾಲೋಕಗಳು ಅಲ್ಲಿರುವ ಮುಕ್ತಜೀವರುಗಳು ಹೀಗೆ ಸಕಲ ಪದಾರ್ಥಗಳೂ ವಿಷ್ಣುವಿನಲ್ಲಿ ಓತಪ್ರೋತವಾಗಿ ನೆಲೆಸಿವೆ' ಇವೇ ಮೊದಲಾದ ಶ್ರುತಿಗಳಿಂದ ದ್ಯುಭ್ವಾದ್ಯಾಯತನತ್ವಲಿಂಗವು ಉಭಯತ್ರಪ್ರಸಿದ್ಧವಾಗಿದೆ. ಇಂತಹ ದ್ಯುಭ್ವಾದ್ಯಾಯತನತ್ವಲಿಂಗವನ್ನು ಈ ಅಧಿಕರಣದಲ್ಲಿ ವಿಷ್ಣುವಿನಲ್ಲೇ ಸಮನ್ವಯಮಾಡಲಾಗಿದೆ. ಆದ್ದರಿಂದ ಈ ಅಧಿಕರಣಕ್ಕೆ ಶಾಸ್ತ್ರಸಂಗತಿ ಅಧ್ಯಾಯಸಂಗತಿ ಹಾಗೂ ಪಾದಸಂಗತಿಗಳು ಇರುತ್ತವೆ.

**तत्वप्रकाशिका – श्रुत्यादिसङ्गतिं विषयावाक्यमुदाहृत्य विषयसंशयसयुक्तिक-पूर्वपक्षान् दर्शयति – विष्णोरिति ॥**

ಪರಿಪೂರ್ಣಚಂದ್ರಿಕಾ

ಇನ್ನು ಶ್ರುತಿಸಂಗತಿ, ಅಧಿಕರಣಸಂಗತಿ ಹಾಗೂ ವಿಷಯವಾಕ್ಯ ಇವುಗಳನ್ನು ತೋರಿಸುತ್ತಾ ವಿಷಯ, ಸಂಶಯ ಹಾಗೂ ಯುಕ್ತಿಬದ್ಧವಾದ ಪೂರ್ವಪಕ್ಷಗಳನ್ನು "ವಿಷ್ಣೋಃ" ಎಂಬ ಭಾಷ್ಯದಿಂದ ತೋರಿಸುತ್ತಿದ್ದಾರೆ.

**तत्वप्रकाशिका – अदृश्यत्वादिगुणकाक्षरस्य विष्णोः परविद्याविषयत्वमुक्तम् । तत्परविद्याविषयत्वमाथर्वणे यस्मिन्द्यौरित्युक्तस्य द्युभ्वाद्यायतनस्योच्यते । 'तमेवैकं जानथ आत्मानमन्या वाचो विमुञ्चथामृतस्यैष सेतुः' इति ।**

ಹಿಂದಿನ ಪಾದದಲ್ಲಿರುವ ಅದೃಶ್ಯತ್ವಾಧಿಕರಣದಲ್ಲಿ ಅದೃಶ್ಯತ್ವ ಮೊದಲಾದ ಗುಣವುಳ್ಳ ಅಕ್ಷರನಾಮಕನಾದ ವಿಷ್ಣುವಿಗೆ ಪರವಿದ್ಯಾವಿಷಯತ್ವವನ್ನು ಹೇಳಲಾಗಿದೆ. ಆದರೆ ಇದೇ ಪರವಿದ್ಯಾ ವಿಷಯತ್ವವನ್ನು ಆಥರ್ವಣೋಪನಿಷತ್ತು 'ಯಸ್ಮಿನ್ ದ್ಯೌಃ' ಎಂಬ ವಾಕ್ಯದಿಂದ ಪ್ರತಿಪಾದ್ಯನಾದ ದ್ಯುಭ್ವಾದ್ಯಾಯತನನಿಗೆ ಹೇಳುತ್ತಿದೆ. 'ತಮೇವೈಕಂ ಜಾನಥ ಆತ್ಮಾನಮನ್ಯಾವಾಚೋ ವಿಮುಂಚಥ ಅಮೃತಸ್ಯೈಷ ಸೇತುಃ' 'ವಿಷ್ಣುವನ್ನೇ ಮುಖ್ಯವಾಗಿ ತಿಳಿಯಿರಿ. ಉಳಿದ ವಿಷಯಗಳನ್ನು ಬಿಡಿರಿ. ಅವನೇ ಮುಕ್ತರಿಗೆಲ್ಲಾ ಆಧಾರನಾಗಿದ್ದಾನೆ' ಇತ್ಯಾದಿವಾಕ್ಯದಿಂದ ದ್ಯುಭ್ವಾದ್ಯಾಯತನನಲ್ಲಿ ಪರವಿದ್ಯಾ ವಿಷಯತ್ವವು ಹೇಳಲ್ಪಟ್ಟಿದೆ.

**तत्वप्रकाशिका – स च यदि विष्णोरितरः स्यात्तदा परविद्याविषयत्वमन्यस्य प्रसज्येतेत्यवश्यं निर्णयः । तद् द्युभ्वाद्यायतनत्वं विषयः ।**

ಈ ದ್ಯುಭ್ವಾದ್ಯಾಯತನತ್ವವೆಂಬ ಲಿಂಗವು ಒಂದುವೇಳೆ ವಿಷ್ಣುವನ್ನು ಬಿಟ್ಟು ಬೇರೆಯವರಲ್ಲಿ ಬರುವುದಾದರೆ ಪರವಿದ್ಯಾವಿಷಯತ್ವ ಎಂಬ ಧರ್ಮವೂ ಸಹ ಬೇರೆಯವರಲ್ಲೇ ಬರಬೇಕಾಗುತ್ತದೆ. ಆದ್ದರಿಂದ ದ್ಯುಭ್ವಾದ್ಯಾಯತನತ್ವ ಎಂಬ ಲಿಂಗವು ಯಾರಲ್ಲಿದೆ ಎಂದು ಅವಶ್ಯವಾಗಿ ನಿರ್ಣಯ ಮಾಡಬೇಕು. ಆದ್ದರಿಂದ ಈ ಅಧಿಕರಣಕ್ಕೆ ಅಂತಹ ದ್ಯುಭ್ವಾದ್ಯಾಯತನತ್ವವೇ ವಿಷಯವಾಗಿದೆ.

**तत्वप्रकाशिका – तत्किं विष्णोरन्येषां वेति सन्देहः । उक्तसाधारण्यमेव सन्देहबीजम् । द्युभ्वाद्यायतनत्वं रुद्रप्रधानजीववायूनामिति पूर्वः पक्षः ।**

ಈ ದ್ಯುಭ್ವಾದ್ಯಾಯತನತ್ವವು ವಿಷ್ಣುವಿನಲ್ಲಿ ಮಾತ್ರವಿದೆಯೋ ಅಥವಾ ಬೇರೆಯವರಲ್ಲಿಯೂ ಇದೆಯೋ ಎಂದು ಸಂಶಯ. ಈ ಹಿಂದೆ ಹೇಳಿದ ಎರಡೂ ಪ್ರಕಾರದ ಸಾಧಾರಣವಾದ ಶ್ರುತಿಗಳೇ ಸಂದೇಹಕ್ಕೆ ಕಾರಣಗಳಾಗಿವೆ. ದ್ಯುಭ್ವಾದ್ಯಾಯತನತ್ವವು ರುದ್ರ, ಪ್ರಧಾನ, ಜೀವ, ಹಾಗೂ ವಾಯು ಮೊದಲಾದವರಲ್ಲಿ ಯಾರಲ್ಲಾದರೂ ಬರಬಹುದೆಂದು ಪೂರ್ವಪಕ್ಷ.

**तत्वप्रकाशिका – अत्रोक्तप्राणाधारत्वस्य 'प्राणानां गन्थिरसि' 'प्राणेश्वरः' इत्यादिना रुद्रे प्रतीतेः । तथा द्युभ्वन्तरिक्षायतनत्वस्य च 'रुद्रो वाव लोकाधारः' इति**

**तस्मिन्नुक्तत्वात् ।**

ಈ ಅಧಿಕರಣದ ವಿಷಯವಾಕ್ಯದಲ್ಲಿ ಕೇಳಿಸುತ್ತಿರುವ ಪ್ರಾಣಾಧಾರತ್ವ ಎಂಬ ಧರ್ಮವು 'ಪ್ರಾಣಾನಾಂ ಗ್ರಂಥಿರಸಿ' ಎಂಬ ಶ್ರುತಿಯಿಂದ ಮತ್ತು 'ಪ್ರಾಣೇಶ್ವರಃ' ಎಂಬ ಶ್ರುತಿಯಿಂದಲೂ ರುದ್ರನಲ್ಲೇ ಪ್ರತೀತವಾಗುತ್ತಿದೆ. ಇದರಂತೆ ದ್ಯುಲೋಕ, ಭೂಲೋಕ, ಅಂತರಿಕ್ಷ ಮೊದಲಾದವುಗಳಿಗೆ ಆಶ್ರಯನಾದವನೂ ಸಹ ರುದ್ರನೇ ಆಗಿದ್ದಾನೆಂದು "ರುದ್ರೋ ವಾವ ಲೋಕಾಧಾರಃ" ಎಂಬ ಶ್ರುತಿಯಿಂದ ಸ್ಪಷ್ಟವಾಗುತ್ತದೆ.

**तत्वप्रकाशिका – मनआयतनत्वं च तस्मिन् 'मनो वै रुद्र ओतं च प्रोतं च' इति प्रतीयते । न चैतच्छ्रुतीनां विष्णुविषयत्वम् । अन्तकः कृत्तिवासाः पिनाकीत्यादिरुद्रलिङ्गात् ।**

ಮತ್ತು ಮನಸ್ಸಿಗೆ ಆಶ್ರಯನಾದವನೂ ಸಹ ರುದ್ರನೇ ಆಗಿದ್ದಾನೆಂದು 'ಮನೋ ವೈ ರುದ್ರ ಓತಂ ಚ ಪ್ರೋತಂ ಚ' ಎಂಬ ಶ್ರುತಿಯಿಂದ ತಿಳಿಯುತ್ತದೆ. ಈ ಎಲ್ಲ ಶ್ರುತಿಗಳೂ ವಿಷ್ಣುವಿಷಯಕವಾಗಿದೆಯಲ್ಲವೇ ಎಂದು ಪ್ರಶ್ನಿಸಬಾರದು. ಏಕೆಂದರೆ ಈ ಶ್ರುತಿಗಳಲ್ಲಿ ಅಂತಕಃ, ಕೃತ್ತಿವಾಸಾಃ, ಪಿನಾಕೀ ಮೊದಲಾದ ರುದ್ರಲಿಂಗಗಳೇ ಕೇಳಿಸುತ್ತಿವೆ.

**तत्वप्रकाशिका – दृष्टफलविधायकरुद्रवाक्यदृष्टान्तेन तत्सर्वाश्रयत्वप्रतिपादक-वाक्यप्रामाण्यानुमानेन च तस्य सर्वाश्रयत्वसिद्धेः ।**

ರುದ್ರನೇ ದ್ಯುಭ್ವಾದ್ಯಾಯತನನಾಗಿದ್ದಾನೆ ಎಂಬ ವಿಷಯದಲ್ಲಿ ಅನುಮಾನವೂ ಸಹ ಪ್ರಮಾಣವಾಗಿದೆ. ರುದ್ರನನ್ನು ವರ್ಣಿಸುವ ಕೆಲವು ಶ್ರುತಿವಾಕ್ಯಗಳಿಂದ ದೃಷ್ಟಫಲವು ಸಿಗುತ್ತಿದೆ. ಇಂತಹ ದೃಷ್ಟಫಲವಿಧಾಯಕವಾದ ರುದ್ರಪರವಾಕ್ಯದ ದೃಷ್ಟಾಂತದಿಂದ ರುದ್ರನೇ ಸರ್ವಾಶ್ರಯನಾಗಿದ್ದಾನೆಂದು ಪ್ರತಿಪಾದಿಸುವ ವಾಕ್ಯಕ್ಕೂ ಸಹ ಪ್ರಾಮಾಣ್ಯವನ್ನು ಸಮರ್ಥಿಸಲು ಬರುತ್ತದೆ. ಹೀಗೆ ಅನುಮಾನಪ್ರಮಾಣದಿಂದ ರುದ್ರನೇ ಸರ್ವಾಶ್ರಯನೆಂದು ಸಿದ್ಧನಾಗುತ್ತಾನೆ.

**तत्वप्रकाशिका – द्युभ्वादीनां प्रकृतिकार्यत्वात्तदाश्रयत्वं प्रकृतेर्युक्तम् । 'यद्भूतं च भवच्च भविष्यच्चेत्याचक्षते आकाश एव तदोतं च प्रोतं च' इति श्रुतेश्च पूर्ववत्प्रकृतेः सर्वाश्रयत्वाभिधायककापिलागमप्रामाण्यानुमानाच्च ।**

ಎರಡನೇ ಪೂರ್ವಪಕ್ಷ -- ಅಥವಾ ಜಡವಾದ ಪ್ರಕೃತಿಯೇ ದ್ಯುಭ್ವಾದ್ಯಾಯತನವಾಗಬಹುದು. ಏಕೆಂದರೆ, ದ್ಯುಲೋಕ, ಭೂಲೋಕ ಎಲ್ಲವೂ ಸಹ ಪ್ರಕೃತಿಯ ಕಾರ್ಯವಾಗಿವೆ. ಈ ಪದಾರ್ಥಗಳಿಗೆಲ್ಲ ಪ್ರಕೃತಿಯೇ ಆಶ್ರಯವಾಗುತ್ತದೆಂಬುದು ಸಮಂಜಸವಾಗಿದೆ. 'ಯದ್ಭೂತಂ ಚ ಭವಚ್ಚ ಭವಿಷ್ಯಚ್ಚೇತ್ಯಾಚಕ್ಷತೇ

ಆಕಾಶ ಏವ ತದೋತಂ ಚ ಪ್ರೋತಂ ಚ' 'ಹಿಂದೆ ಹುಟ್ಟಿದ, ಈಗ ಹುಟ್ಟುತ್ತಿರುವ, ಮುಂದೆ ಹುಟ್ಟಲಿರುವ ಸಕಲಪದಾರ್ಥಗಳೂ ಆಕಾಶದಲ್ಲೇ ಅಂದರೆ ಪ್ರಕೃತಿಯಲ್ಲೇ ಓತಪ್ರೋತವಾಗಿ ಆಶ್ರಯಿಸಿವೆ' ಎಂಬ ಶ್ರುತಿಯ ಆಧಾರದಿಂದ ಪ್ರಕೃತಿಗೆ ಸರ್ವಾಶ್ರಯತ್ವವನ್ನು ಹೇಳಬಹುದು. ಅಥವಾ ರುದ್ರನ ವಿಷಯದಲ್ಲಿ ಅನುಮಾನಪ್ರಾಮಾಣ್ಯವನ್ನು ಹೇಳಿದಂತೆ ಪ್ರಕೃತಿಯ ವಿಷಯದಲ್ಲಿಯೂ ಅನುಮಾನಪ್ರಮಾಣವನ್ನು ಹೇಳಬಹುದು. ಪ್ರಕೃತಿಯನ್ನು ವರ್ಣಿಸುವ ಕೆಲವು ವಾಕ್ಯಗಳಿಗೆ ದೃಷ್ಟಫಲದ ಮೂಲಕವಾಗಿ ಪ್ರಾಮಾಣ್ಯವು ಕಂಡಿರುವುದರಿಂದ ಅದರ ದೃಷ್ಟಾಂತದಿಂದ ಪ್ರಕೃತಿಗೆ ಸರ್ವಾಶ್ರಯತ್ವವನ್ನು ಹೇಳುವ ಕಾಪಿಲಾಗಮಕ್ಕೂ ಸಹ ಪ್ರಾಮಾಣ್ಯವನ್ನು ಅನುಮಾನದಿಂದ ಸಾಧಿಸಬಹುದು. ಹೀಗೆ ಶ್ರುತಿಹಾಗೂ ಅನುಮಾನಗಳ ಪ್ರಮಾಣದ ಆಧಾರದಿಂದ ಪ್ರಕೃತಿಯು ದ್ಯುಭ್ವಾದ್ಯಾಯತನವಾಗಿದೆ ಎಂದು ಹೇಳಬಹುದು.

**तत्वप्रकाशिका – 'अरा इव रथनाभौ संहता यत्र नाड्यः स एषोऽन्तश्चरते बहुधा जायमानः' इति द्युभ्वाद्यायतने जीवलिङ्गश्रवणाज्जीवस्य तद्युक्तम् । तस्य जीवत्वादेव प्राणित्वप्रसिद्धेश्च ।**

ಮೂರನೆಯ ಪೂರ್ವಪಕ್ಷ -- ಅಥವಾ ಜೀವನೂ ಸಹ ದ್ಯುಭ್ವಾದ್ಯಾಯತನನಾಗಬಹುದು. ಏಕೆಂದರೆ, 'ಅರಾ ಇವ ರಥನಾಭೌ ಸಂಹತಾ ಯತ್ರ ನಾಡ್ಯಃ ಸ ಏಷೋಽಂತಶ್ಚರತೇ ಬಹುಧಾ ಜಾಯಮಾನಃ' 'ಯಾವ ರೀತಿಯಾಗಿ ರಥಚಕ್ರದಲ್ಲಿರುವ ರಂಧ್ರಗಳಲ್ಲಿ ಅರವು (ಚಕ್ರಕ್ಕೆ ಆಧಾರವಾಗಿರುವ ಅಚ್ಚು) ಜೋಡಿಸಲ್ಪಟ್ಟಿರುತ್ತದೋ ಅದೇ ರೀತಿಯಾಗಿ ಈ ದೇಹದಲ್ಲಿ ನಾಡಿಗಳು ಜೋಡಿಸಲ್ಪಟ್ಟಿರುತ್ತವೆ. ಮತ್ತು ಅನೇಕವಿಧವಾದ ಶರೀರದಿಂದ ಹುಟ್ಟುವ ಜೀವನು ಎಲ್ಲಕ್ಕೂ ಆಶ್ರಯನಾಗಿದ್ದಾನೆ' ಹೀಗೆ ಶ್ರುತಿ ಇರುವುದರಿಂದ ದ್ಯುಭ್ವಾದ್ಯಾಯತನನಲ್ಲಿ ನಾನಾವಿಧಶರೀರೋತ್ಪನ್ನತ್ವ ಎಂಬ ಜೀವನ ಲಿಂಗವು ಕೇಳಿಸುತ್ತಿದೆ. ಹಾಗಾಗಿ ಜೀವನೂ ಸಹ ದ್ಯುಭ್ವಾದ್ಯಾಯತನನಾಗಬಹುದು. 'ಜೀವ ಪ್ರಾಣಧಾರಣೇ' ಎಂಬ ಧಾತುವಿನಂತೆ ಜೀವಶಬ್ದದಿಂದ ಪ್ರಾಣಧಾರಣತ್ವವೆಂಬ ಪ್ರವೃತ್ತಿನಿಮಿತ್ತವು ತಿಳಿಯುತ್ತದೆ. ಆದ್ದರಿಂದ ಜೀವನಲ್ಲಿ ಪ್ರಾಣಾಶ್ರಯತ್ವವು ಸ್ಪಷ್ಟವಾಗುತ್ತದೆ. ಈ ಕಾರಣಗಳಿಂದ ಜೀವನು ದ್ಯುಭ್ವಾದ್ಯಾಯತನನಾಗುತ್ತಾನೆ.

**तत्वप्रकाशिका – विषयभूतलोकाधारत्वस्य 'वायुना वै गौतमसूत्रेण' इति वायौ श्रुतिसिद्धत्वात् तस्य द्युभ्वाद्यायतनत्वं युक्तम् । तस्य प्राणाधारत्वप्रसिद्धेश्च ।**

ನಾಲ್ಕನೆಯಪೂರ್ವಪಕ್ಷ. ಅಥವಾ ವಾಯುವು ದ್ಯುಭ್ವಾದ್ಯಾಯತನನಾಗಬಹುದು. ವಿಷಯವಾಕ್ಯದಲ್ಲಿ ಕೇಳಿಸುತ್ತಿರುವ ಲೋಕಾಧಾರತ್ವವು 'ವಾಯುನಾ ವೈ ಗೌತಮಸೂತ್ರೇಣ' ಎಂಬ ಶ್ರುತಿವಾಕ್ಯದಿಂದ ವಾಯುವಿನಲ್ಲಿ ಸಿದ್ಧವಾಗುತ್ತದೆ. ಮತ್ತು ವಾಯುದೇವನು ಪ್ರಾಣಗಳಿಗೆ ಆಶ್ರಯನಾಗಿದ್ದಾನೆಂಬುದು

ಪ್ರಸಿದ್ಧವೇ ಆಗಿದೆ. ಹಾಗಾಗಿ ವಾಯುದೇವನೂ ಸಹ ದ್ಯುಭ್ವಾದ್ಯಾಯತನನಾಗುತ್ತಾನೆ.

**तत्वप्रकाशिका – विष्णोर्द्युभ्वाद्यायतनत्वप्रसिद्धावपि नासावत्रोच्यते । बहुधा जन्मबाधात् ।**

ವಿಷ್ಣುವು ದ್ಯುಭ್ವಾದ್ಯಾಯತನನಾಗಿದ್ದಾನೆಂದು ಪ್ರಸಿದ್ಧಿ ಇರಬಹುದು. ಆದರೆ ಈ ಪ್ರಕರಣದಲ್ಲಿ ಇಲ್ಲಿಯ ತನಕ ಸಮರ್ಥಿಸಿದ ಅನೇಕ ಯುಕ್ತಿಗಳಿಂದ ವಿಷ್ಣುವನ್ನು ದ್ಯುಭ್ವಾದ್ಯಾಯತನನೆಂದು ಹೇಳಲಾಗದು. ಅಷ್ಟೇ ಅಲ್ಲದೆ ಅನೇಕ ವಿಧವಾದ ಜನ್ಮವನ್ನು ತಾಳುತ್ತಾನೆಂಬ ಬಹುಧಾಜಾಯಮಾನತ್ವವೆಂಬ ಬಾಧಕಲಿಂಗವೂ ಸಹ ವಿಷ್ಣುವಿಷಯದಲ್ಲಿ ಕಾಣಿಸುತ್ತಿದೆ.

**तत्वप्रकाशिका – परविद्याविषयत्वलिङ्गाद् विष्णुरिति चेन्न । जीवेशाभेदेन ब्रह्मगतलिङ्गस्यापि जीवे सम्भवात् ।**

ಈ ಪ್ರಕರಣವು ಪರವಿದ್ಯಾವಿಷಯಕವಾದ್ದರಿಂದ ವಿಷ್ಣುವನ್ನೇ ಪ್ರತಿಪಾದಿಸಬೇಕಲ್ಲವೇ ಎಂದೂ ಶಂಕಿಸಬಾರದು. ಏಕೆಂದರೆ ಜೀವೇಶ್ವರರಿಗೆ ಅಭೇದವಿರುವುದರಿಂದ ಪರವಿದ್ಯಾವಿಷಯತ್ವವೆಂಬ ಈಶ್ವರನ ಧರ್ಮವು ಜೀವನಲ್ಲಿಯೂ ಬರುತ್ತದೆ.

**तत्वप्रकाशिका – नच तथा बहुधा जन्म सम्भवति । कारणगतस्यैव कार्ये सम्भवात् ।**

ಆದರೆ ಜೀವನಲ್ಲಿರುವ ಬಹುಧಾಜಾಯಮಾನತ್ವವೆಂಬ ಲಿಂಗವನ್ನು ಅಭೇದವಿರುವ ಪ್ರಯುಕ್ತ ಈಶ್ವರನಲ್ಲಿ ಒಪ್ಪಲು ಸಾಧ್ಯವಿಲ್ಲ. ಏಕೆಂದರೆ ಕಾರಣದಲ್ಲಿರುವ ಧರ್ಮವನ್ನು ಕಾರ್ಯದಲ್ಲಿ ಒಪ್ಪಬಹುದೇ ಹೊರತು; ಕಾರ್ಯದಲ್ಲಿರುವ ಧರ್ಮವನ್ನು ಕಾರಣದಲ್ಲಿ ಒಪ್ಪಲು ಸಾಧ್ಯವಿಲ್ಲ.

**तत्वप्रकाशिका – अतः परविद्याविषयो द्युभ्वाद्याश्रयो विष्णोरितर एवेति तस्यैवादृश्यत्वादिगुणकत्वमिति भावः ।**

ಆದ್ದರಿಂದ ಯಾವ ವ್ಯಕ್ತಿಯು ಪರವಿದ್ಯಾವಿಷಯನಾಗಿದ್ದಾನೋ ಅವನೇ ದ್ಯುಭ್ವಾದ್ಯಾಶ್ರಯನಾಗಿದ್ದಾನೆ. ಹಾಗಾಗಿ ವಿಷ್ಣು ಪರವಿದ್ಯಾವಿಷಯನೆಂದು ಹೇಳಲಾಗದ ಕಾರಣ ದ್ಯುಭ್ವಾದ್ಯಾಶ್ರಯನೂ ಸಹ ಆಗುವುದಿಲ್ಲ. ರುದ್ರಾದಿಗಳೇ ಆಗುತ್ತಾರೆ. ಅಂತಹ ರುದ್ರಾದಿಗಳಲ್ಲೇ ಅದೃಶ್ಯತ್ವಾದಿಗುಣಗಳನ್ನು ಹೇಳಬೇಕೆಂದು ಪೂರ್ವಪಕ್ಷದ ಅಭಿಪ್ರಾಯ.

**तत्वप्रकाशिका – सिद्धान्तयत् सूत्रमवतार्य व्याचष्टे – अत इति ।। द्युभ्वाद्यायतनत्वे स्वशब्दपर्यायात्मशब्दश्रवणाद्द्युभ्वाद्यायतनं विष्णुरेवेत्यर्थः ।**

**आत्मशब्दादपि कुतो विष्णुरित्यत आह – आत्मेति ॥१॥**

ಸಿದ್ಧಾಂತವನ್ನು ಸ್ಥಾಪಿಸುವ ಸೂತ್ರಕ್ಕೆ ಅನತಾರಿಕೆಯನ್ನು ಕೊಡುವ ಮೂಲಕ ವ್ಯಾಖ್ಯಾನಿಸುತ್ತಿದ್ದಾರೆ. "ಅತಃ" ಎಂಬುದಾಗಿ. ದ್ಯುಭ್ವಾದ್ಯಾಯತನನಾದವನಲ್ಲಿ ಸ್ವಶಬ್ದದ ಪರ್ಯಾಯಶಬ್ದವೆನಿಸಿದ ಆತ್ಮಶಬ್ದವನ್ನು ಪ್ರಯೋಗಿಸಲಾಗಿದೆ. ಆದ್ದರಿಂದ ವಿಷ್ಣುವೇ ದ್ಯುಭ್ವಾದ್ಯಾಯತನನಾಗುತ್ತಾನೆ ಎಂದರ್ಥ. ಆತ್ಮಶಬ್ದವಿದ್ದರೂ ವಿಷ್ಣು ಎಂಬರ್ಥವನ್ನೇ ಏಕೆ ಸ್ವೀಕರಿಸಬೇಕು? ಎಂಬ ಪ್ರಶ್ನೆಗೆ "ಆತ್ಮ" ಎಂಬ ಸ್ಮೃತಿವಾಕ್ಯದಿಂದ ಉತ್ತರಿಸುತ್ತಿದ್ದಾರೆ.

**भावदीपः – ॐ द्युभ्वाद्यायतनं स्वशब्दात् ॐ ॥ पूर्वोक्तदिशा पादार्थत्वाप्रतीतेराह – एतदिति ॥ हराविति ॥ एषां शब्दानां लोके हराविवान्यत्रप्रयोगाद् व्यक्तिविशेषनिर्णयाय श्रुत्यन्तरान्वेषणे श्रुत्यन्तरेऽन्यत्रेव हरावपि प्रयोगात् श्रुतिसाधारण्येन वा आदिपदोक्तेन भूमाक्षरादिनये वक्ष्यमाणदिशा प्रक्रमसमाख्यासाधारण्येन वा प्रवृत्तिनिमित्तसाधारण्येन वा पूर्वोक्तन्यायलोकप्रयोगाभ्यां वा प्रसिद्धानामेकोपस्थापनदशायामन्यस्याप्युपस्थापकानामिति यावत् साक्षाद्धर्मिवाचिनां धर्मद्वारा धर्मिवाचिनां च शब्दानामित्यर्थः ।**

ಈ ಪಾದದಲ್ಲಿಯೂ ಸಹ ಹಿಂದಿನಂತೆ ಯಾವ ಪ್ರಮೇಯವನ್ನು ಹೇಳುತ್ತಿದ್ದಾರೆಂದು ಸ್ಪಷ್ಟವಾಗಿ ತಿಳಿಯುವುದಿಲ್ಲ. ಆದ್ದರಿಂದ ಸ್ವತಃ ಭಾಷ್ಯಕಾರರೇ ಪಾದಪ್ರಮೇಯವನ್ನು "ಏತತ್" ಇತ್ಯಾದಿ ವಾಕ್ಯಗಳಿಂದ ತಿಳಿಸುತ್ತಿದ್ದಾರೆ. "ಹರೌ" ಎಂಬುದಕ್ಕೆ ಹೀಗರ್ಥ- ಈ ಅಧಿಕರಣದಲ್ಲಿ ಸಮನ್ವಯ ಮಾಡುತ್ತಿರುವ ಶಬ್ದಗಳು ಭಗವಂತನಲ್ಲಿ ಹೇಗೆ ಪ್ರಸಿದ್ಧವಾಗಿವೆಯೋ ಅದರಂತೆ ಲೋಕದಲ್ಲಿಯೂ ಬೇರೆ ಕಡೆ ಪ್ರಸಿದ್ಧವಾಗಿವೆ. ಹೀಗಿರುವಾಗ ಇಂತಹ ವ್ಯಕ್ತಿಯನ್ನೇ ಪ್ರತಿಪಾದಿಸುತ್ತವೆ ಎಂದು ನಿರ್ಣಯಿಸಲು ಒಂದು ಶ್ರುತಿಯನ್ನು ಅನ್ವೇಷಣೆ ಮಾಡುವುದಾದರೆ ಮತ್ತೊಂದು ಶ್ರುತಿಯಲ್ಲಿ ಬೇರೆ ವ್ಯಕ್ತಿಗಳಲ್ಲಿ ಪ್ರಯೋಗಿಸಿದಂತೆ ಶ್ರೀಹರಿಯಲ್ಲೂ ಪ್ರಯೋಗಿಸಿರುವುದು ಕಾಣಸುತ್ತದೆ. ಹೀಗೆ ಭಗವಂತನಲ್ಲಿ ಮತ್ತು ಬೇರೆ ವಿಷಯದಲ್ಲಿ ಶ್ರುತಿಯು ಸಾಧಾರಣವಾಗಿದೆ. ಆದಿ ಪದದಿಂದ ಭೂಮಾಧಿಕರಣ ಮತ್ತು ಅಕ್ಷರಾಧಿಕರಣಗಳಲ್ಲಿ ಹೇಳುವಂತೆ ಉಪಕ್ರಮ ಹಾಗೂ ಸಮಾಖ್ಯಾಪ್ರಮಾಣವು ಎರಡು ವಿಷಯಗಳಲ್ಲಿ ಸಾಧಾರಣವಾಗಿರುವುದರಿಂದ ಈ ಶಬ್ದಗಳು ಉಭಯತ್ರ ಪ್ರಸಿದ್ಧವಾಗಿವೆ. ಅಥವಾ ಎರಡೂ ಕಡೆ ಪ್ರವೃತ್ತಿನಿಮಿತ್ತವು ಸಾಧಾರಣವಾಗಿರುವುದರಿಂದ ಉಭಯತ್ರ ಪ್ರಸಿದ್ಧವಾಗಿವೆ. ಅಥವಾ ಹಿಂದೆ ಹೇಳಿದ ನ್ಯಾಯ ಹಾಗೂ ಲೋಕಪ್ರಯೋಗಗಳಿಂದ ಉಭಯತ್ರ ಪ್ರಸಿದ್ಧವಾಗಿವೆ. ಅಂದರೆ ಶಬ್ದವು ಒಬ್ಬನನ್ನು ತಿಳಿಸುವಾಗ ಮತ್ತೊಬ್ಬನ ಸ್ಮರಣೆಯೂ ಸಹ ಬರುತ್ತದೆಂದು ಅಭಿಪ್ರಾಯ. ಈ ಎಲ್ಲಾ ಕಾರಣಗಳಿಂದ ನೇರವಾಗಿ ಧರ್ಮಿವಾಚಿಯಾದ ಮತ್ತು ಧರ್ಮದ ಮುಖಾಂತರ ಧರ್ಮಿವಾಚಿವಾದ ಶಬ್ದಗಳನ್ನು ಈ ಅಧಿಕರಣದಲ್ಲಿ ಸಮನ್ವಯ ಮಾಡಲಾಗಿದೆ ಎಂದು ತಿಳಿಯಬೇಕು.

ದ್ಯುಭ್ವಾದ್ಯಧಿಕರಣ (೧-೩-೧)

**भावदीपः** – पूर्वं नामलिङ्गानां प्राधान्याप्राधान्याभ्यां पौर्वापर्यात् पादभेदेन समन्वयोक्तावपि इह नाम्नां प्राधान्यात् लिङ्गानां समन्वितत्वेन बुद्धिस्थत्वाद् उभयानुरोधेनोभयेषामप्येकत्रैव समन्वयोक्तिरिति भावः । प्रागेव विष्णौ दत्तपदत्वात् किमत्र कार्यमित्यतः समन्वयपदार्थं व्यनक्ति – **विष्ण्वेकवाचित्वमिति** ।।

ಹಿಂದಿನ ಎರಡು ಪಾದಗಳಲ್ಲಿ ನಾಮಾತ್ಮಕಶಬ್ದಗಳು ಪ್ರಧಾನವಾದ್ದರಿಂದ ಅವುಗಳನ್ನು ಮೊದಲು ಸಮನ್ವಯ ಮಾಡಿದ್ದರು. ಲಿಂಗಾತ್ಮಕಶಬ್ದಗಳು ಅಪ್ರಧಾನವಾದ್ದರಿಂದ ಅನಂತರ ಸಮನ್ವಯ ಮಾಡಿದ್ದರು. ಆದ್ದರಿಂದ ಪ್ರಥಮಪಾದಕ್ಕೂ ದ್ವಿತೀಯಪಾದಕ್ಕೂ ಇರುವ ಪೌರ್ವಾಪರ್ಯವು ಸಮಂಜಸವಾಗಿದೆ ಮತ್ತು ಪಾದಭೇದದಿಂದ ಸಮನ್ವಯ ಮಾಡಿದ್ದೂ ಸಹ ಯುಕ್ತವಾಗಿದೆ. ಅದರಂತೆ ಈ ಪಾದದಲ್ಲಿಯೂ ನಾಮಾತ್ಮಕಶಬ್ದಗಳು ಪ್ರಧಾನವಾದ್ದರಿಂದ ಮತ್ತು ಲಿಂಗಾತ್ಮಕಶಬ್ದಗಳನ್ನು ಅವ್ಯವಹಿತವಾದ ಹಿಂದಿನ ಪಾದದಲ್ಲಿ ಸಮನ್ವಯ ಮಾಡಿದ್ದರಿಂದ ಬುದ್ಧಿಸ್ಥಿತವಾದ್ದರಿಂದ ಎರಡನ್ನೂ ಅನುಸರಿಸಿ ನಾಮಾತ್ಮಕ ಹಾಗೂ ಲಿಂಗಾತ್ಮಕಶಬ್ದಗಳನ್ನು ಈ ಒಂದೇ ಪಾದದಲ್ಲಿ ಸಮನ್ವಯ ಮಾಡಲು ಹೊರಟಿದ್ದಾರೆಂದು ತಿಳಿಯಬೇಕು. ಹಿಂದಿನ ಪಾದದಲ್ಲಿಯೇ ಸಕಲವಿಧವಾದ ಶಬ್ದಗಳನ್ನು ಸಮನ್ವಯ ಮಾಡಿದಮೇಲೆ ಇಲ್ಲಿ ಸಮನ್ವಯ ಮಾಡಲು ಏನು ಉಳಿದಿದೆ? ಎಂಬ ಪ್ರಶ್ನೆಗೆ ಉತ್ತರಿಸಲು ಸಮನ್ವಯ ಪದದ ಅರ್ಥವನ್ನು ವ್ಯಾಖ್ಯಾನಿಸುತ್ತಿದ್ದಾರೆ "ವಿಷ್ಣ್ವೇಕವಾಚಿತ್ವಂ" ಇತ್ಯಾದಿಯಾಗಿ.

**भावदीपः** – 'तत्रान्यत्रप्रसिद्धानां लिङ्गनाम्नां पुनर्हरिः । विशेषान्मुख्यतो वृत्तिं स्वस्मिन्नेवात्र वक्त्यजः' इत्यनुव्याख्यानोक्तेः ।

"ತತ್ರಾನ್ಯತ್ರ ಪ್ರಸಿದ್ಧಾನಾಂ ಲಿಂಗನಾಮ್ನಾಂ ಪುನರ್ಹರಿಃ । ವಿಶೇಷಾನ್ಮುಖ್ಯತೋ ವೃತ್ತಿಂ ಸ್ವಸ್ಮಿನ್ನೇವಾತ್ರ ವಕ್ತ್ಯಜಃ" ಉಭಯತ್ರ ಪ್ರಸಿದ್ಧವಾದ ಲಿಂಗಾತ್ಮಕ ಹಾಗೂ ನಾಮಾತ್ಮಕವಾದ ಶಬ್ದಗಳ ಸಮನ್ವಯವನ್ನು ಪುನಃ ಈ ಅಧಿಕರಣದಲ್ಲಿ ಮಾಡುತ್ತಿದ್ದಾರೆ. ಏಕೆಂದರೆ ವಿಶೇಷವಾಗಿ ಭಗವಂತನೇ ಆಯಾ ಪದಗಳಿಂದ ಪ್ರತಿಪಾದ್ಯನಾಗಿದ್ದಾನೆ ಎಂಬ ಅನುವ್ಯಾಖ್ಯಾನದ ಮಾತನ್ನು ಇಲ್ಲಿ ಸ್ಮರಿಸಿಕೊಳ್ಳಬೇಕು.

**भावदीपः** – अन्यथा तत्त्वित्यवधारणायोग इति भावः । श्रुत्यादिप्रसिद्धेत्युक्तं श्रुतिसाधारण्येनोभयत्र प्रसिद्धत्वं तत्त्वित्यवधारणायोग इति भावः । श्रुत्यादिप्रसिद्धेत्युक्तं श्रुतिसाधारण्येनोभयत्र प्रसिद्धत्वं न्यायविवरणोक्तश्रुत्युक्त्या व्यञ्जयन्नस्य पादान्तर्भावमाह – **तत्रेति** ।।

ಹೀಗೆ ಒಪ್ಪದಿದ್ದರೆ "ತತ್ತು" ಎಂಬ ಅವಧಾರಣವು ಅಯುಕ್ತವಾಗುತ್ತದೆಂದು ಅಭಿಪ್ರಾಯ. "ಶ್ರುತ್ಯಾದಿಪ್ರಸಿದ್ಧ" ಇತ್ಯಾದಿಯಾಗಿ ಹೇಳಲ್ಪಟ್ಟದ್ದನ್ನು ಶ್ರುತಿಸಾಧಾರಣ್ಯದಿಂದ ಉಭಯತ್ರಪ್ರಸಿದ್ಧಿಯನ್ನು ತಿಳಿಯಬೇಕು. ಈ ವಿಷಯದಲ್ಲಿ ನ್ಯಾಯವಿವರಣದಲ್ಲಿ ಹೇಳಲ್ಪಟ್ಟ ಶ್ರುತಿಯಿಂದ ಸ್ಪಷ್ಟಪಡಿಸುತ್ತಾ ಪಾದಾಂತರ್ಭಾವವನ್ನು ಈ ಅಧಿಕರಣಕ್ಕೆ "ತತ್ರ" ಇತ್ಯಾದಿ ವಾಕ್ಯದಿಂದ ಸಮರ್ಥಿಸುತ್ತಿದ್ದಾರೆ.

**भावदीपः** – एवं पादार्थे सतीत्यर्थः । अत्रेति पाठे अधिकरण इत्यर्थः ।

ಹೀಗೆ ಪಾದಾರ್ಥವು ಸಿದ್ಧವಾಗುತ್ತಿರಲು ಎಂದರ್ಥ. ಕೆಲವು ಪುಸ್ತಕಗಳಲ್ಲಿ "ಅತ್ರ" ಎಂಬ ಪಾಠವಿದೆ. ಆಗ 'ಈ ಅಧಿಕರಣದಲ್ಲಿ' ಎಂದು ಹೇಳಬೇಕು.

**भावदीपः** – साधारण्योक्तिपरन्यायविवरणे 'रुद्रो वै लोकायतनम्' इति वाक्योक्तावपि पूर्वपक्षन्यायविवरणे 'रुद्रो वा लोकाधारः' इति वाक्यदर्शनात्तस्यैवात्रोक्तिः स्यूतमस्मिन् जगदिति सूत्रम् ।

ಎರಡೂ ಕಡೆ ಸಾಧಾರಣವಾದ ಶ್ರುತಿಯನ್ನು ಹೇಳುವ ನ್ಯಾಯವಿವರಣದಲ್ಲಿ "ರುದ್ರೋ ವೈ ಲೋಕಾಯತನಮ್" ಎಂಬ ವಾಕ್ಯವನ್ನು ಉಲ್ಲೇಖಿಸಿರಬಹುದು. ಆದರೆ ಪೂರ್ವಪಕ್ಷವನ್ನು ಹೇಳುವ ನ್ಯಾಯವಿವರಣದಲ್ಲಿ "ರುದ್ರೋ ವಾವ ಲೋಕಾಧಾರಃ" ಎಂಬ ವಾಕ್ಯವನ್ನು ತೋರಿಸಿದ್ದಾರೆ. ಆದ್ದರಿಂದ ಅದೇ ವಾಕ್ಯವನ್ನು ಪ್ರಕೃತ ಟೀಕಾರಾಯರು ಉಲ್ಲೇಖಿಸಿದ್ದಾರೆ. "ಸ್ಯೂತಮಸ್ಮಿನ್ ಜಗತ್" ಅಂದರೆ ಇವನಲ್ಲಿ ಜಗತ್ತು ಆಶ್ರಯ ಪಡೆದಿದೆ ಎಂಬುದಾಗಿ ಸೂತ್ರಶಬ್ದಕ್ಕೆ "ಆಧಾರ" ಎಂದರ್ಥ.

**भावदीपः** – सन्दृब्धानि सङ्गतान्येव । तदाधारतया स्थितान्येवेति । न्यायविवरणस्थादिपदोपात्तां श्रुतिमाह – **आकाश इति** ।। प्रकृतावित्यर्थः । आकाशशब्दः प्रकृतिपर इत्यक्षरनये स्पष्टमिति भावः ।

ಸಂದೃಬ್ಧಾನಿ = ಸಂಗತವೇ ಆದ ಅವನಲ್ಲೇ ಆಶ್ರಯವನ್ನು ಹೊಂದಿ ನೆಲೆಸಿರುವ ಎಂದರ್ಥ. ನ್ಯಾಯವಿವರಣದಲ್ಲಿರುವ 'ಆದಿ' ಪದದಿಂದ ಸ್ವೀಕರಿಸಲ್ಪಟ್ಟ ಶ್ರುತಿಯನ್ನು "ಆಕಾಶಃ" ಎಂಬುದಾಗಿ ಹೇಳಿದ್ದಾರೆ. ಆಕಾಶ ಶಬ್ದಕ್ಕೆ 'ಪ್ರಕೃತಿ' ಎಂದರ್ಥ. ಏಕೆಂದರೆ ಅಕ್ಷರಾಧಿಕರಣದಲ್ಲಿ ಆಕಾಶ ಶಬ್ದವನ್ನು ಪ್ರಕೃತಿಯಲ್ಲಿ ಪ್ರಯೋಗಿಸಿದ್ದು ಸ್ಪಷ್ಟವಾಗಿ– ಎಂದು ತಿಳಿಯಬೇಕು.

**भावदीपः** – विष्णुपरत्वेन साक्षादुपात्तश्रुतिमाह – **सर्वे वा इति** ।। प्राणा इन्द्रियाणि । प्राणिनो देहिनः । प्राणिग्रहणेन गृहीतानामपि देवानां प्राधान्यज्ञापनाय पुनर्ग्रहणम् । दिवि भवानि दिव्यानि कल्पतरुप्रभृतीनि वस्तूनि । लोका भूरादयः । तदभिमानिनो लोकिनः । पूर्ववत् पुनर्ग्रहणम् । भूरादिभ्योऽन्ये वैकुण्ठादयोऽलोकाः। तद्गता मुक्ता अलोकिनः ।

ನೇರವಾಗಿ ವಿಷ್ಣುವನ್ನು ಪ್ರತಿಪಾದಿಸುವ ಶ್ರುತಿಯನ್ನು "ಸರ್ವೇ ವಾ" ಎಂಬುದರಿಂದ ವ್ಯಾಖ್ಯಾನಿಸಿದ್ದಾರೆ. ಈ ಶ್ರುತಿಯಲ್ಲಿರುವ "ಪ್ರಾಣಾಃ" ಎಂದರೆ ಇಂದ್ರಿಯಗಳು ಎಂದರ್ಥ. 'ಪ್ರಾಣಿನಃ' ಎಂಬ ಶಬ್ದಕ್ಕೆ ದೇಹವುಳ್ಳವರು ಎಂದರ್ಥ. ವಸ್ತುತಃ ಪ್ರಾಣ ಶಬ್ದದಿಂದಲೇ ದೇವತೆಗಳು ಸಂಗ್ರಹವಾಗುತ್ತಾರೆ. ಆದರೂ

ಸಹ ದೇವತೆಗಳಿಗೆ ಪ್ರಾಧಾನ್ಯವನ್ನು ಸೂಚಿಸುವುದಕ್ಕಾಗಿ ಪ್ರತ್ಯೇಕವಾಗಿ ದೇವತಾಪದವನ್ನು ಹೇಳಲಾಗಿದೆ. 'ದಿವಿ ಭವಾನಿ ದಿವ್ಯಾನಿ ಎಂದರೆ ಕಲ್ಪತರು ಮೊದಲಾದ ವಸ್ತುಗಳು. ಲೋಕ ಎಂದರೆ ಭೂಲೋಕವೇ ಮೊದಲಾದವುಗಳು. ಅವುಗಳಿಗೆ ಅಭಿಮಾನಿಗಳಾದವರು ಲೋಕಿಗಳು. ಹಿಂದಿನಂತೆ ಇಲ್ಲಿಯೂ ಸಹ ''ಪುನಃ'' ಶಬ್ದವನ್ನು ಹೇಳಿದ್ದಾರೆ. ಅಲೋಕ ಶಬ್ದಕ್ಕೆ ವೈಕುಂಠವೆಂದರ್ಥ. ಅಲ್ಲಿರುವ ಮುಕ್ತರು ಅಲೋಕಿಗಳು.

**भावदीपः –** ओताश्च प्रोताश्चेति ।। अत्यन्तमाश्रिता इत्यर्थः । इत्यन्यत्र टीकाकृद्व्याख्यातेयं श्रुतिः ।। उभयत्रेति ।। हरौ तदितरत्र चेत्यर्थः । विष्ण्वितरकोटेरनेकत्वेऽपि विष्ण्वितरत्वे नैकीकरणादुभयत्रेत्युक्तिः ।

''ಓತಾಶ್ಚ ಪ್ರೋತಾಶ್ಚ'' ಎಂಬ ಶಬ್ದಕ್ಕೆ ಬೇರೆ ಆಶ್ರಯವಿಲ್ಲದೆ ಅನನ್ಯವಾಗಿ ಆಶ್ರಯಿಸಿದವರು ಎಂದರ್ಥ. ಹೀಗೆ ಟೀಕಾರಾಯರೇ ಈ ಶ್ರುತಿಗೆ ಬೇರೆ ಕಡೆ ಅರ್ಥವನ್ನು ಹೇಳಿದ್ದಾರೆ. ''ಉಭಯತ್ರ'' ಎಂಬ ಶಬ್ದಕ್ಕೆ ಭಗವಂತನಲ್ಲಿ ಮತ್ತು ಬೇರೆ ಪದಾರ್ಥಗಳಲ್ಲಿ ಎಂದರ್ಥ. ವಿಷ್ಣುವಿಗಿಂತ ಭಿನ್ನವಾದ ಕೋಟಿಗಳು ಅನೇಕವಿದ್ದರೂ ಸಹ ಅವೆಲ್ಲವನ್ನು ಒಂದೇ ಪಕ್ಷದಲ್ಲಿ ಸೇರಿಸಲಾಗಿದೆ. ಆದ್ದರಿಂದ ಉಭಯತ್ರವೆಂಬ ಮಾತು ಸಮಂಜಸವಾಗಿದೆ. ಇಲ್ಲದಿದ್ದರೆ ''ಅನೇಕತ್ರ'' ಎಂದು ಹೇಳಬೇಕಾಗಿತ್ತು.

**भावदीपः –** जीवस्यापीतरकोटित्वेनात्राभिमतत्वेऽपि जीवपरसमाख्याभावेन तत्साधारण्याभावेऽपि पूर्वपक्षकोटिषु रुद्रवायुप्रकृतिषु क्वचित् प्रसिद्धिमात्रेणोभयत्र प्रसिद्धिसम्भवादिति भावः ।

ವಸ್ತುತಃ ಜೀವನೂ ಸಹ ಇಲ್ಲಿ ವಿಷ್ಣುವಿಗಿಂತ ಇತರಕೋಟಿಯಲ್ಲಿ ಪ್ರವಿಷ್ಟನಾಗಿದ್ದರೂ ಜೀವವಿಷಯಕವಾಗಿ ಸಮಾಖ್ಯಾಪ್ರಮಾಣವು ಇರುವುದಿಲ್ಲ. ಆದ್ದರಿಂದ ತತ್ಸಾಧಾರಣವಾದ ಶ್ರುತಿಯನ್ನು ಹೇಳಲಾಗದು. ಆದರೆ ಪೂರ್ವಪಕ್ಷ ಕೋಟಿಯಲ್ಲಿ ರುದ್ರ, ವಾಯು, ಪ್ರಕೃತಿಗಳು ಇರುವುದರಿಂದ ಅವುಗಳ ವಿಷಯದಲ್ಲಿ ಶ್ರುತಿಯು ಸಾಧಾರಣವಾಗಿರುವುದರಿಂದ ಕೆಲವಡೆ ಪ್ರಸಿದ್ಧವಾದ ಮಾತ್ರದಿಂದಲೇ ಉಭಯತ್ರ ಪ್ರಸಿದ್ಧವೆಂದು ಹೇಳಬಹುದು.

**भावदीपः –** यद्वा इत्यादिनेत्यादिपदेन जायमानत्वलिङ्गग्रहः । अधिकं चन्द्रिकायां बोध्यम् । भाष्ये प्रकृतिकोटेरनुक्तावपि तत्त्वनिर्णये न प्रकृतिजीवावित्युक्त्या भाष्येऽपि सा उपलक्ष्येति भावः ।

ಅಥವಾ ''ಇತ್ಯಾದಿನಾ'' ಎಂಬಲ್ಲಿರುವ 'ಆದಿ' ಪದದಿಂದ ''ಜಾಯಮಾನತ್ವ'' ಎಂಬ ಲಿಂಗವನ್ನು ಸ್ವೀಕರಿಸಬಹುದು. ಆವಾಗ ಜೀವನಲ್ಲಿಯೂ ಶ್ರುತಿಸಾಧಾರಣ್ಯವು ಬರುವುದರಿಂದ ಉಭಯತ್ರಪ್ರಸಿದ್ಧಿಯನ್ನು ಕೂಡಿಸಬಹುದು. ಹೆಚ್ಚಿನ ವಿಚಾರವನ್ನು ಚಂದ್ರಿಕೆಯಿಂದಲೇ ತಿಳಿದುಕೊಳ್ಳಬೇಕು. ಭಾಷ್ಯದಲ್ಲಿ ಪ್ರಕೃತಿಯೆಂಬ ಪೂರ್ವಪಕ್ಷಕೋಟಿಯನ್ನು ಹೇಳಿರುವುದಿಲ್ಲ. ಆದರೆ ತತ್ವನಿರ್ಣಯದಲ್ಲಿ ''ನ ಪ್ರಕೃತಿಜೀವೌ''

ಎಂದು ಹೇಳಿದ್ದರಿಂದ ಪ್ರಕೃತ ಭಾಷ್ಯದಲ್ಲಿಯೂ ಅದು ವಿವಕ್ಷಿತವಾಗಿದೆ ಎಂದು ಉಪಲಕ್ಷಣಯಾ ತಿಳಿದುಕೊಳ್ಳಬೇಕು.

**भावदीपः** – तथाच वक्ष्यत्यभाषितमित्यादिना स्वयमेव ।। शास्त्रादीति ।। भगवतीत्युक्त्या शास्त्रे समन्वयेत्युक्त्याऽध्याये उभयत्रप्रसिद्धिरित्युक्त्या पादे अन्तर्भावसङ्गतिरुपपादितेति व्यक्तम् । एवमग्रेऽपि ।

ಮುಂದೆಯೂ ಸಹ "ವಕ್ಷ್ಯತ್ಯಭಾಷಿತಂ" ಇತ್ಯಾದಿಯಾಗಿ ಇದನ್ನು ಸ್ವತಃ ಭಾಷ್ಯಕಾರರೇ ಹೇಳಿದ್ದಾರೆ. "ಶಾಸ್ತ್ರಾದಿ" ಎಂಬ ಟೀಕೆಗೆ ಹೀಗರ್ಥ - 'ಭಗವತಿ' ಎಂದು ಹೇಳಿದ್ದರಿಂದಲೇ ಶಾಸ್ತ್ರಸಂಗತಿಯನ್ನು ಹೇಳಿದಂತಾಯಿತು. "ಸಮನ್ವಯಾತ್" ಎಂದು ಹೇಳಿದ್ದರಿಂದ ಅಧ್ಯಾಯಸಂಗತಿಯನ್ನು ಹೇಳಿದಂತಾಯಿತು. "ಉಭಯತ್ರಪ್ರಸಿದ್ಧಿಃ" ಎಂದು ಹೇಳಿದ್ದರಿಂದ ಪಾದಸಂಗತಿಯನ್ನು ಹೇಳಿದಂತಾಯಿತು. ಹೀಗೆ ಮೂರು ಬಗೆಯ ಅಂತರ್ಭಾವಸಂಗತಿಯು ಸ್ಪಷ್ಟವಾಗಿ ತಿಳಿಯುತ್ತದೆ. ಮುಂದೆಯೂ ಹೀಗೆಯೇ ಅಂತರ್ಭಾವಸಂಗತಿಗಳನ್ನು ತಿಳಿಯಬೇಕು.

**भावदीपः** –इत्यन्तभाष्यं सङ्गतिपरत्वेन तावद् व्याचष्टे – अदृश्यत्वादीति ।। उक्तमित्यन्तभाष्यस्यायमर्थः । आत्मानमित्यत्रेत्यन्तवाक्यार्थः – तत्परविद्याविषयत्वमित्यादि ।।

"ಇತಿ" ಎಂಬಲ್ಲಿಯ ತನಕ ಇರುವ ಭಾಷ್ಯವನ್ನು ಸಂಗತಿಪರವಾಗಿ ವ್ಯಾಖ್ಯಾನಿಸುತ್ತಿದ್ದಾರೆ "ಅದೃಶ್ಯತ್ವಾದಿ" ಇತ್ಯಾದಿಯಾಗಿ. "ಉಕ್ತಂ" ಎಂಬಲ್ಲಿಯ ತನಕದ ಭಾಷ್ಯದ ಅರ್ಥ ಹೀಗಿದೆ - "ಆತ್ಮಾನಂ" ಎಂಬಲ್ಲಿ "ಇತಿ" ಎಂಬಲ್ಲಿಯ ತನಕದ ವಾಕ್ಯದ ಅರ್ಥವನ್ನು "ತತ್ಪರವಿದ್ಯಾವಿಷಯತ್ವಂ" ಇತ್ಯಾದಿಯಾಗಿ ಹೇಳಿದ್ದಾರೆ.

**भावदीपः** – अत्र भाष्यानुक्तवाक्यशेषोक्तिः सिद्धान्तोपयोगाय वा मुक्तिहेतुज्ञानस्यैव परविद्यात्वात् जानथ इत्युक्तज्ञानस्यामृतपदलब्धमुक्तिहेतुत्वसूचनाय वेति भावः ।

ಭಾಷ್ಯದಲ್ಲಿ ಉಲ್ಲೇಖಿಸದ ವಾಕ್ಯಶೇಷವನ್ನು ಹೇಳಿದ್ದಕ್ಕೆ ಏನು ಕಾರಣವೆಂದರೆ ಮುಂದೆ ಸಿದ್ಧಾಂತಕ್ಕೆ ಉಪಯೋಗ ವಾಗಬೇಕೆಂದು, ಅಥವಾ ಮೋಕ್ಷಕ್ಕೆ ಕಾರಣವಾದ ಜ್ಞಾನವೇ ಪರವಿದ್ಯೆಯಾದ್ದರಿಂದ ಎಂದು. "ಜಾನಥ" ಎಂಬುದರಿಂದ ಹೇಳಲ್ಪಟ್ಟ ಭಗವಂತನ ಜ್ಞಾನವು ಅಮೃತಪದದಿಂದ ತಿಳಿಯುವ ಮೋಕ್ಷಕ್ಕೆ ಕಾರಣವಾಗಿದೆ ಎಂದು ಸೂಚಿಸುವುದಕ್ಕಾಗಿಯೂ ವಾಕ್ಯಶೇಷವು ಸಾರ್ಥಕವಾಗಿದೆ.

**भावदीपः** – तत्त्वप्रदीपे तु अनन्ययोगेन प्रधानज्ञेयत्वं ह्यत्रोच्यते । तदेव च परविद्याविषयत्वमिति यथाश्रुतभाष्येणैव परविद्याविषयत्वलाभो व्याख्यातः ।

ತತ್ವಪ್ರದೀಪದಲ್ಲಿಯಾದರೂ, ಅನನ್ಯಯೋಗದಿಂದ ಪ್ರಧಾನವಾಗಿ ತಿಳಿಯುವುದಕ್ಕಾಗಿ ವಾಕ್ಯಶೇಷವನ್ನು

ತಿಳಿಯಬೇಕು. ಅದೇ ಪರವಿದ್ಯೆಗೆ ವಿಷಯವಾಗುತ್ತದೆ ಹೀಗೆ ಯಥಾಶ್ರುತವಾಗಿ ಭಾಷ್ಯದಿಂದ ಪರವಿದ್ಯಾವಿಷಯತ್ವವು ಲಾಭವಾಗುತ್ತದೆ ಎಂದು ವ್ಯಾಖ್ಯಾನಿಸಿದ್ದಾರೆ.

**भावदीपः** – 'प्राणानां ग्रन्थिरसि' इत्यादिकृत्स्नभाष्यशेषस्य तात्पर्यम् – स चेति ।। द्युभ्वाद्यायतनभूत आत्मेत्यर्थः । द्युभ्वाद्यायतनस्योच्यत इत्युक्तस्य तच्चेति पदे परामर्शे कार्येऽपि 'स च' इति तादृशात्मपरामर्शस्तु परविद्या-विषयत्वाक्षेपसौकर्याय ।

"ಪ್ರಾಣಾನಾಂ ಗ್ರಂಥಿರಸಿ" ಇತ್ಯಾದಿಯಾದ ಸಮಸ್ತಭಾಷ್ಯದ ತಾತ್ಪರ್ಯವನ್ನು "ಸ ಚ" ಎಂಬ ವಾಕ್ಯದಿಂದ ಹೇಳುತ್ತಿದ್ದಾರೆ. ದ್ಯುಭ್ವಾದ್ಯಾಯತನನಾದ ಆತ್ಮನು ಎಂದು "ಸ ಚ" ಎಂಬ ಪದಕ್ಕೆ ಅರ್ಥ . "ದ್ಯುಭ್ವಾದ್ಯಾಯತನಸ್ಯೋಚ್ಯತೇ" 'ದ್ಯುಭ್ವಾದ್ಯಾಯತನನಿಗೆ ಹೇಳಲಾಗುತ್ತದೆ' ಎಂದು ಹೇಳಲ್ಪಟ್ಟದ್ದನ್ನು "ತಸ್ಯ" ಎಂಬ ಪದದಿಂದ ಪರಾಮರ್ಶ ಮಾಡಬಹುದು. ಆದರೂ ಸಹ "ಸ ಚ" ಎಂಬುದಾಗಿ ಪರಾಮರ್ಶ ಮಾಡಲು ಕಾರಣವೇನೆಂದರೆ ಪರಾವಿದ್ಯಾವಿಷಯತ್ವದ ಆಕ್ಷೇಪಕ್ಕೆ ಅನುಕೂಲವಾಗುವುದಕ್ಕಾಗಿ.

**भावदीपः** – इतरस्स्यादिति ।। रुद्रादिसमाख्याबलाद् रुद्रादिरित्यर्थः । उक्तमित्यन्तभाष्यस्य भावमाह – तदेति ।। इति सङ्गतिसम्भवादित्यर्थः ।

ಇತರಃ ಸ್ಯಾತ್" ಎಂದರೆ ರುದ್ರಾದಿ ಶ್ರುತಿಯ ಸಮಾಖ್ಯಾಪ್ರಮಾಣದಿಂದ ರುದ್ರಾದಿಗಳು ದ್ಯುಭ್ವಾದ್ಯಾಯತನರಾಗುತ್ತಾರೆ ಎಂದರ್ಥ. "ಉಕ್ತಂ" ಎಂಬಲ್ಲಿಯ ತನಕದ ಭಾಷ್ಯದ ಅಭಿಪ್ರಾಯವನ್ನು "ತದಾ" ಎಂಬುದರಿಂದ ಹೇಳಿದ್ದಾರೆ. ಹೀಗೆ ಸಂಗತಿಯು ಕೂಡುವುದರಿಂದ ಎಂದು ಇದರರ್ಥ.

**भावदीपः** – सूत्रे धर्मिनिर्देशेऽपि तयोरिति भाष्यानुरोधाद् द्युभ्वाद्यातनत्वं विषय इत्युक्तम् । आदिपदेनान्तरिक्षप्राणमनसां सङ्ग्रहः । भाष्ये तयोरिति द्विवचनोक्तावपि अग्रे वायुश्च इत्युक्तेरन्येषामित्युक्तम् ।

ಸೂತ್ರದಲ್ಲಿ ಧರ್ಮಿಯನ್ನು ನಿರ್ದೇಶ ಮಾಡಿದ್ದರೂ ಭಾಷ್ಯದಲ್ಲಿ "ತಯೋಃ" ಇತ್ಯಾದಿಯಾಗಿ ಹೇಳಿರುವುದರಿಂದ ಅದಕ್ಕನುಸಾರಿಯಾಗಿ ದ್ಯುಭ್ವಾದ್ಯಾಯತನತ್ವವು ವಿಷಯವಾಗಿದೆ ಎಂದು ಹೇಳಿದ್ದಾರೆ. ಆದಿ ಪದದಿಂದ ಆಕಾಶ, ಪ್ರಾಣ, ಮನಸ್ಸು ಇವುಗಳನ್ನೆಲ್ಲಾ ಸಂಗ್ರಹಿಸಬೇಕು. ಭಾಷ್ಯದಲ್ಲಿ "ತಯೋಃ" ಎಂಬುದಾಗಿ ದ್ವಿವಚನದಿಂದ ಇಬ್ಬರೇ ಪೂರ್ವಪಕ್ಷಕ್ಕೆ ವಿಷಯವೆಂದು ಹೇಳಿದ್ದರೂ ಸಹ ಮುಂದೆ "ವಾಯುಶ್ಚ" ಎಂದು ಹೇಳಿದ್ದರಿಂದ ಟೀಕೆಯಲ್ಲಿ "ಅನ್ಯೇಷಾಂ" ಎಂದು ಬಹುವಚನಪ್ರಯೋಗವನ್ನೇ ಮಾಡಿದ್ದಾರೆ.

**भावदीपः** – तदेव भाष्यं पूर्वपक्षतद्युक्तितत्फलोक्तिपरतया व्याकुर्वन् तयोः प्राप्तिरिति प्रतिज्ञांशं व्याचष्टे – द्युभ्वादीति ।। तयोरित्युपलक्षणमिति भावः ।

ಅದೇ ಭಾಷ್ಯವನ್ನು ಪೂರ್ವಪಕ್ಷ, ಪೂರ್ವಪಕ್ಷಯುಕ್ತಿ ಹಾಗೂ ಪೂರ್ವಪಕ್ಷಫಲಪರವಾಗಿ ವ್ಯಾಖ್ಯಾನಿಸುತ್ತಾ "ತಯೋಃ ಪ್ರಾಪ್ತಿಃ" ಎಂಬ ಪ್ರತಿಜ್ಞಾಭಾಗವನ್ನು ವ್ಯಾಖ್ಯಾನಿಸುತ್ತಿದ್ದಾರೆ "ದ್ಯುಭ್ವಾದಿ" ಇತ್ಯಾದಿಯಾಗಿ. ಭಾಷ್ಯದಲ್ಲಿರುವ "ತಯೋಃ" ಎಂಬ ಪದವು ಉಪಲಕ್ಷಣವೆಂದು ತಿಳಿಯಬೇಕು. ನಾಲ್ಕು ಬಗೆಯ ಪೂರ್ವಪಕ್ಷಕೋಟಿಗಳಲ್ಲಿ ಮೊದಲೆರಡು ಪೂರ್ವಪಕ್ಷಕೋಟಿಗಳು "ನಾನುಮಾನಂ" ಎಂಬುದರಿಂದ ವ್ಯಾವರ್ತ್ಯವಾಗಿವೆ. ಮತ್ತೆರಡು ಪೂರ್ವಪಕ್ಷಕೋಟಿಗಳು "ಪ್ರಾಣಭೃಚ್ಚ" ಎಂಬುದರಿಂದ ವ್ಯಾವರ್ತ್ಯವಾಗಿವೆ ಎಂದು ತಿಳಿಯಬೇಕು.

एतत्कोटिचतुष्टयं द्विशो द्विशः क्रमेण नानुमानं प्राणभृच्चेति सूत्रद्वयव्यावर्त्यं बोध्यम् । अत एवैवं निर्देशः । यस्मिन्नित्यादेः प्रतीतेरित्यन्तस्यार्थः – अत्रेत्यादि ।। यस्मिन् द्यौरित्यादिवाक्योक्तेत्यर्थः । अत्र श्रुतौ 'जानथ आत्मानम्' इति विवृतिः सर्ववैलक्षण्यप्रदर्शनायेति तत्त्वप्रदीपोक्तिः । अतच्छब्दादिति सौत्रखण्डº यावर्त्योक्तिपरं प्राणानामित्यादिभाष्यं व्याकुर्वन् प्राणाधारत्वप्रत्यायकांशमाह – **प्राणानामिति ।।**

"ಯಸ್ಮಿನ್" ಎಂಬಲ್ಲಿಂದ ಪ್ರಾರಂಭಿಸಿ "ಪ್ರತೀತೇಃ" ತನಕದ ಭಾಷ್ಯದ ಅರ್ಥವನ್ನು "ಅತ್ರ" ಇತ್ಯಾದಿ ವಾಕ್ಯಗಳಿಂದ ನಿರೂಪಿಸುತ್ತಿದ್ದಾರೆ. "ಯಸ್ಮಿನ್ ದ್ಯೌಃ" ಎಂಬ ವಾಕ್ಯದಲ್ಲಿ ಹೇಳಲ್ಪಟ್ಟ ಎಂದರ್ಥ. ಈ ಶ್ರುತಿಯಲ್ಲಿ "ಜಾನಥ ಆತ್ಮಾನಂ" ಪದಗಳಿಗೆ ಯೋಜನೆ ಮಾಡಿದ್ದು ಏಕೆಂದರೆ ಸಕಲವೈಲಕ್ಷಣ್ಯವನ್ನು ತೋರಿಸುವುದಕ್ಕಾಗಿ ಎಂದು ತತ್ವಪ್ರದೀಪಕಾರರು ಹೇಳಿದ್ದಾರೆ. "ಅತಚ್ಛಬ್ದಾತ್" ಎಂಬ ಸೂತ್ರದ ಭಾಗದಿಂದ ನಿರಾಕೃತವಾಗುವ ಪೂರ್ವಪಕ್ಷವನ್ನು ಮತ್ತು "ಪ್ರಾಣಾನಾಂ" ಇತ್ಯಾದಿ ಭಾಷ್ಯವನ್ನು ವ್ಯಾಖ್ಯಾನಿಸುವವರಾಗಿ "ಪ್ರಾಣಾನಾಂ" ಇತ್ಯಾದಿ ಟೀಕೆಯು ಹೊರಟಿದೆ.

**भावदीपः –** श्रुत्यर्थस्तु 'तदभिध्यानादेव तु तल्लिङ्गात् सः' इत्यत्राग्रे टीकायां व्यक्तः । न्यायविवरणे 'यस्मिन् द्यौः' इत्यत्रोक्तानां लिङ्गानामन्यत्र रुद्रादिविषयत्वे शब्दबाहुल्यमित्युक्तलिङ्गत्रये समाख्यात्रयमुक्तम् । तत्रैकत्र प्राणाधारत्वलिङ्गे वाक्यद्वयोक्त्या एका समाख्या भाष्ये प्रकटिता । शिष्टं द्वयं स्वयमाह – तथेति ।।

"ಪ್ರಾಣಾನಾಂ" ಎಂಬ ಶ್ರುತಿಯ ಅರ್ಥವನ್ನು ಸ್ವತಃ ಟೀಕಾರಾಯರೇ ಮುಂದೆ "ತದಭಿಧ್ಯಾನಾದೇವ ತು ತಲ್ಲಿಂಗಾತ್ ಸಃ" ಎಂಬ ಸೂತ್ರದ ವ್ಯಾಖ್ಯಾನದ ಸಂದರ್ಭದಲ್ಲಿ ಸ್ಪಷ್ಟಪಡಿಸುತ್ತಾರೆ. "ಯಸ್ಮಿನ್ ದ್ಯೌಃ" ಎಂಬ ಶ್ರುತಿಯಿಂದ ತಿಳಿಯುವ ಲಿಂಗಗಳು ರುದ್ರನಲ್ಲಿ ಬರುತ್ತವೆಂದು ಹೇಳುವಲ್ಲಿ ಅನೇಕ ಶ್ರುತಿಗಳು ಆಧಾರವಾಗಿದೆ. ಆದ್ದರಿಂದ ಮೂರು ಬಗೆಯ ಲಿಂಗಗಳಿಗೆ ಮೂರು ಬಗೆಯ ಸಮಾಖ್ಯಾಪ್ರಮಾಣಗಳನ್ನು ಹೇಳಿದ್ದಾರೆ. ಅಂತಹ ಮೂರು ಸಮಾಖ್ಯಾಪ್ರಮಾಣಗಳಲ್ಲಿ ಪ್ರಾಣಾಧಾರತ್ವ ಲಿಂಗಕ್ಕೆ ಎರಡು ಶ್ರುತಿಗಳನ್ನು ಉಲ್ಲೇಖಿಸುವ ಮೂಲಕ ಒಂದು ಸಮಾಖ್ಯಾಪ್ರಮಾಣವನ್ನು ಭಾಷ್ಯಕಾರರೇ ತೋರಿಸಿದ್ದಾರೆ. ಉಳಿದ ಎರಡು ಸಮಾಖ್ಯಾಪ್ರಮಾಣಗಳನ್ನು ಸ್ವತಃ ಟೀಕಾರಾಯರು "ತಥಾ" ಎಂಬ ವಾಕ್ಯದಿಂದ ತೋರಿಸುತ್ತಿದ್ದಾರೆ.

**भावदीपः – लोकाधार इति समाख्यया ऐकार्थ्याय द्युभ्वन्तरिक्षेत्येतावदंशोक्तिः। यद्वा द्युभ्वाद्यायतनस्येत्युक्ते पूर्वत्रेवाऽदिपदेन प्राणमनसोरपि ग्रहणशङ्का स्यादित्यतो द्युभ्वन्तरिक्षेत्युक्तिः । तस्मिन्निति स्ववचनम् । प्रतीयत इत्यन्वयः ।**

ದ್ಯುಲೋಕಕ್ಕೆ ಆಶ್ರಯವಾಗಿರುವಿಕೆ ಹಾಗೂ ಅಂತರಿಕ್ಷಕ್ಕೆ ಆಶ್ರಯವಾಗಿರುವಿಕೆ ಎಂಬ ಲಿಂಗಕ್ಕೆ "ರುದ್ರೋ ವಾವ ಲೋಕಾಧಾರಃ" ಎಂಬ ಶ್ರುತಿಯು ಸಮಾಖ್ಯಾಪ್ರಮಾಣವಾಗಿದೆ. ಲಿಂಗ ಹಾಗೂ ಶ್ರುತಿಗಳು ಒಂದೇ ಅರ್ಥದಲ್ಲಿ ಇವೆ ಎಂಬುದನ್ನು ತಿಳಿಸುವುದಕ್ಕಾಗಿ ಟೀಕೆಯಲ್ಲಿ "ದ್ಯುಭ್ವಂತರಿಕ್ಷ" ಎಂದು ಹೇಳಿದ್ದಾರೆ. ಅಥವಾ "ದ್ಯುಭ್ವಾದ್ಯಾಯತನಸ್ಯ" ಎಂದು ಹೇಳಿದರೆ ಹಿಂದಿನಂತೆ ಇಲ್ಲಿಯೂ ಸಹ "ಆದಿ" ಪದದಿಂದ ಪ್ರಾಣನಿಗೆ ಆಶ್ರಯವಾಗಿರುವಿಕೆ ಹಾಗೂ ಮನಸ್ಸಿಗೆ ಆಶ್ರಯವಾಗಿರುವಿಕೆ ಎಂಬೆರಡು ಧರ್ಮಗಳೂ ಸಹ ಸಂಗ್ರಹವಾಗುತ್ತಿದ್ದವು. ಆದಕ್ಕೋಸ್ಕರ ಸ್ಪಷ್ಟವಾಗಿ "ದ್ಯುಭ್ವಂತರಿಕ್ಷ" ಎಂದು ಹೇಳಿದ್ದಾರೆ. "ತಸ್ಮಿನ್" ಎಂಬುದು ಟೀಕಾರಾಯರ ಮಾತೇ ಹೊರತು ಶ್ರುತಿಯಲ್ಲ. "ಪ್ರತೀಯತೇ" ಎಂಬುದನ್ನು ಇಲ್ಲಿಯೂ ಸಹ ಅನ್ವಯ ಮಾಡಿಕೊಳ್ಳಬೇಕು.

**भावदीपः –'मनो वै रुद्रः' इति तु समाख्याश्रुतिः । भाष्ये श्रुतिशेषोक्तेरुपयोगं शङ्कापूर्वमाह – नचेति ।। अन्तर्नये आधिदैविकसर्वशब्दानां महायोगविद्वद्रूढिभ्यां विष्णुनिष्ठत्वोक्तेरिति भावः । अनेकश्रुत्युक्तिलिङ्गबाहुल्योक्त्यर्थेति मत्वोक्तमित्यादीति । एतेनान्यत्रोक्तसमाख्यात्रये प्राणाधारत्वसमाख्याया एव भाष्ये पाठः श्रुत्युज्जीवकलिङ्गोक्त्यर्थः ।**

"ಮನೋ ವೈ ರುದ್ರಃ" "ಮನಸ್ಸಿಗೆ ಆಶ್ರಯವಾಗಿರುವಿಕೆ" ಎಂಬುದು ಸಮಾಖ್ಯಾಶ್ರುತಿಯಾಗಿದೆ. ಭಾಷ್ಯದಲ್ಲಿ "ಕೃತ್ತಿವಾಸಾಃ ಪಿನಾಕೀ" ಎಂಬ ಶ್ರುತಿಯ ಉಳಿದ ಭಾಗವನ್ನು ಉಲ್ಲೇಖಿಸಲು ಕಾರಣವೇನು ಎಂಬುದನ್ನು "ನಚ" ಎಂಬ ವಾಕ್ಯದಿಂದ ಶಂಕಾಪೂರ್ವಕವಾಗಿ ವಿವರಿಸುತ್ತಿದ್ದಾರೆ. ಅಂತರಾಧಿಕರಣದಲ್ಲಿ ಆಧಿದೈವಿಕವಾದ ಸಕಲ ಶಬ್ದಗಳನ್ನು ಮಹಾಯೋಗ ಹಾಗೂ ವಿದ್ವದ್ರೂಢಿಗಳಿಂದ ವಿಷ್ಣುವಿನಲ್ಲೇ ಬರುತ್ತವೆ ಎಂದು ಸಮರ್ಥಿಸಲಾಗಿದೆ. ಆದ್ದರಿಂದ "ಪ್ರಾಣೇಶ್ವರಃ" ಎಂಬ ಶ್ರುತಿಯು ವಿಷ್ಣುವನ್ನೇ ಪ್ರತಿಪಾದಿಸುತ್ತದೆಂದು "ನಚ" ಎಂಬ ವಾಕ್ಯದಿಂದ ಆಶಂಕಿಸುತ್ತಿದ್ದಾರೆ. ಟೀಕೆಯಲ್ಲಿ "ಇತ್ಯಾದಿ" ಎಂದು ಹೇಳಿದ್ದರಿಂದ ಅನೇಕ ಶ್ರುತಿಗಳಲ್ಲಿ ಹೇಳಲ್ಪಟ್ಟ ಲಿಂಗಬಾಹುಲ್ಯವು ರುದ್ರನಲ್ಲೇ ಬರುತ್ತದೆಂದು ತಿಳಿಸಿದ್ದಾರೆ. ಆದ್ದರಿಂದ ಅಂತಕತ್ವ, ಕೃತ್ತಿವಾಸತ್ವ ಮೊದಲಾದ ಲಿಂಗಗಳಷ್ಟೇ ಅಲ್ಲ ಇನ್ನೂ ಹೆಚ್ಚಿನ ಲಿಂಗಗಳಿವೆ ಎಂದು ತಿಳಿಯಬೇಕು.

ಮೂರು ಬಗೆಯ ಸಮಾಖ್ಯಾಪ್ರಮಾಣಗಳಿವೆ ಎಂದು ನ್ಯಾಯವಿವರಣದಲ್ಲಿ ಹೇಳಲಾಗಿದೆ. ಅವುಗಳಲ್ಲಿ ಪ್ರಾಣಾಧಾರತ್ವವೆಂಬ ಸಮಾಖ್ಯಾಪ್ರಮಾಣವನ್ನಷ್ಟೇ ಭಾಷ್ಯದಲ್ಲಿ ಹೇಳಿದ್ದಾರೆ. ಹೀಗೆ ಭಾಷ್ಯದಲ್ಲಿ ಏಕೆ ಹೇಳಿದ್ದಾರೆಂದರೆ ಶ್ರುತಿಗೆ ಉಜ್ಜೀವಕವಾದ ಲಿಂಗವಿದೆ ಎಂದು ತಿಳಿಸುವುದಕ್ಕಾಗಿ.

**भावदीपः – बाहुल्यं लिङ्गशब्दानामित्यनुव्याख्याने लिङ्गोक्तिः शब्दोज्जीवनायेति**

च दर्शितम् । तथाचात्र समाख्याश्रुतौ विष्णुलिङ्गाभावात् प्रत्युतान्यलिङ्गानामेव श्रवणेनान्तर्नयन्यायाविषयत्वात् श्रुतयोऽपि निरवकाशा इति भावः ।

"ಬಾಹುಲ್ಯಂ ಲಿಂಗಶಬ್ದಾನಾಂ" ಎಂಬ ಅನುವ್ಯಾಖ್ಯಾನದಲ್ಲಿ ಶ್ರುತಿಯನ್ನು ಉಪೋದ್ಬಲಿಸುವುದಕ್ಕಾಗಿ ಲಿಂಗವು ಆವಶ್ಯಕವೆಂದು ಹೇಳಿದ್ದಾರೆ. ಆದ್ದರಿಂದ ಪ್ರಕೃತ ಸಮಾಖ್ಯಾಶ್ರುತಿಯಲ್ಲಿ ಯಾವುದೇ ವಿಷ್ಣುಲಿಂಗಗಳು ಇರುವುದಿಲ್ಲ ಹೊರತಾಗಿ ರುದ್ರಾದಿಗಳ ಲಿಂಗವೇ ಕೇಳಿಸುತ್ತಿವೆ. ಈ ಕಾರಣದಿಂದ ರುದ್ರಪ್ರತಿಪಾದಕವಾದ ಶಬ್ದಗಳು ಅಂತರಾಧಿಕರಣದ ನ್ಯಾಯಕ್ಕೆ ವಿಷಯವಾಗುವುದಿಲ್ಲ. ಆದ್ದರಿಂದಲೇ 'ಶ್ರುತಿಗಳೆಲ್ಲವೂ ನಿರವಕಾಶವೇ ಆಗಿವೆ' ಎಂದು ಪೂರ್ವಪಕ್ಷದ ಅಭಿಪ್ರಾಯ.

**भावदीपः – नानुमानात्मकागमपरिकल्पितरुद्रोऽत्र वाच्य इति भाष्योक्तां सौत्रानुमानपदलब्धां युक्तिमाह – दृष्टफलेति ।। रुद्रवाक्येति ।। पाशुपदाति-रूपेत्यर्थः ।।**

"ನಾನುಮಾನಾತ್ಮಕಾಗಮಪರಿಕಲ್ಪಿತರುದ್ರೋऽತ್ರ ವಾಚ್ಯಃ" - ಅನುಮಾನರೂಪವಾದ ಆಗಮದಿಂದ ರುದ್ರನು ಇಲ್ಲಿ ಪ್ರತಿಪಾದ್ಯನಾಗುವುದಿಲ್ಲ ಎಂಬ ಮುಂದಿರುವ ಭಾಷ್ಯದಲ್ಲಿ ಹೇಳಲ್ಪಟ್ಟ ಸೂತ್ರದಲ್ಲಿರುವ ಅನುಮಾನ ಪದದಿಂದ ತಿಳಿಯುವ ಯುಕ್ತಿಯನ್ನು "ದೃಷ್ಟಫಲ" ಇತ್ಯಾದಿ ವಾಕ್ಯದಿಂದ ತೋರಿಸುತ್ತಿದ್ದಾರೆ. "ರುದ್ರವಾಕ್ಯದೃಷ್ಟಾಂತೇನ" ಎಂದರೆ ಪಾಶುಪತಾದಿ ಶಾಸ್ತ್ರದಲ್ಲಿ ರುದ್ರವಿಷಯಕವಾದ ವಾಕ್ಯಗಳ ದೃಷ್ಟಾಂತದಿಂದ ಎಂದರ್ಥ.

**भावदीपः – अनुमानेन चेति ।। न केवलं श्रुतिलिङ्गबाहुल्येन रुद्रपरत्वेन सिद्धसमाख्यानादिति चार्थः । तथाच 'नैव शास्त्रं कुवर्त्म तद्' इति पूर्वं तदप्रामाण्यमुक्तमिति न शङ्क्यमिति भावः ।**

ಕೇವಲ ಶ್ರುತಿಲಿಂಗಗಳ ಬಾಹುಲ್ಯದಿಂದಷ್ಟೇ ಶ್ರುತಿಗಳು ರುದ್ರಪರವೆಂದಲ್ಲ ಹಿಂದೆ ಹೇಳಲ್ಪಟ್ಟ ಸಮಾಖ್ಯಾಪ್ರಮಾಣಗಳಿಂದಲೂ ರುದ್ರನೇ ದ್ಯುಭ್ವಾದ್ಯಾಯತನನಾಗಿದ್ದಾನೆಂದು "ಅನುಮಾನೇನ ಚ"ಎಂಬಲ್ಲಿರುವ 'ಚ' ಶಬ್ದದಿಂದ ತಿಳಿಸಿದ್ದಾರೆ. ಆದ್ದರಿಂದ "ನೈವ ಶಾಸ್ತ್ರಂ ಕುವರ್ತ್ಮ ತತ್" ಎಂಬುದಾಗಿ ಹಿಂದೆ ರುದ್ರಾದಿ ಶಾಸ್ತ್ರಗಳಿಗೆ ಅಪ್ರಾಮಾಣ್ಯವನ್ನು ವಿವಕ್ಷಿಸಬಾರದು ಎಂದು ಪೂರ್ವಪಕ್ಷಕಾರರು ಅಭಿಪ್ರಾಯ ಪಡುತ್ತಾರೆ.

**भावदीपः – यद्यपि**

**'शैवाद्यागमसम्प्राप्तदृष्टगेन फलेन च ।**
**तद्वाक्योपमयान्यच्च प्रमाणत्वेऽनुमीयते ।।**

ದ್ಯುಭ್ವಾದ್ಯಧಿಕರಣ (೧-೩-೧)

ईशवाक्यत्वत इति चेद् तद्वव्यभिचारिणा ।
अप्रामाण्यानुमा च स्याद्... ।।'

इति शास्त्रयोनिनयानुव्याख्याने एवैषा युक्तिराशङ्क्य निरस्ता ।

ವಸ್ತುತಃ

''ಶೈವಾದ್ಯಾಗಮಸಂಪ್ರಾಪ್ತದೃಷ್ಟಗೇನ ಫಲೇನ ಚ।
ತದಾಪ್ತ್ಯೋಪಮಯಾನ್ಯಚ್ಚ ಪ್ರಮಾಣತ್ವೇಽನುಮೀಯತೇ।
ಈಶವಾಕ್ಯತ್ವದ ಇತಿ ಚೇತ್ತದ್‌ಗವ್ಯಭಿಚಾರಿಣಾ।
ಅಪ್ರಾಮಾಣ್ಯಾನುಮಾ ಚ ಸ್ಯಾತ್''

ಇತ್ಯಾದಿಯಾಗಿ ಶಾಸ್ತ್ರಯೋನಿತ್ವಾಧಿಕರಣದ ಅನುವ್ಯಾಖ್ಯಾನದಲ್ಲೇ ಈ ಯುಕ್ತಿಯನ್ನು ಆಶಂಕಿಸಿ ನಿರಾಕರಿಸಿದ್ದಾರೆ.

**भावदीपः** – तथापीह श्रुतिलिङ्गबाहुल्येन प्रबलसमाख्यारूपहेत्वन्तरेण पूर्वपक्षे तद्बलेनेयमभ्युचयत्वेनोक्ता । यथा सर्वत्रप्रसिद्धेत्यत्रार्भकौकस्त्वेन सिद्धे चोद्येऽभ्युच्चयत्वेन चक्षुर्मयत्वाद्युक्तिस्तद्वत् । अत एवात्र सूत्रादावतच्छब्दादिति रुद्रश्रुतिलिङ्गासत्त्वोक्त्या समाख्यायाः सावकाशत्वमेवोच्यते न त्वागमाप्रामाण्यमिति भावः ।

ಆದರೂ ಸಹ ಪ್ರಕೃತ ಶ್ರುತಿ ಲಿಂಗಗಳ ಬಾಹುಲ್ಯವಿರುವುದರಿಂದ ಅಪ್ಷೇಅಲ್ಲದೆ ಪ್ರಬಲವಾದ ಸಮಾಖ್ಯಾಪ್ರಮಾಣವಿರುವುದರಿಂದ ಪೂರ್ವಪಕ್ಷವು ಹೆಚ್ಚಿನ ಪ್ರಮಾಣಗಳಿಂದ ಬಲಿಷ್ಠವಾಗಿದೆ. ಆದ್ದರಿಂದ ಹಿಂದಿನ ಶಾಸ್ತ್ರಯೋನಿತ್ವಾಧಿಕರಣದ ಮಾತನ್ನು ಇಲ್ಲಿ ವಿವಕ್ಷಿಸಬಾರದು. ಯಾವರೀತಿಯಾಗಿ ''ಸರ್ವತ್ರ ಪ್ರಸಿದ್ಧೋಪದೇಶಾತ್'' ಎಂಬ ಸೂತ್ರದಲ್ಲಿ ಅರ್ಭಕೌಕಸ್ತ್ವ ಲಿಂಗದಿಂದಲೇ ಪೂರ್ವಪಕ್ಷವು ದೃಢವಾಗಿದ್ದರೂ ಚಕ್ಷುರ್ಮಯತ್ವ ಮೊದಲಾದ ಹೆಚ್ಚಿನ ಯುಕ್ತಿಗಳಿಂದ ಪೂರ್ವಪಕ್ಷವನ್ನು ದೃಢಪಡಿಸುವಂತೆ ಇಲ್ಲಿಯೂ ಸಹ ತಿಳಿಯಬೇಕು. ಆದ್ದರಿಂದಲೇ ಪ್ರಕೃತ ಸೂತ್ರಗಳಲ್ಲಿ ''ಅತಚ್ಛಬ್ದಾತ್'' ಎಂಬುದರಿಂದ ರುದ್ರ ಪ್ರತಿಪಾದ್ಯವಾದ ಶ್ರುತಿ ಲಿಂಗಗಳು ಇಲ್ಲವೆಂದೇ ಹೇಳಿದ್ದಾರೆ. ಇದರಿಂದ ಸಮಾಖ್ಯಾಪ್ರಮಾಣವನ್ನು ಸಾವಕಾಶವೆಂದು ಹೇಳಿದ್ದಾರೆ ಹೊರತು ಆಗಮಕ್ಕೆ ಅಪ್ರಮಾಣ್ಯವನ್ನು ಹೇಳಿರುವುದಿಲ್ಲವೆಂದು ತಿಳಿಯಬೇಕು.

**भावदीपः** – यद्वा 'रुद्रो वाव लोकाधारः' इत्यादिश्रुत्या रुद्रादेः सर्वाधारत्वप्राप्तौ तद्बलेन तादृशागमस्यापि प्रामाण्यसम्भवेनाप्रामाण्यानुमानस्य बाधितत्वात्तदवष्टम्भेन-पूर्वपक्षो युक्तः । समाधिस्तु समाख्याया विष्णुपरत्वसाधनेनैव सेत्स्यतीति भावः ।

ಅಥವಾ ''ರುದ್ರೋ ವಾವ ಲೋಕಾಧಾರಃ'' ಇತ್ಯಾದಿ ಶ್ರುತಿಯಿಂದ ರುದ್ರಾದಿಗಳಲ್ಲಿಯೂ ಸರ್ವಾಧಾರತ್ವವು ಪ್ರಾಪ್ತವಾಗುತ್ತದೆ. ಸರ್ವಾಧಾರತ್ವದ ಬಲದಿಂದ ರುದ್ರ ಪ್ರತಿಪಾದಕವಾದ ಆಗಮಕ್ಕೆ

ಪ್ರಾಮಾಣ್ಯವು ಬರುತ್ತದೆ. ಇದರಿಂದ ಅಪ್ರಾಮಾಣ್ಯಾನುಮಾನವು ಬಾಧಿತವಾಗುತ್ತದೆ. ಅದರ ಬಲದಿಂದ ಪೂರ್ವಪಕ್ಷವು ದೃಢವಾಗುತ್ತದೆ. ಸಮಾಖ್ಯಾಪ್ರಮಾಣಕ್ಕೆ ವಿಷ್ಣುಪರತ್ವವನ್ನು ಸಾಧಿಸುವುದರಿಂದಲೇ ಇದರ ನಿರಾಕರಣೆಯನ್ನು ಮಾಡಿದಂತಾಗುತ್ತದೆ ಎಂದು ತಿಳಿಯಬೇಕು.

**भावदीपः** – तत्त्वनिर्णयोक्तप्रकृतिकोटिमपि सोपपत्तिकमुपपादयति – युभ्वादीनामिति ।। 'खण्डितं रूपमेवात्र विकारोऽपि विकारिणः' इत्युक्त्या भेदस्यापि भावेनाश्रयाश्रयिभावो न विरुद्ध इत्युपेत्य युक्तमित्युक्तम् ।

ತತ್ವನಿರ್ಣಯದಲ್ಲಿ ಪ್ರಕೃತಿಯೂ ಸಹ ದ್ಯುಭ್ವಾದ್ಯಾಯತನವಾಗಬಹುದೆಂದು ಹೇಳಿದ್ದಾರೆ. ಅದನ್ನು ಉಪಪತ್ತಿಸಹಿತವಾಗಿ ಟೀಕೆಯಲ್ಲಿ "ದ್ಯುಭ್ವಾದೀನಾಂ" ಎಂಬ ವಾಕ್ಯದಿಂದ ಪ್ರತಿಪಾದಿಸುತ್ತಿದ್ದಾರೆ. "ಖಂಡಿತಂ ರೂಪಮೇವಾತ್ರ ವಿಕಾರೋಽಪಿ ವಿಕಾರಿಣಃ" ಎಂಬ ಮಾತಿನಂತೆ ಕಾರ್ಯ ಹಾಗೂ ಕಾರಣಗಳಿಗೆ ಭೇದವು ಇರುತ್ತದೆ. ಈ ದೃಷ್ಟಿಯಿಂದ ಆಶ್ರಯಾಶ್ರಯಿಭಾವವನ್ನು ಹೇಳುವುದು ವಿರುದ್ಧವಲ್ಲವೆಂದು ವಿವಕ್ಷಿಸಿ "ಉಕ್ತಂ" ಎಂಬ ಪದವನ್ನು ಟೀಕೆಯಲ್ಲಿ ಪ್ರಯೋಗಿಸಿದ್ದಾರೆ.

**भावदीपः** – 'यत्किञ्च जगत्यां जगद्' इति निर्देशवदिति भावः ।। पूर्ववदिति ।। दृष्टफलेत्यादिपूर्वोक्तदिशेत्यर्थः । 'स एषोऽन्तः' इति भाष्यं सर्वनामपरामर्शं दर्शयन् व्याचष्टे – अरा इवेति ।। 'प्राणभृच्च' इति सौत्रपदसूचितां युक्तिमाह – तस्येति ।।

"ಯತ್ಕಿಂಚ ಜಗತ್ಯಾಂ ಜಗತ್" ಎಂಬಲ್ಲಿ ಕಾರ್ಯಕಾರಣಗಳಿಗೆ ಆಶ್ರಯಾಶ್ರಯಿಭಾವವನ್ನು ಹೇಳಿದಂತೆ ಇಲ್ಲಿಯೂ ತಿಳಿಯಬೇಕು. "ಪೂರ್ವವತ್" ಎಂದರೆ "ದೃಷ್ಟಫಲವಿಧಾಯಕ"ಇತ್ಯಾದಿ ವಾಕ್ಯದಲ್ಲಿ ಹೇಳಿದ ಪ್ರಕಾರವೆಂದರ್ಥ. "ಸ ಏಷೋಽಂತಶ್ಚರತೇ" ಎಂಬ ಭಾಷ್ಯವನ್ನು ಸರ್ವನಾಮದಿಂದ ಯಾವುದನ್ನು ಪರಾಮರ್ಶಿಸಬೇಕೆಂದು ತೋರಿಸುತ್ತಾ ವ್ಯಾಖ್ಯಾನಿಸುತ್ತಿದ್ದಾರೆ "ಅರಾ ಇಹ ರಥನಾಭೌ" ಎಂಬ ವಾಕ್ಯದಿಂದ. "ಪ್ರಾಣಭೃಚ್ಚ" ಎಂಬ ಸೂತ್ರದಲ್ಲಿ ಸೂಚಿತವಾದ ಯುಕ್ತಿಯನ್ನು "ತಸ್ಯ" ಎಂಬ ವಾಕ್ಯದಿಂದ ಹೇಳಿದ್ದಾರೆ.

**भावदीपः** – 'जीव प्राणधारणे' इति धातोरिति भावेन जीवत्वादेवेत्युक्तिः । 'प्राणभृच्च' इति चशब्दसूचितकोटिं सयुक्तिकं व्यनक्ति – विषयेति ।। प्रसिद्धेश्चेति ।। 'एवमेवैष प्राण इतरान् प्राणान् पृथक् पृथगेव सन्निधत्ते' इत्यादावित्यर्थः ।।

'ಜೀವ ಪ್ರಾಣಧಾರಣೇ' ಎಂಬ ಧಾತುವಿರುವುದರಿಂದ ಜೀವನಲ್ಲಿ ಪ್ರಾಣಾಧಾರತ್ವಲಿಂಗವು ಯುಕ್ತವಾಗುತ್ತದೆ ಎಂದು ತಿಳಿಯಬೇಕು. "ಪ್ರಾಣಭೃಚ್ಚ" ಎಂಬ ಸೂತ್ರದಲ್ಲಿ 'ಚ' ಶಬ್ದದಿಂದ ಸೂಚಿತವಾದ ಮತ್ತೊಂದು ಪೂರ್ವಪಕ್ಷಕೋಟಿಯನ್ನು ಯುಕ್ತಿಬದ್ಧವಾಗಿ ವ್ಯಾಖ್ಯಾನಿಸುತ್ತಿದ್ದಾರೆ "ವಿಷಯ" ಇತ್ಯಾದಿಯಾಗಿ.

"ಪ್ರಸಿದ್ಧೇಶ್ಚ" ಎಂದರೆ "ಏವಮೇವೈಷ ಪ್ರಾಣ ಇತರಾನ್ ಪ್ರಾಣಾನ್ ಪೃಥಕ್ ಪೃಥಗೇವ ಸನ್ನಿಧತ್ತೇ" ಇತ್ಯಾದಿ ವಾಕ್ಯಗಳಲ್ಲಿ ಪ್ರಾಣಾಧಾರತ್ವವು ಪ್ರಸಿದ್ಧವಾಗಿದೆಯೆಂದು ತಿಳಿಯಬೇಕು.

**भावदीपः – विष्णोरिति ।। प्रागुक्तश्रुताविति भावः ।। बहुधा जन्मेति ।। जीवे तु 'ज्ञोऽत एव' इत्यत्रत्यन्यायेन देहाभिप्रायेण जन्मनो योगेऽपि देहतोऽप्यजायमाने हरौ जन्मायोगादिति भावः । प्रागुक्तदिशा निरवकाशत्वेन प्रबलरुद्रसमाख्या-बाधाच्चेत्यपि ज्ञेयम् ।**

"ವಿಷ್ಣೋಃ" ಎಂದು ಟೀಕೆಯಲ್ಲಿ ಹೇಳಿದ್ದಾರೆ. ಅಂದರೆ ವಿಷಯವಾಕ್ಯವನ್ನು ಪ್ರದರ್ಶಿಸುವ ಸಂದರ್ಭದಲ್ಲಿ ಹೇಳಿದ ಶ್ರುತಿಯಿಂದ ದ್ಯುಭ್ವಾದ್ಯಾಯತನತ್ವವು ವಿಷ್ಣುವಿನಲ್ಲಿ ಸಿದ್ಧವಾಗಿದೆ ಎಂದು ಅಭಿಪ್ರಾಯ. "ಬಹುಧಾ ಜನ್ಮಬಾಧಾತ್" ಎಂದರೆ ಜೀವನಲ್ಲಿ "ಜ್ಞೋತ ಏವ" ಎಂಬ ಸೂತ್ರದ ಪ್ರಕಾರ ಅನೇಕ ದೇಹಗಳು ಬರುವ ಕಾರಣ ಅನೇಕ ಜನ್ಮಗಳನ್ನು ಅಂಗೀಕರಿಸಬಹುದು. ಆದರೆ ವಿಷ್ಣುವಿನಲ್ಲಿ ಅನೇಕ ದೇಹಗಳಿಂದ ಜನ್ಮ ಬರಲು ಸಾಧ್ಯವಿಲ್ಲದ ಕಾರಣ ಯಾವುದೇ ಪ್ರಕಾರದಲ್ಲಿಯೂ ಜನ್ಮವನ್ನು ಕೂಡಿಸಲಾಗದೆಂದು ತಿಳಿಯಬೇಕು. ಮತ್ತು ಹಿಂದೆ ಹೇಳಿದಪ್ರಕಾರ ನಿರವಕಾಶತ್ವದಿಂದ ಹಾಗೂ ಪ್ರಬಲವಾದ ರುದ್ರನಲ್ಲಿರುವ ಸಮಾಖ್ಯಾಪ್ರಮಾಣದಿಂದ ಬಾಧಬರುವ ಕಾರಣ ವಿಷ್ಣುವಿಗೆ ದ್ಯುಭ್ವಾದ್ಯಾಯತನತ್ವವನ್ನು ಹೇಳಬಾರದು.

**भावदीपः – भेदसूत्रव्यावर्त्यमाह – जीवेशेति ।। ब्रह्मगतेति ।। तथाच प्रागुक्तहेयत्वावचनादिकं जीवे सम्भवतीति न तेनापि विष्णोरवकाश इति भावः ।। अत इति ।। उक्तरीत्या निरवकाशसमाख्याऽगमप्रामाण्यानुमानजायमानत्वप्राणाधारत्वलिङ्गरूपाणामितरप्रापकाणां विष्णौ बाधकानां सत्वात् ।**

ಭೇದಸೂತ್ರದಿಂದ ವ್ಯಾವರ್ತ್ಯವಾದ ಪೂರ್ವಪಕ್ಷವನ್ನು "ಜೀವೇಶ" ಎಂಬುದರಿಂದ ತೋರಿಸುತ್ತಿದ್ದಾರೆ. ಬ್ರಹ್ಮಗತ ಎಂದರೆ ಹೀಗರ್ಥ - ಹಿಂದಿನ ಸೂತ್ರಗಳಲ್ಲಿ ಹೇಳಲ್ಪಟ್ಟ ಹೇಯತ್ವಾದಿಗಳೂ ಸಹ ಜೀವನಲ್ಲಿ ಉಪಪನ್ನವಾಗುತ್ತವೆ. ಆದ್ದರಿಂದಲೇ ಅವುಗಳಿಂದಲೂ ವಿಷ್ಣುವಿಗೆ ದ್ಯುಭ್ವಾದ್ಯಾಯತನತ್ವವು ಹೇಳಲು ಸಾಧ್ಯವಿಲ್ಲವೆಂದು ತಿಳಿಯಬೇಕು. "ಅತಃ" ಎಂದರೆ ಹಿಂದೆ ಹೇಳಿದಪ್ರಕಾರ ನಿರವಕಾಶವಾದ ಸಮಾಖ್ಯಾಪ್ರಮಾಣದ ಆಧಾರದಿಂದ ಆಗಮಪ್ರಮಾಣತ್ವವನ್ನು ಸಮರ್ಥಿಸುವ ಲಿಂಗಗಳೆಲ್ಲವೂ ರುದ್ರಾದಿಗಳಿಗೆ ಸಾಧಕವಾಗಿವೆ ಮತ್ತು ವಿಷ್ಣುವಿಗೆ ಬಾಧಕವೇ ಆಗಿವೆ ಆದ್ದರಿಂದ ಎಂದರ್ಥ.

**भावदीपः – अभेदेन परविद्याविषयत्वादिब्रह्मलिङ्गानां जीवे सम्भवाच्चेत्यर्थः । तयोरित्युपलक्षणं मत्वा चतुर्णामुपसंहारः – विष्ण्वितर इति ।।**

ಜೀವ ಹಾಗೂ ಬ್ರಹ್ಮರಿಗೆ ಅಭೇದವಿರುವ ಪ್ರಯುಕ್ತ ಪರವಿದ್ಯಾವಿಷಯತ್ವವೇ ಮೊದಲಾದ

ಬ್ರಹ್ಮಲಿಂಗಗಳೆಲ್ಲವೂ ಜೀವನಲ್ಲಿ ಬರಬಹುದೆಂದು ಅರ್ಥ. "ತಯೋಃ" ಎಂಬುದು ಉಪಲಕ್ಷಣವಾಗಿದೆ. ಆದ್ದರಿಂದ ನಾಲ್ಕು ಬಗೆಯ ಪೂರ್ವಪಕ್ಷದ ಉಪಸಂಹಾರವನ್ನು "ವಿಷ್ಣ್ವಿತರಃ " ಎಂದು ಹೇಳಿದ್ದಾರೆ.

**भावदीपः – एवेत्युक्तिस्तु चतुर्णां मध्येऽन्यतमानिर्णयेऽपि पूर्वपक्षस्य न सन्देहादविशेषः । विष्ण्वितर एवेत्यवधारणसम्भवादिति दर्शयितुम् । उक्तमित्यन्तभाष्यतात्पर्यमाह – तस्यैवेति ।। 'तमेव' इति भाष्यं हेतुसाध्ययो- र्वैय्यधिकरण्यनिरासाय व्याचष्टे – द्युभ्वादीति ।।**

"ವಿಷ್ಣುರೇವ" ಎಂಬಲ್ಲಿ ಅವಧಾರಣವನ್ನು ಮಾಡಿದ್ದರಿಂದ ನಾಲ್ಕರ ಮಧ್ಯದಲ್ಲಿ ಯಾರಾದರೋಬ್ಬರು ದ್ಯುಭ್ವಾದ್ಯಾಯತನರಾಗಬಹುದು. ಆದ್ದರಿಂದ ಪೂರ್ವಪಕ್ಷವು ಸಂದೇಹಕ್ಕಿಂತ ಭಿನ್ನವಾಗುವುದಿಲ್ಲವೆಂಬ ಗೊಂದಲಕ್ಕೆ ಅವಕಾಶವಿಲ್ಲ. ಏಕೆಂದರೆ "ವಿಷ್ಣ್ವಿತರಃ ಏವ" ಎಂಬ ಪ್ರಕಾರದಲ್ಲಿ ಪೂರ್ವಪಕ್ಷವನ್ನು ಮಾಡಬಹುದು. "ಉಕ್ತಂ" ಎಂಬಲ್ಲಿಯ ತನಕದ ಭಾಷ್ಯದ ತಾತ್ಪರ್ಯವನ್ನು "ತಸ್ಯೈವ" ಎಂಬುದರಿಂದ ಹೇಳುತ್ತಿದ್ದಾರೆ. "ತಮೇವ" ಎಂಬ ಭಾಷ್ಯವು ಹೇತು ಹಾಗೂ ಸಾಧ್ಯಗಳಿಗೆ ವ್ಯಧಿಕರಣವಾಗುತ್ತದೆ ಎಂಬ ಶಂಕೆಯನ್ನು ನಿರಾಕರಿಸುವುದಕ್ಕಾಗಿ "ದ್ಯುಭ್ವಾದಿ" ಎಂದು ವ್ಯಾಖ್ಯಾನಿಸುತ್ತಿದ್ದಾರೆ.

**भावदीपः – सूत्रविसंवादनिरासाय स्वशब्दपर्यायात्मशब्दाच्च न प्रकृतिजीवावभिधीयेते इति तत्त्वनिर्णयोक्तमर्थमाह – स्वशब्देति ।। श्रुतौ स्वशब्दाभावाद्वाचकशब्दान्तरस्याप्यदर्शनादिति तट्टीकोक्तं तात्पर्यं ध्येयम् । अधिकं चन्द्रिकायाम् । तत्त्वित्यनुवृत्तस्यार्थः – विष्णुरेवेति ।। १ ।।**

ಇಲ್ಲಿರುವ ಸಿದ್ಧಾಂತವು ಸೂತ್ರಕ್ಕೆ ವಿಸಂವಾದವಾಗಿಲ್ಲವೆಂದು ತಿಳಿಸುವುದಕ್ಕಾಗಿ ಸ್ವಶಬ್ದಕ್ಕೆ ಪರ್ಯಾಯಶಬ್ದವಾದ ಆತ್ಮಶಬ್ದದ ಬಲದಿಂದ ಪ್ರಕೃತಿಯಾಗಲಿ ಜೀವರಾಗಲಿ ಪ್ರತಿಪಾದ್ಯರಾಗುವುದಿಲ್ಲವೆಂದು ಹೇಳಿದ್ದಾರೆ. ಇದು ತತ್ವನಿರ್ಣಯದಲ್ಲಿ ಹೇಳಿರುವ ಅರ್ಥವಾಗಿದೆ. ಈ ವಿವಕ್ಷೆಯಿಂದ "ಸ್ವಶಬ್ದ" ಇತ್ಯಾದಿ ವಾಕ್ಯವು ಹೊರಟಿದೆ. ಶ್ರುತಿಯಲ್ಲಿ ಸ್ವಶಬ್ದವು ಕೇಳಿಸುತ್ತಿಲ್ಲ ಬೇರೆ ಶಬ್ದಗಳು ಕೇಳಿಸುತ್ತಿಲ್ಲ ಎಂಬ ಶಂಕೆಗೆ ಅವಕಾಶವಿಲ್ಲ. ಹೆಚ್ಚಿನ ವಿಚಾರವನ್ನು ಚಂದ್ರಿಕೆಯಿಂದ ತಿಳಿಯಬೇಕು. "ತತ್ತು" ಎಂಬ ಅನುವೃತ್ತಿಯಿಂದ ತಿಳಿಯುವ ಅರ್ಥವನ್ನು "ವಿಷ್ಣುರೇವ" ಎಂದು ಹೇಳಿದ್ದಾರೆ.

**वाक्यार्थमञ्जरी – ॐ द्युभ्वाद्यायतनं स्वशब्दात् ॐ ।। श्रुत्यादिप्रसिद्धेति ।। अनेनोभयश्रुतिलिङ्गादिभिस्तुल्यप्रसिद्धिमत्त्वमुभयत्र प्रसिद्धिमत्त्वमिति सूचितम् । एतेनान्यत्र प्रसिद्धपृथिवीशरीरत्वसाहित्यादन्तर्यामित्व स्यान्यत्र प्रसिद्धित्ववदन्यत्र प्रसिद्धजायमानत्वादिसाहित्याद् द्युभ्वाद्यायतनत्वमप्यन्यत्र**

प्रसिद्धं स्यादिति निरस्तम् । समाख्याश्रुत्यादितौल्याभावस्यान्यत्र प्रसिद्धलक्षणान्तर्गतत्वेन तत्तौल्यवतोऽस्यान्यत्र प्रसिद्धत्वाभावात् । उभयत्र प्रसिद्धत्वेनैव विष्णुवाचित्वमपि सिद्धमेवेत्यत उक्तम् – **विष्ण्वेकवाचित्वमिति ॥** श्रुत्यादिभिरन्यप्रसिद्धत्वे विष्ण्वेकवाचित्वप्रतिपादनमशक्यमित्यत उक्तम् – **प्रबलहेतुभिरिति ॥** अत्रास्ति शास्त्रादिसङ्गतिरित्यन्वयः ॥ **रुद्र इति ॥** रोगद्रावकत्वेन रुद्रनामा भगवान् सर्वलोकाधारो वाव प्रसिद्ध इत्यर्थः ॥ **वायुनेति ॥** हे गौतम स्यूतमत्र सर्वं जगदिति सूत्रं तेन ज्ञानादिमत्त्वाद् वायुशब्दितेन भगवताऽयं भूलोकः परोऽन्तरिक्षादिलोकः सर्वाणि भऊतानि च सन्दृब्धानि सङ्गतानि धृतानीत्यर्थः ॥ **आकाश इति ॥** अतीतानागतवर्तमानं यदाचक्षते विद्वांसस्तत्सर्वमाकाशे भगवदाश्रिताकाशाख्यप्रकृतौ ओतं प्रोतं सूत्रे पटवद् अत्यन्तमाश्रित इत्यर्थः । लोकाः सप्तलोकाः लोकिनस्तदभिमानिनः अलोकाः वैकुण्ठादयः अलोकिनस्तद्गता मुक्ताः । उक्तम् अथ परा ययेत्यनेन । मोक्षाय भगवज्ज्ञानं कुत इत्यत उक्तम् – **अमृतस्येति ॥** एष भगवानमृतस्य मुक्तवर्गस्य सेतुरिव सेतुराश्रय इत्यर्थः । अत्र द्युभ्वाद्यायतनस्य मोक्षसाधनविद्याविषयत्वोक्त्या परविद्याविषयत्वमुच्यते । मोक्षसाधनविद्यायाः एव परविद्यात्वादिति भावेनेत्यादिना समाख्यावाक्येन ॥ **प्राणानां ग्रन्थिरिति ॥** मेत्यस्यावृत्तिः । हे विष्णो रुद्रशब्दवाच्य त्वं प्राणानामिन्द्रियाणां ग्रन्थिः ग्रथ्यन्ते अस्मिन्निति ग्रन्थिराश्रयोऽसि । त्वम् अन्तकः संहर्ता सन्मा मां मा विश न प्रविशेत्यर्थः ॥ **प्राणेश्वर इति ॥** प्राणानामिन्द्रियाणामीश्वरः कृत्त्यात्मके चर्मात्मके देहे नियामकतया वसते तिष्ठतीति कृत्तिवासाः नाकं सुखं पिबतीति पिनाकाः । मुक्ताः ते अस्य सन्तीति पिनाकी मुक्त्याश्रय इत्यर्थः ॥ **रुद्रलिङ्गादिति ॥** संहर्तृत्वगजचर्माम्बरवत्त्वपिनाकचापवत्त्वादीनां तत्रैव प्रसिद्धत्वादिति भावः । किञ्च रुद्रस्य सर्वाधारत्वप्रतिपादकपाशुपताद्यागमनेनापि तस्य सर्वाधारत्वं सिद्ध्यति । नच तस्याप्रामाण्यम् । विमतं वाक्यं प्रमाणम्, रुद्रवाक्यत्वाद् दृष्टफलविधायकरुद३वाक्यवदिति तस्य प्रामाण्यानुमानादित्याह – **दृष्टफलेति ॥** प्रत्यक्षसंवादिफलाभिधायकेत्यर्थः । 'विमतं प्रमाणं कपिलवाक्यत्वात्, दृष्टफलाभिधायककपिलवाक्यवदित्यनुमितप्रामाण्योपेतकापिलागमेनापि प्रधानस्य सर्वाश्रयत्वसिद्धिरिति शेषः ॥ १ ॥

ಪರಿಮಳಾರ್ಥಚಂದ್ರಿಕಾ

## ಬ್ರಹ್ಮಮೀಮಾಂಸಾಶಾಸ್ತ್ರ

### ಆತ್ಮಶಬ್ದಕ್ಕೆ ಜೀವನೆಂದರ್ಥವಲ್ಲ

**सू – ॐ ॥ मुक्तोपसृप्यव्यपदेशात् ॥ ॐ ॥ २ ॥**

'ಅಮೃತಸ್ಯೈಷ ಸೇತುಃ' ಎಂಬುದಾಗಿ ಮುಕ್ತರಿಂದ ಪ್ರಾಪ್ಯನಾದವನು ಭಗವಂತನೆಂದು ಹೇಳಿರುವುದರಿಂದ ಆತ್ಮಶಬ್ದಕ್ಕೆ ಗೌಣನಾದ ಜೀವನೆಂಬ ಅರ್ಥವನ್ನು ಹೇಳಬಾರದು.

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका –** द्युभ्वाद्यायतनं न विष्णोरन्यः किन्तु विष्णुरेव । कुतः? मुक्तोपसृप्यव्यपदेशात् । भावप्रधानोऽयम् । द्युभ्वाद्यायतनस्य वस्तुनो 'अमृतस्यैष सेतुः' इति मुक्तप्राप्यत्ववचनात् तस्य चान्यत्रायोगादित्यर्थः ॥

ದ್ಯುಭ್ವಾದ್ಯಾಯತನನಾದವನು ವಿಷ್ಣುವೇ; ಹೊರತು ಬೇರೆಯವರಲ್ಲ. ಏಕೆಂದರೆ, ಮುಕ್ತೋಪಸೃಪ್ಯವ್ಯಪದೇಶಾತ್ = ಇದು ಭಾವಪ್ರಧಾನನಿರ್ದೇಶವಾಗಿದೆ. ಅಂದರೆ ದ್ಯುಭ್ವಾದಿಗಳಿಗೆ ಆಶ್ರಯನಾದ ವ್ಯಕ್ತಿಗೆ 'ಅಮೃತಸ್ಯೈಷ ಸೇತುಃ' ಎಂಬುದಾಗಿ ಮುಕ್ತಪ್ರಾಪ್ಯತ್ವವನ್ನು ಹೇಳಲಾಗಿದೆ. ಇದು ಜೀವಾದಿಗಳಲ್ಲಿ ಕೂಡುವುದಿಲ್ಲ.

श्रीमदानन्दतीर्थभगवत्पादाचार्यविरचित-

## ब्रह्मसूत्रभाष्यम्

**भाष्यम् – 'अमृतस्यैष सेतुः' (मुं. २-२-५.) इति ।**

ಅನುವಾದ - ಮುಕ್ತರಿಂದ ಹೊಂದಲ್ಪಡುವ ವ್ಯಕ್ತಿಯೇ ಆತ್ಮಶಬ್ದವಾಚ್ಯನೆಂದು 'ಅಮೃತಸ್ಯೈಷ ಸೇತುಃ' ಎಂಬ ಶ್ರುತಿಯಲ್ಲಿ ಹೇಳಲಾಗಿದೆ. ಆದ್ದರಿಂದಲೂ ಪರಮಾತ್ಮನೇ ದ್ಯುಭ್ವಾದ್ಯಾಯತನನಾಗುತ್ತಾನೆ.

ದ್ಯುಭ್ವಾದ್ಯಧಿಕರಣ (೧-೩-೧)

ಪ್ರತಿಪದಾರ್ಥ -- ಆತ್ಮಶಬ್ದವು ವಿಷ್ಣುವಿನಲ್ಲಿ ಮುಖ್ಯವಾಗಿರಬಹುದು. ಆದರೆ ಜೀವನ ಲಕ್ಷಣಗಳು ಕೇಳಿಸುತ್ತಿರುವುದರಿಂದ ಅಮುಖ್ಯವಾಗಿ ಆತ್ಮಶಬ್ದವಾಚ್ಯನಾದ ಜೀವನನ್ನೇ ಏಕೆ ವಿವಕ್ಷಿಸಬಾರದು? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ.

ಅಮೃತಸ್ಯ = ಮುಕ್ತರ ಸಮುದಾಯಕ್ಕೆ, ಏಷಃ = ಈ ಪರಮಾತ್ಮನೇ, ಸೇತುಃ = ಆಶ್ರಯನಾಗಿದ್ದಾನೆ. ಇತಿ = ಹೀಗೆ ಮುಂಡಕಶ್ರುತಿಯು ಹೇಳಿದೆ.(१)

भाष्यम् –

**'ब्रह्मविदाप्नोति परम् ।' (तै. २–१.)**
**'नारायणं महाज्ञेयं विश्वाऽत्मानं परायणम्' (महाना.११)**
**'मुक्तानां परमा गतिः' (महाभा.)**
**'एतमानन्दमयमात्मानमुपसङ्क्रामति' (तै. २–८.)**

**इत्यादिना तस्यैव मुक्तप्राप्यत्वव्यपदेशात् ।**

ಅನುವಾದ - ತೈತ್ತಿರೀಯದಲ್ಲಿಯೂ ಹೀಗೆ ಹೇಳಲಾಗಿದೆ - 'ಯಾರು ಬ್ರಹ್ಮನನ್ನು ತಿಳಿಯುತ್ತಾನೋ ಅವನು ಬ್ರಹ್ಮನನ್ನೇ ಹೊಂದುತ್ತಾನೆ' ಎಂದು. ಮಹಾನಾರಾಯಣೋಪನಿಷತ್ತಿನಲ್ಲಿ 'ಎಲ್ಲ ಜಗತ್ತು ವಿಶೇಷವಾಗಿ ತಿಳಿಯಲು ಯೋಗ್ಯನಾದ ಎಲ್ಲೆಡೆ ವ್ಯಾಪ್ತನಾದ ನಾರಾಯಣನನ್ನು ಆಶ್ರಯಿಸಿಕೊಂಡಿದೆ' ಎಂದು ಹೇಳಲಾಗಿದೆ.

ಮಹಾಭಾರತದಲ್ಲಿ 'ಮುಕ್ತರಿಗೆ ಮುಖ್ಯಾಶ್ರಯನಾಗಿರುವವನು ವಿಷ್ಣುವೇ ಆಗಿದ್ದಾನೆ' ಎಂದು ಹೇಳಲಾಗಿದೆ.

ತೈತ್ತಿರೀಯೋಪನಿಷತ್ತಿನಲ್ಲಿ 'ಆನಂದಸ್ವರೂಪನಾದ ಬ್ರಹ್ಮಶಬ್ದದಿಂದ ಪ್ರಸಿದ್ಧನಾದ

(१) **भाष्यदीपिका** – ननु विष्णौ मुख्योऽप्यात्मशब्दो जायमानत्वरूपजीवलिङ्गबलादमुख्यार्थः किं न स्यात् । तथा च न ततो विष्णोर्द्युभ्वाद्यायतनत्वनिर्णय इत्याशङ्कां परिहरत्सूत्रमुपन्यस्य तदुपात्तश्रुतिमेवोदाहरति – मुक्तेति ॥ इति मुक्तप्राप्यत्वव्यपदेशादित्यन्वयः । सूत्रे द्युभ्वाद्यायतनस्येति विपरिणामेनानुवर्तनीयम् । मुक्तोपसृप्येति भावनिर्देशः। उपसृप्यत्वं चेह श्रौतसेतुशब्दबलात् प्राप्यान्तररहितत्वे सति प्राप्यत्वं विवक्षितम् । न त्वर्चिरादिवत् प्राप्यत्वमात्रम् । तथा च – द्युभ्वाद्यायतनस्य 'अमृतस्य' इति मुक्तोपसृप्यत्वोक्तेर्विष्णुत्वनिश्चयान्नाऽत्मशब्दस्यामुख्यार्थत्वमाश्रित्य विष्णोरन्यद् द्युभ्वाद्यायतनं कल्प्यमिति । 'मुक्तानाम्' इति स्मरणादमृतस्येति जातावेकवचनम् । तथा च 'अमृतस्य' मुक्तजातस्य 'एषः' परमात्मा 'सेतुः' सेतुरिव सेतुर्मुख्याश्रय इत्यर्थः ।

ಪರಮಾತ್ಮನನ್ನು ಮುಕ್ತರು ಹೊಂದುತ್ತಾರೆ' ಎಂದು ಹೇಳಲಾಗಿದೆ.

ಇವೇ ಮೊದಲಾದ ಅನೇಕಪ್ರಮಾಣಗಳಿಂದ ಆ ಪರಮಾತ್ಮನೇ ಮುಕ್ತರಿಂದ ಹೊಂದಲು ಯೋಗ್ಯನಾಗಿದ್ದಾನೆಂಬ ಮಾತುಗಳನ್ನು ಕೂಡಿಸಬೇಕು.

ಪ್ರತಿಪದಾರ್ಥ -- ದ್ಯುಭ್ವಾದ್ಯಾಯತನತ್ವಕ್ಕೆ ಮುಕ್ತಪ್ರಾಪ್ಯತ್ವವು ಹೇತುವಾಗಿದೆಯೆಂದು ಹೇಗೆ ಹೇಳುತ್ತೀರಿ ಎಂದು ಆಶಂಕಿಸಿ ಪರಿಹರಿಸುತ್ತಿದ್ದಾರೆ.

ಬ್ರಹ್ಮವಿತ್ = ಪರಬ್ರಹ್ಮನನ್ನು ತಿಳಿದವನು, ಪರಂ = ಮೋಕ್ಷವನ್ನು, ಆಪ್ನೋತಿ = ಹೊಂದುತ್ತಾನೆ, ಮತ್ತು ಮಹಾಜ್ಞೇಯಂ = ವಿಶೇಷವಾಗಿ ತಿಳಿಯಲು ಅರ್ಹನಾದ, ವಿಶ್ವಾತ್ಮಾನಂ = ಎಲ್ಲೆಡೆ ವ್ಯಾಪ್ತನಾದ, ನಾರಾಯಣಂ = ಶ್ರೀಮನ್ನಾರಾಯಣನನ್ನು ಪರಾಯಣಂ ಮುಕ್ತರಿಗೆಆಶ್ರಯನನ್ನಾಗಿ ತಿಳಿ.

ಮತ್ತು ಮುಕ್ತಾನಾಂ = ಮುಕ್ತರಿಗೆ, ಪರಮಾಗತಿಃ = ಮುಖ್ಯಾಶ್ರಯನಾದವನು ವಿಷ್ಣುವೇ ಆಗಿದ್ದಾನೆ.

ಮತ್ತು ಆನಂದಮಯಂ = ಆನಂದಸ್ವರೂಪನಾದ, ಏತಂ = ಬ್ರಹ್ಮಶಬ್ದಪ್ರತಿಪಾದ್ಯನಾದ, ಆತ್ಮಾನಂ = ಪರಮಾತ್ಮನನ್ನು, ಉಪಸಂಕ್ರಾಮತಿ = ಮುಕ್ತರು ಹೊಂದುತ್ತಾರೆ. ಇತ್ಯಾದಿನಾ = ಇವೇ ಮೊದಲಾದ ಪ್ರಮಾಣದಿಂದ, ತಸ್ಯೈವ = ಆ ಪರಮಾತ್ಮನಿಗೇ, ಮುಕ್ತಪ್ರಾಪ್ಯತ್ವವ್ಯಪದೇಶಾತ್ = ಮುಕ್ತರಿಂದ ಹೊಂದುವಿಕೆಯನ್ನು ಹೇಳಿರುವುದರಿಂದ.[१]

---

(१) भाष्यदीपिका -- ननु द्युभ्वाद्यायतनस्य मुक्तप्राप्यत्वं कुतः विष्णुत्वनिश्चायकमित्या-शङ्कापरिहारकतयाऽपि सूत्रं व्याचष्टे – ब्रह्मविदिति ।। 'इत्यादिना' वाक्येन 'तस्य' विष्णोः । एवेत्यनेन प्राप्यत्वं प्राप्यान्तररहितत्वे सति प्राप्यत्वम् । अनेन द्युभ्वाद्यायतनस्य मुक्तोपसृप्यत्वव्यपदेशात् तस्य विष्णोरेव मुक्तोपसृप्यत्वव्यपदेशादित्यावृत्त्या सूत्रं व्याख्यातम् । प्रधानसूत्रेऽनुवृत्तं तत्त्वित्येतदिह विपरिणामेनानुवर्तनीयमिति सूचितम् । उपसृप्यपदं भावप्रधानं कृत्वा व्याख्यातम् । एवकारो लिङ्गस्यान्य-निष्ठत्वव्यवच्छेदकः । 'ब्रह्मवित्' विष्णुज्ञानी मुक्तः सन् 'परं' विष्णुमाप्नोतीति तैत्तिरीयश्रुत्यर्थः ।

'नारायणम्' इति तैत्तिरीयोपनिषदि महोपनिषदि च श्रुतम् । अत्र 'तद्विश्वमुपजीवति' इत्यनुवर्तते । तथा च 'तद्विश्वं' जगत् महनीयं ज्ञेयं, पूज्यज्ञेयं वा । विश्वस्वामिनं 'परायणं' मुक्तानामाश्रयमुपजीवतीति श्रुत्यर्थः। 'मुक्तानां परमा गतिः' इति सहस्रनामगतमेकं नाम । परमा मुख्या, गम्यत इति गतिराश्रयः । 'एतम्' इति तैत्तिरीयवाक्यमानन्दमयनये व्याकृतम् । आदिपदेन 'एतमानन्दमयमात्मानमुपसङ्क्रम्य', 'परमं यः परायणम्' इत्यादिकं गृह्यते ।

भाष्यम् –

**'बहुनाऽत्र किमुक्तेन यावच्छ्वेतं न गच्छति ।**
**योगी तावन्न मुक्तः स्यादेष शास्त्रविनिर्णयः ॥' इत्यादित्यपुराणे ॥२॥**

'ಹೆಚ್ಚು ಏಕೆ ಮಾತನಾಡಬೇಕು? ಯಾರು ಅಪರೋಕ್ಷಜ್ಞಾನಿಯಾಗಿರುತ್ತಾನೋ ಅವನು ಶ್ವೇತದ್ವೀಪವೆಂಬ ವಿಷ್ಣುವಿನ ಸ್ಥಳವನ್ನು ಹೊಂದಿ ಅವನ ದರ್ಶನವನ್ನು ಪಡೆಯುವ ತನಕ ಪರಮಾತ್ಮನ ಇಚ್ಛಾರೂಪವಾದ ಆವರಣವನ್ನು ಕಳೆದುಕೊಳ್ಳಲಾರ' ಹೀಗೆ ಆದಿತ್ಯಪುರಾಣದಲ್ಲಿ ಹೇಳಲಾಗಿದೆ.

ಪ್ರತಿಪದಾರ್ಥ -- ಅತ್ರ = ಈ ವಿಷಯದಲ್ಲಿ, ಬಹುನಾ = ಹೆಚ್ಚಾದ, ಉಕ್ತೇನ = ಹೇಳುವುದರಿಂದ, ಕಿಂ = ಏನು ಪ್ರಯೋಜನ? ಯೋಗಿಃ = ಅಪರೋಕ್ಷಜ್ಞಾನಿಯು ಯಾವತ್ = ಎಲ್ಲಿಯ ತನಕ, ಶ್ವೇತಂ = ಶ್ವೇತದ್ವೀಪದಲ್ಲಿರುವ ಭಗವಂತನನ್ನು, ನ ಗಚ್ಛತಿ = ಹೊಂದುವುದಿಲ್ಲವೋ, ತಾವತ್ = ಅಲ್ಲಿಯ ತನಕ, ಮುಕ್ತಃ = ಮುಕ್ತನು, ನ = ಆಗುವುದಿಲ್ಲ. ಏಷಃ = ಇದೇ, ಶಾಸ್ತ್ರಸ್ಯ = ಸಕಲಶಾಸ್ತ್ರಗಳ, ನಿರ್ಣಯಃ = ನಿಶ್ಚಯವು, ಇತಿ = ಹೀಗೆ, ಆದಿತ್ಯಪುರಾಣೇ = ಆದಿತ್ಯಪುರಾಣದಲ್ಲಿ ಹೇಳಲಾಗಿದೆ. ಈ ಎಲ್ಲ ಕಾರಣಗಳಿಂದ ಮುಕ್ತಪ್ರಾಪ್ಯನಾಗಿ ಆತ್ಮಶಬ್ದವಾಚ್ಯನಾದವನು ವಿಷ್ಣುವೇ ಆಗುತ್ತಾನೆ ಅಂತಹ ವಿಷ್ಣುವೇ ದ್ಯುಭ್ವಾದ್ಯಾಯತನನೂ ಸಹ ಆಗುತ್ತಾನೆಂದು ತಿಳಿಯಬೇಕು.(१)

---

(१) **भाष्यदीपिका** – ननूदाहृतवाक्यैरस्तु विष्णोः मुक्तप्राप्यत्वं, तथाऽप्यत्रान्यव्यवच्छेदाभावाद् विष्णुवदन्यस्य मुक्तप्राप्यत्वं किं न स्यादिति लिङ्गस्य सावकाशत्वमाशङ्क्यान्यत्र प्राप्यत्वमात्रसम्भवेऽपि निरुक्तोपसृप्यत्वं सौत्रमुक्तशब्दितविवक्षितमुक्त्युपेतजीवप्राप्यत्वं वाऽन्यत्र निरवकाशमिति प्रमाणेनाऽह – बहुनेति ॥ 'अत्र' प्राप्यमोक्षतत्साधनविषये 'बहुनोक्तेन' इदमिदं चेति प्रत्येकं बहुना वचनेन 'किं प्रयोजनं' न किमपि, प्रत्युतोक्तिगौरवमेवेति भावः । तर्हि कथं निर्णय इत्यत आह – यावच्छ्वेतमिति ॥ 'श्वेतं' श्वेतद्वीपाख्यं विष्णुस्थानं 'यावन्न गच्छति' न प्राप्नोति, तत्रत्यं विष्णुं च न पश्यति 'तावद् योगी' अपरोक्षज्ञानाख्योपायवान् मुक्तो न स्यात् । भगवदिच्छारूपाऽवरणान्मुक्तः सम्यगाविर्भूतज्ञानानन्दादिमान् न भवेदिति 'एषः' उपदेशः 'शास्त्रविनिर्णयः' शास्त्रतत्त्वविषयकनिर्णयसाधनमित्यर्थः । एषोऽर्थः 'शास्त्रविनिर्णयः' तज्जन्यनिर्णयविषय इति वा ।

भावबोधे तु – सूत्रे पुराणे च मुक्तपदेन लिङ्गभङ्गवान् विवक्षित इत्युक्तम् । अत्र श्वेतद्वीपाऽगन्तुरमुक्तत्वोक्त्या श्वेतद्वीपं प्राप्तस्यैव मुक्तत्वं ज्ञायते । तथा च तत्स्थितस्य विष्णोरेवेतर० यवच्छेदेन मुक्तप्राप्यत्वं सिद्धमिति भावः । 'इत्यादित्यपुराणे' इत्यस्य तस्यैव मुक्तप्राप्यत्व० यपदेशादित्यनेनान्वयः । अनेन तस्यैवेत्येवकारस्योपयोगो ज्ञापितो भवति । अस्य हेतोर्न

श्रीपद्मनाभतीर्थविरचितसत्तर्कदीपावल्याम्ः

॥ ॐ मुक्तोपसृप्यव्यपदेशात् ॐ॥

'ब्रह्मविदाप्नोति परम्' इत्यादिवचनान्तरैः विष्णुरेव हि मुक्ताश्रयत्वेनोच्यते । तदाह – मुक्तेत्यादिना ॥ पराणां मुक्तानाम् अयनं श्रुतं श्वेतद्वीपाख्यं विष्णुस्थानमित्यर्थः ।

'ಬ್ರಹ್ಮವಿದಾಪ್ನೋತಿ ಪರಮ್' ಇವೇ ಮೊದಲಾದ ಬೇರೆ ಶ್ರುತಿಗಳಿಂದ ಮುಕ್ತಾಶ್ರಯನಾದವನು ವಿಷ್ಣುವೇ ಆಗಿದ್ದಾನೆಂದು ತಿಳಿಯುತ್ತದೆ. ಈ ವಿಷಯವನ್ನು "ಮುಕ್ತೋಪಸೃಪ್ಯ"ವೆಂಬ ಸೂತ್ರವು ಹೇಳುತ್ತಿದೆ. 'ನಾರಾಯಣಂ ಮಹಾಜ್ಞೇಯಂ ವಿಶ್ವಾತ್ಮಾನಂ ಪರಾಯಣಮ್' ಎಂಬಲ್ಲಿರುವ ಪರಾಯಣಂ ಎಂಬ ಪದವು ಮುಕ್ತರಿಗೆ ಆಶ್ರಯನಾಗಿದ್ದಾನೆಂದು ಹೇಳುತ್ತಿದೆ. ಶ್ವೇತದ್ವೀಪವೆಂಬ ವಿಷ್ಣುವಿನ ಸ್ಥಾನವು ಮುಕ್ತರಿಗೆ ಆಶ್ರಯವೆಂದು ತಿಳಿಯಬೇಕು.

तत्वप्रकाशिका –

ॐ ॥ मुक्तोपसृप्यव्यपदेशात् ॥ ॐ ॥

ननु विष्णौ मुख्योऽप्यात्मशब्दो जीवलिङ्गबलादमुख्यार्थः किं न स्यात् । तथा च न विष्णोर्द्युभ्वाद्यायतनत्वमित्याशङ्कां परिहरत्सूत्रमुपन्यस्य तदुपात्तश्रुतिमेवोदाहरति – मुक्तेति ॥

ಆತ್ಮಶಬ್ದವು ವಿಷ್ಣುವನ್ನೇ ಪ್ರಧಾನವಾಗಿ ಪ್ರತಿಪಾದಿಸಬಹುದು. ಆದರೆ ಬಹುಧಾಜಾಯಮಾನತ್ವ ಮೊದಲಾದ ಜೀವನ ಲಿಂಗಗಳಿರುವುದರಿಂದ ಆತ್ಮಶಬ್ದಕ್ಕೆ ಅಮುಖ್ಯಾರ್ಥವನ್ನೇಕೆ ಸ್ವೀಕರಿಸಬಾರದು? ಅಮುಖ್ಯಾರ್ಥನಾದ ಜೀವನೆಂಬರ್ಥವನ್ನು ಸ್ವೀಕರಿಸಿದರೆ ವಿಷ್ಣು ದ್ಯುಭ್ವಾದ್ಯಾಯತನನಾಗುವುದಿಲ್ಲ. ಈ ಶಂಕೆಯನ್ನು ಪರಿಹರಿಸುವುದಕ್ಕಾಗಿ ಸೂತ್ರವನ್ನು ಪಠಿಸಿ, ಸೂತ್ರದಿಂದ ಸೂಚಿತವಾದ ಶ್ರುತಿಯನ್ನೇ ಉದಾಹರಿಸುತ್ತಿದ್ದಾರೆ "ಮುಕ್ತ" ಇತ್ಯಾದಿಭಾಷ್ಯದಿಂದ.

तत्वप्रकाशिका – नाऽत्मशब्दस्यामुख्यार्थत्वं परिकल्प्य द्युभ्वाद्यायतनत्वमन्यत्र नेतुं शक्यम् । द्युभ्वाद्यायतनस्य मुक्तप्राप्यत्वोक्तेर्विष्णुत्वनिश्चयादित्यर्थः ।

लिङ्गस्य सावकाशत्वं शङ्क्यमित्यध्याहृतसाध्येनान्वयः ।

**'अमृतस्य' इति जातावेकवचनम् । मुक्तप्राप्यत्वं कुतो विष्णुत्वनिश्चायकम्? इत्यत आह – ब्रह्मविदिति ।।**

ಆತ್ಮಶಬ್ದಕ್ಕೆ ಅಮುಖ್ಯಾರ್ಥನಾದ ಜೀವನೆಂಬರ್ಥವನ್ನು ಪರಿಕಲ್ಪಿಸಿ ದ್ಯುಭ್ವಾದ್ಯಾಯತನತ್ವವೆಂಬ ಧರ್ಮವನ್ನುಬೇರೆ ಕಡೆ ಒಯ್ಯಲು ಸಾಧ್ಯವಿಲ್ಲ. ಏಕೆಂದರೆ ಯಾವ ವ್ಯಕ್ತಿಯು ದ್ಯುಭ್ವಾದ್ಯಾಯತನನಾಗಿದ್ದಾನೋ ಅಂತಹವನು ಮುಕ್ತರಿಂದ ಪ್ರಾಪ್ಯನಾಗಿದ್ದಾನೆಂದು ಹೇಳಿರುವ ಕಾರಣ ಆ ವ್ಯಕ್ತಿಯು ವಿಷ್ಣುವೇ ಆಗಬೇಕು. 'ಅಮೃತಸ್ಯ' ಎಂಬಲ್ಲಿರುವ ಏಕವಚನವು ಸಮುದಾಯಾಭಿಪ್ರಾಯದಲ್ಲಿದೆ. ಮುಕ್ತಪ್ರಾಪ್ಯತ್ವವು ಹೇಗೆ ವಿಷ್ಣುನಿಶ್ಚಾಯಕ? ಎಂಬ ಪ್ರಶ್ನೆಗೆ "ಬ್ರಹ್ಮವಿತ್" ಎಂಬುದರಿಂದ ಉತ್ತರಿಸಿದ್ದಾರೆ.

**तत्वप्रकाशिका – पराणां मुक्तानामयनमाश्रयः । एतद्वाक्यैरस्तु विष्णोर्मुक्तप्राप्यत्वं तदन्यस्यापि किं न स्यादित्यत आह – बहुनेति ।। २ ।।**

"ಪರಾಯಣಂ" ಎಂಬಲ್ಲಿರುವ 'ಪರ'ಶಬ್ದಕ್ಕೆ ಮುಕ್ತರಿಗೆ ಎಂದರ್ಥ. 'ಅಯನಂ' ಎಂದರೆ ಆಶ್ರಯನಾಗಿದ್ದಾನೆಂದರ್ಥ. ಈ ವಾಕ್ಯಗಳಿಂದ ವಿಷ್ಣುವಿಗೆ ಮುಕ್ತಪ್ರಾಪ್ಯತ್ವಧರ್ಮವು ಬರಲಿ, ಆದರೆ ಬೇರೆಯವರಲ್ಲಿಯೂ ಬರಬಹುದಲ್ಲವೇ? ಎಂಬ ಪ್ರಶ್ನೆಗೆ "ಬಹುನಾ" ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ.

**भावदीपः – ॐ मुक्तोपसृप्यव्यपदेशात् ॐ ।। सूत्रे चशब्दाभावात् पूर्वहेतोरन्यथोपपत्तिनिरासकत्वेनावतारयति – नन्विति ।।**

ಸೂತ್ರದಲ್ಲಿ "ಚ" ಶಬ್ದವಿಲ್ಲದಕಾರಣ ಹಿಂದಿನ ಸೂತ್ರದಲ್ಲಿ ಹೇಳಲ್ಪಟ್ಟ ಹೇತು ಅನ್ಯಥಾ ಉಪಪನ್ನವಾಗುತ್ತದೆ ಎಂಬ ಆಶಂಕೆಯನ್ನು ನಿರಾಕರಿಸುವುದಕ್ಕಾಗಿ ಸೂತ್ರಕ್ಕೆ ಅವತಾರಿಕೆಯನ್ನು ಹೇಳುತ್ತಿದ್ದಾರೆ "ನನು" ಇತ್ಯಾದಿ ವಾಕ್ಯದಿಂದ.

**भावदीपः – इत्यन्तभाष्यस्य सूत्रेणान्वयमुपेत्य भावप्राधान्येन योग्यसाध्याध्याहारपूर्वं सूत्रार्थमाह – नाऽत्मशब्दस्येति ।। मुक्तानामिति वाक्यमनुरुद्ध्याऽह – जाताविति ।।**

"ಇತಿ" ಎಂಬಲ್ಲಿಯತನಕದ ಭಾಷ್ಯಕ್ಕೆ ಅನ್ವಯವನ್ನು ಒಪ್ಪಿ ಭಾವಪ್ರಧಾನ ನಿರ್ದೇಶದಿಂದ ಯೋಗ್ಯವಾದ ಸಾಧ್ಯವನ್ನು ಅಧ್ಯಾಹಾರ ಮಾಡಿಕೊಳ್ಳಬೇಕೆಂಬ ವಿವಕ್ಷೆಯಿಂದ ಸೂತ್ರಾರ್ಥವನ್ನು ಹೇಳುತ್ತಿದ್ದಾರೆ "ನಾಽತ್ಮಶಬ್ದಸ್ಯ" ಇತ್ಯಾದಿಯಾಗಿ. "ಮುಕ್ತಾನಾಂ" ಎಂದು ಬಹುವಚನವಿರುವುದರಿಂದ ಇದಕ್ಕೆ ಅನುಸಾರಿಯಾಗಿ "ಜಾತೌ" ಎಂದು ಹೇಳಿದ್ದಾರೆ.

**भावदीपः – भाष्ये तस्यैवेत्यस्य विष्णोरेवेत्यर्थमुपेत्यावतारयति – मुक्तप्राप्यत्वमिति ।। प्रकृतोपयोगायार्थमाह – पराणामिति ।।**

ಭಾಷ್ಯದಲ್ಲಿರುವ "ತಸ್ಯೈವ" ಎಂಬ ಪದಕ್ಕೆ 'ವಿಷ್ಣುವಿಗಷ್ಟೇ' ಎಂಬ ಅರ್ಥವನ್ನು ಅಂಗೀಕರಿಸಿ ಅವತಾರಿಕೆ ನೀಡುತ್ತಿದ್ದಾರೆ "ಮುಕ್ತಪ್ರಾಪ್ಯತ್ವಂ" ಇತ್ಯಾದಿಯಾಗಿ. ಪ್ರಕೃತಕ್ಕೆ ಉಪಯೋಗವಾಗುವುದಕ್ಕಾಗಿ ಅರ್ಥವನ್ನು "ಪರಾಣಾಂ" ಎಂಬುದರಿಂದ ಹೇಳಿದ್ದಾರೆ.

**भावदीपः – विश्वात्मानं विश्वस्वामिनम् । द्वितीयान्तानां 'तद् विश्वमुपजीवति' इति पूर्वोक्तकर्तृक्रियाभ्यामन्वयः ।। २ ।।**

"ವಿಶ್ವಾತ್ಮಾನಂ"ಎಂಬ ಶಬ್ದಕ್ಕೆ ವಿಶ್ವಕ್ಕೆ ಸ್ವಾಮಿಯಾದವನನ್ನು ಎಂದರ್ಥ. ದ್ವಿತೀಯಾಂತವಾದ ಶಬ್ದಗಳಿಗೆ ಹಿಂದೆ ಹೇಳಿದ ಕರ್ತೃಕ್ರಿಯೆಗಳೊಂದಿಗೆ ಅನ್ವಯ ಮಾಡಬೇಕು.

**वाक्यार्थमञ्जरी** – ॐ मुक्तोपसृप्यव्यपदेशात् ॐ भावप्रधानोऽयम् । 'अमृतस्यैष सेतुः' इति मुक्तैः प्राप्यान्तरशून्यत्वे सति प्राप्यत्वव्यपदेशादात्मशब्दो नामुख्यार्थ इत्यर्थः । मुक्तानां बहुत्वादाह – जाताविति ।। भाष्ये विश्वात्मानं विश्वस्वामिनम् । द्वितीयान्तानां 'तद् विश्वमुपजीवति' इति पूर्वेणान्वयः । प्रकृतोपयोगादाह – पराणामिति ।। अन्यस्यापीति ।। उदाहृतवाक्येष्वन्यानिषेधादिति भावः ।। बहुनेति ।। तत्र श्वेतद्वीपस्थभगवत्प्राप्तिं विना प्रकारान्तरनिषेधात्तस्यैव मुक्तप्राप्यत्वसिद्धिरिति भावः । ननु सर्वेषां श्वेतद्वीपगमनमयुक्तम्, 'केचिदत्रैव मुच्यन्ते नोत्क्रामन्ति कदाचन । केचित् स्वर्गे महर्लोके जने तपसि चापरे । केचित् सत्ये महाज्ञाना गच्छन्ति क्षीरसागरम् ।।' इत्यत्र महाज्ञानिनामेव क्षीरसागरगतश्वेतद्वीपगमनोक्तेः योग्यत्वं चापेक्षितमिति गीताभाष्ये श्वेतद्वीपगमनेऽपि योग्यत्वोक्त्या सर्वेषां तदभावादिति चेन्न । उदाहृतप्राणभाष्ययोः श्वेतद्वीपनिवासे महाज्ञानयोग्यतायाः प्रयोजकत्वोक्त्या सर्वेषां तद्गमनमात्राङ्गीकारेऽपि विरोधाभावात् । स्फुटं चैतत् प्रमेयदीपिकायां, वक्ष्यति चात्र चतुर्थाध्याये सकृच्छ्वेतद्वीपगमनाङ्गीकाराद्योग्यत्वं चात्रापेक्षितमिति । एतत्तत्र निवासायेति गमयितव्यमिति ।। २ ।।

## ದ್ಯುಭ್ವಾದ್ಯಧಿಕರಣ (೧-೩-೧)

## ಬ್ರಹ್ಮಮೀಮಾಂಸಾಶಾಸ್ತ್ರ

## ರುದ್ರ, ಪ್ರಕೃತ್ಯಾದಿಗಳೂ ಕೂಡ ದ್ಯುಭ್ವಾದ್ಯಾಯತನರಲ್ಲ

**सू – ॐ ॥ नाऽनुमानमतच्छब्दात् ॥ ॐ ॥ ३ ॥**

ಅನುಮಾನಸಿದ್ಧವಾದ ಪ್ರಾಮಾಣ್ಯವುಳ್ಳ ಆನುಮಾನಂ = ಪಾಶುಪತ, ಸಾಂಖ್ಯ ಮೊದಲಾದ ಶಾಸ್ತ್ರಗಳಲ್ಲಿ ಉಲ್ಲೇಖಿಸಲ್ಪಟ್ಟ ರುದ್ರಪ್ರಕೃತ್ಯಾದಿಗಳು ದ್ಯುಭ್ವಾದಿಲೋಕಗಳಿಗೆ ಆಶ್ರಯರಾಗುವುದಿಲ್ಲ. ಅವರನ್ನು ಹೇಳುವ ಶಬ್ದಗಳು ಈ ಪ್ರಕರಣದಲ್ಲಿ ಕಾಣಿಸುವುದಿಲ್ಲ.

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका** — आनुमानम् अनुमानमिति वा । अनुमानसिद्धप्रामाण्ययुतपाशुपताद्यागमैः सर्वाश्रयतया कल्पितं रुद्रप्रधानादिकं द्युभ्वाद्यायतनं न । कुतः? अतच्छब्दात् भस्मधरोग्रत्वादितच्छ्रुतिलिङ्गाद्यभावादित्यर्थः ॥

ಆನುಮಾನಮ್ = ಅನುಮಾನಸಿದ್ಧವಾದ ಪ್ರಾಮಾಣ್ಯದಿಂದ ಕೂಡಿರುವ ಪಾಶುಪತಾದ್ಯಾಗಮಗಳಿಂದ ದ್ಯುಭ್ವಾದಿಗಳಿಗೆ ಆಶ್ರಯನೆಂದು ಊಹಿಸಲ್ಪಟ್ಟ ರುದ್ರ, ಪ್ರಧಾನ ಮೊದಲಾದವುಗಳು, ನ = ದ್ಯುಭ್ವಾದ್ಯಾಶ್ರಯರು ಆಗುವುದಿಲ್ಲ. ಏಕೆಂದರೆ ಅತಚ್ಛಬ್ದಾತ್ = ಭಸ್ಮಧರ ಮೊದಲಾದ ಶಬ್ದಗಳು ಉಗ್ರತ್ವ ಮೊದಲಾದ ಲಿಂಗಗಳು ಇಲ್ಲದಿರುವುದರಿಂದ.

**श्रीमदानन्दतीर्थभगवत्पादाचार्यविरचित-**

## ब्रह्मसूत्रभाष्यम्

**भाष्यम् — नानुमानात्मकाऽगमपरिकल्पितरुद्रोऽत्र वाच्यः ।**

ಅನುವಾದ - ಅನುಮಾನರೂಪವಾದ ಶೈವಾಗಮದಿಂದ ಕಲ್ಪಿತನಾದ ರುದ್ರನು

ದ್ಯುಭ್ವಾದ್ಯಾಯತನ ಮೊದಲಾದ ಶಬ್ದಗಳಿಂದ ವಾಚ್ಯನೆಂದು ಅಥರ್ವಣಶ್ರುತಿಯಿಂದ ಸಾಧಿಸಲಾಗುವುದಿಲ್ಲ.

ಪ್ರತಿಪದಾರ್ಥ -- ಹಿಂದೆ ಹೇಳಿದ ಪ್ರಕಾರ ರುದ್ರಾದಿಗಳೇ ದ್ಯುಭ್ವಾದ್ಯಾಯತನರಾಗಬಹುದಲ್ಲವೇ ಎಂಬ ಪ್ರಶ್ನೆಗೆ ಪೂರ್ವಪಕ್ಷ ವಿಷಯದಲ್ಲಿ ಯಾವುದೇ ಸಾಧಕಪ್ರಮಾಣಗಳಿಲ್ಲವೆಂದು ಸೂತ್ರಕಾರರು ಹೇಳುತ್ತಿದ್ದಾರೆ.

ಅತ್ರ = ಅಥರ್ವಣಶ್ರುತಿಯಲ್ಲಿ, ಅನುಮಾನಾಗಮಪರಿಕಲ್ಪಿತಃ = ಸ್ವತಃ ಪ್ರಾಮಾಣ್ಯವಿಲ್ಲದ ಅನುಮಾನದಿಂದ ಅಥವಾ ಶೈವಾಗಮದಿಂದ ಕಲ್ಪಿತನಾದ, ರುದ್ರಃ = ರುದ್ರನು, ಅತ್ರ = ಅಥರ್ವಣಶ್ರುತಿಯಿಂದ, ನ ವಾಚ್ಯಃ = ದ್ಯುಭ್ವಾದ್ಯಾಯತನಶಬ್ದಗಳಿಂದ ವಾಚ್ಯನಾಗುವುದಿಲ್ಲ.(१)

## भाष्यम् — भस्मधरोग्रत्वादितच्छब्दाभावात् ।

ಅನುವಾದ - ಏಕೆಂದರೆ ರುದ್ರನಿಗೆ ಸಂಬಂಧಿಸಿದ ಭಸ್ಮಧರ ಮೊದಲಾದ ಹೆಸರುಗಳಾಗಲೀ ಉಗ್ರತ್ವ, ಕ್ರೂರತ್ವ ಮೊದಲಾದ ಲಿಂಗಗಳಾಗಲೀ ಇಲ್ಲಿ ಕೇಳಿಸುತ್ತಿಲ್ಲ.

ಪ್ರತಿಪದಾರ್ಥ -- ಸೂತ್ರದಲ್ಲಿರುವ ಪ್ರತಿಜ್ಞಾಭಾಗವನ್ನು ವ್ಯಾಖ್ಯಾನಿಸಿ ಹೇತುಭಾಗವನ್ನು ವ್ಯಾಖ್ಯಾನಿಸುತ್ತಿದ್ದಾರೆ.

ಭಸ್ಮಧರ = ಭಸ್ಮವಿಭೂಷಿತನು, ಉಗ್ರತ್ವ = ಭಯಂಕರನು, ಇವೇ ಮೊದಲಾದ, ತಚ್ಛಬ್ದಾಃ = ರುದ್ರಪ್ರತಿಪಾದಕವಾದ ಶಬ್ದಗಳು ಹಾಗೂ ಲಿಂಗಗಳು, ಅಭಾವಾತ್ = ಇಲ್ಲಿ ಕೇಳಿಸದ ಕಾರಣ ವಿಷ್ಣುವೇ ಶ್ರುತಿಪ್ರತಿಪಾದ್ಯನಾಗಿದ್ದಾನೆ.(२)

---

(१) **भाष्यदीपिका** – ननु प्रागुक्तरीत्या रुद्रप्रकृत्योर्द्युभ्वाद्यायतनत्वं किं न स्यादित्यतस्तत्साधकाभावान्न तयोस्तदित्याह सूत्रकृत् – **नानुमानमिति** ।। अत्र नानुमानमिति साध्यांशं व्याचष्टे – **नानुमानात्मकेति** ।। 'अनुमानप्राप्तप्रामाण्यासदागमोऽनुमात्मकः' इति तत्त्वप्रदीपोक्तेरनुमानात्मकेऽनुमानसिद्धप्रामाण्यके पाशुपताद्यागमे सर्वाश्रयत्वेन कल्पितो बोधित इत्यर्थः ।

केचित्तु – प्रमाणत्वेनानुमीयत इत्यनुमानमिति व्याचिख्युः । एतत्पक्षे आत्मकशब्दवैयर्थ्यं, तत्त्वप्रदीपटीके विरुद्धे । रुद्रपदं प्रधानादेरुपलक्षकम् । प्रधानसूत्रादनुवृत्तेन द्युभ्वाद्यायतनपदेनोपस्थापितं नञर्थप्रतियोगिनं दर्शयति – **अत्रेति** ।। द्युभ्वाद्यायतनप्रकरण इत्यर्थः । 'वाच्यः' प्रतिपाद्यः । सर्वाश्रयत्वेनेति शेषः ।

(२) **भाष्यदीपिका** – एवं सूत्रे प्रतिज्ञांशं व्याख्याय हेत्वंशं व्याचष्टे – **भस्मधरेति** ।। तस्य रुद्रस्य शब्दस्तच्छब्दः । तच्छ्रुतिलिङ्गात्मकः । तथा च भस्मधरोग्रत्वादिधर्मविशिष्टधर्मिबोधकभस्मधरोग्रादिशब्दाभावादित्यर्थः । अथ वा – 'किमुच्यते भस्मधरोग्रत्वादीनां

**भाष्यम् – 'सोऽन्तकः स रुद्रः स प्राणभृत् स प्राणनायकः स ईशो यो हरिर्योऽनन्तो यो विष्णुर्यः परोवरीयान्' इत्यादिना प्राणग्रन्थिरुद्रत्वादेर्विष्णोरेवोक्तत्वात् ।**

ಅನುವಾದ - ಯಾವ ವ್ಯಕ್ತಿಯು ಸಂಹಾರಕಾರಣನೆಂದು ಶ್ರುತಿ ಹೇಳಿದೆಯೋ ಅವನು ವಿಷ್ಣುವೇ ಆಗಿದ್ದಾನೆ. ಮತ್ತು ಯಾವ ವ್ಯಕ್ತಿಯು ರುದ್ರನೆಂದು ಕೇಳಿಸುತ್ತಿದ್ದಾನೋ ಅವನೇ ಮುಖ್ಯಪ್ರಾಣಧಾರಕನೆಂದೂ, ಸಕಲಪ್ರಾಣಿನಿಯಾಮಕನೆಂದೂ, ಈಶ್ವರಶಬ್ದವಾಚ್ಯನೂ, ಸರ್ವೋತ್ತಮನೂ, ಬ್ರಹ್ಮರುದ್ರಾದಿಗಳಿಗಿಂತ ಶ್ರೇಷ್ಠನೂ ಆಗಿದ್ದಾನೆಂದು ಹೇಳಲ್ಪಟ್ಟಿದ್ದಾನೆ. ಈ ಎಲ್ಲ ವಿಶೇಷಣಗಳೂ ವಿಷ್ಣುವಿನಲ್ಲೇ ಯುಕ್ತವಾಗುತ್ತದೆಂದು ಅನೇಕ ಪ್ರಮಾಣಗಳ ಆಧಾರದಿಂದ ಸಿದ್ಧವಾಗುತ್ತದೆ. ಆದ್ದರಿಂದ ಪ್ರಾಣಗ್ರಂಥಿತ್ವ, ರುದ್ರತ್ವ ಮೊದಲಾದ ಧರ್ಮಗಳು ವಿಷ್ಣುವಿಗೆ ಮಾತ್ರ ಸಂಬಂಧ ಪಟ್ಟಿರುತ್ತವೆ.

---

तच्छब्दत्वम्' इत्युत्तरटीकाबलाद् भावभवित्रोरभेदविवक्षया स्वार्थे त्वप्रत्ययः । तत्प्रयोगस्तु लिङ्गात्मकशब्दस्यापि सङ्ग्रहाय । भावबोधे तु – भस्मधरेत्यनेन रुद्रवाचकनामात्मकशब्दो गृह्यते । उग्रत्वपदेनोग्रत्वरूपलिङ्गात्मकशब्दो गृह्यते । आदिपदेन नामलिङ्गात्मकशब्दान्तराणि गृह्यन्ते । समाख्यादेरुपलक्षकमेतत् । तथा च भस्मधरादिरुद्रश्रुतीनाम् उग्रत्वादिरूपतल्लिङ्गानां रुद्रप्रापकसमाख्यादीनां चाभावादित्यर्थ इत्युक्तम् । अत्र रुद्रशिवादितच्छब्दाभावादित्यनुक्त्वा भस्मधरोग्रत्वादीति वचनं 'रुद्रो भस्मधरो नग्नः' इति वचनाद् विशेषनामाभिप्रायेण । अत एवैतद्वचनोक्ताः नग्नादिशब्दा एवाऽदिपदेन ग्राह्या इति ध्येयम् । भस्मधरेत्येतत् प्रधानत्रिगुणत्वादिरूपप्रकृतिप्रापकश्रुतिलिङ्गाद्यभावादित्यर्थान्तरोप-लक्षकतयाऽपि व्याख्येयम् ।

यद्यपि अतच्छब्दादित्यस्य तच्छब्दाभावादिति व्याख्याने नञः क्रियासापेक्षत्वेना-समर्थत्वात् समासानुपपत्तिः । तथाऽपि निर्मक्षिकमित्यादाविव 'अर्थाभावे यदव्ययम्' इत्यव्ययी भावसमासाश्रयणान्नानुपपत्तिः । पञ्चमीत्वान्नात्राम् भवति । अनेन सूत्रे जगत्कर्तृत्वेनानुमीयत इत्यनुमानशब्देन वा 'आनुमानमनुमानसम्बन्धि' इति सत्तर्कदीपावल्युक्तेरानुमानमिति पदच्छेदेनाऽनुमानशब्देन वा अनुमानसिद्धप्रामाण्यकपाशुपताद्यागमसिद्धं रुद्रप्रधानादिकं गृह्यते । यद्वा – प्रमाणत्वेनानुमीयत इत्यनुमानं पाशुपताद्यागमः । ततो मत्वर्थे अर्शआदिभ्योऽच्, तेन तत्प्रतिपाद्यमुच्यते । एवमानुमानमिति पदच्छेदेऽप्यणन्तात् पुनरण् कार्यः । तत्र प्रथमाणन्तपदेनाऽगम उच्यते । द्वितीयेन प्रतिपाद्यत्वम् । तथा च अनुमानात्मकपाशुपताद्यागमप्रतिपाद्यं रुद्रादिकं न द्युभ्वाद्यायतनम् । न 'यस्मिन्' इत्यादिप्रकरणे सर्वाश्रयत्वेन प्रतिपाद्यं, कुतः? 'अतच्छब्दात्' रुद्रप्रधानादिसाधकश्रुतिलिङ्गाद्य भावादिति सूत्रार्थ उक्तो भवति ।

ಪ್ರತಿಪದಾರ್ಥ -- ಆಥರ್ವಣೋಪನಿಷತ್ತಿನಲ್ಲಿ ರುದ್ರಾದಿ ಜ್ಞಾಪಕವಾದ ಲಿಂಗಗಳು ಇಲ್ಲದಿರಬಹುದು ಆದರೆ ಮಹಾನಾರಾಯಣೋಪನಿಷತ್ತಿನಲ್ಲಿ ಪ್ರಾಣಾಧಾರತ್ವವೇ ಮೊದಲಾದ ಲಿಂಗಗಳಿರುವುದರಿಂದ ಸಮಾಖ್ಯಾಶ್ರುತಿಯ ಆಧಾರದಿಂದ ರುದ್ರನನ್ನು ದ್ಯುಭ್ವಾದ್ಯಾಯತನನೆಂದು ಹೇಳಬಹುದಲ್ಲವೇ ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ.

ಯಃ = ಯಾವ ವ್ಯಕ್ತಿಯು, ಹರಿಃ = ಹರಿಯೆಂಬ ಶಬ್ದದಿಂದ ಪ್ರತಿಪಾದ್ಯನಾಗಿದ್ದಾನೋ, ಯಃ = ಯಾವಾತನು, ಅನಂತಃ = ನಾಶವಿಲ್ಲದವನು, ಯಃ = ಯಾವಾತನು, ವಿಷ್ಣುಃ = ವಿಷ್ಣುಪದವಾಚ್ಯನೋ, ಸಃ = ಅವನೇ, ಅಂತಕಃ = ಅಂತಕ ಎಂಬ ಪದದಿಂದ ಪ್ರತಿಪಾದ್ಯನು, ಸಃ = ಅವನೇ, ರುದ್ರಃ = ರುದ್ರಪದವಾಚ್ಯನು, ಸಃ = ಅವನೇ, ಪ್ರಾಣಭೃತ್ = ಮುಖ್ಯಪ್ರಾಣಗಳಿಗೆ ಆಶ್ರಯನು, ಸಃ = ಅವನೇ, ಪ್ರಾಣನಾಯಕಃ = ಸಕಲ ಪ್ರಾಣಗಳಿಗೆ ನಿಯಾಮಕನು, ಸಃ = ಅವನೇ, ಈಶಃ = ಈಶ್ವರಶಬ್ದದಿಂದ ಪ್ರತಿಪಾದ್ಯನು. ಮತ್ತು ಪರಃ = ಸರ್ವೋತ್ತಮನು, ಪರೋವರೀಯಾನ್ = ರುದ್ರನಿಂದ ಉತ್ತಮಳಾದ ಸರಸ್ವತೀದೇವಿಗಿಂತ ಶ್ರೇಷ್ಠನಾದ ಬ್ರಹ್ಮನಿಗಿಂತ ಉತ್ತಮಳಾದ ಲಕ್ಷ್ಮೀದೇವಿಗಿಂತ ಉತ್ತಮನಾದ್ದರಿಂದ ಪರೋವರೀಯಾನ್ ಎನಿಸಿರುವವನು. ಇತ್ಯಾದಿನಾ = ಇವೇ ಮೊದಲಾದ ಪ್ರಮಾಣಗಳಿಂದ, ಪ್ರಾಣಗ್ರಂಥಿ = ಪ್ರಾಣಾಧಾರಕತ್ವ, ರುದ್ರತ್ವಾದೇಃ = ರುದ್ರಾದಿ ಪದವಾಚ್ಯತ್ವ ಮೊದಲಾವುಗಳು, ವಿಷ್ಣೋರೇವ = ವಿಷ್ಣುವಿಗೆ ಮಾತ್ರ, ಉಕ್ತತ್ವಾತ್ = ಹೇಳಲ್ಪಟ್ಟವೆ.(೧)

---

(१) भाष्यदीपिका – नन्वाथर्वणे रुद्रादिज्ञापकाभावेऽप्यत्रोक्तप्राणाधारत्वप्रतिपादिकायां 'प्राणानां ग्रन्थिरसि रुद्र' (महाना–१६–२) इत्यादिसमाख्याश्रुतौ रुद्रादिशब्दानाम् अन्तकत्वादिलिङ्गानां चोक्तत्वात् तद्बलात् तत्रोक्तं द्युभ्वाद्यायतनत्वं रुद्रादेः किं न स्यादित्यत आह – स इति ।। योऽन्तकः संहर्ता स एव तच्छब्दवाच्यः श्रुतः स विष्णुरेव । यो रुद्रः श्रुतः सोऽपि विष्णुरेव । यः 'प्राणभृत्' प्राणाधारत्वबोधकप्राणग्रन्थि शब्दवाच्यः, सोऽपि विष्णुरेव । यः 'प्राणनायकः' तत्स्वामी तत एव प्राणेशशब्दितः सोऽपि विष्णुरेव । य ईशः श्रुतः सोऽपि विष्णुरेव । योऽनन्तस्तच्छब्दवाच्यः सोऽपि त्रिविधपरिच्छेदशून्यत्वाद् विष्णुरेव, न शेषः । यः परोवरीयान् सोऽपि रुद्रादेः परतो वाण्यादेः पराद् विरिञ्चात् परतः प्रकृतेः परत्वाद्धरिरेव नान्य इति श्रुत्यर्थः । अत्रान्तराधिकरणोदाहृतचतुर्वेदशिखावाक्ये च 'परस्मादुत्तमं प्रोक्तम्' इति वचनानुसारेण परपरतरवरवरतमानां चतुर्णां प्रत्यायनाय वृत्तिवाक्ये सुबादेशस्य सो रुत्वोत्वगुणसमानशब्दलोपा ज्ञातव्याः । प्रत्युद्देश्यं विधेयान्वयज्ञापनाय बहूनां यत्तदां प्रयोगः । 'इत्यादिना' श्रुत्यन्तरवाक्येन 'प्राणग्रन्थिरुद्रत्वादेः' प्राणग्रन्थित्वलिङ्गस्य रुद्रशब्दवाच्यत्वस्य च तस्यैव विष्णोरेवोक्तत्वादित्यर्थः । प्राणेश्वरादिशब्दवाच्यत्वमन्तकत्वा दिलिङ्गं चाऽदिशब्दार्थः । प्रकृतिश्रुतिलिङ्गादेरप्युपलक्षकमेतत् । नतु रुद्रादेरित्येवकारार्थः । एवकारेणान्यत्रामुख्यतः सत्त्वमनुमन्यते । उक्तत्वादित्यस्य 'न रुद्रादिश्रुतिलिङ्गविरोधः'

**भाष्यम् – 'सोऽन्तकः स रुद्रः स प्राणभृत् स प्राणनायकः स ईशो यो हरिर्योऽनन्तो यो विष्णुर्यः परोवरीयान्' इत्यादिना प्राणग्रन्थिरुद्रत्वादेर्विष्णोरेवोक्तत्वात् ।**

ಅನುವಾದ - ಯಾವ ವ್ಯಕ್ತಿಯು ಸಂಹಾರಕಾರಣನೆಂದು ಶ್ರುತಿ ಹೇಳಿದೆಯೋ ಅವನು ವಿಷ್ಣುವೇ ಆಗಿದ್ದಾನೆ. ಮತ್ತು ಯಾವ ವ್ಯಕ್ತಿಯು ರುದ್ರನೆಂದು ಕೇಳಿಸುತ್ತಿದ್ದಾನೋ ಅವನೇ ಮುಖ್ಯಪ್ರಾಣಧಾರಕನೆಂದೂ, ಸಕಲಪ್ರಾಣಿನಿಯಾಮಕನೆಂದೂ, ಈಶ್ವರಶಬ್ದವಾಚ್ಯನೂ, ಸರ್ವೋತ್ತಮನೂ, ಬ್ರಹ್ಮರುದ್ರಾದಿಗಳಿಗಿಂತ ಶ್ರೇಷ್ಠನೂ ಆಗಿದ್ದಾನೆಂದು ಹೇಳಲ್ಪಟ್ಟಿದ್ದಾನೆ. ಈ ಎಲ್ಲ ವಿಶೇಷಣಗಳೂ ವಿಷ್ಣುವಿನಲ್ಲೇ ಯುಕ್ತವಾಗುತ್ತದೆಂದು ಅನೇಕ ಪ್ರಮಾಣಗಳ ಆಧಾರದಿಂದ ಸಿದ್ಧವಾಗುತ್ತದೆ. ಆದ್ದರಿಂದ ಪ್ರಾಣಗ್ರಂಥಿತ್ವ, ರುದ್ರತ್ವ ಮೊದಲಾದ ಧರ್ಮಗಳು ವಿಷ್ಣುವಿಗೆ ಮಾತ್ರ ಸಂಬಂಧ ಪಟ್ಟಿರುತ್ತವೆ.

---

तच्छब्दत्वम्' इत्युत्तरटीकाबलाद् भावभवित्रोरभेदविवक्षया स्वार्थे त्वप्रत्ययः । तत्प्रयोगस्तु लिङ्गात्मकशब्दस्यापि सङ्ग्रहाय । भाववबोधे तु – भस्मधरेत्यनेन रुद्रवाचकनामात्मकशब्दो गृह्यते । उग्रत्वपदेनोग्रत्वरूपलिङ्गात्मकशब्दो गृह्यते । आदिपदेन नामलिङ्गात्मकशब्दान्तराणि गृह्यन्ते । समाख्यादेरुपलक्षकमेतत् । तथा च भस्मधरादिरुद्रश्रुतीनाम् उग्रत्वादिरूपतल्लिङ्गानां रुद्रप्रापकसमाख्यादीनां चाभावादित्यर्थ इत्युक्तम् । अत्र रुद्रशिवादितच्छब्दाभावादित्यनुक्त्वा भस्मधरोग्रत्वादीति वचनं 'रुद्रो भस्मधरो नग्नः' इति वचनाद् विशेषनामाभिप्रायेण । अत एवैतद्वचनोक्ताः नग्नादिशब्दा एवाऽदिपदेन ग्राह्या इति ध्येयम् । भस्मधरेत्येतत् प्रधानत्रिगुणत्वादिरूपप्रकृतिप्रापकश्रुतिलिङ्गाद्यभावादित्यर्थान्तरोपलक्षकतयाऽपि व्याख्येयम् ।

यद्यपि अतच्छब्दादित्यस्य तच्छब्दाभावादिति व्याख्याने नञः क्रियासापेक्षत्वेनासमर्थत्वात् समासानुपपत्तिः । तथाऽपि निर्मक्षिकमित्यादाविव 'अर्थाभावे यदव्ययम्' इत्यव्ययीभावसमासाश्रयणान्नानुपपत्तिः । पञ्चमीत्वान्नात्राम् भवति । अनेन सूत्रे जगत्कर्तृत्वेनानुमीयत इत्यनुमानशब्देन वा 'आनुमानमनुमानसम्बन्धि' इति सत्तर्कदीपावल्युक्तेरानुमानमिति पदच्छेदेनाऽनुमानशब्देन वा अनुमानसिद्धप्रामाण्यकपाशुपताद्यागमसिद्धं रुद्रप्रधानादिकं गृह्यते । यद्वा – प्रमाणत्वेनानुमीयत इत्यनुमानं पाशुपताद्यागमः । ततो मत्वर्थे अर्शआदिभ्योऽच्, तेन तत्प्रतिपाद्यमुच्यते । एवमानुमानमिति पदच्छेदेऽप्यणन्तात् पुनरण् कार्यः । तत्र प्रथमाणन्तपदेनाऽगम उच्यते । द्वितीयेन प्रतिपाद्यत्वम् । तथा च अनुमानात्मकपाशुपताद्यागमप्रतिपाद्यं रुद्रादिकं न द्युभ्वाद्यायतनम् । न 'यस्मिन्' इत्यादिप्रकरणे सर्वाश्रयत्वेन प्रतिपाद्यं, कुतः? 'अतच्छब्दात्' रुद्रप्रधानादिसाधकश्रुतिलिङ्गाद्य भावादिति सूत्रार्थ उक्तो भवति ।

ಪ್ರತಿಪದಾರ್ಥ -- ಆಥರ್ವಣೋಪನಿಷತ್ತಿನಲ್ಲಿ ರುದ್ರಾದಿ ಜ್ಞಾಪಕವಾದ ಲಿಂಗಗಳು ಇಲ್ಲದಿರಬಹುದು ಆದರೆ ಮಹಾನಾರಾಯಣೋಪನಿಷತ್ತಿನಲ್ಲಿ ಪ್ರಾಣಾಧಾರತ್ವವೇ ಮೊದಲಾದ ಲಿಂಗಗಳಿರುವುದರಿಂದ ಸಮಾಖ್ಯಾಶ್ರುತಿಯ ಆಧಾರದಿಂದ ರುದ್ರನನ್ನು ದ್ಯುಭ್ವಾದ್ಯಾಯತನನೆಂದು ಹೇಳಬಹುದಲ್ಲವೇ ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ.

ಯಃ = ಯಾವ ವ್ಯಕ್ತಿಯು, ಹರಿಃ = ಹರಿಯೆಂಬ ಶಬ್ದದಿಂದ ಪ್ರತಿಪಾದ್ಯನಾಗಿದ್ದಾನೋ, ಯಃ = ಯಾವಾತನು, ಅನಂತಃ = ನಾಶವಿಲ್ಲದವನು, ಯಃ = ಯಾವಾತನು, ವಿಷ್ಣುಃ = ವಿಷ್ಣುಪದವಾಚ್ಯನೋ, ಸಃ = ಅವನೇ, ಅಂತಕಃ = ಅಂತಕ ಎಂಬ ಪದದಿಂದ ಪ್ರತಿಪಾದ್ಯನು, ಸಃ = ಅವನೇ, ರುದ್ರಃ = ರುದ್ರಪದವಾಚ್ಯನು, ಸಃ = ಅವನೇ, ಪ್ರಾಣಭೃತ್ = ಮುಖ್ಯಪ್ರಾಣಗಳಿಗೆ ಆಶ್ರಯನು, ಸಃ = ಅವನೇ, ಪ್ರಾಣನಾಯಕಃ = ಸಕಲ ಪ್ರಾಣಗಳಿಗೆ ನಿಯಾಮಕನು, ಸಃ = ಅವನೇ, ಈಶಃ = ಈಶ್ವರಶಬ್ದದಿಂದ ಪ್ರತಿಪಾದ್ಯನು. ಮತ್ತು ಪರಃ = ಸರ್ವೋತ್ತಮನು, ಪರೋವರೀಯಾನ್ = ರುದ್ರನಿಂದ ಉತ್ತಮಳಾದ ಸರಸ್ವತೀದೇವಿಗಿಂತ ಶ್ರೇಷ್ಠನಾದ ಬ್ರಹ್ಮನಿಗಿಂತ ಉತ್ತಮಳಾದ ಲಕ್ಷ್ಮೀದೇವಿಗಿಂತ ಉತ್ತಮನಾದ್ದರಿಂದ ಪರೋವರೀಯಾನ್ ಎನಿಸಿರುವವನು. ಇತ್ಯಾದಿನಾ = ಇವೇ ಮೊದಲಾದ ಪ್ರಮಾಣಗಳಿಂದ, ಪ್ರಾಣಗ್ರಂಥಿ = ಪ್ರಾಣಾಧಾರಕತ್ವ, ರುದ್ರತ್ವಾದೇಃ = ರುದ್ರಾದಿ ಪದವಾಚ್ಯತ್ವ ಮೊದಲಾವುಗಳು, ವಿಷ್ಣೋರೇವ = ವಿಷ್ಣುವಿಗೆ ಮಾತ್ರ, ಉಕ್ತತ್ವಾತ್ = ಹೇಳಲ್ಪಟ್ಟವೆ.(೧)

---

(१) **भाष्यदीपिका –** नन्वाथर्वणे रुद्रादिज्ञापकाभावेऽप्यत्रोक्तप्राणाधारत्वप्रतिपादिकायां 'प्राणानां ग्रन्थिरसि रुद्र' (महाना–१६–२) इत्यादिसमाख्याश्रुतौ रुद्रादिशब्दानाम् अन्तकत्वादिलिङ्गानां चोक्तत्वात् तद्बलात् तत्रोक्तं द्युभ्वाद्यायतनत्वं रुद्रादेः किं न स्यादित्यत आह – **स इति** ।। योऽन्तकः संहर्ता स एव तच्छब्दवाच्यः श्रुतः स विष्णुरेव । यो रुद्रः श्रुतः सोऽपि विष्णुरेव । यः 'प्राणभृत्' प्राणाधारत्वबोधकप्राणग्रन्थि शब्दवाच्यः, सोऽपि विष्णुरेव । यः 'प्राणनायकः' तत्स्वामी तत एव प्राणेशशब्दितः सोऽपि विष्णुरेव । य ईशः श्रुतः सोऽपि विष्णुरेव । योऽनन्तस्तच्छब्दवाच्यः सोऽपि त्रिविधपरिच्छेदशून्यत्वाद् विष्णुरेव, न शेषः । यः परोवरीयान् सोऽपि रुद्रादेः परतो वाण्यादेः पराद् विरिञ्चात् परतः प्रकृतेः परत्वाद्धरिरेव नान्य इति श्रुत्यर्थः । अत्रान्तराधिकरणोदाहृतचतुर्वेदशिखावाक्ये च 'परस्मादुत्तमं प्रोक्तम्' इति वचनानुसारेण परपरतरवरवरतमानां चतुर्णां प्रत्यायनाय वृत्तिवाक्ये सुबादेशस्य सो रुत्वोत्वगुणसमानशब्दलोपा ज्ञातव्याः । प्रत्युद्देश्यं विधेयान्वयज्ञापनाय बहूनां यत्तदां प्रयोगः । 'इत्यादिना' श्रुत्यन्तरवाक्येन 'प्राणग्रन्थिरुद्रत्वादेः' प्राणग्रन्थित्वलिङ्गस्य रुद्रशब्दवाच्यत्वस्य च तस्यैव विष्णोरेवोक्तत्वादित्यर्थः । प्राणेश्वरादिशब्दवाच्यत्वमन्तकत्वा दिलिङ्गं चाऽऽदिशब्दार्थः । प्रकृतिश्रुतिलिङ्गादेरप्युपलक्षकमेतत् । ननु रुद्रादेरित्येवकारार्थः । एवकारेणान्यत्रामुख्यतः सत्त्वमनुमन्यते । उक्तत्वादित्यस्य 'न रुद्रादिश्रुतिलिङ्गविरोधः'

**भाष्यम् — ब्रह्माण्डे च —**

**'रुजं द्रावयते यस्माद् रुद्रस्तस्माज्जनार्दनः ।**
**ईशानादेव चेशानो महादेवो महत्त्वतः ॥**
**पिबन्ति ये नरा नाकं मुक्ताः संसारसागरात् ।**
**तदाधारो यतो विष्णुः पिनाकीति ततः स्मृतः ॥**
**शिवः सुखात्मकत्वेन शर्वः शंरोधनाद्धरिः ।**
**कृत्त्यात्मकमिमं देहं यतो वस्ते प्रवर्तयन् ॥**
**कृत्तिवासास्ततो देवो विरिञ्चश्च विरेचनात् ।**
**बृंहणाद् ब्रह्मनामाऽसावैश्वर्यादिन्द्र उच्यते ॥**

ಅನುವಾದ - ಬ್ರಹ್ಮಾಂಡಪುರಾಣದಲ್ಲಿ ಹೀಗೆ ಹೇಳಲಾಗಿದೆ - 'ರೋಗವನ್ನು ನಾಶಮಾಡುವುದರಿಂದ ಜನಾರ್ದನನು ರುದ್ರನೆನಿಸಿದ್ದಾನೆ. ಜಗತ್ತನ್ನು ನಿಯಮನ ಮಾಡುವುದರಿಂದ ಈಶಾನ ಶಬ್ದದಿಂದ ಪ್ರತಿಪಾದ್ಯನಾಗಿದ್ದಾನೆ. ಸರ್ವೋತ್ತಮನಾದ್ದರಿಂದ ಪ್ರಕಾಶಮಾನನಾಗಿದ್ದಾನೆ. ಅವನೇ ಮಹಾದೇವ ಎಂಬ ಶಬ್ದಪ್ರತಿಪಾದ್ಯನು, ಸಂಸಾರಸಾಗರದಿಂದ ಮುಕ್ತರಾದವರು ಪರಮಸುಖವನ್ನು ಅನುಭವಿಸುವ ಕಾರಣ ಅವರು ಪಿನಾಕರು ಎನಿಸುತ್ತಾರೆ. ಅಂತಹವರಿಗೆ ಆಧಾರನಾದ್ದರಿಂದ ಭಗವಂತನಿಗೆ ಪಿನಾಕೀ ಎಂಬ ಹೆಸರು ಬಂದಿದೆ. ಸುಖಸ್ವರೂಪನಾದ್ದರಿಂದ ಶಿವ ಎನಿಸಿದ್ದಾನೆ. ಉತ್ತಮಜೀವರ ಸ್ವರೂಪಭೂತವಾದ ಸುಖವನ್ನು ಮೋಕ್ಷದ ತನಕ ಅನುಭವಕ್ಕೆ ಬಾರದಂತೆ ತಡೆ ಹಿಡಿಯುವ ಕಾರಣ ಶರ್ವ ಎನಿಸಿದ್ದಾನೆ. ಚರ್ಮಮಯವಾದ ಈ ಶರೀರವನ್ನು ಪ್ರೇರಣೆ ಮಾಡುವುದರಿಂದ ಕೃತ್ತಿವಾಸ ಎನಿಸಿದ್ದಾನೆ. ಜಗತ್ತನ್ನು ತನ್ನ ಹೊಟ್ಟೆಯಿಂದ ಹೊರಹಾಕುವುದರಿಂದ ವಿರಿಂಚ ಎನಿಸಿದ್ದಾನೆ. ಗುಣಪೂರ್ಣತ್ವವನ್ನು ಹೊಂದಿರುವ ಕಾರಣ ಬ್ರಹ್ಮ ಎನಿಸಿದ್ದಾನೆ. ಐಶ್ವರ್ಯವುಳ್ಳವನಾದ್ದರಿಂದ ಇಂದ್ರನಾಗಿದ್ದಾನೆ' ಎಂಬುದಾಗಿ.

ಪ್ರತಿಪದಾರ್ಥ -- ಸಮಾಖ್ಯಾಶ್ರುತಿಯಿಂದ ರುದ್ರಾದಿಶಬ್ದಗಳು ವಿಷ್ಣುವನ್ನು ಹೇಗೆ ಪ್ರತಿಪಾದಿಸಲು ಸಾಧ್ಯ? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ.

ಬ್ರಹ್ಮಾಂಡೇ ಚ = ಬ್ರಹ್ಮಾಂಡಪುರಾಣದಲ್ಲೂ ಹೀಗೆ ಹೇಳಲಾಗಿದೆ

ಜನಾರ್ದನಃ = ಶ್ರೀಮನ್ನಾರಾಯಣನು, ರುಜಂ = ಸಂಸಾರರೋಗವನ್ನು, ದ್ರಾವಯತೇ = ನಾಶಮಾಡುತ್ತಾನೆ, ತಸ್ಮಾತ್ = ಆ ಕಾರಣದಿಂದ, ರುದ್ರಃ = ರುದ್ರ ಎಂಬ ಪದದಿಂದ ಪ್ರತಿಪಾದ್ಯನು. ಮತ್ತು ಈಶಾನಾತ್ = ಜಗತ್ತನ್ನು

---

इत्यध्याहृतसाध्येनान्वयः ।७ ।

ಪ್ರೇರಣೆ ಮಾಡುವ ಕಾರಣ, ಈಶಾನಃ = ಈಶ ಎಂಬ ಶಬ್ದದಿಂದ ಪ್ರತಿಪಾದ್ಯನು. ಮಹತ್ತ್ವತಃ = ಸರ್ವೋತ್ತಮನಾದ್ದರಿಂದ, ಮಹಾದೇವಃ = ಮಹಾದೇವಶಬ್ದವಾಚ್ಯನು. ಸಂಸಾರಸಾಗರಾತ್ = ಸಮುದ್ರದಂತಿರುವ ಸಂಸಾರದಿಂದ, ಮುಕ್ತಾಃ = ಮುಕ್ತರಾದ, ಯೇ ನರಾಃ = ಯಾವ ಸಜ್ಜನರು, ನಾಕಂ = ದುಃಖರಹಿತವಾದ ಸುಖವನ್ನು, ಪಿಬಂತಿ = ಅನುಭವಿಸುತ್ತಾರೋ, ಯತಃ = ಯಾವ ಕಾರಣದಿಂದ, ತೇಷಾಂ = ಅಂತಹ ಮುಕ್ತರಿಗೆ, ವಿಷ್ಣುಃ = ಭಗವಂತನು, ತದಾಧಾರಃ = ಆಶ್ರಯನಾಗಿದ್ದಾನೋ, ತತಃ = ಆ ಕಾರಣದಿಂದಲೇ, ಪಿನಾಕೀ = ಪಿನಾಕೀ ಎಂಬ ಶಬ್ದದಿಂದ ಪ್ರತಿಪಾದ್ಯನು, ಸ್ಮೃತಃ = ಜ್ಞಾನಿಗಳಿಂದ ಪ್ರಮಿತನಾದವನು. ಹರಿಃ = ಪರಮಾತ್ಮನು, ಸುಖಾತ್ಮಕತ್ವಾತ್ = ಸುಖಸ್ವರೂಪನಾದ್ದರಿಂದ, ಶಿವಃ = ಶಿವಶಬ್ದವಾಚ್ಯನು, ಶಂ = ಸುಖವನ್ನು, ರೋಧನಾತ್ = ಮುಕ್ತಿಯೋಗ್ಯರಿಗೆ ತಡೆದು ಹಿಡಿದಿದ್ದರಿಂದ, ಶರ್ವಃ = ಶರ್ವಶಬ್ದವಾಚ್ಯನು. ಕೃತ್ತ್ಯಾತ್ಮಕಂ = ಚರ್ಮಮಯವಾದ, ಇಮಂ = ಈ, ದೇಹಂ = ಶರೀರವನ್ನು, ಪ್ರವರ್ತಯನ್ = ಪ್ರೇರಣೆಮಾಡುವವನಾಗಿ, ಯತಃ = ಯಾವ ಕಾರಣದಿಂದ, ವಸ್ತೇ = ವಾಸ ಮಾಡಿದ್ದಾನೋ, ತತಃ = ಆ ಕಾರಣದಿಂದ, ಕೃತ್ತಿವಾಸಾಃ = ಕೃತ್ತಿವಾಸಾ ಎಂಬ ಪದದಿಂದ ಪ್ರತಿಪಾದ್ಯನು. ವಿರೇಚನಾತ್ = ಜಗತ್ತನ್ನು ಹೊರಹಾಕುವುದರಿಂದ, ವಿರಿಂಚಃ = ವಿರಿಂಚ ಪದದಿಂದ ವಾಚ್ಯನು, ಬೃಂಹಣಾತ್ = ಪೂರ್ಣನಾದ್ದರಿಂದ, ಅಸೌ = ಈ ಪರಮಾತ್ಮನೇ, ಬ್ರಹ್ಮನಾಮ = ಬ್ರಹ್ಮ ಎಂಬ ಶಬ್ದದಿಂದ ಪ್ರತಿಪಾದ್ಯನು, ಐಶ್ವರ್ಯಾತ್ = ಐಶ್ವರ್ಯವುಳ್ಳವನಾದ್ದರಿಂದ, ಇಂದ್ರಃ = ಇಂದ್ರಶಬ್ದವಾಚ್ಯನು, ಹೀಗೆ, ಉಚ್ಯತೇ = ಪ್ರತಿಪಾದ್ಯನಾಗಿದ್ದಾನೆ. (ಹೇಳಲ್ಪಟ್ಟಿದ್ದಾನೆ).[१]

---

(१) **भाष्यदीपिका** – ननु तथाऽपि न प्राणाधारत्वद्युभ्वाद्यायतनत्वबोधकसमाख्याश्रुतौ विष्णोः प्रतिपाद्यत्वनिश्चयः । तत्रत्यानां रुद्रादिशब्दानां पशुपत्यादावेव रूढत्वेन विष्णौ तदभावात्, भावे वा पुनरनिश्चयात् । विष्णौ योगवृत्तिसम्भवेऽपि तस्या रूढितो दुर्बलत्वेनानिश्चायकत्वात् । नहि श्रुत्यन्तरे विष्णुलिङ्गाद्यस्तीत्यत आह – **ब्रह्माण्डे चेति** ।। चोऽप्यर्थः समुच्चये । उक्तत्वादित्यनुवर्तते । तेनास्यान्वयः । किमुक्तमित्यतो रुद्रादिशब्दानां महायोगविद्वद्रूढिप्रतिपादकं वाक्यं पठति – **रुजमिति** ।। 'रुजं' रोगम् उत्पत्त्यादिकं 'द्रावयते' निर्वापयति निवर्तयति यस्मात् तस्माद् रुद्र इत्युच्यते । क इत्यतस्तद्रूपविशेषमाह – **जनार्दन इति** ।। जननमर्दयतीति व्युत्पत्तिः । ईशनाद् ईशानां ब्रह्मादीनां चेष्टकत्वादीशानोऽपि स एवेत्यर्थः । महत्त्वत इत्युपलक्षणम् । द्योतनादेश्चेत्यपि द्रष्टव्यम् । ये 'नराः' जनाः संसारसागरान्मुक्ताः सन्तो 'नाकं' परमसुखं 'पिबन्ति' भुञ्जते ते पिनाकाः । विष्णुर्यतः 'तदाधारः' तेषामाधारस्ततः पिनाकीति 'स्मृतः' अभिहितः श्रुताविति शेषः । श्रुत इति पाठः स्वरसः । 'शंरोधनात्' मुक्तिपर्यन्तं स्वरूपभूतमपि सुखं रुध्वा वर्तनाद् आसुरसुखं निरुध्य वर्तनाद्वा शर्व इत्यर्थः । यतः 'कृत्यात्मकं' चर्ममयमिमं देहं 'प्रवर्तयन्' सृजन् नियमयन् वा तेन स्वात्मानं जीवं वा 'वस्ते' आच्छादयति तदन्तर्वर्तते । यद्वा – देहं वस्ते अधिवसतीत्यतः कृत्तिवासा इत्युच्यत इत्यर्थः । 'विरेचनात्' जगत्सर्जनादसौ विष्णुः बृंहणाद् वर्धनाद्वा ब्रह्मनामा । असौ

**भाष्यम् –**

**'एवं नानाविधैः शब्दैरेक एव त्रिविक्रमः ।**
**वेदेषु सपुराणेषु गीयते पुरुषोत्तमः ॥' इति ।**

ಅನುವಾದ - ಹೀಗೆ ಅನೇಕವಿಧವಾದ ಶಬ್ದಗಳಿಂದ ಒಬ್ಬನೇ ತ್ರಿವಿಕ್ರಮರೂಪಿಯಾದ ಪರಮಾತ್ಮನನ್ನು ಅನೇಕಶ್ರುತಿ ಹಾಗೂ ಪುರಾಣಗಳಲ್ಲಿ ಸ್ತೋತ್ರಮಾಡಲಾಗಿದೆ.

ಪ್ರತಿಪದಾರ್ಥ -- ಇಲ್ಲಿಯ ತನಕ ರುದ್ರಾದಿಶಬ್ದಗಳಿಗೆ ವಿಷ್ಣುವಿನಲ್ಲಿ ಮಹಾಯೋಗವನ್ನು ಹೇಳಿದ್ದಾಯಿತು. ಈಗ ವಿದ್ವದ್‌ರೂಢಿಯನ್ನುಹೇಳುತ್ತಿದ್ದಾರೆ.

ಏವಂ = ಈ ರೀತಿಯಾಗಿ, ನಾನಾವಿಧೈಃ = ಅನೇಕವಿಧವಾದ, ಶಬ್ದೈಃ = ಪದಗಳಿಂದ, ತ್ರಿವಿಕ್ರಮಃ = ಮಹಾಪರಾಕ್ರಮಿಯಾದ, ಏಕ ಏವ = ಒಬ್ಬನೇ ಭಗವಂತನು, ಸಪುರಾಣೇಷು = ಪುರಾಣಗಳಿಂದ ಸಹಿತವಾದ, ವೇದೇಷು = ಶ್ರುತಿಗಳಲ್ಲಿ, ಪುರುಷೋತ್ತಮಃ ಇತಿ = ಕ್ಷರಾಕ್ಷರಪುರುಷರಿಗಿಂತ ಉತ್ತಮನೆಂದು, ಗೀಯತೇ = ಕರೆಸಿಕೊಂಡಿದ್ದಾನೆ.(१)

**भाष्यम् – वामने च –**

**'न तु नारायणादीनां नाम्नामन्यत्र सम्भवः ।**
**अन्यनाम्नां गतिर्विष्णुरेक एव प्रकीर्तितः ॥' इति ।**

ಅನುವಾದ - ವಾಮನಪುರಾಣದಲ್ಲಿ ಹೀಗಿದೆ – ರುದ್ರ, ಮೊದಲಾದ ನಾಮಗಳು ಭಗವಂತನನ್ನು ಪ್ರತಿಪಾದಿಸಬಹುದು. ಆದರೆ ನಾರಾಯಣಮೊದಲಾದ ನಾಮಗಳು

---

परमैश्वर्यादिन्द्र इत्युच्यते ।

(१) भाष्यदीपिका – एवं विष्णौ रुद्रादिशब्दानां महायोगमुक्त्वा विद्वद्रूढिं चाऽह – एवमिति ॥ निमित्तैरित्यध्याहार्यम् । तथा च 'एवम्' उक्तरीत्या नानाविधैर्निमित्तैः सपुराणेषु वेदेषु गतैः एतैर्नानाविधैः शब्दैर्विष्णुरेक एव 'गीयते' मुख्यतोऽभिधीयत इत्यर्थः । कथमन्यत्रादृष्टं सर्वशब्दमुख्यवाच्यत्वमस्येत्यतः 'पुरुषोत्तमस्त्रिविक्रमः' इत्याभ्यां तत्रोपपादकमुक्तम् । त्रिभुवनार्थशब्दव्यापी हि त्रिविक्रमः । ३सर्वपुरुषशब्दनिमित्तकस्वामी हि पुरुषोत्तमः । तथा चानेन विष्णौ रुद्रादिशब्दानां महायोगविद्वद्रूढिकथनात् तयोश्च रूढिमात्रात् प्राबल्याद् युक्तः समाख्याश्रुत्यन्तरेऽपि विष्णोः प्रतिपाद्यत्वनिश्चय इति भावः । 'पुरुषोत्तम इति' इत्यन्तस्य 'ब्रह्माण्डे' इति पूर्वेणान्वयः ।

ಬೇರೆ ಯಾರನ್ನೂ ಪ್ರತಿಪಾದಿಸುವುದಿಲ್ಲ ಎಂದು.

ಪ್ರತಿಪದಾರ್ಥ -- ರುದ್ರಾದಿಶಬ್ದಗಳು ವಿಷ್ಣುಪರವೆಂದು ಹೇಳಿದಿರಿ. ಇದರಂತೆ ನಾರಾಯಣಾದಿ ಶಬ್ದಗಳೂ ಸಹ ರುದ್ರಪರವೇ ಆಗಬಹುದಲ್ಲವೇ? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ.

ವಾಮನೇ ಚ = ವಾಮನಪುರಾಣದಲ್ಲೂ ಹೀಗಿದೆ. ನಾರಾಯಣಾದೀನಾಂ= ನಾರಾಯಣ ಮೊದಲಾದ, ನಾಮ್ನಾಂ = ನಾಮಾತ್ಮಕವಾದ ಪದಗಳಿಗೆ, ಅನ್ಯತ್ರ = ವಿಷ್ಣುವನ್ನು ಬಿಟ್ಟು ಬೇರೆ ದೇವತೆಗಳಲ್ಲಿ, ಸಂಭವಃ = ಪ್ರತಿಪಾದ್ಯತ್ವವು, ನತು = ಕೂಡುವುದಿಲ್ಲ. ಅನ್ಯನಾಮ್ನಾಂ = ರುದ್ರ ಮೊದಲಾದ ಬೇರೆ ಶಬ್ದಗಳಿಗೆ, ವಿಷ್ಣುಃ = ನಾರಾಯಣನು, ಏಕ ಏವ = ಒಬ್ಬನೇ, ಗತಿಃ = ಆಶ್ರಯನು, ಇತಿ = ಹೀಗೆ, ಪ್ರಕೀರ್ತಿತಃ = ಪ್ರಮಾಣಗಳಿಂದ ಕರೆಸಿಕೊಂಡಿದ್ದಾನೆ.(१)

**भाष्यम् — स्कान्दे च —**

**'ऋते नारायणादीनि नामानि पुरुषोत्तमः ।**
**प्रादादन्यत्र भगवान् राजेवर्ते स्वकं पुरम् ॥' इति ।**

ಅನುವಾದ - ಸ್ಕಾಂದಪುರಾಣದಲ್ಲೂ ಹೀಗಿದೆ 'ಯಾವ ರೀತಿಯಾಗಿ ರಾಜನಾದವನು ತನ್ನ ರಾಜ್ಯವನ್ನು ಬಿಟ್ಟು ಇತರ ಸಣ್ಣ ಸಣ್ಣ ಪ್ರದೇಶಗಳನ್ನು ಉಳಿದ ಸಾಮಂತರಾಜರಿಗೆ ಬಿಟ್ಟು ಕೊಡುತ್ತಾನೋ ಅದರಂತೆ ಪುರುಷೋತ್ತಮನಾದ ಭಗವಂತನು ನಾರಾಯಣ ಮೊದಲಾದ ಕೆಲವು ವಿಶೇಷವಾದ ತನ್ನ ಹೆಸರುಗಳನ್ನು ತನ್ನಲ್ಲೇ ಇಟ್ಟುಕೊಂಡು ಬೇರೆ ಹೆಸರುಗಳನ್ನು ಮಾತ್ರ ದೇವತೆಗಳಿಗೆ ನೀಡಿದ್ದಾನೆ' ಎಂದು.

ಪ್ರತಿಪದಾರ್ಥ -- ರುದ್ರ ಮೊದಲಾದ ಶಬ್ದಗಳು ಭಗವಂತನ ಹೆಸರೇ ಆಗಿದ್ದರೂ

---

(१) भाष्यदीपिका — ननु यदि रुद्रादिशब्दानां विष्णुपरत्वमुक्त्वा 'रुद्रो माऽऽविशान्तकः' इत्यादिश्रुतीनामनिर्णायकत्वमुच्यते, तर्हि नारायणादिनाम्नां रुद्रादिपरत्वेन 'नारायणं महाज्ञेयम्' (महाना-११) इत्यादिश्रुतीनामनिर्णायकत्वं च स्यादित्यत आह — वामने चेति ॥ चोऽप्यर्थे । अस्याप्युक्तत्वादविरोध इति पूर्वेणान्वयः । किमुक्तमित्यतस्तद्वाक्यं पठति — न त्विति ॥ तुरवधारणे । 'नारायणादीनां' नारायण इत्यादीनामन्यत्र रुद्रादौ सम्भवो मुख्यवृत्तिरस्तीति शेषः । 'अन्यनाम्नां' रुद्रादिशब्दानां 'विष्णुरेक एव गतिः' मुख्यवाच्यः प्रकीर्तित इत्यर्थः । इतिशब्दस्य वामन इत्यनेनान्वयः । तस्य नारायणादिनाम्नामन्यत्र निरवकाशत्वोक्तेः न तच्छ्रुतीनामनिर्णायकत्वमिति विवक्षितसाध्येनान्वयः ।

ರುದ್ರಾದಿಗಳನ್ನು ಪ್ರತಿಪಾದಿಸುವಂತೆ ನಾರಾಯಣಾದಿ ಶಬ್ದಗಳೂ ಸಹ ರುದ್ರಾದಿಗಳನ್ನು ಏಕೆ ಪ್ರತಿಪಾದಿಸಬಾರದು ಎಂಬ ಪ್ರಶ್ನೆ ಉತ್ತರಿಸುತ್ತಿದ್ದಾರೆ.

ಸ್ಕಾಂದೇ ಚ = ಸ್ಕಾಂದಪುರಾಣದಲ್ಲೂ, ನಾರಾಯಣಾದೀನಿ = ನಾರಾಯಣ ಮೊದಲಾದ, ನಾಮಾನಿ = ಹೆಸರುಗಳನ್ನು, ಋತೇ = ಬಿಟ್ಟು, ನಾಮಾನಿ = ಉಳಿದ ಹೆಸರುಗಳನ್ನು, ಅನ್ಯತ್ರ = ಬೇರೆ ಜಗತ್ತಿಗೆ, ಪುರುಷೋತ್ತಮಃ = ಕ್ಷರಾಕ್ಷರಪುರುಷಶ್ರೇಷ್ಠನಾದ ಶ್ರೀಹರಿಯು, ಪ್ರಾದಾತ್ = ಕೊಟ್ಟನು. ಹೇಗೆಂದರೆ ರಾಜಾ = ಮಹಾರಾಜನು, ಸ್ವಕಂ ಪುರಮ್ = ತನ್ನ ಪಟ್ಟಣವನ್ನು ಬಿಟ್ಟು, ಋತೇ = ಬಿಟ್ಟು ಮಿಕ್ಕ ಊರುಗಳನ್ನು, ಇವ = ಹೇಗೆ ಕೊಡುತ್ತಾನೋ ಹಾಗೆ ತಿಳಿಯಬೇಕು. ಇತಿ = ಹೀಗೆ ಹೇಳಲ್ಪಟ್ಟಿದೆ.(೧)

**भाष्यम् –**

**‘चतुर्मुखः शतानन्दो ब्रह्मणः पद्मभूरिति ।**
**उग्रो भस्मधरो नग्नः कपालीति शिवस्य च ।**
**विशेषनामानि ददौ स्वकीयान्यपि केशवः ॥ इति च ब्राह्मे ॥३॥**

ಅನುವಾದ – ಬ್ರಹ್ಮನಿಗೆ ಚತುರ್ಮುಖ, ಶತಾನಂದ, ಪದ್ಮಭೂಃ ಮೊದಲಾದ ಹೆಸರುಗಳನ್ನು ನೀಡಿದನು. ಶಿವನಿಗೆ ಉಗ್ರ, ಭಸ್ಮಧರ, ನಗ್ನ, ಕಪಾಲಿ ಎಂಬ ಹೆಸರುಗಳನ್ನು ನೀಡಿದನು. ಹೀಗೆ ತನ್ನ ಹೆಸರುಗಳನ್ನು ಇತರರಿಗೆ ನೀಡಿದನೆಂದು ಬ್ರಾಹ್ಮಪುರಾಣವು ಹೇಳಿದೆ.

ಪ್ರತಿಪದಾರ್ಥ -- ಹಾಗಾದರೆ ರುದ್ರಾದಿ ಶಬ್ದಗಳೆಲ್ಲವೂ ಭಗವಂತನದ್ದೇ ಆದಲ್ಲಿ ಭಸ್ಮಧರ ಉಗ್ರ ಇತ್ಯಾದಿ ಶಬ್ದಗಳಿಂದ ರುದ್ರನನ್ನು ಏಕೆ ಕರೆಯುತ್ತಾರೆ? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ.

ಬ್ರಹ್ಮಣಃ = ಚತುರ್ಮುಖ ಬ್ರಹ್ಮದೇವರಿಗೆ, ಚತುರ್ಮುಖಃ = ಚತುರ್ಮುಖನೆಂದು, ಶತಾನಂದಃ = ಶತಾನಂದನೆಂದು, ಪದ್ಮಭೂಃ = ಪದ್ಮಜನೆಂದು, ಶಿವಸ್ಯ =

---

(१) **भाष्यदीपिका –** भगवन्नामत्वाविशेषाद् रुद्रादिनामवन्नारायणादिनाम्नामपि रुद्रादौ वृत्तिः किं न स्यादित्यत आह – **स्कान्दे चेति** ।। चोऽप्यर्थः समुच्चये । अस्याप्युक्तत्वादिति पूर्वेणान्वयः । किमुक्तमित्यतस्तद्वाक्यं पठति – **ऋत इति** ।। विनेत्यर्थः । ‘अन्यत्र’ अन्येभ्यो रुद्रादिभ्यः अन्यानि रुद्रादिनामानीति शेषः । आदिशब्देन विष्णुरित्यादिकं गृह्यते । अत्र दृष्टान्तमाह – **राजेति** ।। यथा राजा स्वकं पुरमृतेऽन्यदमात्यादिभ्यो ददाति तद्वदित्यर्थः । इतीत्यन्तस्य स्कान्दे इत्यनेनान्वयः । तस्य च नारायणादिनाम्नामन्यत्र वृत्त्यभावस्योक्तत्वान्न साम्यमित्युपस्कृतेनान्वयः । अनेन स्कान्दे नारायणादिनाम्नां विष्णोरेवोक्तत्वान्न साम्यमित्यन्वयेन पूर्वप्रयुक्तैवकारस्य कृत्यान्तरं सूचितं भवति ।

ರುದ್ರದೇವರಿಗೆ, ಉಗ್ರಃ = ಉಗ್ರನು, ಭಸ್ಮಧರಃ = ಭಸ್ಮಧರನು, ನಗ್ನಃ = ದಿಗಂಬರನು, ಕಪಾಲಿ = ಕಪಾಲಿಯು ಇತ್ಯಾದಿ ಹೆಸರುಗಳನ್ನು, ಸ್ವಕೀಯಾನಿ = ತನ್ನದೇ ಆದ, ವಿಶೇಷನಾಮಾನಿ = ಕೆಲವು ವಿಶೇಷಹೆಸರುಗಳನ್ನು, ಕೇಶವಃ = ಬ್ರಹ್ಮರುದ್ರಾದಿ ಪ್ರೇರಕನಾದ ಪರಮಾತ್ಮನು, ದದೌ = ನೀಡಿದನು. ಇತಿ ಚ = ಹೀಗೂ ಕೂಡ, ಬ್ರಾಹ್ಮೇ = ಬ್ರಹ್ಮಪುರಾಣದಲ್ಲಿ ಹೇಳಲ್ಪಟ್ಟದೆ.(೧)

## श्रीपद्मनाभतीर्थविरचितसत्तर्कदीपावळ्याम्ः

### ।। ॐ नानुमानमतच्छब्दात् ॐ।।

यदुक्तं 'रुद्रो द्युभ्वाद्याश्रयः' इति, तन्निराकुर्वत् सूत्रं पठित्वा व्याचष्टे – नानुमानमित्यादिना ।। अनुमानम् = अनुमानसम्बन्धीत्यर्थः । यद्वचनं रुद्रप्रापकमुदाहृतं 'प्राणानां ग्रन्थिरसि' इति तद्विष्णौ श्रुत्या 'रुजं द्रावयते' इत्यादि पुराणवाक्यैश्च घटयति । सोऽन्तक इति ।। 'असुरं शं निरुद्ध्यति' इति शर्व इत्यर्थः । नच 'नारायणं महाज्ञेयम्' इत्यादि श्रुतयो रुद्रादिषु घटन्तामिति वाच्यम् । तेषु नारायणादिशब्दासम्भवात् । तदाह – नत्विति ।। एतदेव विवृणोति – ऋत इति ।।

ಹಿಂದೆ 'ದ್ಯುಭ್ವಾದ್ಯಾಶ್ರಯನಾದವನು ರುದ್ರನಾಗಿದ್ದಾನೆ'ಂದು ಪೂರ್ವಪಕ್ಷ ಮಾಡಲಾಗಿತ್ತು. ಅದನ್ನು ನಿರಾಕರಿಸುವುದಕ್ಕಾಗಿ ಸೂತ್ರವನ್ನು ಪಠಿಸುತ್ತಾ ವ್ಯಾಖ್ಯಾನಿಸುತ್ತಿದ್ದಾರೆ "ನಾನುಮಾನಂ" ಇತ್ಯಾದಿಯಾಗಿ. ಅನುಮಾನಶಬ್ದಕ್ಕೆ ಅನುಮಾನಕ್ಕೆ ಸಂಬಂಧಿಸಿದ ಎಂದರ್ಥ. ಇನ್ನು ರುದ್ರನಿಗೆ ಪ್ರಾಪಕವಾದ 'ಪ್ರಾಣಾನಾಂ ಗ್ರಂಥಿರಸಿ' ಎಂಬ ಶ್ರುತಿಯು ವಿಷ್ಣುವಿನಲ್ಲೇ ಉಪಪನ್ನವಾಗುತ್ತದೆ. ಏಕೆಂದರೆ 'ರುಜಂ ದ್ರಾವಯತೇ' ಎಂಬ ಬ್ರಹ್ಮಾಂಡಪುರಾಣದ ಮಾತಿನಿಂದ ರುದ್ರಶಬ್ದನಿಂದ ಪ್ರತಿಪಾದ್ಯನಾದವನು ಭವರೋಗಪರಿಹಾರಕನಾದ

(१) भाष्यदीपिका – यद्येवं रुद्रादिशब्दाः विष्णवैकपराः तर्हि किमुच्यते भस्मधरोग्रत्वादीनां तच्छब्दत्वम् । विष्णुदत्तत्वाभिप्रायेण चेत् – तर्हि रुद्रादिशब्दा अपि तादृशा इति कथं तैर्निर्णयाभाव इत्यत आह – चतुर्मुख इति ।। यद्यपि स्वकीयानि, तथाऽपि 'केशवः' ब्रह्मरुद्रप्रवर्तको विष्णुः 'स्वकीयानि' मुख्यतः स्ववाचकान्येव चतुर्मुखः शतानन्दः पद्मभूरिति 'विशेषनामानि' नामविशेषानेव 'ब्रह्मणः' ब्रह्मणे ददावित्यर्थः । 'नग्नः' दिगम्बरः । 'शिवस्य' शिवाय । चस्त्वर्थः । ब्राह्म इत्यस्याप्युक्तत्वादिति पूर्वेणान्वयः । रुद्रादौ भस्मधरोग्रत्वादेरेव विष्णोः सकाशात् प्राप्तत्वेनेति तदर्थः । तस्य च पूर्वोक्तं युक्तमिति साध्येनान्वयः ।

ಮಹಾವಿಷ್ಣುವೇ ಆಗಿದ್ದಾನೆ. ಇದನ್ನು 'ಸೋಂತಕಃ' ಎಂಬುದರಿಂದ ಪ್ರತಿಪಾದಿಸಿದ್ದಾರೆ. ಶರ್ವಶಬ್ದಕ್ಕೆ ದುಷ್ಟರಿಗೆ ಸುಖವನ್ನು ತಡೆಯುತ್ತಾನೆಂದು ಅರ್ಥ.

ಹಾಗಾದರೆ 'ನಾರಾಯಣಂ ಮಹಾಜ್ಞೇಯಂ' ಇತ್ಯಾದಿ ಶ್ರುತಿಗಳೂ ಸಹ ರುದ್ರನಲ್ಲಿ ಸಮನ್ವಯಗೊಳ್ಳಲಿ? ಎಂದು ಪ್ರಶ್ನಿಸಬಾರದು. ವಿಷ್ಣುವಿನಲ್ಲಿ ರುದ್ರಶಬ್ದವು ಉಪಪನ್ನವಾಗಬಹುದು. ಆದರೆ ವಿಷ್ಣುವಿನಲ್ಲೇ ಪ್ರಸಿದ್ಧವಾದ ನಾರಾಯಣಾದಿ ಶಬ್ದಗಳು ರುದ್ರನಲ್ಲಿ ಉಪಪನ್ನವಾಗುವುದಿಲ್ಲ. ಈ ವಿಷಯವನ್ನು 'ನ ತು ನಾರಾಯಣಾದೀನಾಮ್' ಎಂಬ ಸ್ಕಾಂದಪುರಾಣದ ಮಾತಿನಿಂದ ಹೇಳುತ್ತಿದ್ದಾರೆ. ಇದೇ ವಿಷಯವನ್ನು 'ಋತೇ ನಾರಾಯಣಾದೀನಿ' ಎಂಬ ಬ್ರಾಹ್ಮಪುರಾಣದಿಂದ ವಿವರಿಸುತ್ತಿದ್ದಾರೆ.

**तत्वप्रकाशिका –**

**।। ॐ नानुमानमतच्छब्दात् ॐ।।**

**ननु प्रागुक्तरीत्या रुद्रप्रकृत्योः किं न स्याद् द्युभ्वाद्यायतनत्वमित्याशङ्कां परिहरत्सूत्रं पठित्वा व्याचष्टे – नानुमानमिति ।।**

ಆಕ್ಷೇಪ - ಹಿಂದೆ ಹೇಳಿದ ಪ್ರಕಾರ ರುದ್ರ, ಪ್ರಕೃತಿ ಮೊದಲಾದವುಗಳಿಗೆ ದ್ಯುಭ್ವಾದ್ಯಾಯತನತ್ವವು ಯುಕ್ತವಾಗುತ್ತದೆಂದು ಏಕೆ ಒಪ್ಪಬಾರದು? ಎಂಬ ಆಶಂಕೆಯನ್ನು ಪರಿಹಾರಮಾಡುವುದಕ್ಕಾಗಿ ಸೂತ್ರವನ್ನು ಹೇಳುತ್ತಾ "ನಾನುಮಾನಮ್" ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ.

**तत्वप्रकाशिका – प्रागुक्तानुमानसिद्धप्रामाण्ये पाशुपताद्यागमे सर्वाश्रयत्वेन (परिकल्पिते) कल्पिते रुद्रप्रधाने अत्र प्रकरणे सर्वाधारतया प्रतिपाद्ये न भवतः । तच्छ्रुतिलिङ्गाद्यभावादिति भावः ।**

ಹಿಂದೆ ಹೇಳಿದಂತೆ ಯಾವ ಆಗಮಗಳಿಗೆ ಪ್ರಾಮಾಣ್ಯವು ಅನುಮಾನದಿಂದ ಸಿದ್ಧವಾಗುತ್ತದೋ ಅಂತಹ ಪಾಶುಪತಾದ್ಯಾಗಮಗಳಲ್ಲಿ ಸರ್ವಾಶ್ರಯವೆಂದು ಕಲ್ಪಿತವಾದ ರುದ್ರ ಹಾಗೂ ಪ್ರಧಾನಗಳು ಈ ಪ್ರಕರಣದಲ್ಲಿ ಸರ್ವಾಧಾರತ್ವೇನ ಪ್ರತಿಪಾದ್ಯವಾಗಿವೆ ಎಂದು ಹೇಳಲಾಗದು. ಏಕೆಂದರೆ, ರುದ್ರ ಹಾಗೂ ಪ್ರಧಾನರನ್ನು ಪ್ರತಿಪಾದಿಸುವ ಶಬ್ದವಾಗಲೀ ಲಿಂಗವಾಗಲೀ ಕಾಣಿಸುತ್ತಿಲ್ಲ.

**तत्वप्रकाशिका – आगमप्रामाण्यसाधकानुमानं तु फलविसंवादिरुद्रादिवाक्यदृष्टान्तेन विप्रतिपन्नवाक्याप्रामाण्यसाधनसम्भवात् प्रतिपक्षग्रस्तमतिप्रसङ्गदुष्टं चेत्युपेक्ष्यम् ।**

ಪಾಶುಪತಾದ್ಯಾಗಮಗಳ ಪ್ರಾಮಾಣ್ಯಕ್ಕೆ ಸಾಧಕವಾದ ಯಾವ ಅನುಮಾನವು ಪೂರ್ವಪಕ್ಷಿಗೆ ಸಮ್ಮತವಾಗಿದೆಯೋ ಅಂತಹ ಅನುಮಾನವು ಫಲವಿಸಂವಾದಿಯಾದ ರುದ್ರಾದಿವಾಕ್ಯದ ದೃಷ್ಟಾಂತದಿಂದ

ವಿಪ್ರತಿಪನ್ನವಾದ ವಾಕ್ಯಕ್ಕೆ ಅಪ್ರಾಮಾಣ್ಯವನ್ನು ಸಾಧಿಸಬಹುದು. ಹೀಗೆ ಪಾಶುಪತಾದ್ಯಾಗಮಪ್ರಾಮಾಣ್ಯಸಾಧಕವಾದ ಅನುಮಾನವು ಸತ್‌ಪ್ರತಿಪಕ್ಷವೆಂಬ ಹೇತ್ವಾಭಾಸದಿಂದ ಯುಕ್ತವಾದ್ದರಿಂದ ಅಸಾಧಕವಾಗಿದೆ. ಮತ್ತು ಅತಿಪ್ರಸಂಗದೋಷದಿಂದಲೂ ಕೂಡಿರುವುದರಿಂದ ಅತ್ಯಂತ ಉಪೇಕ್ಷೆಗೆ ಯೋಗ್ಯವಾಗಿದೆ.

**तत्वप्रकाशिका – अभाषितं प्रधानं किं संयोज्यते? इति चेन्न । न प्रकृतिजीवावभिधीयेते इत्यन्यत्रोक्तत्वात् । नच प्रकृतिपदेनापि रुद्रः । पृथगुभयग्रहणे बाधकाभावात् ।**

ಭಾಷ್ಯದಲ್ಲಿ ಉಲ್ಲೇಖ ಮಾಡದೇ ಇರುವ ಪ್ರಕೃತಿಯನ್ನು ನೀವೇಕೆ ಸ್ವೀಕರಿಸುತ್ತಿದ್ದೀರಿ? ಎಂದರೆ ಭಾಷ್ಯಕಾರರು ವಿಷ್ಣುತತ್ತ್ವನಿರ್ಣಯದಲ್ಲಿ 'ನ ಪ್ರಕೃತಿ ಜೀವಾವಭಿಧೀಯತೇ' ಎಂಬುದಾಗಿ ಹೇಳಿದ್ದಾರೆ. ಅದನ್ನು ವಿವಕ್ಷಿಸಿ ಇಲ್ಲಿ ಪ್ರಕೃತಿಯನ್ನು ಪೂರ್ವಪಕ್ಷಕೋಟಿಯಲ್ಲಿ ಸೇರಿಸಲಾಗಿದೆ.

ವಿಷ್ಣುತತ್ತ್ವವಿನಿರ್ಣಯದಲ್ಲಿ ಹೇಳಲ್ಪಟ್ಟ ಪ್ರಕೃತಿಪದದಿಂದ ರುದ್ರನನ್ನು ಸ್ವೀಕರಿಸಲು ಬರುವುದಿಲ್ಲ. ಏಕೆಂದರೆ, ರುದ್ರ ಹಾಗೂ ಪ್ರಕೃತಿ ಇಬ್ಬರನ್ನೂ ಪ್ರತ್ಯೇಕವಾಗಿ ಸ್ವೀಕರಿಸಿದರೆ ಯಾವುದೇ ಬಾಧಕವು ಬರುತ್ತಿಲ್ಲ. ಆದ್ದರಿಂದ ವಿಷ್ಣುತತ್ತ್ವವಿನಿರ್ಣಯದಲ್ಲಿ ಪ್ರಕೃತಿ ಹಾಗೂ ರುದ್ರ ಇಬ್ಬರನ್ನೂ ಪ್ರತ್ಯೇಕವಾಗಿ ಪೂರ್ವಪಕ್ಷಕೋಟಿಯಲ್ಲಿ ಸ್ವೀಕರಿಸಲಾಗಿದೆ.

**तत्वप्रकाशिका – नन्वत्र रुद्रादिज्ञापकाभावेऽपि श्रुत्यन्तरे 'प्राणानां ग्रन्थिरसि रुद्रः' इत्याद्युक्तेर्द्युभ्वाद्यायतनत्वं रुद्रादेः किं न स्यात्? इत्यत आह – स इति ॥**

ಆಕ್ಷೇಪ -- ಈ ಪ್ರಕರಣದಲ್ಲಿ ರುದ್ರನಿಗೆ ಜ್ಞಾಪಕವಾದ ಯಾವುದೇ ಲಿಂಗಗಳು ಕೇಳಿಸುತ್ತಿಲ್ಲ. ಆದರೂ ಸಹ ಬೇರೆ ಶ್ರುತಿಯಲ್ಲಿ 'ಪ್ರಾಣಾನಾಂ ಗ್ರಂಥಿರಸಿ ರುದ್ರಃ' ಎಂದು ಕೇಳಿಸುತ್ತಿದೆ. ಆದ್ದರಿಂದ ದ್ಯುಭ್ವಾದ್ಯಾಯತನನಾದವನು ರುದ್ರನೇಕಾಗಬಾರದು? ಎಂಬ ಪ್ರಶ್ನೆಗೆ "ಸಃ" ಎಂಬ ಭಾಷ್ಯದಿಂದ ಉತ್ತರಿಸುತ್ತಿದ್ದಾರೆ.

**तत्वप्रकाशिका – श्रुत्यन्तरोक्तमपि द्युभ्वाद्यायतनत्वं विष्णोरेव । नच रुद्रादिश्रुतिलिङ्गविरोधः । श्रुतिबलेन रुद्रादिश्रुतेरन्तकत्वादिलिङ्गस्य च विष्ण्वेकनिष्ठत्वादिति भावः ।**

ಬೇರೆ ಶ್ರುತಿಯಲ್ಲಿ ಹೇಳಲ್ಪಟ್ಟ ದ್ಯುಭ್ವಾದ್ಯಾಯತನತ್ವವೂ ಸಹ ವಿಷ್ಣುವಿನ ಧರ್ಮವೇ ಆಗಿದೆ. ಆ ಶ್ರುತಿವಾಕ್ಯಗಳಲ್ಲಿ ರುದ್ರಾದಿಶಬ್ದ, ಅಂತಕತ್ವಾದಿಲಿಂಗ ಇವುಗಳ ವಿರೋಧವೂ ಸಹ ಬರುವುದಿಲ್ಲ. ವಿಷ್ಣುಶ್ರುತಿಯ ಬಲದಿಂದ ರುದ್ರಾದಿಶ್ರುತಿಗಳಿಗೆ ಹಾಗೂ ಅಂತಕತ್ವಾದಿಲಿಂಗಗಳಿಗೆ ಕೇವಲ ವಿಷ್ಣುಪರತ್ವವನ್ನು ಸಾಧಿಸಬಹುದು.

ದ್ಯುಭ್ವಾದ್ಯಧಿಕರಣ (೧-೩-೧)

**तत्वप्रकाशिका – ननु रुद्रादिशब्दानां विष्णुपरत्वं किं योगेन रुढ्या वा । नाद्यः । योगस्य दौर्बल्यात् । न द्वितीयः । तदभावात् । उभयत्र रुढिसद्भावे पुनर्निश्चयायोगात् । नहि श्रुत्यन्तरे विष्णुलिङ्गाद्यस्तीत्यत आह – ब्रह्मण्डे चेति ।।**

ರುದ್ರಾದಿಶಬ್ದಗಳು ವಿಷ್ಣುಪರವಾಗುತ್ತವೆಂದು ಯೌಗಿಕವೃತ್ತಿಯಿಂದ ಹೇಳುತ್ತಿದ್ದೀರೋ ಅಥವಾ ರೂಢಿಯಿಂದ ಹೇಳುತ್ತಿದ್ದೀರೋ? ಎಂದು ಪ್ರಶ್ನೆ. ಯೋಗವು ದುರ್ಬಲವಾದ್ದರಿಂದ ಪ್ರಥಮಪಕ್ಷವು ಅಯುಕ್ತವಾಗುತ್ತದೆ. ರೂಢಿಯು ವಿಷ್ಣುವಿನಲ್ಲಿ ಇಲ್ಲದ ಕಾರಣ ಎರಡನೆಯ ಪಕ್ಷವು ಅಯುಕ್ತವಾಗಿದೆ. ವಿಷ್ಣು ಹಾಗೂ ರುದ್ರ ಇಬ್ಬರಲ್ಲಿಯೂ ರುದ್ರಾದಿಶಬ್ದಗಳ ರೂಢಿಯನ್ನು ಒಪ್ಪಿದರೆ ಯಾವಪಕ್ಷವೂ ಸಹ ನಿಶ್ಚಯವಾಗುವುದಿಲ್ಲ. ಆದ್ದರಿಂದ ರುದ್ರಾದಿಶಬ್ದಗಳಿಂದ ವಿಷ್ಣುವೇ ವಾಚ್ಯನಾಗುತ್ತಾನೆಂದು ನಿಮ್ಮಿಂದ ನಿರ್ಣಯಿಸಲಾಗದು. ಮತ್ತು ಬೇರೆ ಶ್ರುತಿಗಳಲ್ಲಿ ವಿಷ್ಣುಲಿಂಗಾದಿಗಳು ಕಾಣಿಸುತ್ತಿಲ್ಲ. ಈ ಎರಡು ವಿಧ ಪ್ರಶ್ನೆಗಳಿಗೆ ''ಬ್ರಹ್ಮಾಂಡೇ ಚ'' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

**तत्वप्रकाशिका – रुद्रादिशब्दानां विष्णौ योगमुक्त्वा 'वेदेषु सपुराणेषु गीयते' इति विद्वद्रूढिकथनाद्रूढिमात्रान्महायोगविद्वद्रूढ्योः प्राबल्याद्युक्तः श्रुत्यन्तरेऽपि विष्णोः प्रतिपाद्यत्वनिश्चय इति भावः ।**

ರುದ್ರ ಮೊದಲಾದ ಶಬ್ದಗಳಿಗೆ ವಿಷ್ಣುವಿನಲ್ಲಿ ಯೋಗಾರ್ಥವನ್ನು ಹೇಳಬಹುದು. ಮತ್ತು 'ವೇದೇಷು ಸಪುರಾಣೇಷು ಗೀಯತೇ' ಎಂಬ ವಾಕ್ಯದಿಂದ ವಿದ್ವದ್‌ರೂಢಿಯನ್ನೂ ಸಹ ಹೇಳಿದ್ದಾರೆ. ಕೇವಲ ರೂಢಿಗಿಂತ ಮಹಾಯೋಗ ಹಾಗೂ ವಿದ್ವದ್‌ರೂಢಿಗಳು ಪ್ರಬಲವಾಗಿರುತ್ತವೆ. ಆದ್ದರಿಂದ ಬೇರೆ ಶ್ರುತಿಯಲ್ಲಿಯೂ ವಿಷ್ಣುವೇ ಪ್ರತಿಪಾದ್ಯನೆಂದು ನಿಶ್ಚಯವಾಗುತ್ತದೆಂದು ಅಭಿಪ್ರಾಯ.

**तत्वप्रकाशिका – ननु यदि रुद्रादिशब्दानां विष्णुपरत्वमुक्त्वा श्रुतीनामनिर्णायकत्वमुच्यते तर्हि नारायणादिनाम्नां रुद्रादिपरत्वे 'नारायणं महाज्ञेयम्' इत्यादिश्रुतीनामनिर्णायकत्वं स्यादित्यत आह – वामने चेति ।।**

ಒಂದು ವೇಳೆ ರುದ್ರ ಮೊದಲಾದ ಶಬ್ದಗಳು ವಿಷ್ಣುಪರ ಎಂದು ಹೇಳಿ, ರುದ್ರಾದಿಶ್ರುತಿಗಳು ರುದ್ರಾದಿಗಳನ್ನು ಪ್ರತಿಪಾದಿಸಲು ಅನಿರ್ಣಾಯಕವಾಗುತ್ತವೆ ಎಂದು ಹೇಳಿದಿರಿ. ಇದರಂತೆ 'ನಾರಾಯಣ' ಮೊದಲಾದ ಶಬ್ದಗಳೂ ಸಹ ರುದ್ರಾದಿಪರವಾದರೆ 'ನಾರಾಯಣಂ ಮಹಾಜ್ಞೇಯಂ' ಇತ್ಯಾದಿ ಶ್ರುತಿಗಳಿಂದ ವಿಷ್ಣುವೇ ಪ್ರತಿಪಾದ್ಯನಾಗಿದ್ದಾನೆಂದು ಹೇಗೆ ನಿರ್ಣಯಿಸುತ್ತೀರಿ? ಎಂಬ ಆಕ್ಷೇಪಕ್ಕೆ ''ವಾಮನೇ ಚ'' ಎಂಬುದರಿಂದ ಉತ್ತರಿಸುತ್ತಿದ್ದಾರೆ.

**तत्वप्रकाशिका – भगवन्नामत्वाविशेषाद्रुदादिनामवन्नारायणादिनाम्नामपि रुद्रादौ वृत्तिः किं न स्यादित्यत आह – स्कान्दे चेति ।।**

ಸಕಲಶಬ್ದಗಳೂ ಸಹ ನಾಮತ್ವ ಎಂಬ ಸಾಧಾರಣಧರ್ಮದಿಂದ ಭಗವಂತನನ್ನೇ ಮುಖ್ಯ-ವೃತ್ತಿಯಿಂದ ಪ್ರತಿಪಾದಿಸುತ್ತವೆ. ಉಳಿದ ರುದ್ರಾದಿ ವ್ಯಕ್ತಿಗಳನ್ನು ರುದ್ರಾದಿಶಬ್ದಗಳು ಅಮುಖ್ಯವೃತ್ತಿ-ಯಿಂದ ಪ್ರತಿಪಾದಿಸುತ್ತವೆಂದು ಹೇಳುತ್ತಿದ್ದೀರಿ. ಇದರಂತೆ ನಾರಾಯಣ ಮೊದಲಾದ ಶಬ್ದಗಳೂ ಸಹ ಅಮುಖ್ಯವೃತ್ತಿಯಿಂದ ರುದ್ರಾದಿಗಳನ್ನು ಪ್ರತಿಪಾದಿಸಬಹುದಲ್ಲವೇ? ಎಂಬ ಪ್ರಶ್ನೆಗೆ "ಸ್ಕಾಂದೇ ಚ" ಎಂಬ ಮಾತಿನಿಂದ ಉತ್ತರಿಸುತ್ತಿದ್ದಾರೆ.

**तत्वप्रकाशिका – यद्येवं रुद्रादिशब्दा विष्ण्वेकपरास्तर्हि किमुच्यते भस्मधरोग्रत्वादीनां तच्छब्दत्वम् । विष्णुदत्तत्वाभिप्रायेणेति चेत्तर्हि रुद्रादिशब्दा अपि तादृशा इति न कथं तैर्निर्णय इत्यत आह – चतुर्मुख इति ।। ३ ।।**

ಹೀಗೆ ರುದ್ರಾದಿಶಬ್ದಗಳೆಲ್ಲವೂ ವಿಷ್ಣುವನ್ನೇ ಪ್ರತಿಪಾದಿಸುವುದಾದರೆ ಭಸ್ಮಧರ, ಉಗ್ರ ಮೊದಲಾದ ಶಬ್ದಗಳನ್ನು ರುದ್ರಾದಿಗಳಲ್ಲಿ ಹೇಗೆ ಪ್ರಯೋಗಿಸುವುದು? ಎಂದರೆ ಆ ಶಬ್ದಗಳನ್ನು ಭಗವಂತನೇ ರುದ್ರಾದಿಗಳಿಗೆ ನೀಡಿದ್ದಾನೆಂದು ಉತ್ತರಿಸಬೇಕು. ಹಾಗಾದರೆ ರುದ್ರಾದಿಶಬ್ದಗಳನ್ನೂ ಸಹ ಭಸ್ಮಧರಾದಿ ಶಬ್ದಗಳಂತೆ ಭಗವಂತನು ರುದ್ರಾದಿಗಳಿಗೆ ನೀಡಿರಬಹುದಲ್ಲವೇ? ಆಗ ಆ ರುದ್ರಾದಿಶಬ್ದಗಳು ನಿರ್ಣಾಯಕವಾಗಬಹುದಲ್ಲವೇ? ಈ ಎರಡು ಬಗೆಯ ಶಬ್ದಗಳಲ್ಲಿ ವಿವೇಚನೆಯನ್ನು ಹೇಗೆ ಮಾಡುತ್ತೀರಿ? ಎಂಬ ಪ್ರಶ್ನೆಗೆ "ಚತುರ್ಮುಖಃ" ಎಂಬ ಭಾಷ್ಯದಿಂದ ಉತ್ತರಿಸುತ್ತಿದ್ದಾರೆ.

**भावदीपः – ॐ नानुमानमतच्छब्दात् ॐ ।।** भाष्ये रुद्रपदमुपलक्षणं मत्वा रुद्रप्रकृत्यानुगुण्येन भाष्यं व्याचष्टे – **प्रागुक्तेति** ।। अत्रेत्यनुवादः । भस्मधरेत्यत्रापि त्रिगुणत्वादेर्ग्रहणं मत्वाऽऽह – **तत् श्रुतीति** ।

ಓಂ ನಾನುಮಾನಮತಚ್ಛಬ್ದಾತ್ ಓಂ

ಭಾಷ್ಯದಲ್ಲಿರುವ ರುದ್ರವೆಂಬ ಪದವು ಉಪಲಕ್ಷಣವಾಗಿದೆ ಎಂದು ತಿಳಿದು ರುದ್ರ ಹಾಗೂ ಪ್ರಕೃತಿಗೆ ಅನುಗುಣವಾಗಿ ಭಾಷ್ಯದಲ್ಲಿ ವ್ಯಾಖ್ಯಾನಿಸುತ್ತಿದ್ದಾರೆ "ಪ್ರಾಗುಕ್ತರೀತ್ಯಾ" ಇತ್ಯಾದಿ ಟೀಕೆಯಿಂದ. "ಅತ್ರ ಪ್ರಕರಣೇ" ಎಂಬಲ್ಲಿರುವ ಅತ್ರವೆಂಬ ಪದವು ಭಾಷ್ಯದಲ್ಲಿರುವ ಪದದ ಅನುವಾದ ರೂಪವಾಗಿದೆ. "ಭಸ್ಮಧರ" ಎಂಬಲ್ಲಿಯೂ ತ್ರಿಗುಣತ್ವ ಮೊದಲಾದ ಪ್ರಕೃತಿಯಲ್ಲಿರುವ ಶಬ್ದಗಳನ್ನು ಉಪಲಕ್ಷಣಯಾ ಸ್ವೀಕರಿಸಬೇಕೆಂದು ತಿಳಿದು "ತತ್ ಶ್ರುತಿಃ" ಎಂಬ ವಾಕ್ಯವು ಹೊರಟಿದೆ.

**भावदीपः –** आदिपदेन समाख्याग्रहः । अतद्धर्माभिलापादितिवदयं निर्देशः । तद्व्यभिचारिणा । अप्रामाण्यानुमा च स्यादिति । अतिप्रसङ्गोऽनुमेयदृशेति च शास्त्रयोनिसूत्रानुभाष्यमनुरुद्ध्याऽऽह – **फलविसंवादीति** ।।

ಲಿಂಗಾದ್ಯಭಾವಾತ್'' ಎಂಬಲ್ಲಿರುವ ಆದಿ ಪದದಿಂದ ರುದ್ರನ ವಿಷಯದಲ್ಲಿರುವ ಸಮಾಖ್ಯಾಪ್ರಮಾಣವನ್ನು ಸ್ವೀಕರಿಸಬೇಕು. ಯಾವರೀತಿಯಾಗಿ ''ಅತದ್ಧರ್ಮಾಭಿಲಾಪಾತ್'' ಎಂಬ ಸೂತ್ರಕ್ಕೆ ''ತದ್ಧರ್ಮಾಭಿಲಾಪಾಭಾವಾತ್'' ಎಂದು ಅರ್ಥೈಸುತ್ತೇವೆಯೋ ಅದರಂತೆ ಪ್ರಕೃತ ''ಅತತ್ ಶಬ್ದಾತ್'' ಎಂಬುದಕ್ಕೆ ''ತತ್ ಶಬ್ದ ಲಿಂಗಾದ್ಯಭಾವಾತ್'' ಎಂದು ಅರ್ಥೈಸಬೇಕು. ''ಅಪ್ರಾಮಾಣ್ಯಾನುಮಾ ಚ ಸ್ಯಾತ್'' ಎಂಬುದಾಗಿ ಅನುಮಾನಕ್ಕೆ ಹೇಳಲ್ಪಟ್ಟ ಅಪ್ರಾಮಾಣ್ಯವನ್ನು ಮತ್ತು ''ಅತಿಪ್ರಸಂಗೋಽನುಮೇಯದೃಶ'' ಎಂಬುದಾಗಿ ಅನುಮಾನಕ್ಕೆ ಅತಿಪ್ರಸಂಗವನ್ನು ಶಾಸ್ತ್ರಯೋನಿತ್ವಸೂತ್ರದ ಭಾಷ್ಯದಲ್ಲಿ ಹೇಳಿರುತ್ತಾರೆ. ಅದಕ್ಕೆ ಅನುಸಾರಿಯಾಗಿ ''ಫಲವಿಸಂವಾದ'' ಎಂಬ ವಾಕ್ಯವು ಹೊರಟಿರುತ್ತದೆ.

**भावदीपः – अतिप्रसङ्गेति ।। बौद्धागमेऽपि किञ्चित्फलोपलम्भदर्शनेन तत्रापि विप्रतिपन्नभागप्रामाण्यानुमानसम्भवादिति भावः । तत्त्वप्रदीपादिप्राचीनटीकारीत्या शङ्कते – अभाषितमिति ।।**

ಆಗಮಪ್ರಾಮಾಣ್ಯಸಾಧಕವಾದ ಅನುಮಾನಕ್ಕೆ ಸತ್ಪ್ರತಿಪಕ್ಷದೋಷವಷ್ಟೇ ಅಲ್ಲ ಅತಿಪ್ರಸಂಗದೋಷವೂ ಸಹ ಬರುತ್ತದೆ. ಏಕೆಂದರೆ ಬೌದ್ಧಾಗಮಗಳಲ್ಲಿ ಕೆಲವಡೆ ಫಲಗಳು ಕಾಣಸುತ್ತಿರುವುದರಿಂದ ವಿಪ್ರತ್ತಿಪನ್ನವಾದ ಬೌದ್ಧಾಗಮಗಳ ಪ್ರಾಮಾಣ್ಯವನ್ನುಜ ಕಠಿಣವಾಕ್ಯಗಳ ದೃಷ್ಟಾಂತಗಳಿಂದ ಸಾಧಿಸಬಹುದು. ಹೀಗೆ ಅತಿಪ್ರಸಂಗವನ್ನು ಹೇಳಬೇಕು. ತತ್ವಪ್ರದೀಪ ಮೊದಲಾದ ಪ್ರಾಚೀನ ಟೀಕಾಕಾರರ ಪ್ರಕಾರ ಆಶಂಕಿಸುತ್ತಿದ್ದಾರೆ ''ಅಭಾಷಿತಂ'' ಇತ್ಯಾದಿ ವಾಕ್ಯಗಳಿಂದ.

**भावदीपः – भाष्यकृदनुक्तमित्यर्थः । अन्यत्र विष्णुतत्त्वनिर्णये ।। पृथगिति ।। तत्र प्रकृतिपदेन प्रकृतेः, अत्र रुद्रपदेन रुद्रस्येति पृथगुभयग्रहण इत्यर्थः ।। श्रुतिबलेनेति ।। 'सोऽन्तकः' इत्यादिश्रुतिबलेनेत्यर्थः।**

**भावदीपः –** ''ಅಭಾಷಿತಂ'' ಎಂಬ ಶಬ್ದಕ್ಕೆ 'ಭಾಷ್ಯಕಾರರಿಂದ ಹೇಳಲ್ಪಡದೆ ಇರುವ' ಎಂದರ್ಥ. ''ಅನ್ಯತ್ರ'' ಎಂಬ ಶಬ್ದಕ್ಕೆ ವಿಷ್ಣುತತ್ವನಿರ್ಣಯದಲ್ಲಿ ಎಂದರ್ಥ. ''ಪೃಥಗ್'' ಎಂದರೆ 'ವಿಷ್ಣುತತ್ವನಿರ್ಣಯದಲ್ಲಿರುವ ಪ್ರಕೃತಿ ಪದದಿಂದ ಪ್ರಕೃತಿಯನ್ನು ಸ್ವೀಕರಿಸಿ ಇಲ್ಲಿರುವ ರುದ್ರಪದದಿಂದ ರುದ್ರನನ್ನು ಸ್ವೀಕರಿಸಿ ಪ್ರತ್ಯೇಕವಾಗಿ ಎರಡನ್ನು ವಿವಕ್ಷಿಸಿದಾಗ' ಎಂದರ್ಥ. ''ಶ್ರುತಿಬಲೇನ'' ಎಂದರೆ ''ಸೋಽಂತಕಃ'' ಎಂಬ ಮುಂತಾದ ಶ್ರುತಿಗಳ ಬಲದಿಂದ ಎಂದರ್ಥ.

**भावदीपः – नन्वन्तर्नयन्यायेन निर्णयः स्यादित्यत आह – नहीति ।। श्रुत्यन्तर इति ।। रुद्रसमाख्यारूपश्रुत्यन्तर इत्यर्थः । येन निर्णयः स्यादिति भावः ।**

ಅಂತರಾಧಿಕರಣದ ನ್ಯಾಯದಿಂದ ವಿಷ್ಣುವೇ ರುದ್ರಾದಿ ಶಬ್ದಗಳಿಂದ ಪ್ರತಿಪಾದ್ಯನೆಂದು ನಿರ್ಣಯಿಸಬಹುದಲ್ಲವೇ? ಎಂಬ ಪ್ರಶ್ನೆಗೆ ''ನ ಹಿ'' ಎಂಬ ವಾಕ್ಯವು ಹೊರಟಿದೆ. ''ಶ್ರುತ್ಯಂತರ'' ಎಂದರೆ ರುದ್ರಸಾಧಾಕವಾದ ಸಮಾಖ್ಯಾರೂಪವಾದ ಮತ್ತೊಂದು ಶ್ರುತಿಯಲ್ಲಿ ಎಂದರ್ಥ. ಹಾಗೇನಾದರೂ ರುದ್ರಸಮಾಖ್ಯಾನಶ್ರುತಿಯಲ್ಲಿ ವಿಷ್ಣುಲಿಂಗಗಳು ಇದ್ದಿದ್ದರೆ ನಿರ್ಣಯಸಬಹುದಿತ್ತು ಎಂದು ಅಭಿಪ್ರಾಯ.

ಪರಿಪೂರ್ಣಚಂದ್ರಿಕಾ

**भावदीपः** – तेषामेव लिङ्गशब्दानां 'प्राणानां ग्रन्थिरसि' इत्यादीनां विष्णौ मुख्यवृत्तिरिति बलवत्त्वं तस्य हि रुग्द्रावणादिकर्तृत्वं मुख्यमिति न्यायविवरणविवरणपरतयोक्तस्मृतेस्तात्पर्यमाह – **रुद्रादीति** ।। समाख्या सावकाशेति सूचितम् । वामने चेत्यादिभाष्यं विष्णुसमाख्याया निरवकाशत्वोक्तिपरमिति व्यञ्जयन्नाह – **यदि रुद्रादीति** ।। ३ ।।

"ತೇಷಾಮೇವ ಲಿಂಗಶಬ್ದಾನಾಂ ಪ್ರಾಣಾನಾಂ ಗ್ರಂಥಿರಸಿ ಇತ್ಯಾದೀನಾಂ ವಿಷ್ಣೌ ಮುಖ್ಯವೃತ್ತಿರಿತಿ ಬಲವತ್ತ್ವಂ ತಸ್ಯ ಹಿ ರುಗ್ ದ್ರಾವಣಾದಿಕರ್ತೃತ್ವಂ ಮುಖ್ಯಮ್" - ರುದ್ರನಲ್ಲಿಯೇ ಇರುವ ಲಿಂಗ ಹಾಗೂ ಶ್ರುತಿಗಳು "ಪ್ರಾಣಾನಾಂ ಗ್ರಂಥಿರಸಿ ಇತ್ಯಾದಿ ಶ್ರುತಿಗಳೂ ಸಹ ವಿಷ್ಣುವಿನಲ್ಲಿಯೇ ಮುಖ್ಯವಾಗಿ ಉಪಪನ್ನವಾಗುತ್ತವೆ. ಆದ್ದರಿಂದ ದುಃಖವನ್ನು ಮುಖ್ಯವಾಗಿ ಪರಿಹರಿಸುವ ವಿಷ್ಣುವಿನಲ್ಲಿ ರುದ್ರಶಬ್ದವು ಉಪಪನ್ನವಾಗುತ್ತದೆ ಎಂಬ ನ್ಯಾಯವಿವರಣವನ್ನು ವಿವರಿಸುವುದಕ್ಕಾಗಿ ಹಿಂದೆ ಹೇಳಲ್ಪಟ್ಟ ಸ್ಮೃತಿಯ ತಾತ್ಪರ್ಯವನ್ನು "ರುದ್ರಾದಿ" ಎಂಬ ಮಾತುಗಳಿಂದ ಹೇಳುತ್ತಿದ್ದಾರೆ.

ಇದರಿಂದ ರುದ್ರಸಮಾಖ್ಯಾಶ್ರುತಿಯು ಸಾವಕಾಶವಾಗಿದೆ ಎಂದು ಸೂಚಿಸಿದರು. "ವಾಮನೇ ಚ" ಮೊದಲಾದ ಭಾಷ್ಯವು ವಿಷ್ಣುಸಮಾಖ್ಯಾಪ್ರಮಾಣವು ನಿರವಕಾಶವಾಗಿದೆ ಎಂಬುದನ್ನು ಸಮರ್ಥನೆ ಮಾಡುತ್ತಿದೆ. ಈ ಅಭಿಪ್ರಾಯದಿಂದ "ಯದಿ ರುದ್ರಾದಿ" ಎಂಬ ವಾಕ್ಯವು ಹೊರಟಿದೆ.

**वाक्यार्थमञ्जरी** – ॐ नानुमानमतच्छब्दात् ॐ ।। अनुमानसिद्ध-प्रामाण्यकागमकल्पितरुद्रप्रधानाख्यं नात्र सर्वाधारतयोच्यते, भस्मधरत्वत्रि-गुणत्वादितदुभय- सम्बन्धिशब्दाभावादित्यर्थः ।। विप्रतिपन्नेति ।। रुद्रादेः सर्वाश्रयत्वाद्यभिधायीत्यर्थः।। प्रतिपक्षेति ।। नन्वत्र फलविसंवादि वाक्यत्वं हेतुरुत रुद्रादिवाक्यत्वम् । नाद्यः अन्यतरासिद्धेः । द्वितीये प्रकरणसमत्वेन प्रतिपक्षायोगः । साध्यविपरीतसाधकहेत्वन्तरस्यैव प्रतिपक्षत्वादिति चेन्न । प्रतिपक्षशब्देन प्रतिरोधिमात्रग्रहणेन प्रकरणसमस्यैवात्रोक्तेः ।। अतिप्रसङ्गेति ।। दृष्टफलाभिधायिप्रतारकवाक्यदृष्टान्तेन प्रतारकवाक्यत्वेन हेतुना विप्रतिपन्नप्रतारकवाक्यप्रामाण्यसाधनप्रसङ्गरूपेत्यर्थः । अभाषितं भाष्ये अनुक्तम् । अन्यत्र विष्णुतत्त्वनिर्णये, प्रकृतिपदेन अन्यत्रोक्तेन । ननु रुद्रादिशब्दस्योभयत्र रूढिसाम्येऽपि निरवकाशविष्णुलिङ्ग-बलान्निश्चयोपपत्तिरित्यत आह – नहि

श्रुत्यन्तरेति ।। भाष्ये ईशनान्नियमनात् महत्त्वतः उत्तमत्वात् सागरादित्यनन्तरं पिनाक इत्यच्यत इति शेषः । शं रोधनाद्दैत्यानां सुखनिरोधात् । वस्ते वसति विरिश्चात् । प्रलये स्वोदरप्रविष्टजगतः सृष्टौ बहिर्निस्सरणाद् बृंहणात् पूर्णत्वाद् गतिः वाच्यतयाश्रय इत्यर्थः ।। ३ ।।

## ಬ್ರಹ್ಮಮೀಮಾಂಸಾಶಾಸ್ತ್ರ

### ಆತ್ಮಶಬ್ದ - ಮುಕ್ತಪ್ರಾಪ್ಯತ್ವಗಳು ವಾಯುದೇವರಲ್ಲಿಯೂ ಇಲ್ಲ

**सू – ॐ ।। प्राणभृच्च ।। ॐ ।। ४ ।।**

ವಾಯು ಮತ್ತು ಜೀವರು ಹಿಂದೆ ಹೇಳಿದ ಆತ್ಮಶಬ್ದ ಮತ್ತು ಮುಕ್ತಪ್ರಾಪ್ಯತ್ವಲಿಂಗಗಳಿಂದಲೇ ದ್ಯುಭ್ವಾದ್ಯಾಶ್ರಯರಾಗುವುದಿಲ್ಲ.

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका — जीवोऽप्यत एव न द्युभ्वाद्यायतनमित्यर्थः ।।**

ಜೀವನೂ ಸಹ ಈ ಹಿಂದಿನ ಕಾರಣದಿಂದಲೇ ದ್ಯುಭ್ವಾದ್ಯಾಶ್ರಯನಾಗುವುದಿಲ್ಲ.

श्रीमदानन्दतीर्थभगवत्पादाचार्यविरचित-

## ब्रह्मसूत्रभाष्यम्

**भाष्यम् –**

**एतैरेव हेतुभिर्न जीवो वायुश्च ।**

ಅನುವಾದ - ಈ ಹಿಂದಿನ ಕಾರಣಗಳಿಂದಲೇ ಜೀವನಾಗಲೀ ವಾಯುದೇವನಾಗಲೀ ದ್ಯುಭ್ವಾದ್ಯಾಯತನರೆಂದು ವಿವಕ್ಷಿಸಲು ಸಾಧ್ಯವಿಲ್ಲ.

ಪರಿಪೂರ್ಣಚಂದ್ರಿಕಾ

ಪ್ರತಿಪದಾರ್ಥ -- ಸ ಏಷೋಽನ್ತಶ್ಚರತೇ ಎಂಬುದಾಗಿ ಜೀವಲಿಂಗ ಕೇಳಿಸುತ್ತಿರುವುದರಿಂದ ಜೀವನಾಗಲೀ ಅಥವಾ ವಾಯುವಾಗಲೀ ದ್ಯುಭ್ವಾದ್ಯಾಯತನರಾಗಬಹುದಲ್ಲವೇ ಎಂಬ ಆಶಂಕೆಯನ್ನು ಪರಿಹರಿಸುವ ಮೂಲಕ ಸೂತ್ರವನ್ನು ಪಠಿಸಿ ವ್ಯಾಖ್ಯಾನಿಸುತ್ತಿದ್ದಾರೆ.

ಏತೈರೇವ = ಹಿಂದೆ ಹೇಳಿದ, ಹೇತುಭಿಃ = ಕಾರಣಗಳಿಂದಲೇ, ಜೀವಃ = ಜೀವನು, ಚ = ಮತ್ತು, ವಾಯುಃ = ವಾಯುದೇವನು, ನ = ದ್ಯುಭ್ವಾದ್ಯಾಯತನರಾಗುವುದಿಲ್ಲ.(१)

**भाष्यम् – 'अजायमानो बहुधा विजायते' (तै.आ. ३–१३–१) इति तस्यैव बहुधा जन्मोक्तेः ॥४॥**

ಅನುವಾದ - ಏಕೆಂದರೆ ವಿಷ್ಣುವಿಗೆ ವಿಕಾರವಿಲ್ಲದ್ದರಿಂದ ರಾಮ ಕೃಷ್ಣ ಮೊದಲಾದ ಅನೇಕರೂಪಗಳಿಂದ ಅವತರಿಸುತ್ತಾನೆ. ಹೀಗೆ ಶ್ರುತಿ ಇರುವುದರಿಂದ 'ಬಹುಧಾ ಜಾಯಮಾನಃ' ಎಂದು ವಿಷ್ಣುವಿಗೆ ಬಹುವಿಧ ಅವತಾರವನ್ನು ಹೇಳಲಾಗಿದೆ.

ಪ್ರತಿಪದಾರ್ಥ -- ಏಕೆಂದರೆ ಅಜಾಯಮಾನಃ = ಜನ್ಮರಹಿತನಾದರೂ, ಬಹುಧಾ = ಅನಂತರೂಪಗಳಿಂದ, ವಿಜಾಯತೇ = ಪ್ರಕಟನಾಗುತ್ತಾನೆ, ಇತಿ = ಹೀಗೆ, ತಸ್ಯೈವ = ಆ ವಿಷ್ಣುವಿಗೇ, ಬಹುಧಾ = ನಾನಾವಿಧವಾಗಿ, ಜನ್ಮೋಕ್ತೇಃ = ಪ್ರಾದುರ್ಭಾವಾದಿಗಳನ್ನು ಶ್ರುತಿಯು ಹೇಳಿರುವುದರಿಂದ.(२)

---

(१) **भाष्यदीपिका** – ननु 'स एषोऽन्तश्चरते बहुधा जायमानः' (मुं. २–२–६.) इति जीवलिङ्गश्रवणात् प्राणित्वप्रसिद्धेश्च जीवसामान्यस्य वा, विषयभूतलोकाधारत्वस्य 'वायुना वै गौतम सूत्रेणायं लोकः परश्च लोकः सर्वाणि भूतानि सन्दृब्धानि भवन्ति' (बृ.५–७–२) इति श्रुत्यन्तरे वायुनिष्ठत्वेन प्रसिद्धत्वाद् वायोर्वाऽत्र प्रकरणे द्युभ्वाद्याश्रयत्वेन प्रतिपाद्यता किं न स्यादित्याशङ्कां परिहरत्सूत्रं पठित्वा व्याचष्टे – **प्राणभृच्चेति** ॥ **एतैरिति** ॥ आत्मशब्दः, मुक्तोपसृप्यत्वम्, अतच्छब्दो रुद्रादिप्रापकश्रुतीनां विष्णुपरत्वमित्येवंरूपैः पूर्वोक्तहेतुभिरित्यर्थः । नात्र हेत्वन्तरं वाच्यमित्येवशब्दार्थः । जीवो वायुरित्यनेन प्राणभृच्छब्दो व्याख्यातः । अत्र वाच्य इत्यनुषज्यते । चः समुच्चये । अनेन सूत्रे चशब्दः प्रागुक्तहेतूनां नानुमानमित्यतो नञश्च समाकर्षकः । न केवलं रुद्रोऽत्र न वाच्यः, किन्तु जीवो वायुश्चेति समुच्चयार्थश्चेत्युक्तं भवति ।

(२) **भाष्यदीपिका** – ननु 'वायुना वै गौतम' इत्यादिश्रुतेर्विष्णुपरत्वेन वायुसाधकत्वाभावेऽपि बहुधा जन्माख्यलिङ्गेन जीवोऽत्र वाच्यः किं न स्यादित्यत आह – **अजायमान इति** ॥ देहतः 'अजायमानः' अविकुर्वाणो 'बहुधा' रामकृष्णादिरूपेण

## श्रीपद्मनाभतीर्थविरचितसत्तर्कदीपावळ्याम्ः

### ।। ॐ प्राणभृच्च ॐ ।।

**यदुक्तं 'जीवो द्युभ्वाद्याश्रयः' इति तं निराकुर्वत् सूत्रं पठित्वा व्याचष्टे – प्राणेत्यादिना ।। ,उक्तहेतुभिर्यथा द्युभ्वाश्रयो वायुर्न भवति । तथा सुतरां जीवोऽपि । यत् तत्प्रापकं वचनमुक्तम् 'स एषोन्तश्चरते' इति तद्विष्णोः श्रुत्या घटयति । अजायमान इति ।।**

ಹಿಂದೆ ಜೀವನು ದ್ಯುಭ್ವಾದ್ಯಾಯಶ್ರನಾಗಿದ್ದಾನೆಂದು ಪೂರ್ವಪಕ್ಷ ಮಾಡಲಾಗಿತ್ತು. ಅದನ್ನು ನಿರಾಕರಣೆ ಮಾಡುವುದಕ್ಕಾಗಿ ಸೂತ್ರವನ್ನು ಪಠಿಸುತ್ತಾ ವ್ಯಾಖ್ಯಾನಿಸುತ್ತಿದ್ದಾರೆ "ಪ್ರಾಣಭೃಚ್ಚ" ಇತ್ಯಾದಿಯಾಗಿ. ಹಿಂದೆ ಹೇಳಿದ ಹೇತುಗಳಿಂದ ದ್ಯುಭ್ವಾದ್ಯಾಶ್ರಯನಾದವನು ವಾಯುದೇವನು ಹೇಗೆ ಆಗುವುದಿಲ್ಲವೋ, ಅದರಂತೆ ಜೀವನೂ ಸಹ ಸುತರಾಂ ದ್ಯುಭ್ವಾದ್ಯಾಶ್ರಯನಾಗುವುದಿಲ್ಲ. ಜೀವಪ್ರಾಪಕವಾದ ಯಾವ ಶ್ರುತಿವಾಕ್ಯವನ್ನು ಹೇಳಲಾಗಿತ್ತೋ, ಅಂತಹ 'ಸ ಏಷೋಂತಶ್ಚರತೇ' ಎಂಬ ವಾಕ್ಯವನ್ನು ವಿಷ್ಣುವಿನಲ್ಲಿ ಶ್ರುತಿಯ ಆಧಾರದಿಂದ ಸಮನ್ವಯಗೊಳಿಸುತ್ತಿದ್ದಾರೆ "ಅಜಾಯಮಾನಃ" ಇತ್ಯಾದಿಯಾಗಿ.

**तत्वप्रकाशिका –**

### ।। ॐ प्राणभृच्च ॐ ।।

**उक्तप्राप्त्या जीववायू किमत्र वाच्यौ न स्यातामित्याशङ्कां परिहरत्सूत्रं पठित्वा व्याचष्टे – प्राणभृच्चेति ।। चशब्दात् प्रागुक्तहेतूनां नञश्च समाकर्षः । आत्मशब्दो मुक्तोपसृप्यत्वमतच्छब्दस्तत्प्रापकश्रुतीनां विष्णुपरत्वमित्युक्तहेतवः ।**

ಹಿಂದೆ ಪೂರ್ವಪಕ್ಷಮಾಡುವಾಗ ಜೀವ ಹಾಗೂ ವಾಯುದೇವತೆಯು ಏಕೆ ದ್ಯುಭ್ವಾದ್ಯಾಯತನರಾಗಿರಬಾರದು ಎಂದು ಆಶಂಕಿಸಲಾಗಿತ್ತು. ಅದನ್ನು ಪರಿಹಾರಮಾಡುವುದಕ್ಕಾಗಿ

---

'विजायते' तत्र तत्र प्रादुर्भवतीत्यर्थः । इतीति ।। इति पुरुषसूक्तगतवाक्येनेत्यर्थः । यस्य जन्मासम्भवोऽभिहितः पूर्ववादिना तस्यैव विष्णोर्न जीवस्येत्येवशब्दार्थः । तथा च लिङ्गं सावकाशमिति न तद्विरोध इति वाक्यशेषः ।

ಸೂತ್ರವನ್ನು ಪಠಿಸಿ "ಪ್ರಾಣಭೃಚ್ಚ" ಇತ್ಯಾದಿಯಾಗಿ ವ್ಯಾಖ್ಯಾನಿಸುತ್ತಿದ್ದಾರೆ. ಸೂತ್ರದಲ್ಲಿರುವ ಚಶಬ್ದವು ಹಿಂದೆ ಹೇಳಿರುವ ಆತ್ಮಶಬ್ದಾದಿ ಹೇತುಗಳನ್ನು ಮತ್ತು 'ನಾನುಮಾನಮ್' ಎಂಬಲ್ಲಿರುವ ನಞ್‌ನ್ನು ಅನುಕರ್ಷ ಮಾಡುತ್ತಿದೆ. ಆತ್ಮಶಬ್ದ, ಮುಕ್ತೋಪಸೃಪ್ಯತ್ವ, ಅತಚ್ಛಬ್ದ ಮತ್ತು ತತ್ಸಾಪಕವಾದ ಶ್ರುತಿ ಇವುಗಳೆಲ್ಲಾ ವಿಷ್ಣುವನ್ನು ಪ್ರತಿಪಾದಿಸುತ್ತಿವೆ ಎಂದಷ್ಟೇ ಅಲ್ಲ. ಜೀವ ಹಾಗೂ ವಾಯುದೇವತೆಯಲ್ಲಿ ಈ ಯಾವ ಹೇತುಗಳೂ ಸಹ ಬರುವುದಿಲ್ಲ.

**तत्वप्रकाशिका – ननु 'वायुना वै गौतम' इत्यादिश्रुतेर्विष्णुपरत्वेन वायुसाधकत्वाभावेऽपि बहुधा जन्मलिङ्गेन जीवोऽत्र वाच्यः किं न स्यादित्यत आह – अजायमान इति ।।४।।**

'ವಾಯುನಾ ವೈ ಗೌತಮ' ಇತ್ಯಾದಿ ಶ್ರುತಿಗಳು ವಿಷ್ಣುಪರವಾಗಿರುವುದರಿಂದ ವಾಯುವನ್ನು ಪ್ರತಿಪಾದಿಸಲಾರವು. ಆದರೂ ಸಹ ಬಹುಧಾಜಾಯಮಾನತ್ವವೆಂಬ ಲಿಂಗವಿರುವುದರಿಂದ ಜೀವನು ಏಕೆ ಪ್ರತಿಪಾದ್ಯನಾಗಬಾರದು ಎಂಬ ಪ್ರಶ್ನೆಗೆ "ಅಜಾಯಮಾನಃ" ಎಂಬ ಭಾಷ್ಯವು ಉತ್ತರಿಸುತ್ತಿದೆ.

**भावदीपः – ॐ प्राणभृच्च ॐ ।। उक्तप्रास्येति ।। लिङ्गसमाख्याभ्यामुक्तप्रास्येत्यर्थः । भाष्ये चशब्दस्य वायुसमुच्चायकत्वमात्रभ्रमं वारयति – चशब्दादिति ।। न केवलं वायोः समुच्चयः, किन्तु प्रागुक्तहेतूनां नञश्च समाकर्ष इत्यर्थः । तथैव चन्द्रिकोक्तेः ।**

ಓಂ ಪ್ರಾಣಾಭೃಚ್ಚ ಓಂ

ಟೀಕೆಯಲ್ಲಿರುವ "ಉಕ್ತಪ್ರಾಪ್ಯ" ಎಂಬ ಪದಕ್ಕೆ ಲಿಂಗ ಹಾಗೂ ಸಮಾಖ್ಯಾಪ್ರಮಾಣಗಳಿಂದ ಹಿಂದೆ ಹೇಳಿದ ಪ್ರಕಾರ ಎಂದರ್ಥ. ಭಾಷ್ಯದಲ್ಲಿ "ವಾಯುಶ್ಚ" ಎಂಬುದಾಗಿ ಹೇಳಿರುತ್ತಾರೆ. ಇಲ್ಲಿರುವ "ಚ" ಶಬ್ದವು ಕೇವಲ ವಾಯುವನ್ನು ಮಾತ್ರ ಜೀವನ ಜೊತೆಗೆ ಸಮುಚ್ಚಯ ಮಾಡುತ್ತಿದೆ ಎಂಬ ಭ್ರಮವನ್ನು ನಿರಾಕರಿಸಲು "ಚ ಶಬ್ದಾತ್" ಎಂಬ ಟೀಕೆಯು ಹೊರಟಿದೆ. ಕೇವಲ ವಾಯುವನ್ನಷ್ಟೇ "ಚ" ಶಬ್ದವು ಸಮುಚ್ಚಯ ಮಾಡುತ್ತಿಲ್ಲ ಹೊರತಾಗಿ ಹಿಂದೆ ಹೇಳಲ್ಪಟ್ಟ ಹೇತುಗಳನ್ನು ಮತ್ತು 'ನಞ್' ಎಂಬುದನ್ನು ಸಮಾಕರ್ಷ ಮಾಡುವುದಕ್ಕಾಗಿಯೂ "ಚ" ಶಬ್ದವು ಹೇಳಲ್ಪಟ್ಟಿದೆ. ಚಂದ್ರಿಕಾ ಗ್ರಂಥದಲ್ಲಿ ಹೀಗೆ ವ್ಯಾಖ್ಯಾನಿಸಿರುತ್ತಾರೆ.

**भावदीपः – हेतुभिरिति बहुवचनार्थं व्यनक्ति – आत्मशब्द इति ।। विष्णावेवाऽत्मशब्दस्य रूढत्वान्न शिवादिकान् । 'श्रुतिर्वक्ति' इति एतदधिकरणानुव्याख्याने । तथा आत्मशब्दं यतो हेतुं कृत्वा जीवं न्यवारयत् । स्वशब्दात्**

प्राणभृच्चैव नोक्त इत्येव वेदराट् इति फलाध्यायाद्यपादीयानुव्याख्याने । तथा स्वशब्दपर्यायात्मशब्दादिति तत्त्वनिर्णये । आत्मशब्दादिति हेतोश्चानुकर्षणार्थ इति सुधायां चात्मशब्दमात्रानुकर्षोक्तिस्तु तत्र तन्मात्रोपयोगाद्वा वर्णकान्तराभिप्रायेण वेति ध्येयम् ।

"ಹೇತುಭಿಃ" ಎಂಬುದಾಗಿ ಬಹುವಚನವನ್ನು ಭಾಷ್ಯದಲ್ಲಿ ಪ್ರಯೋಗಿಸಿದ್ದಾರೆ. ಅದರ ಅರ್ಥವನ್ನು ಆತ್ಮಶಬ್ದ ಎಂಬ ವಾಕ್ಯದಿಂದ ವಿವರಿಸುತ್ತಿದ್ದಾರೆ.

ವಿಷ್ಣುವಿನಲ್ಲೇ ಆತ್ಮಶಬ್ದವು ರೂಢವಾಗಿರುವುದರಿಂದ ಶ್ರುತಿಯು ರುದ್ರಾದಿಗಳನ್ನು ಹೇಳಿರುವುದಿಲ್ಲ. ಹೀಗೆ ಈ ಅಧಿಕರಣದ ಅನುವ್ಯಾಖ್ಯಾನದಲ್ಲಿ ಆತ್ಮಶಬ್ದವನ್ನಷ್ಟೇ ಸೂತ್ರದಲ್ಲಿ ಅನುಕರ್ಷ ಮಾಡಿದ್ದಾರೆ. ಮತ್ತು "ಆತ್ಮಶಬ್ದಂ ಯತೋ ಹೇತುಂ ಕೃತ್ವಾ ಜೀವಂ ನ್ಯವಾರಯತ್ ಸ್ವಶಬ್ದಾತ್ ಪ್ರಾಣಭೃಚ್ಚೈವ ನೋಕ್ತ ಇತ್ಯೇವ ವೇದರಾಟ್" - ಆತ್ಮಶಬ್ದವೆಂಬ ಹೇತುವಿನಿಂದ ಜೀವನನ್ನು ನಿರಾಕರಿಸಲಾಗಿದೆ ಎಂಬುದಾಗಿ ಫಲಾಧ್ಯಾಯದ ಮೊದಲನೇ ಪಾದದ ಅನುವ್ಯಾಖ್ಯಾನದಲ್ಲಿ ಹೇಳಿರುತ್ತಾರೆ. ಇದರಂತೆ "ಸ್ವಶಬ್ದಪರ್ಯಾಯಆತ್ಮಶಬ್ದಾತ್" ಎಂದು "ಚ" ಶಬ್ದಕ್ಕೆ ಪರ್ಯಾಯಪದವಾದ ಆತ್ಮಶಬ್ದದಿಂದ ಎಂಬುದಾಗಿ ತತ್ವನಿರ್ಣಯದಲ್ಲಿಯೂ ಹೇಳಿದ್ದಾರೆ. ಇದರಂತೆ "ಆತ್ಮಶಬ್ದಾದಿತಿ ಹೇತೋಶ್ಚಾನುಕರ್ಷಣಾರ್ಥಃ" 'ಆತ್ಮಶಬ್ದಾತ್' ಎಂಬುದನ್ನು ಅನುಕರ್ಷ ಮಾಡುವುದಕ್ಕಾಗಿ ಎಂಬುದಾಗಿ ಸುಧೆಯಲ್ಲಿಯೂ ಸಹ ಹೇಳಿದ್ದಾರೆ. ಹೀಗೆ ಎಲ್ಲೆಡೆಯೂ ಕೇವಲ ಆತ್ಮಶಬ್ದದ ಅನುಕರ್ಷವಷ್ಟೇ ವಿವಕ್ಷಿತವಾಗಿರುವಾಗ ಪ್ರಕೃತ ಟೀಕೆಯಲ್ಲಿ "ಮುಕ್ತೋಪಸೃಪ್ಯತ್ವ", "ಅತತ್ ಶಬ್ದ", "ತತ್ಪ್ರಾಕಶ್ರುತಿ" ಇವುಗಳನ್ನೆಲ್ಲ ಅನುಕರ್ಷ ಮಾಡಿಕೊಳ್ಳಬೇಕೆಂದು ಹೇಳಿದ್ದು ಹೇಗೆ ಯುಕ್ತವಾಗುತ್ತದೆ? ಎಂಬ ಪ್ರಶ್ನೆ ಸಹಜವಾಗಿ ಬರುತ್ತದೆ. ಆದರೆ ಅನುವ್ಯಾಖ್ಯಾನಾದಿಗಳಲ್ಲಿ ಆತ್ಮಶಬ್ದಕ್ಕಷ್ಟೇ ಉಪಯೋಗವಿರುವುದರಿಂದ ಹಾಗೆ ಹೇಳಿದ್ದಾರೆ. ಅಥವಾ ಇದು ಮತ್ತೊಂದು ವ್ಯಾಖ್ಯಾನವೆಂದೂ ಸಹ ತಿಳಿಯಬಹುದು.

**भावदीपः – तत्प्रापकेति ।।** अतच्छब्दादित्यस्य रुद्रप्रधानवाचिशब्दाभावादित्यर्थोक्त्या तत्प्रापकरुद्रादिशब्दानांविष्णुपरत्वस्यार्थसिद्धत्वात् सोऽपि सौत्रो हेतुः । अत एवातच्छब्दात् प्राणभृच्चेत्येतद्भाष्य एव रुद्रादिशब्दानां विष्णुपरत्वमुक्तमिति भावः ।

ಟೀಕೆಯಲ್ಲಿ "ತತ್ಪ್ರಾಪಕಶ್ರುತೀನಾಂ" ಎಂದು ಹೇಳಿದ್ದಾರೆ. ಅಂದರೆ ರುದ್ರಾದಿಪ್ರಾಪಕವಾದ ಶ್ರುತಿಗಳೂ ಸಹ ಹೇತುವಾಗಿವೆ. ಏಕೆಂದರೆ "ಅತಚ್ಛಬ್ದಾತ್" ಎಂಬ ಸೂತ್ರದ ಭಾಗದಿಂದ ರುದ್ರ ಪ್ರಧಾನ ಮೊದಲಾದವುಗಳನ್ನು ಪ್ರತಿಪಾದಿಸುವ ಶಬ್ದಗಳು ಇಲ್ಲದ ಕಾರಣ ಎಂಬರ್ಥವನ್ನು ಹೇಳಲಾಗಿದೆ. ಆದ್ದರಿಂದ ರುದ್ರ ಪ್ರಾಪಕವಾದ ಆ ಎಲ್ಲ ಶಬ್ದಗಳು ವಿಷ್ಣುಪರವೆಂಬರ್ಥವು ಹಿಂದಿನ ಸೂತ್ರದಿಂದಲೇ ಸಿದ್ಧವಾಗಿದೆ.

ಪರಿಪೂರ್ಣಚಂದ್ರಿಕಾ

ಆದ್ದರಿಂದ ತತ್ಪ್ರಾಪಕಶ್ರುತಿ ಎಂಬುದೂ ಸಹ ಸೂತ್ರದಲ್ಲಿ ವಿವಕ್ಷಿತವಾದ ಹೇತುವೇ ಆಗುತ್ತದೆ. ಆದ್ದರಿಂದಲೇ 'ಅತತ್ ಶಬ್ದಾತ್' 'ಪ್ರಾಣಭೃಚ್ಚ' ಎಂಬ ಸೂತ್ರಗಳ ಭಾಷ್ಯದಲ್ಲಿಯೇ ರುದ್ರಾದಿ ಶಬ್ದಗಳಿಗೆ ವಿಷ್ಣುಪರತ್ವವನ್ನು ಹೇಳಿರುತ್ತಾರೆ ಎಂದು ತಿಳಿಯಬೇಕು.

**भावदीपः** – इत्यादिश्रुतेरिति ।। वायुसमाख्यायाः एवं नानाविधैः शब्दैरिति 'अन्यनाम्नां गतिर्विष्णुः' इति चोक्तदिशा महायोगविद्वद्रूढिभ्यां विष्णुपरत्वेनेत्यर्थः ।

ವಾಯುಶ್ರುತಿಯ ಸಮಾಖ್ಯೆಯನ್ನು ಈ ಹಿಂದೆ "ಏವಂ ನಾನಾವಿಧೈಃ ಶಬ್ದೈಃ" ಎಂಬುದಾಗಿ ಮತ್ತು "ಅನ್ಯನಾಮ್ನಾಂ ಗತಿರ್ವಿಷ್ಣುಃ" ಎಂಬುದಾಗಿಯೂ ಮಾಹಾಯೋಗ ಹಾಗೂ ವಿದ್ವದ್ರೂಢಿಗಳಿಂದ ವಿಷ್ಣು ಪರವೆಂದು ಸಮರ್ಥಿಸಲಾಯಿತು ಆದ್ದರಿಂದ ಎಂದರ್ಥ.

**भावदीपः** – यद्यपि बृहदारण्यके पञ्चमे तच्च याज्ञवल्क्यसूत्रम् 'अविद्वान् तं चान्तर्यामिणं ब्रह्म गवीरुद्रजसे' इति । 'वेद वा अहं गौतम सूत्रं तं चान्तर्यामिणम्' इति च सूत्रान्तर्यामिणोर्द्वयोरप्युक्त्या 'स्यूतं जगदिदं यस्मिन् सूत्रं वायुरसौ स्मृतः' इति तद्भाष्योक्त्या च वायुशब्दो वायुपर इति प्रतीयते ।

ವಸ್ತುತಃ ಬೃಹದಾರಣ್ಯಕೋಪನಿಷತ್ತಿನ ಪಂಚಮಾಧ್ಯಾಯದಲ್ಲಿ ತಚ್ಚೇತ್ಥಂ ಯಾಜ್ಞಾವಲ್ಕ್ಯ-ಸೂತ್ರಮವಿದ್ವಾನ್ ತಂ ಚಾಂತರ್ಯಾಮಿಣಂ ಬ್ರಹ್ಮ ಗವೀರುದ್ರಗಸೇ ಇತಿ । ವೇದ ವಾ ಅಹಂ ಗೌತಮ ಸೂತ್ರಂ ತಂ ಚಾಂತರ್ಯಾಮಿಣಮಿತಿ ಚ ಸೂತ್ರಾಂತರ್ಯಾಮಿಣೋರ್ದ್ವಯೋರಪ್ಯುಕ್ತ್ಯಾ ಸ್ಯೂತಂ ಜಗದಿದಂ ಯಸ್ಮಿನ್ ಸೂತ್ರಂ ವಾಯುರಸೌ ಸ್ಮೃತಃ ಎಂಬುದಾಗಿ ಹೇಳಿರುವುದರಿಂದ ಬೃಹದಾರಣ್ಯಕ ಭಾಷ್ಯದ ಮಾತಿನಂತೆ ವಾಯುಶಬ್ದವು ವಾಯುಪರವೆಂದೇ ತಿಳಿಯುತ್ತದೆ.

**भावदीपः** – तथापि 'तं चापि यमयेद् यस्मादन्तर्यामी हरिः स्मृतः' इति तद्भाष्योक्त्यैव पादान्त्यप्राणनयन्यायेन वाय्वन्तर्यामिविवक्षया विष्णुपरत्वेनेत्युक्तम् । यथोत्तरनये प्राणपदस्य विष्णुपरत्वं वक्ष्यति । नचैतदर्थद्वयं विरुद्धम् अन्तर्यामिविवक्षयेत्यादि ।

ಆದರೂ ಸಹ "ತಂ ಚಾಪಿ ಯಮಯೇದ್ಯಸ್ಮಾದಂತರ್ಯಾಮೀ ಹರಿಃ ಸ್ಮೃತಃ" ಎಂದು ಅದೇ ಅಧಿಕರಣದ ಭಾಷ್ಯದಲ್ಲಿ ವಾಯುಶಬ್ದದಿಂದ ಅಂತರ್ಯಾಮಿಯಾದ ಭಗವಂತನು ಮುಖ್ಯವಾಗಿ ಪ್ರತಿಪಾದ್ಯನಾಗಿದ್ದಾನೆಂದು ಹೇಳಿರುತ್ತಾರೆ. ಅಷ್ಟೇ ಅಲ್ಲದೆ ಅಂತಿಮಪ್ರಾಣಾಧಿಕರಣದ ನ್ಯಾಯದಿಂದ ಅಂತರ್ಯಾಮಿವಿವಕ್ಷೆಯಿಂದ ಹಾಗೆ ವಾಯುಪರವಾಗಿ ಹೇಳಿರಬಹುದೆಂದು ತಿಳಿಯಬೇಕು. ಮುಂದಿನ ಅಧಿಕರಣದಲ್ಲಿ ಪ್ರಾಣಪದವು ವಿಷ್ಣುಪರವೆಂದು ಹೇಗೆ ಹೇಳುತ್ತಾರೋ ಹಾಗೆ. ಈ ರೀತಿಯಾಗಿ ಮುಂದಿನ ಅಧಿಕರಣದಲ್ಲಿ 'ನಚ' ಏತದರ್ಥದ್ವಯಂ ವಿರುದ್ಧಮ್ ಅಂತರ್ಯಾಮಿವಿವಕ್ಷಯಾ' ಎಂದು ಒಂದೇ

ಪ್ರಾಣಪದಕ್ಕೆ ಎರಡು ಅರ್ಥಗಳನ್ನು ಹೇಳುವುದು ವಿರುದ್ಧವಲ್ಲ ಅಂತರ್ಯಾಮಿಯೆಂದು ವಿವಕ್ಷಿಸಿದ್ದರಿಂದ. ಇತ್ಯಾದಿಯಾಗಿ ಹೇಳುತ್ತಾರೆ.

**भावदीपः** – वक्ष्यते च 'जीवमुख्यप्राणलिङ्गाद्' इति चेत्तद् व्याख्यातमिति सूत्रेऽपि । 'आकाश एव तदोतं च' इति श्रुतेस्तु आकाशस्य प्रकृतित्वेऽपि 'अम्बरान्तधृतेः' इति अक्षरनये 'पृथिव्यादि प्रकृत्यन्तम्' इति स्मृत्या प्रकृतिद्वारा सर्वस्याक्षराख्यविष्ण्वाश्रितत्वस्यैवाग्रेऽभिदानाद् विष्णोर्द्युभ्वाद्यायतनत्वपरत्वेन सावकाशत्वं स्पष्टमिति भावः ।। **इत्यत आहेति** ।। अजायमान इति वाक्यं च विष्णुपरं पुरुषसूक्तस्थत्वात्तस्य च वैष्णवत्वं प्रागेव साधितमिति भावः ।। ४ ।

'ಜೀವಮುಖ್ಯಪ್ರಾಣಲಿಂಗಾತ್' ಎಂಬ ಸೂತ್ರದಲ್ಲಿಯೂ ಸಹ ಅದನ್ನು ಮುಂದೆ ಹೇಳುತ್ತಾರೆ. ಆಕಾಶ ಏವ ತದೋತಂ ಚ ' ಎಂಬ ಶ್ರುತಿಯಲ್ಲಿಯೂ ಸಹ ಆಕಾಶಶಬ್ದವು ಪ್ರಕೃತಿಪರವಾಗಿರಬಹುದು. ಆದರೂ ಸಹ 'ಅಂಬರಾಂತಧೃತೇಃ' ಎಂಬುದಾಗಿ ಅಕ್ಷರಾಧಿಕರಣದಲ್ಲಿ "ಪೃಥಿವ್ಯಾದಿಪ್ರಕೃತ್ಯಂತಂ" ಎಂಬ ಸ್ಮೃತಿಯಿಂದ ಪ್ರಕೃತಿಯ ಮುಖಾಂತರ ಎಲ್ಲವೂ ಅಕ್ಷರನೆಂಬ ವಿಷ್ಣುವಿನಲ್ಲಿ ನೆಲಸಿದೆ ಎಂದು ಮುಂದೆ ಹೇಳುತ್ತಾರೆ. ಆದ್ದರಿಂದ ವಿಷ್ಣುವಿಗೆ ದ್ಯುಭ್ವಾದ್ಯಾಯತನಪರತ್ವವು ಇರುವುದರಿಂದ ಸಾವಕಾಶವಾಗಿದೆ ಎಂಬುದು ಸ್ಪಷ್ಟವಾಗಿದೆ.

ಟೀಕೆಯಲ್ಲಿರುವ "ಇತ್ಯತ ಆಹ" ಇತ್ಯಾದಿ ಪದಗಳ ಅರ್ಥ ಹೀಗಿದೆ - "ಅಜಾಯಮಾನ" ಎಂಬ ವಾಕ್ಯವೂ ಸಹ ವಿಷ್ಣುಪರವಾಗಿದೆ. ಏಕೆಂದರೆ ಪುರುಷಸೂಕ್ತದಲ್ಲಿಯೂ ಈ ವಿಚಾರವು ಪ್ರಸಕ್ತವಾಗಿರುವುದರಿಂದ ಇದು ವಿಷ್ಣುಪ್ರತಿಪಾದಕವಾಗಿದೆ ಎಂದು ಈ ಹಿಂದೆ ಸಾಧಿಸಿದ್ದೇವೆ.

**वाक्यार्थमञ्जरी** – ॐ **प्राणभृच्च** ॐ ।। आत्मशब्दमुख्यप्राप्यत्वादितच्छब्देभ्यः जीवमुख्यप्राणौ च नसर्वाश्रयावित्यर्थः ।। ४ ।।

## ಜೀವ-ಬ್ರಹ್ಮರಿಗೆ ಅಭೇದವನ್ನು ಹೇಳಬಾರದು

**सू —ॐ ॥ भेदव्यपदेशात् ॥ ॐ ॥ ५ ॥**

'ಜುಷ್ಟಂ ಯದಾ ಪಶ್ಯತ್ಯನ್ಯಮೀಶಮ್' ಎಂಬ ಶ್ರುತಿಯಲ್ಲಿ ಜೀವಬ್ರಹ್ಮರಿಗೆ ಭೇದವನ್ನು ಹೇಳಿರುವುದರಿಂದಲೂ ಅವರಿಬ್ಬರಿಗೆ ಐಕ್ಯವನ್ನು ಹೇಳಬಾರದು.

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका** — 'अन्यमीशम्' इति जीवेशयोर्भेदोक्तेः न तयोरैक्यमित्यर्थः ॥

'ಅನ್ಯಮೀಶಮ್' ಎಂಬುದಾಗಿ ಜೀವ ಹಾಗೂ ಪರಮಾತ್ಮರಿಗೆ ಭೇದವನ್ನು ಹೇಳಿರುವುದರಿಂದ ಅವರಿಬ್ಬರಿಗೆ ಐಕ್ಯವನ್ನು ಹೇಳಬಾರದು.

**श्रीमदानन्दतीर्थभगवत्पादाचार्यविरचित-**

## ब्रह्मसूत्रभाष्यम्

**भाष्यम् — न चैक्यं वाच्यम् । 'जुष्टं यदा पश्यत्यन्यमीशमस्य महिमानम्' (मुं.३-१-२) इति भेदव्यपदेशात् ॥५॥**

ಅನುವಾದ - ಈ ಪ್ರಕರಣದಲ್ಲಿ ಜೀವ ಮತ್ತು ಭಗವಂತನಿಗೆ ಐಕ್ಯವು ವಿವಕ್ಷಿತವೆಂದು ಹೇಳುವುದು ಸರಿಯಲ್ಲ. ಏಕೆಂದರೆ ಪೂಜೆಗೆ ಅರ್ಹನಾದ ಪರಮಾತ್ಮನನ್ನು ಯಾವಾಗ ತನ್ನಿಂದ ಭಿನ್ನನನ್ನಾಗಿ, ಒಡೆಯನನ್ನಾಗಿ ನೋಡುತ್ತಾನೋ ಆವಾಗ ಅಂತಹ ಪರಮಾತ್ಮನ ಮಹಿಮೆಯನ್ನು ತಿಳಿದು ಶೋಕಸಾಗರವನ್ನು ದಾಟುತ್ತಾನೆ. ಹೀಗೆ ಜೀವೇಶ್ವರರ ಭೇದವು ಉಪದೇಶಿಸಿರುವುದರಿಂದ.

ಪ್ರತಿಪದಾರ್ಥ -- ಜೀವನೇ ದ್ಯುಭ್ವಾದ್ಯಾಯತನನಾಗಲಿ; ಜೀವ ಹಾಗೂ ಪರಮಾತ್ಮರಿಗೆ ಐಕ್ಯವಿರುವುದರಿಂದ ಆತ್ಮಶಬ್ದಾದಿಗಳ ವಿರೋಧವೂ ಸಹ ಬರುವುದಿಲ್ಲವಲ್ಲವೇ ಎಂಬ ಆಶಂಕೆಯನ್ನು ಪರಿಹರಿಸುವುದಕ್ಕಾಗಿ ಸೂತ್ರವನ್ನು ಪಠಿಸಿ ವ್ಯಾಖ್ಯಾನಿಸುತ್ತಿದ್ದಾರೆ.

ಐಕ್ಯಂ = ಜೀವೇಶ್ವರರ ಅಭೇದವನ್ನು, ನಚ ವಾಚ್ಯಂ = ಹೇಳಬಾರದು. ಏಕೆಂದರೆ ಜುಷ್ಟಂ = ಪೂಜೆಗೆ ಅರ್ಹನಾದ ಪರಮಾತ್ಮನನ್ನು, ಯದಾ = ಯಾವಾಗ, ಅನ್ಯಂ =

ತನ್ನಿಂದ ಭಿನ್ನನ್ನಾಗಿ, ಈಶಂ = ಒಡೆಯನನ್ನಾಗಿ, ಪಶ್ಯತಿ = ನೋಡುತ್ತಾನೋ, ತದಾ = ಆವಾಗ, ಅಸ್ಯ = ಈ ಪರಮಾತ್ಮನ, ಮಹಿಮಾನಂ = ಮಹಿಮೆಯನ್ನು ತಿಳಿದು, ವೀತಶೋಕಃ = ಶೋಕರಹಿತನಾಗುತ್ತಾನೆ. ಇತಿ = ಹೀಗೆ, ಭೇದವ್ಯಪದೇಶಾತ್ = ಜೀವೇಶ್ವರರ ಭೇದದ ಉಪದೇಶವಿರುವುದರಿಂದ.[१]

## श्रीपद्मनाभतीर्थविरचितसत्तर्कदीपावळ्याम्:

### ।। ॐ भेदव्यपदेशात् ॐ।।

**जुष्टं यदा पश्यत्यन्यमीशम् इति ।। जीवात् द्युभ्वाद्याश्रयस्यात्मनो भेदव्यपदेशादपि नासौ जीव इत्याह – भेदेति ।। अनेन यत् पराभिमतं जीवेशैक्यं तदपि निरस्तं भवति ।।**

ಭಾಷ್ಯದಲ್ಲಿ 'ಜುಷ್ಟಂ ಯದಾ ಪಶ್ಯತ್ಯನ್ಯಮೀಶಮ್' ಎಂಬ ಶ್ರುತಿಯನ್ನು ಜೀವಬ್ರಹ್ಮರ ಭೇದವಿಷಯದಲ್ಲಿ ಉಲ್ಲೇಖಿಸಿದ್ದಾರೆ. ಅಂದರೆ ಜೀವನಿಗಿಂತ ದ್ಯುಭ್ವಾದ್ಯಾಶ್ರಯನಾದ ಆತ್ಮನಿಗೆ ಭೇದವನ್ನು ಹೇಳಿರುವ ಕಾರಣ ಜೀವನೇ ದ್ಯುಭ್ವಾದ್ಯಾಶ್ರಯನಾಗಲು ಸಾಧ್ಯವಿಲ್ಲವೆಂದರ್ಥ. ಇದನ್ನು 'ಭೇದವ್ಯಪದೇಶಾತ್' ಎಂಬ ಮಾತಿನಿಂದ ಸ್ಪಷ್ಟಪಡಿಸಿದ್ದಾರೆ. ಇದರಿಂದ ಅದ್ವೈತಿಗಳಿಗೆ ಅಭಿಪ್ರೇತವಾದ ಜೀವಬ್ರಹ್ಮೈಕ್ಯವನ್ನು ನಿರಾಕರಿಸಿದಂತಾಯಿತು.

---

(१) **भाष्यदीपिका** – ननु किं जीवलिङ्गस्य विष्णुगतत्वप्रतिपादनायासेन, लिङ्गबलाज्जीवस्यैव द्युभ्वाद्यायतनत्वं स्यात् । न चोक्तात्मशब्दादिहेतुविरोधः । जीवेशाभेदाभिप्रायेण जीवेऽप्यात्मशब्दाद्युक्तिसम्भवादित्याशङ्कां परिहरत्सूत्रं पठित्वा व्याचष्टे – भेदेति ।। नैक्यं वाच्यमिति ३।। जीवेश्वरयोरत्राभिप्रेतमिति च शेषः ४ । अनेन सूत्रे नानुमानमित्यतो नञनुवर्तनीयः । स च हेतुगतभेदप्रतियोगिना संयोज्य इत्युक्तं भवति । चशब्दो जीवेशैक्यप्रयुक्तात्मशब्दवाच्यतैतत्प्रकरणबोध्यताऽपि नेति समुच्चयार्थः । कोऽसौ व्यपदेश इत्यत आह – जुष्टमिति ।। इति भेदव्यपदेशादिति ।। इति भेदश्रुतेरित्यर्थः । अनेन – 'जुष्टम्' इति वाक्ये 'पश्यति' इति दर्शनकर्तृत्वेन प्रकृतजीवस्य ईशपदोक्तेश्च ईश्वराद्भेदोक्तेः न तयोरैक्यमत्राभिप्रेतमिति वाच्यमिति सूत्रार्थ उक्तो भवति । श्रुतिस्त्वानन्दमयनये व्याकृता ।

**तत्वप्रकाशिका –**

**।। ॐ भेदव्यपदेशात् ॐ।।**

**ननु किं जीवलिङ्गस्य विष्णुपरत्वप्रतिपादनायासेन । जीवस्यैव द्युभ्वाद्यायतनत्वं किं न स्यात्? न चोक्तहेतुविरेधः । जीवेशाभेदाभिप्रायेण जीवेऽप्यात्मशब्दाद्युक्ति-सम्भवादित्याशङ्कां परिहरत् सूत्रं पठित्वा व्याचष्टे – भेदेति ।। नैक्याभिप्रायेण जीव एवाऽत्मशब्दादिप्रयोगोऽत्रेति वाच्यम् । अत्रैवान्यमीशमिति जीवेशभेदव्यपदेशादित्यर्थः ।।५।।**

ಬಹುಧಾ ಜಾಯಮಾನತ್ವವೆಂಬ ಜೀವಲಿಂಗವು ವಿಷ್ಣುಪರವಾಗುತ್ತದೆಂದು ಪ್ರತಿಪಾದಿಸಲು ಅಷ್ಟೊಂದು ಕಷ್ಟಪಡುವ ಅವಶ್ಯಕತೆ ಇರುವುದಿಲ್ಲ. ಜೀವನಿಗೆ ದ್ಯುಭ್ವಾದ್ಯಾಯತನತ್ವವನ್ನು ಹೇಳುವುದರಿಂದಲೇ ಸುಲಭವಾಗಿ ಸಮಸ್ಯೆಯು ಪರಿಹಾರವಾಗುತ್ತದೆ. ಹಾಗಾದರೆ ಹಿಂದೆ ಹೇಳಿರುವ ಆತ್ಮಶ್ರುತಿ ಮೊದಲಾದವುಗಳ ವಿರೋಧ ಬರುತ್ತದಲ್ಲವೇ ಎಂಬ ಶಂಕೆಗೆ ಅವಕಾಶವಿಲ್ಲ. ಏಕೆಂದರೆ ಜೀವ ಹಾಗೂ ಈಶರಿಗೆ ಅಭೇದವೇ ಇರುತ್ತದೆ. ಆದ್ದರಿಂದ ಬ್ರಹ್ಮನಲ್ಲಿ ಬರುವ ಆತ್ಮಶ್ರುತಿಯು ಜೀವನಲ್ಲಿಯೂ ಸಹ ಸಂಭವಿಸುತ್ತದೆ. ಈ ಆಶಂಕೆಯನ್ನು ಪರಿಹರಿಸುವುದಕ್ಕಾಗಿ ಸೂತ್ರವನ್ನು ಪಠಿಸಿ, "ಭೇದ" ಇತ್ಯಾದಿಯಾಗಿ ವ್ಯಾಖ್ಯಾನಿಸುತ್ತಿದ್ದಾರೆ.

ಇಲ್ಲಿ ಜೀವ ಹಾಗೂ ಈಶ್ವರನಿಗೆ ಐಕ್ಯವಿರುವುದರಿಂದ ಜೀವನಲ್ಲಿ ಆತ್ಮಶಬ್ದಪ್ರಯೋಗವಿದೆಯೆಂದು ಹೇಳಬಾರದು. ಏಕೆಂದರೆ ಇದೇ ಶ್ರುತಿಯಲ್ಲಿ ಅನ್ಯಮೀಶಮ್' ಎಂಬುದಾಗಿ ಜೀವ ಹಾಗೂ ಈಶ್ವರರಿಗೆ ಭೇದವನ್ನೇ ಪ್ರತಿಪಾದಿಸಲಾಗಿದೆ.

**भावदीपः –** ॐ भेदव्यपदेशात् ॐ ।। उक्तहेतूनां सत्त्वात् तद्विरोधेन शङ्कानर्हमेकत्वं कथमाशङ्क्य निरस्यत इत्यतो नचैकत्वमिति भाष्यं व्याचष्टे – नैक्येति ।। अत्रैवेति ।। एतत्प्रकरण एवेत्यर्थः ।। श्रुत्यर्थस्तु सर्वसेव्यं जीवादन्यं तदेतत् सत्यमित्यादिप्रागुक्तप्रकारेणास्य महिमानं च यदा पश्यति तदा मुक्तो भवतीत्यानन्दमयनय एवोक्त इति भावः । विशेषणभेदेति सूत्रे तु अर्थान्तरमुपेत्य रुद्रादन्यत्वपरत्वेन व्याख्यानं कृतम् ।। ५ ।।

ಓಂ ಭೇದವ್ಯಪದೇಶಾತ್ ಓಂ

ಹಿಂದೆ ಹೇಳಲ್ಪಟ್ಟ ಹೇತುಗಳೆಲ್ಲವೂ ವಿಷ್ಣುವಿನಲ್ಲಿಯೇ ಇರುತ್ತವೆ. ಆದ್ದರಿಂದ ಅವುಗಳ ವಿರೋಧದಿಂದ ಜೀವನಲ್ಲಿ ದ್ಯುಭ್ವಾದ್ಯಾಯತನತ್ವವನ್ನು ಶಂಕಿಸಲೇ ಸಾಧ್ಯವಾಗದು ಹೀಗಿರುವಾಗ ಜೀವಪಕ್ಷವನ್ನು ಅವಲಂಬಿಸಿ ದ್ಯುಭ್ವಾದ್ಯಧಿಕರಣ (೧-೩-೧)

ಹೇಗೆ ಆಶಂಕಿಸುತ್ತಿದ್ದಿರೀ? ಎಂಬ ಪ್ರಶ್ನೆಗೆ "ನಚ" ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. ಶಂಕೆಯನ್ನು ಪರಿಹರಿಸುವುದಕ್ಕಾಗಿ "ನ ಚೈಕತ್ವಂ" ಎಂಬ ಭಾಷ್ಯವನ್ನು ವ್ಯಾಖ್ಯಾನಿಸುತ್ತಿದ್ದಾರೆ "ನೈಕ್ಯಾಭಿಪ್ರಾಯೇಣ" ಟೀಕಾ ವಾಕ್ಯದಿಂದ. "ಅತ್ರೈವ" ಎಂಬ ಪದಕ್ಕೆ ಈ ಪ್ರಕರಣದಲ್ಲಿ ಎಂದರ್ಥ.

ಶ್ರುತ್ಯರ್ಥಹೀಗಿದೆ - ಜುಷ್ಟಂ = ಎಲ್ಲರಿಂದ ಸೇವ್ಯನಾದ, ಮಹಿಮಾನಾಂ = ಜೀವಾದನ್ಯಂ ತದೇತತ್ಸತ್ಯಂ ಇತ್ಯಾದಿಯಾಗಿ ಹಿಂದೆ ಹೇಳಿದ ಪ್ರಕಾರವಾಗಿ ಇವನ ಮಹಿಮೆಯನ್ನು, ಯದಾ= ಯಾವಾಗ, ಪಶ್ಯತಿ = ನೋಡುತ್ತಾನೋ, ತದಾ = ಆವಾಗ, ಮುಕ್ತೋ ಭವತಿ = ಮೋಕ್ಷವನ್ನು ಹೊಂದುತ್ತಾನೆ. ಹೀಗೆ ಆನಂದಮಯಾಧಿಕರಣದಲ್ಲಿ ಈ ಶ್ರುತ್ಯರ್ಥವು ಸ್ಪಷ್ಟವಾಗಿ ನಿರೂಪಿತವಾಗಿದೆ. "ವಿಶೇಷಣಭೇದಃ" ಎಂಬ ಸೂತ್ರದಲ್ಲಿ ಈ ಶ್ರುತಿಗೆ ಮತ್ತೊಂದು ಅರ್ಥವನ್ನು ಅಂಗೀಕರಿಸಿ ರುದ್ರನಿಗಿಂತ ಭಗವಂತನು ಬಿಂಬನಾಗಿದ್ದಾನೆ ಎಂಬ ಅರ್ಥವನ್ನು ಅಂಗೀಕರಿಸಿ ವ್ಯಾಖ್ಯಾನಿಸಿದ್ದಾರೆ.

**भावदीपः – अन्यमीशमिति ।। जीवेशभेदेति ।। पश्यतीति सन्निहितो जीव एव यदि न्यायेनान्यत्वप्रतियोगितयाऽवेति । 'जीवादन्यः स्वतन्त्रो यः' इत्याथर्वणभाष्योक्तेरिति भावः ।**

"ಅನ್ಯಮೀಶಂ" ಎಂದು ಜೀವೇಶಭೇದವನ್ನು ಹೇಳಿದ್ದಾರೆ. "ಜುಷ್ಟಂ ಯದಾ ಪಶ್ಯತಿ" ಎಂಬಲ್ಲಿ ಸನ್ನಿಹಿತನಾದ ಜೀವನೇ ನ್ಯಾಯದಿಂದ ಅನ್ಯತ್ವದಲ್ಲಿ ಪ್ರತಿಯೋಗಿ ಆಗಿದ್ದಾನೆಂದು ಅನ್ವಯವಾಗುತ್ತದೆ. ಏಕೆಂದರೆ "ಜೀವಾದನ್ಯಃ ಸ್ವತಂತ್ರೋ ಯಃ" ಎಂಬುದಾಗಿ ಆಥರ್ವಣೋಪನಿಷತ್‌ಭಾಷ್ಯದಲ್ಲಿ ಹೇಳಿರುವುದರಿಂದ ಎಂದು ಅಭಿಪ್ರಾಯ.

**वाक्यार्थमञ्जरी – ॐ भेदव्यपदेशात् ॐ ।। 'अन्यमीशम्' इतीहैव जीवब्रह्मभेदव्यपदेशान्न तयोरैक्यमित्यर्थः ।। ५ ।।**

## ಬ್ರಹ್ಮಪ್ರಕರಣದಲ್ಲಿರುವ ಶಬ್ದಗಳಿಂದ ಬ್ರಹ್ಮನೇ ಪ್ರತಿಪಾದ್ಯನು

**सू – ॐ ॥ प्रकरणात् ॥ ॐ ॥ ६ ॥**

'ದ್ವೇ ವಿದ್ಯೇ ವೇದಿತವ್ಯೇ' ಎಂದು ಪ್ರಕರಣವು ಪ್ರಾರಂಭವಾಗಿರುವುದರಿಂದ ಇದು ಬ್ರಹ್ಮಪ್ರಕರಣವೇ ಆಗುತ್ತದೆ. ಆದ್ದರಿಂದ ಬ್ರಹ್ಮನೇ ಇಲ್ಲಿ ಈಶಶಬ್ದದಿಂದ ಪ್ರತಿಪಾದ್ಯನಾಗುತ್ತಾನೆ.

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका –** 'अनश्नन्नन्यो' इत्यादेर्विष्णुप्रकरणत्वात् । अत्र जीवस्य विष्णुभेद एवोच्यते । नत्वन्यस्माद् भेद इत्यर्थः ।

'ಅನಶ್ನನ್ನನ್ಯಃ ಎಂಬ ಆಥರ್ವಣಶ್ರುತಿಯು ವಿಷ್ಣುಪ್ರಕರಣದಲ್ಲಿದೆ. ಇಲ್ಲಿ ಜೀವನಿಗೆ ವಿಷ್ಣುವಿನಿಂದ ಭೇದವೇ ಹೇಳಲ್ಪಟ್ಟಿದೆ. ಮತ್ತೊಬ್ಬನಿಂದ ಭೇದವು ಹೇಳಿರುವುದಿಲ್ಲ.

**भाष्यम् – 'द्वे विद्ये वेदितव्ये' (मुं.१-१-४) इति तस्य ह्येतत् प्रकरणम् ॥६॥**

ಅನುವಾದ - ವಿದ್ಯೆಗಳು ಪರವಿದ್ಯೆ, ಅಪರವಿದ್ಯೆ ಎಂದು ಎರಡು ವಿಧ; ಹೀಗೆ ಪ್ರಸ್ತುತವಾದ ಪ್ರಕರಣವು ಪರವಿದ್ಯಾವಿಷಯನಾದ ವಿಷ್ಣುವಿಗೆ ಮಾತ್ರ ಸಂಬಂಧಪಟ್ಟಿದೆ. ಆದ್ದರಿಂದ ಭೇದವನ್ನು ಹೇಳುವ 'ಅನ್ಯಮೀಶಂ' ಎಂಬ ವಾಕ್ಯದಲ್ಲಿ ಪ್ರತಿಪಾದ್ಯನಾದ ಈಶನೆಂದರೆ ವಿಷ್ಣುವೇ ಆಗಿದ್ದಾನೆ.

ಪ್ರತಿಪದಾರ್ಥ -- ಜೀವನು ಯಾರೋ ಒಬ್ಬ ಒಡೆಯನಿಂದ ಭಿನ್ನನಾಗಿದ್ದಾನೆಂದು ಹೇಳಲಾಗಿದೆ. ಆದರೆ ಪರಮಾತ್ಮನಿಂದ ಜೀವನು ಭಿನ್ನನೆಂದು ಹೇಳಿಲ್ಲವಲ್ಲ ಎಂಬ ಆಶಂಕೆಯನ್ನು ಪರಿಹರಿಸುವುದಕ್ಕಾಗಿ ಸೂತ್ರವನ್ನು ಪಠಿಸಿ ವ್ಯಾಖ್ಯಾನಿಸುತ್ತಿದ್ದಾರೆ.

ವಿದ್ಯೇ = ಬ್ರಹ್ಮವಿದ್ಯೆಯು, ದ್ವೇ = ಎರಡು ವಿಧವಾಗಿ, ವೇದಿತವ್ಯೇ = ತಿಳಿಯಬೇಕು, ಇತಿ = ಹೀಗೆ ಆರಂಭಮಾಡಿ, ತಸ್ಯ ಹಿ = ವಿಷ್ಣುವಿನದ್ದೇ, ಏತತ್ ಪ್ರಕರಣಮ್ = ಈ ಪ್ರಕರಣವೆಂದು ನಿಶ್ಚಯವಾಗುತ್ತದೆ.[१]

---

(१) (१७) नन्वत्र जीवस्य कस्माचिदीशादन्यत्वमुच्यते, न परमात्मनः, अतो न तयोर्भेद इत्याशङ्कां परिहरत्सूत्रमुपन्यस्य व्याचष्टे – प्रकरणादिति ॥१ इतीत्यनन्तरम् 'इत्युपक्रम्याधीतम्' इति शेषः । 'हि' यतः 'एतत्' जुष्टमित्यादिवाक्यजातं यतः 'तस्यैव'

**श्रीपद्मनाभतीर्थविरचितसत्तर्कदीपावळ्याम्ः**

**।। ॐ प्रकरणात् ॐ ।।**

**'द्वे विद्ये वेदितव्ये परा चैवापरा च' 'अथ परा यया तदक्षरमधिगम्यते' इति परविद्याविषयस्य विष्णोः प्रक्रान्तत्वात् । तद्भावाभावात् स एवात्र द्युभ्वाद्याश्रयत्वेनोच्यते नान्य इत्याह – प्रकरणादिति ।।**

'ದ್ವೇ ವಿದ್ಯೇ ವೇದಿತವ್ಯೇ ಪರಾ ಚೈವಾಪರಾ ಚ' 'ಅಥ ಪರಾ ಯಯಾ ತದಕ್ಷರಮಧಿಗಮ್ಯತೇ' ಎಂಬುದಾಗಿ ಪರವಿದ್ಯಾವಿಷಯನಾದ ವಿಷ್ಣುವೇ ಉಪಕ್ರಮದಲ್ಲಿ ಪ್ರಸಕ್ತನಾಗಿದ್ದಾನೆ. ವಿಷ್ಣುವಿಗೆ ಪರವಿದ್ಯಾವಿಷಯತ್ವವನ್ನು ಹೇಳಲು ಯಾವುದೇ ಬಾಧಕಪ್ರಮಾಣಗಳಿಲ್ಲದ ಕಾರಣ ಅಂತಹ ವಿಷ್ಣುವೇ ದ್ಯುಭ್ವಾದ್ಯಾಶ್ರಯನಾಗುತ್ತಾನೆ, ಹೊರತು ಬೇರೆಯವರಲ್ಲವೆಂದು ಪ್ರಕರಣಾತ್ ಎಂಬ ಸೂತ್ರವು ಹೇಳುತ್ತಿದೆ.

**तत्वप्रकाशिका –**

**।। ॐ प्रकरणात् ॐ ।।**

**नन्वत्रजीवस्यकस्माच्चिदीशादन्यत्वमुच्यतेनपरमात्मनोऽतोनतयोभेदइत्याशङ्कां परिहरत् सूत्रमुपन्यस्य व्याचष्टे – प्रकरणादिति ।। नात्र जीवपरमात्मभेदोक्त्यभावः। ईशशब्देनैव परमात्मोक्तेः । तदेव कुतः । 'द्वे विद्ये वेदितव्ये' इति परविद्याविषयवस्तुनोऽत्रारभ्याधीतत्वेनास्य विष्णुप्रकरणत्वादिति भावः ।।६।।**

'ಜುಷ್ಟಂ ಯದಾ ಪಶ್ಯತಿ' ಎಂಬ ಶ್ರುತಿಯಲ್ಲಿ ಈಶಪದವಾಚ್ಯನಾದ ವ್ಯಕ್ತಿಗೂ ಮತ್ತು ಜೀವನಿಗೂ ಭೇದವು ಹೇಳಲ್ಪಟ್ಟಿದೆ; ಹೊರತು ಪರಮಾತ್ಮನಿಗೂ ಮತ್ತು ಜೀವನಿಗೂ ಅಭೇದವು ಹೇಳಲ್ಪಟ್ಟಿಲ್ಲ. ಹೀಗಿರುವಾಗ ಜೀವೇಶಭೇದವು ಶ್ರುತ್ಯುಕ್ತವಾಗಿದೆಯೆಂದು ಹೇಗೆ ಹೇಳುತ್ತೀರಿ? ಎಂಬ ಆಕ್ಷೇಪಕ್ಕೆ ಪರಿಹಾರವನ್ನು ನೀಡುವ ಸೂತ್ರವನ್ನು ಪಠಿಸಿ ವ್ಯಾಖ್ಯಾನಿಸುತ್ತಿದ್ದಾರೆ "ಪ್ರಕರಣಾತ್" ಇತ್ಯಾದಿಯಾಗಿ.

परविद्याविषयस्य परमात्मन एव 'प्रकरणं' नान्यस्येत्येवशब्दार्थः । अनेन स्वप्रकरणात् 'द्वे विद्ये वेदितव्ये' इति परविद्याविषयवस्तुनोऽत्राधीतत्वेन विष्णुप्रकरणत्वात् परमात्मन एव भेदव्यपदेशावगतेः न जीवपरमात्मनोरभेदोऽत्राभिप्रेत इति वाच्यमिति सूत्रयोजना दर्शिता भवति ।

ಈ ಶ್ರುತಿಯಲ್ಲಿ ಜೀವಹಾಗೂ ಪರಮಾತ್ಮರಿಗೆ ಭೇದವು ಹೇಳಿಲ್ಲವೆಂದು ತಿಳಿಯಬಾರದು. ಏಕೆಂದರೆ, ಶ್ರುತಿಯಲ್ಲಿ ಈಶಶಬ್ದದಿಂದ ಪರಮಾತ್ಮನೇ ಪ್ರತಿಪಾದ್ಯನಾಗಿದ್ದಾನೆ. ಇದನ್ನಾದರೂ ಹೇಗೆ ನಿರ್ಣಯಿಸುತ್ತೀರಿ? ಎಂದರೆ 'ದ್ವೇ ವಿದ್ಯೇ ವೇದಿತವ್ಯೇ' ಎಂಬುದಾಗಿ ಅಂತಹ ವ್ಯಕ್ತಿಯು ಪರವಿದ್ಯೆಗೆ ವಿಷಯನಾಗಿದ್ದಾನೆಂದು ಹೇಳಲಾಗಿದೆ. ಹೀಗೆ ಪ್ರಾರಂಭಮಾಡಿ ಜೀವೇಶಭೇದವನ್ನು ವರ್ಣನೆ ಮಾಡಿರುವುದರಿಂದ ಇವೆಲ್ಲವೂ ಸಮಗ್ರವಾಗಿ ವಿಷ್ಣುಪ್ರಕರಣವೇ ಆಗಿದೆಯೆಂದು ನಿರ್ಣಯವಾಗುತ್ತದೆ.

**भावदीपः – ॐ प्रकरणात् ॐ ।। ईशादन्यत्वमिति ।। जीवादन्यत्वस्योक्त्या तदन्यत्वं जीवेऽर्थात् सिद्धमित्येवमुक्तिः । एकप्रमेयतात्पर्यकानेकवाक्यात्मकप्रकरणस्य स्वान्तर्गतवाक्यं स्वतात्पर्यविषयपरमित्यनुमितिद्वारा तदन्तर्गतविप्रतिपन्नशब्दार्थ-निर्णायकत्वेन साक्षाज्जीवपरमात्मभेदसाधकत्वाद् योग्यसाध्योक्तिपूर्वं परम्परया प्रकरणादिति हेतुं योजयति – नात्रेति ।**

''ಈಶಾದನ್ಯತ್ವಂ'' ಎಂಬ ಶಬ್ದಕ್ಕೆ ಹೀಗರ್ಥ- ಜೀವರಿಗಿಂತ ಭೇದವನ್ನು ಹೇಳಿರುವುದರಿಂದ ಈಶನಗಿಂತ ಭೇದವು ಜೀವನಲ್ಲಿದೆ ಎಂಬುದು ಅರ್ಥಾತ್ ಸಿದ್ಧವಾಗುತ್ತದೆ. ಒಂದೇ ಪ್ರಮೇಯದಲ್ಲಿ ತಾತ್ಪರ್ಯವುಳ್ಳ ಅನೇಕ ವಾಕ್ಯಗಳ ಸಮೂಹವೇ ಪ್ರಕರಣ ಎನಿಸುತ್ತದೆ. ''ಸ್ವಾಂತರ್ಗತವಾಕ್ಯಂ ಸ್ವತಾತ್ಪರ್ಯವಿಷಯಪರಂ'' ಎಂಬ ಅನುಮಿತಿಯ ಮುಖಾಂತರ ಆ ವಾಕ್ಯಗಳ ಮಧ್ಯದಲ್ಲಿ ಸೇರಿರುವ ವಿಪ್ರತ್ತಿಪನ್ನವಾದ ಶಬ್ದಾರ್ಥವನ್ನು ನಿರ್ಣಯಮಾಡುತ್ತವೆ ಹೊರತು ನೇರವಾಗಿ ಜೀವಪರಮಾತ್ಮ ಭೇದವನ್ನು ನಿರ್ಣಯಿಸುವುದಿಲ್ಲ. ಈ ಕಾರಣದಿಂದ ಯೋಗ್ಯವಾದ ಸಾಧ್ಯವನ್ನು ಹೇಳುವ ಮೂಲಕ ಪ್ರಕರಣಾತ್ ಎಂಬ ಹೇತುವನ್ನು ಪರಂಪರಯಾ ಯೋಜನೆ ಮಾಡುತ್ತಿದ್ದಾರೆ ''ತದೇವ'' ಇತ್ಯಾದಿ ವಾಕ್ಯದಿಂದ.

**भावदीपः – तदेवेति ।। परमात्मार्थकत्वमेवेत्यर्थः । श्रुतिलिङ्गादेरुपक्रमादौ श्रुतत्वे तन्निर्णायकत्वेन लिङ्गत्वस्य वक्ष्यमाणत्वात् ।**

'ತದೇವ' ಎಂಬ ಪದಕ್ಕೆ ಪರಮಾತ್ಮವೆಂಬ ಅರ್ಥವೇ ಎಂದರ್ಥ. ಶ್ರುತಿ ಹಾಗೂ ಲಿಂಗಾದಿಗಳು ಉಪಕ್ರಮಾದಿಗಳಲ್ಲಿ ಕೇಳಿಸುತ್ತಿದ್ದರೂ ಅದನ್ನು ನಿರ್ಣಯ ಮಾಡುವುದಕ್ಕಾಗಿ ಲಿಂಗವನ್ನು ಮುದೆ ಹೇಳುತ್ತಾರೆ.

**भावदीपः – इह च परविद्याविषयत्वलिङ्गस्योपक्रमे श्रवणेनोपक्रमस्य वैष्णवत्वात्तदादिवाक्यसन्दर्भस्योपक्रान्तार्थविष्णुतात्पर्यकत्वरूपं तत्प्रकरणत्वमवधार्यत इति भावेन भाष्यं व्याचष्टे – द्वे विद्ये इति ।। प्रतीकग्रहणमेतत् ।**

ಪ್ರಕೃತ ಪರವಿದ್ಯಾವಿಷಯತ್ವವೆಂಬ ಲಿಂಗವು ಪ್ರಾರಂಭದಲ್ಲಿ ಕೇಳಿಸುತ್ತಿದೆ. ಆದ್ದರಿಂದ ಉಪಕ್ರಮವು ವಿಷ್ಣುಪರವಾಗಿದೆ ಎಂದು ತಿಳಿಯುತ್ತದೆ. ಹೀಗೆ ಪ್ರಾರಂಭವಾಗುವ ಸಮಗ್ರ ವಾಕ್ಯಗಳೆಲ್ಲವು ವಿಷ್ಣುವಿನಲ್ಲಿಯೇ ತಾತ್ಪರ್ಯವನ್ನು ಹೊಂದಿರುತ್ತವೆ ಎಂದು ಪ್ರಕರಣವು ಹೀಗೆ ಸಾಧಿಸುತ್ತದೆ ಎಂದು ತಿಳಿಯಬೇಕು. ಈ

## ದ್ಯುಭ್ವಾದ್ಯಧಿಕರಣ (೧-೩-೧)

ಅಭಿಪ್ರಾಯದಿಂದ ಭಾಷ್ಯವನ್ನು "ದ್ವೇ ವಿದ್ಯೇ" ಎಂಬ ಟೀಕಾವಾಕ್ಯದಿಂದ ವ್ಯಾಖ್ಯಾನಿಸುತ್ತಿದ್ದಾರೆ. ಇದನ್ನು ಪ್ರತೀಕಗ್ರಹಣವೆಂದು ತಿಳಿಯಬೇಕು.

**भावदीपः** – 'अथ परा, यया तदक्षरमधिगम्यते' इत्यनेनेत्यर्थः । आरभ्य उपक्रम्य । परविद्याविषयवस्तूपक्रम्य तस्यैतद्वाक्यसन्दर्भे पठितत्वादस्य वाक्यसन्दर्भस्य तत्प्रकरणत्वमित्यर्थः ।

"ಅಥ ಪರಾ ಯಯಾ ತದಕ್ಷರಮಧಿಗಮ್ಯತೇ" ಎಂಬುದರಿಂದ ಪರವಿದ್ಯಾವಿಷಯತ್ವವು ತಿಳಿಯುತ್ತಿದೆ ಎಂದರ್ಥ. "ಆರಭ್ಯ" ಪದಕ್ಕೆ 'ಉಪಕ್ರಮಿಸಿ' ಎಂದರ್ಥ. ಪರವಿದ್ಯಾವಿಷಯನಾದ ವಸ್ತುವನ್ನು ಪ್ರಾರಂಭದಲ್ಲಿ ಹೇಳಿ ಅದೇ ವಾಕ್ಯಗಳ ಸಂದರ್ಭದಲ್ಲಿ ದ್ಯುಭ್ವಾದ್ಯಾಶ್ರಯತ್ವವನ್ನು ಪಠಿಸಿರುವುದರಿಂದ ಎಲ್ಲಾ ವಾಕ್ಯಗಳು ವಿಷ್ಣುಪರವೆಂದು ತಿಳಿಯುತ್ತವೆ. ಈ ವಿಷಯದಲ್ಲಿ ವಿಷ್ಣುಪ್ರಕರಣವು ಹೇತುವಾಗಿದೆ ಎಂದು ಭಾವಿಸಬೇಕು.

**भावदीपः** – 'प्राणो ब्रह्म' इत्यादौ प्राणस्योपक्रमेऽपि तदुत्तरत्र विष्णुश्रुतिलिङ्गादिना प्राणस्याधीतत्वाभावेन तत्प्रकरणत्वं नेति व्यभिचारादुपक्रमादित्यनुक्त्वा उपक्रम्याधीतत्वादित्युक्तम् । जायमानत्वादेर्बाधकस्य निरासेन साधकानामुक्त्या चोपक्रान्तविष्णोरेव सर्वत्राधीतत्वस्योक्तत्वान्नासिद्धिरिति भावः ।। ६ ।।

"ಪ್ರಾಣೋ ಬ್ರಹ್ಮ" ಇತ್ಯಾದಿ ಸ್ಥಳಗಳಲ್ಲಿ ವಸ್ತುತಃ ಪ್ರಾಣನೇ ಉಪಕ್ರಮದಲ್ಲಿ ಕೇಳಿಸುತ್ತಿದ್ದರೂ ಮುಂದೆ ವಿಷ್ಣುಲಿಂಗಾದಿಗಳು ಇರುವುದರಿಂದ ಪ್ರಾಣನನ್ನು ತಿಳಿಯಲು ಸಾಧ್ಯವಿಲ್ಲ. ಹಾಗಾಗಿ ಇದನ್ನು ಪ್ರಾಣಪ್ರಕರಣವೆಂದು ಹೇಳಿದರೆ ವ್ಯಭಿಚಾರ ಬರುತ್ತದೆ. ಹಾಗಾಗಿ "ಉಪಕ್ರಮಾತ್" ಎಂದಷ್ಟೇ ಹೇಳದೆ "ಉಪಕ್ರಮ್ಯಾಧೀತತ್ವಾತ್" ಎಂಬುದಾಗಿ ಟೀಕೆಯಲ್ಲಿ ಹೇಳಿರುತ್ತಾರೆ. "ಜಾಯಮಾನತ್ವಾದೇಃ" ಮೊದಲಾದ ಬಾಧಕಗಳನ್ನು ನಿರಾಸ ಮಾಡುವ ಮೂಲಕ ಸಾಧಕಗಳನ್ನು ಹೇಳಿರುವುದರಿಂದ ಉಪಕ್ರಮದಲ್ಲಿ ಪ್ರಸಕ್ತನಾದ ವಿಷ್ಣುವೇ ಸಮಗ್ರ ಪ್ರಕರಣದಿಂದ ಅಧ್ಯಯನ ಮಾಡಲು ಅರ್ಹನಾಗಿದ್ದಾನೆ. ಆದ್ದರಿಂದ "ವಿಷ್ಣುಪ್ರಕರಣತ್ವಾತ್" ಎಂಬ ಹೇತುವಿಗೆ ಅಭ್ಯುಚ್ಚಯ ದೋಷವು ಬರುವುದಿಲ್ಲವೆಂದು ತಿಳಿಯಬೇಕು.

**वाक्यार्थमञ्जरी** – ॐ प्रकरणात् ॐ परविद्याविषयवस्तु न एवात्रारभ्याधीतत्वेनास्य ब्रह्मप्रकरणत्वादत्रत्येशो ब्रह्मैवेत्यर्थः ।। ६ ।।

## ವಿರುದ್ಧ ಧರ್ಮವುಳ್ಳ ಜೀವೇಶ್ವರರಿಗೆ ಅಭೇದವು ಕೂಡದು

**सू – ॐ ॥ स्थित्यदनाभ्यां च ॥ ॐ ॥७॥**

ಬ್ರಹ್ಮನಿಗೆ ಕರ್ಮಫಲ ಭೋಗವಿಲ್ಲ. ಜೀವನಿಗೆ ಕರ್ಮಫಲಭೋಗದಿಂದಲೇ ಜೀವನ. ಹೀಗೆ ವಿರುದ್ಧವಾದ ಧರ್ಮಗಳನ್ನು ಜೀವೇಶ್ವರರಿಗೆ ಹೇಳಿರುವುದರಿಂದಲೂ ಅವರಿಬ್ಬರಿಗೆ ಐಕ್ಯವನ್ನು ವಿವಕ್ಷಿಸಬಾರದು.

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका –** ईशजीवयोः 'द्वा सुपर्णा' इत्यादिवाक्योक्तं कर्मफलानुप- जीवनस्थितितदुपजीवनरूपहेतुभ्यां न च तयोरैक्यं वाच्यमित्यर्थः ॥

ಈಶ ಹಾಗೂ ಜೀವರಿಗೆ 'ದ್ವಾ ಸುಪರ್ಣಾ' ಇತ್ಯಾದಿ ವಾಕ್ಯದಲ್ಲಿ ಹೇಳಲ್ಪಟ್ಟ ಕರ್ಮಫಲಭೋಗದಿಂದ ಜೀವನ ಸ್ಥಿತಿ, ಕರ್ಮಫಲಭೋಗವಿಲ್ಲದ ಬ್ರಹ್ಮನ ಸ್ಥಿತಿ ಹೀಗೆ ವಿರುದ್ಧವಾದ ಧರ್ಮಗಳನ್ನು ಹೇಳಿರುವುದರಿಂದ ಐಕ್ಯವನ್ನು ಹೇಳಬಾರದು.

## श्रीमदानन्दतीर्थभगवत्पादाचार्यविरचित-
# ब्रह्मसूत्रभाष्यम्

**भाष्यम् –**

**'द्वा सुपर्णा सयुजा सखाया समानं वृक्षं परिषस्वजाते ।**
**तयोरन्यः पिप्पलं स्वाद्वत्त्यनश्नन्नन्यो अभिचाकशीति ॥' (मुं.३-१-१)**
**इतीशजीवयोः स्थित्यदनोक्तेः ॥७॥**

**॥ इति द्युभ्वाद्यधिकरणम् ॥ १ ॥**

ಅನುವಾದ - "ಎರಡು ಹಕ್ಕಿಗಳು ಸ್ನೇಹಿತರಂತೆ ದೇಹವೆಂಬ ಒಂದೇ ಮರದಲ್ಲಿ ಆಶ್ರಯಿಸಿಕೊಂಡಿವೆ ಆ ಪಕ್ಷಿಗಳಲ್ಲಿ ಜೀವನೆಂಬ ಪಕ್ಷಿಯು ಅಶ್ವತ್ಥವೃಕ್ಷದ ಫಲವನ್ನು ರಸವತ್ತಾಗಿದೆ ಎಂಬ ಭ್ರಾಂತಿಯಿಂದ ತಿನ್ನುತ್ತದೆ. ಮತ್ತೊಂದು ಈಶ ಎಂಬ ಪಕ್ಷಿಯು ಏನನ್ನೂ ತಿನ್ನದೆ ವರ್ಚಸ್ವಿಯಾಗಿ ಒಂದೇ ರೀತಿಯಾಗಿ ಕುಳಿತಿದೆ". ಹೀಗೆ ಈಶ ಮತ್ತು ಜೀವರಿಗೆ ತಿನ್ನದಿರುವಿಕೆ ಮತ್ತು ತಿನ್ನುವಿಕೆ ಎಂಬ ವಿರುದ್ಧಧರ್ಮಗಳನ್ನು ಹೇಳಿರುವ ಕಾರಣ ಜೀವೇಶ್ವರರ ಅಭೇದವು ಅಸಂಭಾವಿತವಾಗಿದೆ. ಈ ಎಲ್ಲ ಕಾರಣಗಳಿಂದ ದ್ಯುಭ್ವಾದ್ಯಾಯತನತ್ವ ಎಂಬ ಧರ್ಮವು ಭಗವಂತನಲ್ಲಿಯೇ ಸಮನ್ವಯವಾಗುತ್ತದೆ.

ಪ್ರತಿಪದಾರ್ಥ -- ಜೀವೇಶಭೇದಕ್ಕೆ ಶ್ರುತಿಯಷ್ಟೇ ಪ್ರಮಾಣವಲ್ಲ ಲಿಂಗವೂ ಪ್ರಮಾಣವಾಗಿದೆಯೆಂದು ಸೂತ್ರಕಾರರೇ ಹೇಳುತ್ತಿದ್ದಾರೆ.

ಸಯುಜಾ = ಒಟ್ಟಿಗೆ ಸೇರಿ, ಸಖಾಯ = ಸ್ನೇಹಿತರಂತೆ ವರ್ತಿಸುವ, ದ್ವಾ = ಎರಡು, ಸುಪರ್ಣಾ = ಜೀವ ಹಾಗೂ ಈಶ್ವರರೆಂಬ ಪಕ್ಷಿಗಳು, ಸಮಾನಂ ವೃಕ್ಷಂ = ದೇಹವೆಂಬ ಒಂದೇ ಮರವನ್ನು, ಪರಿಷಸ್ವಜಾತೇ = ಆಲಂಗಿಸಿವೆ. ತಯೋಃ = ಈ ಎರಡು ಪಕ್ಷಿಗಳಲ್ಲಿ, ಏಕಂ = ಜೀವನೆಂಬ ಪಕ್ಷಿಯು, ಪಿಪ್ಪಲಂ = ಅಶ್ವತ್ಥಫಲವನ್ನು, ಸ್ವಾದ್ವತ್ತಿ = ಬಹು ರುಚಿಯಾಗಿದೆಯೆಂಬ ಭ್ರಾಂತಿಯಿಂದ ತಿನ್ನುತ್ತದೆ. ಅನ್ಯಃ = ಮತ್ತೊಂದು ಈಶನೆಂಬ ಪಕ್ಷಿಯು, ಅನಶ್ನನ್ = ಏನನ್ನೂ ತಿನ್ನದೆ, ಅಭಿಚಾಕಶೀತಿ = ಒಂದೇ ರೀತಿಯಲ್ಲಿ ವರ್ಚಸ್ವಿಯಾಗಿ ಕುಳಿತಿದೆ. ಇತಿ ಈಶಜೀವಯೋಃ = ಹೀಗೆ ಭಗವಂತನಿಗೆ ಮತ್ತು ಜೀವರಿಗೆ, ಸ್ಥಿತ್ಯದನೋಕ್ತೇಃ = ತಿನ್ನುವಿಕೆ ಹಾಗೂ ತಿನ್ನದಿರುವಿಕೆ ಎಂಬ ಈ ವಿರುದ್ಧಧರ್ಮಗಳನ್ನು ಹೇಳಿರುವುದರಿಂದ ಜೀವೇಶ್ವರರ ಅಭೇದವು ಅಸಂಭಾವಿತವಾಗಿದೆ. ಆದ್ದರಿಂದ

ದ್ಯುಭ್ವಾದ್ಯಾಯತನತ್ವ ಮೊದಲಾದ ಧರ್ಮಗಳೆಲ್ಲವೂ ಭಗವಂತನಲ್ಲಿಯೇ ಸಮನ್ವಯವಾಗುತ್ತವೆ.[(१)]

ಇಲ್ಲಿಗೆ ಭಾಷ್ಯದೀಪಿಕಾನುಸಾರಿಯಾದ ಭಾಷ್ಯದ ಪ್ರತಿಪದಾರ್ಥದಲ್ಲಿ ದ್ಯುಭ್ವಾದ್ಯಧಿಕರಣವು ಮುಗಿಯಿತು.
॥ ಶ್ರೀಮದ್ವೇಶಾರ್ಪಣಮಸ್ತು ॥

## श्रीपद्मनाभतीर्थविरचितसत्तर्कदीपावळ्याम्:

## ।। ॐ स्थित्यदनाभ्यां ॐ ।।

'द्वा सुपर्णा' इत्यनेन पापकर्तुर्जीवात् कर्मफलमनश्नुतो दीप्यमानस्य द्युभ्वाद्याश्रयस्य भेदव्यपदेशादपि नासौ जीव इत्याह – स्थितीति ।। अतो द्युभ्वाद्याश्रयो विष्णुरिति सिद्धम् ।।

## ।। इति श्रीपद्मनाभतीर्थविरचितसत्तर्कदीपावळ्याम्: द्युभ्वाद्यधिकरणम् ।।

---

(१) **भाष्यदीपिका** – न केवलं 'जुष्टम्' इति भेदश्रुतेर्न जीवेशभेदोऽत्र प्रकरणे विवक्षित इति ज्ञायते, किन्तु लिङ्गादपीत्याह सूत्रकृत् – **स्थितीति** ।। तदसिद्धिवारणाय श्रुत्युदाहरणेन व्याचष्टे – **द्वा सुपर्णेति** ।। अनेन – 'द्वा सुपर्णा' इत्यत्र श्रुताभ्यां कर्मफलानुपजीवनावस्थितितदुपजीवनाभ्यां हेतुभ्यां च नैवात्र जीवेशयोरैक्यं वाच्यमिति सूत्रार्थ उक्तो भवति । चशब्दस्तु हेतुसमुच्चायक इति स्पष्टत्वान्न व्याख्यातः । श्रुतावदनस्य प्राथम्येऽपि स्थितेरीशसम्बन्धित्वेनाभ्यर्हितत्वादल्पाक्षरत्वाच्च सूत्रे तदनुसारेण भाष्ये च श्रौतक्रममुल्लङ्घ्य स्थितेः प्रथममुक्तिः ।

'सयुजा' सयुजौ संयुक्तौ उपकार्योपकारकभाववत्तया परस्परापरिहारेण वर्तमानौ 'सखाया' सखायौ प्रीत्या एकदेशस्थौ 'द्वा' द्वौ 'सुपर्णा' सुपर्णौ । सुपर्णसरूपौ । 'सुपर्णा सखाया' इति विशेषणस्वारस्यादस्य समजीवमात्रविषयत्वे सुष्ठुपरमानन्दरूपौ जीवेश्वरौ 'समानम्' एकं 'वृक्षं' देहाख्यम् अश्वत्थं 'परिषस्वजाते' आलिलिङ्गतुः । 'तयोः' सुपर्णयोर्मध्ये ईश्वरात् 'अन्यो' जीवः 'पिप्पलम्' अश्वत्थफलरूपं देहजनितकर्मफलम् 'स्वादु अत्ति' अस्वाद्वेव स्वादुत्वेनैव अश्नाति । जीवात् 'अन्यः' ईश्वरस्तु 'अनश्नन्' जीवाद्यमेवाभुञ्जानः 'अभि' अभितः 'चाकशीति' प्रकाशते । न तु स्वस्थित्यै जीववत् कर्मफलमपेक्षत इति मुण्डकश्रुत्यर्थः ।। १ ।।

'ದ್ವಾ ಸುಪರ್ಣಾ' ಇತ್ಯಾದಿ ಶ್ರುತಿಯಲ್ಲಿ ಪಾಪಕರ್ಮದಲ್ಲಿ ಮುಳುಗಿದ ಜೀವನಿಗಿಂತ ಕರ್ಮಫಲವನ್ನು ಭೋಗಿಸದ ದೇದೀಪ್ಯಮಾನನಾದ ದ್ಯುಭ್ವಾದ್ಯಾಶ್ರಯನಿಗೆ ಭೇದವನ್ನು ಹೇಳಿರುವ ಕಾರಣದಿಂದಲೂ ಜೀವನು ದ್ಯುಭ್ವಾದ್ಯಾಶ್ರಯನಾಗಲು ಸಾಧ್ಯವಿಲ್ಲ. ಇದನ್ನು ಪ್ರತಿಪಾದಿಸುವುದಕ್ಕಾಗಿ 'ಸ್ಥಿತ್ಯದನಾಭ್ಯಾಂ ಚ' ಎಂಬ ಸೂತ್ರವು ಹೊರಟಿದೆ. ಜೀವನಿಗಿಂತ ವಿಲಕ್ಷಣವಾದ ಧರ್ಮವನ್ನು ಶ್ರುತಿ ವಿಷ್ಣುವಿಗೆ ಹೇಳುತ್ತಿದೆ. ಆದ್ದರಿಂದ ದ್ಯುಭ್ವಾದ್ಯಾಶ್ರಯನಾದವನು ವಿಷ್ಣುವೇ ಆಗುತ್ತಾನೆಂದು ಸಿದ್ಧವಾಯಿತು.

॥ ದ್ಯುಭ್ವಾದ್ಯಧಿಕರಣವು ಸಮಾಪ್ತವಾಯಿತು ॥

**तत्वप्रकाशिका –**

**।। ॐ स्थित्यदनाभ्यां ॐ ।।**

**न जीवेशाभेदोऽत्र प्रकरणे विवक्षित इत्येतमर्थं हेत्वन्तरेण साधयत् सूत्रमुपन्यस्य व्याचष्टे – स्थितीति ।।**

ಜೀವ ಹಾಗೂ ಪರಮಾತ್ಮನಿಗೆ ಅಭೇದವನ್ನು ಈ ಪ್ರಕರಣವು ಪ್ರತಿಪಾದಿಸುತ್ತಿಲ್ಲ ಎಂಬುದನ್ನು ಮತ್ತೊಂದು ಹೇತುವಿನಿಂದ ಸಾಧಿಸುವಂತಹ ಸೂತ್ರವನ್ನು ಪಠಿಸಿ ''ಸ್ಥಿತಿ'' ಇತ್ಯಾದಿಯಾಗಿ ವ್ಯಾಖ್ಯಾನಿಸುತ್ತಿದ್ದಾರೆ.

**तत्वप्रकाशिका – संयुक्तौ सखायौ द्वौ सुपर्णरूपौ जीवेशौ देहाख्यं पिप्पलमालिलिङ्गतुः । तयोः सुपर्णयोर्मध्येऽन्यो जीवोऽश्वत्थफलरूपं देहजनितकर्मफलमस्वाद्वेव स्वादुत्वेनात्ति । अन्य ईश्वरस्तदनश्नन्नभितः प्रकाशते । नतु स्वस्थित्यै तदपेक्षत इति जीवेशयोः कर्मफलोपजीवनतद्रहितावस्थानाभ्यामुक्ताभ्यां च नैक्यं वाच्यमित्यर्थः ।**

ಪರಸ್ಪರಸಂಬಂಧವನ್ನು ಹೊಂದಿರುವ, ಪರಸ್ಪರವಾಗಿ ಪ್ರೇಮಿಸುವ, ಎರಡು ಪಕ್ಷಿರೂಪದಲ್ಲಿರುವ ಜೀವ ಹಾಗೂ ಈಶ್ವರರು ದೇಹವೆಂಬ ಪಿಪ್ಪಲಮರವನ್ನು ಆಲಂಗಿಸಿದ್ದಾರೆ. ಆ ಎರಡು ಪಕ್ಷಿಗಳ ಮಧ್ಯದಲ್ಲಿ ಜೀವನೆಂಬ ಒಂದು ಪಕ್ಷಿಯು ಅಶ್ವತ್ಥಮರದ ಫಲವನ್ನು ತಿನ್ನುತ್ತಿದೆ. ಈ ಫಲವು ದೇಹದಿಂದ ಹುಟ್ಟುವ ಕರ್ಮಫಲ ರೂಪವಾಗಿದೆ. ಆದ್ದರಿಂದಲೇ ಮಧುರವಾಗಿರುವುದಿಲ್ಲ. ಆದರೂ ಸಹ ಮಧುರವೆಂಬ ಭ್ರಾಂತಿಯಿಂದ ಜೀವನು ಆ ಫಲವನ್ನು ಅನುಭವಿಸಿ ತಿನ್ನುತ್ತಿದ್ದಾನೆ. ಆದರೆ ಭಗವಂತನೆಂಬ ಮತ್ತೊಂದು ಪಕ್ಷಿಯು ಅಂತಹ ಫಲವನ್ನು ಆಸ್ವಾದನೆ ಮಾಡದೇ ಎಲ್ಲೆಡೆ ಪ್ರಕಾಶಮಾನವಾಗಿದೆ. ದಷ್ಟಪುಷ್ಟವೂ ಆಗಿದೆ. ಮತ್ತು ತನ್ನ ಬದುಕಿಗಾಗಿ ಆ ಫಲವನ್ನು ಅದು ಅಪೇಕ್ಷಿಸುವುದಿಲ್ಲ. ಹೀಗೆ ಜೀವ ಹಾಗೂ ಈಶ್ವರನಿಗೆ

ಕರ್ಮಫಲಉಪಜೀವನ ಹಾಗೂ ಕರ್ಮಫಲಉಪಜೀವನರಹಿತ ಅವಸ್ಥಾನ ಎಂಬೆರೆಡು ವಿರುದ್ಧವಾದ ಧರ್ಮಗಳಿರುತ್ತವೆ. ಆದ್ದರಿಂದ ಜೀವೇಶ್ವರರಿಗೆ ಐಕ್ಯವನ್ನು ಹೇಳಬಾರದು.

**तत्वप्रकाशिका – अत्र श्रुतिक्रमोल्लङ्घनमीश्वरस्य प्राधान्यज्ञापनार्थम् । स्थितिपदस्याल्पाक्षरत्वराच्च । व्यावहारिकभेदः श्रुत्योच्यत इति चेत् ।**

ಸೂತ್ರದಲ್ಲಿ ಜೀವ ಹಾಗೂ ಈಶ್ವರನೆಂದು ಕ್ರಮವಾಗಿ ಶ್ರುತಿಗೆ ಅನುಸಾರಿಯಾಗಿ ಹೇಳಬೇಕಿತ್ತು. ಈ ಕ್ರಮವನ್ನು ಉಲ್ಲಂಘನೆ ಮಾಡಿ ಸ್ಥಿತಿ ಮತ್ತು ಅದನವೆಂದು ಏಕೆ ಹೇಳಿದ್ದಾರೆಂದರೆ ಈಶ್ವರನು ಪ್ರಧಾನನಾಗಿದ್ದಾನೆಂದು ಸೂಚಿಸುವುದಕ್ಕಾಗಿ. ಮತ್ತು ಸ್ಥಿತಿ, ಅದನಗಳಲ್ಲಿ "ಸ್ಥಿತಿ" ಎಂಬುದು ಅಲ್ಪಾಕ್ಷರಗಳುಳ್ಳದ್ದರಿಂದ ದ್ವಂದ್ವಸಮಾಸದಲ್ಲಿ ಅಲ್ಪಾಕ್ಷರವುಳ್ಳಪದವೇ ಮೊದಲು ಬರುತ್ತದೆಂಬ ದೃಷ್ಟಿಯಿಂದಲೂ ಸ್ಥಿತಿಯನ್ನೇ ಮೊದಲು ಹೇಳಿದ್ದಾರೆ.

ಪ್ರಕೃತ ಶ್ರುತಿಯಲ್ಲಿ ವ್ಯಾವಹಾರಿಕಭೇದವನ್ನೇ ಹೇಳಿರಬಹುದಲ್ಲವೇ? ಎಂದು ಪ್ರಶ್ನಿಸಬಾರದು.

**तत्वप्रकाशिका – व्यावहारिक इति सत्यो मिथ्या वा । आद्ये किमनिष्टम् । न द्वितीयः । मिथ्याभिधायकत्वेऽतत्त्वावेदकत्वेन श्रुतेरप्रामाण्यापातात्। तत्त्वावेदकत्व लक्षणप्रामाण्याभावेऽपि व्यावहारिकं तदस्तीति चेत् । तत्त्वाविषयत्वे प्रामाण्यवाचो युक्तेरयक्तत्वात् ।**

ವ್ಯಾವಹಾರಿಕಭೇದವು ಸತ್ಯವೋ ಸುಳ್ಳೋ ಎಂದು ಪ್ರಶ್ನೆ. ಸತ್ಯವೆಂದರೆ ನಮಗೆ ಅದು ಇಷ್ಟವೇ ಆಗಿದೆ. ಸುಳ್ಳೆಂದರೆ ಶ್ರುತಿಯು ಮಿಥ್ಯಾಪ್ರತಿಪಾದಕವಾದ್ದರಿಂದ ಅತತ್ತ್ವಾವೇದಕವಾಗುತ್ತದೆ. ಆಗ ಶ್ರುತಿಗೆ ಅಪ್ರಾಮಾಣ್ಯದೋಷವು ಬರುತ್ತದೆ. ಇನ್ನು ತತ್ತ್ವಾವೇದಕತ್ವವೆಂಬ ಪ್ರಾಮಾಣ್ಯವು ಶ್ರುತಿಗೆ ಬಾರದಿರಬಹುದು. ಆದರೆ ವ್ಯಾವಹಾರಿಕವಾದ ಪ್ರಾಮಾಣ್ಯವನ್ನು ಹೇಳಬಹುದಲ್ಲವೇ? ಎಂದು ಪ್ರಶ್ನಿಸಬಾರದು. ಏಕೆಂದರೆ, ತಾತ್ವಿಕವಾದ ವಿಷಯವನ್ನು ಪ್ರತಿಪಾದನೆ ಮಾಡದ ಶ್ರುತಿಯು ಪ್ರಾಮಾಣ್ಯಹೊಂದಿದೆ ಎಂಬ ಪ್ರಯೋಗವು ಅತ್ಯಂತ ಅಯುಕ್ತವಾಗಿದೆ.

**तत्वप्रकाशिका – मिथ्याभेदानुवादित्वान्न दोष इति चेन्न । वैयर्थ्यात् । निषेधायेति चेन्न । तदभावात् ।**

ಶ್ರುತಿಯು ಮಿಥ್ಯಾಭೂತವಾದ ಭೇದವನ್ನು ಕೇವಲ ಅನುವಾದ ಮಾಡುತ್ತಿದೆ. ಆದ್ದರಿಂದ ವಿರೋಧವಿರುವುದಿಲ್ಲವೆಂಬ ಆಕ್ಷೇಪವನ್ನು ಮಾಡಬಾರದು. ಏಕೆಂದರೆ, ಅನುಮಾನಕ್ಕೆ ಇಲ್ಲಿ ಯಾವುದೇ ಪ್ರಯೋಜನವು ಇರುವುದಿಲ್ಲ. ನಿಷೇಧಮಾಡುವುದೇ ಪ್ರಯೋಜನವೆಂದರೆ ಅಂತಹ ಭೇದವನ್ನು ನಿಷೇಧಮಾಡುವ ಯಾವುದೇ ಶ್ರುತಿಯು ಇರುವುದಿಲ್ಲ.

ದ್ಯುಭ್ವಾದ್ಯಧಿಕರಣ (೧-೩-೧)

**तत्वप्रकाशिका – तत्त्वमसीत्यादिनिषेधोऽस्तीति चेत् । तदनुवादेनायमेव निषेधः किं न स्यात् । अद्वैतस्य प्रमाणान्तरेणासिद्धेर्न तदनुवाद इति चेत् । तत्किं निषेधाय प्रमाणप्राप्त्या भाव्यं प्राप्तिमात्रेण वा । आद्ये निषेधायोगः । द्वितीयेऽस्त्यद्वैतेऽस्ति तादृशी प्राप्तिः ।**

'ತತ್ತ್ವಮಸಿ' ಎಂದು ನಿಷೇಧಕಶ್ರುತಿ ಇದೆಯಲ್ಲವೇ ಎಂದರೆ 'ತತ್ ತ್ವಮಸಿ' ಎಂಬ ಶ್ರುತಿಯಿಂದ ಅಭೇದವನ್ನು ಅನುವಾದ ಮಾಡಿ 'ದ್ವಾಸುಪರ್ಣಾ' ಎಂಬ ಶ್ರುತಿಯೇ ಅದನ್ನು ನಿಷೇಧಿಸುತ್ತಿದೆ ಎಂದು ವಿಪರೀತವಾಗಿ ಏಕೆ ಹೇಳಬಾರದು?

ಅದ್ವೈತವು ಬೇರೆ ಪ್ರಮಾಣದಿಂದ ಸಿದ್ಧವಾಗದ ಕಾರಣ 'ತತ್ವಮಸಿ' ಎಂಬ ಶ್ರುತಿಯು ಅನುವಾದರೂಪವಾಗಲು ಸಾಧ್ಯವಿಲ್ಲವಲ್ಲವೇ ಎಂದು ಶಂಕಿಸಬಾರದು. ನಿಷೇಧಕ್ಕೋಸ್ಕರ ಪ್ರಮಾಣದಿಂದ ಪ್ರಾಪ್ತವಾಗಿರಬೇಕೋ ಅಥವಾ ಹೇಗಾದರೂ ಪ್ರಾಪ್ತವಾಗಿದ್ದರೆ ಮಾತ್ರ ಸಾಕೋ ಎಂದು ಪ್ರಶ್ನಿಸುತ್ತೇವೆ. ಪ್ರಥಮಪಕ್ಷದಲ್ಲಿ ಪ್ರಮಾಣದಿಂದ ಪ್ರಾಪ್ತವಾದದ್ದನ್ನು ನಿಷೇಧಮಾಡಲು ಸಾಧ್ಯವೇ ಇಲ್ಲ. ಹೇಗಾದರೂ ಪ್ರಾಪ್ತವಾಗಿರಬಹುದೆಂದರೆ ಅದ್ವೈತವೂ ಸಹ ಪ್ರಾಪ್ತವಾಗಿರಬಹುದು. ಆದ್ದರಿಂದ ಅಂತಹ ಅದ್ವೈತವನ್ನು 'ದ್ವಾಸುಪರ್ಣಾ' ಎಂಬ ಶ್ರುತಿಯು ನಿಷೇಧಿಸಬಹುದು.

**तत्वप्रकाशिका – जीवेशयोः प्रमाणं विनाऽसिद्धेः कथं तदभेदस्य कथंचित् प्राप्तिरिति चेत् समं भेदेऽपि । कुतश्चैतच्छ्रुतेर्मिथ्याभेदवादित्वं सिद्धम् । जीवेशभेदस्य मिथ्यात्वादेवेति चेत् । तदेव कुतः? न हि भेदमिथ्यात्वे प्रत्यक्षमस्ति । न चानुमानं श्रुतिसिद्धार्थबाधकम् । स्वस्यैव तद्विरोधेनाऽप्रामाण्यात् ।**

ಜೀವ ಹಾಗೂ ಈಶ್ವರರು ಪ್ರಮಾಣವಿಲ್ಲದೆ ಸಿದ್ಧವಾಗುವುದಿಲ್ಲ. ಆದ್ದರಿಂದ ಅವರಲ್ಲಿ ಅಭೇದವು ಕಥಂಚಿತ್ ಪ್ರಾಪ್ತವಾಗಬಹುದಲ್ಲವೇ ಎಂದರೆ ಭೇದವಿಷಯದಲ್ಲಿಯೂ ಹೀಗೆಯೇ ಹೇಳುತ್ತೇವೆ. 'ದ್ವಾ ಸುಪರ್ಣಾ' ಎಂಬ ಶ್ರುತಿಗೆ ಮಿಥ್ಯಾಭೇದವಿಷಯತ್ವವನ್ನು ಹೇಗೆ ಸಾಧಿಸುತ್ತೀರಿ? ಜೀವೇಶಭೇದವು ಮಿಥ್ಯಾಭೂತವಾದ್ದರಿಂದಲೇ 'ದ್ವಾ ಸುಪರ್ಣಾ' ಶ್ರುತಿಯು ಮಿಥ್ಯಾಭೂತವಾದ ಭೇದವನ್ನು ಹೇಳುತ್ತಿದೆಯೆಂದು ಆಕ್ಷೇಪಿಸಿದರೆ, ಆ ಜೀವೇಶಭೇದದ ಮಿಥ್ಯಾತ್ವವು ಹೇಗೆ ಸಿದ್ಧವಾಯಿತೆಂದು ಪ್ರಶ್ನಿಸುತ್ತೇವೆ. ಭೇದಮಿಥ್ಯಾತ್ವವಿಷಯದಲ್ಲಿ ಪ್ರತ್ಯಕ್ಷವು ಪ್ರಮಾಣವಾಗಲು ಸಾಧ್ಯವಿಲ್ಲ. ಅನುಮಾನವು ಶ್ರುತಿಸಿದ್ಧವಾದ ಭೇದವನ್ನು ಬಾಧಿಸುವ ತನಕ ಪ್ರಮಾಣವಾಗುವುದಿಲ್ಲ. ಏಕೆಂದರೆ, ಸ್ವತಃ ತಾನೇ ಅಂದರೆ 'ಭೇದಃ ಮಿಥ್ಯಾ ಭೇದತ್ವಾತ್' ಎಂಬ ಅನುಮಾನವು ದ್ವಾ ಸುಪರ್ಣಾ ಎಂಬ ಶ್ರುತಿಯಿಂದ ಬಾಧಿತವಾಗಿರುವುದರಿಂದ ಅಪ್ರಮಾಣವಾಗಿದೆ.

ಪರಿಪೂರ್ಣಚಂದ್ರಿಕಾ

**तत्वप्रकाशिका – श्रुतेर्भेदमात्रपरत्वादनुमानस्य च तद्भेदस्यैव मिथ्यात्वे प्रवृत्तत्वेन भिन्नविषयत्वान्न विरोध इति चेत्तर्हि प्रत्यक्षस्यौष्ण्यमात्रविषयत्वादनुमानस्य च तदौष्ण्यस्यैव मिथ्यात्वसाधकत्वेन भिन्नविषयत्वमिति बाधोच्छेदः स्यात् ।**

ಶ್ರುತಿಯು ಕೇವಲ ಭೇದವಿಷಯಕವಾದರೆ ಅನುಮಾನವುಭೇದಮಿಥ್ಯಾತ್ವವನ್ನು ಸಾಧಿಸುತ್ತಿದೆ. ಆದ್ದರಿಂದ ಇವೆರಡು ಭಿನ್ನವಿಷಯಕಗಳಾದ್ದರಿಂದ ಪರಸ್ಪರ ವಿರೋಧವಿಲ್ಲವೆಂದು ಶಂಕಿಸಬಾರದು. ಪ್ರತ್ಯಕ್ಷಪ್ರಮಾಣದಿಂದ ಅಗ್ನಿಯು ಉಷ್ಣವಾಗಿದೆಯೆಂದು ತಿಳಿಯುತ್ತದೆ. ಅನುಮಾನದಿಂದ 'ವಹ್ನಿಃ ಅನುಷ್ಣಃ ದ್ರವ್ಯತ್ವಾತ್' ಎಂಬ ಅನುಮಾನದಿಂದ ಅದೇ ಅಗ್ನಿಯು ಉಷ್ಣವಾಗಿಲ್ಲವೆಂದು ಸಾಧಿಸಬಹುದು. ಇಂತಹ ಸಂದರ್ಭದಲ್ಲಿ ಪ್ರತ್ಯಕ್ಷ ಹಾಗೂ ಅನುಮಾನಗಳು ಭಿನ್ನವಿಷಯಕವಾದ್ದರಿಂದ ಬಾಧವೆಂಬ ಹೇತ್ವಾಭಾಸವೇ ಅಸಿದ್ಧವಾಗಬೇಕಾದೀತು.

**तत्वप्रकाशिका – न चागमेन भेदमिथ्यात्वसिद्धिः । तदभावादेव । न च तत्सत्यत्वे मानाभावः । स्वरूपाभिधायकस्यैव सत्यत्वे प्रामाण्यात् । अन्यथा तस्य वैयर्थ्यात् ।**

ಇನ್ನು ಆಗಮದಿಂದ ಭೇದಮಿಥ್ಯಾತ್ವವು ಸಿದ್ಧವಾಗುತ್ತದೆಂದು ಹೇಳಬಾರದು. ಏಕೆಂದರೆ ಅಂತಹ ಆಗಮವೇ ಕಾಣಿಸುತ್ತಿಲ್ಲ. ಭೇದಸತ್ಯತ್ವದ ವಿಷಯದಲ್ಲಿ ಯಾವುದೇ ಪ್ರಮಾಣವಿಲ್ಲವೆಂದು ಹೇಳಬಾರದು. ಭೇದಪ್ರತಿಪಾದಕವಾದ ಶ್ರುತಿಗಳೇ ಭೇದಸತ್ಯತ್ವವಿಷಯದಲ್ಲಿಯೂ ಪ್ರಮಾಣಗಳಾಗಿವೆ. ಇಲ್ಲದಿದ್ದರೆ ಶ್ರುತಿಗಳು ಭೇದವನ್ನು ಪ್ರತಿಪಾದಿಸುವ ವಿಷಯದಲ್ಲಿ ಅರ್ಥವೇ ಇರುವುದಿಲ್ಲ.

**तत्वप्रकाशिका – अतो न मिथ्याभेदपरत्वं श्रुतेरित्यलम् । तस्माद् विष्णुरेव द्युभ्वाद्यायतनं परविद्याविषयश्चेति सिद्धम् ।। ७ ।।**

।। इति श्रीमज्जयतीर्थभिक्षुविरचितायां तत्वप्रकाशिकायाम्
द्युभ्वाद्यधिकरणम् ।।

ಆದ್ದರಿಂದ 'ಜುಷ್ಟಂ ಯದಾ ಪಶ್ಯತಿ' ಇತ್ಯಾದಿ ಭೇದಪ್ರತಿಪಾದಕವಾದ ಶ್ರುತಿಗಳು ಮಿಥ್ಯಾಭೂತವಾದ ಭೇದವನ್ನುಪ್ರತಿಪಾದಿಸುತ್ತವೆಂದು ಹೇಳಬಾರದು. ಈ ಎಲ್ಲ ಕಾರಣಗಳಿಂದ ವಿಷ್ಣುವೇ ದ್ಯುಭ್ವಾದ್ಯಾಯತನನಾಗಿದ್ದಾನೆ. ಪರವಿದ್ಯೆಗೆ ಅವನೇ ವಿಷಯನಾಗಿದ್ದಾನೆಂದು ನಿರ್ಣಯವಾಗುತ್ತದೆ.

॥ ಇಲ್ಲಿಗೆ ಶ್ರೀಜಯತೀರ್ಥಭಿಕ್ಷುಗಳಿಂದ ವಿರಚಿತವಾದ ತತ್ವಪ್ರಕಾಶಿಕ ಕನ್ನಡಾನುವಾದದಲ್ಲಿ
ದ್ಯುಭ್ವಾದ್ಯಧಿಕರಣವು ಮುಗಿಯಿತು ॥

॥ ಶ್ರೀಕೃಷ್ಣಾರ್ಪಣಮಸ್ತು ॥

ದ್ಯುಭ್ವಾದ್ಯಧಿಕರಣ (೧-೩-೧)

**भावदीपः – ॐ स्थित्यदनाभ्यां च ॐ ।। सूत्रे चशब्दादाह – हेत्वन्तरेणेति ।। कर्मफलोपजीवनतद्रहितावस्थानलक्षणभेदकोक्तिरूपहेत्वन्तरेणेत्यर्थः ।। पिप्पलमिति।। अश्वत्थमित्यर्थः ।**

ಓಂ ಸ್ಥಿತ್ಯದನಾಭ್ಯಾಂ ಚ ಓಂ

ಸೂತ್ರದಲ್ಲಿ "ಚ" ಶಬ್ದವನ್ನು ಹೇಳಿರುವುದರಿಂದ "ಹೇತ್ವಂತರೇಣ" ಎಂದು ಹೇಳಿರುತ್ತಾರೆ. ಅಂದರೆ "ಕರ್ಮಫಲೋಪಜೀವನ ತದ್ರಾಹಿತ್ಯ ಎಂಬ ಎರಡು ವಿರುದ್ಧವಾದ ಧರ್ಮಗಳನ್ನು ಹೇಳಿರುವಿಕೆ" ಎಂಬ ಮತ್ತೊಂದು ಹೇತುವಿನಿಂದ ಎಂದರ್ಥ. "ಪಿಪ್ಪಲಂ" ಎಂಬ ಶಬ್ದಕ್ಕೆ ಅಶ್ವತ್ಥವೃಕ್ಷ ಎಂದರ್ಥ.

**भावदीपः – 'तस्येदाहुः' इति वाक्यशेषविरोधनिरासायाह – अस्वाद्वेवेति ।। 'एकस्तयोः खादति पिप्पलान्नमन्यो निरन्नोऽपि बलेन भूयान्' इत्येकादशस्कन्धवाक्ये अत्तिं विनाप्यदौर्बल्यादिति तात्पर्योक्तिमनुरुद्ध्यार्थमाह – अन्य ईश्वर इत्यादिना ।।**

"ತಸ್ಯೇದಾಹುಃ" ಎಂಬ ವಾಕ್ಯಶೇಷದ ವಿರೋಧವನ್ನು ಪರಿಹರಿಸುವುದಕ್ಕಾಗಿ "ಅಸ್ವಾದ್ವೇವಾ" ಎಂದು ಹೇಳಿರುತ್ತಾರೆ. ಅಂದರೆ ಎರಡು ಪಕ್ಷಿಗಳಲ್ಲಿ ಒಂದು ಪಕ್ಷಿ ಅಶ್ವತ್ಥವೃಕ್ಷದ ಫಲವನ್ನು ತಿನ್ನುತ್ತಿದೆ. ಮತ್ತೊಂದು ಅಶ್ವತ್ಥವೃಕ್ಷದ ಫಲವನ್ನು ತಿನ್ನುತ್ತಿಲ್ಲ. ಆದರೂ ಸಹ ಬಹಳವಾಗಿ ಬಲಿಷ್ಠವಾಗಿದೆ. ಎಂಬುದಾಗಿ "ಏಕಸ್ತಯೋಃ ಖಾದತಿ ಪಿಪ್ಪಲಾನ್ನಮನ್ಯೋ ನಿರನ್ನೋಧಿಪಿ ಬಲೇನ ಭೂಯಾನ್" ಎಂದು ಏಕಾದಶ ಸ್ಕಂದದ ಭಾಗವತದಲ್ಲಿ ಹೇಳಲಾಗಿದೆ. ಈ ವಾಕ್ಯಕ್ಕೆ ಶ್ರೀಮದಾಚಾರ್ಯರು ತಾತ್ಪರ್ಯದಲ್ಲಿ "ಅತ್ತಿಂ ವಿನಾಪ್ಯದೋರ್ಬಲ್ಯಾತ್" ಎಂದು ವ್ಯಾಖ್ಯಾನಿಸಿದ್ದಾರೆ. ಅದನ್ನು ಅನುಸರಿಸಿ ಪ್ರಕೃತ ಟೀಕಾರಾಯರು "ಅನ್ಯ ಈಶ್ವರ" ಇತ್ಯಾದಿಯಾಗಿ ಹೇಳುತ್ತಿದ್ದಾರೆ.

**भावदीपः – गुहानये 'शुभं पिबति' इति वाक्यानुरोधादर्थान्तरमुक्तम् । भाष्योक्तं सूत्रारूढं दर्शयति – कर्मेत्यादिना ।।** अत्र श्रुतेर्बुद्धिजीवपरत्वं चन्द्रिकायां निरस्तम् । विस्तृतं च गुरुपादैः श्रुतितात्पर्यकौमुद्याम् ।

ಗುಹಾಧಿಕರಣದಲ್ಲಿ "ಶುಭಂ ಪಿಬತಿ" ಎಂಬ ಪ್ರಮಾಣವನ್ನು ಉಲ್ಲೇಖಿಸಿದ್ದರು. ಆದಕ್ಕೆ ಈ ಅರ್ಥವು ಮತ್ತೊಂದು ವ್ಯಾಖ್ಯಾನವಾಗಿದೆ ಎಂದು ತಿಳಿಯಬೇಕು. ಭಾಷ್ಯದಲ್ಲಿ ಹೇಳಲ್ಪಟ್ಟ ವಿಚಾರವನ್ನು ಸೂತ್ರಾರೂಢ ಮಾಡುತ್ತಿದ್ದಾರೆ "ಕರ್ಮ" ಇತ್ಯಾದಿ ವಾಕ್ಯದಿಂದ. ಇಲ್ಲಿರುವ ಶ್ರುತಿಯು ಬುದ್ಧಿ ಹಾಗೂ ಜೀವರನ್ನು ಪ್ರತಿಪಾದಿಸಬಹುದಲ್ಲವೆ? ಜೀವೇಶ್ವರರನ್ನೇ ಏಕೆ ಪ್ರತಿಪಾದಿಸಬೇಕು? ಎಂಬ ಶಂಕೆಯನ್ನು ತಾತ್ಪರ್ಯಚಂದ್ರಿಕೆಯಲ್ಲಿ ನಿರಾಕರಿಸಿದ್ದಾರೆ. ಮತ್ತು ಗುರುಗಳು ಮಾಡಿರುವ ಶ್ರುತಿತಾತ್ಪರ್ಯಕೌಮುದಿಯಲ್ಲಿ ಹೆಚ್ಚಿನ ವಿಚಾರವನ್ನು ತಿಳಿಯಬೇಕು.

ಪರಿಪೂರ್ಣಚಂದ್ರಿಕಾ

**भावदीपः** – अत्र श्रुतावदनस्यादित्वेन सूत्रेऽप्यदनस्थितिभ्यामित्युक्त्या भाव्यम्, अत आह – **श्रुतीति** ।। सूत्रे श्रुत्युक्तक्रमोल्लङ्घनमित्यर्थः । 'अभ्यर्हितं पूर्वम्' अल्पाच्तरं पूर्वम्' इति व्याकरणस्मृतेरिति भावः ।

ಈ ಶ್ರುತಿಯಲ್ಲಿ ಅದನವನ್ನು ಮೊದಲು ಹೇಳಲಾಗಿದೆ ಅದಕ್ಕೆ ಅನುಸಾರಿಯಾಗಿ ಸೂತ್ರದಲ್ಲಿ ಅದನಸ್ಥಿತಿಭ್ಯಾಂ ಎಂದು ಹೇಳಬೇಕಿತ್ತಲ್ಲವೆ? ಎಂಬ ಪ್ರಶ್ನೆಗೆ "ಶ್ರುತಿ" ಇತ್ಯಾದಿ ಟೀಕೆಯಿಂದ ಉತ್ತರಿಸುತ್ತಿದ್ದಾರೆ. ಸೂತ್ರದಲ್ಲಿ ಶ್ರುತಿಯ ಕ್ರಮವನ್ನು ಉಲ್ಲಂಸಿದ್ದಾರೆ ಎಂದರ್ಥ. "ಅಭ್ಯರ್ಹಿತಂ ಪೂರ್ವಂ" ಎಂಬುದಾಗಿ ಯಾವುದು ಅಲ್ಪವಾದ ಅಚ್ ಅಕ್ಷರಗಳಿಂದ ಕೂಡಿರುತ್ತದೆಯೋ ಅದೇ ಪದವು ಮೊದಲು ಬರಬೇಕೆಂದು ವ್ಯಾಕರಣದಲ್ಲಿ ಹೇಳಿರುತ್ತಾರೆ.

**भावदीपः** – श्रुतेर्व्यावहारिकभेदपरत्वेन वा व्यावहारिकप्रामाण्येन मिथ्याभेदपरत्वेन वा मिथ्याभेदानुवादित्वेन वाऽन्यथोपपत्तिमाशङ्क्य निराकरोति – **व्यावहारिक इत्यादिना** ।। व्यावहारिकम् अतत्त्वावेदकत्वरूपम् ।

ಶ್ರುತಿಯು ವ್ಯಾವಹಾರಿಕವಾದ ಭೇದವನ್ನು ಪ್ರತಿಪಾದಿಸಬಹುದು, ಅಥವಾ ವ್ಯಾವಹಾರಿಕಪ್ರಾಮಾಣ್ಯದಿಂದ ಮಿಥ್ಯಾಭೂತವಾದ ಭೇದವನ್ನು ಪ್ರತಿಪಾದಿಸಬಹುದು. ಅಥವಾ ಮಿಥ್ಯಾಭೂತವಾದ ಭೇದವನ್ನು ಅನುವಾದ ಮಾಡಬಹುದು. ಹೀಗೆ "ಜುಷ್ಟಂ ಯದಾ ಪಶ್ಯತಿ" ಎಂಬ ಶ್ರುತಿಗೆ ಅದ್ವೈತಕ್ಕೆ ವಿರೋಧ ಬಾರದಂತೆ ಅರ್ಥೈಸಬಹುದಲ್ಲವೆ? ಎಂದು ಆಕ್ಷೇಪಿಸಿ ನಿರಾಕರಿಸುತ್ತಿದ್ದಾರೆ ವ್ಯಾವಹಾರಿಕಃ ಇತ್ಯಾದಿ ವಾಕ್ಯದಿಂದ. ವ್ಯಾವಹಾರಿಕವು ಅತತ್ವಾವೇದಕರೂಪವಾಗಿದೆ.

**भावदीपः** – वाचोयुक्तेरित्येकं पदम् । वाक्यप्रयोगस्येत्यर्थः । 'वाग्दिक्पश्यद्भ्यो युक्तिदण्डहरेषु' इत्यलुक्समासः ।। **वैय्यर्थ्यादिति** ।। 'अप्राप्ते शास्त्रमर्थवद्' इति न्यायादिति भावः ।

"ವಾಚೋ ಯುಕ್ತೇಃ" ಎಂಬುದು ಒಂದೇ ಪದವಾಗಿದೆ. ವಾಕ್ಯಪ್ರಯೋಗದ ಎಂದರ್ಥ. ಏಕೆಂದರೆ 'ವಾಗ್ದಿಕ್ಪಶ್ಯದ್ಭ್ಯೋ ಯುಕ್ತಿದಂಡಹರೇಷು' ಎಂಬ ಸೂತ್ರದಿಂದ ಅಲುಕ್ ಸಮಾಸವಾಗಿದೆ ಅಂದರೆ 'ವಾಚೋ' ಎಂಬಲ್ಲಿರುವ 'ಸುಪ್' ಪ್ರತ್ಯಯವು ಲೋಪವಾಗಿರುವುದಿಲ್ಲ. "ವೈಯರ್ಥ್ಯಾತ್" ಎಂದು ಟೀಕೆಯಲ್ಲಿದೆ. ಅಂದರೆ "ಅಪ್ರಾಪ್ತೇ ಶಾಸಮರ್ಥವತ್" ಅಪೂರ್ವವಾದ ವಿಚಾರದಲ್ಲಷ್ಟೇ ಶಾಸವು ಪ್ರಮಾಣವಾಗುತ್ತದೆ ಎಂಬ ನ್ಯಾಯವಿರುವುದರಿಂದ ಹೀಗೆ ಹೇಳಿದ್ದಾರೆ.

ದ್ಯುಭ್ವಾದ್ಯಧಿಕರಣ (೧-೩-೧)

**भावदीपः – यद्वा, अनुवादो ह्यर्थवादवत् स्तुत्यर्थं वा 'दध्ना जुहोति' इतिवत् क्वचिद्विधानार्थं वा 'नेह नानास्ति किञ्चन' इत्यत्र किञ्चनेतिवन्निषेधार्थं वा । न पक्षत्रयमपि । अदर्शनादित्यर्थः । शङ्कः स्वाशयं व्यनक्ति – निषेधायेति ।।**

ಅಥವಾ ಯಾವರೀತಿಯಾಗಿ ಅರ್ಥವಾದವು ಸ್ತುತಿಗೋಸ್ಕರ ಇರುತ್ತದೆಯೋ ಅದರಂತೆ. ಅಥವಾ "ದಧ್ನಾ ಜುಹೋತಿ" ಎಂಬಲ್ಲಿ ದದಿಯನ್ನು ವಿಧಾನ ಮಾಡುವುದಕ್ಕಾಗಿ ಅನುವಾದ ಮಾಡಿರುತ್ತಾರೋ ಅದರಂತೆ ಇಲ್ಲಿಯೂ ಸಹ ವಿಧಾನ ಮಾಡುವುದಕ್ಕಾಗಿ ಅನುವಾದ ಮಾಡಿರಬಹುದು. ಅಥವಾ "ನೇಹ ನಾಸ್ತಿ ಕಿಂಚನ" ಎಂಬ ಶ್ರುತಿಯಲ್ಲಿ ನಿಷೇಧ ಮಾಡುವುದಕ್ಕೋಸ್ಕರ ಇಲ್ಲಿ ಅನುವಾದ ಮಾಡಿರಬಹುದು. ಹೀಗೆ ಮೂರೂ ಪಕ್ಷಗಳನ್ನು ನಿರಾಕರಿಸಿದ್ದಾರೆ. ಏಕೆಂದರೆ ಭೇದವನ್ನು ನಿಷೇಧ ಮಾಡುವ ಯಾವುದೇ ಶ್ರುತಿಗಳು ಕಾಣುಸುತ್ತಿಲ್ಲವೆಂದರ್ಥ. ಆಶಂಕೆ ಮಾಡುವ ಪೂರ್ವಪಕ್ಷಕಾರನು ತನ್ನ ಅಭಿಪ್ರಾಯವನ್ನು ಸ್ಪಷ್ಟಪಡಿಸುತ್ತಿದ್ದಾನೆ "ನಿಷೇಧಾಯ" ಇತ್ಯಾದಿಯಾಗಿ.

**भावदीपः – तादृशी प्राप्तिरिति ।। आनन्दमये उक्तदिशेति भावः । अङ्गीकृत्य चेदमुक्तम् । वस्तुतो भेदमिथ्यात्वमेव न सिद्धम्, येन तदनुवाद इत्याह – कृतश्चेति ।।**

"ತಾದೃಶೀ ಪ್ರಾಪ್ತಿಃ" ಅಂದರೆ ಆನಂದಮಯಾಧಿಕರಣದಲ್ಲಿ ಹೇಳಿದ ಪ್ರಕಾರವಾಗಿ ತಿಳಿಯಬೇಕೆಂದು ಅಭಿಪ್ರಾಯ. ವಸ್ತುತಃ ಇದನ್ನು ಅಂಗೀಕರಿಸಿ ಹೇಳಿದ್ದಾರೆ. ವಿಚಾರ ಮಾಡಿದರೆ ಭೇದಮಿಥ್ಯಾತ್ವವೇ ಸಿದ್ಧವಾಗಿರುವುದಿಲ್ಲ. ಹಾಗೆ ಸಿದ್ಧವಾಗಿದ್ದಲ್ಲಿ ಅದು ಅನುವಾದ ರೂಪವೆಂದು ಹೇಳಬಹುದಿತ್ತು. ಇದನ್ನು "ಕೃತಶ್ಚ" ಎಂಬ ವಾಕ್ಯದಿಂದ ನಿರೂಪಿಸುತ್ತಿದ್ದಾರೆ.

**भावदीपः – 'नानुमानमतच्छब्दाद्' इति सूत्रमत्रानुवर्त्य तस्यानुमानं भेदमिथ्यात्वे मानं न । कुतः अतच्छब्दात् । मिथ्यात्वविरुद्धभेदसत्यत्वबोधकशब्दादिति वृत्त्यन्तरं मनसि निधायाह – नचेति ।।**

"ನಾನುಮಾನಮತಚ್ಛಬ್ದಾದ್" ಎಂಬ ಸೂತ್ರವನ್ನು ಇಲ್ಲಿ ಅನುವೃತ್ತಿ ಮಾಡಿಕೊಂಡು ಅಂತಹ ಅನುಮಾನವು ಭೇದಮಿಥ್ಯಾತ್ವ ವಿಷಯದಲ್ಲಿ ಪ್ರಮಾಣವಾಗುವುದಿಲ್ಲ. ಏಕೆಂದರೆ "ಅತತ್ ಶಬ್ದಾತ್" 'ಮಿಥ್ಯಾತ್ವಕ್ಕೆ ವಿರುದ್ಧವಾದ ಭೇದ ಸತ್ಯತ್ವವನ್ನು ಪ್ರತಿಪಾದಿಸುವ ಶಬ್ದಗಳು ಇರುವುದರಿಂದ' ಎಂಬುದಾಗಿ ಮತ್ತೊಂದು ಬಗೆಯ ವ್ಯಾಖ್ಯಾನವನ್ನು ಮನಸ್ಸಿನಲ್ಲಿ ಇಟ್ಟುಕೊಂಡು "ನ ಚ" ಇತ್ಯಾದಿ ಟೀಕಾ ಗ್ರಂಥವು ಹೊರಟಿದೆ.

ಪರಿಪೂರ್ಣಚಂದ್ರಿಕಾ

भावदीपः – अनुमानं 'भेदो मिथ्या भेदत्वाद्' इत्यनुमानमित्यर्थः । एतेन सर्वत्र प्रसिद्धेति नयोक्तं 'द्वा सुपर्णा' इत्यादिश्रुतिविरोधाच्चेत्युक्तं विवृतं ध्येयम् । अतच्छब्दादित्यस्य अनुमानमूलभऊतभेदमिथ्यात्वबोधकशब्दस्याभावादित्यप्यर्थान्तर-मुपेत्याह – तदभावादेवेति ।।

ಅನುಮಾನಂ ಎಂದರೆ "ಭೇದೋ ಮಿಥ್ಯಾ ಭೇದತ್ವಾದ್" ಎಂಬ ಅನುಮಾನ ಎಂದರ್ಥ. ಹೀಗೆ ಹೇಳಿದ್ದರಿಂದ ಸರ್ವಗತತ್ವಾಧಿಕರಣದಲ್ಲಿ ಹೇಳಲ್ಪಟ್ಟ "ದ್ವಾ ಸುಪರ್ಣಾ" ಇತ್ಯಾದಿ ಶ್ರುತಿಯ ವಿರೋಧವೂ ಸಹ ಅದ್ವೈತವಾದಿಗಳಿಗೆ ಬರುತ್ತದೆ ಎಂದು ಹೇಳಿದಂತಾಯಿತು. 'ಅತಃ' ಎಂಬ ಪದಕ್ಕೆ ಅನುಮಾನಕ್ಕೆ ಮೂಲಭೂತವಾದ ಭೇದ ಮಿಥ್ಯಾತ್ವ ಪ್ರತಿಪಾದಕವಾದ ಶಬ್ದವಿಲ್ಲದ ಕಾರಣ ಎಂಬ ಮತ್ತೊಂದು ಬಗೆಯ ಅರ್ಥವನ್ನು ಅಂಗೀಕರಿಸಿ "ತದಭಾವಾದೇವ" ಎಂದು ಟೀಕೆಯಲ್ಲಿ ಹೇಳಿರುತ್ತಾರೆ.

भावदीपः – अत इति ।। श्रुतेरप्रामाण्यापत्तेर्मिथ्यात्वसाधकाभावात् स्वतःप्रामाण्येन स्वबोध्यस्य सत्यत्वप्राप्तेश्चेत्यर्थः ।। तस्मादिति ।। आत्मश्रुत्यमृत-सेतुत्वलिङ्गरूपसाधकभावात् तच्छब्दरूपबाधकाभावात् परपक्षे साधकाभावाद् भेदभेदकयोरुक्त्याऽभेदायोगाच्चेति सर्वसूत्रहेत्वंशार्थः ।

"ಅತಃ" ಎಂದರೆ ಶ್ರುತಿಗೆ 'ಅಪ್ರಾಮಾಣ್ಯದೋಷವು ಬರಬೇಕಾದ್ದರಿಂದ' 'ಮಿಥ್ಯಾತ್ವಸಾಧಕವಾದ ಪ್ರಮಾಣಗಳು ಇಲ್ಲದ್ದರಿಂದ' 'ಪ್ರಾಮಾಣ್ಯಸ್ವತಸ್ತ್ವವಿರುವುದರಿಂದ ಸ್ವಬೋಧ್ಯವಾದ ಅರ್ಥವು ಸತ್ಯವೇ ಆಗಿರುವುದರಿಂದ' ಎಂಬುದಾಗಿ ಮೂರುಬಗೆಯ ಅರ್ಥವನ್ನು ತಿಳಿಯಬೇಕು. "ತಸ್ಮಾತ್" ಎಂದರೆ ಆತ್ಮಶ್ರುತಿ, ಅಮೃತತ್ವ ಎಂಬ ಸಾಧಕ ಪ್ರಮಾಣಗಳು ಇರುವುದರಿಂದ ಮತ್ತು "ತತ್" ಶಬ್ದವೆಂಬ ಬಾಧಕಪ್ರಮಾಣಗಳು ಇಲ್ಲದ್ದರಿಂದ ಮತ್ತು ಪರಪಕ್ಷದಲ್ಲಿ ಸಾಧಕಪ್ರಮಾಣಗಳು ಇಲ್ಲದ ಕಾರಣ ಮತ್ತು ಭೇದವು ಯುಕ್ತವಾಗುವುದರಿಂದ ಅಭೇದವು ಅಯುಕ್ತವಾಗುವುದರಿಂದ ಎಂಬುದಾಗಿ ಎಲ್ಲ ಸೂತ್ರಗಳಲ್ಲಿ ಹೇಳಲ್ಪಟ್ಟ ಹೇತುಗಳು ಇರುವುದರಿಂದ ಎಂದರ್ಥ.

भावदीपः – विष्णुरेवेत्यादिप्रतिज्ञार्थः । परविद्येति भाष्योपसंहारः । अत्र सूत्राक्षरस्वारस्यादिकं चन्द्रिकायां व्यक्तमुक्तम् । तेन कस्यचिन्नूतनस्य दूषणावकाशो नेति ज्ञेयम् ।। ७ ।।

।। इति श्रीराघवेन्द्रयतिकृते भावदीपे द्युभ्वाद्यधिकरणम् ।।

"ವಿಷ್ಣುರೇವ" ಎಂಬುದು ಪ್ರತಿಜ್ಞೆಯಾಗಿದೆ. "ಪರವಿದ್ಯಾ" ಎಂಬುದಾಗಿ ಭಾಷ್ಯವನ್ನು ಉಪಸಂಹಾರ ಮಾಡಿದ್ದಾರೆ. ಈ ಅಧಿಕರಣದ ಸೂತ್ರಾರ್ಥಗಳ ಸ್ವಾರಸ್ಯವನ್ನು ಚಂದ್ರಿಕೆಯಿಂದ ತಿಳಿಯಬೇಕು. ಹಾಗೆ

ದ್ಯುಭ್ವಾದ್ಯಧಿಕರಣ (೧-೩-೧)

**भावदीपः – यद्वा, अनुवादो ह्यर्थवादवत् स्तुत्यर्थं वा 'दध्ना जुहोति' इतिवत् कचिद्विधानार्थं वा 'नेह नानास्ति किञ्चन' इत्यत्र किञ्चनेतिवन्निषेधार्थं वा । न पक्षत्रयमपि । अदर्शनादित्यर्थः । शङ्ककः स्वाशयं व्यनक्ति – निषेधायेति ।।**

ಅಥವಾ ಯಾವರೀತಿಯಾಗಿ ಅರ್ಥವಾದವು ಸ್ತುತಿಗೋಸ್ಕರ ಇರುತ್ತದೆಯೋ ಅದರಂತೆ. ಅಥವಾ "ದಧ್ನಾ ಜುಹೋತಿ" ಎಂಬಲ್ಲಿ ದದಿಯನ್ನು ವಿಧಾನ ಮಾಡುವುದಕ್ಕಾಗಿ ಅನುವಾದ ಮಾಡಿರುತ್ತಾರೋ ಅದರಂತೆ ಇಲ್ಲಿಯೂ ಸಹ ವಿಧಾನ ಮಾಡುವುದಕ್ಕಾಗಿ ಅನುವಾದ ಮಾಡಿರಬಹುದು. ಅಥವಾ "ನೇಹ ನಾಸ್ತಿ ಕಿಂಚನ" ಎಂಬ ಶ್ರುತಿಯಲ್ಲಿ ನಿಷೇಧ ಮಾಡುವುದಕ್ಕೋಸ್ಕರ ಇಲ್ಲಿ ಅನುವಾದ ಮಾಡಿರಬಹುದು. ಹೀಗೆ ಮೂರೂ ಪಕ್ಷಗಳನ್ನು ನಿರಾಕರಿಸಿದ್ದಾರೆ. ಏಕೆಂದರೆ ಭೇದವನ್ನು ನಿಷೇಧ ಮಾಡುವ ಯಾವುದೇ ಶ್ರುತಿಗಳು ಕಾಣುಸುತ್ತಿಲ್ಲವೆಂದರ್ಥ. ಆಶಂಕೆ ಮಾಡುವ ಪೂರ್ವಪಕ್ಷಕಾರನು ತನ್ನ ಅಭಿಪ್ರಾಯವನ್ನು ಸ್ಪಷ್ಟಪಡಿಸುತ್ತಿದ್ದಾನೆ "ನಿಷೇಧಾಯ" ಇತ್ಯಾದಿಯಾಗಿ.

**भावदीपः – तादृशी प्राप्तिरिति ।। आनन्दमये उक्तदिशेति भावः । अङ्गीकृत्य चेदमुक्तम् । वस्तुतो भेदमिथ्यात्वमेव न सिद्धम्, येन तदनुवाद इत्याह – कृतश्चेति ।।**

"ತಾದೃಶೀ ಪ್ರಾಪ್ತಿಃ" ಅಂದರೆ ಆನಂದಮಯಾಧಿಕರಣದಲ್ಲಿ ಹೇಳಿದ ಪ್ರಕಾರವಾಗಿ ತಿಳಿಯಬೇಕೆಂದು ಅಭಿಪ್ರಾಯ. ವಸ್ತುತಃ ಇದನ್ನು ಅಂಗೀಕರಿಸಿ ಹೇಳಿದ್ದಾರೆ. ವಿಚಾರ ಮಾಡಿದರೆ ಭೇದಮಿಥ್ಯಾತ್ವವೇ ಸಿದ್ಧವಾಗಿರುವುದಿಲ್ಲ. ಹಾಗೆ ಸಿದ್ಧವಾಗಿದ್ದಲ್ಲಿ ಅದು ಅನುವಾದ ರೂಪವೆಂದು ಹೇಳಬಹುದಿತ್ತು. ಇದನ್ನು "ಕೃತಶ್ಚ" ಎಂಬ ವಾಕ್ಯದಿಂದ ನಿರೂಪಿಸುತ್ತಿದ್ದಾರೆ.

**भावदीपः – 'नानुमानमतच्छब्दाद्' इति सूत्रमत्रानुवर्त्य तस्यानुमानं भेदमिथ्यात्वे मानं न । कुतः अतच्छब्दात् । मिथ्यात्वविरुद्धभेदसत्यत्वबोधकशब्दादिति वृत्त्यन्तरं मनसि निधायाह – नचेति ।।**

"ನಾನುಮಾನಮತಚ್ಛಬ್ದಾದ್" ಎಂಬ ಸೂತ್ರವನ್ನು ಇಲ್ಲಿ ಅನುವೃತ್ತಿ ಮಾಡಿಕೊಂಡು ಅಂತಹ ಅನುಮಾನವು ಭೇದಮಿಥ್ಯಾತ್ವ ವಿಷಯದಲ್ಲಿ ಪ್ರಮಾಣವಾಗುವುದಿಲ್ಲ. ಏಕೆಂದರೆ "ಅತತ್ ಶಬ್ದಾತ್" 'ಮಿಥ್ಯಾತ್ವಕ್ಕೆ ವಿರುದ್ಧವಾದ ಭೇದ ಸತ್ಯತ್ವವನ್ನು ಪ್ರತಿಪಾದಿಸುವ ಶಬ್ದಗಳು ಇರುವುದರಿಂದ' ಎಂಬುದಾಗಿ ಮತ್ತೊಂದು ಬಗೆಯ ವ್ಯಾಖ್ಯಾನವನ್ನು ಮನಸ್ಸಿನಲ್ಲಿ ಇಟ್ಟುಕೊಂಡು "ನ ಚ" ಇತ್ಯಾದಿ ಟೀಕಾ ಗ್ರಂಥವು ಹೊರಟಿದೆ.

**भावदीपः** – अनुमानं 'भेदो मिथ्या भेदत्वाद्' इत्यनुमानमित्यर्थः । एतेन सर्वत्र प्रसिद्धेति नयोक्तं 'द्वा सुपर्णा' इत्यादिश्रुतिविरोधाच्चेत्युक्तं विवृतं ध्येयम् । अतच्छब्दादित्यस्य अनुमानमूलभऊतभेदमिथ्यात्वबोधकशब्दस्याभावादित्यप्यर्थान्तरमुपेत्याह – तदभावादेवेति ॥

ಅನುಮಾನಂ ಎಂದರೆ ''ಭೇದೋ ಮಿಥ್ಯಾ ಭೇದತ್ವಾದ್'' ಎಂಬ ಅನುಮಾನ ಎಂದರ್ಥ. ಹೀಗೆ ಹೇಳಿದ್ದರಿಂದ ಸರ್ವಗತತ್ವಾಧಿಕರಣದಲ್ಲಿ ಹೇಳಲ್ಪಟ್ಟ ''ದ್ವಾ ಸುಪರ್ಣಾ'' ಇತ್ಯಾದಿ ಶ್ರುತಿಯ ವಿರೋಧವೂ ಸಹ ಅದ್ವೈತವಾದಿಗಳಿಗೆ ಬರುತ್ತದೆ ಎಂದು ಹೇಳಿದಂತಾಯಿತು. 'ಅತಃ' ಎಂಬ ಪದಕ್ಕೆ ಅನುಮಾನಕ್ಕೆ ಮೂಲಭೂತವಾದ ಭೇದ ಮಿಥ್ಯಾತ್ವ ಪ್ರತಿಪಾದಕವಾದ ಶಬ್ದವಿಲ್ಲದ ಕಾರಣ ಎಂಬ ಮತ್ತೊಂದು ಬಗೆಯ ಅರ್ಥವನ್ನು ಅಂಗೀಕರಿಸಿ ''ತದಭಾವಾದೇವ'' ಎಂದು ಟೀಕೆಯಲ್ಲಿ ಹೇಳಿರುತ್ತಾರೆ.

**भावदीपः** – अत इति ॥ श्रुतेरप्रामाण्यापत्तेर्मिथ्यात्वसाधकाभावात् स्वतःप्रामाण्येन स्वबोध्यस्य सत्यत्वप्राप्तेश्चेत्यर्थः ॥ **तस्मादिति** ॥ आत्मश्रुत्यमृतसेतुत्वलिङ्गरूपसाधकभावात् तच्छब्दरूपबाधकाभावात् परपक्षे साधकाभावाद् भेदभेदकयोरुक्त्याऽभेदायोगाच्चेति सर्वसूत्रहेत्वंशार्थः ।

''ಅತಃ'' ಎಂದರೆ ಶ್ರುತಿಗೆ 'ಅಪ್ರಾಮಾಣ್ಯದೋಷವು ಬರಬೇಕಾದ್ದರಿಂದ' 'ಮಿಥ್ಯಾತ್ವಸಾಧಕವಾದ ಪ್ರಮಾಣಗಳು ಇಲ್ಲದ್ದರಿಂದ' 'ಪ್ರಾಮಾಣ್ಯಸ್ವತಸ್ತ್ವವಿರುವುದರಿಂದ ಸ್ವಬೋಧ್ಯವಾದ ಅರ್ಥವು ಸತ್ಯವೇ ಆಗಿರುವುದರಿಂದ' ಎಂಬುದಾಗಿ ಮೂರುಬಗೆಯ ಅರ್ಥವನ್ನು ತಿಳಿಯಬೇಕು. ''ತಸ್ಮಾತ್'' ಎಂದರೆ ಆತ್ಮಶ್ರುತಿ, ಅಮೃತತ್ವ ಎಂಬ ಸಾಧಕ ಪ್ರಮಾಣಗಳು ಇರುವುದರಿಂದ ಮತ್ತು ''ತತ್'' ಶಬ್ದವೆಂಬ ಬಾಧಕಪ್ರಮಾಣಗಳು ಇಲ್ಲದ್ದರಿಂದ ಮತ್ತು ಪರಪಕ್ಷದಲ್ಲಿ ಸಾಧಕಪ್ರಮಾಣಗಳು ಇಲ್ಲದ ಕಾರಣ ಮತ್ತು ಭೇದವು ಯುಕ್ತವಾಗುವುದರಿಂದ ಅಭೇದವು ಅಯುಕ್ತವಾಗುವುದರಿಂದ ಎಂಬುದಾಗಿ ಎಲ್ಲ ಸೂತ್ರಗಳಲ್ಲಿ ಹೇಳಲ್ಪಟ್ಟ ಹೇತುಗಳು ಇರುವುದರಿಂದ ಎಂದರ್ಥ.

**भावदीपः** – विष्णुरेवेत्यादिप्रतिज्ञार्थः । परविद्येति भाष्योपसंहारः । अत्र सूत्राक्षरस्वारस्यादिकं चन्द्रिकायां व्यक्तमुक्तम् । तेन कस्यचिन्नूतनस्य दूषणावकाशो नेति ज्ञेयम् ॥ ७ ॥

॥ इति श्रीराघवेन्द्रयतिकृते भावदीपे द्युभ्वाद्यधिकरणम् ॥

''ವಿಷ್ಣುರೇವ'' ಎಂಬುದು ಪ್ರತಿಜ್ಞೆಯಾಗಿದೆ. ''ಪರವಿದ್ಯಾ'' ಎಂಬುದಾಗಿ ಭಾಷ್ಯವನ್ನು ಉಪಸಂಹಾರ ಮಾಡಿದ್ದಾರೆ. ಈ ಅಧಿಕರಣದ ಸೂತ್ರಾರ್ಥಗಳ ಸ್ವಾರಸ್ಯವನ್ನು ಚಂದ್ರಿಕೆಯಿಂದ ತಿಳಿಯಬೇಕು. ಹಾಗೆ

ದ್ಯುಭ್ವಾದ್ಯಧಿಕರಣ (೧-೩-೧)

ತಿಳಿಯುವುದರಿಂದ ಕೆಲವರು ಆಪಾದಿಸುವ ಹೊಸ ದೋಷಗಳಿಗೆ ಅವಕಾಶವಿಲ್ಲವೆಂಬ ವಿಚಾರವು ಮನದಟ್ಟಾಗುತ್ತದೆ.

॥ ಇಲ್ಲಿಗೆ ಭಾವದೀಪದ ಕನ್ನಡಾನುವಾದದಲ್ಲಿ ದ್ಯುಭ್ವಾದ್ಯಧಿಕರಣವು ಮುಗಿಯಿತು ॥

**वाक्यार्थमञ्जरी – ॐ स्थित्यदनाभ्यां च ॐ** ।। स्थितिः कर्मफलोपजीवनं विनाऽवस्थानम् अदनं तदुपजीवनम्, ताभ्यां जीवब्रह्मणोर्नैक्यमित्यर्थः । कर्मफलभोगानङ्गीकारे गुहाधिकरणविरोध इत्यत आह – **नत्विति** ।। **क्रमोल्लङ्घनमिति** ।। तत्रादनस्यैव प्रथममुक्तेरिति भावः ।। **सत्यो मिथ्या वेति** ।। व्यावहारिकत्वस्य व्यवहारनिर्वाहकत्वस्य व्यवहारनिर्वाहकत्वव्यवहारकाले प्रतीयमान त्वसाधारण्यादिति भावः ।। **व्यावहारिकत्वं तदिति** ।। व्यावहारिकावेदनलक्षणप्रामाण्यमित्यर्थः । नतु प्रामाण्ये व्यावहारिकत्वं विवक्षितम्, तथात्वे तत्त्वावेदनलक्षण-प्रामाण्यस्यापि व्यावहारिकत्वेनाविशेषप्रसङ्गादिति ध्येयम् । वाचो युक्तेः वाक्प्रयोगस्य ।। **न दोष इति** ।। मिथ्याप्रतिपादकत्वमेवाप्रामाण्ये प्रयोजकमिति भावः । वैय्यर्थ्यादनुवादस्य ।। **निषेधोऽस्तीति** ।। भेदाभेदयोरन्यनिषेधरूपत्वादिति भावः । अयं 'द्वा सुपर्णा' इत्यनेन क्रियमाणः ।। **अस्तीति** ।। आनन्दमयनयरीत्येति भावः । अनुमानं भेदो मिथ्या भेदत्वादित्यादि भेदस्य मिथ्यात्वं किं प्रमाणबलादङ्गीक्रियते, उत तत्सत्यत्वे प्रमाणाभावात् । आद्यं निराकरोति – **नहीत्यादिना** ।। द्वितीयं निराकरोति – **नच तत्सत्यत्वमिति** ।

।। इति श्रीशर्कराश्रीनिवासविचचिता वाक्यार्थमञ्जर्याम् द्युभ्वाद्यधिकरणम् ।।

ದ್ಯುಭ್ವಾದ್ಯಧಿಕರಣ
(೧-೩-೨)

# ಭಾಗ - ೨

## ತಾತ್ಪರ್ಯಚಂದ್ರಿಕಾ, ಪ್ರಕಾಶ,

ಪ್ರತಿಯೊಂದು ವಾಕ್ಯಗಳ ವಿಶೇಷ ವಿವರಣೆಯೊಂದಿಗೆ

ಸರಳ ಅನುವಾದ

***

ಮತ್ತು

ಗುರುರಾಜೀಯಮ್, ಭಾಟ್ಟಸಂಗ್ರಹ,
ಶಾಂಕರಭಾಷ್ಯ, ಭಾಮತೀ,
ರಾಮಾನುಜಭಾಷ್ಯ ಇವುಗಳ ಸಂಪೂರ್ಣ ಅಡಿಟಿಪ್ಪಣಿಯೊಂದಿಗೆ

ತಿಳಿಯುವುದರಿಂದ ಕೆಲವರು ಆಪಾದಿಸುವ ಹೊಸ ದೋಷಗಳಿಗೆ ಅವಕಾಶವಿಲ್ಲವೆಂಬ ವಿಚಾರವು ಮನದಟ್ಟಾಗುತ್ತದೆ.

॥ ಇಲ್ಲಿಗೆ ಭಾವದೀಪದ ಕನ್ನಡಾನುವಾದದಲ್ಲಿ ದ್ಯುಭ್ವಾದ್ಯಧಿಕರಣವು ಮುಗಿಯಿತು ॥

**वाक्यार्थमञ्जरी – ॐ स्थित्यदनाभ्यां च ॐ ।।** स्थितिः कर्मफलोपजीवनं विनाऽवस्थानम् अदनं तदुपजीवनम्, ताभ्यां जीवब्रह्मणोर्नैक्यमित्यर्थः । कर्मफलभोगानङ्गीकारे गुहाधिकरणविरोध इत्यत आह – **नन्विति ।। क्रमोल्लङ्घनमिति ।।** तत्रादनस्यैव प्रथममुक्तेरिति भावः ।। **सत्यो मिथ्या वेति ।।** व्यावहारिकत्वस्य व्यवहारनिर्वाहकत्वस्य व्यवहारनिर्वाहकत्वव्यवहारकाले प्रतीयमान त्वसाधारण्यादिति भावः ।। **व्यावहारिकत्वं तदिति ।।** व्यावहारिकावेदनलक्षणप्रामाण यमित्यर्थः । ननु प्रामाण्ये व्यावहारिकत्वं विवक्षितम्, तथात्वे तत्त्वावेदनलक्षण-प्रामाण्यस्यापि व्यावहारिकत्वेनाविशेषप्रसङ्गादिति ध्येयम् । वाचो युक्तेः वाक्प्रयोगस्य ।। **न दोष इति ।।** मिथ्याप्रतिपादकत्वमेवाप्रामाण्ये प्रयोजकमिति भावः । वैय्यर्थ्यादनुवादस्य ।। **निषेधोऽस्तीति ।।** भेदाभेदयोरन्यनिषेधरूपत्वादिति भावः । अयं 'द्वा सुपर्णा' इत्यनेन क्रियमाणः ।। **अस्तीति ।।** आनन्दमयनयरीत्येति भावः । अनुमानं भेदो मिथ्या भेदत्वादित्यादि भेदस्य मिथ्यात्वं किं प्रमाणबलादङ्गीक्रियते, उत तत्सत्यत्वे प्रमाणाभावात् । आद्यं निराकरोति – **नहीत्यादिना ।।** द्वितीयं निराकरोति – **नच तत्सत्यत्वमिति ।**

।। इति श्रीशर्कराश्रीनिवासविचचिता वाक्यार्थमञ्जर्याम् द्युभ्वाद्यधिकरणम् ।।

ದ್ಯುಭ್ವಾದ್ಯಧಿಕರಣ
(೧-೩-೨)

# ಭಾಗ - ೨

## ತಾತ್ಪರ್ಯಚಂದ್ರಿಕಾ, ಪ್ರಕಾಶ,

ಪ್ರತಿಯೊಂದು ವಾಕ್ಯಗಳ ವಿಶೇಷ ವಿವರಣೆಯೊಂದಿಗೆ

ಸರಳ ಅನುವಾದ

***

ಮತ್ತು

ಗುರುರಾಜೀಯಮ್, ಭಾಟ್ಟಸಂಗ್ರಹ,
ಶಾಂಕರಭಾಷ್ಯ, ಭಾಮತೀ,
ರಾಮಾನುಜಭಾಷ್ಯ ಇವುಗಳ ಸಂಪೂರ್ಣ ಅಡಿಟಿಪ್ಪಣಿಯೊಂದಿಗೆ

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥
॥ ಶ್ರೀಮಧ್ವರಾಜೋ ವಿಜಯತೇತರಾಮ್ ॥
॥ ಶ್ರೀಗುರುಭ್ಯೋ ನಮಃ ॥

ಶ್ರೀಬ್ರಹ್ಮಣ್ಯತೀರ್ಥಶ್ರೀಪಾದಶಿಷ್ಯಶ್ರೀವ್ಯಾಸತೀರ್ಥವಿರಚಿತಾ

# ತಾತ್ಪರ್ಯಚಂದ್ರಿಕಾ

## प्रथमाध्यायस्य तृतीयः पादः

## अथ द्युभ्वाद्यधिकरणम्

ಉಭಯತ್ರಪ್ರಸಿದ್ಧಶಬ್ದ ಸಮನ್ವಯದ ಅನಿವಾರ್ಯತೆ ಮತ್ತು ಶಬ್ದಸಂಗತಿ ವಿಚಾರ

**॥ ॐ द्युभ्वाद्यायतनं स्वशब्दात् ॐ ॥**

**अत्र –**

**माभूदन्यैकगतता ब्रह्मैकगततापि वा ।**
**किं तूभयगतत्वं स्यादिति शङ्का निरस्यते ॥ १ ॥**

ಅನುವಾದ - ಓಂ ದ್ಯುಭ್ವಾದ್ಯಾಯತನಂ ಸ್ವಶಬ್ದಾತ್ ಓಂ ಎಂದು ಪ್ರಾರಂಭವಾಗುವ ಮೂರನೆಯ ಪಾದಕ್ಕೆ ಸಂಗತಿಯನ್ನು ಹೀಗೆ ತಿಳಿಯಬೇಕು -

ಮಾಭೂದನ್ಯೈಕಗತತಾ ಬ್ರಹ್ಮೈಕಗತತಾಽಪಿ ವಾ ।
ಕಿಂ ತೂಭಯಗತತ್ವಂ ಸ್ಯಾದಿತಿ ಶಂಕಾ ನಿರಸ್ಯತೇ ॥ ೧ ॥

ಪೂರ್ವಪಕ್ಷದಲ್ಲಿ ಶಬ್ದಗಳೆಲ್ಲವೂ ವಿಷ್ಣುವನ್ನು ಬಿಟ್ಟು ಬೇರೆ ಪದಾರ್ಥಗಳನ್ನೇ ಪ್ರತಿಪಾದಿಸುತ್ತವೆಂಬುದನ್ನು ಒಪ್ಪುವುದು ಬೇಡ. ಅಥವಾ ಸಿದ್ಧಾಂತಿಗಳು ಹೇಳುವಂತೆ ವಿಷ್ಣುವನ್ನು ಮಾತ್ರ ಪ್ರತಿಪಾದಿಸುತ್ತದೆಂಬುದನ್ನೂ ಸಹ ಒಪ್ಪುವುದು ಬೇಡ. ಹೊರತಾಗಿ ವಿಷ್ಣುವನ್ನು ಹಾಗೂ ಬೇರೆ ಪದಾರ್ಥಗಳೆರಡನ್ನೂ ಪ್ರತಿಪಾದಿಸುತ್ತದೆಂದು ಒಪ್ಪಿದರೆ ಏನು ಸಮಸ್ಯೆ ? ಎಂಬ ಆಶಂಕೆಯನ್ನು ಈ ಪಾದದಲ್ಲಿ ಪರಿಹರಿಸುತ್ತಾರೆ.

ಪರಿಪೂರ್ಣಚಂದ್ರಿಕಾ

पादद्वयापादितोभयप्रसिद्धीनां स्वतःसिद्धोभयप्रसिद्धीनां चोभयपरत्वमेव । नतु ब्रह्मैकपरतेति शङ्काऽत्र निरस्यते । स्पष्टयिष्यते चैतत् ''कम्पनात्'' इत्यत्र ।

ಶಬ್ದಗಳು ಸಹಜವಾಗಿ ಬೇರೆ ಪದಾರ್ಥಗಳನ್ನು ಪ್ರತಿಪಾದಿಸುತ್ತವೆ. ಹೀಗಿರುವಾಗ ಹಿಂದಿನೆರಡು ಪಾದಗಳಲ್ಲಿ ಅನೇಕ ನ್ಯಾಯಗಳಿಂದ ಅಂತಹ ಶಬ್ದಗಳಿಗೆ ವಿಷ್ಣುಪರತ್ವವನ್ನು ಸಮರ್ಥಿಸಲಾಯಿತು. ಈ ಎರಡು ಪಾದಗಳಿಂದ ಶಬ್ದಗಳು ಉಭಯತ್ರಪ್ರಸಿದ್ಧವಾದವು ಅಂದರೆ ಲೋಕರೂಢಿಯಿಂದ ಅನ್ಯತ್ರಪ್ರಸಿದ್ಧವೂ ಆಗಿವೆ. ನ್ಯಾಯಗಳ ಬಲದಿಂದ ವಿಷ್ಣುಪರವೂ ಆಗಿವೆ. ಮತ್ತು ಇನ್ನು ಕೆಲವು ಶಬ್ದಗಳು ಸ್ವಾಭಾವಿಕವಾಗಿ ಉಭಯತ್ರಪ್ರಸಿದ್ಧವಾಗಿವೆ. ಆದ್ದರಿಂದ ಶಬ್ದಗಳಿಗೆ ಉಭಯಪರತ್ವವನ್ನೇ ಹೇಳೋಣ. ಕೇವಲ ವಿಷ್ಣುಪರತ್ವವನ್ನೇ ಏಕೆ ಹೇಳಬೇಕು ? ಎಂಬ ಆಶಂಕೆಯನ್ನು ಈ ಪಾದದಲ್ಲಿ ಪರಿಹರಿಸಿದ್ದಾರೆ. ಮತ್ತು ಇದರ ಬಗ್ಗೆ ಹೆಚ್ಚಿನ ಸ್ಪಷ್ಟೀಕರಣವನ್ನು ಕಂಪನಾಧಿಕರಣದಲ್ಲಿ ನಿರೂಪಿಸುತ್ತಾರೆ.

तदुक्तमनुव्याख्याने –

आहोभयगतत्वं च स्यादतो लिङ्गशब्दयोः ।
इति संशयनुत्त्यर्थमुभयत्र प्रतीतितः ।
शब्दानां वर्तमानानां सलिङ्गानां विशेषतः ।
समन्वयो हरावेव यन्नैवान्यत्र मुख्यतः ।। इति ।

ಇದನ್ನೇ ಅನುವ್ಯಾಖ್ಯಾನದಲ್ಲಿ ಹೀಗೆ ಹೇಳಿದ್ದಾರೆ -

ಆಹೋಭಯಗತತ್ವಂ ಚ ಸ್ಯಾದತೋ ಲಿಂಗಶಬ್ದಯೋಃ ।
ಇತಿ ಸಂಶಯನುತ್ತ್ಯರ್ಥಮುಭಯತ್ರ ಪ್ರತೀತಿತಃ ।
ಶಬ್ದಾನಾಂ ವರ್ತಮಾನಾನಾಂ ಸಲಿಂಗಾನಾಂ ವಿಶೇಷತಃ ।
ಸಮನ್ವಯೋ ಹರಾವೇವ ಯನ್ನೈವಾನ್ಯತ್ರ ಮುಖ್ಯತಃ ।।

ಲಿಂಗಾತ್ಮಕವಾದ ಹಾಗೂ ನಾಮಾತ್ಮಕವಾದ ಶಬ್ದಗಳೆಲ್ಲವೂ ಉಭಯಗತವೇ ಆಗಲಿ ಎಂಬ ಸಂಶಯವನ್ನು ಇಲ್ಲಿ ಪರಿಹಾರ ಮಾಡುತ್ತಿದ್ದಾರೆ. ವಿಷ್ಣುವಿನಲ್ಲಿ ಹಾಗೂ ಬೇರೆ ಕಡೆ ಶಬ್ದಗಳು ಇರುತ್ತವೆಂದು ಆಪಾತತಃ ತೋರುತ್ತಿದೆ. ಇಂತಹ ಲಿಂಗಸಹಿತವಾದ ಶಬ್ದಗಳಿಗೆ ಶ್ರೀಹರಿಯಲ್ಲಿ ಸಮನ್ವಯವನ್ನು ಮಾಡಲು ಈ ಪಾದವು ಹೊರಟಿದೆ. ಏಕೆಂದರೆ ಶಬ್ದಗಳು ಬೇರೆ ಕಡೆ ಮುಖ್ಯವೃತ್ತಿಯಿಂದ ಇರಲು ಸಾಧ್ಯವಿಲ್ಲ. ಹೀಗೆ ಪಾದಸಂಗತಿಯನ್ನು ತಿಳಿಯಬೇಕು.

ದ್ಯುಭ್ವಾದ್ಯಧಿಕರಣ (೧-೩-೧)

अत्रानुव्याख्याने –

लिङ्गं साधारणं शब्दौ स्थानं लिङ्गमनुग्रहः ।
पुनःशब्दा लिङ्गशब्दौ विचार्या द्विस्थिता इह ।।

इत्येतत्पादीयाधिकरणार्थः सङ्गृहीतः ।

ಈ ಪಾದದಲ್ಲಿ ಒಟ್ಟು ಹದಿನಾಲ್ಕು ಅಧಿಕರಣಗಳಿವೆ. ಹನ್ನೆರಡು ಅಧಿಕರಣಗಳ ಉಪಾಧಿಯನ್ನು ಅನುವ್ಯಾಖ್ಯಾನದ ಶ್ಲೋಕದಲ್ಲಿ ಹೀಗೆ ಸಂಗ್ರಹಿಸಿದ್ದಾರೆ -

ಲಿಂಗಂ ಸಾಧಾರಣಂ ಶಬ್ದೌ ಸ್ಥಾನಂ ಲಿಂಗಮನುಗ್ರಹಃ ।
ಪುನಃಶಬ್ದಾ ಲಿಂಗಶಬ್ದೌ ವಿಚಾರ್ಯಾ ದ್ವಿಸ್ಥಿತಾ ಇಹ ॥

ಎಂಬುದಾಗಿ.

अत्र द्युभ्वादीत्यत्र सर्वाधारत्वलिङ्गं, भूमाक्षराधिकरणयोर्भूमाक्षरनामनी, 'ईक्षति' इत्यत्र सृष्टिस्थानं, 'दहरः' इत्यत्र हृत्पद्मस्थत्वलिङ्गम् 'अनुकृते' इत्यत्रानुकूल्येन गृह्यमाणत्वलिङ्गं, पुनरपिशब्दात् कम्पनात् ज्योतिः आकाशः इति चतुर्ष्वधिकरणेषु क्रमेणेशानवज्रज्योतिराकाशशब्दाः 'सुषप्ति' इत्यत्र स्वप्नादिद्रष्टृत्वलिङ्गं 'पत्यादि' इत्यत्र ब्राह्मणशब्दश्च विचार्यत इत्यर्थः ।

ಅನುವ್ಯಾಖ್ಯಾನ ಶ್ಲೋಕದ ಅಭಿಪ್ರಾಯ ಹೀಗಿದೆ - ಲಿಂಗಂ ಸಾಧಾರಣಂ = ದ್ಯುಭ್ವಾದ್ಯಧಿಕರಣದಲ್ಲಿ ಉಭಯಸಾಧಾರಣವಾದ ಸರ್ವಾಧಾರತ್ವ ಎಂಬ ಲಿಂಗವನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡುತ್ತಿದ್ದಾರೆ. ಶಬ್ದೌ = ಭೂಮಾಧಿಕರಣದಲ್ಲಿ ಹಾಗೂ ಅಕ್ಷರಾಧಿಕರಣದಲ್ಲಿ 'ಭೂಮಾ' ಎಂಬ ಶಬ್ದವನ್ನು ಮತ್ತು 'ಅಕ್ಷರ' ಎಂಬ ಶಬ್ದವನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡುತ್ತಿದ್ದಾರೆ. ಇವೆರಡು ಶಬ್ದಗಳು ಉಭಯತ್ರಪ್ರಸಿದ್ಧವಾಗಿವೆ. ಸ್ಥಾನಂ = ಈಕ್ಷತೀಕರ್ಮವ್ಯಪದೇಶಾಚ್ಚ ಎಂಬ ಸೂತ್ರದಲ್ಲಿ ಸೃಷ್ಟಿಸ್ಥಾನವನ್ನು ಸಮನ್ವಯ ಮಾಡುತ್ತಿದ್ದಾರೆ. ಲಿಂಗಂ = ದಹರಾಧಿಕರಣದಲ್ಲಿ ಹೃತ್ಪದ್ಮಸ್ಥತ್ವವೆಂಬ ಲಿಂಗವನ್ನು, ಅನುಗ್ರಹಃ = ಅನುಕೃತೇಸ್ತಸ್ಯಚ ಎಂಬ ಸೂತ್ರದಲ್ಲಿ ಆನುಕೂಲ್ಯೇನ ಗೃಹ್ಯಮಾಣತ್ವ ಎಂಬ ಲಿಂಗವನ್ನು ಸಮನ್ವಯ ಮಾಡುತ್ತಿದ್ದಾರೆ. ಪುನಃ = ಮತ್ತೂ ಕೂಡ, ಶಬ್ದಾಃ = 'ಶಬ್ದಾದೇವ ಪ್ರಮಿತಃ' ಎಂಬ ಸೂತ್ರದಲ್ಲಿ ಈಶಾನ ಶಬ್ದವನ್ನು, 'ಕಂಪನಾತ್' ಎಂಬ ಸೂತ್ರದಲ್ಲಿ ವಜ್ರಶಬ್ದವನ್ನು, 'ಜ್ಯೋತಿರ್ದರ್ಶನಾತ್' ಎಂಬ ಸೂತ್ರದಲ್ಲಿ ಜ್ಯೋತಿ ಶಬ್ದವನ್ನು, 'ಆಕಾಶೋಽರ್ಥಾಂತರತ್ವಾದಿ ವ್ಯಪದೇಶಾತ್' ಎಂಬ ಸೂತ್ರದಲ್ಲಿ 'ಆಕಾಶ' ಶಬ್ದವನ್ನು

ಸುಷುಪ್ತ್ಯಧಿಕರಣದಲ್ಲಿ ಸ್ವಪ್ನಾದಿದಷ್ಟೃತ್ವವೆಂಬ ಲಿಂಗವನ್ನು 'ಪತ್ಯಾದಿ ಶಬ್ದೇಭ್ಯಃ' ಎಂಬಲ್ಲಿ ಬ್ರಾಹ್ಮಣ ಶಬ್ದವನ್ನು ವಿಷ್ಣುವಿನಲ್ಲಿವಿಚಾರ ಮಾಡುತ್ತಿದ್ದಾರೆ. ಶ್ಲೋಕದಲ್ಲಿನ ಶಬ್ದಗಳ ಅರ್ಥ - ಇಹ = ಈ ಪಾದದಲ್ಲಿ, ದ್ವಿಸ್ಥಿತಾಃ = ಎರಡು ಕಡೆ ಪ್ರಸಿದ್ಧವಾಗಿರುವ ಲಿಂಗಶಬ್ದ ಮೊದಲಾದ್ದು, ವಿಚಾರ್ಯಾಃ = ವಿಚಾರ ಮಾಡಲ್ಪಡತಕ್ಕವು ಎಂಬುದಾಗಿ.

**अत्र च लिङ्गवचनविपरिणामेन सर्वविशेषणेन साधारणशब्देन सर्वेषामुभयत्र प्रसिद्धिः । 'द्विस्थिताः' इत्यनेन तु पूर्वोत्तरपक्षहेतुमत्तोक्तेति भेदः ।**

ಶ್ಲೋಕದಲ್ಲಿ 'ಸಾಧಾರಣಂ' ಎಂಬ ಶಬ್ದವನ್ನು ಪ್ರತಿಯೊಂದರಲ್ಲಿಯೂ ವಿಶೇಷಣವನ್ನಾಗಿ ತಿಳಿಯಬೇಕು. ಆಯಾ ಲಿಂಗವಚನಗಳಂತೆ ವ್ಯತ್ಯಾಸ ಮಾಡಿಕೊಂಡು ಅನ್ವಯ ಮಾಡಬೇಕು. ಆದ್ದರಿಂದಲೇ ಸಕಲ ಶಬ್ದಗಳು ಹಾಗೂ ಲಿಂಗಗಳು ಉಭಯಪ್ರಸಿದ್ಧವಾಗಿದೆಯೆಂದು ತಿಳಿಯುತ್ತದೆ. ಶ್ಲೋಕದಲ್ಲಿ 'ದ್ವಿಸ್ಥಿತಾ ಇಹ' ಎಂದು ಹೇಳಿದ್ದರಿಂದ ಪೂರ್ವಪಕ್ಷದಲ್ಲಿ ಹಾಗೂ ಸಿದ್ಧಾಂತ ಪಕ್ಷದಲ್ಲಿ ಹೇತುಗಳು ಸಮಾನವಾಗಿವೆ (ದ್ವಿ = ಎರಡೂ ಪಕ್ಷದಲ್ಲಿ ಸ್ಥಿತಾ = ಸಮಾನವಾಗಿವೆ ಇಹ) ಎಂದರ್ಥ. ಹೀಗೆ ಅರ್ಥವನ್ನು ಹೇಳಿದ್ದರಿಂದ 'ಸಾಧಾರಣಂ' ಎಂಬ ಶಬ್ದದ ಅರ್ಥವನ್ನೇ ಈ ಪದದಿಂದ ಹೇಳಿದಂತಾಗಲಿಲ್ಲ.

**देवताधिकरणापशूद्राधिकरणयोस्तु समन्वयाध्याये प्रासङ्गिकत्वात्तदर्थो न सङ्गृहीतः । तदुक्तमनुव्याख्याने "अधिकारश्च तद्धानिः प्रसङ्गादेव चिन्तितौ" इति ।**

ವಾಸ್ತವಿಕವಾಗಿ ಈ ಪಾದದಲ್ಲಿ ಹದಿನಾಲ್ಕು ಅಧಿಕರಣಗಳಿವೆ, ಆದರೆ ಹನ್ನೆರಡು ಅಧಿಕರಣಗಳಿಗೆ ಮಾತ್ರ ಉಪಾಧಿಯನ್ನು ಹೇಳಿದ್ದಾರಲ್ಲವೇ? ಎಂದರೆ ದೇವತಾಧಿಕರಣ ಹಾಗೂ ಅಪಶೂದ್ರಾಧಿಕರಣಗಳಲ್ಲಿ ಯಾವುದೇ ಶಬ್ದಗಳ ಸಮನ್ವಯವನ್ನು ಮಾಡುತ್ತಿಲ್ಲ. ಅವೆರಡು ಅಧಿಕರಣಗಳು ಸಮನ್ವಯಾಧ್ಯಾಯದಲ್ಲಿ ಪ್ರಾಸಂಗಿಕವಾಗಿ ಪ್ರಸಕ್ತವಾಗಿರುತ್ತವೆಂದು ತಿಳಿಯಬೇಕು. ಇದನ್ನೇ ಅನುವ್ಯಾಖ್ಯಾನದಲ್ಲಿ 'ಅಧಿಕಾರಶ್ಚ ತದ್ಧಾನಿಃ ಪ್ರಸಂಗಾದೇವ ಚಿಂತಿತೌ' ಅಧಿಕಾರವನ್ನು ಹಾಗೂ ಅಧಿಕಾರವಿಲ್ಲದಿರುವಿಕೆಯನ್ನು ಪ್ರಾಸಂಗಿಕವಾಗಿ ಚಿಂತನೆ ಮಾಡಿದ್ದಾರೆಂದು ಹೇಳಿರುತ್ತಾರೆ.

**नन्वन्यत्रप्रसिद्धशरीरित्वसाहित्यादन्तर्यामित्वमिव द्युभ्वाद्यायतनत्वमप्यन्यत्र-प्रसिद्धजायमानत्वादिसाहित्यादन्यत्रप्रसिद्धं युक्तम् । नच वाच्यं लिङ्गपादीयन्यायै-र्जायमानत्वलिङ्गस्यापि विष्णौ सम्भवेनान्यत्रप्रसिद्धिर्नेति । तथात्वे तेन पूर्वपक्षोत्त्ययोगादिति चेत् ।**

ದ್ಯುಭ್ವಾದ್ಯಧಿಕರಣ (೧-೩-೧)

ಆಕ್ಷೇಪ - ಅಂತರ್ಯಾಮಿತ್ವವನ್ನು ಅನ್ಯತ್ರಪ್ರಸಿದ್ಧವಾದ ಲಿಂಗವೆಂದು ಪರಿಗಣಿಸಿ ಅಂತರ್ಯಾಮ್ಯಧಿಕರಣದಲ್ಲಿ ಸಮನ್ವಯ ಮಾಡಿದಿರಿ. ಅಲ್ಲಿ ಅನ್ಯತ್ರಪ್ರಸಿದ್ಧವಾದ 'ಶರೀರಿತ್ವ' ಎಂಬ ಲಿಂಗದ ಜೊತೆಗೆ ಕೂಡಿರುವುದರಿಂದ ಅಂತರ್ಯಾಮಿತ್ವವು ಕೂಡ ಅನ್ಯತ್ರಪ್ರಸಿದ್ಧವಾಗಿದೆಯೆಂದು ಹೇಗೆ ಹೇಳಿದರೋ, ಅದರಂತೆ ದ್ಯುಭ್ವಾದ್ಯಾಯತನತ್ವವೆಂಬ ಲಿಂಗವೂ ಸಹ ಅನ್ಯತ್ರಪ್ರಸಿದ್ಧವಾದ ಜಾಯಮಾನತ್ವವೆಂಬ ಲಿಂಗದ ಜೊತೆಗೆ ಕೂಡಿದೆ. ಆದ್ದರಿಂದ ಅಂತರ್ಯಾಮಿತ್ವದಂತೆ ದ್ಯುಭ್ವಾದ್ಯಾಯತನತ್ವವೂ ಸಹ ಅನ್ಯತ್ರಪ್ರಸಿದ್ಧವೇ ಆಗಬೇಕು. ಇನ್ನು ಲಿಂಗಪಾದದ ನ್ಯಾಯದಂತೆ ಜಾಯಮಾನತ್ವವೆಂಬ ಲಿಂಗವೂ ಸಹ ವಿಷ್ಣುವಿನಲ್ಲೇ ಸಮನ್ವಯವಾಗುವುದರಿಂದ ಅನ್ಯತ್ರಪ್ರಸಿದ್ಧವಾಗಿವುದಿಲ್ಲವಲ್ಲವೇ? ಎಂದು ಪ್ರಶ್ನಿಸಬಾರದು. ಹಾಗಾದರೆ ಪ್ರಕೃತ ಜಾಯಮಾನತ್ವವೆಂಬ ಲಿಂಗದಿಂದ ಪೂರ್ವಪಕ್ಷ ಮಾಡಿದ್ದೇ ತಪ್ಪಾಗುತ್ತದೆ.

**उच्यते । अन्यत्रप्रसिद्धसाहचर्येण परतोऽन्यत्रप्रसिद्धत्वव-न्न्यायविवरणोदाहृताभ्यः ''रुद्रो वै लोकायतनम् । लोकाश्च लोकिनश्च विष्णावेवो-ताश्च'' इत्यादिसमाख्याश्रुतिभ्य उभयत्रप्रसिद्धसाहचर्यं विना स्वत उभयत्रप्रसिद्धत्वस्यापि सत्त्वात्तेन रूपेण पादसङ्गतिः । अन्यथा रूपद्वयवतः क्वापि विचारो न स्यात् ।**

ಸಮಾಧಾನ - ಇದಕ್ಕೆ ಹೀಗೆ ಸಮಾಧಾನ ಹೇಳಬೇಕು. ಅನ್ಯತ್ರಪ್ರಸಿದ್ಧವಾದ ಲಿಂಗದಿಂದ ಸಹಚರಿತವಾದಾಗ ಅನ್ಯತ್ರಪ್ರಸಿದ್ಧ ಹೇಗಾಗುತ್ತದೋ? ಅದರಂತೆ ನ್ಯಾಯವಿವರಣದಲ್ಲಿ ಉದಾಹರಿಸಲ್ಪಟ್ಟ 'ರುದ್ರೋ ವೈ ಲೋಕಾಯತನಮ್ । ಲೋಕಾಶ್ಚ ಲೋಕಿನಶ್ಚ ವಿಷ್ಣಾವೇವೋತಾಶ್ಚ' ಇತ್ಯಾದಿ ಸಮಾಖ್ಯಾಶ್ರುತಿಗಳಿಂದ ದ್ಯುಭ್ವಾದ್ಯಾಯತನತ್ವವು ಉಭಯತ್ರಪ್ರಸಿದ್ಧವಾಗಿದೆ. ಸ್ವತಃ ಈ ಲಿಂಗವೂ ಉಭಯತ್ರಪ್ರಸಿದ್ಧವಾಗಿದೆ ಹೊರತು ಉಭಯತ್ರಪ್ರಸಿದ್ಧವಾದ ಲಿಂಗದ ಸಾಹಚರ್ಯದಿಂದಾಗಿ ಉಭಯತ್ರಪ್ರಸಿದ್ಧವಾಗಿರುವುದಲ್ಲ. ಆದ್ದರಿಂದ ಅನ್ಯತ್ರಪ್ರಸಿದ್ಧವಾದ ಲಿಂಗದ ಜೊತೆಗೆ ಸಾಹಚರ್ಯವನ್ನು ಹೊಂದಿ ಅನ್ಯತ್ರಪ್ರಸಿದ್ಧವಾಗುವುದಕ್ಕಿಂತ ಸ್ವತಃ ಉಭಯತ್ರಪ್ರಸಿದ್ಧವಾಗಿರುವುದೇ ಶ್ರೇಷ್ಠವಾಗಿದೆ. ಹೀಗೆ ದ್ಯುಭ್ವಾದ್ಯಧಿಕರಣಕ್ಕೆ ಪಾದಸಂಗತಿಯನ್ನು ತಿಳಿಯಬೇಕು. ಹೀಗೊಪ್ಪದಿದ್ದರೆ ದ್ಯುಭ್ವಾದ್ಯಾಯತನತ್ವವೆಂಬ ಲಿಂಗವು ಅನ್ಯತ್ರಪ್ರಸಿದ್ಧವೂ ಆಗುತ್ತದೆ, ಉಭಯತ್ರಪ್ರಸಿದ್ಧವೂ ಆಗುತ್ತದೆಂದು ಭಾವಿಸಿ ಎಲ್ಲಿಯೂ ವಿಚಾರ ಮಾಡಲು ಅವಕಾಶವನ್ನು ಹೊಂದದೇ ಇರಬೇಕಾದೀತು.

**अथवा अन्यत्रप्रसिद्धेरन्यत्रप्रसिद्धान्यसाहित्यसापेक्षत्वादुभयत्रप्रसिद्धेस्तु तन्निरपेक्षत्वान्निरपेक्षादरात्पादसङ्गतिः ।**

ಪರಿಪೂರ್ಣಚಂದ್ರಿಕಾ

ಅಥವಾ ಒಂದು ಶಬ್ದಕ್ಕೆ ಅನ್ಯತ್ರಪ್ರಸಿದ್ಧಿಯನ್ನು ಹೇಳಬೇಕಾದರೆ ಅದು ಬೇರೆಕಡೆ ಪ್ರಸಿದ್ಧವಾದ ಒಂದು ಪದಾರ್ಥವನ್ನು (ಅನ್ಯಪದಾರ್ಥವನ್ನು) ಅಪೇಕ್ಷಿಸುತ್ತದೆ. ಅನ್ಯತ್ರಪ್ರಸಿದ್ಧಿಯು ಅನ್ಯಪದಾರ್ಥ ಸಾಪೇಕ್ಷ ಎಂದರ್ಥ. ಉಭಯತ್ರಪ್ರಸಿದ್ಧವಾದದ್ದಕ್ಕೆ ಅನ್ಯಸಾಹಿತ್ಯ ಸಾಪೇಕ್ಷತ್ವ ಬೇಕಾಗಿಲ್ಲ ಎಂದರೆ ದ್ಯುಭ್ವಾದ್ಯಾಯತನತ್ವವೆಂಬ ಲಿಂಗವನ್ನು ಅನ್ಯತ್ರಪ್ರಸಿದ್ಧವೆಂದು ವಿವಕ್ಷಿಸುವುದು ಅನ್ಯಸಾಹಿತ್ಯದಿಂದ ಸಾಪೇಕ್ಷಿತವಾಗಿದೆ. ಉಭಯತ್ರಪ್ರಸಿದ್ಧವಾಗಿದೆಯೆಂಬುದನ್ನು ವಿವಕ್ಷಿಸುವುದು ನಿರಪೇಕ್ಷಿತವಾಗಿದೆ. ಸಾಪೇಕ್ಷಕ್ಕಿಂತ ನಿರಪೇಕ್ಷವು ಪ್ರಬಲವಾಗಿರುವ ಕಾರಣ ದ್ಯುಭ್ವಾದ್ಯಾಯತನತ್ವಲಿಂಗಕ್ಕೆ ಉಭಯತ್ರಪ್ರಸಿದ್ಧತ್ವವನ್ನು ಅಂಗೀಕರಿಸುವುದೇ ಲೇಸು. ಹೀಗೆ ಪಾದಸಂಗತಿಯನ್ನು ಈ ಅಧಿಕರಣಕ್ಕೆ ತಿಳಿಯಬೇಕು.

# ಶ್ರೀರಾಘವೇಂದ್ರತೀರ್ಥವಿರಚಿತ
# ಪ್ರಕಾಶ

**प्रकाशः –**

**ॐ द्युभ्वाद्यायतनं स्वशब्दात् ॐ ।। अस्य पादस्यैतदध्यायान्तर्भावसङ्गते-स्समन्वयपरत्वादेव सिद्धेः पूर्वपादद्वयेन सङ्गतिं वक्तुं सर्वनामलिङ्गानां पादद्वयेनैव विष्णौ समन्वितत्वान्नामलिङ्गेभ्योऽन्यस्याभावाद्व्यर्थोऽयं पाद इत्यतः पादफलमाह – अत्रेति ।।**

ವಿವರಣೆ - ಪ್ರಥಮಾಧ್ಯಾಯದ ಮೂರನೇ ಪಾದವು ಪ್ರಾರಂಭವಾಗುತ್ತಿದೆ. ಮೊದಲನೆಯ ಅಧಿಕರಣ - 'ದ್ಯುಭ್ವಾದ್ಯಾಧಿಕರಣ' 'ಓಂ ದ್ಯುಭ್ವಾದ್ಯಾಯತನಂ ಸ್ವಶಬ್ದಾತ್ ಓಂ' ಎಂಬ ಸೂತ್ರದಿಂದ ಈ ಅಧಿಕರಣವು ಪ್ರಾರಂಭವಾಗುತ್ತಿದೆ. ಮೂರನೆಯ ಈ ಪಾದವು ಸಮನ್ವಯವನ್ನು ಮಾಡುವ ಮೂಲಕವಾಗಿ ಪ್ರಥಮಾಧ್ಯಾಯದಲ್ಲಿ ಅಂತರ್ಭಾವಸಂಗತಿಯನ್ನು ಹೊಂದಿದೆ. ಇನ್ನು ಪಾದಸಂಗತಿಯನ್ನು ಹೀಗೆ ತಿಳಿಯಬೇಕು. ಹಿಂದಿನ ಎರಡು ಪಾದಗಳಲ್ಲಿ ಸಕಲ ನಾಮಾತ್ಮಕಶಬ್ದಗಳನ್ನು ಸಕಲ ಲಿಂಗಾತ್ಮಕಶಬ್ದಗಳನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡಿದರು. ವೈದಿಕಸಾಹಿತ್ಯದಲ್ಲಿ ನಾಮಾತ್ಮಕಶಬ್ದಗಳು ಮತ್ತು ಲಿಂಗಾತ್ಮಕಶಬ್ದಗಳು ಎಂಬುದಾಗಿ ಎರಡೇ ವಿಧಶಬ್ದಗಳಿರುತ್ತವೆ. ಇವುಗಳನ್ನೆಲ್ಲಾ ಸಮನ್ವಯ ಮಾಡಿ ಮುಗಿಸಿದ ಮೇಲೆ ಮತ್ತೊಂದು ಬಗೆಯ ಶಬ್ದಗಳ ಸಮನ್ವಯವು ಉಳಿದಿರುವುದಿಲ್ಲ. ಆದ್ದರಿಂದ ಈ ಪಾದವು ಹೊರಟಿದ್ದು, ವ್ಯರ್ಥವಲ್ಲವೇ? ಎಂಬ ಪ್ರಶ್ನೆಗೆ ಸಮಸ್ತ ಈ ಪಾದದ ಪ್ರಯೋಜನವನ್ನು ತಿಳಿಸುವುದಕ್ಕಾಗಿ 'ಅತ್ರ' ಎಂಬ ಗ್ರಂಥವು ಪ್ರಾರಂಭವಾಗುತ್ತಿದೆ.

ದ್ಯುಭ್ವಾದ್ಯಧಿಕರಣ (೧-೩-೧)

**प्रकाशः** – अस्य इति शङ्का निरस्यत इति श्लोकगतेनान्वयः । पूर्वं द्विपाद्यां लोकतोऽन्यत्रप्रसिद्धानामशेषनाम्नामशेषलिङ्गानामन्यैकगतत्वमाशङ्क्य न्यायैर्ब्रह्मगतत्वमुक्तम् ।

'ಅತ್ರ' ಎಂಬ ಶಬ್ದಕ್ಕೆ 'ಇತಿ ಶಂಕಾ ನಿರಸ್ಯತೇ' ಎಂಬ ಶ್ಲೋಕದಲ್ಲಿರುವ ಪದಗಳ ಜೊತೆಗೆ ಅನ್ವಯವನ್ನು ತಿಳಿಯಬೇಕು. ಹಿಂದಿನ ಎರಡು ಪಾದಗಳಲ್ಲಿ ಲೋಕತಃ ಅನ್ಯತ್ರಪ್ರಸಿದ್ಧವಾದ ಸಕಲ ನಾಮಾತ್ಮಕಶಬ್ದಗಳನ್ನು, ಹಾಗೂ ಸಕಲ ಲಿಂಗಾತ್ಮಕಶಬ್ದಗಳನ್ನು ಅನ್ಯಮಾತ್ರಗತವೆಂದು ಆಶಂಕಿಸಿ ಅನೇಕ ನ್ಯಾಯಗಳಿಂದ ಬ್ರಹ್ಮನಲ್ಲಿ ಸಮನ್ವಯ ಮಾಡಿದರು.

**प्रकाशः** – एवं तर्हि लोकप्रसिद्धिन्याययोरुभयोरनुग्रहायोभयत्र वृत्तिरस्त्विति शङ्का पादद्वयानन्तरमेवोदेतीति साऽत्र पादे निरस्यते । तथाच श्रोत्राकाङ्क्षिततैव सङ्गतिरिति भावः ।

ಹಾಗಾದರೆ ಲೋಕಪ್ರಸಿದ್ಧಿ ಹಾಗೂ ಎರಡು ಪಾದಗಳಲ್ಲಿ ಹೇಳಲ್ಪಟ್ಟ ನ್ಯಾಯಗಳೆರಡನ್ನು ಅನುಗ್ರಹ ಮಾಡುವುದಕ್ಕಾಗಿ ಉಭಯತ್ರಪ್ರಸಿದ್ಧವಾದ ಶಬ್ದಗಳಿರಬಹುದಲ್ಲವೇ? ಎಂಬ ಆಶಂಕೆಯು ಬರುತ್ತದೆ. ಅಂದರೆ ಕೆಲವು ಶಬ್ದಗಳು ಸ್ವತಃ ಲೋಕಪ್ರಸಿದ್ಧವಾಗಿವೆ. ಅವುಗಳನ್ನು ನ್ಯಾಯದ ಬಲದಿಂದ ವಿಷ್ಣುವಿನಲ್ಲಿ ಸಮನ್ವಯ ಮಾಡಿದಾಗ ಒಂದೇ ಶಬ್ದವು ಲೋಕರೂಢಿಯಿಂದ ಲೌಕಿಕ ವಸ್ತುವನ್ನು ಪ್ರತಿಪಾದನೆ ಮಾಡುತ್ತದೆ. ನ್ಯಾಯದ ಬಲದಿಂದ ವಿಷ್ಣುವನ್ನೂ ಸಹ ಪ್ರತಿಪಾದನೆ ಮಾಡುತ್ತದೆ. ಹೀಗೇಕೆ ಒಪ್ಪಬಾರದು. ಎಂಬ ಆಶಂಕೆಯು ಪ್ರಾಪ್ತವಾಗುತ್ತದೆ. ಆದ್ದರಿಂದ ಎರಡೂ ಪಾದಗಳ ಅನಂತರವೇ ಈ ಸಂಶಯವು ಸಂಗತವಾಗುತ್ತದೆಂದು ಅಭಿಪ್ರಾಯ. ಈ ಶಂಕೆಯನ್ನು ಈ ಪಾದದಲ್ಲಿ ನಿರಾಕರಿಸುತ್ತಾರೆ. ಆದ್ದರಿಂದ ಶ್ರೋತೃಗಳ ಆಕಾಂಕ್ಷಾ ಕ್ರಮಕ್ಕೆ ಅನುಸಾರಿಯಾಗಿ ಈ ಪಾದಕ್ಕೆ ಸಂಗತಿಯಿರುತ್ತದೆಂದು ಭಾವಿಸಬೇಕು.

**प्रकाशः** – केषामित्याकाङ्क्षां पूरयन् श्लोकं व्याचष्टे – पादद्वयेति ।। नामलिङ्गात्मकशब्दानामिति शेषः । पादद्वयोक्तन्यायैरापादितोभयप्रसिद्धिकानाम् इत्यर्थः ।

ಶ್ಲೋಕದಲ್ಲಿ ಉಭಯಗತವಾಗಲಿ ಎಂದಷ್ಟೇ ಹೇಳಿದ್ದಾರೆ. ಯಾವುದು ಉಭಯಗತವಾಗುತ್ತವೆಂಬ ಆಕಾಂಕ್ಷೆಯನ್ನು ಶಾಂತ ಮಾಡುವುದಕ್ಕಾಗಿ ಸ್ವತಃ ತಾವೇ ಶ್ಲೋಕವನ್ನು ವ್ಯಾಖ್ಯಾನಿಸುತ್ತಿದ್ದಾರೆ 'ಪಾದದ್ವಯ' ಇತ್ಯಾದಿ ವಾಕ್ಯದಿಂದ. ನಾಮಲಿಂಗಾತ್ಮಕಶಬ್ದಗಳಿಗೆ ಎಂದು ಶೇಷಪೂರಣೆಯನ್ನು ಮಾಡಿಕೊಳ್ಳಬೇಕು. ಅಂದರೆ ಹಿಂದಿನೆರಡು ಪಾದಗಳಲ್ಲಿ ಹೇಳಲ್ಪಟ್ಟ ನ್ಯಾಯಗಳಿಂದ ಕೆಲವು ಶಬ್ದಗಳಿಗೆ ಉಭಯತ್ರಪ್ರಸಿದ್ಧಿಯನ್ನು ಮೇಲ್ನೋಟಕ್ಕೆ ಹೇಳಿದಂತಾಗಿರುತ್ತದೆ ಅಂತಹ ಶಬ್ದಗಳಿಗೆ ಎಂದರ್ಥ.

**प्रकाशः** – यद्यपि प्रागुक्तन्यायैर्ब्रह्मण्येव प्रसिद्धिस्सम्पाद्यते । नत्वन्यत्रापि । अन्यत्र तु सा लोकत एव । तथापि लोकतोऽन्यत्रप्रसिद्धौ सत्यां यत्नेन ब्रह्मणि तस्यामुक्तायामुभयत्रैव साऽऽपादिता भवतीति भावेनोभयेत्युक्तम् ।

ವಸ್ತುತಃ ಹಿಂದಿನೆರಡು ಪಾದಗಳಲ್ಲಿ ಹೇಳಲ್ಪಟ್ಟ ನ್ಯಾಯಗಳಿಂದ ಶಬ್ದವನ್ನು ಬ್ರಹ್ಮನಲ್ಲಿ ಮಾತ್ರ ಸಮನ್ವಯ ಮಾಡಲು ಬರುತ್ತದೆಂದು ಸಮರ್ಥಿಸಲಾಗಿದೆ. ಹೊರತು, ಬೇರೆ ಕಡೆಯೂ ಬರುತ್ತದೆಂದು ಸಮರ್ಥಿಸಿರುವುದಿಲ್ಲ. ಹಾಗೇನಾದರೂ ಬೇರೆ ಕಡೆ ಪ್ರಸಿದ್ಧಿಯಿದ್ದರೆ ಅದು ಕೇವಲ ಲೋಕರೂಢಿಯಿಂದ ಎಂದು ತಿಳಿಯಬೇಕು. ಆದರೂ ಸಹ ಲೋಕತಃ ಅನ್ಯತ್ರಪ್ರಸಿದ್ಧವಾಗಿರುವಾಗಲೇ ಆ ಶಬ್ದಗಳನ್ನು ಬ್ರಹ್ಮನಲ್ಲಿ ಪ್ರಯತ್ನಪೂರ್ವಕವಾಗಿ ಸಮನ್ವಯ ಮಾಡಿದಾಗ ಆ ಶಬ್ದಗಳು ಉಭಯತ್ರಪ್ರಸಿದ್ಧವಾಗಿವೆ ಎಂದು ಹೇಳಿದಂತಾಗುತ್ತದೆ. ಈ ಅಭಿಪ್ರಾಯದಿಂದ ಗ್ರಂಥದಲ್ಲಿ 'ಉಭಯಪರತ್ವಮ್' ಎಂದು ಹೇಳಿರುತ್ತಾರೆ.

**प्रकाशः** – एतेन प्रागेवान्यगतत्वनिरासस्य ''नेतरोऽनुपपत्तेः । अनुपपत्तेस्तु न शारीरः । अनवस्थितेरसम्भवाच्च नेतरः । न च स्मार्तमतद्धर्माभिलापात्'' इत्यादिना कृतत्वान्नैतच्छङ्कावकाश इति निरस्तम् ।

ಆಕ್ಷೇಪ - ಪರಮಾತ್ಮನನ್ನು ಬಿಟ್ಟು ಬೇರೆ ಕಡೆ ಶಬ್ದಗಳು ಬರುವುದೇ ಇಲ್ಲವೆಂಬ ವಿಚಾರವನ್ನು 'ನೇತರೋಽನುಪಪತ್ತೇಃ', 'ಅನುಪಪತ್ತೇಸ್ತು ನ ಶಾರೀರಃ', 'ಅನವಸ್ಥಿತೇರಸಂಭವಾಚ್ಚ ನೇತರಃ', 'ನಚ ಸ್ಮಾರ್ತಮತದ್ಧರ್ಮಾಭಿಲಾಪಾತ್' ಇವೇ ಮೊದಲಾದ ಸೂತ್ರಗಳಿಂದ ಸಮರ್ಥಿಸಿದ್ದಾಗಿದೆ. ಪುನಃ ಅಂತಹ ಶಬ್ದಗಳು ಬೇರೆ ಕಡೆ ಬರುವುದಿಲ್ಲವೆಂಬ ಸಮರ್ಥನೆಗೋಸ್ಕರ ಈ ಪಾದವು ಹೊರಡಬೇಕಾಗಿಲ್ಲವಲ್ಲವೇ?

ಸಮಾಧಾನ - ಈ ಆಕ್ಷೇಪವನ್ನೂ ಸಹ ಈಗ ನಿರಾಕರಿಸಿದಂತಾಯಿತು. ಅದರ ವಿವರಣೆ ಹೀಗಿದೆ -

**प्रकाशः** – 'नेतरः' इत्यादिना शब्दानामन्यत्र तात्पर्याभावमात्रोक्तावपि शक्तेरनिरासेनोभयत्र शक्तिस्स्यादिति वा येषामुभयगतत्वेऽनुपपत्त्यादेस्स्फुट-प्रतिभासस्तदन्येषां पादद्वयापादितोभयप्रसिद्धिकानामुभयपरत्वमेवेति वा शङ्कोदयादिति तृतीये सुधायामेव व्यक्तत्वादिति भावः ।

'ನೇತರೋಽನುಪಪತ್ತೇಃ' ಇತ್ಯಾದಿ ಸೂತ್ರಗಳಲ್ಲಿ ಶಬ್ದಗಳಿಗೆ ಬೇರೆ ಕಡೆ ತಾತ್ಪರ್ಯವಿಲ್ಲವೆಂದಷ್ಟೇ ಸಮರ್ಥಿಸಲಾಗಿದೆ ಹೊರತು, ಶಕ್ತಿಯಿಲ್ಲವೆಂದು ನಿರಾಕರಿಸಿಲ್ಲ. ಆದ್ದರಿಂದ ತಾತ್ಪರ್ಯವಿಲ್ಲದಿದ್ದರೂ ಶಕ್ತಿಯಿರಬಹುದು. ಹಾಗಾಗಿ ಒಂದೇ ಶಬ್ದಕ್ಕೆ ವಿಷ್ಣುವಿನಲ್ಲಿ ಹಾಗೂ ಬೇರೆ ಪದಾರ್ಥಗಳಲ್ಲಿ ಶಕ್ತಿಯನ್ನು ಒಪ್ಪಲು ಏನೂ ಆತಂಕವಿಲ್ಲವೆಂಬ ಶಂಕೆಯು ಬಂದೇ ಬರುತ್ತದೆ. ಅಥವಾ ಆನಂದಮಯ ಮೊದಲಾದ ಶಬ್ದಗಳು ಉಭಯತ್ರಪ್ರಸಿದ್ಧವಾಗಿದೆಯೆಂದು ಹೇಳಿದರೆ ಅನುಪಪತ್ತಿಯು ಸ್ಫುಟವಾಗಿ ಗೋಚರಿಸುತ್ತದೆ. ಆದರೆ ಯಾವ ಶಬ್ದಗಳು ಉಭಯತ್ರಪ್ರಸಿದ್ಧವಾದಾಗ ಅನುಪಪತ್ತಿಯು ಸ್ಪಷ್ಟವಾಗಿ ತಿಳಿಯವುದಿಲ್ಲವೋ, ಹಿಂದಿನೆರಡು ಪಾದಗಳಿಂದ ವಿಷ್ಣುವಿನಲ್ಲಿ ಪ್ರಸಿದ್ಧವಾಗಿದೆಯೆಂದು ಲೋಕರೂಢಿಯಿಂದ ಲೋಕದಲ್ಲಿ ಪ್ರಸಿದ್ಧವಾಗಿದೆಯೆಂದು ಆಪಾತತಃ ತೋರುತ್ತದೋ, ಅಂತಹ ಶಬ್ದಗಳಿಗೆ ಉಭಯಪರತ್ವ ಶಂಕಾವನ್ನು ನಿರಾಕರಿಸುವುದಕ್ಕಾಗಿ ಈ ಪಾದವು ಹೊರಡಲೇ ಬೇಕು. ಹೀಗೆ ನ್ಯಾಯಸುಧಾ ಗ್ರಂಥದ ಮೂರನೇ ಪಾದದಲ್ಲಿ ಹೇಳಿರುತ್ತಾರೆ.

## ದ್ಯುಭ್ವಾದ್ಯಧಿಕರಣ (೧-೩-೧)

**प्रकाशः** – अस्य इति शङ्का निरस्यत इति श्लोकगतेनान्वयः । पूर्वं द्विपाद्यां लोकतोऽन्यत्रप्रसिद्धानामशेषनाम्नामशेषलिङ्गानामन्यैकगतत्वमाशङ्क्य न्यायैर्ब्रह्मगतत्वमुक्तम् ।

'ಅತ್ರ' ಎಂಬ ಶಬ್ದಕ್ಕೆ 'ಇತಿ ಶಂಕಾ ನಿರಸ್ಯತೇ' ಎಂಬ ಶ್ಲೋಕದಲ್ಲಿರುವ ಪದಗಳ ಜೊತೆಗೆ ಅನ್ವಯವನ್ನು ತಿಳಿಯಬೇಕು. ಹಿಂದಿನ ಎರಡು ಪಾದಗಳಲ್ಲಿ ಲೋಕತಃ ಅನ್ಯತ್ರಪ್ರಸಿದ್ಧವಾದ ಸಕಲ ನಾಮಾತ್ಮಕಶಬ್ದಗಳನ್ನು, ಹಾಗೂ ಸಕಲ ಲಿಂಗಾತ್ಮಕಶಬ್ದಗಳನ್ನು ಅನ್ಯಮಾತ್ರಗತವೆಂದು ಆಶಂಕಿಸಿ ಅನೇಕ ನ್ಯಾಯಗಳಿಂದ ಬ್ರಹ್ಮನಲ್ಲಿ ಸಮನ್ವಯ ಮಾಡಿದರು.

**प्रकाशः** – एवं तर्हि लोकप्रसिद्धिन्याययोरुभयोरनुग्रहायोभयत्र वृत्तिरस्त्विति शङ्का पादद्वयानन्तरमेवोदेतीति साऽत्र पादे निरस्यते । तथाच श्रोत्राकाङ्क्षिततैव सङ्गतिरिति भावः ।

ಹಾಗಾದರೆ ಲೋಕಪ್ರಸಿದ್ಧಿ ಹಾಗೂ ಎರಡು ಪಾದಗಳಲ್ಲಿ ಹೇಳಲ್ಪಟ್ಟ ನ್ಯಾಯಗಳೆರಡನ್ನು ಅನುಗ್ರಹ ಮಾಡುವುದಕ್ಕಾಗಿ ಉಭಯತ್ರಪ್ರಸಿದ್ಧವಾದ ಶಬ್ದಗಳಿರಬಹುದಲ್ಲವೇ? ಎಂಬ ಆಶಂಕೆಯು ಬರುತ್ತದೆ. ಅಂದರೆ ಕೆಲವು ಶಬ್ದಗಳು ಸ್ವತಃ ಲೋಕಪ್ರಸಿದ್ಧವಾಗಿವೆ. ಅವುಗಳನ್ನು ನ್ಯಾಯದ ಬಲದಿಂದ ವಿಷ್ಣುವಿನಲ್ಲಿ ಸಮನ್ವಯ ಮಾಡಿದಾಗ ಒಂದೇ ಶಬ್ದವು ಲೋಕರೂಢಿಯಿಂದ ಲೌಕಿಕ ವಸ್ತುವನ್ನು ಪ್ರತಿಪಾದನೆ ಮಾಡುತ್ತದೆ. ನ್ಯಾಯದ ಬಲದಿಂದ ವಿಷ್ಣುವನ್ನೂ ಸಹ ಪ್ರತಿಪಾದನೆ ಮಾಡುತ್ತದೆ. ಹೀಗೇಕೆ ಒಪ್ಪಬಾರದು. ಎಂಬ ಆಶಂಕೆಯು ಪ್ರಾಪ್ತವಾಗುತ್ತದೆ. ಆದ್ದರಿಂದ ಎರಡೂ ಪಾದಗಳ ಅನಂತರವೇ ಈ ಸಂಶಯವು ಸಂಗತವಾಗುತ್ತದೆಂದು ಅಭಿಪ್ರಾಯ. ಈ ಶಂಕೆಯನ್ನು ಈ ಪಾದದಲ್ಲಿ ನಿರಾಕರಿಸುತ್ತಾರೆ. ಆದ್ದರಿಂದ ಶ್ರೋತೃಗಳ ಆಕಾಂಕ್ಷಾ ಕ್ರಮಕ್ಕೆ ಅನುಸಾರಿಯಾಗಿ ಈ ಪಾದಕ್ಕೆ ಸಂಗತಿಯಿರುತ್ತದೆಂದು ಭಾವಿಸಬೇಕು.

**प्रकाशः** – केषामित्याकाङ्क्षां पूरयन् श्लोकं व्याचष्टे – पादद्वयेति ॥ नामलिङ्गात्मकशब्दानामिति शेषः । पादद्वयोक्तन्यायैरापादितोभयप्रसिद्धिकानाम् इत्यर्थः ।

ಶ್ಲೋಕದಲ್ಲಿ ಉಭಯಗತವಾಗಲಿ ಎಂದಷ್ಟೇ ಹೇಳಿದ್ದಾರೆ. ಯಾವುದು ಉಭಯಗತವಾಗುತ್ತವೆಂಬ ಆಕಾಂಕ್ಷೆಯನ್ನು ಶಾಂತ ಮಾಡುವುದಕ್ಕಾಗಿ ಸ್ವತಃ ತಾವೇ ಶ್ಲೋಕವನ್ನು ವ್ಯಾಖ್ಯಾನಿಸುತ್ತಿದ್ದಾರೆ 'ಪಾದದ್ವಯ' ಇತ್ಯಾದಿ ವಾಕ್ಯದಿಂದ. ನಾಮಲಿಂಗಾತ್ಮಕಶಬ್ದಗಳಿಗೆ ಎಂದು ಶೇಷಪೂರಣೆಯನ್ನು ಮಾಡಿಕೊಳ್ಳಬೇಕು. ಅಂದರೆ ಹಿಂದಿನೆರಡು ಪಾದಗಳಲ್ಲಿ ಹೇಳಲ್ಪಟ್ಟ ನ್ಯಾಯಗಳಿಂದ ಕೆಲವು ಶಬ್ದಗಳಿಗೆ ಉಭಯತ್ರಪ್ರಸಿದ್ಧಿಯನ್ನು ಮೇಲ್ನೋಟಕ್ಕೆ ಹೇಳಿದಂತಾಗಿರುತ್ತದೆ ಅಂತಹ ಶಬ್ದಗಳಿಗೆ ಎಂದರ್ಥ.

**प्रकाशः** – यद्यपि प्रागुक्तन्यायैर्ब्रह्मण्येव प्रसिद्धिस्सम्पाद्यते । नत्वन्यत्रापि । अन्यत्र तु सा लोकत एव । तथापि लोकतोऽन्यत्रप्रसिद्धौ सत्यां यत्नेन ब्रह्मणि तस्यामुक्तायामुभयत्रैव साऽऽपादिता भवतीति भावेनोभयेत्युक्तम् ।

ವಸ್ತುತಃ ಹಿಂದಿನೆರಡು ಪಾದಗಳಲ್ಲಿ ಹೇಳಲ್ಪಟ್ಟ ನ್ಯಾಯಗಳಿಂದ ಶಬ್ದವನ್ನು ಬ್ರಹ್ಮನಲ್ಲಿ ಮಾತ್ರ ಸಮನ್ವಯ ಮಾಡಲು ಬರುತ್ತದೆಂದು ಸಮರ್ಥಿಸಲಾಗಿದೆ. ಹೊರತು, ಬೇರೆ ಕಡೆಯೂ ಬರುತ್ತದೆಂದು ಸಮರ್ಥಿಸಿರುವುದಿಲ್ಲ. ಹಾಗೇನಾದರೂ ಬೇರೆ ಕಡೆ ಪ್ರಸಿದ್ಧಿಯಿದ್ದರೆ ಅದು ಕೇವಲ ಲೋಕರೂಢಿಯಿಂದ ಎಂದು ತಿಳಿಯಬೇಕು. ಆದರೂ ಸಹ ಲೋಕತಃ ಅನ್ಯತ್ರಪ್ರಸಿದ್ಧವಾಗಿರುವಾಗಲೇ ಆ ಶಬ್ದಗಳನ್ನು ಬ್ರಹ್ಮನಲ್ಲಿ ಪ್ರಯತ್ನಪೂರ್ವಕವಾಗಿ ಸಮನ್ವಯ ಮಾಡಿದಾಗ ಆ ಶಬ್ದಗಳು ಉಭಯತ್ರಪ್ರಸಿದ್ಧವಾಗಿವೆ ಎಂದು ಹೇಳಿದಂತಾಗುತ್ತದೆ. ಈ ಅಭಿಪ್ರಾಯದಿಂದ ಗ್ರಂಥದಲ್ಲಿ 'ಉಭಯಪರತ್ವಮ್' ಎಂದು ಹೇಳಿರುತ್ತಾರೆ.

**प्रकाशः** – एतेन प्रागेवान्यगतत्वनिरासस्य "नेतरोऽनुपपत्तेः । अनुपपत्तेस्तु न शारीरः । अनवस्थितेरसम्भवाच्च नेतरः । न च स्मार्तमतद्धर्माभिलापात्" इत्यादिना कृतत्वान्नैतच्छङ्कावकाश इति निरस्तम् ।

ಆಕ್ಷೇಪ - ಪರಮಾತ್ಮನನ್ನು ಬಿಟ್ಟು ಬೇರೆ ಕಡೆ ಶಬ್ದಗಳು ಬರುವುದೇ ಇಲ್ಲವೆಂಬ ವಿಚಾರವನ್ನು 'ನೇತರೋಽನುಪಪತ್ತೇಃ', 'ಅನುಪಪತ್ತೇಸ್ತು ನ ಶಾರೀರಃ', 'ಅನವಸ್ಥಿತೇರಸಂಭವಾಚ್ಚ ನೇತರಃ', 'ನಚ ಸ್ಮಾರ್ತಮತದ್ಧರ್ಮಾಭಿಲಾಪಾತ್' ಇವೇ ಮೊದಲಾದ ಸೂತ್ರಗಳಿಂದ ಸಮರ್ಥಿಸಿದ್ದಾಗಿದೆ. ಪುನಃ ಅಂತಹ ಶಬ್ದಗಳು ಬೇರೆ ಕಡೆ ಬರುವುದಿಲ್ಲವೆಂಬ ಸಮರ್ಥನೆಗೋಸ್ಕರ ಈ ಪಾದವು ಹೊರಡಬೇಕಾಗಿಲ್ಲವಲ್ಲವೇ?

ಸಮಾಧಾನ - ಈ ಆಕ್ಷೇಪವನ್ನೂ ಸಹ ಈಗ ನಿರಾಕರಿಸಿದಂತಾಯಿತು. ಅದರ ವಿವರಣೆ ಹೀಗಿದೆ -

**प्रकाशः** – 'नेतरः' इत्यादिना शब्दानामन्यत्र तात्पर्याभावमात्रोक्तावपि शक्तेरनिरासेनोभयत्र शक्तिस्स्यादिति वा येषामुभयगतत्वेऽनुपपत्त्यादेस्स्फुट-प्रतिभासस्तदन्येषां पादद्वयापादितोभयप्रसिद्धिकानामुभयपरत्वमेवेति वा शङ्कोदयादिति तृतीये सुधायामेव व्यक्तत्वादिति भावः ।

'ನೇತರೋಽನುಪಪತ್ತೇಃ' ಇತ್ಯಾದಿ ಸೂತ್ರಗಳಲ್ಲಿ ಶಬ್ದಗಳಿಗೆ ಬೇರೆ ಕಡೆ ತಾತ್ಪರ್ಯವಿಲ್ಲವೆಂದಷ್ಟೇ ಸಮರ್ಥಿಸಲಾಗಿದೆ ಹೊರತು, ಶಕ್ತಿಯಿಲ್ಲವೆಂದು ನಿರಾಕರಿಸಿಲ್ಲ. ಆದ್ದರಿಂದ ತಾತ್ಪರ್ಯವಿಲ್ಲದಿದ್ದರೂ ಶಕ್ತಿಯಿರಬಹುದು. ಹಾಗಾಗಿ ಒಂದೇ ಶಬ್ದಕ್ಕೆ ವಿಷ್ಣುವಿನಲ್ಲಿ ಹಾಗೂ ಬೇರೆ ಪದಾರ್ಥಗಳಲ್ಲಿ ಶಕ್ತಿಯನ್ನು ಒಪ್ಪಲು ಏನೂ ಆತಂಕವಿಲ್ಲವೆಂಬ ಶಂಕೆಯು ಬಂದೇ ಬರುತ್ತದೆ. ಅಥವಾ ಆನಂದಮಯ ಮೊದಲಾದ ಶಬ್ದಗಳು ಉಭಯತ್ರಪ್ರಸಿದ್ಧವಾಗಿದೆಯೆಂದು ಹೇಳಿದರೆ ಅನುಪಪತ್ತಿಯು ಸ್ಫುಟವಾಗಿ ಗೋಚರಿಸುತ್ತದೆ. ಆದರೆ ಯಾವ ಶಬ್ದಗಳು ಉಭಯತ್ರಪ್ರಸಿದ್ಧವಾದಾಗ ಅನುಪಪತ್ತಿಯು ಸ್ಪಷ್ಟವಾಗಿ ತಿಳಿಯವುದಿಲ್ಲವೋ, ಹಿಂದಿನೆರಡು ಪಾದಗಳಿಂದ ವಿಷ್ಣುವಿನಲ್ಲಿ ಪ್ರಸಿದ್ಧವಾಗಿದೆಯೆಂದು ಲೋಕರೂಢಿಯಿಂದ ಲೋಕದಲ್ಲಿ ಪ್ರಸಿದ್ಧವಾಗಿದೆಯೆಂದು ಆಪಾತತಃ ತೋರುತ್ತದೋ, ಅಂತಹ ಶಬ್ದಗಳಿಗೆ ಉಭಯಪರತ್ವ ಶಂಕಾವನ್ನು ನಿರಾಕರಿಸುವುದಕ್ಕಾಗಿ ಈ ಪಾದವು ಹೊರಡಲೇ ಬೇಕು. ಹೀಗೆ ನ್ಯಾಯಸುಧಾ ಗ್ರಂಥದ ಮೂರನೇ ಪಾದದಲ್ಲಿ ಹೇಳಿರುತ್ತಾರೆ.

ದ್ಯುಭ್ವಾದ್ಯಧಿಕರಣ (೧-೩-೧)

**प्रकाशः** – न केवलं त एव पुनरन्येऽपीत्याह – **स्वत इति** ।। श्रुत्यादिसाम्येन वा प्रवृत्तिनिमित्तादिसाम्येन वेत्यर्थः ।

ಕೇವಲ ಹಿಂದೆ ಹೇಳಿದ ಪ್ರಕಾರ ಉಭಯತ್ರಪ್ರಸಿದ್ಧವಾದ ಶಬ್ದಗಳ ಸಮನ್ವಯಕ್ಕೋಸ್ಕರ ಮಾತ್ರ ಈ ಪಾದ ಹೊರಟಿರುವುದಲ್ಲ. ಸ್ವತಃ ಯಾವ ಶಬ್ದಗಳು ಉಭಯತ್ರಪ್ರಸಿದ್ಧವಾಗಿವೆಯೋ? ಅವುಗಳ ಸಮನ್ವಯಕ್ಕೋಸ್ಕರವೂ ಈ ಪಾದವು ಹೊರಟಿರುತ್ತದೆಯೆಂಬ ಅಭಿಪ್ರಾಯದಿಂದ 'ಸ್ವತಃ' ಎಂಬ ವಾಕ್ಯವು ಹೊರಟಿದೆ. 'ಸ್ವತಃ' ಎಂಬ ಪದಕ್ಕೆ ಎರಡೂ ಕಡೆ ಶ್ರುತಿಯು ಸಮಾನವಾಗಿರುವುದರಿಂದ ಅಥವಾ ಪ್ರವೃತ್ತಿನಿಮಿತ್ತಾದಿಗಳು ಸಮಾನವಾಗಿರುವುದರಿಂದ ಉಭಯತ್ರಪ್ರಸಿದ್ಧವಾಗಿವೆಯೆಂದರ್ಥವೆಂದು ತಿಳಿಯಬೇಕು.

**प्रकाशः** – 'सर्वत्र' इति नयोक्तदिशा पूर्वं शब्दानां ब्रह्मणि तात्पर्यमेवावधारितं नतु शक्तिरपीति पक्षमुपेत्योक्तमुभयपरत्वमेव नतु ब्रह्मैकपरतेति ।

ಸರ್ವಗತತ್ವಾಧಿಕರಣದಲ್ಲಿ ಹೇಳಿದಂತೆ ಮೊದಲಿನ ಪಾದಗಳಲ್ಲಿ ಸಕಲ ಶಬ್ದಗಳಿಗೆ ಬ್ರಹ್ಮನಲ್ಲಿ ತಾತ್ಪರ್ಯವನ್ನಷ್ಟೇ ನಿಶ್ಚಯ ಮಾಡಲಾಗಿದೆ. ಹೊರತು ಶಕ್ತಿಯ ನಿಶ್ಚಯವನ್ನು ಮಾಡಿರುವುದಿಲ್ಲ. ಹೀಗೆ ಒಪ್ಪಿದಾಗ ಶಬ್ದಗಳು ಉಭಯಪರವೇ ಆಗುತ್ತವೆ ಹೊರತು, ಕೇವಲ ಬ್ರಹ್ಮಪರವಾಗುವುದಿಲ್ಲವೆಂದು ತಿಳಿಯಬೇಕು.

**प्रकाशः** – एतेन ब्रह्मपरत्वस्य पूर्वन्यायेनैव सिद्धेः किमनेन पादेनेति शङ्का प्रत्युक्ता । ब्रह्मपरतामात्रसिद्धावपि "तत्तुसमन्वयात्" इत्युक्तावधारणानुपपत्तिशङ्कायां तत्समर्थनार्थत्वादयं पादस्सफल इति तात्पर्यात् ।

ಇದರಿಂದ ಮತ್ತೊಂದು ಆಕ್ಷೇಪವನ್ನು ನಿರಾಕರಿಸಿದಂತಾಯಿತು. ಆಕ್ಷೇಪ ಹೀಗಿದೆ - ಬ್ರಹ್ಮಪರತ್ವವು ಹಿಂದಿನ ಪಾದದ ನ್ಯಾಯದಿಂದಲೇ ಸಿದ್ಧವಾಗಿರುವಾಗ ಪುನಃ ಈ ಪಾದದ ಅನಿವಾರ್ಯತೆ ಏನು? ಎಂದು ಆಕ್ಷೇಪ. ಸಮಾಧಾನ ಹೀಗೆ - ಹಿಂದಿನ ಪಾದದ ನ್ಯಾಯಗಳಿಂದ ಬ್ರಹ್ಮಪರತ್ವವಷ್ಟೇ ಸಿದ್ಧವಾಗಿದ್ದರೂ ಮತ್ತೊಂದು ಪದಾರ್ಥವನ್ನು ಪ್ರತಿಪಾದಿಸುವುದಿಲ್ಲವೆಂಬ ವಿಚಾರವು ಸಿದ್ಧವಾಗಿಲ್ಲ. ಆದ್ದರಿಂದ 'ತತ್ತುಸಮನ್ವಯಾತ್' ಎಂಬ ಸೂತ್ರದಲ್ಲಿ ಅವಧಾರಣೆಯು ಅನುಪಪನ್ನವಾಗುತ್ತದೆಂಬ ಶಂಕೆಯು ಬರುತ್ತದೆ. ಅವಧಾರಣೆಯ ಸಮರ್ಥನೆಗೋಸ್ಕರ ಈ ಪಾದವು ಹೊರಟಿದ್ದು ಸಾರ್ಥಕವೆಂದು ತಿಳಿಯಬೇಕು.

**प्रकाशः** – एतेन "हरौ तदितरत्र च श्रुत्यादिप्रसिद्धनामलिङ्गात्मकशब्दानां विष्ण्वेकवाचित्वं प्रबलहेतुभिः प्रतिपादयत्यस्मिन्पादे" इति टीका फलोक्तिमुखेन विवृता ।

ಪರಿಪೂರ್ಣಚಂದ್ರಿಕಾ

ಈ ವಿಚಾರದಿಂದ 'ಹರೌ ತದಿತರತ್ರ ಚ ಶ್ರುತ್ಯಾದಿಪ್ರಸಿದ್ಧನಾಮಲಿಂಗಾತ್ಮಕಶಬ್ದಾನಾಂ ವಿಷ್ಣ್ವೇಕವಾಚಿತ್ವಂ ಪ್ರಬಲಹೇತುಭಿಃ ಪ್ರತಿಪಾದಯತ್ಯಸ್ಮಿನ್ಪಾದೇ' ಶ್ರೀಹರಿಯಲ್ಲಿ ಮತ್ತು ಬೇರೆ ಪದಾರ್ಥಗಳಲ್ಲಿ ಶ್ರುತ್ಯಾದಿಗಳಿಂದ ಪ್ರಸಿದ್ಧವಾದ ನಾಮಾತ್ಮಕ ಮತ್ತು ಲಿಂಗಾತ್ಮಕ ಶಬ್ದಗಳನ್ನು ಕೇವಲ ವಿಷ್ಣುನಿಷ್ಠವೆಂದು ಪ್ರಬಲವಾದ ಹೇತುಗಳಿಂದ ಈ ಪಾದವು ಸಮರ್ಥಿಸುತ್ತಿದೆ ಎಂಬ ಟೀಕೆಯನ್ನು ವಿವರಿಸಿದಂತಾಯಿತು. ಅಂದರೆ ಈ ಪಾದದ ಫಲವನ್ನು ಹೇಳುವುದಕ್ಕಾಗಿ ಈ ಟೀಕಾ ಮಾತು ಹೊರಟಿದೆ. ಕೇವಲ ವಿಷ್ಣುವಿನಲ್ಲಿ ಶಬ್ದಗಳು ಸಮನ್ವಯಗೊಳ್ಳುತ್ತವೆಂದು ಈ ಪಾದದಲ್ಲಿ ಹೇಳುತ್ತಿರುವುದರಿಂದ ಈ ಪಾದದ ಫಲವನ್ನು ತಿಳಿಯಬೇಕೆಂದು ಟೀಕೆಯಲ್ಲಿ ಹೇಳಿದ್ದಾರೆ.

**प्रकाशः** – तत्र वाचित्वोक्तावपीह परत्वोक्तिस्तदेकवाचित्वतदेकपरत्वयोर्द्वयोरप्याक्षेपायेत्याह‌ः ।

ಟೀಕೆಯಲ್ಲಿ 'ವಿಷ್ಣ್ವೇಕವಾಚಿತ್ವಮ್' ಎಂಬುದಾಗಿ ಶಬ್ದ ವಾಚಿತ್ವವನ್ನು ಹೇಳಿದ್ದಾರೆ. ಆದರೂ ಸಹ ಇಲ್ಲಿ ತಾತ್ಪರ್ಯವನ್ನು ಹೇಳಿದ್ದಾರೆ. ಇದರಿಂದ ಕೇವಲ ವಿಷ್ಣುವನ್ನೇ ಶಕ್ತಿವೃತ್ತಿಯಿಂದ ಪ್ರತಿಪಾದಿಸುತ್ತವೆಂಬ ವಿಷಯದಲ್ಲಿ ಮತ್ತು ತಾತ್ಪರ್ಯವೃತ್ತಿಯಿಂದ ಪ್ರತಿಪಾದಿಸುತ್ತವೆಂಬ ವಿಷಯದಲ್ಲಿ ಆಕ್ಷೇಪವನ್ನು ಸೂಚಿಸಿದಂತಾಯಿತು. ಅಂದರೆ ಯಾವುದೇ ಶಬ್ದಗಳು ಕೇವಲ ವಿಷ್ಣುವಿನಲ್ಲಿ ಶಕ್ತಿವೃತ್ತಿಯಿಂದಾಗಲೀ, ತಾತ್ಪರ್ಯದಿಂದಾಗಲೀ ಇರಲು ಹೇಗೆ ಸಾಧ್ಯ? ಎಂಬ ಆಕ್ಷೇಪ ಪರಿಹಾರಕ್ಕೋಸ್ಕರ ಈ ಪಾದವು ಹೊರಡುತ್ತಿದೆ ಎಂದು ತಿಳಿಸಿದ್ದಾರೆ.

**प्रकाशः** – आपादितोभयप्रसिद्धिकाः के शब्दाः? कथं च सा तेषां ? पूर्वोक्तन्यायलोकप्रयोगाभ्यामुभयप्रसिद्धिकत्वे पूर्वत्रापि प्रतिनयमेवं सुवचत्वाद्ब्रह्मलिङ्गादिरूपन्यायस्य लोकप्रसिद्धेश्च प्रत्युदाहरणं भावादित्यत आह – **स्पष्टयिष्यते चेति** ।।

ಕೆಲವೊಂದು ಶಬ್ದಗಳು ಸ್ವತಃ ಉಭಯಪ್ರಸಿದ್ಧವಾಗಿವೆ. ಇನ್ನೂ ಕೆಲವು ಶಬ್ದಗಳು ಆಪಾದಿತವಾಗಿ ಉಭಯಪ್ರಸಿದ್ಧವಾಗಿವೆ. ಇವುಗಳೆರಡರಲ್ಲಿ ಆಪಾದಿತವಾದ ಉಭಯಪ್ರಸಿದ್ಧ ಶಬ್ದಗಳೆಂದರೆ ಯಾವುದು? ಯಾವ ಕಾರಣದಿಂದ ಅಂತಹ ಶಬ್ದಗಳು ಆಪಾದಿತವಾಗಿ ಉಭಯಪ್ರಸಿದ್ಧಗಳಾದವು? ಒಂದುವೇಳೆ ಹಿಂದಿನ ಅಧಿಕರಣಗಳ ನ್ಯಾಯದಿಂದ ಲೋಕಪ್ರಯೋಗದಿಂದ ಉಭಯಪ್ರಸಿದ್ಧವಾಗಿದೆಯೆಂದು ವಿವಕ್ಷಿಸುವುದಾದರೆ ಹಿಂದಿನ ಪಾದದ ಪ್ರತಿಯೊಂದು ಅಧಿಕರಣಗಳಲ್ಲಿಯೂ ಇಂತಹ ಉಭಯಪ್ರಸಿದ್ಧತ್ವವನ್ನು ಸಮರ್ಥಿಸಬಹುದು. ಏಕೆಂದರೆ ಲೋಕರೂಢಿಯಿಂದ ಆ ಶಬ್ದಗಳೂ ಅನ್ಯತ್ರಪ್ರಸಿದ್ಧವಾಗಿರುತ್ತವೆ. ಶ್ರುತಿಯಲ್ಲಿರುವ ಲಿಂಗಾದಿಗಳಿಂದ ವಿಷ್ಣುವಿನಲ್ಲಿ ಪ್ರಸಿದ್ಧವಾಗಿರುತ್ತವೆ. ಈ ಕಾರಣದಿಂದ ಹಿಂದಿನ ಪಾದದ ಶಬ್ದಗಳೂ ಸಹ ಉಭಯತ್ರಪ್ರಸಿದ್ಧವಾಗಿರುವಾಗ ಈ ಪಾದದ ಶಬ್ದಗಳಲ್ಲಿ ಮಾತ್ರ ಉಭಯತ್ರಪ್ರಸಿದ್ಧ ಶಬ್ದದ ಸಮನ್ವಯವೆಂದು ಹೇಗೆ ಹೇಳುತ್ತೀರಿ ? ಎಂಬ ಪ್ರಶ್ನೆಗೆ 'ಸ್ಪಷ್ಟಯಿಷ್ಯತೇ ಚೇತಿ' ಎಂಬ ವಾಕ್ಯದಿಂದ ಉತ್ತರಿಸುತ್ತಾರೆ. ಮುಂದೆ ಕಲ್ಪನಾಧಿಕರಣದಲ್ಲಿ ಸ್ಪಷ್ಟವಾಗುತ್ತದೆಂದು ಅರ್ಥ.

ದ್ಯುಭ್ವಾದ್ಯಧಿಕರಣ (೧-೩-೧)

**प्रकाशः** – भाष्येऽस्फुटत्वादाह – तदुक्तमिति ।। उभयगतत्वशङ्का निरस्यतेऽत्रेत्येतत्तृतीयाध्यायस्य तृतीयपाद उक्तमित्यर्थः ।

ಭಾಷ್ಯದಲ್ಲಿ ಪಾದಸಂಗತಿಯು ಸ್ಪಷ್ಟವಾಗಿ ತಿಳಿಯುವುದಿಲ್ಲ. ಅದಕ್ಕೋಸ್ಕರ ಅನುವ್ಯಾಖ್ಯಾನದ ಮಾತನ್ನು ಉಲ್ಲೇಖಿಸುತ್ತಿದ್ದಾರೆ 'ತದುಕ್ತಮ್' ಇತ್ಯಾದಿ ವಾಕ್ಯದಿಂದ. ಅಂದರೆ ಶಬ್ದಗಳು ಉಭಯಗತ-ವಾಗಿವೆಯಲ್ಲವೇ ? ಎಂಬ ಶಂಕೆಯನ್ನು ಈ ಪಾದದಲ್ಲಿ ಪರಿಹರಿಸಲಾಗುತ್ತಿದೆಯೆಂಬ ವಿಚಾರವನ್ನು ಅನುವ್ಯಾಖ್ಯಾನದ ಮೂರನೆಯ ಅಧ್ಯಾಯದ ಮೂರನೇ ಪಾದದಲ್ಲಿ ಹೇಳಿರುತ್ತಾರೆಂದರ್ಥ.

**प्रकाशः** – आहेत्यस्य हरावेवेत्यनन्तरमध्याहृतेनेतिशब्देनेत्याहेति वा ब्रह्मण्येव समन्वयमिति पूर्वश्लोकस्थेन वाऽन्वयः । अत्र श्लोके तु "इत्याहैवं च शब्दानाम्" इत्युपरितनानुव्याख्यानस्थमित्याहेति पदमाकृष्यान्वयो ज्ञेयः ।

ಶ್ಲೋಕದಲ್ಲಿರುವ 'ಆಹ' ಎಂಬ ಕ್ರಿಯಾಪದಕ್ಕೆ ಅನ್ವಯವು ತಿಳಿಯುವುದಿಲ್ಲ. ಅದಕ್ಕೋಸ್ಕರ 'ಹರಾವೇವ' ಎಂಬಲ್ಲಿ 'ಇತಿ' ಎಂಬ ಶಬ್ದವನ್ನು ಅಧ್ಯಾಹಾರ ಮಾಡಿಕೊಂಡು ಅದರಲ್ಲಿ ಅನ್ವಯ ಮಾಡಬೇಕು. ಆವಾಗ 'ಇತ್ಯಾಹ' ಎಂದು ಹೇಳಿದಂತಾಗುತ್ತದೆ. ಅಥವಾ ಈ ಶ್ಲೋಕದ ಹಿಂದಿನ ಶ್ಲೋಕದಲ್ಲಿ 'ಬ್ರಹ್ಮಣ್ಯೇವ ಸಮನ್ವಯಮ್' ಎಂದು ಹೇಳಿದ್ದಾರೆ. ಅದರ ಜೊತೆಗೆ ಅನ್ವಯವನ್ನೂ ಸಹ ತಿಳಿಯಬಹುದು. ಈ ಶ್ಲೋಕದಲ್ಲಿ ಮುಂದಿನ 'ಇತ್ಯಾಹೈವಂ ಚ ಶಬ್ದಾನಾಂ' ಎಂಬಲ್ಲಿರುವ 'ಇತ್ಯಾಹ' ಪದವನ್ನು ಅನುಕರ್ಷ ಮಾಡಿಕೊಂಡು ಅನ್ವಯವನ್ನು ತಿಳಿಯಬೇಕು. ಮೊದಲನೆಯ ಪಕ್ಷದಲ್ಲಿ 'ಇತಿ' ಎಂಬುದನ್ನು ಅಧ್ಯಾಹಾರ ಮಾಡಿಕೊಳ್ಳಬೇಕಾಗುತ್ತದೆ. ಆದರೆ ಎರಡನೆಯ ಈ ಪಕ್ಷದಲ್ಲಿ 'ಇತಿ' ಎಂಬ ಪದವನ್ನು ಅಧ್ಯಾಹಾರ ಮಾಡಿಕೊಳ್ಳಬೇಕಾಗಿಲ್ಲ.

**प्रकाशः** – 'अतः' इत्यस्यान्यत्रप्रसिद्धानामशेषनामलिङ्गात्मकशब्दानां द्विपाद्या भगवत्परत्वसमर्थनाद्धेतोरित्यर्थः । लोकतोऽन्यत्रप्रसिद्धेश्चोभयान्यथानुपपत्त्योभय-गतत्वं स्यादिति संशयनिवृत्त्यर्थमिति सुधोक्तोर्थ उपलक्षणम् । किन्तु श्रुत्यन्तर-साधारण्यप्रवृत्तिनिमित्तादिसाधारण्यादित इत्यप्यतश्शब्दार्थ इति भावः ।

ಅನುವ್ಯಾಖ್ಯಾನದ ಶ್ಲೋಕದಲ್ಲಿರುವ 'ಅತಃ' ಎಂಬ ಪದಕ್ಕೆ ಹೀಗರ್ಥ - "ಅನ್ಯತ್ರಪ್ರಸಿದ್ಧವಾದ ಸಕಲವಿಧವಾದ ನಾಮಾತ್ಮಕ ಹಾಗೂ ಲಿಂಗಾತ್ಮಕಶಬ್ದಗಳನ್ನು ಮೊದಲೆರಡು ಪಾದಗಳಲ್ಲಿ ಭಗವತ್ಪರವೆಂದು ಸಮರ್ಥಿಸಿರುವ ಕಾರಣ" ಎಂದರ್ಥ. ನ್ಯಾಯಸುಧೆಯಲ್ಲಿ 'ಅತಃ' ಎಂಬ ಪದವನ್ನು ವ್ಯಾಖ್ಯಾನಿಸುತ್ತಾ 'ಲೋಕತಃ ಅನ್ಯತ್ರಪ್ರಸಿದ್ಧೇಶ್ಚೋಭಯಾನ್ಯಥಾನುಪಪತ್ತ್ಯೋಭಯಗತತ್ವಂ ಸ್ಯಾದಿತಿ ಸಂಶಯನಿವೃತ್ತ್ಯರ್ಥಮ್' ಲೋಕತಃ ಅನ್ಯತ್ರಪ್ರಸಿದ್ಧಿಯು ಇರುವ ಕಾರಣ ನ್ಯಾಯಗಳಿಂದ ಸಮನ್ವಯವನ್ನು ಮಾಡಿದ್ದರಿಂದಲೂ ಉಭಯಅನ್ಯಥಾನುಪಪತ್ತ್ಯಾ ಶಬ್ದಗಳು ಉಭಯಗತವಾಗುತ್ತವಲ್ಲವೇ? ಎಂಬ ಸಂಶಯವನ್ನು ಪರಿಹಾರ ಮಾಡುವುದಕ್ಕೋಸ್ಕರ' ಎಂದು ಹೇಳಿದ್ದಾರೆ. ಇದು ಉಪಲಕ್ಷಣವಾಗಿದೆ. ಇದರ ಜೊತೆಗೆ ಶ್ರುತ್ಯಂತರ ಸಾಧಾರಣ್ಯದಿಂದ ಹಾಗೂ ಪ್ರವೃತ್ತಿನಿಮಿತ್ತಾದಿಗಳ ಸಾಧಾರಣ್ಯದಿಂದಲೂ ಶಬ್ದಗಳು ಉಭಯತ್ರಪ್ರಸಿದ್ಧವಾಗಿರುವ ಕಾರಣ ಎಂಬುದನ್ನು ವಿವಕ್ಷಿಸಬೇಕು. ಹೀಗೆ ಅನುವ್ಯಾಖ್ಯಾನದಲ್ಲಿರುವ 'ಅತಃ' ಎಂಬ ಶಬ್ದದ ಗಾಂಭೀರ್ಯವನ್ನು ಗಂಭೀರವಾಗಿ ಆಲೋಚನೆ ಮಾಡಬೇಕು.

ಪರಿಪೂರ್ಣಚಂದ್ರಿಕಾ

**प्रकाशः – अन्यथा उक्तेऽर्थे सर्वत्र नायं संवादस्स्यादिति ज्ञेयम् ।**

ಅನುವ್ಯಾಖ್ಯಾನದ 'ಅತಃ' ಎಂಬ ಶಬ್ದಕ್ಕೆ ನ್ಯಾಯಸುಧೆಯಲ್ಲಿ ವ್ಯಾಖ್ಯಾನಿಸಿದ ಅರ್ಥದ ಜೊತೆಗೆ ಉಪಲಕ್ಷಣಯಾ ಮೇಲೆ ಹೇಳಿದ ಅರ್ಥವನ್ನೂ ಸಹ ವಿವಕ್ಷಿಸಬೇಕೆಂದು ಹೇಳಿದ್ದರಿಂದಲೇ ಗ್ರಂಥಕಾರರು ಹೇಳುತ್ತಿರುವ ಎಲ್ಲ ವಿಧವಾದ ಅರ್ಥಗಳಿಗೆ ಅನುವ್ಯಾಖ್ಯಾನವು ಸಂವಾದಿಯಾಗಿದೆಯೆಂದು ಹೇಳಿದಂತಾಗುತ್ತದೆ. ಇಲ್ಲದಿದ್ದರೆ ಎಂದರೆ - ಗ್ರಂಥಕಾರರು ಸ್ವತಃಸಿದ್ಧವಾದ ಉಭಯತ್ರಪ್ರಸಿದ್ಧಶಬ್ದಗಳ ಸಮನ್ವಯಕ್ಕಾಗಿ ಈ ಪಾದ ಹೊರಟಿದೆಯೆಂದು ಹೇಳಿದ್ದಾರೆ. ಒಂದು ವೇಳೆ 'ಅತಃ' ಎಂಬ ಶಬ್ದಕ್ಕೆ ಶ್ರುತ್ಯಂತರ ಸಾಧಾರಣ್ಯದಿಂದ ಹಾಗೂ ಪ್ರವೃತ್ತಿನಿಮಿತ್ತ ಸಾಧಾರಣ್ಯದಿಂದ ಎಂಬರ್ಥವನ್ನು ವಿವಕ್ಷಿಸದಿದ್ದಲ್ಲಿ ಗ್ರಂಥಕಾರರ ಈ ವ್ಯಾಖ್ಯಾನಕ್ಕೆ ಆಚಾರ್ಯರ ಸಮ್ಮತಿಯು ಇಲ್ಲದಂತಾಗಬೇಕಾಗುತ್ತದೆ.

**प्रकाशः – कथमियं शङ्काऽत्र परिहृतेत्यत उक्तम् उभयत्रेति ।**

ಉಭಯಗತವಾದ ಶಬ್ದಗಳಿರಬೇಕಾದರೆ ಪರಮಾತ್ಮನಲ್ಲಿ ಮಾತ್ರ ಶಬ್ದಪ್ರತಿಪಾದ್ಯತ್ವ ಬರುತ್ತದೆಂಬ ಸಿದ್ಧಾಂತವು ಹೇಗೆ ನಿರ್ಣಯವಾಗುತ್ತದೆ? ಎಂಬ ಶಂಕೆಯನ್ನು ಪರಿಹರಿಸುವುದಕ್ಕಾಗಿ 'ಉಭಯತ್ರ' ಇತ್ಯಾದಿಯಾದ ಮಾತುಗಳನ್ನು ಅನುವ್ಯಾಖ್ಯಾನದಲ್ಲಿ ಹೇಳಿದ್ದಾರೆ.

**प्रकाशः – हरौ तदन्यत्र च प्रतीतितः पूर्वोक्तन्यायलोकप्रसिद्धिभ्यां वा श्रुत्यन्तरादिसाधारण्यबलेन वोत्पन्नसाधारण्यप्रतीतितो वर्तमानानां नतु वस्तुत उभयत्र प्रवर्तमानानामित्यर्थः ।**

ಉಭಯತ್ರ ಇತ್ಯಾದಿ ಅನುವ್ಯಾಖ್ಯಾನಕ್ಕೆ ಹೀಗರ್ಥ - ಶ್ರೀಹರಿಯಲ್ಲಿ ಹಾಗೂ ಲೋಕದಲ್ಲಿ ಶಬ್ದಗಳು ಪ್ರತೀತವಾಗಿವೆ. ಹೀಗೆ ಪ್ರತೀತಿಯಿಂದ, ಅಥವಾ ಶ್ರೀಹರಿಯಲ್ಲಿ ಹಿಂದಿನೆರಡು ಪಾದಗಳಲ್ಲಿ ಹೇಳಿದ ನ್ಯಾಯಗಳ ಬಲದಿಂದ ಪ್ರಸಿದ್ಧವಾಗಿವೆ. ಆದರೆ ಲೋಕದಲ್ಲಿ ಆಪಾತಪ್ರತೀತಿಯಿಂದ ಪ್ರಯೋಗಿಸುವ ಲೋಕರೂಢಿಯಿಂದ ಪ್ರಸಿದ್ಧವಾಗಿವೆ. ಹೀಗೆ, ಅಥವಾ ಶ್ರುತ್ಯಂತರಾದಿ ಸಾಧಾರಣ್ಯದ ಬಲದಿಂದ ಹೀಗೆ ಪ್ರತೀತಿ, ಪ್ರಸಿದ್ಧಿ ಸಾಧಾರಣ್ಯಗಳಿಂದ ಉತ್ಪನ್ನವಾದ ಸಾಧಾರಣ್ಯಪ್ರತೀತಿಯಿಂದ ಇರುವ; ಹೊರತು ವಾಸ್ತವಿಕವಾಗಿ ಇರುವುದಿಲ್ಲ. ಹೀಗೆ ಎರಡೂ ಕಡೆ ಪ್ರವೃತ್ತಿಯನ್ನು ಹೊಂದಿರುವ ಎಂಬುದಾಗಿ ಅರ್ಥ.

**प्रकाशः – सलिङ्गानां शब्दानां नाम्नां लिङ्गानां च । हरावेव विशेषतः परममुख्यवृत्त्या तात्पर्येण च । समन्वय इत्याहेत्यन्वय इति प्रागवोचाम ।**

ಸಲಿಂಗಾನಾಂ = ಲಿಂಗಸಹಿತವಾದ ಶಬ್ದಗಳಿಗೆ ಎಂದರೆ ನಾಮಾತ್ಮಕಶಬ್ದಗಳಿಗೆ ಹಾಗೂ ಲಿಂಗಾತ್ಮಕಶಬ್ದಗಳಿಗೆ, ಹರಾವೇವ = ಶ್ರೀಹರಿಯಲ್ಲಿಯೇ, ವಿಶೇಷತಃ = ಪರಮಮುಖ್ಯವೃತ್ತಿಯಿಂದ ಮತ್ತು ತಾತ್ಪರ್ಯದಿಂದ ಸಮನ್ವಯವನ್ನು ಮಾಡುತ್ತಿದ್ದಾರೆ ಎಂದರ್ಥ. ಇಲ್ಲಿ 'ಸಮನ್ವಯ ಇತ್ಯಾಹ' ಎಂಬ ಅನ್ವಯವನ್ನು ಈ ಹಿಂದೆಯೇ ಹೇಳಿದ್ದೇವೆ.

ದ್ಯುಭ್ವಾದ್ಯಧಿಕರಣ (೧-೩-೧)

**प्रकाशः** – कुत इत्यत उक्तं **यदिति । यत्** यस्मात् । 'वर्तन्ते' इति शेषः । "शब्दालिङ्गानि च" इत्यग्रेतनेनान्वयः ।

ಇದನ್ನು ಹೇಗೆ ನಿರ್ಣಯಿಸುತ್ತೀರಿ? ಎಂಬ ಪ್ರಶ್ನೆಗೆ, 'ಯತ್' ಎಂಬುದರಿಂದ ಉತ್ತರಿಸುತ್ತಿದ್ದಾರೆ. ಯತ್ · ಯಾವ ಕಾರಣಗಳಿಂದ, ಶಬ್ದಗಳೆಲ್ಲವೂ ಪರಮಮುಖ್ಯವೃತ್ತಿಯಿಂದ ಶ್ರೀಹರಿಯನ್ನೇ ಪ್ರತಿಪಾದಿಸುತ್ತಿವೆಯೋ, ಆ ಕಾರಣದಿಂದ ನಿರ್ಣಯಿಸಬಹುದು. 'ವರ್ತಂತೇ' ಎಂಬುದನ್ನು ಶೇಷಪೂರ್ಣ ಮಾಡಿಕೊಳ್ಳಬೇಕು. 'ಶಬ್ದಾಃ ಲಿಂಗಾನಿ ಚ' ಎಂಬ ಮುಂದಿರುವ ಪದಗಳ ಜೊತೆಗೆ ಇದಕ್ಕೆ ಅನ್ವಯ.

**प्रकाशः** – एतेन "तत्र चान्यत्र च" इत्यादिभाष्यादौ "आहोभयगतत्वं च" इत्यादि त्रिपादी संयोज्य व्याख्येयेति सूचितम् ।

ಹೀಗೆ ಹೇಳಿದ್ದರಿಂದ 'ತತ್ರ ಚಾನ್ಯತ್ರ ಚ' ಇತ್ಯಾದಿ ಭಾಷ್ಯದ ಮಾತಿನ ಜೊತೆಗೆ 'ಆಹೋಭಯಗತತ್ವಂ ಚ' ಇತ್ಯಾದಿಯಾದ ಅನುವ್ಯಾಖ್ಯಾನದ ಮೂರು ಪಾದಗಳನ್ನು ಸಂಯೋಜನೆ ಮಾಡಿ ವ್ಯಾಖ್ಯಾನಿಸಬೇಕೆಂದು ಸೂಚಿಸಿದಂತಾಯಿತು.

('ಗಂಗಾಸಂಗೇನ ನೈರ್ಮಲ್ಯಂ' ಎಂಬ ಮಂಗಳ ಶ್ಲೋಕದಲ್ಲಿ 'ಸಂಗಮ್ಯಂತೇ ಗುರೋರ್ಗಿರಃ' ಎಂದು ಟೀಕಾಕೃತ್ಪಾದರು ಹೇಳಿದರು. ಅದಕ್ಕೆ ಭಾವದೀಪದಲ್ಲಿ ವ್ಯಾಖ್ಯಾನ ಮಾಡುತ್ತಾ ಗುರುಗಳ ಮಾತಿನ ಜೊತೆಗೆ ನಮ್ಮ ಮಾತನ್ನು ಸೇರಿಸಿದಾಗ ನಮ್ಮ ಮಾತುಗಳು ಶುದ್ಧವಾಗುತ್ತವೆಂದು ಒಂದು ಬಗೆಯಲ್ಲಿ ವ್ಯಾಖ್ಯಾನಿಸಿದರು. ಮತ್ತು ಗುರುಗಳ ಮಾತುಗಳನ್ನೇ ಪರಸ್ಪರವಾಗಿ ಜೋಡಿಸುವುದಷ್ಟೇ ನಮ್ಮ ಕೆಲಸವೆಂದು ಮತ್ತೊಂದು ಬಗೆಯ ವ್ಯಾಖ್ಯಾನವನ್ನು ಮಾಡಿದ್ದರು. ಪ್ರಕೃತ ಭಾಷ್ಯದಲ್ಲಿರುವ ಮಾತಿಗೂ ಅನುವ್ಯಾಖ್ಯಾನದ ಮಾತಿಗೂ ಪರಸ್ಪರ ಯೋಜನೆಯನ್ನು ತೋರಿಸುತ್ತಾ 'ಸಂಗಮ್ಯಂತೇ ಗುರೋರ್ಗಿರಃ 'ಎಂಬ ಪ್ರತಿಜ್ಞೆಯು ಅರ್ಥವತ್ತಾಗಿದೆ ಎಂದು ತೋರಿಸುತ್ತಾರೆ. ಸಜ್ಜನರು ಇಂತಹ ಅಪೂರ್ವವಿಷಯಗಳನ್ನು ಗಮನಿಸಬೇಕು.)

**प्रकाशः** – एवं पादसङ्गतिमुक्त्वैतत्पादीयाधिकरणोपाधीननुव्याख्यानोक्तानाह – **अत्रेति ।। पाद** इत्यर्थः ।

ಇಲ್ಲಿಯ ತನಕ ಮೂರನೇ ಪಾದಕ್ಕೆ ಸಂಗತಿಯನ್ನು ಸಮರ್ಥಿಸಿದ್ದಾಯಿತು. ಈಗ ಈ ಪಾದದಲ್ಲಿರುವ ಎಲ್ಲಾ ಅಧಿಕರಣಗಳ ಉಪಾಧಿಗಳನ್ನು ಅನುವ್ಯಾಖ್ಯಾನದಲ್ಲಿ ಹೇಳಿದಂತೆ ತೋರಿಸುತ್ತಿದ್ದಾರೆ. 'ಅತ್ರ' ಇತ್ಯಾದಿ ವಾಕ್ಯದಿಂದ. 'ಅತ್ರ' ಎಂಬ ಪದಕ್ಕೆ ಈ ಪಾದದಲ್ಲಿ ಎಂದರ್ಥ.

**प्रकाशः** – "एतच्च न्यायविवरणे स्वयमेवाचार्येण व्याख्यातमिति तत्रैवावगन्तव्यम्" इति सुधायामुक्तत्वान्न्यायविवरणरीत्या स्वयं व्याचष्टे – **अत्रेत्यादिना ।।** श्लोकोक्ताधिकरणार्थेषु विवेकः प्रदर्श्यत इत्यर्थः ।।

'ಏತಚ್ಚ ನ್ಯಾಯವಿವರಣೇ ಸ್ವಯಮೇವಾಚಾರ್ಯೇಣ ವ್ಯಾಖ್ಯಾತಮಿತಿ ತತ್ರೈವಾವಗಂತವ್ಯಮ್' ಈ ಪಾದಗಳ ಅಧಿಕರಣದ ಉಪಾಧಿಯನ್ನು ಸ್ವತಃ ಆಚಾರ್ಯರೇ ನ್ಯಾಯವಿವರಣದಲ್ಲಿ ವ್ಯಾಖ್ಯಾನಿಸಿದ್ದರಿಂದ ಅಲ್ಲಿಯೇ ತಿಳಿಯಬೇಕು ಎಂಬುದಾಗಿ ನ್ಯಾಯಸುಧೆಯಲ್ಲಿ ಹೇಳಿರುತ್ತಾರೆ. ಆದ್ದರಿಂದ ಪ್ರಕೃತ ಗ್ರಂಥಕಾರರು ನ್ಯಾಯವಿವರಣದ ಪ್ರಕಾರ ಅಧಿಕರಣ ಉಪಾಧಿಗಳನ್ನು ಸ್ವತಃ ವ್ಯಾಖ್ಯಾನಿಸುತ್ತಿದ್ದಾರೆ 'ಅತ್ರ' ಇತ್ಯಾದಿ ವಾಕ್ಯದಿಂದ. ಅಂದರೆ ಅನುವ್ಯಾಖ್ಯಾನ ಶ್ಲೋಕದಲ್ಲಿ ಪ್ರತಿಯೊಂದು ಅಧಿಕರಣಗಳ ಉಪಾಧಿಯನ್ನು ಹೇಳಿದ್ದಾರೆ. ಅವುಗಳಲ್ಲಿ ಯಾವ ಯಾವ ಅಧಿಕರಣಗಳಲ್ಲಿ ಯಾವ ಯಾವ ಅರ್ಥವನ್ನು ಹೇಳುತ್ತಾರೆಂಬ ವಿವೇಕವನ್ನು ನಾವು ತೋರಿಸುತ್ತೇವೆ ಎಂದರ್ಥ.

**प्रकाशः – लिङ्गमिति ।।** यद्यप्यत्र लिङ्गानि द्युलोकाद्याधारत्वादीनि बहूनि । "अत्रोक्तानां लिङ्गानाम्" इति न्यायविवरण एवोक्तेः । तथाप्येकवाक्योक्तत्वेनैकवचनमिति तत्र टीकायामेवोक्तमिति भावः ।

'ಲಿಂಗಮಿತಿ' ಎಂಬ ಪ್ರತೀಕದ ಅಭಿಪ್ರಾಯ ಹೀಗೆ - ವಾಸ್ತವಿಕವಾಗಿ ದ್ಯುಭ್ವಾದ್ಯಧಿಕರಣದಲ್ಲಿ ದ್ಯುಲೋಕಾದ್ಯಾಧಾರತ್ವವೇ ಮೊದಲಾದ ಅನೇಕ ಲಿಂಗಗಳನ್ನು ಸಮನ್ವಯ ಮಾಡುತ್ತಿದ್ದಾರೆ. ಆದ್ದರಿಂದಲೇ 'ಅತ್ರೋಕ್ತಾನಾಂ ಲಿಂಗಾನಾಮ್' ಎಂಬುದಾಗಿ ನ್ಯಾಯವಿವರಣದಲ್ಲಿ ಬಹುವಚನವನ್ನು ಪ್ರಯೋಗಿಸಿದ್ದಾರೆ. ಆದರೂ ಸಹ ಒಂದೇ ವಾಕ್ಯದಲ್ಲಿರುವ ಅನೇಕ ಲಿಂಗಗಳ ಸಮನ್ವಯವನ್ನು ಮಾಡುತ್ತಿರುವುದರಿಂದ 'ಲಿಂಗಮ್' ಎಂದು ಏಕವಚನವನ್ನು ಅನುವ್ಯಾಖ್ಯಾನದಲ್ಲಿ ಹೇಳಿದ್ದಾರೆಂದು ನ್ಯಾಯಸುಧೆಯಲ್ಲಿಯೇ ಹೇಳಿದ್ದಾರೆಂಬುದನ್ನು ಗಮನಿಸಬೇಕು.

**प्रकाशः –** 'पुनरपि' इत्यस्य शब्दाः इत्यन्वयः । ते कुत्रेत्यत आह – **शब्दादिति ।।** "शब्दादेव प्रमितः । कम्पनात् । ज्योतिर्दर्शनात् । आकाशोऽर्थान्तरत्वादिव्यपदेशात्"- इत्यत्रेत्यर्थः ।

'ಪುನರಪಿ' ಎಂಬುದಕ್ಕೆ 'ಶಬ್ದಾಃ' ಎಂಬಲ್ಲಿ ಅನ್ವಯ. ಯಾವುದನ್ನು ಯಾವ ಅಧಿಕರಣದಲ್ಲಿ ಸಮನ್ವಯ ಮಾಡುತ್ತಾರೆಂಬ ಪ್ರಶ್ನೆಗೆ, 'ಶಬ್ದಾತ್' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. ಅಂದರೆ 'ಶಬ್ದಾದೇವ ಪ್ರಮಿತಃ, ಕಂಪನಾತ್, ಜ್ಯೋತಿರ್ದರ್ಶನಾತ್, ಆಕಾಶೋಽರ್ಥಾಂತರತ್ವಾದಿವ್ಯಪದೇಶಾತ್' ಎಂಬ ನಾಲ್ಕು ಅಧಿಕರಣಗಳಲ್ಲಿ ಕ್ರಮವಾಗಿ ಈಶಾನ, ವಜ್ರ, ಜ್ಯೋತಿ, ಆಕಾಶಶಬ್ದಗಳ ಸಮನ್ವಯವನ್ನು ಮಾಡುತ್ತಾರೆಂದು ತಿಳಿಯಬೇಕು.

**प्रकाशः – विचार्यन्त इत्यर्थ इति ।।** एतेन प्रागुक्तटीकावाक्यस्थं "नामलिङ्गात्मकशब्दानां" इत्येतदिदमत्रेति विशिष्य विवृतं ध्येयम् । अनुव्याख्यानोक्तं स्थानं तु लिङ्गं सन्नामेति वा व्याख्यास्यामोऽग्र इति भावः ।

ದ್ಯುಭ್ವಾದ್ಯಧಿಕರಣ (೧-೩-೧)

'ವಿಚಾರ್ಯಂತೇ ಇತ್ಯರ್ಥಃ' ಎಂದು ಹೇಳಿದ್ದರಿಂದ ಹಿಂದೆ ಹೇಳಲ್ಪಟ್ಟ ಟೀಕಾವಾಕ್ಯದಲ್ಲಿ 'ನಾಮಲಿಂಗಾತ್ಮಕ ಶಬ್ದಾನಾಮ್' ಯಾವ ಅಧಿಕರಣದಲ್ಲಿ ನಾಮಾತ್ಮಕಶಬ್ದವನ್ನು, ಯಾವ ಅಧಿಕರಣದಲ್ಲಿ ಲಿಂಗಾತ್ಮಕಶಬ್ದವನ್ನು ಸಮನ್ವಯ ಮಾಡುತ್ತಿದ್ದಾರೆಂಬ ವಿಚಾರವನ್ನು ಪ್ರತ್ಯೇಕವಾಗಿ ಹೇಳುತ್ತಾರೆ ಎಂದು ವಿವರಿಸಿದಂತಾಯಿತು. ಅನುವ್ಯಾಖ್ಯಾನದಲ್ಲಿ 'ಸ್ಥಾನಮ್' ಎಂಬ ಪದಕ್ಕೆ ಲಿಂಗವೆಂದರ್ಥ. ಅಥವಾ 'ತತ್' ಎಂಬ ನಾನುವೆಂಬರ್ಥವನ್ನೂ ಹೇಳಬಹುದು. ಹೀಗೆ ಮುಂದೆ ತದಧಿಕರಣದಲ್ಲಿ ವ್ಯಾಖ್ಯಾನಿಸುತ್ತೇವೆ.

**प्रकाशः – लिङ्गेति ।।** साधारणासाधारणः इति विपरिणामेनेत्यर्थः । एतेन ''विचार्या'' इत्यपि परिणाम्यत इति सूचितम् ।

'ಲಿಂಗಂ ಸಾಧಾರಣಂ ಶಬ್ದೌ' ಎಂಬಲ್ಲಿರುವ 'ಲಿಂಗಂ' ಎಂಬ ಪದವನ್ನು ವಚನ ವ್ಯತ್ಯಾಸದಿಂದ ಅನ್ವಯ ಮಾಡಿಕೊಳ್ಳಬೇಕೆಂದು 'ಲಿಂಗವಚನವಿಪರಿಣಾಮೇಣ' ಎಂಬುದರಿಂದ ಗ್ರಂಥದಲ್ಲಿ ಹೇಳಿದ್ದಾರೆ. ಅಂದರೆ 'ಸಾಧಾರಣಃ ಶಬ್ದಃ' ಎಂದು, ಸಾಧಾರಣೌ ಶಬ್ದೌ ಎಂದು, 'ಸಾಧಾರಣಾಃ ಶಬ್ದಾಃ' ಎಂದು' ಹೀಗೆ ವಚನ ವಿಪರಿಣಾಮವನ್ನು, ಲಿಂಗ ವಿಪರಿಮಾಣವನ್ನು ಮಾಡಿಕೊಳ್ಳಬೇಕೆಂದರ್ಥ. ಇದರಂತೆ 'ವಿಚಾರ್ಯಾಃ' ಎಂಬುದನ್ನು ಸಹ ವಿಪರಿಣಾಮ ಮಾಡಿಕೊಳ್ಳಬೇಕು. 'ಲಿಂಗಂ ವಿಚಾರ್ಯಂ, ಶಬ್ದೌ ವಿಚಾರ್ಯೌ, ಶಬ್ದಾಃ ವಿಚಾರ್ಯಾಃ' ಎಂಬುದಾಗಿ ವಿಭಕ್ತಿ ವ್ಯತ್ಯಾಸದಿಂದ ಅನ್ವಯವನ್ನು ತಿಳಿಯಬೇಕು.

**प्रकाशः – इति भेद इति ।।** ''साधारणमित्यस्य यथाऽन्वयं विपरिणामेन सर्वत्रानुवृत्तिरिति ज्ञापनार्थमेवान्तेऽपि द्विस्थिता इत्याह'' इति न्यायविवरणटीकोपलक्षणमिति भावः ।

ಗ್ರಂಥದಲ್ಲಿ 'ಇತಿ ಭೇದಃ' ಎಂದು ಹೇಳಿದ್ದಾರೆ. ಅಂದರೆ ಸಾಧಾರಣ ಶಬ್ದಕ್ಕೂ, 'ದ್ವಿಸ್ಥಿತಾಃ' ಎಂಬ ಶಬ್ದಕ್ಕೂ ಏನು ವ್ಯತ್ಯಾಸ ? ಎಂಬ ಪ್ರಶ್ನೆಗೆ, ಪೂರ್ವೋತ್ತರ ಪಕ್ಷಗಳ ಹೇತುಗಳ ಇರುವಿಕೆಯಿಂದ ಭೇದವನ್ನು ತಿಳಿಯಬೇಕೆಂದು ಗ್ರಂಥದಲ್ಲಿ ಹೇಳಿದ್ದಾರೆ. 'ಸಾಧಾರಣಮಿತ್ಯಸ್ಯ ಯಥಾಽನ್ವಯಂ ವಿಪರಿಣಾಮೇನ ಸರ್ವತ್ರಾನುವೃತ್ತಿರಿತಿ ಜ್ಞಾಪನಾರ್ಥಮೇವಾಂತೇಽಪಿ ದ್ವಿಸ್ಥಿತಾ ಇತ್ಯಾಹ', 'ಸಾಧಾರಣಮ್' ಎಂಬುದನ್ನು ಯಥಾಕ್ರಮದಲ್ಲಿ ಅನ್ವಯ ಮಾಡಿಕೊಂಡು, ಎಲ್ಲೆಡೆ ಅನುವೃತ್ತಿ ಮಾಡಿಕೊಳ್ಳಬೇಕೆಂದು ತಿಳಿಸುವುದಕ್ಕಾಗಿಯೇ 'ದ್ವಿಸ್ಥಿತಾಃ' ಎಂದು ಹೇಳಿದ್ದಾರೆ ಎಂಬ ನ್ಯಾಯವಿವರಣೆಯ ಟೀಕೆಯ ಮಾತನ್ನು ಉಪಲಕ್ಷಣವಾಗಿ ತಿಳಿಯಬೇಕು. ಅಂದರೆ 'ಲಿಂಗಂ ಸಾಧಾರಣಮ್' ಎಂಬಲ್ಲಿರುವ 'ಸಾಧಾರಣಮ್' ಎಂಬುದಕ್ಕೆ ಲಿಂಗಶಬ್ದದಲ್ಲಿ ಮಾತ್ರ ಅನ್ವಯವಲ್ಲ, ಹೊರತಾಗಿ ವಚನ ವ್ಯತ್ಯಾಸದಿಂದ ಎಲ್ಲಾ ಅಧಿಕರಣಗಳ ಉಪಾಧಿಯಲ್ಲಿಯೂ ಅನ್ವಯ ಮಾಡಿಕೊಳ್ಳಬೇಕೆಂದು ತಿಳಿಸುವುದಕ್ಕಾಗಿಯೇ ಕೊನೆಯಲ್ಲಿ 'ದ್ವಿಸ್ಥಿತಾಃ' ಎಂದು ಹೇಳಿರುತ್ತಾರೆ. ಆದ್ದರಿಂದ ಪೂರ್ವಪಕ್ಷ ಹಾಗೂ ಸಿದ್ಧಾಂತ ಪಕ್ಷಗಳಲ್ಲಿ ಹೇತುವಿರುತ್ತದೆಂದು 'ದ್ವಿಸ್ಥಿತಾಃ' ಎಂಬ ಪದವು ತಿಳಿಸುತ್ತಿದೆ. ಅದರ ಜೊತೆಗೆ ಎರಡು ಬಾರಿ ಅನ್ವಯ ಮಾಡಿಕೊಳ್ಳಬೇಕೆಂಬುದನ್ನೂ ಸಹ ತಿಳಿಸುತ್ತಿದೆಯೆಂಬುದನ್ನು ಗಮನಿಸಬೇಕು.

ಪರಿಪೂರ್ಣಚಂದ್ರಿಕಾ

**प्रकाशः** – नन्वत्र चतुर्दशाधिकरणानि । उपाधयस्तु द्वादशैवोक्ताः । तत्कथमित्यत आह – **देवतेति** ।।

ಈ ಪಾದದಲ್ಲಿ ಒಟ್ಟು ಹದಿನಾಲ್ಕು ಅಧಿಕರಣಗಳಿವೆ. ಆದರೆ ಅನುವ್ಯಾಖ್ಯಾನದಲ್ಲಿ ಹನ್ನೆರಡು ಉಪಾಧಿಗಳನ್ನಷ್ಟೇ ಹೇಳಿದ್ದಾರೆ ಇದು ಹೇಗೆ ? ಹದಿನಾಲ್ಕು ಉಪಾಧಿಗಳನ್ನು ಹೇಳಬೇಕಿತ್ತಲ್ಲವೇ? ಎಂಬ ಪ್ರಶ್ನೆಗೆ 'ದೇವತಾಧಿಕರಣ' ಎಂಬುದರಿಂದ ಉತ್ತರಿಸುತ್ತಿದ್ದಾರೆ.

**प्रकाशः** – तद्धानिः शूद्राणामधिकाराभावः । **प्रसङ्गादिति** ।। तत्रैवैतत् स्पष्टयिष्यते । ''इतीमौ विषयावित्यध्याहाराच्चिन्तिताविति साध्विति'' सुधायामेवोक्तम् ।

'ಅಧಿಕಾರಶ್ಚ ತದ್ಧಾನಿಃ' ಎಂಬಲ್ಲಿರುವ 'ತದ್ಧಾನಿಃ' ಎಂಬ ಪದಕ್ಕೆ ಶೂದ್ರರಿಗೆ ಅಧಿಕಾರವಿಲ್ಲದಿರುವಿಕೆಯು ಎಂದರ್ಥ. 'ಪ್ರಸಂಗಾತ್' ಎಂದರೆ ದೇವತಾಧಿಕರಣ ಹಾಗೂ ಅಪಶೂದ್ರಾಧಿಕರಣಗಳನ್ನು ಪ್ರಾಸಂಗಿಕವಾಗಿ ಚಿಂತನೆ ಮಾಡಿದ್ದಾರೆ ಹೊರತು, ಸಮನ್ವಯ ಮಾಡುವ ಉದ್ದೇಶದಿಂದ ಅಲ್ಲ. ಈ ವಿಚಾರವನ್ನು ಮುಂದೆ ಅಲ್ಲಿಯೇ ಸ್ಪಷ್ಟ ಪಡಿಸುತ್ತೇವೆ. 'ಇತೀಮೌ ವಿಷಯಾವಿತ್ಯಧ್ಯಾಹಾರಾಚ್ಚಿಂತಿತಾವಿತಿ ಸಾಧ್ವಿತಿ' 'ಪ್ರಸಾಂಗಾದೇವ ಚಿಂತಿತೌ' ಎಂಬಲ್ಲಿ 'ಇಮೌ ವಿಷಯೌ' ಎಂಬುದನ್ನು ಅಧ್ಯಾಹಾರ ಮಾಡಿಕೊಳ್ಳುವುದರಿಂದ 'ಚಿಂತಿತೌ' ಎಂಬ ಪುಲ್ಲಿಂಗ ಪ್ರಯೋಗವು ಸಾಧುವಾಗಿದೆ. ಇಲ್ಲದಿದ್ದರೆ ದ್ವಿವಚನ ಪ್ರಯೋಗವು ತಪ್ಪಾಗುತ್ತಿತ್ತು ಎಂದು ಸುಧಾವಾಕ್ಯದಿಂದ ತಿಳಿದುಬರುತ್ತಿದೆ.

**प्रकाशः** – एतेन ''देवताद्यधिकरणव्यावृत्त्यर्थं प्रायेणेति'' इत्येतट्टीकावाक्यं विवृतम् । एतदधिकरणस्यैतत्पादाद्यन्तर्भावोक्तिपरां ''तत्र रुद्रो वाव लोकाधारः'' इत्यादिटीकां विवरितुमाक्षिपति – **नन्विति** ।।

'ದೇವತಾದ್ಯಧಿಕರಣವ್ಯಾವೃತ್ತ್ಯರ್ಥಂ ಪ್ರಾಯೇಣೇತಿ' ದೇವತಾಧಿಕರಣ, ಅಪಶೂದ್ರಾಧಿಕರಣಗಳನ್ನು ವಾವೃತ್ತಿ ಮಾಡುವುದಕ್ಕಾಗಿ 'ಪ್ರಾಯೇಣ' ಎಂದು ಹೇಳಿದ್ದಾರೆ ಎಂಬ ಟೀಕಾವಾಕ್ಯವನ್ನು ಮೇಲೆ ಹೇಳಿದ ವಿಚಾರದಿಂದ ವಿವರಿಸಿದಂತಾಯಿತು.

ದ್ಯುಭ್ವಾದ್ಯಧಿಕರಣಕ್ಕೆ ಪಾದಸಂಗತಿಯನ್ನು ತೋರಿಸುವುದಕ್ಕಾಗಿ 'ತತ್ರ ರುದ್ರೋ ವಾವ ಲೋಕಾಧಾರಃ' ಎಂಬ ಟೀಕೆಯನ್ನು ವಿವರಿಸುತ್ತಾ ಆಕ್ಷೇಪ ಮಾಡುತ್ತಿದ್ದಾರೆ. 'ನನು' ಇತ್ಯಾದಿ ವಾಕ್ಯದಿಂದ.

**प्रकाशः** – ''य एषोऽन्तश्चरते बहुधा जायमानः'' इत्युक्तेत्यर्थः । **तथात्व इति** ।। भाष्यादौ तेनैव पूर्वपक्षित्वात् ।

'ಯ ಏಷೋಽಂತಶ್ಚರತೇ ಬಹುಧಾ ಜಾಯಮಾನಃ' ಎಂಬಲ್ಲಿ ಜಾಯಮಾನತ್ವ ಲಿಂಗವು ಕೇಳಿಸುತ್ತಿದೆ. ಇದರ ಬಲದಿಂದ ದ್ಯುಭ್ವಾದ್ಯಾಯತನತ್ವವು ಅನ್ಯತ್ರಪ್ರಸಿದ್ಧವಾಗಿದೆಯಲ್ಲವೇ ಎಂಬುದಾಗಿ 'ನನು' ಇತ್ಯಾದಿ

ವಾಕ್ಯದಿಂದ ಆಕ್ಷೇಪಿಸಿದ್ದಾರೆ. 'ತಥಾತ್ವೇ' ಎಂದರೆ ಜಾಯಮಾನತ್ವ ಲಿಂಗದಿಂದಲೇ ಭಾಷ್ಯಾದಿಗಳಲ್ಲಿ ಪೂರ್ವಪಕ್ಷ ಮಾಡಿದ್ದಾರೆ. ಅಂತಹ ಜಾಯಮಾನತ್ವ ಲಿಂಗವನ್ನು ಅನ್ಯತ್ರಪ್ರಸಿದ್ಧವಲ್ಲವೆಂದು ಹೇಳಿದರೆ ಪೂರ್ವಪಕ್ಷವೇ ಹುಟ್ಟುವುದಿಲ್ಲವೆಂದು ಅಭಿಪ್ರಾಯ.

**प्रकाशः** – सर्वत्रेति नयचन्द्रिकायाम् ''अन्तराद्यधिकरणेषु तैस्तैर्लिङ्गैर्विष्णुपरतैव व्युत्पादिता । नतु तत्र मुख्यता'' इत्याद्युक्तदिशा लिङ्गपादन्यायैर्लिङ्गानामशेषाणां विष्णुपरत्वसिद्धावपि मुख्यत्वस्यासिद्धेर्यौगिकजायमानशब्दस्य लिङ्गवाचिनोऽन्यत्रैव मुख्यत्वान्मुख्यार्थत्यागहेतोर्विष्णुलिङ्गस्येहाभावाभिमानेन वा, भावेऽपि कथञ्चिन्नेयत्वाभिमानेन वा पूर्वपक्षोदयसम्भवादिति भावः ।

ಸರ್ವಗತತ್ವಾಧಿಕರಣದ ತಾತ್ಪರ್ಯಚಂದ್ರಿಕೆಯಲ್ಲಿ ಹೀಗೆ ಹೇಳಿದ್ದಾರೆ - 'ಅಂತರಾದ್ಯಧಿಕರಣೇಷು ತೈಸ್ತೈರ್ಲಿಂಗೈರ್ವಿಷ್ಣುಪರತೈವ ವ್ಯುತ್ಪಾದಿತಾ ನತು ತತ್ರ ಮುಖ್ಯತಾ' ಅಂತರಾದ್ಯಧಿಕರಣಗಳಲ್ಲಿ ವಿಷಯವಾಕ್ಯಗಳಲ್ಲಿರುವ ಲಿಂಗದಿಂದ ವಿಷ್ಣುಪರತ್ವವನ್ನಷ್ಟೇ ಸಮರ್ಥಿಸಲಾಗಿದೆ. ಹೊರತು ಶಕ್ತಿವೃತ್ತಿಯನ್ನು ಪ್ರತಿಪಾದಿಸದ ಕಾರಣ ಮುಖ್ಯಪ್ರತಿಪಾದ್ಯತ್ವವನ್ನು ಸಮರ್ಥಿಸಿರುವುದಿಲ್ಲ ಎಂದು ಹೇಳಿದ್ದಾರೆ. ಅದರಂತೆ ಲಿಂಗಪಾದದಲ್ಲಿರುವ ನ್ಯಾಯಗಳಿಂದ ಸಕಲ ಲಿಂಗಗಳು ವಿಷ್ಣುಪರವಾಗಿವೆಯೆಂದು ಸಿದ್ಧವಾಗಿದ್ದರೂ ಸಹ ಮುಖ್ಯವೃತ್ತಿಯಿಂದ ವಿಷ್ಣುವಿನಲ್ಲಿರುತ್ತವೆಂದು ಸಿದ್ಧವಾಗಿರುವುದಿಲ್ಲ. ಹೀಗಿರುವಾಗ ಜಾಯಮಾನ ಶಬ್ದವು ಯೌಗಿಕವಾದ್ದರಿಂದ ಲಿಂಗಪ್ರತಿಪಾದಕವಾಗಿದೆ. ಆದ್ದರಿಂದ ಜೀವಾದಿಗಳನ್ನೇ ಮುಖ್ಯವಾಗಿ ಪ್ರತಿಪಾದಿಸುತ್ತದೆ. ಮುಖ್ಯಾರ್ಥವನ್ನು ಬಿಡಲು ಯಾವುದೇ ವಿಷ್ಣುಲಿಂಗಗಳು ಇಲ್ಲದ ಕಾರಣ ಅನ್ಯತ್ರಪ್ರಸಿದ್ಧವಾಗಿದೆ. ಅಥವಾ ಹಾಗೇನಾದರೂ ವಿಷ್ಣುಲಿಂಗಗಳಿದ್ದರೂ ಸಹ ಅದನ್ನು ಗೌಣವನ್ನಾಗಿ ವಿವಕ್ಷಿಸಿ ವ್ಯಾಖ್ಯಾನಿಸಲು ಬರುತ್ತದೆ ಹೀಗೆ ಪೂರ್ವಪಕ್ಷವನ್ನು ಮಾಡಬಹುದು ಎಂದು ಹೇಳಿದಂತಾಗುತ್ತದೆ.

**प्रकाशः** – टीकायां ''रुद्रो वाव लोकाधारः'' इति श्रुतिचतुष्टयात्तया लिङ्गस्योभयत्रप्रसिद्ध्युक्तेश्चतुर्धा तात्पर्यश्रुत्याकारोक्तिपूर्वं व्यञ्जयन्नुक्तशङ्कां समाधत्ते – उच्यत इत्यादिना ॥

ಟೀಕೆಯಲ್ಲಿ 'ರುದ್ರೋ ವಾವ ಲೋಕಾಧಾರಃ' ಎಂಬುದಾಗಿ ನಾಲ್ಕು ಶ್ರುತಿಗಳಿಂದ ತಿಳಿಯಲ್ಪಟ್ಟ ಲಿಂಗಕ್ಕೆ ಉಭಯತ್ರಪ್ರಸಿದ್ಧಿಯನ್ನು ಹೇಳಿರುತ್ತಾರೆ. ಅಂತಹ ಟೀಕಾ ಮಾತಿಗೆ ನಾಲ್ಕು ಬಗೆಯಲ್ಲಿ ವಿವಕ್ಷಿಸಿ ಹೇಳುವವರಾಗಿ ಶ್ರುತಿಯ ಆಕಾರವನ್ನು ತೋರಿಸುತ್ತಾ ಹಿಂದಿನ ಆಶಂಕೆಗೆ ಸಮಾಧಾನವನ್ನು ನೀಡುತ್ತಿದ್ದಾರೆ 'ಉಚ್ಯತೇ' ಇತ್ಯಾದಿ ಗ್ರಂಥದಿಂದ.

**प्रकाशः** – 'श्रुतिभ्यः' इत्यस्य स्वत उभयत्र प्रसिद्धत्वस्येत्यन्वयः । उक्तरीत्याऽन्यत्रप्रसिद्धत्वसम्भवेऽपि ''श्रुत्यन्तरादिभिस्तुल्ये'' इत्युक्तदिशोभयत्र-प्रसिद्धत्वांशमादाय पादसङ्गतिरित्यर्थः ।

'ಶ್ರುತಿಭ್ಯಃ' ಎಂಬ ಪದಕ್ಕೆ 'ಸ್ವತಃ ಉಭಯತ್ರಪ್ರಸಿದ್ಧತ್ವಸ್ಯ' ಎಂಬಲ್ಲಿ ಅನ್ವಯ ಮಾಡಬೇಕು. ಅಂದರೆ ಹಿಂದೆ ಹೇಳಿದ ಪ್ರಕಾರ ಲಿಂಗಗಳು ಅನ್ಯತ್ರಪ್ರಸಿದ್ಧವಾಗಿದ್ದರೂ 'ಶ್ರುತ್ಯಂತರಾದಿಭಿಸ್ತುಲ್ಯಾ' ಎಂಬ ಉಭಯತ್ರಪ್ರಸಿದ್ಧಿಯ ಲಕ್ಷಣವನ್ನು ವಿವಕ್ಷಿಸಿ ಪಾದಸಂಗತಿಯನ್ನು ತಿಳಿಯಬೇಕೆಂದರ್ಥ.

**प्रकाशः – निरपेक्षेति ।।** ''यद्योन्यां तदुत्तरयोर्गायति'' इत्यत्र यथोत्तरा-शब्दस्योत्तराग्रन्थपठितऋगर्थकत्वम् । नतूत्तरदेशपठितऋगर्थकत्वम् । तस्य पूर्वसापेक्षत्वादुत्तराग्रन्थपठितयोरित्यस्य निरपेक्षत्वात् । तद्वदिति भावः ।

ಉಭಯತ್ರಪಸಿದ್ಧಿಗೆ ನಿರಪೇಕ್ಷತ್ವವನ್ನು ಹೇಳುತ್ತಿದ್ದಾರೆ. ಅದು ಹೀಗೆ - 'ಯದ್ಯೋನ್ಯಾಂ ತದುತ್ತರಯೋರ್ಗಾಯತಿ' ಎಂಬಲ್ಲಿ ಕೇಳಿಸುತ್ತಿರುವ 'ಉತ್ತರಾ' ಎಂಬ ಪದಕ್ಕೆ ಉತ್ತರ ದೇಶವೆಂಬರ್ಥವೋ? ಅಥವಾ 'ಉತ್ತರ' ಎಂಬ ಗ್ರಂಥವೆಂದರ್ಥವೋ? ಎಂಬ ಆಕಾಂಕ್ಷೆಯು ಬರುತ್ತದೆ. ಆದರೂ 'ಉತ್ತರಾ' ಎಂಬ ಗ್ರಂಥದಲ್ಲಿ ಪಠಿತವಾದ ಋಕ್ ಮಂತ್ರವನ್ನು ಗಾನ ಮಾಡುತ್ತಾನೆಂದು ಹೇಳಬೇಕು ಹೊರತು, ಉತ್ತರದೇಶದಲ್ಲಿ ಪಠಿತವಾದ ಋಕ್ ಮಂತ್ರಗಳನ್ನು ಗಾನ ಮಾಡುತ್ತಾನೆಂದು ಹೇಳಬಾರದು. ಏಕೆಂದರೆ ಉತ್ತರ ದೇಶವು ಪೂರ್ವದೇಶವನ್ನು ಅಪೇಕ್ಷಿಸಿದೆ, ಸಾಪೇಕ್ಷಿತವಾದ್ದರಿಂದ ದೇಶಾರ್ಥಕತ್ವವನ್ನು ವಿವಕ್ಷಿಸದೆ ನಿರಪೇಕ್ಷಿತವಾದ 'ಉತ್ತರ ಗ್ರಂಥ'ವೆಂಬರ್ಥವನ್ನೇ ಹೇಳಬೇಕು ಎಂದು. ಹೇಗೆ ಪೂರ್ವಮೀಮಾಂಸೆಯಲ್ಲಿ ಅಂಗೀಕರಿಸಿದ್ದಾರೋ? ಅದರಂತೆ ಇಲ್ಲಿಯೂ ಸಹ ಉಭಯತ್ರಪ್ರಸಿದ್ಧಿಯು ನಿರಪೇಕ್ಷಿತವಾದ್ದರಿಂದ ಪಾದಸಂಗತಿಯನ್ನು ಹೊಂದಿದೆಯೆಂದು ತಿಳಿಯಬೇಕು.

**गुरुराजीयम् – ॐ द्युभ्वाद्यायतनं स्वशब्दात् ॐ ।। द्विस्थिता इत्यनेन त्विति ।।** 'द्विस्थिताः' इत्यस्य साधारण्यानुवृत्तिज्ञापकत्वेन । न्यायविवरणटीकायां व्याख्यानं तु सति अन्तरङ्गज्ञापके बहिरङ्गव्याख्यानं किमर्थं गवेषणीयमित्याशयेन । इह तु व्याख्यानतो विशेषप्रतिपत्तिरिति न्यायेनाप्युपपत्तेस्सम्भवाद्व्याख्यानान्तरमिति द्रष्टव्यम् । स्वत एवोभयत्रप्रसिद्धानां तुल्यप्रसिद्धिकत्वात् पूर्वपक्षे सिद्धान्त-प्रसिद्धिबाधः । सिद्धान्ते च पूर्वपक्षप्रसिद्धिबाधः । तथाच कथं निर्णय इत्याशङ्क्य द्विस्थिता इत्युक्तम् । तथाच सिद्धे सत्यारम्भो नियमार्थ इति न्यायेन पूर्वोत्तरपक्षहेतुमन्त इत्युक्तं भवति । एवं चान्यत्रापि पूर्वोत्तरपक्षहेतुमत्ताऽस्ति । अत्रैव कुतो वाच्येत्याशङ्का निरस्ता भवति । अथवेत्यादिपक्षाणामुत्तरोत्तरस्वारस्यं स्पष्टमेव । नन्वस्तूक्तरीत्या पादद्वयसङ्गतिः । तथापि प्रथमातिक्रमे कारणाभावादावेव तन्निवेशो युक्त इत्यत उभयत्र साहचर्यं विनेत्युक्तस्याभिप्रायमाह – **अथवेति ।।**

ದ್ಯುಭ್ವಾದ್ಯಧಿಕರಣ (೧-೩-೧)




ನಾಮಪಾದದಲ್ಲಿ ಸಕಲ ನಾಮಾತ್ಮಕ ಶಬ್ದಗಳು ಭಗವಂತನ ಹೆಸರುಗಳಾಗಿವೆಯೆಂಬುದನ್ನು ವಿಚಾರ ಮಾಡಿದ್ದಾಯಿತು. ಯೌಗಿಕವಾದ ಸಕಲ ಶಬ್ದಗಳು ಲಿಂಗಸ್ವರೂಪದಲ್ಲಿರುವುದರಿಂದ ಅವುಗಳೂ ಸಹ ಭಗವಂತನ ಗುಣಪ್ರತಿಪಾದಕಗಳಾಗಿವೆಯೆಂಬುದನ್ನೂ ಸಹ ಎರಡನೇ ಪಾದದಲ್ಲಿ ವಿಚಾರ ಮಾಡಿದ್ದಾಯಿತು.

ಶಬ್ದಗಳು ಭಗವಂತನನ್ನು ಪ್ರತಿಪಾದಿಸಲು ಸಾಧ್ಯವಿಲ್ಲ. ಲೋಕರೂಢಿಯಂತೆ ಲೌಕಿಕಪದಾರ್ಥಗಳನ್ನೇ ಪ್ರತಿಪಾದಿಸುತ್ತದೆಂಬುದು ಪೂರ್ವಪಕ್ಷಕಾರನ ಆಗ್ರಹ. ಪ್ರತಿಯೊಂದು ಶಬ್ದಗಳೂ ಭಗವತ್ಪ್ರತಿಪಾದಕಗಳಾಗಿವೆ. ಭಗವಂತನನ್ನು ಬಿಟ್ಟು ಇತರ ಯಾವುದೇ ಪದಾರ್ಥಗಳನ್ನೂ ಸಹ ಪ್ರತಿಪಾದಿಸಲು ಸಾಧ್ಯವೇ ಇಲ್ಲವೆಂಬುದು ಸಿದ್ಧಾಂತಿಗಳ ಆಗ್ರಹ. ಇವರಿಬ್ಬರನ್ನೂ ಸಮಾಧಾನ ಮಾಡಲು ಒಂದು ಉಪಾಯವನ್ನು ಹುಡುಕಬಹುದು. ಸಕಲ ಶಬ್ದಗಳು ಹಾಗೂ ಲಿಂಗಗಳು ಲೌಕಿಕಪದಾರ್ಥಗಳನ್ನೂ ಪ್ರತಿಪಾದಿಸುತ್ತವೆ. ವಿಷ್ಣುವನ್ನೂ ಸಹ ಪ್ರತಿಪಾದಿಸುತ್ತವೆ. ಹೀಗೆ ಹೇಳಿದಾಗ ಇಬ್ಬರಿಗೂ ಗಲಾಟೆಯಾಗಲು ಸಾಧ್ಯವೇ ಇಲ್ಲ. ಆದ್ದರಿಂದ ಉಭಯತ್ರಪ್ರಸಿದ್ಧವೆಂದು ಶಬ್ದಗಳನ್ನು ಒಪ್ಪೋಣ ಏನು ತೊಂದರೆ? ಎಂಬ ಪ್ರಶ್ನೆಯನ್ನು ಅನೇಕ ಮಂದಿ ಮಾಡುತ್ತಾರೆ. ಅದಕ್ಕೆ ಉತ್ತರ ನೀಡುವುದಕ್ಕಾಗಿಯೇ ಮೂರನೇ ಪಾದವು ಹೊರಡುತ್ತಿದೆ. ಈ ಪಾದದಲ್ಲಿ ಉಭಯತ್ರಪ್ರಸಿದ್ಧವಾದ ಶಬ್ದಗಳೆಲ್ಲವೂ ಭಗವಂತನನ್ನೇ ಪ್ರತಿಪಾದಿಸುತ್ತವೆಂದು ಸಾಧಿಸುತ್ತಿದ್ದಾರೆ.

ತಿಳಿಯಬೇಕಾದ ವಿಚಾರವಿಷ್ಟು. ಹಿಂದಿನ ಎರಡು ಪಾದಗಳಲ್ಲಿ ಸಕಲಶಬ್ದಗಳಿಗೆ ಭಗವಂತನಲ್ಲಿ ತಾತ್ಪರ್ಯವಿದೆಯೆಂದು ಹೇಳಿದ್ದಾರೆ ಹೊರತು, ಮುಖ್ಯವಾಚ್ಯತ್ವವನ್ನು ಸಮರ್ಥಿಸಿರುವುದಿಲ್ಲ. ತಾತ್ಪರ್ಯವಿರುವ ಪ್ರಯುಕ್ತ ವಿಷ್ಣುಪರವಾಗುತ್ತವೆಂಬುದಂತೂ ಅನೇಕ ನ್ಯಾಯಗಳಿಂದ ತಿಳಿಯುತ್ತವೆ. ಆದರೆ ಲೋಕರೂಢಿಯೂ ಸಹ ಬೇರೆ ಪದಾರ್ಥಗಳಲ್ಲಿರುವುದರಿಂದ ಶಬ್ದಗಳು ವಿಷ್ಣುವನ್ನು ಪ್ರತಿಪಾದಿಸುವಂತೆ ಇತರ ಪದಾರ್ಥಗಳನ್ನೂ ಸಹ ಪ್ರತಿಪಾದಿಸುತ್ತವೆ. ಹಾಗಾಗಿ ಹಿಂದಿನ ಎರಡು ಪಾದಗಳಲ್ಲಿ ಯಾವ ಶಬ್ದಗಳನ್ನೆಲ್ಲ ಸಮನ್ವಯ ಮಾಡಿದರೋ ಅವೆಲ್ಲವೂ ವಿಷ್ಣುವಿನಲ್ಲೂ ಬರುತ್ತವೆ. ಲೋಕದಲ್ಲಿಯೂ ಬರುತ್ತವೆ. ವಿಷ್ಣುವಿನಲ್ಲಿ ಮಾತ್ರ ಬರುತ್ತವೆಂಬ ನಿರ್ಧಾರವನ್ನು ಮಾಡಲು ಸಾಧ್ಯವಿಲ್ಲ. ಹಾಗಾಗಿ ಹಿಂದಿನೆರಡು ಪಾದಗಳಲ್ಲಿ ಸಮನ್ವಯ ಮಾಡಿದ ಶಬ್ದಗಳನ್ನು ಪುನಃ ಸಮನ್ವಯ ಮಾಡುವ ಅನಿವಾರ್ಯತೆ ಬಹಳವಾಗಿ ಕಾಣಿಸುತ್ತದೆ. ಅದಕ್ಕೋಸ್ಕರವೇ ಈ ಪಾದ ಹೊರಟಿದೆ. ಈ ಪಾದವು ಹೊರಟಿದ್ದರೆ ಸಕಲ ಶಬ್ದಗಳೂ ಉಭಯತ್ರಪ್ರಸಿದ್ಧವೆಂದಾಗಿ ಭಗವಂತನಲ್ಲಿ ಸಕಲಶಬ್ದದ ಸಮನ್ವಯವೂ ಸಿದ್ಧವಾಗದೆ. ಸಕಲ ಗುಣಪರಿಪೂರ್ಣತ್ವದ ಸಿದ್ಧಿಯೂ ಸಹ ಆಗದಿರುವ ಪ್ರಸಂಗ ಬರುತ್ತಿತ್ತು.

ಈ ಪಾದದಲ್ಲಿ ಈಗಾಗಲೇ ಹೇಳಿದಂತೆ ಕೇವಲ ನಾಮಾತ್ಮಕ ಶಬ್ದಗಳ ಸಮನ್ವಯವಷ್ಟೇ ಅಲ್ಲ, ಲಿಂಗಾತ್ಮಕ ಶಬ್ದಗಳ ಸಮನ್ವಯವನ್ನೂ ಸಹ ಮಾಡುತ್ತಿದ್ದಾರೆ. ಒಟ್ಟು ಹದಿನಾಲ್ಕು ಅಧಿಕರಣಗಳು ಈ ಪಾದದಲ್ಲಡಗಿವೆ. ಅವುಗಳಲ್ಲಿ ಮೊದಲನೆಯದು ದ್ಯುಭ್ವಾದ್ಯಧಿಕರಣ. ಸರ್ವಾಧಾರತ್ವವೆಂಬ ಲಿಂಗವನ್ನು ಈ ಮೊದಲನೆಯ ಅಧಿಕರಣದಲ್ಲಿ ವಿಷ್ಣುಮಾತ್ರಪರವೆಂದು ಸಮನ್ವಯ ಮಾಡುತ್ತಾರೆ. ಮುಂದಿನ ಭೂಮಾಧಿಕರಣದಲ್ಲಿ 'ಭೂಮಾ' ಎಂಬ ನಾಮಾತ್ಮಕ ಶಬ್ದದ ಸಮನ್ವಯವನ್ನು, ಅದರ ಮುಂದಿನ ಅಕ್ಷರಾಧಿಕರಣದಲ್ಲಿ 'ಅಕ್ಷರ' ಎಂಬ ನಾಮಾತ್ಮಕ ಶಬ್ದವನ್ನು ವಿಷ್ಣುವಿನಲ್ಲಿ ಸಮರ್ಥನೆ ಮಾಡುತ್ತಾರೆ.

ನಾಲ್ಕನೆಯ ಸದಧಿಕರಣದಲ್ಲಿ ಅನೇಕ ಪ್ರಕರಣಗಳ ಸಮೂಹಾತ್ಮಕವಾದ ಸ್ಥಾನವೆಂಬುದನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡುತ್ತಾರೆ. ಐದನೆಯ ದಹರಾಧಿಕರಣದಲ್ಲಿ 'ಹೃತ್ಪದ್ಮಸ್ಥತ್ವ' ಲಿಂಗವನ್ನು, ಅನುಕೃತ್ಯಧಿಕರಣದಲ್ಲಿ 'ಆನುಕೂಲ್ಯೇನ ಗೃಹ್ಯಮಾಣತ್ವ' ಎಂಬ ಲಿಂಗವನ್ನು ಸಮನ್ವಯ ಮಾಡಿದ್ದಾರೆ. ಮುಂದಿನ ವಾಮನಾಧಿರಣದಲ್ಲಿ ಈಶಾನ ಶಬ್ದವನ್ನು ಕಂಪನಾಧಿಕರಣದಲ್ಲಿ ವಜ್ರ ಶಬ್ದವನ್ನು, ಜ್ಯೋತಿರಧಿಕರಣದಲ್ಲಿ ಜ್ಯೋತಿಶಬ್ದವನ್ನು, ಆಕಾಶಾಧಿಕರಣದಲ್ಲಿ ಆಕಾಶ ಶಬ್ದವನ್ನು, ಸುಷುಪ್ತ್ಯಧಿಕರಣದಲ್ಲಿ ಸ್ವಪ್ನಾದಿದ್ರಷ್ಟೃತ್ವವೆಂಬ ಲಿಂಗವನ್ನು, ಬ್ರಾಹ್ಮಣಾಧಿಕರಣದಲ್ಲಿ ಬ್ರಾಹ್ಮಣ ಶಬ್ದವನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡಿದ್ದಾರೆ. ಮಧ್ಯದಲ್ಲಿ ದೇವತಾಧಿಕರಣ ಹಾಗೂ ಅಪಶೂದ್ರಾಧಿಕರಣಗಳು ಬರುತ್ತವೆ. ಆದರೆ ಈ ಎರಡು ಅಧಿಕರಣಗಳಲ್ಲಿ ದೇವತೆಗಳಿಗೆ ಮಾತ್ರ ವೇದಾಧಿಕಾರವಿದೆ. ಶೂದ್ರಾದಿಗಳಿಗೆ ವೇದಾಧಿಕಾರವಿಲ್ಲವೆಂಬ ವಿಚಾರವನ್ನು ಮಾಡಿದ್ದಾರೆ. ಆದ್ದರಿಂದ ಯಾವುದೇ ಲಿಂಗವನ್ನಾಗಲೀ, ಹೆಸರನ್ನಾಗಲೀ, ಈ ಎರಡು ಅಧಿಕರಣಗಳಲ್ಲಿ ಸಮನ್ವಯ ಮಾಡದೆ ಪ್ರಾಸಂಗಿಕವಾದ ವಿಚಾರಗಳನ್ನಷ್ಟೇ ತಿಳಿಸಿದ್ದಾರೆ.

ಮೊದಲನೇ ಈ ದ್ಯುಭ್ವಾದ್ಯಧಿಕರಣದಲ್ಲಿ ಸಮನ್ವಯ ಮಾಡುತ್ತಿರುವ ದ್ಯುಭ್ವಾದ್ಯಾಯತನತ್ವವೆಂಬ ಲಿಂಗವು ಉಭಯತ್ರಪ್ರಸಿದ್ಧವಾಗಿದೆ ಹೊರತು, ಅನ್ಯತ್ರಪ್ರಸಿದ್ಧವಲ್ಲ. ವಸ್ತುತಃ ಜಾಯಮಾನತ್ವವೆಂಬ ಅನ್ಯತ್ರಪ್ರಸಿದ್ಧವಾದ ಲಿಂಗದ ಜೊತೆಗೆ ಇದನ್ನು ಹೇಳಿರುವುದರಿಂದ ಇದೂ ಸಹ ಅನ್ಯತ್ರಪ್ರಸಿದ್ಧವೆಂಬ ಭ್ರಾಂತಿ ಬರುತ್ತದೆ. ಆದರೆ ರುದ್ರನಲ್ಲಿ ಹಾಗೂ ವಿಷ್ಣುವಿನಲ್ಲಿ ಸಾಧಾರಣವಾದ ಶ್ರುತಿಯನ್ನು ನೋಡಿದಾಗ ದ್ಯುಭ್ವಾದ್ಯಾಯತನತ್ವವು ಸ್ವಾಭಾವಿಕವಾಗಿ ಉಭಯತ್ರಪ್ರಸಿದ್ಧವಾಗಿದೆಯೆಂದು ತಿಳಿಯುತ್ತದೆ. ಅನ್ಯತ್ರಪ್ರಸಿದ್ಧವೆಂದು ಹೇಳಬೇಕಾದರೆ ಅನ್ಯತ್ರಪ್ರಸಿದ್ಧವಾದ ಜಾಯಮಾನತ್ವವೆಂಬ ಲಿಂಗವನ್ನು ಅಪೇಕ್ಷಿಸಬೇಕು. ಉಭಯತ್ರಪ್ರಸಿದ್ಧವೆಂಬ ಲಿಂಗವನ್ನು ಹೇಳಬೇಕಾದರೆ ಮತ್ತೊಂದನ್ನು ಅಪೇಕ್ಷಿಸಬೇಕಾಗಿಲ್ಲ. ಸ್ವಾಭಾವಿಕವಾಗಿಯೇ ಉಭಯತ್ರಪ್ರಸಿದ್ಧವಾಗಿದೆಯೆಂದು ತಿಳಿಯಬಹುದು. ಸಾಪೇಕ್ಷಕ್ಕಿಂತ ನಿರಪೇಕ್ಷವು ಪ್ರಬಲವಾಗಿರುವುದರಿಂದ ದ್ಯುಭ್ವಾದ್ಯಾಯತನತ್ವವನ್ನು ಉಭಯತ್ರಪ್ರಸಿದ್ಧವಾದ ಲಿಂಗವೆಂದೇ ಪರಿಗಣಿಸಬೇಕು.



• • • • •

## ಅನ್ಯತ್ರಪ್ರಸಿದ್ಧಶಬ್ದಗಳಿಗೂ, ಉಭಯತ್ರಪ್ರಸಿದ್ಧಶಬ್ದಗಳಿಗೂ ಸಾಂಕರ್ಯವಿಲ್ಲ

### तात्पर्यचन्द्रिका

**अर्भकौकस्त्वादिरूपं सर्वगतत्वादिकं तु ब्रह्मणि पूर्वपक्षे कयाऽपि श्रुत्या नोच्यत इति न तस्य स्वत उभयत्रप्रसिद्धता ।**

ಅನುವಾದ - ಹಿಂದಿನ ಪಾದದಲ್ಲಿ ಸಮನ್ವಯ ಮಾಡಲ್ಪಟ್ಟ ಸರ್ವಗತತ್ವವೆಂಬ ಲಿಂಗವು ಸಕಲ ಪ್ರಾಣಿಗಳ ಹೃದಯ ಪ್ರದೇಶದಲ್ಲಿರುವಿಕೆಯೆಂಬ ಅರ್ಭಕೌಕಸ್ತ್ವರೂಪವಾಗಿದೆ. ಇಂತಹ ಸರ್ವಗತತ್ವಾದಿಗಳನ್ನು ಪೂರ್ವಪಕ್ಷಿಯು ಯಾವುದೇ ಶ್ರುತಿಯಿಂದಲೂ ಸಹ ಬ್ರಹ್ಮನಲ್ಲಿ

ಒಪ್ಪಿರುವುದಿಲ್ಲ. ಆ ಕಾರಣದಿಂದಲೇ ಸರ್ವಗತತ್ವಕ್ಕೆ ಸ್ವತಃ ಉಭಯತ್ರಪ್ರಸಿದ್ಧತ್ವವು ಬರಲು ಸಾಧ್ಯವಿಲ್ಲ.

**यद्वा समाख्याश्रुत्यादितौल्याभावोऽप्यन्यत्रप्रसिद्धलक्षणान्तर्गतः । सचेह नास्ति । अन्तर्यामित्वादौ त्वस्ति । ततश्च द्युभ्वाद्ययतनत्वमुभयत्रप्रसिद्धमेव ।**

ಅಥವಾ ಅನ್ಯತ್ರಪ್ರಸಿದ್ಧಿಯ ಲಕ್ಷಣದಲ್ಲಿ ಸಮಾಖ್ಯಾಶ್ರುತ್ಯಾದಿತೌಲ್ಯಾಭಾವವನ್ನು ವಿಶೇಷಣವನ್ನಾಗಿ ಹೇಳುತ್ತೇವೆ ಅಂದರೆ ಸಮಾಖ್ಯಾಶ್ರುತಿಯು ಎರಡು ಪಕ್ಷಗಳಲ್ಲಿ ಸಮಾನವಾಗಿರದಿದ್ದರೆ ಅನ್ಯತ್ರಪ್ರಸಿದ್ಧವಾಗುತ್ತದೆಂದು ತಿಳಿಯಬೇಕು. ಸರ್ವಗತತ್ವಾದಿಲಿಂಗಗಳು ಸೂರ್ಯನಲ್ಲಿ ಹಾಗೂ ವಿಷ್ಣುವಿನಲ್ಲಿ ಇದೆಯೆನ್ನಲು ಎರಡೂ ಕಡೆ ಸಮಾನವಾದ ಶ್ರುತಿಗಳು ಇರುವುದಿಲ್ಲ. ಆ ಕಾರಣದಿಂದಲೇ ಅನ್ಯತ್ರಪ್ರಸಿದ್ಧವೆನಿಸುತ್ತವೆ. ಆದರೆ ದ್ಯುಭ್ವಾದ್ಯಾಯತನತ್ವವೆಂಬ ಲಿಂಗದಲ್ಲಿ ಸಮಾಖ್ಯಾಶ್ರುತ್ಯಾದಿ-ತೌಲ್ಯಾಭಾವವು ಇರುವುದಿಲ್ಲ. ಅಂದರೆ ದ್ಯುಭ್ವಾದ್ಯಾಯತನತ್ವವು ವಿಷ್ಣುವಿನಲ್ಲಿ ಹಾಗೂ ಬೇರೆ ದೇವತೆಗಳಲ್ಲಿ ಇದೆಯೆನ್ನಲು ಸಮಾನವಾದ ಶ್ರುತಿಗಳಿರುತ್ತವೆ. ಆ ಕಾರಣದಿಂದ ಅನ್ಯತ್ರಪ್ರಸಿದ್ಧವೆನಿಸದು. ಅಂತರ್ಯಾಮಿತ್ವಾದಿಗಳಲ್ಲಿ ಸಮಾಖ್ಯಾಶ್ರುತ್ಯಾದಿತೌಲ್ಯಾಭಾವವು ಇರುತ್ತದೆಂದು ತಿಳಿಯಬೇಕು. ಆದ್ದರಿಂದ ಸರ್ವಗತತ್ವ, ಅಂತರ್ಯಾಮಿತ್ವಾದಿಗಳು ಅನ್ಯತ್ರಪ್ರಸಿದ್ಧವೇ ಆಗುತ್ತವೆ. ಆದ್ದರಿಂದ ದ್ಯುಭ್ವಾದ್ಯಾಯತನತ್ವವು ಉಭಯತ್ರಪ್ರಸಿದ್ಧವೇ ಆಗುತ್ತದೆ.

**यद्वा सर्वगतत्वादीनीन्द्राकाशादिशब्दवत्स्वरूपेणैवान्यत्रप्रसिद्धानि । नत्वन्यत्र-प्रसिद्धतत्तत्साहचर्यात् । येन द्युभ्वाद्यायतनत्वादिकमपि तत्तत्साहचर्यात्तथा स्यात् ।**

ಅಥವಾ ಪ್ರಥಮ ಪಾದದಲ್ಲಿ ಸಮನ್ವಯ ಮಾಡಲ್ಪಟ್ಟ ಇಂದ್ರ, ಆಕಾಶ ಮೊದಲಾದ ಶಬ್ದಗಳು ಸ್ವರೂಪತಃ ಹೇಗೆ ಅನ್ಯತ್ರಪ್ರಸಿದ್ಧವಾಗಿವೆಯೋ? ಅದರಂತೆ ಎರಡನೇ ಪಾದದಲ್ಲಿ ಸಮನ್ವಯ ಮಾಡಲ್ಪಟ್ಟ ಸರ್ವಗತತ್ವಾದಿಲಿಂಗಗಳೂ ಸಹ ಸ್ವಾಭಾವಿಕವಾಗಿಯೇ ಅನ್ಯತ್ರಪ್ರಸಿದ್ಧವಾಗಿವೆ ಹೊರತು, ಅನ್ಯತ್ರಪ್ರಸಿದ್ಧವಾದ ಲಿಂಗದಿಂದ ಅಥವಾ ಶ್ರುತಿಯಿಂದ ಸಹಚರಿತವಾಗಿ ಅನ್ಯತ್ರಪ್ರಸಿದ್ಧವಾಗಿರುವುದಿಲ್ಲ. ಹಾಗಾಗಿದ್ದಲ್ಲಿ ದ್ಯುಭ್ವಾದ್ಯಾಯತನತ್ವಾದಿಗಳೂ ಸಹ ಅನ್ಯತ್ರಪ್ರಸಿದ್ಧವಾದ ಶ್ರುತಿ, ಲಿಂಗಾದಿಗಳ ಸಾಹಚರ್ಯದಿಂದ ಅನ್ಯತ್ರಪ್ರಸಿದ್ಧವಾಗುತ್ತವೆಂದು ಆಕ್ಷೇಪಿಸಬಹುದಿತ್ತು, ಆದರೆ ಹಾಗಿಲ್ಲ. ಆದ್ದರಿಂದ ಸ್ವತಃ ಲೋಕರೂಢಿಯಿಂದ ಅನ್ಯತ್ರಪ್ರಸಿದ್ಧವಾಗಿದ್ದರೆ ಅಂತಹ ಶಬ್ದಗಳು ಅನ್ಯತ್ರಪ್ರಸಿದ್ಧ ಶಬ್ದಗಳೆನಿಸುತ್ತವೆಂದು ತಿಳಿಯಬೇಕು.

**तथाहि पूर्णेऽभोक्तरि कर्महीने च ब्रह्मण्यर्भकौकस्त्वादिरूपं सर्वगतत्वमत्तृत्वं कर्मफलभोक्तृत्वं चायुक्तम् । तथा अनित्यक्रियारूपमन्तरत्वमन्तर्यामित्वं चाक्रिये ब्रह्मणि सदा न युक्तम् ।**

ಪರಿಪೂರ್ಣಚಂದ್ರಿಕಾ

ಎರಡನೆಯ ಪಾದದಲ್ಲಿ ಸಮನ್ವಯ ಮಾಡಲ್ಪಟ್ಟ ಲಿಂಗಗಳೆಲ್ಲವೂ ಸಹಜವಾಗಿಯೇ ಅನ್ಯತ್ರಪ್ರಸಿದ್ಧವಾಗಿವೆಯೆಂಬುದನ್ನು ಹೀಗೆ ತಿಳಿಯಬೇಕು. ಪೂರ್ಣನಾದ ಭಗವಂತನಲ್ಲಿ ಸ್ವಲ್ಪ ದೇಶದಲ್ಲಿರುವಿಕೆಯೆಂಬ ಸರ್ವಗತತ್ವವನ್ನು ಹೇಳಲು ಸಾಧ್ಯವಿಲ್ಲ. ಅಭೋಕ್ತೃವಾದ ವಿಷ್ಣುವಿನಲ್ಲಿ ಅತ್ತೃತ್ವವೆಂಬ ಭೋಕ್ತೃತ್ವವನ್ನು ಹೇಳಲು ಸಾಧ್ಯವಿಲ್ಲ. ಮತ್ತು ಕರ್ಮರಹಿತನಾದವನಿಗೆ ಕರ್ಮಫಲಭೋಕ್ತೃತ್ವವೂ ಸಹ ಇರುವುದಿಲ್ಲ. ಇದರಂತೆ ನಿತ್ಯಸ್ವರೂಪನಾದ ಅಕ್ರಿಯನಾದ ಭಗವಂತನಲ್ಲಿ ಅನಿತ್ಯವಾದ ಕ್ರಿಯೆಯಾದ ಅಂತಃಸ್ಥಿತ್ವಾ ರಮಣವೆಂಬುದು ಕೂಡುವುದಿಲ್ಲ. ಅಂತರ್ಯಾಮಿತ್ವವೂ ಸಹ ಅಕ್ರಿಯಾ ಸ್ವರೂಪನಾದ ಭಗವಂತನಲ್ಲಿ ಅನಿತ್ಯವಾದ್ದರಿಂದ ನಿರಂತರವಿರಲು ಸಾಧ್ಯವಿಲ್ಲ.

**तथा अदृश्यत्वाद्यभावधर्मत्वं भावरूपे ब्रह्मण्ययुक्तम् । ''एवं धर्मान्पृथक्'' इति श्रुत्या ब्रह्मणि धर्मधर्मिभेदनिषेधात् । अत एवानुव्याख्याने तत्र सिद्धान्ते क्रियाया नित्यत्वं भावस्याप्यभावात्मकत्वं च साधितम् ।**

ಮತ್ತು ಅದೃಶ್ಯತ್ವವೆಂಬ ಅಭಾವಧರ್ಮವು ಭಾವಸ್ವರೂಪನಾದ ಬ್ರಹ್ಮನಲ್ಲಿ ಅಯುಕ್ತವಾಗುತ್ತದೆ. ಏಕೆಂದರೆ 'ಏವಂ ಧರ್ಮಾನ್ ಪೃಥಕ್' ಎಂಬ ಶ್ರುತಿಯಿಂದ ಬ್ರಹ್ಮನಲ್ಲಿ ಧರ್ಮ ಹಾಗೂ ಧರ್ಮಿಗಳು ಭಿನ್ನವಾಗಿ ಇರಲು ಸಾಧ್ಯವಿಲ್ಲವೆಂದು ನಿಷೇಧ ಮಾಡಲಾಗಿದೆ. ಆದ್ದರಿಂದಲೇ ಅನುವ್ಯಾಖ್ಯಾನದ ಅದೃಶ್ಯತ್ವಾಧಿಕರಣದ ಸಿದ್ಧಾಂತದಲ್ಲಿ ಕ್ರಿಯೆಗೆ ನಿತ್ಯತ್ವವನ್ನು ಭಾವಕ್ಕೂ ಸಹ ಅಭಾವಾತ್ಮಕತ್ವವನ್ನು ಸಮರ್ಥಿಸಿರುತ್ತಾರೆ.

**एवञ्च सर्वगतत्वादीनि ब्रह्मण्ययुक्तत्वादेवान्यत्रप्रसिद्धानि । वैश्वानरशब्दस्त्वग्निपर्यायतयाऽन्यत्रप्रसिद्धः ।**

ಆದ್ದರಿಂದ ಸರ್ವಗತತ್ವಾದಿಗಳು ಬ್ರಹ್ಮನಲ್ಲಿ ಅಯುಕ್ತವಾದ ಕಾರಣದಿಂದಲೇ ಅನ್ಯತ್ರಪ್ರಸಿದ್ಧವಾಗಿವೆ. ವೈಶ್ವಾನರ ಶಬ್ದವಾದರೂ ಸಹ ಅಗ್ನಿಶಬ್ದದ ಪರ್ಯಾಯಪದವಾದ್ದರಿಂದ ಅನ್ಯತ್ರಪ್ರಸಿದ್ಧವಾಗಿದೆ; ಅಂದರೆ ಸ್ವಾಭಾವಿಕವಾಗಿ ಅನ್ಯತ್ರಪ್ರಸಿದ್ಧವಾಗಿದೆ; ಹೊರತು ಅನ್ಯತ್ರಪ್ರಸಿದ್ಧವಾದ ಮತ್ತೊಂದರ ಅಪೇಕ್ಷೆಯಿಂದಲ್ಲ.

**टीकायां सर्वगतत्वादीनामादित्यादिश्रुतिसाहचर्यादन्यत्रप्रसिद्ध्युक्तिस्त्वन्यमात्रे प्रसिद्धेः स्वतः सिद्धत्वेऽप्यादित्यादिरूपान्यविशेषाभिप्राया । एवमुत्तरत्रापि यथासम्भवं पादसङ्गतिरूह्या ।**

ಟೀಕೆಯಲ್ಲಿ ಸರ್ವಗತತ್ವಾದಿಲಿಂಗಗಳೆಲ್ಲವೂ ಆದಿತ್ಯಾದಿ ಶ್ರುತಿಯ ಸಾಹಚರ್ಯದಿಂದ ಅನ್ಯತ್ರಪ್ರಸಿದ್ಧವಾಗಿರುತ್ತವೆಂದು ಹೇಳಲಾಗಿದೆ. ಆ ಟೀಕಾ ಮಾತಿಗೆ, ಬೇರೆ ವಿಷಯದಲ್ಲಿ ಪ್ರಸಿದ್ಧಿಯು

ಸ್ವತಃಸಿದ್ಧವಾಗಿದ್ದರೂ ಸಹ ಆದಿತ್ಯಾದಿರೂಪ ಅನ್ಯವಿಶೇಷದಲ್ಲಿ ಪ್ರಸಿದ್ಧವಾಗಿದೆಯೆಂದು ತಿಳಿಸುವುದರಲ್ಲಿ ಅಭಿಪ್ರಾಯ. ಹೀಗೆ ಮುಂದಿನ ಅಧಿಕರಣಗಳಲ್ಲಿಯೂ ಯಥಾಕ್ರಮವಾಗಿ ಪಾದಸಂಗತಿಯನ್ನು ಊಹಿಸಿಕೊಳ್ಳಬೇಕು.

**प्रकाशः –**

नन्वेवं निरपेक्षादरे सर्वत्रप्रसिद्धेत्यादावुक्तसर्वगतत्वादेरेव सम्भवेनान्यसाहित्येनान्यत्रप्रसिद्ध्युक्तिर्न स्यादित्यत आह – **अर्भकेति** ।।

ವಿವರಣೆ - ನಿರಪೇಕ್ಷವಾದ್ದರಿಂದ ದುಭ್ವಾದ್ಯಾಯತನತ್ವವು ಉಭಯತ್ರಪ್ರಸಿದ್ಧವಾಗುತ್ತದೆಂದು ಈ ಹಿಂದೆ ಸಮರ್ಥಿಸಿದ್ದಾಯಿತು. ಹಾಗಾದರೆ ಸರ್ವಗತತ್ವಾಧಿಕರಣದಲ್ಲಿ ಸಮನ್ವಯ ಮಾಡುವ ಸರ್ವಗತತ್ವವೆಂಬ ಲಿಂಗವೂ ಸಹ ಉಭಯತ್ರಪ್ರಸಿದ್ಧವಾಗಬೇಕಾದೀತು. ಏಕೆಂದರೆ ಯಾವರೀತಿಯಾಗಿ ದ್ಯುಭ್ವಾದ್ಯಾಯತನತ್ವ ಲಿಂಗವು ಸಮಾನವಾದ ಶ್ರುತಿಯ ಬಲದಿಂದ ಸ್ವಾಭಾವಿಕವಾಗಿ ಉಭಯತ್ರಪ್ರಸಿದ್ಧವಾಗಿದೆಯೋ, ಅದರಂತೆ ಸರ್ವಗತತ್ವಲಿಂಗವೂ ಸಹ ಎರಡೂ ಕಡೆ ಸಮಾನವಾದ ಶ್ರುತಿಯ ಬಲದಿಂದ ಉಭಯತ್ರಪ್ರಸಿದ್ಧವಾಗುತ್ತದೆ. ಹೀಗೆ ಹೇಳಿದರೆ ಅನ್ಯಶ್ರುತಿಯ ಸಾಹಿತ್ಯದಿಂದ ಅಂದರೆ ಸೂರ್ಯನಲ್ಲಿರುವ ಶ್ರುತಿ ಸಾಹಿತ್ಯದ ಬಲದಿಂದ ಅನ್ಯತ್ರಪ್ರಸಿದ್ಧವಾಗುತ್ತದೆಂಬ ಮಾತೇ ತಪ್ಪಾಗಬೇಕಾಗುತ್ತದೆ ಎಂಬ ಪ್ರಶ್ನೆಗೆ, 'ಅರ್ಭಕ' ಇತ್ಯಾದಿ ವಾಕ್ಯಗಳಿಂದ ಉತ್ತರಿಸುತ್ತಿದ್ದಾರೆ.

**प्रकाशः –** एवमन्यत्रप्रसिद्धत्वरूपत्वमस्य लिङ्गस्योपेत्य द्वेधा गतिरुक्ता । अधुना तथात्वमेवास्य नास्तीति भावेनोत्तरं समाधानद्वयम् ।

ಇಲ್ಲಿಯ ತನಕ ದ್ಯುಭ್ವಾದ್ಯಾಯತನತ್ವವೆಂಬ ಲಿಂಗಕ್ಕೆ ಅನ್ಯತ್ರಪ್ರಸಿದ್ಧತ್ವವೂ ಸಹ ಇರುತ್ತದೆ. ಆದರೂ ಸಾಪೇಕ್ಷವಾದ್ದರಿಂದ ಅದನ್ನು ವಿವಕ್ಷಿಸಬಾರದೆಂದು ಎರಡು ರೀತಿಯಲ್ಲಿ ಸಮಾಧಾನವನ್ನು ಹೇಳಿದರು. ಆದರೆ ಈಗ ದ್ಯುಭ್ವಾದ್ಯಾಯತನತ್ವವೆಂಬ ಲಿಂಗಕ್ಕೆ ಅನ್ಯತ್ರಪ್ರಸಿದ್ಧತ್ವವೇ ಇರುವುದಿಲ್ಲವೆಂಬ ಅಭಿಪ್ರಾಯದಿಂದ ಮತ್ತೆರಡು ರೀತಿಯಲ್ಲಿ ಸಮಾಧಾನಗಳನ್ನು ಹೇಳುತ್ತಿದ್ದಾರೆ.

**प्रकाशः –** तत्राद्यं ''श्रुत्यादितो लोकतो वाऽपीतरेषु प्रसिद्धता'' इति यदन्यत्रप्रसिद्धिलक्षणमुक्तं तत्र 'श्रुत्यादितौल्याभावे सति' इति विशेषणं देयम् । अतो न दोष इत्याह – **यद्वेति** ।।

ಮೊದಲನೆಯ ಸಮಾಧಾನ ಹೀಗಿದೆ - 'ಶ್ರುತ್ಯಾದಿತೋ ಲೋಕತೋ ವಾಽಪೀತರೇಷು ಪ್ರಸಿದ್ಧತಾ' ಎಂಬ ವಾಕ್ಯದಿಂದ ಶ್ರುತಿಯಿಂದ ಅಥವಾ ಲೋಕರೂಢಿಯಿಂದ ಬೇರೆಯವರಲ್ಲಿ ಪ್ರಸಿದ್ಧವಾಗಿದ್ದರೆ ಅಂತಹ ಶಬ್ದಗಳು ಅನ್ಯತ್ರಪ್ರಸಿದ್ಧವಾಗುತ್ತವೆಂದು ಅನ್ಯತ್ರಪ್ರಸಿದ್ಧಿಯ ಲಕ್ಷಣವನ್ನು ಹೇಳಿದರು. ಈ ಅನ್ಯತ್ರಪ್ರಸಿದ್ಧಿಯ ಲಕ್ಷಣವಾಕ್ಯದಲ್ಲಿ 'ಶ್ರುತ್ಯಾದಿತೌಲ್ಯಾಭಾವೇ ಸತಿ' ಎಂಬ ವಿಶೇಷಣವನ್ನು ವಿವಕ್ಷಿಸಬೇಕು. ಅಂದರೆ ವಿಷ್ಣುವಿನಲ್ಲಿ ಹಾಗೂ ಬೇರೆಯವರಲ್ಲಿ ಸಮಾನವಾದ ಶ್ರುತಿ ಇಲ್ಲದೇ ಇದ್ದಾಗ ಲೋಕರೂಢಿಯಿಂದ ಅನ್ಯತ್ರಪ್ರಸಿದ್ಧವಾಗಿದ್ದರೆ

ಅಂತಹ ಶಬ್ದಗಳು ಅನ್ಯತ್ರಪ್ರಸಿದ್ಧವಾಗುತ್ತವೆಂದು ತಿಳಿಯಬೇಕು. ಹೀಗೆ ವಿವಕ್ಷಿಸಿದಾಗ ದ್ಯುಭ್ವಾದ್ಯಾಯತನತ್ವದಲ್ಲಿ ಶ್ರುತ್ಯಾದಿ ತೌಲ್ಯವೇ ಇರುತ್ತವೆ. ಎರಡೂ ಕಡೆ ಸಮಾನವಾದ ಶ್ರುತಿಗಳೇ ಇರುವುದರಿಂದ ಅನ್ಯತ್ರಪ್ರಸಿದ್ಧಿಯ ಲಕ್ಷಣವನ್ನು ಹೇಳಿದಂತಾಗುವುದಿಲ್ಲವೆಂದು 'ಯದ್ವಾ' ಇತ್ಯಾದಿ ವಾಕ್ಯದಿಂದ ಪ್ರತಿಪಾದಿಸುತ್ತಿದ್ದಾರೆ.

**प्रकाशः** – 'श्रुत्यादितः' इति पदस्थाने 'स्वतः' इति पदं प्रक्षिप्येतरेषु प्रसिद्धत्वं लोकतस्स्वत एव वेत्यन्यत्रप्रसिद्धत्वलक्षणं वाच्यम् । तच्चेह नास्ति । पूर्वत्रास्तीत्याह – **यद्वा सर्वगतत्वादीनीति** ॥

ಅಥವಾ ಎರಡನೆಯ ಸಮಾಧಾನ 'ಶ್ರುತ್ಯಾದಿತಃ' ಎಂಬ ಪದದ ಬದಲು 'ಸ್ವತಃ' ಎಂಬ ಪದವನ್ನು ಇಟ್ಟುಕೊಳ್ಳಬೇಕು. ಆಗ 'ಇತರೇಷುಪ್ರಸಿದ್ಧತ್ವಂ ಲೋಕತಃ ಸ್ವ ಏವ ವಾ' ಎಂದು ಲಕ್ಷಣದ ಸ್ವರೂಪ. ಬೇರೆ ಪದಾರ್ಥಗಳಲ್ಲಿ ಲೋಕರೂಢಿಯಿಂದ ಸ್ವಾಭಾವಿಕವಾಗಿ ಪ್ರಸಿದ್ಧವಾದ ಶಬ್ದಗಳಷ್ಟೇ ಅನ್ಯತ್ರಪ್ರಸಿದ್ಧವಾಗುತ್ತದೆಂದು ಹೇಳಿದಂತಾಗುತ್ತದೆ. ಅಂತಹ ಅನ್ಯತ್ರಪ್ರಸಿದ್ಧಿಯ ಲಕ್ಷಣವು ದ್ಯುಭ್ವಾದ್ಯಾಯತನತ್ವವೆಂಬ ಲಿಂಗದಲ್ಲಿ ಬರಲು ಸಾಧ್ಯವಿಲ್ಲ. ಏಕೆಂದರೆ ದ್ಯುಭ್ವಾದ್ಯಾಯನತ್ವವೆಂಬ ಲಿಂಗವು ಸ್ವಾಭಾವಿಕವಾಗಿದೆ. ಆದರೆ ಹಿಂದಿನ ಸರ್ವಗತತ್ವಾದಿ ಧರ್ಮಗಳಲ್ಲಿ ಇಂತಹ ಲಕ್ಷಣಗಳು ಇರುತ್ತವೆಂದು 'ಯದ್ವಾ' ಇತ್ಯಾದಿ ಗ್ರಂಥದಿಂದ ಪ್ರತಿಪಾದಿಸುತ್ತಿದ್ದಾರೆ.

**प्रकाशः** – पूर्वोदाहरणानां स्वतोऽन्यत्रप्रसिद्धतामाह – **तथाहीति** ॥ कुत इत्यत उक्तम् **'एवंधर्मान्'** इति । टीकाविरोधमाशङ्क्याह – **टीकायामिति** ॥ **उत्तरत्रेति** ॥ उत्तराधिकरणेषु । **पादसङ्गतिः** पादान्तर्भावः ।

ಹಿಂದಿನ ಪಾದದಲ್ಲಿ ಪ್ರಸಕ್ತವಾದ ಎಲ್ಲಾ ಲಿಂಗಗಳೂ ಸಹ ಸ್ವಾಭಾವಿಕವಾಗಿ ಅನ್ಯತ್ರಪ್ರಸಿದ್ಧವಾಗಿವೆಯೆಂದು 'ತಥಾಹಿ' ಇತ್ಯಾದಿ ವಾಕ್ಯದಿಂದ ಪ್ರತಿಪಾದಿಸುತ್ತಿದ್ದಾರೆ. ಭಾವರೂಪನಾದ ಬ್ರಹ್ಮನಲ್ಲಿ ಅಭಾವರೂಪವಾದ ಧರ್ಮಗಳೇಕೆ ಬರುವುದಿಲ್ಲ ? ಎಂಬ ಪ್ರಶ್ನೆಗೆ 'ಏವಂ ಧರ್ಮಾನ್' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. ಈ ವಿಷಯದಲ್ಲಿ ಟೀಕೆಯ ವಿರೋಧ ಬರುತ್ತದಲ್ಲವೇ? ಎಂಬ ಪ್ರಶ್ನೆಗೆ 'ಟೀಕಾಯಾಮ್' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. 'ಉತ್ತರತ್ರ' ಎಂಬ ಪದಕ್ಕೆ 'ಮುಂದಿನ ಅಧಿಕರಣಗಳಲ್ಲಿ' ಎಂದರ್ಥ. 'ಪಾದಸಂಗತಿಃ' ಎಂದರೆ 'ಪಾದದಲ್ಲಿ ಅಂತರ್ಭಾವ ರೂಪವಾದ ಸಂಗತಿ' ಎಂದರ್ಥ.

**प्रकाशः** – भूमनये प्राणाभेदेन प्रतीतभूमनाम्नः 'प्राणो नूत्क्रामत्' इति श्रुतनिरवकाशोत्क्रमणलिङ्गेन, अक्षरनये श्रुत्यन्तरसिद्धचन्द्राद्याधारत्वश्रीतत्वलिङ्गेनाक्षरनाम्नः, ईक्षतिनये 'बहुस्याम्' इति श्रुतविकाररूपलिङ्गेन 'सदेव' इति श्रुतसन्नाम्नः दहरनयादावाकाशश्रुत्यादिना हृत्पद्मस्थत्वादेरन्यत्रप्रसिद्धत्वेत्युक्तदिशा चतुर्धाऽन्त-र्भावसङ्गतिरूह्येत्यर्थः । समाख्याश्रुतितौल्यस्य सर्वत्रासम्भवाद्यथासम्भवमित्युक्तम् ।

ದ್ಯುಭ್ವಾದ್ಯಧಿಕರಣ (೧-೩-೧)

ಆಕ್ಷೇಪ - ಈ ಅಧಿಕರಣದಲ್ಲಿ ಸಮನ್ವಯ ಮಾಡುತ್ತಿರುವ 'ಭೂಮ' ಮೊದಲಾದ ಶಬ್ದಗಳನ್ನು ಉಭಯತ್ರಪ್ರಸಿದ್ಧವೆಂದು ಹೇಗೆ ಹೇಳುತ್ತೀರಿ? ಇವುಗಳೂ ಸಹ ಅನ್ಯತ್ರಪ್ರಸಿದ್ಧವೇ ಆಗುತ್ತವೆ. ಏಕೆಂದರೆ ಭೂಮಾಧಿಕರಣದಲ್ಲಿ ಮುಖ್ಯಪ್ರಾಣನನ್ನು ಪ್ರತಿಪಾದಿಸುವ 'ಭೂಮಾ' ಎಂಬ ಶಬ್ದವು 'ಪ್ರಾಣೋನೂತ್ಕ್ರಾಮತಿ' ಎಂಬ ನಿರವಕಾಶವಾದ ಉತ್ಕ್ರಮಣವೆಂಬ ಲಿಂಗದಿಂದ ಮುಖ್ಯಪ್ರಾಣನಲ್ಲಿ ಪ್ರಸಿದ್ಧವಾಗಿದೆ. ಅಕ್ಷರಾಧಿಕರಣದಲ್ಲಿ ಸಮನ್ವಯ ಮಾಡಬೇಕಾದ ಅಕ್ಷರಶಬ್ದವೂ ಸಹ ಮತ್ತೊಂದು ಶ್ರುತಿಯಿಂದ ಸಿದ್ಧವಾದ ಚಂದ್ರದ್ಯಾಧಾರತ್ವವೆಂಬ ಲಕ್ಷ್ಮೀದೇವಿಯ ಲಿಂಗದಿಂದ ಅನ್ಯತ್ರಪ್ರಸಿದ್ಧವಾಗಿದೆ. ಸದಧಿಕರಣದಲ್ಲಿ ಸಮನ್ವಯ ಮಾಡಬೇಕಾದ 'ಸತ್' ಶಬ್ದವೂ ಸಹ ಈಕ್ಷತ್ಯಧಿಕರಣದಲ್ಲಿರುವ 'ಬಹುಸ್ಯಾಮ್' ಎಂಬ ಶ್ರುತಿಯಿಂದ ಸಿದ್ಧವಾದ ವಿಕಾರ ಎಂಬ ಲಿಂಗದಿಂದ ಅನ್ಯತ್ರಪ್ರಸಿದ್ಧವಾಗಿದೆ. ದಹರಾಧಿಕರಣದಲ್ಲಿ ಸಮನ್ವಯ ಮಾಡುವ 'ಹೃತ್ಪದ್ಮಸ್ಥತ್ವ' ಎಂಬ ಲಿಂಗವು ಆಕಾಶಶ್ರುತಿಯಿಂದ ಅನ್ಯತ್ರಪ್ರಸಿದ್ಧವಾಗಿದೆ. ಹೀಗಿರುವಾಗ ಇವುಗಳನ್ನೆಲ್ಲಾ ಉಭಯತ್ರಪ್ರಸಿದ್ಧವೆಂದು ಹೇಗೆ ಹೇಳುತ್ತೀರಿ?

ಸಮಾಧಾನ - ಈ ಆಕ್ಷೇಪಕ್ಕೆ ಈಗಾಗಲೇ ಹೇಳಿದ ನಾಲ್ಕು ಬಗೆಯ ಸಮಾಧಾನವನ್ನು ತಿಳಿದುಕೊಳ್ಳಬೇಕು.

೧. 'ದ್ಯುಭ್ವಾದ್ಯಾಯತನತ್ವ' ಮೊದಲಾದ ಲಿಂಗಗಳಿಗೆ ಸಮಾನವಾದ ಶ್ರುತಿಯ ಬಲದಿಂದ ಅನ್ಯತ್ರಪ್ರಸಿದ್ಧಿಯೂ ಇರುತ್ತದೆ. ಉಭಯತ್ರಪ್ರಸಿದ್ಧಿಯೂ ಸಹ ಇರುತ್ತದೆ. ಇವೆರಡರಲ್ಲಿ ಉಭಯತ್ರಪ್ರಸಿದ್ಧತ್ವವನ್ನು ವಿವಕ್ಷಿಸಬೇಕು.

೨. ಅನ್ಯತ್ರಪ್ರಸಿದ್ಧಿಯು, ಅನ್ಯತ್ರಪ್ರಸಿದ್ಧವಾದ ಮತ್ತೊಂದು ಲಿಂಗವನ್ನು ಅಪೇಕ್ಷಿಸುತ್ತದೆ. ಉಭಯತ್ರಪ್ರಸಿದ್ಧಿಯು ಮತ್ತೊಂದು ಲಿಂಗವನ್ನು ಅಪೇಕ್ಷಿಸದೇ ಸಮಾಖ್ಯಾಶ್ರುತಿಯ ಬಲದಿಂದ ಸ್ವತಃ ಉಭಯತ್ರಪ್ರಸಿದ್ಧವಾಗುತ್ತದೆ. ಸಾಪೇಕ್ಷ ಹಾಗೂ ನಿರಪೇಕ್ಷಗಳಲ್ಲಿ ನಿರಪೇಕ್ಷವಾದದ್ದನ್ನೇ ಆಧರಿಸಬೇಕಾದ್ದರಿಂದ ದ್ಯುಭ್ವಾದ್ಯಾಯತನತ್ವಾದಿಗಳೆಲ್ಲವೂ ಉಭಯತ್ರಪ್ರಸಿದ್ಧವೆಂದು ವಿವಕ್ಷಿಸಬೇಕು.

೩. ದುಭ್ವಾದ್ಯಾಯತನತ್ವಾದಿಗಳಿಗೆ ಅನ್ಯತ್ರಪ್ರಸಿದ್ಧತ್ವವನ್ನು ಒಪ್ಪುವುದೇ ಬೇಕಾಗಿಲ್ಲ. ಏಕೆಂದರೆ 'ಶ್ರುತ್ಯಾದಿತೋ ಲೋಕತೋ ವಾऽಪೀತರೇಷು ಪ್ರಸಿದ್ಧತಾ' ಎಂಬ ಅನ್ಯತ್ರಪ್ರಸಿದ್ಧಿಯ ಲಕ್ಷಣದಲ್ಲಿ 'ಶ್ರುತ್ಯಾದಿತೌಲ್ಯಾಭಾವೇ ಸತಿ' ಎಂಬುದನ್ನು ವಿಶೇಷಣವನ್ನಾಗಿ ಹೇಳಿದ್ದರಿಂದ ಸರ್ವಗತತ್ವಾದಿಲಿಂಗಗಳಿಗೆ ಹಾಗೂ ಭೂಮಾದಿ ಶಬ್ದಗಳಿಗೆ ಅನ್ಯತ್ರಪ್ರಸಿದ್ಧಿಯ ಸಾಹಚರ್ಯದಿಂದ ಅನ್ಯತ್ರಪ್ರಸಿದ್ಧತ್ವವಿದ್ದರೂ ಸಹ ಎಲ್ಲಿ ಶ್ರುತ್ಯಾದಿತೌಲ್ಯವು ಇರುವುದಿಲ್ಲವೋ ಅಲ್ಲಿಯೂ ಸಹ ಅನ್ಯತ್ರಪ್ರಸಿದ್ಧಿಯ ಲಕ್ಷಣಬರುತ್ತದೆ. ಭೂಮಾ, ದ್ಯುಭ್ವಾದ್ಯಾಯತನತ್ವ ಮೊದಲಾದೆಡೆ ಸಮಾಖ್ಯಾಶ್ರುತಿಯ ತೌಲ್ಯವಿರುವುದರಿಂದ ಅನ್ಯತ್ರಪ್ರಸಿದ್ಧಿಯ ಲಕ್ಷಣ ಬರುವುದಿಲ್ಲವೆಂದು ತಿಳಿಯಬೇಕು.

೪. ಅಥವಾ ಅನ್ಯತ್ರಪ್ರಸಿದ್ಧವಾದ ಲಿಂಗದ ಸಾಹಚರ್ಯದಿಂದ ಅನ್ಯತ್ರಪ್ರಸಿದ್ಧವಾಗುತ್ತದೆಂಬ ಪರಿಕಲ್ಪನೆಯನ್ನೇ ಒಪ್ಪುವುದಿಲ್ಲ; ಹೊರತಾಗಿ ಸ್ವಾಭಾವಿಕವಾಗಿ ಯಾವುದು ಲೋಕರೂಢಿಯಿಂದ ಅನ್ಯತ್ರಪ್ರಸಿದ್ಧವಾಗಿರುತ್ತದೋ, ಅದನ್ನು ಮಾತ್ರ ಅನ್ಯತ್ರಪ್ರಸಿದ್ಧವೆಂದು ಹೇಳಬೇಕು. ಸರ್ವಗತತ್ವಾದಿಗಳೆಲ್ಲವೂ ಅನ್ಯತ್ರಪ್ರಸಿದ್ಧವಾದ ಶ್ರುತ್ಯಾದಿಗಳ ಸಾಹಚರ್ಯದಿಂದ ಅನ್ಯತ್ರಪ್ರಸಿದ್ಧವಾಗಿರುವುದಲ್ಲ. ಹೊರತಾಗಿ ಬೇರೆಕಡೆ

ಪ್ರಸಿದ್ಧವಾಗಿವೆಯೆಂಬುದನ್ನು ತಿಳಿಸಲು ಮಾತ್ರ ಆಯಾ ಅಧಿಕರಣಗಳಲ್ಲಿ ಶ್ರುತ್ಯಾದಿ ಪ್ರಮಾಣಗಳನ್ನು ಹೇಳಿರುತ್ತಾರೆ.

ಪ್ರಕೃತ ದ್ಯುಭ್ವಾದ್ಯಾಯತನತ್ವಾದಿಗಳಲ್ಲಿ ಲೋಕರೂಢಿಯಿಂದ ಸ್ವಾಭಾವಿಕವಾಗಿ ಅನ್ಯತ್ರಪ್ರಸಿದ್ಧತ್ವವು ಇಲ್ಲದ ಕಾರಣ ಅನ್ಯತ್ರಪ್ರಸಿದ್ಧಿಯ ಲಕ್ಷಣ ಬರುವುದಿಲ್ಲವೆಂದು ತಿಳಿಯಬೇಕು. ಹಾಗಾಗಿ ಸರ್ವಗತತ್ವಾದಿಧರ್ಮಗಳು ಅನ್ಯತ್ರಪ್ರಸಿದ್ಧವಾದ ಶಬ್ದಗಳೇ ಆಗುತ್ತವೆ. ದ್ಯುಭ್ವಾದ್ಯಾಯತನತ್ವಗಳು ಉಭಯತ್ರಪ್ರಸಿದ್ಧವೇ ಆಗುತ್ತವೆ ಪರಸ್ಪರ ಸಾಂಕರ್ಯ ದೋಷಕ್ಕೆ ಅವಕಾಶವಿರುವುದಿಲ್ಲ. ಸಮಾಖ್ಯಾಶ್ರುತಿ ಸಮಾನತ್ವವು ಎಲ್ಲಾ ಕಡೆ ಇಲ್ಲವಾದ್ದರಿಂದ ಗ್ರಂಥದಲ್ಲಿ 'ಯಥಾಸಂಭವಮ್' ಎಂದು ಹೇಳಲಾಗಿದೆ.

**गुरुराजीयम्** – ननु ब्रह्मणोऽलौकिकस्वरूपसर्वगतत्वप्रतिपादकस्यान्तर्हृदयेऽणीयानित्यादिवाक्यस्य सत्त्वेन तस्य न्यायविवरणे पूर्वपक्ष उदाहरणेऽपि वस्तुत उभयत्रप्रसिद्धता स्यादित्यत आह – **अर्भकेति** ।। नन्वन्यत्रप्रसिद्धेष्वपि सर्वगतत्वादिषु समाख्याश्रुत्यादितौल्यस्यैवोक्तरीत्या सत्त्वेनोभयत्रप्रसिद्धता स्यादित्यत आह – **यद्वेति** ।। अस्मिन्पक्षेऽन्यत्रप्रसिद्धिलक्षणे समाख्याश्रुत्यादितौल्याभावरूपविशेषणप्रक्षेपः कर्तव्य इतीममेवास्वरसं मनसि निधाय पक्षान्तरमाह – **यद्वेति** ।।




ಈ ಅಧಿಕರಣದಲ್ಲಿ ಸಮನ್ವಯ ಮಾಡುತ್ತಿರುವ 'ಭೂಮಾ' ಮೊದಲಾದ ಶಬ್ದಗಳನ್ನು ಉಭಯತ್ರಪ್ರಸಿದ್ಧವೆಂದು ಹೇಗೆ ಹೇಳುತ್ತೀರಿ? ಇವುಗಳೂ ಸಹ ಅನ್ಯತ್ರಪ್ರಸಿದ್ಧವೇ ಆಗುತ್ತವೆ. ಏಕೆಂದರೆ ಭೂಮಾಧಿಕರಣದಲ್ಲಿ ಮುಖ್ಯಪ್ರಾಣನನ್ನು ಪ್ರತಿಪಾದಿಸುವ 'ಭೂಮಾ' ಎಂಬ ಶಬ್ದವು 'ಪ್ರಾಣೋನೂತ್ಕ್ರಾಮತಿ' ಎಂಬ ನಿರವಕಾಶವಾದ ಉತ್ಕ್ರಮಣವೆಂಬ ಲಿಂಗದಿಂದ ಮುಖ್ಯಪ್ರಾಣನಲ್ಲಿ ಪ್ರಸಿದ್ಧವಾಗಿದೆ. ಅಕ್ಷರಾಧಿಕರಣದಲ್ಲಿ ಸಮನ್ವಯ ಮಾಡಬೇಕಾದ ಅಕ್ಷರಶಬ್ದವೂ ಸಹ ಮತ್ತೊಂದು ಶ್ರುತಿಯಿಂದ ಸಿದ್ಧವಾದ ಚಂದ್ರಾದ್ಯಾಧಾರತ್ವವೆಂಬ ಲಕ್ಷ್ಮೀದೇವಿಯ ಲಿಂಗದಿಂದ ಅನ್ಯತ್ರಪ್ರಸಿದ್ಧವಾಗಿದೆ. ಸದಧಿಕರಣದಲ್ಲಿ ಸಮನ್ವಯ ಮಾಡಬೇಕಾದ 'ಸತ್' ಶಬ್ದವೂ ಸಹ 'ಬಹುಸ್ಯಾಮ್' ಎಂಬ ಶ್ರುತಿಯಿಂದ ಸಿದ್ಧವಾದ ವಿಕಾರ ಎಂಬ ಲಿಂಗದಿಂದ ಅನ್ಯತ್ರಪ್ರಸಿದ್ಧವಾಗಿದೆ. ದಹರಾಧಿಕರಣದಲ್ಲಿ ಸಮನ್ವಯ ಮಾಡುವ 'ಹೃತ್ಪದ್ಮಸ್ಥತ್ವ' ಎಂಬ ಲಿಂಗವೂ ಆಕಾಶಶ್ರುತಿಯಿಂದ ಅನ್ಯತ್ರಪ್ರಸಿದ್ಧವಾಗಿದೆ. ಹೀಗಿರುವಾಗ ಇವುಗಳನ್ನೆಲ್ಲಾ ಉಭಯತ್ರಪ್ರಸಿದ್ಧವೆಂದು ಹೇಗೆ ಹೇಳುತ್ತೀರಿ?

ಈ ಆಕ್ಷೇಪಕ್ಕೆ ಈಗಾಗಲೇ ಹೇಳಿದ ನಾಲ್ಕು ಬಗೆಯ ಸಮಾಧಾನವನ್ನು ತಿಳಿದುಕೊಳ್ಳಬೇಕು.

೧. 'ದ್ಯುಭ್ವಾದ್ಯಾಯತನತ್ವ' ಮೊದಲಾದ ಲಿಂಗಗಳಿಗೆ ಸಮಾನವಾದ ಶ್ರುತಿಯ ಬಲದಿಂದ ಅನ್ಯತ್ರಪ್ರಸಿದ್ಧಿಯೂ ಇರುತ್ತದೆ. ಉಭಯತ್ರಪ್ರಸಿದ್ಧಿಯೂ ಸಹ ಇರುತ್ತದೆ. ಇವೆರಡರಲ್ಲಿ ಉಭಯತ್ರಪ್ರಸಿದ್ಧತ್ವವನ್ನು ವಿವಕ್ಷಿಸಬೇಕು.

ದ್ಯುಭ್ವಾದ್ಯಧಿಕರಣ (೧-೩-೧)

೨. ಅನ್ಯತ್ರಪ್ರಸಿದ್ಧಿಯು, ಅನ್ಯತ್ರಪ್ರಸಿದ್ಧವಾದ ಮತ್ತೊಂದು ಲಿಂಗವನ್ನು ಅಪೇಕ್ಷಿಸುತ್ತದೆ. ಉಭಯತ್ರಪ್ರಸಿದ್ಧಿಯು ಮತ್ತೊಂದು ಲಿಂಗವನ್ನು ಅಪೇಕ್ಷಿಸದೇ ಸಮಾಖ್ಯಾಶ್ರುತಿಯ ಬಲದಿಂದ ಸ್ವತಃ ಉಭಯತ್ರಪ್ರಸಿದ್ಧವಾಗುತ್ತದೆ. ಸಾಪೇಕ್ಷ ಹಾಗೂ ನಿರಪೇಕ್ಷಗಳಲ್ಲಿ ನಿರಪೇಕ್ಷವಾದದ್ದನ್ನೇ ಆಧರಿಸಬೇಕಾದ್ದರಿಂದ ದ್ಯುಭ್ವಾದ್ಯಾಯತನತ್ವಾದಿಗಳೆಲ್ಲವೂ ಉಭಯತ್ರಪ್ರಸಿದ್ಧವೆಂದು ವಿವಕ್ಷಿಸಬೇಕು.

೩. ದುಭ್ವಾದ್ಯಾಯತನತ್ವಾದಿಗಳಿಗೆ ಅನ್ಯತ್ರಪ್ರಸಿದ್ಧತ್ವವನ್ನು ಒಪ್ಪುವುದೇ ಬೇಕಾಗಿಲ್ಲ. ಏಕೆಂದರೆ 'ಶ್ರುತ್ಯಾದಿತೋ ಲೋಕತೋ ವಾಽಪೀತರೇಷು ಪ್ರಸಿದ್ಧತಾ' ಎಂಬ ಅನ್ಯತ್ರಪ್ರಸಿದ್ಧಿಯ ಲಕ್ಷಣದಲ್ಲಿ 'ಶ್ರುತ್ಯಾದಿತೌಲ್ಯಾಭಾವೇ ಸತಿ' ಎಂಬುದನ್ನು ವಿಶೇಷಣವನ್ನಾಗಿ ಹೇಳಿದ್ದರಿಂದ ಸರ್ವಗತತ್ವಾದಿಲಿಂಗಗಳಿಗೆ ಹಾಗೂ ಭೂಮಾದಿ ಶಬ್ದಗಳಿಗೆ ಅನ್ಯತ್ರಪ್ರಸಿದ್ಧಿಯ ಸಾಹಚರ್ಯದಿಂದ ಅನ್ಯತ್ರಪ್ರಸಿದ್ಧತ್ವವಿದ್ದರೂ ಸಹ ಎಲ್ಲಿ ಶ್ರುತ್ಯಾದಿತೌಲ್ಯವು ಇರುವುದಿಲ್ಲವೋ ಅಲ್ಲಿಯೂ ಸಹ ಅನ್ಯತ್ರಪ್ರಸಿದ್ಧಿಯ ಲಕ್ಷಣಬರುತ್ತದೆ. ಭೂಮಾ, ದ್ಯುಭ್ವಾದ್ಯಾಯತನತ್ವ ಮೊದಲಾದೆಡೆ ಸಮಾಖ್ಯಾಶ್ರುತಿಯ ತೌಲ್ಯವಿರುವುದರಿಂದ ಅನ್ಯತ್ರಪ್ರಸಿದ್ಧಿಯ ಲಕ್ಷಣ ಬರುವುದಿಲ್ಲವೆಂದು ತಿಳಿಯಬೇಕು.

೪. ಅನ್ಯತ್ರಪ್ರಸಿದ್ಧವಾದ ಲಿಂಗದ ಸಾಹಚರ್ಯದಿಂದ ಅನ್ಯತ್ರಪ್ರಸಿದ್ಧವಾಗುತ್ತದೆಂಬ ಪರಿಕಲ್ಪನೆಯನ್ನೇ ಒಪ್ಪುವುದಿಲ್ಲ; ಹೊರತಾಗಿ ಸ್ವಾಭಾವಿಕವಾಗಿ ಯಾವುದು ಲೋಕರೂಢಿಯಿಂದ ಅನ್ಯತ್ರಪ್ರಸಿದ್ಧವಾಗಿರುತ್ತದೋ, ಅದನ್ನು ಮಾತ್ರ ಅನ್ಯತ್ರಪ್ರಸಿದ್ಧವೆಂದು ಹೇಳಬೇಕು. ಸರ್ವಗತತ್ವಾದಿಗಳೆಲ್ಲವೂ ಅನ್ಯತ್ರಪ್ರಸಿದ್ಧವಾದ ಶ್ರುತ್ಯಾದಿಗಳ ಸಾಹಚರ್ಯದಿಂದ ಅನ್ಯತ್ರಪ್ರಸಿದ್ಧವಾಗಿರುವುದಲ್ಲ. ಹೊರತಾಗಿ ಬೇರೆಕಡೆ ಪ್ರಸಿದ್ಧವಾಗಿವೆಯೆಂಬುದನ್ನು ತಿಳಿಸಲು ಮಾತ್ರ ಆಯಾ ಅಧಿಕರಣಗಳಲ್ಲಿ ಶ್ರುತ್ಯಾದಿ ಪ್ರಮಾಣಗಳನ್ನು ಹೇಳಿರುತ್ತಾರೆ.

ಪ್ರಕೃತ ದ್ಯುಭ್ವಾದ್ಯಾಯತನತ್ವಾದಿಗಳಲ್ಲಿ ಲೋಕರೂಢಿಯಿಂದ ಸ್ವಾಭಾವಿಕವಾಗಿ ಅನ್ಯತ್ರಪ್ರಸಿದ್ಧತ್ವವು ಇಲ್ಲದ ಕಾರಣ ಅನ್ಯತ್ರಪ್ರಸಿದ್ಧಿಯ ಲಕ್ಷಣ ಬರುವುದಿಲ್ಲವೆಂದು ತಿಳಿಯಬೇಕು. ಹಾಗಾಗಿ ಸರ್ವಗತತ್ವಾದಿಧರ್ಮಗಳು ಅನ್ಯತ್ರಪ್ರಸಿದ್ಧವಾದ ಶಬ್ದಗಳೇ ಆಗುತ್ತವೆ. ದ್ಯುಭ್ವಾದ್ಯಾಯತನತ್ವಗಳು ಉಭಯತ್ರಪ್ರಸಿದ್ಧವೇ ಆಗುತ್ತವೆ ಪರಸ್ಪರ ಸಾಂಕರ್ಯ ದೋಷಕ್ಕೆ ಅವಕಾಶವಿರುವುದಿಲ್ಲ.

• • • • •

## ಅಧಿಕರಣ ಸಂಗತಿ ಹಾಗೂ ಸಂಶಯ ಪರಂಪರೆ

## तात्पर्यचन्द्रिका

**पूर्वपादान्त्योत्तरपादाद्ययोश्चाधिकरणयोर्नावान्तरसङ्गत्यपेक्षेत्युक्तम् । यद्वा पूर्वत्रेवात्राप्यात्मशब्देन सिद्धान्तादातिदेशिक्यवान्तरसङ्गतिः ।**

ಅನುವಾದ - ದ್ಯುಭ್ವಾದ್ಯಧಿಕರಣಕ್ಕೆ ಹಿಂದಿನ ಅಧಿಕರಣದಿಂದ ಸಂಗತಿಯನ್ನು ತೋರಿಸಬೇಕಾಗಿಲ್ಲ. ಏಕೆಂದರೆ ಎರಡನೇ ಪಾದದ ಪ್ರಾರಂಭದಲ್ಲಿ ಹೇಳಿದ ಪ್ರಕಾರ ಹಿಂದಿನ ಪಾದದ ಕೊನೆಯ ಅಧಿಕರಣದಿಂದ ಮುಂದಿನ ಪಾದದ ಮೊದಲನೆಯ ಅಧಿಕರಣಕ್ಕೆ ಅವಾಂತರ ಸಂಗತಿಯ ಅಪೇಕ್ಷೆಯು

ಇರುವುದಿಲ್ಲ. ಅಥವಾ ಸಂಗತಿ ಸಹಜವಾಗಿ ಇದ್ದರೆ ಅದನ್ನು ಬಿಡಬೇಕಾಗಿಲ್ಲ. ಆದ್ದರಿಂದ ಹಿಂದಿನ ವೈಶ್ವಾನರಾಧಿಕರಣದಲ್ಲಿ ಆತ್ಮ ಶಬ್ದವನ್ನು ಪ್ರಧಾನ ಹೇತುವನ್ನಾಗಿ ಹೇಳಿದ್ದಾರೆ. ಆ ಆತ್ಮಶಬ್ದವು ವಿಷ್ಣುವಿನಲ್ಲಿ ಕೂಡುವುದಿಲ್ಲವೆಂದು ಆಕ್ಷೇಪಿಸುತ್ತಿರುವುದರಿಂದ 'ಆತಿದೇಶಿಕೀ' ಎಂಬ ಅವಾಂತರ ಸಂಗತಿಯನ್ನು ತಿಳಿಯಬಹುದು.

**अत्र "यस्मिन्द्यौः" इत्यादिनोक्तं द्युभ्वाद्यायतनत्वं किं रुद्रादेः किं वा विष्णोरिति चिन्ता । तदर्थमात्मशब्दादयः किं गौणाः किं वा मुख्या इति । तदर्थं तेषां मुख्यत्वे बाधकमस्त्युत नेति । तदर्थं जायमानत्वं किं विष्णोर्न युक्तमुत युक्तमिति । तदर्थं किं शरीरग्रहणादिकमेव जननं किं वा प्रादुर्भावोऽपीति ।**

ಈ ಅಧಿಕರಣದ ಸಂಶಯಕೋಟಿಗಳು ಹೀಗಿವೆ - 'ಯಸ್ಮಿನ್‌ದ್ಯೌಃ' ಇತ್ಯಾದಿ ಶ್ರುತಿಯಲ್ಲಿ ಪ್ರತಿಪಾದಿಸಲ್ಪಟ್ಟ ದ್ಯುಭ್ವಾದ್ಯಾಯತನತ್ವವೆಂಬ ಲಿಂಗವು ರುದ್ರಾದಿಗಳಲ್ಲಿ ಬರುತ್ತದೋ? ಅಥವಾ ವಿಷ್ಣುವಿನಲ್ಲೋ? ಈ ಸಂಶಯದ ಪರಿಹಾರಕ್ಕಾಗಿ ಆತ್ಮಶಬ್ದಾದಿಗಳು ಗೌಣವೋ? ಅಥವಾ ಮುಖ್ಯವೋ? ಇದರ ಪರಿಹಾರಕ್ಕಾಗಿ ಆತ್ಮಶಬ್ದಾದಿಗಳು ಮುಖ್ಯವಾದರೆ ಬಾಧಕವಿದೆಯೋ? ಇಲ್ಲವೋ? ಇದರ ಪರಿಹಾರಕ್ಕಾಗಿ ಜಾಯಮಾನತ್ವಲಿಂಗವು ವಿಷ್ಣುವಿನಲ್ಲಿ ಯುಕ್ತವಾಗುತ್ತದೋ? ಇಲ್ಲವೋ? ಇದರ ಪರಿಹಾರಕ್ಕಾಗಿ ಶರೀರ ಸ್ವೀಕಾರವೇ ಜನನವೋ? ಅಥವಾ ಪ್ರಾದುರ್ಭಾವವೂ ಸಹ ಜನನವೆನಿಸುತ್ತದೋ? ಎಂಬ ಸಂಶಯವು ಪರಿಹಾರವಾಗಬೇಕು.

**प्रकाशः –**

एवं पादान्तर्भावसङ्गत्युक्तिपरटीकां समर्थ्य, इदानीं या तु "श्रुत्यादिसङ्गतिम्" इत्यादिकाऽदृश्यत्वनयेनास्य सङ्गत्युक्तिपरभाष्यटीका सा न युक्तैव । तथात्वे तदानन्तर्यप्रसङ्गेन व्यवधानायोगादिति मन्दाशङ्कां व्युदसितुं सा फलोक्तिपरा । सङ्गतिपदं च फलपरम् ।

ವಿವರಣೆ - ಇಲ್ಲಿಯ ತನಕ ದ್ಯುಭ್ವಾದ್ಯಧಿಕರಣವು ಮೂರನೇ ಪಾದದಲ್ಲಿ ಹೇಗೆ ಅಂತರ್ಭಾವ ಹೊಂದುತ್ತದೆ ಎಂಬುದಾಗಿ ಸಂಗತಿಯನ್ನು ಸಮರ್ಥಿಸುವ ಟೀಕೆಯನ್ನು ವ್ಯಾಖ್ಯಾನಿಸಿದರು. ಈಗ 'ಶ್ರುತ್ಯಾದಿ ಸಂಗತಿಮ್' ಇತ್ಯಾದಿಯಾಗಿ ಅದೃಶ್ಯತ್ವಾಧಿಕರಣದಿಂದ ಈ ಅಧಿಕರಣಕ್ಕೆ ಸಂಗತಿಯನ್ನು ಭಾಷ್ಯ ಹಾಗೂ ಟೀಕೆಗಳಲ್ಲಿ ಹೇಳಿರುತ್ತಾರೆ. ಅದು ಅತ್ಯಂತ ಅಯುಕ್ತವಾಗಿದೆ. ಏಕೆಂದರೆ ಅದೃಶ್ಯತ್ವಾಧಿಕರಣದಿಂದ ದ್ಯುಭ್ವಾದ್ಯಧಿಕರಣಕ್ಕೆ ಸಂಗತಿ ಇರುವುದಾದಲ್ಲಿ ಅದೃಶ್ಯತ್ವಾಧಿಕರಣದ ಅನಂತರವೇ ಈ ಅಧಿಕರಣವನ್ನು ಉಲ್ಲೇಖಿಸಬೇಕಿತ್ತು. ಮಧ್ಯದಲ್ಲಿ ಬೇರೆ ಅಧಿಕರಣಗಳ ವ್ಯವಧಾನವು ಇರಬಾರದಿತ್ತು ಎಂಬ ಮಂದಜನರ ಆಶಂಕೆಯನ್ನು ಪರಿಹರಿಸುವುದಕ್ಕಾಗಿ ಹೊರಟಿದ್ದಾರೆ. ಅಂದರೆ ಭಾಷ್ಯ ಹಾಗೂ ಟೀಕೆಗಳಲ್ಲಿ

ಅದೃಶ್ಯತ್ವಾಧಿಕರಣದಿಂದ ಸಂಗತಿಯನ್ನು ತೋರಿಸಿಲ್ಲ. ಕೇವಲ ಈ ಅಧಿಕರಣದ ಫಲವನ್ನಷ್ಟೇ ಹೇಳಿರುತ್ತಾರೆಂದು ತಿಳಿಯಬೇಕು. ಸಂಗತಿ ಪದಕ್ಕೆ ಫಲವೆಂದು ಅರ್ಥೈಸಬೇಕು.

**प्रकाशः** – आनन्दमयनयोक्तदिशा येनकेनचित्पूर्वेण सङ्गतिरपेक्षिता नत्वव्यवहितेनेत्येतदाशयं वेति भावेन पादान्त्याद्यनययोस्सङ्गतिनियमबुद्धिं शिष्याणां व्युदसितुमुक्तं स्मारयन्नस्ति चेन्न त्याज्येति सङ्गतिं चाह – **पूर्वेत्यादिना** ।।

ಅಥವಾ ಆನಂದಮಯಾಧಿಕರಣದಲ್ಲಿ ಹೇಳಿದ ಪ್ರಕಾರ - ಯಾವುದಾದರೂ ಹಿಂದಿನ ಅಧಿಕರಣದಿಂದ ಸಂಗತಿಯಿದ್ದರೆ ಸಾಕು; ಅವ್ಯವಹಿತವಾದ ಹಿಂದಿನ ಅಧಿಕರಣದಿಂದಲೇ ಸಂಗತಿಯಿರಬೇಕೆಂದೇನೂ ನಿಯಮವಿಲ್ಲ. ಈ ಅಭಿಪ್ರಾಯದಿಂದ ಹಿಂದಿನ ಪಾದದ ಕೊನೆಯ ಅಧಿಕರಣದಿಂದ ಮುಂದಿನ ಪಾದದ ಮೊದಲನೆಯ ಅಧಿಕರಣಕ್ಕೆ ಸಂಗತಿಯನ್ನು ಹೇಳಲೇಬೇಕೆಂಬ ನಿಯಮಬುದ್ಧಿಯು ಶಿಷ್ಯರಿಗೆ ಬರಬಾರದೆಂದು ಹಿಂದೆ ಹೇಳಿದ್ದರು. ಅದನ್ನು ಸ್ಮರಣೆಗೆ ತರುತ್ತಾ; ಒಂದು ವೇಳೆ ಹಿಂದಿನ ಪಾದದ ಅಧಿಕರಣದಿಂದ ಸಂಗತಿಯಿದ್ದರೆ ಬಿಡಬಾರದೆಂಬ ಅಭಿಪ್ರಾಯವುಳ್ಳವರಾಗಿ ಸಂಗತಿಯನ್ನು ತೋರಿಸುತ್ತಿದ್ದಾರೆ 'ಪೂರ್ವ' ಇತ್ಯಾದಿ ವಾಕ್ಯದಿಂದ.

**प्रकाशः** – एतेन यदुक्तं श्रुतप्रकाशे 'पूर्वस्मिन्नधिकरणे द्युपृथिव्यादिसम्बन्धिनः परमात्मत्वमुक्तम् । द्युपृथिव्यादिसम्बन्धित्वं परमात्मव्यतिरिक्तस्य दृश्यत इति शङ्कयैतदारम्भ इति सङ्गतिः' इति तन्निरस्तम् ।

ಹೀಗೆ ಸಂಗತಿಯನ್ನು ತೋರಿಸಿದ್ದರಿಂದ ಶ್ರುತಪ್ರಕಾಶದಲ್ಲಿ ಹೇಳಿದ ಸಂಗತಿಯನ್ನು ನಿರಾಕರಿಸಿದಂತಾಯಿತು. ಶ್ರುತಪ್ರಕಾಶವು ಸಂಗತಿಯನ್ನು ಹೀಗೆ ತೋರಿಸಿದೆ - ಹಿಂದಿನ ಅಧಿಕರಣದಲ್ಲಿ ದ್ಯು, ಪೃಥಿವೀ ಮೊದಲಾದವುಗಳ ಸಂಬಂಧವು ಪರಮಾತ್ಮನಿಗೆ ಹೇಳಲಾಯಿತು. ಅಂತಹ ದ್ಯು, ಪೃಥಿವೀ ಮೊದಲಾದವುಗಳ ಸಂಬಂಧವು ಪರಮಾತ್ಮನಿಗಿಂತ ವ್ಯತಿರಿಕ್ತನಾದವನಲ್ಲಿ ಕೇಳಿಸುತ್ತಿದೆಯಲ್ಲವೇ ಎಂಬ ಶಂಕೆಯನ್ನು ಪರಿಹರಿಸುವುದಕ್ಕಾಗಿ ಈ ಅಧಿಕರಣವು ಹೊರಡುತ್ತಿದೆಯೆಂದು.

**प्रकाशः** – पूर्वाधिकरणप्रधानहेतुनैव सङ्गतिसम्भवे सम्बन्धसामान्यमुखेन सङ्गत्युक्त्ययोगादिति ।

ಇದು ತಪ್ಪು. ಹಿಂದಿನ ಅಧಿಕರಣದಲ್ಲಿ ಆತ್ಮಶಬ್ದವು ಹೇತುತ್ವೇನ ಪ್ರಸಕ್ತವಾಗಿದೆ. ಅಂತಹ ಪ್ರಧಾನ ಹೇತುವಾದ ಆತ್ಮಶಬ್ದದಿಂದಲೇ ಸಂಗತಿಯನ್ನು ತೋರಿಸುವುದು ಸ್ವರಸ. ನೀವು ಹೇಳಿದ ದ್ಯು, ಪೃಥಿವ್ಯಾದಿಗಳ ಸಂಬಂಧವು ಗುಣಸೂತ್ರದಿಂದ ಗೌಣವಾಗಿ ಪ್ರಸಕ್ತವಾಗಿದೆ. ಮತ್ತು ಕೇವಲ ಸಂಬಂಧಸಾಮಾನ್ಯದಿಂದ ಸಂಗತಿಯನ್ನು ಹೇಳುತ್ತಿದ್ದೀರಿ. ಆದ್ದರಿಂದ ಗೌಣವಾದ ಹೇತುವಿನ ಆಧಾರದಿಂದ ಸಂಗತಿಯನ್ನು ತೋರಿಸುವುದು ಸ್ವರಸವಲ್ಲ.

**प्रकाशः** – विषयसंशयटीकां व्यनक्ति – **अत्रेत्यादिना** ।। 'इत्यादिना उक्तम्' इत्यनेन ''तद् द्युभ्वाद्यायतनत्वं विषयः'' इति टीकास्थतच्छब्दार्थो विवृतः ।

ವಿಷಯ ಹಾಗೂ ಸಂಶಯಗಳನ್ನು ನಿರೂಪಿಸುವ ಟೀಕೆಯನ್ನು 'ಅತ್ರ' ಇತ್ಯಾದಿ ವಾಕ್ಯದಿಂದ ವ್ಯಾಖ್ಯಾನಿಸುತ್ತಿದ್ದಾರೆ. 'ಇತ್ಯಾದಿನಾ ಉಕ್ತಮ್' ಎಂಬ ಗ್ರಂಥದಲ್ಲಿರುವ 'ತದ್ ದ್ಯುಭ್ವಾದ್ಯಾಯತನತ್ವಂ ವಿಷಯಃ' ಎಂಬ ಟೀಕೆಯಲ್ಲಿರುವ 'ತತ್' ಶಬ್ದದ ಅರ್ಥವನ್ನು ವಿವರಿಸಿದಂತಾಯಿತು. ಅಂದರೆ 'ಯಸ್ಮಿನ್‌ದ್ಯೌಃ' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ಎಂಬುದಾಗಿ 'ತತ್' ಶಬ್ದದ ಅರ್ಥವನ್ನು ತಿಳಿಯಬೇಕು.

**प्रकाशः** – आथर्वणे ''द्वे विद्ये वेदितव्ये परा चैवापरा च'' इत्युपक्रम्य श्रूयते ''यस्मिन् द्यौः पृथिवी चान्तरिक्षमोतं मनस्सह प्राणैश्च सर्वैः । तमेवैकं जानथ आत्मानमन्या वाचो विमुञ्चथ । अमृतस्यैष सेतुः । अरा इव रथनाभौ संहता यत्र नाड्यः । स एषोऽन्तश्चरते बहुधा जायमानः । ओमित्येव ध्यायत आत्मानं स्वस्ति वः पाराय तमसः परस्तात् । यस्सर्वज्ञस्सर्ववित्'' इत्यादि ।

'ದ್ವೇ ವಿದ್ಯೇ ವೇದಿತವ್ಯೇ ಪರಾ ಚೈವಾಪರಾ ಚ' ಎಂದು ಉಪಕ್ರಮ ಮಾಡಿ 'ಯಸ್ಮಿನ್‌ದ್ಯೌಃ ಪೃಥಿವೀಚಾಂತರೀಕ್ಷಮೋತಂ ಮನಸ್ಸಹ ಪ್ರಾಣೈಶ್ಚ ಸರ್ವೈಃ । ತಮೇವೈಕಂ ಜಾನಥ ಆತ್ಮಾನಮನ್ಯಾ ವಾಚೋ ವಿಮುಂಚಥ । ಅಮೃತಸ್ಯೈಷ ಸೇತುಃ । ಅರಾ ಇವ ರಥನಾಭೌ ಸಂಹತಾ ಯತ್ರ ನಾಡ್ಯಃ । ಸ ಏಷೋಽಂತಶ್ಚರತೇ ಬಹುಧಾ ಜಾಯಮಾನಃ । ಓಮಿತ್ಯೇವ ಧ್ಯಾಯತ ಆತ್ಮಾನಂ ಸ್ವಸ್ತಿ ವಃ ಪಾರಾಯ ತಮಸಃ ಪರಸ್ತಾತ್ । ಯಸ್ಸರ್ವಜ್ಞಸ್ಸರ್ವವಿತ್' ಇತ್ಯಾದಿಯಾಗಿ ಆಥರ್ವಣದಲ್ಲಿ ಕೇಳಿಸುತ್ತಿದೆ.

**प्रकाशः** – तत्र द्युभ्वन्तरिक्षमनःप्राणायतनत्वं विषय इत्यर्थः । सूत्रे यथाश्रुति धर्मिनिर्देशोऽपि लिङ्गताद्योतनाय यथाटीकं भावान्तनिर्देशः ।

ಈ ವಾಕ್ಯದಲ್ಲಿ ಕೇಳಿಸುತ್ತಿರುವ ದ್ಯುಲೋಕ, ಭೂಲೋಕ, ಅಂತರಿಕ್ಷಲೋಕ, ಮನಸ್ಸು, ಪ್ರಾಣ ಇವುಗಳಿಗೆ ಆಶ್ರಯನಾಗಿರುವವನು ಯಾರು ಎಂದು ಇಲ್ಲಿನ ವಿಷಯ ಎಂದು ಅರ್ಥ. ಸೂತ್ರದಲ್ಲಿ 'ದ್ಯುಭ್ವಾದ್ಯಾಯತನಮ್' ಎಂಬುದಾಗಿ ಧರ್ಮಿಯನ್ನು ನಿವೇಶ ಮಾಡಿದ್ದರೂ ಸಹ ಇದು ಲಿಂಗಾತ್ಮಕವಾಗಿದೆಯೆಂದು ಸ್ಪಷ್ಟಪಡಿಸುವುದಕ್ಕಾಗಿ ಟೀಕೆಯಲ್ಲಿ 'ದ್ಯುಭ್ವಾದ್ಯಾಯತನತ್ವಮ್' ಎಂದು ಭಾವಪ್ರಧಾನ ನಿರ್ದೇಶ ಮಾಡಿದ್ದಾರೆ. ಅದನ್ನೇ ಪ್ರಕೃತ ಗ್ರಂಥಕಾರರು ಅನುವಾದ ಮಾಡಿದ್ದಾರೆಂದು ತಿಳಿಯಬೇಕು.

**प्रकाशः** – रुद्रादेरिति ।। रुद्रप्रधानवायुजीवानामन्यतमस्येत्यर्थः । एतेनान्येषामिति टीकास्थान्यशब्दार्थो विवृतः । प्रापकप्राबल्याशयेन रुद्रस्य पूर्वं स्वशब्देन च निर्देशः ।

'ರುದ್ರಾದೇಃ' ಎಂಬ ಪದಕ್ಕೆ ರುದ್ರ, ಪ್ರಕೃತಿ, ವಾಯು, ಜೀವ ಇವರಲ್ಲಿ ಯಾರಾದರೊಬ್ಬರಿಗೆ ಎಂದರ್ಥ. ಹೀಗೆ ವ್ಯಾಖ್ಯಾನಿಸಿದ್ದರಿಂದ ಟೀಕೆಯಲ್ಲಿರುವ 'ಅನ್ಯೇಷಾಮ್' ಎಂಬ ಅನ್ಯಶಬ್ದಕ್ಕೆ ರುದ್ರಾದಿಗಳಲ್ಲಿ ಯಾರಾದರೊಬ್ಬರು ಎಂಬರ್ಥವನ್ನು ಹೇಳಿದಂತಾಯಿತು. ರುದ್ರ, ಪ್ರಕೃತಿ, ವಾಯು, ಜೀವ ಇವರೆಲ್ಲರೂ

ಪೂರ್ವಪಕ್ಷಕ್ಕೆ ವಿಷಯವಾಗಿರುವಾಗ ರುದ್ರನನ್ನೇ ಏಕೆ ಸ್ವೀಕರಿಸಿದ್ದಾರೆ? ಎಂದರೆ ರುದ್ರನು ದ್ಯುಭ್ವಾದ್ಯಾಯತನನಾಗಿದ್ದಾನೆಂಬ ವಿಷಯದಲ್ಲಿ ಅನೇಕ ಪ್ರಾಪಕಗಳಿವೆ. ಆದ್ದರಿಂದ ಉಳಿದ ಪೂರ್ವಪಕ್ಷಗಳಿಗಿಂತ ರುದ್ರನ ವಿಷಯದಲ್ಲಿ ಪ್ರಾಬಲ್ಯವಿರುವ ಪ್ರಯುಕ್ತ ರುದ್ರನನ್ನೇ ಪ್ರಧಾನವಾಗಿ ಸ್ವೀಕರಿಸಿದ್ದಾರೆ.

**प्रकाशः –** टीकायां बहुवचनोक्तावप्येकवचनोक्तिः पूर्वपक्षकोटीनां बहुत्वे कथं लिङ्गस्योभयत्रप्रसिद्धत्वम् । किन्तु बहुषु प्रसिद्धत्वमेव स्यादिति शङ्कानिरासाय पूर्वपक्षकोटित्वेन बहूनामेकीकरणादिति भावेनेत्याहुः ।

ಟೀಕೆಯಲ್ಲಿ 'ಅನ್ಯೇಷಾಮ್' ಎಂಬುದಾಗಿ ಬಹುವಚನವನ್ನು ಹೇಳಿದ್ದಾರೆ. ಆದರೆ ಪ್ರಕೃತ 'ರುದ್ರಾದೇಃ' ಎಂಬ ಗ್ರಂಥದಲ್ಲಿ ಏಕವಚನವನ್ನು ಹೇಳಿದ್ದಾರೆ. ಹೀಗೇಕೆ ವ್ಯತ್ಯಾಸ ಮಾಡಿದ್ದಾರೆ? ಎಂಬ ಪ್ರಶ್ನೆಗೆ ಹೀಗೆ ಉತ್ತರಿಸಬೇಕು. ಪೂರ್ವಪಕ್ಷಕೋಟಿಗಳು ಅನೇಕವಾಗಿರುವುದರಿಂದ ದ್ಯುಭ್ವಾದ್ಯಾಯತನತ್ವವೆಂಬ ಲಿಂಗವು ಉಭಯತ್ರಪ್ರಸಿದ್ಧವೆಂದು ಹೇಗೆ ಹೇಳುವುದು? ಹೊರತಾಗಿ, ಅನೇಕ ಕಡೆ ಪ್ರಸಿದ್ಧವಾಗಿದೆ ಎಂದೇ ಹೇಳಬೇಕಲ್ಲವೇ? ಎಂಬ ಶಂಕೆಯು ಪ್ರಾಪ್ತವಾಗುತ್ತದೆ. ಅದಕ್ಕೋಸ್ಕರ ಸಕಲವಿಧ ಪೂರ್ವಪಕ್ಷಕೋಟಿಗಳನ್ನು ಏಕೀಕರಿಸಿ ಅಂದರೆ ಪೂರ್ವಪಕ್ಷಕೋಟಿತ್ವೇನ ರುದ್ರ, ಪ್ರಕೃತಿ, ವಾಯು, ಜೀವರನ್ನು ಸೇರಿಸಿ ಒಂದು ಗುಂಪನ್ನಾಗಿ ವಿವಕ್ಷಿಸಿ ದ್ಯುಭ್ವಾದ್ಯಾಯತನನಾದವರು ವಿಷ್ಣುವೋ? ಅಥವಾ ಬೇರೆಯವರೋ? ಎಂದು ಆಶಂಕಿಸುತ್ತಿದ್ದಾರೆ. ಹೀಗೆ ವಿವಕ್ಷಿಸಿದಾಗ ದ್ಯುಭ್ವಾದ್ಯಾಯತನತ್ವವು ವಿಷ್ಣುವಿನಲ್ಲಿ ಹಾಗೂ ಬೇರೆಯವರಲ್ಲಿ ಪ್ರಸಿದ್ಧವಾಗಿರುವುದರಿಂದ ಉಭಯತ್ರಪ್ರಸಿದ್ಧವೆನಿಸುತ್ತದೆ.

**प्रकाशः –** अत्र यद्यपि भाष्ये तत्वप्रदीपसन्न्यायरत्नावल्योश्च प्रधानकोटे-र्द्युभ्वाद्यायतनत्वप्राप्तिर्वा तन्निरासो वा न भवति ।

ವಾಸ್ತವಿಕವಾಗಿ ಭಾಷ್ಯದಲ್ಲಿ, ತತ್ತ್ವಪ್ರದೀಪದಲ್ಲಿ ಮತ್ತು ಸನ್ನ್ಯಾಯರತ್ನಾವಳಿಯಲ್ಲಿ ಪ್ರಧಾನವು ದ್ಯುಭ್ವಾದ್ಯಾಯತನವಾಗಿದೆಯೆಂದು ಪೂರ್ವಪಕ್ಷವನ್ನಾಗಲೀ, ಅದರ ನಿರಾಸವನ್ನಾಗಿ ಮಾಡಿರುವುದಿಲ್ಲ. ಹೀಗಿರುವಾಗ ಪ್ರಕೃತ ಗ್ರಂಥದಲ್ಲಿರುವ ಆದಿಪದದಿಂದ ಪ್ರಧಾನವನ್ನು ಹೇಗೆ ವಿವಕ್ಷಿಸುತ್ತೀರಿ?

**प्रकाशः –** तथापि टीकायां ''स्वशब्दपर्यायात्मशब्दान्न प्रकृतिजीवावभिधीयेते'' इति विष्णुतत्वनिर्णयोक्त्यनुरोधेन प्रधानकोटेरप्युक्तेस्तदनुरोधेनात्राप्यादिपदेन तदुक्तिः ।

ಹೌದು ಆದರೆ, ಆದರೆ ಟೀಕೆಯಲ್ಲಿ ''ಸ್ವಶಬ್ದ ಪರ್ಯಾಯಾತ್ಮಶಬ್ದಾನ್ನ ಪ್ರಕೃತಿಜೀವಾವಭಿಧೀಯೇತೇ' ಎಂಬ ವಾಕ್ಯವಿದೆ. ಸ್ವಶಬ್ದಕ್ಕೆ ಪರ್ಯಾಯಪದವೆನಿಸಿದ ಆತ್ಮಶಬ್ದದ ಬಲದಿಂದ ಪ್ರಕೃತಿಯಾಗಲೀ, ಜೀವನಾಗಲೀ, ಪ್ರತಿಪಾದ್ಯರಾಗುವುದಿಲ್ಲ ಎಂದರ್ಥ. ಹೀಗೆ ವಿಷ್ಣುತತ್ತ್ವನಿರ್ಣಯದಲ್ಲಿ ಹೇಳಲ್ಪಟ್ಟ ಮಾತನ್ನು ಅನುಸರಿಸಿ ಪ್ರಕೃತಿಯು ದ್ಯುಭ್ವಾದ್ಯಾಯತನವಾಗಿದೆಯೆಂದು ಆಕ್ಷೇಪಿಸಿ ನಿರಾಕರಿಸಿದ್ದಾರೆ. ಆ ಟೀಕೆಯನ್ನು

ಅನುಸರಿಸಿ ಪ್ರಕೃತ ಗ್ರಂಥಕಾರರು ಆದಿಪದದಿಂದ ಪ್ರಧಾನವನ್ನು ವಿವಕ್ಷಿಸುತ್ತಿದ್ದಾರೆ. ಅಂದರೆ ಗ್ರಂಥದಲ್ಲಿ ಪ್ರಧಾನಪಕ್ಷವನ್ನು ಟೀಕೆಯಲ್ಲಿ ಹೇಳಿದ್ದಾರೆ ಎಂದು ಉಲ್ಲೇಖಿಸಿದ್ದಾರೆ. ಟೀಕಾರಾಯರು ವಿಷ್ಣುತತ್ತ್ವನಿರ್ಣಯದಲ್ಲಿ ಶ್ರೀಮದಾಚಾರ್ಯರು ಹೇಳಿದ್ದಾರೆಂದು ವಿವಕ್ಷಿಸಿದ್ದಾರೆ.

**प्रकाशः** – एवं द्युभ्वाद्यायतनं, नानुमानं, प्राणभृच्चेति प्रतिज्ञांशोपयुक्तचिन्तामुक्त्वा स्वशब्दात् मुक्तोपसृप्यव्यपदेशादिति हेत्वंशव्यावर्त्यशङ्कोपयुक्तचिन्तामाह – आत्मशब्दादय इति ।।

ಇಲ್ಲಿಯತನಕ ದ್ಯುಭ್ವಾದ್ಯಾಯತನಮ್, ನಾನುಮಾನಮ್, ಪ್ರಾಣಭೃಚ್ಚ ಇತ್ಯಾದಿ ಸೂತ್ರಗಳಲ್ಲಿರುವ ಪ್ರತಿಜ್ಞಾಭಾಗಕ್ಕೆ ಉಪಯುಕ್ತವಾದ ಸಂಶಯಕೋಟಿಗಳನ್ನು ಹೇಳಿದರು. ಪ್ರಕೃತ ಸ್ವಶಬ್ದಾತ್, ಮುಕ್ತೋಪಸೃಪ್ಯವ್ಯಪದೇಶಾತ್ ಇತ್ಯಾದಿ ಹೇತು ಭಾಗದಿಂದ ವ್ಯಾವರ್ತ್ಯವಾದ ಪೂರ್ವಪಕ್ಷಕ್ಕೆ ಉಪಯೋಗವಾಗುವ ಸಂಶಯಕೋಟಿಗಳನ್ನು 'ಆತ್ಮಶಬ್ದಾದಯಃ' ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ.

**प्रकाशः** – आदिपदेनामृतसेतुत्वरूपमुक्तोपसृप्यत्वलिङ्गं, ब्रह्मप्रकरणे, तमेवैकं जानथ आत्मानमित्यादिवाक्योक्ताहेयत्वोक्तिहेयत्वानुक्त्यन्यहेयत्वोक्तयो वा लिङ्गप्रकरणसमाख्या एव वा ग्राह्याः ।

'ಆತ್ಮಶಬ್ದಾದಯಃ' ಎಂಬಲ್ಲಿರುವ ಆದಿಪದದಿಂದ 'ಅಮೃತಸೇತುತ್ವ', 'ಮುಕ್ತೋಪಸೃಪ್ಯತ್ವ' ಎಂಬಲಿಂಗಗಳನ್ನು, ಬ್ರಹ್ಮಪ್ರಕರಣದಲ್ಲಿ, 'ತಮೇವೈಕಂ ಜಾನಥ ಆತ್ಮಾನಮ್' ಇತ್ಯಾದಿ ವಾಕ್ಯದಲ್ಲಿ ಹೇಳಲ್ಪಟ್ಟ ಅಹೇಯತ್ವ ವಚನ ಅಥವಾ ಹೇಯತ್ವದ ಅನುಕ್ತಿ, ಅನ್ಯ ಹೇಯತ್ವ ಉಕ್ತಿಗಳನ್ನು ಸ್ವೀಕರಿಸಬಹುದು, ಅಥವಾ ಲಿಂಗ, ಪ್ರಕರಣ, ಸಮಾಖ್ಯಾಪ್ರಮಾಣಗಳನ್ನೇ ಸ್ವೀಕರಿಸಬಹುದು

**प्रकाशः** – अतच्छब्दादिति हेत्वंशव्यावर्त्यशङ्कोपयुक्तचिन्तामाह – तदर्थं बाधकमस्त्युत नेतीत्यादिना ।।

'ಅತಚ್ಛಬ್ದಾತ್' ಎಂಬ ಹೇತುವಿನ ಭಾಗದಿಂದ ಪರಿಹಾರವಾಗುವ ಪೂರ್ವಪಕ್ಷಕ್ಕೆ ಉಪಯುಕ್ತವಾಗುವ ಸಂಶಯವನ್ನು 'ತದರ್ಥಂ ಬಾಧಕಮಸ್ತಿ ಉತ ನ' ಇತ್ಯಾದಿಯಾಗಿ ತೋರಿಸಿದ್ದಾರೆ.

**प्रकाशः** – जायमानत्वमिति ।। अत्र यद्यपि 'रुद्रो वाव लोकाधार' इत्यादिसमाख्या विष्णौ न युक्ताऽथ युक्तेति । तदर्थं समाख्यागतरुद्रादिशब्दा निरवकाशा उत विष्णौ सावकाशा इत्यादिचिन्ताप्युपदर्शनीया ।

ಸಂಶಯ ಕೋಟಿಗಳನ್ನು ತೋರಿಸುವಾಗ ಜಾಯಮಾನತ್ವವು ವಿಷ್ಣುವಿನಲ್ಲಿ ಅಯುಕ್ತವಾಗುತ್ತದೋ? ಯುಕ್ತವಾಗುತ್ತದೋ? ಎಂದು ಹೇಳಿದ್ದಾರೆ. ವಾಸ್ತವಿಕವಾಗಿ 'ರುದ್ರೋ ವಾವ ಲೋಕಾಧಾರಃ' ಇತ್ಯಾದಿ ಸಮಾಖ್ಯಾಪ್ರಮಾಣವು ವಿಷ್ಣುವಿನಲ್ಲಿ ಅಯುಕ್ತವಾಗುತ್ತದೋ? ಅಥವಾ ಯುಕ್ತವಾಗುತ್ತದೋ? ಅದಕ್ಕೋಸ್ಕರ ಸಮಾಖ್ಯಾಪ್ರಮಾಣದಲ್ಲಿರುವ ರುದ್ರಾದಿ ಶಬ್ದಗಳು ನಿರವಕಾಶವಾಗಿವೆಯೋ? ಅಥವಾ

ಪೂರ್ವಪಕ್ಷಕ್ಕೆ ವಿಷಯವಾಗಿರುವಾಗ ರುದ್ರನನ್ನೇ ಏಕೆ ಸ್ವೀಕರಿಸಿದ್ದಾರೆ? ಎಂದರೆ ರುದ್ರನು ದ್ಯುಭ್ವಾದ್ಯಾಯತನನಾಗಿದ್ದಾನೆಂಬ ವಿಷಯದಲ್ಲಿ ಅನೇಕ ಪ್ರಾಪಕಗಳಿವೆ. ಆದ್ದರಿಂದ ಉಳಿದ ಪೂರ್ವಪಕ್ಷಗಳಿಗಿಂತ ರುದ್ರನ ವಿಷಯದಲ್ಲಿ ಪ್ರಾಬಲ್ಯವಿರುವ ಪ್ರಯುಕ್ತ ರುದ್ರನನ್ನೇ ಪ್ರಧಾನವಾಗಿ ಸ್ವೀಕರಿಸಿದ್ದಾರೆ.

**प्रकाशः –** टीकायां बहुवचनोक्तावप्येकवचनोक्तिः पूर्वपक्षकोटीनां बहुत्वे कथं लिङ्गस्योभयत्रप्रसिद्धत्वम् । किन्तु बहुषु प्रसिद्धत्वमेव स्यादिति शङ्कानिरासाय पूर्वपक्षकोटित्वेन बहूनामेकीकरणादिति भावेनेत्याहुः ।

ಟೀಕೆಯಲ್ಲಿ 'ಅನ್ಯೇಷಾಮ್' ಎಂಬುದಾಗಿ ಬಹುವಚನವನ್ನು ಹೇಳಿದ್ದಾರೆ. ಆದರೆ ಪ್ರಕೃತ 'ರುದ್ರಾದೇಃ' ಎಂಬ ಗ್ರಂಥದಲ್ಲಿ ಏಕವಚನವನ್ನು ಹೇಳಿದ್ದಾರೆ. ಹೀಗೇಕೆ ವ್ಯತ್ಯಾಸ ಮಾಡಿದ್ದಾರೆ? ಎಂಬ ಪ್ರಶ್ನೆಗೆ ಹೀಗೆ ಉತ್ತರಿಸಬೇಕು. ಪೂರ್ವಪಕ್ಷಕೋಟಿಗಳು ಅನೇಕವಾಗಿರುವುದರಿಂದ ದ್ಯುಭ್ವಾದ್ಯಾಯತನತ್ವವೆಂಬ ಲಿಂಗವು ಉಭಯತ್ರಪ್ರಸಿದ್ಧವೆಂದು ಹೇಗೆ ಹೇಳುವುದು? ಹೊರತಾಗಿ, ಅನೇಕ ಕಡೆ ಪ್ರಸಿದ್ಧವಾಗಿದೆ ಎಂದೇ ಹೇಳಬೇಕಲ್ಲವೇ? ಎಂಬ ಶಂಕೆಯು ಪ್ರಾಪ್ತವಾಗುತ್ತದೆ. ಅದಕ್ಕೋಸ್ಕರ ಸಕಲವಿಧ ಪೂರ್ವಪಕ್ಷಕೋಟಿಗಳನ್ನು ಏಕೀಕರಿಸಿ ಅಂದರೆ ಪೂರ್ವಪಕ್ಷಕೋಟಿತ್ವೇನ ರುದ್ರ, ಪ್ರಕೃತಿ, ವಾಯು, ಜೀವರನ್ನು ಸೇರಿಸಿ ಒಂದು ಗುಂಪನ್ನಾಗಿ ವಿವಕ್ಷಿಸಿ ದ್ಯುಭ್ವಾದ್ಯಾಯತನನಾದವರು ವಿಷ್ಣುವೋ? ಅಥವಾ ಬೇರೆಯವರೋ? ಎಂದು ಆಶಂಕಿಸುತ್ತಿದ್ದಾರೆ. ಹೀಗೆ ವಿವಕ್ಷಿಸಿದಾಗ ದ್ಯುಭ್ವಾದ್ಯಾಯತನತ್ವವು ವಿಷ್ಣುವಿನಲ್ಲಿ ಹಾಗೂ ಬೇರೆಯವರಲ್ಲಿ ಪ್ರಸಿದ್ಧವಾಗಿರುವುದರಿಂದ ಉಭಯತ್ರಪ್ರಸಿದ್ಧವೆನಿಸುತ್ತದೆ.

**प्रकाशः –** अत्र यद्यपि भाष्ये तत्वप्रदीपसन्यायरत्नावल्योश्च प्रधानकोटेर्द्युभ्वाद्यायतनत्वप्राप्तिर्वा तन्निरासो वा न भवति ।

ವಾಸ್ತವಿಕವಾಗಿ ಭಾಷ್ಯದಲ್ಲಿ, ತತ್ತ್ವಪ್ರದೀಪದಲ್ಲಿ ಮತ್ತು ಸನ್ನ್ಯಾಯರತ್ನಾವಳಿಯಲ್ಲಿ ಪ್ರಧಾನವು ದ್ಯುಭ್ವಾದ್ಯಾಯತನವಾಗಿದೆಯೆಂದು ಪೂರ್ವಪಕ್ಷವನ್ನಾಗಲೀ, ಅದರ ನಿರಾಸವನ್ನಾಗಿ ಮಾಡಿರುವುದಿಲ್ಲ. ಹೀಗಿರುವಾಗ ಪ್ರಕೃತ ಗ್ರಂಥದಲ್ಲಿರುವ ಆದಿಪದದಿಂದ ಪ್ರಧಾನವನ್ನು ಹೇಗೆ ವಿವಕ್ಷಿಸುತ್ತೀರಿ?

**प्रकाशः –** तथापि टीकायां ''स्वशब्दपर्यायात्मशब्दान्न प्रकृतिजीवावभिधीयेते'' इति विष्णुतत्वनिर्णयोक्त्यनुरोधेन प्रधानकोटेरप्युक्तेस्तदनुरोधेनात्राप्यादिपदेन तदुक्तिः ।

ಹೌದು ಆದರೆ, ಆದರೆ ಟೀಕೆಯಲ್ಲಿ ''ಸ್ವಶಬ್ದ ಪರ್ಯಾಯಾತ್ಮಶಬ್ದಾನ್ನ ಪ್ರಕೃತಿಜೀವಾವಭಿಧೀಯೇತೇ' ಎಂಬ ವಾಕ್ಯವಿದೆ. ಸ್ವಶಬ್ದಕ್ಕೆ ಪರ್ಯಾಯಪದವೆನಿಸಿದ ಆತ್ಮಶಬ್ದದ ಬಲದಿಂದ ಪ್ರಕೃತಿಯಾಗಲೀ, ಜೀವನಾಗಲೀ, ಪ್ರತಿಪಾದ್ಯರಾಗುವುದಿಲ್ಲ ಎಂದರ್ಥ. ಹೀಗೆ ವಿಷ್ಣುತತ್ತ್ವನಿರ್ಣಯದಲ್ಲಿ ಹೇಳಲ್ಪಟ್ಟ ಮಾತನ್ನು ಅನುಸರಿಸಿ ಪ್ರಕೃತಿಯು ದ್ಯುಭ್ವಾದ್ಯಾಯತನವಾಗಿದೆಯೆಂದು ಆಕ್ಷೇಪಿಸಿ ನಿರಾಕರಿಸಿದ್ದಾರೆ. ಆ ಟೀಕೆಯನ್ನು

ಅನುಸರಿಸಿ ಪ್ರಕೃತ ಗ್ರಂಥಕಾರರು ಆದಿಪದದಿಂದ ಪ್ರಧಾನವನ್ನು ವಿವಕ್ಷಿಸುತ್ತಿದ್ದಾರೆ. ಅಂದರೆ ಗ್ರಂಥದಲ್ಲಿ ಪ್ರಧಾನಪಕ್ಷವನ್ನು ಟೀಕೆಯಲ್ಲಿ ಹೇಳಿದ್ದಾರೆ ಎಂದು ಉಲ್ಲೇಖಿಸಿದ್ದಾರೆ. ಟೀಕಾರಾಯರು ವಿಷ್ಣುತತ್ತ್ವನಿರ್ಣಯದಲ್ಲಿ ಶ್ರೀಮದಾಚಾರ್ಯರು ಹೇಳಿದ್ದಾರೆಂದು ವಿವಕ್ಷಿಸಿದ್ದಾರೆ.

**प्रकाशः** – एवं द्युभ्वाद्यायतनं, नानुमानं, प्राणभृच्चेति प्रतिज्ञांशोपयुक्तचिन्तामुक्त्वा स्वशब्दात् मुक्तोपसृप्यव्यपदेशादिति हेत्वंशव्यावर्त्यशङ्कोपयुक्तचिन्तामाह – **आत्मशब्दादय इति ।।**

ಇಲ್ಲಿಯತನಕ ದ್ಯುಭ್ವಾದ್ಯಾಯತನಮ್, ನಾನುಮಾನಮ್, ಪ್ರಾಣಭೃಚ್ಚ ಇತ್ಯಾದಿ ಸೂತ್ರಗಳಲ್ಲಿರುವ ಪ್ರತಿಜ್ಞಾಭಾಗಕ್ಕೆ ಉಪಯುಕ್ತವಾದ ಸಂಶಯಕೋಟಿಗಳನ್ನು ಹೇಳಿದರು. ಪ್ರಕೃತ ಸ್ವಶಬ್ದಾತ್, ಮುಕ್ತೋಪಸೃಪ್ಯವ್ಯಪದೇಶಾತ್ ಇತ್ಯಾದಿ ಹೇತು ಭಾಗದಿಂದ ವ್ಯಾವರ್ತ್ಯವಾದ ಪೂರ್ವಪಕ್ಷಕ್ಕೆ ಉಪಯೋಗವಾಗುವ ಸಂಶಯಕೋಟಿಗಳನ್ನು 'ಆತ್ಮಶಬ್ದಾದಯಃ' ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ.

**प्रकाशः** – आदिपदेनामृतसेतुत्वरूपमुक्तोपसृप्यत्वलिङ्गं, ब्रह्मप्रकरणे, तमेवैकं जानथ आत्मानमित्यादिवाक्योक्ताहेयत्वोक्तिहेयत्वानुक्त्यन्यहेयत्वोक्तयो वा लिङ्गप्रकरणसमाख्या एव वा ग्राह्याः ।

'ಆತ್ಮಶಬ್ದಾದಯಃ' ಎಂಬಲ್ಲಿರುವ ಆದಿಪದದಿಂದ 'ಅಮೃತಸೇತುತ್ವ', 'ಮುಕ್ತೋಪಸೃಪ್ಯತ್ವ' ಎಂಬಲಿಂಗಗಳನ್ನು, ಬ್ರಹ್ಮಪ್ರಕರಣದಲ್ಲಿ, 'ತಮೇವೈಕಂ ಜಾನಥ ಆತ್ಮಾನಮ್' ಇತ್ಯಾದಿ ವಾಕ್ಯದಲ್ಲಿ ಹೇಳಲ್ಪಟ್ಟ ಅಹೇಯತ್ವ ವಚನ ಅಥವಾ ಹೇಯತ್ವದ ಅನುಕ್ತಿ, ಅನ್ಯ ಹೇಯತ್ವ ಉಕ್ತಿಗಳನ್ನು ಸ್ವೀಕರಿಸಬಹುದು, ಅಥವಾ ಲಿಂಗ, ಪ್ರಕರಣ, ಸಮಾಖ್ಯಾಪ್ರಮಾಣಗಳನ್ನೇ ಸ್ವೀಕರಿಸಬಹುದು

**प्रकाशः** – अतच्छब्दादिति हेत्वंशव्यावर्त्यशङ्कोपयुक्तचिन्तामाह – **तदर्थं बाधकमस्त्युत नेतीत्यादिना ।।**

'ಅತಚ್ಛಬ್ದಾತ್' ಎಂಬ ಹೇತುವಿನ ಭಾಗದಿಂದ ಪರಿಹಾರವಾಗುವ ಪೂರ್ವಪಕ್ಷಕ್ಕೆ ಉಪಯುಕ್ತವಾಗುವ ಸಂಶಯವನ್ನು 'ತದರ್ಥಂ ಬಾಧಕಮಸ್ತಿ ಉತ ನ' ಇತ್ಯಾದಿಯಾಗಿ ತೋರಿಸಿದ್ದಾರೆ.

**प्रकाशः** – **जायमानत्वमिति** ।। अत्र यद्यपि 'रुद्रो वाव लोकाधार' इत्यादिसमाख्या विष्णौ न युक्ताऽथ युक्तेति । तदर्थं समाख्यागतरुद्रादिशब्दा निरवकाशा उत विष्णौ सावकाशा इत्यादिचिन्ताप्युपदर्शनीया ।

ಸಂಶಯ ಕೋಟಿಗಳನ್ನು ತೋರಿಸುವಾಗ ಜಾಯಮಾನತ್ವವು ವಿಷ್ಣುವಿನಲ್ಲಿ ಅಯುಕ್ತವಾಗುತ್ತದೋ? ಯುಕ್ತವಾಗುತ್ತದೋ? ಎಂದು ಹೇಳಿದ್ದಾರೆ. ವಾಸ್ತವಿಕವಾಗಿ 'ರುದ್ರೋ ವಾವ ಲೋಕಾಧಾರಃ' ಇತ್ಯಾದಿ ಸಮಾಖ್ಯಾಪ್ರಮಾಣವು ವಿಷ್ಣುವಿನಲ್ಲಿ ಅಯುಕ್ತವಾಗುತ್ತದೋ? ಅಥವಾ ಯುಕ್ತವಾಗುತ್ತದೋ? ಅದಕ್ಕೋಸ್ಕರ ಸಮಾಖ್ಯಾಪ್ರಮಾಣದಲ್ಲಿರುವ ರುದ್ರಾದಿ ಶಬ್ದಗಳು ನಿರವಕಾಶವಾಗಿವೆಯೋ? ಅಥವಾ

ವಿಷ್ಣುವಿನಲ್ಲಿ ಸಾವಕಾಶವಾಗಿವೆಯೋ? ಇತ್ಯಾದಿ ಕ್ರಮದಲ್ಲಿ ಸಂಶಯಕೋಟಿಗಳನ್ನು ತೋರಿಸಬೇಕಿತ್ತು. ಜಾಯಮಾನತ್ವದ ಬಗ್ಗೆ ಸಂಶಯವನ್ನು ತೋರಿಸುವ ಆವಶ್ಯಕತೆವಿರಲಿಲ್ಲವೆಂಬ ಪ್ರಶ್ನೆ ಬರುತ್ತದೆ.

**प्रकाशः** – तथापि रुद्रसमाख्यायाष्टीकोक्तरीत्या वक्ष्यमाणदिशा च बलवत्त्वेऽपि इतरसमाख्ययोर्विष्णुसमाख्याप्रतिरोधेन जायमानत्वलिङ्गेनैव तयोरुज्जीवनाद्वा प्राकरणिकबाधकोपदर्शनं कार्यमित्याशयाद्वा उपलक्षणत्वाद्वा जायमानत्वकोटिक-चिन्तैवोक्ता ।

ಆದರೆ ರುದ್ರನ ವಿಷಯದಲ್ಲಿರುವ ಸಮಾಖ್ಯಾಪ್ರಮಾಣವು ಟೀಕೆಯಲ್ಲಿ ಹೇಳಿದಂತೆ ಗ್ರಂಥಕಾರರೇ ಮುಂದೆ ಹೇಳುವಂತೆ ಅತ್ಯಂತ ಬಲಿಷ್ಠವಾಗಿದೆ. ಆದರೆ ಉಳಿದ ಪ್ರಕೃತಿ, ಜೀವಾದಿಗಳಲ್ಲಿರುವ ಸಮಾಖ್ಯಾಪ್ರಮಾಣಕ್ಕೆ ಹಾಗೇ ಪ್ರಾಬಲ್ಯವಿರುವುದಿಲ್ಲ ವಿಷ್ಣುವಿನ ವಿಷಯದಲ್ಲೂ ಸಮಾಖ್ಯಾಪ್ರಮಾಣವಿದೆ. ಜೀವಾದಿಗಳಲ್ಲಿಯೂ ಸಹ ಸಮಾಖ್ಯಾಪ್ರಮಾಣವಿದೆಯೆಂದಂತಾಗಿ ವಿಷ್ಣುವಿನ ಸಮಾಖ್ಯಾಪ್ರಮಾಣದಿಂದ ಪ್ರತಿರುದ್ಧವಾಗುತ್ತವೆ. ಆವಾಗ ಜಾಯಮಾನತ್ವಲಿಂಗದಿಂದಲೇ ಜೀವನ ವಿಷಯದಲ್ಲಿರುವ ಸಮಾಖ್ಯಾಪ್ರಮಾಣಗಳನ್ನು ಉಜ್ಜೀವನಗೊಳಿಸಬೇಕು. ಈ ದೃಷ್ಟಿಯಿಂದ ಗ್ರಂಥಕಾರರು ಜಾಯಮಾನತ್ವ ವಿಷಯದಲ್ಲಿರುವ ಸಂಶಯಕೋಟಿಯನ್ನೇ ತೋರಿಸಿದ್ದಾರೆ. ಅಥವಾ ಜಾಯಮಾನತ್ವ ಲಿಂಗವು ಪ್ರಕರಣದಲ್ಲಿಯೇ ಕೇಳಿಸುತ್ತಿದೆ. ಪ್ರಕರಣದಲ್ಲಿರುವ ಜಾಯಮಾನತ್ವಲಿಂಗದಿಂದ ಬಾಧಕವನ್ನು ತೋರಿಸುವುದು ಅತ್ಯಂತ ಯುಕ್ತವೆಂಬ ಅಭಿಪ್ರಾಯದಿಂದ ಜಾಯಮಾನತ್ವಸಂಶಯಕೋಟಿಯನ್ನೇ ತೋರಿಸಿರಬಹುದು. ಅಥವಾ ನೀವು ಹೇಳಿದ ಸಮಾಖ್ಯಾಪ್ರಮಾಣ ವಿಷಯದಲ್ಲಿರುವ ಸಂಶಯಕೋಟಿಗಳನ್ನು ಈ ಜಾಯಮಾನತ್ವ ಕೋಟಿಕವಾದ ಚಿಂತೆಯಿಂದ ಉಪಲಕ್ಷಣವನ್ನಾಗಿ ಸ್ವೀಕರಿಸಬಹುದು. ಹೀಗೆ ಮೂರುಬಗೆಯ ವಿವಕ್ಷೆಯಿರುವುದರಿಂದ ಗ್ರಂಥಕಾರರ ಧಾಟಿ ಸಾಧುವಾಗಿದೆ.

**प्रकाशः** – यदि शरीरग्रहणमेव जननं तस्याशरीरे विष्णावयोगाद्बाधकादात्म-शब्दादीनां गौणत्वात्समाख्यादिबलेन रुद्रादिरेवेति पूर्वपक्षे फलम् । यदि विपरीतं तदा विष्णुरिति सिद्धान्ते फलमिति स्पष्टः फलफलिभाव इति भावः ।

ಶರೀರವನ್ನು ಸ್ವೀಕರಿಸುವಿಕೆಯೇ ಜನನವೆನಿಸುತ್ತದೆ. ಶರೀರವಿಲ್ಲದ ಕಾರಣ ವಿಷ್ಣುವಿನಲ್ಲಿ ಜನನವು ಕೂಡುವುದಿಲ್ಲವಾದ್ದರಿಂದ ಬಾಧಕವಿರುವ ಪ್ರಯುಕ್ತ ಆತ್ಮಶಬ್ದಾದಿಗಳಿಗೆ ಗೌಣಾರ್ಥವನ್ನೇ ಮಾಡಬೇಕು. ಆದ್ದರಿಂದ ಸಮಾಖ್ಯಾದಿ ಪ್ರಮಾಣಗಳ ಆಧಾರದಿಂದ ರುದ್ರಾದಿಗಳೇ ದ್ಯುಭ್ವಾದ್ಯಾಯತನರಾಗುತ್ತಾರೆಂಬುದು ಪೂರ್ವಪಕ್ಷದ ಗುರಿ.

ಒಂದು ವೇಳೆ ಶರೀರವನ್ನು ಸ್ವೀಕರಿಸುವಿಕೆಯೇ ಜನನವಲ್ಲ. ಪ್ರಾದುರ್ಭಾವಾದಿಗಳೂ ಸಹ ವಿಷ್ಣುವಿಗೆ ಜನನವೆನಿಸುತ್ತದೆಂದು ಹೇಳುವುದಾದರೆ ಆವಾಗ ಯಾವುದೇ ಬಾಧಕಗಳಿಲ್ಲದ ಕಾರಣ ಆತ್ಮಶಬ್ದಾದಿಗಳಿಗೆ ಮುಖ್ಯಾರ್ಥವನ್ನೇ ಸ್ವೀಕರಿಸಬೇಕು. ಸಮಾಖ್ಯಾಪ್ರಮಾಣಗಳು ಆತ್ಮಶಬ್ದಾದಿಗಳಿಂದ ಬಾಧಿತವಾಗುತ್ತವೆ. ಆದ್ದರಿಂದ ವಿಷ್ಣುವೇ ದ್ಯುಭ್ವಾದ್ಯಾಯತನನಾಗುತ್ತಾನೆಂಬುದು ಸಿದ್ಧಾಂತದ ಗುರಿ. ಹೀಗೆ ಫಲ-ಫಲಿಭಾವವನ್ನು ತಿಳಿಯಬೇಕು.

ಪರಿಪೂರ್ಣಚಂದ್ರಿಕಾ

**प्रकाशः** – यद्यपि टीकायां जायमानत्वबाधकेनात्मशब्दस्यैवामुख्यत्वमाशङ्कितम् । नतु मुक्तोपसृप्यत्वादेः । प्रत्युत तेनैवात्मशब्दस्य मुख्यत्वमुक्तं मुक्तोपसृप्यसूत्रे ।

ವಾಸ್ತವಿಕವಾಗಿ ಟೀಕೆಯಲ್ಲಿ ಜಾಯಮಾನತ್ವವೆಂಬ ಬಾಧಕವಿರುವುದರಿಂದ ಆತ್ಮಶಬ್ದಕ್ಕೇನೇ ಮುಖ್ಯಾರ್ಥವನ್ನು ಮಾಡಬೇಕೆಂದು ಹೇಳಿರುತ್ತಾರೆ ಹೊರತು, ಮುಖ್ಯೋಪಸೃಪ್ಯತ್ವವನ್ನು ಗೌಣವನ್ನಾಗಿ ತಿಳಿಯಬೇಕೆಂದು ಹೇಳಿರುವುದಿಲ್ಲ. ಆದರೆ ಗ್ರಂಥಕಾರರು ತದರ್ಥಚಿಂತೆಯನ್ನು ತೋರಿಸುವಾಗ ಆತ್ಮಶಬ್ದಾದಿಗಳು ಗೌಣವೋ, ಮುಖ್ಯವೋ ಎಂದು ವಿಕಲ್ಪಿಸಿ, ಮುಖ್ಯವಾಗುವುದಾದರೆ ಬಾಧಕವಿದೆಯೋ, ಇಲ್ಲವೋ ಎಂದು ವಿಕಲ್ಪಿಸಿ, ಮುಂದೆ ಜಾಯಮಾನತ್ವ ಲಿಂಗವು ವಿಷ್ಣುವಿನಲ್ಲಿ ಅಯುಕ್ತವೋ, ಯುಕ್ತವೋ ಎಂದು ಹೇಳಿದ್ದಾರೆ. ಇದರಿಂದ ಜಾಯಮಾನತ್ವಲಿಂಗವು ಮುಕ್ತೋಪಸೃಪ್ಯತ್ವಲಿಂಗವನ್ನೂ ಸಹ ಗೌಣವನ್ನಾಗಿ ಮಾಡುತ್ತದೆಂದು ಹೇಳಿದಂತಾಯಿತು. ಆದರೆ ಟೀಕೆಯಲ್ಲಿ ಹೀಗೆ ಹೇಳಿರುವುದಿಲ್ಲ. ಅಷ್ಟೇ ಅಲ್ಲದೆ ಟೀಕೆಯಲ್ಲಿ ಮುಕ್ತೋಪಸೃಪ್ಯತ್ವದ ಬಲದಿಂದ ಆತ್ಮಶಬ್ದವು ಮುಖ್ಯವಾಗಿದೆಯೆಂದೇ ಹೇಳಿದ್ದಾರೆ. ಆದ್ದರಿಂದ ಟೀಕೆಯು ಗ್ರಂಥಕಾರರ ಮಾತಿಗೆ ವಿಸಂವಾದಿ ಆಗಿದೆಯಲ್ಲವೇ? ಎಂಬ ಪ್ರಶ್ನೆ ಬರುತ್ತದೆ.

**प्रकाशः** – तथापीह श्रुतेर्विष्णौ मुख्याया अपि जीवलिङ्गेनामुख्यत्वशङ्कायां तुल्यन्यायतया लिङ्गस्यापि सा भवत्येवेत्याशयेन जायमानत्वलिङ्गेनात्मशब्दादयो गौणा इति बहुवचनोक्तिः । टीकायां तु मुक्तोपसृप्यसूत्रे चशब्दाभावात्तत्स्वारस्याय तथोक्तिरिति भावः ।

ಆದರೆ ಪ್ರಕೃತ ವಿಷ್ಣುವಿನಲ್ಲಿ ಮುಖ್ಯವಾಗಿರುವ ಶ್ರುತಿಗೆ ಎಂದರೆ ಅಲ್ಲಿ ಪಠಿತವಾದ ಆತ್ಮಶಬ್ದಾದಿಗಳಿಗೆ ಜಾಯಮಾನತ್ವವೆಂಬ ಜೀವಲಿಂಗದ ಬಲದಿಂದ ಅಮುಖ್ಯತ್ವವನ್ನು ಆಶಂಕಿಸಬಹುದು. ಅದೇ ಜಾಯಮಾನತ್ವ ಲಿಂಗದ ಬಲದಿಂದಲೇ ಮುಖ್ಯೋಪಸೃಪ್ತವೆಂಬ ಲಿಂಗಕ್ಕೂ ಸಹ ಅಮುಖ್ಯತ್ವದ ಆಶಂಕೆ ಬಂದೇ ಬರುತ್ತದೆ. ಈ ಅಭಿಪ್ರಾಯದಿಂದ ಗ್ರಂಥಕಾರರು ಜಾಯಮಾನತ್ವ ಲಿಂಗದಿಂದ ಆತ್ಮಶಬ್ದಾದಿಗಳು ಗೌಣವಾಗುತ್ತವೆ ಎಂಬುದಾಗಿ ಬಹುವಚನವನ್ನು ಪ್ರಯೋಗಿಸಿದ್ದಾರೆ. ಇಲ್ಲದಿದ್ದರೆ 'ಆತ್ಮಶಬ್ದಃ' ಎಂಬುದಾಗಿ ಏಕವಚನವನ್ನೇ ಪ್ರಯೋಗಿಸಬೇಕಾಗಿತ್ತು. ಆದರೆ ಟೀಕಾರಾಯರ ಅಭಿಪ್ರಾಯವೇ ಬೇರೆ ಇದೆ. ಮುಖ್ಯೋಪಸೃಪ್ಯತ್ವವು ಪ್ರತ್ಯೇಕ ಲಿಂಗವೆನ್ನಲು ಸೂತ್ರದಲ್ಲಿ 'ಚ' ಶಬ್ದವಿರುವುದಿಲ್ಲ. ಆದ್ದರಿಂದ ಹಿಂದಿನ ಸೂತ್ರದಲ್ಲಿ ಹೇಳಲ್ಪಟ್ಟ ಆತ್ಮಶಬ್ದವೆಂಬ ಲಿಂಗವು ಮುಖ್ಯವಾಗಿದೆಯೆಂದು ತಿಳಿಸುವುದಕ್ಕಾಗಿಯೇ ಮುಖ್ಯೋಪಸೃಪ್ಯತ್ವವನ್ನು ಮುಂದಿನ ಸೂತ್ರದಲ್ಲಿ ಹೇಳಿದ್ದಾರೆ. ಇದರ ಸ್ವಾರಸ್ಯಕ್ಕೋಸ್ಕರ ಟೀಕೆಯಲ್ಲಿ ಹಾಗೇ ಹೇಳಿರುತ್ತಾರೆ. ಆದ್ದರಿಂದ ಟೀಕಾರಾಯರ ಅಭಿಪ್ರಾಯವೇ ಬೇರೆ ರೀತಿಯಾಗಿರುವುದರಿಂದ ವಿಸಂವಾದವು ಗ್ರಂಥಕ್ಕೆ ಬರುವುದಿಲ್ಲ. ಆತ್ಮಶಬ್ದಕ್ಕೆ ಮುಖ್ಯಾರ್ಥವನ್ನೇ ಸ್ವೀಕರಿಸಬೇಕೆನ್ನಲು ಮುಖ್ಯೋಪಸೃಪ್ಯತ್ವವನ್ನು ನಾವು ಹೇತುವನ್ನಾಗಿ ಹೇಳಿದಾಗ ಪೂರ್ವಪಕ್ಷಿಯು ಜಾಯಮಾನತ್ವವೆಂಬ ಲಿಂಗದಿಂದ ಮುಖ್ಯೋಪಸೃಪ್ಯತ್ವವನ್ನು ಆಕ್ಷೇಪಿಸುತ್ತಾನೆ. ಆತ್ಮಶಬ್ದವನ್ನೂ ಸಹ ಆಕ್ಷೇಪಿಸುತ್ತಾನೆ. ಅವನ ಅಭಿಪ್ರಾಯವನ್ನು ಖಂಡಿಸುವುದಕ್ಕಾಗಿ ಗ್ರಂಥಕಾರರು

'ತೇಷಾಮ್' ಎಂಬುದಾಗಿ ಬಹುವಚನವನ್ನು ಪ್ರಯೋಗಿಸಿರುತ್ತಾರೆ.

**प्रकाशः** – अत्र यद्यपि च विष्णोरिति चिन्तानन्तरं तदर्थमात्मशब्दादिकं रुद्रादिजीवे नेतुं शक्यमुताशक्यमिति चिन्ता तदर्थमत्र प्रकरणे निरवकाशजीव-विष्णुप्रापकबलेन तयोरभेद आश्रयितुं शक्य उताशक्य इति चिन्ता तदर्थमन्यमीशमित्यादिभेदाद्युक्तिर्जीवविष्णुनिष्ठाऽथ नेति चिन्ता तदर्थमीशशब्दः किं विष्ण्वन्ययत्किञ्चित्पर उत प्रकरणबलाद्विष्णुपर एवेति भेदादिसूत्रव्यावर्त्यशङ्कोपयुक्ता चिन्तापरम्पराऽपि वाच्या ।

ಪ್ರಶ್ನೆ - 'ವಿಷ್ಣೋಃ' ಎಂಬ ಸಂಶಯದ ಅನಂತರ ಅದಕ್ಕೋಸ್ಕರ ಆತ್ಮಶಬ್ದಾದಿಗಳು ರುದ್ರಾದಿಜೀವರಲ್ಲಿ ಸಮನ್ವಯವಾಗುತ್ತವೋ ಅಥವಾ ಆಗುವುದಿಲ್ಲವೋ? ಎಂಬ ಕೋಟಿಯನ್ನು ಹೇಳಿ ಈ ಸಂಶಯದ ಪರಿಹಾರಕ್ಕಾಗಿ ಪ್ರಕರಣದಲ್ಲಿ ನಿರವಕಾಶವಾದ ಜೀವ ಹಾಗೂ ವಿಷ್ಣುಪ್ರಾಪಕವಾದ ಲಿಂಗಗಳ ಬಲದಿಂದ ಅವರಿಬ್ಬರಿಗೂ ಐಕ್ಯವನ್ನು ಹೇಳಬಹುದೋ ಇಲ್ಲವೋ? ಈ ಸಂಶಯದ ಪರಿಹಾರಕ್ಕಾಗಿ 'ಅನ್ಯಮೀಶಮ್' ಎಂಬ ಭೇದಶ್ರುತಿಯಲ್ಲಿ ಹೇಳಲ್ಪಟ್ಟ ಭೇದವು ಜೀವ ಹಾಗೂ ವಿಷ್ಣುವಿಷಯಕವಾಗಿದೆಯೋ ಅಥವಾ ಇಲ್ಲವೋ? ಈ ಸಂಶಯದ ಪರಿಹಾರಕ್ಕಾಗಿ ಈಶಶಬ್ದವು ವಿಷ್ಣುವಿಗಿಂತ ಅನ್ಯವಾದ ಯಾವುದಾದರೂ ಒಂದು ವಸ್ತುವನ್ನು ಪ್ರತಿಪಾದಿಸುತ್ತದೋ, ಅಥವಾ ವಿಷ್ಣುವನ್ನೇ ಪ್ರತಿಪಾದಿಸುತ್ತದೋ, ಇತ್ಯಾದಿ ಭೇದಾದಿಸೂತ್ರಗಳಿಂದ ವ್ಯಾವರ್ತ್ಯವಾದ ಪೂರ್ವಪಕ್ಷಕ್ಕೆ ಉಪಯುಕ್ತವಾಗುವಂತೆ ಸಂಶಯಪರಂಪರೆಯನ್ನು ತೋರಿಸಬೇಕಿತ್ತಲ್ಲವೇ?

**प्रकाशः** – तथापि स्पष्टत्वाद्वा सूत्रक्रमे वक्ष्यमाणप्रकारेणाभेदशङ्काया रुद्रादि-कोटिचतुष्टयसाधारण्याभावाद्वा साऽपि शङ्का जायमानत्वरूपजीवलिङ्गनिरवकाशत्व-प्रयुक्तैवेति तन्निरवकाशत्वादिचिन्तोक्त्यैवोक्तप्रायेति वा नोक्ता ।

ಉತ್ತರ - ಹೌದು. ಆದರೆ ಇದನ್ನು ಹೇಳದಿರಲು ನಾಲ್ಕು ಕಾರಣಗಳಿವೆ. ಏನೆಂದರೆ - ಈ ಚಿಂತೆಗಳು ಸ್ಪಷ್ಟವಾಗಿರುವುದರಿಂದ ಗ್ರಂಥಕಾರರು ಹೇಳಿಲ್ಲ. ಅಥವಾ ಸೂತ್ರಕ್ರಮದಲ್ಲಿ ಮುಂದೆ ಹೇಳುವ ಪ್ರಕಾರ ನಾಲ್ಕು ಪೂರ್ವಪಕ್ಷಕೋಟಿಗಳಲ್ಲಿ ಅಭೇದಶಂಕೆಯನ್ನು ಮಾಡಲು ಸಾಧ್ಯವಿಲ್ಲ. ರುದ್ರ, ವಾಯು, ಪ್ರಕೃತಿ, ಜೀವ ಈ ನಾಲ್ಕು ಪದಾರ್ಥಗಳೂ ಸಹ ದ್ಯುಭ್ವಾದ್ಯಾಯತನರಾಗಬಹುದೆಂದು ಪೂರ್ವಪಕ್ಷ ಮಾಡಲಾಗಿದೆ. ರುದ್ರಾದಿಗಳಿಗೆ ವಿಷ್ಣುವಿನಿಂದ ಅಭೇದವನ್ನು ಹೇಳಬಹುದಾದರೂ ಪ್ರಕೃತಿಗೆ ವಿಷ್ಣುವಿನಿಂದ ಅಭೇದವನ್ನು ಆಶಂಕಿಸಲು ಸಾಧ್ಯವಿಲ್ಲ. ಆದ್ದರಿಂದ ಅಭೇದಕೋಟಿಕವಾದ ಸಂಶಯಗಳನ್ನು ಗ್ರಂಥಕಾರರು ತೋರಿಸಿಲ್ಲ; ಹೊರತಾಗಿ, ಜಾಯಮಾನತ್ವ ಕೋಟಿಕವಾದ ಸಂಶಯಗಳನ್ನು ತೋರಿಸಿದ್ದಾರೆ. ಈ ಜಾಯಮಾನತ್ವವಾದರೂ ವಾಯು, ರುದ್ರ, ಪ್ರಕೃತಿ, ಜೀವ ಎಲ್ಲರಲ್ಲಿಯೂ ಸಹ ಸಾಧಾರಣವಾಗಿ ಬರುತ್ತದೆ. ಪ್ರಕೃತಿಯೂ ಸಹ ನಾನಾ ರೂಪವನ್ನು ತಾಳುವುದರಿಂದ ಜಾಯಮಾನವಾಗಿದೆ ಎಂದು ಹೇಳಬಹುದು. ಹೀಗೆ ಕೋಟಿಚತುಷ್ಟಯದಲ್ಲಿ ಸಾಧಾರಣವಾದ ಜಾಯಮಾನತ್ವವನ್ನೇ ಗ್ರಂಥಕಾರರು ಸಂಶಯಕೋಟಿಯಲ್ಲಿ ಸೇರಿಸಿದ್ದಾರೆ ಹೊರತು ಕೋಟಿಚತುಷ್ಟಯದಲ್ಲಿ ಸಾಧಾರಣವಾಗದ ಅಭೇದಕೋಟಿಯನ್ನು ಗ್ರಂಥಕಾರರು ಸೇರಿಸಿರುವುದಿಲ್ಲ.

ಪರಿಪೂರ್ಣಚಂದ್ರಿಕಾ

ಅಥವಾ ಆತ್ಮಶಬ್ದ, ಮುಕ್ತೋಪಸೃಪ್ಯತ್ವ ಮೊದಲಾದ ನಿರವಕಾಶಲಿಂಗಗಳು ವಿಷ್ಣುವಿನ ವಿಷಯದಲ್ಲಿ ಇರುವಂತೆ ಜಾಯಮಾನತ್ವವೆಂಬ ನಿರವಕಾಶಲಿಂಗವು ಜೀವನ ವಿಷಯದಲ್ಲೂ ಇರುತ್ತದೆ. ಹೀಗೆ ಇಬ್ಬರಲ್ಲಿಯೂ ಸಮಾನವಾದ ಲಿಂಗಗಳಿರುವ ಪ್ರಯುಕ್ತ ಅಭೇದವನ್ನೇ ಒಪ್ಪಬೇಕೆಂದು ಶಂಕಿಸಬಹುದು. ಆದ್ದರಿಂದ ಅಭೇದಶಂಕೆಗೆ ಉಪಯುಕ್ತವಾದ ಸಂಶಯಕ್ಕೆ ಮೂಲಭೂತವಾಗಿರುವುದು ಜಾಯಮಾನತ್ವಲಿಂಗಕ್ಕೆ ನಿರವಕಾಶತ್ವ ಶಂಕೆ. ಈ ಜಾಯಮಾನತ್ವ ಶಂಕೆಯನ್ನು ತೋರಿಸುವುದರಿಂದಲೇ ಅಭೇದ ಶಂಕೆಯನ್ನೂ ಸಹ ಹೇಳಿದಂತಾಗುತ್ತದೆ ಎಂಬ ಅಭಿಪ್ರಾಯದಿಂದ ಗ್ರಂಥಕಾರರು ಮೂಲಭೂತವಾದ ಜಾಯಮಾನತ್ವದ ಸಂಶಯವನ್ನೇ ತೋರಿಸಿದ್ದಾರೆ.

**प्रकाशः** – यद्वा 'आत्मशब्दादयः किं गौणा' इत्यस्य जीवाभेदेन नेया इत्यप्यर्थः । ''जीवेशाभेदेन ब्रह्मगतलिङ्गस्य जीवे सम्भवात्'' इति टीकोक्तेः । तथाच साऽपि चिन्तोक्तैवेति ।

ಅಥವಾ ಅಭೇದವಿಷಯಕವಾದ ಸಂಶಯಕೋಟಿಯನ್ನು ಗ್ರಂಥಕಾರರು ಹೇಳಿಯೇ ಇದ್ದಾರೆ. 'ಆತ್ಮಶಬ್ದಾದಯಃ ಕಿಂ ಗೌಣಾಃ' ಎಂಬಲ್ಲಿರುವ ಗೌಣಶಬ್ದಕ್ಕೆ ಜೀವಾಭೇದವನ್ನು ಒಪ್ಪಿ ಕೂಡಿಸಬಹುದೋ? ಎಂದರ್ಥ. ಗೌಣಶಬ್ದಕ್ಕೆ ಅಭೇದವನ್ನು ಒಪ್ಪಬೇಕೆಂಬುದು 'ಜೀವೇಶಾಭೇದೇನ ಬ್ರಹ್ಮಗತಲಿಂಗಸ್ಯ ಜೀವೇ ಸಂಭವಾತ್' ಎಂಬ ಟೀಕೆಯಲ್ಲಿ ಹೇಳಿದ್ದಾರೆ. ಆದ್ದರಿಂದ 'ಗೌಣಾಃ' ಎಂಬ ಪದದಿಂದಲೇ ಗ್ರಂಥಕಾರರು ಅಭೇದವಿಷಯಕವಾದ ಸಂಶಯಪರಂಪರೆಯನ್ನೂ ಸಹ ತೋರಿಸಿದ್ದಾರೆ. ಆದ್ದರಿಂದ ಗ್ರಂಥಕಾರರು ಅಭೇದವಿಷಯಕವಾದ ಸಂಶಯಪರಂಪರೆಯನ್ನು ತೋರಿಸದೆ ಜಾಯಮಾನತ್ವವಿಷಯಕವಾದ ಸಂಶಯಪರಂಪರೆಯನ್ನೇ ತೋರಿಸಿದ್ದಾರೆಂಬ ಆಕ್ಷೇಪವೇ ತಪ್ಪು.

**गुरुराजीयम्** – पूर्वपादान्त्यस्योत्तरपादाद्यस्य चाधिकरणस्यावान्तरसङ्गतेरावश्यकत्वं वदन्तं प्रत्यभ्युच्चयेनाह – **यद्वेति** ॥




ಹಿಂದಿನ ಅಧಿಕರಣದಿಂದ ಈ ಅಧಿಕರಣಕ್ಕೆ ಸಂಗತಿಯನ್ನು ತೋರಿಸಬೇಕಾಗಿಲ್ಲ. ಏಕೆಂದರೆ ಪಾದದ ಮೊದಲನೇ ಅಧಿಕರಣಕ್ಕೆ ಸಂಗತಿ ಇರುವುದಿಲ್ಲ. ಹಾಗೇನಾದರೂ ಸಹಜವಾಗಿ ಸಂಗತಿ ಇದ್ದರೂ ಸಹ ಅದನ್ನು ತಿಳಿಯುವುದು ತಪ್ಪಲ್ಲ. ಹಿಂದಿನ ವೈಶ್ವಾನರಾಧಿಕರಣದಲ್ಲಿ ಸಿದ್ಧಾಂತಹೇತುವನ್ನಾಗಿ ಬಳಸಲ್ಪಟ್ಟ ಆತ್ಮಶಬ್ದವನ್ನು ವಿಚಾರ ಮಾಡುತ್ತಿರುವುದರಿಂದ ಆತೀದೇಶಿಕೀ ಸಂಗತಿಯನ್ನು ಹೇಳಿದರೆ ತಪ್ಪಿಲ್ಲ.

'ಯಸ್ಮಿನ್‌ದ್ಯೌಃ' ಇತ್ಯಾದಿ ಶ್ರುತಿಯಲ್ಲಿ ದ್ಯುಭ್ವಾದ್ಯಾಯತನತ್ವವೆಂಬ ಲಿಂಗವು ಕೇಳಿಸುತ್ತಿದೆ. ಇದು ರುದ್ರನಲ್ಲಿ ಬರುತ್ತದೆಂಬುದು ಪೂರ್ವಪಕ್ಷಕಾರನ ಆಗ್ರಹ, ವಿಷ್ಣುವಿನಲ್ಲಿ ಬರುತ್ತದೆಂಬುದು ಸಿದ್ಧಾಂತಿಗಳ ಆಗ್ರಹ. ಒಂದು

ವೇಳೆ ಶರೀರವನ್ನು ಸ್ವೀಕಾರ ಮಾಡುವುದೇ ಜನನ = ಹುಟ್ಟುವಿಕೆ ಎಂದಾದರೆ, ಶರೀರವೇ ಇಲ್ಲದ ವಿಷ್ಣುವಿನಲ್ಲಿ ಜಾಯಮಾನತ್ವವು ಅಯುಕ್ತವಾಗುತ್ತದೆ. ಜಾಯಮಾನತ್ವವೆಂಬ ಬಾಧಕಲಿಂಗದಿಂದಲೇ ಪ್ರಕರಣದಲ್ಲಿ ಕೇಳಿಸುತ್ತಿರುವ ಆತ್ಮಶಬ್ದಾದಿಗಳೆಲ್ಲವೂ ವಿಷ್ಣುವನ್ನು ಪ್ರತಿಪಾದಿಸದೇ ಗೌಣವಾದ ಬೇರೆ ಯಾರನ್ನಾದರೂ ಪ್ರತಿಪಾದಿಸುತ್ತದೆಂದು ಹೇಳಬೇಕಾಗುತ್ತದೆ. ಆವಾಗ 'ರುದ್ರೋ ವಾವ ಲೋಕಾಧಾರಃ' ಇತ್ಯಾದಿ ಸಮಾಖ್ಯಾ ಪ್ರಮಾಣಗಳ ಬೆಂಬಲದಿಂದ ರುದ್ರಾದಿಗಳೇ ದ್ಯುಭ್ವಾದ್ಯಾಯತನರಾಗುತ್ತಾರೆಂಬುದು ಪೂರ್ವಪಕ್ಷಕಾರನ ಗುರಿ.

ಜನನ ಶಬ್ದಕ್ಕೆ ಹುಟ್ಟುವಿಕೆ ಎಂಬರ್ಥವನ್ನೇ ಸ್ವೀಕರಿಸಬೇಕಿಲ್ಲ. ಪ್ರಾದುರ್ಭಾವವೆಂಬರ್ಥವನ್ನೂ ಸಹ ಸ್ವೀಕರಿಸಬಹುದು. ಆದ್ದರಿಂದ ಜಾಯಮಾನತ್ವವನ್ನು ವಿಷ್ಣುವಿನಲ್ಲಿ ಹೇಳಲು ಏನೂ ಅಡ್ಡಿಯಿಲ್ಲ ಎಂದು ಒಪ್ಪಿದಾಗ ಆತ್ಮಶಬ್ದಾದಿಗಳೆಲ್ಲವೂ ಬಾಧಕವಿಲ್ಲದ ಕಾರಣ ಮಹಾವಿಷ್ಣುವನ್ನೇ ಮುಖ್ಯವಾಗಿ ಪ್ರತಿಪಾದಿಸುತ್ತವೆ. ಆತ್ಮಶಬ್ದಾದಿಗಳ ಬಲದಿಂದ ರುದ್ರಾದಿಗಳ ವಿಷಯದಲ್ಲಿರುವ ಸಮಾಖ್ಯಾದಿ ಪ್ರಮಾಣಗಳೆಲ್ಲವೂ ದುರ್ಬಲವಾಗುತ್ತವೆ. ಆವಾಗ 'ಯಸ್ಮಿನ್‌ದ್ಯೌಃ' ಇತ್ಯಾದಿ ಶ್ರುತಿಯಲ್ಲಿ ಪ್ರತಿಪಾದಿಸಲ್ಪಟ್ಟ ದ್ಯುಭ್ವಾದ್ಯಾಯತನತ್ವವೆಂಬ ಲಿಂಗವು ಮಹಾವಿಷ್ಣುವಿನಲ್ಲಿ ಸಿದ್ಧವಾಗುತ್ತದೆಂಬ ಸಾಧನೆಯೇ ಸಿದ್ಧಾಂತಿಗಳ ಗುರಿ.



● ● ● ● ●

## ರುದ್ರ, ಪ್ರಕೃತಿ, ವಾಯು, ಜೀವ, ಈ ನಾಲ್ವರು ದ್ಯುಭ್ವಾದ್ಯಾಯತನರೆಂದು ಪೂರ್ವಪಕ್ಷ

### तात्पर्यचन्द्रिका

**पूर्वपक्षस्तु । द्युभ्वाद्यायतनं रुद्रः प्रधानं वायुर्जीवो वा । ''रुद्रो वाव लोकाधारः । प्राणानां ग्रन्थिरसि रुद्रः । भूतं च भवच्च भविष्यच्चेत्याचक्षते । आकाश एव तदोतं च प्रोतं च । वायुना वै गौतमसूत्रेणायं च लोकः परश्च लोकः सर्वाणि च भूतानि संदृब्धानि'' इत्यादि समाख्यानात् । जायमानत्वरूपजीवलिङ्गाच्च ।**

ಅನುವಾದ - ಈ ಅಧಿಕರಣದ ಪೂರ್ವಪಕ್ಷ ಹೀಗಿದೆ - ದ್ಯುಭ್ವಾದ್ಯಾಯತನರಾದವರು, ರುದ್ರ, ಪ್ರಕೃತಿ, ವಾಯುದೇವತೆ ಅಥವಾ ಜೀವ ಇವರುಗಳೇ ಆಗುತ್ತಾರೆ. ಪ್ರತಿಯೊಬ್ಬರೂ ಸಹ ದ್ಯುಭ್ವಾದ್ಯಾಯತನರಾಗಿದ್ದಾರೆನ್ನಲು ಪ್ರಮಾಣವಿದೆ.

ರುದ್ರನ ವಿಷಯದಲ್ಲಿರುವ ಪ್ರಮಾಣ. 'ರುದ್ರೋ ವಾವ ಲೋಕಾಧಾರಃ' 'ಪ್ರಾಣಾನಾಂ ಗ್ರಂಥಿರಸಿ ರುದ್ರಃ' ಇತ್ಯಾದಿ ಶ್ರುತಿ ವಾಕ್ಯವು ರುದ್ರನು ದ್ಯುಲೋಕ, ಭೂಲೋಕ ಮೊದಲಾದವುಗಳಿಗೆ ಆಶ್ರಯನಾಗಿದ್ದಾನೆ. ಪ್ರಾಣಾಧಾರನೂ ಆಗಿದ್ದಾನೆ ಎಂದು ತಿಳಿಯುತ್ತದೆ.

'ಭೂತಂಚ ಭವಚ್ಚ ಭವಿಷ್ಯಚ್ಚೇತ್ಯಾಚಕ್ಷತೇ, ಆಕಾಶ ಏವ ತದೋತಂ ಚ ಪ್ರೋತಂ ಚ' ಎಂಬ ಶ್ರುತಿಯು ಹಿಂದಿನ ಮುಂದಿನ ಮತ್ತು ಈಗಿನ ಪದಾರ್ಥಗಳೆಲ್ಲವೂ ಪ್ರಕೃತಿಯಲ್ಲೇ ಅನನ್ಯವಾಗಿ

ಆಶ್ರಯಿಸಿಕೊಂಡಿದೆ ಎಂದು ಹೇಳಲಾಗಿದೆ. ಇದರಿಂದ ದ್ಯುಲೋಕವೇ ಮೊದಲಾದವುಗಳಿಗೆ ಆಶ್ರಯವಾದದ್ದು ಪ್ರಕೃತಿಯೆಂದು ತಿಳಿಯುತ್ತದೆ.

'ವಾಯುನಾ ವೈ ಗೌತಮಸೂತ್ರೇಣಾಯಂ ಚ ಲೋಕಃ ಪರಶ್ಚ ಲೋಕಃ ಸರ್ವಾಣಿ ಚ ಭೂತಾನಿ ಸಂದೃಬ್ಧಾನಿ' ಎಲೈ ! ಗೌತಮನೇ ಈ ಎಲ್ಲಾ ಲೋಕವು ಸಕಲ ಭೂತಗಳು ವಾಯುವನ್ನು ಆಶ್ರಯಿಸಿಕೊಂಡಿವೆ ಎಂಬ ಶ್ರುತಿಯು ದ್ಯುಭ್ವಾದ್ಯಾಯತನತ್ವವನ್ನು ವಾಯುದೇವತೆಯಲ್ಲಿ ಹೇಳುತ್ತಿದೆ. ಹೀಗೆ ರುದ್ರ, ಪ್ರಕೃತಿ, ಹಾಗೂ ವಾಯುದೇವತೆಯ ವಿಷಯದಲ್ಲಿ ಸಮಾಖ್ಯಾಪ್ರಮಾಣಗಳು ಕಾಣಿಸುತ್ತಿವೆ.

ಜೀವನೂ ಸಹ ದ್ಯುಭ್ವಾದ್ಯಾಯತನನಾಗಿದ್ದಾನೆನ್ನಬಹುದು. ಏಕೆಂದರೆ ಜಾಯಮಾನತ್ವವೆಂಬ ಲಿಂಗವು ಆ ಪ್ರಕರಣದಲ್ಲಿ ಕೇಳಿಸುತ್ತಿದೆ.

**नच ''लोकाश्च लोकिनश्च विष्णावेवोताश्च प्रोताश्च'' इति विष्णावपि समाख्याऽस्तीति वाच्यम् ।**

ಪ್ರಶ್ನೆ - ನೀವು ಹೇಗೆ ರುದ್ರಾದಿಗಳ ವಿಷಯದಲ್ಲಿ ಸಮಾಖ್ಯಾಪ್ರಮಾಣವನ್ನು ನೀಡಿದಿರೋ, ಅದರಂತೆ 'ಲೋಕಾಶ್ಚ ಲೋಕಿನಶ್ಚ ವಿಷ್ಣಾವೇವೋತಾಶ್ಚ ಪ್ರೋತಾಶ್ಚ' ಎಂಬುದಾಗಿ ವಿಷ್ಣುವಿನ ವಿಷಯದಲ್ಲಿಯೂ ಸಮಾಖ್ಯಾಪ್ರಮಾಣವು ಕಾಣಿಸುತ್ತಿದೆ. ಇದರ ಆಧಾರದಿಂದ ದ್ಯುಭ್ವಾದ್ಯಾಯತನನಾದವನು ವಿಷ್ಣುವಾಗಿದ್ದಾನೆಂದೂ ಸಹ ಹೇಳಬಹುದಲ್ಲವೇ?

**रुद्रसमाख्यायां ''प्राणानां ग्रन्थिरसि रुद्रः । प्राणेश्वरः कृत्तिवासाः पिनाकी । रुद्रो वाव लोकाधारः'' इति बहुरुद्रश्रुतिलिङ्गसद्भावात् ।**

ಉತ್ತರ - ಹಾಗೇ ಹೇಳಲಾಗದು ಏಕೆಂದರೆ ರುದ್ರನ ವಿಷಯದಲ್ಲಿ ಸಮಾಖ್ಯಾಪ್ರಮಾಣವು ಅತ್ಯಂತ ಬಲಿಷ್ಠವಾಗಿದೆ - 'ಪ್ರಾಣಾನಾಂ ಗ್ರಂಥಿರಸಿ ರುದ್ರಃ, ಪ್ರಾಣೇಶ್ವರಃ ಕೃತ್ತಿವಾಸಾಃ ಪಿನಾಕೀ, ರುದ್ರೋ ವಾವ ಲೋಕಾಧಾರಃ' ಎಂಬುದಾಗಿ ರುದ್ರನ ವಿಷಯದಲ್ಲಿ ಪ್ರಾಣಾಧಾರತ್ವ, ಪ್ರಾಣೇಶ್ವರತ್ವ, ಕೃತ್ತಿವಾಸಸ್ ಮೊದಲಾದ ಶಬ್ದವಾಚ್ಯತ್ವ ಹೀಗೆ ಅನೇಕ ಶ್ರುತಿ ಹಾಗೂ ಲಿಂಗಗಳು ಕೇಳಿಸುತ್ತಿವೆ. ಇವುಗಳ ಆಧಾರದಿಂದ ರುದ್ರಸಮಾಖ್ಯೆಯು ಅತ್ಯಂತ ಬಲಿಷ್ಠವಾಗಿದೆಯೆಂದು ತಿಳಿಯುತ್ತದೆ.

**एतदेवाभिप्रेत्योक्तमनुव्याख्याने ''बाहुल्यं लिङ्गशब्दानाम्'' इति ।**

ಆದ್ದರಿಂದಲೇ ಅನುವ್ಯಾಖ್ಯಾನದಲ್ಲಿ 'ಬಾಹುಲ್ಯಂ ಲಿಂಗಶಬ್ದಾನಾಮ್' ಎಂಬ ಮಾತಿನಿಂದ ಲಿಂಗ ಹಾಗೂ ಶ್ರುತಿಗಳು ರುದ್ರನ ವಿಷಯದಲ್ಲಿ ಬಹಳ ಇವೆ ಎಂದು ಹೇಳಿರುತ್ತಾರೆ.

ದ್ಯುಭ್ವಾದ್ಯಧಿಕರಣ (೧-೩-೧)

**"विष्णोर्द्युभ्वाद्यायतनत्वप्रसिद्धावपि" इत्यादिटीकायां विष्णुसमाख्याबाधार्थं जायमानत्वलिङ्गोक्तिस्तु विष्णुसमाख्यातो रुद्रसमाख्याया बलवत्त्वेऽपि वाय्वादिसमाख्यायाः प्राबल्याभावात् ।**

'ವಿಷ್ಣೋಃ ದ್ಯುಭ್ವಾದ್ಯಾಯತನತ್ವಪ್ರಸಿದ್ಧಾವಪಿ' ಇತ್ಯಾದಿ ಟೀಕೆಯಲ್ಲಿ ವಿಷ್ಣುವಿಷಯಕವಾದ ಸಮಾಖ್ಯಾಪ್ರಮಾಣವನ್ನು ಬಾಧಿಸುವುದಕ್ಕಾಗಿ ಜಾಯಮಾನತ್ವಲಿಂಗವನ್ನು ಹೇಳಿರುತ್ತಾರೆ. ಏಕೆಂದರೆ ವಿಷ್ಣು ಸಮಾಖ್ಯೆಗಿಂತ ರುದ್ರ ಸಮಾಖ್ಯೆಯು ಶ್ರುತಿ, ಲಿಂಗಗಳ ಆಧಾರದಿಂದ ಪ್ರಬಲವಾಗಿರಬಹುದು. ಆದರೆ ವಾಯು ಹಾಗೂ ಪ್ರಕೃತಿ ವಿಷಯಕವಾದ ಸಮಾಖ್ಯಾಪ್ರಮಾಣಕ್ಕೆ ಶ್ರುತಿ ಹಾಗೂ ಲಿಂಗಗಳ ಬಲದಿಂದ ಪ್ರಾಬಲ್ಯವನ್ನು ಹೇಳಲು ಸಾಧ್ಯವಿಲ್ಲ; ಹೊರತಾಗಿ ಜಾಯಮಾನತ್ವದಿಂದಲೇ ಪ್ರಾಬಲ್ಯವನ್ನು ಹೇಳಬೇಕು. ಈ ಉದ್ದೇಶದಿಂದ ಜಾಯಮಾನತ್ವಲಿಂಗವನ್ನು ಟೀಕೆಯಲ್ಲಿ ಹೇಳಿರುತ್ತಾರೆ.

**ननु तथापि "द्वे विद्ये वेदितव्ये" इति विष्णुप्रकरणेन "अमृतस्यैष सेतुः" इति मुक्तोपसृप्यत्वविष्णुलिङ्गेन च रुद्रादिसमाख्याया बाधः ।**

ಪ್ರಶ್ನೆ - ವಿಷ್ಣುವಿಷಯಕವಾದ ಸಮಾಖ್ಯಾಪ್ರಮಾಣಕ್ಕಿಂತ ಉಳಿದವರ ಸಮಾಖ್ಯಾಪ್ರಮಾಣವು ಬಲಿಷ್ಠವೆಂದು ಸಮರ್ಥಿಸಿದಿರಿ. ಆದರೆ 'ದ್ವೇ ವಿದ್ಯೇ ವೇದಿತವ್ಯೇ' ಎಂಬುದಾಗಿ ಪ್ರಾರಂಭವಾಗಿರುವುದರಿಂದ ಇದು ವಿಷ್ಣುಪ್ರಕರಣವೆಂದು ನಿರ್ಣಯವಾಗುತ್ತದೆ. ಅಷ್ಟೇ ಅಲ್ಲದೆ 'ಅಮೃತಸ್ಯೈಷ ಸೇತುಃ' ಎಂಬುದಾಗಿ ಮುಕ್ತೋಪಸೃಪ್ಯತ್ವವೆಂಬ ವಿಷ್ಣುಲಿಂಗವೇ ಕೇಳಿಸುತ್ತಿದೆ. ವಿಷ್ಣುವಿಷಯಕವಾದ ಪ್ರಕರಣದಿಂದಾಗಲೀ, ಲಿಂಗದಿಂದಾಗಲೀ, ರುದ್ರವಿಷಯಕವಾದ ಸಮಾಖ್ಯಾಪ್ರಮಾಣವೇ ಬಾಧಿತವಾಗಬೇಕು.

**मुक्तोपसृप्यत्वादेश्च विष्णुलिङ्गत्वं "तन्निष्ठस्य मोक्षोपदेशात् । अस्मिन्नस्य च तद्योगं शास्ति" इत्यादिसूत्रसिद्धम् । लिङ्गप्रकरणे च समाख्यातो बलवती ।**

ಮುಕ್ತೋಪಸೃಪ್ಯತ್ವವೇ ಮೊದಲಾದವುಗಳು ವಿಷ್ಣುವಿನ ಲಿಂಗಗಳಾಗಿವೆಯೆಂಬ ವಿಚಾರವು 'ತನ್ನಿಷ್ಠಸ್ಯ ಮೋಕ್ಷೋಪದೇಶಾತ್' 'ಅಸ್ಮಿನ್ನಸ್ಯ ಚ ತದ್ಯೋಗಂ ಶಾಸ್ತಿ' ಇತ್ಯಾದಿ ಸೂತ್ರಗಳಿಂದ ಸಿದ್ಧವಾಗಿದೆ. ಸಮಾಖ್ಯಾಪ್ರಮಾಣಕ್ಕಿಂತ ಲಿಂಗ ಹಾಗೂ ಪ್ರಕರಣಗಳು ಬಲಿಷ್ಠವಾಗಿರುವ ಕಾರಣ ವಿಷ್ಣುವೇ ದ್ಯುಭ್ವಾದ್ಯಾಯತನನಾಗಬೇಕು.

**नच समाख्या निरवकाशा । अन्तरधिकरणन्यायेन रुद्रादिशब्दानां 'शास्त्रदृष्ट्या' इति न्यायेन पिनाकित्वादिलिङ्गानां च विष्णौ सावकाशत्वात् ।**

ಉತ್ತರ - ರುದ್ರವಿಷಯಕವಾದ ಸಮಾಖ್ಯಾಪ್ರಮಾಣವು ನಿರವಕಾಶವಾದ ಪ್ರಯುಕ್ತ ಅತ್ಯಂತ ಬಲಿಷ್ಠವಾಗಿದೆಯೆಂದು ಹೇಳುತ್ತೇವೆ.

ಪ್ರಶ್ನೆ - ರುದ್ರವಿಷಯಕವಾದ ಸಮಾಖ್ಯಾಪ್ರಮಾಣವು ನಿರವಕಾಶವಾಗಿಲ್ಲ. ಏಕೆಂದರೆ ಅಂತರಧಿಕರಣದ ನ್ಯಾಯದಿಂದ ರುದ್ರಾದಿಶಬ್ದಗಳೆಲ್ಲವೂ ವಿಷ್ಣುವಿನಲ್ಲಿ ಸಾವಕಾಶವಾಗಿವೆ. ಅಂತಿಮಪ್ರಾಣಾಧಿಕರಣದಲ್ಲಿರುವ 'ಶಾಸ್ತ್ರದೃಷ್ಟ್ಯಾ' ಎಂಬ ಸೂತ್ರದಿಂದ ಪಿನಾಕಿತ್ವವೇ ಮೊದಲಾದ ಲಿಂಗಗಳೆಲ್ಲವೂ ಅಂತರ್ಯಾಮಿ ವಿವಕ್ಷೆಯಿಂದ ವಿಷ್ಣುವಿನಲ್ಲಿ ಸಾವಕಾಶವಾಗಿವೆ. ಆದ್ದರಿಂದ ವಿಷ್ಣುವಿಷಯಕವಾದ ಲಿಂಗಪ್ರಕರಣಗಳೇ ಪ್ರಬಲವಾಗಬೇಕಲ್ಲವೇ?

**नच ''स एषोऽन्तश्चरते बहुधा जायमानः'' इति जायमानत्वादिलिङ्ग-विरोधः । ''तमेवैकं जानथ आत्मानम्'' इत्यात्मश्रुत्या तद्बाधात् ।**

ಉತ್ತರ - 'ಸ ಏಷೋಽಂತಶ್ಚರತೇ ಬಹುಧಾ ಜಾಯಮಾನಃ' ಎಂಬ ಶ್ರುತಿಯಲ್ಲಿ ಜಾಯಮಾನತ್ವವೆಂಬ ಲಿಂಗವು ಕೇಳಿಸುತ್ತಿದೆ. ಈ ಲಿಂಗದಿಂದ ವಿಷ್ಣುವಿಷಯಕವಾದ ಲಿಂಗಾದಿಗಳು ಬಾಧಿತವಾಗುತ್ತವೆ. ವಿಷ್ಣುವಿನಲ್ಲಿ ಹುಟ್ಟುವಿಕೆಯನ್ನು ಹೇಳಲು ಸಾಧ್ಯವೇ ಇಲ್ಲ.

ಪ್ರಶ್ನೆ - 'ತಮೇವೈಕಂ ಜಾನಥ ಆತ್ಮಾನಮ್' ಎಂಬ ಆತ್ಮಶ್ರುತಿಯಿಂದ ಜಾಯಮಾನತ್ವವೆಂಬ ಲಿಂಗವೇ ಬಾಧಿತವಾಗುತ್ತದೆ. ಆದ್ದರಿಂದ ಜಾಯಮಾನತ್ವವೆಂಬ ಲಿಂಗವು ವಿಷ್ಣುವಿಷಯಕವಾದ ಲಿಂಗವನ್ನು ಬಾಧಿಸಲು ಹೇಗೆ ಸಾಧ್ಯ ?

**आत्मशब्दस्य विष्ण्वेकनिष्ठत्वं च ''गौणश्चेन्नात्मशब्दात् । साधारणशब्दविशेषात्'' इति सूत्रसिद्धम् ।**

ಆತ್ಮಶಬ್ದವು ವಿಷ್ಣುವಿನಲ್ಲಿ ಮಾತ್ರ ಬರುತ್ತದೆಂಬ ವಿಚಾರವನ್ನು 'ಗೌಣಶ್ಚೇನ್ನಾತ್ಮಶಬ್ದಾತ್, ಸಾಧಾರಣಶಬ್ದವಿಶೇಷಾತ್' ಇತ್ಯಾದಿ ಸೂತ್ರಗಳಿಂದ ಸಾಧಿಸಲಾಗಿದೆ. ಆದ್ದರಿಂದ ಆತ್ಮಶ್ರುತಿಗೆ ಸಾವಕಾಶತ್ವವನ್ನು ಹೇಳಲು ಸಾಧ್ಯವಿಲ್ಲ.

**जायमानत्वस्य ब्रह्मणि सावकाशत्वं च ''क्रियाप्रवर्तकत्वेन प्रादुर्भावो हरेर्जनिः'' इत्यनुव्याख्यान आनन्दमयाधिकरण उक्तत्वात्तत्र, ''कारणत्वेन चाकाशादिषु'' इत्यत्र च सिद्धमिति ।**

ಇನ್ನು ಜೀವಾದಿ ವಿಷಯಕವಾದ ಜಾಯಮಾನತ್ವವೆಂಬ ಲಿಂಗವು ವಿಷ್ಣುವಿನಲ್ಲೇ ಸಾವಕಾಶವಾಗಿದೆ. ಏಕೆಂದರೆ 'ಕ್ರಿಯಾಪ್ರವರ್ತಕತ್ವೇನ ಪ್ರಾದುರ್ಭಾವೋ ಹರೇರ್ಜನಿಃ' ಎಂಬ ಆನಂದಮಯಾಧಿಕರಣದ ಅನುವ್ಯಾಖ್ಯಾನದಲ್ಲಿ, 'ಭಗವಂತನ ಪ್ರಾದುರ್ಭಾವವೇ ಅವನ ಹುಟ್ಟುವಿಕೆಯೆನಿಸುತ್ತಿದೆ'. ಎಂದು ಸಮರ್ಥಿಸಿದ್ದಾರೆ. 'ಕಾರಣತ್ವೇನ ಚಾಕಾಶಾದಿಷು' ಎಂಬ

ಸೂತ್ರದಲ್ಲಿಯೂ ಸಹ ಭಗವಂತನ ಹುಟ್ಟುವಿಕೆಯೆಂಬ ಶಬ್ದಕ್ಕೆ ಪ್ರಾದುರ್ಭಾವ, ಅಭಿವ್ಯಕ್ತಿ ಮೊದಲಾದ ಅರ್ಥಗಳನ್ನೇ ಹೇಳಿದ್ದಾರೆ. ಆದ್ದರಿಂದ ಜಾಯಮಾನತ್ವವೆಂಬ ಲಿಂಗವು ಸಾವಕಾಶವಾಗಿದೆ. ಇಂತಹ ಲಿಂಗದಿಂದ ವಿಷ್ಣುವಿಷಯಕವಾದ ಲಿಂಗ, ಪ್ರಕರಣಾದಿಗಳಿಗೆ ಬಾಧದೋಷವನ್ನು ಹೇಳಲು ಸಾಧ್ಯವೇ ಇಲ್ಲ. ಹೀಗಿರುವಾಗ ಕೇವಲ ಸಮಾಖ್ಯಾಪ್ರಮಾಣಗಳ ಆಧಾರದಿಂದ ರುದ್ರಾದಿಗಳೇ ದ್ಯುಭ್ವಾದ್ಯಾಯತನರಾಗಿದ್ದಾರೆಂದು ಹೇಗೆ ಹೇಳುತ್ತೀರಿ?

**प्रकाशः –**

''द्युभ्वाद्यायतनत्वं रुद्रप्रधानजीववायूनामिति पूर्वः पक्षः'' इत्यादिटीकां विवृण्वन् समाख्यात्रयेण जायमानत्वरूपजीवलिङ्गेन च कोटिचतुष्टयपूर्वपक्षानाह – **द्युभ्वाद्यायतनं रुद्र इत्यादिना ।।**

**ವಿವರಣೆ** – ಪೂರ್ವಪಕ್ಷವನ್ನು ಪ್ರಾರಂಭಿಸುತ್ತಿದ್ದಾರೆ. 'ದ್ಯುಭ್ವಾದ್ಯಾಯತನತ್ವಂ ರುದ್ರಪ್ರಧಾನಜೀವವಾಯೂನಾಮಿತಿ ಪೂರ್ವಃ ಪಕ್ಷಃ' ದ್ಯುಭ್ವಾದ್ಯಾಯತನತ್ವವು ರುದ್ರ, ಪ್ರಕೃತಿ, ಜೀವ ಹಾಗೂ ವಾಯುದೇವತೆಯಲ್ಲಿ ಇರುತ್ತದೆಂದು ಪೂರ್ವಪಕ್ಷ. ಇತ್ಯಾದಿ ಟೀಕೆಯನ್ನು ವಿವರಿಸುವವರಾಗಿ ಮೂವರಲ್ಲಿರುವ ಸಮಾಖ್ಯಾಪ್ರಮಾಣದಿಂದ ಹಾಗೂ ಜಾಯಮಾನತ್ವವೆಂಬ ಲಿಂಗದಿಂದ ನಾಲ್ಕುಕೋಟಿಯುಳ್ಳ ಪೂರ್ವಪಕ್ಷವನ್ನು ಪ್ರತಿಪಾದಿಸುತ್ತಿದ್ದಾರೆ 'ದ್ಯುಭ್ವಾದ್ಯಾಯತನಂ ರುದ್ರಃ' ಇತ್ಯಾದಿ ವಾಕ್ಯದಿಂದ.

**प्रकाशः –यथासूत्रमयं निर्देशः । बहूपपादनत्वाज्जीवस्यान्ते निर्देशः । ''रुद्रो वाव'' इति वाक्यं रुद्रस्य द्युभ्वाद्यायतनत्वे । ''प्राणानाम्'' इति वाक्यं रुद्रस्य प्राणाधारत्वे ।**

ಗ್ರಂಥದಲ್ಲಿ ಸೂತ್ರದಲ್ಲಿ ನಿರ್ದೇಶವಿರುವಂತೆ 'ದ್ಯುಭ್ವಾದ್ಯಾಯತನಂ ರುದ್ರಃ' ಎಂದು ಹೇಳಿರುತ್ತಾರೆ. ಜೀವನನ್ನು ಕೊನೆಯಲ್ಲಿ ಏಕೆ ಸ್ವೀಕರಿಸಿದ್ದಾರೆಂದರೆ ಅವನ ವಿಷಯದಲ್ಲಿ ದ್ಯುಭ್ವಾದ್ಯಾಯತನತ್ವವನ್ನು ಸಮರ್ಥಿಸಲು ಬಹಳ ಉಪಪಾದನೆಯನ್ನು ಮಾಡಬೇಕು. ಅದಕ್ಕೋಸ್ಕರ ಸೂಚೀಕಟಾಹ ನ್ಯಾಯದಂತೆ ಕೊನೆಯಲ್ಲಿ ಜೀವವಿಷಯಕ ಪೂರ್ವಪಕ್ಷವನ್ನು ಮಾಡಿದ್ದಾರೆ.

'ರುದ್ರೋವಾವ' ಎಂಬ ವಾಕ್ಯವು ರುದ್ರನು ದ್ಯುಭ್ವಾದ್ಯಾಯತನನಾಗಿದ್ದಾನೆನ್ನಲು; 'ಪ್ರಾಣಾನಾಂ ಗ್ರಂಥಿರಸಿ' ಎಂಬ ವಾಕ್ಯವು ರುದ್ರನು ಪ್ರಾಣನಿಗೆ ಆಧಾರನಾಗಿದ್ದಾನೆನ್ನಲು ಪ್ರಮಾಣವಾಗಿದೆಯೆಂದರ್ಥ.

**प्रकाशः** – टीकायां भाष्ये साक्षादुपात्तस्य प्राणानामिति वाक्यस्य पूर्वमादिपदोपात्तस्यान्यत्र साक्षादुक्तस्य तु पश्चादुक्तावपि विषयवाक्ये क्रमोपात्त-

लिङ्गोपपादनसौकर्याय ''रुद्रो वाव'' इत्यस्यैवात्र पूर्वमुक्तिः ।

ಟೀಕೆಯಲ್ಲಿ 'ಪ್ರಾಣಾನಾಂ ಗ್ರಂಥಿರಸಿ' ಎಂಬ ವಾಕ್ಯವನ್ನು ಮೊದಲು ಉಲ್ಲೇಖಿಸಿದ್ದಾರೆ. 'ರುದ್ರೋ ವಾವ ಲೋಕಾಧಾರಃ' ಎಂಬುದನ್ನು ಅನಂತರ ಉಲ್ಲೇಖಿಸಿದ್ದಾರೆ. ಏಕೆಂದರೆ ಭಾಷ್ಯದಲ್ಲಿ 'ಪ್ರಾಣಾನಾಂ ಗ್ರಂಥಿರಸಿ' ಎಂಬ ವಾಕ್ಯವನ್ನು ಮೊದಲು ಉಲ್ಲೇಖ ಮಾಡಿ, ಆದಿಪದದಿಂದ 'ರುದ್ರೋ ವಾವ' ಎಂಬ ವಾಕ್ಯವನ್ನು ಸಂಗ್ರಹಿಸಿದ್ದಾರೆ. ನ್ಯಾಯವಿವರಣದಲ್ಲಿ ಭಾಷ್ಯದಲ್ಲಿ ಆದಿಪದೋಪಾತ್ತವಾದ 'ರುದ್ರೋ ವಾವ' ಎಂಬುದನ್ನು ಉಲ್ಲೇಖಿಸಿ ಆದಿಪದದಿಂದ 'ಪ್ರಾಣಾನಾಂ ಗ್ರಂಥಿರಸಿ' ಎಂಬ ವಾಕ್ಯವನ್ನು ವಿವಕ್ಷಿಸಿದ್ದಾರೆ. ಟೀಕಾರಾಯರು ಭಾಷ್ಯದ ಮಾತನ್ನು ಅನುಸರಿಸಿ ಮೊದಲು 'ಪ್ರಾಣಾನಾಂ ಗ್ರಂಥಿರಸಿ' ಎಂಬ ವಾಕ್ಯವನ್ನೇ ಉಲ್ಲೇಖಿಸಿ ಅನಂತರ ಆದಿಪದೋಪಾತ್ತವಾದ್ದನ್ನು ಉಲ್ಲೇಖಿಸಿರುತ್ತಾರೆ. ಆದರೆ ಗ್ರಂಥಕಾರರು ವಿಪರೀತವಾಗಿ ಮೊದಲು 'ರುದ್ರೋ ವಾವ ಲೋಕಾಧಾರಃ' ಎಂಬುದನ್ನು ಉಲ್ಲೇಖಿಸಿ, ಅನಂತರ 'ಪ್ರಾಣಾನಾಂ ಗ್ರಂಥಿರಸಿ' ಎಂಬ ವಾಕ್ಯವನ್ನು ಉಲ್ಲೇಖಿಸಿದ್ದಾರೆ. ಕಾರಣವೇನೆಂದರೆ ವಿಷಯವಾಕ್ಯದಲ್ಲಿ ಮೊದಲು ದ್ಯುಭ್ವಾದ್ಯಾಯತನತ್ವವೆಂಬ ಲಿಂಗವನ್ನು ಹೇಳಿ, ಅನಂತರ ಪ್ರಾಣಾಧಾರತ್ವ ಲಿಂಗವನ್ನು ಹೇಳಲಾಗಿದೆ. ಅದಕ್ಕನುಸಾರಿಯಾಗಿ ಗ್ರಂಥಕಾರರು ಮೊದಲು 'ರುದ್ರೋ ವಾವ ಲೋಕಾಧಾರಃ' ಎಂಬುದನ್ನು ಉಲ್ಲೇಖಿಸಿ, ಅನಂತರ 'ಪ್ರಾಣಾನಾಂ ಗ್ರಂಥಿರಸಿ' ಎಂಬುದನ್ನು ಉಲ್ಲೇಖಿಸಿದ್ದಾರೆ. ಆದ್ದರಿಂದ ವಿವಕ್ಷಾಭೇದದಿಂದ ಟೀಕಾರಾಯರ ಹಾಗೂ ಗ್ರಂಥಕಾರರ ಅಭಿಪ್ರಾಯಗಳು ಸಮಂಜಸವಾಗಿವೆ.

**प्रकाशः** – तावतैव पूर्तौ द्वितीयवाक्यस्याप्युक्तिर्भाष्योपात्तत्वाद्वा तत्र बहुरुद्रश्रुतिलिङ्गसत्त्वेन विष्णुसमाख्यातः प्राबल्योपपादनाय वेति ज्ञेयम् ।

'ರುದ್ರೋ ವಾವ ಲೋಕಾಧಾರಃ' ಎಂಬುದನ್ನು ಉಲ್ಲೇಖಿಸಿದರೆ ಸಾಕು, 'ಪ್ರಾಣಾನಾಂ ಗ್ರಂಥಿರಸಿ' ಎಂಬ ವಾಕ್ಯವನ್ನೇಕೆ ಉಲ್ಲೇಖಿಸಬೇಕು ? ಎಂದರೆ ರುದ್ರನ ವಿಷಯದಲ್ಲಿ ಹೆಚ್ಚಾದ ಲಿಂಗಗಳು ಇರುವುದು ಪ್ರಾಣಾಧಾರತ್ವವನ್ನು ಹೇಳುವ ವಾಕ್ಯದಲ್ಲೇ; ಹೊರತು ಲೋಕಾಧಾರತ್ವವನ್ನು ಹೇಳುವ ವಾಕ್ಯದಲ್ಲಲ್ಲ. ಈ ಕಾರಣದಿಂದ ವಿಷ್ಣುಸಮಾಖ್ಯಾಪ್ರಮಾಣಕ್ಕಿಂತ ರುದ್ರನ ಸಮಾಖ್ಯಾಪ್ರಮಾಣವು ಪ್ರಬಲವಾಗಿದೆಯೆಂದು ಸಮರ್ಥಿಸುವುದಕ್ಕಾಗಿ ಎರಡನ್ನೂ ಉಲ್ಲೇಖಿಸಬೇಕು.

**प्रकाशः** – तत्र रुद्रेति सम्बुद्ध्यन्तपाठः साधुः । द्वितीये ''तदभिध्यानादेवतु'' इत्वत्यत्र टीकायां ''रुद्रत्वं प्राणानामाश्रयोऽन्तकश्चासि । स त्वं मामाविश'' इति व्याख्यानात् ।

ಶ್ರುತಿಯಲ್ಲಿರುವ ರುದ್ರಶಬ್ದವು ಸಂಬುದ್ಧ್ಯಂತವಾದುದು. ಇಂತಹ ರುದ್ರಶಬ್ದವೇ ಸಾಧುವಾಗಿವೆ. ಏಕೆಂದರೆ ಎರಡನೇ ಅಧ್ಯಾಯದ 'ತದಭಿಧ್ಯಾನದೇವತು' ಎಂಬ ಸೂತ್ರಭಾಷ್ಯದ ಟೀಕೆಯಲ್ಲಿ 'ರುದ್ರತ್ವಂ ಪ್ರಾಣಾನಾಮಾಶ್ರಯೋऽಂತಕಶ್ಚಾಸಿ, ಸ ತ್ವಂ ಮಾಮಾವಿಶ' ಎಂದು ವ್ಯಾಖ್ಯಾನಿಸಿದ್ದಾರೆ. ಇಲ್ಲಿ ರುದ್ರಶಬ್ದವನ್ನು ಸಂಬುದ್ಧ್ಯಂತವಾಗಿ ವ್ಯಾಖ್ಯಾನಿಸಿದ್ದರಿಂದ ಪ್ರಕೃತ 'ಪ್ರಾಣಾನಾಂ' ಎಂಬ ಶ್ರುತಿಯಲ್ಲಿರುವ 'ರುದ್ರ' ಶಬ್ದವೂ ಸಂಬುದ್ಧ್ಯಂತವೇ ಆಗುತ್ತದೆ.

**प्रकाशः** – तद्भूतभवदादिकम् आकाशशब्दिते प्रधाने ओतमित्यर्थः । तच्छब्दपरामर्शद्योतनाय भूतमित्यादिपूर्ववाक्योक्तिः ।

ಹಿಂದಿನ ಮುಂದಿನ ಪದಾರ್ಥಗಳೆಲ್ಲವೂ ಆಕಾಶವೆನಿಸಿದ ಪ್ರಕೃತಿಯಲ್ಲಿ ಆಶ್ರಯಿಸಿವೆ ಎಂಬುದಾಗಿ 'ಭೂತಂ ಚ ಭವಚ್ಚ' ಎಂಬ ಶ್ರುತಿಗೆ ಅರ್ಥವನ್ನು ತಿಳಿಯಬೇಕು. 'ತದೋತಂ' ಎಂಬಲ್ಲಿರುವ 'ತತ್' ಶಬ್ದದಿಂದ ಯಾವುದನ್ನು ಪರಾಮರ್ಶ ಮಾಡಬೇಕೆಂದು ತಿಳಿಸುವುದಕ್ಕಾಗಿ 'ಭೂತಂ ಚ ಭವಚ್ಚ' ಎಂಬ ಹಿಂದಿನ ಶ್ರುತಿವಾಕ್ಯವನ್ನು ಗ್ರಂಥಕಾರರು ಹೇಳಿದ್ದಾರೆ.

**प्रकाशः** – आकाशशब्दस्याक्षरनये प्रधानपरत्वं व्युदस्य चित्प्रकृतिपरत्वोक्तावपीह पूर्वपक्षी तत्रत्यपूर्वपक्षन्यायेन प्रधानपरत्वमेव मन्यत इति यथाटीकमत्र प्रधानपरतया भूतमित्यादिवाक्योक्तिर्युक्ता ।

ವಾಸ್ತವಿಕವಾಗಿ ಅಕ್ಷರಾಧಿಕರಣದಲ್ಲಿ 'ಆಕಾಶ' ಶಬ್ದದಿಂದ ಜಡವಾದ ಪ್ರಕೃತಿಯು ಪ್ರತಿಪಾದ್ಯವಾಗುವುದಿಲ್ಲ. ಲಕ್ಷ್ಮೀದೇವಿಯೇ ಪ್ರತಿಪಾದ್ಯಳಾಗುತ್ತಾಳೆಂದು ಸಮರ್ಥಿಸಿದ್ದಾರೆ. ಆದರೆ ಈ ಅಧಿಕರಣದ ಪೂರ್ವಪಕ್ಷಿಯು, ಆ ಅಧಿಕರಣದ ಪೂರ್ವಪಕ್ಷ ನ್ಯಾಯದಂತೆ ಜಡವಾದ ಪ್ರಧಾನಪರತ್ವವನ್ನೇ ಅಂಗೀಕರಿಸಿದ್ದಾನೆ. ಆದ್ದರಿಂದ ಟೀಕೆಯಲ್ಲಿ ಹೇಳಿದಂತೆ ಗ್ರಂಥಕಾರರೂ ಸಹ ಆಕಾಶಶಬ್ದಕ್ಕೆ ಜಡಪ್ರಕೃತಿಯೆಂದು ವ್ಯಾಖ್ಯಾನಿಸಿ ಪೂರ್ವಪಕ್ಷವನ್ನು ಮಾಡುತ್ತಿದ್ದಾರೆ. ಇದು ಅಯುಕ್ತವಲ್ಲ.

**प्रकाशः** – **सूत्रेणेति** ।। स्यूतम् अस्मिन् जगत् इति व्युत्पत्त्या जगदाधारेण वायुना संदृब्धानि सङ्गतानि । तदाधारतयाऽवस्थितानीत्यर्थः ।

'ವಾಯುನಾ ವೈ' ಎಂಬ ಶ್ರುತಿಯಲ್ಲಿರುವ 'ಸೂತ್ರ' ಶಬ್ದಕ್ಕೆ 'ವಾಯು' ಎಂದರ್ಥ. 'ಸ್ಯೂತಮ್ ಅಸ್ಮಿನ್ ಜಗತ್' ಎಂಬ ವ್ಯುತ್ಪತ್ತಿಯಿಂದ ವಾಯುದೇವನಲ್ಲಿ ಸಮಸ್ತ ಜಗತ್ತು ಆಶ್ರಿತವಾಗಿದೆಯೆಂದರ್ಥ. ಅಂದರೆ ಸೂತ್ರೇಣ = ಸಮಸ್ತ ಜಗತ್ತಿಗೆ ಆಧಾರನಾದ ವಾಯುದೇವನಿಂದ, ಸಂದೃಬ್ಧಾನಿ = ಸಂಗತವಾಗಿವೆ ಎಂದರೆ ಅವನ ಆಧಾರದಲ್ಲಿ ಇವೆ ಎಂದು ಶ್ರುತಿಯು ಹೇಳುತ್ತಿದೆ. ಇದರಿಂದ ದ್ಯುಭ್ವಾದ್ಯಾಯತನತ್ವವನ್ನು ವಾಯುದೇವನಲ್ಲಿ ಹೇಳಿದಂತಾಗುತ್ತದೆ.

**प्रकाशः** – अत्र टीकायां ''विष्णोर्द्युभ्वाद्यायतनत्वप्रसिद्धावपि'' इत्यादिना विष्णुसमाख्यामाशङ्क्य बहुधाजन्मबाध उक्तः । तत्रान्यत्रोक्तश्रुतिलिङ्गबाहुल्येन प्रबलरुद्रसमाख्याबाधोऽपि वाच्य इति भावेन शङ्कोत्तरे वक्ति – **नच लोकाश्च लोकिनश्चेति** ।।

ಪ್ರಕೃತ ಟೀಕೆಯಲ್ಲಿ 'ವಿಷ್ಣೋರ್ದ್ಯುಭ್ವಾದ್ಯಾಯತನತ್ವಪ್ರಸಿದ್ಧಾವಪಿ' ಇತ್ಯಾದಿ ವಾಕ್ಯದಿಂದ ವಿಷ್ಣು ವಿಷಯದಲ್ಲಿರುವ ಸಮಾಖ್ಯಾಪ್ರಮಾಣಕ್ಕೆ 'ಬಹುಧಾ ಜಾಯಮಾನತ್ವ' ಎಂಬ (ಅನೇಕಬಾರಿ ಹುಟ್ಟುವಿಕೆಯೆಂಬ) ಲಿಂಗದಿಂದ ಬಾಧವು ಬರುತ್ತದೆಂದು ಹೇಳಿದ್ದಾರೆ. ಮತ್ತು ನ್ಯಾಯವಿವರಣದಲ್ಲಿ

ಹೇಳಲ್ಪಟ್ಟ ರುದ್ರನ ವಿಷಯದಲ್ಲಿರುವ ಅನೇಕ ಶ್ರುತಿಲಿಂಗಗಳ ಬಾಹುಲ್ಯದಿಂದ ರುದ್ರನ ವಿಷಯದಲ್ಲಿರುವ ಸಮಾಖ್ಯಾಪ್ರಮಾಣವೇ ಬಲಿಷ್ಠವಾಗುತ್ತದೆ. ಇದರಿಂದಲೂ ವಿಷ್ಣುವಿಷಯದಲ್ಲಿರುವ ಸಮಾಖ್ಯಾಪ್ರಮಾಣವು ಬಾಧಿತವಾಗುತ್ತದೆಂಬ ಅಭಿಪ್ರಾಯದಿಂದ ಶಂಕೆಯನ್ನು ಹಾಗೂ ಉತ್ತರವನ್ನು 'ನಚ ಲೋಕಾಶ್ಚ ಲೋಕಿನಶ್ಚ' ಎಂಬ ವಾಕ್ಯದಿಂದ ಹೇಳುತ್ತಿದ್ದಾರೆ.

**प्रकाशः** – ''सर्वेवा ते प्राणाश्च प्राणिनश्च देवाश्च दिव्यानि च लोकाश्च लोकिनश्चालोकाश्चालोकिनश्च विष्णावेवोताश्च प्रोताश्च'' इति विष्णुसमाख्याऽस्तीत्यर्थः । तथाच तद्बलाद्विष्णुविषयत्वमपीति भावः । **प्राणाः** इन्द्रियाणि । **प्राणिनो** देहिनः । दिवि भवानि **दिव्यानि** कल्पतरुप्रभृतीनि वस्तूनि । **लोकाः** भूरादयः । तदभिमानिनो **लोकिनः** । **अलोका** वैकुण्ठादयः । **अलोकिनस्तद्गता** मुक्ता इत्यर्थः ।

'ಸರ್ವೇ ವಾ ತೇ ಪ್ರಾಣಾಶ್ಚ ಪ್ರಾಣಿನಶ್ಚ ದೇವಾಶ್ಚ ದಿವ್ಯಾನಿ ಚ ಲೋಕಾಶ್ಚ ಲೋಕಿನಶ್ಚಾಲೋಕಾಶ್ಚ ಅಲೋಕಿನಶ್ಚ ವಿಷ್ಣಾವೇವೋತಾಶ್ಚ ಪ್ರೋತಾಶ್ಚ' ಎಂಬ ಶ್ರುತಿಯು ವಿಷ್ಣುವೇ ಲೋಕಾಧಾರನಾಗಿದ್ದಾನೆನ್ನಲು ಸಮಾಖ್ಯಾಪ್ರಮಾಣವಾಗಿದೆ. ಇದರ ಬಲದಿಂದ 'ಯಸ್ಮಿನ್‌ದ್ಯೌಃ' ಎಂಬ ಶ್ರುತಿಯು ವಿಷ್ಣುವಿಷಯಕ-ವಾಗುತ್ತದೆಂದು ಪ್ರಶ್ನಿಸುತ್ತಿದ್ದಾರೆ. ಶ್ರುತಿಯಲ್ಲಿರುವ ಕೆಲವು ಪದಗಳ ಅರ್ಥ ಹೀಗಿದೆ - ಪ್ರಾಣಾಃ = ಇಂದ್ರಿಯಗಳು, ಪ್ರಾಣಿನಃ = ದೇಹವುಳ್ಳವರು, ದಿವ್ಯಾನಿ = ಸ್ವರ್ಗಲೋಕದಲ್ಲಿ ಇರುವ ಕಲ್ಪತರು ಮೊದಲಾದ ವಸ್ತುಗಳು, ಲೋಕಾಃ = ಭೂರ್ಲೋಕಾದಿಗಳು, ಲೋಕಿನಃ = ಭೂರ್ಲೋಕಾದಿಗಳ ಅಭಿಮಾನಿದೇವತೆಗಳು, ಅಲೋಕಾಃ = ವೈಕುಂಠಾದಿಗಳು, ಅಲೋಕಿನಃ = ವೈಕುಂಠದಲ್ಲಿರುವ ಮುಕ್ತರು.

**प्रकाशः** – उक्तमिति ।। एतत्पादीयाधिकरणपूर्वपक्षन्यायसङ्ग्रह उक्तमित्यर्थः । टीकावाक्यविरोधमाशङ्क्याह – विष्णाविति ।। जायमानत्वेति ।। एतेन टीकायां बहुधा जन्मेत्युक्तावपि जन्मरूपलिङ्ग एव तात्पर्यम् ।

'ಉಕ್ತಮ್' ಎಂದರೆ ಈ ಪಾದದ ಎಲ್ಲಾ ಅಧಿಕರಣಗಳ ಪೂರ್ವಪಕ್ಷ ನ್ಯಾಯದ ಸಂಗ್ರಹವು ಹೇಳಲ್ಪಟ್ಟಿದೆ ಎಂದರ್ಥ. ಟೀಕಾವಾಕ್ಯದ ವಿರೋಧವನ್ನು ಆಶಂಕಿಸುತ್ತಿದ್ದಾರೆ 'ವಿಷ್ಣು' ಎಂಬ ವಾಕ್ಯದಿಂದ. 'ಜಾಯಮಾನತ್ವ' ಎಂದು ಹೇಳಿದ್ದರಿಂದ ಟೀಕೆಯಲ್ಲಿ ಬಹುಧಾ (ಅನೇಕ ಬಾರಿ) ಜನ್ಮವನ್ನು ಹೇಳಿದ್ದರೂ ಸಹ ಜನ್ಮವೆಂಬ ಲಿಂಗದಲ್ಲಿಯೇ ತಾತ್ಪರ್ಯವೆಂದು ತಿಳಿಯಬೇಕು.

**प्रकाशः** – अनेकजडाद्यात्मना बहुजननस्येक्षतिनये निरस्तत्वाज्जन्मलिङ्गेनैव विवक्षितसिद्धेश्च बहुधेत्युक्तेरभ्युच्चयत्वेनोपपत्तेरिति भावः ।

ಅನೇಕ ಬಾರಿ ಜಡ ಸ್ವರೂಪದಲ್ಲಿ ಹುಟ್ಟುವಿಕೆಯನ್ನು ಈಕ್ಷತ್ಯಧಿಕರಣದಲ್ಲಿ ನಿರಾಸ ಮಾಡಲಾಗಿದೆ. ಮತ್ತು ಜನ್ಮವೆಂಬ ಒಂದೇ ಲಿಂಗದಿಂದಲೇ ವಿಷ್ಣುವಿಷಯದಲ್ಲಿರುವ ಸಮಾಖ್ಯಾಶ್ರುತಿಗೆ ಬಾಧವನ್ನು ಹೇಳಲು ಬರುವಾಗ 'ಬಹುಧಾ' ಎಂದು ಹೇಳಿದ್ದು ಕೇವಲ ಅಭ್ಯುಚ್ಚಯಯುಕ್ತಿಗೋಸ್ಕರವೆಂದು ತಿಳಿಯಬೇಕು.

ದ್ಯುಭ್ವಾದ್ಯಧಿಕರಣ (೧-೩-೧)

**प्रकाशः** – एतेन रुद्रसमाख्यायाः प्राबल्येन विष्णुसमाख्यया प्रतिहत्यभावव-द्वाय्वादिसमाख्याया जायमानत्वादिलिङ्गबलेनाप्रतिहतत्वं टीकारीत्योपपाद्यमित्युक्तं भवति । वक्ष्यति चैवं पूर्वपक्षान्तरमपीत्यादि । लिङ्गनिरवकाशत्वं चाग्रे व्यक्तम् ।

ಹೀಗೆ ಹೇಳಿದ್ದರಿಂದ ರುದ್ರನ ವಿಷಯದಲ್ಲಿರುವ ಸಮಾಖ್ಯಾಪ್ರಮಾಣವು ಪ್ರಬಲವಾಗಿದೆ. ಇದಕ್ಕೆ ವಿಷ್ಣುವಿಷಯದಲ್ಲಿರುವ ಸಮಾಖ್ಯಾಪ್ರಮಾಣದಿಂದ ಬಾಧವನ್ನು ಹೇಳಲಾಗದು. ಆದರೆ ವಾಯು ಮೊದಲಾದವರ ವಿಷಯದಲ್ಲಿರುವ ಸಮಾಖ್ಯಾಪ್ರಮಾಣಕ್ಕೆ ಪ್ರಾಬಲ್ಯವು ಇರುವುದಿಲ್ಲವಲ್ಲವೇ? ಎಂದು ಪ್ರಶ್ನಿಸಬಾರದು. ಅಲ್ಲಿಯೂ ಸಹ ಜಾಯಮಾನತ್ವ ಮೊದಲಾದ ಲಿಂಗಗಳ ಬಲದಿಂದ ಪ್ರಾಬಲ್ಯವನ್ನು ಸಮರ್ಥಿಸಿ ವಿಷ್ಣುವಿಷಯಕವಾದ ಸಮಾಖ್ಯಾಪ್ರಮಾಣವನ್ನೇ ವಾಯ್ವಾದಿ ಸಮಾಖ್ಯಾಪ್ರಮಾಣಗಳು ಬಾಧಿಸುತ್ತವೆ ಹೊರತು, ವಿಷ್ಣುಸಮಾಖ್ಯಾದಿಂದ ವಾಯ್ವಾದಿಸಮಾಖ್ಯಾಪ್ರಮಾಣಗಳಿಗೆ ಬಾಧ ಬರುವುದಿಲ್ಲವೆಂದು ಟೀಕೆಯ ಪ್ರಕಾರ ಸಮರ್ಥಿಸಿದಂತಾಯಿತು. ಮತ್ತು ಹೀಗೆಯೇ ಮತ್ತೊಂದು ಪೂರ್ವಪಕ್ಷವನ್ನೂ ಮುಂದೆ ಹೇಳುವವರಿದ್ದಾರೆ. ವಾಯು ಮೊದಲಾದವರ ವಿಷಯದಲ್ಲಿರುವ ಲಿಂಗಕ್ಕೆ ನಿರವಕಾಶತ್ವವೂ ಸಹ ಮುಂದೆಯೇ ಸ್ಪಷ್ಟವಾಗುತ್ತದೆ.

**प्रकाशः** – नन्वेवं टीकायां ''विष्णोर्द्युभ्वाद्यायतनत्वप्रसिद्धावपि'' इत्यादिना समाख्याबलेन विष्णोर्द्युभ्वाद्यायतनत्वमाशङ्क्य जायमानत्वलिङ्गेन तद्बाधो न वाच्यः ।

ಶಂಕಾ - ಜಾಯಮಾನತ್ವವೆಂಬ ಲಿಂಗವನ್ನು ಯಾವ ಸಂದರ್ಭದಲ್ಲಿ ಹೇಗೆ ಉಪಯೋಗಿಸಿಕೊಳ್ಳಬೇಕೆಂಬುದನ್ನು ವಿಚಾರ ಮಾಡಬೇಕು. ಗ್ರಂಥಕಾರರು ತಮ್ಮ ಅಭಿಪ್ರಾಯವನ್ನು ಹೀಗೆ ಹೇಳಿದ್ದಾರೆ - ರುದ್ರಸಮಾಖ್ಯಾ ಪ್ರಮಾಣವು ಶ್ರುತಿಲಿಂಗಾದಿಗಳಿಂದ ಸಹಿತವಾದ್ದರಿಂದ ಸ್ವತಃ ಬಲಿಷ್ಠವಾಗಿದೆ. ಇಂತಹ ಬಲಿಷ್ಠವಾದ ರುದ್ರಸಮಾಖ್ಯಾಪ್ರಮಾಣದಿಂದ ವಿಷ್ಣುಸಮಾಖ್ಯಾಪ್ರಮಾಣವು ಬಾಧಿತವಾಗುತ್ತದೆ. ಆದರೆ ವಾಯು, ಪ್ರಕೃತಿ ಮೊದಲಾದವರ ವಿಷಯದಲ್ಲಿರುವ ಸಮಾಖ್ಯಾಪ್ರಮಾಣಕ್ಕೆ ಶ್ರುತಿ, ಲಿಂಗಾದಿಗಳಿಲ್ಲದ ಕಾರಣ ಪ್ರಾಬಲ್ಯವಿರುವುದಿಲ್ಲ. ಆದ್ದರಿಂದ ಜಾಯಮಾನತ್ವವೆಂಬ ಲಿಂಗವನ್ನು ವಾಯು ಮೊದಲಾದವರ ಸಮಾಖ್ಯಾಪ್ರಮಾಣ ವಿಷಯದಲ್ಲಿ ಆಧಾರವನ್ನಾಗಿ ವಿವಕ್ಷಿಸಬೇಕು. ಆವಾಗ ಅವುಗಳು ಬಲಿಷ್ಠವಾಗುತ್ತವೆ. ಅಂತಹ ವಾಯು ಮೊದಲಾದವರ ಸಮಾಖ್ಯಾಪ್ರಮಾಣದಿಂದಲೂ ಸಹ ವಿಷ್ಣುವಿಷಯಕವಾದ ಸಮಾಖ್ಯಾಪ್ರಮಾಣವು ಬಾಧಿತವಾಗುತ್ತದೆ.

ಆದರೆ ಟೀಕೆಯಲ್ಲಿ 'ವಿಷ್ಣೋಃ ದ್ಯುಭ್ವಾದ್ಯಾಯತನತ್ವಪ್ರಸಿದ್ಧಾವಪಿ' ಇತ್ಯಾದಿ ವಾಕ್ಯದಿಂದ ಸಮಾಖ್ಯಾಪ್ರಮಾಣದ ಆಧಾರದಿಂದ ವಿಷ್ಣುವು ದ್ಯುಭ್ವಾದ್ಯಾಯತನನಾಗಿದ್ದಾನೆಂದು ಆಶಂಕಿಸಿ ಜಾಯಮಾನತ್ವಲಿಂಗದಿಂದ ಬಾಧವನ್ನು ಹೇಳಿರುತ್ತಾರೆ. ಆದರೆ ಹೀಗೆ ಹೇಳುವುದು ಬೇಡ.

ಪರಿಪೂರ್ಣಚಂದ್ರಿಕಾ

**प्रकाशः** – अपि तूक्तदिशा प्रबलया रुद्रसमाख्यया विष्णुसमाख्यायां दूरीकृतायामप्रतिहतया वाय्वादिसमाख्यया वाय्वादिप्राप्तिरित्येव समाधानं वाच्यम् ।

ಹೊರತಾಗಿ ಹಿಂದೆ ಹೇಳಿದ ಪ್ರಕಾರ ಶ್ರುತಿಲಿಂಗಾದಿಗಳಿಂದ ರುದ್ರಸಮಾಖ್ಯಾಪ್ರಮಾಣವು ಅತ್ಯಂತ ಬಲಿಷ್ಠವಾಗಿದೆ. ಇದರಿಂದ ವಿಷ್ಣುಸಮಾಖ್ಯಾಪ್ರಮಾಣವು ಬಾಧಿತವಾಗುತ್ತದೆ. ಆವಾಗ ಯಾವುದೇ ಪ್ರತಿಬಂಧಕವಿಲ್ಲದ ಕಾರಣ ವಾಯು, ಪ್ರಕೃತಿ ಮೊದಲಾದವರ ವಿಷಯದಲ್ಲಿರುವ ಸಮಾಖ್ಯಾಪ್ರಮಾಣವು ಬಲಿಷ್ಠವಾಗುತ್ತದೆ. ಅಂತಹ ಸಮಾಖ್ಯಾಪ್ರಮಾಣಗಳಿಂದ ವಾಯು, ಪ್ರಕೃತಿ ಮೊದಲಾದವರೂ ಸಹ ದ್ಯುಭ್ವಾದ್ಯಾಯತನರಾಗುತ್ತಾರೆಂಬ ಸಮಾಧಾನವನ್ನು ಹೇಳಬಹುದು. ಹೀಗಿರುವಾಗ ಜಾಯಮಾನತ್ವವೆಂಬ ಲಿಂಗವನ್ನು ಆಶ್ರಯಿಸುವ ಅವಶ್ಯಕತೆ ಏನಿದೆ?

**प्रकाशः** – नच विष्णुसमाख्येव वाय्वादिसमाख्याऽपि बलवद्रुद्रसमाख्यया व्युदस्ता सती नात्र वाय्वादिप्रापिकेति वाच्यम् ।

ವಿಷ್ಣು ಸಮಾಖ್ಯಾಪ್ರಮಾಣವು ಪ್ರಬಲವಾದ ರುದ್ರ ಸಮಾಖ್ಯಾಪ್ರಮಾಣದಿಂದ ಬಾಧಿತವಾಗುವಂತೆ ವಾಯು, ಪ್ರಕೃತಿ ಮೊದಲಾದವರ ವಿಷಯದಲ್ಲಿರುವ ಸಮಾಖ್ಯಾಪ್ರಮಾಣಗಳೂ ಸಹ ಬಲಿಷ್ಠವಾದ ರುದ್ರ ಸಮಾಖ್ಯಾಪ್ರಮಾಣದಿಂದಲೇ ಬಾಧಿತವಾಗುತ್ತಲ್ಲವೇ? ಹೀಗಿರುವಾಗ ವಾಯು ಮೊದಲಾದವರು ಹೇಗೆ ಪ್ರಾಪ್ತರಾಗುತ್ತಾರೆ? ಎಂದು ಪ್ರಶ್ನಿಸಬಾರದು.

**प्रकाशः** – तथात्वे जन्मलिङ्गेन विष्णुसमाख्याबाधपक्षेऽपि तेनाप्रतिहतबलवत्या रुद्रसमाख्यया वाय्वादिसमाख्याबाधेन तयोरत्राप्राप्तेः ।

ಹಾಗೇನಾದರೂ ಗ್ರಂಥಕಾರರು ಹೇಳಿದ ಪಕ್ಷದಲ್ಲಿಯೂ ಅಂದರೆ ಜಾಯಮಾನತ್ವವೆಂಬ ಲಿಂಗದಿಂದ ವಿಷ್ಣು ಸಮಾಖ್ಯಾಪ್ರಮಾಣವು ಬಾಧಿತವಾಗುತ್ತದೆಂಬ ಪಕ್ಷದಲ್ಲಿಯೂ ಸಹ ಯಾವುದೇ ಪ್ರತಿಬಂಧಕವಿಲ್ಲದ ಬಲಿಷ್ಠವಾದ ರುದ್ರ ಸಮಾಖ್ಯಾಪ್ರಮಾಣದಿಂದ ವಾಯು ಮೊದಲಾದವರ ವಿಷಯದಲ್ಲಿರುವ ಸಮಾಖ್ಯಾಪ್ರಮಾಣಗಳೂ ಸಹ ಬಾಧಿತವಾಗುತ್ತವೆ. ಆದ್ದರಿಂದ ಗ್ರಂಥಕಾರರ ಪಕ್ಷದಲ್ಲಿಯೂ ವಾಯು ಮೊದಲಾದವರು ದ್ಯುಭ್ವಾದ್ಯಾಯತನರಾಗುತ್ತಾರೆಂಬ ಸಮರ್ಥನೆಯು ಕಷ್ಟಕರವಾಗುತ್ತದೆ.

**प्रकाशः** – तस्माद्रुद्रसमाख्याया अपि सावकाशत्वोपपादनेन रुद्रादिसमाख्यात्रयस्यापि विष्णुसमाख्यया समाख्यात्वेन तुल्यबलत्वाद् रुद्रादिसमाख्यास्वन्यतमयाऽपि विष्णुसमाख्यानिरासायोगात् जन्मरूपलिङ्गेन विष्णौ निरवकाशेन बाधितया विष्णुसमाख्ययाऽत्र विष्णोर्द्युभ्वाद्यायतनत्वाप्राप्तौ रुद्रादौ योग्येन जन्मलिङ्गेन बाधादविशेषितबलाबलेन समाख्यात्रयेण तुल्यबलेन रुद्रादिकोटित्रयस्य जन्मलिङ्गेन जीवमात्रासाधारणेन जीवकोटेश्च

द्युभ्वाद्यायतनत्वप्राप्तिरिति वक्तव्यम् । एवञ्च टीकायां जन्मलिङ्गेन विष्णुसमाख्याबाधोक्तिः स्वरसा भवतीति चेत् ।

ಆದ್ದರಿಂದ ಅನಿವಾರ್ಯವಾಗಿ ರುದ್ರ ಸಮಾಖ್ಯಾಪ್ರಮಾಣಕ್ಕೂ ಸಹ ಸ್ವಲ್ಪ ಸಾವಕಾಶತ್ವವನ್ನು ಒಪ್ಪಬೇಕಾಗುತ್ತದೆ. ಅಂದರೆ ಶ್ರುತಿ, ಲಿಂಗಾದಿಗಳ ಆಧಾರದಿಂದ ರುದ್ರ ಸಮಾಖ್ಯಾಪ್ರಮಾಣಕ್ಕೆ ಪ್ರಾಬಲ್ಯವನ್ನು ಹೇಳಬಾರದು. ರುದ್ರ ಸಮಾಖ್ಯಾಪ್ರಮಾಣ, ವಾಯು ಸಮಾಖ್ಯಾಪ್ರಮಾಣ, ಪ್ರಕೃತಿ ಸಮಾಖ್ಯಾಪ್ರಮಾಣ ಮೂರೂ ಸಹ ಸಮಾಖ್ಯಾಗಳಾದ್ದರಿಂದ ತೇನ ರೂಪೇಣ ಸಮಾನವಾದ ಬಲವುಳ್ಳವುಗಳಾಗಿವೆ ಎಂದೇ ಹೇಳಬೇಕು. ಆವಾಗ ಈ ಮೂರರಲ್ಲಿ ಯಾವುದೇ ಒಂದು ಸಮಾಖ್ಯಾಪ್ರಮಾಣವೂ ಸಹ ವಿಷ್ಣು ಸಮಾಖ್ಯಾಪ್ರಮಾಣವನ್ನು ನಿರಾಸ ಮಾಡಲು ಸಾಮರ್ಥ್ಯವನ್ನು ಹೊಂದಿರುವುದಿಲ್ಲ. ಹೀಗಿರುವಾಗ ಜಾಯಮಾನತ್ವವೆಂಬ ಲಿಂಗವನ್ನು ಆಶ್ರಯಿಸಲೇ ಬೇಕು. ಈ ಲಿಂಗವು ನಿರವಕಾಶವಾಗಿ ಪ್ರಬಲವಾಗಿರುವುದರಿಂದ ವಿಷ್ಣು ಸಮಾಖ್ಯಾಪ್ರಮಾಣವು ಬಾಧಿತವಾಗುತ್ತದೆ. ಅಂದರೆ ಎಲ್ಲರ ವಿಷಯದಲ್ಲಿಯೂ ಸಮಾಖ್ಯಾಪ್ರಮಾಣಗಳು ಇದ್ದೇ ಇರುತ್ತವೆ. ಇವುಗಳಲ್ಲಿ ಪರಸ್ಪರ ಪ್ರಾಬಲ್ಯ, ದೌರ್ಬಲ್ಯವನ್ನು ವಿಚಾರ ಮಾಡಬಾರದು ಹೊರತಾಗಿ, ಜಾಯಮಾನತ್ವವೆಂಬ ಲಿಂಗದ ಬಲದಿಂದ ವಿಷ್ಣುವಿನ ಸಮಾಖ್ಯಾಪ್ರಮಾಣಕ್ಕೆ ಬಾಧ ದೋಷವನ್ನು ಹೇಳಬೇಕು. ಆದ್ದರಿಂದ ದ್ಯುಭ್ವಾದ್ಯಾಯತನನಾದವನು ವಿಷ್ಣುವಾಗಲು ಸಾಧ್ಯವಿಲ್ಲವೆಂದು ತಿಳಿಯುತ್ತದೆ. ಆ ಸಂದರ್ಭದಲ್ಲಿ ಜಾಯಮಾನತ್ವವೆಂಬ ಲಿಂಗಕ್ಕೆ ಆಶ್ರಯರಾದ ರುದ್ರಾದಿಗಳಲ್ಲಿ ಸಮಾನವಾಗಿ ಸಮಾಖ್ಯಾಪ್ರಮಾಣದ ಆಧಾರದಿಂದ ದ್ಯುಭ್ವಾದ್ಯಾಯನತನತ್ವವು ಪ್ರಾಪ್ತವಾಗುತ್ತದೆ. ಇನ್ನು ಜೀವನಲ್ಲಿ ಕೇವಲ ಜಾಯಮಾನತ್ವಲಿಂಗದ ಬಲದಿಂದ ದ್ಯುಭ್ವಾದ್ಯಾಯತನತ್ವವು ಪ್ರಾಪ್ತವಾಗುತ್ತದೆಂದು ಹೇಳಬೇಕು. ಇದು ಎಲ್ಲ ಜೀವರಲ್ಲೂ ಸಾಧಾರಣವಾದ್ದರಿಂದ ಜೀವಕೋಟಿಗೂ ಬರುತ್ತದೆಂದಾದೀತು. ಹೀಗೆ ವ್ಯಾಖ್ಯಾನಿಸುವುದರಿಂದ ಟೀಕೆಯಲ್ಲಿ ಜಾಯಮಾನತ್ವವೆಂಬ ಲಿಂಗದಿಂದ ವಿಷ್ಣು ಸಮಾಖ್ಯಾಪ್ರಮಾಣಕ್ಕೆ ಬಾಧವನ್ನು ಹೇಳಿರುವುದು ಅತ್ಯಂತ ಸ್ವರಸವಾಗುತ್ತದಲ್ಲವೇ?

**प्रकाशः** – मैवम् । अन्तकत्वादिलिङ्गेन रुद्रसमाख्याया निरवकाशत्वोक्तिपरपूर्वतन-टीकावाक्यविरोधात् ।

ಸಮಾಧಾನ - ಈ ಆಕ್ಷೇಪವೂ ತಪ್ಪು. ಒಂದು ವೇಳೆ ನಾಲ್ಕು ಸಮಾಖ್ಯಾಪ್ರಮಾಣಗಳು ಸಮಾನ ಬಲವೆಂದು ಹೇಳುವುದಾದರೆ ಟೀಕಾ ವಿರೋಧವೇ ಬರುತ್ತದೆ. ಏಕೆಂದರೆ ಹಿಂದಿನ ಟೀಕೆಯ ಮಾತುಗಳಲ್ಲಿ ಅಂತಕತ್ವವೇ ಮೊದಲಾದ ಲಿಂಗಗಳ ಬಲದಿಂದ ರುದ್ರವಿಷಯಕವಾದ ಸಮಾಖ್ಯಾಪ್ರಮಾಣಕ್ಕೆ ನಿರವಕಾಶತ್ವವನ್ನು ಹೇಳಿರುತ್ತಾರೆ. ಆದ್ದರಿಂದ ರುದ್ರಸಮಾಖ್ಯಾಪ್ರಮಾಣಕ್ಕೆ ಲಿಂಗಬಲದಿಂದ ಪ್ರಾಬಲ್ಯವು ತಿಳಿಯುತ್ತಿರುವಾಗ ಎಲ್ಲಾ ಸಮಾಖ್ಯಾಪ್ರಮಾಣಗಳು ಸಮಾನ ಬಲವೆಂದು ಹೇಳುವುದು ತಪ್ಪಾಗುತ್ತದೆ.

ಪರಿಪೂರ್ಣಚಂದ್ರಿಕಾ

**प्रकाशः – ''समाख्याऽपि निरवकाश'' इत्यग्रे वक्ष्यमाणदिशा सावकाशत्वासम्भवाच्च ।**

ಮತ್ತು ಮುಂದೆ ಗ್ರಂಥಕಾರರೇ 'ಸಮಾಖ್ಯಾऽಪಿ ನಿರವಕಾಶ' ಇತ್ಯಾದಿ ಗ್ರಂಥದಿಂದ ರುದ್ರ ವಿಷಯಕವಾದ ಸಮಾಖ್ಯಾಪ್ರಮಾಣಕ್ಕೆ ಸಾವಕಾಶತ್ವವನ್ನು ಹೇಳಲು ಸಾಧ್ಯವಿಲ್ಲವೆಂದು ಸಮರ್ಥಿಸುತ್ತಾರೆ.

**प्रकाशः – कथं तर्हि प्रकृतिवाय्वोः प्राप्तिः । रुद्रसमाख्याऽज्ञानिन इत्यस्तु । नह्येक एवात्र पूर्वपक्षीति नियामकमस्ति । द्वितीयाद्यस्मृत्यधिकरणादाविवानेकेषां पूर्ववादित्वोपपत्तेरिति ।**

ಹಾಗಾದರೆ ಪ್ರಬಲವಾದ ರುದ್ರ ಸಮಾಖ್ಯಾಪ್ರಮಾಣದಿಂದ ಉಳಿದೆರಡು ವಾಯು ಸಮಾಖ್ಯಾಪ್ರಮಾಣ, ಹಾಗೂ ಪ್ರಕೃತಿ ಸಮಾಖ್ಯಾಪ್ರಮಾಣಗಳು ಬಾಧಿತವಾಗುತ್ತಲ್ಲವೇ? ಆಗ ಪ್ರಕೃತಿ, ವಾಯುಗಳ ಪ್ರಾಪ್ತಿ ಹೇಗೆ? ಎಂಬ ಪ್ರಶ್ನೆಗೂ ಸಹ ಅವಕಾಶವಿಲ್ಲ. ಏಕೆಂದರೆ ರುದ್ರ ಸಮಾಖ್ಯಾಪ್ರಮಾಣವು ಬಲಿಷ್ಠವಾಗಿರುತ್ತದೆಂದು ಯಾರಿಗೆ ತಿಳಿದೇ ಇರುವುದಿಲ್ಲವೋ ಅಂತಹವನಿಗೆ ವಾಯ್ವಾದಿ ವಿಷಯಕವಾದ ಪೂರ್ವಪಕ್ಷವು ಹುಟ್ಟಬಹುದು. ಒಬ್ಬನೇ ಪೂರ್ವಪಕ್ಷಿ ಇರಬೇಕೆಂದೇನೂ ನಿಯಾಮಕ ಪ್ರಮಾಣವಿಲ್ಲ. ಎರಡನೆಯ ಅಧ್ಯಾಯದ ಮೊದಲನೆಯ ಸ್ಮೃತ್ಯಧಿಕರಣದಲ್ಲಿ ಹೇಳಿದಂತೆ ಅನೇಕ ಪೂರ್ವಪಕ್ಷಿಗಳು ಇರಬಹುದು.

**प्रकाशः – नन्वेवमपि रुद्रसमाख्यया विष्णुसमाख्याबाधेऽपि प्राकरणिक-विष्णुप्रापकबहुबाधायोगात् सावकाशत्वाच्च तस्या इति समाख्यया पूर्वपक्षमाक्षिपति – नन्विति ॥**

ಹೀಗೆ ಹೇಳಿದರೂ ಸಹ ರುದ್ರಸಮಾಖ್ಯಾದಿಂದ ವಿಷ್ಣುಸಮಾಖ್ಯಾಪ್ರಮಾಣಕ್ಕೆ ಬಾಧವನ್ನೇನೋ ಹೇಳಬಹುದು. ಆದರೆ ಸಂಪೂರ್ಣ ಪ್ರಕರಣದಲ್ಲಿ ಬಹಳವಾಗಿ ವಿಷ್ಣುಲಿಂಗಗಳೇ ಕೇಳಿಸುತ್ತಿವೆ. ರುದ್ರ ಸಮಾಖ್ಯಾವೆಂಬ ಒಂದು ಪ್ರಮಾಣದಿಂದ ವಿಷ್ಣುವಿಷಯಕವಾದ ಅನೇಕ ಪ್ರಾಪಕಗಳಿಗೆ ಬಾಧವನ್ನು ಹೇಳುವುದು ಅಯುಕ್ತವಾಗುತ್ತದೆ. ಮತ್ತು ರುದ್ರಸಮಾಖ್ಯಾಪ್ರಮಾಣವು ವಿಷ್ಣುವಿನಲ್ಲಿ ಸಾವಕಾಶವಾಗಿದೆ. ಆದ್ದರಿಂದ ಸಮಾಖ್ಯಾಬಲದಿಂದ ಪೂರ್ವಪಕ್ಷವನ್ನು ಮಾಡಲು ಹೇಗೆ ಸಾಧ್ಯ ? ಎಂಬ ಆಕ್ಷೇಪವನ್ನು 'ನನು' ಇತ್ಯಾದಿ ವಾಕ್ಯದಿಂದ ತೋರಿಸುತ್ತಿದ್ದಾರೆ.

**प्रकाशः – विष्णुप्रकरणेनेति ॥ यद्यपि टीकायां ''परविद्याविषयत्व-लिङ्गाद्विष्णुरिति चत्'' इत्युक्तम् ।**

ಗ್ರಂಥದಲ್ಲಿ 'ವಿಷ್ಣುಪ್ರಕರಣೇನ' ಎಂದು ಹೇಳಿದ್ದಾರೆ. ಅಂದರೆ ಗ್ರಂಥದಲ್ಲಿ 'ದ್ವೇ ವಿದ್ಯೇ ವೇದಿತವ್ಯೇ' ಎಂಬ ವಿಷ್ಣುಪ್ರಕರಣದಿಂದ ರುದ್ರಸಮಾಖ್ಯಾಕ್ಕೆ ಬಾಧವನ್ನು ಹೇಳಿದ್ದಾರೆ. ಆದರೆ ಟೀಕೆಯಲ್ಲಿ 'ಪರವಿದ್ಯಾವಿಷಯತ್ವಲಿಂಗಾದ್ ವಿಷ್ಣುಃ' ಪರವಿದ್ಯಾವಿಷಯತ್ವವೆಂಬ ಲಿಂಗದ ಆಧಾರದಿಂದ ವಿಷ್ಣುವೇ ದ್ಯುಭ್ವಾದ್ಯಾಯತನನಾಗಿದ್ದಾನೆಂದು ಹೇಳಿದ್ದಾರೆ. ಹಾಗಾಗಿ ಟೀಕೆಗೂ ಗ್ರಂಥಕ್ಕೂ ಪರಸ್ಪರ ವಿರೋಧ ಬರುತ್ತದಲ್ಲವೇ?

**प्रकाशः** – तथापि लिङ्गस्योपक्रमे श्रुतत्वात्तत्र श्रुतलिङ्गस्य च ''श्रुतिलिङ्गवाक्यानामुपक्रमोपसंहारयोः श्रुतत्वे तन्निश्चायकतया लिङ्गत्वम्'' इति ''शब्दादेव'' इति सूत्रटीकोक्तरीत्या प्रकरणनिश्चायकत्वेन तल्लिङ्गोपेतोपक्रमवतस्तत्प्रकरणत्वेन ''प्रकरणात्'' इति सूत्रानुसारात् प्रकरणेनेत्युक्तम् ।

ಹೌದು, ಆದರೆ ಪರವಿದ್ಯಾವಿಷಯತ್ವವೆಂಬ ಲಿಂಗವು ಪ್ರಕರಣದ ಪ್ರಾರಂಭದಲ್ಲಿ ಕೇಳಿಸುತ್ತಿದೆ. ಹಾಗೆ ಕೇಳಿಸುತ್ತಿರುವ ಲಿಂಗದ ಬಲದಿಂದ ಪ್ರಕರಣವು ವಿಷ್ಣುಪರವಾಗುತ್ತದೆಂದು ನಿಶ್ಚಯವಾಗುತ್ತದೆ. ಏಕೆಂದರೆ 'ಶಬ್ದಾದೇವ ಪ್ರಮಿತಃ' ಎಂಬ ಸೂತ್ರದ ಟೀಕೆಯಲ್ಲಿ 'ಶ್ರುತಿಲಿಂಗವಾಕ್ಯಾನಾಮುಪಕ್ರಮೋಪಸಂಹಾರಯೋಃ ಶ್ರುತತ್ವೇ ತನ್ನಿಶ್ಚಾಯಕತಯಾ ಲಿಂಗತ್ವಮ್' ಶ್ರುತಿ, ಲಿಂಗ, ವಾಕ್ಯಗಳು ಉಪಕ್ರಮ ಹಾಗೂ ಉಪಸಂಹಾರಗಳಲ್ಲಿ ಕೇಳಿಸಿದರೆ ಅವುಗಳು ಆ ಪ್ರಕರಣವು ಯಾರನ್ನು ಪ್ರತಿಪಾದಿಸುತ್ತದೆನ್ನಲು ನಿಶ್ಚಾಯಕವಾಗುತ್ತವೆ ಎಂಬುದಾಗಿ ಹೇಳಿದ್ದಾರೆ. ಆದ್ದರಿಂದ ಯಾರ ಲಿಂಗವು ಯಾವ ಪ್ರಕರಣದ ಪ್ರಾರಂಭದಲ್ಲಿ ಇರುತ್ತದೋ, ಆ ಪ್ರಕರಣವು ಆ ವ್ಯಕ್ತಿಯನ್ನೇ ಪ್ರತಿಪಾದಿಸುತ್ತದೆಂಬ ನಿಯಮವನ್ನು 'ಪ್ರಕರಣಾತ್' ಎಂಬ ಸೂತ್ರದಲ್ಲಿ ಹೇಳಿರುತ್ತಾರೆ. ಅದಕ್ಕನುಸಾರಿಯಾಗಿ ಪರವಿದ್ಯಾವಿಷಯತ್ವವೆಂಬ ವಿಷ್ಣುಲಿಂಗವು ಪ್ರಕರಣದ ಪ್ರಾರಂಭದಲ್ಲಿ ಕೇಳಿಸುತ್ತಿರುವುದರಿಂದ 'ವಿಷ್ಣು ಪ್ರಕರಣೇನ' ಸಂಪೂರ್ಣ ಪ್ರಕರಣವು ವಿಷ್ಣುವನ್ನೇ ಪ್ರತಿಪಾದಿಸುತ್ತದೆಂದು ನಿಶ್ಚಯಿಸಬಹುದು; ಹೊರತು, ನೇರವಾಗಿ 'ಪರವಿದ್ಯಾವಿಷಯತ್ವಮ್' ಎಂಬ ಲಿಂಗವು ದ್ಯುಭ್ವಾದ್ಯಾಯತನನಾದವನು ವಿಷ್ಣುವೆನ್ನಲು ನಿರ್ಣಾಯಕವಾಗುವುದಿಲ್ಲ. ಆದರೆ ಗ್ರಂಥಕಾರರು ಹೇಳಿದ 'ದ್ವೇ ವಿದ್ಯೇ ವೇದಿತವ್ಯೇ' ಎಂಬ ವಿಷ್ಣುಪ್ರಕರಣವು ನೇರವಾಗಿ ದ್ಯುಭ್ವಾದ್ಯಾಯತನತ್ವಕ್ಕೆ ಲಿಂಗವಾಗುತ್ತದೆಂಬ ವ್ಯತ್ಯಾಸವನ್ನು ತಿಳಿಯಬೇಕು.

**प्रकाशः** – अत एव ''प्रकरणात्'' इत्यत्र टीका ''द्वे विद्ये वेदितव्ये'' इति परविद्याविषयवस्तुनोऽत्रारभ्याधीतत्वेनास्य विष्णुप्रकरणत्वात्'' इति ।

ಆದ್ದರಿಂದಲೇ 'ಪ್ರಕರಣಾತ್' ಎಂಬ ಸೂತ್ರದಲ್ಲಿ 'ದ್ವೇ ವಿದ್ಯೇ ವೇದಿತವ್ಯೇ' ಎಂಬುದಾಗಿ ಪರವಿದ್ಯಾವಿಷಯನಾದ ವಸ್ತುವಿನ ಬಗ್ಗೆ ಅಧ್ಯಯನವನ್ನು ಹೇಳಿರುವ ಕಾರಣ ವಿಷ್ಣುಪ್ರಕರಣವೆಂದು ನಿಶ್ಚಯಿಸಬಹುದೆಂದು ವ್ಯಾಖ್ಯಾನಿಸಿದ್ದಾರೆ. ಇದರಿಂದ ವಿಷ್ಣುಪ್ರಕರಣವೆಂಬುದೇ ದ್ಯುಭ್ವಾದ್ಯಾಯತನನಾದವನು ವಿಷ್ಣುವೆನ್ನಲು ನೇರವಾಗಿ ಕಾರಣವಾಗಿರುತ್ತದೆ.

**प्रकाशः** – बाध इति ।। यथा चतुर्थे ''आत्मा प्रकरणात्'' इत्यत्र प्रकरणेन समाख्याया बाधस्तद्वत् । तत्रहि ''य आत्माऽपहतपाप्मा'' इत्यादिप्रकरणेन ''स तेजसि सूर्ये सम्पन्नः'' इति समाख्याया बाधेन ''परं ज्योतिरुपसम्पद्य'' इति श्रुतज्योतिषो विष्णुत्वमुच्यते ।

ಗ್ರಂಥದಲ್ಲಿ 'ಬಾಧಃ' ಎಂದು ರುದ್ರ ಸಮಾಖ್ಯಾಪ್ರಮಾಣಕ್ಕೆ ಬಾಧವನ್ನು ಹೇಳಿದ್ದಾರೆ. ಯಾವರೀತಿಯಾಗಿ ನಾಲ್ಕನೆಯ ಅಧ್ಯಾಯದ 'ಆತ್ಮಾ ಪ್ರಕರಣಾತ್' ಎಂಬ ಸೂತ್ರದಲ್ಲಿ ಪ್ರಕರಣದಿಂದ ಸಮಾಖ್ಯಾಪ್ರಮಾಣಕ್ಕೆ ಬಾಧವನ್ನು ಹೇಳಿದ್ದಾರೋ, ಅದರಂತೆ ಇಲ್ಲಿಯೂ ತಿಳಿಯಬೇಕು. 'ಯ ಆತ್ಮಾಽಪಹತಪಾಪ್ಮಾ' ಇತ್ಯಾದಿ ಪ್ರಕರಣದಿಂದ 'ಸ ತೇಜಸಿ ಸೂರ್ಯೇ ಸಂಪನ್ನಃ' ಎಂಬ ಸಮಾಖ್ಯಾಪ್ರಮಾಣಕ್ಕೆ ಬಾಧವು ಬರುವುದರಿಂದ 'ಪರಂ ಜ್ಯೋತಿರುಪಸಂಪದ್ಯ' ಎಂಬಲ್ಲಿ ಕೇಳಿಸುತ್ತಿರುವ ಜ್ಯೋತಿಃ ಎಂಬ ಶಬ್ದವು ವಿಷ್ಣುವನ್ನೇ ಪ್ರತಿಪಾದಿಸುತ್ತದೋ ಅದೇ ರೀತಿಯಾಗಿ ಪ್ರಕೃತ 'ದ್ವೇ ವಿದ್ಯೇ ವೇದಿತವ್ಯೇ' ಎಂಬ ವಿಷ್ಣುಪ್ರಕರಣದಿಂದ ರುದ್ರ ಸಮಾಖ್ಯಾಪ್ರಮಾಣಕ್ಕೆ ಬಾಧವು ಬರುತ್ತದೆ.

**प्रकाशः** – यथा वा दहरनये लिङ्गेन समाख्याया बाधस्तद्वत् । तत्र ह्यपहतपाप्मत्वादिलिङ्गेन "तस्यान्ते सुषिरं सूक्ष्मम्" इत्यादिसमाख्याया बाधेन सर्वाधारतया हृत्पद्मस्थत्वं विष्णोरेव । नत्वाकाशादेरित्युच्यते ।

ಅಥವಾ ಯಾವ ರೀತಿಯಾಗಿ ದಹರಾಧಿಕರಣದಲ್ಲಿ ಲಿಂಗದಿಂದ ಸಮಾಖ್ಯಾಪ್ರಮಾಣಕ್ಕೆ ಬಾಧವನ್ನು ಹೇಳಿದ್ದಾರೋ, ಅದರಂತೆಯೂ ಇಲ್ಲಿ ತಿಳಿಯಬಹುದು. ಎಂದರೆ ಹೇಗೆ ದಹರಾಧಿಕರಣದಲ್ಲಿ ಅಪಹತಪಾಪ್ಮತ್ವವೇ ಮೊದಲಾದ ಲಿಂಗಗಳ ಬಲದಿಂದ 'ತಸ್ಯಾಂತೇ ಸುಷಿರಂ ಸೂಕ್ಷ್ಮಮ್' ಎಂಬ ಸಮಾಖ್ಯಾಪ್ರಮಾಣಕ್ಕೆ ಬಾಧವು ಬರುವುದರಿಂದ ಸರ್ವಾಧಾರವಾಗಿ ಕೇಳಿಸುತ್ತಿರುವ ಹೃತ್ಪದ್ಮಸ್ಥತ್ವವೆಂಬ ಲಿಂಗವು ವಿಷ್ಣುವಿನಲ್ಲೇ ಬರುತ್ತದೆ ಹೊರತು, ಆಕಾಶಾದಿಗಳಲ್ಲಿ ಬರುವುದಿಲ್ಲವೆಂದು ಹೇಳಿದ್ದಾರೋ ಅದರಂತೆ ಮುಕ್ತೋಪಸೃಪ್ಯತ್ವವೆಂಬ ವಿಷ್ಣುವಿನ ಲಿಂಗದಿಂದ ರುದ್ರ ಸಮಾಖ್ಯಾಪ್ರಮಾಣಕ್ಕೆ ಬಾಧ ದೋಷವು ಬರುತ್ತದೆ.

**प्रकाशः** – आदेश्चेत्यादिपदेन प्रकरणम् । लिङ्गत्वं नाम ज्ञापकत्वम् । यद्वा परविद्याविषयत्वमादिपदार्थः । इत्यादीत्यादिपदेन "अदृश्यत्वादिगुणको धर्मोक्तेः" इति सूत्रं गृह्यते ।

ಗ್ರಂಥದಲ್ಲಿ 'ಮುಕ್ತೋಪಸೃಪ್ಯತ್ವಾದೇಶ್ಚ' ಎಂಬಲ್ಲಿ ಆದಿ ಪದವನ್ನು ಹೇಳಿದ್ದಾರೆ. ಇದರಿಂದ ಮುಕ್ತೋಪಸೃಪ್ಯತ್ವವೆಂಬ ಲಿಂಗದ ಜೊತೆಗೆ ಪ್ರಕರಣವನ್ನು ವಿವಕ್ಷಿಸಬೇಕು. ಆವಾಗ 'ವಿಷ್ಣುಲಿಂಗತ್ವಮ್' ಎಂಬಲ್ಲಿರುವ ಲಿಂಗ ಎಂಬ ಪದಕ್ಕೆ ಜ್ಞಾಪಕವಾಗಿರುವುದು ಎಂದರ್ಥ. ಅಥವಾ ಆದಿಪದದಿಂದ ಪರವಿದ್ಯಾವಿಷಯತ್ವವೆಂಬ ಲಿಂಗವನ್ನೇ ವಿವಕ್ಷಿಸಬಹುದು. ಆವಾಗ 'ವಿಷ್ಣುಲಿಂಗತ್ವಮ್' ಎಂಬ ಲಿಂಗಪದಕ್ಕೆ ಲಿಂಗವೆಂಬರ್ಥವನ್ನೇ ವಿವಕ್ಷಿಸಬಹುದು. 'ಇತ್ಯಾದಿ ಸೂತ್ರ' ಎಂಬಲ್ಲಿರುವ 'ಅದೃಶ್ಯತ್ವಾದಿಗುಣಕೋ ಧರ್ಮೋಕ್ತೇಃ' ಎಂಬ ಸೂತ್ರವನ್ನು ಇಟ್ಟುಕೊಳ್ಳಬೇಕು.

**प्रकाशः** – बलवती इति ॥ 'शब्दादेव' इत्यत्र तद्बीजात्स्या व्युत्पादयिष्यमाणत्वादिति भावः । ननु "आनर्थक्यप्रतिहतानां विपरीतं बलाबलम्" इति न्यायेन समाख्यया बाधः किं नस्यादिति भावेनाशङ्क्यानर्थक्यं नेत्याह –

**नचेति ।। अन्तरिति ।। अयं न्यायः प्राक् तत्र तत्र विवृतः । शास्त्रदृष्ट्येति न्यायोऽपि ।**

'ಬಲವತೀ' ಎಂದರೆ ಲಿಂಗ ಹಾಗೂ ಪ್ರಕರಣಗಳು ಸಮಾಖ್ಯಾಪ್ರಮಾಣಕ್ಕಿಂತ ಬಲಿಷ್ಠವಾಗಿವೆಯೆಂದು ಅರ್ಥವೆಂದು ಗ್ರಂಥದಲ್ಲಿ ಹೇಳಿದ್ದಾರೆ. ಈ ವಿಷಯವನ್ನು 'ಶಬ್ದಾದೇವ ಪ್ರಮಿತಃ' ಎಂಬ ಸೂತ್ರದಲ್ಲಿ ಕಾರಣಪುರಸ್ಸರವಾಗಿ ಸಮರ್ಥಿಸುತ್ತಾರೆ.

'ಆನರ್ಥಕ್ಯಪ್ರತಿಹತಾನಾಂ ವಿಪರೀತಂ ಬಲಾಬಲಮ್' ನಿರರ್ಥಕವಾಗಿದ್ದರೆ ಪ್ರಾಬಲ್ಯ ಹಾಗೂ ದೌರ್ಬಲ್ಯಗಳು ವಿಪರೀತವಾಗುತ್ತದೆಂಬ ನ್ಯಾಯದಂತೆ ಸಮಾಖ್ಯಾಪ್ರಮಾಣದಿಂದಲೇ ಬಾಧವನ್ನು ಏಕೆ ಹೇಳಬಾರದು? ಎಂಬ ಅಭಿಪ್ರಾಯದಿಂದ ಆಶಂಕಿಸಿ ಆನರ್ಥಕ್ಯವೇ ಇಲ್ಲವೆಂದು ಹೇಳುತ್ತಿದ್ದಾರೆ 'ನಚ' ಎಂಬ ವಾಕ್ಯದಿಂದ.

ಅಂತರಧಿಕರಣ ನ್ಯಾಯವನ್ನು ಹಿಂದೆಯೇ ವಿವರಿಸಿದ್ದಾಗಿದೆ. ಹಾಗೂ 'ಶಾಸ್ತ್ರದೃಷ್ಟ್ಯಾತೂಪದೇಶಃ' ಎಂಬ ನ್ಯಾಯವನ್ನೂ ಸಹ ಅಂತಿಮಪ್ರಾಣಾಧಿಕರಣದಲ್ಲಿಯೇ ವಿವರಿಸಿದ್ದಾಗಿದೆ.

**प्रकाशः – जायमानत्वादीति ।। मनःप्राणाधारत्वमादिपदार्थः । लिङ्गं निरवकाशमित्यत आह – जायमानत्वस्येति ।। तत्रेति ।। आनन्दमयाधिकरण इत्यर्थः ।**

'ಜಾಯಮಾನತ್ವಾದಿ' ಎಂಬಲ್ಲಿರುವ ಆದಿಪದದಿಂದ ಮನ ಆಧಾರತ್ವ ಹಾಗೂ ಪ್ರಾಣಾಧಾರತ್ವವನ್ನು ವಿವಕ್ಷಿಸಬೇಕು. ಲಿಂಗವು ನಿರವಕಾಶವಾಗಿದೆಯಲ್ಲವೇ? ಎಂಬ ಪ್ರಶ್ನೆಗೆ 'ಜಾಯಮಾನತ್ವಸ್ಯ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. 'ತತ್ರ' ಎಂದರೆ ಆನಂದಮಯಾಧಿಕರಣದಲ್ಲಿ ಎಂದರ್ಥ.

**प्रकाशः – कारणत्वेन चेति ।।** चतुर्थपादे "आत्मन आकाशस्सम्भूतः । आकाशाद्वायुः । वायोरग्निः" इत्युदाहृत्यात्मन आकाशादिषु जनेर्वक्ष्यमाणत्वादिति भावः । यथोक्तं तत्र न्यायविवरणे "व्यक्त्यपेक्षया कार्यत्वम्" इति ।

ನಾಲ್ಕನೆಯ ಪಾದದಲ್ಲಿ 'ಕಾರಣತ್ವೇನ ಚ' ಎಂಬ ಸೂತ್ರದಲ್ಲಿ ಹೀಗೆ ಹೇಳಿದ್ದಾರೆ - 'ಆತ್ಮನ ಆಕಾಶಸ್ಸಂಭೂತಃ', 'ಆಕಾಶಾದ್ವಾಯುಃ', 'ವಾಯೋರಗ್ನಿಃ' ಎಂಬ ವಾಕ್ಯವನ್ನು ಉದಾಹರಿಸಿ ಆತ್ಮನ ದೆಸೆಯಿಂದ ಆಕಾಶಾದಿಗಳೆಲ್ಲವೂ ಹುಟ್ಟುತ್ತವೆಂದು ಹೇಳಿದ್ದಾರೆ. ಇದನ್ನೇ ನ್ಯಾಯವಿವರಣದಲ್ಲಿ 'ವ್ಯಕ್ತ್ಯಪೇಕ್ಷಯಾ ಕಾರ್ಯತ್ವಮ್' ಎಂದು ಹೇಳಿರುತ್ತಾರೆ.

**प्रकाशः –** अत्र परैरेतच्छङ्कानिरासाय "यस्मिन्द्यौः" इत्यादिकं ब्रह्मप्रकरणे नास्तीति कृत्वाचिन्तयेदमारब्धमित्युक्तम् ।

ಶಂಕಾ - ಈ ಹಿಂದೆ ಪೂರ್ವಪಕ್ಷವು ಹುಟ್ಟಲು ಸಾಧ್ಯವೇ ಇಲ್ಲವೆಂದು ಪ್ರಶ್ನಿಸಲಾಯಿತು. ಈ ಪ್ರಶ್ನೆಗೆ

ಅದ್ವೈತಿಗಳು ಹೀಗೆ ಉತ್ತರಿಸಲು ಪ್ರಯತ್ನಿಸಿದ್ದಾರೆ. ವಾಸ್ತವಿಕವಾಗಿ 'ಯಸ್ಮಿನ್ದ್ಯೌಃ' ಇತ್ಯಾದಿ ಶ್ರುತಿಗಳು ಬ್ರಹ್ಮಪ್ರಕರಣದಲ್ಲಿಯೇ ಕೇಳಿಸುತ್ತಿವೆ. ಆದರೆ ಬ್ರಹ್ಮಪ್ರಕರಣದಲ್ಲಿ ಇರುವುದಿಲ್ಲವೆಂದು ಇಟ್ಟುಕೊಂಡು ಪೂರ್ವಪಕ್ಷ ಮಾಡಬೇಕು. ಆದ್ದರಿಂದ ಈ ಅಧಿಕರಣವು ಆರಂಭಣೀಯವಾಗುತ್ತದೆ.

**ಪ್ರಕಾಶಃ** – कैश्चित्तु ''द्वे विद्ये वेदितव्ये'' इत्यादेर्ब्रह्मप्रकरणत्वेऽपि ''यस्मिन्'' इत्यादिकं जीवलिङ्गाज्जीवप्रकरणमिति प्रकरणभेदमाश्रित्य समाहितम् ।

ಇನ್ನು ರಾಮಾನುಜರು ಹೀಗೆ ಉತ್ತರಿಸಿದ್ದಾರೆ. 'ದ್ವೇ ವಿದ್ಯೇ ವೇದಿತವ್ಯೇ' ಇತ್ಯಾದಿ ವಾಕ್ಯಗಳು ಬ್ರಹ್ಮಪ್ರಕರಣದಲ್ಲಿದ್ದರೂ ಸಹ 'ಯಸ್ಮಿನ್ದ್ಯೌಃ' ಇತ್ಯಾದಿ ವಾಕ್ಯಗಳು ಜೀವನ ಪ್ರಕರಣವಾಗಿವೆಯೆಂದು ಜಾಯಮಾನತ್ವವೇ ಮೊದಲಾದ ಲಿಂಗಗಳ ಬಲದಿಂದ ನಿರ್ಧರಿಸಬಹುದು. ಹೀಗೆ ಬೇರೆ ಬೇರೆ ಪ್ರಕರಣವೆಂದು ತಿಳಿದು ದ್ಯುಭ್ವಾದ್ಯಾಯತನನಾದವನು ಜೀವನಾಗಿದ್ದಾನೆಂಬ ಪೂರ್ವಪಕ್ಷ ಹುಟ್ಟಲು ಅಡ್ಡಿಯಿಲ್ಲ.



## ಸಾರ

ಈ ಅಧಿಕರಣದ ಪೂರ್ವಪಕ್ಷ ಹೀಗಿದೆ - ದ್ಯುಭ್ವಾದ್ಯಾಯತನನಾದವನು ವಿಷ್ಣುವೇ ಆಗುತ್ತಾನೆಂದು ನಿರ್ಣಯಿಸಲು ಸಾಧ್ಯವಿಲ್ಲ; ಹೊರತಾಗಿ ರುದ್ರ, ಪ್ರಕೃತಿ, ವಾಯು ಅಥವಾ ಜೀವ ಇವರುಗಳೇ ದ್ಯುಭಾದ್ಯಾಯತನರಾಗುತ್ತೆನ್ನಲು ಪ್ರಮಾಣವಿದೆ. 'ರುದ್ರೋ ವಾವ ಲೋಕಾಧಾರಃ' ಎಂಬ ಶ್ರುತಿಯು ರುದ್ರನ ವಿಷಯದಲ್ಲಿ; 'ಆಕಾಶ ಏವ ತದೋತಂ ಚ' ಎಂಬ ಶ್ರುತಿಯು ಪ್ರಕೃತಿಯ ವಿಷಯದಲ್ಲಿ; 'ವಾಯುನಾ ವೈ' ಎಂಬ ಶ್ರುತಿಯು ವಾಯುದೇವನ ವಿಷಯದಲ್ಲಿ ಹಾಗೂ ಜಾಯಮಾನತ್ವ ಎಂಬ ಲಿಂಗವು ಜೀವನ ವಿಷಯದಲ್ಲಿ ಆಧಾರವಾಗಿದೆ. ರುದ್ರ, ಪ್ರಕೃತಿ, ವಾಯು ಈ ಮೂವರು ದ್ಯುಭಾದ್ಯಾಯತನರಾಗಿದ್ದಾರೆನ್ನಲು ಸಮಾಖ್ಯಾಪ್ರಮಾಣವಿದೆಯೆಂದು ಪೂರ್ವಪಕ್ಷಕಾರರು ಹೇಳುತ್ತಿರುವ ದೊಡ್ಡ ಆಧಾರ. ಆದರೆ ವಿಷ್ಣುವಿಷಯದಲ್ಲಿಯೂ 'ಲೋಕಾಶ್ಚ ಲೋಕಿನಶ್ಚ' ಇತ್ಯಾದಿ ಶ್ರುತಿಯು ಸಮಾಖ್ಯಾಪ್ರಮಾಣವಾಗಿದೆಯೆಂದು ಆಕ್ಷೇಪ ಬರುತ್ತದೆ. ಆದರೆ ರುದ್ರನ ವಿಷಯದಲ್ಲಿರುವ ಸಮಾಖ್ಯಾಪ್ರಮಾಣವು ವಿಷ್ಣುವಿಷಯಕವಾದ ಸಮಾಖ್ಯಾಪ್ರಮಾಣಕ್ಕಿಂತಲೂ ಅತ್ಯಂತ ಬಲಿಷ್ಠವಾಗಿದೆ. ರುದ್ರನಲ್ಲಿ ಪ್ರಸಿದ್ಧವಾದ ಕೃತ್ತಿವಾಸಾ ಮೊದಲಾದ ಶಬ್ದ ಪ್ರಯೋಗ ಹಾಗೂ ಪ್ರಾಣಾಧಾರತ್ವ ಮೊದಲಾದ ಲಿಂಗ ಇವುಗಳ ಬಲದಿಂದ ರುದ್ರವಿಷಯಕವಾದ ಪ್ರಮಾಣವು ಪ್ರಬಲವಾಗಿ ವಿಷ್ಣುವಿಷಯಕವಾದ ಸಮಾಖ್ಯಾಪ್ರಮಾಣವನ್ನು ಬಾಧಿಸುತ್ತದೆ. ಇನ್ನು ವಾಯು ಹಾಗೂ ಪ್ರಕೃತಿವಿಷಯಕವಾದ ಸಮಾಖ್ಯಾಪ್ರಮಾಣವು ಶ್ರುತಿಲಿಂಗಗಳ ಆಧಾರದಿಂದ ಪ್ರಬಲವಾಗದೇ ಇದ್ದರೂ, ಜಾಯಮಾನತ್ವವೆಂಬ ಲಿಂಗದ ಆಧಾರದಿಂದ ಪ್ರಬಲವಾಗಿದೆ. ಆದ್ದರಿಂದ ದುರ್ಬಲವಾದ ವಿಷ್ಣುವಿಷಯಕವಾದ ಸಮಾಖ್ಯಾಪ್ರಮಾಣದಿಂದ ದ್ಯುಲೋಕ, ಭೂಲೋಕಾದಿಗಳಿಗೆ ಆಧಾರನಾದವನು ವಿಷ್ಣುವೇ ಆಗಿದ್ದಾನೆಂದು ನಿಶ್ಚಯಿಸಲು ಸಾಧ್ಯವಿಲ್ಲ.

ಪೂರ್ವಪಕ್ಷಕಾರರ ಮೇಲೆ ಒಂದು ದೊಡ್ಡ ಆಕ್ಷೇಪ ಬರುತ್ತದೆ - ಯಾವ ಪ್ರಕರಣದಲ್ಲಿ ದ್ಯುಭ್ವಾದ್ಯಾಯತನತ್ವವು ಕೇಳಿಸುತ್ತಿದೆಯೋ, ಅದು ವಿಷ್ಣುಪ್ರಕರಣವಾಗಿದೆಯೆಂದು ಉಪಕ್ರಮದ ಆಧಾರದಿಂದ ತಿಳಿಯುತ್ತಿದೆ. ಮತ್ತು ಮುಕ್ತೋಪಸೃಪ್ಯತ್ವವೇ ಮೊದಲಾದ ವಿಷ್ಣುವಿನ ಅಸಾಧಾರಣ

ಲಿಂಗಗಳೂ ಸಹ ಕೇಳಿಬರುತ್ತಿವೆ. ಲಿಂಗ ಹಾಗೂ ಪ್ರಕರಣಗಳು ವಿಷ್ಣುವಿಷಯದಲ್ಲಿರುವಾಗ ಕೇವಲ ಸಮಾಖ್ಯಾಪ್ರಮಾಣದಿಂದ ರುದ್ರಾದಿಗಳನ್ನು ಸಮರ್ಥಿಸಲು ಹೇಗೆ ಸಾಧ್ಯ? ಮತ್ತು ರುದ್ರನ ವಿಷಯದಲ್ಲಿರುವ ಕೃತ್ತಿವಾಸಾ ಮೊದಲಾದ ಶಬ್ದಗಳು ಹಾಗೂ ಪಿನಾಕಿತ್ವ ಮೊದಲಾದ ಲಿಂಗಗಳು ವಿಷ್ಣುವಿನಲ್ಲಿ ಸಾವಕಾಶವಾಗುತ್ತವೆಂಬುದನ್ನು ಅಂತರಧಿಕರಣದಲ್ಲಿ ಹಾಗೂ 'ಶಾಸ್ತ್ರದೃಷ್ಟ್ಯಾ' ಎಂಬ ಸೂತ್ರದಲ್ಲಿ ಈಗಾಗಲೇ ಸಿದ್ಧಾಂತಿಗಳು ಸಮರ್ಥಿಸಿದ್ದಾರೆ. ಅಷ್ಟೇ ಅಲ್ಲದೆ ಜಾಯಮಾನತ್ವವೆಂಬ ಲಿಂಗವೂ ಸಹ ಪ್ರಾದುರ್ಭಾವವೆಂಬರ್ಥದಿಂದ ವಿಷ್ಣುವಿನಲ್ಲಿ ಸಾವಕಾಶವಾಗುತ್ತದೆ. ಹೀಗಿರುವಾಗ ಪೂರ್ವಪಕ್ಷಕಾರರು ತೋರಿಸಿದ ಯುಕ್ತಿಗಳೆಲ್ಲವೂ ಸಾವಕಾಶವಾಗಿ ದುರ್ಬಲವಾಗಿವೆ. ಪೂರ್ವಪಕ್ಷವೇ ಹೊರಡಲು ಸಾಧ್ಯವಿಲ್ಲದಿದ್ದಾಗ, ಈ ಅಧಿಕರಣದ ಪ್ರವೃತ್ತಿಯಾದರೂ ಸಹ ಏಕೆ? ಎಂಬ ದೊಡ್ಡ ಪ್ರಶ್ನೆಯನ್ನು ಪೂರ್ವಪಕ್ಷಕಾರರು ಎದುರಿಸಬೇಕು.

• • • • •

## ನಿರವಕಾಶಲಿಂಗಗಳ ಬಲದಿಂದ ಪೂರ್ವಪಕ್ಷಸ್ಥಾಪನೆ

### तात्पर्यचन्द्रिका

**उच्यते । अनुव्याख्यान उक्तिरत्रत्यसिद्धान्तसिद्धजन्यत्वाभिप्राया । नत्वेतत्पूर्वपक्षदशायां जायमानत्वस्य सावकाशता ।**

ಅನುವಾದ - ಉತ್ತರ - ಹಿಂದಿನ ಮೂಲದಲ್ಲಿ ಮಾಡಿದ ಪ್ರಶ್ನೆಗೆ ಸಮಾಧಾನವನ್ನು ಹೀಗೆ ತಿಳಿಯಬೇಕು - ಆನಂದಮಯಾಧಿಕರಣದ ಅನುವ್ಯಾಖ್ಯಾನದಲ್ಲಿ ಜಾಯಮಾನತ್ವಲಿಂಗವನ್ನು ಸಾವಕಾಶವೆಂದು ಹೇಳಿದ್ದು ಸತ್ಯ. ಆದರೆ ಈ ಅಧಿಕರಣದ ಸಿದ್ಧಾಂತದಿಂದ ನಿರ್ಣಯವಾದ ಪ್ರಾದುರ್ಭಾವವೆಂಬ ಅರ್ಥವನ್ನು ವಿವಕ್ಷಿಸಿ ಅಲ್ಲಿ ಹೇಳಿದ್ದಾರೆ ಹೊರತು, ಆ ಅಧಿಕರಣದ ಸಿದ್ಧಾಂತವೆಂದು ಪರಿಗಣಿಸಿ ಜಾಯಮಾನತ್ವವು ಪ್ರಾದುರ್ಭಾವ ರೂಪವಾಗಿದೆಯೆಂದು ಹೇಳಿರುವುದಲ್ಲ; ಹೊರತು ಈ ಅಧಿಕರಣದ ಪೂರ್ವಪಕ್ಷ ಸಂದರ್ಭದಲ್ಲಿ ಜಾಯಮಾನತ್ವವು ಸಾವಕಾಶವಾಗಿಲ್ಲ.

**''कारणत्वेन'' इत्यत्रत्वेकस्यैव कार्यकारणभावविरोधशङ्कायाः परिहारः । नत्वत्रेवाजन्यस्य जन्मविरोधशङ्कायाः । अत एव तत्र टीका ''स्वस्यैव कार्यकारणभावो विरुद्धः'' इति । अनुव्याख्यानं च ''विरोधः कार्यतद्वतोः'' इति ।**

'ಕಾರಣತ್ವೇನ ಚ ಆಕಾಶಾದಿಷು' ಎಂಬ ಸೂತ್ರದಲ್ಲಿಯೂ ಒಬ್ಬನೇ ವ್ಯಕ್ತಿಗೆ ಕಾರ್ಯಕಾರಣಭಾವವು ವಿರುದ್ಧವಾಗುತ್ತದೆಂಬ ಆಶಂಕೆಗೆ ಪರಿಹಾರವನ್ನು ನೀಡಿದ್ದಾರೆ ಹೊರತು, ಈ ಅಧಿಕರಣದಲ್ಲಿ ಸಮರ್ಥಿಸುತ್ತಿರುವಂತೆ ಅಜನ್ಯನಾದ ಪರಮಾತ್ಮನಿಗೆ ಜನ್ಮವು ವಿರುದ್ಧವಾಗುತ್ತದೆಯಲ್ಲವೇ? ಎಂಬ ಶಂಕೆಯನ್ನು ಪರಿಹರಿಸುತ್ತಿಲ್ಲ. ಆದ್ದರಿಂದಲೇ 'ಕಾರಣತ್ವೇನ' ಎಂಬ ಸೂತ್ರದ ಟೀಕೆಯಲ್ಲಿ 'ಸ್ವಸ್ಯೈವ

ಕಾರ್ಯಕಾರಣಭಾವೋ ವಿರುದ್ಧಃ' ತಾನೊಬ್ಬನಿಗೇ ಕಾರ್ಯ-ಕಾರಣ ಭಾವವು ವಿರುದ್ಧವಾಗುತ್ತದೆಂದು ಹೇಳಿದ್ದಾರೆ. ಅನುವ್ಯಾಖ್ಯಾನದಲ್ಲಿಯೂ ಸಹ 'ವಿರೋಧಃ ಕಾರ್ಯತದ್ವತೋಃ' ಎಂಬುದಾಗಿ ಹೇಳಿದ್ದಾರೆ. ಆದ್ದರಿಂದ ಅಜನ್ಯನಾದ ಪರಮಾತ್ಮನಿಗೆ ಜಾಯಮಾನತ್ವವನ್ನು ಹೇಗೆ ಕೂಡಿಸಬೇಕೆಂಬ ವಿಚಾರವನ್ನು ಈ ಅಧಿಕರಣದಲ್ಲಿ ಮಾತ್ರ ಮಾಡುತ್ತಿದ್ದಾರೆ ಹೊರತು, ಬೇರೆ ಅಧಿಕರಣಗಳಲ್ಲಿ ಮಾಡಿರುವುದಿಲ್ಲ. ಹಾಗಾಗಿ ಜಾಯಮಾನತ್ವಲಿಂಗವನ್ನು ನಿರವಕಾಶವೆಂದು ವಿವಕ್ಷಿಸಿ ಪೂರ್ವಪಕ್ಷವನ್ನು ಮಾಡಬಹುದು.

**जननमरणयोश्च सामानाधिकरण्यप्रसिद्धेर्देहत्यागलक्षणमरणस्य चेतन एव सम्भवात् । ''यतो वा इमानि भूतानि जायन्ते । येन जातानि जीवन्ति'' इति जीवनादियोगिनि चेतने जननश्रवणाच्च ।**

ಜಾಯಮಾನತ್ವವೆಂಬ ಲಿಂಗವು ನಿರವಕಾಶವಾಗಿದೆಯೆಂಬುದನ್ನು ಹೀಗೆ ತಿಳಿಯಬೇಕು - ಜನನ ಹಾಗೂ ಮರಣಗಳು ಸಮಾನಾಧಿಕರಣವಾಗಿವೆಯೆಂದು ಲೋಕಪ್ರಸಿದ್ಧವಾಗಿವೆ. ಅಂದರೆ ಜನನವು ಯಾವ ವ್ಯಕ್ತಿಗಾಗುತ್ತದೋ, ಅವನಿಗೆ ಮರಣವೂ ಆಗಬೇಕು. ಮರಣವೆಂದರೆ ದೇಹತ್ಯಾಗವೆಂದರ್ಥ. ಇಂತಹ ಮರಣವನ್ನು ಚೇತನನಲ್ಲಿಯೇ ಹೇಳಬೇಕು. 'ಯತೋ ವಾ ಇಮಾನಿ ಭೂತಾನಿ ಜಾಯಂತೇ, ಯೇನ ಜಾತಾನಿ ಜೀವಂತಿ' ಎಂಬುದಾಗಿ ಹುಟ್ಟುವಿಕೆ ಮೊದಲಾದ ಧರ್ಮಗಳನ್ನು ಹೊಂದಿದ ಚೇತನನಲ್ಲಿಯೇ ಜನನವು ಕೇಳಿಸುತ್ತಿದೆ.

**अनादेरपि जी(वमात्रादेः)वादेः शरीरग्रहणादिरूपं वा पराधीनविशेषावाप्तिरूपं वा जननमस्ति । ब्रह्मणस्तु तदपि नेति द्वितीयाध्याये वक्ष्यते ।**

ಜೀವನು ಅನಾದಿಯಾಗಿದ್ದರೂ ಸಹ ಶರೀರವನ್ನು ಸ್ವೀಕರಿಸುವಿಕೆಯೆಂಬ ಜನ್ಮವನ್ನು ಅವನಿಗೆ ಹೇಳಬಹುದು. ಅಥವಾ ಪರಾಧೀನವಿಶೇಷವಾಪ್ತಿಯೆಂಬ ಜನ್ಮವನ್ನು ಜೀವಾದಿಗಳಿಗೆ ಎಂದರೆ ಪ್ರಕೃತ್ಯಾದಿಗಳಿಗೆ ಹೇಳಬಹುದು. ಆದರೆ ಬ್ರಹ್ಮನಿಗೆ ಈ ಎರಡೂ ವಿಧದ ಜನ್ಮವನ್ನು ಹೇಳಲು ಸಾಧ್ಯವಿಲ್ಲವೆಂದು ಎರಡನೆಯ ಅಧ್ಯಾಯದಲ್ಲಿ ಸಮರ್ಥಿಸುತ್ತಾರೆ.

**'अजायमानो बहुधा विजायते' इति वाक्यं तु जीवविषयम् । स्वरूपेणाजननात् । देहद्वारा च जननात् । तस्मान्निरवकाशेन भाष्योक्तेन जायमानत्वलिङ्गेन द्युभ्वाद्यायतनं रुद्रादिरेव ।**

'ಅಜಾಯಮಾನೋ ಬಹುಧಾ ವಿಜಾಯತೇ' ಎಂಬ ವಾಕ್ಯವು ಜೀವನನ್ನು ಪ್ರತಿಪಾದಿಸುತ್ತಿದೆ ಹೊರತು ಬ್ರಹ್ಮನನ್ನಲ್ಲ. ಸ್ವರೂಪತಃ ಜೀವನಿಗೆ ಜನ್ಮವಿಲ್ಲದ ಕಾರಣ ಅಜಾಯಮಾನನೆನಿಸಿದ್ದಾನೆ.

ದೇಹದ ಮೂಲಕವಾಗಿ ಜನನವಿರುವ ಪ್ರಯುಕ್ತ 'ಬಹುಧಾ ವಿಜಾಯತೇ' ಎಂದು ಅನೇಕ ಬಾರಿ ಹುಟ್ಟುತ್ತಾನೆಂದು ಕರೆಸಿಕೊಂಡಿದ್ದಾನೆ. ಆದ್ದರಿಂದ ಜಾಯಮಾನತ್ವವೆಂಬ ಲಿಂಗವು ನಿರವಕಾಶವಾಗಿದೆ. ಭಾಷ್ಯದಲ್ಲಿ ಹೇಳಲ್ಪಟ್ಟ ಪ್ರಬಲವಾದ ಈ ಲಿಂಗದಿಂದ ದ್ಯುಭ್ವಾದ್ಯಾಯತನರಾದವರು ರುದ್ರಾದಿಗಳೇ ಆಗಿದ್ದಾರೆಂಬ ಪೂರ್ವಪಕ್ಷವನ್ನು ಮಾಡಬಹುದು.

**अनुव्याख्यानन्यायविवरणयोरुक्ता समाख्याऽपि निरवकाशैव । तत्र विष्णुलिङ्गानामश्रवणेन रुद्रादिशब्दानामन्तरधिकरणादिन्यायाविषयत्वात् ।**

ಅನುವ್ಯಾಖ್ಯಾನ ಹಾಗೂ ನ್ಯಾಯವಿವರಣೆಗಳಲ್ಲಿ ಹೇಳಲ್ಪಟ್ಟ ರುದ್ರಾದಿವಿಷಯಕವಾದ ಸಮಾಖ್ಯಾಪ್ರಮಾಣಗಳೂ ಸಹ ನಿರವಕಾಶವೇ ಆಗಿವೆ. ಏಕೆಂದರೆ ರುದ್ರಾದಿ ಸಮಾಖ್ಯಾಪ್ರಮಾಣಗಳಲ್ಲಿ ಯಾವುದೇ ವಿಷ್ಣುಲಿಂಗಗಳು ಕೇಳಿಸುತ್ತಿಲ್ಲ. ಆದ್ದರಿಂದ ರುದ್ರಾದಿಶಬ್ದಗಳು ಅಂತರಧಿಕರಣ ಮುಂತಾದ್ದರ ನ್ಯಾಯಕ್ಕೆ ವಿಷಯವಾಗಿರುವುದಿಲ್ಲ. ಒಂದು ವೇಳೆ ವಿಷ್ಣುಲಿಂಗಗಳು ಕೇಳಿಸುತ್ತಿದ್ದರೆ ಆವಾಗ ರುದ್ರ ಮೊದಲಾದ ಶಬ್ದಗಳು ವಿಷ್ಣುವನ್ನು ಪ್ರತಿಪಾದಿಸುತ್ತಿದ್ದವು.

**एवं पूर्वपक्षान्तरमपि टीकोक्तरीत्योपपाद्यम् । आत्मशब्दादिकं तु निरवकाश-जायमानत्वलिङ्गानुसारेण जीवादौ कथञ्चिन्नेयमिति ।**

ಹೀಗೆ ಜಾಯಮಾನತ್ವಲಿಂಗದಿಂದ ಅಥವಾ ಸಮಾಖ್ಯಾಪ್ರಮಾಣದಿಂದ ಪೂರ್ವಪಕ್ಷವನ್ನು ಮಾಡಬಹುದೆಂದು ತಿಳಿಯಬೇಕು. ಇದರಂತೆ ಬೇರೆ ಪೂರ್ವಪಕ್ಷವನ್ನೂ ಸಹ ಟೀಕೆಯಲ್ಲಿ ಹೇಳಿದಂತೆ ಉಪಪಾದಿಸಬೇಕು. ಆತ್ಮಶಬ್ದಾದಿಗಳನ್ನು ನಿರವಕಾಶವಾದ ಜಾಯಮಾನತ್ವವೆಂಬ ಲಿಂಗಕ್ಕೆ ಅನುಸಾರಿಯಾಗಿ ಜೀವಾದಿಗಳಲ್ಲಿ ಹೇಗಾದರೂ ಕೂಡಿಸಬೇಕು. ಅಂದರೆ ವಿಷ್ಣು ಹಾಗೂ ಜೀವರಿಗೆ ಅಭೇದವಿರುವ ಪ್ರಯುಕ್ತ ಆತ್ಮಶಬ್ದವನ್ನು ಹಾಗೂ ಮುಕ್ತೋಪಸೃಪ್ಯತ್ವವೇ ಮೊದಲಾದ ಲಿಂಗಗಳನ್ನು ಜೀವನಲ್ಲಿ ಕೂಡಿಸಬೇಕೆಂದು ತಿಳಿಯಬೇಕು. ಹೀಗೆ ಜಾಯಮಾನತ್ವವೆಂಬ ಲಿಂಗದಿಂದ ರುದ್ರಾದಿ ಸಮಾಖ್ಯಾಪ್ರಮಾಣಗಳಿಂದ, ಹಾಗೂ ಅಭೇದವಿರುವ ಪ್ರಯುಕ್ತ ಪೂರ್ವಪಕ್ಷವು ಸ್ಥಾಪಿತವಾಗುತ್ತದೆ.

**प्रकाशः –**

**तदुभयं वक्ष्यमाणदिशा न युक्तमिति भावेन निरवकाशलिङ्गेन प्रकरणादेः सर्वस्योपमर्देन सर्वमेव प्रकरणं विष्णवन्यपरमिति भाष्यटीकाभिमतं पूर्वपक्षं समर्थयितुमारभते – उच्यत इति ।।**

**ವಿವರಣೆ** - ಅದ್ವೈತಿಗಳ ಹಾಗೂ ರಾಮಾನುಜರ ಈ ಸಮರ್ಥನೆಯು ಮುಂದೆ ಹೇಳುವ ಪ್ರಕಾರ ಅತ್ಯಂತ ಅಯುಕ್ತವಾಗಿದೆ. ಆದ್ದರಿಂದ ಜಾಯಮಾನತ್ವವೆಂಬ ನಿರವಕಾಶಲಿಂಗದ ಬಲದಿಂದ ಪ್ರಕರಣ, ಸಮಾಖ್ಯಾ ಇವುಗಳೆಲ್ಲವೂ ಬಾಧಿತವಾಗುತ್ತವೆ. ಸಂಪೂರ್ಣಪ್ರಕರಣವು ವಿಷ್ಣುವನ್ನು ಬಿಟ್ಟು ಬೇರೆಯವರನ್ನೇ

ಪ್ರತಿಪಾದಿಸುತ್ತದೆಂಬ ಭಾಷ್ಯ ಹಾಗೂ ಟೀಕೆಗಳಿಗೆ ಸಮ್ಮತವಾದ ಪೂರ್ವಪಕ್ಷವನ್ನು ಸಮರ್ಥಿಸಲು ಹೊರಟಿದ್ದಾರೆ 'ಉಚ್ಯತೇ' ಇತ್ಯಾದಿ ಗ್ರಂಥದಿಂದ.

**प्रकाशः** – यदुक्तं लिङ्गप्रकरणे समाख्यातो बलवती इति । तत्सत्यम् । तथाऽपि निरवकाशजीवलिङ्गेन ब्रह्मलिङ्गप्रकरणयोर्नेयत्वात् । नच तदपि सावकाशमित्युक्तमिति वाच्यम् । तत्राह – **अनुव्याख्यान इति** ।।

ಹಿಂದೆ ಪ್ರಶ್ನಿಸುವಾಗ ಲಿಂಗ ಹಾಗೂ ಪ್ರಕರಣಗಳು, ಸಮಾಖ್ಯಾಪ್ರಮಾಣಕ್ಕಿಂತಲೂ ಬಲಿಷ್ಠವಾಗಿವೆಯೆಂದು ಹೇಳಿದ್ದಾರಲ್ಲವೇ? ಎಂದರೆ ಹೌದು, ಆದರೂ ಸಹ ನಿರವಕಾಶವಾದ ಜಾಯಮಾನತ್ವವೆಂಬ ಲಿಂಗದಿಂದ ಬ್ರಹ್ಮವಿಷಯದಲ್ಲಿರುವ ಲಿಂಗ ಹಾಗೂ ಪ್ರಕರಣಗಳು ಬಾಧಿತವಾಗುತ್ತವೆ. ಇನ್ನು ಜಾಯಮಾನತ್ವವೆಂಬ ಲಿಂಗವೂ ಸಹ ಸಾವಕಾಶವೆಂದು ಹೇಳಬಾರದು, ಈ ವಿಷಯವನ್ನು 'ಅನುವ್ಯಾಖ್ಯಾನೇ' ಎಂಬ ವಾಕ್ಯದಿಂದ ಸಮರ್ಥಿಸುತ್ತಿದ್ದಾರೆ.

**प्रकाशः** – प्रकारान्तरेण जायमानत्वं जीव एवेति प्रादुर्भावरूपमेव जननं जायमानशब्दार्थोऽस्त्वित्यतो वाऽह – **जननेति** ।।

ಮತ್ತೊಂದು ಬಗೆಯಲ್ಲಿ ಜಾಯಮಾನತ್ವವೆಂಬ ಲಿಂಗವು ಜೀವನಲ್ಲೇ ಬರುತ್ತದೆಂದು 'ಜನನ' ಇತ್ಯಾದಿ ವಾಕ್ಯದಿಂದ ಪ್ರತಿಪಾದಿಸುತ್ತಿದ್ದಾರೆ. ಅಥವಾ 'ಜನನ' ಶಬ್ದಕ್ಕೆ ಪ್ರಾದುರ್ಭಾವವೆಂಬರ್ಥವನ್ನೇ ಸ್ವೀಕರಿಸಿ, ಜಾಯಮಾನತ್ವವೆಂಬ ಲಿಂಗವು ವಿಷ್ಣುವಿನಲ್ಲಿ ಸಾವಕಾಶವಾಗಿದೆಯಲ್ಲವೇ? ಎಂಬ ಪ್ರಶ್ನೆಗೂ ಸಹ 'ಜನನ' ಇತ್ಯಾದಿ ವಾಕ್ಯದಿಂದಲೇ ಉತ್ತರಿಸುತ್ತಿದ್ದಾರೆ.

**प्रकाशः** – सम्भवाच्छ्रवणाच्चेति हेत्वोर्न जायमानत्वस्य सावकाशतेति पूर्वेणान्वयः । तस्यैवात्रानुषङ्गो वा – **जीवनादिति** ।। सर्वपालके पाल्यमानत्वादि-रूपजीवनायोगादिति भावः । **द्वितीयेति** ।। वियत्पादे "ज्ञोऽत एव" इत्यत्र जीवस्यास्तीत्युच्यते । "असम्भवस्तु सतोऽनुपपत्तेः" इत्यत्र ब्रह्मणो नेति वक्ष्यत इत्यर्थः । प्रादुर्भावो न जननशब्दार्थ इति भावः ।

ಜಾಯಮಾನತ್ವವು ಏಕೆ ಸಾವಕಾಶವಲ್ಲವೆಂದರೆ, ಹಿಂದಿನ ವಾಕ್ಯದಲ್ಲಿರುವ 'ಸಂಭವಾತ್', 'ಶ್ರವಣಾತ್' ಎಂಬುದನ್ನು ಅನ್ವಯ ಮಾಡಿಕೊಳ್ಳಬೇಕು. ಅಂದರೆ ಮರಣ ಹಾಗೂ ಜನನಗಳು ಚೇತನನಲ್ಲಿಯೇ ಕೂಡುವುದರಿಂದ ಎಂದು ಅನ್ವಯ. ಅಥವಾ 'ಸಂಭವಾತ್', 'ಶ್ರವಣಾತ್' ಎಂಬೆರಡು ಪದಗಳನ್ನು ಇಲ್ಲಿರುವ 'ನ ಜಾಯಮಾನತ್ವಸ್ಯ ಸಾವಕಾಶತಾ' ಎಂಬಲ್ಲಿ ಅನ್ವಯ ಮಾಡಬೇಕು.

ಗ್ರಂಥದಲ್ಲಿರುವ 'ಜೀವನಾದಿತಿ' ಎಂಬುದಕ್ಕೆ ಹೀಗರ್ಥ - ಪರಮಾತ್ಮನಲ್ಲಿ ಜನನವು ಇರುವುದಿಲ್ಲ. ಅದರಂತೆ ಸಕಲ ಪಾಲಕನಾದ್ದರಿಂದ ಪಾಲ್ಯಮಾನತ್ವವೂ ಇರುವುದಿಲ್ಲ. ಅಂದರೆ ರಕ್ಷಣೆ ಮಾಡುತ್ತಾನೆ

ಹೊರತು, ಮತ್ತೊಬ್ಬನಿಂದ ರಕ್ಷಿತನಾಗಿಲ್ಲ. ಹೀಗೆ ಹುಟ್ಟುವಿಕೆ ಮತ್ತು ರಕ್ಷಿಸಿಕೊಳ್ಳುವಿಕೆಯೆಂಬ ಜೀವನವು ಪರಮಾತ್ಮನಲ್ಲಿ ಕೂಡುವುದಿಲ್ಲ ಹೊರತು, ಜೀವನಲ್ಲೇ ಕೂಡುತ್ತದೆಂದು ಅಭಿಪ್ರಾಯ.

'ದ್ವಿತೀಯೇ' ಎಂದರೆ ವಿಯದಧಿಕರಣದಲ್ಲಿರುವ 'ಜ್ಞೋಽತ ಏವ' ಎಂಬ ಸೂತ್ರದಲ್ಲಿ ಜೀವನಿಗೆ ಜನನವು ಕೂಡುತ್ತದೆಂದು ಹೇಳಿರುತ್ತಾರೆ. 'ಅಸಂಭವಸ್ತು ಸತೋಽನುಪಪತ್ತೇಃ' ಎಂಬ ಸೂತ್ರದಲ್ಲಿ ಬ್ರಹ್ಮನಿಗೆ ಜನನವು ಕೂಡುವುದಿಲ್ಲವೆಂದು ಹೇಳಿದ್ದಾರೆ. ಆದ್ದರಿಂದ 'ಜನನ' ಶಬ್ದಕ್ಕೆ ಪ್ರಾದುರ್ಭಾವವೆಂಬರ್ಥವನ್ನು ವಿವಕ್ಷಿಸಲು ಸಾಧ್ಯವಿಲ್ಲ.

**प्रकाशः** – ननु जननं भगवत्यपि श्रुतमित्यत आह – **अजायमान इति** ।।

'ಜನಿ ಪ್ರಾದುರ್ಭಾವೇ' ಎಂದು 'ಜನಿ' ಶಬ್ದವು ಪ್ರಾದುರ್ಭಾವವೆಂಬರ್ಥದಲ್ಲಿಯೂ ಸಹ ಇರಬಹುದು. ಆದರೆ ನೀವೇ ಹೇಳುವಂತೆ ಪರಾಧೀನವಿಶೇಷವಾಪ್ತಿಯೇ ಜನನವಾದ್ದರಿಂದ ಇದನ್ನು ಪರಮಾತ್ಮನಲ್ಲಿ ಹೇಳಲು ಸಾಧ್ಯವಿಲ್ಲ. 'ಯತೋ ವಾ ಇಮಾನಿ ಭೂತಾನಿ ಜಾಯಂತೇ' ಎಂಬ ಶ್ರುತಿಯಲ್ಲಿ ಜನನವು ಭಗವಂತನಲ್ಲಿಯೂ ಸಹ ಕೇಳಿಸುತ್ತಿದೆಯಲ್ಲವೇ? ಎಂಬ ಪ್ರಶ್ನೆಗೆ 'ಅಜಾಯಮಾನಃ' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

**प्रकाशः** – एतेन ''जननमरणयोश्च'' इत्यादिना ग्रन्थेन ''स एषोऽन्तश्चरते बहुधा जायमान इति द्युभ्वाद्यायतने जीवलिङ्गश्रवणाज्जीवस्य तद्युक्तम्'' इत्युक्तयुक्ततोपपादिता । **तस्मात्** भगवति जननाभावात् ।

ಹೀಗೆ ಹೇಳಿದ್ದರಿಂದ 'ಜನನಮರಣಯೋಶ್ಚ' ಇತ್ಯಾದಿ ಗ್ರಂಥದಿಂದ 'ಸ ಏಷೋಽಂತಶ್ಚರತೇ ಬಹುಧಾ ಜಾಯಮಾನಃ' ಎಂಬುದಾಗಿ ದ್ಯುಭ್ವಾದ್ಯಾಯತನನಲ್ಲಿ ಜೀವಲಿಂಗವು ಕೇಳಿಸುತ್ತಿರುವುದರಿಂದ ಜೀವನಿಗೆ ದ್ಯುಭ್ವಾದ್ಯಾಯತನತ್ವವು ಯುಕ್ತವಾಗುತ್ತದೆಂಬ ಪೂರ್ವಪಕ್ಷವನ್ನು ಉಪಪಾದಿಸಿದಂತಾಯಿತು. 'ತಸ್ಮಾತ್' ಎಂಬ ಪದಕ್ಕೆ ಪರಮಾತ್ಮನಲ್ಲಿ ಜನನವು ಇಲ್ಲದ ಕಾರಣ ಎಂದರ್ಥ.

**प्रकाशः** – **निरवकाशेनेति** ।। ''ज्योतिर्दर्शनात्'' इत्यत्र ''स वा अयं पुरुषो जायमानश्शरीरमभिसम्पद्यमानः'' इति श्रुतजायमानत्वादेर्विष्णवसाधारणज्योतिश्श्रुत्या उपक्रमोपसंहाराभ्यामवगतब्रह्मपरैकवाक्यमध्यस्थतयाऽन्तर्णीतणिच्त्वेन ब्रह्मणि नयनमिति वक्ष्यते । नत्विह तथेति भावः ।

ವಾಸ್ತವಿಕವಾಗಿ ಈ ಅಧಿಕರಣವು 'ಜ್ಯೋತಿರ್ದರ್ಶನಾತ್' ಎಂಬ ಸೂತ್ರದಿಂದ ಪುನರುಕ್ತವಾಗಿದೆಯೆಂದೆನಿಸುತ್ತದೆ. ಏಕೆಂದರೆ 'ಜ್ಯೋತಿರ್ದರ್ಶನಾತ್' ಎಂಬ ಸೂತ್ರದಲ್ಲಿಯೂ ಸಹ 'ಸ ವಾ ಅಯಂ ಪುರುಷೋ ಜಾಯಮಾನಶ್ಶರೀರಮಭಿಸಂಪದ್ಯಮಾನಃ' ಎಂಬ ವಾಕ್ಯದಲ್ಲಿರುವ ಜಾಯಮಾನತ್ವವನ್ನು ವಿಷ್ಣುವಿನಲ್ಲಿ ಆಕ್ಷೇಪಿಸಿ ಉತ್ತರಿಸಿದ್ದಾರೆ. ಇಲ್ಲಿಯೂ ಸಹ ವಿಷ್ಣುವಿನಲ್ಲಿ ಅದೇ

ಜಾಯಮಾನತ್ವವನ್ನು ಆಕ್ಷೇಪಿಸಿ ಉತ್ತರಿಸುತ್ತಿರುವುದರಿಂದ ಪುನರುಕ್ತಿ ಬರುತ್ತದಲ್ಲವೇ? ಎಂಬ ಪ್ರಶ್ನೆ ಬರುತ್ತದೆ. ಆದರೆ 'ಜ್ಯೋತಿರ್ದರ್ಶನಾತ್' ಎಂಬ ಸೂತ್ರದಲ್ಲಿ ಸಮನ್ವಯ ಮಾಡುತ್ತಿರುವ ಜಾಯಮಾನ ಶಬ್ದವು ಅಂತರ್ಣೀತವಾದ ಣಿಚ್‌ಪ್ರತ್ಯಯಾಂತವಾಗಿದೆ. ಹಾಗಾಗಿ ಹುಟ್ಟಿಸುತ್ತಾನೆ ಎಂಬರ್ಥವನ್ನೇ ಅಲ್ಲಿರುವ ಜಾಯಮಾನ ಶಬ್ದಕ್ಕೆ ಹೇಳಬೇಕು. ಏಕೆಂದರೆ ಉಪಕ್ರಮ ಹಾಗೂ ಉಪಸಂಹಾರಗಳ ಬಲದಿಂದ ಸಮಗ್ರ ಪ್ರಕರಣವು ಬ್ರಹ್ಮಪರವಾಗಿದೆಯೆಂದು ನಿರ್ಣಿತವಾಗಿದೆ. ಆದ್ದರಿಂದ ಮಧ್ಯದಲ್ಲಿರುವ ಜಾಯಮಾನಶಬ್ದಕ್ಕೂ ಬ್ರಹ್ಮಪರವಾಗಿಯೇ ಅರ್ಥೈಸಬೇಕಾದ್ದರಿಂದ ಹೀಗೆ ಅಂತರ್ಣೀತವಾದ ಣಿಚ್‌ಪ್ರತ್ಯಯಾಂತವೆಂದು ಪರಿಗಣಿಸುವುದು ಅನಿವಾರ್ಯ. ಆದರೆ ಇಲ್ಲಿ ಸಮನ್ವಯ ಮಾಡುತ್ತಿರುವ ಜಾಯಮಾನ ಶಬ್ದಕ್ಕೆ ಹುಟ್ಟಿಸುತ್ತಾನೆ ಎಂದರ್ಥವಲ್ಲ ಹೊರತು, ಹುಟ್ಟುತ್ತಾನೆ ಎಂದರ್ಥ. ಏಕೆಂದರೆ ಅಲ್ಲಿರುವಂತೆ ಇಲ್ಲಿ ಉಪಕ್ರಮ ಹಾಗೂ ಉಪಸಂಹಾರಗಳ ಬಲದಿಂದ ಬ್ರಹ್ಮ ಪ್ರಕರಣವೆಂದು ನಿರ್ಣಯಿಸಲು ಸಾಧ್ಯವಿಲ್ಲ.

**प्रकाशः** – ननु जीवमात्रप्रापकलिङ्गेन कथं रुद्रादिरेवेत्युक्तिः । प्रापकसमाख्यायाश्च लिङ्गप्रकरणाभ्यां बाधोक्तेरित्यत आह – **अनुव्याख्यानेति** ।। **एवमिति** ।। रुद्रजीवपूर्वपक्षवत् प्रधानवायुपूर्वपक्ष इत्यर्थः ।

ಕೇವಲ ಜೀವಪ್ರಾಪಕವಾದ ಜಾಯಮಾನತ್ವಲಿಂಗದಿಂದ ರುದ್ರಾದಿಗಳು ದ್ಯುಭ್ವಾದ್ಯಾಯತನರಾಗಿದ್ದಾರೆಂಬ ಪೂರ್ವಪಕ್ಷವನ್ನು ಮಾಡಲು ಹೇಗೆ ಸಾಧ್ಯ ? ಇನ್ನು ರುದ್ರಾದಿಗಳ ವಿಷಯದಲ್ಲಿ ಸಮಾಖ್ಯಾಪ್ರಮಾಣವನ್ನು ಪ್ರಾಪಕವನ್ನಾಗಿ ಹೇಳಬೇಕು. ಆದರೆ ಅವುಗಳು ವಿಷ್ಣುವಿಷಯಕವಾದ ಲಿಂಗ ಹಾಗೂ ಪ್ರಕರಣಗಳಿಂದ ಬಾಧಿತವಾಗಿವೆಯಲ್ಲವೇ? ಎಂಬ ಪ್ರಶ್ನೆಗೆ 'ಅನುವ್ಯಾಖ್ಯಾನೇ' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. 'ಏವಮ್' ಎಂಬ ಪದಕ್ಕೆ ರುದ್ರ ಹಾಗೂ ಜೀವರ ವಿಷಯದಲ್ಲಿ ಮಾಡಿದ ಪೂರ್ವಪಕ್ಷದಂತೆ ಪ್ರಕೃತಿ ಹಾಗೂ ವಾಯು ವಿಷಯಕವಾದ ಪೂರ್ವಪಕ್ಷವನ್ನು ತಿಳಿಯಬೇಕೆಂದರ್ಥ.

**प्रकाशः** – प्रधानस्य सर्वोपादानत्वात् सर्वाधारत्वं युक्तम् । कापिलस्मृतिसिद्धं च । नच तस्याप्रामाण्यम् । दृष्टफलतद्वाक्यदृष्टान्तेन सर्वाश्रयत्वबोधिन्या अपि प्रामाण्यानुमानात् ।

ಪ್ರಕೃತಿಯು ಸಕಲಕ್ಕೂ ಉಪಾದಾನ ಕಾರಣವಾದ್ದರಿಂದ ಸರ್ವಾಧಾರವಾಗಿದೆಯೆಂಬುದು ಯುಕ್ತವಾಗಿದೆ. ಅಷ್ಟೇ ಅಲ್ಲದೆ ಕಾಪಿಲಸ್ಮೃತಿಯ ಆಧಾರದಿಂದಲೂ ಸಹ ಸಿದ್ಧವಾಗಿದೆ. ಇನ್ನು ಕಾಪಿಲಸ್ಮೃತಿಗೆ ಅಪ್ರಾಮಾಣ್ಯವನ್ನು ಹೇಳಲು ಸಾಧ್ಯವಿಲ್ಲ. ಯಾವ ವಾಕ್ಯದಿಂದ ಫಲವು ದೃಷ್ಟವಾಗಿದೆಯೋ, ಆ ವಾಕ್ಯದ ಪ್ರಾಮಾಣ್ಯದ ದೃಷ್ಟಾಂತದಿಂದ ಸರ್ವಾಶ್ರಯತ್ವವನ್ನು ಪ್ರತಿಪಾದಿಸುವ ವಾಕ್ಯಕ್ಕೂ ಸಹ ಪ್ರಾಮಾಣ್ಯವನ್ನು ಊಹಿಸಬಹುದು.

**प्रकाशः** – वायोश्च प्राणाद्याधारत्वं प्रसिद्धमेवेत्यादिरूपेणोपपाद्यमित्यर्थः ।

ಇನ್ನು ವಾಯುದೇವನು ಸಕಲ ಪ್ರಾಣಗಳಿಗೆ ಆಧಾರನಾಗಿದ್ದಾನೆಂಬ ವಿಷಯವು ಲೋಕಪ್ರಸಿದ್ಧವೇ ಆಗಿದೆ. ಈ ಕ್ರಮದಲ್ಲಿ ಪ್ರಕೃತಿ ಹಾಗೂ ವಾಯುದೇವತೆಯಲ್ಲಿ ಸರ್ವಾಶ್ರಯತ್ವವನ್ನು ಉಪಪಾದಿಸಬೇಕು.

ದ್ಯುಭ್ವಾದ್ಯಧಿಕರಣ (೧-೩-೧)

ಹೊರತು, ಮತ್ತೊಬ್ಬನಿಂದ ರಕ್ಷಿತನಾಗಿಲ್ಲ. ಹೀಗೆ ಹುಟ್ಟುವಿಕೆ ಮತ್ತು ರಕ್ಷಿಸಿಕೊಳ್ಳುವಿಕೆಯೆಂಬ ಜೀವನವು ಪರಮಾತ್ಮನಲ್ಲಿ ಕೂಡುವುದಿಲ್ಲ ಹೊರತು, ಜೀವನಲ್ಲೇ ಕೂಡುತ್ತದೆಂದು ಅಭಿಪ್ರಾಯ.

'ದ್ವಿತೀಯೇ' ಎಂದರೆ ವಿಯದಧಿಕರಣದಲ್ಲಿರುವ 'ಜ್ಞೋಽತ ಏವ' ಎಂಬ ಸೂತ್ರದಲ್ಲಿ ಜೀವನಿಗೆ ಜನನವು ಕೂಡುತ್ತದೆಂದು ಹೇಳಿರುತ್ತಾರೆ. 'ಅಸಂಭವಸ್ತು ಸತೋಽನುಪಪತ್ತೇಃ' ಎಂಬ ಸೂತ್ರದಲ್ಲಿ ಬ್ರಹ್ಮನಿಗೆ ಜನನವು ಕೂಡುವುದಿಲ್ಲವೆಂದು ಹೇಳಿದ್ದಾರೆ. ಆದ್ದರಿಂದ 'ಜನನ' ಶಬ್ದಕ್ಕೆ ಪ್ರಾದುರ್ಭಾವವೆಂಬರ್ಥವನ್ನು ವಿವಕ್ಷಿಸಲು ಸಾಧ್ಯವಿಲ್ಲ.

**प्रकाशः** – ननु जननं भगवत्यपि श्रुतमित्यत आह – अजायमान इति ॥

'ಜನಿ ಪ್ರಾದುರ್ಭಾವೇ' ಎಂದು 'ಜನಿ' ಶಬ್ದವು ಪ್ರಾದುರ್ಭಾವವೆಂಬರ್ಥದಲ್ಲಿಯೂ ಸಹ ಇರಬಹುದು. ಆದರೆ ನೀವೇ ಹೇಳುವಂತೆ ಪರಾಧೀನವಿಶೇಷವಾಪ್ತಿಯೇ ಜನನವಾದ್ದರಿಂದ ಇದನ್ನು ಪರಮಾತ್ಮನಲ್ಲಿ ಹೇಳಲು ಸಾಧ್ಯವಿಲ್ಲ. 'ಯತೋ ವಾ ಇಮಾನಿ ಭೂತಾನಿ ಜಾಯಂತೇ' ಎಂಬ ಶ್ರುತಿಯಲ್ಲಿ ಜನನವು ಭಗವಂತನಲ್ಲಿಯೂ ಸಹ ಕೇಳಿಸುತ್ತಿದೆಯಲ್ಲವೇ? ಎಂಬ ಪ್ರಶ್ನೆಗೆ 'ಅಜಾಯಮಾನಃ' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

**प्रकाशः** – एतेन ''जननमरणयोश्च'' इत्यादिना ग्रन्थेन ''स एषोऽन्तश्चरते बहुधा जायमान इति द्युभ्वाद्यायतने जीवलिङ्गश्रवणाज्जीवस्य तद्युक्तम्'' इत्युक्तयुक्ततोपपादिता । तस्मात् भगवति जननाभावात् ।

ಹೀಗೆ ಹೇಳಿದ್ದರಿಂದ 'ಜನನಮರಣಯೋಶ್ಚ' ಇತ್ಯಾದಿ ಗ್ರಂಥದಿಂದ 'ಸ ಏಷೋಽಂತಶ್ಚರತೇ ಬಹುಧಾ ಜಾಯಮಾನಃ' ಎಂಬುದಾಗಿ ದ್ಯುಭ್ವಾದ್ಯಾಯತನನಲ್ಲಿ ಜೀವಲಿಂಗವು ಕೇಳಿಸುತ್ತಿರುವುದರಿಂದ ಜೀವನಿಗೆ ದ್ಯುಭ್ವಾದ್ಯಾಯತನತ್ವವು ಯುಕ್ತವಾಗುತ್ತದೆಂಬ ಪೂರ್ವಪಕ್ಷವನ್ನು ಉಪಪಾದಿಸಿದಂತಾಯಿತು. 'ತಸ್ಮಾತ್' ಎಂಬ ಪದಕ್ಕೆ ಪರಮಾತ್ಮನಲ್ಲಿ ಜನನವು ಇಲ್ಲದ ಕಾರಣ ಎಂದರ್ಥ.

**प्रकाशः** – निरवकाशेनेति ॥ ''ज्योतिर्दर्शनात्'' इत्यत्र ''स वा अयं पुरुषो जायमानश्शरीरमभिसम्पद्यमानः'' इति श्रुतजायमानत्वादेर्विष्णवसाधारणज्योतिश्श्रुत्या उपक्रमोपसंहाराभ्यामवगतब्रह्मपरैकवाक्यमध्यस्थतयाऽन्तर्णीतणिच्त्वेन ब्रह्मणि नयनमिति वक्ष्यते । नत्विह तथेति भावः ।

ವಾಸ್ತವಿಕವಾಗಿ ಈ ಅಧಿಕರಣವು 'ಜ್ಯೋತಿರ್ದರ್ಶನಾತ್' ಎಂಬ ಸೂತ್ರದಿಂದ ಪುನರುಕ್ತವಾಗಿದೆಯೆಂದೆನಿಸುತ್ತದೆ. ಏಕೆಂದರೆ 'ಜ್ಯೋತಿರ್ದರ್ಶನಾತ್' ಎಂಬ ಸೂತ್ರದಲ್ಲಿಯೂ ಸಹ 'ಸ ವಾ ಅಯಂ ಪುರುಷೋ ಜಾಯಮಾನಶ್ಶರೀರಮಭಿಸಂಪದ್ಯಮಾನಃ' ಎಂಬ ವಾಕ್ಯದಲ್ಲಿರುವ ಜಾಯಮಾನತ್ವವನ್ನು ವಿಷ್ಣುವಿನಲ್ಲಿ ಆಕ್ಷೇಪಿಸಿ ಉತ್ತರಿಸಿದ್ದಾರೆ. ಇಲ್ಲಿಯೂ ಸಹ ವಿಷ್ಣುವಿನಲ್ಲಿ ಅದೇ

ಜಾಯಮಾನತ್ವವನ್ನು ಆಕ್ಷೇಪಿಸಿ ಉತ್ತರಿಸುತ್ತಿರುವುದರಿಂದ ಪುನರುಕ್ತಿ ಬರುತ್ತದಲ್ಲವೇ? ಎಂಬ ಪ್ರಶ್ನೆ ಬರುತ್ತದೆ. ಆದರೆ 'ಜ್ಯೋತಿರ್ದರ್ಶನಾತ್' ಎಂಬ ಸೂತ್ರದಲ್ಲಿ ಸಮನ್ವಯ ಮಾಡುತ್ತಿರುವ ಜಾಯಮಾನ ಶಬ್ದವು ಅಂತರ್ಣೀತವಾದ ಣಿಚ್‌ಪ್ರತ್ಯಯಾಂತವಾಗಿದೆ. ಹಾಗಾಗಿ ಹುಟ್ಟಿಸುತ್ತಾನೆ ಎಂಬರ್ಥವನ್ನೇ ಅಲ್ಲಿರುವ ಜಾಯಮಾನ ಶಬ್ದಕ್ಕೆ ಹೇಳಬೇಕು. ಏಕೆಂದರೆ ಉಪಕ್ರಮ ಹಾಗೂ ಉಪಸಂಹಾರಗಳ ಬಲದಿಂದ ಸಮಗ್ರ ಪ್ರಕರಣವು ಬ್ರಹ್ಮಪರವಾಗಿದೆಯೆಂದು ನಿರ್ಣೀತವಾಗಿದೆ. ಆದ್ದರಿಂದ ಮಧ್ಯದಲ್ಲಿರುವ ಜಾಯಮಾನಶಬ್ದಕ್ಕೂ ಬ್ರಹ್ಮಪರವಾಗಿಯೇ ಅರ್ಥೈಸಬೇಕಾದ್ದರಿಂದ ಹೀಗೆ ಅಂತರ್ಣೀತವಾದ ಣಿಚ್‌ಪ್ರತ್ಯಯಾಂತವೆಂದು ಪರಿಗಣಿಸುವುದು ಅನಿವಾರ್ಯ. ಆದರೆ ಇಲ್ಲಿ ಸಮನ್ವಯ ಮಾಡುತ್ತಿರುವ ಜಾಯಮಾನ ಶಬ್ದಕ್ಕೆ ಹುಟ್ಟಿಸುತ್ತಾನೆ ಎಂದರ್ಥವಲ್ಲ ಹೊರತು, ಹುಟ್ಟುತ್ತಾನೆ ಎಂದರ್ಥ. ಏಕೆಂದರೆ ಅಲ್ಲಿರುವಂತೆ ಇಲ್ಲಿ ಉಪಕ್ರಮ ಹಾಗೂ ಉಪಸಂಹಾರಗಳ ಬಲದಿಂದ ಬ್ರಹ್ಮ ಪ್ರಕರಣವೆಂದು ನಿರ್ಣಯಿಸಲು ಸಾಧ್ಯವಿಲ್ಲ.

**प्रकाशः** – ननु जीवमात्रप्रापकलिङ्गेन कथं रुद्रादिरेवेत्युक्तिः । प्रापकसमाख्यायाश्च लिङ्गप्रकरणाभ्यां बाधोक्तेरित्यत आह – **अनुव्याख्यानेति** ।। **एवमिति** ।। रुद्रजीवपूर्वपक्षवत् प्रधानवायुपूर्वपक्ष इत्यर्थः ।

ಕೇವಲ ಜೀವಪ್ರಾಪಕವಾದ ಜಾಯಮಾನತ್ವಲಿಂಗದಿಂದ ರುದ್ರಾದಿಗಳು ದ್ಯುಭ್ವಾದ್ಯಾಯತನರಾಗಿದ್ದಾರೆಂಬ ಪೂರ್ವಪಕ್ಷವನ್ನು ಮಾಡಲು ಹೇಗೆ ಸಾಧ್ಯ ? ಇನ್ನು ರುದ್ರಾದಿಗಳ ವಿಷಯದಲ್ಲಿ ಸಮಾಖ್ಯಾಪ್ರಮಾಣವನ್ನು ಪ್ರಾಪಕವನ್ನಾಗಿ ಹೇಳಬೇಕು. ಆದರೆ ಅವುಗಳು ವಿಷ್ಣುವಿಷಯಕವಾದ ಲಿಂಗ ಹಾಗೂ ಪ್ರಕರಣಗಳಿಂದ ಬಾಧಿತವಾಗಿವೆಯಲ್ಲವೇ? ಎಂಬ ಪ್ರಶ್ನೆಗೆ 'ಅನುವ್ಯಾಖ್ಯಾನೇ' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. 'ಏವಮ್' ಎಂಬ ಪದಕ್ಕೆ ರುದ್ರ ಹಾಗೂ ಜೀವರ ವಿಷಯದಲ್ಲಿ ಮಾಡಿದ ಪೂರ್ವಪಕ್ಷದಂತೆ ಪ್ರಕೃತಿ ಹಾಗೂ ವಾಯು ವಿಷಯಕವಾದ ಪೂರ್ವಪಕ್ಷವನ್ನು ತಿಳಿಯಬೇಕೆಂದರ್ಥ.

**प्रकाशः** – प्रधानस्य सर्वोपादानत्वात् सर्वाधारत्वं युक्तम् । कापिलस्मृतिसिद्धं च । नच तस्याप्रामाण्यम् । दृष्टफलतद्वाक्यदृष्टान्तेन सर्वाश्रयत्वबोधिन्या अपि प्रामाण्यानुमानात् ।

ಪ್ರಕೃತಿಯು ಸಕಲಕ್ಕೂ ಉಪಾದಾನ ಕಾರಣವಾದ್ದರಿಂದ ಸರ್ವಾಧಾರವಾಗಿದೆಯೆಂಬುದು ಯುಕ್ತವಾಗಿದೆ. ಅಷ್ಟೇ ಅಲ್ಲದೆ ಕಾಪಿಲಸ್ಮೃತಿಯ ಆಧಾರದಿಂದಲೂ ಸಹ ಸಿದ್ಧವಾಗಿದೆ. ಇನ್ನು ಕಾಪಿಲಸ್ಮೃತಿಗೆ ಅಪ್ರಾಮಾಣ್ಯವನ್ನು ಹೇಳಲು ಸಾಧ್ಯವಿಲ್ಲ. ಯಾವ ವಾಕ್ಯದಿಂದ ಫಲವು ದೃಷ್ಟವಾಗಿದೆಯೋ, ಆ ವಾಕ್ಯದ ಪ್ರಾಮಾಣ್ಯದ ದೃಷ್ಟಾಂತದಿಂದ ಸರ್ವಾಶ್ರಯತ್ವವನ್ನು ಪ್ರತಿಪಾದಿಸುವ ವಾಕ್ಯಕ್ಕೂ ಸಹ ಪ್ರಾಮಾಣ್ಯವನ್ನು ಊಹಿಸಬಹುದು.

**प्रकाशः** – वायोश्च प्राणाद्याधारत्वं प्रसिद्धमेवेत्यादिरूपेणोपपाद्यमित्यर्थः ।

ಇನ್ನು ವಾಯುದೇವನು ಸಕಲ ಪ್ರಾಣಗಳಿಗೆ ಆಧಾರನಾಗಿದ್ದಾನೆಂಬ ವಿಷಯವು ಲೋಕಪ್ರಸಿದ್ಧವೇ ಆಗಿದೆ. ಈ ಕ್ರಮದಲ್ಲಿ ಪ್ರಕೃತಿ ಹಾಗೂ ವಾಯುದೇವತೆಯಲ್ಲಿ ಸರ್ವಾಶ್ರಯತ್ವವನ್ನು ಉಪಪಾದಿಸಬೇಕು.

ದ್ಯುಭ್ವಾದ್ಯಧಿಕರಣ (೧-೩-೧)

**प्रकाशः – तर्हि श्रुतिलिङ्गप्रकरणानां का गतिरित्यत आह – आत्मेति ।। कथञ्चिदिति ।। जीवेशाभेदादिनेति भावः ।**

ಹಾಗಾದರೆ ವಿಷ್ಣು ವಿಷಯಕವಾದ ಆತ್ಮಶ್ರುತಿ, ಮುಕ್ತೋಪಸೃಪ್ಯತ್ವವೇ ಮೊದಲಾದ ಲಿಂಗಗಳು ಪರವಿದ್ಯಾ ವಿಷಯಕವಾಗಿ ಪ್ರಾರಂಭವಾಗುವ ಪ್ರಕರಣ ಇವುಗಳಿಗೆಲ್ಲ ಏನು ಗತಿ? ಎಂಬ ಪ್ರಶ್ನೆಗೆ 'ಆತ್ಮಾ' ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾರೆ. ಅಂದರೆ ಜೀವಬ್ರಹ್ಮರಿಗೆ ಐಕ್ಯವಿರುವ ಕಾರಣ ಬ್ರಹ್ಮನಲ್ಲಿರುವ ಮುಕ್ತೋಪಸೃಪ್ಯತ್ವಾದಿಗಳನ್ನು ಜೀವಾದಿಗಳಲ್ಲಿಯೂ ಸಹ ಕೂಡಿಸಬಹುದೆಂಬ ಉತ್ತರವನ್ನು ತಿಳಿಯಬೇಕು.

**गुरुराजीयम् – जीवमात्रादेश्चेति । यद्यप्यत्र वायोरपि निरासः । तथाऽपि प्रकृतिरुद्रजीववत् स्वशब्देन सूत्रेऽनुपादानाच्चानुकृष्टस्य वायोः साक्षान्निरासाभावाद्वा जीववद्बहुग्रन्थेनानिरासाद्वा अन्यसाहित्येन निरासेऽपि भूमाधिकरणवत् केवलस्यानिरासाद्वा मात्रपदेन तद्व्यवच्छेद इति ज्ञेयम् । आदिपदेन वायुनीचो गरुडो ग्राह्यः ।**




ಇದುವರೆಗೂ ಮಾಡಿದ ಪ್ರಶ್ನೆಗೆ ಹೀಗೆ ಉತ್ತರ - ಜಾಯಮಾನತ್ವವೆಂಬ ಲಿಂಗವು ಆನಂದಮಯಾಧಿಕರಣದಿಂದಾಗಲೀ, 'ಕಾರಣತ್ವೇನ ಚ' ಎಂಬ ಸೂತ್ರದಿಂದಾಗಲೀ ಸಾವಕಾಶವಾಗಲು ಸಾಧ್ಯವೇ ಇಲ್ಲ. ಈ ಅಧಿಕರಣದ ಸಿದ್ಧಾಂತವನ್ನು ವಿವಕ್ಷಿಸಿ ಆನಂದಮಯಾಧಿಕರಣದಲ್ಲಿ ಜಾಯಮಾನ ಶಬ್ದಕ್ಕೆ ಪ್ರಾದುರ್ಭಾವವೆಂಬರ್ಥವನ್ನು ಹೇಳಿರುತ್ತಾರೆ. ಹೀಗಿರುವಾಗ ಆ ಅಧಿಕರಣದ ವಚನದಿಂದ ಇಲ್ಲಿ ಸಾವಕಾಶತ್ವವನ್ನು ಸ್ಥಾಪಿಸಲು ಸಾಧ್ಯವಿಲ್ಲ. ಮತ್ತು 'ಕಾರಣತ್ವೇನ' ಇತ್ಯಾದಿ ಸೂತ್ರದಲ್ಲಿಯೂ ಒಬ್ಬನೇ ವ್ಯಕ್ತಿಗೆ ಕಾರ್ಯಕಾರಣಭಾವವು ವಿರುದ್ಧವಾಗುತ್ತದಲ್ಲವೇ? ಎಂಬ ಆಶಂಕೆಗೆ ಉತ್ತರವನ್ನು ನೀಡಿದ್ದಾರೆ ಹೊರತು, ಯಾವುದೇ ತರಹದ ಜನನವಿಲ್ಲದ ಪರಮಾತ್ಮನಿಗೆ ಹುಟ್ಟುವಿಕೆ ಎಂಬುದು ಹೇಗೆ ಕೂಡುತ್ತದೆ ಎಂಬ ಆಶಂಕೆಯು ಅಲ್ಲಿ ಪ್ರಸಕ್ತವೇ ಆಗಿಲ್ಲ. ಅದಕ್ಕೆ ಉತ್ತರವನ್ನೂ ಸಹ ಅದಕ್ಕೆ ನೀಡಿರುವುದಿಲ್ಲ. ಆದ್ದರಿಂದ ಜಾಯಮಾನತ್ವವೆಂಬ ಲಿಂಗವು ಸಾವಕಾಶವಾಗಲು ಸಾಧ್ಯವಿಲ್ಲ; ಹೊರತಾಗಿ ನಿರವಕಾಶವೇ ಆಗಿದೆ. ಏಕೆಂದರೆ ಜನನವಿರುವಂತಹ ಚೇತನನಲ್ಲಿಯೇ ಮರಣವಿರಬೇಕು. 'ಯತೋ ವಾ ಇಮಾನಿ ಭೂತಾನಿ ಜಾಯಂತೇ' ಎಂದು ಚೇತನನಾದ ಜೀವನಲ್ಲಿ ಜನನವು ಕೇಳಿಸುತ್ತಿದೆ. ದೇಹತ್ಯಾಗವೆಂಬ ಮರಣಶೀಲನಾದ ಜೀವನಲ್ಲಿಯೇ ಇದನ್ನು ಕೂಡಿಸಬೇಕು; ಹೊರತು ಮರಣವಿಲ್ಲದ ಪರಮಾತ್ಮನಲ್ಲಿ ಇಂತಹ ಜನನವನ್ನು ಹೇಳುವುದು ತಪ್ಪಾಗುತ್ತದೆ. ಮತ್ತು ಜನನ ಶಬ್ದಕ್ಕೆ ಭೌತಿಕವಾದ ಶರೀರವನ್ನು ಸ್ವೀಕರಿಸುವುದು ಎಂದರ್ಥ. ಅಥವಾ ಅಸ್ವಾತಂತ್ರ್ಯವನ್ನು ಹೊಂದುವುದು ಎಂದರ್ಥ. ಇವೆರಡನ್ನೂ ಸಹ ಪರಮಾತ್ಮನಲ್ಲಿ ಹೇಳಲು ಸಾಧ್ಯವಿಲ್ಲ. ಆದ್ದರಿಂದ ಜಾಯಮಾನತ್ವವೆಂಬ ಧರ್ಮವೂ ಜೀವನಲ್ಲಿ ಮಾತ್ರ ಬರುತ್ತದೆ ಹೊರತು, ಪರಮಾತ್ಮನಲ್ಲಿ ಬರುವುದಿಲ್ಲ. ಇಂತಹ ಬಲಿಷ್ಠವಾದ ಲಿಂಗದಿಂದ ದ್ಯುಭ್ವಾದ್ಯಾಯತನರಾದವರು ಜೀವರೆನಿಸಿದ ರುದ್ರಾದಿಗಳೇ ಆಗುತ್ತಾರೆ. ಪರಮಾತ್ಮನಾಗಲು ಸಾಧ್ಯವಿಲ್ಲ.

ಅನುವ್ಯಾಖ್ಯಾನ ಹಾಗೂ ನ್ಯಾಯವಿವರಣಗಳಲ್ಲಿ ಹೇಳಲ್ಪಟ್ಟ ಸಮಾಖ್ಯಾಪ್ರಮಾಣವೂ ಸಹ ನಿರವಕಾಶವೇ ಆಗಿದೆ. ಏಕೆಂದರೆ ಸಮಾಖ್ಯಾಪ್ರಮಾಣಗಳಲ್ಲಿ ಯಾವುದೇ ವಿಷ್ಣುಲಿಂಗಗಳು ಕೇಳಿಸುತ್ತಿಲ್ಲ. ಹಾಗೇನಾದರೂ ಕೇಳಿಸಿದ್ದರೆ 'ಅಂತಸ್ತದ್ಧರ್ಮೋಪದೇಶಾತ್' ಎಂಬ ಸೂತ್ರದ ನ್ಯಾಯದಂತೆ ಆ ಪ್ರಮಾಣಗಳು ವಿಷ್ಣುಪರವೆಂದು ಸಮರ್ಥಿಸಬಹುದಿತ್ತು. ಆದ್ದರಿಂದ ಜಾಯಮಾನತ್ವವೆಂಬ ಲಿಂಗದಂತೆ ಸಮಾಖ್ಯಾಪ್ರಮಾಣವೂ ಸಹ ನಿರವಕಾಶವೇ ಆಗಿದೆ. ಇನ್ನು ವಿಷ್ಣುವಿಷಯಕವಾದ ಆತ್ಮಶಬ್ದ, ಮುಕ್ತೋಪಸೃಪ್ಯತ್ವವೆಂಬ ಲಿಂಗ, ಪರವಿದ್ಯಾವಿಷಯತ್ವವೆಂಬ ಪ್ರಕರಣ ಇವುಗಳನ್ನೆಲ್ಲಾ ಜೀವಬ್ರಹ್ಮರ ಐಕ್ಯದಿಂದ ಜೀವರಲ್ಲಿ ಕೂಡಿಸಬೇಕು. ಆದ್ದರಿಂದ ದ್ಯುಭ್ವಾದ್ಯಾಯತನರಾದವರು ರುದ್ರ, ಪ್ರಕೃತಿ, ಜೀವಾದಿಗಳೇ ಆಗುತ್ತಾರೆ ಹೊರತು, ವಿಷ್ಣುವಲ್ಲವೆಂಬ ಪೂರ್ವಪಕ್ಷವು ಸ್ಥಾಪಿತವಾಯಿತು.





## ಸಿದ್ಧಾಂತ
## ವಿಷ್ಣುವಿನ ಹುಟ್ಟು ಲೋಕವಿಲಕ್ಷಣ

**तात्पर्यचन्द्रिका**

**सिद्धान्तस्तु –**

**अचेतनजनेरन्या चेतनस्य जनिर्यथा ।**
**तथोभयजनेरन्या ब्रह्मणोऽपि जनिर्मता ।। १ ।।**

ಅನುವಾದ - ಸಿದ್ಧಾಂತ ಹೀಗಿದೆ - ಲೋಕದಲ್ಲಿ ಅಚೇತನ ಪದಾರ್ಥದ ಹುಟ್ಟುವಿಕೆಯು, ಚೇತನಪದಾರ್ಥದ ಹುಟ್ಟುವಿಕೆಗಿಂತ ವಿಲಕ್ಷಣವಾಗಿರುವುದು ಕಂಡಿದೆ. ಅದರಂತೆ ಚೇತನ ಹಾಗೂ ಅಚೇತನಗಳ ಹುಟ್ಟುವಿಕೆಗಿಂತ ಬ್ರಹ್ಮನ ಹುಟ್ಟುವಿಕೆಯು ವಿಲಕ್ಷಣವಾಗಿದೆ.

**"अजायमानो बहुधा विजायते" इति ब्रह्मणोऽपि जनेः प्रमितत्वात् प्रसिद्धाचेतनाचेतनजननादन्यैव प्रादुर्भावरूपा ब्रह्मणो जनिरस्तु ।**

'ಅಜಾಯಮಾನೋ ಬಹುಧಾ ವಿಜಾಯತೇ' ಎಂಬ ವಾಕ್ಯದಿಂದ ಬ್ರಹ್ಮನಿಗೂ ಸಹ ಜನನವು ಇದೆಯೆಂಬುದು ಪ್ರಮಿತವಾಗಿದೆ. ಆದ್ದರಿಂದ ಪ್ರಸಿದ್ಧವಾದ ಚೇತನ ಹಾಗೂ ಅಚೇತನಗಳ ಜನನಕ್ಕಿಂತ ವಿಲಕ್ಷಣವಾದ ಪ್ರಾದುರ್ಭಾವವನ್ನು ಬ್ರಹ್ಮನ ಜನನವೆಂದು ಹೇಳಬಹುದು.

**'किन्तु निर्दोषचैतन्यसुखां नित्यां स्वकां तनुम् ।**
**प्रकाशयति सैवेयं जनिर्विष्णोर्न चापरा ।।' इत्यादिस्मृतेः ।**

ಪರಮಾತ್ಮನಿಗೆ ಪ್ರಾದುರ್ಭಾವವೆಂಬ ಜನನವನ್ನೇ ಹೇಳಬೇಕು. ಏಕೆಂದರೆ ನಿರ್ದುಷ್ಟವಾದ ಚೈತನ್ಯಾತ್ಮಕವಾದ ನಿತ್ಯವಾದ ತನ್ನ ಸ್ವರೂಪವೇ ಆದ ಸುಖವನ್ನು ಹೊಂದಿದವನಾಗಿ ಬೇರೆ ಬೇರೆ ರೂಪಗಳಿಂದ ತನ್ನ ಶರೀರವನ್ನು ಪ್ರಕಟಪಡಿಸುತ್ತಾನೆ. ಇದನ್ನೇ ವಿಷ್ಣುವಿನ ಜನನವೆನ್ನಬಹುದು. ಬೇರೆ ರೀತಿಯ ಜನನವಿರುವುದಿಲ್ಲ. ಇತ್ಯಾದಿ ಸ್ಮೃತಿಗಳಿಂದ ಮತ್ಸ್ಯ, ಕೂರ್ಮ ಮೊದಲಾದ ರೂಪಗಳಿಂದ ಭಗವಂತನ ಪ್ರಾದುರ್ಭಾವವೇ ಜನನವೆನಿಸುತ್ತದೆಂದು ತಿಳಿಯುತ್ತದೆ.

**''अजायमानः'' इत्यादिवाक्यं च ब्रह्मपरमेव । ''तमेवं विद्वानमृत इह भवति'' इत्यादितल्लिङ्गात्पुरुषसूक्तस्थत्वाच्च ।**

'ಅಜಾಯಮಾನಃ' ಎಂಬ ವಾಕ್ಯವೂ ಸಹ ಬ್ರಹ್ಮಪರವೇ ಆಗಿದೆ. ಏಕೆಂದರೆ 'ತಮೇವಂ ವಿದ್ವಾನಮೃತ ಇಹ ಭವತಿ' ಇತ್ಯಾದಿಯಾಗಿ ಮುಕ್ತೋಪಸೃಪ್ಯತ್ವವೆಂಬ ನಿರವಕಾಶವಾದ ಲಿಂಗವಿರುವುದರಿಂದ ಮತ್ತು ಪುರುಷಸೂಕ್ತದಲ್ಲಿಯೂ ಹೇಳಿರುವುದರಿಂದ ಎಂದರೆ ಪುರುಷಸೂಕ್ತವು ವಿಷ್ಣುಪರವಾದ್ದರಿಂದ ಈ ವಾಕ್ಯವೂ ವಿಷ್ಣುಪರವೇ ಆಗುತ್ತದೆ. ಆದ್ದರಿಂದ ಜೀವಪರವಾಗಿ ಈ ವಾಕ್ಯವನ್ನು ಅರ್ಥೈಸಬಾರದು.

**एवं चात्मश्रुत्याद्यनुसाराजायमानत्वलिङ्गमेव गौणं नेयम् । नतु विपरीतम् ।**

ಆದ್ದರಿಂದ ಸೂತ್ರದಲ್ಲಿರುವ 'ಸ್ವಶಬ್ದಾತ್' ಎಂಬ ಭಾಗದಿಂದ ತಿಳಿಸಿದ ಆತ್ಮಶ್ರುತಿಗೆ ಅನುಸಾರಿಯಾಗಿ ಜಾಯಮಾನತ್ವವೆಂಬ ಲಿಂಗವನ್ನೇ ಗೌಣವನ್ನಾಗಿ ಮಾಡಬೇಕು ಹೊರತು, ಜಾಯಮಾನತ್ವವೆಂಬ ಲಿಂಗದಿಂದ ಆತ್ಮಶ್ರುತಿಗೆ ಗೌಣಾರ್ಥವನ್ನು ಮಾಡಬಾರದು.

**समाख्याऽपि सावकाशा । भाष्योक्तश्रुतिस्मृतिभी रुद्रादिशब्दानां विष्णावेव मुख्यत्वात् । मुक्तोपसृप्यत्वादिकं तु निरवकाशमिति भाष्य एवोक्तम् ।**

ರುದ್ರಾದಿಗಳ ವಿಷಯದಲ್ಲಿರುವ ಸಮಾಖ್ಯಾಪ್ರಮಾಣವೂ ಸಾವಕಾಶವಾಗಿದೆ. ಭಾಷ್ಯದಲ್ಲಿ ಉದಾಹರಿಸಲ್ಪಟ್ಟ ಅನೇಕ ಶ್ರುತಿಸ್ಮೃತಿಗಳಿಂದ ರುದ್ರ, ಅಂತಕ ಮೊದಲಾದ ಶಬ್ದಗಳೆಲ್ಲವೂ ವಿಷ್ಣುವನ್ನೇ ಮುಖ್ಯವಾಗಿ ಪ್ರತಿಪಾದಿಸುತ್ತದೆ. ಮುಕ್ತೋಪಸೃಪ್ಯತ್ವವೆಂಬ ಲಿಂಗವೂ ಸಹ ವಿಷ್ಣುವಿಷಯದಲ್ಲಿ ನಿರವಕಾಶವಾಗಿದೆಯೆಂದು ಭಾಷ್ಯದಲ್ಲಿಯೇ ಸ್ಪಷ್ಟವಾಗಿ ಹೇಳಿದ್ದಾರೆ.

**प्रकाशः –**

अत्र निरवकाशजन्मरूपजीवलिङ्गादिना स्वशब्दादिसिद्धान्तहेतूनामन्यथानयनात् तत्सावकाशत्वोक्त्यैव स्वशब्दादेस्साधकत्वं नान्यथेति भावेन ''अतच्छब्दात्'' इति सूत्रखण्डसूचितम् ''अजायमानो बहुधा विजायत इति तस्यैव बहुधाजन्मोक्तेः'' इति भाष्याद्युक्तं जीवलिङ्गसावकाशत्वं तावद्व्यनक्ति – अचेतनेति ।।

ಪರಿಪೂರ್ಣಚಂದ್ರಿಕಾ

ವಿವರಣೆ - ಸಿದ್ಧಾಂತವನ್ನು ಪ್ರಾರಂಭಿಸುತ್ತಿದ್ದಾರೆ. ಜಾಯಮಾನತ್ವವೆಂಬ ಲಿಂಗವು ರುದ್ರಾದಿಗಳ ವಿಷಯದಲ್ಲಿ ನಿರವಕಾಶವಾಗಿದೆ. ಇಂತಹ ಲಿಂಗದಿಂದ 'ಸ್ವಶಬ್ದಾತ್' ಎಂಬ ಸೂತ್ರದ ಭಾಗದಿಂದ ತಿಳಿಯಲ್ಪಟ್ಟ, ಆತ್ಮಶಬ್ದವನ್ನು ಗೌಣವನ್ನಾಗಿ ವ್ಯಾಖ್ಯಾನಿಸಬೇಕೆಂದು ಪೂರ್ವಪಕ್ಷಕಾರರು ಆಕ್ಷೇಪಿಸಿದ್ದಾರೆ. ಆದ್ದರಿಂದ ಎಲ್ಲಿಯ ತನಕ ಸಿದ್ಧಾಂತಿಗಳು ಜಾಯಮಾನತ್ವವೆಂಬ ಲಿಂಗವನ್ನು ಸಾವಕಾಶವೆಂದು ಸಮರ್ಥಿಸುವುದಿಲ್ಲವೋ? ಅಲ್ಲಿಯ ತನಕ 'ಸ್ವಶಬ್ದಾತ್' ಎಂಬ ಸೂತ್ರದಿಂದ ತಿಳಿಯಲ್ಪಟ್ಟ ಆತ್ಮಶಬ್ದವೆಂಬ ಹೇತು ನಿರವಕಾಶವೆಂದು ಸಿದ್ಧವಾಗುವುದಿಲ್ಲ. ಅದಕ್ಕೋಸ್ಕರ ಮೊದಲು ಜಾಯಮಾನತ್ವವೆಂಬ ಲಿಂಗಕ್ಕೆ ಸಾವಕಾಶತ್ವವನ್ನು ಸಮರ್ಥಿಸಲು ಹೊರಟಿದ್ದಾರೆ. ಇದರಿಂದ ವಿಷ್ಣುವಿಷಯಕವಾದ ಆತ್ಮಶಬ್ದವೆಂಬ ಹೇತು ನಿರವಕಾಶವಾಗುತ್ತದೆ. ಈ ಅಭಿಪ್ರಾಯದಿಂದ 'ಅತಚ್ಛಬ್ದಾತ್' ಎಂಬ ಸೂತ್ರಭಾಗದಿಂದ ಜೀವವಿಷಯಕವಾದ ಜಾಯಮಾನತ್ವಲಿಂಗವು ಸಾವಕಾಶವಾಗಿದೆಯೆಂದು ಸಾಧಿಸಿದ್ದಾರೆ. ಭಾಷ್ಯದಲ್ಲಿಯೂ ಸಹ 'ಅಜಾಯಮಾನೋ ಬಹುಧಾ ವಿಜಾಯತೇ ಇತಿ ತಸ್ಯೈವ ಬಹುಧಾಜನ್ಮೋಕ್ತೇಃ' ಎಂಬ ಮಾತಿನಿಂದ ವಿಷ್ಣುವಿನಲ್ಲಿ ಜಾಯಮಾನತ್ವವನ್ನು ಸಾವಕಾಶ ಮಾಡಿದ್ದಾರೆ. ಸೂತ್ರ ಹಾಗೂ ಭಾಷ್ಯದಲ್ಲಿ ಹೇಳಲ್ಪಟ್ಟ ಜಾಯಮಾನತ್ವದ ಸಾವಕಾಶತ್ವವನ್ನು ಗ್ರಂಥದಲ್ಲಿ 'ಅಚೇತನ' ಎಂಬ ಶ್ಲೋಕದಿಂದ ವ್ಯಾಖ್ಯಾನಿಸಿದ್ದಾರೆ.

**प्रकाशः** – परिणामरूपजनेरन्या देहयोगरूपेत्यर्थः । ''ज्ञोऽत एव'' इत्यत्राग्रे स्पष्टेति भावः । चेतनाचेतनजनेः प्रमितत्वात् साऽन्याऽन्यास्तु । नचैवं ब्रह्मणीत्यतः प्रमाणं वदन्नन्येत्युक्तजनिस्वरूपं चाह – **अजायमान इति** ।।

ಅಚೇತನಕ್ಕೆ ಪರಿಣಾಮವೆಂಬುದೇ ಜನನವೆನಿಸುತ್ತದೆ. ಆದರೆ ಚೇತನನಿಗೆ ದೇಹದ ಸಂಬಂಧವು ಜನನವೆನಿಸುತ್ತದೆ. ಹೀಗೆ ಅಚೇತನದ ಜನನಕ್ಕಿಂತ ಚೇತನನ ಜನನವು ಭಿನ್ನವಾಗಿದೆಯೆಂದು ಲೋಕದಲ್ಲಿ ಸಿದ್ಧವಾಗಿದೆ. ಈ ವಿಚಾರವು 'ಜ್ಞೋऽತ ಏವ' ಎಂಬ ಸೂತ್ರದಿಂದ ಮುಂದೆ ಸ್ಪಷ್ಟವಾಗುತ್ತದೆ. ಚೇತನ ಹಾಗೂ ಅಚೇತನಗಳ ಜನನವು ಪ್ರಮಿತವಾದ್ದರಿಂದ ಭಿನ್ನಭಿನ್ನವಾಗಲಿ, ಆದರೆ ಬ್ರಹ್ಮನ ಜನನವು ಪ್ರಮಿತವಲ್ಲದ ಕಾರಣ ಭಿನ್ನವಾಗಲು ಹೇಗೆ ಸಾಧ್ಯ? ಎಂಬ ಪ್ರಶ್ನೆಗೆ ಪ್ರಮಾಣವನ್ನು ಹೇಳುತ್ತಾ ಬ್ರಹ್ಮನ ವಿಷಯದಲ್ಲಿ ಜನನ ಶಬ್ದಕ್ಕೆ ಯಾವ ಅರ್ಥವನ್ನು ಹೇಳಬೇಕೆಂದು 'ಅಜಾಯಮಾನಃ' ಎಂಬ ವಾಕ್ಯದಿಂದ ಸ್ಪಷ್ಟಪಡಿಸುತ್ತಿದ್ದಾರೆ.

**प्रकाशः** – देहादिना जननहीनस्सन् बहुधा नाना मत्स्यकूर्मवराहाद्यात्मना प्रादुर्भवतीत्यर्थः – **प्रादुर्भावरूपेति** ।। कुत इत्यत आह – **किं त्विति** ।।

ದೇಹದ ಪ್ರಯುಕ್ತವಾಗಿ ವಿಷ್ಣುವಿಗೆ ಜನನವಿರುವುದಿಲ್ಲ. ಹೊರತಾಗಿ, ಬಹುಧಾ = ಮತ್ಸ್ಯ, ಕೂರ್ಮ, ವರಾಹ ಮೊದಲಾದ ರೂಪಗಳಿಂದ ವಿಜಾಯತೇ = ಪ್ರಾದುರ್ಭವಿಸುತ್ತಾನೆ. ಆದ್ದರಿಂದಲೇ ಶ್ರುತಿಯು 'ಬಹುಧಾ ವಿಜಾಯತೇ' ಎಂದು ಪರಮಾತ್ಮನನ್ನು ಕುರಿತು ಹೇಳಿದೆ. ಪ್ರಾದುರ್ಭಾವರೂಪವಾದ ಜನನವನ್ನು ಏಕೆ ಒಪ್ಪಬೇಕು? ಎಂಬ ಪ್ರಶ್ನೆಗೆ 'ಕಿಂತು' ಎಂಬ ಶ್ಲೋಕದಿಂದ ಉತ್ತರಿಸಿದ್ದಾರೆ.

"स्त्रीपुंमलाभियोगात्मा देहो विष्णुर्न जायते ।
किंतु निर्दोषचैतन्यसुखां नित्यां स्वकां तनुम् ।।

प्रकाशयति सैवेयं जनिर्विष्णोर्न चापरा ।
तथाऽप्यसुरमोहाय परेषां च कचित् कचित् ।।
दुःखाज्ञानश्रमादींश्च दर्शयेच्छुद्धसद्गुणः ।"

ಪರಮಾತ್ಮನಿಗೆ ಸ್ತ್ರೀ ಹಾಗೂ ಪುರುಷರ ಸಂಪರ್ಕದಿಂದ ದೇಹವು ಬರುವುದಿಲ್ಲ. ಹೊರತು, ನಿರ್ದುಷ್ಟವಾದ ಮತ್ತು ನಿತ್ಯವಾದ ತನ್ನ ಸುಖಾತ್ಮಕವಾದ ಶರೀರವನ್ನೇ ಬೇರೆ ಬೇರೆ ರೂಪಗಳಿಂದ ತೋರಿಸುತ್ತಾನೆ. ಇಂತಹ ಪ್ರಾದುರ್ಭಾವವೇ ಪರಮಾತ್ಮನ ಜನನವೆನಿಸಿದೆ. ಆದರೂ ಸಹ ಶುದ್ಧವಾದ ಉತ್ತಮಗುಣಗಳುಳ್ಳ ಭಗವಂತನು ಕೆಲವೊಮ್ಮೆ ಅಸುರ ಮೋಹಕ್ಕಾಗಿ ದುಃಖ, ಅಜ್ಞಾನ, ಶ್ರಮ ಮೊದಲಾದವುಗಳನ್ನು ನಾಟಕ ಮಾಡಿ ತೋರಿಸುತ್ತಾನೆ.

**प्रकाशः** – इत्यादिविष्णुतत्वनिर्णयोदाहृतब्रह्माण्डपुराणवचनादित्यर्थः । "प्रत्यक्षत्वं हरेर्जन्म" इत्यादिरादिपदार्थः । ननूक्तं जीवविषयं तद्वाक्यमिति, तत्राह – **अजायमान इति** ।।

ಇತ್ಯಾದಿಯಾಗಿ ವಿಷ್ಣುತತ್ವವಿನಿರ್ಣಯದಲ್ಲಿ ಉದಾಹರಿಸಲ್ಪಟ್ಟ ಬ್ರಹ್ಮಾಂಡಪುರಾಣದ ಮಾತಿನಿಂದ ಜನನ ಶಬ್ದಕ್ಕೆ ಪ್ರಾದುರ್ಭಾವವೆಂಬರ್ಥವನ್ನೇ ಮಾಡಬೇಕೆಂದು ತಿಳಿಯುತ್ತದೆ. ಆದಿಪದದಿಂದ 'ಪ್ರತ್ಯಕ್ಷತ್ವಂ ಹರೇರ್ಜನ್ಮ' ನಮಗೆ ಪ್ರತ್ಯಕ್ಷನಾಗುವುದೇ ಭಗವಂತನ ಜನನ. ಇತ್ಯಾದಿ ಮಾತುಗಳನ್ನು ಸಂಗ್ರಹಿಸಬೇಕು. 'ಬಹುಧಾ ವಿಜಾಯತೇ' ಎಂಬ ವಾಕ್ಯವು ಜೀವವಿಷಯವಾಗಿದೆಯೆಂದು ಪೂರ್ವಪಕ್ಷದಲ್ಲಿ ಹೇಳಲ್ಪಟ್ಟಿದೆಯಲ್ಲವೇ? ಎಂಬ ಪ್ರಶ್ನೆಗೆ 'ಅಜಾಯಮಾನಃ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ.

**प्रकाशः** – मुक्तिहेतुज्ञानविषयत्वरूपाल्लिङ्गादित्यर्थः । प्रकरणवशाच्च ब्रह्मपरमेतद्वाक्यमित्याह – **पुरुषसूक्तस्थत्वाच्चेति** ।। पुरुषसूक्तं च विष्णुपरमिति पूर्वाधिकरणे छन्दोऽधिकरणे च भाष्यादौ समर्थितमिति भावः ।

'ಅಜಾಯಮಾನಃ' ಎಂಬ ವಾಕ್ಯವು ವಿಷ್ಣುಪರವೇ ಆಗುತ್ತದೆ. ಏಕೆಂದರೆ ಮುಕ್ತಿಹೇತುವಾದ ಜ್ಞಾನವಿಷಯತ್ವವೆಂಬ ಲಿಂಗವು ಕೇಳಿಸುತ್ತಿರುವುದರಿಂದ. ಪ್ರಕರಣದ ಬಲದಿಂದಲೂ ಈ ವಾಕ್ಯವು ವಿಷ್ಣುಪರವಾಗಿದೆಯೆಂದು 'ಪುರುಷಸೂಕ್ತಸ್ಥತ್ವಾಚ್ಚ' ಎಂಬ ವಾಕ್ಯದಿಂದ ಪ್ರತಿಪಾದಿಸಿದ್ದಾರೆ. ಪುರುಷಸೂಕ್ತವು ವಿಷ್ಣುಪರವಾಗಿದೆಯೆಂಬ ವಿಚಾರವನ್ನು ಹಿಂದಿನ ಅಧಿಕರಣದ ಛಂದೋಽಧಿಕರಣದ ಭಾಷ್ಯದ ಟೀಕೆಗಳಲ್ಲಿ ಸಮರ್ಥಿಸಲಾಗಿದೆಯೆಂದು ತಿಳಿಯಬೇಕು.

ಪರಿಪೂರ್ಣಚಂದ್ರಿಕಾ

**प्रकाशः** – अस्त्वेवं जीवलिङ्गं सावकाशम् । ततः किमित्यत आह – **एवञ्चेति** ।। सावकाशत्वे सतीत्यर्थः ।। **लिङ्गमेवेति** ।। श्रुत्यादितो लिङ्गमात्रस्य दुर्बलत्वादिति भावः ।

ಜಾಯಮಾನತ್ವವೆಂಬ ಜೀವನಲಿಂಗವು ಸಾವಕಾಶವಾಗಲಿ, ಇದರಿಂದೇನಾಯಿತು ಎಂಬ ಪ್ರಶ್ನೆಗೆ 'ಏವಂಚ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. 'ಏವಂಚ' ಎಂದರೆ ಸಾವಕಾಶವಾದರೆ ಎಂದರ್ಥ. 'ಲಿಂಗಮೇವ' ಎಂದರೆ ಶ್ರುತಿಗಿಂತ ಕೇವಲಲಿಂಗವು ದುರ್ಬಲವಾಗಿದೆಯೆಂಬ ಅಭಿಪ್ರಾಯದಿಂದ ಅರ್ಥಮಾಡಿಕೊಳ್ಳಬೇಕು.

**प्रकाशः** – **गौणमिति** ।। परिणामरूपजनेरेव मुख्यत्वादिति भावः । **नत्विति** ।। श्रुत्यादिबहुबाधायोगादिति भावः ।

ಜಾಯಮಾನತ್ವಲಿಂಗವನ್ನು ಏಕೆ ಗೌಣವನ್ನಾಗಿಸಬೇಕೆಂದರೆ, ಪರಿಣಾಮ ರೂಪವಾದ ಜನಿಯೇ = ಜನನವೇ ಮುಖ್ಯಾರ್ಥವಾದ್ದರಿಂದ ಎಂದು ತಿಳಿಯಬೇಕು. 'ನತು ವಿಪರೀತಮ್' ಎಂಬ ವಾಕ್ಯದಿಂದ ಶ್ರುತಿಯೇ ಮೊದಲಾದ ಬಹುಪ್ರಮಾಣದ ಬಾಧಗಳು ಯುಕ್ತವಾಗುವುದಿಲ್ಲವೆಂದು ತಿಳಿಯಬೇಕು.

**प्रकाशः** – लिङ्गस्य सावकाशत्वमुक्त्वा समाख्याया अपि ''अतच्छब्दात्'' इति सूत्रांशाभिमतमेव तदाह – **समाख्याऽपीति** ।।

ಜಾಯಮಾನತ್ವವೆಂಬಲಿಂಗವು ಸಾವಕಾಶವಾಗಿದೆಯೆಂದು ಹೇಳಿದ್ದಾಯಿತು. ಸಮಾಖ್ಯಾಪ್ರಮಾಣವೂ ಸಹ ಸಾವಕಾಶವಾಗಿದೆಯೆಂದು ಸೂತ್ರಕಾರರು 'ಅತಚ್ಛಬ್ದಾತ್' ಎಂಬ ಅಂಶದಿಂದಲೇ ಹೇಳಿದ್ದಾರೆಂದು 'ಸಮಾಖ್ಯಾऽಪಿ'ಯೆಂಬ ಗ್ರಂಥದಿಂದ ವ್ಯಾಖ್ಯಾನಿಸಿದ್ದಾರೆ.

**प्रकाशः** – ''सोऽन्तकस्सरुद्रस्स प्राणभृत् सप्राणनायकस्स ईशो यो हरिः'' इत्यादिश्रुत्या ''रुजं द्रावयते यस्माद्रुद्रस्तस्माज्जनार्दनः'' इत्यादिब्रह्माण्डस्मृतिभिर्विष्णावेव मुख्यवृत्त्युक्तेरिति भावः ।

'ಸೋऽಂತಕಸ್ಸ ರುದ್ರಸ್ಸ ಪ್ರಾಣಭೃತ್ ಸಪ್ರಾಣನಾಯಕಸ್ಸ ಈಶೋ ಯೋ ಹರಿಃ' ಇತ್ಯಾದಿ ಶ್ರುತಿಯಿಂದ ಅಂತಕ, ಪ್ರಾಣಧಾರಕ, ಪ್ರಾಣನಾಯಕ, ರುದ್ರ ಮೊದಲಾದವುಗಳೆಲ್ಲವೂ ವಿಷ್ಣುವಿನ ನಾಮವೇ ಆಗಿವೆಯೆಂದು ಶ್ರುತಿಯು ಹೇಳುತ್ತಿದೆ. ಬ್ರಹ್ಮಾಂಡಪುರಾಣದಲ್ಲಿ 'ರುಜಂ ದ್ರಾವಯತೇ ಯಸ್ಮಾದ್ ರುದ್ರಸ್ತಸ್ಮಾಜ್ಜನಾರ್ದನಃ' ಎಂಬುದಾಗಿ ಜನಾರ್ದನನನ್ನೇ ರುದ್ರನೆಂದು ಹೇಳಲಾಗಿದೆ. ಆದ್ದರಿಂದ ಸಮಾಖ್ಯಾಪ್ರಮಾಣದಲ್ಲಿ ರುದ್ರವಿಷಯಕವಾಗಿ ಕೇಳಿಸುತ್ತಿರುವ ಅಂತಕ, ರುದ್ರ ಮೊದಲಾದವುಗಳೆಲ್ಲವೂ ಮುಖ್ಯವಾಗಿ ವಿಷ್ಣುವನ್ನೇ ಪ್ರತಿಪಾದಿಸುತ್ತವೆ. ಒಂದು ವೇಳೆ ರುದ್ರಪ್ರತಿಪಾದಕವಾಗಿದ್ದಲ್ಲಿ ಸಮಾಖ್ಯಾಪ್ರಮಾಣವನ್ನು ರುದ್ರವಿಷಯಕವೆಂದು ಹೇಳಬಹುದಿತ್ತು.

ದ್ಯುಭ್ವಾದ್ಯಧಿಕರಣ (೧-೩-೧)

**प्रकाशः** – यद्यपि समाख्याश्रुतौ निरवकाशविष्णुलिङ्गाभावेन ''अन्तस्तद्धर्मोपदेशात्'' इत्युक्तन्यायाविषयत्वं भाति ।

ವಸ್ತುತಸ್ತು ಸಮಾಖ್ಯಾಶ್ರುತಿಯಲ್ಲಿ ನಿರವಕಾಶವಾದ ಯಾವುದೇ ವಿಷ್ಣುಲಿಂಗಗಳಿರುವುದಿಲ್ಲ. ಆದ್ದರಿಂದ 'ಅಂತಸ್ತದ್ಧರ್ಮೋಪದೇಶಾತ್' ಎಂಬ ನ್ಯಾಯಕ್ಕೆ ಇದು ವಿಷಯವೂ ಆಗುವುದಿಲ್ಲ. ಆದ್ದರಿಂದ ಅಂತಕ, ರುದ್ರ ಮೊದಲಾದವುಗಳೆಲ್ಲವೂ ರುದ್ರಪ್ರತಿಪಾದಕವೇ ಆಗಬೇಕಲ್ಲವೇ? ಎಂಬ ಪ್ರಶ್ನೆ ಸಹಜವಾಗಿ ಬರುತ್ತದೆ.

**प्रकाशः** – तथाऽपि ''श्रुत्यर्थनिर्णयार्थत्वात् स्मृतेस्तत्र निरूपितोऽर्थो ग्राह्यो वेदवाक्ये । तदयोगे तु लौकिकः'' इति ''कम्पनात्'' इति सूत्राभिमतवक्ष्यमाण-न्यायेन ''इतिहासपुराणाभ्यां वेदं समुपबृंहयेत्'' इति स्मृत्या श्रुत्युपबृंहकेषु ''रुजं द्रावयते'' इत्यादिस्मृतिवाक्येष्वन्वर्थसञ्ज्ञाकरणस्य श्रुत्यर्थनिर्णयार्थत्वात् । अन्यथा तस्य वैयर्थ्येन निरवकाशतया स्मार्तयोगस्याज्ञरूढितो बलवत्त्वात् ''रुजं द्रावयते'' इत्यादिस्मृतौ योगमुक्त्वा ''वेदेषु सपुराणेषु गीयते'' इति प्रयोगबाहुल्यरूप-रूढिकथनाच्चाज्ञरूढितो विद्वद्रूढेर्बलवत्ताया यववराहाद्यधिकरणोक्तन्यायैर्निपुणतरं जन्मादिनये प्रतिपादितत्वादिति भावेनोक्तं – **मुख्यत्वादिति** ।

ಹೌದು, ಆದರೂ ಸಹ ಶ್ರುತಿವಾಕ್ಯಗಳಿಗೆ ಅನುಸಾರಿಯಾಗಿ ಸ್ಮೃತಿಯನ್ನು ನಿರ್ಣಯಿಸಬೇಕು. 'ಸ್ಮೃತೇಸ್ತತ್ರ ನಿರೂಪಿತೋಽರ್ಥೋ ಗ್ರಾಹ್ಯೋ ವೇದವಾಕ್ಯೇ ತದಯೋಗೇ ತು ಲೌಕಿಕಃ' ಎಂದು ಕಂಪನಾಧಿಕರಣದಲ್ಲಿ ಗ್ರಂಥಕಾರರು ಹೇಳಿದಂತೆ ಸ್ಮೃತಿಯಲ್ಲಿ ನಿರೂಪಿತವಾದ ಅರ್ಥವನ್ನೇ ಶ್ರುತಿವಾಕ್ಯದಿಂದ ವಿವಕ್ಷಿಸಬೇಕು. ಕೂಡದಿದ್ದಾಗ ಮಾತ್ರ ಬೇರೆ ಅರ್ಥವನ್ನು ವಿವಕ್ಷಿಸಬೇಕೆಂದು ಹೇಳಿದ್ದಾರೆ. ಮತ್ತು 'ಇತಿಹಾಸಪುರಾಣಾಭ್ಯಾಂ ವೇದಂ ಸಮುಪಬೃಂಹಯೇತ್' ಎಂಬ ಪ್ರಮಾಣದಿಂದ ಸ್ಮೃತಿಗೆ ಅನುಸಾರಿಯಾದ ಅರ್ಥವನ್ನು ಹೇಳಬೇಕೆಂದು ತಿಳಿಯುತ್ತದೆ. ಮತ್ತು 'ರುಜಂ ದ್ರಾವಯತೇ' ಇತ್ಯಾದಿಯಾದ ಸ್ಮೃತಿವಾಕ್ಯಗಳು ರುದ್ರಶಬ್ದವನ್ನು ವ್ಯುತ್ಪತ್ತಿಯಿಂದ ವಿಷ್ಣುವಿನಲ್ಲಿ ಸಾಧಿಸುತ್ತವೆ. ಏಕೆಂದರೆ ಈ ಮೊದಲೇ ಶ್ರುತಿಯಲ್ಲಿ ಪ್ರಯೋಗ ಮಾಡಲ್ಪಟ್ಟಿರುತ್ತದೆ. ರುದ್ರಶಬ್ದವನ್ನು ವಿಷ್ಣುವಿಷಯಕವಾಗಿ ಆದ್ದರಿಂದಲೇ ಸ್ಮೃತಿಗಳು ವಿಷ್ಣುವಿನಲ್ಲಿ ಆಯಾ ಶಬ್ದಗಳನ್ನು ಸಮನ್ವಯ ಮಾಡುತ್ತವೆ. ಹೀಗೆ ನಿರವಕಾಶವಾದ್ದರಿಂದ ಸ್ಮೃತ್ಯುಕ್ತವಾದ ಯೋಗವು ಅಜ್ಞರೂಢಿಗಿಂತ ಬಲಿಷ್ಠವಾಗಿರುತ್ತದೆ.

ಮತ್ತು 'ರುಜಂ ದ್ರಾವಯತೇ' ಇತ್ಯಾದಿ ಸ್ಮೃತಿಯಲ್ಲಿ ಯೋಗವನ್ನು ಹೇಳಿ; 'ವೇದೇಷು ಸಪುರಾಣೇಷು ಗೀಯತೇ' ಎಂಬಲ್ಲಿ ಪ್ರಯೋಗ ಬಾಹುಲ್ಯವೆಂಬ ರೂಢಿಯನ್ನು ಹೇಳಿರುವುದರಿಂದಲೂ ಅಜ್ಞರೂಢಿಗಿಂತ ವಿದ್ವದ್ರೂಢಿಯು ಬಲಿಷ್ಠವಾಗಿದೆ. ಈ ವಿಷಯವನ್ನು ಪೂರ್ವಮೀಮಾಂಸೆಯ ಯವವರಾಹಾಧಿಕರಣದಲ್ಲಿ ಸಮರ್ಥಿಸಿದ್ದಾರೆ. ಇದನ್ನು ಜನ್ಮಾಧಿಕರಣದಲ್ಲಿ ಗ್ರಂಥಕಾರರು ನಿರೂಪಿಸಿದ್ದಾರೆ. ಈ ಎಲ್ಲಾ ಕಾರಣಗಳಿಂದ ಗ್ರಂಥದಲ್ಲಿ 'ಮುಖ್ಯತ್ವಾತ್' ಎಂದು ಹೇಳಿದ್ದಾರೆ.

ಪರಿಪೂರ್ಣಚಂದ್ರಿಕಾ

**प्रकाशः** – तथाच ''मुख्यामुख्ययोर्मुख्ये सम्प्रत्ययः'' इति न्यायेन मुख्यार्थस्य ''विदेहि रुद्रो रुद्रियं महित्वम् । कुमारश्चित्पितरं वन्दमानं प्रति नानामरुद्रः ।' 'न मिनन्ति रुद्रः' । 'रुद्रस्य शिर उत्पिपेष'' इत्यादावयोगेऽपि ''रुद्रो वाव लोकाधारः'' इत्यादिश्रुतिषु रुद्रादिशब्दैर्मुख्यार्थस्य विष्णोरेव गृहीतेस्समाख्या न रुद्रादेर्द्युभ्वाद्यायतनत्वप्रापिकेति भावः ।

ಆದ್ದರಿಂದ 'ಮುಖ್ಯಾಮುಖ್ಯಯೋರ್ಮುಖ್ಯೇ ಸಂಪ್ರತ್ಯಯಃ' ಎಂಬ ನ್ಯಾಯದಿಂದ ರುದ್ರಶಬ್ದಕ್ಕೆ ಮುಖ್ಯಾರ್ಥನಾದ ವಿಷ್ಣುವನ್ನೇ ವಿವಕ್ಷಿಸಬೇಕು. 'ವಿದೇಹಿ ರುದ್ರೋ ರುದ್ರಿಯಂ ಮಹಿತ್ವಮ್' 'ಕುಮಾರಶ್ಚಿತ್ಪಿತರಂ ವಂದಮಾನಂ ಪ್ರತಿ ನಾನಾಮರುದ್ರಃ', 'ನಾಮಿನಂತಿ ರುದ್ರಃ', 'ರುದ್ರಸ್ಯ ಶಿರ ಉತ್ಪಿಪೇಷ' ಇತ್ಯಾದಿ ಸ್ಥಳಗಳಲ್ಲಿ ರುದ್ರನಿಗೆ ನೀಚತ್ವವನ್ನು, ಅಜ್ಞಾನವನ್ನು ಮತ್ತು ಮರಣವನ್ನು ಹೇಳಿರುವುದರಿಂದ ಇಲ್ಲಿರುವ ರುದ್ರಶಬ್ದಕ್ಕೆ ವಿಷ್ಣುವೆಂಬರ್ಥವನ್ನು ಮುಖ್ಯವಾಗಿ ಸ್ವೀಕರಿಸಲು ಆಗದಿರಬಹುದು. ಆದರೆ ಸಮಾಖ್ಯಾಶ್ರುತಿಯಲ್ಲಿ ಕೇಳಿಸುತ್ತಿರುವ 'ರುದ್ರೋ ವಾವ ಲೋಕಾಧಾರಃ' ಎಂಬಲ್ಲಿರುವ ರುದ್ರಶಬ್ದವು ಮುಖ್ಯವಾಗಿ ವಿಷ್ಣುವನ್ನೇ ಪ್ರತಿಪಾದಿಸುತ್ತದೆ. ದ್ಯುಭ್ವಾದ್ಯಾಯತನತ್ವವೂ ಸಹ ವಿಷ್ಣುವಿನಲ್ಲೇ ಉಪಪನ್ನವಾಗುತ್ತದೆಂದು ತಿಳಿಯಬೇಕು. ಆದ್ದರಿಂದ ಸಮಾಖ್ಯಾವು ರುದ್ರಾದಿಗಳಿಗೆ ದ್ಯುಭ್ವಾದ್ಯಾಯತನತ್ವವನ್ನು ತಂದುಕೊಡುವುದಿಲ್ಲ.

**प्रकाशः** – एतेन ''नन्वत्र रुद्रादिज्ञापकाभावेऽपि 'प्राणानां ग्रन्थिरसि' इत्यादिटीकाया निष्कृष्टार्थ उक्तो भवति ।

ಹೀಗೆ ಹೇಳಿದ್ದರಿಂದ 'ನನ್ವತ್ರ ರುದ್ರಾದಿಜ್ಞಾಪಕಾಭಾವೇऽಪಿ ಪ್ರಾಣಾನಾಂ ಗ್ರಂಥಿರಸಿ' ಇತ್ಯಾದಿ ಟೀಕೆಗೆ ನಿಷ್ಕೃಷ್ಟವಾದ ವ್ಯಾಖ್ಯಾನವನ್ನು ಮಾಡಿದಂತಾಯಿತು.

**प्रकाशः** – विष्णुप्रापकस्यापि सावकाशत्वे निर्णयो दुश्शक इत्यत आह – मुक्तेति ।। उक्तमित्यनन्तरं 'तथाचात्मश्रुत्यादिबलाद्विष्णुरेव द्युभ्वाद्यायतनम्' इति वाक्यशेषः ।

ವಿಷ್ಣುಪ್ರಾಪಕವಾದ ಲಿಂಗಗಳೂ ಸಹ ಸಾವಕಾಶವಾಗಬಹುದಲ್ಲವೇ? ಹೀಗಿರುವಾಗ ಯಾವ ಪಕ್ಷವನ್ನು ಹೇಗೆ ನಿರ್ಧರಿಸುವುದು ? ಎಂಬ ಪ್ರಶ್ನೆಗೆ 'ಮುಕ್ತ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. 'ಉಕ್ತಮ್' ಎಂಬ ಪದದ ಅನಂತರ 'ತಥಾಚಾತ್ಮಶ್ರುತ್ಯಾದಿಬಲಾದ್ವಿಷ್ಣುರೇವ ದ್ಯುಭ್ವಾದ್ಯಾಯತನಮ್' ಹೀಗೆ ಆತ್ಮಶ್ರುತಿಯ ಬಲದಿಂದ ವಿಷ್ಣುವೇ ದ್ಯುಭ್ವಾದ್ಯಾಯತನನಾಗುತ್ತಾನೆಂದು ನಿರ್ಣಯವಾಯಿತು ಎಂಬ ವಾಕ್ಯವನ್ನು ಶೇಷಪೂರ್ಣ ಮಾಡಿಕೊಳ್ಳಬೇಕು. ಇಲ್ಲಿಗೆ ಸಿದ್ಧಾಂತವು ಮುಗಿಯಿತು.

## ದ್ಯುಭ್ವಾದ್ಯಧಿಕರಣ (೧-೩-೧)



ಸಿದ್ಧಾಂತದ ಸಾರ ಹೀಗಿದೆ - ಜಾಯಮಾನತ್ವವೆಂಬ ಲಿಂಗವು ಜೀವಾದಿಗಳ ವಿಷಯದಲ್ಲಿ ನಿರವಕಾಶಲಿಂಗವೆಂದು ಪೂರ್ವಪಕ್ಷಕಾರರು ಹೇಳಿದರು. ಆದರೆ ಅದು ಸಾವಕಾಶವೇ ಆಗಿದೆ. ಲೋಕದಲ್ಲಿ ಅಚೇತನಪದಾರ್ಥಕ್ಕಿಂತ ಚೇತನಪದಾರ್ಥದ ಜನನವು ವಿಲಕ್ಷಣವಾಗಿರುವುದು ಕಂಡಿದೆ. ಇಂತಹ ಚೇತನ, ಅಚೇತನ ಪದಾರ್ಥಗಳಿಗಿಂತ ಭಗವಂತನ ಜನನವೂ ಸಹ ಲೋಕವಿಲಕ್ಷಣವಾಗಿದೆ. ಆದ್ದರಿಂದ ಸುಖಸ್ವರೂಪನಾದ ಭಗವಂತನು ಮತ್ಸ್ಯ, ಕೂರ್ಮ, ವರಾಹ ಮೊದಲಾದ ಬೇರೆ ಬೇರೆ ತನ್ನ ಶರೀರಗಳನ್ನು ಪ್ರಕಟಪಡಿಸುತ್ತಾನೆ. ಇದೇ ಅವನ ಜನನವೆನಿಸುತ್ತದೆ ಹೊರತು, ಜೀವಾದಿಗಳಿಗೆ ಬರುವಂತೆ ದೇಹದ ಸಂಬಂಧವನ್ನು ಜನನವೆಂದು ಹೇಳಲಾಗದು. ಆದ್ದರಿಂದ 'ಅಜಾಯಮಾನೋ ಬಹುಧಾ ವಿಜಾಯತೇ' ಇತ್ಯಾದಿ ಶ್ರುತಿಯು ವಿಷ್ಣುವಿಷಯಕವೇ ಆಗಿದೆ. ಯಾವಾಗ ಜಾಯಮಾನತ್ವವೆಂಬ ಪೂರ್ವಪಕ್ಷಲಿಂಗವು ಸಾವಕಾಶವಾಗುತ್ತದೋ, ಆವಾಗ ಆತ್ಮಶ್ರುತಿಯು ನಿರವಕಾಶವಾಗುತ್ತದೆ. ನಿರವಕಾಶವಾದ ಆತ್ಮಶ್ರುತಿಯ ಬಲದಿಂದ ಜಾಯಮಾನತ್ವವೆಂಬ ಲಿಂಗವನ್ನೇ ಗೌಣ ಮಾಡಬೇಕು ಹೊರತು, ವಿಪರೀತವಾಗಿ ಹೇಳಬಾರದು.

ಸಮಾಖ್ಯಾಪ್ರಮಾಣವೂ ಸಹ ಸಾವಕಾಶವಾಗಿದೆ. ಆಚಾರ್ಯರು ಭಾಷ್ಯದಲ್ಲಿ ಅನೇಕ ಶ್ರುತಿ, ಸ್ಮೃತಿಗಳ ಆಧಾರದಿಂದ, ರುದ್ರ, ಅಂತಕ, ಪಿನಾಕೀ ಮೊದಲಾದ ಶಬ್ದಗಳನ್ನೆಲ್ಲಾ ವಿಷ್ಣುವಿನಲ್ಲೇ ಮುಖ್ಯವಾಗಿ ಪ್ರತಿಪಾದಿಸಿದ್ದಾರೆ. ಹೀಗೆ ಸೂತ್ರಕಾರರು ಹೇಳಲ್ಪಟ್ಟ ಆತ್ಮಶಬ್ದವೆಂಬ ಲಿಂಗದಿಂದ ಮುಕ್ತೋಪಸೃಪ್ಯತ್ವವೆಂಬ ಲಿಂಗದಿಂದ ವಿಷ್ಣುವೇ ದ್ಯುಭ್ವಾದ್ಯಾಯತನನಾಗಿದ್ದಾನೆಂದು ನಿರ್ಣಯವಾಗುತ್ತದೆ.



## ಸೂತ್ರಗಳ ವಿನ್ಯಾಸದಲ್ಲಿ ಸ್ವಾರಸ್ಯ

## तात्पर्यचन्द्रिका

**अत्र चाद्ये सूत्रे विषयवाक्येनातिसन्निहितश्रुतिरूपस्वपक्षसाधकोक्तिः ।**

ಸೂತ್ರಗಳ ವಿನ್ಯಾಸ ಶೈಲಿಯು ಸುಂದರವಾಗಿದೆ. ಮೊದಲನೆಯ ಸೂತ್ರದಲ್ಲಿ ವಿಷಯವಾಕ್ಯದಿಂದ ಅತ್ಯಂತ ಸಮೀಪದಲ್ಲಿರುವ ಆತ್ಮಶ್ರುತಿಯೆಂಬ ಸ್ವಪಕ್ಷಸಾಧಕವನ್ನು ಹೇಳಲಾಗಿದೆ. ಆದ್ದರಿಂದ ಪ್ರಥಮಸ್ಥಾನವು ದ್ಯುಭ್ವಾದ್ಯಾಯತನವೆಂಬ ಸೂತ್ರಕ್ಕೆ ಯುಕ್ತವಾಗಿದೆ.

**स्वशब्दादित्येतच्च स्वेति शब्दः स्वशब्द इति विग्रहाश्रयणेन विषयवाक्ये स्वशब्दाभावात्तत्पर्यायात्मशब्दपरम् ।**

ಸೂತ್ರದಲ್ಲಿರುವ 'ಸ್ವಶಬ್ದಾತ್' ಎಂಬ ಪದಕ್ಕೆ 'ಸ್ವ ಇತಿ ಶಬ್ದಃ' 'ಸ್ವಶಬ್ದಃ' ಎಂಬ ಸಂಭಾವನಾಪೂರ್ವಪದ ಕರ್ಮಧಾರಯ ಸಮಾಸವನ್ನು ವಿವಕ್ಷಿಸಬೇಕು. ಹೀಗೆ ಹೇಳುವುದರಿಂದ

ವಿಷಯವಾಕ್ಯದಲ್ಲಿ 'ಸ್ವ' ಎಂಬ ಶಬ್ದವು ಇಲ್ಲದ್ದಿದರೂ ಸಹ ಅದಕ್ಕೆ ಪರ್ಯಾಯ ಪದವಾಗಿರುವ ಆತ್ಮಶಬ್ದವು ಇರುತ್ತದೆ. ಇಂತಹ ಆತ್ಮಶಬ್ದವೆಂಬ ವಿಷ್ಣುವಿನಲ್ಲಿರುವ ನಿರವಕಾಶಶ್ರುತಿಯನ್ನು ಪ್ರಮಾಣವನ್ನಾಗಿ ಹೇಳಿದಂತಾಗುತ್ತದೆ.

**यथा "सभाराजाऽमनुष्यपूर्वे" इत्यत्र राजशब्दस्तत्पर्यायेश्वरादिशब्दपरः ।**

ಸ್ವಶಬ್ದದಿಂದ ಪರ್ಯಾಯಪದವೆನಿಸಿದ ಆತ್ಮಶಬ್ದವನ್ನು ಸ್ವೀಕರಿಸುವುದು ತಪ್ಪಲ್ಲ. ಏಕೆಂದರೆ ಪಾಣಿನಿಯ ವ್ಯಾಕರಣದಲ್ಲಿಯೂ 'ಸಭಾರಾಜಾऽಮನುಷ್ಯಪೂರ್ವೇ' ಎಂಬ ಸೂತ್ರದಲ್ಲಿ ರಾಜಶಬ್ದದಿಂದ ಅದಕ್ಕೆ ಪರ್ಯಾಯ ಪದವೆನಿಸಿದ 'ಈಶ್ವರ', 'ಇನ' ಎಂಬ ಶಬ್ದಗಳನ್ನೇ ಸ್ವೀಕರಿಸಬೇಕು; ಹೊರತು 'ರಾಜ' ಎಂಬ ಶಬ್ದವನ್ನು ಸ್ವೀಕರಿಸಬಾರದು. ಆದ್ದರಿಂದ 'ಇನಸಭಮ್' 'ಈಶ್ವರ ಸಭಮ್' ಎಂಬ ರೂಪಗಳು ನಿಷ್ಪನ್ನವಾಗುತ್ತವೆಂದು ಸಮರ್ಥಿಸಲಾಗಿದೆ. ಅದರಂತೆ ಪ್ರಕೃತ ಸೂತ್ರದಲ್ಲಿರುವ ಸ್ವಶಬ್ದದಿಂದಲೂ ಸಹ ಅದರ ಪರ್ಯಾಯಪದವೆನಿಸಿದ ಆತ್ಮಶಬ್ದವನ್ನೇ ಸ್ವೀಕರಿಸಬೇಕು.

**एतदेवाभिप्रेत्य विष्णुतत्त्वनिर्णये भगवत्पादैरत्रापि टीकाकारैः "स्वशब्दपर्यायात्मशब्दात्" इत्युक्तम् ।**

ಇದೇ ಅಭಿಪ್ರಾಯದಿಂದ ವಿಷ್ಣುತತ್ತ್ವವಿನಿರ್ಣಯದಲ್ಲಿ ಶ್ರೀಮದಾಚಾರ್ಯರು ಮತ್ತು ಪ್ರಕೃತ ಅಧಿಕರಣದ ಟೀಕೆಯಲ್ಲಿ ಟೀಕಾರಾಯರು 'ಸ್ವಶಬ್ದ ಪರ್ಯಾಯ ಆತ್ಮಶಬ್ದಾತ್' ಸ್ವಶಬ್ದಕ್ಕೆ ಪರ್ಯಾಯಪದವೆನಿಸಿದ ಆತ್ಮಶಬ್ದದಿಂದ ಎಂಬ ಮಾತನ್ನು ಹೇಳಿರುತ್ತಾರೆ.

**प्रकाशः —**

नन्वेवं सूत्रेष्वादौ परसाधकानां सावकाशत्वोक्तिपरमतच्छब्दादित्येतदुक्त्वा स्वशब्दादित्यादिहेतूपन्यासः कार्य इत्यतो वादकथारूपेण ग्रन्थस्य प्रवृत्तत्वात्तत्र च कथालक्षणतट्टीकाद्युक्तदिशा स्वपक्षसाधकस्यादौ वाच्यत्वाद्युक्तस्सूत्रक्रम इति भावेनाह – अत्र चाद्य इति ।।

ವಿವರಣೆ - ಪ್ರಶ್ನೆ - ಗ್ರಂಥಕಾರರು ಪೂರ್ವಪಕ್ಷ ಸ್ಥಾಪಕವಾದ ಜಾಯಮಾನತ್ವವೆಂಬ ಲಿಂಗವನ್ನೂ ಸಮಾಖ್ಯಾಪ್ರಮಾಣವನ್ನು ಸಾವಕಾಶವೆಂದು ಮೊದಲು ಸಮರ್ಥಿಸಿ ಅದರಿಂದಲೇ ಸೂತ್ರದಲ್ಲಿ ಹೇಳಲ್ಪಟ್ಟ ಆತ್ಮಶಬ್ದ ಹಾಗೂ ಮುಕ್ತೋಪಸೃಪ್ಯತ್ವಾದಿಲಿಂಗಗಳಿಗೆ ನಿರವಕಾಶತ್ವವು ಸ್ಥಾಪಿತವಾಗುತ್ತವೆ ಎಂಬ ಅಭಿಪ್ರಾಯದಿಂದ ಮೊದಲು ಪರಪಕ್ಷ ನಿರಾಕರಣೆಯನ್ನು ಮಾಡಿ ಅನಂತರ ಸ್ವಪಕ್ಷಸ್ಥಾಪನೆಯನ್ನು ಮಾಡಿದ್ದಾರೆ. ಇದರಂತೆ ಸೂತ್ರಕಾರರೂ ಸಹ ಹೇಳಬಹುದಿತ್ತು. ಜಾಯಮಾನತ್ವಾದಿ ಲಿಂಗಗಳನ್ನು

ಸಾವಕಾಶತ್ವವೆಂದು ಸಮರ್ಥಿಸುವ 'ಅತಚ್ಛಬ್ದಾತ್' ಎಂಬುದನ್ನು ಮೊದಲು ಹೇಳಿ ಅನಂತರ 'ಸ್ವಶಬ್ದಾತ್' ಎಂಬ ಸ್ವಪಕ್ಷಸಾಧಕವನ್ನು ಅನಂತರ ಹೇಳಬಹುದಿತ್ತಲ್ಲವೇ?

ಉತ್ತರ - ಈ ಗ್ರಂಥವು ವಾದಕಥಾ ರೂಪವಾಗಿದೆ. ಕಥಾಲಕ್ಷಣ ಹಾಗೂ ಅದರ ಟೀಕೆಯಲ್ಲಿ ಹೇಳಿದಂತೆ ವಾದಕಥೆಯಲ್ಲಿ ಸ್ವಪಕ್ಷಸಾಧಕವನ್ನೇ ಮೊದಲು ಹೇಳಿ ಅನಂತರ ಸ್ವಪಕ್ಷದಲ್ಲಿ ಬಾಧಕಗಳನ್ನು ಪರಿಹರಿಸಿ ಕೊನೆಯಲ್ಲಿ ಪರಪಕ್ಷದ ನಿರಾಕರಣೆಯನ್ನು ಮಾಡಬೇಕೆಂದು ಹೇಳಿದ್ದಾರೆ. ಅದಕ್ಕನುಸಾರಿಯಾಗಿ ಸೂತ್ರಕಾರರು ಮೊದಲು ಸ್ವಪಕ್ಷಸಾಧಕವಾದ ಆತ್ಮಶಬ್ದ, ಮುಕ್ತೋಪಸೃಪ್ಯತ್ವಾದಿಲಿಂಗಗಳನ್ನು ಹೇಳಿ ಪರಪಕ್ಷನಿರಾಸಕವಾದ 'ಅತಚ್ಛಬ್ದಾತ್' ಮೊದಲಾದವುಗಳನ್ನು ಅನಂತರ ಹೇಳಿರುತ್ತಾರೆ. ಆದ್ದರಿಂದ ಸೂತ್ರಗಳ ವಿನ್ಯಾಸಕ್ರಮವು ಅರ್ಥವತ್ತಾಗಿದೆಯೆಂಬ ಅಭಿಪ್ರಾಯದಿಂದ 'ಅತ್ರ ಚಾದ್ಯೇ' ಎಂಬ ಗ್ರಂಥವು ಹೊರಟಿದೆ.

**प्रकाशः – श्रुतिरूपेति ।।** आत्मश्रुतिरूपेत्यर्थः । तत्र टीकादौ स्वशब्दादिति सौत्रपदस्य स्वशब्दपर्यायेति कस्मादुक्तम् । कथं चोपपद्यतामित्यत आह – **स्वशब्दादित्येतच्चेति ।।**

'ಶ್ರುತಿರೂಪ' ಎಂದರೆ 'ಆತ್ಮಶ್ರುತಿ' ಎಂದರ್ಥ. ಟೀಕೆಯಲ್ಲಿ 'ಸ್ವಶಬ್ದಾತ್' ಎಂಬುದಾಗಿ ಸೂತ್ರದಲ್ಲಿ ಹೇಳಿದಂತೆಯೇ ಉಲ್ಲೇಖಿಸಬಹುದಿತ್ತು. ಆದರೆ ಸೂತ್ರದಲ್ಲಿರುವ 'ಸ್ವಶಬ್ದಾತ್' ಎಂಬ ಪದಕ್ಕೆ 'ಸ್ವಶಬ್ದಪರ್ಯಾಯಶಬ್ದಾತ್' ಎಂದು ವ್ಯಾಖ್ಯಾನಿಸಿದ್ದಾರೆ. ಹೀಗೇಕೆ ವ್ಯಾಖ್ಯಾನಿಸಿದರು? ಮತ್ತು ಇದು ಹೇಗೆ ಉಪಪನ್ನವಾಗುತ್ತದೆ? ಈ ಪ್ರಶ್ನೆಗೆ 'ಸ್ವಶಬ್ದಾದಿತ್ಯೇತಚ್ಚ' ಎಂಬುದರಿಂದ ಉತ್ತರಿಸಿದ್ದಾರೆ.

**प्रकाशः – स्वेतिशब्दस्स्वशब्द इति ।।** स्वश्चासौ शब्दश्चेति ''विशेषणं विषेष्येण बहुलम्'' इति कर्मधारयः । 'स्वेति' इति विग्रहप्रदर्शनम् ।।

ಗ್ರಂಥದಲ್ಲಿ 'ಸ್ವ ಇತಿ ಶಬ್ದಃ' 'ಸ್ವಶಬ್ದಃ' ಎಂಬುದಾಗಿ ಹೇಳಿದ್ದಾರೆ. ಇಲ್ಲಿ 'ಸ್ವಶ್ಚಾಸೌ ಶಬ್ದಶ್ಚ ಸ್ವಶಬ್ದಃ' ಎಂಬುದಾಗಿ 'ವಿಶೇಷಣಂ ವಿಶೇಷ್ಯೇಣ ಬಹುಲಮ್' ಎಂಬ ಸೂತ್ರದಂತೆ ಕರ್ಮಧಾರಯ ಸಮಾಸವಾಗಿದೆಯೆಂದು ತಿಳಿಯಬೇಕು. ಗ್ರಂಥದಲ್ಲಿ ಸ್ವೇತಿಶಬ್ದಃ ಸ್ವಶಬ್ದಃ ಎಂದಿದೆ. ಇಲ್ಲಿ ಸ್ವೇತಿ ಎಂಬುದಾಗಿ 'ಸ್ವ' ಶಬ್ದದ ಮುಂದೆ 'ಇತಿ' ಶಬ್ದವನ್ನು ಪಠಣ ಮಾಡಿರುವುದು 'ಸ್ವಶಬ್ದ' ಎಂಬುದರ ವಿಗ್ರಹವಾಕ್ಯ ಪ್ರದರ್ಶನಕ್ಕೋಸ್ಕರ.

**प्रकाशः – यथेति ।।** व्याकरणे द्वितीयाध्यायस्य चतुर्थपादे ''सभाराजाऽमनुष्यपूर्वे'' इति सूत्रम् । तस्यार्थः । राजशब्दपूर्वकोऽमनुष्य-शब्दोपात्तरक्षःपिशाचशब्दपूर्वकश्च सभाशब्दः ''स नपुंसकम्'' इति प्रकृतनपुंसकं भवति तत्पुरुष इति । तत्र राजशब्दस्तत्पर्यायपरो नतु राजशब्दपरः । इनसभम् । ईश्वरसभम् । राजपूर्वकत्वे तु राजसभेत्येव । नतु राजसभमिति । वृत्तौ ''पर्यायवचनस्यैवेष्यते'' इत्युक्तेः ।

ಗ್ರಂಥದಲ್ಲಿ ಸ್ವಶಬ್ದದಿಂದ ಆತ್ಮಶಬ್ದವನ್ನು ವಿವಕ್ಷಿಸಬೇಕು. ಏಕೆಂದರೆ ಶ್ರುತಿಯಲ್ಲಿ 'ಸ್ವ' ಎಂಬ ಶಬ್ದವು ಕೇಳಿಸುತ್ತಿಲ್ಲ. ಹೀಗೆ ಸ್ವೀಕರಿಸುವುದೇನೂ ತಪ್ಪಲ್ಲ. ಏಕೆಂದರೆ ವ್ಯಾಕರಣದಲ್ಲಿ ರಾಜ ಶಬ್ದದಿಂದ ಪರ್ಯಾಯಶಬ್ದಗಳನ್ನೇ ಸ್ವೀಕರಿಸಿ ರೂಪನಿಷ್ಪತ್ತಿಮಾಡಿದ್ದು ಕಾಣಿಸುತ್ತಿದೆ ಎಂದು 'ಯಥಾ' ಎಂಬ ಶಬ್ದದಿಂದ ಹೇಳಿದ್ದಾರೆ. ಇದರ ವಿವರಣೆ ಹೀಗಿದೆ -

ಸಭಾರಾಜಾಽಮನುಷ್ಯಪೂರ್ವೇ

ಪಾಣಿನಿ ವ್ಯಾಕರಣದ ಎರಡನೆಯ ಅಧ್ಯಾಯದ ನಾಲ್ಕನೆಯ ಪಾದದಲ್ಲಿ ಈ ಸೂತ್ರವು ಹೇಳಲ್ಪಟ್ಟಿದೆ. ಇದರ ಅರ್ಥ ಹೀಗಿದೆ - ರಾಜ ಶಬ್ದವು ಮೊದಲಿದ್ದರೆ ಅಥವಾ ಅಮನುಷ್ಯಶಬ್ದದಿಂದ ಸ್ವೀಕರಿಸಬೇಕಾದ 'ರಕ್ಷಃ' ಎಂಬ ಶಬ್ದವಾಗಲೀ, ಅಥವಾ 'ಪಿಶಾಚ' ಎಂಬ ಶಬ್ದವಾಗಲೀ ಮೊದಲಿದ್ದರೆ ಅಂತಹ 'ಸಭಾ' ಶಬ್ದವು 'ಸ ನಪುಂಸಕಮ್' ಎಂಬುದಾಗಿ ಪ್ರಕೃತವಾದ ನಪುಂಸಕ ಸಂಜ್ಞೆಯನ್ನು ಹೊಂದುತ್ತದೆ.

ಇದು ತತ್ಪುರುಷ ಸಮಾಸದಲ್ಲಿ ಮಾತ್ರವೆಂದು ಹೇಳಲಾಗಿದೆ. ಇಲ್ಲಿರುವ ರಾಜ ಶಬ್ದಕ್ಕೆ, ರಾಜ ಶಬ್ದದ ಪರ್ಯಾಯಶಬ್ದಗಳೆಂದರ್ಥ ಹೊರತು, ರಾಜ ಶಬ್ದವೇ ಪೂರ್ವವಾಗಿರಬೇಕೆಂಬ ಅರ್ಥವಲ್ಲ. ರಾಜ ಶಬ್ದಕ್ಕೆ ಪರ್ಯಾಯ ಪದಗಳೆಂದರೆ 'ಇನ' 'ಈಶ್ವರ' ಮೊದಲಾದ ಶಬ್ದಗಳು ಆದ್ದರಿಂದ 'ಸಭಾರಾಜಾಽಮನುಷ್ಯಪೂರ್ವೇ' ಎಂಬ ಸೂತ್ರದಿಂದ ತತ್ಪುರುಷ ಸಮಾಸದಲ್ಲಿ ರಾಜಶಬ್ದದ ಪರ್ಯಾಯವಾದ 'ಇನ' ಎಂಬ ಶಬ್ದವು ಮೊದಲಿದ್ದಾಗ 'ಸಭಾ' ಶಬ್ದವು ನಪುಂಸಕ ಲಿಂಗವನ್ನು ಹೊಂದುತ್ತದೆ. ಆವಾಗ 'ಇನಸಭಮ್' ಎಂದಾಗುತ್ತದೆ ಹೊರತು, 'ಇನಸಭಾ' ಎಂದಾಗುವುದಿಲ್ಲ. ಇದರಂತೆ 'ಈಶ್ವರ ಸಭಮ್' ಎಂದೇ ಆಗುತ್ತದೆ. ಆದರೆ ರಾಜ ಶಬ್ದವೇ ಮೊದಲಿದ್ದರೆ 'ರಾಜಸಭಮ್' ಎಂಬ ರೂಪವು ನಿಷ್ಪನ್ನವಾಗುವುದಿಲ್ಲ ಹೊರತಾಗಿ, 'ರಾಜಸಭಾ' ಎಂದು ಸ್ತ್ರೀಲಿಂಗಾಂತವಾಗಿಯೇ ಉಳಿಯುತ್ತದೆ. ಆದ್ದರಿಂದಲೇ ಕಾಶಿಕಾವೃತ್ತಿಯಲ್ಲಿ 'ಪರ್ಯಾಯವಚನಸ್ಯೈವೇಷ್ಯತೇ' ರಾಜಶಬ್ದದಿಂದ ಪರ್ಯಾಯ ಶಬ್ದವನ್ನಷ್ಟೇ ಸ್ವೀಕರಿಸಬೇಕು ಎಂದು ಹೇಳಲಾಗಿದೆ.

**ಪ್ರಕಾಶಃ** – **'स्वं रूपं शब्दस्याशब्दसञ्ज्ञा' इत्यत्राद्याध्यायस्याद्यपादे ''जित्पर्याय वचनस्यैव राजाद्यर्थम्''इति भाष्यवार्तिकयोरुक्तत्वात् ।**

ವ್ಯಾಕರಣದಲ್ಲಿ ಮೊದಲನೆಯ ಅಧ್ಯಾಯದ ಪ್ರಥಮಪಾದದಲ್ಲಿ 'ಸ್ವಂ ರೂಪಂ ಶಬ್ದಸ್ಯಾಶಬ್ದಸಂಜ್ಞಾ' ಎಂಬ ಸೂತ್ರವು ಪ್ರಸ್ತಕವಾಗಿದೆ. ಈ ಸೂತ್ರಕ್ಕೆ ಹೀಗರ್ಥ - ವ್ಯಾಕರಣ ಶಾಸ್ತ್ರದಲ್ಲಿ ಯಾವುದಾದರು ಒಂದು ಶಬ್ದವನ್ನು ಉದ್ದೇಶಿಸಿ ಪ್ರತ್ಯಯಗಳನ್ನು ವಿಧಾನ ಮಾಡಿದರೆ ಆವಾಗ ಆ ಶಬ್ದದಿಂದ ಅದರ ಅರ್ಥವನ್ನು ಸ್ವೀಕರಿಸಬಾರದು. ಶಬ್ದವನ್ನೇ ಸ್ವೀಕರಿಸಬೇಕು. ಉದಾ : 'ಅಗ್ನೇರ್ಢಕ್' ಎಂಬ ಸೂತ್ರದಲ್ಲಿ ಅಗ್ನಿ ಶಬ್ದಕ್ಕೆ 'ಢಕ್' ಎಂಬ ಪ್ರತ್ಯಯವನ್ನು ಹೇಳಿದ್ದಾರೆ. ಇಲ್ಲಿ ಅಗ್ನಿ ಶಬ್ದದಿಂದ ಅಗ್ನಿಯೆಂಬ ಅರ್ಥವನ್ನು ಸ್ವೀಕರಿಸಬಾರದು. ಶಬ್ದವನ್ನೇ ಸ್ವೀಕರಿಸಬೇಕು. ಹೀಗೆ 'ಸ್ವಂ ರೂಪಂ' ಎಂಬ ಸೂತ್ರವು ಪರಿಭಾಷಾಸೂತ್ರವಾಗಿದೆ. ಈ ಸೂತ್ರದ ಭಾಷ್ಯ ಹಾಗೂ ವಾರ್ತಿಕಗಳಲ್ಲಿ ಮತ್ತೊಂದು ಪರಿಭಾಷೆಗಳನ್ನು ಹೇಳಿರುತ್ತಾರೆ. 'ಜಿತ್‌ಪರ್ಯಾಯ ವಚನಸ್ಯೈವ ರಾಜಾದ್ಯರ್ಥಮ್' ಎಂಬುದಾಗಿ. ಜಕಾರ 'ಇತ್' ಆಗಿರುವಂತಹ ಶಬ್ದಗಳನ್ನು ಸೂತ್ರಗಳಲ್ಲಿ ಹೇಳಿದಾಗ ಅದರ ಪರ್ಯಾಯ ಶಬ್ದವನ್ನಷ್ಟೇ ಸ್ವೀಕರಿಸಬೇಕು ಹೊರತು, ಸೂತ್ರದಲ್ಲಿ ಹೇಳಿರುವ ಶಬ್ದವನ್ನು

ಇಟ್ಟುಕೊಳ್ಳಬಾರದು. ಹೀಗೇಕೆ ಹೇಳಬೇಕೆಂದರೆ 'ಸಭಾರಾಜಾಽಮನುಷ್ಯಪೂರ್ವೇ' ಎಂಬ ಸೂತ್ರದಲ್ಲಿ ಜಕಾರ 'ಇತ್' ಆಗಿರುವಂತಹ 'ರಾಜಾ' ಎಂಬ ಶಬ್ದದಿಂದ ಅದರ ಪರ್ಯಾಯ ಶಬ್ದವನ್ನೇ ಸ್ವೀಕರಿಸಬೇಕು ಹೊರತು, 'ರಾಜ' ಶಬ್ದವನ್ನು ಸ್ವೀಕರಿಸಬಾರದೆನ್ನಲು ಈ ಪರಿಭಾಷೆಯನ್ನು ವಿವಕ್ಷಿಸಬೇಕೆಂದು ಭಾಷ್ಯ ಹಾಗೂ ವಾರ್ತಿಕಗಳಲ್ಲಿ ಸಮರ್ಥಿಸಿರುತ್ತಾರೆ.

**प्रकाशः** – तस्य चायमर्थः । 'सभाराजा' इति सूत्रे सभाराजाऽमनुष्यपूर्वेति राजशब्दात्परं जकारव्यञ्जनमुच्चार्य राजशब्दो जित्त्वेन जकारेत्सञ्ज्ञकत्वेन निर्देष्टव्यः' । तदनन्तरं 'स्वं रूपं शब्दस्य' इति सूत्रे जित्पर्यायवचनस्यैवेति पठनीयम् । इनसभमित्यादिरूपसिद्ध्यर्थमिति ।

ಭಾಷ್ಯ ಹಾಗೂ ವಾರ್ತಿಕಗಳ ಮಾತಿಗೆ ಹೀಗರ್ಥ - 'ಸಭಾರಾಜಾ' ಎಂಬ ಸೂತ್ರದಲ್ಲಿ 'ಸಭಾರಾಜಾಽಮನುಷ್ಯಪೂರ್ವೇ' ಎಂದು ರಾಜಶಬ್ದದ ಮುಂದೆ ವ್ಯಂಜನಾಕ್ಷರವಾದ 'ಜ್' ಎಂಬ ಅಕ್ಷರವನ್ನು ಉಚ್ಚಾರಣೆ ಮಾಡಿ ರಾಜ ಶಬ್ದವು ಇತ್ತಾದ ಜಕಾರದಿಂದ ಕೂಡಿದೆಯೆಂದು ನಿರ್ದೇಶಿಸಬೇಕು. ತದನಂತರ 'ಸ್ವಂ ರೂಪಂ ಶಬ್ದಸ್ಯ ಅಶಬ್ದ ಸಂಜ್ಞಾ' ಎಂಬ ಸೂತ್ರದಲ್ಲಿ ಜಕಾರ ಇತ್ತಾಗಿರುವ ಶಬ್ದದಿಂದ ಪರ್ಯಾಯ ಶಬ್ದವನ್ನೇ ಸ್ವೀಕರಿಸಬೇಕೆಂದು ತಿಳಿಯಬೇಕು. ಹೀಗೆ ಹೇಳಿದಾಗ 'ಇನಸಭಮ್' ಎಂಬ ರೂಪವು ಸಿದ್ಧವಾಗುತ್ತದೆ. 'ರಾಜಸಭಮ್' ಎಂಬ ರೂಪವು ಸಿದ್ಧವಾಗುವುದಿಲ್ಲವೆಂದು ತಿಳಿಯುತ್ತದೆ.

**प्रकाशः** – अत्र यद्यपि 'स्वं रूपं शब्दस्य' इति सूत्रे कैयटे 'सभाराजा' इत्यत्र ''अराजेति पर्युदास आश्रीयते । तेन, राजशब्दसदृशानां तत्पर्यायाणामेव ग्रहणं सिध्यति'' इत्युक्तत्वात् 'सभाराजा' इति सूत्र एव च मञ्जर्यां ''द्वावत्र नञौ । अराजपूर्वा अमनुष्यपूर्वेति । तत्र नञिवयुक्तन्यायेन राजशब्दसदृशशब्दाः पर्याया एव गृह्यन्ते'' इत्युक्तेस्तत्राराजेति पदच्छेदेन पर्यायग्रहणं युक्तम् । प्रकृते तु नैवम् ।

ವಾಸ್ತವಿಕವಾಗಿ ಕೈಯಟ ಗ್ರಂಥದಲ್ಲಿ 'ಸ್ವಂ ರೂಪಂ ಶಬ್ದಸ್ಯ' ಎಂಬ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾ 'ಸಭಾರಾಜಾ' ಎಂಬ ಸೂತ್ರದಲ್ಲಿ 'ಅರಾಜೇತಿ ಪರ್ಯುದಾಸ ಆಶ್ರೀಯತೇ, ತೇನ ರಾಜಶಬ್ದಸದೃಶಾನಾಂ ತತ್ಪರ್ಯಾಯಾಣಾಮೇವ ಗ್ರಹಣಂ ಸಿಧ್ಯತಿ' ಎಂದರೆ 'ಅರಾಜ' ಎಂಬುದಾಗಿ ಪರ್ಯುದಾಸವನ್ನು ಆಶ್ರಯಿಸಬೇಕು. ಇದರಿಂದ ರಾಜಶಬ್ದಕ್ಕೆ ಸದೃಶವಾದ ಅದರ ಪರ್ಯಾಯಶಬ್ದವನ್ನು ಸ್ವೀಕರಿಸಬೇಕೆಂದು ತಿಳಿಯುತ್ತದೆ. ಹೀಗೆ ವ್ಯಾಖ್ಯಾನಿಸಲಾಗಿದೆ. ಇದರ ಅರ್ಥ ಹೀಗಿದೆ - ಅರಾಜ ಎಂಬುದಾಗಿ ಪರ್ಯುದಾಸವನ್ನು ಆಶ್ರಯಿಸಿದಾಗ ತದನ್ಯವಾದದ್ದನ್ನು ಮತ್ತು ತತ್‌ಸದೃಶವಾದುದ್ದನ್ನು ಸ್ವೀಕರಿಸಬೇಕೆಂಬ ನಿಯಮವಿರುತ್ತದೆ. 'ಅಬ್ರಾಹ್ಮಣಃ' ಎಂದು ಹೇಳಿದಾಗ ಶೂದ್ರಾದಿಗಳನ್ನು ವಿವಕ್ಷಿಸುತ್ತಾರೆ ಹೊರತು, ಪಾಷಾಣಾದಿಗಳನ್ನು ಯಾರೂ ಸಹ ವಿವಕ್ಷಿಸುವುದಿಲ್ಲ. ಅದರಂತೆ ಅರಾಜ ಎಂಬ ಪರ್ಯುದಾಸದಿಂದಲೂ ರಾಜಶಬ್ದ ಭಿನ್ನವಾದ ಮತ್ತು ರಾಜಶಬ್ದಕ್ಕೆ ಸದೃಶವಾದ 'ಇನ' ಮೊದಲಾದ ಪರ್ಯಾಯ ಶಬ್ದಗಳನ್ನೇ ಸ್ವೀಕರಿಸಬೇಕೆಂದು ಸಿದ್ಧವಾಗುತ್ತದೆ.

ಪರಿಪೂರ್ಣಚಂದ್ರಿಕಾ

ಇನ್ನು 'ಪದಮಂಜರೀ' ಎಂಬ ವ್ಯಾಖ್ಯಾನದಲ್ಲಿ 'ದ್ವಾವತ್ರ ನಞೌ ಅರಾಜಪೂರ್ವ ಅಮನುಷ್ಯಪೂರ್ವ ಇತಿ, ತತ್ರ ನಞಿವಯುಕ್ತನ್ಯಾಯೇನ ರಾಜಶಬ್ದಸದೃಶಶಬ್ದಾಃ ಪರ್ಯಾಯಾ ಏವ ಗೃಹ್ಯಂತೇ' 'ಸಭಾರಾಜಾ' ಎಂಬ ಸೂತ್ರದಲ್ಲಿ ಎರಡು ಕಡೆ 'ನಞ್' ಇರುತ್ತದೆ. ಅರಾಜಪೂರ್ವ, ಅಮನುಷ್ಯಪೂರ್ವ ಎಂಬುದಾಗಿ. ಯಾವರೀತಿಯಾಗಿ 'ಚಂದ್ರಇವ ಮುಖಂ' ಎಂದು ಹೇಳಿದಾಗ 'ಇವ' ಶಬ್ದದಿಂದ ಚಂದ್ರನಿಗೆ ಸದೃಶವಾದದ್ದನ್ನೇ ವಿವಕ್ಷಿಸಲಾಗುತ್ತದೋ, ಅದರಂತೆ ರಾಜ ಶಬ್ದದಿಂದ ಅದಕ್ಕೆ ಸದೃಶವಾದ ಪರ್ಯಾಯಶಬ್ದಗಳನ್ನೇ ಸ್ವೀಕರಿಸಬೇಕೆಂದು ಹೇಳಲಾಗಿದೆ.

ಕೈಯಟದಲ್ಲಿ 'ಸ್ವಂ ರೂಪಂ ಶಬ್ದಸ್ಯ' ಎಂಬ ಸೂತ್ರ ವ್ಯಾಖ್ಯಾನದ ಸಂದರ್ಭದಲ್ಲಿ ಹೇಳಿದ್ದಾರೆ. ಅಲ್ಲಿ ಮಾತ್ರವಲ್ಲ 'ಸಭಾರಾಜಾ' ಎಂಬ ಸೂತ್ರದ ಪದಮಂಜರೀ ಎಂಬ ವ್ಯಾಖ್ಯಾನದಲ್ಲಿಯೇ ಹೀಗೆ ಹೇಳಿದ್ದಾರೆ. ಈ ಪ್ರಕಾರದಲ್ಲೂ ಸೂತ್ರದಲ್ಲಿ ಅರಾಜ ಎಂದೇ ಪದಚ್ಛೇದ. ಆದ್ದರಿಂದ ಅರಾಜಪೂರ್ವ, ಅಮನುಷ್ಯಪೂರ್ವ ಎಂದು ಸೂತ್ರದಲ್ಲಿ ಪದಚ್ಛೇದವನ್ನು ತಿಳಿಯಬೇಕು. ಕೈಯಟ ಹಾಗೂ ಮಂಜರೀ ವ್ಯಾಖ್ಯಾನಗಳ ಆಧಾರದಿಂದ 'ಅರಾಜಾ' ಎಂದೇ ಪದಚ್ಛೇದವನ್ನು ಮಾಡಬೇಕು. ಆದ್ದರಿಂದ ರಾಜ ಶಬ್ದದಿಂದ ಅದಕ್ಕೆ ಪರ್ಯಾಯಶಬ್ದವೆನಿಸಿದ 'ಇನ', 'ಈಶ್ವರ' ಮೊದಲಾದ ಶಬ್ದಗಳನ್ನು ವಿವಕ್ಷಿಸುವುದು ತಪ್ಪಾಗುವುದಿಲ್ಲ.

ಆದರೆ 'ದ್ಯುಭ್ವಾದ್ಯಾಯತನಂ ಸ್ವಶಬ್ದಾತ್' ಎಂಬ ಪ್ರಕೃತ ಸೂತ್ರದಲ್ಲಿ ಪರ್ಯುದಾಸ ಗ್ರಹಣವು ಕೇಳಿಸುತ್ತಿಲ್ಲ. ಒಂದು ವೇಳೆ 'ಅಸ್ವಶಬ್ದಾತ್' ಎಂದು ಹೇಳಿದ್ದರೆ ವ್ಯಾಕರಣಸೂತ್ರದ ದೃಷ್ಟಾಂತದಿಂದ ಪರ್ಯಾಯಶಬ್ದವನ್ನು ಸ್ವಶಬ್ದದಿಂದ ವಿವಕ್ಷಿಸಬಹುದಿತ್ತು. ಆದರೆ ಹಾಗೇ ಹೇಳದ ಕಾರಣ ಪರ್ಯಾಯಶಬ್ದವೆನಿಸಿದ ಆತ್ಮಶಬ್ದವನ್ನು ವಿವಕ್ಷಿಸಲು ಹೇಗೆ ಸಾಧ್ಯ ? ಎಂಬ ಪ್ರಶ್ನೆ ಬರುತ್ತದೆ.

**प्रकाशः** – तथापि भाष्यवार्तिकयोर्मते राजशब्दे पर्युदासानाश्रयणात् तन्मतावष्टम्भेन वा न्यायतो वा वचनतो वा यथाकथञ्चिदुपात्तपर्यायस्य ग्रहणमित्यत्राविवादाद्वा राजशब्दस्तत्पर्यायपर इत्युक्तम् ।

ಆದರೆ ಗ್ರಂಥಕಾರರು ಭಾಷ್ಯ ಹಾಗೂ ವಾರ್ತಿಕಮತಗಳ ಅಭಿಪ್ರಾಯದಿಂದ ವ್ಯಾಕರಣ ಸೂತ್ರದ ದೃಷ್ಟಾಂತವನ್ನು ನೀಡಿದ್ದಾರೆ ಹೊರತು, ಕೈಯಟ ಹಾಗೂ ಮಂಜರೀ ವ್ಯಾಖ್ಯಾನದ ಆಧಾರದಿಂದ ದೃಷ್ಟಾಂತ ನೀಡಿದ್ದಲ್ಲ. ಒಬ್ಬೊಬ್ಬ ವೈಯಾಕರಣರ ವಿವಕ್ಷೆಗಳೂ ಭಿನ್ನ ಭಿನ್ನವಾಗಿರುವುದರಿಂದ ಭಾಷ್ಯಕಾರರ ಹಾಗೂ ವಾರ್ತಿಕಕಾರರ ಅಭಿಪ್ರಾಯವನ್ನು ಅವಲಂಬಿಸುವುದು ತಪ್ಪಾಗುವುದಿಲ್ಲ. ಅಥವಾ ಕೈಯಟ ಹಾಗೂ ಮಂಜರೀ ಗ್ರಂಥಗಳಲ್ಲಿ ನಞಿವಯುಕ್ತನ್ಯಾಯದಿಂದ ರಾಜಶಬ್ದದಿಂದ ಪರ್ಯಾಯಶಬ್ದವನ್ನು ಸ್ವೀಕರಿಸಬೇಕೆಂದು ಹೇಳಿದ್ದಾರೆ. ಭಾಷ್ಯ ಹಾಗೂ ವಾರ್ತಿಕಗಳಲ್ಲಿ ನೇರವಾಗಿಯೇ ನ್ಯಾಯವನ್ನು ಹೇಳದೇ ರಾಜಶಬ್ದದಿಂದ ಪರ್ಯಾಯಶಬ್ದವನ್ನು ಸ್ವೀಕರಿಸಬೇಕೆಂದು ಹೇಳಿದ್ದಾರೆ. ಇಬ್ಬರ ಪಕ್ಷದಲ್ಲಿಯೂ ಪರ್ಯಾಯ ಶಬ್ದವನ್ನು ಸ್ವೀಕರಿಸಬೇಕೆಂಬ ವಿಚಾರದಲ್ಲಿ ವಿವಾದವಿರುವುದಿಲ್ಲ. ಈ ರೀತಿ ಅನೇಕ ದೃಷ್ಟಿಗಳಿಂದ ಗ್ರಂಥಕಾರರು ವ್ಯಾಕರಣದ ದೃಷ್ಟಾಂತವನ್ನು ನೀಡಿದ್ದಾರೆಂದು ತಿಳಿಯಬಹುದು.

ದ್ಯುಭ್ವಾದ್ಯಧಿಕರಣ (೧-೩-೧)

**प्रकाशः** – यद्वा तत्र पर्युदासेन नञ्युक्तमिव युक्तमन्यस्मिन् सदृशाधिकरणे प्रतिपत्तिं गमयतीति न्यायेन पर्यायपरत्वस्य सिद्धत्ववदिहापि विषयवाक्ये स्वशब्दाभावेन तदन्यथानुपपत्तिरूपन्यायसिद्धत्वमेव पर्यायपरत्वस्येति भावेनायं दृष्टान्त उक्तः ।

ಅಥವಾ ದೃಷ್ಟಾಂತ - ದಾರ್ಷ್ಟಾಂತಿಕ ಭಾವವನ್ನು ಸಂಪೂರ್ಣವಾಗಿ ತಿಳಿಯಬಹುದು. ಕೈಯಟ ಹಾಗೂ ಮಂಜರೀ ಗ್ರಂಥಗಳ ಪ್ರಕಾರವೂ ಸಹ ಗ್ರಂಥಕಾರರ ದೃಷ್ಟಾಂತವು ತಪ್ಪಾಗುವುದಿಲ್ಲ. ಏಕೆಂದರೆ 'ನಞಿವಯುಕ್ತನ್ಯಾಯೇನ' ಎಂದರೆ 'ನಞ್' ನಿಂದ ಕೂಡಿರುವ 'ಇವ'ದಿಂದ ಕೂಡಿರುವ ಯಾವುದೇ ಒಂದು ಪದವು ಅದಕ್ಕೆ ಸದೃಶವಾದ ಮತ್ತೊಂದು ಪದವನ್ನೇ ತಿಳಿಸುತ್ತದೆ ಎಂಬ ನ್ಯಾಯದಿಂದ ಪರ್ಯಾಯಪರತ್ವವನ್ನು ನ್ಯಾಯದಿಂದ ಸಮರ್ಥಿಸಿದ್ದಾರೆ. ಸೂತ್ರಕಾರರೂ ಸಹ ನ್ಯಾಯದಿಂದಲೇ ಪರ್ಯಾಯಶಬ್ದವನ್ನು ಸ್ವೀಕರಿಸಬೇಕೆಂದು ವಿವಕ್ಷಿಸಿದ್ದಾರೆ. ಏಕೆಂದರೆ 'ಯಸ್ಮಿನ್‌ದ್ಯೌಃ ಪೃಥಿವೀ' ಎಂಬುದನ್ನೇ ಎಲ್ಲಾ ವಾದಿಗಳು ವಿಷಯವಾಕ್ಯವನ್ನಾಗಿ ಹೇಳಿರುತ್ತಾರೆ. ಆದರೆ ಸೂತ್ರಕಾರರು ಸ್ವಶಬ್ದವಿದೆಯೆಂದು ಹೇಳಿದ್ದಾರೆ. ಆಥರ್ವಣದಲ್ಲಿ ಎಲ್ಲಿಯೂ ಸಹ ಸ್ವಶಬ್ದವು ಕಾಣಿಸುತ್ತಿಲ್ಲ. ಆದ್ದರಿಂದ 'ಸ್ವಶಬ್ದಾತ್' ಎಂಬುದಕ್ಕೆ ಆತ್ಮಶಬ್ದಾದಿಗಳಿರುವುದರಿಂದ ಎಂಬರ್ಥವನ್ನು ವಿವಕ್ಷಿಸಬೇಕು. ಹೀಗೆ ಅನ್ಯಥಾನುಪಪತ್ತಿಯೆಂಬ ನ್ಯಾಯದಿಂದ ಪರ್ಯಾಯಪದವನ್ನೇ ಸ್ವೀಕರಿಸಬೇಕೆಂದು ತಿಳಿಸಿದ್ದಾರೆ. ಆದ್ದರಿಂದ ಪರ್ಯಾಯಪದವನ್ನು ಸ್ವೀಕರಿಸಬೇಕೆಂಬುದು ಪಾಣಿನಿ ಸೂತ್ರದಲ್ಲಿಯೂ ನ್ಯಾಯಸಿದ್ಧವಾಗಿದೆ. ಇಲ್ಲಿಯೂ ಸಹ ನ್ಯಾಯಸಿದ್ಧವಾಗಿದೆಯೆಂಬ ಅಂಶದಿಂದ ದೃಷ್ಟಾಂತ-ದಾರ್ಷ್ಟಾಂತಿಕ ಭಾವವನ್ನು ತಿಳಿಯಬೇಕು.

**प्रकाशः** – अत एव प्राग्विषयवाक्ये स्वशब्दाभावादित्यन्यथानुपपत्तिरूपन्याय उपात्तः ।

ಆದ್ದರಿಂದಲೇ ಹಿಂದೆ ಗ್ರಂಥಕಾರರು ವಿಷಯವಾಕ್ಯವನ್ನು ತೋರಿಸುವಾಗ 'ಸ್ವಶಬ್ದಾಭಾವಾತ್' ಎಂದು ಅನ್ಯಥಾನುಪಪತ್ತಿಯೆಂಬ ನ್ಯಾಯವನ್ನು ತೋರಿಸಿದ್ದಾರೆಂದು ತಿಳಿಯಬೇಕು.

**प्रकाशः** – केचित्तु कैयटाद्युक्तमेवायुक्तम् । अराजेत्युक्तावपि स्वं रूपं शब्दस्यैव ग्रहणापत्त्या नञिवयुक्तन्यायाप्रवृत्तेरिति भावेनैवमुक्तमित्याहुः ।

ಕೆಲವರು ಕೈಯಟ ಹಾಗೂ ಮಂಜರೀ ಗ್ರಂಥಗಳಲ್ಲಿ ಹೇಳಿದ್ದನ್ನು ತಪ್ಪೆಂದು ಹೇಳುತ್ತಾರೆ. ಏಕೆಂದರೆ 'ಸ್ವಂ ರೂಪಂ' ಎಂಬ ಸೂತ್ರದ ಪ್ರಕಾರ 'ಅರಾಜಾ' ಎಂದು ಹೇಳಿದರೆ 'ಅರಾಜ' ಶಬ್ದವನ್ನೇ ಸ್ವೀಕರಿಸಬೇಕು ಹೊರತು 'ರಾಜಭಿನ್ನವಾದ' ಎಂಬರ್ಥವನ್ನು ಸ್ವೀಕರಿಸಲು ಬರುವುದಿಲ್ಲ. 'ನಞ್' ಹಾಗೂ 'ಇವ' ಗಳಿಂದ ಕೂಡಿದ ನ್ಯಾಯವು ಶಬ್ದದಿಂದ ಅರ್ಥವನ್ನು ಸ್ವೀಕರಿಸುವ ಸಂದರ್ಭದಲ್ಲಿ ಮಾತ್ರ ಪ್ರವೃತ್ತವಾಗುತ್ತದೆ ಹೊರತು, ಶಬ್ದದಿಂದ ಶಬ್ದವನ್ನೇ ವಿವಕ್ಷಿಸುವಾಗ ಈ ನ್ಯಾಯವು ಪ್ರವೃತ್ತವಾಗುವುದಿಲ್ಲವೆಂದು ಹೇಳುತ್ತಾರೆ.

ಪರಿಪೂರ್ಣಚಂದ್ರಿಕಾ

**गुरुराजीयम्** – अतिसन्निहितेति ।। द्वितीयसूत्रोक्तामृतसेतुत्वापेक्षयाऽतिसन्निहितेत्यर्थः ।। यथा सभाराजेत्यादि ।।

**वृक्षादौ तद्विशेषाणां स्वेपर्यायविशेषयोः ।**
**पर्यायस्यैव राजादौ मत्स्यादौ तद्विशेषयोः ।।**

इति वचनार्थः । पर्यायवचनस्यैव न स्वरूपस्य नापि विशेषाणां चन्द्रादीनामित्यर्थः । कथं पुनरेतल्लभ्यते । द्वावत्र नञौ । अराजपूर्वाऽमनुष्यपूर्वा चेति । तत्राराजपूर्वेति न प्रसज्यनिषेधार्थस्य ग्रहणम् । असामर्थ्येन समासानुपपत्तेः । किन्तु पर्युदासार्थस्यैव । तथाच नञिवयुक्तन्यायेन राजशब्दसदृशाः पर्याया एव गृह्यन्त इति ध्येयम् ।




ಪ್ರಥಮಸೂತ್ರವು ಸ್ವಪಕ್ಷ ಸಾಧಕವನ್ನು ಹೇಳುತ್ತಿರುವುದರಿಂದ ಪ್ರಥಮ ಪ್ರಾಪ್ತವಾಗಿದೆ. ವಾದ ಕಥೆಯಲ್ಲಿ ಮೊದಲು ಸ್ವಪಕ್ಷ ಸಾಧಕಗಳನ್ನು ಹೇಳಿ, ಅನಂತರ (ಪರಪಕ್ಷಬಾಧಕಗಳನ್ನು ಹೇಳಬೇಕು) ಪರಪಕ್ಷಗಳನ್ನು ನಿರಾಕರಣೆ ಮಾಡಬೇಕು. ಅದಕ್ಕನುಸಾರಿಯಾಗಿ ಸೂತ್ರಕಾರರು ಮೊದಲು ಸ್ವಪಕ್ಷಸಾಧಕಗಳನ್ನು ಹೇಳಿ ಮುಂದೆ 'ಅತಚ್ಛಬ್ದಾತ್' ಇತ್ಯಾದಿಯಾಗಿ ಪರಪಕ್ಷಗಳನ್ನು ನಿರಾಕರಣೆ ಮಾಡಿದ್ದಾರೆ.

ಸೂತ್ರದಲ್ಲಿರುವ 'ಸ್ವಶಬ್ದಾತ್' ಎಂಬ ಹೇತುವಿನಿಂದ 'ಸ್ವ' ಎಂಬ ಶಬ್ದಕ್ಕೆ ಪರ್ಯಾಯ ಪದವೆನಿಸಿದ ಆತ್ಮಶಬ್ದವನ್ನು ಸ್ವೀಕರಿಸಬೇಕು. ಯಾವರೀತಿಯಾಗಿ ಪಾಣಿನಿ ವ್ಯಾಕರಣದಲ್ಲಿ 'ಸಭಾರಾಜಾಽಮನುಷ್ಯಪೂರ್ವಾ' ಎಂಬ ಸೂತ್ರದಲ್ಲಿ 'ರಾಜಾ' ಎಂಬ ಶಬ್ದಕ್ಕೆ ಪರ್ಯಾಯ ಪದಗಳಾದ ಈಶ್ವರ ಮೊದಲಾದ ಶಬ್ದಗಳನ್ನು ಸ್ವೀಕರಿಸಿದ್ದಾರೋ, ಅದರಂತೆ ಇಲ್ಲಿಯೂ ಸಹ ತಿಳಿಯಬೇಕು.



• • • • •

## 'ಸ್ವಶಬ್ದಾತ್' ಎಂಬ ಸೂತ್ರ ಭಾಗದ ಗಾಂಭೀರ್ಯ

### तात्पर्यचन्द्रिका

**आत्मशब्दादित्युक्तौ तु यद्यप्यार्जवं प्रतिपत्तिलाघवं च शब्दलाघवाद्वरम् । तथापि तस्य विष्णावसाधारण्यं न ज्ञापितं स्यात् ।**

ಅನುವಾದ - ಸೂತ್ರದಲ್ಲಿ 'ಸ್ವಶಬ್ದಾತ್' ಎಂದು ಹೇಳಿದ್ದಾರೆ. ವಾಸ್ತವಿಕವಾಗಿ 'ಆತ್ಮಶಬ್ದಾತ್' ಎಂದು ಹೇಳಬೇಕಿತ್ತು. ಹಾಗೆ ಹೇಳುವುದರಿಂದ ನೇರವಾಗಿ ಹೇತುವಿನ ಜ್ಞಾನ ಉಂಟಾಗುತ್ತದೆ. ಇನ್ನು ಆತ್ಮಶಬ್ದಕ್ಕಿಂತ 'ಸ್ವ' ಎಂಬ ಶಬ್ದದಲ್ಲಿ ಲಾಘವವಿದೆಯೆಂದು ಹೇಳಬಹುದು. ಆದರೆ 'ಆತ್ಮಶಬ್ದಾತ್' ಎಂಬ ಹೇತುವಿನಿಂದ ಶೀಘ್ರವಾಗಿ ಹೇತುವಿನ ಜ್ಞಾನವುಂಟಾಗುವ ಪ್ರಯುಕ್ತ ಪ್ರತಿಪತ್ತಿಲಾಘವವಿದೆ. ಶಬ್ದಲಾಘವಕ್ಕಿಂತ ಪ್ರತಿಪತ್ತಿಲಾಘವವೇ ಶ್ರೇಷ್ಠ. ಹೀಗಿರುವಾಗ ಸೂತ್ರಕಾರರು ವಕ್ರವಾಗಿ ಹೇತುವಿನ ಜ್ಞಾನವನ್ನು ಹುಟ್ಟಿಸುವ 'ಸ್ವಶಬ್ದಾತ್' ಎಂಬುದನ್ನು ಏಕೆ ಹೇಳಿದರು? ಎಂದರೆ ವಿಷ್ಣುವಿನಲ್ಲಿ ಹೇತು ಅಸಾಧಾರಣವಾಗಿದೆಯೆಂದು ತಿಳಿಸುವುದಕ್ಕೋಸ್ಕರ ಸೂತ್ರಕಾರರು 'ಸ್ವಶಬ್ದಾತ್' ಎಂದು ಹೇಳಿದ್ದಾರೆ. ಇಲ್ಲದ್ದಿದರೆ ವಿಷ್ಣುವಿನಲ್ಲಿ ಅಸಾಧಾರಣ್ಯವು ತಿಳಿಯುತ್ತಿರಲಿಲ್ಲ.

**तस्य शब्दस्तच्छब्द इति विग्रहं विवक्षित्वा तच्छब्दादित्युक्तौ तु शब्दविशेषो नोपात्तः स्यात् । अत उभयार्थं स्वशब्दादित्युक्तम् ।**

ಅಸಾಧಾರಣ್ಯವನ್ನು ತಿಳಿಸಬೇಕೆಂದರೆ 'ಸ್ವಶಬ್ದಾತ್' ಎಂದೇ ಹೇಳಬೇಕಾಗಿಲ್ಲ. 'ತಸ್ಯಶಬ್ದಃ' 'ತಚ್ಛಬ್ದಃ' ಎಂಬ ವಿಗ್ರಹವನ್ನು ವಿವಕ್ಷಿಸಿ 'ತಚ್ಛಬ್ದಾತ್' ಎಂದೂ ಸಹ ಹೇಳಬಹುದಿತ್ತು. ಹೌದು; ಹೀಗೆ ಹೇಳಿದರೆ ವಿಷ್ಣುವಿನಲ್ಲಿ ಅಸಾಧಾರಣವಾದ ಶಬ್ದವು ಯಾವುದೆಂದು ತಿಳಿಯುತ್ತಿರಲಿಲ್ಲ. ಅಂತಹ ಶಬ್ದ ಆತ್ಮಶಬ್ದವೇ ಆಗಿದೆಯೆಂದು ತಿಳಿಸುವುದಕ್ಕಾಗಿಯೂ ಸೂತ್ರಕಾರರು 'ಸ್ವಶಬ್ದಾತ್' ಎಂದು ಹೇಳಿದ್ದಾರೆ. ಆದ್ದರಿಂದ ವಿಷ್ಣುವಿನಲ್ಲಿ ಅಸಾಧಾರಣವಾಗಿದೆ. ಮತ್ತು ಅದು ಆತ್ಮಶಬ್ದವೇ ಆಗಿದೆ ಎಂಬೆರಡು ಪ್ರಯೋಜನಕ್ಕೋಸ್ಕರ ಸೂತ್ರದಲ್ಲಿ 'ಸ್ವಶಬ್ದಾತ್' ಎಂದು ಹೇಳಿರುತ್ತಾರೆ.

**एवमुक्ते सूक्तिवक्त्रत्वावैयर्थ्याय स्वस्य विष्णोरेव शब्दः स्वशब्द इत्यपि विग्रहस्य विवक्षणीयत्वादसाधारण्यं ज्ञापितं भवति ।**

ಹೀಗೆ ಸೂತ್ರಕಾರರು 'ಸ್ವಶಬ್ದಾತ್' ಎಂದು ಹೇಳಿದ್ದರಿಂದ ಮತ್ತೊಂದು ಪ್ರಯೋಜವನ್ನು ತಿಳಿಸಿದ್ದಾರೆ. ಶ್ರುತಿಯಲ್ಲಿ 'ಸ್ವ' ಎಂಬ ಶಬ್ದವು ಇಲ್ಲದ ಕಾರಣ 'ಸ್ವಶಬ್ದಾತ್' ಎಂದೇಕೆ ಸೂತ್ರಕಾರರು ಹೇಳಿದರು ಎಂಬ ವೈಯರ್ಥ್ಯಶಂಕೆಯು ಉಂಟಾಗುತ್ತದೆ. ಆವಾಗ ಅನ್ಯಥಾನುಪಪತ್ತಿರೂಪ

ಪ್ರಮಾಣದಿಂದ 'ಸ್ವಸ್ಯ ಏವ ಶಬ್ದಃ ಸ್ವಶಬ್ದಃ' ಎಂಬ ವಿಗ್ರಹವನ್ನು ಆಶ್ರಯಿಸಿ ವಿಷ್ಣುವಿನದ್ದೇ ಶಬ್ದವೆಂಬ ಅರ್ಥವು ತಿಳಿಯುತ್ತದೆ. ಇದರಿಂದ ಆತ್ಮಶಬ್ದವು ವಿಷ್ಣುವಿನ ಅಸಾಧಾರಣ ಹೇತುವೆಂದು ತಿಳಿಸಿದಂತಾಗುತ್ತದೆ. ನೇರವಾಗಿ 'ಆತ್ಮಶಬ್ದಾತ್' ಎಂಬುದನ್ನೇ ಹೇತುವನ್ನಾಗಿ ಮಾಡಿದ್ದಲ್ಲಿ ವಿಷ್ಣುವಿಗೆ ಸಂಬಂಧಪಟ್ಟ ಶಬ್ದವೆಂಬ ಅರಿವು ಉಂಟಾಗುತ್ತಿರಲಿಲ್ಲ. ಈ ಬಗೆಯ ವಿಗ್ರಹವೂ ಕೂಡ ತಿಳಿಯುತ್ತಿರಲಿಲ್ಲ.

**एतदेवाभिप्रेत्योक्तं तत्वप्रदीपे ''विष्णोः स्वरूपस्यैव साक्षाद्वाचको ह्यात्मशब्दः'' इति । षष्ठीसमासमात्रविवक्षा चेत् ''तद्धर्मोपदेशात् । तल्लिङ्गात्'' इत्यादाविवात्रापि तच्छब्दः प्रयुज्येत ।**

ಈ ಅಭಿಪ್ರಾಯದಿಂದಲೇ ತತ್ವಪ್ರದೀಪದಲ್ಲಿ 'ವಿಷ್ಣೋಃ ಸ್ವರೂಪಸ್ಯೈವ ಸಾಕ್ಷಾದ್ವಾಚಕೋ ಹ್ಯಾತ್ಮಶಬ್ದಃ' ಆತ್ಮಶಬ್ದವು ವಿಷ್ಣುವಿನ ಸ್ವರೂಪಕ್ಕೆ ಸಾಕ್ಷಾದ್ವಾಚಕವಾಗಿದೆಯೆಂದು ಹೇಳಿರುತ್ತಾರೆ.

ಒಂದು ವೇಳೆ ಸೂತ್ರದಲ್ಲಿರುವ 'ಸ್ವಶಬ್ದಾತ್' ಎಂಬ ಪದದಲ್ಲಿ ಷಷ್ಠೀಸಮಾಸವಷ್ಟೇ ವಿವಕ್ಷಿತವಾಗಿದ್ದಲ್ಲಿ, 'ತದ್ಧರ್ಮೋಪದೇಶಾತ್' 'ತಲ್ಲಿಂಗಾತ್' ಇತ್ಯಾದಿ ಸ್ಥಳಗಳಲ್ಲಿ ಹೇಳಿದಂತೆ 'ತಚ್ಛಬ್ದಾತ್' ಎಂದೇ ಹೇಳುತ್ತಿದ್ದರು. ಕರ್ಮಧಾರಯ ಸಮಾಸವಷ್ಟೇ ವಿವಕ್ಷಿತವಾಗಿದ್ದಲ್ಲಿ 'ಆತ್ಮಶಬ್ದಾತ್' ಎಂದು ಹೇಳುತ್ತಿದ್ದರು. ಇವೆರಡನ್ನೂ ಬಿಟ್ಟು 'ಸ್ವಶಬ್ದಾತ್' ಎಂದು ಹೇಳಿರುವ ಪ್ರಯುಕ್ತ ಷಷ್ಠೀಸಮಾಸವನ್ನು ಹಾಗೂ ಸಂಭಾವನಾಪೂರ್ವಪದ ಕರ್ಮಧಾರಯ ಸಮಾಸವನ್ನೂ ವಿವಕ್ಷಿಸಬೇಕೆಂದು ತಿಳಿಯುತ್ತದೆ. ಈ ಎರಡೂ ಸಮಾಸಗಳಿಂದ ವಿಷ್ಣುವಿನ ಅಸಾಧಾರಣವಾಗಿದೆಯೆಂದು ಮತ್ತು ಆತ್ಮವೆಂಬ ಶಬ್ದವಿಶೇಷಣ ಸ್ವರೂಪವಾಗಿದೆಯೆಂದು ಎರಡು ಪ್ರಮೇಯಗಳು ಸಿದ್ಧವಾಗುತ್ತವೆ.

**अथवा यथा लोकेऽन्यत्रप्रसिद्धोऽपि स्वशब्दो विष्णोः सकाशात् सम्भूते चतुर्मुखे स्वभूरिति प्रयोगादिवशाद्विष्णौ मुख्यः तथा लोकेऽन्यत्रप्रसिद्धोऽप्यात्म-शब्दश्चतुर्मुखे आत्मभूरिति प्रयोगात् –**

**आत्मेति मुख्यतो विष्णुस्तदन्ये तूपचारतः ।**
**तथैव स्व इति प्रोक्तस्तस्माद्ब्रह्माऽऽत्मभूः स्वभूः ॥**

**इति वचनाच्च विष्णौ मुख्य इत्यभिप्रेत्य स्वशब्दादित्युक्तम् ।**

ಅಥವಾ 'ಸ್ವಶಬ್ದಾತ್' ಎಂಬುದನ್ನು ದೃಷ್ಟಾಂತದಂತೆ ಸೂತ್ರಕಾರರು ಹೇಳಿದ್ದಾರೆ. ಹೇಗೆಂದರೆ - ಲೋಕದಲ್ಲಿ 'ಸ್ವ' ಎಂಬ ಶಬ್ದವು ಬಂಧು, ಹಣ, ಮೊದಲಾದ ಅರ್ಥಗಳಲ್ಲಿ ಪ್ರಸಿದ್ಧವಾಗಿದ್ದರೂ 'ಸ್ವ' ಎಂದರೆ ಸ್ವತಂತ್ರನಾದ ವಿಷ್ಣುವಿನ ದೆಸೆಯಿಂದ ಹುಟ್ಟಿದ ಕಾರಣ ಚತುರ್ಮುಖನನ್ನು 'ಸ್ವಭೂಃ'

ಎಂದೇ ಕರೆಯಲಾಗುತ್ತದೆ. ಆದ್ದರಿಂದ ಲೋಕದಲ್ಲಿ 'ಸ್ವ' ಶಬ್ದವು ಅಮುಖ್ಯವಾಗಿ ಪ್ರಯೋಗಿಸಲ್ಪಟ್ಟಿದ್ದರೂ ವಿಷ್ಣುವಿನಲ್ಲಿ ಮುಖ್ಯವಾಗಿಯೇ ಪ್ರಯೋಗಿಸಲಾಗುತ್ತದೆ. ಅದರಂತೆ ಆತ್ಮಶಬ್ದವೂ ಸಹ ವಿಷ್ಣುವನ್ನು ಬಿಟ್ಟು ಲೋಕದಲ್ಲಿ ಜೀವಾದಿಗಳ ವಿಷಯದಲ್ಲಿ ಅಮುಖ್ಯವಾಗಿ ಪ್ರಯೋಗಿಸಲ್ಪಟ್ಟಿದೆ. ಆದರೂ ಸಹ ಚತುರ್ಮುಖನನ್ನು 'ಆತ್ಮಭೂಃ' ಎಂದು ಕರೆಯುವುದರಿಂದ ಆತ್ಮ ಶಬ್ದವು ವಿಷ್ಣುವಿನಲ್ಲೇ ಮುಖ್ಯವಾಗಿದೆಯೆಂದು ತಿಳಿಯಬೇಕು.

'ಆತ್ಮೇತಿ ಮುಖ್ಯತೋ ವಿಷ್ಣುಸ್ತದನ್ಯೇ ತೂಪಚಾರತಃ । ತಥೈವ ಸ್ವ ಇತಿ ಪ್ರೋಕ್ತಸ್ತಸ್ಮಾದ್ಬ್ರಹ್ಮಾಽಽತ್ಮಭೂಃ ಸ್ವಭೂಃ ॥' 'ಸ್ವ' ಎಂಬ ಶಬ್ದದಂತೆ 'ಆತ್ಮ' ಎಂಬ ಶಬ್ದವೂ ಸಹ ಮುಖ್ಯವಾಗಿ ವಿಷ್ಣುವನ್ನು ಪ್ರತಿಪಾದಿಸುತ್ತದೆ. ಉಳಿದ ಪದಾರ್ಥಗಳನ್ನು ಗೌಣವಾಗಿ ಪ್ರತಿಪಾದಿಸುತ್ತದೆ. ಆದ್ದರಿಂದಲೇ ಬ್ರಹ್ಮನಿಗೆ 'ಸ್ವಭೂಃ' ಎಂದು, 'ಆತ್ಮಭೂಃ' ಎಂದು ಕರೆಯುತ್ತಾರೆ.

ಹೀಗೆ ಪ್ರಮಾಣವಚನವಿರುವ ಪ್ರಯುಕ್ತ 'ಆತ್ಮ' ಎಂಬ ಶಬ್ದವು ವಿಷ್ಣುವಿನಲ್ಲಿ ಮುಖ್ಯವಾಗಿದೆಯೆಂಬ ಅಭಿಪ್ರಾಯದಿಂದ 'ಸ್ವಶಬ್ದಾತ್' ಎಂದು ಹೇಳಿದ್ದಾರೆ.

**प्रकाशः –**

केयमेवं सूत्रकारस्य वक्रा रीतिः ।। आत्मशब्दादित्येव कुतो नासूत्रयदिति भावेनाक्षिप्य समाधत्ते – **आत्मशब्दादिति ।।**

ಸೂತ್ರಕಾರರು 'ಆತ್ಮಶಬ್ದಾತ್' ಎಂದು ಹೇಳುವ ಬದಲು, 'ಸ್ವಶಬ್ದಾತ್' ಎಂಬ ವಕ್ರಮಾರ್ಗವನ್ನೇಕೆ ಅನುಸರಿಸಿದ್ದಾರೆ. "ದ್ಯುಭ್ವಾದ್ಯಾಯತನಮ್ ಆತ್ಮಶಬ್ದಾತ್" ಎಂದೇ ಸೂತ್ರವನ್ನು ರಚಿಸಬಹುದಿತ್ತಲ್ಲವೇ? ಎಂಬ ಅಭಿಪ್ರಾಯದಿಂದ ಆಕ್ಷೇಪ ಮಾಡಿ, ಸಮಾಧಾನ ನೀಡುತ್ತಿದ್ದಾರೆ 'ಆತ್ಮಶಬ್ದಾತ್' ಇತ್ಯಾದಿ ವಾಕ್ಯದಿಂದ.

**प्रकाशः – आर्जवमिति ।। स्वेति शब्द इति विग्रहाश्रयणे विषयवाक्ये तदभावा-लोचनेन तत्पर्यायग्रहणस्य दुर्बोधत्वेन वक्रत्वादेवमुक्तौ तदभावादार्जवमित्यर्थः ।**

ಗ್ರಂಥದಲ್ಲಿ 'ಆರ್ಜವಂ' ಎಂದು ಹೇಳಿದ್ದಾರೆ. ಅಂದರೆ ನೇರವಾಗಿ ತಿಳಿಯುತ್ತದೆಂದರ್ಥ. ಸೂತ್ರದಲ್ಲಿರುವ 'ಸ್ವಶಬ್ದಾತ್' ಎಂಬ ಹೇತುವಿಗೆ 'ಸ್ವ ಇತಿ ಶಬ್ದಃ' 'ಸ್ವಶಬ್ದಃ' ಎಂಬ ವಿಗ್ರಹವನ್ನು ಆಶ್ರಯಿಸಿದರೆ ವಿಷಯವಾಕ್ಯದಲ್ಲಿ 'ಸ್ವ' ಎಂಬ ಶಬ್ದವೇ ಇರುವುದಿಲ್ಲವೆಂದು ಆಲೋಚನೆ ಮಾಡಿ 'ಸ್ವ' ಎಂಬ ಶಬ್ದಕ್ಕೆ ಪರ್ಯಾಯಪದವೆನಿಸಿದ ಆತ್ಮಶಬ್ದವನ್ನು ತಿಳಿಯಬೇಕು. ಇದು ಕಷ್ಟಸಾಧ್ಯವಾದ್ದರಿಂದ ವಕ್ರವಾಗಿದೆ. ಒಂದು ವೇಳೆ 'ಆತ್ಮಶಬ್ದಾತ್' ಎಂಬುದನ್ನೇ ಹೇತು ಮಾಡಿದರೆ ವಿಷಯವಾಕ್ಯದಲ್ಲಿ ಆತ್ಮಶಬ್ದವಿರುವುದರಿಂದ ನೇರವಾಗಿ ಹೇತುವಿನ ಜ್ಞಾನ ಉಂಟಾಗುತ್ತದೆಂದರ್ಥ.

**प्रकाशः** – त्वत्पक्षेऽपि शब्दगौरवमित्यत आह – **प्रतिपत्तीति** ।। तर्हि तल्लिङ्गादित्यादाविव तच्छब्दादित्युक्तिस्स्यादित्यत आह – **तस्येति** ।।

ಪರಿಪೂರ್ಣಚಂದ್ರಿಕಾ

'ಆತ್ಮಶಬ್ದಾತ್' ಎಂಬುದನ್ನು ಹೇತುವನ್ನಾಗಿ ಮಾಡಿದರೆ, ಶಬ್ದಗೌರವ ಬರುತ್ತದೆ. 'ಸ್ವ' ಎಂಬ ಪದಕ್ಕಿಂತ ಹೆಚ್ಚಿನ ಅಕ್ಷರಗಳು 'ಆತ್ಮ' ಎಂಬ ಪದದಲ್ಲಿ ಇದೆಯಲ್ಲವೇ? ಎಂಬ ಪ್ರಶ್ನೆಗೆ 'ಪ್ರತಿಪತ್ತಿಲಾಘವಂಚ' ಎಂಬುದರಿಂದ ಉತ್ತರಿಸಿದ್ದಾರೆ. ಶಬ್ದಲಾಘವಕ್ಕಿಂತ ಪ್ರತಿಪತ್ತಿಲಾಘವವೇ ಉತ್ತಮವೆಂದು ಅಭಿಪ್ರಾಯ. ಹಾಗಾದರೆ 'ಸ್ವಶಬ್ದಾತ್' ಎಂದೇ ಏಕೆ ಹೇಳಬೇಕಿತ್ತು? 'ಆಕಾಶಸ್ತಲ್ಲಿಂಗಾತ್' ಎಂಬ ಸೂತ್ರದಲ್ಲಿ 'ತಲ್ಲಿಂಗಾತ್' ಎಂಬ ಪದವನ್ನು ಪ್ರಯೋಗಿಸಿದಂತೆ ಇಲ್ಲಿಯೂ ಕೂಡ 'ತಚ್ಛಬ್ದಾತ್' ಎಂದೇ ಹೇಳಬಹುದಿತ್ತಲ್ಲವೇ? ಎಂಬ ಪ್ರಶ್ನೆಗೆ 'ತಸ್ಯ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ.

**प्रकाशः** – अत इति ।। अन्यथा न्यासे विवक्षितासिद्धेरसाधारण्यज्ञापन-शब्दविशेषोपादानप्रयोजनरूपोभयार्थमित्यर्थः ।

ಒಂದು ವೇಳೆ 'ಸ್ವಶಬ್ದಾತ್' ಎಂದು ಹೇಳದೆ, 'ತಚ್ಛಬ್ದಾತ್' ಎಂಬುದಾಗಿ ಅಥವಾ 'ಆತ್ಮಶಬ್ದಾತ್' ಎಂಬುದಾಗಿ ಸೂತ್ರಕಾರರು ಹೇಳಿದ್ದರೆ, ವಿವಕ್ಷಿತವಾದ ಉದ್ದೇಶವು ಸಿದ್ಧಿಸುತ್ತಿರಲಿಲ್ಲ. ಅಂದರೆ ಆತ್ಮಶಬ್ದವು ಅಸಾಧಾರಣವಾಗಿದೆ ಎಂಬ ವಿಚಾರವಾಗಲೀ, ಅಥವಾ 'ಆತ್ಮ' ಎಂಬ ಶಬ್ದವಿಶೇಷವನ್ನೇ ಸ್ವೀಕರಿಸಬೇಕೆಂಬ ಪ್ರಯೋಜನವಾಗಲೀ ತಿಳಿಯುತ್ತಿರಲಿಲ್ಲ. ಈ ಎರಡನ್ನೂ ತಿಳಿಸುವ ಉದ್ದೇಶದಿಂದ 'ಸ್ವಶಬ್ದಾತ್' ಎಂದು ಹೇಳಿದ್ದಾರೆ. ಇದು 'ಅತಃ' ಎಂಬ ಶಬ್ದದ ಅರ್ಥ.

**प्रकाशः** – एवमुक्तौ कथमुभयस्य लाभ इत्यत आह – एवमिति ।। न केवलं स्वेतिशब्द इति विग्रह इत्यपेरर्थः ।

'ಸ್ವಶಬ್ದಾತ್' ಎಂಬ ಪದಪ್ರಯೋಗದಿಂದ ಎರಡು ಪ್ರಯೋಜನವು ಹೇಗೆ ಲಾಭವಾಗುತ್ತದೆ? ಎಂಬ ಪ್ರಶ್ನೆಗೆ 'ಏವಮುಕ್ತೇ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. ಕೇವಲ 'ಸ್ವ ಇತಿ ಶಬ್ದಃ' ಎಂಬ ಸಂಭಾವನಾ ಪೂರ್ವಪದ ಕರ್ಮಧಾರಯ ಸಮಾಸವನ್ನಷ್ಟೇ ವಿವಕ್ಷಿಸಬಾರದೆಂದು 'ಇತ್ಯಪಿ' ಎಂಬಲ್ಲಿರುವ 'ಅಪಿ' ಶಬ್ದದ ಅರ್ಥ.

**प्रकाशः** – एवं विग्रहद्वयमाश्रित्यैकं समाधिमुक्त्वाऽधुना स्वेति शब्द इत्येव विग्रहः । पूर्वोक्तदिशा स्वशब्दपर्यायात्मशब्दादित्येवार्थः ।

ಆದ್ದರಿಂದ 'ಸ್ವ ಇತಿ ಶಬ್ದಃ' 'ಸ್ವಶಬ್ದಃ' ಎಂಬ ವಿಗ್ರಹವನ್ನು ಮತ್ತು 'ಸ್ವಸ್ಯ ಶಬ್ದಃ' 'ಸ್ವಶಬ್ದಃ' ಎಂಬ ವಿಗ್ರಹವನ್ನು ಆಶ್ರಯಿಸಿ ಒಂದು ಸಮಾಧಾನವನ್ನು ಹೇಳಿ, ಪ್ರಕೃತ 'ಸ್ವ ಇತಿ ಶಬ್ದಃ' 'ಸ್ವಶಬ್ದಃ' ಎಂಬ ಒಂದೇ ವಿಗ್ರಹವನ್ನಾಶ್ರಯಿಸಿದರೂ ಸಾಕು. ಹಿಂದೆ ಹೇಳಿದಂತೆ ಸ್ವಶಬ್ದಕ್ಕೆ ಪರ್ಯಾಯವಾದ 'ಆತ್ಮಶಬ್ದಾತ್' ಎಂಬ ವಿವಕ್ಷಿತ ಪ್ರಯೋಜನವು ಲಾಭವಾಗುತ್ತದೆಂದು ತಿಳಿಯಬೇಕು.

**प्रकाशः** – तर्ह्यात्मशब्दादित्येव कुतो नोक्तमित्याशङ्क्य स्वशब्दादित्युक्तौ यथा स्वशब्दो विष्णौ मुख्यस्तथाऽऽत्मशब्दोऽपीत्यभिप्रायसूचनमेवमुक्तेस्सूत्रकारस्य प्रयोजनम् ।

ಹಾಗಾದರೆ ಸೂತ್ರದಲ್ಲಿ 'ಆತ್ಮಶಬ್ದಾತ್' ಎಂದೇ ಹೇಳಬೇಕಿತ್ತು. ಹಾಗೇಕೆ ಹೇಳಲಿಲ್ಲ? ಎಂದು ಆಶಂಕಿಸಿ ಹೀಗೆ ಉತ್ತರಿಸಿದ್ದಾರೆ. ಏನೆಂದರೆ 'ಸ್ವಶಬ್ದಾತ್' ಎಂದು ಹೇಳಿದ್ದರಿಂದ ದೃಷ್ಟಾಂತ-ದಾರ್ಷ್ಟಾಂತಿಕ ಭಾವವನ್ನು ಸೂತ್ರಕಾರರು ತಿಳಿಸಿದ್ದಾರೆ. ಯಾವರೀತಿಯಾಗಿ ಸ್ವಶಬ್ದವು ವಿಷ್ಣುವಿನಲ್ಲಿ ಮುಖ್ಯವಾಗಿದೆಯೋ? ಅದರಂತೆ ಆತ್ಮಶಬ್ದವೂ ಸಹ ವಿಷ್ಣುವಿನಲ್ಲಿ ಮುಖ್ಯವಾಗಿದೆಯೆಂಬ ಅಭಿಪ್ರಾಯವನ್ನು ಸೂಚಿಸುವುದೇ ಸೂತ್ರಕಾರರ ಪ್ರಯೋಗದ ಅಭಿಪ್ರಾಯ.

**प्रकाशः** – अत एव छान्दोग्यभाष्ये षष्ठे स्वशब्दतुल्यस्यात्मशब्दस्य विष्णौ मुख्यत्वमाचार्यैस्समर्थितमिति भावेन पक्षान्तरमाह – **अथवेति** ।।

ಆದ್ದರಿಂದಲೇ ಛಾಂದೋಗ್ಯಭಾಷ್ಯದ ಆರನೇ ಅಧ್ಯಾಯದಲ್ಲಿ ಸ್ವಶಬ್ದಕ್ಕೆ ಸಮಾನವಾದ ಆತ್ಮಶಬ್ದವನ್ನು ವಿಷ್ಣುವಿನಲ್ಲೇ ಮುಖ್ಯವಾಗಿ ಸಮರ್ಥಿಸಿ ಶ್ರೀಮದಾಚಾರ್ಯರು ಪ್ರಯೋಗಿಸಿದ್ದಾರೆ. ಈ ಎಲ್ಲಾ ಅಭಿಪ್ರಾಯದಿಂದ ಮತ್ತೊಂದು ಪಕ್ಷವನ್ನು 'ಅಥವಾ' ಇತ್ಯಾದಿ ವಾಕ್ಯದಿಂದ ಗ್ರಂಥಕಾರರು ಹೇಳುತ್ತಿದ್ದಾರೆ.

**प्रकाशः** – ''स्वयमेव भवतीति स्वभूः'' इति भ्रमनिरासाय विष्णोस्सकाशात् सम्भूत इत्युक्तम् । उक्तं च छान्दोग्यभाष्ये ''स्वयम्भूरिति विष्णुजत्वाद्विरिञ्च उच्यते । नहि विरिञ्चादेव विरिञ्चो जातः । यो ब्रह्माणं विदधातीति श्रुतेः । आत्मा भगवान् । ततो भूतत्वादात्मभूः'' इत्यादि । आदिपदेन ''स्वातन्त्र्यात्स्व इति प्रोक्तः'' इत्यादिवचनं गृह्यते ।

'ಸ್ವಯಮೇವ ಭವತೀತಿ ಸ್ವಭೂಃ' ತಾನೇ ಹುಟ್ಟುತ್ತಾನಾದ್ದರಿಂದ 'ಸ್ವಭೂಃ' ಎಂಬ ಪದದಿಂದ ಪ್ರತಿಪಾದ್ಯನಾಗಿದ್ದಾನೆ ಎಂಬ ಭ್ರಮೆಯನ್ನು ನಿರಾಕರಿಸುವುದಕ್ಕಾಗಿ ಗ್ರಂಥದಲ್ಲಿ 'ವಿಷ್ಣೋಃ ಸಕಾಶಾತ್ ಸಂಭೂತಃ' ಎಂದು ಹೇಳಿದ್ದಾರೆ. ಛಾಂದೋಗ್ಯಭಾಷ್ಯದಲ್ಲಿ ಹೇಳಿದ್ದನ್ನು ಇಲ್ಲಿ ಸ್ಮರಿಸಿಕೊಳ್ಳಬೇಕು - 'ಸ್ವಯಂಭೂರಿತಿ ವಿಷ್ಣುಜತ್ವಾದ್ವಿರಿಂಚ ಉಚ್ಯತೇ । ನಹಿ ವಿರಿಂಚಾದೇವ ವಿರಿಂಚೋ ಜಾತಃ । ಯೋ ಬ್ರಹ್ಮಾಣಂ ವಿದಧಾತೀತಿ ಶ್ರುತೇಃ । ಆತ್ಮಾ ಭಗವಾನ್ । ತತೋ ಭೂತತ್ವದಾತ್ಮಭೂಃ' ಎಂದರೆ 'ಸ್ವಯಂ ಭೂಃ' ಎಂಬ ಪದದಿಂದ ವಿಷ್ಣುವಿನಿಂದ ಹುಟ್ಟಿರುವ ಕಾರಣ ವಿರಿಂಚನೇ ಪ್ರತಿಪಾದ್ಯನಾಗಿದ್ದಾನೆ. ವಿರಿಂಚನು ತನ್ನಿಂದಲೇ ಹುಟ್ಟಲು ಸಾಧ್ಯವಿಲ್ಲ. 'ಯೋ ಬ್ರಹ್ಮಾಣಂ ವಿದಧಾತಿ' ಎಂಬ ಶ್ರುತಿಯ ವಿರೋಧ ಬರುತ್ತದೆ. ಅದರಂತೆ 'ಆತ್ಮಾ' ಎಂಬ ಪದಕ್ಕೆ ಭಗವಂತನೆಂದರ್ಥ. ಅವನಿಂದ ಹುಟ್ಟುವ ಕಾರಣ ಚತುರ್ಮುಖನು 'ಆತ್ಮಭೂಃ' ಎಂಬ ಪದದಿಂದಲೂ ಪ್ರತಿಪಾದ್ಯನಾಗುತ್ತಾನೆ ಎಂದು.

ಗ್ರಂಥದಲ್ಲಿ 'ಪ್ರಯೋಗಾದಿವಶಾತ್' ಎಂಬಲ್ಲಿರುವ ಆದಿಪದದಿಂದ 'ಸ್ವಾತಂತ್ರ್ಯಾತ್ ಸ್ವ ಇತಿ ಪ್ರೋಕ್ತಃ' ವಿಷ್ಣು ಸ್ವತಂತ್ರನಾದ್ದರಿಂದ ಸ್ವನೆನಿಸಿದ್ದಾನೆ. ಇತ್ಯಾದಿ ಮಾತುಗಳನ್ನು ಸ್ಮರಿಸಿಕೊಳ್ಳಬೇಕು.



ಸೂತ್ರದಲ್ಲಿ 'ಸ್ವಶಬ್ದಾತ್' ಎಂದು ಹೇಳಿದ್ದಾರೆ. ವಿಷ್ಣುವಿನಲ್ಲಿ ಅಸಾಧಾರಣವಾಗಿ ಪ್ರಯೋಗಿಸಲ್ಪಟ್ಟ ಆತ್ಮಶಬ್ದವು ಪ್ರಕರಣದಲ್ಲಿ ಕೇಳಿಸುತ್ತಿರುವುದರಿಂದ ಎಂದು ಇದರ ಅರ್ಥ. ಈ ಅರ್ಥವನ್ನು ವಿವಕ್ಷಿಸುವುದಾದರೆ ಸಹಜವಾಗಿ ಶಂಕೆಯು ಉದ್ಭವಿಸುತ್ತದೆ. ಸೂತ್ರಕಾರರು 'ಆತ್ಮಶಬ್ದಾತ್' ಎಂದೇ ಹೇಳಬಹುದಿತ್ತಲ್ಲವೇ? ನೇರವಾಗಿ ಇದರಿಂದ ಹೇತುವನ್ನು ತಿಳಿಸಿದಂತಾಗುತ್ತಿತ್ತು. 'ಸ್ವಶಬ್ದಾತ್' ಎಂದು ಹೇಳಿದರೆ ವಿಷ್ಣುವಿಗೆ ಸಂಬಂಧಪಟ್ಟ ಶಬ್ದ ಯಾವುದೆಂದು ಮೊದಲು ವಿಮರ್ಶಿಸಿ ಅನಂತರ ಅದು ಆತ್ಮಶಬ್ದವಾಗಿದೆಯೆಂಬುದನ್ನು ಅನ್ಯಥ್ಯಾನುಪಪತ್ತಿ ಪ್ರಮಾಣದಿಂದ ತಿಳಿಯಬೇಕಾಗುತ್ತದೆ. ಇದು ವಕ್ರ ಮಾರ್ಗ. ಸೂತ್ರಕಾರರು ನೇರ ಮಾರ್ಗವನ್ನೇಕೆ ಬಿಟ್ಟರು? ವಕ್ರಮಾರ್ಗವನ್ನೇಕೆ ಹಿಡಿದರು? ಎಂದು.

ಇದು ಮಂದಮತಿಗಳಿಗೆ ಬರುವ ಪ್ರಶ್ನೆಯಷ್ಟೇ ಹೊರತು, ಇದರಲ್ಲಿ ಹುರುಳಿಲ್ಲ. 'ಸ್ವಶಬ್ದಾತ್' ಎಂಬ ಶಬ್ದ ಪ್ರಯೋಗದ ಹಿಂದೆ ಬಹಳ ಅರ್ಥವನ್ನು ತುಂಬಿದ್ದಾರೆ ಸೂತ್ರಕಾರರು. 'ಆತ್ಮಾ' ಎಂಬ ಶಬ್ದವು ವಿಷ್ಣುವಿನಲ್ಲಿ ಅಸಾಧಾರಣವಾಗಿದೆ ಮತ್ತು ಈ ಶಬ್ದವಿಶೇಷವನ್ನೇ ಸ್ವೀಕರಿಸಬೇಕು ಎಂಬೆರಡು ವಿಚಾರಗಳನ್ನು ತಿಳಿಸುವುದಕ್ಕಾಗಿ 'ಸ್ವಶಬ್ದಾತ್' ಎಂದು ಹೇಳಿರುವರು. ಒಂದು ವೇಳೆ ಆತ್ಮಶಬ್ದವನ್ನೇ ಬಾಯಿಬಿಟ್ಟು ಹೇಳಿದ್ದರೆ, ಅದು ವಿಷ್ಣುವಿನಲ್ಲಿ ಅಸಾಧಾರಣವಾಗಿದೆಯೆಂದು ತಿಳಿಯುತ್ತಿರಲಿಲ್ಲ. ಇದು ಶಬ್ದವಿಶೇಷವೆಂದೂ ಸಹ ತಿಳಿಯುತ್ತಿರಲಿಲ್ಲ. 'ಸ್ವ ಇತಿ ಶಬ್ದಃ = ಸ್ವಶಬ್ದಃ' ಎಂಬ ಕರ್ಮಧಾರಯವನ್ನು ಆಶ್ರಯಿಸಿದಾಗ ಶಬ್ದವಿಶೇಷವನ್ನೇ ಸ್ವೀಕರಿಸಬೇಕೆಂಬ ಪ್ರಯೋಜನವು ಲಾಭವಾಗುತ್ತದೆ. 'ಸ್ವಸ್ಯ ಶಬ್ದಃ' 'ಸ್ವಶಬ್ದಃ' ಎಂಬ ಷಷ್ಠೀತತ್ಪುರುಷವನ್ನು ಆಶ್ರಯಿಸಿದಾಗ ವಿಷ್ಣುವಿನ ಅಸಾಧಾರಣ ಶಬ್ದವಾಗಿದೆಯೆಂದು ತಿಳಿಯುತ್ತದೆ. 'ಆತ್ಮಶಬ್ದಾತ್' ಎಂಬ ಪದಪ್ರಯೋಗದಿಂದ ಈ ಎರಡು ಸಮಾಸಗಳೂ ತಿಳಿಯಲು ಸಾಧ್ಯವಿರಲಿಲ್ಲ. ಈ ಎರಡು ಸಮಾಸಗಳಿಂದ ತಿಳಿಯುವ ಪ್ರಮೇಯವೂ ಸಹ ಸಿದ್ಧವಾಗುತ್ತಿರಲಿಲ್ಲ.

ಅಥವಾ ಸ್ವಶಬ್ದಃವನ್ನು ದೃಷ್ಟಾಂತವನ್ನು ತಿಳಿಯಬಹುದು. ಲೋಕದಲ್ಲಿ ೧. ತಾನು, ೨. ದುಡ್ಡು, ೩. ಬಂಧು ಮೊದಲಾದ ಅರ್ಥಗಳಲ್ಲಿ ಸ್ವ ಎಂಬ ಶಬ್ದವನ್ನು ಪ್ರಯೋಗಿಸುವುದು ಕಂಡಿದೆ. ಆದರೂ ಸಹ ಚತುರ್ಮುಖನನ್ನು 'ಸ್ವಭೂಃ' ಎಂದು ಕರೆಯಲಾಗುತ್ತದೆ. ಏಕೆಂದರೆ 'ಸ್ವ' ಎನಿಸಿದ ಭಗವಂತನಿಂದ ಹುಟ್ಟಿದ್ದವನಾದ್ದರಿಂದ. ಇದರಿಂದ 'ಸ್ವ' ಶಬ್ದವು ಶ್ರೀಹರಿಯಲ್ಲೇ ಮುಖ್ಯವಾಗಿದೆಯೆಂದು ತಿಳಿಯುತ್ತದೆ. ಅದರಂತೆ ಆತ್ಮಶಬ್ದವನ್ನೂ ಲೋಕದಲ್ಲಿ ಬೇರೆಡೆ ಪ್ರಯೋಗಿಸಬಹುದು. ಆದರೆ ಚತುರ್ಮುಖನನ್ನೇ 'ಆತ್ಮಭೂಃ' ಎಂದೂ ಸಹ ಕರೆಯುತ್ತಾರೆ. ಹಾಗಾದರೆ ಆತ್ಮಶಬ್ದಕ್ಕೆ ಮುಖ್ಯಪ್ರತಿಪಾದ್ಯನು ವಿಷ್ಣುವೇ ಆಗಿದ್ದಾನೆಂದು ಅರ್ಥೈಸಬೇಕು. ಹೀಗೆ ಸ್ವಶಬ್ದವು ಹೇಗೆ ವಿಷ್ಣುವನ್ನೇ ಮುಖ್ಯವಾಗಿ ಪ್ರತಿಪಾದಿಸುತ್ತದೋ? ಅದರಂತೆ ಆತ್ಮಶಬ್ದವೂ ಸಹ ವಿಷ್ಣುವನ್ನೇ ಮುಖ್ಯವಾಗಿ ಪ್ರತಿಪಾದಿಸುತ್ತದೆಂಬ ಇತ್ಯಾದಿ ವಿಚಾರಗಳನ್ನು ಸೂತ್ರಕಾರರು ಇಲ್ಲಿ ಸೆರೆಹಿಡಿದಿದ್ದಾರೆ.



● ● ● ● ●

## ದ್ಯುಭ್ವಾದ್ಯಧಿಕರಣ (೧-೩-೧)

## ಮುಕ್ತೋಪಸೃಪ್ಯತ್ವವೆಂಬ ಎರಡನೆಯ ಸೂತ್ರದ ಸ್ಥಾನಮಾನ

**तात्पर्यचन्द्रिका**

**द्वितीये विषयवाक्यात्किञ्चिद्व्यवहितलिङ्गरूपसाधकोक्तिः ।**

ಅನುವಾದ - 'ಮುಕ್ತೋಪಸೃಪ್ಯ ವ್ಯಪದೇಶಾತ್' ಎಂಬ ಎರಡನೆಯ ಸೂತ್ರವು ವಿಷಯವಾಕ್ಯಕ್ಕಿಂತ ಸ್ವಲ್ಪವೇ ವ್ಯವಹಿತವಾದ ಲಿಂಗವೆಂಬ ಸಾಧಕ ಪ್ರಮಾಣವನ್ನು ಹೇಳುತ್ತಿದೆ. ವಿಷಯವಾಕ್ಯಕ್ಕೆ ಹತ್ತಿರವಿರುವ ಮುಕ್ತೋಪಸೃಪ್ಯತ್ವವೆಂಬ ಲಿಂಗವನ್ನು ಹೇಳುತ್ತಿರುವ ಪ್ರಯುಕ್ತ ಮೊದಲನೆಯ ಸೂತ್ರದ ಅನಂತರ ಈ ಸೂತ್ರವು ಹೊರಟಿದ್ದು ಅರ್ಥಪೂರ್ಣವಾಗಿದೆ.

**अत्र च टीकोक्तरीत्या जायमानत्वलिङ्गेनात्मश्रुतेर्गौणत्वमस्त्विति शङ्कानिरासात्ततः प्राक् स्वातन्त्र्येण हेत्वन्तरपरत्वाभावाच्चशब्दाभावः ।**

ದ್ಯುಭ್ವಾದ್ಯಾಯತನನಾಗಿರುವವನು ವಿಷ್ಣುವೇ ಆಗಿದ್ದಾನೆನ್ನಲು ಪ್ರಥಮಸೂತ್ರದಲ್ಲಿ ಆತ್ಮಶಬ್ದವನ್ನು ಆಧಾರವನ್ನಾಗಿ ಹೇಳಿದರು. ಅದೇ ವಿಷಯದಲ್ಲಿ ಮುಕ್ತೋಪಸೃಪ್ಯತ್ವವೆಂಬ ಲಿಂಗವನ್ನು ಈ ಸೂತ್ರವು ಹೇಳುತ್ತಿರುವ ಕಾರಣ ಸೂತ್ರದಲ್ಲಿ 'ಚ' ಶಬ್ದವನ್ನು ಹೇಳಬೇಕಿತ್ತಲ್ಲವೇ? ಎಂದು ಪ್ರಶ್ನಿಸಬಾರದು. ಏಕೆಂದರೆ ಟೀಕೆಯಲ್ಲಿ ಹೇಳಿದ ಪ್ರಕಾರ ಪ್ರಥಮಸೂತ್ರದಲ್ಲಿ ಆತ್ಮಶ್ರುತಿಯನ್ನು ಆಧಾರವನ್ನಾಗಿ ಹೇಳಿದಮೇಲೆ ಜಾಯಮಾನತ್ವವೆಂಬ ನಿರವಕಾಶಲಿಂಗದಿಂದ ಜೀವನಲ್ಲಿ ಆತ್ಮಶಬ್ದವನ್ನು ಆಕ್ಷೇಪಿಸಲಾಗಿದೆ. ಆ ಆಕ್ಷೇಪವನ್ನು ನಿರಾಕರಿಸುವುದಕ್ಕೋಸ್ಕರ ಈ ಸೂತ್ರವು ಹೊರಡುತ್ತಿದೆ. ಅಂದರೆ ಪ್ರಥಮಸೂತ್ರದ ಮೇಲೆ ಬರುವ ಆಕ್ಷೇಪದ ನಿರಾಕರಣೆಗಾಗಿ ಈ ಸೂತ್ರ ಹೊರಟಿರುವುದರಿಂದ ಚ ಶಬ್ದದ ಆವಶ್ಯಕತೆ ಇರುವುದಿಲ್ಲ. ಜಾಯಮಾನತ್ವವೆಂಬ ಲಿಂಗದಿಂದ ಬರುವ ಆಕ್ಷೇಪಕ್ಕಿಂತ ಮೊದಲು ಈ ಸೂತ್ರ ಸ್ವತಂತ್ರವಾಗಿ ಹೊರಡಲು ಸಾಧ್ಯವಿಲ್ಲ.

**इहोपसृप्यत्वं श्रौतसेतुशब्दात् 'प्राप्यान्तररहितत्वे सति प्राप्यत्वम्' । न त्वर्चिरादिवत्प्राप्यत्वमात्रम् ।**

ಸೂತ್ರದಲ್ಲಿರುವ 'ಉಪಸೃಪ್ಯತ್ವ' ಎಂಬ ಹೇತುವಿಗೆ ಶ್ರುತಿಯಲ್ಲಿರುವ ಸೇತು ಶಬ್ದದಿಂದ 'ಪ್ರಾಪ್ಯಾಂತರರಹಿತತ್ವೇ ಸತಿ ಪ್ರಾಪ್ಯತ್ವಮ್' ಎಂಬರ್ಥವನ್ನು ಹೇಳಿದಂತಾಗುತ್ತದೆ. ಹೀಗೆ ಹೇಳದಿದ್ದರೆ ಮುಕ್ತಿಯನ್ನು ಕುರಿತು ಹೊರಡುವ ವ್ಯಕ್ತಿಯು ಅರ್ಚಿರ್ಲೋಕ, ಅಹರ್ಲೋಕ ಇವುಗಳ ಮಾರ್ಗದಲ್ಲಿ ಹೋಗುವುದರಿಂದ ಆಯಾ ಲೋಕಗಳ ಅಭಿಮಾನಿ ದೇವತೆಗಳಲ್ಲಿಯೂ ಮುಕ್ತಪ್ರಾಪ್ಯತ್ವವು ಬರಬೇಕಾಗುತ್ತದೆ. ಆದ್ದರಿಂದ ಶ್ರುತಿಯಲ್ಲಿರುವ ಸೇತು ಶಬ್ದದಿಂದ ಮತ್ತೊಬ್ಬರು ಪ್ರಾಪ್ಯರಿರಬಾರದು

ಮತ್ತು ಪ್ರಾಪ್ಯನಾಗಿರಬೇಕೆಂಬ ಅರ್ಥವನ್ನು ವಿವಕ್ಷಿಸಬೇಕು. ಈಗ ವಿಷ್ಣುವನ್ನು ಹೊಂದಿದ ಮೇಲೆ ಬೇರೆ ಯಾರನ್ನೂ ಸಹ ಹೊಂದದ ಕಾರಣ ಮುಕ್ತಪ್ರಾಪ್ಯತ್ವವು ವಿಷ್ಣುವಿನಲ್ಲಿ ಮಾತ್ರ ಬರುತ್ತದೆ.

**अत एव भाष्ये ''अमृतस्यैष सेतुः'' इति वाक्यमेवोदाहृतम् । नतु ''परात्परं पुरुषमुपैति'' इति वाक्यमिति न कश्चिद्दोषः ।**

ಆದ್ದರಿಂದಲೇ ಶ್ರೀಮದಾಚಾರ್ಯರು ಭಾಷ್ಯದಲ್ಲಿ 'ಅಮೃತಸ್ಯೈಷ ಸೇತುಃ' ಎಂಬ ಸೇತುಪದ ಘಟಿತವಾಗಿರುವಂತಹ ವಿಷಯವಾಕ್ಯವನ್ನೇ ಉದಾಹರಿಸಿದ್ದಾರೆ ಹೊರತು, 'ಪರಾತ್ಪರಂ ಪುರುಷಮುಪೈತಿ' ಎಂಬ ವಾಕ್ಯವನ್ನು ಉದಾಹರಿಸಿಲ್ಲ. ಏಕೆಂದರೆ ಸೇತು ಪದವು ಯಾವ ಅರ್ಥವನ್ನು ಹೇಳುತ್ತಿದೆಯೋ? ಆ ಅರ್ಥವನ್ನು ಇಲ್ಲಿರುವ 'ಉಪೈತಿ' ಎಂಬ ಪದವು ಹೇಳುತ್ತಿಲ್ಲ. ಆದ್ದರಿಂದ ಮುಕ್ತೋಪಸೃಪ್ಯತ್ವವೆಂಬ ಲಿಂಗಕ್ಕೆ ವ್ಯಭಿಚಾರಾದಿ ದೋಷಗಳು ಬರುವುದಿಲ್ಲ.

**प्रकाशः –**

**द्वितीय इति ।। ''मुक्तोपसृप्यव्यपदेशात्'' इत्यत्र ''अमृतस्यैष सेतुः'' इत्यमृतशब्दितमुक्तवर्गाश्रयत्वरूपलिङ्गोक्तिरित्यर्थः ।**

ವಿವರಣೆ - 'ದ್ವಿತೀಯೇ' ಎಂಬ ಪ್ರತೀಕದ ಅಭಿಪ್ರಾಯ ಹೀಗೆ - 'ಮುಕ್ತೋಪಸೃಪ್ಯವ್ಯಪದೇಶಾತ್' ಎಂಬುದು ಎರಡನೆಯ ಸೂತ್ರ. ಈ ಸೂತ್ರದಲ್ಲಿ 'ಅಮೃತಸ್ಯೈಷ ಸೇತುಃ' ಎಂಬ ಶ್ರುತಿಯಲ್ಲಿ ಅಮೃತಶಬ್ದದಿಂದ ವಾಚ್ಯರಾದ ಮುಕ್ತರಿಗೆ ಆಶ್ರವಾಗಿರುವಿಕೆಯೆಂಬ ಲಿಂಗವನ್ನು ಹೇಳಲಾಗಿದೆ. ಇದು ವಿಷಯವಾಕ್ಯಕ್ಕಿಂತ ಸ್ವಲ್ಪ ಹತ್ತಿರದಲ್ಲಿರುವ ಪ್ರಯುಕ್ತ ಎರಡನೆಯ ಸ್ಥಾನವನ್ನು ಈ ಸೂತ್ರವು ಹೊಂದಿದೆ.

**प्रकाशः – मुक्तोपसृप्येति भावप्रधानः । ''द्व्येकयोर्द्विवचनैकवचने'' इत्यत्र पाणिनीये 'द्व्येकयोः' इत्यत्रेव ।**

ಸೂತ್ರದಲ್ಲಿ ಮುಕ್ತೋಪಸೃಪ್ಯ ಎಂಬ ಪದವು ಭಾವಪ್ರಧಾನದಿಂದ ನಿರ್ದೇಶಿಸಲ್ಪಟ್ಟಿದೆ. ಆದ್ದರಿಂದ 'ಮುಕ್ತೋಪಸೃಪ್ಯತ್ವ ವ್ಯಪದೇಶಾತ್' = ಮುಕ್ತೋಪಸೃಪ್ಯತ್ವವೆಂಬ ಲಿಂಗವನ್ನು ಹೇಳಿರುವುದರಿಂದ ಎಂಬರ್ಥವನ್ನು ವಿವಕ್ಷಿಸಬೇಕು. ಉದಾಹರಣೆ - 'ದ್ವ್ಯೇಕಯೋರ್ದ್ವಿವಚನೈಕವಚನೇ' ಎಂಬ ಪಾಣಿನೀಯ ಸೂತ್ರದಲ್ಲಿ 'ದ್ವಿ' ಹಾಗೂ 'ಏಕ' ಶಬ್ದಗಳಿಂದ ಧರ್ಮಿಯನ್ನು ವಿವಕ್ಷಿಸಬಾರದು. ಹಾಗೇನಾದರು ವಿವಕ್ಷಿಸಿದರೆ 'ದ್ವಿ' ಎಂಬ ಪದವು ಎರಡು ಧರ್ಮಿಯನ್ನು ಹೇಳುತ್ತದೆ. ಮತ್ತು 'ಏಕ' ಶಬ್ದವು ಒಂದು ಧರ್ಮಿಯನ್ನು ಹೇಳುತ್ತದೆ ಎಂದಾದಾಗ ಬಹುತ್ವವು ಬಂದಂತಾಯಿತು. ಆವಾಗ 'ದ್ವ್ಯೇಕೇಷಾಂ' ಎಂಬುದಾಗಿ ಬಹುವಚನವನ್ನು ಪಾಣಿನಿಯು ಪ್ರಯೋಗಿಸಬೇಕಿತ್ತು. ಆದರೆ 'ದ್ವ್ಯೇಕಯೋಃ' ಎಂಬ ದ್ವಿವಚನವನ್ನು ಪ್ರಯೋಗಿಸಿದ್ದರಿಂದ ಭಾವಪ್ರಧಾನದಿಂದ ನಿರ್ದೇಶಿಸಲ್ಪಟ್ಟಿದೆಯೆಂದು ತಿಳಿಯುತ್ತದೆ. ಅಂದರೆ ದ್ವಿತ್ವ ಹಾಗೂ ಏಕತ್ವಗಳು ವಿವಕ್ಷಿತವಾದಾಗ ದ್ವಿವಚನ ಹಾಗೂ ಏಕವಚನಸಂಜ್ಞೆಗಳು ಬರುತ್ತವೆಂದು ಅಭಿಪ್ರಾಯ

ಪಟ್ಟಿರುತ್ತಾನೆ. ಧರ್ಮಿಗಳು ಅನೇಕವಾಗಿದ್ದರೂ ದ್ವಿತ್ವ ಹಾಗೂ ಏಕತ್ವವೆಂಬ ಎರಡೇ ಧರ್ಮಗಳಿರುವ ಪ್ರಯುಕ್ತ ದ್ವಿವಚನ ಪ್ರಯೋಗವು ಸಾಧುವಾಗುತ್ತದೆ. ಅದರಂತೆ ಪ್ರಕೃತ ಸೂತ್ರದಲ್ಲಿಯೂ ಮುಕ್ತೋಪಸೃಪ್ಯ ಎಂಬ ಪದವನ್ನು ಭಾವಪ್ರಧಾನ ನಿರ್ದೇಶ ಮಾಡಬೇಕು.

**प्रकाशः – लिङ्गोक्तिपरत्वे स्वशब्दादिति हेतुसमुच्चायकचशब्दस्स्यादित्यत आह – अत्र चेति ।। ततः प्राक् गौणत्वशङ्कानिरासात्प्राक् ।**

ಈ ಸೂತ್ರವು ಮುಕ್ತೋಪಸೃಪ್ಯತ್ವವೆಂಬ ಲಿಂಗವನ್ನು ಪ್ರಸ್ತಾಪ ಮಾಡುತ್ತಿದೆಯೆಂದು ಹೇಳಿದಿರಿ. ಹಾಗಾದರೆ ಪ್ರಥಮ ಸೂತ್ರವು ವಿಷ್ಣುವೇ ದ್ಯುಭ್ವಾದ್ಯಾಯತನನಾಗಿದ್ದಾನೆನ್ನಲು ಆತ್ಮಶಬ್ದವೆಂಬ ಹೇತುವನ್ನು ಹೇಳಿದೆ. ಈ ಸೂತ್ರವು ಅದೇ ವಿಷಯದಲ್ಲಿ ಲಿಂಗವನ್ನು ಹೇಳುತ್ತಿದೆಯೆಂದು ಅಭಿಪ್ರಾಯಪಡುವುದಾದರೆ ಹೇತುಸಮುಚ್ಚಾಯಕವಾದ ಚ ಶಬ್ದವನ್ನು ಸೂತ್ರಕಾರರು ಬಳಸಬೇಕಿತ್ತು. 'ಮುಕ್ತೋಪಸೃಪ್ಯವ್ಯಪದೇಶಾತ್' ಎನ್ನುವ ಬದಲು ಮುಕ್ತೋಪಸೃಪ್ಯವ್ಯಪದೇಶಾಚ್ಚ' ಎಂದು ಹೇಳಬೇಕಿತ್ತಲ್ಲವೇ? ಎಂಬ ಪ್ರಶ್ನೆಗೆ 'ಅತ್ರಚ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. 'ತತಃ ಪ್ರಾಕ್' ಎಂದರೆ ಗೌಣತ್ವ ಶಂಕೆಯನ್ನು ನಿರಾಕರಿಸುವ ಮೊದಲು ಎಂದರ್ಥ.

**प्रकाशः – नन्वयं योगश्शक्योऽवक्तुम् । ''तन्निष्ठस्य मोक्षोपदेशात् । हेयत्वावचनाच्च'' इत्यत्रैव ''तमेवैकं जानथाऽत्मानम्'' इत्युक्तात्मशब्दस्य विष्णौ मुख्यतायास्तात्पर्यस्य च सिद्धेः । तथैव तत्र टीकादौ भानात् ।**

ಆಕ್ಷೇಪ - 'ಮುಕ್ತೋಪಸೃಪ್ಯವ್ಯಪದೇಶಾತ್' ಎಂಬ ಸೂತ್ರವನ್ನು ರಚನೆ ಮಾಡುವ ಅವಶ್ಯಕತೆಯೇ ಇಲ್ಲ. ಈ ಸೂತ್ರವು ಮುಕ್ತೋಪಸೃಪ್ಯತ್ವವೆಂಬ ಲಿಂಗದಿಂದ ಆತ್ಮಶಬ್ದವನ್ನು ವಿಷ್ಣುವಿನಲ್ಲಿ ಸಮರ್ಥನೆ ಮಾಡುತ್ತಿದೆಯೆಂದು ಹೇಳಿದಿರಿ. ಆದರೆ ಆನಂದಮಯಾಧಿಕರಣದಲ್ಲಿರುವ 'ತನ್ನಿಷ್ಠಸ್ಯ ಮೋಕ್ಷೋಪದೇಶಾತ್' ಎಂಬ ಸೂತ್ರದಲ್ಲಿ, ಮತ್ತು 'ಹೇಯತ್ವಾವಚನಾಚ್ಚ' ಎಂಬ ಸೂತ್ರದಲ್ಲಿಯೂ ಇದೇ ವಿಚಾರವು ಪ್ರಸಕ್ತವಾಗಿದೆ. 'ತಮೇವೈಕಂ ಜಾನಥಾಽತ್ಮಾನಮ್' ಎಂಬ ಶ್ರುತಿಯಲ್ಲಿರುವ ಆತ್ಮಶಬ್ದವು ಮುಖ್ಯವಾಗಿ ವಿಷ್ಣುವನ್ನೇ ಪ್ರತಿಪಾದಿಸುತ್ತದೆ. ಅವನಲ್ಲೇ ತಾತ್ಪರ್ಯವನ್ನು ಹೊಂದಿದೆಯೆಂದು ಅಲ್ಲಿ ಸಾಧಿಸಿದ್ದಾರೆ. ಆ ಸೂತ್ರಗಳ ಟೀಕೆಯಲ್ಲಿ ಹಾಗೆಯೇ ವ್ಯಾಖ್ಯಾನವೂ ಸಹ ಕಾಣಿಸುತ್ತದೆ.

**प्रकाशः – नच तत्र ''जानथाऽत्मानमन्या वाचो विमुञ्चथ'' इति हेयत्वावचना-हेयत्ववचनान्यहेयत्ववचनैरेव वैष्णवत्वमात्मशब्दस्योक्तम् । अत्र तु मुक्तोपसृप्यत्वलिङ्गेनेति वाच्यम् ।**

ಇನ್ನು ಆನಂದಮಯಾಧಿಕರಣದ ಸೂತ್ರಗಳಲ್ಲಿ 'ಜಾನಥಾಽತ್ಮಾನಮನ್ಯಾ ವಾಚೋ ವಿಮುಂಚಥ' ಎಂಬ ಶ್ರುತಿಯಲ್ಲಿ ಹೇಯತ್ವ ಅವಚನ, ಅಹೇಯತ್ವದ ವಚನ, ಅನ್ಯಹೇಯತ್ವ ವಚನಗಳಿಂದಲೇ ಆತ್ಮಶಬ್ದವು ವಿಷ್ಣು

ಪ್ರತಿಪಾದಕವಾಗಿದೆಯೆಂದು ಆನಂದಮಯಾಧಿಕರಣದ ಸೂತ್ರಗಳಲ್ಲಿ ಹೇಳಿದ್ದಾರೆ. ಆದರೆ ಇಲ್ಲಿ ಮುಕ್ತೋಪಸೃಪ್ಯತ್ವವೆಂಬ ಲಿಂಗದಿಂದ ಆತ್ಮಶಬ್ದವನ್ನು ವಿಷ್ಣುವಿನಲ್ಲಿ ಹೇಳುತ್ತಿದ್ದಾರೆ. ಹೀಗೆ ವ್ಯತ್ಯಾಸವಿದೆಯಲ್ಲವೇ? ಎಂದು ಪ್ರಶ್ನಿಸಬಾರದು.

**ಪ್ರಕಾಶಃ** – तत्रापि भाष्ये ''अमृतस्यैष सेतुः'' इत्यन्तस्योदाहरणात् । टीकायाम् ''आत्मशब्दो मोक्षदातृत्वाहेयत्वाभ्यां निर्गुणलिङ्गाभ्यामपह्रियते'' इत्युक्तेस्तन्निष्ठसूत्रविषयत्वसम्भवाच्च ।

ಆ ಸೂತ್ರಗಳ ಭಾಷ್ಯದಲ್ಲಿಯೂ 'ಅನ್ಯಾವಾಚೋ ವಿಮುಂಚಥ' ಎಂದಷ್ಟೇ ವಿಷಯವಾಕ್ಯವನ್ನು ಹೇಳದೆ ಮುಂದಿರುವ 'ಅಮೃತಸ್ಯೈಷ ಸೇತುಃ' ಎಂಬಲ್ಲಿಯ ತನಕ ವಿಷಯವಾಕ್ಯವನ್ನು ಉದಾಹರಿಸಿದ್ದಾರೆ. ಇದರಿಂದ ಮುಕ್ತೋಪಸೃಪ್ಯತ್ವವೆಂಬ ಲಿಂಗದ ಬಲದಿಂದಲೂ ಆತ್ಮಶಬ್ದವು ವಿಷ್ಣುಪರವಾಗಿರುತ್ತದೆಂದು ಭಾಷ್ಯಕಾರರು ಅಭಿಪ್ರಾಯ ಪಟ್ಟಿದ್ದಾರೆ. ಆದ್ದರಿಂದಲೇ ಟೀಕೆಯಲ್ಲಿ 'ಆತ್ಮಶಬ್ದೋ ಮೋಕ್ಷದಾತೃತ್ವಾಹೇಯತ್ವಾಭ್ಯಾಂ ನಿರ್ಗುಣಲಿಂಗಾಭ್ಯಾಮಪಹ್ರಿಯತೇ' ಆತ್ಮಶಬ್ದವು ಮೋಕ್ಷದಾತೃತ್ವ ಹಾಗೂ ಅಹೇಯತ್ವಗಳೆಂಬ ನಿರ್ಗುಣದ ಲಿಂಗಗಳಿಂದ ಬೇರೆ ಕಡೆ ಬರುವುದಿಲ್ಲವೆಂದು ಹೇಳಿರುತ್ತಾರೆ. ಹಾಗೂ 'ತನ್ನಿಷ್ಠಸ್ಯ ಮೋಕ್ಷೋಪದೇಶಾತ್' ಎಂಬ ಸೂತ್ರದಲ್ಲೂ ಸ್ಪಷ್ಟವಾಗಿ ಮುಕ್ತೋಪಸೃಪ್ಯತ್ವವನ್ನು ಹೇತುವನ್ನಾಗಿ ವಿವಕ್ಷಿಸಿದ್ದಾರೆ. ಹೀಗಿರುವಾಗ ಈ ಸೂತ್ರವು ವ್ಯರ್ಥವಲ್ಲವೇ?

**ಪ್ರಕಾಶಃ** – मैवम् । तत्रात्मशब्दस्य जीवे मुख्यत्वमाशङ्क्य तन्निष्ठस्य मोक्षोपदेशादिना तन्निरासः । अत्र तु विष्णौ मुख्योऽप्यात्मशब्दोऽत्र प्रकरणे जायमानत्वरूपनिरवकाशजीवलिङ्गादमुख्यार्थः किं न स्यादिति शङ्कायां मुक्तोपसृप्यत्वलिङ्गेन तदुद्धारः । हेयत्वावचनादेरप्युपलक्षणमेतत् ।

ಸಮಾಧಾನ - ಆನಂದಮಯಾಧಿಕರಣದಲ್ಲಿರುವ ಸೂತ್ರಗಳಿಗೂ ಇಲ್ಲಿಗೂ ವ್ಯತ್ಯಾಸವಿದೆ. ಆತ್ಮಶಬ್ದವು ಜೀವನನ್ನು ಮುಖ್ಯವಾಗಿ ಪ್ರತಿಪಾದಿಸಬಹುದಲ್ಲವೇ? ಎಂಬ ಆಶಂಕೆಗೆ 'ತನ್ನಿಷ್ಠಸ್ಯ ಮೋಕ್ಷೋಪದೇಶಾತ್' 'ಹೇಯತ್ವಾವಚನಾಚ್ಚ' ಎಂಬೆರಡು ಸೂತ್ರಗಳಿಂದ ಅದನ್ನು ನಿರಾಕರಿಸಿದ್ದಾರೆ. ಆದರೆ ಇಲ್ಲಿರುವ ಮುಕ್ತೋಪಸೃಪ್ಯತ್ವಾತ್ ಎಂಬ ಸೂತ್ರದಲ್ಲಿ ವಿಷ್ಣುವಿನಲ್ಲಿ ಆತ್ಮಶಬ್ದವು ಮುಖ್ಯವಾಗಿದ್ದರೂ ಸಹ ಪ್ರಕರಣದಲ್ಲಿ ಜಾಯಮಾನತ್ವವೆಂಬ ನಿರವಕಾಶವಾದ ಜೀವಲಿಂಗವು ಕೇಳಿಸುತ್ತಿದೆ. ಆದ್ದರಿಂದ ಅಮುಖ್ಯಾರ್ಥವನ್ನೇಕೆ ಸ್ವೀಕರಿಸಬಾರದು ಎಂಬ ಆಕ್ಷೇಪಕ್ಕೆ ಮುಕ್ತೋಪಸೃಪ್ಯತ್ವಲಿಂಗದಿಂದ ಉತ್ತರಿಸಿದ್ದಾರೆ. ಹೇಯತ್ವಾವಚನಾದಿಗಳನ್ನು ಇಲ್ಲಿಯೂ ಸಹ ಉಪಲಕ್ಷಣವಾಗಿ ಇಟ್ಟುಕೊಳ್ಳಬೇಕು. ಅಂದರೆ 'ತನ್ನಿಷ್ಠಸ್ಯ' ಎಂಬ ಸೂತ್ರದಲ್ಲಾಗಲೀ, ಈ ಸೂತ್ರದಲ್ಲಾಗಲೀ, ಉತ್ತರ ಒಂದೇ ಆಗಿದ್ದರೂ ಆಕ್ಷೇಪಗಳು ಭಿನ್ನಭಿನ್ನವಾದ್ದರಿಂದ ಪುನರುಕ್ತಿ ದೋಷ ಬರುವುದಿಲ್ಲವೆಂದು ತಿಳಿಯಬೇಕು.

ದ್ಯುಭ್ವಾದ್ಯಧಿಕರಣ (೧-೩-೧)

**प्रकाशः** – ननु चैवं यैर्लिङ्गैः पूर्वमात्मशब्दस्य वैष्णवत्वं साधितं तेषु जाग्रत्स्वेव निरवकाशजीवलिङ्गेनामुख्यवृत्त्याऽवैष्णवत्वे शङ्किते कथं तैरेव शङ्कानिरास इति चेत् ।

ಆಕ್ಷೇಪ - ಹಾಗಾದರೆ ಯಾವ ಲಿಂಗಗಳಿಂದ ಹಿಂದೆ ಆನಂದಮಯಾಧಿಕರಣದಲ್ಲಿ ಆತ್ಮಶಬ್ದವು ವಿಷ್ಣುಪರವಾಗಿದೆಯೆಂದು ಸಾಧಿಸಿದರೋ? ಆ ಲಿಂಗಗಳು ಈಗಲೂ ಸಹ ಎಚ್ಚರವಾಗಿರುವುದರಿಂದ ನಿರವಕಾಶವಾದ ಜೀವಲಿಂಗದಿಂದ ಅಮುಖ್ಯವೃತ್ತಿಯಿಂದ ಅನ್ಯಪರವಾಗಲಿ ಎಂದು ಹೇಗೆ ಆಕ್ಷೇಪಿಸುತ್ತೀರಿ? ಅಷ್ಟೇ ಅಲ್ಲದೇ ಆ ಸೂತ್ರಗಳಲ್ಲಿ ಹೇಳಲ್ಪಟ್ಟ ಹೇತುಗಳಿಂದಲೇ ಶಂಕೆಯನ್ನಾದರೂ ಹೇಗೆ ನಿರಾಕರಿಸುತ್ತೀರಿ?

**प्रकाशः** – सत्यम् तस्याग्रे ''अतच्छब्दात् । प्राणभृच्च'' इत्यत्र सावकाशयिष्यमाणत्वं मुक्तोपसृप्यत्वादेस्तु निरवकाशत्वमिति भावेन ''मुक्तोपसृप्यव्यपदेशात्'' इत्युक्तिरिति न कोऽपि दोषः ।

ಸಮಾಧಾನ - ಹೌದು, ಜಾಯಮಾನತ್ವವೆಂಬ ನಿರವಕಾಶಲಿಂಗವನ್ನು ಮುಂದೆ 'ಅತಚ್ಛಬ್ದಾತ್' 'ಪ್ರಾಣಭೃಚ್ಚ' ಎಂಬೆರಡು ಸೂತ್ರಗಳಿಂದ ಸಾವಕಾಶ ಮಾಡುತ್ತಾರೆ. ಮೊದಲು ಮುಕ್ತೋಪಸೃಪ್ಯತ್ವವೆಂಬ ಸಿದ್ಧಾಂತಲಿಂಗವನ್ನು ನಿರವಕಾಶವೆಂದು ಸಮರ್ಥಿಸುವ ಉದ್ದೇಶದಿಂದ 'ಮುಕ್ತೋಪಸೃಪ್ಯವ್ಯಪದೇಶಾತ್' ಎಂಬ ಹೇತುವನ್ನು ಹೇಳಿರುತ್ತಾರೆ. ಅಂದರೆ 'ತನ್ನಿಷ್ಠಸ್ಯ ಮೋಕ್ಷೋಪದೇಶಾತ್' ಎಂಬ ಸೂತ್ರದಲ್ಲಿ ಹೇಳಿರುವ ಹೇತುವನ್ನೇ ಪುನಃ ಉಜ್ಜೀವನ ಮಾಡಿ ಉತ್ತರಿಸುತ್ತಿದ್ದಾರೆ. ಪೂರ್ವಪಕ್ಷಕಾರನಿಂದ ಹೇಳಲ್ಪಟ್ಟ ಲಿಂಗಕ್ಕೆ ಮುಂದಿನ ಸೂತ್ರದಲ್ಲಿ ದೋಷವನ್ನು ಹೇಳುತ್ತಾರೆಂದು ತಿಳಿಯಬೇಕು. ಆದ್ದರಿಂದ ಪುನರುಕ್ತಿ ದೋಷಕ್ಕೆ ಅವಕಾಶವಿಲ್ಲ.

**प्रकाशः** – मुक्तप्राप्यत्वस्यार्चिरादिना गच्छतां तदा प्राप्यस्थाने व्यभिचारमाशङ्क्याह – इहेति ।।

ಪ್ರಶ್ನೆ - ಮುಕ್ತಪ್ರಾಪ್ಯತ್ವವನ್ನು ಪರಮಾತ್ಮನಿಗೆ ಹೇಳುತ್ತಿದ್ದೀರಿ. ಆದರೆ ಮೋಕ್ಷವನ್ನು ಕುರಿತು ಹೊರಡುವ ಜೀವನು ಅರ್ಚಿರ್ಲೋಕ, ಅಹರ್ಲೋಕ ಮೊದಲಾದ ಲೋಕಗಳನ್ನು ಹೊಂದಿ, ಅನಂತರ ಕೊನೆಯಲ್ಲಿ ಮೋಕ್ಷವನ್ನು ಪಡೆಯುತ್ತಾನೆ. ಅರ್ಚಿರ್ಲೋಕಗಳಿಗೆ ಹೋದಾಗ ಆಯಾ ದೇವತೆಗಳನ್ನೂ ಸಹ ಹೊಂದುವುದರಿಂದ ಮುಕ್ತರಿಂದ ಪ್ರಾಪ್ಯತ್ವವು ಆಯಾ ಅಭಿಮಾನಿದೇವತೆಗಳಲ್ಲಿಯೂ ಬರುತ್ತದೆ. ಹಾಗಾಗಿ ಮುಕ್ತಪ್ರಾಪ್ಯತ್ವವೆಂಬ ವಿಷ್ಣುವಿನ ಲಿಂಗಕ್ಕೆ ಇತರ ದೇವತೆಗಳಲ್ಲಿಯೂ ವ್ಯಭಿಚಾರ ಬರುತ್ತದಲ್ಲವೇ?

ಉತ್ತರ - ಈ ಪ್ರಶ್ನೆಗೆ 'ಇಹ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ.

**प्रकाशः** – सेतुत्वस्य प्राप्यान्तररहितत्वे सति प्राप्यत्वरूपत्वादित्यर्थः ।

ಪರಿಪೂರ್ಣಚಂದ್ರಿಕಾ

ಮೇಲಿನ ಪ್ರಶ್ನೆ ಬರಬಾರದೆಂದೇ ಶ್ರುತಿಯು ಸೇತು ಶಬ್ದವನ್ನು ಹೇಳಿದೆ. ಇದರಿಂದ 'ಪ್ರಾಪ್ಯಾಂತರರಹಿತತ್ವೇ ಸತಿ ಪ್ರಾಪ್ಯತ್ವ' ಎಂಬ ಅರ್ಥವನ್ನು ಹೇಳಿದಂತಾಗುತ್ತದೆ. ಅಂದರೆ ಯಾರನ್ನು ಹೊಂದಿದ ಮೇಲೆ ಮತ್ತೊಬ್ಬರನ್ನು ಹೊಂದುವುದಿಲ್ಲವೋ? ಮತ್ತು ಹೊಂದಲು ಯೋಗ್ಯನಾಗಿದ್ದಾನೋ? ಅಂತಹವನೇ ಮುಖ್ಯಪ್ರಾಪ್ಯನೆನಿಸುತ್ತಾನೆ. ಅರ್ಚಿರ್ಲೋಕಾದಿಗಳಿಗೆ ಹೋದಮೇಲೆ ಪುನಃ ಮತ್ತೊಬ್ಬ ದೇವತೆಯನ್ನು ಅಥವಾ ವಿಷ್ಣುವನ್ನು ಹೊಂದುವ ಪ್ರಯುಕ್ತ ಪ್ರಾಪ್ಯಾಂತರರಹಿತತ್ವವು ಇರುವುದಿಲ್ಲ.

**प्रकाशः** – तादृशं च ब्रह्मण्येव ''विश्वात्मानं परायणं, मुक्तानां परमागतिः, सा काष्ठा सा परागतिः'' इत्यादेरिति भावः

ಇಂತಹ 'ಪ್ರಾಪ್ಯಾಂತರರಹಿತತ್ವೇ ಸತಿ ಪ್ರಾಪ್ಯತ್ವ' ಎಂಬ ಹೇತುತ್ವವು ಬ್ರಹ್ಮನಲ್ಲಿ ಮಾತ್ರ ಬರುತ್ತದೆ. 'ವಿಶ್ವಾತ್ಮಾನಂ ಪರಾಯಣಮ್' ಎಂಬಲ್ಲಿ ಪರಾಯಣ ಶಬ್ದದಿಂದ ಇವನೇ ಅಂತಿಮವಾಗಿ ಆಶ್ರಯನಾದವನೆಂದು ಶ್ರುತಿ ಹೇಳಿದೆ. ಮತ್ತು 'ಮುಕ್ತಾನಾಂ ಪರಮಾಗತಿಃ' ಎಂಬಲ್ಲಿಯೂ 'ಪರಮಾಗತಿ' ಶಬ್ದದಿಂದ ಅವನೇ ಕೊನೆಯವನಾಗಿ ಪ್ರಾಪ್ಯನೆಂದೂ 'ಸಾ ಕಾಷ್ಠಾ ಸಾ ಪರಾ ಗತಿಃ' ಎಂಬಲ್ಲಿಯೂ ಸಹ ಇದೇ ವಿಷಯವನ್ನೂ ಹೇಳಲಾಗಿದೆ. ಆದ್ದರಿಂದ ಸೇತುತ್ವರೂಪವಾದ ಮುಖ್ಯಪ್ರಾಪ್ಯತ್ವವನ್ನೇ ಇಲ್ಲಿ ವಿವಕ್ಷಿಸಬೇಕು.

**प्रकाशः** – अत एवेति ॥ चरमप्राप्यत्वस्य सेतुपदेनेवोपैतिपदेनालाभादेवेत्यर्थः ॥

ಗ್ರಂಥದಲ್ಲಿರುವ 'ಅತ ಏವ' ಎಂಬ ಶಬ್ದಕ್ಕೆ ಹೀಗರ್ಥ - ಚರಮಪ್ರಾಪ್ಯತ್ವವು ಸೇತು ಪದದಿಂದ ತಿಳಿಯುತ್ತದೆ. ಆದ್ದರಿಂದಲೇ ಭಾಷ್ಯಕಾರರು 'ಅಮೃತಸ್ಯೈಷ ಸೇತುಃ' ಎಂಬ ಶ್ರುತಿಯನ್ನೇ ಉಲ್ಲೇಖಿಸಿದ್ದಾರೆ ಹೊರತು, 'ಪರಾತ್ಪರಂ ಪುರುಷಮುಪೈತಿ' ಎಂಬ ಶ್ರುತಿಯನ್ನು ಉಲ್ಲೇಖಿಸಿಲ್ಲ. ಏಕೆಂದರೆ ಸೇತು ಪದವು ಯಾವ ಅರ್ಥವನ್ನು ಹೇಳುತ್ತದೋ, ಆ ಅರ್ಥವನ್ನು 'ಉಪೈತಿ' ಎಂಬ ಪದವು ಹೇಳುತ್ತಿಲ್ಲ. ಆದ್ದರಿಂದ ಸಕಲ ಮುಕ್ತರಿಗೆ ಅಂತಿಮವಾಗಿ ಆಶ್ರಯನಾದವನು ಪರಮಾತ್ಮನೇ ಆಗಿರುವುದರಿಂದ ಮುಕ್ತೋಪಸೃಪ್ಯತ್ವಲಿಂಗಕ್ಕೆ ಯಾವುದೇ ದೋಷಗಳು ಬರಲು ಸಾಧ್ಯವಿಲ್ಲ. ಇದು ವಿಷ್ಣುವಿನ ಅಸಾಧಾರಣ ಲಿಂಗವಾಗಿದೆ. ಈ ಲಿಂಗದ ಬಲದಿಂದ ಆತ್ಮಶಬ್ದವು ವಿಷ್ಣುವನ್ನೇ ಪ್ರತಿಪಾದಿಸುತ್ತದೆ. ಅಂತಹ ಆತ್ಮಶಬ್ದದಿಂದ ದ್ಯುಭ್ವಾದ್ಯಾಯತನನಾಗಿರುವವನು ವಿಷ್ಣುವೇ ಆಗಿದ್ದಾನೆಂದು ನಿರ್ಣಯಿಸಬೇಕು.

**गुरुराजीयम्** – आत्मशब्दादित्युक्तौ त्विति ॥ शब्दगौरवेऽपि प्रतिपत्तिलाघवात् स्वशब्दादित्युक्तौ च लाघवेऽपि प्रतिपत्तिगौरवेण प्रतिपत्तिगौरवापेक्षया प्रतिपत्तिलाघवस्यैव ज्यायस्त्वादात्मशब्दादित्येव वक्तव्यमित्यर्थः । एवमुक्ते तूक्तिवक्रत्वावैयर्थ्यायेति ॥ 'आत्मशब्दात्' इति वक्तव्ये स्वशब्दादित्युक्तिवक्रत्वावैयर्थ्यायेत्यर्थः । ननु च 'तच्छब्दात्' इत्युक्तावपि

विषयवाक्य आत्मशब्दातिरिक्तशब्दान्तराभावेन विषयवाक्यस्यात्मशब्दरूपशब्द-विशेषलाभेन स्वशब्दादिति किमर्थमुक्तम् । अन्यथा 'आकाशस्तल्लिङ्गात्' इत्यपि न वक्तव्यं स्यात् । तथोक्तौ तु लिङ्गविशेषाप्रतीतेरित्यरुचेराह – अथवेति ।। ननु न मुक्तप्राप्यत्वं विष्णुत्वनिश्चायकम् । तस्यार्चिरादिसाधारणत्वादित्यत आह – श्रौतेति ।। 'अमृतस्यैष सेतुः' इति श्रुतिस्थसेतुशब्दादित्यर्थः । जायमानादिशब्दानामिति वक्ष्यमाणरीत्या भेदव्यपदेशस्य जीवविषयत्वात् 'प्राणभृच्च' इति योगविभागमात्रस्योत्तरार्थकरणेऽपि तत्सूत्रेऽप्यत्रत्यसाध्यहेत्वनुकर्षादत्रैव तत्सूत्रार्थोऽभिप्रेत इत्याशयेनात्र व्याख्यातमिति द्रष्टव्यम् ।।




'ಯಸ್ಮಿನ್‌ದ್ಯೌಃ ಪೃಥಿವೀ' ಎಂಬ ವಿಷಯವಾಕ್ಯದಿಂದ ಸ್ವಲ್ಪ ಹತ್ತಿರದಲ್ಲಿಯೇ ಮುಕ್ತಪ್ರಾಪ್ಯತ್ವವೆಂಬ ಲಿಂಗವು ಶ್ರುತಿಯಲ್ಲಿ ಕೇಳಿಸುತ್ತಿದೆ. ಮುಕ್ತರಿಂದ ಹೊಂದಲು ಯೋಗ್ಯನಾಗಿರುವವನು ಪರಮಾತ್ಮನೇ ಆಗಿದ್ದಾನೆ ಹೊರತು, ಬೇರಾರೂ ಅಲ್ಲ. ಆದ್ದರಿಂದಲೂ ದ್ಯುಭ್ವಾದ್ಯಾಯತನನಾಗಿರುವವನು ವಿಷ್ಣುವೇ ಆಗಿದ್ದಾನೆಂದು ತಿಳಿಯಬೇಕು.

ಹೀಗೆ ದ್ಯುಭ್ವಾದ್ಯಾಯತನತ್ವವನ್ನು ಸಮರ್ಥಿಸಲು ಮತ್ತೊಂದು ಕಾರಣವನ್ನು ಈ ಸೂತ್ರವು ಹೇಳುವುದಾದರೆ 'ಚ' ಶಬ್ದವನ್ನು ಸೂತ್ರದಲ್ಲಿ ಹೇಳಬೇಕಿತ್ತಲ್ಲವೇ? ಎಂಬ ಪ್ರಶ್ನೆ ಬರುತ್ತದೆ. ಸಮಾಧಾನ ಹೀಗೆ - ಪ್ರಥಮ ಸೂತ್ರದಲ್ಲಿ ಆತ್ಮ ಶಬ್ದವೆಂಬ ಕಾರಣವನ್ನು ಹೇಳಿದ ಮೇಲೆ ಜಾಯಮಾನತ್ವವೆಂಬ ಲಿಂಗದಿಂದ ಆತ್ಮಶಬ್ದವು ಗೌಣಾರ್ಥವನ್ನು ಹೇಳಬಹುದಲ್ಲವೇ? ಎಂಬ ಆಕ್ಷೇಪವು ಬರುತ್ತದೆ. ಅದನ್ನು ನಿರಾಕರಿಸುವುದಕ್ಕಾಗಿ ಈ ಸೂತ್ರ ಹೊರಟಿದೆ ಹೊರತು, ನೇರವಾಗಿ ದ್ಯುಭ್ವಾದ್ಯಾಯತನತ್ವಕ್ಕೆ ಕಾರಣತ್ವವನ್ನು ಸಮರ್ಥಿಸಲು ಹೊರಟಿಲ್ಲ. ಜೀವವಿಷಯದಲ್ಲಿ ಬರುತ್ತಿರುವ ಆಕ್ಷೇಪವನ್ನು ಮಾಡದಿದ್ದರೆ ಈ ಸೂತ್ರಕ್ಕೆ ಪ್ರಸಕ್ತಿಯೇ ಇರುವುದಿಲ್ಲ. ಆದ್ದರಿಂದ ಸ್ವತಂತ್ರವಾಗಿ ಹೇತುವನ್ನು ಹೇಳದ ಕಾರಣ 'ಚ' ಶಬ್ದದ ಅನಿವಾರ್ಯತೆ ಇಲ್ಲ.

'ಮುಕ್ತೋಪಸೃಪ್ಯತ್ವ' ಎಂದರೆ ಮುಕ್ತರಿಂದ ಹೊಂದಲು ಯೋಗ್ಯನಾಗಿರಬೇಕು. ಇವನನ್ನು ಹೊಂದಿದ ಮೇಲೆ ಮತ್ತೊಬ್ಬರನ್ನು ಮುಕ್ತನು ಹೊಂದಬಾರದು ಎಂಬರ್ಥವನ್ನು ವಿವಕ್ಷಿಸಬೇಕು. ಏಕೆಂದರೆ ಮೋಕ್ಷಕ್ಕೆ ಹೋಗಬೇಕಾದರೆ ಅರ್ಚಿರ್ಲೋಕ, ಅಹರ್ಲೋಕ ಇವುಗಳ ಮೂಲಕ ಹೋಗುತ್ತಾನೆ. ಅಲ್ಲಿರುವ ದೇವತೆಗಳೂ ಸಹ ಮೊದಲು ಪ್ರಾಪ್ಯರೇ ಆಗಿದ್ದಾರೆ. ಆದರೆ ಅಂತಿಮವಾಗಿ ಪ್ರಾಪ್ಯನಾಗಿರುವವನು ವಿಷ್ಣುವೇ ಆಗಿದ್ದಾನೆ. ಆದ್ದರಿಂದಲೇ ಮುಕ್ತರಿಗೆ ಅವನು ಸೇತು ಎನಿಸಿದ್ದಾನೆ. 'ಸೇತು' ಪದದ ಈ ಅರ್ಥವನ್ನು ವಿವಕ್ಷಿಸಿಯೇ ಮುಕ್ತೋಪಸೃಪ್ಯತ್ವಲಿಂಗವನ್ನು ಹೇಳುವಾಗ ಭಾಷ್ಯಕಾರರು 'ಅಮೃತಸ್ಯೈಷ ಸೇತುಃ' ಎಂಬ ವಾಕ್ಯವನ್ನೇ ಉದಾಹರಿಸಿದ್ದಾರೆ.



ಪರಿಪೂರ್ಣಚಂದ್ರಿಕಾ

## ಮೂರು ಹಾಗೂ ನಾಲ್ಕನೆಯ ಸೂತ್ರಗಳ ವ್ಯಾಖ್ಯಾನ

**तात्पर्यचन्द्रिका**

**तृतीये तु परपक्षे साधकाभावोक्तिः ।**

ಅನುವಾದ - 'ಓಂ ನಾನುಮಾನಮತಚ್ಛಬ್ದಾತ್ ಓಂ' ಎಂಬುದು ಮೂರನೇ ಸೂತ್ರ. ಈ ಸೂತ್ರವು ಪರಪಕ್ಷದಲ್ಲಿ ಯಾವುದೇ ಸಾಧಕಪ್ರಮಾಣಗಳಿಲ್ಲದಿರುವುದನ್ನು ಸಾಧಿಸುವುದಕ್ಕಾಗಿ ಹೊರಟಿದೆ. ಹಿಂದಿನೆರಡು ಸೂತ್ರಗಳಲ್ಲಿ ಸಾಧಕಪ್ರಮಾಣಗಳಿವೆಯೆಂದು ಹೇಳಿದ್ದಾಯಿತು. ಮುಂದೆ ಪರಪಕ್ಷದಲ್ಲಿ ಸಾಧಕಪ್ರಮಾಣಗಳಿಲ್ಲವೆಂದು ಹೇಳುವುದೇ ಸಂಗತವಾಗುವುದರಿಂದ ಇದನ್ನು ಮೂರನೆಯ ಸೂತ್ರವನ್ನಾಗಿ ಪರಿಗಣಿಸಿದ್ದಾರೆ.

**तत्र चानुमीयत इत्यनुमानमित्यनुमानशब्देन वा अनुमानशब्दाच्छैषिकेऽणि कृत आनुमानशब्देन वा अनुमानप्रधानपाशुपतसाङ्ख्याद्यागमसिद्धं रुद्रप्रधानाद्युच्यते ।**

ಸೂತ್ರದಲ್ಲಿರುವ 'ನಾನುಮಾನಮ್' ಎಂಬುದನ್ನು 'ನ ಅನುಮಾನಮ್' ಎಂದು ಅಥವಾ 'ನ ಆನುಮಾನಮ್' ಎಂದೂ ಸಹ ಪದವಿಭಾಗ ಮಾಡಬಹುದು. 'ಅನುಮೀಯತೇ ಇತಿ ಅನುಮಾನಮ್' ಎಂಬ ವ್ಯುತ್ಪತ್ತಿಯನ್ನು ಅನುಮಾನ ಶಬ್ದಕ್ಕೆ ತಿಳಿಯಬೇಕು. 'ಆ ಅನುಮಾನಮ್' ಎಂದು ಪದವಿಭಾಗಮಾಡಿದಾಗ ಅನುಮಾನ ಶಬ್ದದ ಮೇಲೆ ಶೈಷೇ ಎಂಬ ಸೂತ್ರದಿಂದ ಅಣ್ ಪ್ರತ್ಯಯವು ಪ್ರಾಪ್ತವಾದರೆ ಆದಿವೃದ್ಧಿಯೂ ಬಂದು 'ಆನುಮಾನಮ್' ಎಂಬ ಶಬ್ದವು ನಿಷ್ಪನ್ನವಾಗಿದೆ. ಅನುಮಾನ ಶಬ್ದಕ್ಕಾಗಲೀ, ಆನುಮಾನ ಶಬ್ದಕ್ಕಾಗಲೀ ಅನುಮಾನವೇ ಪ್ರಧಾನವಾಗಿವುಳ್ಳ, ಪಾಶುಪತ, ಸಾಂಖ್ಯ, ಮೊದಲಾದ ಆಗಮಗಳು ಎಂದರ್ಥ. ಇಂತಹ ಆಗಮಗಳಿಂದ ರುದ್ರ ಹಾಗೂ ಪ್ರಧಾನಗಳೇ ದ್ಯುಭ್ವಾದ್ಯಾಯತನರಾಗಿದ್ದಾರೆಂದು ತಿಳಿಯುತ್ತದೆ. ಈ ವಿಷಯದಲ್ಲಿ ಪ್ರಮಾಣವಿಲ್ಲವೆಂದು ಪ್ರತಿಪಾದಿಸುವುದಕ್ಕಾಗಿ ಸೂತ್ರವು ಹೊರಟಿದೆ.

**अनेन च परपक्षे साधकाभावं वदता जायमानादिशब्दानामपि जीवशब्दत्वं नास्ति ।**

ಹೀಗೆ ಹೇಳಿದ್ದರಿಂದ ಪರಪಕ್ಷದಲ್ಲಿ ಸಾಧಕಪ್ರಮಾಣಗಳಿಲ್ಲವೆಂದು ಹೇಳುವ ಮೂಲಕ ಜಾಯಮಾನ ಮೊದಲಾದ ಜೀವಪ್ರತಿಪಾದಕ ಶಬ್ದಗಳೂ ಸಹ ಪ್ರಕರಣದಲ್ಲಿರುವುದಿಲ್ಲವೆಂದು ತಿಳಿಸಿದ್ದಾರೆ.

**ब्रह्मण्यपि सम्भवादिति सूचनात् स्वपक्षे बाधकमप्युद्धृतम् ।**

ಬ್ರಹ್ಮನಲ್ಲಿಯೂ ಸಾಧಕವಾದ ಪ್ರಮಾಣಗಳಿವೆಯೆಂದು ಸೂಚಿಸಿದ್ದರಿಂದ ಸ್ವಪಕ್ಷದಲ್ಲಿ ಬಾಧಕಗಳನ್ನು ಇದೇ ಸೂತ್ರವು ಪರಿಹರಿಸುತ್ತಿದೆ.

**एवं रुद्रसमाख्यास्थानां रुद्रपिनाक्यादिशब्दानामपि रुद्रादिशब्दत्वं नास्तिमुख्यतः ।**

ಆದ್ದರಿಂದ ರುದ್ರಸಮಾಖ್ಯಾಪ್ರಮಾಣಗಳಲ್ಲಿ ರುದ್ರ, ಪಿನಾಕಿ ಮೊದಲಾದ ರುದ್ರಪ್ರತಿಪಾದಕವಾದ ಶಬ್ದಗಳಾವುದೂ ಸಹ ಮುಖ್ಯವಾಗಿರುವುದಿಲ್ಲ.

**तथा विष्णुसमाख्यास्थानां विष्ण्वादिशब्दानामपि रुद्रादिशब्दत्वं नास्ति । "नतु नारायणादीनां नाम्नामन्यत्र सम्भवः । अन्यनाम्नां गतिर्विष्णुः" इत्यादि-भाष्योदाहृतस्मृतेः ।**

ಇದೇ ರೀತಿಯಾಗಿ ವಿಷ್ಣುಸಮಾಖ್ಯಾ ಪ್ರಮಾಣಗಳಲ್ಲಿ ವಿಷ್ಣು ಮೊದಲಾದ ಶಬ್ದಗಳು ರುದ್ರಾದಿಗಳನ್ನು ಪ್ರತಿಪಾದಿಸುವುದಿಲ್ಲ. ಏಕೆಂದರೆ 'ನತು ನಾರಾಯಣಾದೀನಾಂ ನಾಮ್ನಾಮನ್ಯತ್ರ ಸಂಭವಃ। ಅನ್ಯನಾಮ್ನಾಂ ಗತಿರ್ವಿಷ್ಣುಃ' ನಾರಾಯಣ ಪ್ರತಿಪಾದಕವಾದ ಶಬ್ದಗಳು ಬೇರೆಡೆ ಬರಲು ಸಾಧ್ಯವಿಲ್ಲ. ಆದರೆ ಬೇರೆ ಶಬ್ದಗಳು ವಿಷ್ಣುವನ್ನು ಪ್ರತಿಪಾದಿಸುತ್ತವೆ ಇತ್ಯಾದಿಯಾಗಿ ಭಾಷ್ಯದಲ್ಲಿ ಉದಾಹರಿಸಲ್ಪಟ್ಟ ಶ್ರುತಿಯು ಈ ವಿಷಯದಲ್ಲಿ ಆಧಾರವಾಗಿದೆ.

**तथाच रुद्रादिसमाख्या सावकाशा । विष्णुसमाख्या तु निरवकाशेत्यपि सूचितम् ।**

ಆದ್ದರಿಂದ ರುದ್ರಾದಿಸಮಾಖ್ಯಾ ಪ್ರಮಾಣವು ಸಾವಕಾಶವಾಗಿದೆ. ವಿಷ್ಣುಸಮಾಖ್ಯಾ ಪ್ರಮಾಣವಾದರೂ ನಿರವಕಾಶವಾಗಿದೆ ಎಂದು ಸೂಚಿಸಿದ್ದಾರೆ.

**एवं चानुव्याख्याने "बाहुल्यं लिङ्गशब्दानाम्" इत्यादिना "पूर्वपक्षेषु युक्तयः" इत्यन्तेन पूर्वपक्षयुक्तिमुक्त्वा "ता एव बलवत्यस्तु गत्यन्तरविवर्जिताः । सिद्धान्तयुक्तयो ज्ञेयाः" इति यः सिद्धान्तन्याय उक्तः सोऽपि सूत्रारूढः ।**

ಅನುವ್ಯಾಖ್ಯಾನದಲ್ಲಿ 'ಬಾಹುಲ್ಯಂ ಲಿಂಗಶಬ್ದಾನಾಮ್' ಎಂಬುದರಿಂದ ಪ್ರಾರಂಭಿಸಿ 'ಪೂರ್ವಪಕ್ಷೇಷು ಯುಕ್ತಯಃ' ಎಂಬಲ್ಲಿಯ ತನಕ ಪೂರ್ವಪಕ್ಷಿಯುಕ್ತಿಗಳನ್ನು ಹೇಳಿ 'ತಾ ಏವ ಬಲವತ್ಯಸ್ತು ಗತ್ಯಂತರವಿವರ್ಜಿತಾಃ। ಸಿದ್ಧಾಂತಯುಕ್ತಯೋ ಜ್ಞೇಯಾಃ' ಎಂಬುದಾಗಿ ಯಾವ ಯಾವ

ಸಿದ್ಧಾಂತ ನ್ಯಾಯಗಳನ್ನು ಹೇಳಿರುತ್ತಾರೋ ಅವುಗಳೂ ಸಹ ಸೂತ್ರಾರೂಢವಾಗಿವೆಯೆಂದು ತಿಳಿಯಬೇಕು.

**अत्र च प्रसज्यप्रतिषेधार्थस्य नञः क्रियासापेक्षत्वेनासामर्थ्येऽपि "असूर्यं पश्या राजदाराः । अश्राद्धभोजी ब्राह्मणः" इत्यादौ समासोऽस्तीति "अकर्तरि च कारके सञ्ज्ञायाम्" इत्यत्र ज्ञापितत्वाद्वा निर्मक्षिकमित्यादाविव "अर्थाभावेऽव्ययीभावः" इत्यव्ययीभावसमासाश्रयणाद्वा अतच्छब्दादिति पदं भाष्ये "तच्छब्दाभावात्" इति व्याख्यातम् ।**

ಸೂತ್ರದಲ್ಲಿ 'ಅತಚ್ಛಬ್ದಾತ್' ಎಂಬ ಪದವಿದೆ. ಇಲ್ಲಿ ಪ್ರಸಜ್ಯಪ್ರತಿಷೇಧಾರ್ಥದಲ್ಲಿ ನಞ್ ಇರುತ್ತದೋ? ಅಥವಾ ಪರ್ಯುದಾಸಾರ್ಥದಲ್ಲಿರುತ್ತದೋ? ಎಂಬ ವಿಚಾರವು ಪ್ರಾಪ್ತವಾದರೆ ಪ್ರಸಜ್ಯಪ್ರತಿಷೇಧಾರ್ಥದಲ್ಲಿ 'ನಞ್' ಸಮಾಸವನ್ನು ಮಾಡಲಾಗಿದೆಯೆಂದೇ ಹೇಳಬೇಕು. ವಾಸ್ತವಿಕವಾಗಿ ಪ್ರಸಜ್ಯಪ್ರತಿಷೇಧಾರ್ಥದಲ್ಲಿರುವ ನಞ್ ಎಂಬುದು ಕ್ರಿಯಾಸಾಪೇಕ್ಷಿತವಾಗಿರುತ್ತದೆ. ಅಂತಹ ನಞ್‌ಗೆ ಮುಂದಿನ ತತ್‌ಶಬ್ದದ ಜೊತೆಗೆ ಸಾಮರ್ಥ್ಯವಿಲ್ಲದ ಕಾರಣ ಸಮಾಸವಾಗುವುದಿಲ್ಲ. ಆದರೆ 'ಅಸೂರ್ಯಂ ಪಶ್ಯಾಃ ರಾಜದಾರಾಃ', 'ಅಶ್ರಾದ್ಧಭೋಜೀ ಬ್ರಾಹ್ಮಣಃ' ಇತ್ಯಾದಿಯಾಗಿ ಪ್ರಸಜ್ಯ ಪ್ರತಿಷೇಧಾರ್ಥದಲ್ಲಿಯೂ ನಞ್ ಸಮಾಸವನ್ನು ವೈಯ್ಯಾಕರಣರು ಒಪ್ಪಿದ್ದು ಕಾಣಿಸುತ್ತದೆ. ಪಾಣಿನಿಯು 'ಅಕರ್ತರಿ ಚ ಕಾರಕೇ ಸಂಜ್ಞಾಯಾಮ್' ಎಂಬ ಸೂತ್ರದಲ್ಲಿ ಕಾರಕೇ ಎಂಬ ಪದವನ್ನು ಪ್ರತ್ಯೇಕವಾಗಿ ಪರಿಗಣಿಸಿದ್ದರಿಂದಲೇ ಪ್ರಸಜ್ಯಪ್ರತಿಷೇಧಾರ್ಥದಲ್ಲಿಯೂ ನಞ್ ಸಮಾಸವಾಗುತ್ತದೆಂದು ತಿಳಿಸಿರುತ್ತಾನೆ. ಅಥವಾ 'ನಿರ್ಮಕ್ಷಿಕಮ್' ಇತ್ಯಾದಿ ಪ್ರಯೋಗದಂತೆ 'ಅತಚ್ಛಬ್ದಾತ್' ಎಂಬ ಪದವನ್ನು ಅವ್ಯಯೀಭಾವ ಸಮಾಸವನ್ನು ಆಶ್ರಯಿಸಿ. ('ಅರ್ಥಾಭಾವೇ ಅವ್ಯಯೀಭಾವಃ' ಎಂಬುದಾಗಿ ಅವ್ಯಯೀಭಾವ ಸಮಾಸವನ್ನು ಆಶ್ರಯಿಸಿ) ಪ್ರಯೋಗಿಸಿದ್ದಾರೆ. ಹೀಗೆ ವೈಯ್ಯಾಕರಣಗಳ ಪ್ರಯೋಗ ಅಥವಾ ಅವ್ಯಯೀಭಾವ ಸಮಾಸಗಳನ್ನು ದೃಷ್ಟಾಂತವಾಗಿಟ್ಟುಕೊಂಡು ಭಾಷ್ಯದಲ್ಲಿ 'ಅತಚ್ಛಬ್ದಾತ್' ಎಂಬುದಕ್ಕೆ 'ತಚ್ಛಬ್ದಾ ಅಭಾವಾತ್' ಎಂಬುದಾಗಿ ವ್ಯಾಖ್ಯಾನಿಸಿದ್ದಾರೆ.

**अव्ययीभावत्वेऽप्यं न भवति । "अपञ्चम्याः" इत्युक्तेः ।**

ಅವ್ಯಯೀಭಾವ ಸಮಾಸ ಮಾಡಿದರೆ 'ಅವ್ಯಯೀಭಾವಶ್ಚ' ಎಂಬ ಸೂತ್ರಾನುಸಾರ ಸಮಾಸದಿಂದ ಅವ್ಯಯತ್ವ ಬಂದು 'ನಾವ್ಯಯೀಭಾವಸ್ಯಾತೋಽಂತ್ವ ಪಂಚಮ್ಯಾಃ' ಎಂಬ ಸೂತ್ರದಿಂದ 'ಅಂ' ಆದೇಶ ಬಂದು 'ಅತಚ್ಛಬ್ದಮ್' ಎಂದಾಗಬೇಕಲ್ಲವೇ? ಎಂದರೆ ಪಂಚಮಿಯನ್ನು ಬಿಟ್ಟು ಉಳಿದೆಡೆ 'ಅಂ' ಆದೇಶಬರುತ್ತದೆಂದು ಹೇಳಿದ್ದರಿಂದ; 'ಅತಚ್ಛಬ್ದಾತ್' ಎಂಬುದು ಪಂಚಮೀ ವಿಭಕ್ತಿಯಲ್ಲಿರುವ ಪ್ರಯುಕ್ತ 'ಅಂ' ಆದೇಶ ಬರುವುದಿಲ್ಲ.

ದ್ಯುಭ್ವಾದ್ಯಧಿಕರಣ (೧-೩-೧)

**एवम् ''अतद्धर्माभिलापात्'' इत्यादावपि द्रष्टव्यम् ।**

ಹೀಗೆ 'ಅತದ್ಧರ್ಮಾಭಿಲಾಪಾತ್' ಎಂಬ ಸೂತ್ರದಲ್ಲಿಯೂ ಸಮಾಸ ವಿಚಾರವನ್ನು ಎರಡು ಬಗೆಯಲ್ಲಿ ತಿಳಿದುಕೊಳ್ಳಬೇಕು.

**चतुर्थे अद्वैतिना जीवस्येव साङ्ख्यादिना प्रधानादेर्ब्रह्माभेदानङ्गीकारात् ''अन्यमीशम्'' इत्यादिभेदव्यपदेशस्य प्रधानादिविषयत्वाभावाच्च ''भेदव्यपदेशात्'' इत्युत्तरहेतोर्जीवपक्षमात्रनिरासकत्वाद्योगविभाग उत्तरार्थः ।**

'ಓಂ ಪ್ರಾಣಭೃಚ್ಚ ಓಂ' ಎಂಬುದು ನಾಲ್ಕನೆಯ ಸೂತ್ರ. ಈ ಸೂತ್ರದಲ್ಲಿ ಜೀವ ಹಾಗೂ ವಾಯು ಇಬ್ಬರು ದ್ಯುಭ್ವಾದ್ಯಾಯತನರಲ್ಲವೆಂದು ಸಮರ್ಥಿಸಲಾಗಿದೆ. ಚಶಬ್ದದಿಂದ ಹಿಂದಿನೆರಡು ಸೂತ್ರಗಳಲ್ಲಿ ಹೇಳಲ್ಪಟ್ಟ ಹೇತುಗಳನ್ನು ಅನುಕರ್ಷ ಮಾಡಬೇಕು. ಹಾಗಾದರೆ ಒಟ್ಟಿಗೆ ಮೂರು ಸೂತ್ರಗಳನ್ನು ಪಠಿಸಬಹುದಿತ್ತು. ಬೇರೆ ಬೇರೆ ಸೂತ್ರಗಳನ್ನಾಗಿ ಏಕೆ ವಿಂಗಡಿಸಿದರು ? ಎಂದರೆ ಮುಂದಿನ ಸೂತ್ರದಲ್ಲಿ 'ಪ್ರಾಣಭೃಚ್ಚ' ಎಂಬುದನ್ನು ಅನುವೃತ್ತಿ ಮಾಡಿಕೊಳ್ಳುವುದಕ್ಕಾಗಿ ಬೇರೆ ಬೇರೆ ಸೂತ್ರಗಳಾಗಿ ವಿಭಾಗ ಮಾಡಿದ್ದಾರೆ.

ಅದ್ವೈತಿಗಳು ಜೀವನಿಗೆ ಹೇಗೆ ಬ್ರಹ್ಮಾಭೇದವನ್ನು ಒಪ್ಪುತ್ತಾರೋ, ಅದರಂತೆ ಸಾಂಖ್ಯರಾಗಲೀ, ಶೈವರಾಗಲೀ ಜೀವನಿಂದ ಪ್ರಧಾನಾದಿಗಳಿಗೆ ಅಭೇದವನ್ನು ಒಪ್ಪುವುದಿಲ್ಲ. ಹಾಗೇ ಒಪ್ಪಿದ್ದಲ್ಲಿ 'ನಾನುಮಾನಮ್' ಇತ್ಯಾದಿ ಮೂರುಸೂತ್ರಗಳಲ್ಲಿ ಹೇಳಲ್ಪಟ್ಟ ಎಲ್ಲಾ ಹೇತುಗಳನ್ನು ಅನುಕರ್ಷ ಮಾಡಬಹುದಿತ್ತು. ಮತ್ತು 'ಅನ್ಯಮೀಶಮ್' ಎಂಬುದಾಗಿ ಹೇಳಲ್ಪಟ್ಟ ಭೇದವ್ಯಪದೇಶವು ಪ್ರಧಾನಾದಿಗಳನ್ನು ವಿಷಯೀಕರಿಸುವುದಿಲ್ಲ. ಆದ್ದರಿಂದ 'ಭೇದವ್ಯಪದೇಶಾತ್' ಎಂಬ ಮುಂದಿನ ಸೂತ್ರವು ಕೇವಲ ಜೀವಪಕ್ಷವನ್ನು ನಿರಾಸ ಮಾಡುತ್ತಿರುವುದರಿಂದ ಯೋಗವಿಭಾಗ ಮಾಡುವುದು ಸಾರ್ಥಕವಾಗಿದೆ.

**तत्र चशब्दो न केवलं टीकोक्तरीत्या पूर्वोक्तहेतूनां नञश्चानुकर्षणार्थः । किन्तु वायुसमुच्चयार्थोऽपीति द्रष्टव्यम् ।**

'ಪ್ರಾಣಭೃಚ್ಚ' ಎಂಬ ಸೂತ್ರದಲ್ಲಿರುವ ಚಶಬ್ದವು ಟೀಕೆಯಲ್ಲಿ ಹೇಳಿದಂತೆ ಹಿಂದಿನ ಸೂತ್ರಗಳಲ್ಲಿರುವ ಹೇತುಗಳನ್ನಾಗಲೀ ನಞ್ ಎಂಬುದನ್ನಾಗಲೀ ಅನುಕರ್ಷಣೆ ಮಾಡುವುದಕ್ಕಾಗಿ ಮಾತ್ರ ಹೇಳಿರುವುದಲ್ಲ. ಹೊರತಾಗಿ ವಾಯುದೇವತೆಯನ್ನು ಸಮುಚ್ಚಯ ಮಾಡುವುದಕ್ಕಾಗಿಯೂ ಹೇಳಲ್ಪಟ್ಟಿದೆಯೆಂದು ತಿಳಿಯಬೇಕು.

**ಪರಿಪೂರ್ಣಚಂದ್ರಿಕಾ**

**प्रकाशः –**

**तृतीय इति ।। नानुमानमतच्छब्दादित्यत्र ।**

ವಿವರಣೆ - ಇಲ್ಲಿಯ ತನಕ ಪ್ರಥಮಸೂತ್ರ ಹಾಗೂ ದ್ವಿತೀಯಸೂತ್ರಗಳ ವಿನ್ಯಾಸ ಕ್ರಮವನ್ನು ಮತ್ತು ಅವುಗಳಲ್ಲಿರುವ ವಿಶೇಷ ವಿಚಾರವನ್ನು ವಿವರಿಸಿದರು. ಪ್ರಕೃತ 'ನಾನುಮಾನಮತಚ್ಛಬ್ದಾತ್' ಎಂಬ ಮೂರನೆಯ ಸೂತ್ರದ ಬಗ್ಗೆ ವಿವರಣೆ ನೀಡುತ್ತಿದ್ದಾರೆ. ಗ್ರಂಥದಲ್ಲಿರುವ 'ತೃತೀಯೇ' ಎಂಬ ಪದಕ್ಕೆ 'ನಾನುಮಾನಮತಚ್ಛಬ್ದಾತ್' ಎಂಬ ಮೂರನೆಯ ಸೂತ್ರದಲ್ಲಿ ಎಂದರ್ಥ.

**प्रकाशः – अनुमीयत इतीति ।। यद्यपि ल्युड् भावे करणाधिकरणयोश्च विहितः । नतु कर्मणि । तथापि ''कृत्यल्युटो बहुलम्'' इति बहुलग्रहणात्कर्मणि ल्युटि कृते ''युवोरनाकौ'' इत्यनादेशे रूपम् ।**

ಸೂತ್ರದಲ್ಲಿರುವ ಅನುಮಾನ ಶಬ್ದದಿಂದ ಪಾಶುಪತಾದ್ಯಗಮಗಳೆಂಬ ಅರ್ಥಗಳನ್ನು ತಿಳಿಯಬೇಕೆಂದು 'ಅನುಮೀಯತೇ' ಎಂದು ಗ್ರಂಥದಲ್ಲಿ ಹೇಳಿದ್ದಾರೆ. ಅದು ಹೀಗೆ - ವಾಸ್ತವಿಕವಾಗಿ ಲ್ಯುಟ್ ಪ್ರತ್ಯಯವು ಭಾವಾರ್ಥದಲ್ಲಿ ಮತ್ತು ಕರಣಾರ್ಥದಲ್ಲಿ ಮತ್ತು ಅಧಿಕರಣಾರ್ಥದಲ್ಲಷ್ಟೇ ವಿಧಿಸಲ್ಪಟ್ಟಿದೆ ಹೊರತು, ಕರ್ಮಾರ್ಥದಲ್ಲಿ ವಿಧಿಸಲ್ಪಟ್ಟಿಲ್ಲ. ಆದರೆ ಕರ್ಮಾರ್ಥದಲ್ಲಿ ಲ್ಯುಟ್ ಪ್ರತ್ಯಯವನ್ನು ವಿವಕ್ಷಿಸಿದಾಗ ಮಾತ್ರ 'ಅನುಮೀಯತೇ ಇತಿ ಅನುಮಾನಮ್' ಎಂಬ ವ್ಯುತ್ಪತ್ತಿಯಿಂದ ಪಾಶುಪತಾದ್ಯಾಗಮಗಳನ್ನು ವಿವಕ್ಷಿಸಲು ಸಾಧ್ಯ. ಆದರೆ ಪಾಣಿನಿಯು ಕರ್ಮಾರ್ಥದಲ್ಲಿ ಲ್ಯುಟ್ ಪ್ರತ್ಯಯವನ್ನು ವಿಧಾನ ಮಾಡದೇ ಇರುವಾಗ ಗ್ರಂಥದಲ್ಲಿ ಹೇಳಿದ ಅರ್ಥವು ಹೇಗೆ ಯುಕ್ತವಾಗುತ್ತದೆ? ಎಂಬ ಪ್ರಶ್ನೆ ಸಹಜವಾಗಿ ಬರುತ್ತದೆ. ಆದರೆ 'ಕೃತ್ಯಲ್ಯುಟೋ ಬಹುಲಮ್' ಎಂಬ ಸೂತ್ರದಲ್ಲಿ ಬಹುಲ ಗ್ರಹಣವನ್ನು ಪಾಣಿನಿಯು ಮಾಡಿರುವುದರಿಂದ ಕರ್ಮಾರ್ಥದಲ್ಲಿಯೂ ಲ್ಯುಟ್ ಪ್ರತ್ಯಯವು ವಿವಕ್ಷಿತವಾಗಿದೆಯೆಂದು ತಿಳಿಯಬೇಕು. ಹೀಗೆ ಕರ್ಮಾರ್ಥದಲ್ಲಿ ಲ್ಯುಟ್ ಪ್ರತ್ಯಯವು ಬಂದಮೇಲೆ 'ಯುವೋರನಾಕೌ' ಎಂಬ ಸೂತ್ರದಿಂದ ಅನ ಆದೇಶವು ಬರುತ್ತದೆ. ಆವಾಗ 'ಅನುಮಾನಮ್' ಎಂಬ ರೂಪವು ಕರ್ಮಾರ್ಥದಲ್ಲಿಯೇ ನಿಷ್ಪನ್ನವಾಗುತ್ತದೆ.

**प्रकाशः – ''आनुमानम् अनुमानात्मकागमपरिकल्पितरुद्राख्यं ब्रह्मात्र न वाच्यम्'' इति तत्वप्रदीपोक्त्यनुसारादाह – अनुमानशब्दादिति ।।**

'ಆನುಮಾನಮ್ ಅನುಮಾನಾತ್ಮಕಾಗಮಪರಿಕಲ್ಪಿತರುದ್ರಾಖ್ಯಂ ಬ್ರಹ್ಮಾತ್ರ ನ ವಾಚ್ಯಮ್' ಸೂತ್ರದಲ್ಲಿರುವ 'ಆನುಮಾನಮ್' ಎಂದರೆ ಅನುಮಾನವೆಂಬ ಆಗಮದಿಂದ ಪರಿಕಲ್ಪಿತವಾದ ರುದ್ರನೆಂಬ ಬ್ರಹ್ಮ. ಇಂತಹ ಬ್ರಹ್ಮನನ್ನು ಇಲ್ಲಿ ವಿವಕ್ಷಿಸಬಾರದು ಎಂದು ತತ್ವಪ್ರದೀಪದಲ್ಲಿ ಹೇಳಿರುತ್ತಾರೆ. ಅದಕ್ಕನುಸಾರಿಯಾಗಿ 'ಅನುಮಾನ ಶಬ್ದಾತ್' ಎಂಬ ಗ್ರಂಥವು ಹೊರಟಿದೆ.

ದ್ಯುಭ್ವಾದ್ಯಧಿಕರಣ (೧-೩-೧)

**प्रकाशः – शैषिके ''शेषे'' इत्यनेनापत्याद्यन्यार्थे विहितेऽण्प्रत्यये आदिवृद्ध्यादौ सति रूपम् ।**

ತದ್ಧಿತಾಧಿಕಾರದಲ್ಲಿ ಅಪತ್ಯಾದ್ಯರ್ಥಗಳಲ್ಲಿ 'ನ್ಞ್' ಪ್ರತ್ಯಯಗಳನ್ನು ವಿಧಿಸಲಾಗಿದೆ. ಅನಂತರ ಕೊನೆಯಲ್ಲಿ 'ಶೇಷೇ' ಎಂಬ ಸೂತ್ರದಿಂದ ಅಪತ್ಯಾದ್ಯರ್ಥವನ್ನು ಬಿಟ್ಟು ಬೇರೆ ಅರ್ಥಗಳಲ್ಲಿಯೂ ಕೆಲವೆಡೆ ಅಣ್ ಪ್ರತ್ಯಯವು ಪ್ರಸಕ್ತವಾಗುತ್ತದೆಂದು ಹೇಳಲಾಗಿದೆ. ಪ್ರಕೃತ ಅನುಮಾನ ಸಂಬಂಧಿ ಎಂಬರ್ಥದಲ್ಲಿ ಅಣ್ ಪ್ರತ್ಯಯವನ್ನು ಮಾಡಿದಾಗ 'ಅಚೋऽಞ್ಣಿತಿ' ಎಂಬ ಸೂತ್ರದಿಂದ ಆದಿವೃದ್ಧಿಯು ಪ್ರಾಪ್ತವಾದರೆ ಆನುಮಾನವೆಂಬ ರೂಪವು ನಿಷ್ಪನ್ನವಾಗುತ್ತದೆ.

**प्रकाशः – अनुमानप्रधानको यः पाशुपतसांख्यहैरण्यगर्भ-सौरस्कान्दशाक्तेयाद्यागमः तत्सिद्धं रुद्रप्रधानहिरण्यगर्भसूर्यशक्तिप्रभृतीत्यर्थः ।**

ಅನುಮಾನವನ್ನೇ ಪ್ರಧಾನಯುಕ್ತಿಯನ್ನಾಗಿ ಕೂಡಿರುವ ಆಗಮಗಳೆಂದರೆ ಪಾಶುಪತಾಗಮ, ಸಾಂಖ್ಯಾಗಮ, ಹೈರಣ್ಯಗರ್ಭಾಗಮ, ಸೌರಾಗಮ, ಶಾಕ್ತಾಗಮ, ಶಾಕ್ತೇಯಾದ್ಯಾಗಮಗಳು. ಇವುಗಳಿಂದ ಸಿದ್ಧವಾದ ರುದ್ರ, ಪ್ರಕೃತಿ, ಹಿರಣ್ಯಗರ್ಭ, ಸೂರ್ಯ, ಸ್ಕಂಧ, ಶಕ್ತಿ ಮೊದಲಾದವುಗಳು. ಆನುಮಾನ ಶಬ್ದದಿಂದ ಇವರೆಲ್ಲರನ್ನು ಸ್ವೀಕರಿಸಬೇಕು.

**प्रकाशः – यद्यपि टीकायां रुद्रप्रधाने द्वे एवानुमानमित्यस्यार्थ उक्तः ।**

ಟೀಕೆಯಲ್ಲಿ ರುದ್ರ ಹಾಗೂ ಪ್ರಧಾನಗಳೆರಡನ್ನೇ ಆನುಮಾನಶಬ್ದದ ಅರ್ಥವೆಂದು ಪರಿಗಣಿಸಿದ್ದಾರೆ. ಆದರೆ ಪ್ರಕೃತ ಗ್ರಂಥದಲ್ಲಿ ರುದ್ರ, ಪ್ರಧಾನಾದಿ ಎಂಬುದಾಗಿ ಆದಿಪದವನ್ನು ಪ್ರಯೋಗಿಸಿದ್ದಾರೆ. ಈ ಆದಿಪದದಿಂದ ಹಿರಣ್ಯಗರ್ಭ, ಸೂರ್ಯ, ಶಕ್ತಿ ಮೊದಲಾದವರನ್ನು ಸ್ವೀಕರಿಸಬೇಕೆಂಬ ಅರ್ಥವನ್ನು ನೀವು ಹೇಳಿದಿರಿ. ಇದು ಹೇಗೆ ಸರಿ?

**प्रकाशः – तथापि पूर्वपक्षटीकायां दृष्टफलविधायकवाक्यदृष्टान्तेन सर्वाश्रयत्व-प्रतिपादकवाक्यप्रामाण्यानुमानेन रुद्रस्य प्रधानस्य च सर्वाश्रयत्वसिद्धेरुक्तत्वेनास्य पूर्वपक्षन्यायस्य दुरागममात्रसाधारण्यात् ।**

ಉತ್ತರ - ಟೀಕೆಯಲ್ಲಿ ರುದ್ರ ಹಾಗೂ ಪ್ರಧಾನ ಎರಡನ್ನು ಮಾತ್ರ ಉಲ್ಲೇಖಿಸಿರಬಹುದು. ಆದರೆ ರುದ್ರ ಹಾಗೂ ಪ್ರಧಾನಗಳಲ್ಲಿ ಯಾವ ಪೂರ್ವಪಕ್ಷ ನ್ಯಾಯವನ್ನು ಹೇಳಿದ್ದಾರೋ, ಆ ನ್ಯಾಯವು ಹಿರಣ್ಯಗರ್ಭಾದಿಗಳಲ್ಲಿಯೂ ಸಮಾನವಾಗಿದೆ. ಪೂರ್ವಪಕ್ಷ ಟೀಕೆಯಲ್ಲಿ ದೃಷ್ಟಫಲವನ್ನು ವಿಧಾನ ಮಾಡುವಂತಹ ಶೈವಾದ್ಯಾಗಮಗಳ ದೃಷ್ಟಾಂತದಿಂದ ಸರ್ವಾಶ್ರಯತ್ವ ಪ್ರತಿಪಾದಕವಾದ ವಾಕ್ಯಕ್ಕೆ ಪ್ರಾಮಾಣ್ಯವನ್ನು ಅನುಮಾನ ಮಾಡಬೇಕೆಂದು ಹೇಳಿದ್ದಾರೆ. ಈ ಅನುಮಾನದಿಂದ ರುದ್ರ ಹಾಗೂ ಪ್ರಧಾನಕ್ಕೆ ಸರ್ವಾಶ್ರಯತ್ವವು ಸಿದ್ಧವಾಗುತ್ತದೆಂದು ಹೇಳಿರುವುದರಿಂದ ಈ ಪೂರ್ವಪಕ್ಷ ನ್ಯಾಯವು ಸಕಲ ದುರಾಗಮಗಳಲ್ಲಿ ಸಾಧಾರಣವಾಗಿದೆ. ಅಂದರೆ ಹಿರಣ್ಯಗರ್ಭಾದಿಗಳನ್ನು ಪ್ರತಿಪಾದಿಸುವ ಹೈರಣ್ಯಗರ್ಭ,

ಸೌರ ಮೊದಲಾದ ಆಗಮಗಳಲ್ಲಿಯೂ ಕೆಲವು ವಾಕ್ಯಗಳು ದೃಷ್ಟಫಲವಿಧಾಯಕವಾಗಿವೆ. ಅಂತಹ ವಾಕ್ಯಗಳಿಗೆ ಪ್ರಾಮಾಣ್ಯವು ಸಿದ್ಧಿಸುವ ಪ್ರಯುಕ್ತ ಸರ್ವಾಶ್ರಯತ್ವವನ್ನು ಪ್ರತಿಪಾದಿಸುವ ಉಳಿದ ವಾಕ್ಯಗಳಿಗೂ ಪ್ರಾಮಾಣ್ಯವನ್ನು ಅನುಮಾನ ಮಾಡಬಹುದು. ಹೀಗೆ ಪ್ರತಿಯೊಂದು ದುರಾಗಮಗಳಲ್ಲಿಯೂ ಸರ್ವಾಶ್ರಯತ್ವ ಪ್ರತಿಪಾದಕವಾದ ವಾಕ್ಯಕ್ಕೆ ಪ್ರಾಮಾಣ್ಯವನ್ನು ಸಾಧಿಸಬಹುದಾದ್ದರಿಂದ ಪೂರ್ವಪಕ್ಷ ನ್ಯಾಯವು ಎಲ್ಲೆಡೆ ಸಾಧಾರಣವಾಗಿದೆ.

**प्रकाशः** – अतच्छब्दादित्युक्तसिद्धान्तन्यायस्य च दुरागममात्रप्रसिद्धरुद्रप्रधानादेः सर्वस्यापि द्युभ्वाद्यायतनत्वनिरासेऽपि साम्याद् भाष्ये रुद्रोक्तेस्तत्वनिर्णये प्रधानोक्तेष्टीकायामुभयोक्तेश्चोपलक्षणत्वादिति भावेनादिपदप्रयोगः ।

ಪೂರ್ವಪಕ್ಷ ನ್ಯಾಯವು ಎಲ್ಲಾ ದುರಾಗಮಗಳಲ್ಲಿ ಸಾಧಾರಣವಾಗಿದೆಯೆಂಬುದಷ್ಟೇ ಅಲ್ಲ, 'ಅತಚ್ಛಬ್ದಾತ್' ಎಂಬ ಸೂತ್ರ ಭಾಗದಿಂದ ಹೇಳಲ್ಪಟ್ಟ ಸಿದ್ಧಾಂತ ನ್ಯಾಯವೂ ಸಹ ಎಲ್ಲಾ ದುರಾಗಮಗಳ ನಿರಾಸ ವಿಷಯದಲ್ಲಿ ಸಾಧಾರಣವಾಗಿದೆ. ಅಂದರೆ ಪಾಶುಪತಾಗಮ ಹಾಗೂ ಸಾಂಖ್ಯಾಗಮಗಳಲ್ಲಿ ಮುಖ್ಯವಾಗಿ ಪ್ರಸಿದ್ಧರಾಗಿರುವ ರುದ್ರ, ಪ್ರಧಾನ ಮೊದಲಾದ ಶಬ್ದಗಳಿಂದ ಪ್ರತಿಪಾದ್ಯರಾದವರು ರುದ್ರಾದಿಗಳಲ್ಲ; ಹೊರತಾಗಿ ವಿಷ್ಣುವೇ ಆಗಿದ್ದಾನೆ. ರುದ್ರ ಪ್ರತಿಪಾದಕವಾದ ಶಬ್ದಗಳು ಅಲ್ಲಿ ಇರುವುದಿಲ್ಲವೆಂಬ ಸಿದ್ಧಾಂತ ನ್ಯಾಯವನ್ನು ಹೈರಣ್ಯಗರ್ಭಾದ್ಯಾಗಮಗಳಲ್ಲಿಯೂ ಹೇಳಬಹುದು. ಆದ್ದರಿಂದ ರುದ್ರ, ಪ್ರಕೃತಿಗಳು ಹೇಗೆ ದ್ಯುಭ್ವಾದ್ಯಾಯತನರಾಗುವುದಿಲ್ಲವೋ, ಅದರಂತೆ ಹಿರಣ್ಯಗರ್ಭಾದಿಗಳೂ ಸಹ ದ್ಯುಭ್ವಾದ್ಯಾಯತನರಾಗುವುದಿಲ್ಲ.

ಈ ಕಾರಣದಿಂದ ಭಾಷ್ಯದಲ್ಲಿ ಕೇವಲ ರುದ್ರನನ್ನು ಹೇಳಿರುವುದು; ತತ್ವನಿರ್ಣಯದಲ್ಲಿ ಪ್ರಧಾನವನ್ನಷ್ಟೇ ಹೇಳಿರುವುದು; ಹಾಗೂ ಟೀಕೆಯಲ್ಲಿ ರುದ್ರ ಹಾಗೂ ಪ್ರಧಾನರನ್ನು ಹೇಳಿರುವುದು ಉಪಲಕ್ಷಣವಾಗಿದೆಯೆಂದು ತಿಳಿಸಲು ಗ್ರಂಥಕಾರರು 'ರುದ್ರಪ್ರಧಾನಾದಿ' ಎಂಬುದಾಗಿ ಆದಿಶಬ್ದವನ್ನು ಪ್ರಯೋಗಿಸಿದ್ದಾರೆ.

**प्रकाशः** – एतेनानुमानशब्दस्य व्युत्पत्तिद्वयेऽपि रुद्रार्थत्वे विशेष्यनिघ्नतया पुल्लिङ्गता स्यात् । ''नवेति विभाषा'' इति सूत्रे महाभाष्ये ''अयमितिकरणः परः प्रयुज्यते'' इति ल्युडन्तस्यापि पुल्लिङ्गप्रयोगात् । कैयटे ''क्रियत इति करणः । इतिश्चासौ करणश्च'' इति व्याख्यानादिति निरस्तम् ।

'ರುದ್ರಪ್ರಧಾನಾದಿ' ಎಂಬ ಗ್ರಂಥಕಾರರ ಮಾತಿನಿಂದ ಮತ್ತೊಂದು ಆಕ್ಷೇಪವೂ ನಿರಾಕೃತವಾಯಿತು.

ಆಕ್ಷೇಪ - ಹಿಂದೆ ಹೇಳಿದ ಎರಡು ವ್ಯುತ್ಪತ್ತಿಯನ್ನು ಅನುಮಾನ ಶಬ್ದದಲ್ಲಿ ವಿವಕ್ಷಿಸಿದಾಗಲೂ ಅನುಮಾನ ಶಬ್ದವಾಗಲೀ, ಅನುಮಾನ ಶಬ್ದವಾಗಲೀ, ಪುಲ್ಲಿಂಗದಲ್ಲಿ ಪ್ರಯೋಗಿಸಬೇಕು. ಏಕೆಂದರೆ ರುದ್ರನು ವಿಶೇಷ್ಯನಾಗಿರುವುದರಿಂದ ವಿಶೇಷಣವಾದ ಅನುಮಾನ ಶಬ್ದವು ವಿಶೇಷ್ಯದ ಲಿಂಗವನ್ನು ಅನುಸರಿಸಬೇಕಾದ ಕಾರಣ ಪುಲ್ಲಿಂಗದಲ್ಲಿಯೇ ಪ್ರಯೋಗಿಸಬೇಕು. ಅನುಮಾನ ಶಬ್ದವು ಲ್ಯುಡಂತವಾಗಿದೆ. ಲ್ಯುಟ್ ಪ್ರತ್ಯಯವು

ಭಾವಾರ್ಥದಲ್ಲಿ ಬಂದಾಗ ನಪುಂಸಕಲಿಂಗದಲ್ಲಿಯೇ ಪ್ರಯೋಗಿಸಬೇಕೆಂಬ ನಿಯಮವಿದೆ. ಆದರೆ ಕರಣಾರ್ಥದಲ್ಲಿ ಬಂದಾಗ ಪುಲ್ಲಿಂಗದಲ್ಲಿಯೂ ಪ್ರಯೋಗಿಸುವುದು ಕಂಡಿದೆ. ಪ್ರಕೃತ ಕರ್ಮಾರ್ಥದಲ್ಲಿ 'ಇತಿ' ಶಬ್ದವನ್ನು ಪ್ರಯೋಗಿಸಿದ್ದಾರೆಂದು ಈ ಹಿಂದೆ ಸಮರ್ಥಿಸಲಾಗಿದೆ. ಕರ್ಮಾರ್ಥದಲ್ಲಿ ಪ್ರಯೋಗಿಸಲ್ಪಟ್ಟ 'ಇತಿ' ಶಬ್ದವನ್ನೂ ಸಹ ಪುಲ್ಲಿಂಗದಲ್ಲಿ ಪ್ರಯೋಗ ಮಾಡಬಹುದು. ಉದಾಹರಣೆಗೆ - 'ನವೇತಿ ವಿಭಾಷಾ' ಎಂಬ ಸೂತ್ರವನ್ನು ವ್ಯಾಖ್ಯಾನಿಸುವಾಗ ಮಹಾಭಾಷ್ಯದಲ್ಲಿ 'ಅಯಮಿತಿಕರಣಃ ಪರಃ ಪ್ರಯುಜ್ಯತೇ' ಎಂಬುದಾಗಿ ಲುಡ್ಯಂತವಾದ ಕರಣ ಶಬ್ದವನ್ನು ಪುಲ್ಲಿಂಗದಲ್ಲಿ ಪ್ರಯೋಗಿಸಿದ್ದು ಕಾಣಿಸುತ್ತಿದೆ. ಕೈಯಟದಲ್ಲಿಯೂ 'ಕ್ರಿಯತ ಇತಿ ಕರಣಃ । ಇತಿಶ್ಚಾಸೌ ಕರಣಶ್ಚ' ಎಂಬ ವ್ಯಾಖ್ಯಾನವನ್ನು ಮಾಡಲಾಗಿದೆ. ಅಂದರೆ ಕರಣ ಶಬ್ದವು 'ಕ್ರಿಯತೇ ಇತಿ' ಎಂಬ ವ್ಯುತ್ಪತ್ತಿಯಿಂದ ಕರ್ಮಾರ್ಥದಲ್ಲಿ ಬಂದಿರುವ ಲುಡ್ಯಂತ ಶಬ್ದವಾಗಿದೆಯೆಂದು ತಿಳಿಯಬೇಕು. 'ಇತಿಶ್ಚಾಸೌ ಕರಣಶ್ಚ' ಎಂದರೆ ಪಾಣಿನಿಯಿಂದ ಪ್ರಯೋಗಿಸಲ್ಪಟ್ಟ 'ಇತಿ' ಶಬ್ದವೆಂದರ್ಥ. ಹೀಗೆ ಕರಣಶಬ್ದವನ್ನು ಪುಲ್ಲಿಂಗದಲ್ಲಿ ಪ್ರಯೋಗಿಸಿರುವ ಪ್ರಯುಕ್ತ ಇಲ್ಲಿರುವ ಅನುಮಾನ ಶಬ್ದವನ್ನಾಗಲೀ, ಆನುಮಾನ ಶಬ್ದವನ್ನಾಗಲೀ ಪುಲ್ಲಿಂಗದಲ್ಲಿಯೇ ಪ್ರಯೋಗಿಸಬೇಕಲ್ಲವೇ?

**प्रकाशः** – रुद्रप्रधानादीति सामान्यस्य विशेष्यस्योपादानात् ।

ಸಮಾಧಾನ - ಈ ಆಕ್ಷೇಪಕ್ಕೆ ಅವಕಾಶವಿಲ್ಲ. ಒಂದು ವೇಳೆ 'ರುದ್ರಃ' ಎಂದು ಹೇಳಿದ್ದರೆ ಅನುಮಾನ ಶಬ್ದವು ವಿಶೇಷ್ಯದ ಲಿಂಗವನ್ನು ಅನುಸರಿಸಬೇಕಾದ್ದರಿಂದ ಪುಲ್ಲಿಂಗದಲ್ಲಿರಬೇಕಿತ್ತು. ಆದರೆ ರುದ್ರಪ್ರಧಾನಾದಿ ಎಂಬುದಾಗಿ ಆದಿಪದವನ್ನು ಸಾಮಾನ್ಯವಾಗಿ ಪ್ರಯೋಗಿಸಿದ್ದರಿಂದ ನಪುಂಸಕಲಿಂಗದಲ್ಲಿದೆಯೆಂದು ವಿವಕ್ಷಿಸಬಹುದು. ಅದಕ್ಕನುಸಾರಿಯಾಗಿ ಅನುಮಾನ ಶಬ್ದವನ್ನು ನಪುಂಸಕ ಲಿಂಗದಲ್ಲಿ ಹೇಳಿದ್ದು ತಪ್ಪಾಗುವುದಿಲ್ಲ.

**प्रकाशः** – 'तत्प्रधानत्वात्ताच्छब्द्यम्' इत्यागम एवानुमानशब्देन गृह्यत इत्यर्थः ।

ಅನುಮಾನ ಶಬ್ದಕ್ಕೆ ಅನುಮಾನಕ್ಕೆ ವಿಷಯವಾದದ್ದು ಎಂಬರ್ಥವನ್ನು ಹೇಳಬಹುದು. ಆನುಮಾನಿಕ ಎಂಬ ಶಬ್ದಕ್ಕೂ ಸಹ ಅನುಮಾನಕ್ಕೆ ಸಂಬಂಧಿಸಿದ್ದು ಎಂಬರ್ಥವನ್ನು ಹೇಳಬಹುದು. ಆದರೆ ನೀವು ಅನುಮಾನವೇ ಪ್ರಧಾನವಾಗಿ ಉಳ್ಳ ಆಗಮವೆಂಬರ್ಥವನ್ನು ಹೇಳುತ್ತಿದ್ದೀರಿ. ಇದು ಹೇಗೆ? ಎಂಬ ಪ್ರಶ್ನೆಗೆ 'ತತ್ಪ್ರಧಾನತ್ವಾತ್ತಾಚ್ಛಬ್ದ್ಯಂ' ಎಂಬ ಮಹಾಭಾಷ್ಯದ ಮಾತಿನಂತೆ ಆಗಮವನ್ನು ಅನುಮಾನವೆಂದು ಹೇಳಬಹುದು. ಅಂದರೆ ಯಾವುದರಲ್ಲಿ ಯಾವುದು ಪ್ರಧಾನವಾಗಿದೆಯೋ, ಅದನ್ನೇ ಆ ಶಬ್ದದಿಂದ ಕರೆಯಬಹುದೆಂಬ ನಿಯಮವಿದೆ. ಶೈವಾದ್ಯಾಗಮಗಳಲ್ಲಿ ಅನುಮಾನವೇ ಪ್ರಧಾನವಾಗಿರುವುದರಿಂದ ಶೈವಾದ್ಯಾಗಮಗಳನ್ನು ಅನುಮಾನವೆಂದು ಕರೆಯಬಹುದು.

**प्रकाशः** – ननु

'शैवाद्यागमसम्प्राप्तदृष्टगेन फलेन तु ।
तद्वाक्योपमयाऽन्यच्च प्रमाणत्वेऽनुमीयते ।।

ಪರಿಪೂರ್ಣಚಂದ್ರಿಕಾ

ईशवाक्यत्वत इति चेत्तद्व्यभिचारिणा ।
अप्रामाण्यानुमा च स्यात् ........... ।।'

इति शास्त्रयोनिनयानुव्याख्यान एवात्रानुमानपदसूचितपूर्वपक्षबीजस्य टीकोक्तस्य निरस्तत्वेन कथं पुनरत्रागमबलेन तत्सिद्धं रुद्रप्रधानाद्याशङ्क्य निरस्यत इति चेत् -

ಈ ಅಧಿಕರಣದಲ್ಲಿ ಸೂತ್ರದಲ್ಲಿರುವ ಅನುಮಾನ ಪದದಿಂದ ಸೂಚಿತವಾದ ಪೂರ್ವಪಕ್ಷ ಬೀಜವನ್ನು ಟೀಕೆಯಲ್ಲಿ ನಿರಾಕರಿಸಿದ್ದಾರೆ. ಆದರೆ ಈ ಆಶಂಕೆಯನ್ನು ಶಾಸ್ತ್ರಯೋನಿತ್ವಾಧಿಕರಣದಲ್ಲಿಯೇ ನಿರಾಕರಿಸಿದ್ದಾಗಿದೆ. ಏಕೆಂದರೆ ಶಾಸ್ತ್ರಯೋನಿತ್ವಾಧಿಕರಣದ ಅನುವ್ಯಾಖ್ಯಾನವನ್ನು ನೋಡಿದಾಗ ಈ ವಿಷಯವು ಸ್ಪಷ್ಟವಾಗುತ್ತದೆ -

'ಶೈವಾದ್ಯಾಗಮಸಂಪ್ರಾಪ್ತದೃಷ್ಟಗೇನ ಫಲೇನ ತು ।
ತದ್ವಾಕ್ಯೋಪಮಯಾಽನ್ಯಚ್ಚ ಪ್ರಮಾಣತ್ವೇಽನುಮೀಯತೇ ॥

ಈಶವಾಕ್ಯತ್ವತ ಇತಿ ಚೇತ್ತದ್ವ್ಯಭಿಚಾರಿಣಾ ।
ಅಪ್ರಾಮಾಣ್ಯಾನುಮಾ ಚ ಸ್ಯಾತ್ ............ ॥'

ಶೈವಾದ್ಯಾಗಮಗಳಲ್ಲಿರುವ ದೃಷ್ಟಫಲವನ್ನು ವಿಧಾನ ಮಾಡುವ ವಾಕ್ಯದ ದೃಷ್ಟಾಂತದಿಂದ ಪ್ರಾಮಾಣ್ಯವನ್ನು ಸಾಧಿಸುವುದಾದರೆ ವ್ಯಭಿಚರಿತವಾದ ವಾಕ್ಯಗಳ ದೃಷ್ಟಾಂತದಿಂದ ಅಪ್ರಾಮಾಣ್ಯವನ್ನೂ ಸಹ ಅನುಮಾನ ಮಾಡಬಹುದು. ಆದ್ದರಿಂದ ಶೈವಾದ್ಯಾಗಮಗಳು ಪ್ರಮಾಣವಲ್ಲವೆಂದು ಹೇಳಿದ್ದಾರೆ. ಪುನಃ ನೀವು ಇಲ್ಲಿ ಶೈವಾದ್ಯಾಗಮಗಳ ಆಧಾರದಿಂದ ರುದ್ರ ಪ್ರಧಾನಾದಿಗಳೇ ಪ್ರತಿಪಾದ್ಯರಾಗಬಹುದೆಂದು ಪೂರ್ವಪಕ್ಷ ಮಾಡಿ ನಿರಾಕರಿಸುತ್ತಿದ್ದೀರಿ. ಆದ್ದರಿಂದ ಪುನರುಕ್ತವಾಗುತ್ತದಲ್ಲವೇ?

**प्रकाशः** – अत्राहुः । श्रुतिलिङ्गबाहुल्येन प्रबलसमाख्यारूपहेत्वन्तरेण निरवकाशजायमानत्वलिङ्गेन च पूर्वपक्षे सति पाशुपताद्यागमसिद्धत्वमभ्युच्चयत्वेनोच्यते । तथैव सुधायामुक्तेरिति ।

ಸಮಾಧಾನ - ಶೈವಾದ್ಯಾಗಮಗಳಿಂದ ಇಲ್ಲಿ ಪೂರ್ವಪಕ್ಷವನ್ನು ನೇರವಾಗಿ ಮಾಡುತ್ತಿಲ್ಲ ಹೊರತಾಗಿ, ಅನೇಕ ಶ್ರುತಿ ಹಾಗೂ ಲಿಂಗಗಳ ಆಧಾರದಿಂದ ಪ್ರಬಲವಾದ ಸಮಾಖ್ಯಾ ಎಂಬ ಹೇತ್ವಂತರದಿಂದ ಮತ್ತು ನಿರವಕಾಶವಾದ ಜಾಯಮಾನತ್ವವೆಂಬ ಲಿಂಗದ ಬಲದಿಂದ ಪೂರ್ವಪಕ್ಷವನ್ನು ಮಾಡಲಾಗಿದೆ. ಈ ಸಂದರ್ಭದಲ್ಲಿ ಶೈವಾದ್ಯಾಗಮಗಳಿಂದಲೂ ಸಿದ್ಧವಾಗಿದೆ ಎಂಬುದನ್ನು ಅಭ್ಯುಚ್ಚಯ ಯುಕ್ತಿಗೋಸ್ಕರ ಉಪಯೋಗಿಸಿಕೊಳ್ಳಲಾಗಿದೆ; ಹೊರತಾಗಿ ಶೈವಾದ್ಯಾಗಮಗಳಿಂದಲೇ ಪೂರ್ವಪಕ್ಷ ಮಾಡುತ್ತಿಲ್ಲ. ಸುಧೆಯಲ್ಲಿಯೂ ಹೀಗೆಯೇ ಹೇಳಿರುತ್ತಾರೆ. ಹೀಗೆ ಕೆಲವರ ಅಭಿಪ್ರಾಯ.

ದ್ಯುಭ್ವಾದ್ಯಧಿಕರಣ (೧-೩-೧)

**प्रकाशः** – यद्वा "रुद्रो वाव लोकाधारः" इत्यादिश्रुत्या रुद्रादेस्सर्वाधारत्वप्राप्तौ तत्साहाय्येन तस्य द्युभ्वाद्यायतनत्वप्रतिपादकागमस्यापि प्रामाण्येन "तद्व्यभिचारिणा । अप्रामाण्यानुमा च स्यात्" इत्युक्ताप्रामाण्यानुमानस्य बाधितत्वात् "दृष्टगेन फलेन तु" इत्यनुमानस्य च समूलत्वात्तेन तत्प्रामाण्योपपत्तेरागमावष्टम्भेन पुनश्शङ्कायां रुद्रादिसमाख्याया वैष्णवत्वोक्त्यैवाप्रामाण्यानुमानं निर्बाधमिति समाधानमित्यभिप्राय इति ।

ಅಥವಾ ಮತ್ತೊಂದು ಬಗೆಯಲ್ಲಿ ಉತ್ತರಿಸಬಹುದು - 'ರುದ್ರೋ ವಾವ ಲೋಕಾಧಾರಃ' ಇತ್ಯಾದಿ ಶ್ರುತಿಯಿಂದ ರುದ್ರಾದಿಗಳು ಸರ್ವಕ್ಕೂ ಆಧಾರರಾಗಿದ್ದಾರೆಂದು ಪೂರ್ವಪಕ್ಷವು ಪ್ರಾಪ್ತವಾದರೆ ಈ ಪೂರ್ವಪಕ್ಷಿಯ ಯುಕ್ತಿಯ ಸಹಾಯದಿಂದ ದ್ಯುಭ್ವಾದ್ಯಾಯತನತ್ವವನ್ನು ಸಮರ್ಥಿಸುವ ಆಗಮಕ್ಕೆ ಪ್ರಾಮಾಣ್ಯವನ್ನು ಸಮರ್ಥಿಸಿದಂತಾಗುತ್ತದೆ. ಆವಾಗ ಶಾಸ್ತ್ರಯೋನಿತ್ವಾಧಿಕರಣದಲ್ಲಿ ಹೇಳಲ್ಪಟ್ಟ 'ತದ್ವ್ಯಭಿಚಾರಿಣಾ । ಅಪ್ರಮಾಣ್ಯಾನುಮಾ ಚ ಸ್ಯಾತ್' ಎಂಬ ಶೈವಾದ್ಯಾಗಮಗಳ ಅಪ್ರಮಾಣ್ಯಾನುಮಾನಕ್ಕೆ ಬಾಧರೂಪದೋಷವನ್ನು ಹೇಳಿದಂತಾಗುತ್ತದೆ. ಯಾವಾಗ ಶೈವಾದ್ಯಾಗಮಗಳ ಅಪ್ರಮಾಣ್ಯಾನುಮಾನಕ್ಕೆ ಬಾಧವು ಬರುತ್ತದೋ, ಆವಾಗ 'ದೃಷ್ಟಗೇನ ಫಲೇನ ತು' ಎಂಬ ಹೇತುವಿನಿಂದ ಶೈವಾದ್ಯಾಗಮಗಳ ಪ್ರಾಮಾಣ್ಯವನ್ನು ಸಾಧಿಸುವ ಅನುಮಾನವು ನಿರ್ದುಷ್ಟವಾಗುತ್ತದೆ. ಏಕೆಂದರೆ 'ರುದ್ರೋ ವಾವ ಲೋಕಾಧಾರಃ' ಎಂಬ ಶ್ರುತಿ ಮೂಲವಾದ್ದರಿಂದ. ಹೀಗೆ ಶೈವಾದ್ಯಾಗಮಗಳಿಗೆ ಪ್ರಾಮಾಣ್ಯವನ್ನು ಸಮರ್ಥಿಸುವ ಅನುಮಾನಕ್ಕೆ ಪ್ರಾಮಾಣ್ಯವು ಉಪಪನ್ನವಾಗುವುದರಿಂದ ಶೈವಾದ್ಯಾಗಮಗಳನ್ನು ಆಶ್ರಯಿಸಿ ದ್ಯುಭ್ವಾದ್ಯಾಯತನರಾಗಿರುವವರು ರುದ್ರಾದಿಗಳು ಆಗಬಹುದಲ್ಲವೇ ? ಎಂಬ ಪೂರ್ವಪಕ್ಷವು ಪುನಃ ಹುಟ್ಟುತ್ತದೆ.

ಈ ಪೂರ್ವಪಕ್ಷದಲ್ಲಿ ರುದ್ರಾದಿ ಸಮಾಖ್ಯಾಪ್ರಮಾಣಗಳಿಗೆ ವೈಷ್ಣವತ್ವವನ್ನು ಪ್ರತಿಪಾದಿಸಿದಾಗ ಅಪ್ರಾಮಾಣ್ಯಾನುಮಾನವು ನಿರ್ಬಾಧಿತವಾಗುತ್ತದೆ. ಅಂದರೆ ರುದ್ರಾದಿಗಳಿಗೆ ದ್ಯುಭ್ವಾದ್ಯಾಯತನತ್ವವನ್ನು ಸಮರ್ಥಿಸುವ ಶೈವಾದ್ಯಾಗಮಗಳಲ್ಲಿರುವ ರುದ್ರಾದಿ ಶಬ್ದಗಳೆಲ್ಲವೂ ವಿಷ್ಣುವನ್ನೇ ಸಮರ್ಥಿಸುತ್ತವೆಂದು ಸಮರ್ಥಿಸಿದಾಗ ಅಪ್ರಾಮಾಣ್ಯವನ್ನು ಸಾಧಿಸುವ ಅನುಮಾನಕ್ಕೆ ಬಾಧದೋಷವಿಲ್ಲವೆಂದು ಹೇಳಿದಂತಾಗುತ್ತದೆ. ಆವಾಗ ಶೈವಾದ್ಯಾಗಮಗಳ ಆಧಾರದಿಂದ ದ್ಯುಭ್ವಾದ್ಯಾಯತನತ್ವವನ್ನು ರುದ್ರಾದಿಗಳಿಗೆ ಹೇಳಲು ಸಾಧ್ಯವಿಲ್ಲವೆಂದು ನಿರ್ಣಯವಾಗುತ್ತದೆ. ಹೀಗೆ ಶಾಸ್ತ್ರಯೋನಿತ್ವಾಧಿಕರಣದ ಸಿದ್ಧಾಂತದ ಮೇಲೆ ಹೆಚ್ಚಿನ ಆಕ್ಷೇಪವನ್ನು ಮಾಡಲು ಸಾಧ್ಯವಿರುವುದರಿಂದ ಪುನರುಕ್ತಿ ದೋಷಕ್ಕೆ ಅವಕಾಶವಿಲ್ಲವೆಂದು ತಿಳಿಯಬೇಕು.

**प्रकाशः** – "सोऽन्तकस्सरुद्रः" इत्यादिभाष्यं सर्वं सूत्रारूढमिति भावेनाह – **अनेन चेति ।। सूत्रेणेत्यर्थः ।। विष्ण्वादिशब्दानामपि रुद्रादिशब्दत्वं नास्तीति ।।** तथात्वे तच्छब्दाभावादिति सूत्रकारो न ब्रूयादिति भावः ।

ಪರಿಪೂರ್ಣಚಂದ್ರಿಕಾ

'ಸೋಽನ್ತಕಸ್ಸ ರುದ್ರಃ' ಇತ್ಯಾದಿ ಭಾಷ್ಯವನ್ನೆಲ್ಲಾ ಸೂತ್ರಾರೂಢ ಮಾಡುವ ಅಭಿಪ್ರಾಯದಿಂದ 'ಅನೇನ ಚ' ಇತ್ಯಾದಿ ವಾಕ್ಯವು ಹೊರಟಿದೆ. 'ಅನೇನ' ಎಂದರೆ ಸೂತ್ರದಿಂದ ಎಂದರ್ಥ. ರುದ್ರಸಮಾಖ್ಯಾದಲ್ಲಿರುವ ರುದ್ರಾ, ಪಿನಾಕಿ ಮೊದಲಾದ ಶಬ್ದಗಳೆಲ್ಲವೂ ವಿಷ್ಣುವನ್ನೇ ಮುಖ್ಯವಾಗಿ ಪ್ರತಿಪಾದಿಸುತ್ತವೆ. ಮತ್ತು ವಿಷ್ಣು ಸಮಾಖ್ಯಪ್ರಮಾಣದಲ್ಲಿರುವ ವಿಷ್ಣು ಮೊದಲಾದ ಶಬ್ದಗಳು ರುದ್ರಾದಿಗಳನ್ನು ಪ್ರತಿಪಾದಿಸುವುದಿಲ್ಲ. ಹಾಗೇನಾದರೂ ರುದ್ರಾದಿಗಳನ್ನು ವಿಷ್ಣು ಮೊದಲಾದ ಶಬ್ದಗಳು ಪ್ರತಿಪಾದಿಸುವುದಾದಲ್ಲಿ ಸೂತ್ರಕಾರರು 'ಅತಚ್ಛಬ್ದಾತ್' ಎಂದು ಹೇಳುತ್ತಿರಲಿಲ್ಲವೆಂದು ತಿಳಿಯಬೇಕು.

**प्रकाशः** – अनुव्याख्यानोक्तमपि सूत्रांशाभिमतमित्याह – एवञ्चेति ।। समाख्यादिस्थरुद्रपिनाक्यादिशब्दानां विष्णौ मुख्यत्वे सतीत्यर्थः ।

ಅನುವ್ಯಾಖ್ಯಾನದಲ್ಲಿ ಹೇಳಿರುವ 'ಬಾಹುಲ್ಯಂ ಲಿಂಗಶಬ್ದಾನಾಮ್' ಇತ್ಯಾದಿಗಳು ಸೂತ್ರಕ್ಕೆ ಅಭಿಮತವಾಗಿದೆಯೆಂದು 'ಏವಂಚ' ಎಂಬ ವಾಕ್ಯದಿಂದ ಹೇಳುತ್ತಿದ್ದಾರೆ. 'ಏವಂಚ' ಎಂದರೆ ಸಮಾಖ್ಯಾಪ್ರಮಾಣದಲ್ಲಿರುವ ರುದ್ರ, ಪಿನಾಕೀ ಮೊದಲಾದ ಶಬ್ದಗಳು ವಿಷ್ಣುವನ್ನು ಮುಖ್ಯವಾಗಿ ಪ್ರತಿಪಾದನೆ ಮಾಡುವುದಾದರೆ ಎಂದರ್ಥ.

बाहुल्यं लिङ्गशब्दानामनुक्तिश्च विरुद्धता ।
अदृष्टिरन्वयाभावो विपरीतश्रुतिभ्रमः ।।

लिङ्गावकाशराहित्यभ्रमस्तादृग्द्वयं तथा ।
बहुतादृक्त्वमुक्तस्य विरोधोऽर्थात्तथागतिः ।।

समस्तमेतदित्यत्र पूर्वपक्षेषु युक्तयः ।
ता एव बलवत्यस्तु गत्यन्तरविवर्जिताः ।।

सिद्धान्तयुक्तयो ज्ञेया दृश्यन्ते ताश्च सर्वशः ।

ಬಾಹುಲ್ಯಂ ಲಿಂಗಶಬ್ದಾನಾಮನುಕ್ತಿಶ್ಚ ವಿರುದ್ಧತಾ ।
ಅದೃಷ್ಟಿರನ್ವಯಾಭಾವೋ ವಿಪರೀತಶ್ರುತಿಭ್ರಮಃ ॥
ಲಿಂಗಾವಕಾಶರಾಹಿತ್ಯಭ್ರಮಸ್ತಾದೃಗ್ ದ್ವಯಂ ತಥಾ ।
ಬಹುತಾದೃಕ್ತ್ವಮುಕ್ತಸ್ಯ ವಿರೋಧೋಽರ್ಥಾತ್ತಥಾಗತಿಃ ॥
ಸಮಸ್ತಮೇತದಿತ್ಯತ್ರ ಪೂರ್ವಪಕ್ಷೇಷು ಯುಕ್ತಯಃ ।
ತಾ ಏವ ಬಲವತ್ಯಸ್ತು ಗತ್ಯಂತರವಿವರ್ಜಿತಾಃ ॥
ಸಿದ್ಧಾಂತಯುಕ್ತಯೋ ಜ್ಞೇಯಾ ದೃಶ್ಯಂತೇ ತಾಶ್ಚ ಸರ್ವಶಃ ।
ದ್ಯುಭ್ವಾದ್ಯಧಿಕರಣ (೧-೩-೧)

ಈ ಪಾದದಲ್ಲಿರುವ ಪ್ರತಿಯೊಂದು ಅಧಿಕರಣಗಳ ಪೂರ್ವಪಕ್ಷಯುಕ್ತಿಯನ್ನು ಹಾಗೂ ಸಿದ್ಧಾಂತ ಯುಕ್ತಿಯನ್ನು ಅನುವ್ಯಾಖ್ಯಾನದಲ್ಲಿ ಹೀಗೆ ಸಂಗ್ರಹಿಸಿದ್ದಾರೆ -

೧. ಬಾಹುಲ್ಯಂ ಲಿಂಗಶಬ್ದಾನಾಂ - ರುದ್ರನೇ ಮೊದಲಾದವರು ದ್ಯುಭ್ವಾದ್ಯಾಯತನರಾಗಿದ್ದಾರೆನ್ನಲು 'ರುದ್ರೋ ಮಾ ವಿಶಾಂತಕಃ', 'ಪ್ರಾಣೇಶ್ವರಃ ಕೃತ್ತಿವಾಸಾಃ', 'ಮನೋ ವೈ ರುದ್ರಃ', 'ರುದ್ರೋ ವಾವ ಲೋಕಾಧಾರಃ' ಇವೇ ಮೊದಲಾದ ಅನೇಕ ಶ್ರುತಿಗಳು ಅಂತಕತ್ವ, ಪಿನಾಕಿತ್ವ ಮೊದಲಾದ ಲಿಂಗಗಳು ಕಾರಣವಾಗಿವೆ. ಆದ್ದರಿಂದ ದ್ಯುಭ್ವಾದ್ಯಾಯತನತ್ವವು ರುದ್ರನ ಧರ್ಮವಾಗಿದೆಯೆಂದು ಪೂರ್ವಪಕ್ಷ. ಇದನ್ನೇ 'ಬಾಹುಲ್ಯಂ ಲಿಂಗಶಬ್ದಾನಾಮ್' ಎಂಬುದರಿಂದ ಸಂಗ್ರಹಿಸಿದ್ದಾರೆ.

೨. ಅನುಕ್ತಿಃ - ಇದು ಭೂಮಾಧಿಕರಣದ ಪೂರ್ವಪಕ್ಷಯುಕ್ತಿ. ಪ್ರಾಣನಿಗಿಂತ ಮತ್ತೊಬ್ಬ ಶ್ರೇಷ್ಠನು ಇರುತ್ತಾನೆಂದು ಶ್ರುತಿಯಲ್ಲಿ ಹೇಳಿಲ್ಲ. ಆದಕಾರಣ ಪ್ರಾಣನೇ ಭೂಮಶಬ್ದವಾಚ್ಯನಾಗಿದ್ದಾನೆಂಬುದು ಪೂರ್ವಪಕ್ಷಯುಕ್ತಿ.

೩. ವಿರುದ್ಧತಾ - ಇದು ಅಕ್ಷರಾಧಿಕರಣದ ಪೂರ್ವಪಕ್ಷಯುಕ್ತಿ. ಹಿಂದೆ ಬ್ರಹ್ಮನಲ್ಲಿ ಸರ್ವಾತ್ತೃತ್ವಧರ್ಮವನ್ನು ಸಮರ್ಥಿಸಲಾಗಿದೆ. ಅಕ್ಷರಶಬ್ದವಾಚ್ಯನಾದವನು ಪರಬ್ರಹ್ಮನಾದಲ್ಲಿ 'ನ ತದಶ್ನಾತಿ ಕಿಂಚನ' ಎಂದು ಅನತ್ತೃತ್ವ ಧರ್ಮವನ್ನು ಹೇಳಿದ್ದು ವಿರುದ್ಧವಾಗುತ್ತದೆ. ಇದು ಅಕ್ಷರಾಧಿಕರಣದ ಪೂರ್ವಪಕ್ಷ.

೪. ಅದೃಷ್ಟಿಃ - ಇದು ಸದಧಿಕರಣದ ಯುಕ್ತಿ. ಉಪಾದಾನಕಾರಣವನ್ನು ಬಿಟ್ಟು ವಿಕಾರನಾದವನೇ ಜಗತ್ತಿಗೆ ಕಾರಣನಾಗಬೇಕು. ಜಗತ್‌ರೂಪದಲ್ಲಿ ವಿಷ್ಣು ಪರಿಣಾಮವಾಗದ ಕಾರಣ ಜಗತ್‌ಕಾರಣನಾಗಲು ಸಾಧ್ಯವಿಲ್ಲ ಎಂದು ಪೂರ್ವಪಕ್ಷದ ಸಾರ.

೫. ಅನ್ವಯಾಭಾವಃ - ಇದು ದಹರಾಧಿಕರಣದ ಪೂರ್ವಪಕ್ಷ ಯುಕ್ತಿ. ವಿಷ್ಣು ಹೃತ್ಪದ್ಮಸ್ಥಿತನಾಗುವುದಾದರೆ 'ಯಾವಾನ್ ವಾ ಅಯಮ್ ಆಕಾಶಃ' ಎಂಬ ವಾಕ್ಯಕ್ಕೆ ಅನ್ವಯವು ಕೂಡುವುದಿಲ್ಲ.

೬. ವಿಪರೀತಶ್ರುತಿಭ್ರಮಃ - 'ತದೇತದಿತಿ ಮನ್ಯಂತೇ' 'ಕಥಂ ತದ್ವಿಜಾನಿಯಾಂ' ಎಂಬೆರಡು ವಾಕ್ಯಗಳಲ್ಲಿ 'ತತ್' ಮತ್ತು 'ಏತತ್' ಶಬ್ದಗಳಿಂದ ಹಿಂದೆ ಪ್ರಸಕ್ತವಾದ ಜ್ಞಾನಿಸುಖವನ್ನೇ ಪರಾಮರ್ಶ ಮಾಡಬೇಕು. 'ಏಕೋ ವಶೀ' ಎಂಬ ಹಿಂದಿನ ಶ್ರುತಿಯಲ್ಲಿ ಪರಮಾತ್ಮನು ಪ್ರಸ್ತುತನಾಗಿಲ್ಲವೆಂದು ಪೂರ್ವಪಕ್ಷಿಯು ವಿಪರೀತವಾಗಿ ತಿಳಿಯಲ್ಪಟ್ಟ ಶ್ರುತಿಯೇ ಪೂರ್ವಪಕ್ಷ ಸಾಧಕವಾದ ಯುಕ್ತಿಯಾಗಿದೆ. ಇದು ಆರನೆಯ ಅನುಕೃತ್ಯಧಿಕರಣದ ಪೂರ್ವಪಕ್ಷ ಯುಕ್ತಿ.

೭. ಲಿಂಗಾವಕಾಶರಾಹಿತ್ಯ ಭ್ರಮಃ - 'ಊರ್ಧ್ವಂ ಪ್ರಾಣಮ್ ಉನ್ನಯತಿ' ಎಂಬ ಶ್ರುತಿಯಲ್ಲಿ ಪ್ರಾಣವ್ಯವಸ್ಥಾಪಕತ್ವವೆಂಬ ಲಿಂಗಗಳಿಗೆ ವಿಷ್ಣುವಿನಲ್ಲಿ ಅವಕಾಶವಿರುವುದಿಲ್ಲ. ಆದರೆ ಪೂರ್ವಪಕ್ಷಿಯ ತಿಳುವಳಿಕೆಯು ಭ್ರಮೆಯಾದ್ದರಿಂದ 'ಲಿಂಗಾವಕಾಶರಾಹಿತ್ಯ ಭ್ರಮ' ಎಂಬುದು ಪೂರ್ವಪಕ್ಷ ಯುಕ್ತಿಯಾಗಿದೆ. ಇದು ವಾಮನಾಧಿಕರಣದ ಪೂರ್ವಪಕ್ಷ ಯುಕ್ತಿ.

೮.,೯, ಎಂಟನೆಯ ಅಪಶೂದ್ರಾಧಿಕರಣಕ್ಕೆ ಹಾಗೂ ಒಂಬತ್ತನೆಯ ದೇವತಾಧಿಕರಣಕ್ಕೆ ಪೂರ್ವಪಕ್ಷ ಯುಕ್ತಿಯನ್ನು ಹೇಳಿರುವುದಿಲ್ಲ.

ಪರಿಪೂರ್ಣಚಂದ್ರಿಕಾ

೧೦. ದ್ವಯಂ ತಾದೃಕ್ - ನಿರವಕಾಶವಾದ ಉದ್ಯತತ್ವವೆಂಬ ಲಿಂಗ ಹಾಗೂ ವಜ್ರಶಬ್ದ ಇವೆರಡೂ ಸಹ ಪೂರ್ವಪಕ್ಷಗಳ ಯುಕ್ತಿಯೆಂದು ಕಂಪನಾಧಿಕರಣದಲ್ಲಿ ತಿಳಿಯಬೇಕು.

೧೧. ಬಹುತಾದೃಕ್ತ್ವಮ್ - ಹನ್ನೊಂದನೆಯ ಜ್ಯೋತಿರಧಿಕರಣದ ಪೂರ್ವಪಕ್ಷ ಯುಕ್ತಿ. ಆದಿತ್ಯ ಜ್ಯೋತಿಷ್ಟ್ವ, ಚಂದ್ರಜ್ಯೋತಿಷ್ಟ್ವ ಮೊದಲಾದ ಏಳು ಲಿಂಗಗಳಿಗೆ ವಿಷ್ಣುವಿನಲ್ಲಿ ಅವಕಾಶವಿಲ್ಲದಿರುವಿಕೆಯೇ ಪೂರ್ವಪಕ್ಷಪ್ರಾಪಕಯುಕ್ತಿಯಾಗಿದೆ.

೧೨. ಉಕ್ತಸ್ಯವಿರೋಧಃ - ಆಕಾಶ ಶಬ್ದಕ್ಕೆ ರೂಢ್ಯರ್ಥವನ್ನು ಬಿಟ್ಟು ವಿಷ್ಣುಪರವಾದ ಯೌಗಿಕಾರ್ಥವನ್ನು ಹೇಳುವುದರಿಂದ 'ವೈ' 'ನಾಮ' ಎಂಬೆರಡು ನಿಪಾತಗಳಿಗೆ ವಿರೋಧ ಬರುತ್ತದೆ. ಇದು ಆಕಾಶಾಧಿಕರಣದಲ್ಲಿನ ಯುಕ್ತಿ

೧೩. ಅರ್ಥಾತ್ತಥಾಗತಿಃ - ಜೀವೇಶ್ವರರಿಗೆ ಐಕ್ಯವಿರುವ ಕಾರಣ ಅಸಂಗತ್ವಲಿಂಗದಿಂದ ಈಶ್ವರನಲ್ಲಿರುವ ಸ್ವಪ್ನಾದಿದ್ರಷ್ಟೃತ್ವವು ಜೀವನಲ್ಲಿಯೂ ಬರುತ್ತದೆ. ಇದು ಸುಷುಪ್ತ್ಯಧಿಕರಣದ ಪೂರ್ವಪಕ್ಷಿ ಯುಕ್ತಿ.

ಹೀಗೆ ಹದಿಮೂರು ಅಧಿಕರಣಗಳ ಪೂರ್ವಪಕ್ಷ ಯುಕ್ತಿಗಳನ್ನು ತಿಳಿಯಬೇಕು. ಈ ಪೂರ್ವಪಕ್ಷಯುಕ್ತಿಗಳೇ ನಿರವಕಾಶ ಪ್ರಯುಕ್ತವಾಗಿ ಬಲಿಷ್ಠವಾದಾಗ ಸಿದ್ಧಾಂತ ಯುಕ್ತಿಗಳಾಗುತ್ತವೆಂದು ತಿಳಿಯಬೇಕು.

**प्रकाशः** – इत्यनुव्याख्यान इत्यर्थः । अतच्छब्दादिति सर्वशब्दानामन्यत्राभावं वदता गत्यन्तरविवर्जितत्वमुक्तमिति भावः ।

ಹೀಗೆ ಮೇಲೆ ಹೇಳಿದಂತೆ ಅನುವ್ಯಾಖ್ಯಾನದಲ್ಲಿ ಹೇಳಲ್ಪಟ್ಟ ಪೂರ್ವಪಕ್ಷದ ನ್ಯಾಯವನ್ನು ತಿಳಿದುಕೊಳ್ಳಬೇಕು.

'ನಾನುಮಾನಮತಚ್ಛಬ್ದಾತ್' ಎಂಬುದಾಗಿ ಸೂತ್ರದಲ್ಲಿ ರುದ್ರನನ್ನು ಪ್ರತಿಪಾದಿಸುವ ಯಾವುದೇ ಶಬ್ದಗಳು ಇಲ್ಲದ ಕಾರಣ ದ್ಯುಭ್ವಾದ್ಯಾಯತನನಾದವನು ವಿಷ್ಣುವೇ ಆಗಿದ್ದಾನೆಂದು ಹೇಳಿದ್ದಾರೆ. ಹೀಗೆ ಸಕಲ ಶಬ್ದಗಳು ವಿಷ್ಣುವಿನಲ್ಲಿ ಮಾತ್ರ ಉಪಪನ್ನವಾಗುತ್ತವೆ ಹೊರತು, ಬೇರೆ ಕಡೆ ಬರುವುದಿಲ್ಲವೆಂದು ತಿಳಿಸುವುದಕ್ಕಾಗಿ 'ಗತ್ಯಂತರವಿವರ್ಜಿತಾಃ' ಎಂಬ ಪದವನ್ನು ಅನುವ್ಯಾಖ್ಯಾನದಲ್ಲಿ ಹೇಳಿದ್ದಾರೆ.

**प्रकाशः** – नन्वतच्छब्दादित्यस्य तच्छब्दाभावादिति व्याख्यानमयुक्तम् । असामर्थ्येन समासानुपपत्तेः । अतः पररीत्या पर्युदासमाश्रित्य तच्छब्दविरुद्धशब्दादित्येव व्याख्येयमित्यत आह – **अत्र चेति** ।।

ಆಕ್ಷೇಪ - ಸೂತ್ರದಲ್ಲಿ 'ಅತಚ್ಛಬ್ದಾತ್' ಎಂಬ ಪದಕ್ಕೆ 'ತಚ್ಛಬ್ದಾಭಾವಾತ್' ಎಂದು ವ್ಯಾಖ್ಯಾನ ಮಾಡಿದಿರಿ. ಇದು ತಪ್ಪು. ಸಾಮರ್ಥ್ಯವಿಲ್ಲದ ಕಾರಣ ಹೀಗೆ ಸಮಾಸವೇ ಆಗುವುದಿಲ್ಲ. ಅದಕ್ಕೋಸ್ಕರ ಪರರು ಹೇಳುವಂತೆ ಪರ್ಯುದಾಸವನ್ನು ಆಶ್ರಯಿಸಿ 'ತಚ್ಛಬ್ದವಿರುದ್ಧಶಬ್ದಾತ್' ಎಂದೇ ವ್ಯಾಖ್ಯಾನಿಸಬೇಕು.

ಆಕ್ಷೇಪದ ಅಭಿಪ್ರಾಯ ಹೀಗಿದೆ - 'ಅತಚ್ಛಬ್ದಾತ್' ಎಂಬಲ್ಲಿರುವ ನಞ್‌ಗೆ ಎರಡು ಅರ್ಥಗಳನ್ನು ಹೇಳಬಹುದು. ೧. ಪ್ರಸಜ್ಯಪ್ರತಿಷೇಧ, ೨. ಪರ್ಯುದಾಸ ಎಂದು. ಒಂದು ವೇಳೆ ಕ್ರಿಯಾಪದದ ಜೊತೆಗೆ ನಞ್ ಎಂಬುದು ಅನ್ವಯವನ್ನು ಹೊಂದಿದರೆ 'ಪ್ರಸಜ್ಯಪ್ರತಿಷೇಧ' ಎನಿಸುತ್ತದೆ. ಒಂದು ವೇಳೆ ಉತ್ತರಪದದ ಜೊತೆಗೆ ನಞ್ ಅನ್ವಯವನ್ನು ಹೊಂದಿದರೆ 'ಪರ್ಯುದಾಸ' ಎನಿಸುತ್ತದೆ. ಪ್ರಕೃತ 'ಅತಚ್ಛಬ್ದಾತ್' ಎಂಬಲ್ಲಿ ಕೇಳಿಸುತ್ತಿರುವ 'ನಞ್'ಗೆ ತಚ್ಛಬ್ದ ಇಲ್ಲ ಎಂದು ಕ್ರಿಯಾಪದದ ಜೊತೆಗೆ ಅನ್ವಯವನ್ನು ಹೇಳುತ್ತಿದ್ದೀರಿ ಹೊರತು, ಉತ್ತರಪದವೆನಿಸಿದ ತಚ್ಛಬ್ದದ ಜೊತೆಗೆ ಅನ್ವಯವನ್ನು ಹೇಳುತ್ತಿಲ್ಲ. ಹೀಗಿರುವಾಗ ನಞ್‌ಗೂ ತಚ್ಛಬ್ದಕ್ಕೂ ಸಮಾಸ ಮಾಡುವುದು ಹೇಗೆ? ಎಂಬುದು ಆಕ್ಷೇಪದ ಸಾರ. ಆದರೆ ಅದ್ವೈತಿಗಳು ಪ್ರಸಜ್ಯ ಪ್ರತಿಷೇಧವನ್ನು ಮಾಡದೇ ಪರ್ಯುದಾಸವನ್ನು ಆಶ್ರಯಿಸಿದ್ದಾರೆ. ಅಂದರೆ ನಞ್‌ಗೆ ಸಮಾಸದಲ್ಲೇ ಇರುವ ಮುಂದಿನ ಪದದ ಜೊತೆಗೆ ಅನ್ವಯ ಮಾಡಿ 'ತಚ್ಛಬ್ದ' ಭಿನ್ನವಾದದ್ದು ಎಂಬರ್ಥವನ್ನು ಒಪ್ಪಿದ್ದಾರೆ. ನೀವೂ ಸಹ ಅವರಂತೆ ವ್ಯಾಖ್ಯಾನ ಮಾಡಬೇಕಲ್ಲವೇ?

ಈ ಪ್ರಶ್ನೆಗೆ ಗ್ರಂಥಕಾರರು 'ಅತ್ರಚ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ.

**प्रकाशः – प्रसज्येति ।।**

'प्रसज्यप्रतिषेधोऽयं क्रियया सह यत्र नञ् ।
पर्युदासस्स विज्ञेयो यत्रोत्तरपदेन नञ् ।।' इत्युक्तेः ।

ಸಮಾಧಾನ - 'ಅತಚ್ಛಬ್ದಾತ್' ಎಂಬಲ್ಲಿ ಕ್ರಿಯಾಪದದ ಜೊತೆಗೆ 'ನಞ್' ಅನ್ವಯವನ್ನು ಹೊಂದಿದರೂ ಸಹ ಸಮಾಸವು ಸಾಧುವಾಗುತ್ತದೆ. ಅದು ಹೀಗೆ - ಗ್ರಂಥದಲ್ಲಿರುವ 'ಪ್ರಸಜ್ಯಪ್ರತಿಷೇಧ' ಎಂಬ ಮಾತಿನಿಂದ ಈ ಶ್ಲೋಕವನ್ನು ಸ್ಮರಿಸಿಕೊಳ್ಳಬೇಕು.

ಪ್ರಸಜ್ಯಪ್ರತಿಷೇಧೋऽಯಂ ಕ್ರಿಯಯಾ ಸಹ ಯತ್ರ ನಞ್ ।
ಪರ್ಯುದಾಸಸ್ಸ ವಿಜ್ಞೇಯೋ ಯತ್ರೋತ್ತರಪದೇನ ನಞ್ ॥

ನಞ್ ಎಂಬ ಉಪಪದವು ಒಂದು ವೇಳೆ ಕ್ರಿಯೆಯಲ್ಲಿ ಅನ್ವಯವನ್ನು ಹೊಂದಿದರೆ 'ಪ್ರಸಜ್ಯಪ್ರತಿಷೇಧ' ಎನಿಸುತ್ತದೆ. ಉದಾಹರಣೆ - 'ಘಟಃ ನಾಸ್ತಿ' ಎಂಬ ವಾಕ್ಯದಲ್ಲಿ ಕ್ರಿಯಾಪದದ ಜೊತೆಗೆ 'ನಞ್' ಎಂಬುದು ಅನ್ವಯವನ್ನು ಹೊಂದಿರುವುದರಿಂದ ಅಭಾವ ಎಂಬರ್ಥವನ್ನು ಹೇಳಬಹುದು. ಇನ್ನು ಎಲ್ಲಿ 'ನಞ್' ಉತ್ತರ ಪದದ ಜೊತೆಗೆ ಅನ್ವಯವನ್ನು ಹೊಂದುತ್ತದೋ, ಅದನ್ನು ಪರ್ಯುದಾಸವೆಂದು ತಿಳಿಯಬೇಕು. 'ಪರ್ಯುದಾಸ' ಎಂದರೆ ಭೇದ. ಅಂದರೆ, 'ಅಘಟಃ' ಎಂದು ಹೇಳಿದಾಗ 'ನಞ್' ಎಂಬುದು ಸಮಾಸದಲ್ಲೇ ಇರುವ ಮುಂದಿನ ಪದದ ಜೊತೆಗೆ ಅನ್ವಯವನ್ನು ಹೊಂದಿದೆ. ಆದ್ದರಿಂದ ಘಟಕ್ಕಿಂತ ಭಿನ್ನವಾದುದು ಎಂದರ್ಥ.

**प्रकाशः** – सूर्यं न पश्यन्तीत्यसूर्यंपश्याः । ''असूर्यललाटयोर्दृशितपोः'' इति खशि कृते ''खित्यनव्ययस्य । अरुर्द्विषदजन्तस्य मुम्'' इति मुमागमे ''पाघ्राध्मास्थाम्नादाण्दृशि'' इत्यादिना दृशेः पश्यादेशो रूपम् ।

'ಸೂರ್ಯಂ ನ ಪಶ್ಯಂತೀತಿ ಅಸೂರ್ಯಂಪಶ್ಯಾಃ' ಎಂಬುದಾಗಿ ಸಮಾಸವಾಗುತ್ತದೆ. 'ಅಸೂರ್ಯಂ ಪಶ್ಯಾಃ' ಎಂಬ ರೂಪ ನಿಷ್ಪತ್ತಿಯನ್ನು ಹೀಗೆ ತಿಳಿಯಬೇಕು - 'ಅಸೂರ್ಯಲಲಾಟಯೋರ್ದೃಶಿತಪೋಃ' ಎಂಬ ಸೂತ್ರದಲ್ಲಿ 'ಅಸೂರ್ಯ' ಹಾಗೂ 'ಲಲಾಟ' ಎಂಬೆರಡು ಶಬ್ದಗಳಿಗೆ 'ದೃಶಿ' ಹಾಗೂ 'ತಪ' ಎಂಬ ಕ್ರಿಯಾಪದಗಳು ಮುಂದಿರುವಾಗ 'ಖಶ್' ಎಂಬ ಆಗಮ ಬರುತ್ತದೆ. 'ಅಸೂರ್ಯಂಪಶ್ಯಾಃ' 'ಲಲಾಟಂ ತಪಃ' ಎಂಬೆರಡು ಪ್ರಯೋಗಗಳು ಲೋಕದಲ್ಲಿವೆ. ಇದರ ರೂಪನಿಷ್ಪತ್ತಿ ಕ್ರಮ ಹೀಗೆ - ಅಸೂರ್ಯ + ದೃಶ್ ಎಂದಿದ್ದಾಗ ಮೊದಲು 'ಖಷ್' ಪ್ರತ್ಯಯವು ಬಂದು ನಂತರ 'ಖಿತ್ಯನವ್ಯಯಸ್ಯ । ಅರುರ್ದ್ವಿಷದಜಂತಸ್ಯ ಮುಮ್' ಎಂಬ ಸೂತ್ರದಿಂದ 'ಮುಮ್' ಎಂಬ ಆಗಮವು ಬರುತ್ತದೆ. ಅಂದರೆ ಅಸೂರ್ಯ ಶಬ್ದಕ್ಕೆ 'ಖಶ್' ಪ್ರತ್ಯಯ ಬಂದಾಗ, ಅಲ್ಲಿ 'ಖಶ್' ಎಂಬಲ್ಲಿ ಅಕಾರ ಮಾತ್ರ ಉಳಿಯುತ್ತದೆ. ಹಾಗೂ 'ಮುಮ್' ಪ್ರತ್ಯಯದಲ್ಲಿ 'ಮು' ಎಂಬುದು ಮಾತ್ರ ಉಳಿಯುತ್ತದೆ. ಆವಾಗ 'ಅಸೂರ್ಯ + ಅಂ' ಎಂದಾಯಿತು. 'ಯಸ್ಯೇತೀಚ' ಎಂಬ ಸೂತ್ರದಿಂದ ಅಕಾರವು ಲೋಪವಾದರೆ 'ಅಸೂರ್ಯಂ' ಎಂಬ ರೂಪವು ನಿಷ್ಪನ್ನವಾಯಿತು. 'ಪಾಘ್ರಾಧ್ಮಾಸ್ಥಾಮ್ನಾದಾಣ್‍ದೃಶಿ' ಎಂಬ ಸೂತ್ರದಿಂದ ದೃಶಿ ಧಾತುವಿಗೆ 'ಪಶ್ಯ' ಎಂಬ ಆದೇಶವು ಬಂದರೆ 'ಅಸೂರ್ಯಂ ಪಶ್ಯಾಃ' ಎಂಬ ರೂಪವು ನಿಷ್ಪನ್ನವಾಗುತ್ತದೆ.

**प्रकाशः** – श्राद्धं न भुङ्क्ते इत्यश्राद्धभोजी । ''व्रज'' इति सूत्रेण शास्त्रीयनियमरूपे व्रते गम्यमाने सुबन्त उपपदे धातोर्णिनि रूपम् ।

ಇದರಂತೆ 'ಅಶ್ರಾದ್ಧಭೋಜೀ' ಎಂಬ ರೂಪವನ್ನೂ ಸಹ ತಿಳಿಯಬೇಕು. 'ಶ್ರಾದ್ಧಂ ನ ಭುಂಕ್ತೇ ಇತಿ ಅಶ್ರಾದ್ಧಭೋಜೀ' ಎಂದು ಸಮಾಸವಾಗಿದೆ. ಯಾರು ಶ್ರಾದ್ಧದ ಊಟವನ್ನೇ ಮಾಡುವುದಿಲ್ಲವೆಂಬ ನಿಯಮವುಳ್ಳವನಾಗಿರುತ್ತಾನೋ, ಅವನನ್ನು 'ಅಶ್ರಾದ್ಧಭೋಜೀ' ಎಂದು ಕರೆಯುತ್ತಾರೆ. 'ವ್ರಜ' ಎಂಬ ಸೂತ್ರದಿಂದ ಶಾಸ್ತ್ರನಿಯಮವೆಂಬ ವ್ರತವು ಗಮ್ಯಮಾನವಾಗಿರುವಾಗ ಸುಬಂತವು ಉಪಪದವಾದಾಗ ಧಾತುವಿಗೆ 'ಣಿನಿ' ಎಂಬ ಪ್ರತ್ಯಯವು ಬರುತ್ತದೆ. ಪ್ರಕೃತ ಶ್ರಾದ್ಧದ ಊಟವನ್ನು ಮಾಡುವುದಿಲ್ಲವೆಂಬ ಶಾಸ್ತ್ರೀಯನಿಯಮರೂಪವಾದ ವ್ರತವು ಗಮ್ಯಮಾನವಾದ ಪ್ರಯುಕ್ತ 'ಭುಜು' ಧಾತುವಿಗೆ 'ಣಿನಿ' ಪ್ರತ್ಯಯಬಂದರೆ 'ಭೋಜೀ' ಎಂಬ ರೂಪವು ನಿಷ್ಪನ್ನವಾಗುತ್ತದೆ.

**प्रकाशः** – अत्र नञः क्रियासापेक्षत्वेन सूर्यादिपदेनाकाङ्क्षाभावेऽपि समासस्स्वीकृतो ज्ञापकेन । ज्ञापकमाह – **अकर्तरीति** ।।

'ಅಸೂರ್ಯಂ ಪಶ್ಯಾಃ' ಎಂಬಲ್ಲಿ ಮತ್ತು 'ಅಶ್ರಾದ್ಧಭೋಜೀ' ಎಂಬಲ್ಲಿ 'ನಞ್' ಕ್ರಿಯಾಸಾಪೇಕ್ಷವಾಗಿದ್ದರೂ ಸಮಾಸ ಮಾಡಿದ್ದು ಕಾಣಸುತ್ತಿದೆ. ಅಂದರೆ ನಞ್‍ಗೆ ಮುಂದಿರುವ ಸೂರ್ಯಪದದಿಂದಾಗಲೀ ಶ್ರಾದ್ಧಪದದಿಂದಾಗಲೀ ಆಕಾಂಕ್ಷೆಯು ಇರುವುದಿಲ್ಲ. ಆದರೂ ಸಹ ವೈಯ್ಯಾಕರಣರು ಸಮಾಸವನ್ನು ಒಪ್ಪಿದ್ದಾರೆ. ಈ ವಿಷಯದಲ್ಲಿ ಜ್ಞಾಪಕವನ್ನು 'ಅಕರ್ತರಿ' ಎಂಬ ವಾಕ್ಯದಿಂದ ಗ್ರಂಥಕಾರರು ಹೇಳುತ್ತಿದ್ದಾರೆ.

**प्रकाशः** – तृतीयाध्यायस्य तृतीयपादे कर्तृवर्जितेऽन्यस्मिन्कारके सञ्ज्ञायां विषये धातोर्घञ्प्रत्ययो भवति । चकारादसञ्ज्ञायां च । प्रास्यन्ति तमिति प्रास

इत्यादिसिद्ध्यर्थम् । तत्र सूत्रेऽकर्तरीति किं पर्युदासः किं वा प्रसज्यप्रतिषेध इति विचारे पर्युदासपक्षे नञिवयुक्तन्यायेन कर्तृभिन्नस्य कर्तृसदृशस्य कारकस्यैव ग्रहणसम्भवात् कारकपदं व्यर्थम् । तत्क्रियते । तेन ज्ञायतेऽकर्तरीति न पुर्यदासः । किं तु प्रसज्यप्रतिषेध इति । तथाच प्रसज्यप्रतिषेधेऽपि समासोऽस्तीति ज्ञापनाय कारकपदमिति ।

ಮೂರನೇ ಅಧ್ಯಾಯದ, ಮೂರನೇ ಪಾದದಲ್ಲಿ 'ಅಕರ್ತರಿ ಚ ಕಾರಕೇ ಸಂಜ್ಞಾಯಾಮ್' ಎಂಬ ಸೂತ್ರವಿದೆ. ಈ ಸೂತ್ರದಲ್ಲಿ ಕರ್ತೃಭಿನ್ನವಾದ ಬೇರೆ ಕಾರಕಗಳಲ್ಲಿ ಸಂಜ್ಞೆಯು ವಿಷಯವಾಗಿದ್ದರೆ ಧಾತುವಿಗೆ 'ಘಞ್' ಪ್ರತ್ಯಯವನ್ನು ವಿಧಾನ ಮಾಡಲಾಗಿದೆ. ಸೂತ್ರದಲ್ಲಿರುವ 'ಚ' ಶಬ್ದದಿಂದ ಸಂಜ್ಞೆಯು ವಿಷಯವಾಗದಿದ್ದಾಗಲೂ 'ಘಞ್' ಪ್ರತ್ಯಯ ಬರುತ್ತದೆಂದು ತಿಳಿಸಲಾಗಿದೆ. ಆದ್ದರಿಂದಲೇ 'ಪ್ರಾಸಂತಿ ತಮ್ ಇತಿ ಪ್ರಾಸಃ' 'ಎಸೆಯಲ್ಪಡುವಂತಹ ವಸ್ತು 'ಪ್ರಾಸ' ಎನಿಸುತ್ತದೆ' ಎಂಬುದಾಗಿ 'ಪ್ರಾಸ' ಶಬ್ದವು 'ಘಞ್' ಪ್ರತ್ಯಯಾಂತವಾಗಿ ನಿಷ್ಪನ್ನವಾಗುತ್ತದೆ. ಇದು ಕರ್ಮಾರ್ಥಕವಾಗಿದೆ.

ಈ ಸೂತ್ರದಲ್ಲಿ 'ಅಕರ್ತರಿ' ಎಂಬಲ್ಲಿರುವ 'ನಞ್' ಎಂಬುದು ಪರ್ಯುದಾಸಾರ್ಥದಲ್ಲಿದೆಯೋ? ಅಥವಾ ಪ್ರಸಜ್ಯಪ್ರತಿಷೇಧಾರ್ಥದಲ್ಲಿದೆಯೋ? ಎಂಬ ವಿಚಾರವು ಪ್ರಾಪ್ತವಾದರೆ ಪರ್ಯುದಾಸ ಪಕ್ಷವನ್ನು ವಿವಕ್ಷಿಸಬಾರದು. ಹಾಗೇ ಪರ್ಯುದಾಸವೆಂದು ವಿವಕ್ಷಿಸಿದರೆ ಕರ್ತೃಭಿನ್ನವಾದ ಕಾರಕ ಎಂದರ್ಥವಾಗುತ್ತದೆ. ಏಕೆಂದರೆ 'ನಞಿವಯುಕ್ತಂ ತದ್ಭಿನ್ನೇ, ತದ್‌ಸದೃಶೇ ವರ್ತತೇ ತಥಾ ಹ್ಯರ್ಥಗತಿಃ' ನಞ್‌ನಿಂದ ಅಥವಾ 'ಇವ'ದಿಂದ ಕೂಡಿದ ಪದವು ಅದರಿಂದ ಭಿನ್ನವಾದದ್ದನ್ನು ಮತ್ತು ತತ್‌ಸದೃಶವಾದದ್ದನ್ನು ತಿಳಿಸುತ್ತದೆಂದು ಪರಿಭಾಷೆ. ಉದಾಹರಣೆ ಹೀಗಿದೆ - 'ಅಬ್ರಾಹ್ಮಣಃ' ಎಂದರೆ ಬ್ರಾಹ್ಮಣಭಿನ್ನನು ಅಥವಾ ಬ್ರಾಹ್ಮಣಸದೃಶನು ಎಂದರ್ಥ. ಅದರಂತೆ ಪ್ರಕೃತದಲ್ಲಿ 'ಅಕರ್ತರಿ' ಎಂದರೆ ಕರ್ತೃಭಿನ್ನವಾದ ಮತ್ತು ಕರ್ತೃಸದೃಶವಾದ ಕಾರಕ ಎಂದು ತಿಳಿಯುತ್ತದೆ. ಹೀಗೆ ಸೂತ್ರದಲ್ಲಿ 'ಕಾರಕೇ' ಎಂಬ ಪದವನ್ನು ಹೇಳದಿದ್ದರೂ 'ಅಕರ್ತರಿ' ಎಂಬ ಪದದಿಂದಲೇ ಕಾರಕವು ಜ್ಞಾತವಾಗುತ್ತದೆ. ಆದರೂ ಸಹ 'ಕಾರಕೇ' ಎಂದು ಗ್ರಹಣ ಮಾಡಿದ್ದರಿಂದ ಇದು ಪರ್ಯುದಾಸವಲ್ಲ; ಹೊರತು ಪ್ರಸಜ್ಯಪ್ರತಿಷೇಧವೆಂದು ಸ್ಪಷ್ಟವಾಗುತ್ತದೆ. ಪ್ರಸಜ್ಯಪ್ರತಿಷೇಧಾರ್ಥದಲ್ಲಿಯೂ ನಞ್‌ಸಮಾಸವಾಗುತ್ತದೆಂದು ತಿಳಿಸುವುದಕ್ಕಾಗಿಯೇ ಪಾಣಿನಿಯು 'ಕಾರಕೇ' ಎಂಬ ಪದವನ್ನು ಸೂತ್ರದಲ್ಲಿ ಹೇಳಿರುತ್ತಾರೆ.

**प्रकाशः** – अत एव ''आदेच उपदेशेऽशिति'' इति सौत्रनिर्देशो युक्तः । उपदेश एच आत्वं भवति । शिति तु शकारेत्सञ्ज्ञकप्रत्यये परतो न भवतीति प्रसज्यप्रतिषेधार्थत्वस्य तत्राभिमतत्वात् । पर्युदासत्वे तु शितोऽन्यत्राच्प्रभृति-प्रत्यये परत एच आत्वं भवतीत्यर्थप्राप्त्या 'सुग्लः' 'सुम्लः' इत्यादौ ''आतश्चोपसर्गे'' इति कप्रत्ययो न स्यात् । व्यक्तमेतत्सर्वं वृत्त्यादौ ।

ಪರಿಪೂರ್ಣಚಂದ್ರಿಕಾ

ಪ್ರಸಜ್ಯ ಪ್ರತಿಷೇಧಾರ್ಥದಲ್ಲಿಯೂ ನಞ್ ಸಮಾಸವಾಗಬಹುದೆಂಬುದಕ್ಕೆ ಮತ್ತೊಂದು ಉದಾಹರಣೆ - 'ಆದೇಚ ಉಪದೇಶೇಽಶಿತಿ' ಎಂಬ ಸೂತ್ರ. ಈ ಸೂತ್ರದ ನಿರ್ದೇಶದಿಂದಲೂ ಮೇಲೆ ಹೇಳಿದ ವಿಷಯವು ಮತ್ತಷ್ಟು ಸ್ಪಷ್ಟವಾಗಿ ಯುಕ್ತವಾಗುತ್ತದೆ. 'ಏ, ಓ, ಐ, ಔ' ಅಕ್ಷರಗಳೇ ಕೊನೆಯಾಗಿ ಉಳ್ಳ ಯಾವ ಧಾತುವು ಉಪದೇಶದಲ್ಲಿ (ಧಾತುಪಾಠದಲ್ಲಿ) ವಿಹಿತವಾಗಿದೆಯೋ ಆ ಧಾತುಗಳ, ಕೊನೆಯಲ್ಲಿರುವ 'ಏಚ್' ಎಂದರೆ (ಏ, ಓ, ಐ, ಔ) ಅಕ್ಷರಗಳಿಗೆ 'ಆತ್' ಎಂಬುದು ಬರುತ್ತದೆ. ಈ ಸೂತ್ರದಲ್ಲಿ 'ಅಶಿತಿ' ಎಂದು ಹೇಳಿದ್ದಾರೆ. ಇದಕ್ಕೆ 'ಶಿತ್'ಭಿನ್ನವಾದ ಪ್ರತ್ಯಯವೆಂದು ಪರ್ಯುದಾಸವನ್ನು ಆಶ್ರಯಿಸಬೇಕೋ? ಅಥವಾ ಶಿತ್ತಾದ ಪ್ರತ್ಯಯವಿದ್ದರೆ ಆತ್ವವು ಬರುವುದಿಲ್ಲವೆಂದು ಪ್ರಸಜ್ಯಪ್ರತಿಷೇಧಾರ್ಥವನ್ನು ಮಾಡಬೇಕೋ? ಎಂಬ ವಿಚಾರವು ಪ್ರಾಪ್ತವಾಗುತ್ತದೆ. ಶಕಾರವೇ 'ಇತ್' ಸಂಜ್ಞೆಯಾಗಿವುಳ್ಳ ಪ್ರತ್ಯಯವು ಪರದಲ್ಲಿದ್ದಾಗ ಆತ್ವವು ಬರುವುದಿಲ್ಲವೆಂಬ ಪ್ರಸಜ್ಯಪ್ರತಿಷೇಧಾರ್ಥವನ್ನು ವೈಯ್ಯಾಕರಣರು ಒಪ್ಪಿದ್ದಾರೆ. ಹೊರತು ಪರ್ಯುದಾಸ ಪಕ್ಷವನ್ನು ಒಪ್ಪಿರುವುದಿಲ್ಲ. ಹಾಗೇನಾದರೂ ಪರ್ಯುದಾಸಾರ್ಥವನ್ನು ನಞ್‌ಗೆ ಹೇಳಿದರೆ 'ಶಿತ್'ಭಿನ್ನವಾದ 'ಅಚ್' ಮೊದಲಾದ ಯಾವುದೇ ಪ್ರತ್ಯಯಗಳು ಪರದಲ್ಲಿದ್ದಾಗ ಆತ್ವವು ಬರುತ್ತದೆಂದು ಸೂತ್ರದ ಅರ್ಥವಾಯಿತು. ಆವಾಗ 'ಸುಗ್ಲಃ, ಸುಮ್ಲಃ' ಇತ್ಯಾದಿ ಸ್ಥಳಗಳಲ್ಲಿ 'ಆತಶ್ಚೋಪಸರ್ಗೇ' ಎಂಬ ಸೂತ್ರದಿಂದ 'ಕ' ಪ್ರತ್ಯಯವನ್ನು ಹೇಳದೇ ಇರಬೇಕಾದೀತು.

'ಗ್ಲೈ' ಅಥವಾ 'ಮ್ಲೈ' ಧಾತುಗಳಿಗೆ 'ಆದೇಶ ಅಶಿತಿ' ಎಂಬ ಸೂತ್ರದಿಂದ ಆತ್ವವು ಬರುತ್ತದೆ. ಅನಂತರ 'ಗ್ಲೈ' ಎಂಬಲ್ಲಿರುವ 'ಐ' ಅಕ್ಷರಕ್ಕೆ ಆತ್ವವು ಪ್ರಾಪ್ತವಾದರೆ 'ಗ್ಲಾ' ಎಂದಾಗುತ್ತದೆ. ಅನಂತರ ಆಕಾರವೇ ಅಂತವಾಗಿವುಳ್ಳ ಧಾತು ಉಪಸರ್ಗ ಸಹಿತವಾದಾಗ 'ಆತಶ್ಚೋಪಸರ್ಗೇ' ಎಂಬ ಸೂತ್ರವು 'ಕ' ಎಂಬ ಪ್ರತ್ಯಯವನ್ನು ವಿಧಿಸುತ್ತದೆ. ಒಂದು ವೇಳೆ 'ಆದೇಚ ಉಪದೇಶೇಽಶಿತಿ' ಎಂಬ ಸೂತ್ರದಲ್ಲಿರುವಾಗ 'ಅಶಿತಿ' ಎಂಬ ಪದಕ್ಕೆ ಶಿತ್‌ಭಿನ್ನವಾದ ಪ್ರತ್ಯಯವು ಪರದಲ್ಲಿದ್ದಾಗ ಎಂದು ಪರ್ಯುದಾಸ ಮಾಡಿದರೆ 'ಆತ್ವ' ಬರುವ ಮೊದಲು ಯಾವುದೇ ಪ್ರತ್ಯಯವು ಪರದಲ್ಲಿ ಇಲ್ಲದ ಕಾರಣ 'ಗ್ಲೈ' ಎಂಬಲ್ಲಿರುವ 'ಐ' ಕಾರಕ್ಕೆ ಆತ್ವವು ಹೇಗೆ ಬರುತ್ತದೆ? ಆತ್ವವೇ ಬಾರದಿದ್ದಾಗ 'ಆತಶ್ಚೋಪಸರ್ಗೇ' ಎಂಬ ಸೂತ್ರದಿಂದ 'ಕ' ಪ್ರತ್ಯಯವಾದರೂ ಸಹ ಹೇಗೆ ಬರಲು ಸಾಧ್ಯ? ಆದ್ದರಿಂದ ಪರ್ಯುದಾಸಪಕ್ಷವನ್ನು ಆಶ್ರಯಿಸಬಾರದು. ಪ್ರಸಜ್ಯಪ್ರತಿಷೇಧಾರ್ಥವನ್ನು ಸ್ವೀಕರಿಸಿದರೆ ಈ ಸಮಸ್ಯೆ ಇಲ್ಲ. 'ಶಿತಿ ತು ನಭವತಿ' ಎಂದು ವಿವಕ್ಷಿಸಿದಾಗ ಶಿತ್ತಾದ ಪ್ರತ್ಯಯ ಪರದಲ್ಲಿದ್ದರೆ 'ಆತ್ವ' ಬರುವುದಿಲ್ಲವೆಂದಷ್ಟೇ ಸೂತ್ರಕ್ಕೆ ಅರ್ಥ. ಶಿತ್‌ಭಿನ್ನವಾದ ಪ್ರತ್ಯಯವಿದ್ದರೆ 'ಆತ್ವ' ಬರುತ್ತದೆ ಎಂದರ್ಥವಲ್ಲ. ಆದ್ದರಿಂದ 'ಗ್ಲೈ' ಎಂಬ ಧಾತುವಿಗೆ ಮುಂದೆ ಯಾವುದೇ ಪ್ರತ್ಯಯವಿಲ್ಲದಿದ್ದರೂ ಸಹ ಆಕಾರವನ್ನು ಹೇಳಬಹುದು. ಅನಂತರ 'ಆತಶ್ಚೋಪಸರ್ಗೇ' ಎಂಬ ಸೂತ್ರದಿಂದ ಕಪ್ರತ್ಯಯವನ್ನು ಹೇಳಬಹುದು. ಈ ಎಲ್ಲಾ ವಿಷಯಗಳು ಕಾಶಿಕಾ ವೃತ್ತಿ ಮೊದಲಾದವುಗಳಲ್ಲಿ ಸ್ಪಷ್ಟವಾಗಿ ಹೇಳಿರುತ್ತಾರೆ.

**प्रकाशः** – **अव्ययीभावेति** ।। तस्य शब्दस्तच्छब्दः तच्छब्दस्याभावोऽतच्छब्दम् । ''अव्ययं विभक्तिसमीपसमृद्धिव्यृद्ध्यर्थाभावात्ययासम्प्रतिशब्दप्रादुर्भावपश्चाद्यथानुपूर्व्ययौगपद्यसादृश्यसम्पत्तिसाकल्यान्तवचनेषु'' इति सूत्रेऽर्था-

भावे वर्तमानं यदव्ययं तदुत्तरपदेन समस्यते स समासोऽव्ययीभाव इति विधानादिहाभावार्थकस्य नञ उत्तरपदेन समासः । यथा मक्षिकाणामभावो निर्मक्षिकम् । विवादस्याभावोऽविवादमित्यादौ तथेत्यर्थः ।

ಅಥವಾ ಮತ್ತೊಂದು ಬಗೆಯಲ್ಲಿ 'ಅತಚ್ಛಬ್ದಾತ್' ಎಂಬುದರ ಸಾಧುತ್ವವನ್ನು ತಿಳಿಯಬಹುದು. ತಸ್ಯ ಶಬ್ದಃ 'ತಚ್ಛಬ್ದಃ', ತಚ್ಛಬ್ದಸ್ಯಾಭಾವಃ 'ಅತಚ್ಛಬ್ದಮ್' ತಸ್ಮಾತ್ 'ಅತಚ್ಛಬ್ದಾತ್' ಎಂಬುದಾಗಿ ಅವ್ಯಯೀಭಾವ ಸಮಾಸ. 'ಅವ್ಯಯಂ ವಿಭಕ್ತಿ ಸಮೀಪ, ಸಮೃದ್ಧಿ, ವ್ಯದ್ಧ್ಯರ್ಥಾಭಾವ, ಅತ್ಯಯ, ಅಸಂಪ್ರತಿಶಬ್ದ, ಪ್ರಾದುರ್ಭಾವ, ಪಶ್ಚಾದ್ಯಥಾನುಪೂರ್ವ್ಯಯೌಗಪದ್ಯ, ಸಾದೃಶ್ಯ, ಸಂಪತ್ತಿ, ಸಾಕಲ್ಯಾಂತ ವಚನೇಷು' ಎಂಬ ಸೂತ್ರದಲ್ಲಿ ಅರ್ಥಾಭಾವ ಎಂಬರ್ಥದಲ್ಲಿ ಯಾವ ಅವ್ಯಯ ಇರುತ್ತದೋ ಅದು ಉತ್ತರಪದದ ಜೊತೆಗೆ ಸಮಾಸವನ್ನು ಹೊಂದುತ್ತದೆ. ಇದನ್ನೇ ಅವ್ಯಯೀಭಾವ ಸಮಾಸವೆನ್ನುತ್ತಾರೆ ಎಂಬುದಾಗಿ ಅಭಾವಾರ್ಥದಲ್ಲಿರುವ ನಞ್‌ಗೆ ಉತ್ತರಪದದ ಜೊತೆಗೆ ಸಮಾಸವನ್ನು ವಿಧಿಸಲಾಗಿದೆ. ಆದ್ದರಿಂದ 'ಮಕ್ಷಿಕಾಣಾಮಭಾವಃ ನಿರ್ಮಕ್ಷಿಕಮ್', 'ವಿವಾದಸ್ಯ ಅಭಾವಃ ಅವಿವಾದಮ್' ಎಂದು ಸಮಾಸ ಮಾಡುವಂತೆ ಇಲ್ಲಿಯೂ 'ತಚ್ಛಬ್ದಸ್ಯಃ ಅಭಾವಃ' 'ಅತಚ್ಛಬ್ದಮ್' ಎಂಬುದಾಗಿ ಅವ್ಯಯೀಭಾವ ಸಮಾಸವನ್ನು ಮಾಡಬಹುದು.

**प्रकाशः** – ''विष्णावेवाऽत्मशब्दस्य रूढत्वान्न शिवादिकान् । श्रुतिर्वक्ति'' इत्येतत्पादीयानुव्याख्याने । तथा -

'आत्मशब्दं यतो हेतुं कृत्वा जीवं न्यवारयत् ।
स्वशब्दात्प्राणभृच्चैव नोक्त इत्येव वेदराट् ॥'

इति चतुर्थाध्यायाद्यपादीयानुव्याख्याने च ''स्वशब्दपर्यायाऽत्मशब्दाच्च न प्रकृतिजीवावभिधीयेते'' इति विष्णुतत्वनिर्णये च ''तेभ्यश्शिवादिभ्योऽन्यदतद्ब्रह्म । तस्य शब्दोऽतच्छब्दः'' इत्येतत्पादीयसुधोक्तदिशाऽर्थान्तरस्योक्तत्वात्तत्र च शब्ददोषाभाव इति भावेन 'भाष्ये' इत्युक्तम् ।

ಇಲ್ಲಿ ಮಾತ್ರ ಪ್ರಸಜ್ಯಪ್ರತಿಷೇಧಾರ್ಥದಲ್ಲಿ ಸಮಾಸವನ್ನು ಮಾಡಬೇಕೆಂದು ಹೇಳುತ್ತಿದ್ದಾರೆ. ಆದರೆ ಅನುವ್ಯಾಖ್ಯಾನ, ವಿಷ್ಣುತತ್ವವಿನಿರ್ಣಯ ಹಾಗೂ ನ್ಯಾಯಸುಧೆಗಳಲ್ಲಿ ಪರ್ಯುದಾಸಪಕ್ಷವನ್ನೇ ಆಶ್ರಯಿಸಿದ್ದಾರೆ. ಈ ಪ್ರಕೃತ ಈ ಅಧಿಕರಣದ ಅನುವ್ಯಾಖ್ಯಾನದಲ್ಲಿ 'ವಿಷ್ಣಾವೇವಾತ್ಮಶಬ್ದಸ್ಯ ರೂಢತ್ವಾನ್ನ ಶಿವಾದಿಕಾನ್ । ಶ್ರುತಿರ್ವಕ್ತಿ' ಆತ್ಮಶಬ್ದವು ವಿದ್ವದ್ರೂಢಿಯಿಂದ ವಿಷ್ಣುವಿನಲ್ಲೇ ಪ್ರಸಿದ್ಧವಾಗಿದೆ. ಆದ್ದರಿಂದ 'ಯಸ್ಮಿನ್‌ದ್ಯೌಃ' ಎಂಬ ಶ್ರುತಿಯು ರುದ್ರಾದಿಗಳನ್ನು ಹೇಳುವುದಿಲ್ಲ ಎಂಬುದಾಗಿ ಹೇಳಿದ್ದಾರೆ. ಇದರಂತೆ ನಾಲ್ಕನೆಯ ಅಧ್ಯಾಯದ ಪ್ರಥಮಪಾದದಲ್ಲಿರುವ 'ಆತ್ಮೇತಿ ತೂಪಗಚ್ಛಂತಿ' ಎಂಬ ಸೂತ್ರದ ಅನುವ್ಯಾಖ್ಯಾನದಲ್ಲಿ ಹೀಗೆ ಹೇಳಿದ್ದಾರೆ. 'ಆತ್ಮಶಬ್ದಂ ಯತೋ ಹೇತುಂ ಕೃತ್ವಾ ಜೀವಂ ನ್ಯವಾರಯತ್ ।

ಸ್ವಶಬ್ದಾತ್ಪ್ರಾಣಭೃಚ್ಚೈವ ನೋಕ್ತ ಇತ್ಯೇವ ವೇದರಾಟ್ ॥' ಯಾವ ಕಾರಣದಿಂದ ದ್ಯುಭ್ವಾದ್ಯಧಿಕರಣದಲ್ಲಿ 'ಸ್ವಶಬ್ದಾತ್' ಎಂಬ ಸೂತ್ರದಿಂದ 'ಪ್ರಾಣಭೃಚ್ಚ' ಎಂಬ ಸೂತ್ರದಿಂದ ಆತ್ಮಶಬ್ದವನ್ನೇ ಹೇತುವನ್ನಾಗಿ ಮಾಡಿ ಜೀವಾದಿಗಳನ್ನು ನಿರಾಕರಿಸಿದ್ದಾರೋ, ಆದ್ದರಿಂದ ಆತ್ಮಶಬ್ದಕ್ಕೆ ಜೀವನೆಂಬರ್ಥವನ್ನು ಸ್ವೀಕರಿಸಲು ಹೇಗೆ ಸಾಧ್ಯ ? ಎಂದು. ಮತ್ತು ವಿಷ್ಣುತತ್ವವಿನಿರ್ಣಯದಲ್ಲಿ 'ಸ್ವಶಬ್ದಪರ್ಯಾಯಾತ್ಮಶಬ್ದಾಚ್ಚ ನ ಪ್ರಕೃತಿ-ಜೀವಾವಭಿಧೀಯೇತೇ' ಸ್ವಶಬ್ದದ ಪರ್ಯಾಯಪದವಾದ ಆತ್ಮಶಬ್ದವು ಪ್ರಯುಕ್ತವಾದ್ದರಿಂದ ಪ್ರಕೃತಿ, ಜೀವರು ಪ್ರತಿಪಾದ್ಯರಲ್ಲ ಎಂದು ಹೇಳಿದ್ದಾರೆ. ನ್ಯಾಯಸುಧೆಯಲ್ಲಿಯೂ ಸಹ 'ತೇಭ್ಯಶ್ಶಿವಾದಿಭ್ಯೋಽನ್ಯದತದ್ಬ್ರಹ್ಮ । ತಸ್ಯ ಶಬ್ದೋಽತಚ್ಛಬ್ದಃ' ಎಂಬುದಾಗಿ ಹೇಳಿದ್ದಾರೆ.

ಈ ಮೂರು ಗ್ರಂಥಗಳ ಅಭಿಪ್ರಾಯ ಹೀಗಿದೆ - 'ತತ್' ಎಂದರೆ 'ಶಿವಾದಿಗಳು' ಎಂದರ್ಥ. 'ಅತತ್' ಎಂದರೆ ಶಿವಾದಿಗಳಿಗಿಂತ ಭಿನ್ನನಾದ ಬ್ರಹ್ಮನೆಂದರ್ಥ, 'ಅತಚ್ಛಬ್ದಾತ್' ಎಂದರೆ ಬ್ರಹ್ಮಪ್ರತಿಪಾದಕವಾದ ಶಬ್ದಗಳಷ್ಟೇ ಪ್ರಕರಣದಲ್ಲಿವೆ ಎಂಬರ್ಥವನ್ನು ವಿವಕ್ಷಿಸಬೇಕೆಂದು ಅಭಿಪ್ರಾಯ. ಆದ್ದರಿಂದ ಪ್ರಕೃತ ಗ್ರಂಥಕಾರರು 'ಭಾಷ್ಯೇ' ಎಂದು ಹೇಳಿದ್ದಾರೆ. ಅಂದರೆ ಅನುವ್ಯಾಖ್ಯಾನ ಮೊದಲಾದವುಗಳಿಗೆ ಪರ್ಯುದಾಸಪಕ್ಷವು ಸಮ್ಮತವಾಗಿದ್ದರೂ ಸಹ ಪ್ರಕೃತ ಭಾಷ್ಯದಲ್ಲಿ ಪ್ರಸಜ್ಯಪ್ರತಿಷೇಧಾರ್ಥವನ್ನು ಇಟ್ಟುಕೊಂಡಿದ್ದಾರೆ. ಇದಕ್ಕೆ ಕಾರಣವನ್ನಷ್ಟೇ ಮೇಲೆ ಹೇಳಿದ ಪ್ರಕಾರದಲ್ಲಿ ತಿಳಿದುಕೊಳ್ಳಬೇಕು.

**प्रकाशः** – अर्थान्तरपक्षे ''अतद्धर्माभिलापात्'' इत्यत्र परमतेऽभिहितरीत्या स्वशब्दादित्यनेन पौनरुक्त्यदोषस्तु अन्यत्र सिद्धान्तसाधकस्यैव पूर्वपक्षनिरासेऽपि हेतुत्वं द्रष्टव्यम् तेन न न्यूनतादोष इत्येतत्प्रदर्शयितुम् ''सिद्धान्तसाधकस्यैव पूर्वपक्षनिरासेऽपि व्यापारं दर्शयितुमिदं सूत्रम्'' इति सुधोक्तदिशा प्रयोजन-विशेषवत्त्वान्निराकर्तव्य इति भावः ।

'ಅತದ್ಧರ್ಮಾಭಿಲಾಪಾತ್' ಎಂಬ ಸೂತ್ರದಲ್ಲಿ ಪರ್ಯುದಾಸಪಕ್ಷವನ್ನು ಆಶ್ರಯಿಸಿ ಸಿದ್ಧಾಂತ ಸಾಧಕವಾದ ಹೇತುವೇ ಪೂರ್ವಪಕ್ಷದ ನಿರಾಕರಣೆಗೂ ಸಾಧಕವಾಗಿದೆಯೆಂದು ಹೇಳಿರುತ್ತಾರೆ. ಅದರಂತೆ ಇಲ್ಲಿ ತಿಳಿಯಬೇಕು. ಹಾಗಾದರೆ 'ಅತಚ್ಛಬ್ದಾತ್' ಎಂಬುದರಿಂದ ಆತ್ಮಶಬ್ದವಿರುವುದರಿಂದ ಎಂಬರ್ಥವನ್ನೇ ಹೇಳಿದಂತಾಯಿತು. ಪ್ರಥಮಸೂತ್ರದಲ್ಲಿ 'ಸ್ವಶಬ್ದಾತ್' ಎಂಬ ಹೇತುವಿನಿಂದ ಹೇಳಿದ್ದನ್ನೇ ಈ ಸೂತ್ರದಲ್ಲಿಯೂ ಸಹ ಹೇಳಿದಂತಾಗಿ ಪುನರುಕ್ತಿ ದೋಷವು ಬರುತ್ತದಲ್ಲವೇ? ಎಂದರೆ ಹೀಗೆ ಹೇಳುವುದರಿಂದ ಸೂತ್ರಕಾರರು ಒಂದು ಪ್ರಮೇಯವನ್ನು ತಿಳಿಸಿದ್ದಾರೆ. ಪ್ರತಿಯೊಂದು ಅಧಿಕರಣಗಳಲ್ಲಿಯೂ ಯಾವ ಹೇತು ಸಿದ್ಧಾಂತ ಸಾಧಕವಾಗಿರುತ್ತದೋ, ಅದೇ ಹೇತು ಪೂರ್ವಪಕ್ಷದ ನಿರಾಕರಣೆಗೂ ಹೇತುವಾಗಿರುತ್ತದೆಂದು ತಿಳಿಯಬೇಕು. ಆದ್ದರಿಂದ ಒಂದು ವೇಳೆ ಪೂರ್ವಪಕ್ಷನಿರಾಸಯುಕ್ತಿಯನ್ನು ಹೇಳರದಿದ್ದರೆ ನ್ಯೂನತಾರೂಪದೋಷವನ್ನು ಚಿಂತನೆ ಮಾಡಬಾರದು ಎಂದು ಸೂತ್ರಕಾರರ ಅಭಿಪ್ರಾಯ. ಈ ವಿಚಾರವನ್ನು ತಿಳಿಸುವುದಕ್ಕಾಗಿಯೇ ಪ್ರಥಮಸೂತ್ರದಲ್ಲಿ ಹೇಳಲ್ಪಟ್ಟ ಆತ್ಮಶಬ್ದವೆಂಬ ಹೇತುವನ್ನು ಪೂರ್ವಪಕ್ಷನಿರಾಸದ ಸಂದರ್ಭದಲ್ಲಿ 'ಅತಚ್ಛಬ್ದಾತ್' ಎಂಬುದರಿಂದ ಹೇಳಲಾಗಿದೆ. ನ್ಯಾಯಸುಧೆಯಲ್ಲಿಯೂ 'ಸಿದ್ಧಾಂತಸಾಧಕಸ್ಯೈವ ಪೂರ್ವಪಕ್ಷನಿರಾಸೇಽಪಿ ವ್ಯಾಪಾರಂ ದರ್ಶಯಿತುಮಿದಂ ಸೂತ್ರಮ್' ಎಂದು ಹೇಳಿದ್ದಾರೆ. ಅದನ್ನು ಇಲ್ಲಿ

ಸ್ಮರಿಸಿಕೊಳ್ಳಬೇಕು.

**प्रकाशः** – नन्वव्ययीभावत्वे ''अव्ययीभावश्च'' इति सूत्रेणाव्ययत्वे ''अव्ययादाप्सुपः'' इति समासादुत्पन्नसुपो लुकि प्राप्ते ''नाव्ययीभावादतोम्त्वपञ्चम्याः'' इति सूत्रेणामादेशविधानादतच्छब्दमिति वाच्यं नत्वतच्छब्दादिति । तत्राह – **अव्ययीभावत्वेऽपीति** ।।

ಪ್ರಶ್ನೆ - 'ಅತಚ್ಛಬ್ದಾತ್' ಎಂಬಲ್ಲಿ 'ಅವ್ಯಯೀಭಾವ' ಸಮಾಸವನ್ನು ಮಾಡಬೇಕೆಂದು ಹೇಳಿದಿರಿ. ಹಾಗಾದರೆ 'ಅವ್ಯಯೀಭಾವಶ್ಚ ' ಎಂಬ ಸೂತ್ರದಿಂದ ಅತಚ್ಛಬ್ದವೆಂಬ ಪದವು ಅವ್ಯಯವಾಯಿತು. ಆವಾಗ 'ಅವ್ಯಯದಾಪ್ಸುಪಃ' ಎಂಬ ಸೂತ್ರದಿಂದ ಸಮಾಸದ ಮೇಲೆ ಬಂದಿರುವ ಸುಪ್‌ಪ್ರತ್ಯಯವು ಲೋಪ ಆದರೆ 'ನಾವ್ಯಯೀಭಾವದತೋಂತ್ವ ಪಂಚಮ್ಯಾಃ' ಎಂಬ ಸೂತ್ರದಿಂದ 'ಅಮ್' ಆದೇಶ ಬಂದು 'ಅಭಿವಾದಮ್' ಎಂಬ ರೂಪವು ನಿಷ್ಪನ್ನವಾಗುವಂತೆ 'ಅತಚ್ಛಬ್ದಮ್' ಎಂದಾಗಬೇಕು ಹೊರತು, 'ಅತಚ್ಛಬ್ದಾತ್' ಪಂಚಮೀವಿಭಕ್ತಿಯು ಹೇಗೆ ಬರುತ್ತದೆ.

ಉತ್ತರ - ಈ ಪ್ರಶ್ನೆಗೆ 'ಅವ್ಯಯೀಭಾವತ್ವೇऽಪಿ' ಎಂಬ ಗ್ರಂಥದಿಂದ ಉತ್ತರಿಸಿದ್ದಾರೆ.

**प्रकाशः** – अदन्तादव्ययीभावात्परतः सुपो लुक् न भवति । किं त्वमादेश एव । पञ्चम्यास्त्वमादेशोऽपि नेति पञ्चम्या अमादेशस्य निषेधादित्यर्थः ।

ಅದಂತವಾದ ಅವ್ಯಯೀಭಾವದ ಮುಂದೆ ಇರುವಂತಹ 'ಸುಪ್' ಪ್ರತ್ಯಯವು 'ಲೋಪ' ಆಗುವುದಿಲ್ಲ ಹೊರತಾಗಿ, ಸುಪ್‌ಗೆ ಅಮಾದೇಶವೇ ಬರುತ್ತದೆ. 'ಅಪಂಚಮ್ಯಾಃ' ಎಂದರೆ ಪಂಚಮೀವಿಭಕ್ತಿಯಲ್ಲಿ 'ಅಮ್' ಆದೇಶವು ಬರುವುದಿಲ್ಲವೆಂದು ಹೇಳಿದ್ದರಿಂದ 'ಅತಚ್ಛಬ್ದಾತ್' ಎಂಬಲ್ಲಿ ಪಂಚಮೀ ವಿಭಕ್ತಿಯು ಇರುವುದರಿಂದ 'ಅಮ್' ಆದೇಶವು ಬರುವುದಿಲ್ಲವೆಂದು ತಿಳಿಯಬೇಕು.

**प्रकाशः** – एतेन ''अकर्तरि च कारक इति ज्ञापकादसामर्थ्येऽपि क्वचित्समासो भवतीति वा अर्थाभावे यदव्ययमित्यव्ययीभावो वेति समाधानमवधातव्यः'' इति सुधावाक्यं विवृतं ध्येयम् ।

ಹೀಗೆ ಹೇಳಿದ್ದರಿಂದ 'ಅಕರ್ತರಿ ಚ ಕಾರಕ ಇತಿ ಜ್ಞಾಪಕಾದಸಾಮರ್ಥ್ಯೇऽಪಿ ಕ್ವಚಿತ್ಸಮಾಸೋ ಭವತೀತಿ ವಾ ಅರ್ಥಾಭಾವೇ ಯದವ್ಯಯಮಿತ್ಯವ್ಯಯೀಭಾವೋ ವೇತಿ ಸಮಾಧಾನಮವಧಾತವ್ಯಮ್' 'ಅಕರ್ತರಿ ಚ ಕಾರಕೇ' ಎಂಬ ಪಾಣಿನಿ ಸೂತ್ರದ ಆಧಾರದಿಂದ ಸಾಮರ್ಥ್ಯವಿಲ್ಲದಿದ್ದರೂ ಕೆಲವೊಮ್ಮೆ ಸಮಾಸವಾಗುತ್ತದೆಂದಾಗಲೀ ಅಥವಾ ಅವ್ಯಯೀಭಾವಸಮಾಸವನ್ನಾಗಲೀ ಮಾಡಬೇಕು. ಎಂಬ ಸುಧಾವಾಕ್ಯವನ್ನು ವಿವರಿಸಿದಂತಾಯಿತು.

**प्रकाशः** – ''छन्दोवत्सूत्राणि भवन्तीति वा'' इति सुधोक्तं समाधानान्तरं स्फुटत्वान्न विवृतम् ॥

ವಾಸ್ತವಿಕವಾಗಿ 'ಛಂದೋವತ್ ಸೂತ್ರಾಣಿ ಭವಂತಿ' 'ಸೂತ್ರಗಳು ವೇದತುಲ್ಯವಾಗಿರುತ್ತವೆ' ಎಂಬ ವ್ಯಾಕ್ಯಾನುಸಾರವಾಗಿ ನಞ್‌ಗೂ ತತ್‌ಶಬ್ದಕ್ಕೂ ಸಾಮರ್ಥ್ಯವಿಲ್ಲದಿದ್ದರೂ ಸಮಾಸವಾಗುತ್ತದೆ ಎಂಬುದಾಗಿ ನ್ಯಾಯಸುಧೆಯಲ್ಲಿ ಮತ್ತೊಂದು ಸಮಾಧಾನವನ್ನು ಹೇಳಿರುತ್ತಾರೆ. ಅದು ಸ್ಪಷ್ಟವಾಗಿರುವುದರಿಂದ ಪುನಃ ಇಲ್ಲಿ ವಿವರಿಸಿಲ್ಲ.

**प्रकाशः** – एवमिति ॥ ''नच स्मार्तमतद्धर्माभिलापात्'' इत्यत्राप्युक्तसमाधिद्वयं ध्येयमित्यर्थः ।

ಇದರಂತೆ 'ನಚ ಸ್ಮಾರ್ತಮತದ್ಧರ್ಮಾಭಿಲಾಪಾತ್' ಎಂಬ ಸೂತ್ರದಲ್ಲಿಯೂ ಹಿಂದೆ ಹೇಳಿದ ಎರಡು ಸಮಾಧಾನಗಳಿಂದ 'ಅತದ್ಧರ್ಮಾಭಿಲಾಪಾತ್' ಎಂಬ ರೂಪನಿಷ್ಪತ್ತಿಯನ್ನು ತಿಳಿಯಬೇಕು. ಇದು 'ಏವಂ' ಎಂಬ ಪ್ರತೀಕದ ಅರ್ಥ.

**प्रकाशः** – जीववायुनिरासाय सूत्रं ''प्राणभृच्च'' इति । तत्र चशब्द आत्मशब्द-मुक्तोपसृप्यत्वातच्छब्दादिहेतूनां नञश्चानुकर्षणार्थ इति टीका न युक्तेव । तथात्वे नानुमानप्राणभृतावतच्छब्दादित्येकयोगेन निर्देष्टव्ये विभागायोगादित्यत आह – चतुर्थ इति ॥

'ಪ್ರಾಣಭೃಚ್ಚ' ಎಂಬುದು ನಾಲ್ಕನೆಯ ಸೂತ್ರ, ಜೀವ ಹಾಗೂ ವಾಯು ಇವರಿಬ್ಬರೂ ದ್ಯುಭ್ವಾದ್ಯಾಯತನರಾಗಿದ್ದಾರೆಂಬ ಪೂರ್ವಪಕ್ಷವನ್ನು ನಿರಾಕರಿಸುವುದಕ್ಕಾಗಿ ಇದು ಹೊರಟಿದೆ.

ಈ ಸೂತ್ರದಲ್ಲಿರುವ 'ಚ' ಶಬ್ದವು ಆತ್ಮಶಬ್ದ, 'ಮುಕ್ತೋಪಸೃಪ್ಯತ್ವ' ಹಾಗೂ 'ಅತಚ್ಛಬ್ದ' ಎಂಬ ಹಿಂದಿನ ಮೂರು ಹೇತುಗಳನ್ನು ಮತ್ತು 'ನಞ್' ಎಂಬುದನ್ನು ಅನುಕರ್ಷಣೆ ಮಾಡಿಕೊಳ್ಳುವುದಕ್ಕಾಗಿ ಪ್ರಯುಕ್ತವಾಗಿದೆಯೆಂದು ಟೀಕೆಯಲ್ಲಿ ಹೇಳಿದ್ದಾರೆ. ಇದು ಹೇಗೆ ಸರಿ ? ಹಾಗೇನಾದರೂ ವಿವಕ್ಷಿತವಾದಲ್ಲಿ 'ನಾನುಮಾನಪ್ರಾಣಭೃತಾವತಚ್ಛಬ್ದಾತ್' ಎಂಬುದಾಗಿ ಒಂದೇ ಸೂತ್ರವನ್ನು ನಿರ್ದೇಶಿಸಬೇಕಿತ್ತು. ಬೇರೆ ಬೇರೆ ಸೂತ್ರಗಳನ್ನಾಗಿ ವಿಭಾಗ ಮಾಡಿದ್ದು ತಪ್ಪಾಗುತ್ತದಲ್ಲವೇ? ಈ ಪ್ರಶ್ನೆಗೆ 'ಚತುರ್ಥೇ' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

**प्रकाशः** – योगविभाग उत्तरार्थ इत्यनेनान्वयः । भेदव्यपदेशादित्यत्रानु-वृत्त्यर्थः । सहनिर्देशे त्वानुमानिकस्याप्यनुवृत्तिस्स्यात् ।

ಯೋಗ ವಿಭಾಗ ಶಬ್ದಕ್ಕೆ 'ಉತ್ತರಾರ್ಥಃ' ಎಂಬಲ್ಲಿ ಅನ್ವಯವನ್ನು ತಿಳಿಯಬೇಕು. ಸೂತ್ರಗಳ ವಿಭಾಗವನ್ನೇಕೆ ಮಾಡಿದ್ದಾರೆಂದರೆ 'ಭೇದವ್ಯಪದೇಶಾತ್' ಎಂಬ ಮುಂದಿನ ಸೂತ್ರದಲ್ಲಿ 'ಪ್ರಾಣಭೃಚ್ಚ'

ಎಂಬುದನ್ನೂ ಅನುವೃತ್ತಿ ಮಾಡುವುದಕ್ಕಾಗಿ ಹೇಳಿದ್ದಾರೆ. ಒಂದುವೇಳೆ ಯೋಗವಿಭಾಗ ಮಾಡದೇ ಎಲ್ಲವನ್ನೂ ಒಟ್ಟಿಗೆ ಹೇಳಿದರೆ ಆನುಮಾನಿಕ ಮೊದಲಾದವೂ ಸಹ ಮುಂದಿನ ಸೂತ್ರದಲ್ಲಿ ಅನುವೃತ್ತವಾಗಬೇಕಾದೀತು.

**प्रकाशः – अस्तु को दोष इत्यत आह – अद्वैतिनेति ।। आदिपदेन शैवादिर्ग्राह्यः ।**

ಮುಂದಿನ ಸೂತ್ರದಲ್ಲಿಯೂ ಎಲ್ಲವೂ ಅನುವೃತ್ತವಾಗಲಿ ಏನು ದೋಷ? ಎಂಬ ಪ್ರಶ್ನೆಗೆ 'ಅದ್ವೈತಿನಾ' ಎಂಬುದರಿಂದ ಉತ್ತರಿಸಿದ್ದಾರೆ. ಆದಿಪದದಿಂದ ಶೈವಾದಿಗಳನ್ನು ವಿವಕ್ಷಿಸಬೇಕು. ಅದ್ವೈತಿಗಳು ಜೀವನಿಂದ ಹೇಗೆ ಅಭೇದವನ್ನು ಒಪ್ಪುತ್ತಾರೋ ಅದರಂತೆ ಸಾಂಖ್ಯರಾಗಲೀ, ಶೈವಾದಿಗಳಾಗಲೀ ಪ್ರಧಾನಾದಿಗಳಿಂದ ಬ್ರಹ್ಮನಿಗೆ ಅಭೇದವನ್ನು ಒಪ್ಪಿರುವುದಿಲ್ಲವೆಂದರ್ಥ.

**प्रकाशः – यथा व्याकरणेऽङ्गाधिकारे "दंशसञ्जास्वञ्जां शपि । रञ्जेश्च । घञि च भावकरणयोः" इत्यत्र रञ्जेश्चेत्यस्य पूर्वसूत्र एव स्वञ्जरञ्जामिति निर्देष्टव्ये घञि चेत्युत्तरसूत्रेऽनुवृत्त्यर्थो योगविभागः । अन्यथा सर्वस्याप्यनुवृत्तिस्स्यात् । तथेहापीति भावः ।**

ಪಾಣಿನಿ ವ್ಯಾಕರಣದ ಅಂಗಾಧಿಕಾರ ಸೂತ್ರದಲ್ಲಿ 'ದಂಶಸಂಜಾಸ್ವಂಜಾಂ ಶಪಿ । ರಂಜೇಶ್ಚ । ಘಞಿ ಚ ಭಾವಕರಣಯೋಃ' ಎಂಬ ಆನುಪೂರ್ವಿಯಲ್ಲಿ 'ದಂಶ' ಎಂಬ ಸೂತ್ರದ ಮುಂದಿನ ಸೂತ್ರ 'ರಂಜೇಶ್ಚ' ಎಂಬುದು. ಅದರ ಮುಂದಿನ ಸೂತ್ರ 'ಘಞಿ ಚ ಭಾವಕರಣಯೋಃ' ಎಂಬುದು. 'ಘಞಿ ಚ ಭಾವಕರಣಯೋಃ' ಎಂಬ ಮುಂದಿನ ಸೂತ್ರದಲ್ಲಿ 'ರಂಜೇಶ್ಚ' ಎಂಬ ಹಿಂದಿನ ಸೂತ್ರವನ್ನು ಅನುವೃತ್ತಿ ಮಾಡಿಕೊಳ್ಳುವುದಕ್ಕಾಗಿ ಯೋಗವಿಭಾಗವನ್ನು ಆಶ್ರಯಿಸಲಾಗಿದೆ. ಅಂದರೆ 'ದಂಶಸಂಜಾಸ್ವಂಜಾಂ' ಎಂದು ಒಟ್ಟಿಗೆ ಸೂತ್ರವನ್ನು ಹೇಳಬಹುದಿತ್ತು. ಆದರೂ ಸಹ 'ರಂಜೇಶ್ಚ' ಎಂಬುದಾಗಿ ಪ್ರತ್ಯೇಕವಾಗಿ ಸೂತ್ರವನ್ನು ಮಾಡಿದ್ದೇಕೆ? ಎಂದರೆ ಮುಂದಿನ ಸೂತ್ರದಲ್ಲಿ 'ದಂಶಸ್ವಂಜಜರಂಜಾಮ್' ಮೊದಲಾದ ಶಬ್ದಗಳು ಅನುವೃತ್ತವಾಗಬಾರದು. 'ರಂಜೇಶ್ಚ' ಎಂಬ ಭಾಗ ಮಾತ್ರ ಅನುವೃತ್ತವಾಗಬೇಕೆಂಬ ಉದ್ದೇಶದಿಂದ. ಅದರಂತೆ ಪ್ರಕೃತದಲ್ಲಿಯೂ 'ಭೇದವ್ಯಪದೇಶಾತ್' ಎಂಬ ಸೂತ್ರದಲ್ಲಿ 'ಪ್ರಾಣಭೃಚ್ಚ' ಎಂಬುದನ್ನು ಅನುವೃತ್ತಿಮಾಡಿಕೊಳ್ಳುವುದಕ್ಕಾಗಿ ಪ್ರತ್ಯೇಕ ಪರಿಗಣಿಸಿದ್ದಾರೆ. ಒಂದು ವೇಳೆ 'ಆನುಮಾನ ಪ್ರಾಣಭೃತಾವತಚ್ಛಬ್ದಾತ್' ಎಂದು ಒಟ್ಟಿಗೆ ಸೂತ್ರವನ್ನು ಹೇಳಿದ್ದರೆ ಆನುಮಾನ ಮೊದಲಾದವುಗಳೂ ಸಹ 'ಭೇದವ್ಯಪದೇಶಾತ್' ಎಂಬ ಸೂತ್ರದಲ್ಲಿ ಅನುವೃತ್ತವಾಗುತ್ತಿದ್ದವು. ಆದರೆ ಸಾಂಖ್ಯಾದಿಗಳು ಜೀವಾದಿಗಳಿಂದ ಅಭೇದವನ್ನು ಒಪ್ಪದ ಕಾರಣ ಹಾಗೇ ಅನುವೃತ್ತಿಮಾಡಿಕೊಳ್ಳುವ ಅವಶ್ಯಕತೆ ಇರುವುದಿಲ್ಲ.

ಪರಿಪೂರ್ಣಚಂದ್ರಿಕಾ

**प्रकाशः** – एतच्च परभाष्यादावपि व्यक्तम् । तेन ''प्राणभृच्चेति सूत्रपृथक्त्व-कल्पनमयुक्तम्'' इति श्रुतप्रकाशोक्तं निरस्तं भवति ।

ಈ ವಿಷಯವು ಅದ್ವೈತಭಾಷ್ಯಕ್ಕೂ ಸಮ್ಮತವಾಗಿದೆ. ಅವರೂ ಸಹ ಅನುವೃತ್ತಿ ಮಾಡಿಕೊಳ್ಳುವುದಕ್ಕಾಗಿ ಪ್ರತ್ಯೇಕ ಸೂತ್ರವೆಂದು ಸಮಾಧಾನ ನೀಡಿದ್ದಾರೆ. ಹೀಗೆ ಹೇಳಿದ್ದರಿಂದ 'ಪ್ರಾಣಭೃಚ್ಚೇತಿ ಸೂತ್ರಪೃಥಕ್ತ್ವ-ಕಲ್ಪನಮಯುಕ್ತಮ್' 'ಪ್ರಾಣಭೃಚ್ಚ' ಎಂಬ ಸೂತ್ರವನ್ನು ಪ್ರತ್ಯೇಕವಾಗಿ ಪರಿಗಣಿಸಿದ್ದು ಅಯುಕ್ತವಾಗಿದೆಯೆಂಬ ಶ್ರುತಪ್ರಕಾಶದ ಮಾತು ನಿರಾಕೃತವಾಯಿತು.

**प्रकाशः** – सूत्रे वायुनिरासाप्रतीतेराह – **तत्रेति** ।।

ಸೂತ್ರದಲ್ಲಿ ವಾಯುದೇವತೆಯು ದ್ಯುಭ್ವಾದ್ಯಾಯತನನಾಗಿದ್ದಾನೆಂಬ ಪಕ್ಷವನ್ನು ನಿರಾಕರಣೆ ಮಾಡಿದ್ದು ಕಾಣಿಸುತ್ತಿಲ್ಲ ಎಂಬ ಪ್ರಶ್ನೆಗೆ 'ತತ್ರೇತಿ' ಎಂಬುದರಿಂದ ಉತ್ತರಿಸಿದ್ದಾರೆ.

**गुरुराजीयम्** – **अकर्तरि चेति** ।। अत्र च सञ्ज्ञायां विषये धातोर्घञ् विहितः प्रास आहार इत्यादिसिद्ध्यर्थम् । स च कर्तरि निषिध्यते । अकर्तरीति कर्तरि न भवतीत्यर्थः । किं कारणम् । मिषत्यसौ मेष इत्यादौ घञ् मा भूदित्येवमर्थम् । तथा सति मैष इति प्रसङ्गात् । नच अकर्तरीति प्रसज्यप्रतिषेध इव कर्तृभिन्ने कर्तृसदृशे कारके भवतीति पर्युदासाश्रयणेऽपि मेष इत्यत्र तदभावः सिद्ध्यत्येवेति किं प्रसज्यप्रतिषेधाश्रयणेनेति वाच्यम् । तथा सति कारकग्रहणमनर्थकमेव स्यात् । अकर्तरीति पर्युदासे हि नञिवयुक्तन्यायेन कर्तुरन्यस्मिन्कर्तृसदृशे कारक एवेति प्रतीतिर्भवति । यथाऽब्राह्मण इति क्षत्रियादौ । तस्मात्कारकग्रहणं व्यर्थम् । प्रसज्यप्रतिषेधे तु वाक्यभेदेन सञ्ज्ञायां घञ् भवति । कर्तरि च न भवतीत्येषोऽर्थः सम्पद्यते । ततः सञ्ज्ञायां घञ् भवतीति प्रथमवाक्येऽर्थनिर्देशाभावाद् अनिर्दिष्टार्थाः प्रत्ययाः स्वार्थे भवन्तीति स्वार्थ एव घञ् स्यात् । अतः प्रसज्यप्रतिषेधे कर्तव्यमेव कारकग्रहणम् । पर्युदासे तूक्तरीत्या न कर्तव्यम् । तच्च क्रियमाणं प्रसज्यनिषेधेना-सामर्थ्येऽपि समासो भवतीति ज्ञापयति । तदनेन प्रकारेणासामर्थ्येऽपि समासस्याकर्तरि च कारके सञ्ज्ञायामित्यत्र कारकग्रहणेन ज्ञापितत्वात् । अतच्छब्दादित्यत्रासामर्थ्येऽपि समासो युज्यत एवेति भावः ।।

ननु चाव्ययादाप्सुप इति सुपो लोपं विधायादन्तादव्ययीभावात्परस्य सुपो 'नाव्ययीभावादतोम्' इत्यम्भावविधानादतच्छब्दमिति स्यात् तत्राह –

**अव्ययीभावत्वेऽपीति** ।। अपञ्चम्या इत्युक्तेः तत्रैव सूत्रे पञ्चमीं विना मादेशविधानादिति भावः । नानुमानमतच्छब्दादित्यनेन प्रधानरुद्रयोरिव वायुजीवयोरपि निरासस्य कर्तुं शक्यत्वेन प्राणभृच्चेति पृथग्वाक्य-विभागानुपपत्तिरित्यत आह – **चतुर्थ इति** ।। रुद्रवाय्वोरपि शैवादिभिर्विष्णु-भेदस्यैवाङ्गीकारादित्यादिशब्दार्थः । उत्तरार्थः प्रकरणादित्युत्तरसूत्रार्थ इत्यर्थः ।




'ಓಂ ನಾನುಮಾನಮತಚ್ಛಬ್ದಾತ್ ಓಂ' ಎಂಬ ಮೂರನೇ ಸೂತ್ರವು ಪರಪಕ್ಷದಲ್ಲಿ ಯಾವುದೇ ಸಾಧಕಪ್ರಮಾಣಗಳಿಲ್ಲವೆಂದು ಸಮರ್ಥಿಸುತ್ತಿದೆ. ಮೊದಲು ಸ್ವಪಕ್ಷದಲ್ಲಿ ಸಾಧಕಪ್ರಮಾಣಗಳನ್ನು ಹೇಳಿ ಈ ಸೂತ್ರದಲ್ಲಿ ಪರಪಕ್ಷದಲ್ಲಿ ಸಾಧಕಪ್ರಮಾಣಗಳಿಲ್ಲವೆಂದು ಹೇಳುತ್ತಿರುವುದರಿಂದ ಮೂರನೆಯ ಸ್ಥಾನವು ಈ ಸೂತ್ರಕ್ಕೆ ಸಮಂಜಸವಾಗಿದೆ.

ಸೂತ್ರದಲ್ಲಿರುವ ಅನುಮಾನ ಶಬ್ದಕ್ಕೆ ಅನುಮಾನವೇ ಪ್ರಧಾನವಾಗಿವುಳ್ಳ ಪಾಶುಪಾತ್ಯಾದ್ಯಾಗಮಗಳೆಂದರ್ಥ. ಇವುಗಳಲ್ಲಿ ರುದ್ರಾದಿಗಳೇ ದ್ಯುಭ್ವಾದ್ಯಾಯತನರಾಗಿದ್ದಾರೆಂದು ಹೇಳಲಾಗಿದೆಯೆಂದು ಪೂರ್ವಪಕ್ಷಕಾರರು ಹೇಳುತ್ತಾರೆ. ಆದರೆ ಈ ವಿಚಾರವನ್ನು ಸಮರ್ಥಿಸಲು ಯಾವುದೇ ಸಾಧಕಪ್ರಮಾಣಗಳಿರುವುದಿಲ್ಲ. ಅಷ್ಟೇ ಅಲ್ಲದೆ ವಿಷ್ಣುವಿಷಯಕವಾದ ಸಮಾಖ್ಯಾಪ್ರಮಾಣದಲ್ಲಿ ವಿಷ್ಣುವೇ ದ್ಯುಭ್ವಾದ್ಯಾಯತನನಾಗಿದ್ದಾನೆನ್ನಲು ಸಾಧಕಪ್ರಮಾಣಗಳಿಲ್ಲವೆಂದೂ ಸಹ ಹೇಳಲು ಸಾಧ್ಯವಿಲ್ಲ. ರುದ್ರಸಮಾಖ್ಯಾ ಪ್ರಮಾಣದಲ್ಲಿರುವ ರುದ್ರ, ಪಿನಾಕೀ ಮೊದಲಾದ ಶಬ್ದಗಳೆಲ್ಲವೂ ವಿಷ್ಣುವನ್ನು ಮುಖ್ಯವಾಗಿ ಪ್ರತಿಪಾದಿಸುತ್ತವೆ. ಅದರಂತೆ ವಿಷುಸಮಾಖ್ಯಾಪ್ರಮಾಣದಲ್ಲಿರುವ ವಿಷ್ಣು ಮೊದಲಾದ ಶಬ್ದಗಳು ರುದ್ರಾದಿಗಳನ್ನು ಮುಖ್ಯವಾಗಿ ಪ್ರತಿಪಾದಿಸುವುದಿಲ್ಲ. ಆದ್ದರಿಂದ ರುದ್ರಸಮಾಖ್ಯಾಪ್ರಮಾಣವು ಸಾವಕಾಶವೆಂದಂತಾಯಿತು. ವಿಷ್ಣುಸಮಾಖ್ಯಾಪ್ರಮಾಣವು ನಿರವಕಾಶವಾಯಿತು. ಆದ್ದರಿಂದಲೇ ಅನುವ್ಯಾಖ್ಯಾನದ ಶ್ಲೋಕದಲ್ಲಿ ಯಾವ ಯುಕ್ತಿಗಳು ಸಾವಕಾಶವಾಗಿರುತ್ತದೋ ಅವನ್ನೇ ಪೂರ್ವಪಕ್ಷಯುಕ್ತಿಯನ್ನಾಗಿ ಪರಿಗಣಿಸಿ ಅವೇ ಯುಕ್ತಿಗಳು ನಿರವಕಾಶವಾಗಿದ್ದರೆ ಸಿದ್ಧಾಂತ ಯುಕ್ತಿಗಳಾಗುತ್ತವೆಯೆಂದು ಶ್ರೀಮದಾಚಾರ್ಯರು ಹೇಳಿದ್ದಾರೆ.

ಸೂತ್ರದಲ್ಲಿ 'ಅತಚ್ಛಬ್ದಾತ್' ಎಂದು 'ನಞ್' ಸಮಾಸವು ಕಾಣಿಸುತ್ತಿದೆ. ಆದರೆ ಪ್ರಸಜ್ಯ ಪ್ರತಿಷೇಧಾರ್ಥದಲ್ಲಿ ನಞ್ ಎಂಬುದು ಕ್ರಿಯಾಸಾಪೇಕ್ಷವಾದ್ದರಿಂದ ಸಾಮರ್ಥ್ಯವನ್ನು ಹೊಂದದ ಕಾರಣ ಸಮಾಸವಾಗುವುದಿಲ್ಲವೆಂದೆನಿಸುತ್ತದೆ. ಆದರೂ 'ಅಸೂರ್ಯಂ ಪಶ್ಯಾಃ, ಅಶ್ರಾದ್ಧಭೋಜೀ' ಇತ್ಯಾದಿ ಸ್ಥಳಗಳಲ್ಲಿ 'ನಞ್' ಸಮಾಸವನ್ನು ಪ್ರಸಜ್ಯಪ್ರತಿಷೇಧಾರ್ಥದಲ್ಲಿಯೂ ಒಪ್ಪಿರುವುದರಿಂದ ಇಲ್ಲಿಯೂ ತಪ್ಪಾಗುವುದಿಲ್ಲ. ಅಥವಾ ಅವ್ಯಯೀಭಾವ ಸಮಾಸವೆಂದು ಪರಿಗಣಿಸಬಹುದು. ಅವ್ಯಯೀಭಾವ ಸಮಾಸವಾದರೆ 'ಅಮ್' ಪ್ರತ್ಯಯವು

ಕೊನೆಯಲ್ಲಿ ಬರಬೇಕೆಂದೇನೂ ನಿಯಮವಿಲ್ಲ. 'ಅಪಂಚಮ್ಯಾಃ' ಎಂಬುದಾಗಿ ಪಂಚಮೀವಿಭಕ್ತಿಯನ್ನು ಬಿಟ್ಟು ಉಳಿದೆಡೆ ಹಾಗೇ 'ಅಮ್' ಪ್ರತ್ಯಯವು ಬರುತ್ತದೆಂದು ಪಾಣಿನಿ ಸೂತ್ರವು ಹೇಳಿದೆ.

ಮೂರನೆಯ ಸೂತ್ರವು ಹೀಗೆ ಪರಪಕ್ಷದಲ್ಲಿ ಸಾಧಕ ಪ್ರಮಾಣಗಳಿಲ್ಲವೆಂದು ಸಮರ್ಥಿಸಿದ ಮೇಲೆ ನಾಲ್ಕನೆಯ 'ಪ್ರಾಣಭೃಚ್ಚ' ಎಂಬ ಸೂತ್ರವು ಜೀವ ಹಾಗೂ ಪ್ರಧಾನಗಳು ದ್ಯುಭ್ವಾದ್ಯಾಯತನರಾಗುವುದಿಲ್ಲ ವೆಂದು ಸಮರ್ಥಿಸಿದೆ. ಈ ಸೂತ್ರವನ್ನು ಮುಂದಿನ 'ಭೇದವ್ಯಪದೇಶಾತ್' ಎಂಬ ಸೂತ್ರದಲ್ಲಿ ಅನುಕರ್ಷಮಾಡಬೇಕೆಂಬ ಉದ್ದೇಶದಿಂದ ಪ್ರತ್ಯೇಕವಾಗಿ ಹೇಳಿದ್ದಾರೆ. ಮುಂದಿನ ಸೂತ್ರದಲ್ಲಿ ಅನುಕರ್ಷ ಮಾಡುವ ಅವಶ್ಯಕತೆ ಇಲ್ಲದಿದ್ದಲ್ಲಿ ಹಿಂದಿನ ಸೂತ್ರಗಳ ಜೊತೆಗೆ ಸೇರಿಸಿ ಈ ಸೂತ್ರವನ್ನು ಪಠಿಸಬಹುದಿತ್ತು.

• • • • •

## ಐದು, ಆರು ಹಾಗೂ ಏಳನೆಯ ಸೂತ್ರಾರ್ಥ ವಿವರಣೆ

### तात्पर्यचन्द्रिका

**पञ्चमे जीवब्रह्माभेदेनोभयावाधसम्भवेनैकस्यापि बाधो युक्त इति शङ्किते तन्निरासाच्चशब्दाभावः स्वपक्षसाधकस्वशब्दादिहेतुविप्रकर्षश्च ।**

ಅನುವಾದ - 'ಓಂ ಭೇದವ್ಯಪದೇಶಾತ್ ಓಂ' ಎಂಬುದು ಐದನೆಯ ಸೂತ್ರ. ಜೀವ ಹಾಗೂ ಬ್ರಹ್ಮರಿಗೆ ಅಭೇದವನ್ನೇ ಒಪ್ಪೋಣ. ಹೀಗೆ ಒಪ್ಪುವುದರಿಂದ ಎರಡು ಪಕ್ಷಗಳನ್ನು ಬಾಧವಿಲ್ಲದೇ ಉಪಪಾದಿಸಬಹುದು. ಹೀಗೆಯೇ ವ್ಯಾಖ್ಯಾನಿಸಲು ಬರುವಾಗ ಒಂದು ಪಕ್ಷಕ್ಕೆ ಬಾಧವನ್ನು ಹೇಳುವುದು ತಪ್ಪಾಗುತ್ತದಲ್ಲವೇ? ಈ ಆಶಂಕೆಯನ್ನು ನಿರಾಕರಿಸುವುದಕ್ಕಾಗಿ 'ಭೇದವ್ಯಪದೇಶಾತ್' ಎಂಬ ಸೂತ್ರವು ಹೊರಟಿದೆ. ಹಿಂದಿನ ವಿಷಯದ ಮೇಲೆ ಬರುವ ಅಭೇದಾಶಂಕೆಯನ್ನು ನಿರಾಕರಿಸುವುದಕ್ಕಾಗಿ ಈ ಸೂತ್ರ ಹೊರಟಿರುವುದರಿಂದ 'ಚ' ಶಬ್ದವನ್ನು ಹೇಳಿರುವುದಿಲ್ಲ. ಮತ್ತು ಸ್ವಪಕ್ಷಸಾಧಕವಾದ 'ದ್ಯುಭ್ವಾದ್ಯಾಯತನಂ ಸ್ವಶಬ್ದಾತ್' ಮತ್ತು 'ಮುಕ್ತೋಪಸೃಪ್ಯವ್ಯಪದೇಶಾತ್' ಎಂಬ ಸೂತ್ರಗಳ ಅನಂತರವೂ ಸಹ ಇದು ಪ್ರಸಕ್ತವಾಗುವುದಿಲ್ಲ. ಇಲ್ಲದಿದ್ದರೆ ಸ್ವಪಕ್ಷ ಸಾಧಕವಾದ್ದರಿಂದ ಸೂತ್ರದಲ್ಲಿ 'ಚ' ಶಬ್ದವಿರಬೇಕಿತ್ತು. ಮತ್ತು ಸ್ವಪಕ್ಷಸಾಧಕಗಳ ಮಧ್ಯದಲ್ಲಿಯೇ ಇರಬೇಕಿತ್ತೆಂಬ ಆಕ್ಷೇಪಕ್ಕೆ ಅವಕಾಶವಿರುತ್ತಿತ್ತು.

**अत्र च 'अन्यमीशम्' इत्युक्तेनान्यत्वेन 'पश्यति' इति प्रकृतो जीवः पदिन्यायेन प्रतियोगित्वेन सम्बध्यत इत्यभिप्रेत्येयं श्रुतिर्जीवेशभेदे प्रमाणीकृता ।**

'ಜುಷ್ಟಂ ಯದಾ ಪಶ್ಯತಿ' ಎಂಬ ಶ್ರುತಿಯು ಈಶನು ಭಿನ್ನನಾಗಿದ್ದಾನೆಂದಷ್ಟೇ ಹೇಳುತ್ತಿದೆ. ಭೇದಕ್ಕೆ

ಪ್ರತಿಯೋಗಿಯಾದವನು ಯಾರೆಂದು ನಿಖರವಾಗಿ ಹೇಳಿರುವುದಿಲ್ಲ. ಈ ಸಂದರ್ಭದಲ್ಲಿ ಪೂರ್ವಮೀಮಾಂಸೆಯ ಪದಿನ್ಯಾಯದಿಂದ ಜೀವನೇ ಪ್ರತಿಯೋಗಿಯಾದ್ದಾನೆಂದು ತಿಳಿಯಬೇಕು. 'ಸಪ್ತಮಂ ಪದಮ್' ಎಂಬ ಶ್ರುತಿಯಲ್ಲಿ ಪದಶಬ್ದಕ್ಕೆ ಸನ್ನಿಹಿತವಾದ ಒಂದು ವರ್ಷದ ಹಸುವಿನ ಹೆಜ್ಜೆಯನ್ನೇ ಅರ್ಥವನ್ನಾಗಿ ಪರಿಗಣಿಸಬೇಕೆಂದು ಪೂರ್ವಮೀಮಾಂಸೆಯಲ್ಲಿ ಹೇಗೆ ನಿರ್ಣಯಿಸಿದ್ದಾರೋ, ಅದರಂತೆ ಪ್ರಕೃತದಲ್ಲಿಯೂ 'ಪಶ್ಯತಿ' ಎಂಬುದಾಗಿ 'ದರ್ಶನಕರ್ತೃತ್ವೇನ' ಪ್ರಸಕ್ತನಾದ ಜೀವನನ್ನೇ ಭೇದಕ್ಕೆ ಪ್ರತಿಯೋಗಿಯಾಗಿದ್ದಾನೆಂದು ಪರಿಗಣಿಸಬೇಕು. ಈ ಅಭಿಪ್ರಾಯದಿಂದ ಭಾಷ್ಯಕಾರರು ಜೀವೇಶಭೇದವಿಷಯದಲ್ಲಿ ಈ ಶ್ರುತಿಯನ್ನು ಪ್ರಮಾಣವನ್ನಾಗಿ ಹೇಳಿರುತ್ತಾರೆ.

**''विशेषणभेदव्यपदेशाभ्याम्'' इत्यत्र त्वयमन्यो मार्ग इत्युक्ते प्रसिद्धमार्गाद-न्यत्ववत् 'अन्यमीशम्' इत्युक्ते प्रसिद्धेशाद्रुद्रादन्यत्वप्रतीतेरियं श्रुतिर्व्याख्याना-न्तरमभिप्रेत्य रुद्रादन्यत्वे प्रमाणीकृतेत्यविरोधः ।**

ಅದೃಶ್ಯತ್ವಾಧಿಕರಣದ 'ವಿಶೇಷಣಭೇದವ್ಯಪದೇಶಾಭ್ಯಾಂಚ ನೇತರೌ' ಎಂಬ ಸೂತ್ರದಲ್ಲಿ ರುದ್ರನಿಗಿಂತ ವಿಷ್ಣು ಭಿನ್ನನಾಗಿದ್ದಾನೆಂದು ಈ ಶ್ರುತಿಗೆ ವ್ಯಾಖ್ಯಾನಿಸಿದ್ದಾರೆ. ಲೋಕದಲ್ಲಿ ''ಇದು ಬೇರೆ ದಾರಿ'' ಎಂದು ಹೇಳಿದರೆ ಪ್ರಸಿದ್ಧವಾದ ದಾರಿಗಿಂತ ಇದು ಭಿನ್ನವಾದ ದಾರಿಯೆಂದು ಹೇಗೆ ತಿಳಿಯುತ್ತದೋ? ಅದರಂತೆ 'ಅನ್ಯಮೀಶಮ್' ಎಂದು ಹೇಳಿದಾಗ ಪ್ರಸಿದ್ಧನಾದ ಈಶನಿಗಿಂತ ಭಿನ್ನನಾದ ಈಶನೆಂದು ತಿಳಿಯುತ್ತದೆ. ಅಂದರೆ ಈಶಶಬ್ದದಿಂದ ಪ್ರಸಿದ್ಧನಾಗಿ ಯಾವ ರುದ್ರನು ವಾಚ್ಯನಾಗಿದ್ದಾನೋ, ಅಂತಹ ಈಶನಿಗಿಂತ ಭಿನ್ನನಾದ ಮತ್ತೊಬ್ಬ ಈಶನೆಂಬ ಪ್ರತೀತಿಯು ಬರುತ್ತದೆ. ಹೀಗೆ ರುದ್ರನಿಗಿಂತ ವಿಷ್ಣು ಭಿನ್ನನಾಗಿದ್ದಾನೆಂದು ಈ ಶ್ರುತಿಯಿಂದ ತಿಳಿದಂತಾಗುತ್ತದೆ. ಹೀಗೆ ಅದೃಶ್ಯತ್ವಾಧಿಕರಣದಲ್ಲಿ ಮಾಡಲ್ಪಟ್ಟ ವ್ಯಾಖ್ಯಾನವು ಇಲ್ಲಿ ಮಾಡುತ್ತಿರುವ ವ್ಯಾಖ್ಯಾನಕ್ಕಿಂತ ಮತ್ತೊಂದು ಬಗೆಯ ವ್ಯಾಖ್ಯಾನವೆಂದು ತಿಳಿಯಬೇಕು. ಆದ್ದರಿಂದ ಒಂದು ವ್ಯಾಖ್ಯಾನಕ್ಕೆ ಮತ್ತೊಂದು ವ್ಯಾಖ್ಯಾನದಿಂದ ವಿರೋಧವನ್ನು ಹೇಳಲು ಸಾಧ್ಯವಿಲ್ಲ.

**एवं षष्ठेऽपि भेदव्यपदेशस्यान्यविषयत्वशङ्कानिरासाच्चशब्दाभावः ।**

'ಓಂ ಪ್ರಕರಣಾತ್ ಓಂ' ಎಂಬುದು ಆರನೆಯ ಸೂತ್ರ. ಭೇದವ್ಯಪದೇಶವನ್ನು ಹೇಳಿದ ಮೇಲೆ ಆ ಭೇದವು ಅನ್ಯವಿಷಯಕವಾಗಬಹುದಲ್ಲವೇ? ಎಂಬ ಆಶಂಕೆಯು ಪ್ರಾಪ್ತವಾಗುತ್ತದೆ. ಅದರ ನಿರಾಸಕ್ಕೋಸ್ಕರ ಈ ಸೂತ್ರವು ಹೊರಟಿದೆ. ಪ್ರಕರಣದ ಬಲದಿಂದ ಜೀವಬ್ರಹ್ಮಭೇದವನ್ನೇ ಸಾಧಿಸಬೇಕೆಂದು ಈ ಸೂತ್ರವು ಸಾಧಿಸುತ್ತಿದೆ. ಆದ್ದರಿಂದ ಈ ಸೂತ್ರದಲ್ಲಿ 'ಚ' ಶಬ್ದವನ್ನು ಹೇಳಿರುವುದಿಲ್ಲ.

**सप्तमे तु न केवलं व्यपदेशाच्छ्रुतेर्भेदः, किन्तु लिङ्गादपीति कथनाच्चशब्दः ।**

'ಓಂ ಸ್ಥಿತ್ಯದನಾಭ್ಯಾಂ ಚ ಓಂ' ಎಂಬುದು ಏಳನೆಯ ಸೂತ್ರ. ಭೇದವ್ಯಪದೇಶದ ವಿಷಯದಲ್ಲಿ ಕೇವಲ ಶ್ರುತಿಯು ಮಾತ್ರ ಪ್ರಮಾಣವಲ್ಲ. ಲಿಂಗವೂ ಸಹ ಪ್ರಮಾಣವಾಗಿದೆಯೆಂದು ಈ ಸೂತ್ರವು ಸಮರ್ಥಿಸುತ್ತಿದೆ. ಆದ್ದರಿಂದಲೇ 'ಚ' ಶಬ್ದವನ್ನು ಸೂತ್ರಕಾರರು ಹೇಳಿದ್ದಾರೆ.

**श्रुतावदनस्य प्राथम्येऽपि स्थितेरीश्वरसम्बन्धित्वेनाभ्यर्हितत्वादल्पाच्तरत्वाच्च सूत्रे तस्याः प्राथम्यम् ।**

ವಾಸ್ತವಿಕವಾಗಿ ಶ್ರುತಿಯಲ್ಲಿ ಅದನವನ್ನು ಮೊದಲು ಹೇಳಿರುವುದರಿಂದ ಸೂತ್ರದಲ್ಲಿಯೂ ಅದನವನ್ನೇ ಮೊದಲು ಹೇಳಬೇಕಿತ್ತು. ಆದರೆ ಸ್ಥಿತಿಯು ಈಶ್ವರನಿಗೆ ಸಂಬಂಧಿಸಿದ್ದರಿಂದ ಪ್ರಧಾನವಾಗಿದೆ. ಅಪ್ರಧಾನವನ್ನು ಹೇಳುವುದಕ್ಕಿಂತ ಮೊದಲು ಪ್ರಧಾನವನ್ನು ಹೇಳುವುದು ಸಮಂಜಸವೆಂಬ ಅಭಿಪ್ರಾಯದಿಂದ ಸ್ಥಿತಿಯನ್ನೇ ಮೊದಲು ಹೇಳಿರುತ್ತಾರೆ. ಅಥವಾ 'ಅದನ' ಶಬ್ದಕ್ಕಿಂತ 'ಸ್ಥಿತಿ' ಶಬ್ದವು ಕಮ್ಮಿ ಅಜಕ್ಷರಗಳಿಂದ ಕೂಡಿದೆ. ಆದ್ದರಿಂದ 'ಅಲ್ಪಾಚ್ತರಂಪೂರ್ವಮ್' ಎಂಬ ಸೂತ್ರಾನುಸಾರ ಸ್ಥಿತಿಶಬ್ದಕ್ಕೆ ಪ್ರಾಥಮ್ಯವು ಯುಕ್ತವಾಗಿದೆ.

**नच वाच्यं 'द्वा सुपर्णा' इति मन्त्रोक्ते स्थित्यदने बुद्धिजीवगते । नतु जीवेशगते । ''तावेतौ सत्वक्षेत्रज्ञात्'' इति पैङ्गिरहस्यब्राह्मणेनास्य मन्त्रस्य सत्वक्षेत्रज्ञशब्दार्थत्वेन बुद्धिजीवविषयत्वेन व्याख्यातत्वादिति ।**

ಆಕ್ಷೇಪ - 'ದ್ವಾ ಸುಪರ್ಣಾ' ಎಂಬ ಶ್ರುತಿಯಲ್ಲಿ ಸ್ಥಿತಿ ಹಾಗೂ ಅದನಗಳೆಂಬ ಲಿಂಗಗಳು ಕೇಳಿಸುತ್ತಿವೆ. ಈ ಲಿಂಗಗಳ ಬಲದಿಂದ ಜೀವ ಹಾಗೂ ಬ್ರಹ್ಮರಿಗೆ ಭೇದವು ಸಿದ್ಧವಾಗುತ್ತದೆಂದು ಹೇಳಿದಿರಿ. ಆದರೆ ಇವು ಬುದ್ಧಿ ಹಾಗೂ ಜೀವರ ಧರ್ಮವಾದ್ದರಿಂದ ಇವೆರಡರ ಭೇದವೇ ಶ್ರುತಿಗೆ ಸಮ್ಮತವಾಗಿದೆ. ಆದ್ದರಿಂದ 'ದ್ವಾ ಸುಪರ್ಣಾ' ಎಂಬ ಶ್ರುತಿಯು ಬುದ್ಧಿ ಹಾಗೂ ಜೀವ ವಿಷಯಕವೆಂದು ಹೇಳಬೇಕು. ಆದ್ದರಿಂದಲೇ ಪೈಂಗಿರಹಸ್ಯದ ಬ್ರಾಹ್ಮಣವಾಕ್ಯದಲ್ಲಿ 'ತಾವೇತೌ ಸತ್ವಕ್ಷೇತ್ರಜ್ಞೌ' ಎಂಬುದಾಗಿ ಈ ಮಂತ್ರಕ್ಕೆ ಸತ್ವ ಹಾಗೂ ಕ್ಷೇತ್ರಜ್ಞರು ವಿಷಯರಾಗಿದ್ದಾರೆಂದು ವ್ಯಾಖ್ಯಾನಿಸಲಾಗಿದೆ. 'ಸತ್ವ' ಎಂದರೆ ಬುದ್ಧಿಯೆಂದರ್ಥ, 'ಕ್ಷೇತ್ರಜ್ಞ' ಎಂದರೆ ಜೀವನೆಂದರ್ಥ. ಒಟ್ಟಾರೆ 'ದ್ವಾ ಸುಪರ್ಣಾ' ಎಂಬ ಶ್ರುತಿಯು ಬುದ್ಧಿಜೀವವಿಷಯಕವೇ ಆಯಿತು.

**ब्राह्मणे सत्वशब्दस्य ''ऊनं न सत्वेष्वधिको बबाधे'' इति प्रयोगात् ''सत्वमस्त्री तु जन्तुषु'' इति नामानुशासनात् ''सत्वं जीव इति प्रोक्तः'' इति स्मृतेश्च जीवपरत्वात् ।**

ಸಮಾಧಾನ - ಅದ್ವೈತಿಗಳ ಈ ಆಕ್ಷೇಪವು ತಪ್ಪು. ಪೈಂಗಿ ರಹಸ್ಯ ಬ್ರಾಹ್ಮಣದಲ್ಲಿ 'ದ್ವಾ ಸುಪರ್ಣಾ' ಎಂಬ ಶ್ರುತಿಯು ಸತ್ವ ಹಾಗೂ ಕ್ಷೇತ್ರಜ್ಞಗಳನ್ನು ವಿಷಯೀಕರಿಸುತ್ತಿದೆಯೆಂದು ಹೇಳಲಾಗಿದೆ; ಹೊರತು ಬುದ್ಧಿ ಹಾಗೂ ಜೀವರನ್ನು ವಿಷಯೀಕರಿಸುತ್ತಿದೆಯೆಂದು ಹೇಳಿಲ್ಲ. ಸತ್ವಶಬ್ದಕ್ಕೆ ಬುದ್ಧಿಯೆಂಬ ವ್ಯಾಖ್ಯಾನವು ಅಯುಕ್ತ; ಹೊರತಾಗಿ ಜೀವನೆಂದೇ ಅರ್ಥ. ಏಕೆಂದರೆ ರಘುವಂಶದಲ್ಲಿ 'ಊನಂ ನ ಸತ್ವೇಷ್ವಧಿಕೋ ಬಬಾಧೇ' ಎಂಬುದಾಗಿ ಅನೇಕ ಪ್ರಾಣಿಗಳಿರುವಾಗ ಸಣ್ಣ ಪ್ರಾಣಿಗಳನ್ನು ದೊಡ್ಡ ಪ್ರಾಣಿಗಳು ಹಿಂಸಿಸಲಿಲ್ಲ ಎಂದು ಹೇಳಲಾಗಿದೆ. ಇಲ್ಲಿರುವ ಸತ್ವಶಬ್ದಕ್ಕೆ ಪ್ರಾಣಿಯೆಂದರ್ಥ. ಮತ್ತು ಅಮರಕೋಶದಲ್ಲಿಯೂ 'ಸತ್ವಮಸ್ತ್ರೀ ತು ಜಂತುಷು' ಎಂಬುದಾಗಿ 'ಜಂತು' ಎಂಬರ್ಥದಲ್ಲಿ ಸತ್ವಶಬ್ದವನ್ನು ಪ್ರಯೋಗಿಸಲಾಗಿದೆ. 'ಜಂತು' ಎಂದರೆ ಜೀವನೆಂದೇ ಅರ್ಥ. ಮತ್ತು 'ಸತ್ವಂ ಜೀವ ಇತಿ ಪ್ರೋಕ್ತಃ' ಎಂಬ ಸ್ಮೃತಿಪ್ರಮಾಣವೂ ಇರುವುದರಿಂದ ಸತ್ವಶಬ್ದಕ್ಕೆ ಜೀವನೆಂಬ ವ್ಯಾಖ್ಯಾನವು ಅನಿವಾರ್ಯ.

**क्षेत्रज्ञशब्दस्य च –**

**'प्रकृतेश्च विकाराणां द्रष्टारमगुणान्वितम् ।**
**क्षेत्रज्ञमाहुर्जीवं तु कर्तारं गुणसंयुतम् ॥'**

**इति मोक्षधर्मादिवचनैर्ब्रह्मपरत्वात् ।**

ಇನ್ನು 'ಕ್ಷೇತ್ರಜ್ಞ' ಶಬ್ದಕ್ಕೆ ವಿಷ್ಣುವೆಂದರ್ಥ. ಏಕೆಂದರೆ -

'ಪ್ರಕೃತೇಶ್ಚ ವಿಕಾರಾಣಾಂ ದ್ರಷ್ಟಾರಮಗುಣಾನ್ವಿತಮ್ ।
ಕ್ಷೇತ್ರಜ್ಞಮಾಹುರ್ಜೀವಂ ತು ಕರ್ತಾರಂ ಗುಣಸಂಯುತಮ್ ॥'

ಪ್ರಕೃತಿಯ ವಿಕಾರಗಳನ್ನು ನೋಡುವ ವ್ಯಕ್ತಿಯು ತ್ರಿಗುಣಗಳಿಂದ ರಹಿತನಾಗಿದ್ದಾನೆ. ಅಂತಹ ಸರ್ವೋತ್ತಮನಾದ ವಿಷ್ಣುವೇ ಕ್ಷೇತ್ರಜ್ಞನೆನಿಸುತ್ತಾನೆ. ಕರ್ತೃವಾದ ಜೀವನಾದರೂ ತ್ರಿಗುಣಗಳಿಂದ ಬದ್ಧನಾಗಿದ್ದಾನೆ. ಹೀಗೆ ಮೋಕ್ಷಧರ್ಮ ವಚನದಿಂದ ಕ್ಷೇತ್ರಜ್ಞ ಶಬ್ದವು ವಿಷ್ಣುವನ್ನೇ ಪ್ರತಿಪಾದಿಸುತ್ತದೆಂದು ತಿಳಿಯುತ್ತದೆ.

**अन्यथा 'द्वा सुपर्णा' इत्यस्मादुत्तरं ''समाने वृक्षे पुरुषो निमग्नोऽनीशया शोचति मुह्यमानः'' इत्यादिकमयुक्तम् नहि बुद्धौ पुरुषशब्दो मुह्यमानत्ववीत-शोकत्वादिकं च युक्तम् ।**

ಒಂದು ವೇಳೆ 'ದ್ವಾ ಸುಪರ್ಣಾ' ಎಂಬ ಶ್ರುತಿಯು ಜೀವ ಹಾಗೂ ಬ್ರಹ್ಮರನ್ನೇ ವಿಷಯೀಕರಿಸುತ್ತಿದೆಯೆಂದು ಹೇಳದಿದ್ದರೆ, ಈ ಶ್ರುತಿಯ ಮುಂದಿನ ವಾಕ್ಯದಲ್ಲಿ 'ಸಮಾನೇ ವೃಕ್ಷೇ

ಪುರುಷೋ ನಿಮಗ್ನೋಽನೀಶಯಾ ಶೋಚತಿ ಮುಹ್ಯಮಾನಃ' ಇತ್ಯಾದಿ ಮಾತುಗಳನ್ನು ಹೇಳಿದ್ದು ತಪ್ಪಾಗಬೇಕಾಗುತ್ತದೆ. ಏಕೆಂದರೆ ಬುದ್ಧಿಯಲ್ಲಿ ಪುರುಷ ಶಬ್ದದ ಪ್ರಯೋಗವನ್ನಾಗಲೀ, ಮುಹ್ಯಮಾನತ್ವ, ವೀತಶೋಕತ್ವ ಧರ್ಮಗಳನ್ನಾಗಲೀ ಹೇಳಲು ಸಾಧ್ಯವಿಲ್ಲ.

**प्रकाशः –**

**पञ्चम इति ।। भेदव्यपदेशादिति सूत्रे । "अन्यमीशमिति जीवेशभेदव्यपदेशादित्यर्थः" इति टीका न युक्तेव । श्रुतौ जीवादन्यमित्यप्रतीतेः । विरुद्धा चादृश्यत्वाधिकरणभाष्येणेत्यत आह – अत्र चेति ।।**

ಓಂ ಭೇದವ್ಯಪದೇಶಾತ್ ಓಂ ಎಂಬುದು ಐದನೆಯ ಸೂತ್ರ. ಈ ಸೂತ್ರದಲ್ಲಿ ಜೀವಬ್ರಹ್ಮಭೇದವನ್ನು ಸಮರ್ಥಿಸಲಾಗಿದೆ. ಸೂತ್ರವನ್ನು ವ್ಯಾಖ್ಯಾನಿಸುವಾಗ 'ಅನ್ಯಮೀಶಮಿತಿ ಜೀವೇಶಭೇದವ್ಯಪದೇಶಾದಿತ್ಯರ್ಥಃ' 'ಶ್ರುತಿಯಲ್ಲಿ 'ಅನ್ಯಮೀಶಮ್' ಎಂಬುದಾಗಿ ಜೀವೇಶ ಭೇದವು ಉಕ್ತವಾಗಿರುವುದರಿಂದ' ಎಂಬುದಾಗಿ ಟೀಕೆಯಲ್ಲಿ ಹೇಳಿದ್ದಾರೆ. ಇದು ತಪ್ಪು. ಏಕೆಂದರೆ 'ಅನ್ಯಮೀಶಮ್' ಎಂಬುದಾಗಿ ಶ್ರುತಿಯು 'ಅನ್ಯಮ್' ಎಂಬುದಾಗಿ ಭೇದವನ್ನಷ್ಟೇ ಹೇಳುತ್ತಿದೆ ಹೊರತು, ಜೀವನಿಂದ ಭೇದವನ್ನು ಹೇಳುತ್ತಿಲ್ಲ. ಹಾಗೂ ಜೀವಭೇದವನ್ನು ಈಶನಲ್ಲಿ ಸಮರ್ಥಿಸಿದರೆ ಅದೃಶ್ಯತ್ವಾಧಿಕರಣದ ಭಾಷ್ಯದಿಂದ ವಿರೋಧವೂ ಬರುತ್ತದೆ. ಅದೃಶ್ಯತ್ವಾಧಿಕರಣದಲ್ಲಿರುವ 'ವಿಶೇಷಣಭೇದವ್ಯಪದೇಶಾಭ್ಯಾಂ ಚ ನೇತರೌ' ಎಂಬ ಸೂತ್ರದಲ್ಲಿ ಈಶಶಬ್ದಕ್ಕೆ ರುದ್ರನೆಂಬ ಅರ್ಥವನ್ನು ವಿವಕ್ಷಿಸಿ ರುದ್ರನಿಗಿಂತ ಪರಮಾತ್ಮನು ಭಿನ್ನನಾಗಿದ್ದಾನೆಂದು ವ್ಯಾಖ್ಯಾನಿಸಲಾಗಿದೆ. ಅದಕ್ಕೆ ವಿರುದ್ಧವಾಗಿ ಜೀವನಿಂದ ಪರಮಾತ್ಮನು ಭಿನ್ನನಾಗಿದ್ದಾನೆಂದು ಈಗ ವ್ಯಾಖ್ಯಾನಿಸಿದರೆ ತಪ್ಪಾಗುತ್ತದಲ್ಲವೇ? ಎಂಬ ಪ್ರಶ್ನೆಗೆ 'ಅತ್ರ ಚ' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

**प्रकाशः – पदिन्यायेनेति ।।** चतुर्थस्याद्यपादे "पदकर्माप्रयोजकं नयनस्य परार्थत्वात्" इति दशमाधिकरणे चिन्तितम् । ज्योतिष्टोमे "एकहायन्या क्रीणाति" इत्येकहायन्या गवा सोमक्रयणं प्रकृत्य "षट्पदान्यनुनिष्क्रामति । सप्तमं पदमध्वर्युरञ्जलिना गृह्णाति" इति षट्पदनयनानन्तरं साज्यसप्तमपदपांसुग्रहणं विधाय "यर्हि हविर्धाने प्राची प्रवर्तयेयुस्तर्हि तेनाक्षमुपाञ्ज्यात्" इति हविर्धाने शकटप्रवर्तनकाले तदक्षाञ्जनं तेन पदपांसुना साऽज्येन कर्तव्यमाम्नायते । तत्र सोमक्रयणवत्पदपांसुसाध्यमक्षाञ्जनमप्येकहायनीनयनस्य प्रयोजकमनुष्ठापकमिति यावत् । उत नेति संशये उभयोरप्येकहायनीनयनसाध्यत्वादुभयं प्रयोजकमिति प्राप्ते एकहायन्या क्रीणातीत्येकहायन्याः क्रयणार्थत्वेन विधानाद् यदर्थं द्रव्यं

तदर्थस्तत्संस्कार इत्येकहायन्या सोमक्रयणदेशं प्रति नयनरूपस्य संस्कारस्यापि क्रयणार्थत्वात्क्रयणमेव प्रयोजकमन्यदनुनिष्पादीति सिद्धान्त इति ।

ಗ್ರಂಥದಲ್ಲಿ ಪದಿನ್ಯಾಯವನ್ನು ಹೇಳಿದ್ದಾರೆ. ಪೂರ್ವಮೀಮಾಂಸೆಯ ಪದಿನ್ಯಾಯದ ವಿವರಣೆ ಹೀಗಿದೆ -

'ಪದಕರ್ಮಾಪ್ರಯೋಜಕಂ ನಯನಸ್ಯ ಪರಾರ್ಥತ್ವಾತ್'[1] (೪-೧-೧೦)

ಜ್ಯೋತಿಷ್ಟೋಮ ಪ್ರಕರಣದಲ್ಲಿ 'ಏಕಹಾಯನ್ಯಾ ಕ್ರೀಣಾತಿ' ಎಂಬ ವಾಕ್ಯವು ಪ್ರಸಕ್ತವಾಗಿದೆ. ಜ್ಯೋತಿಷ್ಟೋಮ ಯಾಗಕ್ಕೋಸ್ಕರ ಸೋಮರಸವನ್ನು ಸಂಪಾದಿಸಬೇಕು. ಧನ, ಕನಕಾದಿಗಳನ್ನು ಕೊಟ್ಟು ಸೋಮಲತೆಯನ್ನು ಕ್ರಯಣ ಮಾಡದೇ ಒಂದು ವರ್ಷದ ಕರುವನ್ನು ನೀಡಿ ಸೋಮಲತೆಯನ್ನು ಕ್ರಯಣ

(१) भाट्टसङ्ग्रहः –

अथ दशमं गवानयनस्य पदकर्माप्रयुक्ताधिकरणम्

**पदकर्माप्रयोजकं नयनस्य परार्थत्वात् ॥ २५ ॥**

पूर्ववैषम्येणात्र **शङ्कनात्सङ्गतिः** । ज्योतिष्टोमे "एकहायन्या सोमं क्रीणाति" इति सोमक्रयं प्रकृत्य श्रूयते "षट्पदान्यनुनिष्क्रामति, सप्तमं पदमञ्जलिना गृह्णाति" इति, "यर्हि हविर्धाने प्राची प्रवर्तयेयुस्तर्हि तेनाक्षमुपाञ्ज्यात्" इति च । सोमं क्रेतुमेकहायनी गौर्यदा नीयते तदाऽध्वर्युस्तस्याः पृष्ठतोऽनुगच्छति । ततः सप्तमे पदे हिरण्यं निधाय, आज्येन हुत्वा, तत्पदगतरजो गृह्णाति । तद्रजः सङ्गृह्य हविर्धानयोः शकटयोः प्राङ्मुखतया प्रवर्तमानयोरक्षे तेन रजसा युक्तमञ्जनं प्रतिक्षिपेदिति **तदर्थः** । तत्र **सन्देहः**, यदेतदक्षाभ्यञ्जनं सप्तमपदसाध्यं तदर्थमप्येकहायनीनयनं, तेनापि प्रयुज्यते, उत क्रयार्थमेव नयनं, तेनैव प्रयुज्यत इति । **पूर्वपक्षस्तु**, पूर्वत्र दध्यानयनस्य 'तप्ते पयसि' इत्यादिवाक्येनाऽमिक्षा-मात्रार्थत्वेऽपि, एकहायनीनयनस्य वाक्येन क्रयार्थत्वावगमात्, क्रयस्याक्षाभ्यञ्जनस्य च द्वयोरप्येकहायनीनयनसाध्यत्वात् सन्निधानात् क्रयस्येव पदकर्मणोऽक्षाभ्यञ्जनस्यापि शेष इत्युभयार्थं सदुभाभ्यां प्रयुज्यते गोर्नयनमिति । **सिद्धान्तस्तु**, 'एकहायन्याक्रीणाति' इति तृतीयाश्रुत्या गोः क्रयार्थत्वावगमेन तत्संस्काररूपनयनस्यापि तदर्थतैवेति क्रय एवैकहायनीयनप्रयोजको न पदकर्माक्षाभ्यञ्जनम् । तत्तु परार्थमेकहायनीनयनमुप-जीवतीति । तदाह **सूत्रे**, **पदकर्म** पदसाध्यमक्षाभ्यञ्जनं नयनस्या**प्रयोजकम्** । नयनस्य क्रयरूप**परार्थत्वा**दिति । **फलन्तु**, दैवात्सप्तमं पदं शिलादौ निधीयते, पदपांसुग्रहणाय सा पुनर्नेया **पूर्वपक्षे** । **सिद्धान्ते तु** न पुनर्नेया । किन्तु सप्तमपदासंस्कृतेनैव रजसा अक्षाभ्यञ्जनं कार्यमिति । नच परप्रयुक्तद्रव्योपजीविनस्तदलाभे लोप एव युक्त इति वाच्यम् । सप्तमपदसंस्काराभावेऽपि पांसुप्रयोजकस्याक्षाभ्यञ्जनविधेः सत्त्वादिति ।

इति दशमं गवानयनस्य पदकर्माप्रयुक्तताधिकरणम्

ಮಾಡಬೇಕು. ಆ ಒಂದು ವರ್ಷದ ಕರು ಕೆಂಪಾಗಿರಬೇಕು. ಮತ್ತು ಪಿಂಗವರ್ಣದ ಕಣ್ಣುಳ್ಳದ್ದಾಗಿರಬೇಕು. ಇಂತಹ ಕರುವನ್ನು ಸೋಮಕ್ರಯಣಕ್ಕೋಸ್ಕರ ಕರೆದುಕೊಂಡು ಹೋಗುವಾಗ ಏನು ಮಾಡಬೇಕೆಂಬುದನ್ನು ಶ್ರುತಿ ಹೇಳುತ್ತಿದೆ. 'ಷಟ್‌ಪದಾನ್ಯನುನಿಷ್ಕ್ರಾಮತಿ । ಸಪ್ತಮಂ ಪದಮಧ್ವರ್ಯುರಂಜಲಿನಾ ಗೃಹ್ಣಾತಿ' ಪ್ರಾರಂಭದ ಆರು ಹೆಜ್ಜೆಗಳನ್ನು ಕರು ಇಟ್ಟಮೇಲೆ ಏಳನೆಯ ಹೆಜ್ಜೆಯನ್ನು ಇಡುತ್ತದೆ. ಹೆಜ್ಜೆಯಿಟ್ಟ ಆ ಸ್ಥಳವನ್ನು ಅಧ್ವರ್ಯು ಆದವನು ತುಪ್ಪವನ್ನು ಬೆರೆಸಿ ಬೊಗಸೆಯಲ್ಲಿ ಮಣ್ಣನ್ನು ಸ್ವೀಕರಿಸಬೇಕು. ಹೀಗೆ ಪಾಂಸುಗ್ರಹಣವನ್ನು ಶ್ರುತಿ ವಿಧಿಸಿದೆ. ಅನಂತರ 'ಯರ್ಹಿ ಹವಿರ್ಧಾನೇ ಪ್ರಾಚೀ ಪ್ರವರ್ತಯೇಯುಃ ತರ್ಹಿ ತೇನಾಕ್ಷಮುಪಾಂಜ್ಯಾತ್' ಎಂಬುದಾಗಿ ಯಜ್ಞಮಂಟಪದಲ್ಲಿ ಹವಿರ್ಧಾನದ ಸಂದರ್ಭದಲ್ಲಿ ಶಕಟವು ಚಲಿಸುವಾಗ ಅದರ ಅಕ್ಷಗಳಿಗೆ ಈ ತುಪ್ಪಮಿಶ್ರಿತವಾದ ಮಣ್ಣನ್ನು ಹಚ್ಚಬೇಕೆಂದು ವಿಧಿಸಲಾಗಿದೆ.

ಇಲ್ಲಿ ತಿಳಿಯಬೇಕಾದ ವಿಚಾರವಿಷ್ಟು - ಒಂದು ವರ್ಷದ ಕರುವನ್ನು ಕರೆದುಕೊಂಡು ಹೋಗುವುದೇ ಸೋಮಕ್ರಯಣಕ್ಕೋಸ್ಕರ ಆದ್ದರಿಂದ ಸೋಮಕ್ರಯಣವು ಪ್ರಧಾನವಾಗುತ್ತದೆ. ಏಕಹಾಯನೀನಯನವು ಎಂದರೆ ಕರುವನ್ನು ಕರೆದುಕೊಂಡು ಹೋಗುವುದು ಅಂಗವಾಗುತ್ತದೆ. ಎಲ್ಲಿ ಅಂಗಾಂಗ ಭಾವವಿರುತ್ತದೋ ಅಲ್ಲಿ ಅಂಗದ ಅನುಷ್ಠಾನಕ್ಕಾಗಿ ಅಂಗಿಯು ಪ್ರಯುಕ್ತವಾಗಿರುತ್ತದೆ. ಆದ್ದರಿಂದ ಸೋಮಕ್ರಯಣವು ಏಕಹಾಯನೀನಯನಕ್ಕೆ ಪ್ರಯೋಜಕ ಅನುಷ್ಠಾಪಕವಾಯಿತು.

ಇದರಂತೆ ಅಕ್ಷಾಂಜನವೂ ಸಹ ಏಕಹಾಯನೀನಯನಕ್ಕೆ ಅನುಷ್ಠಾಪಕವೋ? ಅಲ್ಲವೋ? ಅಂದರೆ ಕರುವನ್ನು ಸೋಮಕ್ರಯಣಕ್ಕೆ ಮಾತ್ರ ಕರೆದುಕೊಂಡು ಹೋಗಬೇಕೋ? ಅಥವಾ ಅಕ್ಷಾಂಜನದ ಸಂಪಾದನೆಗೋಸ್ಕರವೂ ಕರೆದುಕೊಂಡು ಹೋಗಬೇಕೋ? ಎಂಬ ಸಂಶಯ ಬರುತ್ತದೆ.

ಪೂರ್ವಪಕ್ಷ - ಸೋಮಕ್ರಯಣವು ಏಕಹಾಯನೀನಯನದಿಂದಲೇ ಹೇಗೆ ಸಾಧ್ಯವೋ, ಅದರಂತೆ ಅಕ್ಷಾಂಜನವೂ ಸಹ ಸೋಮಕ್ರಯಣದಿಂದಲೇ ಸಾಧ್ಯ. ಆದ್ದರಿಂದ ಏಕಹಾಯನೀನಯನವು ಸೋಮಕ್ರಯಣಕ್ಕೂ ಅಂಗವಾಗುತ್ತದೆ. ಅಕ್ಷಾಂಜನಕ್ಕೂ ಸಹ ಅಂಗವಾಗುತ್ತದೆ.

ಸಿದ್ಧಾಂತ - 'ಏಕಹಾಯನ್ಯಾಽಂಜನಮ್ ಕುರ್ಯಾತ್' ಎಂಬುದಾಗಿ ವಿಧಿವಾಕ್ಯವಿಲ್ಲ. 'ಏಕಹಾಯನ್ಯಾ ಸೋಮಂ ಕ್ರೀಣಾತಿ' ಎಂದು ವಿಧಿವಾಕ್ಯವಿದೆ. ಏಕಹಾಯನೀನಯನ್ನು ವಿಧಾನ ಮಾಡಿರುವುದೇ ಸೋಮಕ್ರಯಣಕ್ಕೋಸ್ಕರ. 'ಏಕಹಾಯನೀ' ಎಂಬ ದ್ರವ್ಯವನ್ನು ಪ್ರಧಾನಕರ್ಮಕ್ಕಾಗಿ ಹೀಗೆ ವಿಧಿಸಲಾಗಿದೆ. ದ್ರವ್ಯದ ಸಂಸ್ಕಾರವೆಂದರೆ ನಯನವೇ ಆಗಿದೆ. ದ್ರವ್ಯ ಯಾವುದಕ್ಕೋಸ್ಕರ ಇದೆಯೋ? ಅದರ ಸಂಸ್ಕಾರವೂ ಸಹ ಅದಕ್ಕೋಸ್ಕರವೇ ಇರುತ್ತದೆ. ಸೋಮಕ್ರಯಣಕ್ಕೋಸ್ಕರ 'ಏಕಹಾಯನೀ' ಎಂಬ ದ್ರವ್ಯವು ಇದೆಯೆಂದಾದರೆ ಅದರ ನಯನವೆಂಬ ಸಂಸ್ಕಾರವೂ ಸಹ ಸೋಮಕ್ರಯಣಕ್ಕೋಸ್ಕರವೆಂದೇ ಸಿದ್ಧವಾಗುತ್ತದೆ. ಆದ್ದರಿಂದ ಕ್ರಯಣವೇ ಪ್ರಯೋಜಕ ಎಂದು ಸಿದ್ಧಾಂತ.

**प्रकाशः** – अत्र सप्तमं पदमित्यत्र पदशब्दस्य सन्निधानादेकहायनीपदविषयकत्वं सिद्धङ्कृत्वा विचारः प्रवृत्त इति पदिन्यायेनेत्युक्तमित्याहुः । पदयुक्तन्यायः पदिन्यायः ।

ದ್ಯುಭ್ವಾದ್ಯಧಿಕರಣ (೧-೩-೧)

ಈ ಪೂರ್ವಮೀಮಾಂಸೆಯ ಅಧಿಕರಣದಲ್ಲಿ 'ಸಪ್ತಮಂ ಪದಮಧ್ವರ್ಯುಃ ಅಂಜಲಿನಾ ಗೃಹ್ಣಾತಿ' ಎಂಬಲ್ಲಿ ಪದಶಬ್ದಕ್ಕೆ ಪ್ರಕೃತವಾದ ಏಕಹಾಯನೀಗೋವಿನ ಹೆಜ್ಜೆಯೆಂದೇ ಅರ್ಥವನ್ನು ಹೇಳಲಾಗಿದೆ. ಅಂದರೆ ಯಾವ ಹೆಜ್ಜೆಯನ್ನು ವಿವಕ್ಷಿಸಬೇಕೆಂದು ಜಿಜ್ಞಾಸೆಯು ಉಂಟಾದಾಗ ಪ್ರಕೃತವಾದ ಏಕಹಾಯನೀಗೋವಿನ ಹೆಜ್ಜೆಯನ್ನೇ ಇಟ್ಟುಕೊಳ್ಳಬೇಕೆಂದು ಸಿದ್ಧಾಂತ ಮಾಡಲಾಗಿದೆ. ಪ್ರಕೃತದಲ್ಲಿ 'ಅನ್ಯಮೀಶಮ್' ಎಂಬ ಶ್ರುತಿಯಲ್ಲಿ ಭೇದಕ್ಕೆ ಪ್ರತಿಯೋಗಿಯಾದ ವ್ಯಕ್ತಿಯನ್ನು ಯಾರೆಂದು ಹೇಗೆ ನಿರ್ಣಯಿಸುವುದು? ಎಂಬ ಪ್ರಶ್ನೆಯು ಪ್ರಸಕ್ತವಾಗುತ್ತದೆ. ಆವಾಗ ಅದೇ ಶ್ರುತಿಯಲ್ಲಿ 'ಪಶ್ಯತಿ' ಎಂಬ ಪದದಿಂದ ಜೀವನು ಪ್ರಸಕ್ತನಾಗಿದ್ದಾನೆ. ಅಂತಹ ಜೀವನನ್ನೇ ಭೇದಕ್ಕೆ ಪ್ರತಿಯೋಗಿಯಾಗಿ ವಿವಕ್ಷಿಸಬೇಕು. ಆವಾಗ 'ಅನ್ಯಮೀಶಮ್' ಎಂಬ ಶ್ರುತಿಯು ಜೀವೇಶಭೇದ ವಿಷಯದಲ್ಲಿ ಪ್ರಮಾಣವಾಗುತ್ತದೆ.

ಇದನ್ನು 'ಪದಿನ್ಯಾಯ' ಎನ್ನುತ್ತಾರೆ. 'ಪದಿ' ಎಂದರೆ 'ಪದ್ಯಮ್ ಅಸ್ಯಾ ಅಸ್ತೀತಿ ಪದಿ' 'ಪದಿಚಾಸು ನ್ಯಾಯಶ್ಚ' 'ಪದಿನ್ಯಾಯಃ' ಅಂದರೆ ಪದಶಬ್ದ ಘಟಿತವಾದ ವಾಕ್ಯದಲ್ಲಿರುವ ನ್ಯಾಯವೆಂದರ್ಥ.

ಶ್ರೀವಿಜಯೀಂದ್ರತೀರ್ಥಶ್ರೀಗಳು ನ್ಯಾಯಾಮೃತದ ವ್ಯಾಖ್ಯಾನದಲ್ಲಿ ಯದಿನ್ಯಾಯವೆಂದು ಹೇಳಿದ್ದಾರೆ. ಆ ನ್ಯಾಯವೇ ಬೇರೆಯಾಗುತ್ತದೆ. ಕೆಲವೆಡೆ ಯದಿನ್ಯಾಯವೆಂಬ ಪಾಠವಿರುವುದನ್ನೂ ಸಹ ಕಾಣಬಹುದು.

**प्रकाशः – एवमिति ।।** पश्चम इव प्रकरणादित्यत्रापीत्यर्थः । जीवस्य कस्माच्चिदीशादन्यत्वमुच्यते नतु परमात्मनः । अतो न तयोर्भेद इति शङ्कायां

'ಏವಂ ಷಷ್ಠೇऽಪಿ' ಎಂದರೆ ಐದನೆಯ ಸೂತ್ರದಂತೆ 'ಓಂ ಪ್ರಕರಣಾತ್ ಓಂ' ಎಂಬ ಆರನೆಯ ಸೂತ್ರದಲ್ಲಿಯೂ ಸಹ ಎಂದರ್ಥ. ಜೀವನು ಯಾರೋ ಒಬ್ಬ ಈಶನಿಂದ ಭಿನ್ನನಾಗಿದ್ದಾನೆಂದಷ್ಟೇ ಶ್ರುತಿಯಿಂದ ಸಿದ್ಧವಾಗಲಿ, ಪರಮಾತ್ಮನಿಂದಲೇ ಭಿನ್ನನಾಗಿದ್ದಾನೆಂದು ಏಕೆ ಸಿದ್ಧವಾಗಬೇಕು? ಆದ್ದರಿಂದ ಜೀವಪರಮಾತ್ಮರಿಗೆ ಭೇದವು ಸಿದ್ಧವಾಗುತ್ತದೆನ್ನಲು 'ಅನ್ಯಮೀಶಮ್' ಎಂಬ ಶ್ರುತಿಯು ಆಧಾರವಾಗುವುದಿಲ್ಲವಲ್ಲವೇ?

**प्रकाशः –** ''द्वे विद्ये वेदितव्ये'' इति परविद्याविषयस्य वस्तुनः परमात्मन एव प्रक्रम्याधीतत्वेन तस्य तत्प्रकरणत्वेनेशशब्देन तस्यैव ग्रहणोपपत्तेरित्यर्थोक्तेरिति भावः ।

ಈ ಆಶಂಕೆಯು ತಪ್ಪು. ಏಕೆಂದರೆ 'ದ್ವೇ ವಿದ್ಯೇ ವೇದಿತವ್ಯೇ' ಎಂಬುದಾಗಿ ಪರವಿದ್ಯೆಗೆ ವಿಷಯನಾದ ಪರಮಾತ್ಮನೇ ಪ್ರಾರಂಭದಲ್ಲಿ ಪ್ರಸಕ್ತನಾಗಿದ್ದಾನೆ. ಆದ್ದರಿಂದ ಈ ಪ್ರಕರಣವು ಪರಮಾತ್ಮನನ್ನೇ ಪ್ರತಿಪಾದಿಸಬೇಕಾದ್ದರಿಂದ ಇಲ್ಲಿರುವ 'ಈಶ' ಶಬ್ದವೂ ಸಹ ಅವನನ್ನೇ ಹೇಳುತ್ತದೆ. ಅಂತಹ ಪರಮಾತ್ಮನಿಂದ ಜೀವನು ಭಿನ್ನನಾಗಿದ್ದಾನೆಂಬ ಅರ್ಥವನ್ನು ಶ್ರುತಿಗೆ ಹೇಳುವುದು ಅನಿವಾರ್ಯವಾಗಿದೆಯೆಂದು ತಿಳಿಯಬೇಕು.

**प्रकाशः – चशब्दाभाव इति ।।** पूर्वानन्तर्यं चेत्यपि ज्ञेयम् ।

'ಪ್ರಕರಣಾತ್' ಎಂಬ ಆರನೆಯ ಸೂತ್ರದಲ್ಲಿ 'ಚ' ಶಬ್ದವನ್ನು ಹೇಳಿರುವುದಿಲ್ಲ. ಏಕೆಂದರೆ ಐದನೆಯ ಸೂತ್ರದ ನಿರ್ಣಯದ ಮೇಲೆ ಬರುವ ಆಶಂಕೆಗೆ ಉತ್ತರವನ್ನು ನೀಡುತ್ತಿದೆ. ಆದ್ದರಿಂದಲೇ ಆರನೆಯ ಸ್ಥಾನವು

ಈ ಸೂತ್ರಕ್ಕೆ ಯುಕ್ತವಾಗಿದೆ. ಇಲ್ಲದಿದ್ದರೆ ಐದನೆಯ ಸೂತ್ರಕ್ಕಿಂತ ಮೊದಲೇ ಈ ಸೂತ್ರವನ್ನು ಹೇಳಬಹುದಿತ್ತಲ್ಲವೇ ? ಎಂಬ ಪ್ರಶ್ನೆಗೆ ಅವಕಾಶವಿರುತ್ತಿತ್ತು ಎಂದು 'ಚಶಬ್ದಾಭಾವ' ಎಂಬ ಪ್ರತೀಕದ ಅಭಿಪ್ರಾಯ.

**प्रकाशः** – नन्वेवमयं योगश्शक्योऽवक्तुम् । कथमिष्टसिद्धिः । यथाऽतच्छब्दादित्युक्त्या समाख्यास्थरुद्रादिशब्दानां विषयवाक्यस्थजायमानशब्दस्य चान्यार्थत्वनिरासेन विष्णवर्थत्वसिद्धिः तथेशशब्दस्यापि विष्णवर्थत्वसिद्धेः ।

ಆಕ್ಷೇಪ - 'ಪ್ರಕರಣಾತ್' ಎಂಬ ಸೂತ್ರವನ್ನು ಹೇಳುವ ಅವಶ್ಯಕತೆ ಇಲ್ಲ. ಹಾಗಾದರೆ ಪ್ರಕೃತ ಪ್ರಮೇಯ ಸಿದ್ಧಿ ಹೇಗೆ ಎಂದರೆ ? ಈ ಸೂತ್ರವನ್ನು ಹೇಳದಿದ್ದರೂ ಸಹ ನಿಮ್ಮ ಇಷ್ಟವು ಸಿದ್ಧಿಸುತ್ತದೆ. ಹೇಗೆಂದರೆ? 'ಅತಚ್ಛಬ್ದಾತ್' ಎಂದು ಹೇಳಿರುವುದರಿಂದಲೇ ಸಮಾಖ್ಯಾಪ್ರಮಾಣದಲ್ಲಿರುವ ರುದ್ರಾದಿಶಬ್ದಗಳಿಗೆ ಅನ್ಯಪರತ್ವ ನಿರಾಕರಣ ಪೂರ್ವಕವಾಗಿ ವಿಷ್ಣುಪರತ್ವವನ್ನು ಹೇಳಿದ್ದರಿಂದ ವಿಷಯವಾಕ್ಯದಲ್ಲಿರುವ ಜಾಯಮಾನಶಬ್ದವೂ ಸಹ ಅನ್ಯಪರವಾಗುವುದಿಲ್ಲವೆಂದು ಸಮರ್ಥಿಸಲಾಯಿತು. ಅದರಂತೆ 'ಅನ್ಯಮೀಶಮ್' ಎಂಬಲ್ಲಿರುವ 'ಈಶ' ಶಬ್ದವೂ ಸಹ ಅನ್ಯಪರವಾಗದೇ, ವಿಷ್ಣುಪರವೇ ಆಗುತ್ತದೆಂಬ ವಿಚಾರವು ಸಿದ್ಧವಾಗುತ್ತದೆ. ಹೀಗೆ 'ಅತಚ್ಛಬ್ದಾತ್' ಎಂಬ ಸೂತ್ರದ ಭಾಗದಿಂದಲೇ ಉದ್ದೇಶವು ಸಿದ್ಧಿಸುತ್ತದೆ.

**प्रकाशः** – नच तत्र ''अजायमानः'' इत्यादिश्रुतिस्मृतिबलात्तथात्वसिद्धिः । इहापि ''स ईशो यो हरिः'' इति ''ईशानादेव चेशानः'' इति ''एवं नानाविधैश्शब्दैरेक एव त्रिविक्रमः'' इति ''अन्यनाम्नां गतिर्विष्णुः'' इति श्रुतिस्मृतिभावात् ।

'ಅಜಾಯಮಾನೋ ಬಹುಧಾ ವಿಧಾಯತೇ' ಇವೇ ಮೊದಲಾದ ಶ್ರುತಿ ಹಾಗೂ ಸ್ಮೃತಿಗಳ ಆಧಾರದಿಂದ ಎಲ್ಲಾ ಶಬ್ದಗಳು ವಿಷ್ಣುಪರವಾಗಿದೆಯೆಂದು ಅಲ್ಲಿ ಸಿದ್ಧವಾಯಿತು. ಆದರೆ ಇಲ್ಲಿ ಪ್ರಮಾಣಗಳಿಲ್ಲವಲ್ಲ ಎಂದರೆ ಇಲ್ಲಿಯೂ ಪ್ರಮಾಣಗಳಿವೆ. ಯಾವುದೆಂದರೆ ಇಲ್ಲಿಯೂ ಸಹ 'ಸ ಈಶೋ ಯೋ ಹರಿಃ' ಎಂಬುದಾಗಿ ಶ್ರೀಹರಿಯನ್ನೇ ಈಶನೆನ್ನಲಾಗಿದೆ. 'ಈಶಾನಾದೇವ ಚೇಶಾನಃ' ನಿಯಮನ ಮಾಡುವುದರಿಂದ ಭಗವಂತನು ಈಶಾನನೆನಿಸಿದ್ದಾನೆ ಎಂಬುದಾಗಿ; ಮತ್ತು 'ಏವಂ ನಾನಾವಿಧೈಶಬ್ದೈರೇಕ ಏವ ತ್ರಿವಿಕ್ರಮಃ' ಅನೇಕ ಶಬ್ದಗಳಿಂದ ಒಬ್ಬನೇ ತ್ರಿವಿಕ್ರಮನು ಪ್ರತಿಪಾದ್ಯನಾಗಿದ್ದಾನೆಂಬುದಾಗಿ, 'ಅನ್ಯನಾಮ್ನಾಂ ಗತಿರ್ವಿಷ್ಣುಃ' ಬೇರೆ ನಾಮಗಳಿಗೂ ವಿಷ್ಣುವೇ ಮುಖ್ಯಾಶಯನಾಗಿದ್ದಾನೆ ಇತ್ಯಾದಿಯಾದ ಶ್ರುತಿಸ್ಮೃತಿಗಳು ಈಶ ಶಬ್ದದಿಂದ ವಿಷ್ಣುವೇ ವಾಚ್ಯನಾಗಿದ್ದಾನೆನ್ನಲು ಆಧಾರವಾಗಿವೆ. ಆದುದರಿಂದ 'ಅತಚ್ಛಬ್ದಾತ್' ಎಂಬ ಸೂತ್ರದ ಭಾಗದಿಂದಲೇ ಈ ಸೂತ್ರದ ಉದ್ದೇಶವು ಸಿದ್ಧಿಸುವಾಗ ಪುನಃ ಈ ಸೂತ್ರದ ರಚನೆ ವ್ಯರ್ಥವಲ್ಲವೇ?

**प्रकाशः** – मैवम् । अन्तरङ्गज्ञापके सति त्यागायोगान्निरवकाशजीवलिङ्गादिना प्रकरणमन्यपरमित्याक्षेपे सति तत्सावकाशत्वस्यातच्छब्दादित्यनेनोक्तौ प्रकरणमपि साधकमेव ।

ದ್ಯುಭ್ವಾದ್ಯಧಿಕರಣ (೧-೩-೧)

ಯಾವ ಪ್ರಕರಣದಲ್ಲಿ ಈಶ ಶಬ್ದವಿದೆಯೋ, ಆ ಪ್ರಕರಣದ ಬಲದಿಂದಲೇ ವಿಷ್ಣುವಿಷಯಕವಾಗಿದೆಯೆಂದು ನಿರ್ಣಯಿಸಬಹುದು. ಅಂತರಂಗ ಪ್ರಮಾಣವು ಇರಬೇಕಾದರೆ ಬಹಿರಂಗವೆನಿಸಿದ ಬೇರೆ ಶ್ರುತಿಸ್ಮೃತಿಗಳನ್ನು ಆಧಾರವನ್ನಾಗಿ ನೀಡುವುದು ಸರಿಯಲ್ಲ. ಅಂತರಂಗಜ್ಞಾಪಕವನ್ನು ಬಿಟ್ಟು, ಬಹಿರಂಗಜ್ಞಾಪಕವನ್ನು ಸ್ವೀಕರಿಸುವುದು ತಪ್ಪಾಗುತ್ತದೆ. ಈ ಉದ್ದೇಶಕೋಸ್ಕರ 'ಪ್ರಕರಣಾತ್' ಎಂಬ ಸೂತ್ರವು ಹೊರಟಿದೆ. ಅಥವಾ ನಿರವಕಾಶವಾದ, ಜಾಯಮಾನತ್ವ ಮೊದಲಾದ ಜೀವನ ಲಿಂಗಗಳಿಂದ ಸಮಗ್ರಪ್ರಕರಣವು ಅನ್ಯಪರವಾಗಿದೆಯೆಂದು ಆಕ್ಷೇಪವು ಪ್ರಾಪ್ತವಾದರೆ 'ಅತಚ್ಛಬ್ದಾತ್' ಎಂಬ ಸೂತ್ರದ ಭಾಗದಿಂದ ಪೂರ್ವಪಕ್ಷಲಿಂಗಗಳಿಗೆ ಸಾವಕಾಶತ್ವವನ್ನು ಸಮರ್ಥಿಸಿದ್ದಾಯಿತು. ಆದ್ದರಿಂದಲೇ ಪ್ರಕರಣವೂ ಸಹ ಸಾವಕಾಶವಾಯಿತು. ಹೀಗೆ ಪೂರ್ವಪಕ್ಷಕಾರರು ಹೇಳಿದ ಬಾಧಕಗಳನ್ನು ಪರಿಹರಿಸಿದ ಮೇಲೆ ಈ ಸೂತ್ರವು ಅದೇ ಪ್ರಕರಣವು ಸಿದ್ಧಾಂತಸ್ಥಾಪಕವೂ ಆಗುತ್ತದೆಂಬುದನ್ನು ಸಮರ್ಥಿಸುತ್ತಿದೆ. ಅಂದರೆ ಬೇರೆಯವರನ್ನು ಪ್ರತಿಪಾದಿಸಲು ಬೇಕಾದ ಲಿಂಗಗಳಿಲ್ಲದ ಕಾರಣ ವಿಷ್ಣುವನ್ನು ಪ್ರತಿಪಾದಿಸುತ್ತದೆಂಬುದನ್ನೂ ಸಹ ತಿಳಿಯಬೇಕು.

**ಪ್ರಕಾಶಃ** – **एवमेतदन्यत्राप्यनुसन्धेयमित्यर्थस्य ज्ञापनार्थत्वात्प्रागुक्तश्रुतिलिङ्गो-पोद्बलनार्थत्वाच्चास्य योगस्योक्तिः ।**

ಹೀಗೆ ಬೇರೆ ಅಧಿಕರಣಗಳಲ್ಲಿಯೂ ತಿಳಿಯಬೇಕು. ಅಂದರೆ ಯಾವ ಶ್ರುತಿವಾಕ್ಯಗಳಲ್ಲಿ ನಿರವಕಾಶವಾದ ಪೂರ್ವಪಕ್ಷಲಿಂಗಗಳಿರುತ್ತವೋ, ಅವುಗಳನ್ನು ಸಾವಕಾಶ ಮಾಡಿದ ಮೇಲೆ ಅದೇ ಶ್ರುತಿವಾಕ್ಯವು ವಿಷ್ಣುಪರತ್ವ ವಿಷಯದಲ್ಲಿ ಸಾಧಕಪ್ರಮಾಣವಾಗುತ್ತದೆಂಬ ವಿಚಾರವನ್ನು ಈ 'ಪ್ರಕರಣಾತ್' ಎಂಬ ಸೂತ್ರವು ಪ್ರತಿಪಾದಿಸುತ್ತಿದೆ. ಆದ್ದರಿಂದ ಎಲ್ಲಾ ಅಧಿಕರಣಗಳಲ್ಲಿಯೂ ಇದರ ಪ್ರಯೋಜನವನ್ನು ಪಡೆದುಕೊಳ್ಳಬೇಕು. ಮತ್ತು ಹಿಂದೆ ಹೇಳಲ್ಪಟ್ಟ ಶ್ರುತಿ ಹಾಗೂ ಲಿಂಗಗಳನ್ನು ಸಮರ್ಥನೆ ಮಾಡುತ್ತಿರುವುದರಿಂದಲೂ ಈ ಸೂತ್ರವು ಸಾರ್ಥಕವಾಗಿದೆಯೆಂದು ತಿಳಿಯಬೇಕು.

**ಪ್ರಕಾಶಃ** – **एतेन कथं प्रकरणेन श्रुतिबाध इति प्रत्युक्तम् । श्रुतेस्सावकाशत्वात् प्रकरणस्यानवकाशत्वादिति ।**

ಹೀಗೆ ಹೇಳಿದ್ದರಿಂದ ಪ್ರಕರಣ ಪ್ರಮಾಣದಿಂದ ಬಲಿಷ್ಠವಾದ ಶ್ರುತಿಯು ಹೇಗೆ ಬಾಧಿತವಾಗುತ್ತದೆ? ಎಂಬ ಪೂರ್ವಪಕ್ಷವನ್ನು ನಿರಾಕರಿಸಿದಂತಾಯಿತು. ಶ್ರುತಿಯು ಸಾವಕಾಶವಾದ್ದರಿಂದ ಪ್ರಕರಣವು ನಿರವಕಾಶವಾದ್ದರಿಂದ, ಪ್ರಕರಣದ ಬಲದಿಂದ ಶ್ರುತಿಯನ್ನು ಬಾಧಿಸಬಹುದೆಂದು ಅಭಿಪ್ರಾಯ.

**ಪ್ರಕಾಶಃ** – **सप्तम इति ।। स्थित्यदनाभ्यां चेत्यत्र ।। श्रुतेरिति ।। अन्यशब्दरूपश्रुतेरिति व्यपदेशपदार्थोक्तिः ।**

'ಓಂ ಸ್ಥಿತ್ಯದನಾಭ್ಯಾಂಚ ಓಂ' ಎಂಬುದು ಏಳನೆಯ ಸೂತ್ರ. ಈ ಸೂತ್ರವು ಜೀವೇಶಭೇದ ವಿಷಯದಲ್ಲಿ ಲಿಂಗಪ್ರಮಾಣವನ್ನು ಆಧಾರವನ್ನಾಗಿ ನೀಡುತ್ತಿದೆ. ಗ್ರಂಥದಲ್ಲಿರುವ 'ಶ್ರುತೇಃ' ಎಂಬ ಪದಕ್ಕೆ ಅನ್ಯಶಬ್ದವೆಂಬ ಶ್ರುತಿಯೆಂದರ್ಥ. ಸೂತ್ರದಲ್ಲಿರುವ 'ವ್ಯಪದೇಶ' ಪದದ ಅರ್ಥವನ್ನೇ 'ಶ್ರುತೇಃ' ಎಂದಿದ್ದಾರೆ.

ಪರಿಪೂರ್ಣಚಂದ್ರಿಕಾ

**प्रकाशः** – 'द्वा सुपर्णा' इत्युपक्रम्य 'तयोरन्यः पिप्पलं स्वाद्वत्त्यनश्नन्न्योऽभिचाकशीति' इति जीवेशयोः कर्मफलोपजीवनतद्रहितावस्थानरूपलिङ्गादपीत्यर्थः ।

'ದ್ವಾ ಸುಪರ್ಣಾ' ಇತ್ಯಾದಿಯಾಗಿ ಪ್ರಾರಂಭವಾದ ಪ್ರಕರಣದಲ್ಲಿ 'ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತಿ' ಎಂಬುದರಿಂದ ಕರ್ಮಫಲೋಪಜೀವನವೆಂಬ ಲಿಂಗವನ್ನು 'ಅನಶ್ನನ್ನನ್ಯೋಽಭಿಚಾಕಶೀತಿ' ಎಂಬುದರಿಂದ ಕರ್ಮಫಲೋಪಜೀವನರಾಹಿತ್ಯವೆಂಬ ಲಿಂಗವನ್ನು ಶ್ರುತಿಯು ಜೀವಬ್ರಹ್ಮರಲ್ಲಿ ಹೇಳುತ್ತಿದೆ. ವಿರುದ್ಧವಾದ ಈ ಧರ್ಮಗಳಿಗೆ ಅಧಿಕರಣರಾದ ಜೀವ ಹಾಗೂ ಪರಮಾತ್ಮರು ಅಭಿನ್ನರಾಗಲು ಸಾಧ್ಯವಿಲ್ಲವೆಂದರ್ಥ.

**प्रकाशः** – चशब्द इति ।। पूर्वानन्तर्यं चेत्यपि ग्राह्यम् ।

'ಸ್ಥಿತ್ಯದನಾಭ್ಯಾಂ ಚ' ಎಂಬ ಸೂತ್ರದಲ್ಲಿ 'ಚ' ಶಬ್ದವನ್ನು ಹೇಳಿದ್ದರಿಂದ ಭೇದವ್ಯಪದೇಶ ವಿಷಯದಲ್ಲಿ ಈ ಲಿಂಗವು ಮತ್ತೊಂದು ಪ್ರಮಾಣವಾಗಿದೆಯೆಂದು ತಿಳಿಯುತ್ತದೆ. ಮತ್ತು ಹಿಂದಿನ 'ಪ್ರಕರಣಾತ್' ಎಂಬ ಸೂತ್ರದ ಅನಂತರವೇ ಈ ಸೂತ್ರವು ಸಗಂತವಾಗುತ್ತದೆಂದೂ ಸಹ ತಿಳಿಯುತ್ತದೆ. 'ಭೇದವ್ಯಪದೇಶಾತ್' ಎಂಬ ಸೂತ್ರದಲ್ಲಿ ಜೀವಬ್ರಹ್ಮರಿಗೆ ಭೇದವನ್ನು ಹೇಳಿದ ಮೇಲೆ 'ಪ್ರಕರಣಾತ್' ಎಂಬ ಸೂತ್ರವು ಶ್ರುತಿಪ್ರಮಾಣವನ್ನು ಹೇಳುತ್ತದೆ. ಆದ್ದರಿಂದ ಹಿಂದಿನ ಸೂತ್ರದ ಅನಂತರವೇ ಲಿಂಗಪ್ರಮಾಣವನ್ನು ಹೇಳುವ ಈ ಸೂತ್ರವು ಪ್ರಸಕ್ತವಾಗುತ್ತದೆಂದು ತಿಳಿಯಬೇಕು. ಇದು 'ಚಶಬ್ದಃ' ಎಂಬುದರ ಅರ್ಥ.

**प्रकाशः** – अत्र ''श्रुतिक्रमोल्लङ्घनमीश्वरस्य प्राधान्यज्ञापनार्थम् । स्थितिपदस्याल्पाक्षरत्वाच्च'' इति टीकार्थं व्यक्तमाह – **श्रुताविति** ।। ''अल्पाच्तरं पूर्वम्'' इति पाणिनिस्मरणादिति भावः ।

ಟೀಕೆಯಲ್ಲಿ 'ಶ್ರುತಿಕ್ರಮೋಲ್ಲಂಘನಮಿಶ್ವರಸ್ಯ ಪ್ರಧಾನ್ಯಜ್ಞಾಪನಾರ್ಥಮ್ । ಸ್ಥಿತಿಪದಸ್ಯಾಲ್ಪಾಕ್ಷರತ್ವಾಚ್ಚ' ಎಂದು ಹೇಳಿದ್ದಾರೆ. ಸೂತ್ರದಲ್ಲಿ ಶ್ರುತಿಯ ಕ್ರಮವನ್ನು ಉಲ್ಲಂಘಿಸಿ, ಅದನವನ್ನು ಮೊದಲು ಹೇಳುವ ಬದಲು ಸ್ಥಿತಿಯನ್ನೇ ಏಕೆ ಹೇಳಿದ್ದಾರೆಂದರೆ ಈಶ್ವರನಿಗೆ ಪ್ರಾಧಾನವ್ಯನ್ನು ತಿಳಿಸುವುದಕ್ಕಾಗಿ. ಅಥವಾ ಸ್ಥಿತಿಪದವು ಅಲ್ಪಾಕ್ಷರವುಳ್ಳದ್ದರಿಂದಲೂ ಮೊದಲು ಹೇಳಿದ್ದಾರೆಂದು ಟೀಕೆಯ ಅಭಿಪ್ರಾಯ. ಇದನ್ನೇ ಗ್ರಂಥಕಾರರು 'ಶ್ರುತೌ' ಎಂಬ ವಾಕ್ಯದಿಂದ ಸ್ಪಷ್ಟಪಡಿಸುತ್ತಿದ್ದಾರೆ. 'ಅಲ್ಪಾಚ್ತರಂ ಪೂರ್ವಮ್' ಎಂಬ ಪಾಣಿನಿಯ ಸೂತ್ರದಲ್ಲಿ ಅಲ್ಪವಾದ ಅಜಕ್ಷರವುಳ್ಳ ಪದವೇ ದ್ವಂದ್ವಸಮಾಸದಲ್ಲಿ ಪ್ರಾರಂಭದಲ್ಲಿ ಬರುತ್ತದೆಂದು ಹೇಳಲಾಗಿದೆ. ಆದ್ದರಿಂದ 'ಸ್ಥಿತ್ಯದನಾಭ್ಯಾಂ' ಎಂಬ ಸೂತ್ರವಿನ್ಯಾಸವು ಸಾಧುವಾಗಿದೆಯೆಂದು ತಿಳಿಯಬೇಕು.

**प्रकाशः** – गुहानये 'अनश्नन्' इत्यस्याशुभाशननिषेधार्थत्वोक्तावपीह जीवनार्थं कर्मफलाशनं नेत्यर्थकतया व्याख्यानमभिमतम् ।

ಗುಹಾಧಿಕರಣದಲ್ಲಿ 'ಅನಶ್ನನ್' ಎಂಬ ಶ್ರುತಿಯನ್ನು ಅಶುಭವಾದ ಕರ್ಮದ ಫಲವನ್ನು ಭಗವಂತನು ಅನುಭವಿಸುವುದಿಲ್ಲವೆಂಬರ್ಥದಲ್ಲಿ ಹೇಳಿರುತ್ತಾರೆ. ಆದರೂ ಸಹ ಇಲ್ಲಿ ಉಪಜೀವನಕ್ಕೋಸ್ಕರ ಕರ್ಮಫಲವನ್ನು ತಿನ್ನುವುದಿಲ್ಲವೆಂದು ಹೇಳಿದ್ದರಿಂದ ಅದಕ್ಕೆ ವಿರುದ್ಧವಾಗುವುದಿಲ್ಲ. ಭಗವಂತನು

ಕರ್ಮಫಲವನ್ನು ತಿನ್ನುವುದಿಲ್ಲ. ಅಷ್ಟೇ ಅಲ್ಲದೇ ಉಪಜೀವನಕ್ಕೋಸ್ಕರ ಯಾವುದೇ ಕರ್ಮವನ್ನೂ ಸಹ ತಿನ್ನುವುದಿಲ್ಲವೆಂದು ಶ್ರುತಿಗೆ ವ್ಯಾಖ್ಯಾನಿಸಬೇಕು.

**प्रकाशः –**

'सुपर्णावेतौ सयुजौ सखायौ यदृच्छया कृतनीडौ च वृक्षे ।
एकस्तयोः खादति पिप्पलान्नमन्यो निरन्नोऽपि बलेन भूयान् ।।'

इत्यादिभागवतोक्तेः ।

ಈ ವ್ಯಾಖ್ಯಾನವು ಭಾಗವತ ಹಾಗೂ ಸ್ಮೃತಿ ವಾಕ್ಯಗಳಿಗೂ ಸಮ್ಮತವಾಗಿದೆ.

ಸ್ನೇಹಿತರಾದ ಎರಡು ಹಕ್ಕಿಗಳು ಯದೃಚ್ಛೆಯಿಂದ ದೇಹವೆಂಬ ಮನೆಯಲ್ಲಿ ಒಟ್ಟಿಗೆ ಮನೆ ಮಾಡಿದರು. ಅವೆರಡರಲ್ಲಿ ಒಂದು ಹಕ್ಕಿಯು ಪಿಪ್ಪಲ ಹಣ್ಣನ್ನು ತಿಂದರೆ, ಮತ್ತೊಂದು ಹಕ್ಕಿಯು ಹಣ್ಣನ್ನು ತಿನ್ನದೇ ಬಲಿಷ್ಠವಾಗಿತ್ತು. ಇತ್ಯಾದಿಯಾಗಿ ಭಾಗವತದಲ್ಲಿ ಹೇಳಿರುತ್ತಾರೆ.

**प्रकाशः –**

'साशनानशनत्वेन नरदेवौ यथोदितौ ।
अत्तिं विनाऽप्यदौर्बल्यात्तथाऽनत्तिर्हरेर्भुजः ।।

इति स्मृतेश्चेति भावः ।

ಜೀವನು ತಿನ್ನುವವನಾಗಿ, ಪರಮಾತ್ಮನು ತಿನ್ನದೇ ಇರುವವನಾಗಿ ದೇಹದಲ್ಲಿದ್ದಾರೆ. ಪರಮಾತ್ಮನು ಏನನ್ನೂ ತಿನ್ನದಿದ್ದರೂ ಸಹ ದುರ್ಬಲನಾಗಿಲ್ಲ. ಹೀಗೆ ಶ್ರುತಿಯು ಪ್ರತಿಪಾದಿಸುತ್ತದೆ ಎಂಬುದಾಗಿ ಸ್ಮೃತಿಯಲ್ಲಿ ಹೇಳಲಾಗಿದೆ.

**प्रकाशः – श्रुतेर्जीवेशविषयत्वं साधयति – न चेत्यादिना ।।**

'ದ್ವಾ ಸುಪರ್ಣಾ' ಎಂಬ ಶ್ರುತಿಯು, ಜೀವ ಹಾಗೂ ಪರಮಾತ್ಮರನ್ನೇ ಪ್ರತಿಪಾದಿಸುತ್ತಿದೆ ಹೊರತು, ಬುದ್ಧಿ ಹಾಗೂ ಜೀವರನ್ನು ಪ್ರತಿಪಾದಿಸುತ್ತಿಲ್ಲವೆಂದು 'ನಚ' ಎಂಬ ವಾಕ್ಯದಿಂದ ಪ್ರತಿಪಾದಿಸುತ್ತಿದ್ದಾರೆ.

**प्रकाशः – तावेताविति ।।** ''तयोरन्यः पिप्पलं स्वाद्वत्तीति सत्वम् । अनश्नन्न्योऽभिचाकशीतीति । अनश्नन्न्योऽभिपश्यतीति ज्ञः । उभावेतौ सत्वक्षेत्रज्ञौ । तदेतत्सत्वं येन स्वप्नं पश्यति । अथ योऽयं शारीर उपद्रष्टा स क्षेत्रज्ञः'' इत्यनेन व्याख्यातत्वादित्यर्थः ।

ಗ್ರಂಥದಲ್ಲಿ ಪೈಂಗಿರಹಸ್ಯಬ್ರಾಹ್ಮಣ ವಾಕ್ಯವನ್ನು ಹೇಳಿದ್ದಾರೆ. ಅದರ ಸಂಪೂರ್ಣ ವಾಕ್ಯ ಹೀಗಿದೆ -

'ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತೀತಿ ಸತ್ತ್ವಮ್ । ಅನಶ್ನನ್ನನ್ಯೋಽಭಿಚಾಕಾಶೀತಿ ಇತಿ । ಅನಶ್ನನ್ನನ್ಯೋಽಭಿಪಶ್ಯತೀತಿ ಜ್ಞಃ । ಉಭಾವೇತೌ ಸತ್ತ್ವಕ್ಷೇತ್ರಜ್ಞೌ । ತದೇತತ್ ಸತ್ತ್ವಂ ಯೇನ ಸ್ವಪ್ನಂ ಪಶ್ಯತಿ । ಅಥ ಯೋಽಯಂ ಶಾರೀರ ಉಪದ್ರಷ್ಟಾ ಸ ಕ್ಷೇತ್ರಜ್ಞಃ' ಹೀಗೆ ಪೈಂಗಿರಹಸ್ಯಬ್ರಾಹ್ಮಣ ವಾಕ್ಯವು 'ದ್ವಾ ಸುಪರ್ಣಾ' ಎಂಬ ಶ್ರುತಿಯನ್ನು ಬುದ್ಧಿ ಹಾಗೂ ಜೀವ ಪರವಾಗಿ ವ್ಯಾಖ್ಯಾನಿಸಿದೆ ಎಂದರ್ಥ. ಈ ವಾಕ್ಯಗಳ ಅರ್ಥವನ್ನು ಅನುವಾದದಲ್ಲಿ ಕೊಡಲಾಗಿದೆ.

**प्रकाशः** – ''ऊनं न सत्वेष्वधिको बबाधे तस्मिन्वनं गोप्तरि गाहमाने'' इति रघुवंशे । ''द्रव्यासुव्यवसायेषु सत्वमस्त्री तु जन्तुषु'' इतिनानार्थवर्गे । जन्तुश्च ''प्राणीतुचेतनोजन्मी जन्तु' इत्यमरोक्तेजीवं इति भावः ।

'ಸತ್ವ' ಶಬ್ದಕ್ಕೆ ಜೀವ ಎಂದರ್ಥ. ಕಾಳೀದಾಸನೂ ಸಹ ರಘುವಂಶದಲ್ಲಿ 'ಊನಂ ನ ಸತ್ವೇಷ್ವಧಿಕೋ ಬಬಾಧೇ ತಸ್ಮಿನ್ವನಂ ಗೋಪ್ತರಿ ಗಾಹಮಾನೇ' ಎಲ್ಲ ವಿಧ ಪ್ರಾಣಿಗಳು ವಸಿಷ್ಠರ ಆಶ್ರಮದಲ್ಲಿದ್ದಾಗ ಸಣ್ಣ ಪ್ರಾಣಿಗಳನ್ನು ದೊಡ್ಡ ಪ್ರಾಣಿಗಳು ಹಿಂಸಿಸುತ್ತಿರಲಿಲ್ಲ ಎಂಬುದಾಗಿ ಪ್ರಾಣಿಗಳೆಂಬ ಅರ್ಥದಲ್ಲಿ 'ಸತ್ವ' ಶಬ್ದವನ್ನು ಪ್ರಯೋಗಿಸಿದ್ದಾನೆ. ಅಮರಕೋಶದಲ್ಲಿಯೂ ಸಹ 'ದ್ರವ್ಯಾಸುವ್ಯವಸಾಯೇಷು ಸತ್ವಮಸ್ತ್ರೀ ತು ಜಂತುಷು' ಎಂಬುದಾಗಿ 'ಸತ್ವ' ಶಬ್ದವನ್ನು ಜಂತು ಎಂಬರ್ಥದಲ್ಲಿ ನಾನಾರ್ಥವರ್ಗದಲ್ಲಿ ಪ್ರಯೋಗಿಸಲಾಗಿದೆ. ಜಂತುಶಬ್ದವು 'ಪ್ರಾಣೀ ತು ಚೇತನೋ ಜನ್ಮೀ ಜಂತು' ಎಂಬ ಅಮರಕೋಶದ ಮಾತಿನಂತೆ ಜೀವ ಎಂಬರ್ಥದಲ್ಲಿಯೇ ಪ್ರಸಿದ್ಧವಾಗಿದೆಯೆಂದು ತಿಳಿಯಬೇಕು.

**प्रकाशः** – **इति स्मृतेरिति** ।। त्रयोदशे गीतातात्पर्योक्तस्मृतेरित्यर्थः । **मोक्षधर्मादीति** ।। आदिपदेन –

'ಇತಿ ಸ್ಮೃತೇಃ' ಎಂಬುದಕ್ಕೆ ಗೀತಾತಾತ್ಪರ್ಯದ ಹದಿಮೂರನೇ ಅಧ್ಯಾಯದಲ್ಲಿ ಹೇಳಲ್ಪಟ್ಟ ಸ್ಮೃತಿಯ ಮಾತಿನಂತೆ ಎಂದರ್ಥ. 'ಮೋಕ್ಷಧರ್ಮಾದಿ' ಎಂದು ಗ್ರಂಥದಲ್ಲಿ ಹೇಳಿದ್ದಾರೆ. ಇಲ್ಲಿರುವ ಆದಿಪದದಿಂದ ಹರಿವಂಶ ಮುಂತಾದ ಗ್ರಂಥಗಳ ವಾಕ್ಯಗಳನ್ನು ಸ್ಮರಿಸಿಕೊಳ್ಳಬೇಕು. ಅವು ಹೀಗಿವೆ -

'क्षेत्रज्ञ एता मनसो विभूतीर्जीवस्य मायारचिता अनित्याः ।
आविर्हिताश्चैव तिरोहिताश्च शुद्धो विचष्टे ह्यविशुद्धकर्तुः ।।
क्षेत्रज्ञ आत्मा पुरुषः पुराणस्साक्षात्स्वयं ज्योतिरजः परेशः ।
नारायणो भगवान्वासुदेवः स्वमाययात्मन् व्यवधीयमानः ।।

इति भागवतवचनं, ''क्षेत्रज्ञं चापि मां विद्धि'' इति गीतावचनं,

स्वेच्छयैवावृतो विष्णुर्जीवे तिष्ठति नित्यदा ।
योऽसौ नियमयन् जीवं क्षेत्रज्ञ इति शब्दितः ।।

इति हरिवंशादिवचनं गृह्यते ।।

ಕ್ಷೇತ್ರಜ್ಞನೆನಿಸಿದ ಭಗವಂತನು ಜೀವನಿಗೆ ಸಂಬಂಧಿಸಿದ ಮನಸ್ಸಿನ ವ್ಯಾಪಾರಗಳನ್ನೆಲ್ಲಾ ನೋಡುತ್ತಲೇ ಇರುತ್ತಾನೆ. ಅಂತಹ ಮನಸ್ಸು ಪ್ರಕೃತಿ ನಿರ್ಮಿತವಾಗಿದೆ. ಅನಿತ್ಯವಾಗಿದೆ. ಕೆಲವೊಮ್ಮೆ ತಿರೋಹಿತವೂ, ಇನ್ನೂ ಕೆಲವೊಮ್ಮೆ ಅತಿರೋಹಿತವೂ ಆಗಿದೆ. ಇಂತಹ ಮನಸ್ಸನ್ನು ಶುದ್ಧನಾದ ಪರಮಾತ್ಮನು ವ್ಯಾಪಾರ ಮಾಡಿಸುತ್ತಾನೆ ಎಂಬುದಾಗಿ. ಮತ್ತು 'ಕ್ಷೇತ್ರಜ್ಞ ಆತ್ಮಾ ಪುರುಷಃ ಪುರಾಣಸ್ಸಾಕ್ಷಾತ್ಸ್ವಯಂ ಜ್ಯೋತಿರಜಃ ಪರೇಶಃ । ನಾರಾಯಣೋ ಭಗವಾನ್ವಾಸುದೇವಃ ಸ್ವಮಾಯಯಾತ್ಮನ್ನ್ಯವಧೀಯಮಾನಃ ॥' ಎಂಬುದಾಗಿಯೂ ಭಾಗವತದಲ್ಲಿ ಪರಮಾತ್ಮನನ್ನೇ ಕ್ಷೇತ್ರಜ್ಞನೆಂದು ಸ್ಪಷ್ಟವಾಗಿ ಹೇಳಲಾಗಿದೆ. ಗೀತೆಯಲ್ಲಿಯೂ ಸಹ 'ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ' ಎಂದು ಹೇಳಲಾಗಿದೆ. ಮತ್ತು 'ಸ್ವೇಚ್ಛಯೈವಾವೃತೋ ವಿಷ್ಣುಃ ಜೀವೇ ತಿಷ್ಠತಿ ನಿತ್ಯದಾ । ಯೋಽಸೌ ನಿಯಮಯನ್ ಜೀವಂ ಕ್ಷೇತ್ರಜ್ಞ ಇತಿ ಶಬ್ದಿತಃ ॥' ತನ್ನ ಇಚ್ಛೆಯಿಂದಲೇ ಆವೃತನಾದ ಭಗವಂತನು ಯಾವಾಗಲೂ ಜೀವನಲ್ಲಿಯೇ ನೆಲೆಸಿದ್ದಾನೆ. ಮತ್ತು ಅವನನ್ನು ನಿಯಮನ ಮಾಡುವ ಕಾರಣ ಕ್ಷೇತ್ರಜ್ಞನೆನಿಸಿದ್ದಾನೆಂದು ಹರಿವಂಶದಲ್ಲಿ ಹೇಳಿದ್ದಾರೆ.

**प्रकाशः – पुरुषशब्द इति ।।** युक्त इति विपरिणामः । अत्र विस्तरस्तु गुरुपादकृतश्रुतितात्पर्यकौमुद्यां ज्ञेयः ।।

'ಪುರುಷಶಬ್ದಃ ಯುಕ್ತಂ' ಎಂದು ಲಿಂಗ ವ್ಯತ್ಯಾಸವು ಅಯುಕ್ತವಾಗುತ್ತದೆ. ಆದ್ದರಿಂದ 'ಯುಕ್ತಃ' ಎಂದು ಪುಲ್ಲಿಂಗಾಂತವಾಗಿ ವಿಪರಿಣಾಮ ಮಾಡಿಕೊಳ್ಳಬೇಕು. ಕ್ಷೇತ್ರಜ್ಞಶಬ್ದದಿಂದ ಪರಮಾತ್ಮನೇ ಪ್ರತಿಪಾದ್ಯನಾಗಿದ್ದಾನೆ ಸತ್ವಶಬ್ದದಿಂದ ಜೀವನು ಪ್ರತಿಪಾದ್ಯನಾಗಿದ್ದಾನೆಂಬ ವಿಷಯದಲ್ಲಿ ಹೆಚ್ಚಿನ ವಿಚಾರವನ್ನು ಗುರುಗಳು ಮಾಡಿರುವ 'ಶ್ರುತಿತಾತ್ಪರ್ಯ ಕೌಮುದೀ' ಎಂಬ ಗ್ರಂಥವನ್ನು ಓದಿ ತಿಳಿದುಕೊಳ್ಳಬೇಕು.

**गुरुराजीयम् – तत्र चशब्द इति ।।** अत्र भाष्ये पूर्वानुक्तवायुसमुच्चायकत्वस्य स्पष्टप्रतीतेः टीकायामुक्तसाध्यहेत्वनुकर्षमात्रार्थत्वमित्यव्याख्यातत्वाद्वायुसमुच्चयश्च-शब्दार्थो नेति न मन्तव्यमिति भावः । 'जीव प्राणधारणे' इति धातोर्जीव एव प्राणभृच्छब्दार्थोऽभिप्रेतो नतु वायुः । तथात्वे रुद्रस्यापि ग्रहणोपपत्तेः । टीकायां पूर्वपक्षे वायोः प्राणाधारत्वप्रसिद्ध्युक्तिमात्रेण तस्य ग्रहणे 'प्राणानां ग्रन्थिरसि' इत्यादौ रुद्रस्यापि तदविशेषात् । अत एव भाष्ये न जीवो वायुश्चेति योगविभागः । अन्यथा न प्रकृतिजीवावभिधीयेते इत्यन्यत्रेवात्रापि न जीववायू इति स्यादिति भावेनेदं व्याख्यानम् । भावबोधे तु "द्रवतां हीन्द्रियाणां तु नियन्ता प्राण एकराट्" इत्यादौ श्रुतौ च प्राणसंवादादिना रुद्राद्यपेक्षयाऽप्यतिशयेन प्राणधारकत्वाद्वायोरपि सौत्रप्राणभृच्छब्दार्थत्वम् । योगविभागस्तु तत्रैकवचनोपपत्तये कृतः । भाष्ये चशब्दस्तु वायुपूर्वपक्षेन हेतूनां चानुकर्षार्थ इत्याशयेन सौत्रशब्दस्य

मुख्यवायुसमुच्चयज्ञापकत्वमनुक्त्वा वायोः प्राणभृच्छब्दार्थत्वमेवोक्तमिति ज्ञेयम् । ननु 'जुष्टं यदा पश्यत्' इति श्रुतेः पूर्वं परमात्मनो रुद्राद्भेदे प्रमाणत्वेनोदाहृतत्वात् जीवेश्वरभेदे प्रमाणत्वेनोदाहरणे पूर्वोत्तरविरोध इत्यत आह – अत्र चेति ॥ **यदिन्यायेनेति** ॥ अन्यत्वावधित्वेन प्रतीतो जीवो यद्यवधिर्न स्यात्ततः किं स्यादन्यथाऽवधिन एवाभावात् । यदि चान्यदेवावधिभूतं स्यात्तर्ह्यवधिमदन्यन्नास्तीति वदन्नास्तिको हत इत्यर्थः । पदिन्यायेनेति पाठे पदे जुहोतीति होमाधिकरणम् पदं किमिति प्राप्ते अध्वर्युः सप्तमं पदमञ्जलिना गृह्णातीति प्रकृतैकहायन्या एव वस्तुतः पदप्रतियोगित्ववदत्रापि प्रकृतजीवस्यैवान्यत्वप्रतियोगित्वेन सम्बन्धो ज्ञेय इत्यर्थः । अन्यथा प्रकृतत्वाविशेषात्तत्रापि न स्यादिति भावः । **अभ्यर्हितत्वादिति** ॥ 'अभ्यर्हितं पूर्वम्' इति पूर्वनिपात इति भावः ॥ **अन्ययेति** ॥ 'द्वा सुपर्णा' इति मन्त्रस्य सत्वक्षेत्रज्ञशब्दार्थत्वेन प्रसिद्धबुद्धिजीवविषयत्वाभ್युपगम इत्यर्थः ।




'ಓಂ ಭೇದವ್ಯಪದೇಶಾತ್ ಓಂ' ಎಂಬ ಐದನೆಯ ಸೂತ್ರದಲ್ಲಿ ಜೀವಬ್ರಹ್ಮರಿಗೆ ಅಭೇದವನ್ನು ಆಶಂಕಿಸಿದರೆ ಉತ್ತರಿಸಲಾಗಿದೆ. ವಸ್ತುತಃ 'ಜುಷ್ಟಂ ಯದಾ ಪಶ್ಯತ್ಯನ್ಯಮೀಶಮ್' ಎಂಬ ಶ್ರುತಿಯಲ್ಲಿ ಭಿನ್ನನಾದ ಈಶನೆಂದಷ್ಟೇ ಹೇಳಲಾಗಿದೆ. ಯಾರಿಂದ ಭಿನ್ನನಾಗಿದ್ದಾನೆಂದು ಸ್ಪಷ್ಟವಾಗಿ ತಿಳಿಯುವುದಿಲ್ಲ. ಆದರೆ 'ಪಶ್ಯತೀ' ಎಂಬ ಕ್ರಿಯಾಪದದಿಂದ ಜೀವನು ಪ್ರಸಕ್ತನಾದ್ದರಿಂದ ಅರ್ಥಾತ್ ಜೀವನಿಂದ ಭೇದವನ್ನೇ ಹೇಳುತ್ತಿದೆಯೆಂದು ತಿಳಿಯಬೇಕು. 'ಜುಷ್ಟಂ ಯದಾ ಪಶ್ಯತಿ' ಎಂಬ ಶ್ರುತಿಯನ್ನು ಅದೃಶ್ಯತ್ವಾಧಿಕರಣದಲ್ಲಿ ರುದ್ರನಿಗಿಂತ ವಿಷ್ಣು ಭಿನ್ನನಾಗಿದ್ದಾನೆಂಬ ವಿಷಯದಲ್ಲಿ ಪ್ರಮಾಣವನ್ನಾಗಿ ಹೇಳಿದ್ದರು. ಮತ್ತೊಂದು ರೀತಿಯಲ್ಲಿ ಪ್ರಕೃತ ವ್ಯಾಖ್ಯಾನ ಮಾಡುತ್ತಾ ಜೀವ ಬ್ರಹ್ಮರ ಭೇದವಿಷಯದಲ್ಲಿಯೂ ಈ ಶ್ರುತಿಯು ಪ್ರಮಾಣವಾಗಿದೆಯೆಂದು ಸಮರ್ಥಿಸುತ್ತಿದ್ದಾರೆ.

'ಓಂ ಪ್ರಕರಣಾತ್ ಓಂ' ಎಂಬ ಆರನೆಯ ಸೂತ್ರವು ಹಿಂದಿನ ಸೂತ್ರದಲ್ಲಿ ಹೇಳಲ್ಪಟ್ಟ ಭೇದವು ಅನ್ಯವಿಷಯಕವಾಗುವುದಿಲ್ಲವೆಂಬುದನ್ನು ಮಾತ್ರ ಸಮರ್ಥನೆ ಮಾಡುತ್ತಿದೆ.

'ಓಂ ಸ್ಥಿತ್ಯದನಾಭ್ಯಾಂಚ ಓಂ' ಎಂಬ ಏಳನೆಯ ಸೂತ್ರವು ಭೇದವಿಷಯದಲ್ಲಿ ಶ್ರುತಿಯು ಹೇಗೆ ಪ್ರಮಾಣವಾಗಿದೆಯೋ, ಅದರಂತೆ ಶ್ರುತಿ ಹಾಗೂ ಅದನಗಳೆಂಬ ಲಿಂಗಗಳೂ ಸಹ ಪ್ರಮಾಣವಾಗಿದೆಯೆಂದು ಸಮರ್ಥಿಸುತ್ತಿದೆ.

ಅದ್ವೈತಿಗಳು 'ದ್ವಾ ಸುಪರ್ಣಾ' ಎಂಬ ಶ್ರುತಿಯು ಬುದ್ಧಿಜೀವರಿಗೆ ಭೇದವನ್ನು ಹೇಳುವುದಕ್ಕಾಗಿ ಹೊರಟಿದೆ ಎನ್ನುತ್ತಾರೆ. ಅವರು ನೀಡುವ ಕಾರಣ ಪೈಂಗಿರಹಸ್ಯ ಬ್ರಾಹ್ಮಣ ವಾಕ್ಯದಲ್ಲಿ 'ದ್ವಾ ಸುಪರ್ಣಾ' ಎಂಬ ವಾಕ್ಯವನ್ನು ವ್ಯಾಖ್ಯಾನ ಮಾಡುವಾಗ 'ತಾವೇತೌ ಸತ್ವಕ್ಷೇತ್ರಜ್ಞೌ' ಎಂದು ಹೇಳಲಾಗಿದೆ. ಸತ್ವ ಹಾಗೂ

ಕ್ಷೇತ್ರಜ್ಞರೆಂದರೆ ಬುದ್ಧಿ ಮತ್ತು ಜೀವರೇ ಆಗಿರುತ್ತಾರೆಂದು ಅವರ ಸಮರ್ಥನೆ. ಇದು ಸರಿಯಲ್ಲ. 'ಸತ್ವಂ ಜೀವ ಇತಿ ಪ್ರೋಕ್ತಃ' ಇತ್ಯಾದಿ ಮಾತುಗಳ ಆಧಾರದಿಂದ ಜೀವನೇ ಸತ್ವಶಬ್ದದಿಂದ ಪ್ರತಿಪಾದ್ಯನು. ಕ್ಷೇತ್ರಜ್ಞಶಬ್ದದಿಂದ ಪರಮಾತ್ಮನೇ ಪ್ರತಿಪಾದ್ಯನೆನ್ನಲು 'ಅಗುಣಾನ್ವಿತಂ ಕ್ಷೇತ್ರಜ್ಞಮಾಹುಃ' ಇತ್ಯಾದಿ ಅನೇಕ ಪ್ರಮಾಣಗಳಿವೆ. ಈ ಕಾರಣದಿಂದ 'ದ್ವಾ ಸುಪರ್ಣಾ' ಎಂಬ ಶ್ರುತಿಯು ಜೀವಬ್ರಹ್ಮಭೇದಪ್ರತಿಪಾದಕವೇ ಆಗಿದೆ ಹೊರತು, ಬುದ್ಧಿಜೀವರ ಭೇದ ಪ್ರತಿಪಾದಕವಾಗಿಲ್ಲವೆಂದು ತಿಳಿಯಬೇಕು.



• • • • •

### ಶಾಂಕರ ಭಾಷ್ಯ ವಿಮರ್ಶೆ

## तात्पर्यचन्द्रिका

**अन्येतु । "अमृतस्यैष सेतुः" इति द्युभ्वाद्यायतनममृतसम्बन्धित्वेन सेतुत्वेन च श्रूयते । नच ब्रह्मणोऽन्यदमृतमस्ति । येन ब्रह्म तत्सम्बन्धि स्यात् ।**

ಅನುವಾದ - ಶಾಂಕರ ಭಾಷ್ಯದ ಪ್ರಕಾರ ಸೂತ್ರಾರ್ಥ ಹೀಗಿದೆ - 'ಅಮೃತಸ್ಯೈಷ ಸೇತುಃ' ಎಂಬ ಶ್ರುತಿಯಲ್ಲಿ ಏಷಃ = ಹಿಂದೆ ದ್ಯುಭ್ವಾದ್ಯಾಯತನನೆಂದು ಹೇಳಲ್ಪಟ್ಟಿರುವವನು, ಅಮೃತಸ್ಯ = ಅಮೃತಕ್ಕೆ ಸಂಬಂಧಿಯಾಗಿದ್ದಾನೆ, ಸೇತುಃ = ಸೇತುವೂ ಸಹ ಆಗಿರುತ್ತಾನೆ. ಹೀಗೆ ಕೇಳಿಸುತ್ತಿದೆ. ಇದರಿಂದ ಯಾವಾತನು ಅಮೃತಸೇತುವಾಗಿದ್ದಾನೋ, ಅವನೇ ದ್ಯುಭ್ವಾದ್ಯಾಯತನನಾಗಿದ್ದಾನೆಂದು ತಿಳಿಯುತ್ತದೆ. ಬ್ರಹ್ಮನಿಗಿಂತ ಬೇರೊಂದು ಪದಾರ್ಥವು ಅಮೃತವಾಗಿದ್ದಲ್ಲಿ, ಅದಕ್ಕೆ ಸಂಬಂಧಿಯಾದವನು ಬ್ರಹ್ಮನೆಂದು ಹೇಳಬಹುದಿತ್ತು. ಆದರೆ ಬ್ರಹ್ಮನೇ ಅಮೃತಸ್ವರೂಪನಾದ್ದರಿಂದ 'ಅಮೃತಸ್ಯ' ಎಂದು ಷಷ್ಠ್ಯಂತ ಪದಪ್ರಯೋಗವನ್ನು ಬ್ರಹ್ಮನಲ್ಲಿ ಹೇಳಲಾಗದು.

**सेतुश्च पारवान् । ब्रह्म तु अपारम् । तस्मान्न द्युभ्वाद्यायतनं ब्रह्म । किन्तु रुद्रवायुप्रधानजीवादिरेवेति प्राप्ते ।**

ಸೇತುವು ಪರಿಮಿತಿವುಳ್ಳದ್ದಾಗಿರುತ್ತದೆ. ಬ್ರಹ್ಮನು ಅಪರಿಮಿತನಾದ್ದರಿಂದ ಸೇತುವಾಗಲೂ ಸಹ ಸಾಧ್ಯವಿಲ್ಲ. ಆದ್ದರಿಂದ ದ್ಯುಭ್ವಾದ್ಯಾಯತನನಾದವನು ಬ್ರಹ್ಮನಲ್ಲ. ಹೊರತು ರುದ್ರ, ವಾಯು, ಪ್ರಕೃತಿ, ಜೀವ, ಹಿರಣ್ಯಗರ್ಭ ಇವರಲ್ಲಿ ಯಾರಾದರೊಬ್ಬರೂ ಸಹ ದ್ಯುಭ್ವಾದ್ಯಾಯತನರಾಗಬಹುದೆಂದು ಪೂರ್ವಪಕ್ಷ.

**प्रधानादेरपि जलविधारकत्वादेरभावेन न रूढं सेतुत्वम् ।**

ಯಾವುದು ಸೇತುವಾಗಿರುತ್ತದೋ, ಅದು ಜಲವನ್ನು ಧಾರಣೆ ಮಾಡಿರುತ್ತದೆ. ಪ್ರಧಾನಾದಿಗಳನ್ನು ಸೇತುವೆಂದು ಹೇಳಿದರೆ ಜಲವನ್ನು ಧಾರಣೆಮಾಡಿರುವಿಕೆಯೆಂಬುದನ್ನು ಅವುಗಳಲ್ಲಿ ಉಪಪನ್ನವಾಗುವುದಿಲ್ಲ. ಆದ್ದರಿಂದ ರೂಢವಾದ ಸೇತುತ್ವವನ್ನು ಪೂರ್ವಪಕ್ಷಾರರಿಗೆ ವಿವಕ್ಷಿಸಲು ಸಾಧ್ಯವಿಲ್ಲ.

**यौगिकं तु भावप्रधानामृतशब्दार्थमोक्षधारकत्वाद् ब्रह्मणोऽप्यस्ति ।**

ಇನ್ನು ಪೂರ್ವಪಕ್ಷಕಾರರು 'ಸೇತು'ಶಬ್ದಕ್ಕೆ ಯೌಗಿಕಾರ್ಥವನ್ನು ಹೇಳಬೇಕು. ಹಾಗಾದರೆ ಸಿದ್ಧಾಂತದಲ್ಲಿಯೂ ಯೌಗಿಕಾರ್ಥವನ್ನು ಒಪ್ಪಿ ಬ್ರಹ್ಮನಲ್ಲಿಯೇ ಅಮೃತಸೇತುತ್ವವನ್ನು ಉಪಪಾದಿಸಬಹುದು - ಅಮೃತಪದವನ್ನು ಭಾವಪ್ರಧಾನ ನಿರ್ದೇಶ ಮಾಡಿದಾಗ ಮೋಕ್ಷವೆಂಬರ್ಥವು ಲಭಿಸುತ್ತದೆ. ಇಂತಹ ಮೋಕ್ಷಕ್ಕೆ ಧಾರಕನಾದ್ದರಿಂದ ಬ್ರಹ್ಮನು ಅಮೃತಸೇತುವೆನಿಸಿದ್ದಾನೆ.

**यद्वा श्रुतावेतच्छब्दो न ब्रह्मपरः । किन्तु ''तमेवैकं जानथ'' इति विधेयत्वेन शब्दतः प्रधानतया प्रस्तुतज्ञानपरः । तस्यामृतत्वसाधनत्वाद्गौणं तत्सेतुत्वमिति सिद्धान्त इत्याहुः ।**

ಅಥವಾ 'ಅಮೃತಸ್ಯೈಷಃ' ಎಂಬಲ್ಲಿರುವ 'ಏತತ್' ಶಬ್ದವು ಬ್ರಹ್ಮಪರವಲ್ಲ ಹೊರತಾಗಿ, ಜ್ಞಾನಪರವಾಗಿದೆ. ವಸ್ತುತಃ 'ತಮೇವೈಕಂ ಜಾನಥ' ಎಂಬ ಹಿಂದಿನ ಶ್ರುತಿಯಲ್ಲಿ 'ತಮ್' ಎಂಬ ಪದದಿಂದ ಬ್ರಹ್ಮನೇ ಉದ್ದೇಶ್ಯನಾಗಿ ಪ್ರಕೃತನಾಗಿದ್ದಾನೆ. ಆದರೂ ಸಹ ಅಂತಹ ಬ್ರಹ್ಮನಲ್ಲಿ 'ಜಾನಥ' ಎಂಬುದಾಗಿ ಜ್ಞಾನವನ್ನು ವಿಧಾನ ಮಾಡುತ್ತಿದೆ. ಉದ್ದೇಶ್ಯಕ್ಕಿಂತ ವಿಧೇಯವೇ ಪ್ರಧಾನವಾಗಿರುತ್ತದೆ. ಇಲ್ಲಿ ಪ್ರಧಾನವಾದ 'ಜಾನಥ' ಎಂಬಲ್ಲಿರುವ ಜ್ಞಾನವನ್ನು 'ಏಷಃ' ಎಂಬ ಪದವು ಪರಾಮರ್ಶಿಸುತ್ತಿದೆ. ನಪುಂಸಕಲಿಂಗದಲ್ಲಿರುವ ಜ್ಞಾನವನ್ನು 'ಏಷಃ' ಎಂಬ ಪುಲ್ಲಿಂಗಪದ ಪ್ರಯೋಗದಿಂದ ಹೇಗೆ ಪರಾಮರ್ಶಿಸಲು ಸಾಧ್ಯ ? ಎಂದರೆ, 'ಶೈತ್ಯಂ ಹಿ ಯತ್ ಸಾ ಪ್ರಕೃತಿರ್ಜಲಸ್ಯ' ಎಂಬಲ್ಲಿ 'ಶೈತ್ಯಂ' ಎಂಬುದು ನಪುಂಸಕಲಿಂಗದಲ್ಲಿದ್ದರೂ 'ಸಾ' ಎಂಬುದಾಗಿ ಸ್ತ್ರೀಲಿಂಗನಿರ್ದೇಶವನ್ನು 'ಪ್ರಕೃತಿಃ' ಎಂಬ ಪದಕ್ಕೆ ಅನುಸಾರಿಯಾಗಿ ಪ್ರಯೋಗಿಸಿರುವುದು ಕಾಣಿಸುತ್ತದೆ. ಅದರಂತೆ ಪ್ರಕೃತದಲ್ಲಿಯೂ 'ಸೇತುಃ' ಎಂಬ ಪದವು ಪುಲ್ಲಿಂಗದಲ್ಲಿರುವುದರಿಂದ ಅದನ್ನನುಸರಿಸಿ 'ಏಷಃ' ಎಂದು ಪುಲ್ಲಿಂಗವನ್ನೇ ಪ್ರಯೋಗಿಸಲಾಗಿದೆ. ಆದ್ದರಿಂದ 'ತಮೇವೈಕಮ್' ಎಂಬ ಶ್ರುತಿಗೆ 'ಪರಮಾತ್ಮನನ್ನೇ ತಿಳಿಯಿರಿ. ಬೇರೆ ಮಾತುಗಳನ್ನು ಆಡಬೇಡಿ. ಈ ಜ್ಞಾನವೇ ಮೋಕ್ಷಕ್ಕೆ ಸಾಧನವಾಗಿದೆ' ಎಂದು ಅರ್ಥವನ್ನು ಹೇಳಿದಂತಾಯಿತು. ಹೀಗೆ ಸೇತುಶಬ್ದಕ್ಕೆ ಸಾಧನವೆಂದು ಗೌಣಾರ್ಥವನ್ನು ಸ್ವೀಕರಿಸಿದಾಗ ಅಮೃತಸೇತುತ್ವವು ಬ್ರಹ್ಮನೇ ದ್ಯುಭ್ವಾದ್ಯಾಯತನನಾಗಿದ್ದಾನೆನ್ನಲು ಬಾಧಕವಾಗುವುದಿಲ್ಲ. ಇಷ್ಟು ಸಿದ್ಧಾಂತ.

**तन्न । ब्रह्मण्यत्यन्तायुक्तेन जायमानत्वलिङ्गेनैव पूर्वपक्षौचित्यात् । ब्रह्मणोऽन्यदमृतं नेति पूर्वपक्षेऽपि जीवादावमृतसेतुत्वस्य दुर्वचत्वाच्च । सिद्धान्ते जायमानत्वलिङ्गस्य गत्यनुक्तेश्च ।**

ಅದ್ವೈತಿಗಳ ಈ ಅಧಿಕರಣ ರಚನೆಯು ಅಸಾಧುವಾಗಿದೆ. ಏಕೆಂದರೆ ಬ್ರಹ್ಮನಲ್ಲಿ ಅತ್ಯಂತ ಅಸಂಭಾವಿತವಾದ ಜಾಯಮಾನತ್ವಲಿಂಗದಿಂದಲೇ ಸುಲಭವಾಗಿ ಪೂರ್ವಪಕ್ಷವನ್ನು ಮಾಡುವುದು ಉಚಿತವಾಗಿದೆ. ಅದನ್ನು ಬಿಟ್ಟು ಅಮೃತಸೇತುತ್ವ ಲಿಂಗವು ಉಪಪನ್ನವಾಗುವುದಿಲ್ಲವೆಂಬ ಪೂರ್ವಪಕ್ಷ ಮಾಡುವುದು ಉಚಿತವಲ್ಲ. ಮತ್ತು ಪೂರ್ವಪಕ್ಷ ಮಾಡುವಾಗ ಬ್ರಹ್ಮನನ್ನು ಬಿಟ್ಟು ಬೇರೆ ಯಾವುದೇ ಪದಾರ್ಥವು ಅಮೃತಸ್ವರೂಪವಲ್ಲ ಎಂದು ಹೇಳಿದರು. ಆದ್ದರಿಂದ ಅಮೃತಸೇತುತ್ವವನ್ನು ಜೀವನಲ್ಲಿಯೂ ಸಹ ಉಪಪಾದಿಸುವುದು ಕಷ್ಟವೇ ಆಗಿದೆ. ಅಮೃತಸ್ವರೂಪನೇ ಆಗದಿರುವ ಜೀವನು ಅಮೃತಕ್ಕೆ ಆಶ್ರಯನಾಗಲು ಹೇಗೆ ಸಾಧ್ಯ? ಮತ್ತು ಅದ್ವೈತಸಿದ್ಧಾಂತದಲ್ಲಿ ಜಾಯಮಾನತ್ವವೆಂಬ ಪೂರ್ವಪಕ್ಷ ಲಿಂಗಕ್ಕೆ ಸಮಾಧಾನವನ್ನು ಹೇಳಿರುವುದಿಲ್ಲ.

**सत्यस्य मोक्षस्याद्वैतिमते ब्रह्ममात्रत्वेन ब्रह्मणस्तद्धारकत्वायोगाच ।**

ಅಮೃತ ಶಬ್ದಕ್ಕೆ ಭಾವಪ್ರಧಾನ ನಿರ್ದೇಶ ಮಾಡಿ ಮೋಕ್ಷವೆಂಬರ್ಥವನ್ನು ಅಂಗೀಕರಿಸಿದರೂ ಸಹ ಅದ್ವೈತಮತದಲ್ಲಿ ಮೋಕ್ಷಕ್ಕೆ ಬ್ರಹ್ಮನು ಆಶ್ರಯನಾಗಿದ್ದಾನೆಂದು ಸಮರ್ಥಿಸಲು ಬರುವುದಿಲ್ಲ. ಏಕೆಂದರೆ ಸತ್ಯಸ್ವರೂಪವಾದ ಮೋಕ್ಷವು ಬ್ರಹ್ಮಸ್ವರೂಪವಾಗಿದೆಯೆಂದು ಅವರ ವಾದ. ಬ್ರಹ್ಮಸ್ವರೂಪವೇ ಆಗಿರುವ ಮೋಕ್ಷಕ್ಕೆ ಬ್ರಹ್ಮನು ಹೇಗೆ ತಾನೆ ಧಾರಕನಾಗುತ್ತಾನೆ ?

**मुक्तिः पञ्चमप्रकारेति मतेऽप्यविद्या जीवाश्रितेति पक्षे तद्ध्वंसस्यापि तदाश्रितत्वात् ।**

ಇನ್ನು 'ನ ಸನ್ನಾಸನ್ನ ಸದಸತ್ ನಾನಿರ್ವಾಚ್ಯಶ್ಚ ತತ್ಕ್ಷಯಃ' ಎಂಬ ಪಂಚಮ ಪ್ರಕಾರವನ್ನೇ ಮೋಕ್ಷವೆಂದು ಹೇಳಬೇಕು. ಆದರೆ ಅವಿದ್ಯೆಯು ಜೀವಾಶ್ರಿತವಾಗಿದೆಯೆಂಬ ಪಕ್ಷವನ್ನು ವಿವಕ್ಷಿಸಿದರೆ ಅವಿದ್ಯಾಧ್ವಂಸರೂಪವಾದ ಮೋಕ್ಷವೂ ಸಹ ಜೀವಾಶ್ರಿತವೇ ಆಗಬೇಕು. ಅಂದರೆ ಧ್ವಂಸ ಮತ್ತು ಪ್ರತಿಯೋಗಿಗಳಿಗೆ ಸಾಮಾನ್ಯಾಧಿಕರಣ್ಯವು ಸರ್ವಾನುಮತವಾಗಿರುವುದರಿಂದ ಮೋಕ್ಷಕ್ಕೆ ಆಶ್ರಯನು ಜೀವನೇ ಆಗುತ್ತಾನೆ ಹೊರತು, ಬ್ರಹ್ಮನಲ್ಲ.

**चिन्मात्राश्रितेति पक्षेऽपि मोक्षस्य बन्धाश्रयजीवाश्रितत्वात् ।**

ಅವಿದ್ಯೆಯು ಚಿನ್ಮಾತ್ರಾಶ್ರಿತವಾಗಿದೆಯೆಂಬ ವಿವರಣಪಕ್ಷವನ್ನು ಒಪ್ಪಿದರೆ ಮೋಕ್ಷವು ಬಂಧಕ್ಕೆ ಆಶ್ರಯನಾದ ಜೀವನಲ್ಲಿಯೇ ಬರುತ್ತದೆ ಹೊರತು, ಬ್ರಹ್ಮನಲ್ಲಿ ಬರುವುದಿಲ್ಲ. ಯಾರಿಗೆ ಬಂಧವಾಗಿರುತ್ತದೋ, ಅವನಿಗೇ ಮೋಕ್ಷವಾಗಬೇಕಾದ್ದರಿಂದ ಜೀವನು ಬಂಧಕ್ಕೆ ಆಶ್ರಯನಾಗಿದ್ದಾನೆಂದರೆ ಮೋಕ್ಷಕ್ಕೂ ಸಹ ಅವನೇ ಆಶ್ರಯನಾಗಬೇಕು. ಹೀಗೆ ಈ ಪಕ್ಷದಲ್ಲಿಯೂ ಮೋಕ್ಷಾಶ್ರಯತ್ವವು ಬ್ರಹ್ಮನಲ್ಲಿ ಬರುವುದಿಲ್ಲ.

ಪರಿಪೂರ್ಣಚಂದ್ರಿಕಾ

**बन्धस्यापि चिन्मात्राश्रितत्वे च श्यामत्वादिवत्संसारस्य प्रतिबिम्बनिष्ठत्वोक्त्ययोगात् ।**

ಸಂಸಾರ ಬಂಧವು ಚಿನ್ಮಾತ್ರದಲ್ಲೇ ಆಶ್ರಿತವಾಗಿದೆ ಹೊರತು, ಜೀವನಲ್ಲಲ್ಲ. ಬಂಧಕ್ಕೆ ಆಶ್ರಯನಾದ ಚಿನ್ಮಾತ್ರನು ಮೋಕ್ಷಕ್ಕೂ ಸಹ ಆಶ್ರಯನಾಗುತ್ತಾನೆಂದು ಹೇಳಬಹುದಲ್ಲವೇ? ಎಂದು ಶಂಕಿಸಬಾರದು. ಏಕೆಂದರೆ ದರ್ಪಣ ಮೊದಲಾದ ಉಪಾಧಿಯಲ್ಲಿರುವ ಶ್ಯಾಮವರ್ಣ ಮೊದಲಾದವು ಪ್ರತಿಬಿಂಬದಲ್ಲೇ ಬರುತ್ತವೆ ಹೊರತು, ಬಿಂಬನಲ್ಲಿ ಬರುವುದಿಲ್ಲ. ಅದರಂತೆ ಅವಿದ್ಯಾರೂಪವಾದ ಉಪಾಧಿಯಲ್ಲಿರುವ ಅವಿದ್ಯಾಕಾರ್ಯವೆನಿಸಿದ ಸಂಸಾರವು ಪ್ರತಿಬಿಂಬ ಸ್ಥಾನದಲ್ಲಿರುವ ಜೀವನಿಗೆ ಅಂಟುತ್ತದೆ ಹೊರತು, ಬಿಂಬಸ್ಥಾನದಲ್ಲಿರುವ ಚಿನ್ಮಾತ್ರನಿಗೆ ಅಂಟುವುದಿಲ್ಲವೆಂದು ಅದ್ವೈತಿಗಳ ಸಿದ್ಧಾಂತ. ಇದು ತಪ್ಪಾಗುತ್ತದೆ. ನೀವು ಪ್ರಕೃತವಾದ ಸಂಸಾರಬಂಧವನ್ನು ಚಿನ್ಮಾತ್ರದಲ್ಲಿ ಒಪ್ಪಿದರೆ ಉಪಾಧಿಯಲ್ಲಿರುವ ದೋಷವು ಬಿಂಬದಲ್ಲಿ ಒಪ್ಪಿದಂತಾಗುತ್ತದೆ. ಅದರಿಂದ ಮುಕ್ತಾಶ್ರಯತ್ವವನ್ನು ಕೂಡಿಸಲು ಸಾಧ್ಯವಿಲ್ಲದ ಕಾರಣ ಅಮೃತಸೇತುವೆನಿಸುವುದಿಲ್ಲ. ಆದ್ದರಿಂದಲೇ ದ್ಯುಭ್ವಾದ್ಯಾಯತನನೂ ಸಹ ಆಗಲು ಸಾಧ್ಯವಿಲ್ಲ.

**यच्चोक्तं श्रुतावेतच्छब्दो ज्ञानपर इत्यादि । तन्न । ''एषसेतुर्विधृतिः'' इति श्रुत्यन्तरे सेतुत्वेन प्रसिद्धब्रह्मण एवेह प्रत्यभिज्ञानात् ।**

ಅದ್ವೈತಿಗಳ ಎರಡನೆಯ ವ್ಯಾಖ್ಯಾನವೂ ಸಹ ಅಸಾಧುವಾಗಿದೆ. 'ಏಷಃ' ಎಂಬಲ್ಲಿರುವ 'ಏತತ್' ಶಬ್ದವು ಜ್ಞಾನವನ್ನು ಪರಾಮರ್ಶಿಸುತ್ತಿದೆಯೆಂಬ ಅವರ ವಿಚಾರವು ಅಸಾಧುವಾಗಿದೆ. ಏಕೆಂದರೆ ಬೃಹದಾರಣ್ಯಕೋಪನಿಷತ್ತಿನಲ್ಲಿ 'ಏಷಸೇತುರ್ವಿಧೃತಿಃ' ಎಂಬುದಾಗಿ ಬ್ರಹ್ಮನು ಸೇತುವಾಗಿದ್ದಾನೆಂದು ಹೇಳಲಾಗಿದೆ. ಅಂತಹ ಬ್ರಹ್ಮನೇ ಇಲ್ಲಿಯೂ ಸಹ ಸೇತುಶಬ್ದದಿಂದ ಪ್ರತಿಪಾದ್ಯನಾಗಿದ್ದಾನೆಂಬ ಪ್ರತ್ಯಭಿಜ್ಞೆಯೇ ಬರುತ್ತದೆ ಹೊರತು, ಜ್ಞಾನವೆಂಬ ಅರ್ಥದ ಚಿಂತನೆ ಯಾರಿಗೂ ಸಹ ಬರುವುದಿಲ್ಲ.

**अस्यामेव श्रुतौ ''स एषोऽन्तश्चरते'' इति ''दिव्ये ब्रह्मपुरे ह्येष व्योम्न्यात्मा सम्प्रतिष्ठितः'' इत्युत्तरवाक्यस्थस्यैतच्छब्दस्य ब्रह्मपरत्वदर्शनाच्च ।**

ಮತ್ತು ಇದೇ ಪ್ರಕರಣದ ಮುಂದಿನ ವಾಕ್ಯದಲ್ಲಿ 'ಸ ಏಷೋಽಂತಶ್ಚರತೇ' ಎಂಬಲ್ಲಿ 'ದಿವ್ಯೇ ಬ್ರಹ್ಮಪುರೇ ಹ್ಯೇಷ ವ್ಯೋಮ್ನ್ಯಾತ್ಮಾ ಸಂಪ್ರತಿಷ್ಠಿತಃ' ಎಂಬ ಅದರ ಮುಂದಿನ ವಾಕ್ಯದಲ್ಲಿ 'ಏತತ್' ಶಬ್ದದಿಂದ ಬ್ರಹ್ಮನೇ ಪ್ರತಿಪಾದ್ಯನಾಗಿದ್ದಾನೆ ಎಂದು ಹೇಳಿದ್ದಾರೆ. ಆದ್ದರಿಂದ ಇಲ್ಲಿರುವ 'ಏತತ್' ಶಬ್ದದಿಂದಲೂ ಅವನೇ ಪ್ರತಿಪಾದ್ಯನಾಗಬೇಕು.

**सिद्धरूपाभिधायिनः पुँल्लिङ्गस्यैतच्छब्दस्य पुँल्लिङ्गेन तच्छब्देनाऽत्मशब्देन चाव्यवधानेन प्रकृतसिद्धरूपाऽत्मपरत्वसम्भवेऽपि तद्विपरीतज्ञानपरत्वायोगाच्च ।**

ಅದ್ವೈತಿಗಳ ಈ ಅಧಿಕರಣ ರಚನೆಯು ಅಸಾಧುವಾಗಿದೆ. ಏಕೆಂದರೆ ಬ್ರಹ್ಮನಲ್ಲಿ ಅತ್ಯಂತ ಅಸಂಭಾವಿತವಾದ ಜಾಯಮಾನತ್ವಲಿಂಗದಿಂದಲೇ ಸುಲಭವಾಗಿ ಪೂರ್ವಪಕ್ಷವನ್ನು ಮಾಡುವುದು ಉಚಿತವಾಗಿದೆ. ಅದನ್ನು ಬಿಟ್ಟು ಅಮೃತಸೇತುತ್ವ ಲಿಂಗವು ಉಪಪನ್ನವಾಗುವುದಿಲ್ಲವೆಂಬ ಪೂರ್ವಪಕ್ಷ ಮಾಡುವುದು ಉಚಿತವಲ್ಲ. ಮತ್ತು ಪೂರ್ವಪಕ್ಷ ಮಾಡುವಾಗ ಬ್ರಹ್ಮನನ್ನು ಬಿಟ್ಟು ಬೇರೆ ಯಾವುದೇ ಪದಾರ್ಥವು ಅಮೃತಸ್ವರೂಪವಲ್ಲ ಎಂದು ಹೇಳಿದರು. ಆದ್ದರಿಂದ ಅಮೃತಸೇತುತ್ವವನ್ನು ಜೀವನಲ್ಲಿಯೂ ಸಹ ಉಪಪಾದಿಸುವುದು ಕಷ್ಟವೇ ಆಗಿದೆ. ಅಮೃತಸ್ವರೂಪನೇ ಆಗದಿರುವ ಜೀವನು ಅಮೃತಕ್ಕೆ ಆಶ್ರಯನಾಗಲು ಹೇಗೆ ಸಾಧ್ಯ? ಮತ್ತು ಅದ್ವೈತಸಿದ್ಧಾಂತದಲ್ಲಿ ಜಾಯಮಾನತ್ವವೆಂಬ ಪೂರ್ವಪಕ್ಷ ಲಿಂಗಕ್ಕೆ ಸಮಾಧಾನವನ್ನು ಹೇಳಿರುವುದಿಲ್ಲ.

**सत्यस्य मोक्षस्याद्वैतिमते ब्रह्ममात्रत्वेन ब्रह्मणस्तद्धारकत्वायोगाच ।**

ಅಮೃತ ಶಬ್ದಕ್ಕೆ ಭಾವಪ್ರಧಾನ ನಿರ್ದೇಶ ಮಾಡಿ ಮೋಕ್ಷವೆಂಬರ್ಥವನ್ನು ಅಂಗೀಕರಿಸಿದರೂ ಸಹ ಅದ್ವೈತಮತದಲ್ಲಿ ಮೋಕ್ಷಕ್ಕೆ ಬ್ರಹ್ಮನು ಆಶ್ರಯನಾಗಿದ್ದಾನೆಂದು ಸಮರ್ಥಿಸಲು ಬರುವುದಿಲ್ಲ. ಏಕೆಂದರೆ ಸತ್ಯಸ್ವರೂಪವಾದ ಮೋಕ್ಷವು ಬ್ರಹ್ಮಸ್ವರೂಪವಾಗಿದೆಯೆಂದು ಅವರ ವಾದ. ಬ್ರಹ್ಮಸ್ವರೂಪವೇ ಆಗಿರುವ ಮೋಕ್ಷಕ್ಕೆ ಬ್ರಹ್ಮನು ಹೇಗೆ ತಾನೆ ಧಾರಕನಾಗುತ್ತಾನೆ ?

**मुक्तिः पञ्चमप्रकारेति मतेऽप्यविद्या जीवाश्रितेति पक्षे तद्ध्वंसस्यापि तदाश्रितत्वात् ।**

ಇನ್ನು 'ನ ಸನ್ನಾಸನ್ನ ಸದಸತ್ ನಾನಿರ್ವಾಚ್ಯಶ್ಚ ತತ್ಕ್ಷಯಃ' ಎಂಬ ಪಂಚಮ ಪ್ರಕಾರವನ್ನೇ ಮೋಕ್ಷವೆಂದು ಹೇಳಬೇಕು. ಆದರೆ ಅವಿದ್ಯೆಯು ಜೀವಾಶ್ರಿತವಾಗಿದೆಯೆಂಬ ಪಕ್ಷವನ್ನು ವಿವಕ್ಷಿಸಿದರೆ ಅವಿದ್ಯಾಧ್ವಂಸರೂಪವಾದ ಮೋಕ್ಷವೂ ಸಹ ಜೀವಾಶ್ರಿತವೇ ಆಗಬೇಕು. ಅಂದರೆ ಧ್ವಂಸ ಮತ್ತು ಪ್ರತಿಯೋಗಿಗಳಿಗೆ ಸಾಮಾನ್ಯಾಧಿಕರಣ್ಯವು ಸರ್ವಾನುಮತವಾಗಿರುವುದರಿಂದ ಮೋಕ್ಷಕ್ಕೆ ಆಶ್ರಯನು ಜೀವನೇ ಆಗುತ್ತಾನೆ ಹೊರತು, ಬ್ರಹ್ಮನಲ್ಲ.

**चिन्मात्राश्रितेति पक्षेऽपि मोक्षस्य बन्धाश्रयजीवाश्रितत्वात् ।**

ಅವಿದ್ಯೆಯು ಚಿನ್ಮಾತ್ರಾಶ್ರಿತವಾಗಿದೆಯೆಂಬ ವಿವರಣಪಕ್ಷವನ್ನು ಒಪ್ಪಿದರೆ ಮೋಕ್ಷವು ಬಂಧಕ್ಕೆ ಆಶ್ರಯನಾದ ಜೀವನಲ್ಲಿಯೇ ಬರುತ್ತದೆ ಹೊರತು, ಬ್ರಹ್ಮನಲ್ಲಿ ಬರುವುದಿಲ್ಲ. ಯಾರಿಗೆ ಬಂಧವಾಗಿರುತ್ತದೋ, ಅವನಿಗೇ ಮೋಕ್ಷವಾಗಬೇಕಾದ್ದರಿಂದ ಜೀವನು ಬಂಧಕ್ಕೆ ಆಶ್ರಯನಾಗಿದ್ದಾನೆಂದರೆ ಮೋಕ್ಷಕ್ಕೂ ಸಹ ಅವನೇ ಆಶ್ರಯನಾಗಬೇಕು. ಹೀಗೆ ಈ ಪಕ್ಷದಲ್ಲಿಯೂ ಮೋಕ್ಷಾಶ್ರಯತ್ವವು ಬ್ರಹ್ಮನಲ್ಲಿ ಬರುವುದಿಲ್ಲ.

**बन्धस्यापि चिन्मात्राश्रितत्वे च श्यामत्वादिवत्संसारस्य प्रतिबिम्बनिष्ठत्वोक्त्ययोगात् ।**

ಸಂಸಾರ ಬಂಧವು ಚಿನ್ಮಾತ್ರದಲ್ಲೇ ಆಶ್ರಿತವಾಗಿದೆ ಹೊರತು, ಜೀವನಲ್ಲಲ್ಲ. ಬಂಧಕ್ಕೆ ಆಶ್ರಯನಾದ ಚಿನ್ಮಾತ್ರನು ಮೋಕ್ಷಕ್ಕೂ ಸಹ ಆಶ್ರಯನಾಗುತ್ತಾನೆಂದು ಹೇಳಬಹುದಲ್ಲವೇ? ಎಂದು ಶಂಕಿಸಬಾರದು. ಏಕೆಂದರೆ ದರ್ಪಣ ಮೊದಲಾದ ಉಪಾಧಿಯಲ್ಲಿರುವ ಶ್ಯಾಮವರ್ಣ ಮೊದಲಾದವು ಪ್ರತಿಬಿಂಬದಲ್ಲೇ ಬರುತ್ತವೆ ಹೊರತು, ಬಿಂಬನಲ್ಲಿ ಬರುವುದಿಲ್ಲ. ಅದರಂತೆ ಅವಿದ್ಯಾರೂಪವಾದ ಉಪಾಧಿಯಲ್ಲಿರುವ ಅವಿದ್ಯಾಕಾರ್ಯವೆನಿಸಿದ ಸಂಸಾರವು ಪ್ರತಿಬಿಂಬ ಸ್ಥಾನದಲ್ಲಿರುವ ಜೀವನಿಗೆ ಅಂಟುತ್ತದೆ ಹೊರತು, ಬಿಂಬಸ್ಥಾನದಲ್ಲಿರುವ ಚಿನ್ಮಾತ್ರನಿಗೆ ಅಂಟುವುದಿಲ್ಲವೆಂದು ಅದ್ವೈತಿಗಳ ಸಿದ್ಧಾಂತ. ಇದು ತಪ್ಪಾಗುತ್ತದೆ. ನೀವು ಪ್ರಕೃತವಾದ ಸಂಸಾರಬಂಧವನ್ನು ಚಿನ್ಮಾತ್ರದಲ್ಲಿ ಒಪ್ಪಿದರೆ ಉಪಾಧಿಯಲ್ಲಿರುವ ದೋಷವು ಬಿಂಬದಲ್ಲಿ ಒಪ್ಪಿದಂತಾಗುತ್ತದೆ. ಅದರಿಂದ ಮುಕ್ತಾಶ್ರಯತ್ವವನ್ನು ಕೂಡಿಸಲು ಸಾಧ್ಯವಿಲ್ಲದ ಕಾರಣ ಅಮೃತಸೇತುವೆನಿಸುವುದಿಲ್ಲ. ಆದ್ದರಿಂದಲೇ ದ್ಯುಭ್ವಾದ್ಯಾಯತನನೂ ಸಹ ಆಗಲು ಸಾಧ್ಯವಿಲ್ಲ.

**यच्चोक्तं श्रुतावेतच्छब्दो ज्ञानपर इत्यादि । तन्न । ''एषसेतुर्विधृतिः'' इति श्रुत्यन्तरे सेतुत्वेन प्रसिद्धब्रह्मण एवेह प्रत्यभिज्ञानात् ।**

ಅದ್ವೈತಿಗಳ ಎರಡನೆಯ ವ್ಯಾಖ್ಯಾನವೂ ಸಹ ಅಸಾಧುವಾಗಿದೆ. 'ಏಷಃ' ಎಂಬಲ್ಲಿರುವ 'ಏತತ್' ಶಬ್ದವು ಜ್ಞಾನವನ್ನು ಪರಾಮರ್ಶಿಸುತ್ತಿದೆಯೆಂಬ ಅವರ ವಿಚಾರವು ಅಸಾಧುವಾಗಿದೆ. ಏಕೆಂದರೆ ಬೃಹದಾರಣ್ಯಕೋಪನಿಷತ್ತಿನಲ್ಲಿ 'ಏಷಸೇತುರ್ವಿಧೃತಿಃ' ಎಂಬುದಾಗಿ ಬ್ರಹ್ಮನು ಸೇತುವಾಗಿದ್ದಾನೆಂದು ಹೇಳಲಾಗಿದೆ. ಅಂತಹ ಬ್ರಹ್ಮನೇ ಇಲ್ಲಿಯೂ ಸಹ ಸೇತುಶಬ್ದದಿಂದ ಪ್ರತಿಪಾದ್ಯನಾಗಿದ್ದಾನೆಂಬ ಪ್ರತ್ಯಭಿಜ್ಞೆಯೇ ಬರುತ್ತದೆ ಹೊರತು, ಜ್ಞಾನವೆಂಬ ಅರ್ಥದ ಚಿಂತನೆ ಯಾರಿಗೂ ಸಹ ಬರುವುದಿಲ್ಲ.

**अस्यामेव श्रुतौ ''स एषोऽन्तश्चरते'' इति ''दिव्ये ब्रह्मपुरे ह्येष व्योम्न्यात्मा सम्प्रतिष्ठितः'' इत्युत्तरवाक्यस्थस्यैतच्छब्दस्य ब्रह्मपरत्वदर्शनाच्च ।**

ಮತ್ತು ಇದೇ ಪ್ರಕರಣದ ಮುಂದಿನ ವಾಕ್ಯದಲ್ಲಿ 'ಸ ಏಷೋಽಂತಶ್ಚರತೇ' ಎಂಬಲ್ಲಿ 'ದಿವ್ಯೇ ಬ್ರಹ್ಮಪುರೇ ಹ್ಯೇಷ ವ್ಯೋಮ್ನ್ಯಾತ್ಮಾ ಸಂಪ್ರತಿಷ್ಠಿತಃ' ಎಂಬ ಅದರ ಮುಂದಿನ ವಾಕ್ಯದಲ್ಲಿ 'ಏತತ್' ಶಬ್ದದಿಂದ ಬ್ರಹ್ಮನೇ ಪ್ರತಿಪಾದ್ಯನಾಗಿದ್ದಾನೆ ಎಂದು ಹೇಳಿದ್ದಾರೆ. ಆದ್ದರಿಂದ ಇಲ್ಲಿರುವ 'ಏತತ್' ಶಬ್ದದಿಂದಲೂ ಅವನೇ ಪ್ರತಿಪಾದ್ಯನಾಗಬೇಕು.

**सिद्धरूपाभिधायिनः पुँल्लिङ्गस्यैतच्छब्दस्य पुँल्लिङ्गेन तच्छब्देनाऽत्मशब्देन चाव्यवधानेन प्रकृतसिद्धरूपाऽत्मपरत्वसम्भवेऽपि तद्विपरीतज्ञानपरत्वायोगाच्च ।**

ದ್ಯುಭ್ವಾದ್ಯಧಿಕರಣ (೧-೩-೧)

'ಏತತ್' ಶಬ್ದವು ಎಲ್ಲೆಡೆ ಸಿದ್ಧರೂಪವಾದ ವಸ್ತುವನ್ನೇ ಪರಾಮರ್ಶ ಮಾಡುತ್ತದೆ. ಆದ್ದರಿಂದ ಪ್ರಕೃತ 'ಏಷಃ' ಎಂಬಲ್ಲಿರುವ 'ಏತತ್' ಶಬ್ದವೂ ಸಹ ಸಿದ್ಧನಾದ ಬ್ರಹ್ಮನನ್ನೇ ಪರಾಮರ್ಶ ಮಾಡುತ್ತದೆ ಹೊರತು, ಸಾಧ್ಯವಾದ ಜ್ಞಾನವನ್ನು ಪರಾಮರ್ಶ ಮಾಡಲು ಸಾಧ್ಯವಿಲ್ಲ. ಮತ್ತು ಪುಲ್ಲಿಂಗದಲ್ಲಿರುವ 'ಏತತ್' ಶಬ್ದದಿಂದ ಪುಲ್ಲಿಂಗದಿಂದ ಹಿಂದೆ ಪ್ರಸಕ್ತವಾಗಿರುವ 'ತಮ್' ಎಂಬ ತತ್‌ಶಬ್ದದಿಂದ ಹಾಗೂ 'ಆತ್ಮಾನಮ್' ಎಂಬಲ್ಲಿರುವ 'ಆತ್ಮ' ಶಬ್ದದಿಂದ ಪ್ರಕೃತನಾದ ಬ್ರಹ್ಮನನ್ನೇ ಪರಾಮರ್ಶಿಸುವುದು ಉಚಿತ. ಆತ್ಮಶಬ್ದದಿಂದ ಪ್ರಕೃತನಾದವನನ್ನು ಪರಾಮರ್ಶಿಸುವುದು ಇನ್ನೂ ಹೆಚ್ಚು ಉಚಿತ. 'ಜಾನಥ' ಎಂಬುದರಿಂದ ಪ್ರಸಕ್ತವಾದ ಜ್ಞಾನಕ್ಕಿಂತಲೂ ಅತ್ಯಂತ ಹತ್ತಿರವಾದ ಆತ್ಮಶಬ್ದದಿಂದ ಹಿಂದೆ ಆತ್ಮಶಬ್ದದಿಂದ ಪ್ರಸಕ್ತನಾದ ಬ್ರಹ್ಮನನ್ನು ಪರಾಮರ್ಶಿಸುವುದೇ ಸೂಕ್ತವಾಗಿದೆ. ಆದ್ದರಿಂದ ವ್ಯವಹಿತವಾದ ನಪುಂಸಕಲಿಂಗದಿಂದ ಪ್ರಸಕ್ತವಾದ ಮತ್ತು ಸಾಧ್ಯವಾದ ಜ್ಞಾನವನ್ನು ಪರಾಮರ್ಶಿಸುವುದಕ್ಕಿಂತಲೂ ಸಿದ್ಧನಾದ, ಹತ್ತಿರದಲ್ಲೇ ಇರುವ ಆತ್ಮಶಬ್ದದಿಂದ ಹಾಗೂ ಪುಲ್ಲಿಂಗಶಬ್ದದಿಂದಲೇ ಪ್ರಸಕ್ತನಾದ ಬ್ರಹ್ಮನನ್ನು ಪರಾಮರ್ಶಿಸುವುದು ಅತ್ಯಂತ ಅರ್ಥಪೂರ್ಣವಾಗಿದೆ.

**किञ्चाऽद्यसूत्रे द्युभ्वाद्यायतनत्वं नाम परमते निर्विशेषस्य तद्भ्रमाधिष्ठानत्वम् ।**

ಮತ್ತು ಪ್ರಥಮಸೂತ್ರದಲ್ಲಿ ದ್ಯುಭ್ವಾದ್ಯಾಯತನತ್ವವೆಂಬ ಧರ್ಮವನ್ನು ಬ್ರಹ್ಮನಲ್ಲಿ ಸಮರ್ಥಿಸಲು ಅದ್ವೈತಿಗಳಿಗೆ ಸಾಧ್ಯವಿಲ್ಲ. ಈ ಪಾದದಲ್ಲಿ ನಿರ್ವಿಶೇಷಬ್ರಹ್ಮನ ಸ್ವರೂಪದ ವಿಚಾರವಷ್ಟೇ ಪ್ರಸಕ್ತವಾಗುವುದರಿಂದ ದ್ಯುಭ್ವಾದ್ಯಾಯತನತ್ವದ ಭ್ರಮೆಗೆ ಬ್ರಹ್ಮನು ಅಧಿಷ್ಠಾನನಾಗಿದ್ದಾನೆಂದಷ್ಟೇ ಹೇಳಬೇಕು. ಅದನ್ನು ಬಿಟ್ಟು ದ್ಯುಭ್ವಾದ್ಯಾಯತನತ್ವವೆಂಬ ಧರ್ಮವನ್ನು ಸಮರ್ಥಿಸಲು ಸಾಧ್ಯವಿಲ್ಲ.

**तथाच श्रुतावोतशब्दः सूत्रे चायतनशब्दश्चायुक्तः । नहि शुक्तौ रूप्यमोतमित्युच्यते ।**

ಆದ್ದರಿಂದಲೇ ಶ್ರುತಿಯಲ್ಲಿರುವ ಓತಶಬ್ದವು ಸೂತ್ರದಲ್ಲಿರುವ 'ಆಯತನ' ಶಬ್ದವೂ ಸಹ ಅಯುಕ್ತವಾಗುತ್ತದೆ. ಏಕೆಂದರೆ ಶುಕ್ತಿಯಲ್ಲಿ ರೂಪ್ಯವು ಆರೋಪಿತವಾಗಿದೆಯೆಂದು ಹೇಳುತ್ತಾರೆ ಹೊರತು, ಓತವಾಗಿದೆಯೆಂದು ಯಾರೂ ಹೇಳುವುದಿಲ್ಲ.

**यच्चोक्तं स्वशब्दादित्यनेनाऽत्मशब्दादित्युच्यते । स हि ब्रह्मणः शब्द इति । तन्न । आत्मशब्दवाच्यत्वस्य निर्विशेषेऽभावात् । तल्लक्ष्यत्वस्य च प्रधानादावपि सम्भवात् । सविशेषस्य चैतत्पादाप्रतिपाद्यत्वात् ।**

ಸೂತ್ರದ ಹೇತುಭಾಗಕ್ಕೆ ಮಾಡಿದ ವ್ಯಾಖ್ಯಾನವೂ ಸಹ ಸಾಧುವಲ್ಲ. 'ಸ್ವಶಬ್ದಾತ್' ಎಂಬುದಕ್ಕೆ 'ಆತ್ಮಶಬ್ದಾತ್' ಎಂದೂ ಅಂತಹ ಶಬ್ದವನ್ನು ಬ್ರಹ್ಮಪ್ರತಿಪಾದಿಕವಾಗಿದೆಯೆಂದೂ ವ್ಯಾಖ್ಯಾನಿಸಿದ್ದಾರೆ. ಇದು ತಪ್ಪು. ಆತ್ಮಶಬ್ದದಿಂದ ಶಕ್ತಿವೃತ್ತಿಯಿಂದ ಬ್ರಹ್ಮನು ಪ್ರತಿಪಾದ್ಯನಾಗಿದ್ದಾನೆಂದು ಹೇಳಲು ಸಾಧ್ಯವಿಲ್ಲ. ಈ ಪಾದವು ನಿರ್ವಿಶೇಷಬ್ರಹ್ಮ ಪ್ರತಿಪಾದಕವಾಗಿರುವುದರಿಂದ ಆತ್ಮಶಬ್ದವಾಚ್ಯತ್ವವು ನಿರ್ವಿಶೇಷನಲ್ಲಿ ಅಯುಕ್ತವಾಗಿದೆ. ಲಕ್ಷಣಯಾ ನಿರ್ವಿಶೇಷಪ್ರತಿಪಾದ್ಯನಾಗಿದ್ದಾನೆಂದರೆ ಪ್ರಕೃತಿ ಮೊದಲಾದವುಗಳಲ್ಲಿಯೂ ಲಕ್ಷಣಯಾ ಆತ್ಮಶಬ್ದವಾಚ್ಯತ್ವವನ್ನು ಹೇಳಬಹುದು. ಹಾಗೂ ಸವಿಶೇಷನು ಈ ಪಾದದಿಂದ ಪ್ರತಿಪಾದ್ಯನೇ ಆಗಿರುವುದಿಲ್ಲ.

**यच्चोक्तं रागद्वेषादिमुक्तैर्ज्ञेयत्वव्यपदेशादिति वा 'तमेवैकं जानथ आत्मानं अन्या वाचो विमुञ्चत' इति वाग्विमोकपूर्वकं ज्ञेयत्वावचनात् इति वा ''तथा विद्वान्नामरूपाद्विमुक्तः परात्परं पुरुषमुपैति'' इति मुक्तैः प्राप्यत्वव्यपदेशादिति वा द्वितीयसूत्रार्थ इति ।[1]**

---

(१) **शङ्करभाष्यम्** –

प्रथमाध्याये तृतीयः पादः

**द्युभ्वाद्यायतनं स्वशब्दात् ॥ १ ॥**

सूत्रं प्रधानं भोक्तेशो द्युभ्वाद्यायतनं भवेत् ।
श्रुतिस्मृतिप्रसिद्धिभ्यां भोक्तृत्वाच्चेश्वरेतरः ॥
नाद्यौ पक्षावात्मशब्दान्न भोक्ता मुक्तगम्यतः ।
ब्रह्मप्रकरणादीशः सर्वज्ञत्वादितस्तथा ॥ २ ॥

इदं श्रूयते 'यस्मिन् द्यौः पृथिवी चान्तरिक्षमोतं मनः सह प्राणैश्च सर्वैः । तमेवैकं जानथ आत्मानमन्या वाचो विमुञ्चथामृतस्यैष सेतुः' इति । अत्र यदेतद् द्युप्रभृतीनामोतत्ववचनादायतनं किञ्चिदवगम्यते, तत्किं परं ब्रह्म स्यादाहोस्विदर्थान्तरमिति सन्दिह्यते । तत्रार्थान्तरं किमप्यायतनं स्यादिति प्राप्तम् । कस्मात्, 'अमृतस्यैष सेतुः' इति श्रवणात् । पारवान् हि लोके सेतुः प्रख्यातः । नच परस्य ब्रह्मणः पारवत्त्वं शक्यमभ्युपगन्तुम्, 'अनन्तपारम्' इति श्रवणात् । अर्थान्तरे चायतने परिगृह्यमाणे स्मृतिप्रसिद्धं प्रधानं परिग्रहीतव्यम्, तस्य कारणत्वादायतनत्वोपपत्तेः । श्रुतिप्रसिद्धो वा वायुः स्यात्, 'वायुर्वै गौतमः, तत् सूत्रम् वायुना वै गौतमसूत्रेणायं च लोकः परश्च लोकः सर्वाणि च भूतानि सन्दृब्धानि भवन्ति' इति वायोरपि विधारणत्वश्रवणात् । शारीरो वा स्यात् । तस्यापि भोक्तृत्वाद् भोग्यं प्रपञ्चं प्रत्यायतनत्वोपपत्तेरित्येवं प्राप्त इदमाह – **द्युभ्वाद्यातनमिति** ॥ द्यौश्च भूश्च द्युभुवौ, द्युभुवावादी यस्य तदिदं द्युभ्वादि ।

यदेतदस्मिन् वाक्ये द्यौः पृथिव्यन्तरिक्षं मनः प्राणा इत्येवमात्मकं जगदोतत्वेन निर्दिष्टं, तस्यायतनं परं ब्रह्म भवितुमर्हति । कुतः? स्वशब्दादात्मशब्दादित्यर्थः । आत्मशब्दो हीह भवति 'तमेवैकं जानथ आत्मानम्' इति । आत्मशब्दश्च परमात्मपरिग्रहे सम्यगवकल्पते नार्थान्तरपरिग्रहे । क्वचिच्च स्वशब्देनैव ब्रह्मण आयतनत्वं श्रूयते 'सन्मूलाः सोम्येमाः सर्वाः प्रजाः सदायतनाः सत्प्रतिष्ठाः' इति । स्वशब्देनैव चेह पुरस्तादुपरिष्टाच्च ब्रह्म सङ्कीर्त्यते 'पुरुष एवेदं विश्वं कर्म तपो ब्रह्म परामृतम्' इति । 'ब्रह्मैवेदममृतं पुरस्ताद् ब्रह्म पश्चाद् ब्रह्म दक्षिणतश्चोत्तरेण' इति च । तत्र त्वायतनायतनवद्भावश्रवणात् । सर्वं ब्रह्मेति च सामानाधिकरण्यात् । यथाऽनेकात्मको वृक्षः शाखा स्कन्धो मूलं चेत्येवं नानारसो विचित्र आत्मेत्याशङ्का सम्भवति, तां निवर्तयितुं सावधारणमाह 'तमेवैकं जानथ आत्मानम्' इति । एतदुक्तं भवति, न कार्यप्रपञ्चविशिष्टो विचित्र आत्मा विज्ञेयः । किं तर्ह्यविद्याकृतं कार्यप्रपञ्चं विद्यया प्रविलापयन्तस्तमेवैकमायतनभूतमात्मानं जानथैकरसमिति । यथा यस्मिन्नास्ते देवदत्तस्तदानयेत्युक्त आसनमेवानयति न देवदत्तम् । तद्वदायतनभूतस्यैवैकरसस्यात्मनो विज्ञेयत्वमुपदिश्यते । विकारानृताभिसन्धस्य चापवादः श्रूयते 'मृत्योः स मृत्युमाप्नोति य इह नानेव पश्यति' इति । सर्वं ब्रह्मेति तु सामानाधिकरण्यं प्रपञ्चप्रविलापनार्थं नानेकरसताप्रतिपादनार्थम् । 'स यथा सैन्धवघनोऽनन्तरोऽबाह्यः कृत्स्नो रसघन एवैवं वा अरेऽयमाऽत्मानन्तरोऽबाह्यः कृत्स्नः प्रज्ञानघन एव'इत्येकरसताश्रवणात् । तस्माद् द्युभ्वाद्यायतनं परं ब्रह्म ॥

यत्तूक्तं सेतुश्रुतेः सेतोश्च पारवत्त्वोपपत्तेर्ब्रह्मणोऽर्थान्तरेण द्युभ्वाद्यायतनेन भवितव्यमिति । अत्रोच्यते विधारणत्वमात्रमत्र सेतुश्रुत्या विवक्ष्यते न पारवत्त्वादि । नहि मृद्दारुमयो लोके सेतुर्दृष्ट इत्यत्रापि मृद्दारुमय एव सेतुरभ्युपगम्यते । सेतुशब्दार्थोऽपि विधारणत्वमात्रमेव न पारवत्त्वादि, षिञो बन्धनकर्मणः सेतुशब्दव्युत्पत्तेः । अपर आह 'तमेवैकं जानथ आत्मानम्' इति यदेतत् सङ्कीर्तितमात्मज्ञानम्, यच्चैतद् 'अन्या वाचो विमुञ्चथ' इति वाग्विमोचनम्, तदत्रामृतत्वसाधनत्वात् 'अमृतस्यैष सेतुः' इति सेतुश्रुत्या सङ्कीर्त्यते, नतु द्युभ्वाद्यायतनम् । तत्र यदुक्तं सेतुश्रुतेर्ब्रह्मणोऽर्थान्तरेण द्युभ्वाद्यायतनेन भाव्यमित्येतदयुक्तम् ॥ १ ॥

**मुक्तोपसृप्यव्यपदेशात् ॥ २ ॥**

इतश्च परमेव ब्रह्म द्युभ्वाद्यायतनम् । यस्मान्मुक्तोपसृप्यताऽस्य व्यपदिश्यमाना दृश्यते । मुक्तैरुपसृप्यं मुक्तोपसृप्यम् । देहादिष्वनात्मस्वहमस्मीत्यात्मबुद्धिरविद्या, ततस्तत्पूजनादौ रागस्तत्परिभवादौ द्वेषः तदुच्छेददर्शनाद् भयं, मोहश्चेत्येवमयमनन्तभेदोऽनर्थव्रातः सन्ततः सर्वेषां नः प्रत्यक्षः । तद्विपर्ययेणाविद्यारागद्वेषादिदोषमुक्तैरुपसृप्यङ्गम्यमेतदिति द्युभ्वाद्यायतनं

प्रकृत्य व्यपदेशो भवति । कथम्? 'भिद्यते हृदयग्रन्थिश्छिद्यन्ते सर्वसंशयाः । क्षीयन्ते चास्य कर्माणि तस्मिन् दृष्टे परावरे ।।' इत्युक्त्वा ब्रवीति 'तथा विद्वान्नामरूपाद् विमुक्तः परात्परं पुरुषमुपैति दिव्यम्' इति । ब्रह्मणश्च मुक्तोपसृप्यत्वं प्रसिद्धं शास्त्रे 'यदा सर्वे प्रमुच्यन्ते कामा येऽस्य हृदि श्रिताः । अथ मर्त्योऽमृतो भवत्यत्र ब्रह्म समश्नुते ।।' इत्येवमादौ । प्रधानादीनां तु न कचिन्मुक्तोपसृप्यत्वमस्ति प्रसिद्धम् । अपिच 'तमेवैकं जानथ आत्मानमन्या वाचो विमुञ्चथामृतस्यैष सेतुः' इति वाग्विमोकपूर्वकं विज्ञेयत्वमिह द्युभ्वाद्यातनस्योच्यते । तच्च श्रुत्यन्तरे ब्रह्मणो दृष्टम् 'तमेव धीरो विज्ञाय प्रज्ञां कुर्वीत ब्राह्मणः । नानुध्यायाद् बहून् शब्दान् वाचो विग्लापनं हि तत्' इति । तस्मादपि द्युभ्वाद्यायतनं परं ब्रह्म ।। २ ।।

**नानुमानमतच्छब्दात् ।। ३ ।।**

यथा ब्रह्मणः प्रतिपादको वैशेषिको हेतुरुक्तो नैवमर्थान्तरस्य वैशेषिको हेतुः प्रतिपादकोऽस्तीत्याह । नानुमानिकं साङ्ख्यस्मृतिपरिकल्पितं प्रधानमिह द्युभ्वाद्यायतनत्वेन प्रतिपत्तव्यम् । कस्मात्, अतच्छब्दात् । तस्याचेतनस्य प्रधानस्य प्रतिपादकः शब्दस्तच्छब्दः, न तच्छब्दोऽतच्छब्दः । नह्यत्राचेतनस्य प्रधानस्य प्रतिपादकः कश्चिच्छब्दोऽस्ति, येनाचेतनं प्रधानं कारणत्वेनायतनत्वेन वाऽवगम्येत । तद्विपरीतस्य चेतनस्य प्रतिपादकशब्दोऽत्रास्ति, 'यः सर्वज्ञः सर्ववित्' इत्यादिः । अत एव न वायुरपीह द्युभ्वाद्यातनत्वेनाश्रीयते ।। ३ ।।

**प्राणभृच्च ।। ४ ।।**

यद्यपि प्राणभृतो विज्ञानात्मन आत्मत्वं चेतनत्वं च सम्भवति, तथाप्युपाधिपरिच्छिन्न-ज्ञानस्य सर्वज्ञत्वाद्यसम्भवे सत्यस्मादेवातच्छब्दात् प्राणभृदपि न द्युभ्वाद्यायतनत्वेनाऽ-श्रयितव्यः । नचोपाधिपरिच्छिन्नस्याविभोः प्राणभृतो द्युभ्वाद्यायतनत्वमपि सम्यक् सम्भवति । पृथग्योगकरणमुत्तरार्थम् ।। ४ ।।

कुतश्च न प्राणभृद् द्युभ्वाद्यायतनत्वेनाश्रयितव्यः?

**भेदव्यपदेशात् ।। ५ ।।**

भेदव्यपदेशश्चेह भवति 'तमेवैकं जानथ आत्मानम्' इति ज्ञेयज्ञातृभावेन । तत्र प्राणभृत् तावन्मुमुक्षुत्वाज्ज्ञाता, परिशेषादात्मशब्दवाच्यं ब्रह्म ज्ञेयं द्युभ्वाद्यायतनमिति गम्यते, न प्राणभृत् ।। ५ ।।

कुतश्च न प्राणभृद् द्युभ्वाद्यायतनत्वेनाश्रयितव्यः?

**प्रकरणात् ।। ६ ।।**

प्रकरणं चेदं परमात्मनः । 'कस्मिन्नु भगवो विज्ञाते सर्वमिदं विज्ञातं भवति'

ಅದ್ವೈತಿಗಳ ಎರಡನೆಯ ಸೂತ್ರವ್ಯಾಖ್ಯಾನವೂ ಸಹ ಅಸಾಧುವಾಗಿದೆ.

೨. 'ಮುಕ್ತೋಪಸೃಪ್ಯವ್ಯಪದೇಶಾತ್' - ರಾಗದ್ವೇಷಾದಿಗಳಿಂದ ಮುಕ್ತನಾದವನಿಂದ ಬ್ರಹ್ಮನು ಜ್ಞೇಯನಾಗಿದ್ದಾನೆಂದು 'ಭಿದ್ಯತೇ ಹೃದಯಗ್ರಂಥಿಃ' ಎಂಬಲ್ಲಿ ಹೇಳಲಾಗಿದೆ. ಮತ್ತು 'ತಮೇವೈಕಂ ಜಾನಥ ಆತ್ಮಾನಮ್ ಅನ್ಯಾ ವಾಚೋ ವಿಮುಂಚಥ' ಎಂಬುದಾಗಿ ಎಲ್ಲಾವಿಧ ಮಾತುಗಳನ್ನು ಬಿಟ್ಟು ಬ್ರಹ್ಮನನ್ನೇ ತಿಳಿಯಬೇಕೆಂದು ಹೇಳಲಾಗಿದೆ. ಹೀಗೆ ವಾಗ್ವಿಮೋಕತ್ವ ಪೂರ್ವಕವಾಗಿ ಜ್ಞೇಯತ್ವವನ್ನು ಹೇಳಿರುವುದರಿಂದಲೂ ಬ್ರಹ್ಮನೇ ದ್ಯುಭ್ವಾದ್ಯಾಯತನನಾಗಿದ್ದಾನೆ. ಅಥವಾ 'ತಥಾ ವಿದ್ವಾನ್ನಾಮರೂಪಾದ್ವಿಮುಕ್ತಃ ಪರಾತ್ಪರಂ ಪುರುಷಮುಪೈತಿ' ಎಂಬಲ್ಲಿ ಮುಕ್ತರಿಂದ

इत्येकविज्ञानेन सर्वविज्ञानापेक्षणात् । परमात्मनि हि सर्वात्मके विज्ञाते सर्वमिदं विज्ञातं स्यान्न केवले प्राणभृति ।। ६ ।।

कुतश्च प्राणभृद् द्युभ्वाद्यायतनत्वेनाश्रयितव्यः?

**स्थित्यदनाभ्यां च ॥ ७ ॥**

द्युभ्वाद्यायतनं च प्रकृत्य 'द्वा सुपर्णा सयुजा सखाया' इत्यत्र स्थित्यदने निर्दिश्येते । 'तयोरन्यः पिप्पलं स्वाद्वत्ति' इति कर्मफलाशनम्, 'अनश्नन्नन्योऽभिचाकशीति' इत्यौदासीन्येनावस्थानं च । ताभ्यां च स्थित्यदनाभ्यामीश्वरक्षेत्रज्ञौ तत्र गृह्येते । यदि चेश्वरो द्युभ्वाद्यायतनत्वेन विवक्षितस्ततस्तस्य प्रकृतस्येश्वरस्य क्षेत्रज्ञात् पृथग्वचनमवकल्पते । अन्यथा ह्यप्रकृतवचनमाकस्मिकमसम्बद्धं स्यात् । ननु तवापि क्षेत्रज्ञस्येश्वरात् पृथग्वचनमाकस्मिकमेव प्रसज्येत । न, तस्याविवक्षितत्वात् । क्षेत्रज्ञो हि कर्तृत्वेन भोक्तृत्वेन च प्रतिशरीरं बुद्ध्याद्युपाधिसम्बद्धो लोकत एव प्रसिद्धो नासौ श्रुत्या तात्पर्येण विवक्ष्यते । ईश्वरस्तु लोकतोऽप्रसिद्धत्वाच्छ्रुत्या तात्पर्येण विवक्ष्यत इति न तस्याकस्मिकं वचनं युक्तम् । 'गुहां प्रविष्टावात्मानौ हि' इत्यत्राप्येतद् दर्शितम् । 'द्वा सुपर्णा' इत्यस्यामृचीश्वरक्षेत्रज्ञावुच्येते इति । यदाऽपि पैङ्ग्युपनिषत्कृतेन व्याख्यानेनास्यामृचि सत्त्वक्षेत्रज्ञावुच्येते, तदाऽपि न विरोधः कश्चित् । कथम्? प्राणभृद्धीह घटादिच्छिद्रवत् सत्त्वाद्युपाध्यभिमानित्वेन प्रतिशरीरं गृह्यमाणो द्युभ्वाद्यायतनं न भवतीति निषिध्यते । यस्तु सर्वशरीरेषूपाधिभिर्विनोपलक्ष्यते, परमात्मैव स भवति । यथा घटादिच्छिद्राणि घटादिभिरुपाधिभिर्विनोपलक्ष्यमाणानि महाकाश एव भवन्ति । तद्वत् प्राणभृतः परस्मादन्यत्वानुपपत्तेः प्रतिषेधो नोपपद्यते । तस्मात् सत्त्वाद्युपाध्यभिमानिन एव द्युभ्वाद्यायतनत्वप्रतिषेधः । तस्मात्परमेव ब्रह्म द्युभ्वाद्यायतनम् । तदेतत् 'अदृश्यत्वादिगुणको धर्मोक्तेः' इत्यनेनैव सिद्धम् । तस्यैव हि भूतयोनिवाक्यस्य मध्य इदं पठितम् 'यस्मिन् द्यौः पृथिवी चान्तरिक्षम्' इति । प्रपञ्चार्थं तु पुनरुपन्यस्तम् ।। ७ ।।

ಪ್ರಾಪ್ಯನಾಗಿದ್ದಾನೆಂದು ಹೇಳಿರುವ ಕಾರಣದಿಂದಲೂ ಬ್ರಹ್ಮನೇ ದ್ಯುಭ್ವಾದ್ಯಾಯತನನಾಗಿದ್ದಾನೆಂದು ಸೂತ್ರಾರ್ಥ.

**तन्न । निरुपपदस्य मुक्तशब्दस्य संसारान्मुक्ते प्रसिद्धत्वेन तत्त्यागायोगात् । उपपूर्वस्य सृपेः समीपप्राप्त्यर्थत्वेन ज्ञानार्थत्वायोगाच्च ।**

ಇದು ತಪ್ಪು. ಯಾವುದೇ ಉಪಪದವಿಲ್ಲದೇ 'ಮುಕ್ತ' ಎಂಬ ಶಬ್ದವನ್ನು ಪ್ರಯೋಗಿಸಿದರೆ ಸಂಸಾರದಿಂದ ಮುಕ್ತನಾಗಿದ್ದಾನೆಂಬರ್ಥವನ್ನೇ ಸ್ವೀಕರಿಸಬೇಕೆಂಬುದು ಪ್ರಸಿದ್ಧವಾಗಿದೆ. ಅದನ್ನು ಬಿಟ್ಟು ರಾಗದ್ವೇಷಾದಿಗಳಿಂದ ಮುಕ್ತನಾಗಿದ್ದಾನೆಂದು ವ್ಯಾಖ್ಯಾನಿಸುವುದು ತಪ್ಪಾಗುತ್ತದೆ. ಮತ್ತು 'ಉಪ' ಎಂಬ ಉಪಸರ್ಗದಿಂದ ಕೂಡಿರುವ 'ಸೃಪ್' ಧಾತುವು ಸಮೀಪವನ್ನು ಹೊಂದಿದ ಎಂಬರ್ಥವನ್ನೇ ಹೇಳುತ್ತದೆ ಹೊರತು, ಜ್ಞಾನವೆಂಬರ್ಥವನ್ನು ಹೇಳುವುದಿಲ್ಲ. ಆದ್ದರಿಂದ ಉಪಪೂರ್ವಕವಾದ 'ಸೃಪ್' ಧಾತುವಿಗೆ ಜ್ಞಾನವೆಂಬರ್ಥವನ್ನು ಮಾಡಿದ್ದು ತಪ್ಪಾಗುತ್ತದೆ.

**त्वन्मते ब्रह्मणो मुक्ताभेदेन तत्प्राप्यत्वाभावाच्च । सगुणमोक्षोक्तौ च पादासङ्गतिः ।**

ಮತ್ತು ಅದ್ವೈತ ಮತದಲ್ಲಿ ಬ್ರಹ್ಮನು ಮುಕ್ತರಿಗಿಂತ ಅಭಿನ್ನನಾಗಿದ್ದಾನೆ. ಹೀಗಿರುವಾಗ ಮುಕ್ತನಾದವನು ಬ್ರಹ್ಮನನ್ನು ಹೊಂದುತ್ತಾನೆಂದು ಹೇಳುವುದು ತಪ್ಪಾಗುತ್ತದೆ. ಸಗುಣಬ್ರಹ್ಮನನ್ನು ಹೊಂದುತ್ತಾನೆಂದು ಹೇಳಿದರೆ ಈ ಪಾದದಲ್ಲಿ ಅದು ಅಸಂಗತವಾಗುತ್ತದೆ.

**सौत्रमुक्तशब्दस्य श्रौतस्य 'नामरूपाद्विमुक्तः' इत्यस्यास्वारस्यं च ।**

ಸಗುಣಬ್ರಹ್ಮನನ್ನು ಹೊಂದುತ್ತಾನೆಂದು ಹೇಳುವುದಾದರೆ ಸೂತ್ರದಲ್ಲಿರುವ ಮುಕ್ತಶಬ್ದವು ಹಾಗೂ ಶ್ರುತಿಯಲ್ಲಿರುವ 'ನಾಮರೂಪಾದ್ವಿಮುಕ್ತಃ' ಎಂಬ ಶಬ್ದವು ಅಸ್ವರಸವಾಗುತ್ತದೆ.

**तृतीयसूत्रे अतच्छब्दो नाम तद्वाचकशब्दाभावश्चेन्निर्विशेषेऽपि समः । तल्लक्षकशब्दाभावस्तु प्रधानादावप्यसिद्ध इत्युक्तम् ।**

೩. 'ನಾನುಮಾನಂ ಅತಚ್ಛಬ್ದಾತ್' - ಪ್ರಧಾನವನ್ನು ಪ್ರತಿಪಾದಿಸುವ ಶಬ್ದವಿಲ್ಲದ ಕಾರಣ ಲೋಕಾಧಾರವಾಗಿ ಪ್ರಧಾನವು ಪ್ರಸಕ್ತವಾಗಿಲ್ಲ.

ಹೀಗೆ ಮೂರನೆಯ ಸೂತ್ರವನ್ನು ಅದ್ವೈತಿಗಳು ವ್ಯಾಖ್ಯಾನಿಸುತ್ತಾರೆ. ಇದೂ ಸಹ ತಪ್ಪು. 'ಅತಚ್ಛಬ್ದಾತ್' ಎಂಬುದಕ್ಕೆ ಪ್ರಧಾನಪ್ರತಿಪಾದಕವಾದ ಶಬ್ದವಿರುವುದಿಲ್ಲವೆಂದು ವ್ಯಾಖ್ಯಾನಿಸುವುದಾದರೆ ನಿರ್ವಿಶೇಷನಲ್ಲಿಯೂ ಇದು ಸಮಾನವಾಗಿದೆ. ಪ್ರಧಾನವಾಚಕವಾದ ಶಬ್ದವು ಹೇಗಿಲ್ಲವೋ, ಅದರಂತೆ

ನಿರ್ವಿಶೇಷಬ್ರಹ್ಮವಾಚಕವಾದ ಶಬ್ದವೂ ಸಹ ಇಲ್ಲಿ ಇರುವುದಿಲ್ಲ. 'ಅತಚ್ಛಬ್ದಾತ್' ಎಂಬುದಕ್ಕೆ ಪ್ರಧಾನದಲ್ಲಿ ಲಕ್ಷಕವಾದ ಶಬ್ದವಿರುವುದಿಲ್ಲವೆಂದು ವ್ಯಾಖ್ಯಾನಿಸುವುದಾದರೆ ಇದು ಅಸಿದ್ಧವಾಗಿದೆ. ಲಕ್ಷಕಶಬ್ದಾಭಾವವು ನಿರ್ವಿಶೇಷಬ್ರಹ್ಮನಲ್ಲಿ ಅಸಿದ್ಧವಾದಂತೆ ಪ್ರಧಾನದಲ್ಲಿಯೂ ಸಹ ಅಸಿದ್ಧವೇ ಆಗಿದೆ.

**चतुर्थे ''यः सर्वज्ञः'' इत्यतच्छब्दाद्यदि जीवनिषेधस्तर्हि निर्विशेषब्रह्मनिषेधोऽपि स्यात् । सार्वज्ञस्य सविशेषनिष्ठत्वात् ।**

೪. 'ಪ್ರಾಣಭೃಚ್ಚ' - ಸರ್ವಜ್ಞತ್ವವು ಕೇಳಿಸುತ್ತಿರುವುದರಿಂದಲೇ ಜೀವಾತ್ಮನು ಲೋಕಾಧಾರನಾಗುವುದಿಲ್ಲ.

ಈ ರೀತಿಯ ಅದ್ವೈತಿಗಳ ನಾಲ್ಕನೆಯ ಸೂತ್ರವ್ಯಾಖ್ಯಾನವೂ ಸಹ ಅಸಾಧುವಾಗಿದೆ. ಏಕೆಂದರೆ 'ಯಃ ಸರ್ವಜ್ಞಃ' ಎಂಬಲ್ಲಿ 'ಸರ್ವಜ್ಞ' ಶಬ್ದವು ಕೇಳಿಸುತ್ತಿರುವುದರಿಂದ ಜೀವನನ್ನು ನಿಷೇಧ ಮಾಡುವುದಾದರೆ ನಿರ್ವಿಶೇಷಬ್ರಹ್ಮನನ್ನೂ ಸಹ ನಿಷೇಧ ಮಾಡಬೇಕು. ಏಕೆಂದರೆ ಸರ್ವಜ್ಞತ್ವವು ಸವಿಶೇಷಬ್ರಹ್ಮನಲ್ಲಿ ಮಾತ್ರವಿದೆ ಹೊರತು, ನಿರ್ವಿಶೇಷ ಬ್ರಹ್ಮನಲ್ಲಿ ಇರುವುದಿಲ್ಲ.

**पञ्चमे भेदव्यपदेशो नाम ''तमेवैकं जानथ'' इति कर्मकर्तृव्यपदेश इत्यप्ययुक्तम् । 'अन्यमीशम्' इति साक्षाद्भेदव्यपदेशे सति भेदकव्यपदेश-ग्रहणायोगात् ।**

೫. 'ಭೇದವ್ಯಪದೇಶಾತ್' - 'ತಮೇವೈಕಂ ಜಾನಥ' ಎಂಬುದಾಗಿ ಯಾರು ಲೋಕಕ್ಕೆ ಆಧಾರನಾಗಿದ್ದಾನೋ ಅವನು ಜ್ಞೇಯನಾಗಿದ್ದಾನೆಂದು ಹೇಳಿರುವುದರಿಂದ ಮತ್ತು ಜೀವನು ಜ್ಞಾತೃವಾಗಿದ್ದಾನೆಂದು ಹೇಳಿರುವುದರಿಂದ ಜೀವನೇ ಲೋಕಾಧಾರನಾಗಲು ಸಾಧ್ಯವಿಲ್ಲ.

ಇದು ಎರಡನೆಯ ಸೂತ್ರಕ್ಕೆ ಅದ್ವೈತಿಗಳ ವ್ಯಾಖ್ಯಾನ. ಇದೂ ಸಹ ತಪ್ಪು. 'ಅನ್ಯಮೀಶಮ್' ಎಂಬುದಾಗಿ ಶ್ರುತಿಯು ಭೇದವನ್ನು ನೇರವಾಗಿಯೇ ಹೇಳುತ್ತಿದೆ. ಇದನ್ನು ಬಿಟ್ಟು ಭೇದಕವ್ಯಪದೇಶನ್ನು ಹೇಳುವುದು ತಪ್ಪಾಗುತ್ತದೆ. ಅಂದರೆ ನೇರವಾದ ಭೇದವನ್ನು ವಿವಕ್ಷಿಸದೇ ಅರ್ಥಾತ್ ತಿಳಿಯುವ ಭೇದವನ್ನು ವಿವಕ್ಷಿಸುವುದು ಅಸಾಧುವಾಗಿದೆ.

**एवं सूत्रान्तरेऽप्यनुपपत्तिरूह्या ।**

ಹಿಂದೆ ಹೇಳಿದ ಕ್ರಮದಲ್ಲಿಯೇ ಬೇರೆ ಸೂತ್ರಗಳಲ್ಲಿರುವ ಅನುಪಪತ್ತಿಯನ್ನು ಚಿಂತನೆ ಮಾಡಿ ತಿಳಿದುಕೊಳ್ಳಬೇಕು. ಅದು ಹೀಗಿದೆ -

೬. 'ಪ್ರಕರಣಾತ್' - 'ತಸ್ಮಿನ್ ಭಗವತೋ ವಿಜ್ಞಾತೇ ಸರ್ವಮಿದಂ ವಿಜ್ಞಾತಂ ಭವತಿ' ಎಂದು ಉಪನಿಷತ್ತಿನ ಪ್ರಾರಂಭದಲ್ಲಿ ಲೋಕಾಧಾರನಾಗಿರುವವನನ್ನು ಬ್ರಹ್ಮನೆಂದು ಹೇಳಲಾಗಿದೆ. ಆದ್ದರಿಂದ ಅವನೇ ಲೋಕಾಧಾರನು.

೭. 'ಸ್ಥಿತ್ಯದನಾಭ್ಯಾಂ ಚ' - 'ಪಿಪ್ಪಲಂಸ್ವಾದುಅತ್ತಿ' ಎಂಬುದಾಗಿ ಕರ್ಮಫಲಭೋಗವನ್ನು ಜೀವನಲ್ಲಿ; 'ಅನಶ್ನನ್ಅನ್ಯಃ' ಎಂಬುದಾಗಿ ಕರ್ಮಫಲ ಅಭೋಗವನ್ನು ಬ್ರಹ್ಮನಲ್ಲಿ ಹೇಳುವ ಮೂಲಕ ವಿರುದ್ಧ ಧರ್ಮಗಳನ್ನು ಶ್ರುತಿಯು ತಿಳಿಸುತ್ತಿದೆ. ಬ್ರಹ್ಮನಲ್ಲಿ ಹೀಗೆ ಜೀವನ ಭೇದವನ್ನು ಹೇಳಿರುವುದರಿಂದ ಬ್ರಹ್ಮನು ಪ್ರಸಕ್ತನಾಗಲೇಬೇಕು. ಹೀಗೆ ಪ್ರಸಕ್ತನಾದ ಬ್ರಹ್ಮನನ್ನೇ ದ್ಯುಭ್ವಾದ್ಯಾಯತನನೆಂದು ಶ್ರುತಿ ಹೇಳುತ್ತಿದೆ. ಈ ಕ್ರಮದ ಅದ್ವೈತಿಗಳ ಈ ಎರಡೂ ಸೂತ್ರಗಳ ವ್ಯಾಖ್ಯಾನವೂ ಸಹ ಅಸಾಧುವಾಗಿದೆ. 'ಪ್ರಕರಣಾತ್' ಎಂಬುದು ಅದ್ವೈತ ಮತದಲ್ಲಿ ಪ್ರಧಾನ ಹೇತುವಾಗಿರುವುದರಿಂದ 'ಚ' ಶಬ್ದವನ್ನು ಹೇಳಬೇಕಿತ್ತು. ಮತ್ತು ಏಳನೆಯ ಸೂತ್ರದಲ್ಲಿ ಭೇದಕಧರ್ಮವನ್ನೇ ಪುನಃ ಹೇಳಿದ್ದರಿಂದ 'ಭೇದವ್ಯಪದೇಶಾತ್' ಎಂಬ ಸೂತ್ರದಿಂದ ಪುನರುಕ್ತಿಯು ಬರುತ್ತದೆ.

**अत्रापि परमतेऽपि ''भेदव्यपदेशात्'' इत्यनेन जीवब्रह्मभेदोक्तेः ''मुक्तोपसृप्यव्यपदेशात्'' इत्यनेन मुक्तावपि भेदोक्तेश्चाभेदप्रतिकूलता व्यक्ता ।**

ಪ್ರತಿಯೊಂದು ಅಧಿಕರಣಗಳಂತೆ ಈ ಅಧಿಕರಣದಲ್ಲಿಯೂ ಅದ್ವೈತಿಗಳು ಭೇದಸ್ಥಾಪನೆಯನ್ನೇ ಮಾಡಿದ್ದಾರೆ. 'ಭೇದವ್ಯಪದೇಶಾತ್' ಎಂಬ ಸೂತ್ರದಿಂದ ಜೀವಬ್ರಹ್ಮಭೇದವನ್ನು ಹೇಳಿರುವುದರಿಂದ 'ಮುಕ್ತೋಪಸೃಪ್ಯವ್ಯಪದೇಶಾತ್' ಎಂಬ ಸೂತ್ರದಿಂದಲೂ ಮುಕ್ತಿಯಲ್ಲಿಯೂ ಜೀವಬ್ರಹ್ಮರಿಗೆ ಭೇದವಿರುತ್ತದೆಂದು ಹೇಳಿರುವುದರಿಂದ ಅವರ ಅಭೇದವಾದಕ್ಕೆ ಈ ಅಧಿಕರಣವು ಪ್ರತಿಕೂಲವೇ ಆಗಿದೆ.

**प्रकाशः —**

अन्येत्विति ।।

'पारवत्त्वेन सेतुत्वाद्भेदे षष्ठ्याः प्रयोगतः ।
द्युभ्वाद्यायतनं युक्तं नामृतं ब्रह्म कर्हिचित् ।।'

इति भामत्युक्तमनुवदति ।। – **अमृतस्यैष सेतुरिति** ।।

ವಿವರಣೆ - ಶಾಂಕರಭಾಷ್ಯದ ಅಧಿಕರಣ ಶರೀರವನ್ನು 'ಅನ್ಯೇತು' ಇತ್ಯಾದಿ ಗ್ರಂಥದಿಂದ ಅನುವಾದ ಮಾಡುತ್ತಿದ್ದಾರೆ. 'ಪಾರವತ್ತ್ವೇನ ಸೇತುತ್ವಾದ್ಭೇದೇ ಷಷ್ಠ್ಯಾಃ ಪ್ರಯೋಗತಃ । ದ್ಯುಭ್ವಾದ್ಯಾಯತನಂ ಯುಕ್ತಂ ನಾಮೃತಂ ಬ್ರಹ್ಮ ಕರ್ಹಿಚಿತ್ ।।' ಮಿತಿಯಿರುವ ಪದಾರ್ಥವೇ ಸೇತುವೆನಿಸುತ್ತದೆ. ಮಿತಿ ಇರುವ ಬ್ರಹ್ಮನು ಅಮೃತಕ್ಕೆ ಸೇತುವಾಗಲು ಸಾಧ್ಯವಿಲ್ಲ. (ಮಿತಿ ಇರದ ಅಮೃತಕ್ಕೆ ಸೇತುವಾಗಲು ಸಾಧ್ಯವಿಲ್ಲ.) ಮತ್ತು 'ಅಮೃತಸ್ಯ' ಎಂಬಲ್ಲಿ ಭೇದಾರ್ಥದಲ್ಲಿ ಷಷ್ಠೀವಿಭಕ್ತಿಯನ್ನು ಪ್ರಯೋಗಿಸಲಾಗಿದೆ. ಅಮೃತಸ್ವರೂಪನಾದ

ಬ್ರಹ್ಮನು ಅಮೃತಕ್ಕಿಂತ ಭಿನ್ನನಾದ ಸೇತುವೆನಿಸಲು ಸಾಧ್ಯವಿಲ್ಲ. ಆದ್ದರಿಂದ ದ್ಯುಭ್ವಾದ್ಯಾಯತನನಾದವನು ಬ್ರಹ್ಮನಾಗುವುದಿಲ್ಲ. ಹೀಗೆ ಭಾಮತಿಯಲ್ಲಿ ಹೇಳಿದ್ದನ್ನು 'ಅಮೃತಸ್ಯೈಷ ಸೇತುಃ' ಎಂಬ ವಾಕ್ಯದಿಂದ ಸಂಗ್ರಹಿಸುತ್ತಿದ್ದಾರೆ.

**प्रकाशः – भाष्योक्तकोटीराह – रुद्रेति ।।** आदिपदेन हिरण्यगर्भः ।

'धारणादमृतत्वस्य साधनाद्वाऽस्य सेतुता ।
पूर्वपक्षेऽपि मुख्यार्थस्सेतुशब्दो हि नेष्यते ।।'

इति भामतीं हृदि कृत्वा सिद्धान्तमनुवदति – **प्रधानादेरपीति ।।**

ಶಾಂಕರ ಭಾಷ್ಯದಲ್ಲಿ ಹೇಳಲ್ಪಟ್ಟ ಪೂರ್ವಪಕ್ಷ ಕೋಟಿಗಳನ್ನು 'ರುದ್ರ' ಇತ್ಯಾದಿ ವಾಕ್ಯದಿಂದ ಹೇಳಿದ್ದಾರೆ. ಆದಿಪದದಿಂದ ಹಿರಣ್ಯಗರ್ಭನೆಂಬ ಪಕ್ಷವನ್ನು ಸ್ವೀಕರಿಸಬೇಕು. ಭಾಮತಿಯಲ್ಲಿ ಸಿದ್ಧಾಂತದ ಸಂಗ್ರಹ ಹೀಗಿದೆ- 'ಧಾರಣಾದಮೃತತ್ವಸ್ಯ ಸಾಧನಾದ್ವಾಽಸ್ಯ ಸೇತುತಾ । ಪೂರ್ವಪಕ್ಷೇಽಪಿ ಮುಖ್ಯಾರ್ಥಸ್ಸೇತುಶಬ್ದೋ ಹಿ ನೇಷ್ಯತೇ ॥' ಮೂಲದಲ್ಲಿ ಭಾವಪ್ರಧಾನ ನಿರ್ದೇಶ ಮಾಡಿದಾಗ 'ಅಮೃತತ್ವ' ಎಂದಾಗುತ್ತದೆ. ಮುಕ್ತರಿಗೆ ಧಾರಕನಾದ್ದರಿಂದ ಅಥವಾ ಮೋಕ್ಷಕ್ಕೆ ಹೇತುವಾದ್ದರಿಂದ ಬ್ರಹ್ಮನು 'ಅಮೃತಸ್ಯ ಸೇತುಃ' ಎಂದೆನಿಸುತ್ತಾನೆ. ಪೂರ್ವಪಕ್ಷದಲ್ಲಿಯೂ ಸಹ 'ಸೇತು' ಶಬ್ದಕ್ಕೆ ಮುಖ್ಯಾರ್ಥವನ್ನು ಒಪ್ಪುವುದಿಲ್ಲ. ಅದರಂತೆ ಸಿದ್ಧಾಂತದಲ್ಲಿಯೂ ಸಹ ಮುಖ್ಯಾರ್ಥವನ್ನು ಹೇಳದಿರುವುದೇನೂ ತಪ್ಪಾಗುವುದಿಲ್ಲ.

ಭಾಮತಿಯ ಈ ಮಾತನ್ನು ಮನಸ್ಸಿನಲ್ಲಿಟ್ಟುಕೊಂಡು ಸಿದ್ಧಾಂತವನ್ನು ಅನುವಾದ ಮಾಡುತ್ತಿದ್ದಾರೆ. 'ಪ್ರಧಾನಾದೇರಪಿ' ಇತ್ಯಾದಿ ವಾಕ್ಯದಿಂದ.

**प्रकाशः – जीवादाविति ।।** अमृतपदोक्तब्रह्म प्रति सेतुत्वस्य जीवादावपि दुर्वचत्वादित्यर्थः । निरवकाशविरोधिलिङ्गस्य जागरूकत्वान्न सिद्धान्तोदय इति भावेनाह – **सिद्धान्त इति ।।**

ಅಮೃತ ಪದದಿಂದ ಬ್ರಹ್ಮನು ಪ್ರತಿಪಾದ್ಯನಾದರೆ ಅವನನ್ನು ಕುರಿತು ಸೇತುತ್ವವನ್ನು ಜೀವನಲ್ಲಿಯೂ ಸಹ ಹೇಳಲು ಸಾಧ್ಯವಿಲ್ಲ. ಅಮೃತಸ್ವರೂಪನೇ ಆಗದ ಜೀವನು ಅಮೃತಧಾರಕನಾಗಲು ಹೇಗೆ ಸಾಧ್ಯ ? ಮತ್ತು ಜಾಯಮಾನತ್ವವೆಂಬ ನಿರವಕಾಶವಾದ, ವಿರೋಧಿಯಾದ ಜೀವನ ಲಿಂಗವು ಜಾಗರೂಕವಾಗಿರಬೇಕಾದರೆ ಸಿದ್ಧಾಂತದ ಉದಯವಾಗಲು ಹೇಗೆ ಸಾಧ್ಯ ? ಈ ಅಭಿಪ್ರಾಯದಿಂದ 'ಸಿದ್ಧಾಂತಃ' ಎಂಬ ವಾಕ್ಯವು ಹೊರಟಿದೆ.

**प्रकाशः** – यदप्यमृतत्वाधारत्वादमृतसेतुत्वं ब्रह्मणि युक्तमिति तत्र किमिदममृतत्वम् । ''अविद्यास्तमयो मोक्षस्सा संसार उदाहृतः''

इत्युक्तेरविद्यानिवृत्तिरिति चेत्सा किं सत्याऽथ "न सन्नासन्नसदसन्नानिर्वाच्यश्च तत्क्षयः" इत्युक्तेः पञ्चमप्रकारा । आद्ये दोषमाह – **सत्यस्येति** ॥

ಅಮೃತಸೇತುತ್ವವನ್ನು ಸಿದ್ಧಾಂತದಲ್ಲಿ ಅಮೃತತ್ವದ ಆಧಾರನಾಗಿದ್ದಾನೆಂಬ ಕಾರಣದಿಂದ ಬ್ರಹ್ಮನಲ್ಲಿ ಯುಕ್ತವಾಗುತ್ತದೆಂದು ಅದ್ವೈತಿಗಳು ಹೇಳಿದರು. ಇಲ್ಲಿರುವ ಅಮೃತತ್ವವೆಂದರೇನು? 'ಅವಿದ್ಯಾಸ್ತಮಯೋ ಮೋಕ್ಷಸ್ಸಾ ಸಂಸಾರ ಉದಾಹೃತಃ' ಎಂದು ಹೇಳಿರುವಂತೆ ಅವಿದ್ಯಾನಿವೃತ್ತಿ ರೂಪ ಎನ್ನುವುದಾದರೆ ಅದು ಸತ್ಯವೋ? ಅಥವಾ 'ನ ಸನ್ನಾಸನ್ನ ಸದಸನ್ನಾನಿರ್ವಾಚ್ಯಶ್ಚ ತತ್‌ಕ್ಷಯಃ' ಎಂಬಂತೆ ಪಂಚಮಪ್ರಕಾರ ರೂಪವೋ? ಎಂದು ವಿಕಲ್ಪ. ಇಲ್ಲಿ ಪ್ರಥಮ ಪಕ್ಷದಲ್ಲಿ 'ಸತ್ಯಸ್ಯ' ಎಂಬ ವಾಕ್ಯದಿಂದ ದೋಷವನ್ನು ಹೇಳುತ್ತಿದ್ದಾರೆ.

**प्रकाशः** – द्वितीयेऽप्यविद्या किं भामतीरीत्या जीवाश्रिताऽथ विवरणरीत्या चिन्मात्राश्रितेति । आद्ये दोषो – **मुक्तिरिति** । द्वितीयेऽपि किं बन्धो जीवाश्रितश्चिन्मात्राश्रितो वा ।

ಎರಡನೆಯ ಪಕ್ಷದಲ್ಲಿಯೂ ಸಹ ಅವಿದ್ಯೆಯು ಭಾಮತೀಮತ ಪ್ರಕಾರ ಜೀವಾಶ್ರಿತವೋ? ಅಥವಾ ವಿವರಣಗ್ರಂಥದ ಪ್ರಕಾರ ಚಿನ್ಮಾತ್ರಾಶ್ರಿತವೋ? ಪ್ರಥಮಪಕ್ಷದಲ್ಲಿ 'ಮುಕ್ತಿಃ' ಎಂಬುದರಿಂದ ದೋಷವನ್ನು ಹೇಳಿದ್ದಾರೆ. ಎರಡನೆಯ ಪಕ್ಷದಲ್ಲಿಯೂ ಬಂಧವು ಜೀವಾಶ್ರಿತವೋ? ಅಥವಾ ಚಿನ್ಮಾತ್ರಾಶ್ರಿತವೋ?

**प्रकाशः** – आद्ये दोषः **चिन्मात्राश्रितेति** । अन्यथा बन्धमोक्षयोस्सामानाधिकरण्यं न स्यादिति भावः । द्वितीये दोषो – **बन्धस्यापीति** ॥

ಪ್ರಥಮ ಪಕ್ಷದಲ್ಲಿ 'ಚಿನ್ಮಾತ್ರಾಶ್ರಿತ' ಎಂಬ ವಾಕ್ಯದಿಂದ ದೋಷ ಹೇಳಿದ್ದಾರೆ. ಬಂಧವನ್ನು ಜೀವಾಶ್ರಿತವೆಂದು ಹೇಳಿದರೆ ಬಂಧ ಹಾಗೂ ಮೋಕ್ಷಗಳಿಗೆ ಸಾಮಾನಾಧಿಕರಣ್ಯವೇ ಕೂಡದಿರಬೇಕಾದೀತು. ಚಿನ್ಮಾತ್ರಾಶ್ರಿತ ಎಂಬ ಎರಡನೇ ಪಕ್ಷಕ್ಕೆ 'ಬಂಧಸ್ಯಾಪಿ' ಎಂಬುದರಿಂದ ದೋಷ ಹೇಳಿದ್ದಾರೆ.

**प्रकाशः** – **श्यामत्वेति** ॥ प्रतिमुखादाविति शेषः । यच्च यद्वेत्यादिनोक्तं तन्निराह – **यच्चेति** ॥

ಗ್ರಂಥದಲ್ಲಿ 'ಶ್ಯಾಮತ್ವಾದಿವತ್' ಎಂದು ಹೇಳಿದ್ದಾರೆ. ಇಲ್ಲಿ 'ಪ್ರತಿಮುಖಾದೌ' ಎಂಬುದನ್ನು ಶೇಷಪೂರ್ಣ ಮಾಡಿಕೊಳ್ಳಬೇಕು. ಅಂದರೆ ಶ್ಯಾಮತ್ವಾದಿಗಳು ಪ್ರತಿಬಿಂಬದಲ್ಲಷ್ಟೇ ಕಾಣಿಸುತ್ತದೆ ಎಂದರ್ಥ. ಇನ್ನು ಅದ್ವೈತಿಗಳು 'ಯದ್ವಾ' ಇತ್ಯಾದಿ ವಾಕ್ಯಗಳಿಂದ ಎರಡನೆಯ ಬಗೆಯ ಸಿದ್ಧಾಂತವನ್ನು ಸಮರ್ಥಿಸಿದ್ದರು- ಅದನ್ನು 'ಯಚ್ಚ' ಎಂಬ ವಾಕ್ಯದಿಂದ ನಿರಾಕರಿಸುತ್ತಿದ್ದಾರೆ.

**प्रकाशः** – **श्रुत्यन्तर इति** ॥ वाजसनेये "य एषोन्तर्हृदय आकाशस्तस्मिन् शेते । सर्वस्य वशी" इत्युक्त्वा "एष सर्वेश्वर एष भूताधिपतिरेष भूतपाल एष

सेतुर्विधरण एषां लोकानामसम्भेदाय'' इति वाक्ये 'एषः' इत्येतच्छब्दस्य प्रकृतब्रह्मपरत्वं स्पष्टमेवेति भावेन प्रसिद्धेत्युक्तम् ।

'ಶ್ರುತ್ಯಂತರೇ' ಎಂದರೆ ಬೃಹದಾರಣ್ಯಕದಲ್ಲಿ ಹೇಳಲ್ಪಟ್ಟ 'ಯ ಏಷೋಽಂತರ್ಹೃದಯೇ ಆಕಾಶಸ್ತಸ್ಮಿನ್ ಶೇತೇ। ಸರ್ವಸ್ಯ ವಶೀ' ಎಂಬ ವಾಕ್ಯದ ಅನಂತರ 'ಏಷ ಸರ್ವೇಶ್ವರಃ ಏಷ ಭೂತಾಧಿಪತಿರೇಷ ಭೂತಪಾಲ ಏಷ ಸೇತುರ್ವಿಧರಣ ಏಷಾಂ ಲೋಕಾನಾಮಸಂಭೇದಾಯ' ಎಂಬ ವಾಕ್ಯದಲ್ಲಿ 'ಏಷಃ' ಎಂಬ 'ಏತತ್' ಶಬ್ದದಿಂದ ಬ್ರಹ್ಮನೇ ಪ್ರಕೃತನಾಗಿದ್ದಾನೆಂದು ಸ್ಪಷ್ಟವಾಗುತ್ತದೆ. ಈ ಅಭಿಪ್ರಾಯದಿಂದ ಗ್ರಂಥದಲ್ಲಿ 'ಪ್ರಸಿದ್ಧ' ಎಂದು ಹೇಳಿದ್ದಾರೆ.

**प्रकाशः** – तत्र यद्यपि विधरण इत्येव पाठस्तथापि दहरनये ''धृतेश्च महिम्न'' इति सूत्रे भाष्योक्तश्रुत्यन्तरोक्तिरियमिति ध्येयम् ।

ಪ್ರಶ್ನೆ - ಬೃಹದಾರಣ್ಯಕದಲ್ಲಿ 'ವಿಧರಣಃ' ಎಂದೇ ಪಾಠವಿದೆ. ಆದರೆ ಗ್ರಂಥಕಾರರು 'ವಿಧೃತಿಃ' ಎಂದೇಕೆ ಹೇಳಿದ್ದಾರೆ ?

ಉತ್ತರ - ದಹಾರಾಧಿಕರಣದಲ್ಲಿ 'ಧೃತೇಶ್ಚ ಮಹಿಮ್ನಃ' ಎಂಬ ಸೂತ್ರದ ಭಾಷ್ಯದಲ್ಲಿ 'ಏಷಸ್ಸೇತುರ್ವಿಧೃತಿಃ' ಎಂಬ ಮತ್ತೊಂದು ಶ್ರುತಿಯನ್ನು ಹೇಳಿದ್ದಾರೆ. ಆದ್ದರಿಂದ 'ಏಷಸ್ಸೇತುರ್ವಿಧೃತಿಃ' ಎಂಬ ವಾಕ್ಯವೇ ಬೇರೆ ಶಾಖೆಯಲ್ಲಿದೆ. ಅದನ್ನನುಸರಿಸಿ ಬೇರೆ ಶ್ರುತಿಯನ್ನು ಇಲ್ಲಿ ಉದಾಹರಿಸಲಾಗಿದೆ. ಆದ್ದರಿಂದ 'ಯ ಸರ್ವೇಶ್ವರಃ' ಎಂಬ ವಾಕ್ಯವೇ ಬೇರೆ ಶಾಖೆಯಲ್ಲಿದೆ ಆದ್ದರಿಂದ ಪಾಠದ ವಿರೋಧವೂ ಬರುವುದಿಲ್ಲ.

**प्रकाशः** – अस्यामेव आथर्वण एव । **तच्छब्देनेति** ।। 'तमेवैकम्' इत्यत्र तमित्यनेनेत्यर्थः ।

'ಅಸ್ಯಾಮೇವ' ಎಂದರೆ ಆಥರ್ವಣದಲ್ಲಿಯೇ ಎಂದರ್ಥ. 'ತಚ್ಛಬ್ದೇನ' ಎಂದರೆ 'ತಮೇವೈಕಮ್' ಎಂಬ ಶ್ರುತಿಯಲ್ಲಿರುವ 'ತಮ್' ಎಂಬ ಪದದಿಂದ ಎಂದರ್ಥ.

**प्रकाशः** – ननु तमित्यस्य जानथेति ज्ञानवाचिना व्यवहितत्वाज्ज्ञानमेव परामृश्यत इत्यत आह – **आत्मशब्देन चेति** ।। सूत्रार्थानपि निराह – **किञ्चेति** ।।

'ತಮೇವೈಕಮ್' ಎಂಬಲ್ಲಿ 'ತಮ್' ಎಂಬ ಪದದಿಂದ 'ಜಾನಥ' ಎಂಬ ಜ್ಞಾನವಾಚಿಯಾದ ಪದವು ವ್ಯವಹಿತವಾದ ಕಾರಣ ಜ್ಞಾನವನ್ನೇ ಪರಾಮರ್ಶಿಸಬೇಕಲ್ಲವೇ? ಎಂಬ ಪ್ರಶ್ನೆಗೆ 'ಆತ್ಮಶಬ್ದೇನ' ಎಂಬುದರಿಂದ ಉತ್ತರಿಸಿದ್ದಾರೆ. ಅದ್ವೈತಿಗಳ ಅಧಿಕರಣಶರೀರವನ್ನು ನಿರಾಕರಿಸಿ ಅವರ ಸೂತ್ರವ್ಯಾಖ್ಯಾನವನ್ನೂ ಸಹ ನಿರಾಕರಿಸುತ್ತಿದ್ದಾರೆ 'ಕಿಂಚ' ಇತ್ಯಾದಿ ವಾಕ್ಯದಿಂದ.

**प्रकाशः** – अस्य पादस्य निर्विशेषपरत्वाभ्युपगमेन तत्र द्युभ्वाद्यायतनत्वस्यारोपाधिष्ठानत्वादन्यस्याभावादिति भावः ।

ಪರಿಪೂರ್ಣಚಂದ್ರಿಕಾ

ಅದ್ವೈತಮತ ಪ್ರಕಾರ ಮೂರನೆಯ ಪಾದವು ನಿರ್ವಿಷಯಬ್ರಹ್ಮಪ್ರತಿಪಾದಕವಾಗಿದೆ. ಆದ್ದರಿಂದ ದ್ಯುಭ್ವಾದ್ಯಾಯತನತ್ವವನ್ನು ಬ್ರಹ್ಮನ ಧರ್ಮವೆಂದು ಅವರಿಂದ ಸಮರ್ಥಿಸಲಾಗದು. ಹೊರತಾಗಿ ದ್ಯುಭ್ವಾದ್ಯಾಯತನತ್ವವೆಂಬ ಧರ್ಮದ ಆರೋಪಕ್ಕೆ ಬ್ರಹ್ಮನು ಅಧಿಷ್ಠಾನನಾಗಿದ್ದಾನೆಂದು ಹೇಳಬೇಕು. ಹೀಗೇನಾದರೂ ಅದ್ವೈತಿಗಳು ಹೇಳಿದರೆ ಶ್ರುತಿಯಲ್ಲಿರುವ ಓತತ್ವ ಹಾಗೂ ಸೂತ್ರದಲ್ಲಿರುವ ಆಯತನ ಎಂಬ ಶಬ್ದವು ಅಸಿದ್ಧವಾಗುತ್ತದೆ.

**प्रकाशः** – प्रतिज्ञाभागं निरस्य हेत्वंशं निराह – **यच्चेति** । एतेनाऽत्मश्रुति-तात्पर्यविषयत्वमात्रं हेतुरिति प्रत्युक्तम् । शब्दवृत्तिविषयत्वपूर्वकत्वात्तस्य । प्रधानादावपि सम्भवाच्च ।

'ದ್ಯುಭ್ವಾದ್ಯಾಯತನಮ್' ಎಂಬ ಪ್ರತಿಜ್ಞಾಭಾಗಕ್ಕೆ ಅದ್ವೈತಿಗಳ ವ್ಯಾಖ್ಯಾನವನ್ನು ನಿರಾಕರಿಸಿ 'ಸ್ವಶಬ್ದಾತ್' ಎಂಬ ಹೇತುವಿನ ಭಾಗಕ್ಕೆ ಮಾಡುವ ಅವರ ವ್ಯಾಖ್ಯಾನವನ್ನು 'ಯಚ್ಚ' ಇತ್ಯಾದಿ ವಾಕ್ಯದಿಂದ ನಿರಾಕರಿಸುತ್ತಿದ್ದಾರೆ. ಹೀಗೆ ಹೇಳಿದ್ದರಿಂದ ಮತ್ತೊಂದು ಅವರ ಕಲ್ಪನೆಯನ್ನು ನಿರಾಕರಿಸಿದಂತಾಯಿತು. ಆತ್ಮಶ್ರುತಿಯು ಶಕ್ತಿವೃತ್ತಿಯಿಂದಾಗಲೀ, ಲಕ್ಷಣಾವೃತ್ತಿಯಿಂದಾಗಲೀ ಪ್ರತಿಪಾದಿಸುವುದಿಲ್ಲ. ಕೇವಲ ಆತ್ಮಶ್ರುತಿಯ ತಾತ್ಪರ್ಯಕ್ಕೆ ಬ್ರಹ್ಮನು ವಿಷಯನಾಗಿದ್ದಾನೆ. ಆದ್ದರಿಂದ ಆತ್ಮಶ್ರುತಿಯ ತಾತ್ಪರ್ಯವಿಷಯ ದ್ಯುಭ್ವಾದ್ಯಾಯನತನಾಗಿದ್ದಾನೆನ್ನಲು ಹೇತುವಾಗುತ್ತದೆಂದು ಅವರ ಕಲ್ಪನೆ. ಇದು ತಪ್ಪು. ತಾತ್ಪರ್ಯ ವಿಷಯತ್ವವನ್ನು ಹೇಳಬೇಕೆಂದರೆ ಶಬ್ದವೃತ್ತಿವಿಷಯತ್ವ ಮೊದಲು ಇರಲೇಬೇಕು. ಆದ್ದರಿಂದ ನೀವು ಲಕ್ಷಣಾವೃತ್ತಿಯನ್ನೇ ಬ್ರಹ್ಮನಲ್ಲಿ ಹೇಳಬೇಕಾಗುತ್ತದೆ. ಇಂತಹ ಲಕ್ಷಣಾ ವೃತ್ತಿಯಿಂದ ಪ್ರಧಾನಾದಿಗಳೂ ಸಹ ಆತ್ಮಶಬ್ದವಾಚ್ಯವಾಗಬಹುದು.

**प्रकाशः** – ननु सविशेषस्याऽत्मपदवाच्यत्वं द्युभ्वाद्यायतनत्वं चास्तीत्यत आह – **सविशेषस्येति** ।। **रागद्वेषादिमुक्तैर्ज्ञेयत्वेति** ।।

'भिद्यते हृदयग्रन्थिश्छिद्यन्ते सर्वसंशयाः ।
क्षीयन्ते चास्य कर्माणि तस्मिन् दृष्टे परावरे ।।'

इत्यादिनेत्यर्थः ।

ಸವಿಶೇಷಬ್ರಹ್ಮನು ಆತ್ಮಪದದಿಂದ ವಾಚ್ಯನಾಗುತ್ತಾನೆ. ಆದ್ದರಿಂದಲೇ ದ್ಯುಭ್ವಾದ್ಯಾಯತನನೂ ಸಹ ಅವನೇ ಆಗುತ್ತಾನಲ್ಲವೇ ? ಎಂಬ ಪ್ರಶ್ನೆಗೆ 'ಸವಿಶೇಷಸ್ಯ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. 'ರಾಗದ್ವೇಷಾದಿಮುಕ್ತೈಃ ಜ್ಞೇಯತ್ವವ್ಯಪದೇಶಾತ್' ಎಂಬುದಕ್ಕೆ ಹೀಗರ್ಥ -

'ಭಿದ್ಯತೇ ಹೃದಯಗ್ರಂಥಿಶ್ಛಿದ್ಯಂತೇ ಸರ್ವಸಂಶಯಾಃ।
ಕ್ಷೀಯಂತೇ ಚಾಸ್ಯ ಕರ್ಮಾಣಿ ತಸ್ಮಿನ್ ದೃಷ್ಟೇ ಪರಾವರೇ ॥'

ದ್ಯುಭ್ವಾದ್ಯಧಿಕರಣ (೧-೩-೧)

ಅಪರೋಕ್ಷಜ್ಞಾನವಾದ ಮೇಲೆ ರಾಗದ್ವೇಷಗಳೆಲ್ಲವೂ ದೂರವಾಗುತ್ತದೆ. ಅಂತಹ ರಾಗದ್ವೇಷಾದಿಗಳಿಂದ ಮುಕ್ತರಾದ ಜ್ಞಾನಿಗಳಿಂದ ಬ್ರಹ್ಮನು ತಿಳಿಯುತ್ತಾನೆಂದು ಹೇಳಲಾಗಿದೆ.

**प्रकाशः** – ''हृदयग्रन्थिश्चाविद्यारागद्वेषभयमोहाः । दर्शनं दृष्टं तस्मिन् । तदर्थमिति यावत् । यथा चर्मणि द्वीपिनं हन्ति चर्मार्थमिति गम्यते'' इति भामत्यां व्याख्यानात् । अस्यार्थस्य तत्र वाक्ये स्पष्टमप्रतीतेस्तदनुपादानेन रागद्वेषादिमुक्तैरि-त्येवोक्तम् ।

'ಭಿದ್ಯತೇ' ಇತ್ಯಾದಿ ಶ್ಲೋಕಕ್ಕೆ ಭಾಮತಿಯ ವ್ಯಾಖ್ಯಾನ ಹೀಗಿದೆ - ''ಹೃದಯಗ್ರಂಥಿಶ್ಚಾವಿದ್ಯಾ-ರಾಗದ್ವೇಷಭಯಮೋಹಾಃ । ದರ್ಶನಂ ದೃಷ್ಟಂ ತಸ್ಮಿನ್ । ತದರ್ಥಮಿತಿ ಯಾವತ್ । ಯಥಾ ಚರ್ಮಣಿ ದ್ವೀಪಿನಂ ಹಂತಿ ಚರ್ಮಾರ್ಥಮಿತಿ ಗಮ್ಯತೇ'' ಎಂದರೆ - ಹೃದಯಗ್ರಂಥಿಃ = ಅವಿದ್ಯಾ, ರಾಗ, ದ್ವೇಷ, ಭಯ, ಮೋಹಗಳೆಲ್ಲವೂ ದೂರವಾಗುತ್ತವೆ. ಯಾವಾಗ ಅವನ ದರ್ಶನಕ್ಕೋಸ್ಕರ ಪ್ರಯತ್ನ ಪಡುತ್ತಾನೋ ಅವಾಗ. 'ದೃಷ್ಟೇ' ಎಂದರೆ ದರ್ಶನಕ್ಕೋಸ್ಕರ ಎಂದರ್ಥ. 'ಚರ್ಮಣಿ ದ್ವೀಪಿನಂ ಹಂತಿ' ಎಂಬಲ್ಲಿ ಚರ್ಮಕ್ಕೋಸ್ಕರ ಎಂಬರ್ಥವು ಹೇಗೆ ಬರುತ್ತದೋ, ಅದರಂತೆ 'ದೃಷ್ಟೇ' ಎಂದರೆ ದರ್ಶನಕ್ಕೋಸ್ಕರ ಎಂದರ್ಥವೂ ತಿಳಿಯುತ್ತದೆ. ಹೀಗೆ ಭಾಮತಿಯಲ್ಲಿ ವ್ಯಾಖ್ಯಾನಿಸಲಾಗಿದೆ. ಈ ಅರ್ಥವು ಸ್ಪಷ್ಟವಾಗಿ ತಿಳಿಯದ ಕಾರಣ ಗ್ರಂಥಕಾರರು 'ಭಿದ್ಯತೇ ಹೃದಯಗ್ರಂಥಿಃ' ಎಂಬ ವಾಕ್ಯವನ್ನು ಸ್ವೀಕರಿಸದೇ, 'ರಾಗದ್ವೇಷಾದಿ ಮುಕ್ತೈಃ' ಎಂದಷ್ಟೇ ಹೇಳಿದ್ದಾರೆ. ಇಲ್ಲದಿದ್ದರೆ ಮುಂದೆ 'ತದ್ವಿದ್ವಾನ್' ಇತ್ಯಾದಿಯಾಗಿ ವಾಕ್ಯವನ್ನು ಉಲ್ಲೇಖಿಸಿ ಮುಕ್ತಪ್ರಾಪ್ಯತ್ವವನ್ನು ಸಮರ್ಥಿಸುವಂತೆ ಇಲ್ಲೂ ಸಹ 'ಭಿದ್ಯತೇ' ಇತ್ಯಾದಿ ಶ್ಲೋಕವನ್ನು ಉಲ್ಲೇಖಿಸಿ, ಮುಕ್ತರಿಂದ ಜ್ಞೇಯತ್ವ ವ್ಯಪದೇಶತ್ವವನ್ನು ಸಮರ್ಥಿಸಬೇಕಿತ್ತು.

**प्रकाशः** – **वाग्विमोकेति** ।। सूत्रे मुक्तेतिशब्दस्य भावार्थनिष्ठान्तत्वेन मोचनार्थतया वाग्विमोकपूर्वमित्यर्थलाभादिति भावः । आद्यद्वितीययोर्दोषद्वयमाह – **निरुपपदस्येत्यादि** ।। तृतीये दोषमाह – **त्वन्मत इति** ।

ಸೂತ್ರದಲ್ಲಿರುವ 'ಮುಕ್ತ' ಎಂಬ ಶಬ್ದವು ಭಾವಾರ್ಥಕದ ನಿಷ್ಠಾಪ್ರತ್ಯಯಾಂತವಾಗಿದೆ. ಆದ್ದರಿಂದ ಮುಕ್ತ ಶಬ್ದಕ್ಕೆ 'ಮೋಚನ' ಎಂದರ್ಥ. 'ಮೋಚನ' ಎಂದರೆ 'ಬಿಡುವಿಕೆ' ಎಂದರ್ಥ. ಯಾವುದನ್ನು ಬಿಡಬೇಕೆಂದರೆ ಮಾತುಗಳನ್ನು ಬಿಡಬೇಕು. ಹೀಗೆ ವಾಗ್ವಿಮೋಕಪೂರ್ವಕವಾದ ಅರ್ಥವು 'ತಮೇವೈಕಮ್'' ಎಂಬ ಶ್ರುತಿಯಿಂದ ತಿಳಿಯುತ್ತಿರುವುದರಿಂದ ಬ್ರಹ್ಮನೇ ದ್ಯುಭ್ವಾದ್ಯಾಯತನನಾಗಿದ್ದಾನೆಂದು ಅದ್ವೈತಿಗಳ ಎರಡನೆಯ ವ್ಯಾಖ್ಯಾನ. ಈ ಮೂರು ಬಗೆಯ ಅರ್ಥಗಳಲ್ಲಿ ಮೊದಲೆರಡು ಪಕ್ಷಗಳಿಗೆ 'ನಿರುಪಪದಸ್ಯ' ಎಂಬ ವಾಕ್ಯದಿಂದ ದೋಷವನ್ನು ಹೇಳಿದ್ದಾರೆ. ಮೂರನೆಯ ಪಕ್ಷಕ್ಕೆ 'ತ್ವನ್ಮತೇ' ಎಂಬ ವಾಕ್ಯದಿಂದ ದೋಷವನ್ನು ಹೇಳಿದ್ದಾರೆ.

ಪರಿಪೂರ್ಣಚಂದ್ರಿಕಾ

**प्रकाशः – मुक्तेति ।।** तस्य मुख्यमुक्त एव स्वारस्यादिति भावः ।

यदपि नानुमानमित्यस्य अनुमीयत इत्यनुमानं प्रधानं न द्युभ्वाद्यायतनम् । तच्छब्दाभावादित्यर्थ इति । तत्र हेत्वर्थं निराह – **तृतीयेति ।।** उक्तं आद्यसूत्रार्थदूषणप्रस्तावे ।

'ಮುಕ್ತ' ಎಂಬ ಶಬ್ದವು ಮುಖ್ಯವಾಗಿ ಮುಕ್ತನಾದವನಲ್ಲೇ ಸ್ವರಸವಾಗುತ್ತದೆ. ಸಗುಣಮೋಕ್ಷವು ಅಮುಖ್ಯವಾದ್ದರಿಂದ ಆ ಅರ್ಥದಲ್ಲಿ ಅಸ್ವರಸವಾಗುತ್ತದೆಂದು ತಿಳಿಯಬೇಕು. ಇನ್ನು 'ನಾನುಮಾನಮ್' ಎಂಬ ಸೂತ್ರಭಾಗಕ್ಕೆ 'ಅನುಮೀಯತೇ ಇತಿ ಅನುಮಾನಮ್' = ಪ್ರಕೃತಿಯು ದ್ಯುಭ್ವಾದ್ಯಾಯತನನಾಗುವುದಿಲ್ಲ. ಏಕೆಂದರೆ ಪ್ರಕೃತಿಪ್ರತಿಪಾದಕವಾದ ಶಬ್ದಗಳಿರುವುದಿಲ್ಲವೆಂದು ವ್ಯಾಖ್ಯಾನಿಸುತ್ತಾರೆ. ಈ ವಿಷಯದಲ್ಲಿ ಹೇತುಭಾಗವನ್ನು 'ತೃತೀಯೇ' ಎಂಬ ವಾಕ್ಯದಿಂದ ನಿರಾಕರಿಸಿದ್ದಾರೆ. ಪ್ರಥಮಸೂತ್ರಾರ್ಥದ ನಿರಾಕರಣೆಯ ಸಂದರ್ಭದಲ್ಲಿಯೇ ಇದನ್ನೂ ಸಹ ನಿರಾಕರಿಸದ್ದಾಗಿದೆ.

**प्रकाशः** – यदपि ''प्राणभृच्च'' इत्यत्रातच्छब्दादिति हेतुमनुकृष्य ''यस्सर्वज्ञस्सर्ववित्'' इति तद्विपरीतशब्दान्न जीवो द्युभ्वाद्यायतनमिति । तत्राह – **चतुर्थ इति ।।**

'ಪ್ರಾಣಭೃಚ್ಚ' ಎಂಬ ಸೂತ್ರದಲ್ಲಿ 'ಅತಚ್ಛಬ್ದಾತ್' ಎಂಬ ಹೇತುವನ್ನು ಅನುಕರ್ಷ ಮಾಡಿ, 'ಯಸ್ಸರ್ವಜ್ಞಃ ಸ್ಸರ್ವವಿತ್' ಎಂಬ ಶ್ರುತಿಯಲ್ಲಿ ಕೇಳಿಸುತ್ತಿರುವ ಸರ್ವಜ್ಞ ಶಬ್ದವು ಜೀವನಲ್ಲಿ ಉಪಪನ್ನವಾಗದ ಕಾರಣ ಜೀವನು ದ್ಯುಭ್ವಾದ್ಯಾಯತನನಾಗುವುದಿಲ್ಲವೆಂದು ವ್ಯಾಖ್ಯಾನಿಸುತ್ತಾರೆ. ಇದನ್ನು 'ಚತುರ್ಥೇ' ಎಂಬ ವಾಕ್ಯದಿಂದ ನಿರಾಕರಿಸಿದ್ದಾರೆ.

**प्रकाशः – साक्षादिति ।।** भेदोक्तिद्वारमन्तरेणैवेत्यर्थः । **एवमिति ।।** ''प्रकरणात्'' इत्यस्य त्वन्मते प्रधानहेतुत्वात्तत्र चशब्दश्रवणं स्यात् । ''स्थित्यदनाभ्याम्'' इत्यत्रापि भेदकस्यैवोक्त्या भेदसूत्रेण पौनरुक्त्यमित्यादि-रूपेणोह्येत्यर्थः । **इत्यनेनेति ।।** प्राप्तृप्राप्यभावस्य भेदव्याप्तत्वादिति भावः ।

'ಸಾಕ್ಷಾತ್' ಎಂಬ ಪದಕ್ಕೆ ಭೇದೋಕ್ತಿದ್ವಾರವನ್ನು ಬಿಟ್ಟು ಎಂದರ್ಥ. 'ಏವಂ' ಎಂದರೆ 'ಪ್ರಕರಣಾತ್' ಎಂಬ ಸೂತ್ರವು ಅದ್ವೈತ ಮತದಲ್ಲಿ ಪ್ರಧಾನವಾದ ಹೇತುವನ್ನು ಹೇಳುತ್ತಿದೆ. ಆದ್ದರಿಂದ 'ಚ'ಶಬ್ದವನ್ನು ಸೂತ್ರಕಾರರು ಹೇಳಬೇಕಿತ್ತು. 'ಸ್ಥಿತ್ಯದನಾಭ್ಯಾಂ' ಎಂಬಲ್ಲಿಯೂ ಭೇದಕಧರ್ಮವನ್ನೇ ಹೇಳಿರುವುದರಿಂದ 'ಭೇದವ್ಯಪದೇಶಾತ್' ಎಂಬ ಸೂತ್ರದಿಂದ ಪುನರುಕ್ತಿ ದೋಷವು ಬರುತ್ತದೆ. ಇತ್ಯಾದಿ ದೋಷಗಳನ್ನು ಸ್ವತಃ ಊಹಿಸಿಕೊಳ್ಳಬೇಕು ಎಂದರ್ಥ. 'ಇತ್ಯನೇನ' ಎಂದರೆ ಪ್ರಾಪ್ತೃಪ್ರಾಪ್ಯಭಾವು ಭೇದವ್ಯಾಪ್ತವಾಗಿದೆ. ಆದ್ದರಿಂದ ಭೇದವನ್ನೇ ಅದ್ವೈತಿಗಳು ಹೇಳಿದಂತಾಯಿತು ಎಂದರ್ಥ.

ದ್ಯುಭ್ವಾದ್ಯಧಿಕರಣ (೧-೩-೧)

**गुरुराजीयम् – शब्दत इति** ।। वेधस्याप्राधान्येनार्थतः प्राधान्याभावेऽपि शब्दतः प्राधान्यमस्तीत्यर्थः । **सिद्धान्त इति** ।। प्रकृत्यधिकरणन्यायेन सावकाशं चेदविद्यायाः प्रतिबिम्बपक्षपातादिति वक्ष्यमाणरीत्या ज्ञेयम् । ननु निर्विशेषस्यात्मशब्दवाच्यत्वाभावेऽपि सविशेषस्य तच्छब्दवाच्यत्वेन तस्यैवात्र प्रतिपाद्यत्वमस्त्वित्यत आह – **सविशेषस्येति** ।। तथाच सविशेषप्रतिपादने पादासङ्गतिरिति भावः ।

## ಸಾರ

ಅದ್ವೈತಿಗಳು ನಾವು ಹೇಳುವ ವಾಕ್ಯವನ್ನೇ ಈ ಅಧಿಕರಣಕ್ಕೆ ವಿಷಯವೆನ್ನುತ್ತಾರೆ. ಆದರೆ ಪೂರ್ವಪಕ್ಷ ಹಾಗೂ ಸಿದ್ಧಾಂತ ಲಿಂಗಗಳಲ್ಲಿ ವ್ಯತ್ಯಾಸವಿದೆ. 'ಅಮೃತಸ್ಯೈಷ ಸೇತುಃ' ಎಂಬ ಶ್ರುತಿ ಅಮೃತಕ್ಕೆ ಸೇತುವಾಗಿರುವ ವ್ಯಕ್ತಿಯೇ ದ್ಯುಭ್ವಾದ್ಯಾಯತನನೆಂದು ಹೇಳುತ್ತಿದೆ. ಆದ್ದರಿಂದ ಅಮೃತ ಸ್ವರೂಪನಾದ ಬ್ರಹ್ಮನು ಅಮೃತಕ್ಕೆ ಸೇತುವಾಗಲು ಸಾಧ್ಯವಿಲ್ಲವೆಂದು ಪೂರ್ವಪಕ್ಷ ಮಾಡಿದ್ದಾರೆ. ಅಮೃತಸೇತುತ್ವವನ್ನು ಗೌಣವನ್ನಾಗಿ ವಿವಕ್ಷಿಸಿ ಮುಕ್ತರಿಗೆ ಆಶ್ರಯನಾದ್ದರಿಂದ ಬ್ರಹ್ಮನೇ ಅಮೃತಸೇತುವಾಗಿದ್ದಾನೆ. ಆದ್ದರಿಂದ ದ್ಯುಭ್ವಾದ್ಯಾಯತನನೂ ಸಹ ಅವನೇ ಆಗುತ್ತಾನೆಂದು ಸಿದ್ಧಾಂತ ಮಾಡಿದ್ದಾರೆ. ಅಥವಾ ಯಾರನ್ನು ತಿಳಿಯುವುದರಿಂದ ಮೋಕ್ಷವು ಉಂಟಾಗುತ್ತದೋ, ಅವನೇ ದ್ಯುಭ್ವಾದ್ಯಾಯತನನೆಂದು ಶ್ರುತಿಗೆ ಅರ್ಥೈಸಬೇಕೆಂದು ಮತ್ತೊಂದು ಬಗೆಯಲ್ಲಿಯೂ ವ್ಯಾಖ್ಯಾನಿಸುತ್ತಾರೆ.

ಇವರ ಈ ಅಧಿಕರಣ ಶರೀರವು ಅಯುಕ್ತವಾಗಿದೆ. ಶ್ರುತಿಯಲ್ಲಿ ಜಾಯಮಾನತ್ವಲಿಂಗವು ಕೇಳಿಸುತ್ತಿರುವುದರಿಂದ ಪ್ರಬಲವಾದ ಪೂರ್ವಪಕ್ಷಲಿಂಗವನ್ನು ಬಿಟ್ಟು ಅಪ್ರಧಾನವಾದ ಅಮೃತಸೇತುತ್ವವಿಲ್ಲವೆಂದು ಪೂರ್ವಪಕ್ಷ ಮಾಡುವುದು ಅಸಂಗತ. ಮತ್ತು ಅಮೃತಸೇತುತ್ವವನ್ನು ಬ್ರಹ್ಮನಲ್ಲಿ ಸಮರ್ಥಿಸಲು ಅವರಿಗೆ ಸಾಧ್ಯವೂ ಇಲ್ಲ. ಅದ್ವೈತಮತ ಪ್ರಕಾರ ಮೋಕ್ಷವು ಬ್ರಹ್ಮಸ್ವರೂಪವೇ ಆಗಿದೆ. ಹೀಗಿರುವಾಗ ಬ್ರಹ್ಮ ಮೋಕ್ಷಕ್ಕೆ ಆಶ್ರಯನಾಗಲು ಹೇಗೆ ಸಾಧ್ಯ ? ಆದ್ದರಿಂದ ಗೌಣವಾದ ಅಮೃತಸೇತುತ್ವವನ್ನು ಅವರಿಂದ ಸಮರ್ಥಿಸಲಾಗದು. ಮತ್ತು ದ್ಯುಭ್ವಾದ್ಯಾಯತನತ್ವವನ್ನು ಬ್ರಹ್ಮನಲ್ಲಿ ಸಮರ್ಥಿಸಲು ಸಾಧ್ಯವಿಲ್ಲ. ಏಕೆಂದರೆ ಮೂರನೆಯ ಪಾದವು ಅದ್ವೈತಮತ ಪ್ರಕಾರ ನಿರ್ವಿಶೇಷ ಬ್ರಹ್ಮಪ್ರತಿಪಾದಕವಾಗಿದೆ. ಆದ್ದರಿಂದ ನಿರ್ವಿಶೇಷ ಬ್ರಹ್ಮನಲ್ಲಿ ದ್ಯುಭ್ವಾದ್ಯಾಯತನತ್ವವೆಂಬ ಧರ್ಮವನ್ನು ಸಮರ್ಥಿಸುವುದು ಹೇಗೆ ಸಮಂಜಸವಾಗುತ್ತದೆ?

ಹಾಗೂ 'ಸ್ವಶಬ್ದಾತ್' ಎಂಬುದಕ್ಕೆ ಬ್ರಹ್ಮನಲ್ಲಿ ಆತ್ಮಶಬ್ದವಿರುವುದರಿಂದ ಎಂದು ವ್ಯಾಖ್ಯಾನಿಸುತ್ತಾರೆ. ನಿರ್ವಿಶೇಷ ಬ್ರಹ್ಮನಲ್ಲಿ ಆತ್ಮವಾಚ್ಯತ್ವವೂ ಸಹ ಇರುವುದಿಲ್ಲ. ಈ ಎಲ್ಲಾ ಕಾರಣಗಳಿಂದ ಅದ್ವೈತಿಗಳ ವ್ಯಾಖ್ಯಾನವು ಯಾರಿಗೂ ಸಹ ಮನದಟ್ಟಾಗುವುದಿಲ್ಲ. ಪ್ರತಿಯೊಂದು ಅಧಿಕರಣಗಳಂತೆ ಈ ಅಧಿಕರಣದಲ್ಲಿಯೂ 'ಭೇದವ್ಯಪದೇಶಾತ್' ಎಂಬ ಸೂತ್ರದಿಂದ, 'ಮುಕ್ತೋಪಸೃಪ್ಯವ್ಯಪದೇಶಾತ್' ಎಂಬ ಸೂತ್ರದಿಂದ ಅದ್ವೈತಿಗಳು ದ್ವೈತವನ್ನೇ ಸ್ಥಾಪನೆ ಮಾಡಿದ್ದಾರೆ. ಅದ್ವೈತದ ಸಾಧನೆಗೆ ಇದೂ ಸಹ ಅವರಿಗೆ ಅನುಕೂಲವಾಗುವುದಿಲ್ಲ.

• • • • •

## तात्पर्यचन्द्रिका

केचित्तु । ''गौणश्चेन्न आत्मशब्दात्' इत्यत्राऽत्मशब्दस्याचिद् व्यावर्तकतया उक्तत्वादात्मशब्दोक्ते द्युभ्वाद्यायतने प्रधानत्वशङ्कानुदयाजीवत्वेनैव पूर्वपक्षः'' इत्याहुः ।

ಅನುವಾದ - ರಾಮಾನುಜರ ಅಧಿಕರಣ ಶರೀರ ಹೀಗಿದೆ - 'ಗೌಣಶ್ಚೇನ್ನ ಆತ್ಮಶಬ್ದಾತ್' ಎಂಬ ಆನಂದಮಯಾಧಿಕರಣದ ಸೂತ್ರದಲ್ಲಿ ಆತ್ಮಶಬ್ದವೆಂಬ ಹೇತು ಅಚಿತ್ಪ್ರಕೃತಿಯನ್ನು ವ್ಯಾವೃತ್ತಿ ಮಾಡುತ್ತಿದೆ. ಆದ್ದರಿಂದ ಪ್ರಕೃತ ದ್ಯುಭ್ವಾದ್ಯಾಯತನವಾದ ಪದಾರ್ಥವು ಆತ್ಮಶಬ್ದ ಪ್ರತಿಪಾದ್ಯವಾಗಿದೆಯೆಂದು ಹೇಳುತ್ತಿರುವುದರಿಂದ ಪ್ರಧಾನವು ಲೋಕಾಧಾರವಾಗಬಹುದಲ್ಲವೇ? ಎಂಬ ಶಂಕೆಯೇ ಹುಟ್ಟಲು ಸಾಧ್ಯವಿಲ್ಲ. ಆದ್ದರಿಂದ ಜೀವನೇ ಲೋಕಾಧಾರನಾಗಿದ್ದಾನೆಂದು ಪೂರ್ವಪಕ್ಷವೆಂದು ಹೇಳುತ್ತಾರೆ.

तन्न । रुद्रादिव्यावर्तकताया अनुक्तत्वेन जीवत्वेनैवेत्यवधारणायोगात् ।

ಹಿಂದೆ ಪ್ರಕೃತಿಯಲ್ಲಿ ಆತ್ಮಶಬ್ದವಿಲ್ಲವೆಂದಷ್ಟೇ ಹೇಳಿದ್ದಾರೆ ಹೊರತು, ರುದ್ರಾದಿಗಳಲ್ಲಿ ಆತ್ಮಶಬ್ದವಿಲ್ಲವೆಂದೇನೂ ಹೇಳಿರುವುದಿಲ್ಲ. ಹೀಗೆ ರುದ್ರಾದಿವ್ಯಾವರ್ತಕವಾಗಿ ಯಾವ ಹೇತುಗಳನ್ನು ಹೇಳದ ಕಾರಣ ಕೇವಲ ಜೀವನೊಬ್ಬನೇ ಪೂರ್ವಪಕ್ಷಕ್ಕೆ ವಿಷಯನಾಗಿದ್ದಾನೆಂಬ ಅವಧಾರಣೆಯು ಅಯುಕ್ತವಾಗುತ್ತದೆ.

''नानुमानम्'' इति सूत्रे प्रधाननिरासायोगाच्च ।

ಮತ್ತು 'ನಾನುಮಾನಮ್' ಎಂಬ ಸೂತ್ರದಲ್ಲಿ ಪ್ರಧಾನವು ಲೋಕಾಧಾರವಲ್ಲವೆಂದು ನಿರಾಕರಿಸಲಾಗಿದೆ. ಅದಕ್ಕನುಗುಣವಾಗಿ ಪ್ರಧಾನವಿಷಯಕವಾದ ಪೂರ್ವಪಕ್ಷವನ್ನು ಮಾಡಲೇಬೇಕು.

''अस्मिन्नस्य च तद्योगं शास्ति'' इत्यादौ मुक्तोपसृप्यत्वस्यापि जीवव्यावर्तकताया उक्तत्वेन मुक्तोपसृप्यत्वेनोक्ते तस्मिञ्जीवत्वशङ्काया अप्यनुदयाच्च ।

'ಅಸ್ಮಿನ್ನಸ್ಯ ಚ ತದ್ಯೋಗಂ ಶಾಸ್ತಿ' ಎಂಬ ಆನಂದಮಯಾಧಿಕರಣದ ಸೂತ್ರದಲ್ಲಿಯೇ ಮುಕ್ತೋಪಸೃಪ್ಯತ್ವವನ್ನು ಜೀವವ್ಯಾವರ್ತಕವಾಗಿ ಹೇಳಲಾಗಿದೆ. ಅದೇ ಮುಕ್ತೋಪಸೃಪ್ಯತ್ವಲಿಂಗವು ಈ ಪ್ರಕರಣದಲ್ಲಿ ಕೇಳಿಸುತ್ತಿರುವುದರಿಂದ ಜೀವನೂ ಸಹ ಪೂರ್ವಪಕ್ಷಕ್ಕೆ ವಿಷಯನಾಗಲು

ಸಾಧ್ಯವಿಲ್ಲ. ಆತ್ಮಶಬ್ದದ ಪ್ರಯೋಗವೂ ಈ ಪ್ರಕರಣದಲ್ಲಿರುವುದರಿಂದ ಪ್ರಕೃತಿಯು ಪೂರ್ವಪಕ್ಷಕ್ಕೆ ವಿಷಯವಾಗದಿದ್ದಲ್ಲಿ ಜೀವನೂ ಸಹ ಪೂರ್ವಪಕ್ಷಕ್ಕೆ ವಿಷಯನಾಗದಿರಬೇಕಾದೀತೆಂಬ ಪ್ರತಿಬಂದಿಗೆ ನಿಮ್ಮಲ್ಲಿ ಉತ್ತರವಿಲ್ಲ.

**जायमानत्वादिनिरवकाशलिङ्गैर्मुक्तोपसृप्यत्वस्य गौणत्वे तैरेवात्मशब्दोऽपि ''प्रकाशात्मा प्रदीपः'' इत्यादाविवान्यार्थोऽस्तु ।**

ಜಾಯಮಾನತ್ವವೇ ಮೊದಲಾದ ನಿರವಕಾಶಲಿಂಗಗಳ ಬಲದಿಂದ ಮುಕ್ತೋಪಸೃಪ್ಯತ್ವವನ್ನು ಜೀವನಲ್ಲಿ ಗೌಣ ಮಾಡಬೇಕು. ಹೀಗೆ ಹೇಳುವುದಾದರೆ ಅದೇ ಜಾಯಮಾನತ್ವಾದಿ ಲಿಂಗಗಳಿಂದ ಆತ್ಮಶಬ್ದವನ್ನೂ ಸಹ 'ಪ್ರಕಾಶಾತ್ಮಾ ಪ್ರದೀಪಃ' ಎಂಬಲ್ಲಿ ಸ್ವರೂಪವೆಂಬರ್ಥದಲ್ಲಿ ಆತ್ಮಶಬ್ದವನ್ನು ಗೌಣವನ್ನಾಗಿ ವಿವಕ್ಷಿಸುವಂತೆ ಪ್ರಧಾನವಿಷಯದಲ್ಲಿಯೂ 'ಆತ್ಮೀಯ' ಎಂಬರ್ಥದಲ್ಲಿ ಆತ್ಮಶಬ್ದವನ್ನು ಪ್ರಯೋಗಿಸಬಹುದು. ಹೀಗೆ ಗೌಣಾರ್ಥವನ್ನು ಮಾಡುವ ಮೂಲಕ ಆತ್ಮಶಬ್ದದ ವಿರೋಧವನ್ನು ಪರಿಹರಿಸಿ ಪ್ರಧಾನವಿಷಯಕವಾದ ಪೂರ್ವಪಕ್ಷವನ್ನು ಮಾಡಬಹುದು.

**प्रत्युतास्मदादिजीवेऽनुभवविरुद्धं द्युभ्वाद्यायतनत्वम् । प्रधाने तु सर्वोपादाने तद्युक्तम् ।**

ವಿಚಾರ ಮಾಡಿದರೆ ಪ್ರಧಾನವಿಷಯಕವಾದ ಪೂರ್ವಪಕ್ಷವೇ ಅತ್ಯಂತ ಸಾಧುವಾಗುತ್ತದೆ. ನಮ್ಮಂತಹ ಜೀವರಲ್ಲಿ ಸಕಲಲೋಕಾಧಾರತ್ವವೂ ಅನುಭವ ವಿರುದ್ಧ. ಆದರೆ ಎಲ್ಲಾ ಪದಾರ್ಥಗಳಿಗೂ ಉಪಾದಾನವಾದ ಪ್ರಕೃತಿಯಲ್ಲಿ ಲೋಕಾಧಾರತ್ವವನ್ನು ಸುಲಭವಾಗಿ ಉಪಪಾದಿಸಬಹುದು. ಆದ್ದರಿಂದ ಜೀವನು ಲೋಕಾಧಾರನಾಗಿದ್ದಾನೆಂಬ ಪೂರ್ವಪಕ್ಷವು ಅಸಂಭಾವಿತವಾಗಿದೆ. ಪ್ರಧಾನದಲ್ಲಿ ಅದೇ ಪೂರ್ವಪಕ್ಷವು ಅತ್ಯಂತ ಯುಕ್ತವಾಗುತ್ತದೆ.

**किञ्चाद्यसूत्रे 'स्वशब्दात्' इत्यस्य ब्रह्मासाधारणशब्दादित्यर्थ इति त्वयोक्तत्वात् स्वशब्दादित्यनेनैव ''अमृतस्यैष सेतुः'' ''यः सर्वज्ञः'' इत्यादेरिव मुक्तोपसृप्यत्वादिशब्दस्यापि ग्रहणसम्भवान्मुक्तोपसृप्यादिसूत्रवैयर्थ्यम् ।**

ಮತ್ತು ಮೊದಲನೆಯ ಸೂತ್ರದಲ್ಲಿ 'ಸ್ವಶಬ್ದಾತ್' ಎಂಬುದಕ್ಕೆ 'ಬ್ರಹ್ಮನ ಅಸಾಧಾರಣ ಶಬ್ದಗಳಿರುವುದರಿಂದ' ಎಂಬರ್ಥವನ್ನು ನೀವು ಹೇಳುತ್ತೀರಿ. ಹಾಗಾದರೆ 'ಸ್ವಶಬ್ದಾತ್' ಎಂಬ ಹೇತುಭಾಗದಿಂದಲೇ 'ಅಮೃತಸ್ಯೈಷ ಸೇತುಃ' 'ಯಃ ಸರ್ವಜ್ಞಃ' ಇತ್ಯಾದಿ ವಾಕ್ಯಗಳಲ್ಲಿ ಹೇಳಲ್ಪಟ್ಟ ಮುಕ್ತೋಪಸೃಪ್ಯತ್ವ, ಸರ್ವಜ್ಞತ್ವ ಮೊದಲಾದವುಗಳನ್ನೂ ಸಹ ಸಂಗ್ರಹಿಸಬಹುದು. ಪುನಃ 'ಮುಕ್ತೋಪಸೃಪ್ಯವ್ಯಪದೇಶಾತ್', 'ಪ್ರಕರಣಾತ್' ಇತ್ಯಾದಿ ಸೂತ್ರಗಳನ್ನು ಹೇಳಿದ್ದು ವ್ಯರ್ಥವಾಗುತ್ತದೆ. ಆದ್ದರಿಂದ ರಾಮಾನುಜರ ಅಧಿಕರಣಶರೀರವು ಅಸಾಧುವಾಗಿದೆ.

ಪರಿಪೂರ್ಣಚಂದ್ರಿಕಾ

**नन्वदृश्यत्वादीत्यत्र ''यत्तदद्रेश्यम्'' इत्यादेर्ब्रह्मपरताया उक्तत्वात्तत्प्रकरणस्थस्य ''यस्मिन्द्यौः'' इत्यादेरपि सा सिद्धेतीदमधिकरणमनारभ्यमिति चेत् ।**

ಈ ಅಧಿಕರಣಕ್ಕೆ ಅದೃಶ್ಯತ್ವಾಧಿಕರಣದಿಂದ ಪುನರುಕ್ತಿ ಬರುತ್ತದೆ. ಏಕೆಂದರೆ 'ಯತ್ತದದ್ರೇಶ್ಯಮ್' ಇತ್ಯಾದಿ ವಾಕ್ಯಗಳೆಲ್ಲವೂ ಬ್ರಹ್ಮಪರವೆಂದು ಅದೃಶ್ಯತ್ವಾಧಿಕರಣದಲ್ಲಿ ಸಾಧನೆ ಮಾಡಿದ್ದರಿಂದ ಆ ಪ್ರಕರಣದಲ್ಲಿರುವ 'ಯಸ್ಮಿನ್ದ್ಯೌಃ' ಇತ್ಯಾದಿ ವಾಕ್ಯಗಳೂ ಸಹ ಬ್ರಹ್ಮಪರವೆಂದೇ ಸಿದ್ಧವಾಗುತ್ತವೆ. ಹೀಗಿರುವಾಗ ಲೋಕಾಧಾರತ್ವವೂ ಬ್ರಹ್ಮನಲ್ಲಿದೆಯೆಂದು ಹಿಂದಿನ ಅಧಿಕರಣದಿಂದ ಸಿದ್ಧವಾದ ಮೇಲೆ ಈ ಅಧಿಕರಣವನ್ನು ಆರಂಭಿಸಿದ್ದು ವ್ಯರ್ಥವಲ್ಲವೇ?

**अत्र परैरुक्तम् । 'यस्मिन्' इत्यादिकं 'यत्तदद्रेश्यम्' इत्येतत्प्रकरणे नास्तीति कृत्वाचिन्तयेदमारब्धम् ।**

ಈ ಪುನರುಕ್ತಿ ದೋಷವನ್ನು ಅದ್ವೈತಿಗಳು ಹೀಗೆ ಪರಿಹರಿಸುತ್ತಾರೆ - 'ಯಸ್ಮಿನ್ದ್ಯೌಃ' ಇತ್ಯಾದಿ ವಾಕ್ಯವು 'ಯತ್ತದದ್ರೇಶ್ಯಮ್' ಎಂಬ ಪ್ರಕರಣದಲ್ಲಿ ಇರುವುದೇ ಇಲ್ಲವೆಂಬ ಕೃತ್ವಾಚಿಂತೆಯನ್ನು ಮಾಡಿಕೊಂಡು ಈ ಅಧಿಕರಣದ ಪೂರ್ವಪಕ್ಷವು ಹುಟ್ಟುತ್ತಿದೆ. ಆದ್ದರಿಂದ ಪುನರುಕ್ತಿ ದೋಷ ಬರುವುದಿಲ್ಲ.

**नच तथात्वे ''प्रकरणात्'' इति सूत्रायोगः । तस्य कृत्वाचिन्तात्वोद्घाटनार्थत्वादिति ।**

ಹಾಗಾದರೆ 'ಪ್ರಕರಣಾತ್' ಎಂಬ ಸೂತ್ರವು 'ಯಸ್ಮಿನ್ದ್ಯೌಃ' ಎಂಬ ವಾಕ್ಯವು ಬ್ರಹ್ಮಪ್ರಕರಣದಲ್ಲಿರುವುದರಿಂದ ಬ್ರಹ್ಮಪರವಾಗಿದೆಯೆಂದು ಸಮರ್ಥಿಸುತ್ತಿದೆ. ಇದು ಅಯುಕ್ತವಾಗುತ್ತದಲ್ಲವೇ? ಎಂದು ಪ್ರಶ್ನಿಸಬಾರದು. ಕೃತ್ವಾಚಿಂತೆಯನ್ನು ಮಾಡಿಕೊಂಡು ಅಧಿಕರಣವು ಆರಂಭಣೀಯವಾಗಿದೆಯೆಂದು ತಿಳಿಸುವುದಕ್ಕಾಗಿಯೇ ಈ ಸೂತ್ರವು ಹೊರಟಿದೆ. ಹೀಗೆ ಅದ್ವೈತಿಗಳು ನೀಡುವ ಸಮಾಧಾನ.

**तन्न । कृत्वाचिन्तात्वस्यागतिकगतित्वात् । जायमानत्वादिलिङ्गैः प्रकरणस्याब्रह्मपरत्वेनैव वा प्रकरणादुत्कर्षेण वा पूर्वपक्षसम्भवाच्च ।**

ಇದು ತಪ್ಪು. ಬೇರೆ ಗತಿಯಿಲ್ಲದಿದ್ದಾಗ ಮಾತ್ರ ಕೃತ್ವಾಚಿಂತೆಯನ್ನು ಅವಲಂಬಿಸಬೇಕು. ಆದರೆ ಜಾಯಮಾನತ್ವಾದಿ ಲಿಂಗಗಳಿಂದ ಅಧಿಕಾಶಂಕೆಯನ್ನು ಈ ಅಧಿಕರಣದಲ್ಲಿ ಮಾಡಲು ಬರುತ್ತದೆ. ಅಥವಾ ಸಂಪೂರ್ಣ ಪ್ರಕರಣವೇ ಬ್ರಹ್ಮಪರವಾಗುವುದಿಲ್ಲವೆಂದೂ ಸಹ ಆಶಂಕಿಸಬಹುದು. ಅಥವಾ ಅದೃಶ್ಯತ್ವಪ್ರಕರಣದಲ್ಲಿರುವ 'ಯಸ್ಮಿನ್ದ್ಯೌಃ' ಎಂಬ ವಾಕ್ಯಕ್ಕೆ ಸಂಗತಿಯಿಲ್ಲದ ಕಾರಣ, ಉತ್ಕರ್ಷ

ಮಾಡಿ ಬೇರೆ ಪ್ರಕರಣದಲ್ಲಿ ಅದನ್ನು ಅನ್ವಯ ಮಾಡಬೇಕು. ಹೀಗೆ ಅನೇಕ ವಿಧದಲ್ಲಿ ಪೂರ್ವಪಕ್ಷವನ್ನು ಮಾಡಲು ಬರುವಾಗ ಬೇರೆ ಗತಿಯಿಲ್ಲದೇ ಕೃತ್ವಾಚಿಂತೆಯನ್ನು ಮಾಡಿದ್ದೇವೆಂಬ ಉತ್ತರವು ತಪ್ಪಾಗುತ್ತದೆ.

**केचित्तु । लिङ्गैः प्रकरणविच्छेदाशङ्कायां तन्निरासायेदमित्याहुः ।**

ರಾಮಾನುಜರ ಪುನರುಕ್ತಿ ಪರಿಹಾರ ಹೀಗಿದೆ - ಇಂದ್ರಿಯಾಧಾರತ್ವವೇ ಮೊದಲಾದ ಲಿಂಗಗಳ ಬಲದಿಂದ ಬ್ರಹ್ಮಪ್ರಕರಣವು ವಿಚ್ಛೇದವಾಗುತ್ತದೆ. ಆದ್ದರಿಂದ 'ಯಸ್ಮಿನ್‌ದ್ಯೌಃ' ಎಂಬ ವಾಕ್ಯವು ಜೀವವಿಷಯಕವಾಗಬಹುದೆಂದು ಪೂರ್ವಪಕ್ಷ ಹುಟ್ಟಿದಾಗ ಅದರ ನಿರಾಸಕ್ಕೋಸ್ಕರ ಈ ಅಧಿಕರಣವು ಸಾರ್ಥಕವಾಗಿದೆಯೆನ್ನುತ್ತಾರೆ.

**तन्न । भाष्यटीकोक्तरीत्या 'यत्तदद्रेश्यम्' इत्यादेरपि जीवविषयत्वमित्येक-वाक्यत्वेनैव पूर्वपक्षसम्भवे प्रकरणविच्छेदायोगात् ।**

ಇವರ ವಾದವೂ ಸಹ ತಪ್ಪು. ಭಾಷ್ಯ ಹಾಗೂ ಟೀಕೆಗಳಲ್ಲಿ ಹೇಳಿದ ಪ್ರಕಾರ 'ಯತ್ತದದ್ರೇಶ್ಯಮ್' ಇತ್ಯಾದಿ ವಾಕ್ಯಗಳೂ ಸಹ ಜೀವವಿಷಯಕವೇ ಆಗಿವೆಯೆಂಬುದಾಗಿ ಏಕವಾಕ್ಯತ್ವವನ್ನು ವಿವಕ್ಷಿಸಿಯೇ ಪೂರ್ವಪಕ್ಷವನ್ನು ಮಾಡಲು ಬರುವಾಗ ಪ್ರಕರಣವು ವಿಚ್ಛೇದವಾಗಿದೆಯೆಂಬ ಉತ್ತರವು ತಪ್ಪಾಗುತ್ತದೆ.

**नहि जीवस्य द्युभ्वाद्यायतनत्वं शङ्कमानेनादृश्यत्वादिकं शङ्कितुमशक्यम् ।**

ಜೀವನು ದ್ಯುಭ್ವಾದ್ಯಾಯತನನಾಗಬಹುದೆಂದು ಶಂಕಿಸುವ ನಿನಗೆ ಅದೃಶ್ಯತ್ವಾದಿಗಳು ಜೀವನಲ್ಲಿ ಬರುತ್ತವೆ ಎಂಬ ಆಶಂಕೆಯು ಕಷ್ಟವಾಗುತ್ತದೇನು? ಅಂದರೆ ಕಷ್ಟಕರವಾದ ದ್ಯುಭ್ವಾದ್ಯಾಯತನತ್ವವನ್ನೇ ಆಶಂಕಿಸಿದ ಮೇಲೆ ಸುಲಭವಾದ ಅದೃಶ್ಯತ್ವಾದಿಗಳನ್ನು ಆಶಂಕಿಸುವುದೇನು ಶ್ರಮಸಾಧ್ಯವಲ್ಲ.

**त्वयाऽपि हि ''सर्वत्र प्रसिद्धोपदेशात्'' इत्यत्रैकवाक्यत्वाय ''मनोमयः'' इत्यादिवत् ''सर्वं खल्विदं ब्रह्म'' इत्याद्यपि जीवविषयमित्येव पूर्वपक्षितमिति ।**

ಮತ್ತು ರಾಮಾನುಜರೂ ಸಹ 'ಸರ್ವತ್ರ ಪ್ರಸಿದ್ಧೋಪದೇಶಾತ್' ಎಂಬಲ್ಲಿ ಏಕವಾಕ್ಯತಾಕ್ಕೋಸ್ಕರ 'ಮನೋಮಯಃ' ಇತ್ಯಾದಿಗಳಂತೆ 'ಸರ್ವಂ ಖಲ್ವಿದಂ ಬ್ರಹ್ಮ' ಮೊದಲಾದ ವಾಕ್ಯಗಳನ್ನು ಜೀವವಿಷಯಕವೆಂದೇ ಪೂರ್ವಪಕ್ಷ ಮಾಡಿದ್ದಾರೆ. ಆದ್ದರಿಂದ ಏಕವಾಕ್ಯತ್ವವನ್ನು ಒಪ್ಪಿಯೇ ಪೂರ್ವಪಕ್ಷ ಮಾಡಲು ಬರುವಾಗ ಪ್ರಕರಣಕ್ಕೆ ವಿಚ್ಛೇದ ಒಪ್ಪಿದ್ದು ತಪ್ಪಾಗುತ್ತದೆ.

**टीकाक्षरार्थस्तु । आरभ्याधीतत्वात् इत्यनेनान्यप्रकरणाधीतत्वं न विवक्षितम् । येनान्यप्रकरणाधीतस्याप्रकरणित्वनियमाद्विरुद्धो हेतुः स्यात् । किन्तु स्वस्यैवोपक्रम्य पठितत्वम् । इतरत् स्पष्टम् ।।**

ಪರಿಪೂರ್ಣಚಂದ್ರಿಕಾ

ಟೀಕೆಯ ಕಠಿಣಪದಾರ್ಥ ಹೀಗಿದೆ - 'ಪ್ರಕರಣಾತ್' ಎಂಬ ಸೂತ್ರದ ಟೀಕೆಯಲ್ಲಿ 'ಆರಭ್ಯಾಧೀತತ್ವೇನ' ಎಂಬ ಶಬ್ದವನ್ನು ಪ್ರಯೋಗಿಸಿದ್ದಾರೆ. ಇದನ್ನು ನೋಡಿದಾಗ ಬೇರೆ ಪ್ರಕರಣದಲ್ಲಿ ಹೇಳಿದ್ದನ್ನು ಆರಂಭಿಸಿ ಅಧ್ಯಯನ ಮಾಡಲಾಗಿದೆ ಎಂಬರ್ಥವು ಭಾಸವಾಗುತ್ತದೆ. ಇದು ತಪ್ಪು. 'ಅನ್ಯಪ್ರಕರಣ ಅಧೀತತ್ವ' ಎಂಬರ್ಥವನ್ನು ಟೀಕಾಕಾರರು ವಿವಕ್ಷಿಸಿಲ್ಲ. ಹಾಗೆ ವಿವಕ್ಷಿಸಿದ್ದರೆ ಬೇರೆ ಪ್ರಕರಣದಲ್ಲಿ ಅಧ್ಯಯನ ಮಾಡಿದ್ದು ಈ ಪ್ರಕರಣಕ್ಕೆ ಸಂಬಂಧ ಪಡದ ಕಾರಣ ವಿರುದ್ಧವಾದ ಹೇತುವಾಗುತ್ತದೆ ಎಂದಾಗುತ್ತಿತ್ತು. ಆದ್ದರಿಂದ 'ಆರಭ್ಯಾಧೀತತ್ವೇನ' ಎಂಬುದಕ್ಕೆ ತಾನೇ ಸ್ವತಃ ಉಪಕ್ರಮದಲ್ಲಿ ಪ್ರಸಕ್ತನಾಗಿದ್ದಾನೆ. ಅವನನ್ನೇ ಅಧ್ಯಯನ ಮಾಡುತ್ತಿದ್ದಾರೆ ಎಂದರ್ಥ. ಆದ್ದರಿಂದ ಇದು ವಿಷ್ಣುಪ್ರಕರಣವಾಗಿದೆ ಎಂದು ವಿವಕ್ಷಿಸಿದಾಗ ಹೇತು ವಿರುದ್ಧವಾಗುವುದಿಲ್ಲ. ಉಳಿದ ಟೀಕೆಯ ಕಠಿಣಪದಾರ್ಥಗಳನ್ನು ಉಪನ್ಯಾಸ ಮುಖದಿಂದಲೇ ವ್ಯಾಖ್ಯಾನಿಸುವಾಗಲೇ ಸ್ಪಷ್ಟಪಡಿಸಿದ್ದಾಗಿದೆ.

**अतो न मिथ्याभेदपरत्वमिति ।। 'नानुमानम्' इति सूत्रस्यानुमानं भेदमिथ्यात्वे न मानम् । भेदस्य सत्यत्वप्रतिपादकशब्दात् । अनुमानमूलभूतस्य भेदमिथ्यात्वप्रतिपादकशब्दस्याभावाचेति वर्णकान्तरं सूचितमिति द्रष्टव्यम् ।। छ ।। द्युभ्वाद्यधिकरणम् ।। १ ।।**

**।। इति श्रीब्रह्मण्यतीर्थपूज्यश्रीपादशिष्यव्यासतीर्थविरचितायां तात्पर्यचन्द्रिकायां द्युभ्वाद्यधिकरणं सम्पूर्णम् ।।**

ಟೀಕೆಯಲ್ಲಿ 'ಅತೋ ನ ಮಿಥ್ಯಾಭೇದಪರತ್ವಮ್' ಎಂದು ಹೇಳಿದ್ದಾರೆ. ಹೀಗೆ ಹೇಳಿದ್ದರಿಂದ 'ನಾನುಮಾನಮ್' ಎಂಬ ಸೂತ್ರವನ್ನು ಎರಡು ಬಗೆಯಲ್ಲಿ ವ್ಯಾಖ್ಯಾನಿಸಿದಂತಾಯಿತು. 'ನಾನುಮಾನಮ್' ಎಂಬ ಸೂತ್ರಕ್ಕೆ ಅನುಮಾನವು ಮಿಥ್ಯಾಭೂತವಾದ ಭೇದವಿಷಯದಲ್ಲಿ ಪ್ರಮಾಣವಾಗುವುದಿಲ್ಲ. ಏಕೆಂದರೆ ಭೇದವೂ ಸತ್ಯವಾಗಿದೆಯೆಂದು ಪ್ರತಿಪಾದನೆ ಮಾಡುವ ಅನೇಕ ಶಬ್ದಗಳಿರುವ ಕಾರಣ ಎಂಬುದು ಒಂದು ಬಗೆಯ ವ್ಯಾಖ್ಯಾನ. ಅಥವಾ ಅನುಮಾನಕ್ಕೆ ಮೂಲಭೂತವಾದ ಭೇದಮಿಥ್ಯಾತ್ವ ಪ್ರತಿಪಾದಕವಾದ ಶಬ್ದಗಳಿರುವುದಿಲ್ಲವೆಂಬುದು ಎರಡನೆಯ ವ್ಯಾಖ್ಯಾನ. ಇದನ್ನು ಟೀಕೆಯಲ್ಲಿ 'ಅತೋ ನ ಮಿಥ್ಯಾಭೇದಾಪರತ್ವಮ್' ಎಂಬ ವಾಕ್ಯದಿಂದ ಸೂಚಿಸಿದ್ದಾರೆಂದು ತಿಳಿಯಬೇಕು.

ಇಲ್ಲಿಗೆ ಶ್ರೀವ್ಯಾಸತೀರ್ಥರಿಂದ ರಚಿತವಾದ ತಾತ್ಪರ್ಯಚಂದ್ರಿಕೆಯ ಕನ್ನಡಾನುವಾದದಲ್ಲಿ ದ್ಯುಭ್ವಾದ್ಯಧಿಕರಣವು ಸಂಪೂರ್ಣವಾಯಿತು.

**प्रकाशः –**

**केचित्त्विति ।।** द्युभ्वाद्यायतनं जीवः परमात्मा वेति संशये मनःप्रभृतीन्द्रियाधारत्वनाडीसम्बन्धजायमानत्वादिलिङ्गानां श्रवणात्तद्बलेन द्युपृथिव्याद्यायतनत्वादेर्जीवे स्वरूपेण वा कर्मद्वारा वा मुक्तावस्थायां विकसितेन ज्ञानेन वा कथञ्चिन्नेयत्वाज्जीव एव द्युभ्वाद्यायतनमिति प्राप्ते,

ವಿವರಣೆ - ರಾಮಾನುಜರ ಅಧಿಕರಣವನ್ನು 'ಕೇಚಿತ್' ಇತ್ಯಾದಿ ವಾಕ್ಯದಿಂದ ವಿವರಿಸುತ್ತಿದ್ದಾರೆ. ದ್ಯುಭ್ವಾದ್ಯಾಯತನನಾದವನು ಜೀವನೋ? ಅಥವಾ ಪರಮಾತ್ಮನೋ? ಎಂದು ಸಂಶಯ. ಮನಸ್ಸೇ ಮೊದಲಾದ ಇಂದ್ರಿಯಗಳನ್ನು ಧಾರಣ ಮಾಡಿರುವಿಕೆ. ನಾಡಿಗಳ ಸಂಬಂಧ, ಜಾಯಮಾನತ್ವ ಮೊದಲಾದ ಲಿಂಗಗಳು ಇವೆಲ್ಲವೂ ಕೇಳಿಸುತ್ತಿರುವುದರಿಂದ ಸ್ವರ್ಗ, ಪೃಥಿವೀ ಮೊದಲಾದವುಗಳಿಗೆ ಆಧಾರನಾಗಿರುವವನು ಇಂದ್ರಾದಿ ಜೀವರಾಗಿದ್ದಾರೆಂದು ಹೇಳಬಹುದು. ಅಥವಾ ಕರ್ಮದ ಮೂಲಕ ಸಕಲ ಜೀವರೂ ಲೋಕಾಧಾರರಾಗಿದ್ದಾರೆನ್ನಬಹುದು. ಅಥವಾ ಮುಕ್ತಾವಸ್ಥೆಯಲ್ಲಿ ವಿಕಸಿತವಾದ ಜ್ಞಾನದಿಂದ ಲೋಕಾಧಾರರಾಗಿದ್ದಾರೆಂದು ಹೇಳಬಹುದು. ಹೀಗೆ ಜೀವನೇ ದ್ಯುಭ್ವಾದ್ಯಾಯತನನೆಂದು ಪೂರ್ವಪಕ್ಷ.

**प्रकाशः –** "तमेवैकं जानथ आत्मानम् । अमृतस्यैष सेतुः । यस्सर्वज्ञः" इत्यादिपरमात्मासाधारणशब्दात् "नामरूपाद्विमुक्तः परात्परं पुरुषमुपैति" इति नामरूपात्मकबन्धान्मुक्तस्य प्राप्यतया व्यपदेशात् मनःप्रभृतीन्द्रियाधारत्वस्य सर्वाधारे परे परमात्मनि "सन्ततँ शिलाभिस्तु लम्बत्याकोशसन्निभम्" इत्यादिश्रुत्या नाड्याधारत्वस्य हृदयाधारद्वारा "अजायमानो बहुधा विजायते" इति श्रुत्या चाकर्मकृतः स्वेच्छोपात्तदिव्यविग्रहयोगेन जायमानत्वस्यापि परमात्मनि सम्भवात्स एव द्युभ्वाद्यायतनमिति सिद्धान्त इत्याहुरित्यर्थः ।

'ತಮೇವೈಕಂ ಜಾನಥ ಆತ್ಮಾನಮ್ । ಅಮೃತಸ್ಯೈಷ ಸೇತುಃ । ಯಸ್ಸರ್ವಜ್ಞಃ' ಇವೇ ಮೊದಲಾದ ಶ್ರುತಿಗಳಲ್ಲಿ ಪರಮಾತ್ಮನ ಅಸಾಧಾರಣವಾದ ಆತ್ಮಾ ಮೊದಲಾದ ಶಬ್ದಗಳು ಕೇಳಿಸುತ್ತಿವೆ. ಮತ್ತು 'ನಾಮರೂಪಾದ್ವಿಮುಕ್ತಃ ಪರಾತ್ಪರಂ ಪುರುಷಮುಪೈತಿ' ಎಂಬ ಶ್ರುತಿಯಲ್ಲಿ ನಾಮರೂಪಾತ್ಮಕವಾದ ಸಂಸಾರಬಂಧದಿಂದ ಮುಕ್ತನಾಗಿ ಪರಮಾತ್ಮನನ್ನು ಹೊಂದುತ್ತಾನೆಂದು ಮುಕ್ತಪ್ರಾಪ್ಯತ್ವಲಿಂಗವೂ ಸಹ ಕೇಳಿಸುತ್ತಿದೆ. ಸಕಲಕ್ಕೂ ಆಧಾರನಾದ್ದರಿಂದ ಮನಸ್ಸು ಮೊದಲಾದ ಇಂದ್ರಿಯಗಳಿಗೂ ಸಹ ಪರಮಾತ್ಮನು ಆಧಾರನಾಗಿದ್ದಾನೆ. ಮತ್ತು 'ಸಂತತಗ್ಂ ಶಿಲಾಭಿಸ್ತುಲಂಬತ್ಯಾ ಕೋಶಸನ್ನಿಭಮ್' ಇತ್ಯಾದಿ ಶ್ರುತಿಯಿಂದ ಹೃದಯ ಆಧಾರದ ಮೂಲಕ ನಾಡಿಗೆ ಆಧಾರನು ಆಗಿದ್ದಾನೆಂದೂ ತಿಳಿಯುತ್ತದೆ. 'ಅಜಾಯಮಾನೋ ಬಹುಧಾ ವಿಜಾಯತೇ' ಇತ್ಯಾದಿ ಶ್ರುತಿಯಿಂದ ಸ್ವೇಚ್ಛೆಯಿಂದ ಸ್ವೀಕರಿಸುವ ಅನೇಕ ರೂಪಗಳ ಮೂಲಕ ಜಾಯಮಾನತ್ವವೆಂಬ ಲಿಂಗವನ್ನೂ ಸಹ ಪರಮಾತ್ಮನಲ್ಲಿ ಉಪಪಾದಿಸಬಹುದು. ಆದ್ದರಿಂದ ಪರಮಾತ್ಮನೇ

ದ್ಯುಭ್ವಾದ್ಯಾಯತನನಾಗಿದ್ದಾನೆಂದು ಸಿದ್ಧಾಂತ.

**प्रकाशः** – ननु 'नानुमानम्' इति सूत्रे प्रधाननिरासप्रतीतेर्जीव एवेति कथं पूर्वपक्ष इत्यतश्श्रुतप्रकाशोक्तमनुवदति – **गौणश्चेदिति** ।।

ಈ ಅಧಿಕರಣದ 'ನಾನುಮಾನಮ್' ಎಂಬ ಸೂತ್ರದಲ್ಲಿ ಪ್ರಕೃತಿಯನ್ನು ಲೋಕಾಧಾರವಲ್ಲವೆಂದು ನಿರಾಕರಿಸಿದ್ದರಿಂದ ಜೀವನೊಬ್ಬನೇ ಪೂರ್ವಪಕ್ಷಕ್ಕೆ ವಿಷಯನಾಗಿದ್ದಾನೆಂದು ಹೇಗೆ ಹೇಳುತ್ತೀರಿ? ಎಂಬ ಪ್ರಶ್ನೆಗೆ ಶ್ರುತಪ್ರಕಾಶದಲ್ಲಿ ಹೇಳಿದ್ದನ್ನು 'ಗೌಣಶ್ಚೇತ್' ಎಂಬ ವಾಕ್ಯದಿಂದ ಅನುವಾದ ಮಾಡುತ್ತಿದ್ದಾರೆ.

**प्रकाशः** – तत्र हि 'तदैक्षत' इतीक्षणं प्रधाने गौणमिति शङ्किते ''अनेन जीवेनात्मना'' इत्यात्मपदप्रयोगात्तस्य जडेऽयोगादित्युक्तेरिति भावः ।

ಶ್ರುತಪ್ರಕಾಶದಲ್ಲಿ ಹೀಗಿದೆ - ಈಕ್ಷತ್ಯಧಿಕರಣದಲ್ಲಿಯೇ ಪ್ರಧಾನವನ್ನು ನಿರಾಕರಿಸಿದ್ದರಿಂದ ಇಲ್ಲಿ ಅದು ಪೂರ್ವಪಕ್ಷಕ್ಕೆ ವಿಷಯವಾಗುವುದಿಲ್ಲ. 'ಗೌಣಶ್ಚೇನ್ನ ಆತ್ಮಶಬ್ದಾತ್' ಎಂಬ ಸೂತ್ರದಲ್ಲಿ 'ತದೈಕ್ಷತ' ಎಂಬ ಶ್ರುತಿಯಿಂದ ಕೇಳಿಸುತ್ತಿರುವ ಜ್ಞಾನವಿಷಯತ್ವವು ಪ್ರಧಾನದಲ್ಲಿ ಗೌಣವಾಗಿ ಹೇಳಬಹುದಲ್ಲವೇ? ಎಂದು ಶಂಕೆಯು ಪ್ರಾಪ್ತವಾದರೆ 'ಅನೇನ ಜೀವೇನಾತ್ಮನಾ' ಎಂಬುದಾಗಿ ಶ್ರುತಿಯು 'ಆತ್ಮನಾ' ಎಂಬ ಪದವನ್ನು ಪ್ರಯೋಗಿಸಿದೆ. ಜಡವಾದ ಪ್ರಕೃತಿಯಲ್ಲಿ ಈ ಆತ್ಮಪದವು ಯುಕ್ತವಾಗುವುದಿಲ್ಲವೆಂದು ಹೇಳಿದ್ದಾರೆ. ಅಲ್ಲಿಯೇ ನಿರಾಕೃತವಾಗಿರುವಾಗ ಪುನಃ ಇಲ್ಲಿ ಪ್ರಧಾನವಿಷಯಕವಾದ ಪೂರ್ವಪಕ್ಷವು ಹುಟ್ಟಲು ಸಾಧ್ಯವಿಲ್ಲ.

**प्रकाशः** – 'नानुमानम्' इति प्रधाननिरासो दृष्टान्तत्वेनोपयुज्यते । यथाप्रधानं न भवति तथा प्राणभृज्जीवोऽपि नेतीति भावः ।

ಆದ್ದರಿಂದ 'ನಾನುಮಾನಮ್' ಎಂಬ ಸೂತ್ರದಲ್ಲಿ ನಿರಾಕರಿಸಲ್ಪಟ್ಟ ಪ್ರಧಾನಕ್ಕೆ ಲೋಕಾಧಾರತ್ವವು ದೃಷ್ಟಾಂತವೆಂದು ತಿಳಿಯಬೇಕು. ಯಾವರೀತಿಯಾಗಿ ಪ್ರಧಾನವು ಲೋಕಾಧಾರವಾಗುವುದಿಲ್ಲವೋ, ಅದರಂತೆ ಪ್ರಾಣಧಾರಕನಾದ ಜೀವನೂ ಸಹ ಲೋಕಾಧಾರನಾಗುವುದಿಲ್ಲವೆಂದು ಅಭಿಪ್ರಾಯ.

**प्रकाशः** – **रुद्रादीति** ।। रुद्रवाय्वादेरपीशशब्दसमाख्याभ्यां प्राप्तिभावादिति भावः । 'नानुमानम्' इति सूत्र इति दृष्टान्तत्वकल्पनं त्वयुक्तम् । कल्पकाभावादतिशयाभावाच्चेति भावः ।

ರಾಮಾನುಜರ ಅಧಿಕರಣಶರೀರವನ್ನು 'ರುದ್ರಾದಿ' ಇತ್ಯಾದಿ ವಾಕ್ಯದಿಂದ ನಿರಾಕರಿಸುತ್ತಿದ್ದಾರೆ. ಶ್ರುತಿಯಲ್ಲಿ ರುದ್ರ ಹಾಗೂ ವಾಯುದೇವತೆಗಳಲ್ಲಿಯೂ ಲೋಕಾಧಾರತ್ವವು ಬರಬಹುದೆನ್ನಲು ಸಮಾಖ್ಯಾಪ್ರಮಾಣವು ಆಧಾರವಾಗಿದೆ. ಹೀಗೆ ರುದ್ರಾದಿಗಳೂ ಸಹ ಪೂರ್ವಪಕ್ಷಕ್ಕೆ ವಿಷಯವಾಗಿರುವಾಗ ಅವರನ್ನು ಬಿಟ್ಟು ಜೀವನು ಮಾತ್ರ ಪೂರ್ವಪಕ್ಷಕ್ಕೆ ವಿಷಯನಾಗಿದ್ದಾನೆಂಬ ಕಲ್ಪನೆಯು ತಪ್ಪಾಗುತ್ತದೆ. ಒಂದು ವೇಳೆ ರುದ್ರಾದಿಗಳು ಲೋಕಾಧಾರವೆನ್ನಲು ವ್ಯಾವರ್ತಕ ಧರ್ಮಗಳಿದ್ದಲ್ಲಿ ಜೀವನನ್ನು ಮಾತ್ರ

ವಿವಕ್ಷಿಸಬಹುದಿತ್ತು. ಮತ್ತೇನೆಂದರೆ 'ನಾನುಮಾನಮ್' ಎಂಬ ಸೂತ್ರವು ಕೇವಲ ಪ್ರಕೃತಿಯ ದೃಷ್ಟಾಂತವನ್ನಷ್ಟೇ ನೀಡುತ್ತಿದೆಯೆಂಬ ಕಲ್ಪನೆಯೂ ಸಹ ತಪ್ಪಾಗಿದೆ. ಏಕೆಂದರೆ ಇದು ದೃಷ್ಟಾಂತವನ್ನು ಹೇಳುತ್ತದೆನ್ನಲು 'ಯಥಾ', 'ತಥಾ' ಇತ್ಯಾದಿ ಶಬ್ದಗಳೇನೂ ಇರುವುದಿಲ್ಲ. ಮತ್ತು ದೃಷ್ಟಾಂತವನ್ನು ನೀಡಿದ್ದರಿಂದ ಅತಿಶಯವಾದ ಅರ್ಥವನ್ನೂ ಸಹ ಹೇಳಿದಂತಾಗಲಿಲ್ಲ.

**प्रकाशः – अस्मिन्निति ।। ''रसशब्दनिर्दिष्टेऽस्मिन्नानन्दमयेऽस्य जीवस्य तल्लाभादानन्दयोगं शास्ति ''रसो वै सः । रसꣳ ह्येवायं लब्ध्वाऽऽनन्दीभवति'' इति शास्त्रम् । अतो न जीवः'' इत्यर्थोक्तेरिति भावः ।**

ಆನಂದಮಯಾಧಿಕರಣದಲ್ಲಿ ಪ್ರಧಾನವು ನಿರಾಕೃತವಾದ್ದರಿಂದ ಪ್ರಕೃತ ಪೂರ್ವಪಕ್ಷಕ್ಕೆ ಅದು ವಿಷಯವಾಗುವುದಿಲ್ಲವೆನ್ನುವುದಾದರೆ ಜೀವನೂ ಸಹ ಆನಂದಮಯಾಧಿಕರಣದ 'ಅಸ್ಮಿನ್ನಸ್ಯ ಚ' ಎಂಬ ಸೂತ್ರದಿಂದಲೇ ನಿರಾಕೃತನಾಗಿದ್ದಾನೆ. 'ಅಸ್ಮಿನ್ನಸ್ಯ ಚ' ಎಂಬ ಸೂತ್ರಕ್ಕೆ ರಾಮಾನುಜರ ವ್ಯಾಖ್ಯಾನ ಹೀಗಿದೆ - ಅಸ್ಮಿನ್ = ರಸಶಬ್ದ ನಿರ್ದಿಷ್ಟನಾದ ಈ ಆನಂದಮಯನಲ್ಲಿ, ಅಸ್ಯ = ಜೀವನಿಗೆ, ತದ್ಯೋಗಂ = ಆನಂದದ ಪ್ರಾಪ್ತಿಯನ್ನು, ಶಾಸ್ತಿ = 'ರಸೋ ವೈ ಸಃ । ರಸಗ್‍ಹ್ಯೇವಾಯಂ ಲಬ್ಧ್ವಾऽऽನಂದೀಭವತಿ' ಎಂಬಲ್ಲಿ ಇದನ್ನು ಹೇಳಲಾಗಿದೆ. ಆದ್ದರಿಂದ ಆನಂದಮಯನ ಪ್ರಾಪ್ತಿಯಿಂದ ಜೀವನಿಗೆ ಆನಂದವನ್ನು ಹೇಳಲಾಗಿದೆ. ಇದರಿಂದ ಜೀವನು ಮುಕ್ತೋಪಸೃಪ್ಯತ್ವ ಎಂಬ ಲಿಂಗದಿಂದ ಆನಂದಮಯನಲ್ಲವೆಂದು ಹೇಳಿದ್ದಾಗಿದೆ. ಹೀಗೆ ಜೀವನನ್ನು ನಿರಾಕರಿಸಿದ ಮೇಲೆ ಪುನಃ ಇಲ್ಲಿ ಜೀವವಿಷಯಕವಾದ ಪೂರ್ವಪಕ್ಷವು ಹುಟ್ಟಲು ಸಾಧ್ಯವಿಲ್ಲ.

**प्रकाशः – प्रकाशेति ।। तत्र यथा स्वरूपार्थत्वमात्मशब्दस्य तथा जीव (दीप) वज्जडेऽपि प्रधाने 'ममाऽत्माः भद्रसेन' इतिवदात्मीये प्रधान आत्मशब्दप्रयोग इति तन्निष्ठसूत्रव्यावर्त्यशङ्कायां त्वदुक्तरीत्या कथञ्चिदर्थोऽस्त्वित्यर्थः ।**

ಜಾಯಮಾನತ್ವವೆಂಬ ನಿರವಕಾಶಲಿಂಗದಿಂದ ಮುಕ್ತೋಪಸೃಪ್ಯತ್ವಾದಿಗಳನ್ನು ಗೌಣವನ್ನಾಗಿ ವಿವಕ್ಷಿಸಿ ಪೂರ್ವಪಕ್ಷ ಮಾಡಬಹುದಲ್ಲವೇ? ಎಂದರೆ, ಅದೇ ನಿರವಕಾಶವಾದ ಜಾಯಮಾನತ್ವಲಿಂಗದಿಂದ ಆತ್ಮಶಬ್ದವನ್ನೂ ಸಹ ಗೌಣವನ್ನಾಗಿ ವಿವಕ್ಷಿಸಬಹುದು. ಯಾವರೀತಿಯಾಗಿ 'ಪ್ರಕಾಶಾತ್ಮಾ ಪ್ರದೀಪಃ' ಎಂಬಲ್ಲಿರುವ ಆತ್ಮಶಬ್ದಕ್ಕೆ ಸ್ವರೂಪ ಎಂಬರ್ಥವನ್ನಷ್ಟೇ ಮಾಡಲಾಗುತ್ತದೋ, ಅದರಂತೆ ಜಡವಾದ ಪ್ರಕೃತಿಯಲ್ಲಿಯೂ 'ಮಮಾತ್ಮಾ ಭದ್ರಸೇನಃ' ಭದ್ರಸೇನನು ನನಗೆ ತುಂಬಾ ಆತ್ಮೀಯನು ಎಂಬ ಪ್ರಯೋಗದಂತೆ ಆತ್ಮೀಯ ಎಂಬರ್ಥದಲ್ಲಿ ಪ್ರಕೃತಿಯಲ್ಲಿಯೂ ಆತ್ಮಶಬ್ದವನ್ನು ಪ್ರಯೋಗಿಸಬಹುದು. ಹಾಗೂ 'ತನ್ನಿಷ್ಠಸ್ಯ ಮೋಕ್ಷೋಪದೇಶಾತ್' ಎಂಬ ಸೂತ್ರದಲ್ಲಿ ಪ್ರಕೃತಿಯಲ್ಲಿಯೂ ಆತ್ಮಶಬ್ದವನ್ನು ಹೀಗೆ ಪ್ರಯೋಗಿಸಬಹುದಲ್ಲವೇ? ಎಂಬ ಆಶಂಕೆಯನ್ನು ನೀವೇ ಮಾಡಿರುತ್ತೀರಿ. ಅದರ ಪ್ರಕಾರ ಈ ಅಧಿಕರಣದಲ್ಲಿಯೂ ಆತ್ಮಶಬ್ದಕ್ಕೆ ಆತ್ಮೀಯವೆಂಬರ್ಥವನ್ನು ಸ್ವೀಕರಿಸಿ ಪ್ರಕೃತಿಯೂ ಸಹ ಲೋಕಾಧಾರವಾಗಿದೆಯೆಂದು ಪೂರ್ವಪಕ್ಷ ಮಾಡಬಹುದೆಂದರ್ಥ.

ಪರಿಪೂರ್ಣಚಂದ್ರಿಕಾ

**प्रकाशः** – एवं पूर्वपक्षं निरस्य सूत्रार्थमपि निराह – **किञ्चेति** ।। आदिपदेन स्थित्यदनप्रतिपादकशब्दग्रहः । उभाभ्यामुक्तं समाधिं निरस्य भाष्याद्युक्तं स्थापयितुं गतार्थत्वमाशङ्कते – **नन्विति** ।।

ಹೀಗೆ ಇಲ್ಲಿಯ ತನಕ ಪೂರ್ವಪಕ್ಷವನ್ನು ನಿರಾಕರಿಸಿ, ರಾಮಾನುಜರ ಸಿದ್ಧಾಂತವನ್ನೂ ಸಹ 'ಕಿಂಚ' ಇತ್ಯಾದಿ ವಾಕ್ಯಗಳಿಂದ ನಿರಾಕರಿಸುತ್ತಿದ್ದಾರೆ. 'ಮುಕ್ತೋಪಸೃಪ್ಯತ್ವಾದಿ' ಎಂಬಲ್ಲಿರುವ ಆದಿಪದದಿಂದ ಸ್ಥಿತ್ಯದನಪ್ರತಿಪಾದಕವಾದ ಶಬ್ದವನ್ನು ವಿವಕ್ಷಿಸಬೇಕು.

ಈ ಅಧಿಕರಣಕ್ಕೆ ಪುನರುಕ್ತಿದೋಷ ಬರುತ್ತದೆಂಬ ಆಶಂಕೆಯು ಎಲ್ಲರಿಗೂ ಸಮಾನ. ಮೊದಲು ಅದ್ವೈತಿಗಳು ಹಾಗೂ ರಾಮಾನುಜರು ಹೇಳುವ ಸಮಾಧಾನವನ್ನು ನಿರಾಕರಿಸಿ ಶ್ರೀಮದಾಚಾರ್ಯರು ಹೇಳಿದ ಸಮಾಧಾನವನ್ನು ಸ್ಥಾಪನೆ ಮಾಡಲು ಗ್ರಂಥಕಾರರು ಹೊರಟಿದ್ದಾರೆ. ಅದಕ್ಕೋಸ್ಕರ ಮೊದಲು ಪುನರುಕ್ತಿ ದೋಷವನ್ನು 'ನನು' ಇತ್ಯಾದಿ ಗ್ರಂಥದಿಂದ ಆಕ್ಷೇಪಿಸುತ್ತಿದ್ದಾರೆ.

**प्रकाशः – कृत्वाचिन्तयेति** ।। ''प्रपञ्चार्थम्'' इति भाष्यस्य ''तन्मध्यापठितमिति कृत्वाचिन्तयेदमधिकरणं प्रवृत्तमित्यर्थः'' इति भामत्युक्तेरिति भावः ।

ಅದ್ವೈತಿಗಳು ಅದೃಶ್ಯತ್ವಾಧಿಕರಣದಲ್ಲಿ ಹೇಳಿರುವ ದ್ಯುಭ್ವಾದ್ಯಾಯತನತ್ವವನ್ನೇ ಈ ಅಧಿಕರಣದಲ್ಲಿ ವಿವರಣೆ ಮಾಡಲಾಗಿದೆಯೆನ್ನುತ್ತಾರೆ. ಆದ್ದರಿಂದಲೇ ಶಾಂಕರಭಾಷ್ಯದಲ್ಲಿ 'ಪ್ರಪಂಚಾರ್ಥಮ್' ಎಂಬ ಪದವಿದೆ. ಇದನ್ನು ವ್ಯಾಖ್ಯಾನಿಸುತ್ತಾ, ಭಾಮತಿಯಲ್ಲಿ 'ತನ್ಮಧ್ಯೇ ಅಪಠಿತಮಿತಿ ಕೃತ್ವಾಚಿಂತಯಾ ಇದಮಧಿಕರಣಂ ಪ್ರವೃತ್ತಮ್ ಇತ್ಯರ್ಥಃ' ಅದೃಶ್ಯತ್ವಾಧಿಕರಣದ ವಿಷಯವಾಕ್ಯದ ಮಧ್ಯದಲ್ಲಿ ದ್ಯುಭ್ವಾದ್ಯಾಯತನತ್ವವನ್ನು ಹೇಳುತ್ತಿರುವ 'ಯಸ್ಮಿನ್‌ದ್ಯೌಃ' ಎಂಬ ವಾಕ್ಯವು ಪಠಿತವಾಗಿಲ್ಲ ಎಂದು ಇಟ್ಟುಕೊಂಡು ಈ ಅಧಿಕರಣದ ಪೂರ್ವಪಕ್ಷವು ಹೊರಟಿದೆ ಎಂದು ಹೇಳಲಾಗಿದೆ. ಹೀಗೆ 'ಕೃತ್ವಾಚಿಂತೆ' ಎಂಬುದನ್ನು ಅದ್ವೈತ ಭಾಷ್ಯವ್ಯಾಖ್ಯಾನದಲ್ಲಿ ಇರುವುದನ್ನೇ ಇಲ್ಲಿಯೂ 'ಕೃತ್ವಾ ಚಿಂತಯಾ' ಎಂದು ಹೇಳಿದ್ದಾರೆಂದು ತಿಳಿಯಬೇಕು.

**प्रकाशः** – कल्पतरूक्तमाह – **नचेति** ।। गत्यन्तराभावादेवमाश्रीयत इति अत आह – **जायमानत्वेति** ।।

ಕಲ್ಪತರುವಿನಲ್ಲಿ ನೀಡಿದ ಉತ್ತರವನ್ನು 'ನಚ' ಎಂಬ ವಾಕ್ಯದಿಂದ ಅನುವಾದ ಮಾಡಿದ್ದಾರೆ. ಬೇರೆ ಗತಿಯಿಲ್ಲದಿದ್ದಾಗ ಮಾತ್ರ ಕೃತ್ವಾಚಿಂತೆಯನ್ನು ಮಾಡಬೇಕೆಂದು ಗ್ರಂಥಕಾರರು ಹೇಳಿದರು. ಹಾಗಾದರೆ ಪ್ರಕೃತ ಈ ಅಧಿಕರಣದಲ್ಲಿಯೂ ಬೇರೆ ಗತಿಯಿಲ್ಲದ ಕಾರಣದಿಂದಲೇ ಕೃತ್ವಾಚಿಂತೆಯನ್ನು ಮಾಡುತ್ತಿದ್ದೇವೆಂದು ಅದ್ವೈತಿಗಳು ಆಕ್ಷೇಪಿಸಿದರೆ, 'ಜಾಯಮಾನತ್ವ' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

**प्रकाशः** – 'अनुकृतेः' इत्यधिकरणे "असम्भवानुकारसामर्थ्यलक्षणेन लिङ्गेन प्रकरणबाधया तेजोधातुरेव गम्यते" इति भामत्युक्तदिशा तत्र लिङ्गात्प्रकरणबाधेन यथा पूर्वपक्षस्तथेति भावः । **उत्कर्षेण वेति** ।। पूषानुमन्त्रण-मन्त्रस्येवास्मन्मतेऽत्तेत्यधिकरणपूर्वपक्षोक्तदिशेति भावः ।

ಅನುಕೃತ್ಯಧಿಕರಣದಲ್ಲಿ 'ಅಸಂಭವಾನುಕಾರಸಾಮರ್ಥ್ಯಲಕ್ಷಣೇನ ಲಿಂಗೇನ ಪ್ರಕರಣಬಾಧಯಾ ತೇಜೋಧಾತುರೇವ ಗಮ್ಯತೇ' ಅಸಂಭವಾನುಕಾರಸಾಮರ್ಥ್ಯವೆಂಬ ಲಿಂಗದಿಂದ ಪ್ರಕರಣವು ಬಾಧಿತವಾಗುತ್ತದೆ. ಆದ್ದರಿಂದ ತೇಜಸ್ಸೇ ಪೂರ್ವಪಕ್ಷಕ್ಕೆ ವಿಷಯವಾಗುತ್ತದೆಂದು ಭಾಮತಿಯಲ್ಲಿ ಹೇಳಲಾಗಿದೆ. ಇದರಿಂದ ಪ್ರಕರಣವು ಲಿಂಗದಿಂದ ಬಾಧಿತವಾಗುವ ಮೂಲಕ ಪೂರ್ವಪಕ್ಷ ಮಾಡಬಹುದೆಂದು ತಿಳಿಯುತ್ತದೆ. ಹೀಗೆಯೇ ಇಲ್ಲಿಯೂ ಸಹ ಮಾಡಬಹುದಿತ್ತು ಎಂದಭಿಪ್ರಾಯ. 'ಉತ್ಕರ್ಷೇಣ ವಾ' ಎಂಬುದಕ್ಕೆ ಹೀಗರ್ಥ - ಪೂರ್ವಮೀಮಾಂಸೆಯಲ್ಲಿ ಪೂಷಾನುಮಂತ್ರಣವೆಂಬ ಮಂತ್ರವು ಪ್ರಕೃತ ಆ ಯಾಗದಲ್ಲಿ ಸಂಬಂಧ ಪಡುವುದಿಲ್ಲ. ಆದ್ದರಿಂದ ಮತ್ತೊಂದು ಕಡೆ ಅದನ್ನು ಉತ್ಕರ್ಷ ಮಾಡುತ್ತಾರೆ. ಅದರಂತೆ 'ಯಸ್ಮಿನ್‌ದ್ಯೌಃ' ಎಂಬುದು ಅದೃಶ್ಯತ್ವಪ್ರಕರಣದಲ್ಲಿ ಸಂಬಂಧ ಪಡದಿದ್ದಾಗ ಬೇರೆ ಕಡೆ ಉತ್ಕರ್ಷ ಮಾಡಬಹುದು. 'ಅತ್ತಾಚರಾಚರಗ್ರಹಣಾತ್' ಎಂಬ ಸೂತ್ರದ ಪೂರ್ವಪಕ್ಷದಲ್ಲಿ ಈ ವಿಷಯವನ್ನು ನಾವು ಸಮರ್ಥಿಸಿದ್ದೇವೆ.

**प्रकाशः** – **केचित्त्विति** ।। 'यत्तदद्रेश्यम्' इत्यादिकमस्तूक्तरीत्या ब्रह्मप्रकरणम् । 'यस्मिन्द्यौः' इत्यादिकं तु जीवस्यैव प्रकरणम् । इन्द्रियाधारत्वनाडीसम्बद्धत्वजायमान-त्वादिजीवलिङ्गैरिति ब्रह्मप्रकरणविच्छेदाशङ्कायामित्यर्थः ।

ರಾಮಾನುಜರ ಪುನರುಕ್ತಿ ಪರಿಹಾರ ಹೀಗಿದೆ - 'ಯತ್ತದದ್ರೇಶ್ಯಮ್' ಇತ್ಯಾದಿ ವಾಕ್ಯಗಳು ಹಿಂದೆ ಹೇಳಿದ ಪ್ರಕಾರ ಬ್ರಹ್ಮಪ್ರಕರಣವಾಗಲೀ, ಆದರೆ 'ಯಸ್ಮಿನ್‌ದ್ಯೌಃ' ಎಂಬ ವಾಕ್ಯವು ಬ್ರಹ್ಮಪ್ರಕರಣವಾಗುವುದಿಲ್ಲ. ಜೀವನಪ್ರಕರಣವೇ ಆಗುತ್ತದೆ. ಇಂದ್ರಿಯಾಧಾರತ್ವ, ನಾಡೀಸಂಬದ್ಧತ್ವ, ಜಾಯಮಾನತ್ವ ಮೊದಲಾದ ಲಿಂಗಗಳೆಲ್ಲವೂ ಜೀವವಿಷಯಕವೇ ಆಗಿದೆ. ಹೀಗೆ ಬ್ರಹ್ಮಪ್ರಕರಣಕ್ಕೆ ವಿಚ್ಛೇದಾಶಂಕೆಯು ಪ್ರಾಪ್ತವಾದರೆ ಈ ಅಧಿಕರಣವು ಹೊರಟದೆ ಎನ್ನುತ್ತಾರೆ.

**प्रकाशः** – ननु 'यत्तदद्रेश्यम्' इत्यादिनोक्तमदृश्यत्वादिकमनुभवविषयतया दृश्ये जीवे कथं शङ्कितुं शक्यमित्यत आह – **न हीति** ।।

'ಯತ್ತದದ್ರೇಶ್ಯಮ್' ಇತ್ಯಾದಿ ವಾಕ್ಯಗಳಿಂದ ಹೇಳಲ್ಪಟ್ಟ ಅದೃಶ್ಯತ್ವಾದಿಗಳನ್ನು ಅನುಭವಕ್ಕೆ ವಿಷಯನಾದ ಪ್ರಯುಕ್ತ ದೃಶ್ಯನಾದ ಜೀವನಲ್ಲಿ ಆಶಂಕಿಸಲು ಹೇಗೆ ಸಾಧ್ಯ ? ಎಂಬ ಪ್ರಶ್ನೆಗೆ 'ನಹಿ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ.

**प्रकाशः** – द्युभ्वाद्यायतनत्वं जीवेऽनुभवविरुद्धमपि शङ्कमानेन तस्यापि शङ्कितुं शक्यत्वादित्यर्थः । त्वयाऽपीति ।। तत्रैवास्माभिर्विवृतमेतत् ।

ಅನುಭವವಿರುದ್ಧವಾದ ಅದೃಶ್ಯತ್ವವನ್ನು ಜೀವನಲ್ಲಿ ಆಶಂಕಿಸುವುದಾದರೆ ದ್ಯುಭ್ವಾದ್ಯಾಯತನತ್ವವು ಜೀವನಲ್ಲಿ ಅನುಭವವಿರುದ್ಧವಾದರೂ ಸಹ ಆಶಂಕಿಸಲು ತೊಂದರೆಯಿಲ್ಲ ಎಂದು 'ನಹಿ' ಇತ್ಯಾದಿ ವಾಕ್ಯದ ಅಭಿಪ್ರಾಯ. 'ತ್ವಯಾऽಪಿ' ಎಂಬ ವಾಕ್ಯದಿಂದ ಇಲ್ಲಿ ಪ್ರಸ್ತಾಪನೆ ಮಾಡಿದ ವಿಷಯವನ್ನು ಸರ್ವಗತತ್ವಾಧಿಕರಣದಲ್ಲಿಯೇ ನಾವು ವಿವರಿಸಿದ್ದೇವೆ ಎಂದು ತಿಳಿಸಿದ್ದಾರೆ.

**प्रकाशः** – यत्कश्चिदाह – द्युभ्वाद्यायतनं वायुप्रधानजीवानामन्यतम उत शिव इति संशये वाय्वादिलिङ्गदर्शनेन तेषामन्यतम इति प्राप्ते आत्मशब्दान्मुक्तोपसृप्यत्वलिङ्गात् 'अथ परा यया तदक्षरम्' इति प्रकरणाच्च शिव एवेति सिद्धान्त इति तदपेशलम् ।

ಶೈವರ ಅಧಿಕರಣಶರೀರ ಹೀಗಿದೆ - ದ್ಯುಭ್ವಾದ್ಯಾಯತನನು ವಾಯು, ಪ್ರಕೃತಿ, ಜೀವ ಈ ಮೂವರಲ್ಲಿ ಯಾರಾದರೂ ಒಬ್ಬರಾಗುತ್ತಾರೋ, ಅಥವಾ ಶಿವನೋ ? ಎಂದು ಸಂಶಯ. ವಾಯು ಮೊದಲಾದವರ ಲಿಂಗವು ಕೇಳಿಸುತ್ತಿರುವುದರಿಂದ ಅವರಲ್ಲಿ ಯಾರಾದರೂ ಒಬ್ಬರು ದ್ಯುಭ್ವಾದ್ಯಾಯತನರೆಂದು ಪೂರ್ವಪಕ್ಷ. ಆತ್ಮಶಬ್ದ, ಮುಕ್ತೋಪಸೃಪ್ಯತ್ವವೆಂಬ ಲಿಂಗ, ಪರವಿದ್ಯಾವಿಷಯತ್ವ ಹಾಗೂ ಪ್ರಕರಣ ಇವುಗಳ ಬಲದಿಂದ ಶಿವನೇ ಲೋಕಾಧಾರನಾಗಿದ್ದಾನೆಂದು ಸಿದ್ಧಾಂತ.

ಇವರ ಅಧಿಕರಣಶರೀರವು ಹೇಯವಾಗಿದೆ.

**प्रकाशः** – "लोकाश्च लोकिनश्च विष्णावेवोताश्च प्रोताश्च" इति विष्णुप्रापकस्यापि सत्त्वात् । आत्मश्रुत्यादेर्भाष्योक्तवचनजातेन विष्ण्वेकनिष्ठत्वात् । रुद्रश्रुतिलिङ्गानां विष्ण्वेकनिष्ठताया भाष्य एव प्रमाणगणेन समर्थनाच्च ।

'ಲೋಕಾಶ್ಚ, ಲೋಕಿನಶ್ಚ, ವಿಷ್ಣಾವೇವೋತಾಶ್ಚ, ಪ್ರೋತಾಶ್ಚ' ಇತ್ಯಾದಿಯಾಗಿ ವಿಷ್ಣುಪ್ರಾಪಕಲಿಂಗಗಳೂ ಸಹ ಇರುವಾಗ ವಿಷ್ಣುವನ್ನು ಬಿಡಲು ಕಾರಣವಿಲ್ಲ. ಮತ್ತು ಭಾಷ್ಯದಲ್ಲಿ ಉದಾಹರಿಸಿದ ಅನೇಕ ಶ್ರುತಿ, ಸ್ಮೃತಿಗಳ ಆಧಾರದಿಂದ ಕೇವಲ ವಿಷ್ಣುಪರವಾಗಿದೆಯೆಂದು ನಿರ್ಣಯವಾಗಿದೆ. ಮತ್ತು ರುದ್ರ ವಿಷಯಕವಾದ ಶ್ರುತಿಲಿಂಗಗಳೆಲ್ಲವೂ ಸಹ ವಿಷ್ಣುಪರವೇ ಆಗಿವೆಯೆಂಬ ವಿಚಾರವನ್ನು ಅನೇಕ ಪ್ರಮಾಣಗಳ ಆಧಾರದಿಂದ ಭಾಷ್ಯದಲ್ಲಿಯೇ ಸಮರ್ಥನೆ ಮಾಡಿದ್ದಾರೆ.

**प्रकाशः** – आथर्वणभाष्ये सर्वशब्दप्रतिपाद्यत्वस्य सर्वशब्दवाच्यत्वस्य सर्वोत्तमत्वेन तस्यैव ज्ञेयत्वस्य प्रमाणनिचयोदाहरणेन तत्रैव समर्थितत्वात् ।

ದ್ಯುಭ್ವಾದ್ಯಧಿಕರಣ (೧-೩-೧)

विस्तरभयान्नात्र तानि लिख्यन्ते । प्रकरणस्य वैष्णवतायाः प्रागेव समर्थितत्वाच्चेति ।

ಆಥರ್ವಣ ಭಾಷ್ಯದಲ್ಲಿ ಸರ್ವಶಬ್ದಪ್ರತಿಪಾದ್ಯತ್ವರೂಪವಾದ ಸರ್ವಶಬ್ದವಾಚ್ಯತ್ವವು ಸರ್ವೋತ್ತಮನಾದ ವಿಷ್ಣುವಿನಲ್ಲೇ ಉಪಪನ್ನವಾಗುತ್ತದೆ. ಆದ್ದರಿಂದ ಅವನೇ ಜ್ಞೇಯನಾಗಿದ್ದಾನೆಂದು ಅನೇಕ ಪ್ರಮಾಣಗಳ ಉದಾಹರಣೆಯಿಂದ ಸಮರ್ಥಿಸಿದ್ದಾರೆ. ಗ್ರಂಥವು ವಿಸ್ತಾರವಾಗುತ್ತದೆಂಬ ಭಯದಿಂದ ಇಲ್ಲಿ ಆ ಪ್ರಮಾಣಗಳನ್ನು ಬರೆದಿರುವುದಿಲ್ಲ. ಹಾಗೂ ಪ್ರಕರಣವೂ ಸಹ ವಿಷ್ಣುಪರವೇ ಆಗಿದೆಯೆಂದು ಈ ಹಿಂದೆಯೇ ಸಮರ್ಥಿಸಿದ್ದಾಗಿದೆ.

**प्रकाशः** – "प्रकरणात्" इति सूत्रे टीकायां "द्वे विद्ये वेदितव्ये" इति परविद्याविषयस्य वस्तुनोऽत्रारभ्याधीतत्वेनास्य विष्णुप्रकरणत्वात्" इति वाक्ये विरुद्धप्रतीतिं निरस्यन्नर्थमाह – **आरभ्येति** ।।

'ಪ್ರಕರಣಾತ್' ಎಂಬ ಸೂತ್ರ ಟೀಕೆಯಲ್ಲಿ 'ದ್ವೇ ವಿದ್ಯೇ ವೇದಿತವ್ಯೇ' ಇತಿ ಪರವಿದ್ಯಾವಿಷಯಸ್ಯ ವಸ್ತುನೋಽತ್ರಾರಭ್ಯಾಧೀತತ್ವೇನಾಸ್ಯ ವಿಷ್ಣುಪ್ರಕರಣತ್ವಾತ್' ಎಂದು ಹೇಳಿದ್ದಾರೆ. ಪರವಿದ್ಯಾವಿಷಯತ್ವವನ್ನು ಆರಂಭದಲ್ಲಿ ಹೇಳಿರುವುದರಿಂದ ವಿಷ್ಣು ಪ್ರಕರಣವಾಗಿದೆಯೆಂದು ಈ ವಾಕ್ಯದ ಅಭಿಪ್ರಾಯ. ಆದರೆ 'ಆರಭ್ಯ ಅಧೀತತ್ವೇನ' ಎಂಬ ಪದಕ್ಕೆ ಈ ಅರ್ಥವೆಂದು ಸ್ಪಷ್ಟವಾಗಿ ಅರ್ಥವಾಗುವುದಿಲ್ಲ. ಹಾಗೂ ವಿರುದ್ಧಾರ್ಥದ ಪ್ರತೀತಿಯೇ ಬರುತ್ತದೆ. ಆದ್ದರಿಂದ ಗ್ರಂಥಕಾರರು 'ಆರಭ್ಯ' ಎಂಬ ವಾಕ್ಯದಿಂದ ವ್ಯಾಖ್ಯಾನಿಸುತ್ತಿದ್ದಾರೆ. ಅಂದರೆ ಬೇರೆ ಪ್ರಕರಣದಲ್ಲಿ ಪ್ರಸಕ್ತನಾದವನನ್ನು ಇಲ್ಲಿ ಅಧ್ಯಯನ ಮಾಡಲಾಗುತ್ತಿದೆ ಎಂದರ್ಥವಲ್ಲ ಎಂಬುದು ಇದರಿಂದ ಸ್ಪಷ್ಟವಾಗುತ್ತದೆ.

**प्रकाशः** – **स्पष्टमिति** ।। उपन्यासमुखेन विवृतमिति भावः । सूत्रोक्तभेदस्य मिथ्यात्वशङ्कां निरस्यान्ते "अतो न मिथ्याभेदपरत्वं श्रुतेः" इत्युक्तम् । तस्य सूत्रारूढतामाह –**अतो न मिथ्येति** ।।

'ಸ್ಪಷ್ಟಮ್' ಎಂದರೆ - ಉಳಿದ ಟೀಕೆಯ ಕಠಿಣಪದಾರ್ಥಗಳನ್ನು ಉಪನ್ಯಾಸಮುಖದಿಂದ ವ್ಯಾಖ್ಯಾನಿಸಿದ್ದಾಗಿದೆ ಎಂದರ್ಥ. ಟೀಕೆಯಲ್ಲಿ ಸೂತ್ರದಲ್ಲಿ ಹೇಳಲ್ಪಟ್ಟ ಭೇದವು ಮಿಥ್ಯಾರೋಪವಾಗಿದೆಯೆಂಬ ಆಶಂಕೆಯನ್ನು ನಿರಾಕರಿಸಿ, ಕೊನೆಯಲ್ಲಿ 'ಅತೋ ನ ಮಿಥ್ಯಾಭೇದಪರತ್ವಂ ಶ್ರುತೇಃ' ಶ್ರುತಿಗೆ ಮಿಥ್ಯಾಭೇದಪರತ್ವವನ್ನು ಹೇಳಬಾರದು ಎಂದು ಹೇಳಿದ್ದಾರೆ. ಟೀಕೆಯ ಈ ಮಾತನ್ನು ಗ್ರಂಥಕಾರರು ಸೂತ್ರಾರೂಢ ಮಾಡುತ್ತಿದ್ದಾರೆ. 'ಅತೋ ನ ಮಿಥ್ಯಾ' ಇತ್ಯಾದಿ ವಾಕ್ಯದಿಂದ.

**प्रकाशः** – सूत्रेऽतच्छब्देन मिथ्यात्वविरोधिसत्यत्वं गृह्यत इत्युक्तं भवति । तच्छब्देनानुमानं परामृश्यार्थान्तरमाह – **अनुमानेति** ।। छ ।।

**।। इति श्रीमत्सर्वतन्त्रस्वतन्त्रसुधीन्द्रतीर्थगुरुपादशिष्यराघवेन्द्रयतिकृते**

**चन्द्रिकाप्रकाशे द्युभ्वाद्यधिकरणं सम्पूर्णम् ।।**

ಪರಿಪೂರ್ಣಚಂದ್ರಿಕಾ

ಸೂತ್ರದಲ್ಲಿರುವ 'ಅತಚ್ಛಬ್ದಾತ್' ಎಂಬುದಕ್ಕೆ ಮಿಥ್ಯಾತ್ವಕ್ಕೆ ವಿರುದ್ಧವಾದ ಸತ್ಯತ್ವಪ್ರತಿಪಾದಕ ಶಬ್ದವಿರುವುದರಿಂದ ಎಂಬುದಾಗಿ ಒಂದು ಬಗೆಯ ವ್ಯಾಖ್ಯಾನವನ್ನು ವಿವಕ್ಷಿಸಿದ್ದಾರೆ. ಹಾಗೂ ತಚ್ಛಬ್ದದಿಂದ ಅನುಮಾನವನ್ನು ಪರಾಮರ್ಶಿಸಿ ಅನುಮಾನಕ್ಕೆ ಮೂಲಭೂತವಾದ ಮಿಥ್ಯಾತ್ವಪ್ರತಿಪಾದಕವಾದ ಶಬ್ದವಿರುವುದಿಲ್ಲ ಎಂಬ ಎರಡನೆಯ ವ್ಯಾಖ್ಯಾನವನ್ನು 'ಅನುಮಾನ ಮೂಲಭೂತಸ್ಯ' ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ.

ಇಲ್ಲಿಗೆ ಶ್ರೀರಾಘವೇಂದ್ರತೀರ್ಥ ಪೂಜ್ಯಯತಿಗಳಿಂದ ರಚಿತವಾದ ದ್ಯುಭ್ವಾದ್ಯಧಿಕರಣದ ಪ್ರಕಾಶ ಟಿಪ್ಪಣಿಯ ಕನ್ನಡಾನುವಾದವು ಸಮಾಪ್ತವಾಯಿತು.

**गुरुराजीयम्** – ननु शुद्धस्य मुक्ताभेदेन तत्प्राप्यत्वासम्भवेऽपि सगुणस्य ब्रह्मणो मुक्ताभेदाभावेन तस्य मुक्तप्राप्यत्वमुपपन्नमित्यत आह – **सगुणेति** ।। **एवं सूत्रान्तरेति** ।। यत्र साक्षाद्भेदव्यपदेशः सम्भवति तत्र भेदकव्यपदेश-ग्रहणानुपपत्तिरूह्येत्यर्थः । अन्यार्थः स्वरूपार्थः ।। छ ।। द्युभ्वाद्यधिकरणम् ।।१।।

।। इति श्रीकेशवभट्टारकेण विरचितायां भावदीपिकायां द्युभ्वाद्यधिकरणं सम्पूर्णम् ।। १ ।।




ರಾಮಾನುಜರೂ ಸಹ 'ಯಸ್ಮಿನ್‌ದ್ಯೌಃ' ಎಂಬುದನ್ನೇ ವಿಷಯವಾಕ್ಯವೆನ್ನುತ್ತಾರೆ. ಆದರೆ ಈ ಅಧಿಕರಣದಲ್ಲಿ ಜೀವನು ಮಾತ್ರ ಪೂರ್ವಪಕ್ಷಕ್ಕೆ ವಿಷಯನು. ಪ್ರಕೃತಿ ಮೊದಲಾದವುಗಳು ಪೂರ್ವಪಕ್ಷಕ್ಕೆ ವಿಷಯವಲ್ಲವೆನ್ನುತ್ತಾರೆ. ಏಕೆಂದರೆ 'ಗೌಣಶ್ಚೇನ್ನಾತ್ಮಶಬ್ದಾತ್' ಎಂಬ ಈಕ್ಷತ್ಯಧಿಕರಣ ಸೂತ್ರದಲ್ಲಿ ಆತ್ಮಶಬ್ದವಾಚ್ಯತ್ವವನ್ನು ಪ್ರಕೃತಿಗೆ ನಿರಾಕರಣ ಮಾಡಿದ್ದರಿಂದ ಪುನಃ ಪೂರ್ವಪಕ್ಷ ಮಾಡಲು ಸಾಧ್ಯವಿಲ್ಲ. 'ನಾನುಮಾನಮ್' ಎಂಬ ಸೂತ್ರದಲ್ಲಿ ಪ್ರಕೃತಿಯನ್ನು ನಿರಾಕರಣೆ ಮಾಡಿದ್ದು ಕೇವಲ ದೃಷ್ಟಾಂತಕ್ಕೋಸ್ಕರ. ಹೇಗೆ ಪ್ರಕೃತಿ ಪ್ರಾಪಕವಾದ ಶಬ್ದಗಳು ಇಲ್ಲದ ಕಾರಣ ಪ್ರಕೃತಿಯು ಲೋಕಾಧಾರವಾಗುವುದಿಲ್ಲವೋ ಅದರಂತೆ ಜೀವನೂ ಸಹ ಲೋಕಾಧಾರನಾಗುವುದಿಲ್ಲವೆಂದು ಅದರ ಅಭಿಪ್ರಾಯ. 'ನಾನುಮಾನಮ್ ಅತಚ್ಛಬ್ದಾತ್, ಪ್ರಾಣಭೃಚ್ಚ' ಎಂಬುದನ್ನು ಒಂದೇ ಸೂತ್ರವೆನ್ನುವುದು ಇವರ ಮತ್ತೊಂದು ಅಭಿಪ್ರಾಯ.

ಇವರ ಅಧಿಕರಣಶರೀರವೂ ಸಹ ತಪ್ಪಾಗಿದೆ. ಪ್ರಕೃತಿಯು ಪೂರ್ವಪಕ್ಷಕ್ಕೆ ವಿಷಯವಾಗದಿರಬಹುದು. ಆದರೆ ರುದ್ರ ಹಾಗೂ ವಾಯುಗಳು ಪೂರ್ವಪಕ್ಷಕ್ಕೆ ವಿಷಯವಾಗಬಹುದಲ್ಲವೇ? ಇದಕ್ಕೆ ಅವರಲ್ಲಿ ಉತ್ತರವಿಲ್ಲ. ಮತ್ತು ಆತ್ಮಶಬ್ದದ ಬಲದಿಂದ ಪ್ರಕೃತಿಯು ಪೂರ್ವಪಕ್ಷಕ್ಕೆ ವಿಷಯವಾಗುವುದಿಲ್ಲವೆಂದಮೇಲೆ ಅದೇ

ಆನಂದಮಯಾಧಿಕರಣದಲ್ಲಿ ಮುಕ್ತಪ್ರಾಪ್ಯತ್ವಧರ್ಮವನ್ನು ಜೀವನಲ್ಲಿ ನಿರಾಕರಿಸಲಾಗಿದೆ. ಪ್ರಕೃತಿಯನ್ನು ಪೂರ್ವಪಕ್ಷದಲ್ಲಿ ಸೇರಿಸದೇ ಬಿಟ್ಟರೆ, ಜೀವನನ್ನೂ ಸಹ ಪೂರ್ವಪಕ್ಷದಲ್ಲಿ ಸೇರಿಸಬಾರದು. ಆದ್ದರಿಂದ ಈ ಅಧಿಕರಣದ ಪೂರ್ವಪಕ್ಷಕ್ಕೆ ವಿಷಯವೇ ಇಲ್ಲದಂತಾಗುತ್ತದೆ. ಜಾಯಮಾನತ್ವ ಮೊದಲಾದ ಜೀವವಿಷಯಕವಾದ ಪೂರ್ವಪಕ್ಷಲಿಂಗಗಳಿಂದ ಮುಕ್ತೋಪಸೃಪ್ಯತ್ವವನ್ನು ಗೌಣವನ್ನಾಗಿ ವ್ಯಾಖ್ಯಾನಿಸಬೇಕೆನ್ನುವುದಾದರೆ ಪ್ರಕೃತಿ-ವಿಷಯದಲ್ಲಿರುವ ನಿರವಕಾಶಲಿಂಗಗಳಿಂದಲೇ ಆತ್ಮಶಬ್ದವನ್ನೂ ಸಹ ಗೌಣವನ್ನಾಗಿ ವ್ಯಾಖ್ಯಾನಿಸಬೇಕಾಗುತ್ತದೆ. ಆದ್ದರಿಂದ ಪ್ರಕೃತಿಯು ಪೂರ್ವಪಕ್ಷಕ್ಕೆ ವಿಷಯವಲ್ಲ. ಜೀವನು ಮಾತ್ರವೆಂಬ ವಿಷಯ ಎಂಬ ವಿಚಾರದಲ್ಲಿ ಅರ್ಥವಿಲ್ಲ.

ಅದೃಶ್ಯತ್ವಾಧಿಕರಣದಿಂದ ಈ ಅಧಿಕರಣಕ್ಕೆ ಪುನರುಕ್ತಿ ಬರುತ್ತದೆಂಬ ದೋಷ. ಮೂವರಿಗೂ ಸಮಾನ. ಏಕೆಂದರೆ 'ಯತ್ತದದ್ರೇಶ್ಯಮ್' ಎಂಬ ವಾಕ್ಯವು ಯಾವ ಪ್ರಕರಣದಲ್ಲಿದೆಯೋ, ಅದೇ ಪ್ರಕರಣದಲ್ಲಿ 'ಯಸ್ಮಿನ್ದ್ಯೌಃ' ಎಂಬ ವಾಕ್ಯವೂ ಸಹ ಇರುತ್ತದೆ. ಅದೃಶ್ಯತ್ವಾಧಿಕರಣದಿಂದಲೇ ಲೋಕಾಧಾರತ್ವವನ್ನು ವಿಷ್ಣುವಿನಲ್ಲಿ ಸಮರ್ಥಿಸಿದ್ದರಿಂದ ಪುನಃ ಅದನ್ನೇ ಇಲ್ಲಿ ಸಮರ್ಥಿಸಿದರೆ ಪುನರುಕ್ತಿ ಬರುತ್ತದೆ. ಈ ಶಂಕೆಗೆ ಅದ್ವೈತಿಗಳು 'ಯಸ್ಮಿನ್ದ್ಯೌಃ' ಎಂಬ ವಾಕ್ಯವು ಪ್ರಕರಣದಲ್ಲಿ ಇಲ್ಲವೆಂದು ತಿಳಿದುಕೊಂಡು ಪೂರ್ವಪಕ್ಷದಲ್ಲಿ ಉತ್ತರಿಸುತ್ತಾರೆ. ಇದು ತಪ್ಪು. ಜಾಯಮಾನತ್ವ ಮೊದಲಾದ ಲಿಂಗಗಳಿಂದ ಸಂಪೂರ್ಣಪ್ರಕರಣವೇ ಜೀವಪರವಾಗುತ್ತದೆಂಬ ಅಧಿಕಾಶಂಕೆಯನ್ನು ಮಾಡಲು ಬರುವಾಗ ಆ ವಾಕ್ಯವನ್ನು ಇಲ್ಲವೆಂದು ತಿಳಿದುಕೊಳ್ಳಬೇಕೆಂಬ ಉತ್ತರವು ತಪ್ಪಾಗುತ್ತದೆ. ರಾಮಾನುಜರು 'ಯತ್ತದದ್ರೇಶ್ಯಮ್' ಎಂಬುದು ಬ್ರಹ್ಮಪರವಾದರೂ ಸಹ ಜೀವವಿಷಯಕವಾದ ಇಂದ್ರಿಯಾಧಾರತ್ವ ಮೊದಲಾದ ಲಿಂಗಗಳು ಕೇಳಿಸುತ್ತಿವೆ. ಆದ್ದರಿಂದ 'ಯಸ್ಮಿನ್ದ್ಯೌಃ' ಎಂಬ ಪ್ರಕರಣವೇ ಬೇರೆಯಾಗುತ್ತದೆ. ಪ್ರಕರಣವಿಚ್ಛೇದಪ್ರಾಪಕವು ಇದ್ದಾಗ ಪ್ರಕರಣಭೇದವನ್ನು ಒಪ್ಪುವುದು ಅನಿವಾರ್ಯವೆಂದು ಉತ್ತರಿಸುತ್ತಾರೆ. ಇದೂ ಸಹ ತಪ್ಪು. ಒಂದೇ ಪ್ರಕರಣವೆಂದು ವಿವಕ್ಷಿಸಿದಾಗಲೂ ಪೂರ್ವಪಕ್ಷವನ್ನು ಮಾಡಲು ಬರುವಾಗ ಭಿನ್ನಪ್ರಕರಣವೆಂದು ಹೇಳುವುದು ಸರಿಯಲ್ಲ. ಮತ್ತು ಅನುಭವವಿರುದ್ಧವಾದ ಲೋಕಾಧಾರತ್ವವನ್ನು ಜೀವನಲ್ಲಿ ಆಕ್ಷೇಪಿಸುವ ರಾಮಾನುಜರು ಸುಲಭವಾಗಿ ಆಕ್ಷೇಪಿಸಬಹುದಾದ ಅದೃಶ್ಯತ್ವವನ್ನೇಕೆ ಬಿಡುತ್ತಾರೆಂದು ಅರ್ಥವಾಗದ ಸಂಗತಿ. ಆದ್ದರಿಂದ ಅದೃಶ್ಯತ್ವಾಧಿಕರಣದ ಮೇಲೆ ಬರುವ ಹೆಚ್ಚಿನ ಆಶಂಕೆಯ ಪರಿಹಾರಕ್ಕೋಸ್ಕರ ಈ ಅಧಿಕರಣವು ಹೊರಟಿರುತ್ತದೆಂಬ ಭಾಷ್ಯ ಹಾಗೂ ಟೀಕೆಗಳಲ್ಲಿರುವ ಮಾಡಿರುವ ಸಮರ್ಥನೆಯು ಅತ್ಯಂತ ಸಂಗತವಾಗಿದೆ.

////////////////////////////////////////////

# ದ್ಯುಭ್ವಾದ್ಯಧಿಕರಣ

(೧-೩-೧)

## ಭಾಗ -೩

ನ್ಯಾಯವಿವರಣ, ನ್ಯಾಯವಿವರಣಪಂಚಿಕಾ,
ಅಣುಭಾಷ್ಯ, ತತ್ವಮಂಜರೀ,
ತಂತ್ರದೀಪಿಕಾ, ನ್ಯಾಯಮುಕ್ತಾವಳಿ ಗ್ರಂಥಗಳ
ಸರಳ ಕನ್ನಡ ಅನುವಾದ

* * *

ಸೂತ್ರಾರ್ಥರತ್ನಾವಳಿ ಗ್ರಂಥದ ಸಂಸ್ಕೃತ ಮೂಲ

॥ ಶ್ರೀಗುರುಭ್ಯೋ ನಮಃ ॥

श्रीमदानन्दतीर्थभगवत्पादाचार्यविरचितम्

# न्यायविवरणम्

श्री जयतीर्थविरचिता

# न्यायविवरणपञ्चिका

॥ अथ प्रथमाध्यायस्य तृतीयः पादः ॥

## द्युभ्वाद्यधिकरणम् (१।३।१)

**न्यायविवरणम् – हरिः ॐ ॥ 'प्राणानां ग्रन्थिरसि' । 'रुद्रो वै लोकायतनम् ।' 'वायुना वै गौतमसूत्रेणायं च लोकः परश्च लोकः सर्वाणि भूतानि सन्दृब्धानि भवन्ति' । 'सर्वे वा एते प्राणाश्च प्राणिनश्च देवाश्च दिव्यानि च लोकाश्च लोकिनश्चालोकाश्चालोकिनश्च विष्णावेवोताश्च प्रोताश्च भवन्ति' इत्यादेः द्युभ्वाद्यायतनत्वमज्ञानां साधारणं लिङ्गम् ॥१॥**

'ಯಸ್ಮಿನ್ ದ್ಯೌಃ' ಎಂಬ ವಾಕ್ಯದಲ್ಲಿ ಹೇಳಲ್ಪಟ್ಟ ದ್ಯುಭ್ವಾದ್ಯಾಯತನತ್ವ ಎಂಬ ಲಿಂಗವು ರುದ್ರ, ವಾಯು, ವಿಷ್ಣು ಮೂವರಲ್ಲಿಯೂ ಸಾಧಾರಣವಾಗಿದೆ. ಅದು ಹೀಗೆ --

'ಎಲೈ ರುದ್ರನೇ! ನೀನು ಇಂದ್ರಿಯಗಳಿಗೆ ಅಭಿಮಾನಿಯಾಗಿರುವಿ. ದೇವತೆಗಳಿಗೆ ಆಶ್ರಯನಾಗಿರುವಿ'. 'ಸಮಸ್ತಲೋಕಗಳಿಗೂ ಸಹ ಆಶ್ರಯನಾಗಿರುವಿ. ಹೀಗೆ ರುದ್ರನಲ್ಲಿ ಸಾಧಾರಣವಾಗಿದೆ'. ಮತ್ತು,

'ಎಲೈ ಗೌತಮರೇ ಸರ್ವಜಗತ್ತಿಗೆ ಆಶ್ರಯರಾಗಿರುವ ವಾಯುದೇವರಿಂದಲೇ ಈ ಲೋಕವು ಪರಲೋಕವು ಸಮಸ್ತ ಭೂತಗಳೂ ಸಹ ಸ್ಥಿತಿಯನ್ನು ಹೊಂದಿವೆ' ಹೀಗೆ ವಾಯುದೇವನಲ್ಲಿ ಪ್ರಸಿದ್ಧವಾಗಿದೆ'.

ಮತ್ತು, 'ಸರ್ವೇ ವಾ' ಇತ್ಯಾದಿಶ್ರುತಿಯಿಂದ ಎಲ್ಲ ಇಂದ್ರಿಯಗಳು, ದೇಹವುಳ್ಳ ಜೀವರು, ದೇವತೆಗಳು ಸ್ವರ್ಗಲೋಕದಲ್ಲಿರುವ ಕಲ್ಪವೃಕ್ಷ ಮೊದಲಾದ ವಸ್ತುಗಳು, ಭೂ ಮೊದಲಾದ ಲೋಕಗಳು, ಭೂರ್ಲೋಕಗಳಿಗೆ ಅಭಿಮಾನಿಯಾದ ದೇವತೆಗಳು ಭೂರಾದಿ ಲೋಕಗಳಿಗಿಂತ ಭಿನ್ನವಾದ ವೈಕುಂಠಾದಿಲೋಕಗಳು, ಆ

ಲೋಕಗಳಲ್ಲಿರುವ ಸಕಲ ಮುಕ್ತಜೀವರು ಎಲ್ಲರೂ ಸಹ ವಿಷ್ಣುವನ್ನೇ ಆಶ್ರಯಿಸಿದ್ದಾರೆ. ಅವನನ್ನೇ ಅನನ್ಯವಾಗಿ ಹೊಂದಿದ್ದಾರೆ. ಹೀಗೆ ವಿಷ್ಣುವಿನಲ್ಲಿಯೂ ಸಾಧಾರಣವಾಗಿದೆ.

ಇವೇ ಮೊದಲಾದ ಶ್ರುತಿಗಳಿಂದ ದ್ಯುಭ್ವಾದ್ಯಾಯತನತ್ವವೆಂಬ ಲಿಂಗವು ನ್ಯಾಯಾನುಸಂಧಾನವಿಲ್ಲದ ಅಜ್ಞಾನಿಗಳಿಗೆ ರುದ್ರಾದಿಗಳಲ್ಲಿ ಸಾಧಾರಣವಾಗಿ ಪ್ರತೀತವಾಗುತ್ತದೆ. ಆದರೆ 'ರುಜಂ ದ್ರಾವಯತೇ ಯಸ್ಮಾತ್' ಇತ್ಯಾದಿ ನಿಷ್ಪತ್ತಿಯಿಂದ ರುದ್ರ, ವಾಯು ಮೊದಲಾದ ಶಬ್ದಗಳೆಲ್ಲವೂ ಭಗವತ್ಪರವೇ ಆಗಿದೆ ಎಂದು ತಿಳಿಯಬೇಕು.

**टीका – तृतीयेऽस्मिन् पादे अनुव्याख्यायामधिकरणविषयाः सङ्गृह्योक्ताः ।**

**लिङ्गं साधारणं शब्दौ स्थानं लिङ्गमनुग्रहः ।**

**पुनः शब्दा लिङ्गशब्दौ विचार्या द्विःस्थिता इह ।। इति ।**

ಅನುವ್ಯಾಖ್ಯಾನದಲ್ಲಿ ಮೂರನೆಯ ಪಾದದ ಎಲ್ಲ ಅಧಿಕರಣಗಳ ವಿಷಯಗಳನ್ನು ಸಂಗ್ರಹಿಸಿ ಹೇಳಿರುತ್ತಾರೆ. ಅದು ಹೀಗೆ —

ಲಿಂಗಂ ಸಾಧಾರಣಂ ಶಬ್ದೌ ಸ್ಥಾನಂ ಲಿಂಗಮನುಗ್ರಹಃ ।

ಪುನಃ ಶಬ್ದಾ ಲಿಂಗಶಬ್ದೌ ವಿಚಾರ್ಯಾ ದ್ವಿಃಸ್ಥಿತಾ ಇಹ ॥

ರುದ್ರ, ವಾಯು, ವಿಷ್ಣು ಇವರೆಲ್ಲರಲ್ಲಿಯೂ ಸಾಧಾರಣವಾದ ದ್ಯುಭ್ವಾದ್ಯಾಯತನತ್ವವೆಂಬ ಲಿಂಗ; ಹಾಗೂ ಪ್ರಾಣ ವಿಷ್ಣು, ಇವರಲ್ಲಿ ಸಾಧಾರಣವಾದ ಭೂಮಾ ಎಂಬ ಶಬ್ದ; ವಿಷ್ಣು, ಹಾಗೂ ಚೇತನಪ್ರಕೃತಿಗಳಲ್ಲಿ ಸಾಧಾರಣವಾದ ಅಕ್ಷರಶಬ್ದ; ಹಾಗೂ ವಿಷ್ಣು ಪ್ರಕೃತಿಗಳಲ್ಲಿ ಸಾಧಾರಣವಾದ ಸೃಷ್ಟಿಸ್ಥಾನ; ವಿಷ್ಣು ಆಕಾಶ ಜೀವರಲ್ಲಿ ಸಾಧಾರಣವಾದ ಹೃತ್ಪದ್ಮಮಧ್ಯಸ್ಥವೆಂಬ ಲಿಂಗ; ಜ್ಞಾನಿ, ವಿಷ್ಣು ಇವರಲ್ಲಿ ಸಾಧಾರಣವಾದ ಅನುಕೂಲ್ಯದಿಂದ ಸ್ವೀಕರಿಸುವಿಕೆ; ಈಶಾನಶಬ್ದ, ವಜ್ರಶಬ್ದ, ಜ್ಯೋತಿಃಶಬ್ದ, ಆಕಾಶಶಬ್ದ ಹಾಗೂ ಸ್ವಪ್ನಾದಿದರ್ಶನರೂಪವಾದ ಲಿಂಗ, ಬ್ರಾಹ್ಮಣಶಬ್ದ ಇವುಗಳು ಈ ಅಧಿಕರಣದಲ್ಲಿ ವಿಚಾರಮಾಡಲು ಅರ್ಹವಾಗಿವೆ -- ಎಂದು ಈ ಶ್ಲೋಕದ ಅಭಿಪ್ರಾಯ.

**तदिदं दुर्गमार्थं न्यायमालावाक्यविवरणप्रसङ्गेनादौ तावत् तद्विवृणोति । विषयावगतिपूर्वकत्वात् पूर्वोत्तरपक्षन्यायावगतेः ।**

ಈ ಶ್ಲೋಕದ ಅರ್ಥವು ಸ್ವಲ್ಪ ಕಠಿಣವಾಗಿರುವುದರಿಂದ ನ್ಯಾಯಮಾಲೆಯ ವಾಕ್ಯವನ್ನು ವಿವರಿಸುವ ಮೂಲಕ ಮೊದಲು ಅದನ್ನೇ ವಿವರಿಸುತ್ತಿದ್ದಾರೆ. ವಿಷಯವನ್ನು ತಿಳಿದ ಮೇಲಷ್ಟೇ ಪೂರ್ವಪಕ್ಷನ್ಯಾಯವನ್ನು ಹಾಗೂ ಸಿದ್ಧಾಂತನ್ಯಾಯವನ್ನು ತಿಳಿಯಲು ಸಾಧ್ಯ.

ದ್ಯುಭ್ವಾದ್ಯಧಿಕರಣ (೧-೩-೧)

**अत्र 'द्युभ्वाद्यायतनं स्वशब्दात्' इति प्रथमाधिकरणसाधारणं लिङ्गं विचार्यमित्युक्तम् । किं तल्लिङ्गम्? कुत्र च साधारणम्? कथं च साधारणम्? साधारणत्वे च कथं तस्य भगवदेकविषयता? इत्यत आह – प्राणानामिति ॥**

ಮೊದಲು 'ದ್ಯುಭ್ವಾದ್ಯಾಯತನಂ ಸ್ವಶಬ್ದಾತ್' ಎಂಬ ಪ್ರಥಮಾಧಿಕರಣದಲ್ಲಿ ಸಾಧಾರಣವಾದ ಲಿಂಗವು ವಿಚಾರ್ಯವಾಗಿದೆಯೆಂದು ಹೇಳಲಾಗಿದೆ. ಆ ಲಿಂಗವು ಯಾವುದು? ಯಾವ ವ್ಯಕ್ತಿಗಳಲ್ಲಿ ಅದು ಸಾಧಾರಣವಾಗಿದೆ? ಸಾಧಾರಣವಾಗಿರುವುದಾದರೂ ಹೇಗೆ? ಸಾಧಾರಣವಾಗಿರುವದಾದರೆ ಅದು ಹೇಗೆ ಕೇವಲ ಭಗವದ್ವಿಷಯಕವಾಗಿರುವುದು? ಈ ಎಲ್ಲ ಪ್ರಶ್ನೆಗಳಿಗೆ ಪ್ರಾಣಾನಾಂ ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

**अत्र 'यस्मिन् द्यौः' इत्यादिवाक्योक्तं च द्युभ्वाद्यायतनत्वलिङ्गं विचार्यम् ।**

ಈ ಅಧಿಕರಣದಲ್ಲಿ 'ಯಸ್ಮಿನ್ ದ್ಯೌಃ' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ದ್ಯುಭ್ವಾದ್ಯಾಯತನತ್ವ ಎಂಬ ಲಿಂಗವನ್ನು ವಿಚಾರ ಮಾಡಬೇಕು.

**यद्यप्येतानि बहूनि लिङ्गानि । तथा च वक्ष्यति 'अत्रोक्तानां लिङ्गानाम्' इति । तथाऽप्येकवाक्योक्तत्वेनैकवचनम् । तच्च रुद्र- वायु- प्रकृति- जीव- विष्णूनां साधारणम् ।**

ವಸ್ತುತಃ ಇಂತಹ ಅನೇಕ ಲಿಂಗಗಳನ್ನು ಇಲ್ಲಿ ವಿಚಾರಮಾಡಬೇಕು. ಆದ್ದರಿಂದಲೇ ಮುಂದೆ 'ಅತ್ರೋಕ್ತಾನಾಂ ಲಿಂಗಾನಾಮ್' ಎಂಬಲ್ಲಿ ಅನೇಕ ಲಿಂಗಗಳು ನಿರ್ಣಯಿಸಲ್ಪಟ್ಟಿವೆ ಎಂದು ಹೇಳಿರುತ್ತಾರೆ. ಆದರೂ ಸಹ ಈ ವಾಕ್ಯದಲ್ಲಿರುವ ಕೇವಲ ದ್ಯುಭ್ವಾದ್ಯಾಯತನತ್ವವೆಂಬ ಲಿಂಗವನ್ನು ವಿವಕ್ಷಿಸಿ, ಲಿಂಗಮ್ ಎಂಬುದಾಗಿ ಏಕವಚನವನ್ನು ಪ್ರಯೋಗಿಸಿದ್ದಾರೆ. ಇಂತಹ ದ್ಯುಭ್ವಾದ್ಯಾಯತನತ್ವವು ರುದ್ರ, ವಾಯು, ಪ್ರಕೃತಿ, ಜೀವ ಹಾಗೂ ವಿಷ್ಣು ಇವರೆಲ್ಲರಲ್ಲಿಯೂ ಸಾಧಾರಣವಾಗಿದೆ.

**'प्राणानां रुद्रो वा' इत्यादिवाक्याद् रुद्रनिष्ठतया प्रतीतेः । ग्रथ्यन्तेऽस्मिन्निति ग्रन्थिः ।**

ಅದು ಹೀಗೆ -- 'ಪ್ರಾಣಾನಾಂ' 'ರುದ್ರೋ ವಾ' ಇತ್ಯಾದಿವಾಕ್ಯಗಳ ಬಲದಿಂದ ರುದ್ರನಲ್ಲಿ ದ್ಯುಭ್ವಾದ್ಯಾಯತನತ್ವವು ಕೇಳಿಸುತ್ತಿದೆ. ಗ್ರಂಥಿಃ ಎಂದರೆ 'ಗ್ರಥ್ಯಂತೇ ಅಸ್ಮಿನ್' ಎಂಬ ನಿಷ್ಪತ್ತಿಯಿಂದ ಆಶ್ರಯನಾಗಿದ್ದಾನೆಂದರ್ಥ.

**'वायुना' इत्यादिश्रुतेर्वायुनिष्ठत्वावगमात् । सूतमत्र सर्वं जगदिति सूत्रम् । सन्दृब्धानि, सङ्गतान्येव तदाधारतयाऽवस्थितानीत्यर्थः ।**

'ವಾಯುನಾ' ಇತ್ಯಾದಿ ಶ್ರುತಿಗಳ ಬಲದಿಂದ ದ್ಯುಭ್ವಾದ್ಯಾಯತನತ್ವವು ವಾಯುನಿಷ್ಠವಾಗಿದೆಯೆಂದು ತಿಳಿಯುತ್ತದೆ. 'ಸೂತ್ರಮ್' ಎಂಬ ಪದಕ್ಕೆ 'ಸೂತಮತ್ರ ಸರ್ವಂ ಜಗತ್' ಎಂಬ ನಿಷ್ಪತ್ತಿಯಿಂದ ಸಕಲ ಜಗತ್ತು ಇವನನ್ನು ಆಶ್ರಯಿಸಿದೆ ಎಂದರ್ಥ. 'ಸಂದೃಬ್ಧಾನಿ' ಎಂಬ ಪದಕ್ಕೆ ಸಂಬಂಧವನ್ನು ಹೊಂದಿರುವ ಪದಾರ್ಥವೇ ಅವನನ್ನು ಆಶ್ರಯಿಸಿಕೊಂಡು ಇರುತ್ತದೆ ಎಂದರ್ಥ.

**'सर्वे वा एते' इत्यादिश्रुतेर्विष्णुविषयत्वप्रदर्शनात् । प्राणाः = इन्द्रियाणि । प्राणिनः जीवाः । प्राणिग्रहणेन गृहीतानामपि देवानां प्राधान्यज्ञापनाय पुनर्ग्रहणम् ।**

'ಸರ್ವೇ ವಾ ಏತೇ' ಇತ್ಯಾದಿಶ್ರುತಿಗಳ ಬಲದಿಂದ ದ್ಯುಭ್ವಾದ್ಯಾಯತನತ್ವವು ವಿಷ್ಣುವಿನಲ್ಲಿದೆ ಎಂದು ತಿಳಿಯುತ್ತದೆ. ಪ್ರಾಣಾಃ = ಇಂದ್ರಿಯಗಳು. ಪ್ರಾಣಿನಃ = ದೇಹವುಳ್ಳ ಜೀವರುಗಳು. ವಸ್ತುತಃ ಪ್ರಾಣಿ ಎಂಬ ಪದದಿಂದಲೇ ದೇವತೆಗಳ ಸಂಗ್ರಹವೂ ಸಹ ಆಗುತ್ತದೆ. ಆದರೆ ಉಳಿದ ಪ್ರಾಣಿಗಳ ದೆಸೆಯಿಂದ ದೇವತೆಗಳು ಪ್ರಧಾನರಾಗಿದ್ದಾರೆಂದು ತಿಳಿಸಲು ಪ್ರತ್ಯೇಕವಾಗಿ ಅವರನ್ನು ಸ್ವೀಕರಿಸಲಾಗಿದೆ.

**दिवि भवानि दिव्यानि कल्पतरुप्रभृतीनि वस्तूनि । लोकाः = भूरादयः । तदभिमानिनः = लोकिनः । पूर्ववत् पुनर्ग्रहणम् । भूरादिभ्योऽन्ये वैकुण्ठादयोऽलोकाः । तद्गता मुक्ता अलोकिनः । 'ओताश्च प्रोताश्च' इति एतमाश्रिता इत्यर्थः ।**

ದಿವಿ ಭವಾನಿ ದಿವ್ಯಾನಿ = ಸ್ವರ್ಗಲೋಕದಲ್ಲಿರುವ ಕಲ್ಪತರು ಮೊದಲಾದ ವಸ್ತುಗಳು. ಲೋಕಾಃ = ಭೂಲೋಕಾದಿಗಳು, ತದಭಿಮಾನಿಯಾದ ಜೀವರುಗಳು; ಹಿಂದಿನಂತೆ ಇಲ್ಲಿಯೂ ಸಹ ಪ್ರತ್ಯೇಕವಾಗಿ ಹೇಳಬೇಕು. ಅಲೋಕಾಃ = ಭೂಲೋಕಾದಿಗಳಿಂತ ಭಿನ್ನವಾದ ವೈಕುಂಠಾದಿ ಲೋಕಗಳು, ಅವುಗಳಲ್ಲಿರುವ ಮುಕ್ತಜೀವರುಗಳು; ಅಲೋಕಿನಃ = ವೈಕುಂಠಾದಿಲೋಕಗಳಲ್ಲಿರುವ ಮುಕ್ತಜೀವರುಗಳು, ಓತಾಶ್ಚ ಪ್ರೋತಾಶ್ಚ = ಓತಪ್ರೋತವಾಗಿ ಹೆಣೆದುಕೊಂಡಂತೆ ವಿಷ್ಣುವನ್ನು ಆಶ್ರಯಿಸಿದ್ದಾರೆ ಎಂದರ್ಥ.

**'इत्यादेः' इत्यादिग्रहणेन प्रकृत्यादिनिष्ठत्वेऽपि प्रमाणमुदाहार्यमित्याचष्टे । तच्चान्यत्रोदाहृतम् । अज्ञानां न्यायानुसन्धानरहितानां मतेन । साधारणस्य कथं सिद्धान्ते असाधारणतया साध्यते? इति शङ्काऽनेन परिहृता । एवमुत्तरत्रापि ।।**

ಇತ್ಯಾದೇಃ ಎಂಬುದಾಗಿ ಆದಿಪದವನ್ನು ಹೇಳಿರುವುದರಿಂದ ಪ್ರಕೃತ್ಯಾದಿನಿಷ್ಠವಾಗಿಯೂ ಸಹ ಹೀಗೆ ಪ್ರಮಾಣವನ್ನು ಉದಾಹರಿಸಬೇಕೆಂದು ತಿಳಿಸಿರುತ್ತಾರೆ. ಪ್ರಕೃತ್ಯಾದಿಗಳೂ ಸಹ ದ್ಯುಭ್ವಾದ್ಯಾಯತನಗಳಾಗಿವೆ ಎಂಬ ವಿಷಯದಲ್ಲಿರುವ ಶ್ರುತಿಯನ್ನು ಬೇರೆ ಕಡೆ ಉದಾಹರಿಸಲಾಗಿದೆ. ಅಜ್ಞಾನಾಂ = ಜ್ಞಾನಾನುಸಂಧಾನವಿಲ್ಲದ ಅಜ್ಞಾನಿಗಳ ಪಕ್ಷದಲ್ಲಿ; ಸಾಧಾರಣವಾದ ಲಿಂಗವನ್ನು

ಸಿದ್ಧಾಂತದಲ್ಲಿ ಕೇವಲ ವಿಷ್ಣುನಿಷ್ಠವಾಗಿ ಅಸಾಧಾರಣವೆಂದು ಹೇಗೆ ಸಾಧಿಸುತ್ತೀರಿ? ಎಂಬ ಶಂಕೆಯನ್ನು ಇದರಿಂದ ಪರಿಹರಿಸದಂತಾಯಿತು. ಮುಂದೆಯೂ ಸಹ ಹೀಗೆಯೇ ತಿಳಿದುಕೊಳ್ಳಬೇಕು.

ಇಲ್ಲಿಗೆ ನ್ಯಾಯವಿವರಣಟೀಕೆಯಲ್ಲಿ ದ್ಯುಭ್ವಾದ್ಯಧಿಕರಣವು ಸಮಾಪ್ತವಾಯಿತು.

॥ ಶ್ರೀಕೃಷ್ಣಾರ್ಪಣಮಸ್ತು ॥

ಶ್ರೀಜಯತೀರ್ಥಭಿಕ್ಷುಗಳಿಂದ ರಚಿತವಾದ ನ್ಯಾಯವಿವರಣೆಯ ಟೀಕೆಯ

ಕನ್ನಡಾನುವಾದದಲ್ಲಿ ಅದೃಶ್ಯತ್ವಾಧಿಕರಣವು ಸಮಾಪ್ತವಾಯಿತು.

श्रीमदानन्दतीर्थभगवत्पादाचार्यविरचितम्

# अणुभाष्यम्

## द्युभ्वाद्यधिकरणम् (१।३।१)

**सर्वाश्रयः**

ಅಣುಭಾಷ್ಯ - ದ್ಯುಲೋಕ, ಭೂಲೋಕ ಇವೇ ಮೊದಲಾದ ಸಕಲ ಲೋಕಗಳಿಗೆ ಆಶ್ರಯನಾದವನು ಪರಮಾತ್ಮನೇ ಆಗಿದ್ದಾನೆ.

***

श्री आनन्दतीर्थभगवत्पादाचार्यविरचितम्

ब्रह्मसूत्राणुभाष्यम्

श्रीराघवेन्द्रतीर्थविरचिता

ब्रह्मसूत्राणुभाष्यविवृतिः

# तत्वमञ्जरी

## द्युभ्वाद्यधिकरणम् (१।३।१)

प्रथमाध्यायस्य तृतीयः पादः

नन्वेवमन्यत्र प्रसिद्धनामलिङ्गात्मकाशेषशब्दानां विष्णुनिष्ठतासिद्धावपि अन्यत्रापि वृत्तिरस्तु । तथाच एको विष्णुरेव इत्यवधारणायोग इत्यतः प्राप्तस्तृतीयः पादः ।

ಮೊದಲನೆಯ ಪಾದದಲ್ಲಿ ಅನ್ಯತ್ರಪ್ರಸಿದ್ಧವಾದ ಸಕಲನಾಮಾತ್ಮಕಶಬ್ದಗಳ ಸಮನ್ವಯವನ್ನು ವಿಷ್ಣುವಿನಲ್ಲಿ ಮಾಡಿದ್ದಾಯಿತು. ಎರಡನೆಯ ಪಾದದಲ್ಲಿ ಅನ್ಯತ್ರಪ್ರಸಿದ್ಧವಾದ ಸಕಲವಿಧವಾದ ಲಿಂಗಾತ್ಮಕಶಬ್ದಗಳನ್ನು ವಿಷ್ಣುವಿನಲ್ಲಿ ಸಮನ್ವಯಮಾಡಿದ್ದಾಯಿತು. ಇದರ ಮೇಲೆ ಬರುವ ಪ್ರಶ್ನೆ ಹೀಗಿದೆ. ಆ ಎಲ್ಲ ಶಬ್ದಗಳು ವಿಷ್ಣುಪರವಾಗಲಿ; ಆದರೆ ಬೇರೆ ಪದಾರ್ಥಗಳನ್ನೂ ಸಹ ಪ್ರತಿಪಾದಿಸಲಿ. ವಿಷ್ಣುವೊಬ್ಬನೇ ಏಕೆ ಪ್ರತಿಪಾದ್ಯನಾಗಬೇಕು? ಆದ್ದರಿಂದ "ವಿಷ್ಣುರೇವ" ಎಂಬ ಅವಧಾರಣವು ಅಯುಕ್ತವಾಗಿದೆ. ಈ ಆಶಂಕೆಯನ್ನು ಪರಿಹರಿಸುವುದಕ್ಕಾಗಿ ಪ್ರಕೃತ ಮೂರನೆಯ ಪಾದವು ಹೊರಡುತ್ತಿದೆ.

ಸಾರಾಂಶ -- ಪ್ರಥಮಪಾದ ಹಾಗೂ ದ್ವಿತೀಯಪಾದದಲ್ಲಿ ಅನ್ಯತ್ರಪ್ರಸಿದ್ಧವಾದ ಶಬ್ದಗಳನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡಿದರು. ಹಾಗಾಗಿ ಅನ್ಯತ್ರಪ್ರಸಿದ್ಧವಾದ ಶಬ್ದಗಳು ವಿಷ್ಣುವಿನಲ್ಲಿಯೂ ಬರುವುದರಿಂದ ಉಭಯತ್ರಪ್ರಸಿದ್ಧಗಳಾದವು. ಅಷ್ಟೇ ಅಲ್ಲದೆ ಇನ್ನು ಕೆಲವು ಶಬ್ದಗಳು ಸ್ವಾಭಾವಿಕವಾಗಿಯೇ ಉಭಯತ್ರಪ್ರಸಿದ್ಧವಾಗಿವೆ. ಅಂತಹ ನಾಮಾತ್ಮಕವಾದ ಲಿಂಗಾತ್ಮಕವಾದ ಉಭಯತ್ರಪ್ರಸಿದ್ಧಶಬ್ದಗಳನ್ನು ಮಹಾವಿಷ್ಣುವಿನಲ್ಲಿ ಮಾತ್ರ ಸಮನ್ವಯಮಾಡುವುದಕ್ಕಾಗಿ ಈ ಪಾದ ಹೊರಡುತ್ತಿದೆ ಎಂದಭಿಪ್ರಾಯ.

ದ್ಯುಭ್ವಾದ್ಯಧಿಕರಣ (೧-೩-೧)

**तदर्थमाह – तदन्यत्र च वाचकैः । 'मुख्यतः सर्वशब्दैश्च वाच्य एको जनार्दनः' इत्यग्रेतनत्रिपादी आदावप्याकृष्यते ।**

ಈ ಮೂರನೆಯ ಪಾದದ ಸಾರವನ್ನು 'ತದನ್ಯತ್ರ ಚ ವಾಚಕೈಃ' ಎಂಬ ಅಣುಭಾಷ್ಯದಿಂದ ಸಂಗ್ರಹಿಸಿದ್ದಾರೆ. ಇಲ್ಲಿ 'ಮುಖ್ಯತಃ ಸರ್ವಶಬ್ದೈಶ್ಚ ವಾಚ್ಯ ಏಕೋ ಜನಾರ್ದನಃ' ಎಂಬ ಶ್ಲೋಕದ ಭಾಗವನ್ನೂ ಆಕರ್ಷಣೆ ಮಾಡಿ ಇಲ್ಲಿ ಅನ್ವಯಮಾಡಿಕೊಳ್ಳಬೇಕು.

**चोऽप्यर्थे । तदिति प्रस्तुतविष्णुपरामर्शः । तदन्यत्रापीत्युक्त्या विष्णावपीति समुच्चीयते । तदिति सप्तम्यन्ताव्ययं वा । तत्र विष्णौ अन्यत्र च वाचकैरुभयवाचकैः ।**

'ಅನ್ಯತ್ರ ಚ' ಎಂಬಲ್ಲಿರುವ ಚಶಬ್ದವು ಅಪಿ ಎಂಬರ್ಥದಲ್ಲಿದೆ. 'ತದನ್ಯತ್ರ' ಎಂಬಲ್ಲಿರುವ ತತ್ ಶಬ್ದವು ಪ್ರಸ್ತುತನಾದ ವಿಷ್ಣುವನ್ನು ಪರಾಮರ್ಶಮಾಡುತ್ತಿದೆ. ತದನ್ಯತ್ರಾಪಿ ಎಂದು ಹೇಳಿದ್ದರಿಂದ ವಿಷ್ಣಾವಪಿ ಎಂಬುದು ಸಮುಚ್ಚಿತವಾಗುತ್ತದೆ. ಅಥವಾ 'ತತ್' ಎಂಬುದು ಸಪ್ತಮ್ಯಂತವಾದ ಅವ್ಯಯ. ಆವಾಗ ವಿಷ್ಣುವಿನಲ್ಲಿ ಹಾಗೂ ಬೇರೆ ಪದಾರ್ಥಗಳಲ್ಲಿ ಉಭಯತ್ರಪ್ರಸಿದ್ಧವಾದ ಶಬ್ದಗಳು ಎಂಬರ್ಥವು ದೊರೆಯುತ್ತದೆ.

**पूर्वपादद्वयन्यायापादितोभयत्रप्रसिद्धिकैर्वा श्रुत्यन्तरसाधारण्यादिना स्वत एवोभयत्रप्रसिद्धिकैर्वा सर्वशब्दैर्नामलिङ्गोभयात्मकैः शब्दैर्मुख्यतो मुख्यवृत्त्या एको जनार्दनो न तु विष्णुरन्यश्चेत्यर्थः । हरौ तदन्यत्र प्रसिद्धनामलिङ्गसमन्वयमाह विष्णावेवात्र सूत्रकृदिति फलितार्थः । न केवलमन्यत्र प्रसिद्धैः किन्तु तदन्यत्रवाचकैः सर्वशब्दैश्चेति चार्थः ।**

ಹಿಂದಿನ ಎರಡು ಪಾದಗಳಲ್ಲಿ ಹೇಳಲ್ಪಟ್ಟ ನ್ಯಾಯದಿಂದ ಆಪಾದಿತವಾದ ಉಭಯತ್ರಪ್ರಸಿದ್ಧವಾದ ಶಬ್ದಗಳಿಂದ ಅಥವಾ ಸಾಧಾರಣವಾದ ಶ್ರುತ್ಯಂತರದಿಂದ ಸ್ವತಃ ಉಭಯತ್ರಪ್ರಸಿದ್ಧವಾದ ಶಬ್ದಗಳಿಂದ ಅಂದರೆ ನಾಮಾತ್ಮಕವಾದ ಮತ್ತು ಲಿಂಗಾತ್ಮಕವಾದ ಉಭಯತ್ರಪ್ರಸಿದ್ಧವಾದ ಶಬ್ದಗಳಿಂದ ಮುಖ್ಯತಃ = ಪರಮಮುಖ್ಯವೃತ್ತಿಯಿಂದ ಒಬ್ಬನೇ ಜನಾರ್ದನನು ಪ್ರತಿಪಾದ್ಯನಾಗಿದ್ದಾನೆ. ಹೊರತು ವಿಷ್ಣು ಹಾಗೂ ಬೇರೆ ಪದಾರ್ಥಗಳೆರಡೂ ಪ್ರತಿಪಾದ್ಯವಾಗಲು ಸಾಧ್ಯವಿಲ್ಲ. ಶ್ರೀಹರಿಯಲ್ಲಿ ಮತ್ತು ಬೇರೆ ಪದಾರ್ಥಗಳಲ್ಲಿ ಪ್ರಸಿದ್ಧವಾದ ನಾಮಾತ್ಮಕ ಹಾಗೂ ಲಿಂಗಾತ್ಮಕಶಬ್ದಗಳ ಸಮನ್ವಯವನ್ನು ಸೂತ್ರಕಾರರು ವಿಷ್ಣುವಿನಲ್ಲೇ ಹೇಳುತ್ತಿದ್ದಾರೆಂದು ಒಟ್ಟು ಅಭಿಪ್ರಾಯ. ಕೇವಲ ಅನ್ಯತ್ರಪ್ರಸಿದ್ಧವಾದ ಶಬ್ದಗಳಿಂದಷ್ಟೇ ಅಲ್ಲ; ಮತ್ತೇನೆಂದರೆ, ಅನ್ಯತ್ರವಾಚಕವಾದ ಸಕಲಶಬ್ದಗಳಿಂದಲೂ ವಿಷ್ಣುವೇ ಪ್ರತಿಪಾದ್ಯನೆಂದು ಚಶಬ್ದದ ಅರ್ಥ.

ननु दृश्यत्वाद्युज्झितो विष्णुरित्ययुक्तम् । तद्धर्मस्य अमृतहेतुज्ञानरूपपरविद्या विषयत्वस्य 'तमेवैकं जानथ आत्मानमन्या वाचो विमुञ्चथ । अमृतस्यैष सेतुः' इत्याथर्वण एवोत्तरत्र 'यस्मिन् द्यौः' इति पूर्ववाक्योक्तद्युभ्वाद्याधारे श्रवणात्तस्य च 'आकाश एव तदोतं च प्रोतं च' इति, 'वायुना वै गौतम सूत्रेणायं च लोकः परश्च लोकः' इति, 'रुद्रो वा व लोकाधारः' इति समाख्याभिः प्रकृतिवायुरुद्राणां 'बहुधा जायमानः' इत्युत्तरवाक्ये श्रुतजाय-मानत्वलिङ्गेन जीवस्य च प्राप्तत्वात् । समाख्यादिस्थरुद्रादिशब्दानां रुद्रादावेव रूढत्वात् प्राचीनोऽपि तेषामन्यतमो न विष्णुरित्यतः प्राप्तं – **द्युभ्वाद्यायतनं स्वशब्दात्** – इत्यदिसूत्रसप्तकम् ।

ಹಿಂದಿನ ಅದೃಶ್ಯತ್ವಾಧಿಕರಣದಲ್ಲಿ ವಿಷ್ಣುವೇ ದೃಶ್ಯತ್ವಾದ್ಯಭಾವಧರ್ಮಗಳಿಂದ ಯುಕ್ತನಾಗಿದ್ದಾನೆಂದು ಸಾಧಿಸಲಾಯಿತು. ಇದು ತಪ್ಪು. ಏಕೆಂದರೆ, ಯಾವ ವ್ಯಕ್ತಿಯು ಅದೃಶ್ಯತ್ವಾದಿಧರ್ಮಗಳಿಂದ ಯುಕ್ತನಾಗಿದ್ದನೋ ಆ ವ್ಯಕ್ತಿಯೇ ಮೋಕ್ಷಕ್ಕೆ ಸಾಧನವಾದ ಪರವಿದ್ಯೆಗೂ ವಿಷಯನಾಗಿದ್ದಾನೆಂದು ಹೇಳಲಾಗಿದೆ. ಈ ಪರವಿದ್ಯಾವಿಷಯತ್ವವು 'ತಮೇವೈಕಂ ಜಾನಥ ಆತ್ಮಾನಮನ್ಯಾವಾಚೋ ವಿಮುಂಚಥ । ಅಮೃತಸ್ಯೈಷ ಸೇತುಃ' ಇತ್ಯಾದಿ ಶ್ರುತಿಯಲ್ಲಿ ದ್ಯುಭ್ವಾದ್ಯಾಯತನನಾದ ವ್ಯಕ್ತಿಗೆ ಹೇಳಲ್ಪಟ್ಟಿದೆ. ದ್ಯುಲೋಕ, ಭೂಲೋಕ ಇವುಗಳಿಗೆ ಆಶ್ರಯನಾದವನು ವಿಷ್ಣುವಾಗಲು ಸಾಧ್ಯವಿಲ್ಲ. ಹೊರತಾಗಿ ಪ್ರಕೃತಿ, ವಾಯು, ರುದ್ರ, ಜೀವ ಇವುಗಳಲ್ಲಿ ಯಾರಾದರೂ ಸಹ ದ್ಯುಭ್ವಾದಿಗಳಿಗೆ ಆಶ್ರಯರಾಗಬಹುದು. 'ಆಕಾಶ ಏವ ತದೋತಂ ಪ್ರೋತಂ ಚ' ಎಂಬ ಶ್ರುತಿಯಿಂದ ಪ್ರಕೃತಿಯು ಆಧಾರವಾಗಬಹುದು. 'ವಾಯುನಾ ವೈ ಗೌತಮ ಸೂತ್ರೇಣ ಅಯಂ ಚ ಲೋಕಃ ಪರಶ್ಚ ಲೋಕಃ' ಎಂಬ ಶ್ರುತಿಯ ಸಮಾಖ್ಯೆಯಿಂದ ವಾಯುದೇವನು ಆಶ್ರಯನಾಗಬಹುದು. 'ರುದ್ರೋ ವಾವ ಲೋಕಾಧಾರಃ' ಎಂಬ ಸಮಾಖ್ಯಾಪ್ರಮಾಣದಿಂದ ರುದ್ರನು ಆಶ್ರಯನಾಗಬಹುದು. 'ಬಹುಧಾ ಜಾಯಮಾನಃ' ಎಂಬ ಮುಂದಿನ ವಾಕ್ಯದಲ್ಲಿರುವ ಜಾಯಮಾನತ್ವಲಿಂಗದಿಂದ ಜೀವನೂ ಸಹ ದ್ಯುಭ್ವಾದಿಗಳಿಗೆ ಆಧಾರನಾಗಬಹುದು. ಆದ್ದರಿಂದ ದ್ಯುಲೋಕ, ಭೂಲೋಕ ಇವುಗಳಿಗೆ ವಿಷ್ಣು ಆಧಾರನಾಗುವುದಿಲ್ಲ. ಮತ್ತು ಸಮಾಖ್ಯಾಪ್ರಮಾಣದಲ್ಲಿರುವ ರುದ್ರಾದಿಶಬ್ದಗಳೆಲ್ಲವೂ ರುದ್ರ ವಾಯು ಮೊದಲಾದವರಲ್ಲಿಯೇ ರೂಢವಾಗಿವೆ. ದ್ಯುಭ್ವಾದ್ಯಾಯತನನಾಗದ ವಿಷ್ಣು ಪರವಿದ್ಯೆಗೂ ಸಹ ವಿಷಯನಾಗುವುದಿಲ್ಲ. ಆದ್ದರಿಂದಲೇ ಅದೃಶ್ಯತ್ವಾದಿ ಗುಣಗಳಿಗೂ ಸಹ ಆಧಾರನಾಗುವುದಿಲ್ಲ. ಈ ಆಶಂಕೆಯನ್ನು ಪರಿಹರಿಸುವುದಕ್ಕಾಗಿ ದ್ಯುಭ್ವಾದ್ಯಾಯತನಂ ಸ್ವಶಬ್ದಾತ್ ಇತ್ಯಾದಿ ಏಳು ಸೂತ್ರಗಳು ಹೊರಟಿವೆ.

ದ್ಯುಭ್ವಾದ್ಯಧಿಕರಣ (೧-೩-೧)

**तदर्थं भाषते – सर्वाश्रय इति ।**

**तदन्यत्र चेत्यादित्रिपादी इह प्रतिनियतमन्वेति लिङ्गैरित्यादि च । अन्त्यश्चोऽवधारणे । तत्तस्मादित्याप्यर्थः ।**

ಈ ಅಧಿಕರಣದ ಸಾರವನ್ನು "ಸರ್ವಾಶ್ರಯಃ" ಎಂಬ ಅಣುಭಾಷ್ಯದಲ್ಲಿ ಸಂಗ್ರಹಿಸಿದ್ದಾರೆ. 'ತದನ್ಯತ್ರ ಚ ವಾಚಕೈಃ' ಎಂಬ ಶ್ಲೋಕದ ಮೂರನೆಯ ಪಾದವನ್ನು ಈ ಪಾದದ ಎಲ್ಲಾ ಅಧಿಕರಣಗಳ ಜೊತೆಗೂ ಅನ್ವಯ ಮಾಡಬೇಕು. ಮತ್ತು ಎರಡನೆಯ ಪಾದಾರ್ಥವನ್ನು ಸಂಗ್ರಹಿಸುವ "ಲಿಂಗೈಃ ಸರ್ವೈರ್ಯುತಃ ಸ ಹಿ" ಎಂಬುದನ್ನೂ ಸಹ ಈ ಪಾದದ ಪ್ರತಿಯೊಂದು ಅಧಿಕರಣಗಳಲ್ಲಿಯೂ ಅನ್ವಯಮಾಡಿಕೊಳ್ಳಬೇಕು. 'ಸರ್ವಶಬ್ದೈಶ್ಚ' ಎಂಬಲ್ಲಿರುವ ಚಶಬ್ದವು ಅವಧಾರಣಾರ್ಥದಲ್ಲಿದೆ. ತತ್ ಎಂಬ ಶಬ್ದವು ತಸ್ಮಾತ್ ಎಂಬರ್ಥದಲ್ಲಿದೆ.

**'यस्मिन् द्यौः पृथिवी चान्तरिक्षणमोतं मनः सह प्राणैश्च सर्वैः' इति वाक्योक्तो द्युभ्वादिसर्वाश्रयः स प्रागुक्तः । 'विष्णावेव ओताश्च' इति श्रुतौ प्रसिद्धो वा एको जनार्दनः । तस्मात् यस्मिन् 'तमेवैकम्' इत्यादिभिः तदन्यत्र च वाचकैः इत्यादिनाऽन्यवाचकतयाऽपि प्रतीतैः सर्वैरेको जनार्दन एव मुख्यतो वाच्यः । न प्रकृत्यादिरनेकः ।**

'ಯಸ್ಮಿನ್ ದ್ಯೌಃ ಪೃಥಿವೀ ಚಾಂತರಿಕ್ಷಮೋತಂ ಮನಃ ಸಹ ಪ್ರಾಣೈಶ್ಚ ಸರ್ವೈಃ' ಇತ್ಯಾದಿ ಶ್ರುತಿಯಲ್ಲಿ ದ್ಯುಲೋಕ, ಭೂಲೋಕ ಇವುಗಳಿಗೆ ಆಶ್ರಯನಾಗಿದ್ದಾನೆಂದು ಹೇಳಲ್ಪಟ್ಟ ವ್ಯಕ್ತಿಯು ವಿಷ್ಣುವೇ ಆಗಿದ್ದಾನೆ. ಆದ್ದರಿಂದ 'ವಿಷ್ಣಾವೇವ ಓತಾಶ್ಚ ಪ್ರೋತಾಶ್ಚ' ಇತ್ಯಾದಿ ಶ್ರುತಿಗಳಲ್ಲಿ ಪ್ರಸಿದ್ಧನಾಗಿರುವವನೂ ಸಹ ಒಬ್ಬನೇ ಜನಾರ್ದನನಾಗಿದ್ದಾನೆ. ಪ್ರಕೃತಿ, ರುದ್ರ ಮೊದಲಾದವರು ಪ್ರತಿಪಾದ್ಯರಲ್ಲ. ಆದ್ದರಿಂದ 'ತಮೇವೈಕಂ' ಇತ್ಯಾದಿ ಶ್ರುತಿಯಲ್ಲಿಯೂ ಅನ್ಯತ್ರಪ್ರಸಿದ್ಧವಾದ ಅನ್ಯವಾಚಕವೆಂದು ತೋರುವ ಶಬ್ದಗಳಿಂದಲ್ಲ ವಿಷ್ಣುವೊಬ್ಬನೇ ಪರಮ ಮುಖ್ಯವೃತ್ತಿಯಿಂದ ವಾಚ್ಯನಾಗಿದ್ದಾನೆ; ಹೊರತು ಪ್ರಕೃತ್ಯಾದಿ ಅನೇಕ ಪದಾರ್ಥಗಳು ಪ್ರತಿಪಾದ್ಯವಾಗುವುದಿಲ್ಲ.

कुतः सर्वाश्रयो विष्णुः । **लिङ्गैः सर्वै : युतः स हि ।** लिङ्गैरित्युपलक्षणम् । 'जानथ आत्मानम्' इत्यदिनोक्तैः आत्मश्रुतिहेयत्वानुक्ति - अहेयत्वोक्ति - मुक्तोपसृप्यत्वाद्ये तत्प्रकरणस्थलिङ्गैर्युतत्वादिति वा । एतैलिङ्गैर्युतः सर्वाश्रय एको जनार्दनः । तेषां च भाष्योक्तवचनैः । विष्णौ प्रसिद्धत्वादिति वाऽर्थः । एवमग्रेऽपि योजनाद्वयं बोध्यम् ।

ಪರಿಪೂರ್ಣಚಂದ್ರಿಕಾ

ವಿಷ್ಣುವೇ ಏಕೆ ಸರ್ವಾಶ್ರಯನಾಗಿದ್ದಾನೆ? ಎಂಬ ಪ್ರಶ್ನೆಗೆ "ಲಿಂಗೈಃ ಸರ್ವೈಃ ಯುತಃ ಸ ಹಿ" ಎಂಬುದರಿಂದ ಉತ್ತರಿಸಿದ್ದಾರೆ. 'ಲಿಂಗೈಃ' ಎಂಬುದು ಉಪಲಕ್ಷಣವಾಗಿದೆ. 'ಜಾನಥ ಆತ್ಮಾನಮ್' ಇತ್ಯಾದಿ ಶ್ರುತಿಗಳಲ್ಲಿ ಪ್ರಸಕ್ತವಾದ ಆತ್ಮಶ್ರುತಿ, ಹೇಯತ್ವದ ಅನುಕ್ತಿ, ಅಹೇಯತ್ವದ ಉಕ್ತಿ, ಮುಕ್ತೋಪಸೃಪ್ಯತ್ವ ಇವೇ ಮೊದಲಾದ ಲಿಂಗಗಳು ಈ ಪ್ರಕರಣದಲ್ಲಿ ಇರುತ್ತವೆ. ಇವೆಲ್ಲವೂ ಸಹ ವಿಷ್ಣುವಿನ ಲಿಂಗಗಳಾಗಿರುವುದರಿಂದ ಅವನೇ ಪ್ರತಿಪಾದ್ಯನಾಗಬೇಕು. ಇವುಗಳು ಕೇವಲ ವಿಷ್ಣುವಿನ ಧರ್ಮಗಳೆಂಬುದು ಭಾಷ್ಯದಲ್ಲಿ ಉದಾಹರಿಸಿದ ಪ್ರಮಾಣಗಳಿಂದ ಸ್ಪಷ್ಟವಾಗುತ್ತದೆ. ಅಥವಾ ವಿಷ್ಣುವಿನಲ್ಲಿ ಪ್ರಸಿದ್ಧವಾದ್ದರಿಂದ ಎಂದೂ ಸಹ ಅರ್ಥೈಸಬಹುದು. ಹೀಗೆ ಮುಂದೆಯೂ ನಾಮಸಮನ್ವಯ ಹಾಗೂ ಲಿಂಗಸಮನ್ವಯವೆಂಬ ಎರಡು ಯೋಜನೆಗಳನ್ನು ಮಾಡಿಕೊಳ್ಳಬೇಕು.

नच समाख्याश्रुत्यादिविरोध इत्यतोऽपि – तदन्यत्र चेति । चोऽवधारणे । विष्ण्वन्यवाचकतयैव प्रतीतैः समाख्याश्रुत्यादिगतैः रुद्रपिनाक्यादिसर्वशब्दैः विषयवाक्यस्थजायमानादिशब्दैरेको जनार्दन एव मुख्यतो महायोगपौराणिकरूढिभ्यां वाच्यो हि यतोऽत इत्यर्थः ।

ರುದ್ರಾದಿಗಳಲ್ಲಿ ಪ್ರಸಿದ್ಧವಾದ ಸಮಾಖ್ಯಾಶ್ರುತಿಯ ವಿರೋಧ ಬರುತ್ತದಲ್ಲವೇ? ಎಂಬ ಪ್ರಶ್ನೆಗೂ 'ತದನ್ಯತ್ರ ಚ' ಎಂಬುದರಿಂದಲೇ ಉತ್ತರಿಸಿದ್ದಾರೆ. ಚಶಬ್ದವು ಅವಧಾರಣಾರ್ಥದಲ್ಲಿದೆ. ವಿಷ್ಣುವನ್ನು ಬಿಟ್ಟು ರುದ್ರಾದಿಗಳಲ್ಲಿಯೇ ಪ್ರಸಿದ್ಧವಾದ ಸಮಾಖ್ಯಾಶ್ರುತಿಯಲ್ಲಿರುವ ರುದ್ರ, ಪಿನಾಕೀ ಮೊದಲಾದ ಸಕಲಶಬ್ದಗಳಿಂದ ವಿಷಯವಾಕ್ಯದಲ್ಲಿರುವ ಜಾಯಮಾನ ಮೊದಲಾದ ಶಬ್ದಗಳಿಂದಲೂ ಮುಖ್ಯವಾಗಿ ಜನಾರ್ದನನೇ ಪ್ರತಿಪಾದ್ಯನಾಗಿದ್ದಾನೆ. ಏಕೆಂದರೆ ಮಹಾಯೋಗ ಹಾಗೂ ಪೌರಾಣಿಕರೂಢಿಗಳಿಂದ ವಿಷ್ಣುವೇ ವಾಚ್ಯನಾಗಿದ್ದಾನೆಂದು ನಿರ್ಣಯವಾಗುತ್ತದೆ.

स विष्णुरिति वर्तमानेऽपि जनार्दन इत्युक्तिः 'रुजं द्रावयते यस्माद्रुद्रः तस्माज्जनार्दनः ' इति स्मृतिसूचनेन महायोगपौराणिकरूढिभ्यां रुद्रादिशब्दानां हरौ मुख्यत्वसूचनाय।

'ಸಃ ವಿಷ್ಣುಃ' ಎಂಬುದು ಅನುವೃತ್ತಿಯಿಂದಲೇ ಸಿದ್ಧವಾಗಿದೆ. ಆದರೂ ಸಹ 'ಜನಾರ್ದನಃ' ಎಂಬ ಪದವನ್ನು ಉದ್ದೇಶಪೂರ್ವಕವಾಗಿಯೇ ಪ್ರಯೋಗಿಸಿದ್ದಾರೆ. ಇದಕ್ಕೆ ಕಾರಣ 'ರುಜಂ ದ್ರಾವಯತೇ ಯಸ್ಮಾದ್ ರುದ್ರಃ ತಸ್ಮಾಜ್ಜನಾರ್ದನಃ' ಎಂಬ ಸ್ಮೃತಿಯನ್ನು ಸೂಚಿಸುವ ಮೂಲಕ ಮಹಾಯೋಗ ಹಾಗೂ ಪೌರಾಣಿಕರೂಢಿಗಳಿಂದ ರುದ್ರಾದಿಶಬ್ದಗಳೆಲ್ಲವೂ ಶ್ರೀಹರಿಯಲ್ಲಿಯೇ ಮುಖ್ಯವಾಗಿವೆಯೆಂದು ಸೂಚಿಸಲು ಜನಾರ್ದನಶಬ್ದವನ್ನು ಹೇಳಿರುತ್ತಾರೆ.

ದ್ಯುಭ್ವಾದ್ಯಧಿಕರಣ (೧-೩-೧)

तथा 'न जायते अर्दयति च संसारमिति जनार्दनः' इत्यादिगीताभाष्योक्तदिशा जनपदेनाजत्वोक्त्या 'अजायमानो बहुधा विजायते' इतिश्रुतिसूचनेन प्रादुर्भावजनेः अमृतसेतुपदोक्तमुक्तोपसृप्यत्वस्य च सूचनाय ।

ಇದ'ಂತೆ 'ನ ಜಾಯತೇ ಅರ್ದಯತಿ ಚ ಸಂಸಾರಮಿತಿ ಜನಾರ್ದನಃ' 'ಸ್ವತಃ ಹುಟ್ಟಿಲ್ಲದವನು ಸಂಸಾರವನ್ನು ಪರಿಹರಿಸುತ್ತಾನಾದ್ದರಿಂದ ಜನಾರ್ದನನಾಗಿದ್ದಾನೆ ಎಂದು ಗೀತಾಭಾಷ್ಯದಲ್ಲಿ ಹೇಳುವ ಪ್ರಕಾರ ಜನ ಶಬ್ದದಿಂದ ಅಜತ್ವವು ತಿಳಿಯುತ್ತದೆ. 'ಅಜಾಯಮಾನೋ ಬಹುಧಾ ವಿಜಾಯತೇ' ಎಂಬ ಶ್ರುತಿಯು ಸೂಚಿಸುವಂತೆ ಭಗವಂತನಿಗೆ ಪ್ರಾದುರ್ಭಾವರೂಪವಾದ ಜನಿಯನ್ನು ಹೇಳಬೇಕು. ಮತ್ತು 'ಅಮೃತಸೇತು' ಎಂಬ ಪದದಿಂದ ಹೇಳಲ್ಪಟ್ಟ ಮುಕ್ತೋಪಸೃಪ್ಯತ್ವವನ್ನು ಸೂಚಿಸುವುದಕ್ಕಾಗಿಯೂ 'ಜನಾರ್ದನಃ' ಎಂದು ಹೇಳಿರುತ್ತಾರೆ.

तथा 'जुष्टं यदा पश्यत्यन्यमीशमस्य महिमानमिति वीतशोकः' इति, 'जीवादन्यं ज्ञात्वा मुच्यते' इति स्मृत्युक्तदिशा भेदज्ञानिनः संसारार्दकत्वोक्त्या भेदव्यपदेशसूचनेन नात्र जीवेशाभेदः शङ्क्यः ।

ಹಾಗೂ 'ಜುಷ್ಟಂ ಯದಾ ಪಶ್ಯತ್ಯನ್ಯಮೀಶಮಸ್ಯ ಮಹಿಮಾನಮಿತಿ ವೀತಶೋಕಃ' ಇತ್ಯಾದಿ ಶ್ರುತಿಯಲ್ಲಿ ಮತ್ತು 'ಜೀವಾದನ್ಯಂ ಜ್ಞಾತ್ವಾ ವಿಮುಚ್ಯತೇ' ಎಂಬ ಶ್ರುತಿಯಲ್ಲಿ ಹೇಳಿದ ಪ್ರಕಾರ ಜೀವ ಹಾಗೂ ಪರಮಾತ್ಮರ ಜ್ಞಾನದಿಂದ ಯಾರು ಭೇದವನ್ನು ತಿಳಿದುಕೊಳ್ಳುತ್ತಾರೋ ಅಂತಹವರಿಗೆ ಸಂಸಾರವು ಪರಿಹಾರವಾಗುತ್ತದೆಂದು ತಿಳಿಯುತ್ತದೆ. ಹೀಗೆ ಜೀವೇಶಭೇದವು ಸೂಚಿತವಾದ್ದರಿಂದ ಅವರಿಗೆ ಐಕ್ಯವನ್ನು ಆಶಂಕಿಸಬಾರದು.

ईशशब्दश्च जनार्दनपरो मोचकत्वलिङ्गादित्यादिसूचनाय । एक इत्यनेककोटिकपूर्पिक्षनिरासाय ॥१॥

ಈಶಶಬ್ದವು ಮೋಚಕತ್ವಾದಿಲಿಂಗಗಳ ಬಲದಿಂದ ಜನಾರ್ದನನನ್ನೇ ಪ್ರತಿಪಾದಿಸುತ್ತದೆ. ಆದ್ದರಿಂದಲೂ ಜೀವೇಶ್ವರರಿಗೆ ಅಭೇದವಿರುವುದಿಲ್ಲ ಎಂದು ಸೂಚಿಸುವುದಕ್ಕಾಗಿಯೂ ಜನಾರ್ದನಃ ಎಂದು ಹೇಳಿರುತ್ತಾರೆ. "ಏಕಃ" ಎಂಬುದರಿಂದ ಪ್ರಕೃತಿ, ರುದ್ರ ಮೊದಲಾದ ಅನೇಕಕೋಟಿಕ ಪೂರ್ವಪಕ್ಷವನ್ನು ನಿರಾಕರಿಸಿದ್ದಾರೆ.

ಶ್ರೀರಾಘವೇಂದ್ರತೀರ್ಥಶ್ರೀಪಾದಂಗಳವರಿಂದ ವಿರಚಿತವಾದ

ತತ್ವಮಂಜರಿಯ ಕನ್ನಡಾನುವಾದದಲ್ಲಿ ದ್ಯುಭ್ವಾದ್ಯಧಿಕರಣವು ಮುಗಿಯಿತು.

***

ಪರಿಪೂರ್ಣಚಂದ್ರಿಕಾ

॥ श्रीजानकीवदनाम्भोजराजहंसाय रामचन्द्राय नमः ॥

॥ श्री गुरुभ्यो नमः ॥ हरिः ॐ ॥

श्री राघवेन्द्रतीर्थविरचिता

# तन्त्रदीपिका

## अथ प्रथमाध्यायस्य तृतीयः पादः

### द्युभ्वाद्यधिकरणम् (१)

अत्र पादे उभयत्र प्रसिद्धनामलिङ्गात्मकद्विविधशब्दसमन्वय उच्यते-

**॥ ॐ द्युभ्वाद्यायतनं स्वशब्दात् ॐ ॥ १-३-१ ॥**

ಈ ಪಾದದಲ್ಲಿ ಉಭಯತ್ರಪ್ರಸಿದ್ಧವಾದ ನಾಮಾತ್ಮಕ ಶಬ್ದಗಳನ್ನು ಹಾಗೂ ಲಿಂಗಾತ್ಮಕಶಬ್ದಗಳನ್ನು ಸಮನ್ವಯ ಮಾಡಲಾಗಿದೆ.

'ಓಂ ದ್ಯುಭ್ವಾದ್ಯಾಯತನಂ ಸ್ವಶಬ್ದಾತ್ ಓಂ'

अत्र नये तादृशं सर्वाधारत्वलिङ्गं समन्वीयते ।

ಈ ಅಧಿಕರಣದಲ್ಲಿ ಉಭಯತ್ರಪ್ರಸಿದ್ಧವಾದ ಸರ್ವಾಧಾರತ್ವ ಎಂಬ ಲಿಂಗದ ಸಮನ್ವಯವನ್ನು ಮಾಡಲಾಗಿದೆ.

तत्त्वित्यस्ति । "यस्मिन् द्यौः पृथिवी चान्तरिक्षम्" इत्यादिनोक्तं द्युभ्वाद्यायतनं ततु ब्रह्मैव । न तु प्रधानं वायुरुद्रजीवा वा । स्वशब्दात् स्वेति शब्दः स्वशब्दस्तस्मात् । श्रुतौ स्वशब्दाभावात् तत्पर्यायात्मशब्दो ग्राह्यः । सभाराजेत्यत्रपाणिनीये राजशब्दवत् । तमेवैकं जानथ आत्मानमित्यात्मशब्दादित्यर्थः ।

ಸೂತ್ರಾರ್ಥ ಹೀಗಿದೆ -- "ತತ್ತು" ಎಂಬ ಪದಗಳು ಅನುವೃತ್ತವಾಗಿವೆ. 'ಯಸ್ಮಿನ್ ದ್ಯೌಃ ಪೃಥಿವೀ ಚಾಂತರಿಕ್ಷಮ್' ಇತ್ಯಾದಿಶ್ರುತಿಯಿಂದ ಹೇಳಲ್ಪಟ್ಟ ದ್ಯುಭ್ವಾದ್ಯಾಯತನನು ತತ್ತು = ಬ್ರಹ್ಮನೇ ಆಗಿದ್ದಾನೆ.

ಪ್ರಧಾನವಾಗಲೀ, ವಾಯು, ರುದ್ರ, ಜೀವ ಮೊದಲಾದವರಾಗಲೀ ದ್ಯುಭ್ವಾದ್ಯಾಯತನರಾಗಿಲ್ಲ. ಏಕೆಂದರೆ ಸ್ವಶಬ್ದಾತ್ = ಸ್ವ ಎಂಬ ಶಬ್ದವೇ ಸ್ವಶಬ್ದ. ಆದರಿಂದ ಎಂದರ್ಥ. ವಸ್ತುತಃ ಶ್ರುತಿಯಲ್ಲಿ ಸ್ವ ಎಂಬ ಶಬ್ದವು ಇರುವುದಿಲ್ಲ. ಆದ್ದರಿಂದ ಅದಕ್ಕೆ ಪರ್ಯಾಯಪದವಾದ ಆತ್ಮಶಬ್ದವನ್ನು ಸ್ವೀಕರಿಸಬೇಕು.

'ಸಭಾ ರಾಜಾಮನುಷ್ಯಪೂರ್ವಾ' (ಪಾ.ಸೂ.೨/೪/೨೩) ಎಂಬ ಪಾಣಿನಿಸೂತ್ರದಲ್ಲಿ ರಾಜಾ ಎಂಬ ಶಬ್ದದಿಂದ ಅದರ ಪರ್ಯಾಯಪದವನ್ನು ಸ್ವೀಕರಿಸದಂತೆ ಇಲ್ಲಿಯೂ ಸಹ ತಿಳಿಯಬೇಕು. 'ತಮೇವೈಕಂ ಜಾನಥ ಆತ್ಮಾನಮ್' ಎಂಬುದಾಗಿ ಆತ್ಮಶಬ್ದವಿರುವುದರಿಂದ ಎಂದರ್ಥ.

आत्मशब्दादिति वाच्ये स्वेत्युक्तिः स्वस्य ब्रह्मण एव शब्द इत्यपि विग्रहेणासाधारण्यं ज्ञापयितुम् । तच्छब्दादित्युक्तावपि शब्दविशेषो न ज्ञापितः स्यादिति ।

ಹಾಗಾದರೆ ಸೂತ್ರದಲ್ಲಿ 'ಆತ್ಮಶಬ್ದಾತ್' ಎಂದೇ ಹೇಳಬೇಕಿತ್ತು. ಆದರೂ ಸಹ 'ಸ್ವಶಬ್ದಾತ್' ಎಂದು ಹೇಳಲು ಕಾರಣವಿದೆ. ಸ್ವಸ್ಯ = ತನಗೆ ಅಂದರೆ ಬ್ರಹ್ಮನಿಗೇ ಸಂಬಂಧಪಟ್ಟ ಶಬ್ದ ಎಂಬ ವಿಗ್ರಹದಿಂದ ಆತ್ಮಶಬ್ದದ ಅಸಾಧಾರಣ್ಯವನ್ನು ಸೂಚಿಸಲು ಸ್ವಶಬ್ದಾತ್ ಎಂದು ಹೇಳಿದ್ದಾರೆ. ವಸ್ತುತಃ ಆತ್ಮಶಬ್ದವನ್ನು ಸಂಗ್ರಹಿಸಲು ತಚ್ಛಬ್ದಾತ್ ಎಂದೂ ಸಹ ಹೇಳಬಹುದಿತ್ತು. ಆದರೆ ಆದರಿಂದ ಶಬ್ದವಿಶೇಷವಾದ ಆತ್ಮಶಬ್ದವು ಸೂಚಿತವಾಗುವುದಿಲ್ಲ. ಆದಕ್ಕೋಸ್ಕರ 'ಸ್ವಶಬ್ದಾತ್' ಎಂದೇ ಹೇಳಿರುತ್ತಾರೆ.

जायमानत्वरूपजीवलिङ्गादात्मशब्दः अमुख्यः किं न स्यादित्यत आह -

।। ॐ मुक्तोपसृप्यव्यपदेशात् ॐ ।। १-३-२ ।।

ಜಾಯಮಾನತ್ವವೆಂಬ ಜೀವನ ಲಿಂಗವಿರುವಪ್ರಯುಕ್ತ ಆತ್ಮಶಬ್ದವು ಏಕೆ ಅಮುಖ್ಯವಾಗಬಾರದು? ಎಂಬ ಆಕ್ಷೇಪಕ್ಕೆ ಉತ್ತರಿಸುತ್ತಿದ್ದಾರೆ. ಓಂ ಮುಕ್ತೋಪಸೃಪ್ಯವ್ಯಪದೇಶಾತ್ ಓಂ.

द्व्येकयोरित्यादाविव भावप्रधानोऽयम् । उपसृप्यत्वं प्राप्यान्तरशून्यत्वे सति प्राप्यत्वम् । तेनान्तरा प्राप्ये न व्यभिचारः ।

'ದ್ವ್ಯೇಕಯೋಃ ದ್ವಿವಚನೈಕವಚನೇ' (೧/೪/೨೨) ಎಂಬ ಪಾಣಿನೀಯ ಸೂತ್ರದಲ್ಲಿ ದ್ವಿಶಬ್ದ ಹಾಗೂ ಏಕಶಬ್ದಗಳು ದ್ವಿತ್ವ ಮತ್ತು ಏಕತ್ವವೆಂಬ ಭಾವಪ್ರಧಾನದಿಂದ ಹೇಗೆ ನಿರ್ದಿಷ್ಟವಾಗಿವೆಯೋ ಅದರಂತೆ ಉಪಸೃಪ್ಯ ಎಂಬ ಪದವು ಉಪಸೃಪ್ಯತ್ವವೆಂಬ ಭಾವಪ್ರಧಾನದಲ್ಲಿ ನಿರ್ದೇಶಿಸಲ್ಪಟ್ಟಿದೆ. ಉಪಸೃಪ್ಯತ್ವ ಎಂದರೆ 'ಪ್ರಾಪ್ಯವಾದ ಮತ್ತೊಂದು ಪದಾರ್ಥವಿಲ್ಲದೆ ತಾನು ಮಾತ್ರ ಪ್ರಾಪ್ಯವಾಗಿದೆ' ಎಂದು. ಹೀಗೆ ಹೇಳಿದ್ದರಿಂದ ಅದರ ಮೊದಲು ಮತ್ತೊಂದು ಪ್ರಾಪ್ಯವಾದದ್ದು ಇದ್ದರೂ ಸಹ ವ್ಯಭಿಚಾರವಿಲ್ಲ. ಅಂದರೆ ವಿಷ್ಣುವನ್ನು ಹೊಂದಿದ ಮೇಲೆ ಮತ್ತೊಬ್ಬರನ್ನು ಹೊಂದಬೇಕಾಗಿಲ್ಲ. ಅವನನ್ನು ಹೊಂದುವ ಮೊದಲು ಬೇರೆ ಸ್ಥಾನಗಳನ್ನು ಹೊಂದಿರಬಹುದು ಎಂದರ್ಥ.

''अमृतस्यैष सेतुः'' इत्यमृतशब्दितमुक्तोपसृप्यत्वव्यपदेशात् नात्मशब्दोऽमुख्य इति योज्यम् । अमृतसेत्विति वाच्ये मुक्तेत्याद्युक्तिः तदर्थोक्त्यर्था । एवमन्यत्रापि ।।

ಅಮೃತಸ್ಯೈಷ ಸೇತುಃ ಎಂಬಲ್ಲಿರುವ ಅಮೃತಶಬ್ದದಿಂದ ಮುಕ್ತಪ್ರಾಪ್ಯತ್ವವು ಹೇಳಲ್ಪಟ್ಟಿದೆ. ಇದರಿಂದ ಆತ್ಮಶಬ್ದವು ಅಮುಖ್ಯವಲ್ಲವೆಂದು ತಿಳಿಯುತ್ತದೆಂದು ಯೋಜನೆ ಮಾಡಿಕೊಳ್ಳಬೇಕು. ಅಮೃತಸೇತು ವ್ಯಪದೇಶಾಚ್ಚ ಎಂದೇ ಸೂತ್ರದಲ್ಲಿ ಹೇಳಬಹುದಿತ್ತು. ಆದರೆ ಮುಕ್ತೋಪಸೃಪ್ಯವ್ಯಪದೇಶಾತ್ ಎಂದು ಹೇಳಿರುವುದು ಅಮೃತಸೇತುಪದದ ಅರ್ಥವನ್ನು ಹೇಳುವುದಕ್ಕಾಗಿ ಎಂದು ತಿಳಿಯಬೇಕು. ಇದರಂತೆ ಬೇರೆ ಕಡೆಯೂ ಸಹ ತಿಳಿದುಕೊಳ್ಳಬೇಕು.

रुद्रप्रकृती किं न स्याताम् । ''रुद्रो वा व लोकाधारः भूतं च भवच्च भविष्यच्च'' इत्यदेः । अत आह -

**।। ॐ नानुमानमतच्छब्दात् ॐ ।। १-३-३ ।।**

'ರುದ್ರೋ ವಾವ ಲೋಕಾಧಾರಃ' 'ಭೂತಂ ಚ ಭವಚ್ಚ ಭವಿಷ್ಯಚ್ಚ' ಇತ್ಯಾದಿ ಪ್ರಮಾಣಗಳ ಆಧಾರದಿಂದ ರುದ್ರ ಅಥವಾ ಪ್ರಕೃತಿಗಳು ಏಕೆ ದ್ಯುಭ್ವಾದ್ಯಾಯತನರಾಗಬಾರದು? ಎಂಬ ಆಕ್ಷೇಪಕ್ಕೆ ಉತ್ತರಿಸುತ್ತಿದ್ದಾರೆ. 'ಓಂ ನಾನುಮಾನಮತಚ್ಛಬ್ದಾತ್ ಓಂ'

द्युभ्वाद्यायतनमित्यस्ति । अनुमीयत इत्यनुमानशब्देन वा अनुमानशब्दाच्छैषिकेऽणि कृते अनुमानशब्देन वा अनुमानप्रधानपाशुपतसांख्यसिद्धरुद्रप्रधाने ग्रह्ये ।

'ದ್ಯುಭ್ವಾದ್ಯಾಯತನಂ' ಎಂಬ ಪದವನ್ನು ಇಲ್ಲಿಯೂ ಅನುವೃತ್ತಿಮಾಡಿಕೊಳ್ಳಬೇಕು. 'ಅನುಮಾನದಿಂದ ಸಾಧಿಸಲ್ಪಡುವುದು' ಎಂಬರ್ಥದಲ್ಲಿರುವ ಅನುಮಾನಶಬ್ದದಿಂದ ಅಥವಾ ಅನುಮಾನಶಬ್ದದ ಮುಂದೆ 'ತಸ್ಯೇದ೦ ಎಂಬ ಪಾಣಿನಿಯ ಸೂತ್ರದಿಂದ ಅಣ್‌ಪ್ರತ್ಯಯವನ್ನು ಸೇರಿಸಿದಾಗ ಆನುಮಾನಂ ಎಂಬ ರೂಪವು ಸಿದ್ಧವಾಗುತ್ತದೆ. ಹೀಗೆ ಶೈಷಿಕಅಣ್‌ಪ್ರತ್ಯಯವನ್ನು ಸೇರಿಸಿದಾಗ ನಿಷ್ಪನ್ನವಾಗುವ ಆನುಮಾನಶಬ್ದದಿಂದಾಗಲೀ ಅಥವಾ ಅನುಮಾನವನ್ನೇ ಪ್ರಧಾನವನ್ನಾಗಿ ಭಾವಿಸುವ ಪಾಶುಪತ ಅಥವಾ ಸಾಂಖ್ಯಮತಗಳಿಂದಾಗಲೀ ಸಿದ್ಧವಾಗುವ ರುದ್ರ ಹಾಗೂ ಪ್ರಕೃತಿಗಳನ್ನು ವಿವಕ್ಷಿಸಬೇಕು.

रुद्रः प्रधानं च न द्युभ्वाद्यायतनम् । अतच्छब्दात् । तयोः रुद्रप्रकृत्योर्भस्मधरोग्रत्वत्रिगुणत्वादिशब्दानामभावादित्यर्थः ।

ಸೂತ್ರಾರ್ಥ ಹೀಗಿದೆ - ರುದ್ರ, ಪ್ರಧಾನ ಮೊದಲಾದವರು ದ್ಯುಭ್ವಾದ್ಯಾಯತನರಲ್ಲ. ಏಕೆಂದರೆ, ಅತಚ್ಛಬ್ದಾತ್ = ರುದ್ರ ಹಾಗೂ ಪ್ರಕೃತಿಗಳಿಗೆ ಸಂಬಂಧಿಸಿದ ಭಸ್ಮಧರ, ಉಗ್ರತ್ವ, ತ್ರಿಗುಣತ್ವ

ಮೊದಲಾದ ಶಬ್ದಗಳಿಲ್ಲದಿರುವುದರಿಂದ ಎಂದರ್ಥ.

**रुद्रपिनाक्यादिशब्दानाम् ''अन्यनाम्नां गतिर्विष्णुः'' इत्यादेर्न तच्छब्दत्वमिति भावः । अतद्धर्मेतिवदयं निर्देशो बोध्यः ।**

ರುದ್ರ, ಪಿನಾಕೀ ಮೊದಲಾದ ಶಬ್ದಗಳು 'ಅನ್ಯನಾಮ್ನಾಂ ಗತಿರ್ವಿಷ್ಣುಃ' ಇತ್ಯಾದಿಯಾದ ಪ್ರಮಾಣಗಳಿಗೆ ಅನುಸಾರಿಯಾಗಿ ರುದ್ರನ ಶಬ್ದಗಳಲ್ಲವೆಂದು ತಿಳಿಯಬೇಕು.ಅತಚ್ಛಬ್ದ ಎಂಬುದು ಅತದ್ಧರ್ಮ ಎಂಬ ಶಬ್ದದಂತೆ ನಿಷ್ಪನ್ನವಾಗಿದೆಯೆಂದು ತಿಳಿಯಬೇಕು.

**रुद्रप्रकृत्योर्द्वयोरुपादानाय वा टीकोक्तरीत्या पूर्वपक्षयुक्तिसूचनाय वा तदागमानाम्रमानत्वसूचनाय वा वक्ष्यमाणदिशा वृत्त्यन्तरसूचनाय वा नानुमानमित्युक्तिः ।**

ರುದ್ರ ಹಾಗೂ ಪ್ರಕೃತಿಗಳೆರಡನ್ನೂ ಸ್ವೀಕರಿಸುವುದಕ್ಕಾಗಿ ಅಥವಾ ಟೀಕೆಯಲ್ಲಿ ಹೇಳಿದಂತೆ ಪೂರ್ವಪಕ್ಷಯುಕ್ತಿಯನ್ನು ಸೂಚಿಸುವುದಕ್ಕಾಗಿ ಅಥವಾ ಪಾಶುಪತಾದ್ಯಾಗಮಗಳ ಅಪ್ರಾಮಾಣ್ಯವನ್ನು ಸೂಚಿಸುವುದಕ್ಕಾಗಿ ಅಥವಾ ಮುಂದೆ ಹೇಳುವ ಪ್ರಕಾರ ಮತ್ತೊಂದು ವ್ಯಾಖ್ಯಾನವನ್ನು ಸೂಚಿಸುವುದಕ್ಕಾಗಿ 'ನಾನುಮಾನಮ್' ಎಂದು ಸೂತ್ರಕಾರರು ಹೇಳಿರುತ್ತಾರೆ.

**जीववायू किमत्र वाच्यौ न स्याताम् । जायमान इति लिङ्गात् ''वायुना वै गौतम'' इत्यादेः । अत आह -**

**।। ॐ प्राणभृच्च ॐ ।। १-३- ४ ।।**

ಜಾಯಮಾನತ್ವ ಎಂಬ ಲಿಂಗವಿರುವುದರಿಂದ ಹಾಗೂ 'ವಾಯುನಾ ವೈ ಗೌತಮಃ' ಇತ್ಯಾದಿ ಶ್ರುತಿಗಳು ಪ್ರಮಾಣವಾಗಿರುವುದರಿಂದ ಜೀವ ಹಾಗೂ ವಾಯು ಇವರುಗಳು ಏಕೆ ದ್ಯುಭ್ವಾದ್ಯಾಯತನರಾಗುವುದಿಲ್ಲ? ಎಂಬ ಆಕ್ಷೇಪಕ್ಕೆ ಉತ್ತರಿಸಲು ಮುಂದಿನ ಸೂತ್ರ ಹೊರಟಿದೆ. 'ಓಂ ಪ್ರಾಣಭೃಚ್ಚ ಓಂ'

**चशब्दान्नेति स्वशब्दादिहेतवश्चानुकृष्यन्ते । वायुश्च समुच्चीयते । आत्मशब्दमुक्तोपसृप्यत्वात् तच्छब्देभ्यो जीववायू न द्युभ्वाद्यायतनमित्यर्थः । जायमानादिशब्दोऽभिव्यक्त्यादिना विष्णौ युक्त इति भावः ।।**

'ಚ' ಶಬ್ದದಿಂದ 'ನ' ಎಂಬುದನ್ನು ಸ್ವಶಬ್ದ ಮೊದಲಾದ ಹೇತುಗಳನ್ನು ಅನುವೃತ್ತಿ ಮಾಡಿಕೊಳ್ಳಬೇಕು. ಮತ್ತು ವಾಯುವನ್ನೂ ಸಮುಚ್ಚಯ ಮಾಡಬೇಕು. ಆತ್ಮಶಬ್ದ, ಮುಕ್ತೋಪಸೃಪ್ಯತ್ವ ಮತ್ತು ಜೀವ ಹಾಗೂ ವಾಯುಗಳಲ್ಲಿ ಪ್ರಸಿದ್ಧವಾದ ಶಬ್ದವಿಲ್ಲದಿರುವುದು ಈ ಹೇತುಗಳಿಂದ ಜೀವ ಹಾಗೂ ವಾಯುಗಳು ದ್ಯುಭ್ವಾದ್ಯಾಯತನರಾಗುವುದಿಲ್ಲವೆಂದರ್ಥ.

'ಜನಿ ಪ್ರಾದುರ್ಭಾವೇ' ಎಂಬ ಧಾತುವಿನಿಂದ ನಿಷ್ಪನ್ನವಾದ ಜಾಯಮಾನಶಬ್ದಕ್ಕೆ ಪ್ರಾದುರ್ಭಾವವೆಂಬ ಅರ್ಥವನ್ನು ವಿಷ್ಣುವಿನಲ್ಲಿ ಹೇಳುವುದು ಯುಕ್ತವೇ ಆಗಿದೆಯೆಂದು ತಿಳಿಯಬೇಕು.

**जीव इति वाच्ये 'प्राणभृत्' इत्युक्तिः सह प्राणैः इत्युक्तप्राणभृत्वम् तस्य युक्तमिति पूर्वपक्षयुक्ति सूचनाय ।**

ವಸ್ತುತಃ ಸೂತ್ರದಲ್ಲಿ 'ಪ್ರಾಣಭೃತ್' ಎಂದು ಹೇಳುವ ಬದಲು ಜೀವಃ ಎಂದು ಹೇಳಬಹುದಿತ್ತು. ಆದರೆ 'ಸಃ ಪ್ರಾಣೈಶ್ಚ ಸರ್ವೈಃ' ಎಂಬಲ್ಲಿ ಹೇಳಲ್ಪಟ್ಟ ಪ್ರಾಣಾಧಾರತ್ವವು ಜೀವನಲ್ಲಿ ಯುಕ್ತವಾಗಿದೆ.ಎಂಬ ಪೂರ್ವಪಕ್ಷಯುಕ್ತಿಯನ್ನು ಸೂಚಿಸುವ ಉದ್ದೇಶಕ್ಕಾಗಿ ಪ್ರಾಣಭೃತ್ ಎಂದೇ ಹೇಳಿದ್ದಾರೆ.

**योग विभाग उत्तरार्थः । व्याकरणे 'रञ्जैश्च' इत्यादिवत् अत्र श्रुतौ जीवमात्रलिङ्गसत्वेन तदैक्येस्यैव अग्रेनिरासात् । अत एव अस्य स्वशब्देनोक्तिः ।**

ವ್ಯಾಕರಣದಲ್ಲಿ 'ರಂಜೈಶ್ಚ' ಎಂಬ ಸೂತ್ರವನ್ನು ಮುಂದಿನ ಸೂತ್ರದಲ್ಲಿ ಅನುವೃತ್ತಿ ಮಾಡುವುದಕ್ಕಾಗಿ ಪ್ರತ್ಯೇಕಗೊಳಿಸಲಾಗಿದೆ. ಅದರಂತೆ ಇಲ್ಲಿಯೂ ಸಹ 'ಪ್ರಾಣಭೃಚ್ಚ' ಎಂಬ ಸೂತ್ರವನ್ನುಮುಂದಿನ ಸೂತ್ರದಲ್ಲಿ ಅನುವೃತ್ತಿ ಮಾಡುವುದಕ್ಕಾಗಿ ಪ್ರತ್ಯೇಕವಾಗಿ ರಚಿಸಿದ್ದಾರೆಂದು ತಿಳಿಯಬೇಕು. ಏಕೆಂದರೆ ಯಸ್ಮಿನ್ ದ್ಯೌಃ ಎಂಬ ಶ್ರುತಿಯಲ್ಲಿ ಜೀವನ ಲಿಂಗವಷ್ಟೇ ಇರುವುದರಿಂದ ಅವನಿಂದ ಐಕ್ಯವನ್ನು ಮುಂದೆ ನಿರಾಕರಿಸುತ್ತಾರೆ. ಆದ್ದರಿಂದಲೇ ಜೀವನಲ್ಲಿ ಪ್ರಸಿದ್ಧವಾಗಿರುವ ಪ್ರಾಣಭೃತ್ ಎಂಬ ಶಬ್ದವನ್ನು ಇಲ್ಲಿ ಹೇಳಿದ್ದಾರೆ.

**ननूभयप्रापकाबाधेन जीवब्रह्माभेदोऽस्त्वित्यत आह -**

**।। ॐ भेदव्यपदेशात् ॐ ।। १-३-५ ।।**

ಜೀವಪ್ರಾಪಕವಾದ ಲಿಂಗಗಳು ಮತ್ತು ಬ್ರಹ್ಮಪ್ರಾಪಕವಾದ ಲಿಂಗಗಳೆರಡೂ ಅಬಾಧಿತವಾಗಿರುವುದರಿಂದ ಜೀವಬ್ರಹ್ಮ ಅಭೇದವನ್ನೇ ಒಪ್ಪಬಹುದಲ್ಲವೇ? ಎಂಬ ಪ್ರಶ್ನೆಗೆ ಉತ್ತರಿಸುವುದಕ್ಕಾಗಿ ಮುಂದಿನ ಸೂತ್ರ ಹೊರಟಿದೆ. ಓಂ ಭೇದವ್ಯಪದೇಶಾತ್ ಓಂ'

**''जुष्टं यदा पश्यत्यन्यमीशम्'' इतीहैव जीवब्रह्मभेदव्यपदेशान्नैक्यमित्यर्थः ।**

ಸೂತ್ರಾರ್ಥ ಹೀಗಿದೆ -- 'ಜುಷ್ಟಂ ಯದಾ ಪಶ್ಯತಿ ಅನ್ಯಮೀಶಮ್' ಎಂಬ ಮಾಂಡೂಕ್ಯೋಪನಿಷತ್ತಿನಲ್ಲಿ ಜೀವಬ್ರಹ್ಮಭೇದವನ್ನು ಹೇಳಿರುವುದರಿಂದ ಜೀವಬ್ರಹ್ಮೈಕ್ಯವನ್ನು ಹೇಳಬಾರದೆಂದರ್ಥ.

**ईशशब्दं ब्रह्मेति कुतः? येन जीवब्रह्मभेदोक्तिः स्यादित्यत आह -**

**।। ॐ प्रकरणात् ॐ ।। १-३-६ ।।**

ಈಶಶಬ್ದವಾಚ್ಯನು ಬ್ರಹ್ಮನೇ ಆಗಿದ್ದಾನೆಂದು ಹೇಗೆ ಹೇಳುತ್ತೀರಿ? ಒಂದುವೇಳೆ ಬ್ರಹ್ಮನು ಈಶಶಬ್ದವಾಚ್ಯನಾದಲ್ಲಿ ಮಾತ್ರ ಜೀವಬ್ರಹ್ಮರಿಗೆ ಭೇದವನ್ನು ಹೇಳಬಹುದು. ಈ ಪ್ರಶ್ನೆಗೆ ಉತ್ತರಿಸಲು ಮುಂದಿನ ಸೂತ್ರ ಹೊರಟಿದೆ. 'ಓಂ ಪ್ರಕರಣಾತ್ ಓಂ'

''द्वे विद्ये वेदितव्ये'' इति परविद्याविषयवस्तुन आरभ्याधीतत्वेन ब्रह्मप्रकरणादीशशब्दार्थो ब्रह्मेत्यर्थः ।।

ಸೂತ್ರಾರ್ಥ ಹೀಗಿದೆ - 'ದ್ವೇ ವಿದ್ಯೇ ವೇದಿತವ್ಯೇ' ಎಂಬುದಾಗಿ ಮಾಂಡೂಕ್ಯೋಪನಿಷತ್ತಿನಲ್ಲಿ ಪರವಿದ್ಯೆಗೆ ವಿಷಯವಾದ ಯಾವ ವಸ್ತುವಿದೆಯೋ ಅದನ್ನೇ ಪ್ರಾರಂಭದಲ್ಲಿ ಹೇಳಿ ಮುಂದೆ ವಿಷಯವನ್ನು ನಿರೂಪಣೆ ಮಾಡಿರುವುದರಿಂದ ಸಂಪೂರ್ಣಪ್ರಕರಣವು ಬ್ರಹ್ಮಪರವೆಂದು ಸಿದ್ಧವಾಗುತ್ತದೆ. ಆದ್ದರಿಂದ ಅಲ್ಲಿರುವ ಈಶಶಬ್ದವು ಬ್ರಹ್ಮನನ್ನೇ ಪ್ರತಿಪಾದಿಸುತ್ತದೆಂದರ್ಥ.

न केवलं श्रुतिबलाद्भेदः, लिङ्गादपीत्याह -

।। ॐ स्थित्यदनाभ्यां च ॐ ।। १-३-७ ।।

ಶ್ರುತಿಬಲದಿಂದಷ್ಟೇ ಅಲ್ಲ ಲಿಂಗದ ಬಲದಿಂದಲೂ ಸಹ ಭೇದವು ಸಿದ್ಧವಾಗುತ್ತದೆಂದು ಹೇಳುತ್ತಿದ್ದಾರೆ. 'ಓಂ ಸ್ಥಿತ್ಯದನಾಭ್ಯಾಂ ಚ ಓಂ'.

नैक्यमित्यस्ति । स्थितिः कर्मफलोपजीवनं विनाऽवस्थानम् । अदनं तदुपजीवनम् । ताभ्यां च जीवब्रह्मणोर्नैक्यमित्यर्थः ।

ಸೂತ್ರಾರ್ಥ ಹೀಗಿದೆ - 'ನ' 'ಐಕ್ಯಂ' ಎಂಬೆರೆಡು ಪದಗಳನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ಸ್ಥಿತಿಃ ಎಂದರೆ ಕರ್ಮಫಲವನ್ನು ಉಪಜೀವನ ಮಾಡದೇ ಇರುವವನು. ಅದನ ಎಂದರೆ ಅದನ್ನು ಉಪಜೀವಿಸಿಕೊಂಡಿರುವವನು. ಇವೆರಡರಿಂದ ಜೀವಬ್ರಹ್ಮರಿಗೆ ಅಭೇದವಿಲ್ಲವೆಂದು ತಿಳಿಯುತ್ತದೆ.

''अन्यः पिप्पलं स्वाद्वत्त्यनश्नन्यो अभिचाकशीति'' इति जीवेशयोरदनतद्रहितस्थित्युक्तेरिति भावः ।

'ಅನ್ಯಃ ಪಿಪ್ಪಲಂ ಸ್ವಾದ್ವತ್ತ್ಯನನಶ್ನನ್ಯೋ ಅಭಿಚಾಕಶೀತಿ' ಎಂಬುದಾಗಿ ಮಾಂಡೂಕ್ಯೋಪನಿಷತ್ತಿನಲ್ಲಿ ಜೀವೇಶ್ವರರಿಗೆ ತಿನ್ನುವಿಕೆ ಮತ್ತು ತಿನ್ನದಿರುವಿಕೆ ಎಂಬ ಧರ್ಮವನ್ನು ಹೇಳಿರುವುದರಿಂದ ಇಬ್ಬರಿಗೂ ಭೇದವಿದೆಯೆಂದು ತಿಳಿಯಬೇಕು.

श्रुतावदनस्यादित्वेन अदनस्थितिभ्यामिति वाच्ये स्थितेरीशसम्बन्धित्वेनाभ्यर्हितत्वादल्पाक्षरत्वाच्च व्यत्यासः ।

ಶ್ರುತಿಯಲ್ಲಿ ಅದನವನ್ನು ಮೊದಲು ಹೇಳಲಾಗಿದೆ. ಅದಕ್ಕನುಗುಣವಾಗಿ ಸೂತ್ರದಲ್ಲಿಯೂ ಅದನವನ್ನೇ ಮೊದಲು ಹೇಳಿ 'ಅದನಸ್ಥಿತಿಭ್ಯಾಂ' ಎಂದು ಹೇಳಬೇಕಿತ್ತು. ಆದರೂ ಸಹ ಸ್ಥಿತಿಯು ಈಶನಿಗೆ ಸಂಬಂಧಿಸಿದ್ದರಿಂದ ಶ್ರೇಷ್ಠವಾಗಿದೆ. ಮತ್ತು ಸ್ಥಿತಿಶಬ್ದವು ಅದನ ಶಬ್ದಕ್ಕಿಂತ ಅಲ್ಪಾಕ್ಷರವುಳ್ಳದ್ದಾಗಿದೆ. ಈ ಎರಡು ಕಾರಣಗಳಿಂದ ಅದನಶಬ್ದವನ್ನು ಅನಂತರ ಹೇಳಿ ಸ್ಥಿತಿಶಬ್ದವನ್ನು ಮೊದಲು ಹೇಳಿದ್ದಾರೆ.

अत्र नानुमानमतच्छब्दादित्यनुवृत्त्या अनुमानं भेदमिथ्यात्वे न मानम् । तद्विरुद्धमतत् भेदसत्यत्वम् । अतच्छब्दात् भेदसत्यत्वबोधकशब्दात् । अनुमानमूलभूतशब्दाभावाच्चेति वृत्त्यन्तरमुक्त्वा भेदमिथ्यात्वं निरसनीयामिति वदन्ति ।।१।।

'ನಾನುಮಾನಮತಚ್ಛಬ್ದಾತ್' ಎಂಬ ಸೂತ್ರವನ್ನು ಅನುವೃತ್ತಿಮಾಡಿ ಅನುಮಾನವು ಭೇದಮಿಥ್ಯಾತ್ವವಿಷಯದಲ್ಲಿ ಪ್ರಮಾಣವಲ್ಲವೆಂದು ತಿಳಿಸಿದ್ದಾರೆ. 'ಅತತ್' ಎಂದರೆ ಭೇದಮಿಥ್ಯಾತ್ವಕ್ಕೆ ವಿರುದ್ಧವಾದ ಭೇದಸತ್ಯತ್ವವು ಎಂದರ್ಥ. 'ಅತಚ್ಛಬ್ದಾತ್' ಎಂದರೆ ಭೇದಸತ್ಯತ್ವಕ್ಕೆ ಬೋಧಕವಾದ ಶ್ರುತಿಯಿರುವುದರಿಂದ ಮತ್ತು ಅನುಮಾನಕ್ಕೆ ಮೂಲಭೂತವಾದ ಶ್ರುತಿಯಿಲ್ಲದಿರುವುದರಿಂದ ಎಂದು ಮತ್ತೊಂದು ವ್ಯಾಖ್ಯಾನವನ್ನು ತಿಳಿದು, ಭೇದಮಿಥ್ಯಾತ್ವವನ್ನು ನಿರಾಕರಿಸಬೇಕೆಂದು ಹೇಳುತ್ತಾರೆ.

॥ ಇಲ್ಲಿಗೆ ದ್ಯುಭ್ವಾದ್ಯಧಿಕರಣವು ತಂತ್ರದೀಪಿಕೆಯ ಕನ್ನಡಾನುವಾದದಲ್ಲಿ ಮುಗಿಯಿತು ॥

श्री राघवेन्द्रतीर्थविरचिता

# श्रीन्यायमुक्तावलिः

### अथ प्रथमाध्यायस्य तृतीयः पादः

**द्युभ्वादधिकरणम्** (१) एवम् अन्यत्र प्रसिद्धाशेषनामलिङ्गसमन्वयं महामल्लभञ्जन्यायेन पूर्वमुक्त्वा अत्र उभयत्र प्रसिद्धनामलिङ्गसमन्वयः क्रियते ।।

**।। ॐ द्युभ्वाद्यायतनं स्वशब्दात् ॐ ।। १ ।।**

**।। ॐ मुक्तोपसृप्यव्यपदेशात् ॐ ।। ।। ॐ नानुमानमतच्छब्दात् ॐ ।।**

ದ್ಯುಭ್ವಾದ್ಯಧಿಕರಣ (೧-೩-೧)

**॥ ॐ प्राणभृच्च ॐ ॥ ॥ ॐ भेदव्यपदेशात् ॐ ॥**

**॥ ॐ प्रकरणात् ॐ ॥ ॥ ॐ स्थित्यदनाभ्यां च ॐ ॥**

पूर्वेण नावश्यं सङ्गत्यपेक्षेत्यवोचाम । आथर्वणे ''यस्मिन्द्यौः पृथिवी चान्तरिक्षमोतं मनः सह प्राणैश्च सर्वैः । तमेवैकं जानथा आत्मान''मिति (मुं.२-२-५) श्रुतं द्युभ्वाद्यायतनं किं विष्णुः उत रुद्रादिरिति सन्देहः ।

ವಸ್ತುತಃ ಬೇರೆ ಪಾದವಾದ್ದರಿಂದ ಸಂಗತಿಯನ್ನು ಅವಶ್ಯ ಹೇಳಲೇಬೇಕೆಂಬ ನಿಯಮವಿಲ್ಲ. ಆದ್ದರಿಂದ ಸಂಗತಿಯನ್ನು ನಾವು ತೋರಿಸಿಲ್ಲ. ಆಥರ್ವಣೋಪನಿಷತ್ತಿನಲ್ಲಿ 'ಯಸ್ಮಿನ್ ದ್ಯೌಃ ಪೃಥಿವೀ ಚಾಂತರಿಕ್ಷಮೋತಂ ಮನಃ ಸಹ ಪ್ರಾಣೈಶ್ಚ ಸರ್ವೈಃ । ತಮೇವೈಕಂ ಜಾನಥ ಆತ್ಮಾನಮ್' ಎಂಬುದಾಗಿ ದ್ಯುಭ್ವಾದ್ಯಾಯತನನು ಶ್ರುತನಾಗಿದ್ದಾನೆ. ಇವನು ವಿಷ್ಣುವೋ ಅಥವಾ ರುದ್ರಾದಿಗಳೋ ಎಂದು ಸಂದೇಹ.

रुद्रः प्रधानं वायुः जीवो वेति पूर्वः पक्षः ।''रुद्रो वाव लोकाधारः'' ''प्राणानां ग्रन्थिरसि रुद्रो माऽऽविशान्तकः'' (महाना.) प्राणेश्वरः कृत्तिवासाः पिनाकी (घृत.सू) ''यदूर्ध्वं गार्गि दिवो यदर्वाक् पृथिव्या यदन्तरा द्यावापृथिवी इमे यद्भूतञ्च भवच्च भविष्यच्चेत्याचक्षते आकाश एव तदोतं च प्रोतं चेति'' (बृ.५-८-७) ''वायुना वै गौतम सूत्रेणायं च लोकः परश्च लोकः सर्वाणि च भूतानि सन्दृब्धानी'' ति (बृ.५-७-२) यथाक्रमं त्रिषु समाख्यानात् ।

ರುದ್ರ ಪ್ರಕೃತಿ ವಾಯು ಹಾಗೂ ಜೀವ ಇವರುಗಳು ದ್ಯುಭ್ವಾದ್ಯಾಯತನರಾಗಿದ್ದಾರೆಂದು ಪೂರ್ವಪಕ್ಷ. 'ರುದ್ರೋ ವಾವ ಲೋಕಾಧಾರಃ' 'ಪ್ರಾಣಾನಾಂ ಗ್ರಂಥಿರಸಿ ರುದ್ರೋ ಮಾವಿಶಾಂತಕಃ' ಎಂಬ 'ಮಹಾನಾರಾಯಣೋಪನಿಷತ್' ಹಾಗೂ 'ಪ್ರಾಣೇಶ್ವರಃ ಕೃತ್ತಿವಾಸಾಃ ಪಿನಾಕೀ' ಎಂಬ ಘೃತಸೂಕ್ತ ಇವುಗಳು ರುದ್ರನು ದ್ಯುಭ್ವಾದ್ಯಾಯತನನಾಗಿದ್ದಾನೆನ್ನಲು ಆಧಾರವಾಗಿವೆ.

'ಯದೂರ್ಧ್ವಂ ಗಾರ್ಗಿ ದಿವೋ ಯದರ್ವಾಕ್ ಪೃಥಿವ್ಯಾ ಯದಂತರಾ ದ್ಯಾವಾಪೃಥಿವೀ ಇಮೇ ಯದ್ಭೂತಂ ಚ ಭವಚ್ಚ ಭವಿಷ್ಯಚ್ಚೇತ್ಯಾಚಕ್ಷತೇ ಆಕಾಶ ಏವ ತದೋತಂ ಚ ಪ್ರೋತಂ ಚ' ಎಂಬ ಬೃಹದಾರಣ್ಯಕವು ಪ್ರಕೃತಿಯು ದ್ಯುಭ್ವಾದ್ಯಾಯತನವಾಗಿದೆ ಎನ್ನಲು ಆಧಾರವಾಗಿವೆ.

ಪರಿಪೂರ್ಣಚಂದ್ರಿಕಾ

'ವಾಯುನಾ ವೈ ಗೌತಮಸೂತ್ರೇಣ ಅಯಂ ಚ ಲೋಕಃ ಪರಶ್ಚ ಲೋಕಃ ಸರ್ವಾಣಿ ಚ ಭೂತಾನಿ ಸಂದೃಬ್ಧಾನಿ' ಎಂಬ ಶ್ರುತಿಯು ವಾಯುದೇವನು ದ್ಯುಭ್ವಾದ್ಯಾಯತನನಾಗಿದ್ದಾನೆನ್ನಲು ಆಧಾರವಾಗಿದೆ.

**"स एषोऽन्तश्चरते बहुधा जायमानः" इति (मुं.४-६) जायमानत्वरूप-जीवलिङ्गाच्च ।**

'ಸ ಏಷೋಽಂತಶ್ಚರತೇ ಬಹುಧಾ ಜಾಯಮಾನಃ' ಎಂಬ ಮಾಂಡೂಕ್ಯೋಪನಿಷತ್ತು ಜಾಯಮಾನತ್ವವೆಂಬ ಜೀವಲಿಂಗವನ್ನು ಹೇಳುತ್ತಿದೆ. ಇದರಿಂದ ಜೀವನು ದ್ಯುಭ್ವಾದ್ಯಾಯತನನಾಗಿದ್ದಾನೆಂದು ತಿಳಿಯಬಹುದು.

**लोकाश्च लोकिनश्च विष्णावेव ओताश्चेति विष्णुसमाख्यातोऽपि बहुरुद्रश्रुतिलिङ्गोपेतत्वेन रुद्रसमाख्यायाः प्राबल्यात् । निरवकाशजायमानत्वलिङ्गेन विष्णुसमाख्याया बाधाच्च ।**

'ಲೋಕಾಶ್ಚ ಲೋಕಿನಶ್ಚ ವಿಷ್ಣಾವೇವ ಓತಾಶ್ಚ' ಎಂಬ ಶ್ರುತಿಯು ವಿಷ್ಣುವನ್ನು ಪ್ರತಿಪಾದಿಸಬಹುದು. ಆದರೆ ವಿಷ್ಣುಸಮಾಖ್ಯಾಪ್ರಮಾಣಕ್ಕಿಂತ ಅನೇಕ ಶ್ರುತಿ ಹಾಗೂ ಲಿಂಗಗಳಿಂದ ಕೂಡಿರುವ ಕಾರಣದಿಂದ ರುದ್ರಸಮಾಖ್ಯಾಪ್ರಮಾಣವೇ ಪ್ರಬಲವಾಗಿದೆ. ನಿರವಕಾಶವಾದ ಜಾಯಮಾನತ್ವವೆಂಬ ಲಿಂಗದಿಂದ ವಿಷ್ಣುಸಮಾಖ್ಯಾಪ್ರಮಾಣವು ಬಾಧಿತವಾಗುತ್ತದೆಂದೂ ಸಹ ತಿಳಿಯಬೇಕು.

**नच "अथ परा यया तदक्षरमधिगम्यत" इति परविद्याविषयत्वरूपविष्णुलिङ्गमप्यनवकाशमितिवाच्यम् । एवं हि द्वयाविरोधेन जीवेशाभेदोऽस्तु पूर्वोक्तदिशा विष्णुलिङ्गस्य जीव इव जीवलिङ्गस्य विष्णावयोगादिति ।।**

'ಅಥ ಪರಾ ಯಯಾ ತದಕ್ಷರಮಧಿಗಮ್ಯತೇ' ಎಂಬುದಾಗಿ ಪರವಿದ್ಯಾವಿಷಯತ್ವವೆಂಬ ವಿಷ್ಣುವಿನ ಲಿಂಗವು ನಿರವಕಾಶವಾಗಿದೆಯಲ್ಲವೇ ಎಂದು ಪ್ರಶ್ನಿಸಬಾರದು. ಹಾಗಾದರೆ ಎರಡೂಕಡೆ ನಿರವಕಾಶಪ್ರಮಾಣವಿರುವುದರಿಂದ ಜೀವೇಶರಿಗೆ ಅಭೇದವನ್ನು ಹೇಳಬಹುದು. ಆದ್ದರಿಂದ ಹಿಂದೆ ಹೇಳಿದ ಪ್ರಕಾರ ವಿಷ್ಣುಲಿಂಗವೆಲ್ಲವೂ ಜೀವನಲ್ಲೇ ಬರಬಹುದು. ಆದರೆ ಜೀವನ ಲಿಂಗಗಳು ವಿಷ್ಣುವಿನಲ್ಲಿ ಬರುವುದಿಲ್ಲ. ಏಕೆಂದರೆ ಅಧಿಷ್ಠಾನ ಧರ್ಮವು ಅಧ್ಯಸ್ತದಲ್ಲಿ ಬರುತ್ತದೆ ಹೊರತು; ಅಧ್ಯಸ್ತದಲ್ಲಿರುವ ಧರ್ಮವು ಅಧಿಷ್ಠಾನದಲ್ಲಿ ಬರುವುದಿಲ್ಲ. ಇಷ್ಟು ಪೂರ್ವಪಕ್ಷ.

ದ್ಯುಭ್ವಾದ್ಯಧಿಕರಣ (೧-೩-೧)

सिद्धान्तस्तु ।। आत्मानमित्यात्मशब्दादमृतस्यैष सेतुरिति मुक्तप्राप्यत्वरूपानवकाशविष्णुलिङ्गाद्रुद्राद्यसाधारणभस्मधरोग्रादिशब्दाभावात् । समाख्यागतरुद्रादिशब्दानां ''रुजं द्रावयते यस्मात्'' इत्यादि (ब्रह्माण्डे) स्मृत्या वैष्णवत्वात् ।

ಸಿದ್ಧಾಂತ ಹೀಗಿದೆ -- 'ಆತ್ಮಾನಂ' ಎಂಬುದಾಗಿ ಆತ್ಮಶಬ್ದದ ಬಲದಿಂದ 'ಅಮೃತಸ್ಯೈಷ ಸೇತುಃ' ಎಂಬುದಾಗಿ ಮುಕ್ತಪ್ರಾಪ್ಯತ್ವವೆಂಬ ನಿರವಕಾಶಲಿಂಗದಿಂದ ವಿಷ್ಣುವೇ ದ್ಯುಭ್ವಾದ್ಯಾಯತನನಾಗಿದ್ದಾನೆಂದು ನಿರ್ಣಯಿಸಬೇಕು. ರುದ್ರಾದಿಗಳಲ್ಲಿ ಅಸಾಧಾರಣವಾಗಿರುವ ಭಸ್ಮಧರ, ಉಗ್ರ ಮೊದಲಾದ ಶಬ್ದಗಳನ್ನು ವಿಷ್ಣುವಿನಲ್ಲೇ ಸಮನ್ವಯಗೊಳಿಸಬೇಕು. ಸಮಾಖ್ಯಾಪ್ರಮಾಣದಲ್ಲಿರುವ ರುದ್ರಾದಿಶಬ್ದಗಳನ್ನು 'ರುಜಂ ದ್ರಾವಯತೇ ಯಸ್ಮಾತ್' ಎಂಬ ಬ್ರಹ್ಮಾಂಡಪುರಾಣದ ಆಧಾರದಿಂದ ವಿಷ್ಣುವಿನಲ್ಲೇ ಸಮನ್ವಯಗೊಳಿಸಬೇಕು.

जायमानत्वस्याप्यजायमानो बहुधा विजायत इति श्रुत्यन्तरबलात्प्रादुर्भावाख्यजनिसम्भवेन च विष्णुनिष्ठत्वात् ।

ಜಾಯಮಾನತ್ವವೆಂಬ ಜೀವನ ಲಿಂಗವೂ ಸಹ 'ಅಜಾಯಮಾನೋ ಬಹುಧಾ ವಿಜಾಯತೇ' ಎಂಬ ಶ್ರುತ್ಯಂತರ ಬಲದಿಂದ ಪ್ರಾದುರ್ಭಾವರೂಪವಾದ ಜಾಯಮಾನತ್ವವನ್ನು ವಿಷ್ಣುವಿನಲ್ಲಿ ಕೂಡಿಸಬಹುದು. 'ಜನಿ ಪ್ರಾದುರ್ಭಾವೇ' ಎಂಬ ಧಾತುವು ಈ ವಿಷಯದಲ್ಲಿ ಆಧಾರವಾಗಿದೆ.

द्वे विद्ये वेदितव्ये इति परविद्याविषयतया प्रकृतेशस्यैव जुष्टं यदा पश्यत्यन्यमीशमिति जीवेन भेदव्यपदेशेन तयोरन्यः पिप्पलं स्वाद्वत्त्यनश्नन्न्योऽभिचाकशीतीति जीवेशयोः कर्मफलोपजीवनतद्रहितावस्थानरूपभेदकोक्त्या च तयोरैक्यायोगाद्विष्णुरेव द्युभ्वाद्यायतनमिति ।।

'ದ್ವೇ ವಿದ್ಯೇ ವೇದಿತವ್ಯೇ' ಎಂಬುದಾಗಿ ಪರವಿದ್ಯಾವಿಷಯನಾದವನೇ ಇಲ್ಲಿ ಪ್ರಸಕ್ತನಾಗಿದ್ದಾನೆ. ಅಂತಹವನು 'ಜುಷ್ಟಂ ಯದಾ ಪಶ್ಯತ್ಯನ್ಯಮೀಶಮ್' ಎಂಬುದಾಗಿ ಜೀವನಿಂದ ಭಿನ್ನನಾಗಿದ್ದಾನೆಂದು ಭೇದವ್ಯಪದೇಶವಿದೆ. ಆದ್ದರಿಂದ ಜೀವೇಶರಿಗೆ ಭೇದವನ್ನು ವಿವಕ್ಷಿಸಬಾರದು. ಮತ್ತು 'ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತ್ಯನಶ್ನನ್ನನ್ಯೋ ಅಭಿಚಾಕಶೀತಿ' ಎಂಬ ಶ್ರುತಿಯು ಕರ್ಮಫಲೋಪಜೀವನ ಎಂಬುದು ಜೀವನ ಧರ್ಮವೆಂದೂ ಕರ್ಮಫಲೋಪಜೀವನರಾಹಿತ್ಯವೆಂಬುದು ಈಶನ ಧರ್ಮವೆಂದು ಹೇಳುತ್ತಿದೆ. ಹೀಗೆ ವಿರುದ್ಧವಾದ ಧರ್ಮಗಳಿರುವುದರಿಂದ ಜೀವೇಶರಿಗೆ ಐಕ್ಯವನ್ನು ಹೇಳುವುದು ತಪ್ಪಾಗುತ್ತದೆ. ಜೀವನಿಗಿಂತ ಅತ್ಯಂತ ಭಿನ್ನನಾದ ವಿಷ್ಣುವೇ ದ್ಯುಭ್ವಾದ್ಯಾಯತನನಾಗಿದ್ದಾನೆ.

फले तु द्युभ्वाद्यायतनस्य ब्रह्मान्यत्वे अदृश्यत्वादिगुणकाक्षरमप्यन्यदिति तदाक्षेपसमाधी ॥१॥

ದ್ಯುಭ್ವಾದ್ಯಾಯತನನಾದವನು ಬ್ರಹ್ಮನಿಗಿಂತ ಭಿನ್ನನಾದರೆ ಅದೃಶ್ಯತ್ವಾದಿ ಗುಣಗಳುಳ್ಳ ಅಕ್ಷರನೂ ಸಹ ಅವನೇ ಆಗುತ್ತಾನೆಂದು ಪೂರ್ವಪಕ್ಷದ ಫಲ. ಅದರ ನಿರಾಕರಣೆಯು ಸಿದ್ಧಾಂತದ ಫಲ.

॥ ಶ್ರೀಕೃಷ್ಣಾರ್ಪಣಮಸ್ತು ॥

# सूत्रार्थरत्नावलिः

## अथ प्रथमाध्यायस्य तृतीयः पादः

### द्युभ्वाद्यधिकरणम् (१)

तत्र चान्यत्र च प्रसिद्धानां शब्दानां विष्णौ समन्वयः प्रायेणास्मिन् पादे क्रियते ।

### द्युभ्वाद्यायतनाधिकरणम्

अत्रोभयप्रसिद्धसर्वाधारत्वलिङ्गं ब्रह्मणि समन्वीयते ।

**(१) ॐ ॥ द्युभ्वाद्यायतनं स्वशब्दात् ॥ ॐ**

ननु "रुद्रस्यैव द्युभ्वाद्यायतनत्वं भवेत् । अत्रोक्त प्राणाधारत्वस्य 'प्राणानां ग्रन्थिरसि' (महा.ना.१६।२) इत्यादिना तस्मिन्प्रतीतेः । 'मन ओतं च' इत्यादिना मन आयतनत्वस्य तस्मिन्नैवोक्तत्वात् । प्राणाधारत्वलिङ्गेन 'प्राणेश्वर' (घृतसूक्त) इत्यादिना तस्य प्रतीतेः । जीवस्य वा भवेत् । 'स एषोऽन्तश्चरते' (मुं. २।२।६) इत्यादिना जीवलिङ्गप्रतीतेः" इति प्राप्ते, सूत्रमुपन्यस्यति –

**ॐ ॥ द्युभ्वाद्यायतनं स्वशब्दादिति ॥ अस्यार्थः – द्युभ्वाद्यायतनं 'यस्मिन्' इति वाक्योक्तस्वर्गभूम्यादिसर्वाश्रयो विष्णुरेव । न त्वन्यः । कुतः? स्वशब्दात् स्वेति शब्दः**

ದ್ಯುಭ್ವಾದ್ಯಧಿಕರಣ (೧-೩-೧)

**स्वशब्दगृहीतब्रह्मवाचकात्मशब्दादित्यर्थः ।**

एवञ्च 'तमेवैकमात्मानम्' इति आत्मशब्दाद् विष्णोर्द्युभ्वाद्यायतनत्वमिति सिद्धम् ।।

**(२) ॐ।। मुक्तोपसृप्यव्यपदेशात् ।।ॐ**

ननु "विष्णौ मुख्योऽप्यात्मशब्दः 'अरा इव रथनाभौ' इत्यत्र बहुधा जायमानत्वरूपजीवलिङ्गात् । तस्य जीववादेव प्राणित्वसिद्धेः । ततश्च जीव एव द्युभ्वाद्यायतनम्" इति प्राप्ते, सूत्रं पठति –

**ॐ।। मुक्तोपसृप्यव्यपदेशादिति ।। अस्यार्थः – द्युभ्वाद्यायतनत्वं न विष्णोरन्यस्य । किन्तु विष्णुरेव । कुतः ? मुक्तोपसृप्यव्यपदेशात् । भावप्रधानोऽयम् । द्युभ्वाद्यायतनस्य वस्तुनः 'अमृतस्यैष सेतुः' इति मुक्तप्राप्यवचनात् तस्य चान्यत्रायोगादित्यर्थः ।**

एवञ्च 'अमृतस्यैष सेतुः' (मुं. २।२।५) 'ब्रह्मविदाप्नोति परम्' (तै.उ. २।१) इत्यादिषु मुक्तप्राप्यत्ववचनाद् विष्णोर्द्युभ्वाद्यायतनत्वमिति सिद्धम् ।।

**(३) ॐ।। नानुमानमतच्छब्दात् ।।ॐ**

ननु 'विष्णुप्रापकवत् रुद्रप्रकृत्योरपि प्रापकसद्भावात् तयोर्द्युभ्वाद्यायतनत्वं स्यात्' इति प्राप्ते, सूत्रं पठति –

**ॐ।। नानुमानमतच्छब्दादिति ।। अस्यार्थः – अनुमानम् अनुमानमिति वा । अनुमानसिद्धप्रामाण्ययुतपाशुपताद्यागमैः सर्वाश्रयता कल्पितम् । रुद्रप्रधानादिकं द्युभ्वाद्यायतनं न । कुतः? अतच्छब्दात् भस्मधरोग्रत्वादितच्छ्रुतिलिङ्गाद्यभावा- दित्यर्थः ।**

एवञ्च रुद्रादिशब्दानां सावकाशत्वेन 'प्राणानाम्' (महा.ना.१६।२) इत्यादिवाक्यस्य रुद्रपरत्वनिर्णयेनासाधकत्वात् । निरवकाशानां च भस्मधरोग्रत्वादि- शब्दानामभावात् । ततश्च विष्णोर्द्युभ्वाद्यायतनत्वमिति सिद्धम् ।।

**(४) ॐ।। प्राणभृच्च ।।ॐ**

ननु " स एष इत्यत्र बहुधाजायमानत्वरूपजीवलिङ्गश्रवणात् प्राणित्वसिद्धेश्च जीवसामान्यस्य 'वायुना वै गौतमसूत्रेणायं लोकः'(बृ. ५।७।२) इति

विषयभूतलोकाधारत्वस्य वायुनिष्ठत्वेन श्रवणाद् वायोर्वा द्युभ्वाद्यायतनत्वं स्यात्'' इति प्राप्ते, सूत्रमुपन्यस्यति –

**ॐ।। प्राणभृच्चेति ।। अस्यार्थः – जीवोऽप्यत एव न द्युभ्वाद्यायतन इत्यर्थः ।**

एवञ्च प्रागुक्तसावकाशसाधकसद्भावेऽपि निरवकाशात्मशब्दाभावादेव तत्प्रापकत्वेनाभिमतस्य बहुधा जन्मादेः 'अजायमानः' (तै.आ.३।१३।१) श्रुतेर्विष्णावेव सम्भवाच्च न जीवस्य वायोर्वा द्युभ्वाद्यायतनत्वमिति सिद्धम् ।।

**(५) ॐ।। भेदव्यपदेशात् ।।ॐ**

ननु ''जीवलिङ्गस्य किं विष्णुत्वप्रतिपादनायासेन, जीवस्यैव द्युभ्वाद्यायतनत्वे विष्णोः तल्लाभसम्भवात् । न चोक्तहेतुविरोधः । जीवेशाभेदाभिप्रायेण जीवेऽप्यात्मशब्दाद् युक्तिसम्भवात् जीव एव द्युभ्वाद्यायतनत्वेन प्रतिपाद्यो भवेत्'' इति प्राप्ते, सूत्रमाह –

**ॐ।। भेदव्यपदेशादिति ।। अस्यार्थः – 'अन्यमीशम्' इति जीवेशयोर्भेदोक्तेर्न तयोरैक्यमित्यर्थः ।**

एवञ्च 'जुष्टं यदा पश्यति' (३।१।१) इत्यत्र दर्शनकर्तृत्वेन प्रकृतजीवस्य ईशपदोक्तेश्वराद् भेदोक्तेर्विष्णुरेव द्युभ्वाद्यायतनत्वेन प्रतिपाद्य इति सिद्धम् ।

**(६) ॐ।। प्रकरणात् ।।ॐ**

ननु ''जीवस्य कस्माच्चिदीशादन्यत्वमुच्यते न तु परमात्मनः । ततश्च न तयोर्भेदः'' इति प्राप्ते, पराकुर्वत् सूत्रमाह –

**ॐ।। प्रकरणादिति ।। अस्यार्थः – 'अन्यम्' इत्यादेर्विष्णुप्रकरणत्वात् । अत्र जीवस्य विष्णुभेद एवोच्यते । न त्वन्यस्माद् भेद इत्यर्थः ।**

एवञ्च 'द्वे विद्ये' इत्यस्य परविद्याविषयवस्तुनोऽत्राधीतत्वेन विष्णुप्रकरणत्वात् परमात्मन एव भेदव्यपदेशावगतेर्विष्णुरेव द्युभ्वाद्यायतन इति सिद्धम् ।

**(७) ॐ।। स्थित्यदनाभ्यां च ।।ॐ**

एवं न केवलं 'जुष्टम्' इति भेदश्रुतेः जीवेशभेदोऽत्र प्रकरणे विवक्षितः इति ज्ञायते किन्तु लिङ्गादपीत्याह सूत्रकृत् –

**ॐ।। स्थित्यदनाभ्यां चेति ।। अस्यार्थः – ईशजीवयोः 'द्वा सुपर्णा'**

(मुं. ३।१।१) इत्यादिवाक्योक्तं कर्मफलानुपजीवनस्थितितदुपजीवनरूपहेतुभ्यां च न तयोरैक्यं वाच्यमित्यर्थः ।

एवञ्च निर्दुष्टश्रुत्या जीवेशयोर्भेदस्य सिद्धत्वान्न जीवः किन्तु विष्णुरेव द्युभ्वाद्यायतन इति सिद्धम् ।।

।। इति प्रथमाध्यायस्य तृतीयः पादः ।।

।। इति सूत्रार्थरत्नावळ्यां द्युभ्वादधिकरणम् ।।

॥ ಪರಿಪೂರ್ಣಚಂದ್ರಿಕೆಯಲ್ಲಿ ದ್ಯುಭ್ವಾದ್ಯಧಿಕರಣವು ಮುಗಿಯಿತು ॥

॥ ಶ್ರೀಮಧ್ವೇಶಾರ್ಪಣಮಸ್ತು ॥

# ಭೂಮಾಧಿಕರಣ

(೧-೩-೨)

## ಭಾಗ -೧

ಬ್ರಹ್ಮಸೂತ್ರ, ಸೂತ್ರದೀಪಿಕಾ, ಬ್ರಹ್ಮಸೂತ್ರಭಾಷ್ಯ,
ಸತ್ತರ್ಕದೀಪಾವಳಿ, ತತ್ವಪ್ರಕಾಶಿಕಾ,
ಭಾವದೀಪ ಇವುಗಳ ವಿವರಣೆಯೊಂದಿಗೆ
ಸರಳ ಕನ್ನಡ ಅನುವಾದ

* * *

ಭಾಷ್ಯದೀಪಿಕಾ ಹಾಗೂ ವಾಕ್ಯಾರ್ಥಮಂಜರೀ -
ಸಂಪೂರ್ಣ ಸಂಸ್ಕೃತ ಮೂಲ.

॥ ಶ್ರೀಗುರುಭ್ಯೋ ನಮಃ ॥

ದೇವದೇವೋತ್ತಮ ದೇವತಾಸಾರ್ವಭೌಮ
ಅಖಿಲಾಂಡಕೋಟಿಬ್ರಹ್ಮಾಂಡನಾಯಕ, ಚತುರ್ದಶಲೋಕಗುರುಗಳಾದ
ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ

ಬ್ರಹ್ಮಮೀಮಾಂಸಾಶಾಸ್ತ್ರ

# ಭೂಮಾಧಿಕರಣ

## ಪೂರ್ಣಸುಖಸ್ವರೂಪನಾದ ವಿಷ್ಣುವೇ 'ಭೂಮಾ'

।। अथ भूमाधिकरणम् ।।

**सू – ॐ ॥ भूमा सम्प्रसादादध्युपदेशात् ॥ ॐ ॥ ८ ॥**

ಯಾವಾತನು ಭೂಮಾ ಎಂಬ ಶಬ್ದದಿಂದ ಪ್ರತಿಪಾದ್ಯನೋ ಅವನು ಪೂರ್ಣಸ್ವರೂಪಸುಖನಾಗಿದ್ದಾನೆಂದು, ಮತ್ತು ನಾಮಾಭಿಮಾನಿಯಾದ ಉಷಾದೇವಿಯಿಂದ ಪ್ರಾರಂಭಿಸಿ ವಾಯುದೇವತೆಗಿಂತ ಅಧಿಕನನ್ನಾಗಿ ಹೇಳಿರುವುದರಿಂದಲೂ ಭೂಮಾ ಎಂಬ ಪದದಿಂದ ವಿಷ್ಣುವೇ ಪ್ರತಿಪಾದ್ಯನಾಗುತ್ತಾನೆ.

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका – भूमा** – 'यो वै भूमा' इति श्रुतौ भूमाशब्दोक्तपूर्णो विष्णुरेव । कुतः? सम्प्रसादात् - 'भूम्नस्तत्सुखम्' इत्यनेन सम्प्रसादशब्दितपूर्णसुखरूपत्वाभिधानात् । किञ्च अध्युपदेशात् - नामादेरपि तदुपरि नामादिदेवतोत्तमत्वेन भूम्नोऽभिधानाच्चेत्यर्थः।।

ಪರಿಪೂರ್ಣಚಂದ್ರಿಕಾ

ಭೂಮಾ = ಯೋ ವೈ ಭೂಮಾ ಎಂಬ ಶ್ರುತಿಯಲ್ಲಿ ಭೂಮಾ ಎಂಬ ಶಬ್ದದಿಂದ ಪ್ರತಿಪಾದ್ಯನಾದವನು ಸುಖಪೂರ್ಣನಾದ ವಿಷ್ಣುವೇ ಆಗಿದ್ದಾನೆ. ಏಕೆಂದರೆ, ಸಂಪ್ರಸಾದಾತ್ = ತತ್ಸುಖಂ ಎಂಬುದರಿಂದ ಪೂರ್ಣಸುಖಸ್ವರೂಪತ್ವವನ್ನು ಹೇಳಿರುವುದರಿಂದ ಮತ್ತು ಅಧ್ಯುಪದೇಶಾತ್ = ನಾಮಾಭಿಮಾನಿಯಾದ ದೇವತೆಗಿಂತ ಅಧಿಕರಾದ ವಾಯುದೇವತೆಗಿಂತಲೂ ಉತ್ತಮನೆಂದು ಭೂಮನನ್ನು ಹೇಳಿರುವುದರಿಂದ.

## श्रीमदानन्दतीर्थभगवत्पादाचार्यविरचित-
## ब्रह्मसूत्रभाष्यम्

**भाष्यम् – 'प्राणो वा आशाया भूयान्' इत्युक्त्वा 'यो वै भूमा तत् सुखम्' (छां. ७–२३.)इत्युक्तेस्तस्यैव भूमत्वप्राप्तिः ।**

ಅನುವಾದ - ಛಾಂದೋಗ್ಯಶ್ರುತಿಯಲ್ಲಿ ಪ್ರಾಣನಾದರೂ ಆಶಾ ಎಂಬ ಭಾರತೀದೇವಿಗಿಂತ ದೊಡ್ಡವನಾಗಿದ್ದಾನೆಂದು ಹೇಳಿ, ಮುಂದೆ ಪ್ರಸಿದ್ಧವಾದ ಯಾವ ವಾಯುದೇವರಿದ್ದಾನೋ ಅವನೇ ಸುಖಪೂರ್ಣನಾಗಿದ್ದಾನೆಂದು ಹೇಳಲಾಗಿದೆ. ಆದ್ದರಿಂದ ಭೂಮಾ ಎಂಬ ಶಬ್ದದಿಂದ ತಿಳಿಯುವ ಆನಂದಪೂರ್ಣತ್ವವು ವಾಯು- ದೇವನಲ್ಲೇ ಬರುತ್ತದೆ.

ಪ್ರತಿಪದಾರ್ಥ -- ಈ ಅಧಿಕರಣದಲ್ಲಿ ಭೂಮಾ ಎಂಬ ನಾಮಾತ್ಮಕಶಬ್ದವನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡುತ್ತಿದ್ದಾರೆ. ಭೂಮ್ನಾ ಕ್ರತುವತ್ ಎಂಬ ಸೂತ್ರದಲ್ಲಿ ಭೂಮಾಶಬ್ದವನ್ನು ಧರ್ಮವಾಚಕವಾಗಿ ವಿಕ್ಷಿಸಿದ್ದರೂ ಈ ಅಧಿ ಕರಣದಲ್ಲಿ ಪೂರ್ಣವಾಗಿರುವಿಕೆ ಎಂದು ಧರ್ಮ್ಯರ್ಥದಲ್ಲಿ ಪ್ರಯೋಗಿಸಲಾಗಿದೆ. ಅಂದರೆ ಗುಣಗಳಿಂದ ಉತ್ತಮನಾಗಿದ್ದಾನೆಂದರ್ಥ. ಶ್ರುತ್ಯಾದಿಸಂಗತಿ ಹಾಗೂ ವಿಷಯಾದಿಗಳನ್ನು ಸೂಚಿಸುತ್ತಾ, ಯುಕ್ತಿಬದ್ಧವಾದ ಪೂರ್ವಪಕ್ಷವನ್ನು ಪ್ರಾಣೋ ವಾ ಇತ್ಯಾದಿ ಭಾಷ್ಯದಿಂದ ತೋರಿಸುತ್ತಿದ್ದಾರೆ.

ಪ್ರಾಣೋ ವಾ = ಮುಖ್ಯಪ್ರಾಣನಾದರೋ, ಆಶಾಯಾಃ = ಆಶಾ ಎಂಬ ಹೆಸರಿನ ಭಾರತೀದೇವಿಗಿಂತ, ಭೂಯಾನ್ = ಗುಣದಲ್ಲಿ ದೊಡ್ಡವನು, ಇತ್ಯುಕ್ತ್ವಾ = ಹೀಗೆ ಹೇಳಿ, ಮುಂದೆ ಯೋ ವೈ ಭೂಮಾ = ಯಾವ ಪ್ರಸಿದ್ಧನಾದ ವಾಯುದೇವನಿದ್ದಾನೋ, ತತ್ = ಅವನೇ, ಸುಖಪೂರ್ಣನು, ಇತ್ಯುಕ್ತೇಃ = ಹೀಗೆ ಹೇಳಿರುವುದರಿಂದ, ತಸ್ಯೈವ = ಮುಖ್ಯಪ್ರಾಣನಿಗೇನೇ, ಭೂಮತ್ವಪ್ರಾಪ್ತಿಃ = ಭೂಮಾ ಎಂಬ ಶಬ್ದಪ್ರತಿಪಾದ್ಯತ್ವವು, ಯುಕ್ತವಾಗುತ್ತದೆ.(१)

(१) **भाष्यदीपिका** – अत्राधिकरणे भूमनाम्नो विष्णौ समन्वयः प्रतिपाद्यते । भूमशब्दश्च 'भूम्नः क्रतुवत्' इत्यादौ कचिद्धर्मवाचकोऽप्यत्र पूर्णरूपधर्मिवचनः । पूर्णत्वं च गुणत उत्तमत्वमिति ध्येयम् । श्रुत्यादिसङ्गतिं विषयादिकं च सूचयन् सयुक्तिकं पूर्वपक्षं दर्शयति

॥ ಶ್ರೀಗುರುಭ್ಯೋ ನಮಃ ॥

ದೇವದೇವೋತ್ತಮ ದೇವತಾಸಾರ್ವಭೌಮ
ಅಖಿಲಾಂಡಕೋಟಿಬ್ರಹ್ಮಾಂಡನಾಯಕ, ಚತುರ್ದಶಲೋಕಗುರುಗಳಾದ
ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ

ಬ್ರಹ್ಮಮೀಮಾಂಸಾಶಾಸ್ತ್ರ

# ಭೂಮಾಧಿಕರಣ

## ಪೂರ್ಣಸುಖಸ್ವರೂಪನಾದ ವಿಷ್ಣುವೇ 'ಭೂಮಾ'

।। अथ भूमाधिकरणम् ।।

**सू – ॐ ॥ भूमा सम्प्रसादादध्युपदेशात् ॥ ॐ ॥ ८ ॥**

ಯಾವಾತನು ಭೂಮಾ ಎಂಬ ಶಬ್ದದಿಂದ ಪ್ರತಿಪಾದ್ಯನೋ ಅವನು ಪೂರ್ಣಸ್ವರೂಪಸುಖನಾಗಿದ್ದಾನೆಂದು, ಮತ್ತು ನಾಮಾಭಿಮಾನಿಯಾದ ಉಷಾದೇವಿಯಿಂದ ಪ್ರಾರಂಭಿಸಿ ವಾಯುದೇವತೆಗಿಂತ ಅಧಿಕನನ್ನಾಗಿ ಹೇಳಿರುವುದರಿಂದಲೂ ಭೂಮಾ ಎಂಬ ಪದದಿಂದ ವಿಷ್ಣುವೇ ಪ್ರತಿಪಾದ್ಯನಾಗುತ್ತಾನೆ.

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका – भूमा –** 'यो वै भूमा' इति श्रुतौ भूमाशब्दोक्तपूर्णो विष्णुरेव । कुतः? सम्प्रसादात् - 'भूमस्तत्सुखम्' इत्यनेन सम्प्रसादशब्दितपूर्णसुखरूपत्वाभिधानात् । किञ्च अध्युपदेशात् - नामादेरपि तदुपरि नामादिदेवतोत्तमत्वेन भूम्नोऽभिधानाच्चेत्यर्थः।।

ಭೂಮಾ = ಯೋ ವೈ ಭೂಮಾ ಎಂಬ ಶ್ರುತಿಯಲ್ಲಿ ಭೂಮಾ ಎಂಬ ಶಬ್ದದಿಂದ ಪ್ರತಿಪಾದ್ಯನಾದವನು ಸುಖಪೂರ್ಣನಾದ ವಿಷ್ಣುವೇ ಆಗಿದ್ದಾನೆ. ಏಕೆಂದರೆ, ಸಂಪ್ರಸಾದಾತ್ = ತತ್ಸುಖಂ ಎಂಬುದರಿಂದ ಪೂರ್ಣಸುಖಸ್ವರೂಪತ್ವವನ್ನು ಹೇಳಿರುವುದರಿಂದ ಮತ್ತು ಅಧ್ಯುಪದೇಶಾತ್ = ನಾಮಾಭಿಮಾನಿಯಾದ ದೇವತೆಗಿಂತ ಅಧಿಕರಾದ ವಾಯುದೇವತೆಗಿಂತಲೂ ಉತ್ತಮನೆಂದು ಭೂಮನನ್ನು ಹೇಳಿರುವುದರಿಂದ.

## श्रीमदानन्दतीर्थभगवत्पादाचार्यविरचित-

# ब्रह्मसूत्रभाष्यम्

**भाष्यम् – 'प्राणो वा आशाया भूयान्' इत्युक्त्वा 'यो वै भूमा तत् सुखम्' (छां. ७–२३.)इत्युक्तेस्तस्यैव भूमत्वप्राप्तिः ।**

ಅನುವಾದ - ಛಾಂದೋಗ್ಯಶ್ರುತಿಯಲ್ಲಿ ಪ್ರಾಣನಾದರೂ ಆಶಾ ಎಂಬ ಭಾರತೀದೇವಿಗಿಂತ ದೊಡ್ಡವನಾಗಿದ್ದಾನೆಂದು ಹೇಳಿ, ಮುಂದೆ ಪ್ರಸಿದ್ಧವಾದ ಯಾವ ವಾಯುದೇವರಿದ್ದಾನೋ ಅವನೇ ಸುಖಪೂರ್ಣನಾಗಿದ್ದಾನೆಂದು ಹೇಳಲಾಗಿದೆ. ಆದ್ದರಿಂದ ಭೂಮಾ ಎಂಬ ಶಬ್ದದಿಂದ ತಿಳಿಯುವ ಆನಂದಪೂರ್ಣತ್ವವು ವಾಯು- ದೇವನಲ್ಲೇ ಬರುತ್ತದೆ.

ಪ್ರತಿಪದಾರ್ಥ -- ಈ ಅಧಿಕರಣದಲ್ಲಿ ಭೂಮಾ ಎಂಬ ನಾಮಾತ್ಮಕಶಬ್ದವನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡುತ್ತಿದ್ದಾರೆ. ಭೂಮ್ನಾ ಕ್ರತುವತ್ ಎಂಬ ಸೂತ್ರದಲ್ಲಿ ಭೂಮಾಶಬ್ದವನ್ನು ಧರ್ಮವಾಚಕವಾಗಿ ವಿಕ್ಷಿಸಿದ್ದರೂ ಈ ಅಧಿ ಕರಣದಲ್ಲಿ ಪೂರ್ಣವಾಗಿರುವಿಕೆ ಎಂದು ಧರ್ಮ್ಯರ್ಥದಲ್ಲಿ ಪ್ರಯೋಗಿಸಲಾಗಿದೆ. ಅಂದರೆ ಗುಣಗಳಿಂದ ಉತ್ತಮನಾಗಿದ್ದಾನೆಂದರ್ಥ. ಶ್ರುತ್ಯಾದಿಸಂಗತಿ ಹಾಗೂ ವಿಷಯಾದಿಗಳನ್ನು ಸೂಚಿಸುತ್ತಾ, ಯುಕ್ತಿಬದ್ಧವಾದ ಪೂರ್ವಪಕ್ಷವನ್ನು ಪ್ರಾಣೋ ವಾ ಇತ್ಯಾದಿ ಭಾಷ್ಯದಿಂದ ತೋರಿಸುತ್ತಿದ್ದಾರೆ.

ಪ್ರಾಣೋ ವಾ = ಮುಖ್ಯಪ್ರಾಣನಾದರೋ, ಆಶಾಯಾಃ = ಆಶಾ ಎಂಬ ಹೆಸರಿನ ಭಾರತೀದೇವಿಗಿಂತ, ಭೂಯಾನ್ = ಗುಣದಲ್ಲಿ ದೊಡ್ಡವನು, ಇತ್ಯುಕ್ತ್ವಾ = ಹೀಗೆ ಹೇಳಿ, ಮುಂದೆ ಯೋ ವೈ ಭೂಮಾ = ಯಾವ ಪ್ರಸಿದ್ಧನಾದ ವಾಯುದೇವನಿದ್ದಾನೋ, ತತ್ = ಅವನೇ, ಸುಖಪೂರ್ಣನು, ಇತ್ಯುಕ್ತೇಃ = ಹೀಗೆ ಹೇಳಿರುವುದರಿಂದ, ತಸ್ಯೈವ = ಮುಖ್ಯಪ್ರಾಣನಿಗೇನೇ, ಭೂಮತ್ವಪ್ರಾಪ್ತಿಃ = ಭೂಮಾ ಎಂಬ ಶಬ್ದಪ್ರತಿಪಾದ್ಯತ್ವವು, ಯುಕ್ತವಾಗುತ್ತದೆ.(१)

(१) **भाष्यदीपिका –** अत्राधिकरणे भूमनाम्नो विष्णौ समन्वयः प्रतिपाद्यते । भूमशब्दश्च 'भूम्नः क्रतुवत्' इत्यादौ क्वचिद्धर्मवाचकोऽप्यत्र पूर्णरूपधर्मिवचनः । पूर्णत्वं च गुणत उत्तमत्वमिति ध्येयम् । श्रुत्यादिसङ्गतिं विषयादिकं च सूचयन् सयुक्तिकं पूर्वपक्षं दर्शयति

**(२) 'उत्क्रान्तप्राणान्' (छां. ७–१५–३.) इत्यादितल्लिङ्गात् प्राणशब्दश्च वायुवाचीति ।**

ಮುಖ್ಯಪ್ರಾಣನು ನಿರ್ಗಮಿಸಿದ ಮೇಲೆ ತಂದೆ ಮೊದಲಾದವರನ್ನು ಸುಟ್ಟರೂ ಪಾಪವಿಲ್ಲ ಎಂದು ದೇಹದಿಂದ ನಿರ್ಗಮನರೂಪವಾದ ಪ್ರಾಣನ ಲಿಂಗವು ಕೇಳಿಸುತ್ತಿದೆ. ಆದ್ದರಿಂದ ಪ್ರಾಣೋ ವಾ' ಎಂಬ ವಾಕ್ಯದಲ್ಲಿರುವ ಪ್ರಾಣಶಬ್ದದಿಂದ ಮುಖ್ಯಪ್ರಾಣನೇ ಪ್ರತಿಪಾದ್ಯನಾಗುತ್ತಾನೆ. ಆದ್ದರಿಂದಲೇ ಭೂಮಾಶಬ್ದದಿಂದಲೂ ಅವನೇ ಪ್ರತಿಪಾದ್ಯನಾಗುತ್ತಾನೆ.

ಪ್ರತಿಪದಾರ್ಥ -- 'ಪ್ರಾಣೋ ವಾ ಆಶಾಯಾಭೂಯಾನ್' ಎಂಬಲ್ಲಿ ಕೇಳಿಸುತ್ತಿರುವ ಪ್ರಾಣಶಬ್ದವು 'ಅತ ಏವ ಪ್ರಾಣಃ' ಎಂಬ ಸೂತ್ರದಲ್ಲಿ ಹೇಳಿರುವ ಪ್ರಕಾರ ವಿಷ್ಣುವನ್ನೇ

---

**– प्राण इति ।।**

'छान्दोग्ये' इत्यादौ उपस्कार्यम् । 'इत्युक्त्वा' इत्युपक्रम्येत्युपलक्षणम् । तदुक्तमनुक्त्वेत्यपि द्रष्टव्यम् । अत एव तस्यैव प्राणस्यैवेत्येवकारोऽन्यव्यवच्छेदकः प्रायोजि । श्रुतौ पूर्वपक्षे प्राणशब्दो वायुमात्रपरः । सिद्धान्ते तु भाष्यरीत्या वायुविष्णूभयपरः । न्यायविवरणच्छान्दोग्यभाष्यरीत्या तु वायुमात्रपरः । न च वायुविष्णूभयवाचित्वं वायुमात्रवाचित्वमित्यर्थद्वयं विरुद्धम् । अन्तर्यामिविवक्षया भाष्यस्य, तदविवक्षया विवरणादेः प्रवृत्तत्वात् । यथा 'आत्मनः आकाशः' (तै.२–१) इत्यत्र सम्भूतशब्दस्यानेकार्थत्वेऽन्तर्यामि-विष्णुरप्याकाशपदेनोच्यते । तस्य जनिमात्रार्थत्वे तु न तेन स उच्यते । तथा तत्त्वप्रदीपे तु 'अभ्युपगमवादत्वात्' इत्यादिना अयं प्राणो विष्णुरित्यभ्युपेत्य वादेन भाष्यं प्रवृत्तम्, इत्युक्तम् । तथा चाऽद्यपक्षे प्राणः 'आशायाः' भारत्याः 'भूयान्' गुणतो ज्येष्ठः । एवं 'प्राणः' तदन्तर्यामी विष्णुरन्तर्यामित्वादेव तत आशायाश्च भूयानित्यर्थः ।

अनेन पूर्वमानन्दमयशब्दोक्तसजातीयोत्कृष्टत्वरूपपूर्णत्वस्येह वायावाक्षेपादानन्दमयाधि-करणेनास्याऽक्षेपिकी सङ्गतिः सूचिता । छन्दोगश्रुत्युक्तो भूमाख्यो विषयः, किं वायुरुत विष्णुरिति सन्देहश्च सूचितः । तथा तस्यैव भूमत्वप्राप्तिरिति पूर्वपक्षः । तत्र प्राणोपक्रमतदुक्तमानुक्तिरूपयुक्तिश्च दर्शिता भवति । 'यो वै भूमा तत्सुखं नाल्पे सुखमस्ति भूमैव सुखम्' इति वाक्ये सुखशब्दः पूर्णसुखार्थः । 'यत्सुखं स भूमा' इति व्यासतीर्थीयोक्तेः, सर्वनामानि पर्यायेण तत्तल्लिङ्गभाञ्जीत्युक्तेश्च निरुपपदसुखशब्दमात्रस्यापि पूर्णसुखार्थत्वात् । यदनन्याधीनपूर्णानन्दसुखं स भूमा गुणतः पूर्णो नारायण इत्युद्देश्यविधेययोर्व्यत्ययः । अत एव स्वातन्त्र्येण सुखस्य विशेषणान्न मुक्तजीवेष्वनैकान्त्यमित्याशयेन तदुपपादयति – नाल्प इति ।। 'अल्पे' अपूर्णे मुक्तजीवे तत्प्रसादं विना यतः सुखं नास्तीत्यर्थः । निगमयति – भूमैव सुखमिति ।। अत्रापि व्यत्ययः ।

ಪ್ರತಿಪಾದಿಸುತ್ತದೆ. ಆದ್ದರಿಂದ ವಿಷ್ಣುವೇ ಭೂಮನೆನಿಸುತ್ತಾನೆ. ಹೀಗಿರುವಾಗ ಪ್ರಾಣಶಬ್ದದ ಬಲದಿಂದ ಮುಖ್ಯಪ್ರಾಣನಲ್ಲಿ ಭೂಮತ್ವವನ್ನು ಹೇಳಲು ಹೇಗೆ ಸಾಧ್ಯ? ಈ ಆಕ್ಷೇಪಕ್ಕೆ ಉತ್ತರಿಸುತ್ತಿದ್ದಾರೆ.

ಉತ್ಕ್ರಾಂತಪ್ರಾಣಾನ್ = ದೇಹದಿಂದ ನಿರ್ಗಮಿಸಿರುವ ಪ್ರಾಣನುಳ್ಳ ತಂದೆ ಮೊದಲಾದವರನ್ನು, ಇತ್ಯಾದಿ = ಇವೇ ಮೊದಲಾದ, ತಲ್ಲಿಂಗಾತ್ = ಮುಖ್ಯಪ್ರಾಣನ ಲಿಂಗಗಳಿರುವುದರಿಂದ, ಪ್ರಾಣಶಬ್ದಸ್ಥ = ಪ್ರಾಣೋ ವಾ ಆಶಾಯಾಃ' ಎಂಬಲ್ಲಿರುವ ಪ್ರಾಣಶಬ್ದವಾದರೋ, ವಾಯುವಾಚೀ = ಮುಖ್ಯಪ್ರಾಣನನ್ನೇ ಪ್ರತಿಪಾದಿಸುತ್ತದೆ, ಇತಿ = ಇಷ್ಟು ಪೂರ್ವಪಕ್ಷ.(१)

## (३) अतो वक्ति –

## सू – ॐ ॥ भूमा सम्प्रसादादध्युपदेशात् ॥ ॐ ॥ ८ ॥

**'सम्प्रसादात्' पूर्णसुखरूपत्वात् 'अध्युपदेशात्' सर्वेषामुपर्युपदेशाच्च विष्णुरेव भूमा ।**

ಅನುವಾದ - ಈ ಪೂರ್ವಪಕ್ಷವು ಪ್ರಾಪ್ತವಾದಾಗ ಸೂತ್ರಕಾರರು ಸೂತ್ರವನ್ನು ಪಠಿಸುತ್ತಿದ್ದಾರೆ. ಓಂ ಭೂಮಾಸಂಪ್ರಸಾದಾದಧ್ಯುಪದೇಶಾತ್ ಓಂ' ಸಂಪ್ರಸಾದಾತ್' ಎಂದರೆ ಪೂರ್ಣಸುಖವನ್ನು ಉಲ್ಲೇಖಿಸಿರುವುದರಿಂದ, ಅಧ್ಯುಪದೇಶಾತ್ =

(१) भाष्यदीपिका – ननु 'प्राणो वा आशाया भूयान्' इत्युक्तप्राणशब्दस्य 'अत एव प्राणः' (ब्र. सू. १-१-२३) इत्युक्तरीत्या विष्णुपरत्वाद् विष्णोरेव भूमत्वप्राप्तेः कथं प्राणशब्दबलाद् वायोर्भूमत्वप्राप्तिरित्यत आह – उत्क्रान्तेति ।। इत्यादीति ।। लुप्तविभक्तिको निर्देशः । आदिशब्देन 'उत्क्रान्तप्राणान् शूलेन समासं व्यतिषं दहेत् नैनं ब्रूयुः पितृहाऽसीति' (छा. उ.७-१५-३) समग्रवाक्यं गृह्यते । तच्च तत् लिङ्गं च, तस्य लिङ्गमिति च विग्रहः । अयमिति शेषः । चशब्दोऽवधारणे । वायुवाची चेति भिन्नक्रमः । तथा च 'अयं' प्राणशब्दो 'वायुवाच्येव' न विष्णुवाची । कुतः ? 'उत्क्रान्तप्राणान्' इत्यादौ 'तल्लिङ्गात्' तस्य प्राणस्योत्क्रमणादिरूपलिङ्गश्रवणादिति योजना । उत्क्रान्तः प्राणो येभ्यस्ते तथोक्ताः । तान् मातृपित्राचार्यादीन् 'समासं' साकल्येन 'व्यतिषम्' एकदेशेन च शूलेन विलुण्ठ्य यदि दहेत्पुत्रः शिष्यो वा तथा नैनं ब्रूयुः जनाः । किमिति? पितृहाऽसीति मातृहाऽसीति । मुख्यप्राणसन्निधानाभावादिति भावः । इति श्रुत्यर्थः ।

ಸಕಲದೇವತೆಗಳಿಗಿಂತಲೂ ಅಧಿಕನಾಗಿದ್ದಾನೆಂದು ಹೇಳಿರುವ ಕಾರಣ, ಭೂಮಾ = ಭೂಮಶಬ್ದದಿಂದ ವಿಷ್ಣುವೇ ಪ್ರತಿಪಾದ್ಯನು.

ಪ್ರತಿಪದಾರ್ಥ -- ಸಿದ್ಧಾಂತವನ್ನು ಸ್ಥಾಪಿಸುವುದಕ್ಕಾಗಿ ಸೂತ್ರವನ್ನು ಪಠಿಸುತ್ತಿದ್ದಾರೆ.

ಅತಃ = ಪೂರ್ವಪಕ್ಷದ ಪರಿಹಾರಕ್ಕಾಗಿ, ವಕ್ತಿ = ಸೂತ್ರಕಾರರು ಸೂತ್ರವನ್ನು ಪಠಿಸುತ್ತಿದ್ದಾರೆ. ಸಂಪ್ರಸಾದಾತ್ = ಪೂರ್ಣಸುಖಸ್ವರೂಪನೆಂದು ಹೇಳಿರುವುದರಿಂದ, ಅಧ್ಯುಪದೇಶಾತ್ = ಪ್ರಾಣನೇ ಮೊದಲಾದ ದೇವತೆಗಳಿಗಿಂತಲೂ ಅತ್ಯಧಿಕನೆಂದು ಹೇಳಿರುವದರಿಂದಲೂ, ವಿಷ್ಣುರೇವ = ವಿಷ್ಣುವೇ, ಭೂಮಾ = ಭೂಮಾ ಎಂಬ ಶಬ್ದದಿಂದ ಪ್ರತಿಪಾದ್ಯನಾಗಿದ್ದಾನೆ.(१)

**(४) 'सहस्रशीर्षं देवं विश्वाक्षं विश्वशम्भुवम् ।**
**विश्वं नारायणं देवमक्षरं परमं पदम् ॥**
**विश्वतः परमां नित्यम्' (महाना. ११.) इति हि श्रुतिः ।**

ಅನುವಾದ - ಅನಂತ ಶಿರಸ್ಸುಳ್ಳ ಕ್ರೀಡಾದಿಗುಣವಿಶಿಷ್ಟನಾದ, ಎಲ್ಲೆಡೆ ದೃಷ್ಟಿಯುಳ್ಳ ಪೂರ್ಣಸುಖಾಶ್ರಯನಾದ, ಜಗತ್ತಿನ ಒಳಗಡೆ ಪ್ರವೇಶಿಸಿರುವ ನಾರಾಯಣಶಬ್ದವಾಚ್ಯನಾದ, ಸರ್ವಪ್ರೇರಕನಾದ, ತ್ರಿವಿಧನಾಶರಹಿತನಾದ, ಸರ್ವೋತ್ತಮನಾದ, ಶಶ್ವದೇಕಪ್ರಕಾರನಾದ ನಾರಾಯಣನನ್ನು (ಭಗವಂತನನ್ನು) ಎಲ್ಲರೂ ಉಪಜೀವಿಸಿದ್ದಾರೆಂದು ಶ್ರುತಿಯು ಹೇಳುತ್ತಿದೆ.

---

(१) **भाष्यदीपिका** – सिद्धान्तयत्सूत्रमवतारयति – **अत इति** ।। सूत्रे प्रसीदत्यनेन जन इति प्रसादः सुखम्, सम्यक् प्रसादः सम्प्रसादः, तस्मादिति विग्रहः । ईश्वरे सुखमिव दुःखमपि स्यादिति नाऽशङ्क्यं, पूर्णसुखकार्येण सम्यक् प्रसादेन दुःखाभावनिश्चयादित्याशयेन प्रयुक्तं सम्प्रसादादिति हेतुमनूद्य व्याचष्टे – **सम्प्रसादादिति** ।। उत्तरसूत्रस्थचशब्दोऽत्राऽकर्षणीय इत्याशयेन 'अध्युपदेशात्' इत्येतद्धेत्वन्तरपरतयाऽनूद्य व्याख्याति – **अध्युपदेशादिति** ।। नामादीनां सर्वेषाम् ? 'उपरि' तदुत्तमत्वेन 'उपदेशात्' उक्तेरित्यर्थः । चो हेतुसमुच्चये । अत्राधीत्येव हेतुः, न तु समग्र एको हेतुः । स चेश्वरवचनो भावप्रधानः, विशेषानुक्तेः अखिलेश्वरत्वादिति हेत्वर्थः अखिलेशत्वादित्यनुव्याख्यानसुधोक्तो ज्ञातव्यः । असिद्धिपरिहारायोपदेशपर्यन्तं धावनम् । प्रायपाठाद् भूम्नोऽखिलाधिपप्राणाधिपत्ये अखिलाधिपत्यं सिद्ध्यतीति भावः । समन्वयसूत्रादनुवृत्तस्य तत्त्विति विधेयसमर्पकस्यार्थमाह – **विष्णुरेवेति** ।। भूमा विष्णुरेवेत्यन्वयः ।

ಪ್ರತಿಪದಾರ್ಥ -- ಪೂರ್ಣಸುಖತ್ವಾದಿಗಳು ವಿಷ್ಣುವೇ ಭೂಮಾ ಎಂಬ ಶಬ್ದದಿಂದ ಪ್ರತಿಪಾದ್ಯನೆನ್ನಲು ಹೇಗೆ ಲಿಂಗಗಳಾಗುತ್ತವೆ? ಎಂಬ ಆಕ್ಷೇಪಕ್ಕೆ ಉತ್ತರಿಸುತ್ತಿದ್ದಾರೆ.

ಸಹಸ್ರಶೀರ್ಷಂ = ಅನಂತಶಿರಸ್ಸುಗಳುಳ್ಳ, ದೇವಂ = ಕ್ರೀಡಾದಿಗುಣವಿಶಿಷ್ಟನಾದ, ಪ್ರಕಾಶಸ್ವರೂಪನಾದ, ವಿಶ್ವಾಕ್ಷಂ = ಎಲ್ಲೆಡೆ ದೃಷ್ಟಿಯುಳ್ಳ, ವಿಶ್ವಶಂಭುವಮ್ = ಪೂರ್ಣಸುಖಾಶ್ರಯನಾದ, ವಿಶ್ವಂ = ಜಗತ್ತನ್ನು ಪ್ರವೇಶಿಸಿರುವ, ನಾರಾಯಣಂ = ಮುಕ್ತರ ಸಮೂಹದಲ್ಲಿ ವ್ಯಕ್ತನಾದ, ಅಕ್ಷರಂ = ಸ್ವರೂಪತಃ ನಾಶರಹಿತನಾದ, ಪರಮಂ = ಬ್ರಹ್ಮಾದಿಗಳಿಗಿಂತಲೂ ಉತ್ತಮನಾದ, ಪದಂ = ಪ್ರಾಪ್ಯನಾದ, ವಿಶ್ವತಃ = ವಿಶ್ವಕ್ಕಿಂತಲೂ, ಪರಮಂ = ಉತ್ತಮನಾದ, ನಿತ್ಯಂ = ಶಶ್ವದೇಕಪ್ರಕಾರನಾದ ನಾರಾಯಣನನ್ನು ಎಲ್ಲರೂ ಉಪಜೀವಿಸಿದ್ದಾರೆ, ಇತಿ ಹಿ = ಹೀಗಷ್ಟೇ, ಶ್ರುತಿಃ = ಶ್ರುತಿಯು ಇರುತ್ತದೆ.(१)

## (५) 'तमुत्क्रामन्तं प्राणोऽनूत्क्रामति' (बृ. ६–४–२.)इत्यादिना नोत्क्रमणादि-लिङ्गविरोधोऽपि ॥ ८ ॥

ಅನುವಾದ - 'ಪ್ರಾಣನು ವಿಷ್ಣುವನ್ನು ಅನುಸರಿಸಿ ದೇಹದಿಂದ ನಿರ್ಗಮಿಸುತ್ತಾನೆ' ಇವೇ ಮೊದಲಾದ ಪ್ರಮಾಣಗಳಿಂದ ದೇಹದಿಂದ ನಿರ್ಗಮನವು ವಿಷ್ಣುವಿಗೆ ವಿರುದ್ಧವಾದ ಧರ್ಮವಾಗುವುದಿಲ್ಲ.

ಪ್ರತಿಪದಾರ್ಥ -- ಪ್ರಾಣಶಬ್ದದಿಂದ ವಿಷ್ಣು ಪ್ರತಿಪಾದ್ಯನಾದರೆ ಹಿಂದೆ ಹೇಳಲ್ಪಟ್ಟ ಉತ್ಕ್ರಮಣಾದಿಲಿಂಗಗಳ ವಿರೋಧ ಬರುತ್ತದಲ್ಲವೇ? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ.

ಉತ್ಕ್ರಾಮಂತಂ = ದೇಹದಿಂದ ನಿರ್ಗಮಿಸುವ, ತಂ = ಪರಮಾತ್ಮನನ್ನು, ಅನು =

(१) भाष्यदीपिका – पूर्णसुखत्वादिकं कुतो विष्णुत्वनिश्चायकमित्यत आह – सहस्रेति ॥ इति हीति । 'हि' यस्मात् 'इति' नारायणानुवाकगता श्रुतिरस्ति, तस्मात् सम्प्रसादाद् विष्णुत्वनिश्चयो भवत्येवेत्यर्थः । 'सहस्रशीर्षं'सहस्रपदोपक्षितामितमूर्धानं 'देवं' प्रकाशरूपं विश्वतो
दर्शनादक्ष्यस्येति विश्वाक्षं 'विश्वशम्भुवं' पूर्णसुखाश्रयं 'विश्वं' जगत्प्रविष्टत्वेन वर्तमानं 'नारायणं' मुक्तसङ्घे व्यक्तम् 'अक्षरं' स्वरूपतो नाशरहितम् अक्षेषु रममाणं वा । परेभ्यो ब्रह्मादिभ्योऽधिकत्वेन मीयत इति परा मा यस्येति वा परमस्तं परमं 'पदं' प्राप्यं विश्वतः परमश्चासावश्चेति विग्रहः, सवर्णदीर्घः । सोमपाशब्दवदयं शब्दः । सुधारीत्या आबन्तत्वाश्रयेण लिङ्गव्यत्ययो वा । तथा च 'विश्वतःपरमां' सर्वस्मादुत्तमम् अकारवाच्यं सर्वोत्तमं वा 'नित्यं' देहतो नाशरहितं 'विश्वं' गुणैः पूर्णं यज्ञेषु हविःस्वीकरणात् हरिवर्णत्वाच्च ? 'हरिं' 'देवं' क्रीडादिगुणकं 'नारायणं' तदाख्यं देवं तद्विश्वमुपजीवतीति श्रुत्यर्थः ।
यद्यपि 'विश्वतः परमम्' इति द्राविडपाठः । तथाऽप्यान्ध्रपाठमनुसृत्य परमामित्युक्तम् ।

ಅನುಸರಿಸಿ, ಪ್ರಾಣಃ = ಮುಖ್ಯಪ್ರಾಣನು, ಉತ್ಕ್ರಾಮತಿ = ಹೊರಗೆ ಹೊರಡುತ್ತಾನೆ. ಇತ್ಯಾದಿನಾ = ಇವೇ ಮೊದಲಾದ ಪ್ರಮಾಣಗಳಿಂದ, ಉತ್ಕ್ರಮಣಾದಿ = ದೇಹದಿಂದ ನಿರ್ಗಮಿಸುವಿಕೆ ಮೊದಲಾದ, ಲಿಂಗವಿರೋಧೋಽಪಿ = ಲಿಂಗಗಳ ವಿರೋಧವೂ ಸಹ ಬರುವುದಿಲ್ಲ.(१)

## श्रीपद्मनाभतीर्थविरचितसत्तर्कदीपावळ्याम्:

## अथ भूमाधिकरणम् १/३/२

## भूमा सम्प्रसादादध्युपदेशात् ॥ ॐ ॥ ८ ॥

॥ ॐ धर्मोपपत्तेश्च ॐ॥

**'यो वै भूमा तत्सुखम्' इति श्रूयमाणोऽपि भूमा (पुनर्भूत्वा) विष्णुरित्येतदाक्षिप्य समाधीयते – प्राणो वा इत्यादिना ॥ 'प्राणो वा आशाया भूयान्' इति सन्निहितवाक्यबलात् प्राणशब्देनोक्तो वायुरेव भूमा इति चेत्,**

'ಯೋ ವೈ ಭೂಮಾ ತತ್ಸುಖಮ್' ಎಂಬಲ್ಲಿ ಶ್ರುತವಾಗಿರುವ ಭೂಮನು ವಿಷ್ಣುವೇ ಆಗಿದ್ದಾನೆಂಬುದನ್ನು ಆಕ್ಷೇಪಮಾಡಿ ಉತ್ತರಿಸುತ್ತಿದ್ದಾರೆ "ಪ್ರಾಣೋ ವಾ" ಇತ್ಯಾದಿಯಾಗಿ ಭಾಷ್ಯದಿಂದ. 'ಪ್ರಾಣೋ ವಾ ಆಶಾಯಾ ಭೂಯಾನ್' ಎಂಬ ಹತ್ತಿರದಲ್ಲಿರುವ ವಾಕ್ಯದ ಸಾಮರ್ಥ್ಯದಿಂದ

(१) **भाष्यदीपिका –** अत्र प्राणशब्देन विष्णोर्वाच्यत्वाङ्गीकारे प्रागुक्तोत्क्रमणादिलिङ्ग-विरोध इत्यतो नेत्याह – **तमिति** ॥ प्रथमादिशब्देन तदुत्तरवाक्यानि, द्वितीयेन तल्लिङ्गान्तराणि च गृह्यन्ते । अपिशब्दः समुच्चये, यद्यपि तथाऽपीत्यर्थे च । तथा च – न केवलं प्राणशब्दोपक्रमविरोधः, तस्य विष्णुपरत्वात्, किन्तु 'अपि' अत्र प्राणशब्देन विष्णो – र्वाच्यत्वाङ्गीकारे उत्क्रमणादिलिङ्गविरोधो नास्ति । कुतः ? 'अपि' तथापि सर्वगतेऽपि विष्णावुत्क्रमणादिलिङ्गस्य 'तमुत्क्रामन्तम्' इत्यादिना वाजसनेयवाक्येन सिद्धत्वादिति योजना । श्रुतिसिद्धेऽर्थे लोकदृष्टिविरोधोऽकिञ्चित्कर इति भावः । 'तस्य हैतस्य हृदयस्याग्रं प्रद्योतते । तेन प्रद्योतेनैष आत्मा निष्क्रामति' (बृ.६-४-२.) इति पूर्ववाक्ये प्रकृतः परमात्मा तच्छब्देन परामृश्यते । तथा च प्रद्योतितहृदयाग्रेणापरोक्षज्ञानि देहात् 'उत्क्रामन्तं' निर्गच्छन्तं परमात्मानमनुसृत्य 'प्राणो' मुख्यवायुः 'उत्क्रामति' देहान्निर्गच्छतीति श्रुत्यर्थः ।

ಪ್ರಾಣಶಬ್ದಪ್ರತಿಪಾದ್ಯನಾದವನು ವಾಯುವೇ ಆಗಿದ್ದಾನೆ. ಯಾರು ಪ್ರಾಣನೋ ಅವನೇ ಭೂಮನಾದ್ದರಿಂದ ಭೂಮಾ ಎಂಬ ಶಬ್ದದಿಂದ ಮುಖ್ಯಪ್ರಾಣನೇ ಪ್ರತಿಪಾದ್ಯನಾಗುತ್ತಾನೆ. ಇಷ್ಟು ಪೂರ್ವಪಕ್ಷ.

**मैवम् । प्राणशब्दस्य विष्णावप्युपपन्नत्वेन अत्र वायुप्रापकशब्दाभावात् । नन्वस्य प्राणस्योत्क्रमणं श्रूयते 'अथ यद्यप्येनमुत्क्रान्तप्राणान् शूलेन समासं व्यतिषं दहेत् । न चैनं ब्रूयुः पितृहासीति न मातृहासि' इति ।। उत्क्रमणं मुख्यप्राणस्यैव लिङ्गमिति चेत्,**

ಪ್ರಾಣಶಬ್ದವು ವಿಷ್ಣುವಿನಲ್ಲೂ ಸಹ ಉಪಪನ್ನವಾಗುತ್ತದೆ. ಆದ್ದರಿಂದ ಮುಖ್ಯಪ್ರಾಣನನ್ನು ಪ್ರತಿಪಾದಿಸುವ ಬೇರೆ ಯಾವುದೇ ಶಬ್ದಗಳೂ ಇಲ್ಲಿ ಇರುವುದಿಲ್ಲ.

ಪ್ರಾಣನಿಗೆ ದೇಹದಿಂದ ಉತ್ಕ್ರಮಣವು ಶ್ರುತವಾಗುತ್ತಿದೆ. 'ಅಥ ಯದ್ಯಪಿ ಏನಮುತ್ಕ್ರಾಂತಪ್ರಾಣಾನ್ ಶೂಲೇನ ಸಮಾಸಂ ವ್ಯತಿಷಂ ದಹೇತ್ । ನ ಚೈನಂ ಬ್ರೂಯುಃ ಪಿತೃಹಾಸೀತಿ ಮಾತೃಹಾಸಿ' ಯಾವಾಗ ಮುಖ್ಯಪ್ರಾಣನು ದೇಹದಿಂದ ನಿರ್ಗಮಿಸುತ್ತಾನೋ ಅನಂತರ, ಪಿತೃ ಹಾಗೂ ಮಾತೃ ಮೊದಲಾದ ಹಿರಿಯರ ದೇಹವನ್ನು ಶೂಲದಿಂದ ಚುಚ್ಚಿದರೂ, ಬೆಂಕಿಯಿಂದ ಸುಟ್ಟರೂ ಸಹ ತಂದೆಯನ್ನು ಕೊಂದವನು ತಾಯಿಯನ್ನು ಕೊಂದವನು ಇತ್ಯಾದಿಯಾಗಿ ಯಾರೂ ಹೇಳುವುದಿಲ್ಲ. ಹೀಗೆ ಈ ಶ್ರುತಿಯಲ್ಲಿ ಕೇಳಿಸುತ್ತಿರುವ ಉತ್ಕ್ರಮಣವು ಮುಖ್ಯಪ್ರಾಣನ ಲಿಂಗವಾಗಿದೆಯಲ್ಲವೇ?

**मैवम् । विष्णुरप्युत्क्रमणसंश्रवणात् 'तमुत्क्रामन्तं प्राणोनूत्क्रामति' इति श्रुत्यन्तरे । अतो 'वाग् वाव नाम्नो भूयसी मनो वाव वाचो भूयः' इत्यारभ्य सर्वेषामुपर्युपदेशात् 'तत्सुखं नाल्पे सुखमस्ति' इति पूर्णसुखत्वोपदेशाच्च विष्णुरेव भूमा ।**

ಇದು ತಪ್ಪು. ದೇಹದಿಂದ ವಿಷ್ಣುವಿನ ಉತ್ಕ್ರಮಣವೇ ಮುಖ್ಯವಾಗಿ ಆಗುತ್ತದೆಂದು 'ತಮುತ್ಕ್ರಾಮಂತಂ ಪ್ರಾಣೋನೂತ್ಕ್ರಾಮತಿ' ಎಂಬ ಮತ್ತೊಂದು ಶ್ರುತಿಯಲ್ಲಿ ಹೇಳಲಾಗಿದೆ. ವಿಷ್ಣುವಿನ ನಿರ್ಗಮನವನ್ನು ಅನುಸರಿಸಿ ಮುಖ್ಯಪ್ರಾಣನ ನಿರ್ಗಮನವಿರುತ್ತದೆ. ಆದ್ದರಿಂದ 'ವಾಗ್ ವಾವ ನಾಮ್ನೋ ಭೂಯಸೀ ಮನೋ ವಾವ ವಾಚೋ ಭೂಯಃ' ಎಂಬುದಾಗಿ ಪ್ರಾರಂಭಿಸಿ, ಎಲ್ಲ ದೇವತೆಗಳಿಗಿಂತಲೂ ಉತ್ತಮನೆಂದು ಭಗವಂತನನ್ನು ಪ್ರತಿಪಾದಿಸುತ್ತಾ, 'ತತ್ಸುಖಂ ನಾಲ್ಪೇ ಸುಖಮಸ್ತಿ' ಎಂಬುದಾಗಿ ಪೂರ್ಣಸುಖಸ್ವರೂಪನೆಂದು ಶ್ರುತಿಯು ಹೇಳುತ್ತಿರುವುದರಿಂದ ವಿಷ್ಣುವೇ ಭೂಮಾ ಎಂಬ ಪದದಿಂದ ಪ್ರತಿಪಾದ್ಯನಾಗುತ್ತಾನೆ.

**पूर्णसुखाश्रयत्वं सर्वोत्तमत्वं चान्यत्र विष्णोरेव श्रूयते । 'सहस्रशीर्षं देवम्' इति ।। विश्वशम्भुवम् । पुर्णसुखास्पदं परमश्चासावश्चेति परमाम् इत्यर्थः ।**

ಪೂರ್ಣಸುಖಾಶ್ರಯತ್ವ ಹಾಗೂ ಸರ್ವೋತ್ತಮತ್ವಗಳು ವಿಷ್ಣುವಿನ ಧರ್ಮಗಳೇ ಆಗಿವೆಯೆಂದು ಬೇರೆ ಶ್ರುತಿಯಿಂದ ಸಿದ್ಧವಾಗಿದೆ. 'ಸಹಸ್ರಶೀರ್ಷಂ ದೇವಮ್' ಎಂಬಲ್ಲಿರುವ ವಿಶ್ವಶಂಭುವಂ ಎಂಬ ಪದದಿಂದ ಪರಮಾತ್ಮನು ಪೂರ್ಣಸುಖಸ್ವರೂಪನೆಂದು ಸ್ಪಷ್ಟವಾಗುತ್ತದೆ. 'ವಿಶ್ವತಃ ಪರಮಾಂ ನಿತ್ಯಮ್' ಎಂಬಲ್ಲಿರುವ ಪರಮಾಂ ಎಂಬ ಪದಕ್ಕೆ 'ಪರಮಶ್ಚಾಸೌ ಅಶ್ಚ' ಎಂಬ ನಿಷ್ಪತ್ತಿಯನ್ನು ವಿವಕ್ಷಿಸಬೇಕು.

**'यो वै भूमा तदमृतं स एवाधस्तात्सोपरिष्टात्' इत्यादिना सर्वगतत्वादिधर्मत्त्वेन व्यपदेशाच्च भूमा विष्णुः न मुख्यप्राणः । अत्र प्राणशब्दस्य मुख्यतया मुख्यप्राणपरत्वमङ्गीक्रियते । 'इदयामननात्' इत्यादौ उत्तरत्र प्रतिपादयिष्यमाणत्वादित्यर्थः इत्यनवद्यम् ।।८।।**

'ಯೋ ವೈ ಭೂಮಾ ತದಮೃತಂ ಸ ಏವಾಧಸ್ತಾತ್ ಸೋಪರಿಷ್ಟಾತ್' ಇತ್ಯಾದಿಯಾದ ಶ್ರುತಿಯಿಂದ ಸರ್ವಗತತ್ವವೇ ಮೊದಲಾದ ಧರ್ಮಗಳನ್ನು ಹೇಳಿರುವ ಪ್ರಯುಕ್ತ ಭೂಮಾ ಎಂಬ ಶಬ್ದದಿಂದ ವಿಷ್ಣುವೇ ಪ್ರತಿಪಾದ್ಯನಾಗುತ್ತಾನೆ ಹೊರತು ಮುಖ್ಯಪ್ರಾಣನಲ್ಲ. ಇಲ್ಲಿ ಪ್ರಾಣಶಬ್ದದಿಂದ ಮುಖ್ಯವಾಗಿ ಮುಖ್ಯಪ್ರಾಣನನ್ನು ವಾಚ್ಯನೆಂದು ಅಂಗೀಕರಿಸಲಾಗಿದೆ. 'ಇಯದಾಮನನಾತ್' ಎಂಬ ಮುಂದೆ ಬರುವ ಅಧಿಕರಣದಲ್ಲಿ ಈ ವಿಷಯವನ್ನು ಪ್ರತಿಪಾದನೆ ಮಾಡುತ್ತಾರೆ.

॥ ಸತ್ತರ್ಕದೀಪಾವಳಿಯಲ್ಲಿ ಭೂಮಾಧಿಕರಣವು ಮುಗಿಯಿತು ॥

**तत्वप्रकाशिका –**

**।। ॐ भूमा सम्प्रासादादध्युपदेशात् ॐ।।**

**अत्र 'प्राणो वा आशाया भूयान्' इत्युपक्रमेण 'विष्णुर्वै देवेभ्यो भूयांस्तस्माद्भूयान्नाम' इति श्रुत्या च वायुविष्णुसाधारणभूमानाम्नो विष्णौ समन्वयप्रतिपादनादस्ति शास्त्रादिसङ्गतिः ।**

ಈ ಅಧಿಕರಣದಲ್ಲಿ 'ಪ್ರಾಣೋ ವಾ' ಎಂಬ ಛಾಂದೋಗ್ಯೋಪನಿಷತ್ತಿನ ಪ್ರಾರಂಭದಿಂದ 'ವಿಷ್ಣುರ್ವೈ ದೇವೇಭ್ಯೋ ಭೂಯಾನ್ ತಸ್ಮಾದ್ ಭೂಯಾನ್ನಾಮ' ವಿಷ್ಣುವು ಸರ್ವದೇವತೆಗಳಿಗಿಂತಲೂ ಶ್ರೇಷ್ಠನಾದ್ದರಿಂದ ಭೂಮಾ ಎನಿಸಿದ್ದಾನೆ ಎಂಬ ಶ್ರುತಿಯಿಂದ ವಾಯು ಹಾಗೂ ವಿಷ್ಣು ಇಬ್ಬರಲ್ಲಿಯೂ ಸಾಧಾರಣವಾದ ಭೂಮಾ ಎಂಬ ನಾಮಾತ್ಮಕಶಬ್ದವನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡುತ್ತಿರುವುದರಿಂದ ಶಾಸ್ತ್ರಸಂಗತಿ, ಅಧ್ಯಾಯಸಂಗತಿ ಹಾಗೂ ಪಾದಸಂಗತಿಗಳಿರುತ್ತವೆಂದು ತಿಳಿಯಬೇಕು.

**तत्वप्रकाशिका – श्रुत्यादिसङ्गतिं विषयादिकं च सूचयन् सयुक्तिकं पूर्वपक्षं दर्शयति ।। प्राण इति ।।**

ಶ್ರುತಿಸಂಗತಿ ಹಾಗೂ ಅಧಿಕರಣಸಂಗತಿ, ವಿಷಯ ಮೊದಲಾದವನ್ನು ಸೂಚನೆ ಮಾಡಿ ಯುಕ್ತಿಬದ್ಧವಾದ ಪೂರ್ವಪಕ್ಷವನ್ನು ಭಾಷ್ಯಕಾರರು "ಪ್ರಾಣಃ" ಇತ್ಯಾದಿ ವಾಕ್ಯದಿಂದ ತೋರಿಸುತ್ತಿದ್ದಾರೆ.

**तत्वप्रकाशिका – आनन्दमयाधिकरणे पूर्णानन्दत्वं विष्णोरूक्तं तच्छन्दोगश्रुतौ भूम्नः प्रतीयते । 'यो भूमा तत्सुखं नाल्पे सुखमस्ति भूमैव सुखम्' इति ।**

ಆನಂದಮಯಾಧಿಕರಣದಲ್ಲಿ ಪೂರ್ಣಾನಂದತ್ವವು ವಿಷ್ಣುವಿನ ಧರ್ಮವೆಂದು ಹೇಳಲಾಗಿದೆ. ಅದೇ ಪೂರ್ಣಾನಂದತ್ವವನ್ನು ಛಾಂದೋಗ್ಯಶ್ರುತಿಯು ಭೂಮನಲ್ಲಿ ಹೇಳುತ್ತಿದೆ. 'ಯೋ ವೈ ಭೂಮಾ ತತ್ಸುಖಂ ನಾಲ್ಪೇ ಸುಖಮಸ್ತಿ ಭೂಮ್ಯೆವ ಸುಖಮ್' 'ಯಾರು ಭೂಮನೋ ಅವನೇ ಪೂರ್ಣಾನಂದಸ್ವರೂಪನು. ಅಲ್ಪರಲ್ಲಿ ಸುಖವು ಇರುವುದಿಲ್ಲ. ಆದ್ದರಿಂದ ಭೂಮನೇ ಪೂರ್ಣಾನಂದ ಸ್ವರೂಪನು' ಎಂಬುದಾಗಿ.

**तत्वप्रकाशिका – तस्य च भूम्नो विष्णोरितरत्वे प्रागुक्तानन्दमयत्वं चेतरस्यैव प्रसज्येतेत्यवश्यं निर्णेयत्वम् । स भूमाऽत्र विषयः । किं विष्णुरुत वायुरिति सन्देहः ।**

ಒಂದು ವೇಳೆ ಆ ಭೂಮನು ವಿಷ್ಣುವಿಗಿಂತ ಭಿನ್ನನಾದರೆ ಹಿಂದೆ ಹೇಳಲ್ಪಟ್ಟ ಆನಂದಮಯನೂ ಸಹ ಬೇರೆಯವನೇ ಆಗುತ್ತಾನೆ. ಆದ್ದರಿಂದ ಭೂಮಾ ಎಂಬ ಶಬ್ದದಿಂದ ವಾಚ್ಯನಾದವನು ಯಾರೆಂದು ಅವಶ್ಯನಿರ್ಣಯ ಮಾಡಬೇಕು. ಅಂತಹ ಭೂಮನೇ ಈ ಅಧಿಕರಣಕ್ಕೆ ವಿಷಯನು. ಭೂಮಾ ಎಂಬ ಶಬ್ದದಿಂದ ಪ್ರತಿಪಾದ್ಯನಾದವನು ವಿಷ್ಣುವೋ ಅಥವಾ ವಾಯುವೋ ಎಂದು ಸಂದೇಹ.

**तत्वप्रकाशिका – पूर्वोक्तसाधारण्यं सन्देहबीजम् । मुख्यप्राणोऽयं भूमेति पूर्वः पक्षः ।**

ಮುಖ್ಯಪ್ರಾಣ ಹಾಗೂ ವಿಷ್ಣು ಇಬ್ಬರಲ್ಲಿಯೂ ಸಾಧಾರಣವಾದ ಶ್ರುತಿಯಿರುವುದೇ ಸಂದೇಹಕ್ಕೆ ಕಾರಣವಾಗಿದೆ. ಹೀಗಿರುವಾಗ ಮುಖ್ಯಪ್ರಾಣನೇ ಭೂಮನಾಗುತ್ತಾನೆಂದು ಪೂರ್ವಪಕ್ಷ.

**तत्वप्रकाशिका – अत्र नामवागादितारतम्यमाशावसानमुक्त्या 'प्राणो वा आशाया भूयान्' इति प्राणस्याशोत्तमत्वं चाभिधाय तदुत्तममनुक्त्वा भूम्न आम्नातत्वात् ।**

ಏಕೆಂದರೆ ಛಾಂದೋಗ್ಯಶ್ರುತಿಯಲ್ಲಿ ನಾಮ, ವಾಕ್ ಮೊದಲಾದ ಅಭಿಮಾನಿದೇವತೆಗಳ ತಾರತಮ್ಯಕ್ಕೆ ಆಶಾ ಎಂಬ ಅಭಿಮಾನಿದೇವತೆಯಲ್ಲಿ ಕೊನೆಯನ್ನು ಹೇಳಿ; 'ಪ್ರಾಣೋ ವಾ ಆಶಾಯಾ ಭೂಯಾನ್'

ಆಶಾದೇವತೆಗಿಂತ ಮುಖ್ಯಪ್ರಾಣನು ಉತ್ತಮನಾಗಿದ್ದಾನೆಂದು ಹೇಳಿ ಅಂತಹ ಮುಖ್ಯಪ್ರಾಣನಿಗಿಂತಲೂ ಮತ್ತೊಬ್ಬನು ಉತ್ತಮನಿದ್ದಾನೆಂದು ಹೇಳದೇ ಭೂಮನನ್ನು ಪಠಿಸಲಾಗಿದೆ. ಆದ್ದರಿಂದ ಮುಖ್ಯಪ್ರಾಣನೇ ಭೂಮನಾಗಬೇಕು.

**तत्वप्रकाशिका – नच विष्णोरपि भूमत्वस्य श्रुत्यन्तरे प्रसिद्धत्वादत्र वाच्यत्वमिति वाच्यम् । उपक्रमात्समाख्याया दुर्बलत्वात् ।**

ಬೇರೆ ಶ್ರುತಿಯಲ್ಲಿ ವಿಷ್ಣುವಿಗೂ ಸಹ ಭೂಮತ್ವವನ್ನು ಹೇಳಿದ್ದು ಪ್ರಸಿದ್ಧವಾಗಿದೆ. ಆದ್ದರಿಂದ ಇಲ್ಲಿಯೂ ಸಹ ಅವನನ್ನೇ ತೆಗೆದುಕೊಳ್ಳಬೇಕಲ್ಲವೇ? ಎಂದು ಪ್ರಶ್ನಿಸಬಾರದು. ಏಕೆಂದರೆ ಉಪಕ್ರಮಕ್ಕಿಂತ ಸಮಾಖ್ಯಾಪ್ರಮಾಣವು ದುರ್ಬಲವಾಗಿದೆ.

**तत्वप्रकाशिका – अतो वायोरेव भूमत्वावस्यैवानन्दमयत्वमिति भावः ।**

ಆದ್ದರಿಂದ ವಾಯುದೇವತೆಯೇ ಭೂಮನೆನಿಸಿದ್ದಾನೆ. ಅವನೇ ಆನಂದಮಯನೂ ಸಹ ಆಗುತ್ತಾನೆಂದು ಪೂರ್ವಪಕ್ಷ.

**तत्वप्रकाशिका – ननु प्राणो वा आशाया भूयानित्युक्तप्राणशब्दस्यात एव प्राण इत्युक्तारीत्या विष्णुपरत्वाद्विष्णोरेव भूमत्वमित्यत आह – उत्क्रान्तेति ।।**

'ಪ್ರಾಣೋ ವಾ ಆಶಾಯಾ ಭೂಯಾನ್' ಇತ್ಯಾದಿ ಶ್ರುತಿಯಲ್ಲಿರುವ ಪ್ರಾಣಶಬ್ದವು 'ಅತ ಏವ ಪ್ರಾಣಃ' ಎಂಬ ಸೂತ್ರದಲ್ಲಿ ಹೇಳಿರುವಂತೆ ವಿಷ್ಣುವನ್ನೇ ಪ್ರತಿಪಾದಿಸುತ್ತದೆ. ಪ್ರಾಣಶಬ್ದವಾಚ್ಯನಾದ ವಿಷ್ಣುವಿನಲ್ಲಿಯೇ ಭೂಮತ್ವವು ಯುಕ್ತವಾಗುತ್ತದೆ. ಈ ಶಂಕೆಯ ಪರಿಹಾರಕ್ಕಾಗಿ ಉತ್ಕ್ರಾಂತ ಇತ್ಯಾದಿ ಭಾಷ್ಯವು ಹೊರಟಿದೆ.

**तत्वप्रकाशिका – नायं प्राणशब्दो विष्णुवाची किन्तु वायुवाच्येव । तत्र 'उत्क्रान्तप्राणान् शूलेन समासं व्यातिषंदहेत्' इत्यादौ प्राणस्योत्क्रमणादिश्रवणात् । तस्य वायावेव सम्भवात् । सर्वगते हरावसम्भवादित्यर्थः ।**

ಶ್ರುತಿಯಲ್ಲಿರುವ ಪ್ರಾಣಶಬ್ದವು ವಿಷ್ಣುವನ್ನು ಪ್ರತಿಪಾದಿಸುವುದಿಲ್ಲ. ಹೊರತಾಗಿ ವಾಯುದೇವನನ್ನೇ ಪ್ರತಿಪಾದಿಸುತ್ತದೆ. ಏಕೆಂದರೆ, 'ಉತ್ಕ್ರಾಂತಪ್ರಾಣಾನ್ ಶೂಲೇನ ಸಮಾಸಂ ವ್ಯತಿಷಂ ದಹೇತ್' ಎಂಬಲ್ಲಿ 'ಪ್ರಾಣನು ದೇಹದಿಂದ ಹೊರಟಮೇಲೆ ತಂದೆ ಹಾಗೂ ತಾಯಿಗಳ ಶರೀರವನ್ನು ಶೂಲದಿಂದ ಚುಚ್ಚಿದರೂ ಬೆಂಕಿಯಿಂದ ಸುಟ್ಟರೂ ತಪ್ಪಿಲ್ಲ' ಇತ್ಯಾದಿ ವಾಕ್ಯಗಳಿಂದ ಮುಖ್ಯಪ್ರಾಣನ ನಿರ್ಗಮನವೆಂಬ ಲಿಂಗವು ಕೇಳಿಸುತ್ತಿದೆ. ಈ ಲಿಂಗವು ಮುಖ್ಯಪ್ರಾಣನಲ್ಲೇ ಉಪಪನ್ನವಾಗುತ್ತದೆ. ಎಲ್ಲೆಡೆ ವ್ಯಾಪ್ತನಾದ ಶ್ರೀಹರಿಯಲ್ಲಿ ನಿರ್ಗಮನವನ್ನು ಹೇಳಲು ಸಾಧ್ಯವಿಲ್ಲ. ಆದ್ದರಿಂದ ಮುಖ್ಯಪ್ರಾಣನನ್ನೇ ಭೂಮನೆನ್ನಬೇಕೆಂದು ಪೂರ್ವಪಕ್ಷ.

**तत्वप्रकाशिका – सिद्धान्तयत्सूत्रमवतार्य व्याचष्टे – अत इति ।। विष्णुरेवायं भूमा । 'यो वै भूमा तत्सुखम्' इति भूम्नः पूर्णसुखरूपत्वाभिधानात् । नामादीनां सर्वेषामुपरि तदुत्तमत्वेन व्यपदेशाच्चेत्यर्थः ।**

ಸಿದ್ಧಾಂತ ಸ್ಥಾಪನೆಯನ್ನು ಮಾಡುವ ಸೂತ್ರವನ್ನು ಪಠಿಸಿ ವ್ಯಾಖ್ಯಾನಿಸುತ್ತಿದ್ದಾರೆ ''ಅತಃ'' ಇತ್ಯಾದಿ ಭಾಷ್ಯದಿಂದ. ಶ್ರುತಿಯಲ್ಲಿ ಪ್ರಸ್ತುತನಾದ ಭೂಮನು ವಿಷ್ಣುವೇ ಆಗಿದ್ದಾನೆ. ಏಕೆಂದರೆ, 'ಯೋ ವೈ ಭೂಮಾ ತತ್ಸುಖಮ್' ಎಂಬುದಾಗಿ ಯಾವ ವ್ಯಕ್ತಿಯು ಭೂಮನಾಗಿದ್ದಾನೋ ಅವನು ಪೂರ್ಣಸುಖಸ್ವರೂಪನೆಂದು ಹೇಳಿರುವುದರಿಂದ. ಮತ್ತು ನಾಮಾಭಿಮಾನಿದೇವತೆಗಳೆಲ್ಲರಿಗಿಂತ ಅತ್ಯಂತ ಅಧಿಕನಾಗಿ ಉತ್ತಮನೆಂದು ಶ್ರುತಿಯು ಹೇಳಿರುವುದರಿಂದಲೂ ವಿಷ್ಣುವೇ ಭೂಮನಾಗಬೇಕು.

**तत्वप्रकाशिका – नच वाच्यमत्र भूम्नः सुखरूपत्वमेवोच्यते नतु पूर्णसुखत्वमिति । निरुपपदसुखशब्दमात्रस्यापि पूर्णसुखार्थत्वम् । पूर्णसुखत्वादिकं च कुतो विष्णुत्वनिश्चायकमित्यत आह – सहस्रेति ।।**

ಶ್ರುತಿಯಲ್ಲಿ ಭೂಮನನ್ನು ಸುಖಸ್ವರೂಪನೆಂದು ಹೇಳಲಾಗಿದೆ ಹೊರತು, ಪೂರ್ಣವಾದ ಸುಖವುಳ್ಳವನೆಂದು ಹೇಳಿರುವುದಿಲ್ಲವೆಂದು ಪ್ರಶ್ನಿಸಬಾರದು. ಏಕೆಂದರೆ, ಉಪಪದವಿಲ್ಲದ ಸುಖಶಬ್ದವು ಪೂರ್ಣಸುಖವೆಂಬರ್ಥವನ್ನೇ ಹೇಳುತ್ತದೆ ಹೊರತು ಕೇವಲ ಸುಖವೆಂಬರ್ಥವನ್ನು ಹೇಳಲು ಸಾಧ್ಯವಿಲ್ಲ. ಪೂರ್ಣವಾದ ಸುಖವಿರುವ ಮಾತ್ರದಿಂದ ವಿಷ್ಣುವೇ ಭೂಮನಾಗಿದ್ದಾನೆಂದು ಹೇಗೆ ನಿರ್ಣಯಿಸುತ್ತೀರಿ? ಎಂಬ ಪ್ರಶ್ನೆಗೆ ''ಸಹಸ್ರ'' ಇತ್ಯಾದಿ ಭಾಷ್ಯದಿಂದ ಉತ್ತರಿಸುತ್ತಿದ್ದಾರೆ.

**तत्वप्रकाशिका – विश्वशम्भुवं वायोरपि । विश्वतः परमां सर्वतः परममकारवाच्यमित्यर्थः ।**

ವಿಶ್ವಶಂಭುವಮ್ ಎಂಬ ಶಬ್ದಕ್ಕೆ ಪೂರ್ಣವಾದ ಸುಖಕ್ಕೆ ಆಶ್ರಯನಾದವನು ಎಂದರ್ಥ. 'ವಿಶ್ವತಃ ಪರಮಾಂ' ಎಂದರೆ ಎಲ್ಲರಿಗಿಂತ ಶ್ರೇಷ್ಠನಾದವನು ಮತ್ತು ಅಕಾರಶಬ್ದವಾಚ್ಯನಾದವನು ಎಂದರ್ಥ.

**तत्वप्रकाशिका – नच सर्वोत्तमत्वं वायोरपि । विरोधादेव । नापि पूर्णानन्दत्वम् । 'अव्यक्तादितृणान्तास्तु वि(प्र)म्रुडान्दभागिनः' । इत्युक्तत्वात् । उपक्रमे प्राणशब्दश्रवणात् कथं भूमा विष्णुरिति चेन्न । प्राणशब्देनापि विष्णोरेवोक्तत्वात् ।**

ವಿಷ್ಣು ಹೇಗೆ ಸರ್ವೋತ್ತಮನಾಗಿದ್ದಾನೋ ಅದರಂತೆ ವಾಯುದೇವನೂ ಸಹ ಏಕೆ ಸರ್ವೋತ್ತಮನಾಗಿರಬಾರದು? ಎಂದು ಪ್ರಶ್ನಿಸಬಾರದು. ಇಬ್ಬರು ಸರ್ವೋತ್ತಮರಾಗುವುದಿಲ್ಲ. ಪರಸ್ಪರ

ಅವರಿಬ್ಬರಿಗೆ ವಿರೋಧ ಬರುತ್ತದೆ. ಆದರಂತೆ ವಾಯುದೇವರು ಪೂರ್ಣಾನಂದ ಸ್ವರೂಪರೂ ಸಹ ಆಗಲು ಸಾಧ್ಯವಿಲ್ಲ. ಏಕೆಂದರೆ 'ಅವ್ಯಕ್ತಾದಿತೃಣಾಂತಾಸ್ತು ವಿಷ್ಣುಡಾನಂದಭಾಗಿನಃ' 'ರಮಾದೇವಿಯಿಂದ ಪ್ರಾರಂಭಿಸಿ ತೃಣಪರ್ಯಂತ ಸಕಲಜೀವರು ಪರಮಾತ್ಮನ ಆನಂದದ ಲೇಶವನ್ನಷ್ಟೇ ಹೊಂದಿರುತ್ತಾರೆ' ಎಂಬುದಾಗಿ ಪ್ರಮಾಣವಿರುತ್ತದೆ. ಉಪಕ್ರಮದಲ್ಲಿ ಪ್ರಾಣಶಬ್ದವು ಕೇಳಿಸುತ್ತಿರುವುದರಿಂದ ಭೂಮಾ ಎಂಬ ಶಬ್ದವು ವಿಷ್ಣು ಎಂಬರ್ಥವನ್ನು ಹೇಗೆ ನೀಡುತ್ತದೆ? ಎಂಬ ಪ್ರಶ್ನೆಯೂ ಸಹ ತಪ್ಪು. ಪ್ರಾಣಶಬ್ದದಿಂದಲೂ ಸಹ ವಿಷ್ಣುವೇ ಪ್ರತಿಪಾದ್ಯನಾಗಿದ್ದಾನೆ.

**तत्वप्रकाशिका – अनन्तरमन्यमनुक्त्वोभूम्नोऽपि विष्णुत्वसम्भवात् । अत्र प्राणशब्देन विष्ण्वङ्गीकारे प्रागुक्तोत्क्रमणादिविरोध इति तत्राह – तमिति ।।**

ನಾಮಾಭಿಮಾನಿ ದೇವತೆಯಿಂದ ಪ್ರಾರಂಭಿಸಿ ಮುಖ್ಯಪ್ರಾಣನ ತನಕ ಆಧಿಕ್ಯವನ್ನು ಶ್ರುತಿಯು ಹೇಳಿದೆ. ಅನಂತರ ಮುಖ್ಯಪ್ರಾಣನಿಗಿಂತ ಮತ್ತೊಬ್ಬ ಶ್ರೇಷ್ಠನಾದ ವ್ಯಕ್ತಿಯನ್ನು ಹೇಳಿರುವುದಿಲ್ಲ. ಆದ್ದರಿಂದ ಸರ್ವೋತ್ತಮನಾದ ವಿಷ್ಣುವೇ ಪ್ರಾಣಶಬ್ದವಾಚ್ಯನಾಗುತ್ತಾನೆಂಬುದು ಸಿದ್ಧವಾಗುತ್ತದೆ. ಶ್ರುತಿಯಲ್ಲಿ ಶ್ರುತವಾದ ಪ್ರಾಣಶಬ್ದದಿಂದ ವಿಷ್ಣು ಪ್ರತಿಪಾದ್ಯನಾದರೆ ಹಿಂದೆ ಹೇಳಲ್ಪಟ್ಟ ಉತ್ಕ್ರಮಣವೆಂಬ ಮುಖ್ಯಪ್ರಾಣನ ಲಿಂಗದಿಂದ ವಿರೋಧ ಬರುತ್ತದಲ್ಲವೇ? ಎಂಬ ಪ್ರಶ್ನೆಗೆ "ತಮ್" ಇತ್ಯಾದಿ ಭಾಷ್ಯದಿಂದ ಉತ್ತರಿಸಿದ್ದಾರೆ.

**तत्वप्रकाशिका – सर्वगतस्यापि विष्णो रूपान्तरविवक्षयोत्क्रमणस्य श्रुतिसिद्धत्वात् प्राणपदेन विष्णावङ्गीकारेऽपि न लिङ्गविरोध इति भावः ।**

ವಿಷ್ಣು ಎಲ್ಲೆಡೆ ವ್ಯಾಪ್ತನಾಗಿದ್ದಾನೆ. ಆದರೂ ಸಹ ಅನೇಕರೂಪಗಳಿರುವುದರಿಂದ ಒಂದು ರೂಪದಿಂದಷ್ಟೇ ದೇಹದಿಂದ ಉತ್ಕ್ರಮಣಮಾಡುತ್ತಾನೆ. ಹೀಗೆ ಶ್ರುತಿಗಳೇ ಸಾಧಿಸುತ್ತಿವೆ. ಆದ್ದರಿಂದ ಪ್ರಾಣಪದದಿಂದ ವಿಷ್ಣು ಪ್ರತಿಪಾದ್ಯನಾಗುತ್ತಾನೆಂದು ಹೇಳಿದರೂ ಕೂಡ ಉತ್ಕ್ರಮಣಾದಿ ಲಿಂಗಗಳ ವಿರೋಧವು ಬರುವುದಿಲ್ಲವೆಂದು ತಿಳಿಯಬೇಕು.

**तत्वप्रकाशिका – अस्तु वाऽयं प्राणो वायुरेव तथापि न तस्य भूमत्वप्राप्तिः । 'एष तु वा अतिवदति' इत्यादिना प्रश्नाद्यध्याहारेण प्राणाद्विष्णोर्भूयस्त्वमुक्त्वा भूम्न आम्नानात् । न चैतदर्थद्वयं विरुद्धम् । अन्तर्यामिविवक्षया प्राणपदेन विष्णोरुक्तेः 'आत्मन आकाशः सम्भूत' इत्यादिवत् ।। ८ ।।**

ಅಥವಾ ಪೂರ್ವಪಕ್ಷಕಾರರು ಹೇಳಿದಂತೆ ಮುಖ್ಯಪ್ರಾಣದೇವರೇ ವಾಯುಶಬ್ದವಾಚ್ಯರಾಗಲಿ. ಆದರೆ ಭೂಮನಾಗಲು ಸಾಧ್ಯವಿಲ್ಲ. ಏಕೆಂದರೆ, 'ಏಷ ತು ವಾ ಅತಿವದತಿ' ಇತ್ಯಾದಿ ವಾಕ್ಯಗಳಿಂದ

ಪ್ರಶ್ನೆ ಮೊದಲಾದವುಗಳನ್ನು ಅಧ್ಯಾಹಾರಮಾಡಿ, ಪ್ರಾಣನಿಗಿಂತ ವಿಷ್ಣುವಿಗೆ ಉತ್ತಮತ್ವವನ್ನು ಹೇಳಿ ಭೂಮತ್ವವನ್ನು ಸಾಧಿಸಲಾಗಿದೆ. ಒಂದೇ ಪ್ರಾಣಶಬ್ದಕ್ಕೆ ಎರಡು ಅರ್ಥಗಳನ್ನು ಹೇಳುವುದು ವಿರುದ್ಧವಲ್ಲವೇ? ಎಂದೂ ಪ್ರಶ್ನಿಸಬಾರದು. ಮುಖ್ಯಪ್ರಾಣನ ಅಂತರ್ಯಾಮಿವಿವಕ್ಷೆಯಿಂದ ಪ್ರಾಣಪದಿಂದ ವಿಷ್ಣುವನ್ನು ಹೇಳಬಹುದು. 'ಆತ್ಮನಃ ಆಕಾಶಃ ಸಂಭೂತಃ' ಎಂಬಲ್ಲಿ ಆಕಾಶಶಬ್ದಕ್ಕೆ ಭೂತಾಕಾಶ ಹಾಗೂ ಅದರ ಅಂತರ್ಯಾಮಿಯಾದ ವಿಷ್ಣು ಎಂಬುದಾಗಿ ಎರಡು ಅರ್ಥಗಳನ್ನು ಹೇಳುವಂತೆ ಇಲ್ಲಿಯೂ ಸಹ ಎರಡು ಅರ್ಥಗಳನ್ನು ಒಪ್ಪಬಹುದು.

**भावदीपः – ॐ भूमा सम्प्रसादादध्युपदेशात् ॐ ।। न्यायविवरणोक्तरीत्या साधारण्यं व्यनक्ति – प्राणो वा इति ।। तस्माद् देवेभ्यो भूयस्त्वादित्यर्थः ।**

ಭೂಮಾಧಿಕರಣವು ಪ್ರಾರಂಭವಾಗುತ್ತಿದೆ. ಈ ಅಧಿಕರಣದಲ್ಲಿ ಉಭಯತ್ರ ಪ್ರಸಿದ್ಧವಾದ ''ಭೂಮಾ'' ಎಂಬ ನಾಮಾತ್ಮಕಶಬ್ದವನ್ನು ಮಹಾವಿಷ್ಣುವಿನಲ್ಲಿ ಸಮನ್ವಯ ಮಾಡುತ್ತಿದ್ದಾರೆ. ನ್ಯಾಯವಿವರಣದಲ್ಲಿ ಈ ಶಬ್ದವನ್ನು ವಿಷ್ಣುವಿನಲ್ಲಿ ಹಾಗೂ ಮುಖ್ಯಪ್ರಾಣದೇವರಲ್ಲಿ ಸಾಧಾರಣವಾಗಿದೆ ಎಂದು ಹೇಳುವ ಮೂಲಕ ಉಭಯತ್ರಪ್ರಸಿದ್ಧವೆಂದು ಸಮರ್ಥಿಸಿದ್ದಾರೆ. ಅದನ್ನು ಟೀಕೆಯಲ್ಲಿ ''ಪ್ರಾಣೋ ವಾ'' ಇತ್ಯಾದಿ ಶ್ರುತಿಯ ಉಲ್ಲೇಖದ ಮುಖದಿಂದ ವ್ಯಾಖ್ಯಾನಿಸುತ್ತಿದ್ದಾರೆ. ''ತಸ್ಮಾದ್‌ಭೂಯಾನ್ನಾಮ'' ಎಂಬಲ್ಲಿರುವ ''ತಸ್ಮಾತ್'' ಎಂಬ ಪದಕ್ಕೆ ದೇವತೆಗಳಿಂದ ಉತ್ತಮರಾದ ಕಾರಣ ಎಂದರ್ಥ.

**भावदीपः – समाख्यायाः प्रक्रमाद्दौर्बल्येऽपि साभ्यासत्वेन सोपपत्तिकत्वेन च प्राबल्यात् साधारण्यमविरुद्धम् । अत एव तस्माद् भूयान्नामेत्यन्तोक्तिः । भूमभूयश्शब्दयोरैकार्थ्यादिति भावः ।**

''ಭೂಮಾ'' ಶಬ್ದವು ವಿಷ್ಣುವಿನಲ್ಲಿ ಶ್ರುತಿಯ ಬಲದಿಂದ ಪ್ರಸಿದ್ಧವಾಗಿದೆ. ಸಮಾಖ್ಯಾಪ್ರಮಾಣದ ಬಲದಿಂದ ಮುಖ್ಯಪ್ರಾಣದೇವರಲ್ಲಿ ಪ್ರಸಿದ್ಧವಾಗಿದೆ. ಶ್ರುತಿಪ್ರಮಾಣಕ್ಕಿಂತ ಸಮಾಖ್ಯಾಪ್ರಮಾಣವು ದುರ್ಬಲವಾದ್ದರಿಂದ ಈ ಎರಡು ಪ್ರಮಾಣಗಳ ಆಧಾರದಿಂದ 'ಭೂಮಾ' ಎಂಬ ಶಬ್ದವು ಉಭಯ ಸಾಧಾರಣವಾಗಿದೆ ಎಂದು ಹೇಳಲು ಹೇಗೆ ಸಾಧ್ಯ? ಎಂದು ಪ್ರಶ್ನಿಸಬಾರದು. ಸಮಾಖ್ಯಾಪ್ರಮಾಣವು ಶ್ರುತಿಪ್ರಮಾಣಕ್ಕಿಂತ ದುರ್ಬಲವಾಗಿರಬಹುದು. ಆದರೆ ಪ್ರಕೃತ ಮುಖ್ಯಪ್ರಾಣದೇವರ ವಿಷಯದಲ್ಲಿರುವ ಸಮಾಖ್ಯಾಪ್ರಮಾಣವು ಅಭ್ಯಾಸ ಪ್ರಮಾಣದಿಂದಲೂ ಯುಕ್ತಿಪ್ರಮಾಣದಿಂದಲೂ ಸಹಿತವಾಗಿದೆ. ಸ್ವಾಭಾವಿಕವಾಗಿ ದುರ್ಬಲವಾಗಿದ್ದರೂ ಈ ಎರಡು ಪ್ರಮಾಣದಿಂದ ಕೂಡಿರುವ ಕಾರಣ ಶ್ರುತಿಯು ಎಷ್ಟು ಪ್ರಬಲವಾಗಿದೆಯೋ ಅಷ್ಟೇ ಪ್ರಾಬಲ್ಯವನ್ನು ಸಮಾಖ್ಯಾಪ್ರಮಾಣವೂ ಸಹ ಹೊಂದಿರುತ್ತದೆ. ಹೀಗೆ ಪ್ರಮಾಣ ಬಲವನ್ನು ಹೊಂದಿರುವ ಶ್ರುತಿಪ್ರಮಾಣ ಹಾಗೂ ಸಮಾಖ್ಯಾಪ್ರಮಾಣಗಳ ಆಧಾರದಿಂದ 'ಭೂಮಾ' ಎಂಬ ಶಬ್ದವು ಉಭಯಸಾಧಾರಣವಾಗಿದೆ ಎಂದು ನ್ಯಾಯವಿವರಣದಲ್ಲಿ ಹೇಳಿದ್ದು ವಿರುದ್ಧವಲ್ಲ.

ಭೂಮಾಧಿಕರಣ (೧-೩-೨)

ಆದ್ದರಿಂದಲೇ ಟೀಕೆಯಲ್ಲಿ "ವಿಷ್ಣುರ್ವೈ ದೇವೇಭ್ಯಃ ಭೂಯಾನ್" ಎಂದಷ್ಟೇ ಶ್ರುತಿಯನ್ನು ಉಲ್ಲೇಖಿಸಿದ್ದರೆ ಸಾಕಾಗಿತ್ತು. ಆದರೂ ಸಹ "ತಸ್ಮಾದ್‌ಭೂಯಾನ್ನಾಮ" ಎಂಬ ಮುಂದಿನ ವಾಕ್ಯವನ್ನು ಉಲ್ಲೇಖಿಸಿರುತ್ತಾರೆ. ಭೂಮಾ ಹಾಗೂ ಭೂಯಃ ಎಂಬೆರಡು ಶಬ್ದಗಳಿಗೆ ಒಂದೇ ಅರ್ಥ ಇರುವುದರಿಂದ ಅಭ್ಯಾಸ ಪ್ರಮಾಣವನ್ನು ಇದರಿಂದ ಹೇಳಿದಂತಾಗುತ್ತದೆ.

**भावदीपः** – न्यायविवरणे भूमशब्दोऽज्ञानां साधारण इत्यज्ञपदप्रयोगेऽपि तस्य पूर्वोत्तरपक्षन्यायानुसन्धानहीनानाम् इत्यर्थत्वात् तस्य सर्वनयसाधारण्यादिहाज्ञानामिति नोक्तम् । भूमशब्दस्य 'अध्यात्मसम्बन्धभूमा' 'भूम्नः क्रतुवज्ज्यायस्त्वम्' इत्यादौ बाहुल्यरूपधर्मवाचित्वेन प्रयोगेऽपीह धर्मधर्मिणोरभेदविवक्षया पूर्णरूपधर्मिपरत्वमिति मत्वोक्तम् –

ಪ್ರಶ್ನೆ :- ನ್ಯಾಯವಿವರಣದಲ್ಲಿ 'ಭೂಮಾ' ಎಂಬ ಶಬ್ದವು ಅಜ್ಞಾನಿಗಳ ವಿವಕ್ಷೆಯಿಂದಷ್ಟೇ ಉಭಯ ಸಾಧಾರಣವಾಗಿದೆ ಎಂದು ಹೇಳಿದ್ದಾರೆ. ಈಗಾಗಲೇ ಹೇಳಿದಂತೆ ಸಮಾಖ್ಯಾ ಪ್ರಮಾಣವು ಅಭ್ಯಾಸ ಹಾಗೂ ಉಪಪತ್ತಿಗಳಿಂದ ಯುಕ್ತವಾದಾಗ ಪ್ರಬಲವಾದ ಪ್ರಯುಕ್ತ ಎಲ್ಲರ ದೃಷ್ಟಿಯಿಂದಲೂ ಉಭಯಸಾಧಾರಣವೆಂದೇ ಹೇಳಬಹುದಿತ್ತು. ಹೀಗಿರುವಾಗ ಅಜ್ಞಾನಿಗಳ ದೃಷ್ಟಿಯಿಂದಷ್ಟೇ ಉಭಯಸಾಧಾರಣವೆಂದು ಹೇಳಿದ್ದು ಹೇಗೆ ಸರಿ?

ಉತ್ತರ :- "ಅಜ್ಞಾನಾಂ ಸಾಧಾರಣಃ" ಎಂದು ಅಜ್ಞ ಪದವನ್ನು ಪ್ರಯೋಗಿಸಲು ಬೇರೆ ಕಾರಣವಿದೆ. ಯಾವ ವ್ಯಕ್ತಿಗೆ ಪೂರ್ವಪಕ್ಷನ್ಯಾಯ ಹಾಗೂ ಸಿದ್ಧಾಂತನ್ಯಾಯಗಳ ಅನುಸಂಧಾನವಿರುವುದಿಲ್ಲವೋ ಅಂತಹ ವ್ಯಕ್ತಿಯ ದೃಷ್ಟಿಯಿಂದ ಈ ಶಬ್ದವು ಉಭಯಸಾಧಾರಣವಾಗಿದೆ ಎಂಬ ವಿವಕ್ಷೆಯಿಂದ 'ಅಜ್ಞ' ಪದವನ್ನು ಪ್ರಯೋಗಿಸಿದ್ದಲ್ಲ. ಹಾಗೆ ಪ್ರಯೋಗಿಸಿದ್ದಲ್ಲಿ ಎಲ್ಲಾ ಅಧಿಕರಣಗಳಲ್ಲಿಯೂ ಹೀಗೆ ಉಭಯಸಾಧಾರಣವನ್ನು ಹೇಳಬಹುದಾದ್ದರಿಂದ ಎಲ್ಲವೂ ಉಭಯಸಾಧಾರಣ ಶಬ್ದಗಳೇ ಆಗುತ್ತಿದ್ದವು. ಆದ್ದರಿಂದ ಭೂಮಾ ಎಂಬ ಶಬ್ದವು "ಅಧ್ಯಾತ್ಮಸಂಬಂಧಭೂಮಾ" ಮತ್ತು "ಭೂಮ್ನಃ ಕ್ರತುವಜ್ಜ್ಯಾಯಸ್ತ್ವಂ" ಇತ್ಯಾದಿ ಸೂತ್ರಗಳಲ್ಲಿ ಬಾಹುಲ್ಯವೆಂಬ ಧರ್ಮಾರ್ಥದಲ್ಲಿ ಪ್ರಯೋಗಿಸಲ್ಪಟ್ಟಿದೆ. ಆದರೆ ಪ್ರಕೃತ ಈ ಅಧಿಕರಣದಲ್ಲಿ ಭೂಮಾವೆಂಬ ಶಬ್ದವನ್ನು ಧರ್ಮ ಹಾಗೂ ಧರ್ಮಿಗಳಿಗೆ ಅಭೇದದ ವಿವಕ್ಷೆಯಿಂದ 'ಧರ್ಮಿ' ಎಂಬ ಅರ್ಥದಲ್ಲಿ ಪ್ರಯೋಗಿಸಲ್ಪಟ್ಟಿದೆ. ಈ ವಿಷಯವನ್ನು ತಿಳಿಸುವುದಕ್ಕಾಗಿ "ಅಜ್ಞಾನಾನ್" ಎಂಬ ಪದವನ್ನು ಪ್ರಯೋಗಿಸಿದ್ದಾರೆ. ಇದರಿಂದ ಭೂಮಾವೆಂಬ ಶಬ್ದವು ಉಭಯತ್ರ ಪ್ರಸಿದ್ಧವಾಗಿರುವುದಷ್ಟೇ ಅಲ್ಲದೆ ನಾಮಾತ್ಮಕವೂ ಆಗಿದೆ ಎಂದು ತಿಳಿಸಿದಂತಾಗುತ್ತದೆ.

**भावदीपः** – भूमनाम्नो विष्णाविति ।। अधिकं चन्द्रिकायाम् । इत्यन्तभाष्यं सङ्गतिपरत्वेन तावद् व्याकुर्वन् 'यो वै भूमा तत्सुखम्' इत्युक्तेरित्येतस्य भावार्थमाह – आनन्दमयेति ।।

"ಭೂಮನಾಮ್ನೋ ವಿಷ್ಣೌ" ಎಂದು ಟೀಕೆಯಲ್ಲಿ ಭೂಮಾವೆಂಬ ನಾಮಾತ್ಮಕಶಬ್ದವನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡುತ್ತಿದ್ದಾರೆಂದು ಹೇಳಿದ್ದಾರೆ. ಇದು ಹೇಗೆ ನಾಮಾತ್ಮಕ ಶಬ್ದವಾಗುತ್ತದೆ? ಎಂಬ ವಿಷಯದಲ್ಲಿ ಹೆಚ್ಚಿನ ವಿಚಾರವನ್ನು ತಾತ್ಪರ್ಯಚಂದ್ರಿಕೆಯನ್ನು ಓದಿ ತಿಳಿದುಕೊಳ್ಳಬೇಕು. "ಇತಿ" ಎಂಬಲ್ಲಿಯ ತನಕದ ಭಾಷ್ಯವನ್ನು ಅಧಿಕರಣದ ಸಂಗತಿಯನ್ನು ತೋರಿಸುವುದಕ್ಕಾಗಿ ಹೇಳಿರುತ್ತಾರೆಂಬ ಉದ್ದೇಶದಿಂದ ವ್ಯಾಖ್ಯಾನಿಸುತ್ತಾ "ಯೋ ವೈ ಭೂಮಾ ತತ್ಸುಖಂ ಇತ್ಯುಕ್ತೇಃ" ಎಂಬ ಭಾಷ್ಯದ ಅಭಿಪ್ರಾಯವನ್ನು "ಆನಂದಮಯಾಧಿಕರಣೇ" ಇತ್ಯಾದಿ ವ್ಯಾಕ್ಯದಿಂದ ವ್ಯಾಖ್ಯಾನಿಸುತ್ತಿದ್ದಾರೆ.

**भावदीपः – छन्दोगेति ।।** सप्तमेऽध्याये 'यो वै भूमा तत्सुखम्' इति सुखपदेनोक्तं पूर्णं सुखमिति । जडे अप्रसक्त्या निषेधायोगात् । अल्पेऽपूर्णे चेतने सुखं नेति वक्तव्ये तत्र स्वरूपसुखनिषेधे बाधाद्धर्मान्तरेण वाक्यशेषादिति न्यायेनासङ्कुचितपूर्णसुखनिषेध एव वाच्य इति तदन्यथानुपपत्त्या तत्सुखमित्युक्तस्य पूर्णसुखत्वलाभ इत्युपेत्य टीकायां शेषोक्तिः ।

ಛಾಂದೋಗ್ಯೋಪನಿಷತ್ತಿನ ಏಳನೇ ಅಧ್ಯಾಯದಲ್ಲಿ "ಯೋ ವೈ ಭೂಮಾ ತತ್ಸುಖಂ" ಎಂಬ ಶ್ರುತಿಯು ಪ್ರಸಕ್ತವಾಗಿದೆ. ಈ ಶ್ರುತಿಯಲ್ಲಿ "ತತ್ಸುಖಂ" ಎಂಬಲ್ಲಿರುವ ಸುಖಪದದಿಂದ ಪರಿಪೂರ್ಣವಾದ ಸುಖವೇ ಅಭಿಪ್ರೇತವಾಗಿದೆ. ಜಡದಲ್ಲಿ ಸುಖದ ಪ್ರಸಕ್ತಿಯೇ ಇಲ್ಲದ ಕಾರಣ ಸುಖದ ನಿಷೇಧವನ್ನು ಮಾಡಲು ಸಾಧ್ಯವಿಲ್ಲ. ಹಾಗಾಗಿ ಚೇತನನಲ್ಲಿಯೇ ಸುಖದ ನಿಷೇಧವನ್ನು ಶ್ರುತಿಯು ಮಾಡುತ್ತಿದೆ ಎನ್ನಬೇಕು. ಅಂದರೆ "ನಾಲ್ಪೇ ಸುಖಮಸ್ತಿ" ಎಂದರೆ ಅಲ್ಪನಾದ = ಅಪೂರ್ಣನಾದ ಚೇತನನಲ್ಲಿ ಸುಖವು ಇರುವುದಿಲ್ಲ ಎಂದು ಹೇಳಬೇಕು. ಆದರೆ ಸ್ವರೂಪತಃ ಸುಖದ ನಿಷೇಧವನ್ನು ಮಾಡಿದರೆ ಪ್ರತ್ಯಕ್ಷ ಬಾಧಾದಿಗಳು ಬರುತ್ತವೆ. ಹಾಗಾಗಿ "ಧರ್ಮಾಂತರೇಣ ವಾಕ್ಯಶೇಷಾತ್" ಎಂಬ ನ್ಯಾಯದಿಂದ ಅಸಂಕುಚಿತವಾದ ಪೂರ್ಣಸುಖದ ನಿಷೇಧವನ್ನೇ ಶ್ರುತಿಯು ಮಾಡುತ್ತಿದೆ ಎಂದು ತಿಳಿಯಬೇಕು. ಚೇತನನಾದ ಜೀವನಲ್ಲಿ ಪೂರ್ಣಸುಖವು ಇಲ್ಲವೆಂದದಾರೆ ಭೂಮನಲ್ಲಿ ಹೇಳಲ್ಪಟ್ಟ ಸುಖವು ಪೂರ್ಣಸುಖವೆಂದೇ ನಿರ್ಣಯವಾಗುತ್ತದೆ. ಇದನ್ನೇ ಅನ್ಯಥಾನುಪಪತ್ತಿ ಪ್ರಮಾಣದಿಂದ ತಿಳಿಯಬೇಕು. ಅದು ಹೀಗೆ ಭೂಮನಲ್ಲಿ ಪರಿಪೂರ್ಣವಾದ ಸುಖವನ್ನು ಒಪ್ಪದೆ ಚೇತನನಾದ ಜೀವನಲ್ಲಿ ಪೂರ್ಣಸುಖದ ನಿಷೇಧವು ಕೂಡುವುದಿಲ್ಲ. ಅಲ್ಪಜೀವನಲ್ಲಿ ಅಪೂರ್ಣಸುಖನಿಷೇಧದ ಅನ್ಯಥಾನುಪತ್ತಿಯಿಂದ ಭೂಮನಲ್ಲಿ ಪೂರ್ಣಸುಖತ್ವವನ್ನು ಸಾಧಿಸಿದಂತಾಗುತ್ತದೆ. ಈ ಅಭಿಪ್ರಾಯದಿಂದ ಟೀಕೆಯಲ್ಲಿ "ನಾಲ್ಪೇ ಸುಖಮಸ್ತಿ" ಎಂಬ ಶ್ರುತಿಯ ಮುಂದಿನ ಭಾಗವನ್ನು ಉಲ್ಲೇಖಿಸಿದ್ದಾರೆ.

**भावदीपः – अवशिष्ट कृत्स्नभाष्यभावमाह – तस्य चेति ।।** वक्ष्यमाणदिशोत्क्रमणलिङ्गेन निरवकाशप्राणश्रुतिसामानाधिकरण्याद् विष्णोरितरत्वे प्राणत्वे सतीत्यर्थः ।

ಭೂಮಾಧಿಕರಣ (೧-೩-೨)

ಉಳಿದ ಸಂಪೂರ್ಣಭಾಷ್ಯದ ಅಭಿಪ್ರಾಯವನ್ನು "ತಸ್ಯ ಚ" ಎಂಬ ಟೀಕೆಯಿಂದ ವ್ಯಾಖ್ಯಾನಿಸುತ್ತಿದ್ದಾರೆ. ಮುಂದೆ ಹೇಳುವ ಪ್ರಕಾರ ಉತ್ಕ್ರಮಣವೆಂಬ ಲಿಂಗದಿಂದ ನಿರವಕಾಶವಾದ ಪ್ರಾಣ ಶ್ರುತಿಯ ಸಾಮಾನಾಧಿಕರಣದಿಂದ ವಿಷ್ಣುವಿಗಿಂತ ಭಿನ್ನರಾದ ಮುಖ್ಯಪ್ರಾಣದೇವರೇ ಪ್ರಾಣಶಬ್ದ ಪ್ರತಿಪಾದ್ಯರಾಗುತ್ತಾರೆಂದು ಸಿದ್ಧವಾಗುವ ಕಾರಣ ಎಂದು ಈ ವಾಕ್ಯದ ಅಭಿಪ್ರಾಯ.

**भावदीपः – 'यो वै भूमा तत्सुखम्' इत्युक्तेरित्यस्य तात्पर्यम् – प्रागुक्तेत्यादि ।। इति सङ्गतिसम्भवादित्यर्थः । तदेव भाष्यं पूर्वपक्षतद्युक्तितत्फलोक्ति परत्वेन व्याकुर्वन् तस्यैव भूमत्वप्राप्तिरिति प्रतिज्ञांशार्थमाह – मुख्येति ।।**

"ಯೋ ವೈ ಭೂಮಾ ತತ್ಸುಖಂ ಇತ್ಯುಕ್ತೇಃ" ಎಂಬ ಭಾಷ್ಯವಾಕ್ಯದ ತಾತ್ಪರ್ಯವನ್ನು "ಪ್ರಾಗುಕ್ತೇಃ" ಇತ್ಯಾದಿ ಟೀಕೆಯಿಂದ ವಿವರಿಸುತ್ತಿದ್ದಾರೆ. "ಪ್ರಾಗುಕ್ತ ಆನಂದಮಯತ್ವಂ" ಎಂಬ ವಾಕ್ಯದಿಂದ ಆನಂದಮಯಾಧಿಕರಣದಿಂದ ಸಂಗತಿಯನ್ನು ತೋರಿಸಿದ್ದಾರೆಂದು ತಿಳಿಯಬೇಕು. ಹೀಗೆ ಸಂಗತಿಪರವಾಗಿ ವ್ಯಾಖ್ಯಾನಿಸಿದ ಭಾಷ್ಯವನ್ನೇ ಪೂರ್ವಪಕ್ಷ ಹಾಗೂ ಪೂರ್ವಪಕ್ಷಯುಕ್ತಿ, ಪೂರ್ವಪಕ್ಷಫಲಪರವಾಗಿ ಹೇಳುವ ಮೂಲಕ ವಾಖ್ಯಾನಿಸುತ್ತಿದ್ದಾರೆ. ಮೊದಲು ಮುಖ್ಯಪ್ರಾಣದೇವರೇ ಭೂಮರಾಗುತ್ತಾರೆಂಬ ಪ್ರತಿಜ್ಞಾ ಭಾಗವನ್ನು "ಮುಖ್ಯಪ್ರಾಣೋಽಯಂ" ಎಂಬ ವಾಕ್ಯದಿಂದ ವ್ಯಾಖ್ಯಾನಿಸುತ್ತಿದ್ದಾರೆ.

**भावदीपः – प्राणपदस्य हरावपि भावात् मुख्येत्युक्तिः । कुत इत्यतः तत्र हेतुत वेनाध्युपदेशादित्येतद् व्यावर्त्योक्तिपरमुक्त्वेत्यन्तभाष्यं व्याचष्टे – नामेति ।।**

ಪ್ರಾಣವೆಂಬ ಪದವು ಶ್ರೀಹರಿಯಲ್ಲಿಯೂ ಯುಕ್ತವಾಗುವುದರಿಂದ ಮುಖ್ಯವೆಂಬ ಶೇಷವನ್ನು ಹೇಳಿದ್ದಾರೆ. ಮುಖ್ಯಪ್ರಾಣದೇವರೆ ಏಕೆ ಭೂಮಾಶಬ್ದದಿಂದ ಪ್ರತಿಪಾದ್ಯರಾಗುತ್ತಾರೆ? ಎಂಬ ಪ್ರಶ್ನೆಗೆ "ಅಧ್ಯುಪದೇಶಾತ್" ಎಂಬ ಸೂತ್ರದ ಹೇತು ಭಾಗದಿಂದ ವ್ಯಾವರ್ತ್ಯವಾದ ಪೂರ್ವಪಕ್ಷವನ್ನು ತೋರಿಸಿ "ಇತಿ" ಎಂಬಲ್ಲಿಯ ತನಕದ ಭಾಷ್ಯವನ್ನು ಪೂರ್ವಪಕ್ಷದ ಪರವಾಗಿ ವ್ಯಾಖ್ಯಾನಿಸುತ್ತಿದ್ದಾರೆ "ನಾಮವಾಗಾದಿ" ಇತ್ಯಾದಿ ವಾಕ್ಯದಿಂದ.

**भावदीपः – नामवाङ्मनस्सङ्कल्पचित्तध्यानविज्ञानबलान्नाप्तेज आकाशस्मराशा-शब्दितान् उष । स्वाहापर्जन्यमित्राग्निवरुणविधुप्रवहानिरुद्धप्राणेन्द्रोमारुद्रवाणीरूपदेव ान् नारदसनत्कुमार प्रश्नोत्तराभ्याम् उत्तरोत्तरातिशयितत्वेनोक्त्वेत्यर्थः ।**

ಸನತ್ಕುಮಾರರನ್ನು ಕುರಿತು ನಾರದರು ಪ್ರಶ್ನಿಸುತ್ತಾರೆ. ಆ ಪ್ರಶ್ನೆಗಳಿಗೆ ಅನುಸಾರಿಯಾಗಿ ಸನತ್ಕುಮಾರರು ಉತ್ತರಿಸುತ್ತಾರೆ. ನಾಮ, ವಾಕ್, ಮನಸ್ಸು, ಸಂಕಲ್ಪ, ಚಿತ್ತ, ಧ್ಯಾನ, ವಿಜ್ಞಾನ, ಬಲ,ಅನ್ನ, ಅಪ್, ತೇಜಸ್ಸು, ಆಕಾಶ, ಸ್ಮರ, ಆಶಾ ಈ ಶಬ್ದಗಳಿಂದ ಉಷಾ, ಸ್ವಾಹಾ, ಪರ್ಜನ್ಯ, ಮಿತ್ರ, ಅಗ್ನಿ, ವರುಣ, ಚಂದ್ರ, ಪ್ರವಹ, ಅನಿರುದ್ಧ, ಪ್ರಾಣ, ಇಂದ್ರ, ಉಮಾ, ರುದ್ರ, ವಾಣೀ ಮೊದಲಾದ ದೇವತೆಗಳನ್ನು ಕ್ರಮವಾಗಿ ಹಿಂದಿನ ದೇವತೆಗಳಿಗಿಂತ ಮುಂದಿನ ದೇವತೆಗಳು ಶ್ರೇಷ್ಠರಾಗಿದ್ದಾರೆಂದು ಉಪದೇಶಿಸಿದ್ದಾರೆ.

**भावदीपः** – एतच्च तदुत्तममनुक्त्वेति वक्ष्यमाणानुक्तिरुपयुक्ति-निरवकाशत्वायेत्युक्तम् । तथा च विवरिष्यामः । इत्युक्त्वेत्यस्य कर्मकारकं निष्कृष्याह – **प्राणस्येति** ।। एतच्च प्राणस्य मुख्यप्राणत्वेनानुक्तिर्बाधिकेति वक्तुम् ।

ನಾಮಾದಿ ದೇವತೆಗಳಿಂದ ಪ್ರಾರಂಭಿಸಿ ಆಶಾಭಿಮಾನಿ ದೇವತೆಯ ತನಕ ತಾರತಮ್ಯವನ್ನು ಹೇಳಿ ಎಂಬ ಮಾತನ್ನು ಟೀಕೆಯಲ್ಲಿ ಏಕೆ ಉಲ್ಲೇಖಿಸಿದ್ದಾರೆ? ಎಂದರೆ ಮುಂದೆ "ತದುತ್ತಮಮನುಕ್ತ್ವಾ" ಎಂದು "ಅನುಕ್ತಿ" ಎಂಬ ಲಿಂಗವನ್ನು ಹೇಳುತ್ತಾರೆ. ಆ ಯುಕ್ತಿಗೆ ನಿರವಕಾಶವತ್ವವನ್ನು ಸಮರ್ಥಿಸುವುದಕ್ಕಾಗಿ ಮೊದಲು ನಾಮಾಭಿಮಾನಿದೇವತೆಗಳಲ್ಲಿ ಉತ್ತಮತ್ವವು ಹೇಳಲ್ಪಟ್ಟಿದೆ ಎಂಬ ಮಾತನ್ನು ಉಲ್ಲೇಖಿಸಿದ್ದಾರೆಂದು ತಿಳಿಯಬೇಕು. ಇದನ್ನು ಮುಂದೆ ವಿವರಿಸುತ್ತೇವೆ. ಭಾಷ್ಯದಲ್ಲಿ "ಇತ್ಯುಕ್ತ್ವಾ" ಎಂದಿದ್ದಾರೆ. ಇದಕ್ಕೆ ಕರ್ಮಕಾರಕವನ್ನು ಸ್ಪಷ್ಟವಾಗಿ ತೋರಿಸುವುದಕ್ಕಾಗಿ "ಪ್ರಾಣಸ್ಯ" ಎಂಬ ವಾಕ್ಯ ಹೊರಟಿದೆ. ಪ್ರಾಣದೇವರಿಗೆ ಉತ್ತಮತ್ವವನ್ನು ಏಕೆ ಹೇಳಿದ್ದಾರೆ ಎಂದರೆ ಪ್ರಾಣಶಬ್ದವು ಮುಖ್ಯಪ್ರಾಣನನ್ನೇ ಪ್ರತಿಪಾದಿಸುತ್ತದೆ ಎನ್ನಲು ಅನುಕ್ತಿಯು ಬಾಧಕವಲ್ಲವೆಂದು ತಿಳಿಸುವುದಕ್ಕಾಗಿ.

**भावदीपः** – ननु मध्येऽन्योक्त्यापि भूम्न उक्तिसम्भवान्नेदं भूम्नः प्राणत्वसाधकमित्यतः 'प्राणो वा आशाया भूयान्' इत्युक्त्वा प्राणाद्भूयसोऽनुक्तिरिति न्यायविवरणोक्तं संयोजयति – **तदुत्तममिति** ।।

ಮಧ್ಯದಲ್ಲಿ ಬೇರೆಯವರನ್ನು ಹೇಳಿದರು "ಭೂಮ್ನಃ" ಎಂದು ಹೇಳಬಹುದಾದ್ದರಿಂದ ಭೂಮನು ಪ್ರಾಣನೇ ಆಗಿದ್ದಾನೆಂದು ಹೇಳಲು ಇದು ಸಾಧಕವಾಗುವುದಿಲ್ಲವಲ್ಲ? ಎಂಬ ಪ್ರಶ್ನೆಗೆ "ಪ್ರಾಣೋ ವಾ ಆಶಾಯಾ ಭೂಯಾನ್" ಎಂದು ಹೇಳಿ ಪ್ರಾಣನಿಗಿಂತ ಉತ್ತಮನಿದ್ದಾನೆಂದು ಹೇಳದ ಕಾರಣ ಅನುಕ್ತಿಯು ಪೂರ್ವಪಕ್ಷಲಿಂಗವಾಗುತ್ತದೆ ಎಂದು ನ್ಯಾಯವಿವರಣದಲ್ಲಿ ಹೇಳಿದ್ದಾರೆ. ಅದನ್ನೇ "ತದುತ್ತಮಂ" ಎಂಬ ವಾಕ್ಯದಿಂದ ಸಂಯೋಜನೆ ಮಾಡುತ್ತಿದ್ದಾರೆ.

**भावदीपः** – यदीह नामादिभ्यो वागादिवत् प्राणाद् भूमाऽन्यः स्यात्तदाऽस्ति भगवो नाम्नो भूयः इत्यादिप्रश्नवत् 'वाग् वाव भूयसि' इत्यादिप्रतिवचनवच्च अस्ति भगवः प्राणाद् भूय इति प्रश्नः भूमा वाव प्राणाद् भूयानिति प्रतिवचनं च स्यात् । भूम्नः सर्वोत्तमत्वार्थमेव नाम वागादितारतम्यस्य प्रक्रान्तत्वात् । नच यदर्थमन्यत् प्रक्रान्तं तदनुक्तिर्युक्तेति भावः ।

ನಾಮಾಭಿದೇವತೆಗಳಿಗಿಂತ ವಾಗಾದ್ಯಮಾನಿ ದೇವತೆಗಳು ಭಿನ್ನರಾಗಿದ್ದಾರೆ. ಅದರಂತೆ ಪ್ರಾಣನಿಗಿಂತ ಭೂಮನು ಒಂದು ವೇಳೆ ಭಿನ್ನನಾಗಿದ್ದರೆ ಆವಾಗ "ಅಸ್ತಿ ಭಗವೋ ನಾಮ್ನೋ ಭೂಯಃ" ನಾಮಾಭಿಮಾನಿ ದೇವತೆಗಳಿಗಿಂತ ಉತ್ತಮನಾದವನು ಇದ್ದಾನೆಯೇ? ಎಂಬ ಪ್ರಶ್ನೆಗೆ "ವಾಗ್ವಾವ ಭೂಯಸಿ" - ವಾಗಾದಿ

ದೇವತೆಗಳೇ ನಾಮಾಭಿಮಾನಿದೇವತೆಗಳಿಗಿಂತ ಉತ್ತಮರಾಗಿದ್ದಾರೆ ಇದೇ ಮೊದಲಾದ ಉತ್ತರ ನೀಡುವ ವಾಕ್ಯಗಳಿರುವಂತೆ, "ಅಸ್ತಿ ಭಗವಃ ಪ್ರಾಣಾದ್ ಭೂಯಃ" ಪ್ರಾಣನಿಗಿಂತ ಉತ್ತಮನಾದವನು ಇದ್ದಾನೆ ಏನು? ಎಂಬ ಪ್ರಶ್ನೆಯು ಮತ್ತು "ಭೂಮಾ ವಾವ ಪ್ರಾಣಾದ್ ಭೂಯಾನ್" ಭೂಮನೇ ಪ್ರಾಣಗಿಂತ ಉತ್ತಮನಾಗಿದ್ದಾನೆ ಎಂದು ಉತ್ತರ ನೀಡುವ ವಾಕ್ಯಗಳು ಇರುತ್ತಿತ್ತು. ಏಕೆಂದರೆ ಭೂಮನು ಸರ್ವೋತ್ತಮನಾಗಿದ್ದಾನೆ ಎಂದು ಸಮರ್ಥನೆ ಮಾಡುವುದಕ್ಕಾಗಿಯೇ ನಾಮ, ವಾಕ್ ಅಭಿಮಾನಿಗಳ ತಾರತಮ್ಯವು ಪ್ರಾರಂಭದಿಂದ ಹೊರಟಿರುತ್ತದೆ. ಯಾವ ಪ್ರಮೇಯದ ಸಿದ್ಧಿಗಾಗಿ ಈ ಪ್ರಕರಣವು ಹೊರಟಿದೆಯೋ ಆ ಮುಖ್ಯ ಪ್ರಮೇಯವನ್ನೇ ಹೇಳದಿರುವುದು ಯುಕ್ತವಾಗುವುದಿಲ್ಲ.

**भावदीपः –** निरवकाशानुक्तिबलाद् भूमा प्राण एव । भूम्नः प्राणत्वे तु नानुक्तिर्बाधिका । 'प्राणो वा आशाया भूयान्' इत्युक्तत्वादिति भावः ।

ನಿರವಕಾಶವಾದ ಇಂತಹ 'ಅನುಕ್ತಿ' ಎಂಬ ಪ್ರಮಾಣದಿಂದ ಭೂಮನೇ ಪ್ರಾಣನಾಗಿದ್ದಾನೆ ಭೂಮನು ಪ್ರಾಣನಿಗಿಂತ ಭಿನ್ನನಲ್ಲವೆಂದು ತಿಳಿಯುತ್ತದೆ. ಹಾಗಾದರೆ ಭೂಮನೇ ಪ್ರಾಣನಾಗಿದ್ದಾನೆಂದು ಹೇಳಬೇಕಿತ್ತಲ್ಲವೆ? ಹೀಗೆ ಹೇಳದಿರುವುದೇ ಬಾಧಕವಾಗುತ್ತದಲ್ಲವೆ? ಎಂದು ಪ್ರಶ್ನಿಸಬಾರದು. ಏಕೆಂದರೆ "ಪ್ರಾಣೋ ವಾ ಆಶಾಯಾ ಭೂಯಾನ್" ಆಶಾ ಎನಿಸಿದ ಭಾರತೀದೇವಿಗಿಂತ ಪ್ರಾಣನು ಉತ್ತಮನೆಂದು ಹೇಳಿರುವುದರಿಂದ ಪ್ರಾಣನನ್ನು ಭೂಮನೆಂದು ಹೇಳಿದಂತಾಯಿತು.

**भावदीपः –** भूमप्राणयोर्मध्ये सत्यंत्वेव विजिज्ञासितव्यमित्यादिना सत्यविज्ञान मतिश्रद्धानिष्ठाकृतिसुखानां वस्तूनामुक्तत्वेऽपि तेषां 'सैव हि सत्यादयः' इत्यग्रे वक्ष्यमाणदिशा भूमाऽभिन्नत्वात्तदुत्तममनुक्त्वेति युक्तम् ।

ಭೂಮಾ ಹಾಗೂ ಪ್ರಾಣರ ನಡುವಿನಲ್ಲಿ "ಸತ್ಯಂತ್ವೇವ ವಿಜಿಜ್ಞಾಸಿತವ್ಯಂ" ಇವೇ ಮೊದಲಾದ ವಾಕ್ಯಗಳಿಂದ ಸತ್ಯ, ವಿಜ್ಞಾನ, ಮತಿ, ಶ್ರದ್ಧಾ , ನಿಷ್ಠಾ, ಕೃತಿ,ಸುಖ ಮೊದಲಾದ ವಸ್ತುಗಳು ಹೇಳಲ್ಪಟ್ಟಿವೆ. ಆದರೆ "ಸೈವ ಹಿ ಸತ್ಯಾದಯಃ" ಎಂಬುದಾಗಿ ಮುಂದೆ ಹೇಳುವಂತೆ ಸತ್ಯ ಮೊದಲಾದವುಗಳೆಲ್ಲವೂ ಭೂಮನಿಗಿಂತ ಭಿನ್ನವಾಗಿವೆ. ಆದ್ದರಿಂದ ಪ್ರಾಣನಗಿಂತ ಮತ್ತೊಬ್ಬ ಶ್ರೇಷ್ಠನಾದ ವ್ಯಕ್ತಿಯನ್ನು ಹೇಳಿರುವುದಿಲ್ಲ ಎಂಬ ಮಾತು ಯುಕ್ತವೇ ಆಗಿದೆ.

**भावदीपः –** श्रुत्यन्तरे ''विष्णुर्वै देवेभ्य'' इत्यत्र ।। उपक्रमादिति ।। नच समाख्यापि साभ्यासत्वेन सोपपत्तिकत्वेन च प्रबलेति शङ्क्यम् । निरवकाशानुक्तिसचिवस्य बलवत्त्वादिति तात्पर्यार्थः ।

"ಶ್ರುತ್ಯಂತರೇ" ಎಂದರೆ "ವಿಷ್ಣುರ್ವೈ ದೇವೇಭ್ಯಃ" ಎಂಬ ಮತ್ತೊಂದು ಶ್ರುತಿ ಎಂದರ್ಥ. "ಉಪಕ್ರಮಾತ್" ಎಂದು ಟೀಕೆಯಲ್ಲಿದೆ. ಅಂದರೆ ಉಪಕ್ರಮಕ್ಕಿಂತ ಸಮಾಖ್ಯಾಪ್ರಮಾಣವು ದುರ್ಬಲವಾಗಿದೆ. ಸಮಾಖ್ಯಾಪ್ರಮಾಣವೂ ಸಹ ಅಭ್ಯಾಸ ಹಾಗೂ ಉಪಪತ್ತಿಗಳಿಂದ ಸಹಿತವಾಗಿದೆ

ಎನ್ನುವ ಕಾರಣದಿಂದ ಪ್ರಬಲವಾಗಿದೆ ಎಂದು ಶಂಕಿಸಬಾರದು. ನಿರವಕಾಶವಾದ ಅನುಕ್ತಿಸಹಿತವಾದ ಉಪಕ್ರಮವೇ ಬಲಿಷ್ಠವಾಗಿದೆ ಎಂದು ತಾತ್ಪರ್ಯಾರ್ಥ.

**भावदीपः – अत इति ।।** निरवकाशाऽनुक्तिसहितोपमादित्यर्थः । यो वै भूमेति वाक्यतात्पर्यम् । तस्यैवेति ।। एवं प्राणाद्भूम्नोऽन्यत्वे तदुत्तमानुक्तिरूपं बाधकमुक्त्वा भूम्नः प्राणत्वमुक्तम् । इदानीमस्तु प्राणभूम्नोरेकप्रकरणत्वम्, अथापि भूमा विष्णुः स्यादित्याशङ्कापूर्वम् उत्क्रान्तेत्यादिभाष्यं व्याचष्टे – **नन्विति ।**

"ಅತಃ" ಎಂಬ ಪದಕ್ಕೆ ನಿರವಕಾಶವಾದ "ಅನುಕ್ತಿ" ಎಂಬ ಲಿಂಗದಿಂದ ಸಹಿತವಾದ ಉಪಕ್ರಮದಿಂದ ಎಂದರ್ಥ. "ಯೋ ವೈ ಭೂಮಾ" ಎಂಬ ವಾಕ್ಯದ ತಾತ್ಪರ್ಯವನ್ನು "ತಸ್ಯೈವ" ಇತ್ಯಾದಿ ವಾಕ್ಯಗಳಿಂದ ಹೇಳುತ್ತಿದ್ದಾರೆ. ಹೀಗೆ ಪ್ರಾಣನಿಗಿಂತ ಭೂಮನು ಭಿನ್ನನಾಗಿದ್ದಾನೆಂದು ಸಮರ್ಥಿಸಿ "ಅನುಕ್ತಿ" ಎಂಬ ಬಾಧಕವನ್ನು ಹೇಳಿ ಭೂಮನಿಗೆ ಪ್ರಾಣತ್ವವನ್ನು ಸಮರ್ಥಿಸಿದರು. ಈಗ ಪ್ರಾಣ ಹಾಗೂ ಭೂಮ ಇಬ್ಬರು ಒಂದೇ ಪ್ರಕರಣದಿಂದ ಪ್ರತಿಪಾದ್ಯರಾಗಲಿ ಆದರೂ ಕೂಡ ಭೂಮನು ವಿಷ್ಣುವೇ ಆಗುತ್ತಾನೆ ಎಂದು ಆಶಂಕಾ ಪೂರ್ವಕವಾಗಿ "ಉತ್ಕ್ರಾಂತಿ" ಇತ್ಯಾದಿ ಭಾಷ್ಯವನ್ನು ವ್ಯಾಖ್ಯಾನಿಸುತ್ತಿದ್ದಾರೆ "ನನು" ಇತ್ಯಾದಿ ವಾಕ್ಯದಿಂದ.

**भावदीपः – इत्युक्तरीत्येति ।।** यद्यपि तत्र निरवकाशलिङ्गबलेन प्राणश्रुतेर्वैष्णवत्वं निर्णीतम्, इह च तन्नास्ति । तथापि जीवनहेतुत्वादिप्राणपदप्रवृत्तिनिमित्तस्य हरौ पुष्कलत्वेन अन्यगतस्य तदधीनत्वाल्पत्वाभ्यां विष्णौ महायोगविद्वद्रूढ्युक्त्या विष्णौ मुख्यत्वस्योक्तत्वात् तत्त्याजकस्येहाभावादत्रापि प्राणपदस्य वैष्णवत्वमिति शङ्काशयः।

ಪ್ರಶ್ನೆ - ನಿರವಕಾಶವಾದ ಲಿಂಗದ ಬಲದಿಂದ ಪ್ರಾಣಶ್ರುತಿಯು ವಿಷ್ಣುಪರವಾಗುತ್ತದೆ ಎಂದು ಸಾಧಿಸಿದಿರಿ. ಆದರೆ ಅಂತಹ ನಿರವಕಾಶವಾದ ಲಿಂಗವೇ ಇಲ್ಲವಲ್ಲ?

ಉತ್ತರ - ಜೀವನ ಹೇತುತ್ವವೇ ಮೊದಲಾದ ಪ್ರಾಣಪದ ಪ್ರವೃತ್ತಿನಿಮಿತ್ತವು ಶ್ರೀಹರಿಯಲ್ಲಿ ಪುಷ್ಕಳವಾಗಿವೆ. ಬೇರೆಡೆ ಇರುವ ಪ್ರವೃತ್ತಿ ನಿಮಿತ್ತಗಳು ಅಲ್ಪವಾಗಿರುತ್ತವೆ ಮತ್ತು ವಿಷ್ಣುವಿನ ಅಧೀನವಾಗಿರುತ್ತವೆ. ಆದರೆ ವಿಷ್ಣುವಿನಲ್ಲಿ ಸ್ವತಂತ್ರವಾಗಿಯೂ ನಿರವಧಿಕವಾಗಿಯೂ ಇರುವ ಕಾರಣ ಮಹಾಯೋಗ ಹಾಗು ವಿದ್ವದ್ರೂಢಿಗಳಿಂದ ಪ್ರಾಣಪದವು ವಿಷ್ಣುವನ್ನೇ ಮುಖ್ಯವಾಗಿ ಪ್ರತಿಪಾದಿಸುತ್ತದೆ. ಈ ಪರಮ ಮುಖ್ಯಾರ್ಥವನ್ನು ಬಿಡಲು ಯಾವುದೇ ಬಾಧಕ ಪ್ರಮಾಣಗಳು ಇರುವುದಿಲ್ಲ. ಆದ ಕಾರಣ ಪ್ರಾಣಪದವು ವಿಷ್ಣುಪರವಾಗಿದೆ ಎಂದು ತಿಳಿಯಬೇಕು.

**भावदीपः – भाष्ये चोऽवधारणे । भिन्नक्रम इति मत्वा तदर्थं व्यनक्ति – नायमिति ।। उत्क्रान्तेति ।। उत्क्रान्तः प्राणो येषां तान् उत्क्रान्तप्राणान् मातापित्रादीन् । साकल्येनैकदेशेन शूलेन दहेत् । नैनं ब्रूयुः पितृहासीति न मातृहासीत्यादौ वाक्ये इत्यर्थः ।**

ಭಾಷ್ಯದಲ್ಲಿರುವ "ಚ" ಶಬ್ದವು ಅವಧಾರಣಾರ್ಥದಲ್ಲಿದೆ ಎಂದು ತಿಳಿದು ಅದರ ಅರ್ಥವನ್ನು "ನಾಯಂ" ಇತ್ಯಾದಿ ಟೀಕೆಯಿಂದ ವ್ಯಾಖ್ಯಾನಿಸುತ್ತಿದ್ದಾರೆ. "ಉತ್ಕ್ರಾಂತಃ ಪ್ರಾಣಾನ್" ಎಂಬ ಪದಕ್ಕೆ "ಉತ್ಕ್ರಾಂತಃ ಪ್ರಾಣಃ ಯೇಷಾಂ ತಾನ್ ಉತ್ಕ್ರಾಂತಪ್ರಾಣಾನ್" ಎಂದು ವಿಗ್ರಹ. ಅಂದರೆ ಯಾವ ಮಾತಾಪಿತೃಗಳ ಶರೀರದಿಂದ ಪ್ರಾಣನು ಹೊರಟು ಹೋಗಿರುತ್ತಾನೆಯೋ ಅಂತಹ ಶರೀರವನ್ನು ಸಂಪೂರ್ಣವಾಗಿ ಅಥವಾ ಏಕದೇಶದಿಂದ ಸುಟ್ಟರೂ ಸಹ ಅಥವಾ ಶೂಲದಿಂದ ಘಾಸಿಗೊಳಿಸಿದರೂ ಸಹ ಪಾಪ ಬರುವುದಿಲ್ಲ. ಅಂದರೆ 'ತಂದೆಯನ್ನು ಕೊಂದವನು' ಅಥವಾ 'ತಾಯಿಯನ್ನು ಕೊಂದವನು' ಎಂದು ಯಾರೂ ಹೇಳುವುದಿಲ್ಲ. ಒಂದು ವೇಳೆ ಅದೇ ಶರೀರದಲ್ಲಿ ಪ್ರಾಣನು ಇದ್ದರೆ ತಂದೆಯನ್ನು ಕೊಂದವನು ಅಥವಾ ತಾಯಿಯನ್ನು ಕೊಂದವನು ಎಂದು ಹೇಳುತ್ತಾರೆ.

**भावदीपः – सर्वगत इति ।। अदृश्यत्वादिनये 'सर्वगतं सुसूक्ष्मम्' इति सर्वगतत्वगुणस्य समन्वितत्वादिति भावः । आकाङ्क्षाक्रमेण भाष्यं व्याचष्टे – विष्णुरेवेति ।। तत्त्वित्यनुवृत्तस्यार्थोऽयम् ।**

ಅದೃಶ್ಯತ್ವಾಧಿಕರಣದಲ್ಲಿ "ಸರ್ವಗತಂ ಸುಸೂಕ್ಷ್ಮಂ" ಎಂಬಲ್ಲಿರುವ ಸರ್ವಗತತ್ವ ಗುಣವನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡಿದ್ದಾರೆಂದು ತಿಳಿಯಬೇಕು. ಆಕಾಂಕ್ಷೆಗೆ ಸರಿಯಾಗಿ ಭಾಷ್ಯವನ್ನು ವ್ಯಾಖ್ಯಾನಿಸುತ್ತಿದ್ದಾರೆ "ವಿಷ್ಣುರೇವ" ಇತ್ಯಾದಿ ಟೀಕೆಯಿಂದ. "ವಿಷ್ಣುರೇವ" ಎಂಬುದು "ತತ್ತು" ಎಂಬ ಅನುವೃತ್ತವಾದ ಪದದ ಅರ್ಥವಾಗಿದೆ.

**भावदीपः – सम्यक् प्रसीदत्यनेन पुरुष इति तत्त्वप्रदीपदर्शितव्युत्पत्तिं हृदि कृत्वा भाष्ये सम्प्रसादादित्येतत् पूर्णसुखरूपत्वादिति व्याख्यातम् । तत् श्रुतौ केन लब्धमित्यत आह – तत्सुखमितीति ।।**

"ಸಮ್ಯಕ್ ಪ್ರಸೀದತ್ಯನೇನ ಪುರುಷಃ" ಎಂಬುದಾಗಿ ತತ್ವಪ್ರದೀಪದಲ್ಲಿ ತೋರಿಸಲ್ಪಟ್ಟ ವ್ಯುತ್ಪತ್ತಿಯನ್ನು ಮನಸ್ಸಿನಲ್ಲಿ ಇಟ್ಟುಕೊಂಡು ಭಾಷ್ಯದಲ್ಲಿ "ಸಂಪ್ರಸಾದಾತ್" ಎಂಬ ಸೂತ್ರದಲ್ಲಿರುವ ಪದಕ್ಕೆ ಪೂರ್ಣಸುಖಸ್ವರೂಪನಾದ್ದರಿಂದ ಎಂಬ ಅರ್ಥವನ್ನು ಹೇಳಿರುತ್ತಾರೆ. ಈ ಅರ್ಥವು ಶ್ರುತಿಯಲ್ಲಿ ಯಾವ ಪದದಿಂದ ತಿಳಿಯಲ್ಪಟ್ಟಿದೆ? ಎಂದರೆ "ತತ್ಸುಖಂ" ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾರೆ.

**भावदीपः** – तस्य भूमनिष्ठत्वद्योतनाय 'यो वै भूमा' इत्यंशोक्तिः । अर्थोक्तिपूर्वं भाष्यपदमनुवदति – **नामादीनां सर्वेषामिति** ।। उपरीत्यनूद्यार्थमाह – **तदुत्तमत्वेनेति** ।।

ಇಂತಹ ಪೂರ್ಣಸುಖವು ಭೂಮನಲ್ಲಿಯೇ ಇರುತ್ತದೆ ಎಂದು ತಿಳಿಸಲು "ಯೋ ವೈ ಭೂಮಾ" ಎಂಬ ಶ್ರುತಿಯ ಭಾವವನ್ನು ಉಲ್ಲೇಖಿಸಿದ್ದಾರೆ. "ಉಪರಿ" ಎಂಬುದನ್ನು ಅನುವಾದ ಮಾಡಿ ಅರ್ಥವನ್ನು ಹೇಳಿದ್ದಾರೆ "ತದುತ್ತಮತ್ವೇನ" ಇತ್ಯಾದಿ ವಾಕ್ಯದಿಂದ.

**भावदीपः** – प्राणभूम्नोर्द्वयोरपि विष्णुत्वमिति भाष्यपक्षे प्राणान्तर्यामित्वेनैव प्राणपदेन विष्णोर्गृहीतेर्नामादिप्राणान्तात् सर्वस्मादुत्तमत्वम् ।

ಪ್ರಾಣ ಹಾಗೂ ಭೂಮಾ ಎರಡೂ ಸಹ ವಿಷ್ಣುವೆ ಆಗಿದ್ದಾನೆಂದು ಭಾಷ್ಯದ ಅಭಿಪ್ರಾಯ. ಈ ಪಕ್ಷದಲ್ಲಿ ಪ್ರಾಣಪದವು ಪ್ರಾಣನ ಅಂತರ್ಯಾಮಿಯಾದ ವಿಷ್ಣುವನ್ನೇ ಪ್ರತಿಪಾದಿಸುತ್ತದೆ. ಆವಾಗ ನಾಮಾಭಿಮಾನಿ ದೇವತೆಯಿಂದ ಪ್ರಾರಂಭಿಸಿ ಪ್ರಾಣನ ತನಕ ಯಾವ ಅಭಿಮಾನಿ ದೇವತೆಗಳಿದ್ದಾರು ಅವರೆಲ್ಲರಿಗಿಂತಲೂ ಭೂಮ ಎನಿಸಿದ ವಿಷ್ಣುವೇ ಉತ್ತಮನೆಂದು ತಿಳಿಯುತ್ತದೆ.

**भावदीपः** – यदा तु प्राणस्य वायुत्वं भूम्न एव तु विष्णुत्वमिति न्यायविवरणादिपक्षस्तदापि प्रश्नाद्यध्याहारेण सर्वस्मादुत्तमत्वं प्राप्तमिति नासिद्धो हेतुरिति भावः ।

ಒಂದು ವೇಳೆ ಪ್ರಾಣಶಬ್ದದಿಂದ ಮುಖ್ಯಪ್ರಾಣದೇವರೇ ಪ್ರತಿಪಾದ್ಯರು ಭೂಮಾ ಶಬ್ದದಿಂದ ಮಾತ್ರ ವಿಷ್ಣುವು ಪ್ರತಿಪಾದ್ಯನೆಂದು ನ್ಯಾಯವಿವರಣಾದಿಗಳ ಪಕ್ಷವನ್ನು ಸ್ವೀಕರಿಸಿದರೆ ಪ್ರಶ್ನೆಯನ್ನು ಅಧ್ಯಾಹಾರ ಮಾಡುವ ಮೂಲಕ ಭೂಮನೆನಿಸಿದ ವಿಷ್ಣುವಿಗೆ ಸರ್ವೋತ್ತಮತ್ವವೂ, ಉತ್ತಮತ್ವವೂ ಸಿದ್ಧವಾಗುತ್ತದೆ. ಹಾಗಾಗಿ "ಅಧ್ಯುಪದೇಶಾತ್" ಎಂಬ ಹೇತು ಅಸಿದ್ಧವಾಗಿಲ್ಲ ಎಂದು ತಿಳಿಯಬೇಕು.

**भावदीपः** – उत्तरसूत्रस्थचकारोऽत्राप्याकर्षणीय इति भावेनाह – **व्यपदेशाच्चेति** ।। तथाच सम्प्रसादात् प्राणादधि उपरि उपदेशादिति पररीत्या एक एवायं सौत्रो हेतुरिति न भ्रमितव्यमिति भावः

"ಧರ್ಮೋಪಪತ್ತೇಶ್ಚ" ಎಂಬ ಸೂತ್ರದಲ್ಲಿರುವ "ಚ" ಎಂಬ ಶಬ್ದವನ್ನು ಈ ಸೂತ್ರದಲ್ಲಿಯೂ ಅನ್ವಯ ಮಾಡಿಕೊಳ್ಳಬೇಕು. ಈ ಅಭಿಪ್ರಾಯದಿಂದ ಟೀಕೆಯಲ್ಲಿ "ವ್ಯಪದೇಶಾಚ್ಚ" ಎಂದು ಹೇಳಿರುತ್ತಾರೆ. ಆದ್ದರಿಂದ ಸಂಪ್ರಸಾದಾತ್ = ಪ್ರಾಣನಿಗಿಂತ, ಅಧಿ = ಉತ್ತಮನೆಂದು, ಉಪದೇಶಾತ್ = ಹೇಳಿರುವುದರಿಂದ ಎಂದು ಅದ್ವೈತಿಗಳ ವ್ಯಾಖ್ಯಾನವನ್ನು ನಾವು ಅನುಸರಿಸಬಾರದೆಂದು ತಿಳಿಯುತ್ತದೆ. ಅಂದರೆ ಸೂತ್ರದಲ್ಲಿ

''ಸಂಪ್ರಸಾದಾತ್'' ಎಂಬುದೇ ಬೇರೆ ಹೇತು, ಮುಂದಿನ ಸೂತ್ರದಲ್ಲಿರುವ ''ಚ'' ಶಬ್ದವನ್ನು ಅಪಕರ್ಶ ಮಾಡಿಕೊಂಡಾಗ ''ಅಧ್ಯುಪದೇಶಾತ್'' ಎಂಬುದೂ ಸಹ ಮತ್ತೊಂದು ಹೇತುವಾಗುತ್ತದೆ ಎಂಬುದು ನಮ್ಮ ಸಿದ್ಧಾಂತ. ಆದರೆ ಅದ್ವೈತಿಗಳು ''ಸಂಪ್ರಸಾದಾತ್ ಅಧ್ಯುಪದೇಶಾತ್'' ಎಂಬುದನ್ನು ಒಂದೇ ಹೇತು ಎನ್ನುತ್ತಾರೆ. ಈ ಭ್ರಾಂತಿಗೆ ನಾವು ಒಳಗಾಗಬಾರದೆಂದು ಟೀಕಾರಾಯರು ''ವ್ಯಪದೇಶಾಚ್ಚ'' ಎಂಬಲ್ಲಿ ''ಚ'' ಶಬ್ದವನ್ನು ಪ್ರಯೋಗಿಸಿದ್ದಾರೆ.

**भावदीपः – पूर्णसुखार्थत्वादिति ।। 'मुख्यामुख्ययोर्मुख्ये सम्प्रत्ययः' इति न्यायात् । 'मुख्यस्य निर्विशेषेण शब्दः' इति स्मृतेर्नाल्पे सुखमस्तीति वाक्यशेषबलाच्च सङ्कोचकापवादकस्याभावे पूर्णसुखलाभादिति भावः ।**

''ತತ್ ಸುಖಂ'' ಎಂಬ ಶ್ರುತಿಯಲ್ಲಿರುವ ಸುಖ ಶಬ್ದವು ಪೂರ್ಣಸುಖವನ್ನೇ ಹೇಳುತ್ತದೆ. ಏಕೆಂದರೆ ''ಮುಖ್ಯಾಮುಖ್ಯಯೋರ್ಮುಖ್ಯೇ ಸಂಪ್ರತ್ಯಯಃ'' ಎಂಬ ನ್ಯಾಯದಂತೆ ಪರಿಪೂರ್ಣಸುಖ ಮತ್ತು ಅಪರಿಪೂರ್ಣಸುಖ ಎಂಬೆರಡು ಅರ್ಥಗಳಲ್ಲಿ ಪರಿಪೂರ್ಣಸುಖವನ್ನೇ ಸ್ವೀಕರಿಸಬೇಕೆಂದು ಈ ನ್ಯಾಯದಿಂದ ತಿಳಿಯುತ್ತದೆ. ಮತ್ತು ''ಮುಖ್ಯಸ್ಯ ನಿರ್ವಿಶೇಷೇಣ ಶಬ್ದಃ'' ಎಂಬ ಸ್ಮೃತಿಯ ಆಧಾರದಿಂದ ಮುಖ್ಯವಾದ ಅರ್ಥವನ್ನು ಪ್ರತಿಪಾದಿಸುವ ಶಬ್ದವು ವಿಶೇಷಣವಿಲ್ಲದೆ ಪ್ರಯುಕ್ತವಾಗಿರುತ್ತದೆ. ಆದ್ದರಿಂದ ವಿಶೇಷಣವಿಲ್ಲದ ಸುಖ ಶಬ್ದವು ಮುಖ್ಯವಾದ ಅರ್ಥವನ್ನೇ ಹೇಳುತ್ತದೆ. ಅಷ್ಟೇ ಅಲ್ಲದೆ ''ನಾಲ್ಪೇ ಸುಖಮಸ್ತಿ'' ಎಂಬ ವಾಕ್ಯಶೇಷದ ಬಲದಿಂದಲೂ ಸಂಕೋಚ ಮಾಡಲು ಬೇಕಾಗಿರುವ ಯಾವುದೇ ಬಾಧಕಪ್ರಮಾಣವಿಲ್ಲದ ಕಾರಣ ಪೂರ್ಣಸುಖವೆಂಬ ಅರ್ಥವನ್ನೇ ಹೇಳಬೇಕೆಂದು ತಿಳಿಯಬೇಕು.

**भावदीपः – पूर्वपक्षिणाऽप्याक्षिप्तोऽप्ययं हेतुस्तत्प्रापकखण्डनेन स्थिरीभविष्यतीति भावः । यद्वा नामादिप्राणान्तेभ्यः सर्वेभ्योऽप्युत्तमत्वेनोपदेशादिति निरवकाशहेतुसाहित्यान्नैतदन्यशङ्कार्हमिति भावेन सम्प्रसादादित्युक्तिः । अत एव भाष्ये चशब्दः।**

ಪೂರ್ವಪಕ್ಷಿಯು ಶ್ರುತಿಯಲ್ಲಿರುವ ಸುಖಶಬ್ದಕ್ಕೆ ಹೀಗೆ ಪೂರ್ಣವಾದ ಸುಖವೆಂಬ ಅರ್ಥವನ್ನು ಹೇಗೆ ಹೇಳುತ್ತಿರೆಂದು ಆಕ್ಷೇಪಿಸಿದ್ದರೂ ಸಹ ಪೂರ್ವಪಕ್ಷ ಪ್ರಾಪಕವಾದ ಹೇತುಗಳನ್ನು ಖಂಡನೆ ಮಾಡುವುದರಿಂದಲೇ ಇದನ್ನು ಖಂಡಿಸಿದಂತಾಗುತ್ತದೆ ಎಂದು ತಿಳಿಯಬೇಕು. ಅಥವಾ ನಾಮಾಭಿಮಾನಿದೇವತೆಯಿಂದ ಪ್ರಾರಂಭಿಸಿ ಮುಖ್ಯಪ್ರಾಣದೇವರ ತನಕ ಎಷ್ಟು ಅಭಿಮಾನಿ ದೇವತೆಗಳಿದ್ದಾರೋ ಅವರೆಲ್ಲರಗಿಂತಲೂ ಭೂಮನನ್ನು ಉತ್ತಮನೆಂದು ಶ್ರುತಿಯು ಹೇಳುತ್ತಿದೆ. ಆದ್ದರಿಂದ ಹೀಗೆ ಅಧ್ಯುಪದೇಶವೆಂಬ ನಿರವಕಾಶಲಿಂಗದ ಸಾಹಿತ್ಯದಿಂದ ಮುಖ್ಯಪ್ರಾಣನನ್ನು ಭೂಮನೆಂದು ಆಂಶಕಿಸಬಾರದೆಂಬ ಅಭಿಪ್ರಾಯದಿಂದ ''ಸಂಪ್ರಸಾದಾತ್'' ಎಂದು ಹೇಳಿರುತ್ತಾರೆ. ಆದ್ದರಿಂದಲೇ ಭಾಷ್ಯದಲ್ಲಿ ''ಚ'' ಎಂಬ ಶಬ್ದವನ್ನು ಹೇಳಿರುತ್ತಾರೆ.

**भावदीपः – सर्वतः परममकारवाच्यमिति ।।** परमश्चासावश्चेति विग्रह इति भावः । अनेन सर्वोत्तमत्वमुक्तम् । परममिति द्राविडपाठेऽपि आन्ध्रपाठानुरोधात् परमामित्युक्तिः ।

"ವಿಶ್ವತಃ ಪರಮಾಂ" ಎಂಬ ಶ್ರುತಿಯಲ್ಲಿ "ವಿಶ್ವತಃ" ಎಂಬ ಶಬ್ದಕ್ಕೆ "ಸರ್ವತಃ" ಎಂದರ್ಥ. "ಪರಮಾಂ" ಎಂಬುದಕ್ಕೆ ಶ್ರೇಷ್ಠನಾಗಿದ್ದಾನೆ ಮತ್ತು ಅಕಾರ ವಾಚ್ಯನಾಗಿದ್ದಾನೆ ಎಂದರ್ಥ. "ಪರಮಶ್ಚಾಸೌ ಅಶ್ಚ" ಎಂಬ ವಿಗ್ರಹವನ್ನು ಇಲ್ಲಿ ತಿಳಿಯಬೇಕು. ಇದರಿಂದ ಸರ್ವೋತ್ತಮನಾಗಿದ್ದಾನೆಂದು ಹೇಳಿದಂತಾಗುತ್ತದೆ. "ಪರಮಂ" ಎಂಬುದು ತಮಿಳು ದೇಶದ ಪಾಠ. "ಪರಮಾಂ" ಎಂಬುದು ಆಂಧ್ರದೇಶದ ಪಾಠ. "ಪರಮಂ" ಎಂಬ ತಮಿಳುದೇಶದ ಪಾಠವನ್ನೂ ಸಹ ಆಂಧ್ರದೇಶದ ಪಾಠಾನುಸಾರಿಯಾಗಿ "ಪರಮಾಂ" ಎಂದು ಹೇಳಿರುತ್ತಾರೆ.

**भावदीपः –** शिष्टश्रौतवदर्थस्तु विश्वतो दर्शनादिकमस्येति विश्वाक्षम् । विश्वं प्रविष्टत्वेन वर्तमानम् । नारायणं मुक्तसन्धाश्रयम् । देवं प्रकाशरूपम् । विश्वं गुणैः पूर्णमिति तत्त्वप्रदीपे व्यक्तः । द्वितीयान्तस्य 'तद् विश्वमुपजीवति' इति कर्तृक्रियाभ्यामग्रे श्रुताभ्यामन्वयः ।

ಶ್ರುತಿಯಲ್ಲಿರುವ ಉಳಿದ ಪದಗಳ ಅರ್ಥವನ್ನು ಹೀಗೆ ತಿಳಿಯಬೇಕು. ವಿಶ್ವಾಕ್ಷಂ = ಎಲ್ಲಾ ವಿಧವಾದ ಜ್ಞಾನವನ್ನು ಹೊಂದಿರುತ್ತಾನೆ. ಅಥವಾ ವಿಶ್ವವನ್ನು ಪ್ರವೇಶಿಸಿ ಇರುತ್ತಾನೆ. ನಾರಾಯಣಂ = ಮುಕ್ತರ ಸಂಘಕ್ಕೆ ಆಶ್ರಯನು. ದೇವಂ = ಪ್ರಕಾಶಸ್ವರೂಪನು. ವಿಶ್ವಂ ಎಂಬ ಪದಕ್ಕೆ ಗುಣಗಳಿಂದ ಪೂರ್ಣನೆಂಬ ಅರ್ಥವನ್ನು ತತ್ವಪ್ರದೀಪದಲ್ಲಿ ಹೇಳಿರುತ್ತಾರೆ. ದ್ವಿತೀಯಾಂತವಾದ ಈ ಎಲ್ಲಾ ಪದಗಳಿಗೆ "ತದ್ವಿಶ್ವಮುಪಜೀವತಿ" ಎಂಬುದಾಗಿ ಕರ್ತೃ ಹಾಗೂ ಕ್ರಿಯೆಗಳನ್ನು ಹೇಳುವ ಪದಗಳಲ್ಲಿ ಅನ್ವಯ ಮಾಡಬೇಕು.

**भावदीपः –** ननु श्रुत्यन्तराद् विष्णोरिव निरवकाशलिङ्गोपेतप्राणोपक्रमात् प्राणस्याप्यस्तु सर्वोत्तमत्वं पूर्णानन्दत्वं चेत्याशङ्क्याऽह – **नचेति ।**

ಬೇರೆ ಶ್ರುತಿಯಿಂದ ವಿಷ್ಣುವಿಗೆ 'ಭೂಮಾ' ಎಂಬ ಶಬ್ದವಾಚ್ಯತ್ವವನ್ನು ಹೇಗೆ ಪ್ರತಿಪಾದಿಸುತ್ತೀರೋ ಅದರಂತೆ ನಿರವಕಾಶವಾದ ಲಿಂಗದಿಂದ ಸಹಿತವಾದ ಮುಖ್ಯಪ್ರಾಣ ದೇವರ ಉಪಕ್ರಮದಿಂದ ಮುಖ್ಯಪ್ರಾಣದೇವರೂ ಸಹ ಸರ್ವೋತ್ತಮರಾಗಲಿ? ಮತ್ತು ಪರಿಪೂರ್ಣವಾದ ಆನಂದವುಳ್ಳವರಾಗಲಿ? ಎಂಬ ಆಕ್ಷೇಪಕ್ಕೆ "ನಚ" ಇತ್ಯಾದಿ ಟೀಕೆಯಿಂದ ಉತ್ತರಿಸುತ್ತಿದ್ದಾರೆ.

**भावदीपः – विरोधादिति ।।** अन्योन्यापेक्षयाऽन्योन्यस्य परावरत्वप्राप्तेरिति भावः ।। इत्युक्तत्वादिति ।। अन्तरनये सुखविशिष्टेति सूत्रभाष्य इत्यर्थः । अनुक्तिसहितस्यैवोक्रमस्य भूम्नः प्राणसाधकत्वादाह – **अनन्तरमिति ।।**

''ವಿರೋಧಾತ್'' ಎಂದರೆ ಪರಸ್ಪರ ಒಬ್ಬರನ್ನೊಬ್ಬರು ಅಪೇಕ್ಷಿಸಬೇಕಾದ್ದರಿಂದ ಇಬ್ಬರಿಗೂ ಸಹ ಪರತ್ವ ಹಾಗೂ ಅವರತ್ವವನ್ನು ಒಪ್ಪಬೇಕಾಗುತ್ತದೆ ಎಂದರ್ಥ. ಆದ್ದರಿಂದ ಇಬ್ಬರನ್ನೂ ಸರ್ವೋತ್ತಮರೆಂದು ಹೇಳಲು ಸಾಧ್ಯವಿಲ್ಲ. ''ಇತ್ಯುಕ್ತತ್ವಾತ್'' ಎಂದರೆ ಅಂತರಾಧಿಕರಣದ ''ಸುಖವಿಶಿಷ್ಟಾಭಿಧಾನಾತ್'' ಎಂಬ ಸೂತ್ರದ ಭಾಷ್ಯದಲ್ಲಿ ಹೇಳಿದ್ದಾರೆಂದು ತಿಳಿಯಬೇಕು. ಅನುಕ್ತ ಲಿಂಗದಿಂದ ಸಹಿತವಾದ ಉಪಕ್ರಮದಲ್ಲಿರುವ ಭೂಮಾವೆಂಬ ಶಬ್ದವು ಮುಖ್ಯಪ್ರಾಣನಿಗೆ ಸಾಧಕವಾಗಿದೆ ಅಲ್ಲವೆ? ಎಂಬ ಪ್ರಶ್ನೆಗೆ ''ಅನಂತರಂ'' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ.

**भावदीपः – रूपान्तरेति ।। सर्वरूपाणां सर्वगतत्वेऽप्युत्तरनये वक्ष्यमाणरीत्याऽणुत्वस्यापि सर्वरूपेषु सत्वेऽपि यस्मिन् देहस्थादिरूपे महत्त्वं शक्त्यात्मनाऽस्ति तादृशरूपे क्रियावत्त्वस्यापि सम्भवात् श्रुतिसिद्धत्वाच्चेत्यर्थः । स्पष्टमुपपादितमेचन्द्रिकायाम् ।**

ಭಗವಂತನ ಸಕಲ ರೂಪಗಳು ಎಲ್ಲಡೆ ಇರುವುದಾದರೆ ಮುಂದಿನ ಅಧಿಕರಣದಲ್ಲಿ ಹೇಳುವ ರೀತಿಯಾಗಿ ಅಣುತ್ವವೂ ಸಹ ಅದೇ ರೂಪದಲ್ಲಿ ಇರುತ್ತದೆ. ಯಾವ ದೇಹದಲ್ಲಿ ಮಹತ್ವವು ಶಕ್ತಿರೂಪದಿಂದ ಇದೆಯೋ ಅಂತಹ ರೂಪದಲ್ಲಿ ಕ್ರಿಯೆಯನ್ನು ಹೇಳಬಹುದು. ಅಂದರೆ ಭಗವಂತನಿಗೆ ಅಣು ರೂಪವಿದ್ದರೆ ಕ್ರಿಯೆಯನ್ನು ಹೇಳಬಹುದೇ ಹೊರತು ಮಹತ್ವವಿದ್ದರೆ ಕ್ರಿಯೆಯನ್ನು ಹೇಳಲಾಗದು. ಭಗವಂತನಲ್ಲಿ ಅಣುತ್ವ ಮಹತ್ವವೆಂಬ ಎರಡು ವಿಧವಾದ ಧರ್ಮಗಳೂ ಸಹ ಇವೆ. ಯಾವಾಗ ಮಹತ್ವವೆಂಬ ಧರ್ಮವು ವ್ಯಕ್ತವಾಗಿರುತ್ತದೆಯೋ ಆವಾಗ ಅಣುತ್ವವು ಶಕ್ತಿ ರೂಪದಿಂದ ಇರುತ್ತದೆ. ಅಣುತ್ವವು ವ್ಯಕ್ತವಾದಾಗ ಮಹತ್ವವು ಶಕ್ತಿ ರೂಪದಿಂದ ಇರುತ್ತದೆ. ಪ್ರಕೃತ ನಮ್ಮ ದೇಹದಲ್ಲಿರುವ ಭಗವದ್ರೂಪದಲ್ಲಿ ಮಹತ್ವವು ಶಕ್ತಿರೂಪದಿಂದಲೂ ಅಣುತ್ವವು ವ್ಯಕ್ತಿರೂಪದಿಂದಲೂ ಇರುವ ಕಾರಣ ಕ್ರಿಯೆಯನ್ನು ಹೇಳಬಹುದೆಂದು ತಿಳಿಯಬೇಕು. ಈ ವಿಷಯದಲ್ಲಿ ಶ್ರುತಿಯೂ ಸಹ ಪ್ರಮಾಣವಾಗಿದೆ ಎಂಬುದನ್ನು ಗಮನಿಸಬೇಕು. ಹೆಚ್ಚಿನ ವಿಚಾರವನ್ನು ತಾತ್ಪರ್ಯಚಂದ್ರಿಕೆಯನ್ನು ಓದಿ ತಿಳಿಯಬೇಕು

**भावदीपः – नन्वेवमत्र भाष्ये प्राणभूम्नोरेकत्वमुपेत्य उत्क्रमणं कथञ्चित् समाधाय द्वयोर्विष्णुतोक्तौ 'एष तु वा अतिवदति' इति तु शब्दयोगः आशाशब्दोक्तसरस्वतीतो मुख्यवायोरुत्तमत्वमनुक्त्वा विष्णोरेव तदुक्त्ययोगश्च ।**

ಆಕ್ಷೇಪ - ಪ್ರಕೃತ ಭಾಷ್ಯದಲ್ಲಿ ಪ್ರಾಣ ಹಾಗೂ ಭೂಮಾ ಇಬ್ಬರಿಗೂ ಐಕ್ಯವನ್ನು ಅಂಗೀಕರಿಸಿ ''ಉತ್ಕ್ರಮಣ'' ಎಂಬ ಲಿಂಗವನ್ನು ಹೇಗಾದರೂ ಉಪಪಾದಿಸಿ ಇಬ್ಬರಿಗೂ ವಿಷ್ಣುತ್ವವನ್ನು ಸಮರ್ಥಿಸುವುದಾದರೆ,''ಏಷ ತು ವಾ ಅತಿವದತಿ'' ಎಂಬಲ್ಲಿರುವ ''ತು'' ಎಂಬ ಶಬ್ದವು ಅಯುಕ್ತವಾಗುತ್ತದೆ. ಅಷ್ಟೇ ಅಲ್ಲದೆ ''ಆಶಾ'' ಎಂಬ ಶಬ್ದದಿಂದ ಪ್ರತಿಪಾದ್ಯಳಾದ ಸರಸ್ವತೀ ದೇವಿಯಗಿಂತಲೂ ಮುಖ್ಯಪ್ರಾಣ ದೇವರಿಗೆ ಉತ್ತಮತ್ವವನ್ನು ಹೇಳದೆ ನೇರವಾಗಿ ವಿಷ್ಣುವಿಗೆ ಉತ್ತಮತ್ವವನ್ನು ಹೇಳುವುದು ತಪ್ಪಾಗುತ್ತದೆ.

ಪರಿಪೂರ್ಣಚಂದ್ರಿಕಾ

**भावदीपः** – 'इयदामननाद्' इत्यादिनयैः 'आशा सरस्वती प्रोक्ता तत्प्रकृष्टसुखत्वतः । प्राण इत्युच्यते वायुः सर्वे त्वेते दशोत्तराः ।।' इत्यादिछान्दोग्यभाष्ये च विरोध इत्यतः 'एष तु वा अतिवदति' 'यः सत्येनातिवदति' इति प्राणाद्विष्णोर्भूयस्त्वोक्तिश्चेति न्यायविवरणानुरोधेन प्राणभूम्नोर्भेदमुपेत्याह – अस्तु वेति ।।

"ಇಯದಾಮನನಾದ್" ಇತ್ಯಾದಿ ಅಧಿಕರಣಗಳಲ್ಲಿ "ಆಶಾ ಸರಸ್ವತೀ ಪ್ರೋಕ್ತಾ ತತ್ಪ್ರಕೃಷ್ಟಸುಖತ್ವತಃ । ಪ್ರಾಣ ಇತ್ಯುಚ್ಯತೇ ವಾಯುಃ ಸರ್ವೇತ್ವೇತೇ ದಶೋತ್ತರಾಃ ॥" ಇತ್ಯಾದಿ ಛಾಂದೋಗ್ಯ ಭಾಷ್ಯದಲ್ಲಿಯೂ "ಆಶಾ" ಎನಿಸಿದ ಸರಸ್ವತೀಗಿಂತಲೂ ಹೆಚ್ಚಿನ ಸುಖವನ್ನು ಹೊಂದಿರುವ ಕಾರಣ ವಾಯುದೇವರು ಉತ್ತಮರಾಗಿದ್ದಾರೆಂದು ಹೇಳಲಾಗಿದೆ. ಅದಕ್ಕೆ ಅನುಗುಣವಾಗಿ ವಾಯುದೇವರಿಗೆ ಉತ್ತಮತ್ವವನ್ನು ಸಮರ್ಥನೆ ಮಾಡದೆ ನೇರವಾಗಿ ವಿಷ್ಣುವಿಗೆ ಉತ್ತಮತ್ವವನ್ನು ಸಮರ್ಥನೆ ಮಾಡಿದರೆ ಅವುಗಳ ವಿರೋಧ ಬರುತ್ತದಲ್ಲವೇ?

ಸಮಾಧಾನ - ಈ ಆಕ್ಷೇಪಕ್ಕೆ ಉತ್ತರಿಸುವುದಕ್ಕಾಗಿ ಮತ್ತು "ಏಷ ತು ವಾ ಅತಿವದತಿ ಯಃ ಸತ್ಯೇನಾತಿವದತಿ" ಎಂಬ ಶ್ರುತಿಯಲ್ಲಿ ಮುಖ್ಯಪ್ರಾಣದೇವರಿಗಿಂತ ವಿಷ್ಣುವಿಗೇ ಉತ್ತಮತ್ವವು ಹೇಳಲ್ಪಟ್ಟಿದೆ ಎಂಬುದನ್ನು ಸಮರ್ಥನೆ ಮಾಡುವುದಕ್ಕಾಗಿಯೂ ಭಾಷ್ಯದ ಅಭಿಪ್ರಾಯವನ್ನು ಬಿಟ್ಟು ನ್ಯಾಯವಿವರಣಕ್ಕೆ ಅನುಸಾರಿಯಾದ ಅಭಿಪ್ರಾಯವನ್ನು ವಿವಕ್ಷಿಸಿ ಪ್ರಾಣ ಹಾಗೂ ಭೂಮಾ ಇಬ್ಬರಿಗೂ ಭೇದವೇ ಇದೆ ಎಂಬುದನ್ನು "ಅಸ್ತು ವಾ" ಎಂಬ ವಾಕ್ಯದಿಂದ ಸಮರ್ಥಿಸುತ್ತಿದ್ದಾರೆ.

**भावदीपः** – अन्यथा प्राणपक्ष एव प्राणस्य विष्णोः सकाशाद् भूयस्त्वोक्तिर्न्यायविवरणोक्ता बाधिका । अध्याहारस्यापि कल्पकाभावेनानवकाशाच्चेति भावः ।। इत्यादिनेति ।। ज्ञापकेनेति शेषः ।

ಹೀಗೆ ಒಪ್ಪದಿದ್ದರೆ ಪ್ರಾಣ ಪಕ್ಷದಲ್ಲಿಯೇ ಪ್ರಾಣನಿಗೆ ವಿಷ್ಣುವಿಗಿಂತ ಉತ್ತಮತ್ವನ್ನು ಹೇಳಬೇಕಿತ್ತು. ಆದರೆ ಹಾಗೆ ಹೇಳದ ಕಾರಣ ಮುಖ್ಯಪ್ರಾಣನನ್ನು ಭೂಮನೆಂದು ವಿವಕ್ಷಿಸಲು ಸಾಧ್ಯವಿಲ್ಲ. ಹೀಗೆ ನ್ಯಾಯವಿವರಣದಲ್ಲಿ ಹೇಳಲ್ಪಟ್ಟ ಭೂಯಸ್ತ್ವದ ಅನುಕ್ತಿ ಎಂಬ ಲಿಂಗವು ಪೂರ್ವಪಕ್ಷಕಾರರಿಗೂ ಬಾಧಕವಾಗಿದೆ ಎಂದು ತಿಳಿಯಬೇಕು. ಅಧ್ಯಾಹಾರ ಮಾಡಿಕೊಳ್ಳಲು ಯಾವುದೇ ಕಲ್ಪಕಗಳೂ ಇರುವುದಿಲ್ಲವೆಂದು ಅಭಿಪ್ರಾಯ. "ಇತ್ಯಾದಿನಾ" ಎಂಬಲ್ಲಿ "ಜ್ಞಾಪಕೇನ" ಎಂಬುದನ್ನು ಶೇಷಪೂರಣ ಮಾಡಿಕೊಳ್ಳಬೇಕು.

**भावदीपः** – पूर्वत्र प्राणवादिनोऽतिशयितवस्तुवादित्वमुक्त्वा 'एष तु वा अतिवदति' 'यः सत्येनातिवदति' इति सत्याख्यवस्तुवादिनः प्राणवादिनोऽ-

प्यतिशयितवस्तुवादित्वोक्त्या तु शब्देनाध्याहारो ज्ञाप्यते । सत्यभूम्नोरभेदश्च 'सैव हि' इत्यादावग्रे व्यक्त इति भावः ।

ಮೊದಲು ಯಾರು ಮುಖ್ಯಪ್ರಾಣನ ಬಗ್ಗೆ ತಿಳಿದಿದ್ದಾನೊ ಅವನನ್ನು 'ಅತಿವಾದಿ' ಎನ್ನಬೇಕೆಂದು ಪ್ರಶಂಸಿಸಲಾಗಿದೆ. ಅನಂತರ "ಏಷ ತು ವಾ ಅತಿವದತಿ ಯಸ್ಸತ್ಯೇನಾತಿವದತಿ" ಎಂಬುದಾಗಿ ಯಾರು ಸತ್ಯನನ್ನು ತಿಳಿದಿದ್ದಾನೊ ಅವನು ಮುಖ್ಯಪ್ರಾಣನನ್ನು ತಿಳಿದವನಿಗಿಂತಲೂ ಅತಿಶಯವಾಗಿ ಅತಿವಾದಿಯಾಗಿದ್ದಾನೆಂದು ಇನ್ನು ಹೆಚ್ಚು ಪ್ರಶಂಸಿಸಲಾಗಿದೆ. ಆದ್ದರಿಂದ "ತು" ಶಬ್ದದಿಂದ ಮುಖ್ಯಪ್ರಾಣನಿಗಿಂತಲೂ ಯಾರು ಶ್ರೇಷ್ಠರು ಎಂಬುದನ್ನು ಅಧ್ಯಾಹಾರ ಮಾಡಿಕೊಳ್ಳಬೇಕೆಂದು ತಿಳಿಯುತ್ತದೆ. ಸತ್ಯನಿಗೂ ಹಾಗೂ ಭೂಮನಿಗೂ ಅಭೇದವೇ ಇರುತ್ತದೆ ಎಂಬ ವಿಚಾರವನ್ನು "ಸೈವ ಹಿ ಸತ್ಯಾದಯಃ" ಎಂಬ ಸೂತ್ರದಲ್ಲಿ ಪ್ರತಿಪಾದಿಸಲಾಗಿದೆ.

**भावदीपः – प्रश्नादीति ।।** व्यक्तमेतत् तृतीये 'व्यतिहारो विशिंषन्ति हीतरवद्' इत्यत्र । तेनास्यापौनरुक्त्यमपि चन्द्रिकायां व्यक्तम् । भाष्योक्तेरभिप्रायं वक्तुमाह – **नचैतदिति ।।**

"ವ್ಯತಿಹಾರೋ ವಿಶಿಂಷಂತಿ ಹೀತರವದ್" ಎಂಬ ಮೂರನೇ ಅಧ್ಯಾಯದಲ್ಲಿರುವ ಸೂತ್ರಗಳಲ್ಲಿ ಪ್ರಶ್ನೋತ್ತರಗಳನ್ನು ಹೇಗೆ ಅಧ್ಯಾಹಾರ ಮಾಡಿಕೊಳ್ಳಬೇಕೆಂಬುದನ್ನು ಸ್ಪಷ್ಟವಾಗಿ ಸಮರ್ಥಿಸಲಾಗಿದೆ. ಹಾಗಾದರೆ ವ್ಯತಿಹಾರಾಧಿಕರಣದಲ್ಲಿ ಹೇಳುತ್ತಿರುವ ಪ್ರಮೇಯವನ್ನೇ ಈ ಅಧಿಕರಣದಲ್ಲಿಯೂ ಹೇಳುತ್ತಿರುವುದರಿಂದ ಈ ಅಧಿಕರಣಕ್ಕೆ ಪುನರುಕ್ತಿ ಬರುತ್ತದೆದಲ್ಲವೇ? ಎಂದು ಪ್ರಶ್ನಿಸಬಾರದೆಂದು ಚಂದ್ರಿಕೆಯಲ್ಲಿ ವಿವರವಾಗಿ ಉತ್ತರಿಸಿದ್ದಾರೆ. ಹಾಗಾದರೆ ಯಾವ ವಿವಕ್ಷೆಯಿಂದ ಪ್ರಾಣ ಹಾಗೂ ಭೂಮರಿಗೆ ಅಭೇದವನ್ನು ಅಂಗೀಕರಿಸಿದ್ದಾರೆ? ಎಂಬ ಪ್ರಶ್ನೆಗೆ "ನ ಚೈತದ್" ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ.

**भावदीपः – अन्तर्यामीति ।।** प्राणशब्दस्य वायुपरत्वेऽपि 'आत्मन आकाशः सम्भूतः' इत्याकाशादिशब्दैरिवान्तर्यामिविवक्षया भाष्ये प्राणपदेन विष्णोरुक्तेरित्यर्थः । वक्ष्यते च कारणत्वेनेत्यत्राकाशादिशब्दानामन्यपरत्वेऽपि विष्णुपरत्वम् ।। ८ ।।

"ಅಂತರ್ಯಾಮಿ" ಎಂದು ಟೀಕೆಯಲ್ಲಿ ಹೇಳಿದ್ದಾರೆ. ಇದರ ಅಭಿಪ್ರಾಯ ಹೀಗೆ - ಪ್ರಾಣಶಬ್ದವು ಮುಖ್ಯಪ್ರಾಣದೇವರನ್ನು ಪ್ರತಿಪಾದಿಸುತ್ತದೆ. ಆದರೂ ಸಹ "ಆತ್ಮನಃ ಆಕಾಶಃ ಸಂಭೂತಃ" ಇತ್ಯಾದಿ ವಾಕ್ಯಗಳಲ್ಲಿರುವ ಆಕಾಶಾದಿಶಬ್ದಗಳಿಂದ ಭೂತಾಕಾಶದ ಅಂತರ್ಯಾಮಿಯಾದ ವಿಷ್ಣುವು ಪ್ರತಿಪಾದ್ಯನಾಗಿದ್ದಾನೆಂದು ಹೇಗೆ ಹೇಳುತ್ತೇವೆಯೋ ಅದರಂತೆ ಇಲ್ಲಿಯೂ ಸಹ ಪ್ರಾಣ ಶಬ್ದದಿಂದ ಅಂತರ್ಯಾಮಿಯಾದ ವಿಷ್ಣುವೇ ಪ್ರತಿಪಾದ್ಯನಾಗಿದ್ದಾನೆಂದು ತಿಳಿಯಬೇಕು. ಈ ಅಭಿಪ್ರಾಯದಿಂದ ಭಾಷ್ಯದಲ್ಲಿ ಪ್ರಾಣ ಪದದಿಂದ ವಿಷ್ಣುವು ಪ್ರತಿಪಾದ್ಯನಾಗಿದ್ದಾನೆಂದು ಹೇಳಲಾಗಿದೆ. ಈ ವಿಷಯದಲ್ಲಿ ಹೆಚ್ಚಿನ

ವಿಚಾರವನ್ನು "ಕಾರಣತ್ವೇನ ತು ಆಕಾಶಾದಿಷು" ಎಂಬ ಅಧಿಕರಣದಲ್ಲಿ ಆಕಾಶ ಶಬ್ದವು ಅನ್ಯಪರವಾಗಿದ್ದರೂ ವಿಷ್ಣುಪರವಾಗಿದೆ ಎಂದು ಸಮರ್ಥಿಸುತ್ತಾರೆ.

**वाक्यार्थमञ्जरी – श्रुत्येति ।।** समाख्यारूपश्रुत्येत्यर्थः । भूमन्भूयःशब्दयोः पर्यायत्वादिति भावः । स्थानान्तरश्रुतसमाख्यायाः अत्रैव श्रुतोपक्रमतो दुर्बलत्वेऽपि प्राबल्याद्यविवेकेन साधारणप्रयोजकत्वमुपपन्नम् ।। **यो वै भूमेति ।।** अनेन भूमाख्यनारायणस्य लक्षणमुच्यते यो वै भूमा पूर्णो नारायणाख्यस्तत्सुखम् अनन्याधीनसुखरूपम् । अस्यातिव्याप्तिं परिहरति– नाल्प इति ।। भूमप्रसादं विना नाल्पे मुक्तजाते सुखमस्ति । ततः किम्? इत्यत आह – **भूमैवेति ।।** तस्माद्भूमैवानन्याधीनसुखरूपमित्यर्थः ।। **नामवागादीति ।।** 'वाग् वाव नाम्नो भऊयसी मनो वाव वाचो भूयः सङ्कल्पो वा मनसो भूयान् चित्तं वाव सङ्कल्पाद्भूयः ध्यानं वाव चित्ताद्भूयः विज्ञानं वाव ध्यानाद्भूयः बलं वाव विज्ञानाद्भूयः अन्नं वाव बलाद्भूयः आपो वावान्नाद्भूयस्यः तेजो वावाद्भ्यो भूयः आकाशो वाव तेजसो भूयान् स्मरो वावाकाशाद्भूयान् आशा वाव स्मराद्भूयसि' इत्येवं नामादिशब्दितोषास्वाहा- पर्जन्यमित्राग्निवरुणसोमप्रवहानिरुद्धतैजसप्राणेन्द्रोमारुद्रसर स्वतीनां तारतम्यमुक्त्वेत्यर्थः । अत्राशावसानमुक्त्वा प्राणस्योत्तमत्वं चाभिधायेत्यनेन प्राणस्य भूमत्वे आशाशब्दितसरस्वत्युत्तमत्वरूपा मुक्तिरुक्तेति द्रष्टव्यम् ।। **तदुत्तमानुक्त्वेति ।।** 'अस्ति भगव आशाया भूय इत्याशा वाव भूयोऽस्तीति तन्मे भगवान् ब्रवीतु' इति प्रश्नवत् 'प्राणो वाव आशाया भूयान्' इति प्रत्युक्तिवच्चात्र प्राणादूर्ध्वमस्ति प्राणाद्भूय इति तन्मे भगवान् ब्रवीत्विति प्रश्नस्य भूमा वाव प्राणाद्भूयानिति प्रत्युत्तरस्याप्यभावेन भूम्नः प्राणादनन्यत्वनिश्चय इति भावः । आम्नातत्वात् पठितत्वात् ।। **उत्क्रान्तप्राणानिति ।।** प्राणवत् पित्रादीन् प्रति यदि कश्चित्त्वंकारादिना भृशं वदेत्तस्य पितृहन्तृत्वादिना निन्द्यवचनयोग्यत्वमुक्त्वा प्राणोत्क्रमणानन्तरं तन्नेत्यनेनोच्यते । उत्क्रान्तः प्राणो येभ्यस्ते उत्क्रान्तप्राणाः पित्रादयः तान् प्रति यदि समासं सङ्कोचेन व्यतिषं विस्तरेण वा शूलेन दहेत् हत्वा भस्मीकुर्यात्तदा एनं पितृहासीत्यादि नैव ब्रूयुरित्यर्थः ।। **ॐ भूमा सम्प्रसादादध्युपदेशात् ॐ ।।** 'यो वै भूमा' इत्युक्तभूमा विष्णुरेव सम्प्रसादात् सम्यक् प्रसीदत्यनेनेति सम्प्रसादः पूर्णसुखं तदभिधानात् । अध्युपदेशाद् अधि नामादिसर्वोत्तमत्वेन व्यपदेशाच्चेत्यर्थः ।। **विश्वशम्भुवमित्यादि ।।** ततश्चायं

श्रुत्यर्थः । अनन्तमूर्धानं देवं प्रकाशरूपं विश्वाक्षमनन्ताक्षम् । विश्वशम्भुवम् । विश्वं च तत् शं च विश्वशं । तद्भवत्यस्मिन्निति विश्वशम्भुवं पूर्णसुखाश्रयम् । विश्वं ज्ञानादिपूर्णम् । नारायणं मुक्तसङ्घाश्रयं देवं स्वेच्छया विहरन्तम् । अक्षरं चतुर्विधनाशरहितम् । परमं पदम् अत्यन्तप्राप्यम् । विश्वतः सर्वतः परमां परमश्चासौ अश्च परमाः तम् उत्तमम् अकारशब्दवाच्यं नित्यं तद् विश्वमुपजीवतीत्यन्वय इति । यद्यपि परममित्येव द्राविडपाठः । तथापि परमामित्यान्ध्रपाठो भाष्ये उदाहृतः ।। **विरोधादेवेति** ।। उभयोरपि स्वेतरसर्वोत्तमत्वे अन्योन्यापेक्षयोत्तमत्वप्राप्त्या व्याघातादित्यर्थः । तर्हि भूमा किं विष्णोरन्य इति तत्राह – **अनन्तरमिति** ।। प्राणानन्तरमित्यर्थः । न्यायविवरणानुसारेण पक्षान्तरमाह – **अस्तु वेति** ।। नच तदुत्तममनुक्त्वा भूम्नः आम्नानात्तस्यैव भूमत्वमिति वाच्यम् । अनुक्तेरेवाभावादित्यत आह – **एष तु वा अतिवदतीति** ।। यः सत्येनातिवदतीत्यादि पदोक्तम् । 'योऽधिकारी स निर्दोषश्चासौ नियामकश्चेति सत्यो विष्णुस्तेन अतिवदति तमतिशयेनातिवदति' इति यावत् । स एषः तु प्राणादिवाद्यपेक्षयाविशेषेणातिवदति अत्युत्तमस्तुवादीत्यर्थः । इत्यादिना ज्ञापकेन प्रश्नादीत्यादिपदेन सत्यं वाव प्राणाद्भूय इति प्रतिवचनग्रहः । प्रश्नाद्यध्याहाराभावे एवं विजानन्नातिवादी भवतीत्याद्युक्तप्राणज्ञानिनः सकाशादेष तु वा अतिवदतीत्यादिना सत्याख्यभूमज्ञानिनस्तुशब्देन विशेषोक्त्ययोगादिति भावः ।। **इत्यादिवदिति** ।। तत्रैकस्याकाशशब्दस्य भूततदन्तर्यामिपरत्ववदत्राप्युभयपरत्वमविरुद्धमित्यर्थः ।।

## ಬ್ರಹ್ಮಮೀಮಾಂಸಾಶಾಸ್ತ್ರ

## ಸರ್ವಗತತ್ವ- ಸ್ವಾತಂತ್ರ್ಯ ಮೊದಲಾದ ಲಿಂಗಗಳ ಆಧಾರ

### (९) सू – ॐ ।। धर्मोपपत्तेश्च ।। ॐ ।। ९ ।।

ಪ್ರಕರಣದಲ್ಲಿ ಸರ್ವಗತತ್ವ, ಸ್ವತಂತ್ರತ್ವ ಮೊದಲಾದ ಧರ್ಮಗಳನ್ನು ಹೇಳಿರುವುದರಿಂದ ವಿಷ್ಣುವೇ ಭೂಮನೆನಿಸುತ್ತಾನೆ.

ಪರಿಪೂರ್ಣಚಂದ್ರಿಕಾ

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

सूत्रदीपिका – 'स एवाधस्तात्' इत्यादिना भूम्नि सर्वगतत्वादिधर्मश्रवणात् । तस्य च विष्णोरेव उपपत्तेः विष्णुरेव भूमेत्यर्थः ।

'ಸ ಏವಾಧಸ್ತಾತ್' ಇತ್ಯಾದಿಯಾಗಿ ಛಾಂದೋಗ್ಯದಲ್ಲಿ ಭೂಮಾಶಬ್ದವಾಚ್ಯನಾದ ವ್ಯಕ್ತಿಯಲ್ಲಿ ಸರ್ವಗತತ್ವವೇ ಮೊದಲಾದ ಧರ್ಮಗಳು ಕೇಳಿಸುತ್ತಿವೆ. ಇವೆಲ್ಲವೂ ವಿಷ್ಣುವಿನಲ್ಲೇ ಉಪಪನ್ನವಾಗುವುದರಿಂದ ವಿಷ್ಣುವೇ ಭೂಮಾ ಎಂಬ ಶಬ್ದದಿಂದ ಪ್ರತಿಪಾದ್ಯನು.

श्रीमदानन्दतीर्थभगवत्पादाचार्यविरचित-

## ब्रह्मसूत्रभाष्यम्

**भाष्यम् – ॐ ॥ धर्मोपपत्तेश्च ॥ ॐ ॥ ९ ॥**

**सर्वगतत्वादिधर्मोपपत्तेश्च ॥ ९ ॥**

**॥ इति भूमाधिकरणम् ॥ २ ॥**

ಅನುವಾದ - ಪ್ರಕರಣದಲ್ಲಿ ಹೇಳಲ್ಪಟ್ಟ ಎಲ್ಲೆಡೆ ವ್ಯಾಪಿಸಿರುವಿಕೆ ಎಂಬ ಧರ್ಮವು ವಿಷ್ಣುವಿನಲ್ಲೇ ಉಪಪನ್ನವಾಗುತ್ತದೆ. ಆದ್ದರಿಂದ ಅವನೇ ಭೂಮಾ ಎಂಬ ಶಬ್ದದಿಂದ ಪ್ರತಿಪಾದ್ಯನು.

ಪ್ರತಿಪದಾರ್ಥ -- ಮತ್ತೊಂದು ಯುಕ್ತಿಯಿಂದ ವಿಷ್ಣುವೇ ಭೂಮಾ ಎಂಬ ಶಬ್ದದಿಂದ ಪ್ರತಿಪಾದ್ಯನಾಗಿದ್ದಾನೆನ್ನಲು ಸೂತ್ರವನ್ನು ಪಠಿಸಿ ವ್ಯಾಖ್ಯಾನಿಸುತ್ತಿದ್ದಾರೆ "ಧರ್ಮ" ಇತ್ಯಾದಿಯಾಗಿ.

ಸರ್ವಗತತ್ವಾದಿ = ಎಲ್ಲೆಡೆ ವ್ಯಾಪಿಸಿರುವಿಕೆ ಮೊದಲಾದ, ಧರ್ಮ = ಧರ್ಮವು, ಉಪಪತ್ತೇಶ್ಚ = ಯುಕ್ತವಾಗುವುದರಿಂದಲೂ ವಿಷ್ಣುವೇ ಭೂಮನು.(१)

(१) भाष्यदीपिका – (६) युक्त्यन्तरेण विष्णोर्भूमत्वप्रतिपादकं सूत्रमुपन्यस्य व्याचष्टे

**तत्वप्रकाशिका – युक्त्यन्तरेण विष्णोर्भूमत्वप्रतिपादकं सूत्रमुपन्यस्य व्याचष्टे – धर्मेति ।। 'स एवाधस्तात् स उपरिष्टात् स पश्चात् स पुरस्तात् स दक्षिणतः स उत्तरतः । स एवेदं सर्वम् । यत्र नान्यत्पश्यति नान्त्शृणोति नान्यद्विजानाति स भूमा स भगवः कस्मिन् प्रतिष्ठितः स्वे महिम्नि' इत्यादिना भूम्नि सर्वगतत्वधर्मश्रवणाचासौ विष्णुरेव । तेषां विष्णावेवोपपत्तेरित्यर्थः । अतो विष्णुरेव भूमेति तस्यैवानन्दमयत्वमिति सिद्धम् ।। ९ ।।**

ಮತ್ತೊಂದು ಯುಕ್ತಿಯಿಂದ ವಿಷ್ಣುವೇ ಭೂಮನಾಗಿದ್ದಾನೆಂಬುದನ್ನು ಪ್ರತಿಪಾದಿಸುವುದಕ್ಕಾಗಿ ಸೂತ್ರವನ್ನು ಪಠಿಸಿ ವ್ಯಾಖ್ಯಾನಿಸುತ್ತಿದ್ದಾರೆ "ಧರ್ಮ" ಇತ್ಯಾದಿ ವಾಕ್ಯದಿಂದ.

"ಸ ಏವಾಧಸ್ತಾತ್ ಸ ಉಪರಿಷ್ಟಾತ್ ಸ ಪಶ್ಚಾತ್ ಸ ಪುರಸ್ತಾತ್ ಸ ದಕ್ಷಿಣತಃ ಸ ಉತ್ತರತಃ । ಸ ಏವೇದಂ ಸರ್ವಮ್ । ಯತ್ರ ನಾನ್ಯತ್ ಪಶ್ಯತಿ ನಾನ್ಯತ್ ಶೃಣೋತಿ ನಾನ್ಯದ್ ವಿಜಾನಾತಿ ಸ ಭೂಮಾ ಸ ಭಗವಃ ಕಸ್ಮಿನ್ ಪ್ರತಿಷ್ಠಿತಃ ಸ್ವೇ ಮಹಿಮ್ನಿ"

---

–धर्मेति ।।आदिपदेन स्वातन्त्र्यस्वप्रतिष्ठितत्वादिकं गृह्यते । अस्य हेतोर्विष्णुरेव भूमेति प्रधानसाध्येनान्वयः । यद्यपि छान्दोग्ये 'यत्र नान्यत्' (छां.७.२४.१) इति स्वातन्त्र्यबोधकवाक्यानन्तरं 'स एवाधस्तात्' (छां.७.२५) इति सर्वगतत्वाभिधायकवाक्य श्रवणात् प्रथमश्रुतस्वातन्त्र्यधर्मं स्वशब्देन गृहीत्वा सर्वगतत्वमादिशब्देन ग्राह्यम् । तथाऽपि तद्वाक्ये भूमत्वनियतसर्वगतत्वस्य स्पष्टं प्रतीतेस्तदेव वाचकशब्देन गृहीतमिति द्रष्टव्यम् । अनेन – सूत्रे चो युक्तिसमुच्चये धर्मशब्दात् परमन्वेति । लिङ्गस्य निरवकाशत्व-ज्ञापनायोपपत्तिपर्यन्तं धावनम् । तथा च न केवलं सम्प्रसादादेः, किन्तु 'स एवाधस्तात् स उपरिष्टात् स पश्चात् स पुरस्तात् स दक्षिणतः स उत्तरतः स एवेदं सर्वम्' (छां. ७–२५–१.) इति वाक्ये, तथा – 'यत्र नान्यत् पश्यति नान्यच्छृणोति नान्यद् विजानाति स भूमा' (छां. ७–२४–१) इति वाक्ये, तथा – 'स भगवः कस्मिन् प्रतिष्ठित इति स्वे महिम्नि' (छां. ७–२४–१) इत्यादिवाक्ये च सर्वगतत्वादिधर्मश्रवणाच्च भूमा विष्णुरेव, तेषां च धर्माणां विष्णावेवोपपत्तेरिति सूत्रार्थ उक्तो भवति ।

'सः' भूमशब्दितो नारायणः अधः उपरि पश्चात् पुरस्ताद् दक्षिणत उत्तरतः सर्वत्रास्ति । तत्प्रयोजनमाह – स एवेदं सर्वमिति ।। तेनैवेदं जगद् व्याप्तं स एव सर्वसत्ताप्रदस्तदर्थमेव सर्वत्र तिष्ठतीत्यर्थः । 'यत्र' यद्विना यदधीनं विना अन्यन्न पश्यत्यधिकारी सर्वमेव तदधीनं पश्यति, तथैव शृणोति, विजानाति च स भूमेत्यर्थः । 'यत्र' यस्मिन् दृष्टेऽन्यत् स्वतन्त्रं न पश्यतीति वा । हे 'भगवो' भगवान् स भूमा कस्मिन् प्रतिष्ठित इति नारदप्रश्ने महिमगुणात्मके 'स्वे' स्वस्मिन् स्वकीये महिम्नि वा स्वयं 'प्रतिष्ठितः' आश्रित इति सनत्कुमारः प्रत्याहेति श्रुत्यर्थः ।। २ ।।

ಪರಿಪೂರ್ಣಚಂದ್ರಿಕಾ

"ಅವನು ಕೆಳಗೆ ಮೇಲೆ ಹಿಂದೆ ಮುಂದೆ ಎಡ ಬಲ ಹೀಗೆ ಎಲ್ಲೆಡೆಯಲ್ಲಿಯೂ ವ್ಯಾಪ್ತನಾಗಿದ್ದಾನೆ. ಸಕಲ ವಿಶ್ವವೂ ಅವನ ಅಧೀನವಾಗಿದೆ. ಅವನ ಅಧೀನವಿಲ್ಲದ ಯಾವುದೇ ವಸ್ತುವನ್ನು ನೋಡಲು ಸಾಧ್ಯವಿಲ್ಲ. ಕೇಳಲು ತಿಳಿಯಲೂ ಸಹ ಸಾಧ್ಯವಿಲ್ಲ. ಅವನೇ ಭೂಮನು. ಅಂತಹ ಭೂಮನು ಎಲ್ಲಿ ಇರುತ್ತಾನೆ''ಎಂಬ ನಾರದರ ಪ್ರಶ್ನೆಗೆ ಸನತ್ಕುಮಾರರು ಉತ್ತರಿಸುತ್ತಾರೆ. "ಅವನು ತನ್ನಲ್ಲಿಯೇ ಇರುತ್ತಾನೆ". ಹೀಗೆ ಭೂಮನಲ್ಲಿ ಸರ್ವಗತತ್ವ, ಸ್ವೇ ಮಹಿಮ್ನಿಪ್ರತಿಷ್ಠಿತತ್ವ ಮೊದಲಾದ ಧರ್ಮಗಳು ಕೇಳಿಸುತ್ತಿವೆ. ಇವೆಲ್ಲವೂ ಸಹ ವಿಷ್ಣುವಿನ ಅಸಾಧಾರಣವಾದ ಧರ್ಮವಾಗಿರುವುದರಿಂದ ವಿಷ್ಣುವೇ ಭೂಮನಾಗುತ್ತಾನೆ. ಆದ್ದರಿಂದ ಅವನೇ ಆನಂದಮಯನೂ ಆಗುತ್ತಾನೆಂಬುದು ಸಿದ್ಧವಾಯಿತು.

॥ ತತ್ವಪ್ರಕಾಶಿಕೆಯಲ್ಲಿ ಭೂಮಾಧಿಕರಣವು ಮುಗಿಯಿತು ॥

**भावदीपः –**

**ॐ धर्मोपपत्तेश्च ॐ ॥ भाष्यस्थादिपदोक्तलिङ्गद्योतनाय यत्र नान्यदित्यादिशेषोक्तिः । यत्र यस्मिन् दृष्टे श्रुते विज्ञाते सतीत्यर्थः ।**

ಭಾಷ್ಯದಲ್ಲಿರುವ "ಸರ್ವಗತ್ವಾದಿ" ಎಂಬಲ್ಲಿರುವ "ಆದಿ" ಪದದಿಂದ ಹೇಳಲ್ಪಟ್ಟ ಲಿಂಗವನ್ನು "ಯತ್ರ ನಾನ್ಯತ್ಪಶ್ಯತಿ" ಇತ್ಯಾದಿಯಾಗಿ ಉಲ್ಲೇಖಿಸುವ ಮೂಲಕ ವ್ಯಾಖ್ಯಾನಿಸಿದ್ದಾರೆ. "ಯತ್ರ" ಎಂದರೆ ಯಾರನ್ನು ನೋಡುವುದು, ಕೇಳುವುದು ಮತ್ತು ವಿಶೇಷಜ್ಞಾನ ಪಡೆಯುತ್ತಿರಲೂ ಎಂದರ್ಥ.

**भावदीपः – उपपत्तिशब्दः सूत्रे लिङ्गानां निरवकाशत्वोक्तिपर इति भावेन धर्मश्रवणाच्च विष्णावेवोपपत्तेरिति विच्छिद्य व्याख्यातम् – अत इति ॥ पूर्णसुखत्वादिहेतूनां भावात् ।**

ಸೂತ್ರದಲ್ಲಿರುವ "ಉಪಪತ್ತಿ" ಶಬ್ದವು ಲಿಂಗಗಳ ನಿರವಕಾಶತ್ವವನ್ನು ನಿರೂಪಣೆ ಮಾಡುತ್ತದೆ. ಈ ಅಭಿಪ್ರಾಯದಿಂದಲೇ ಸರ್ವಗತತ್ವವೇ ಮೊದಲಾದ ಧರ್ಮಗಳು ವಿಷ್ಣುವಿನಲ್ಲಿಯೇ ಉಪಪನ್ನವಾಗುತ್ತದೆ ಎಂಬುದನ್ನು "ಅತೋ ವಿಷ್ಣೋರೇವ" ಇತ್ಯಾದಿಯಾಗಿ ವ್ಯಾಖ್ಯಾನ ಮಾಡಿದ್ದಾರೆ. ಪೂರ್ಣಸುಖವೇ ಮೊದಲಾದ ಹೇತುಗಳು ಇರುವುದರಿಂದ ಎಂದರ್ಥ.

**भावदीपः – भाष्यदिशा प्राणपदेनान्तर्याम्युक्त्या प्राणभूम्नोरेकत्वेन वा न्यायविवरणरीत्या प्राणभूम्नोर्भेदेन प्राणस्य वायुमात्रत्वेन वा भूमा विष्णुरेवेति सर्वसूत्रार्थः ।**

'ಉತ್ಕ್ರಮಣ' ಎಂಬ ಲಿಂಗವು ಭಗವಂತನ ರೂಪವಿಶೇಷದಿಂದ ಉಪಪನ್ನವಾಗುತ್ತದೆ. "ಅನುಕ್ತಿ" ಎಂಬ ಲಿಂಗವೂ ಸಹ ಅಧ್ಯಾಹಾರದಿಂದ ಉಪಪನ್ನವಾಗುತ್ತದೆ. ಮತ್ತು "ರೂಪವಿಶೇಷ" "ವಿವಕ್ಷಾದ್ಯಾಹಾರಗಳೆಂಬ ಉಪಪತ್ತಿಗಳಿಂದ ಮತ್ತು ಬಾಧಕಗಳು ಇಲ್ಲದಿರುವುದರಿಂದ ಭೂಮಾ ಶಬ್ದದಿಂದ

ಪರಮಾತ್ಮನೇ ಪ್ರತಿಪಾದ್ಯನಾಗುತ್ತಾನೆ. ಮತ್ತು ಭಾಷ್ಯದ ಪ್ರಕಾರ ಪ್ರಾಣಪದದಿಂದ ಅಂತರ್ಯಾಮಿಯನ್ನು ವಿವಕ್ಷೆ ಮಾಡಿದರೆ 'ಪ್ರಾಣ' ಮತ್ತು 'ಭೂಮಾ' ಇಬ್ಬರು ಒಬ್ಬನೇ ಆಗುತ್ತಾನೆ. ಅಥವಾ ನ್ಯಾಯವಿವರಣ ಪ್ರಕಾರವಾಗಿ ಪ್ರಾಣ ಮತ್ತು ಭೂಮಾ ಇಬ್ಬರು ಭಿನ್ನರು ಎಂದು ಒಪ್ಪುವುದಾದರೆ ಪ್ರಾಣ ಶಬ್ದದಿಂದ ವಾಯುದೇವರೇ ಪ್ರತಿಪಾದ್ಯರಾಗಿ ಭೂಮಾ ಶಬ್ದದಿಂದ ಮುಖ್ಯವಾಗಿ ವಿಷ್ಣುವೇ ಪ್ರತಿಪಾದ್ಯನಾಗುತ್ತಾನೆ ಎಂದು ನಿರ್ಣಯವಾಗುತ್ತದೆ. ಈ ಪ್ರಮೇಯವೇ ಸಕಲ ಸೂತ್ರಗಳ ಸಾರ.

**भावदीपः – तमेव हेतूकृत्य 'यो वै भूमा तत्सुखम्' इत्युक्तेरिति पूर्वाक्षेपकभाष्यार्थमुपसंहरति – इति तस्यैवानन्दमयत्वमिति ।। 'तत् सुखम्' इत्युक्तपूर्णसुखत्वाद्वारेत्यर्थः ।। ९ ।।**

**।। इति राघवेन्द्रयतिकृते भावदीपे भूमाधिकरणम् ।।**

ಹಿಂದೆ ಹೇಳಿದ ಹೇತುಗಳ ಆಧಾರದಿಂದ "ಯೋ ವೈ ಭೂಮಾ ತತ್ಸುಖಂ" ಎಂಬ ಶ್ರುತಿಯ ಅನುಸಾರವಾಗಿ ಹಿಂದೆ ಭಾಷ್ಯದಲ್ಲಿ ಹೇಳಿದ ಆಕ್ಷೇಪವನ್ನು "ಇತಿ ತಸ್ಯೈವ ಆನಂದಮಯತ್ವಂ" ಎಂಬ ಟೀಕಾ ವಾಕ್ಯಗಳಿಂದ ಉಪಸಂಹಾರ ಮಾಡಿದ್ದಾರೆ. "ತತ್ಸುಖಂ" ಎಂದರೆ ಪೂರ್ಣಸುಖ ಮುಖಾಂತರ ಎಂದರ್ಥ.

॥ ಇಲ್ಲಿಗೆ ಭಾವದೀಪದ ಕನ್ನಡಾನುವಾದದಲ್ಲಿ ಭೂಮಾಧಿಕರಣವು ಸಮಾಪ್ತವಾಯಿತು ॥

ॐ **धर्मोपपत्तेश्च** ॐ ।। 'स एवाधस्ताद्' इत्याद्युक्तसर्वगतत्वादिधर्माणां विष्णावेवोपपत्तेश्च स एव भूमेत्यर्थः ।। **स एवेति** ।। स भूमैवाधोभागादिस्थितिः सर्वगतत्वं सर्वसत्ताप्रदानायेत्युक्तम् ।। **स एवेदं सर्वमिति** ।। स एव स्वतन्त्रः इदं सर्वं तदधीनमित्यर्थः ।। यद्वा इदं सर्वमित्यत्र लिङ्गव्यत्यासेनायं सर्व इत्यङ्गीकृत्य स भऊमा सर्वत्र सन्निहितत्वादयं पूर्णत्वात् सर्व इत्युच्यत इत्यर्थः । यत्रेत्यनेन भूम्नोऽसदृशत्वमुच्यते यत्र यस्याधीनं विनान्यं न पश्यति अधिकारी सर्वमेव तदधीनं पश्यति शृणोति विजानाति वा स भूमेत्यर्थः । जानन्नपि नारदो विशेषार्थज्ञानाय स्थापनाय च भूमाश्रयं पृच्छति – **स इति** ।। हे भगवः भगवन् स भऊमा कस्मिन् प्रतिष्ठितः आश्रितः । सनत्कुमार उत्तरमाह – **स्वे महिम्नीति** ।। स्वे स्वकीये महिम्नि सामर्थ्ये प्रतिष्ठित इत्यर्थः ।।

।। इति श्रीशर्कराश्रीनिवासविचचिता वाक्यार्थमञ्जर्याम् भूमाधिकरणम् ।।

ಭೂಮಾಧಿಕರಣ
(೧-೩-೨)

# ಭಾಗ - ೨

## ತಾತ್ಪರ್ಯಚಂದ್ರಿಕಾ, ಪ್ರಕಾಶ,

ಪ್ರತಿಯೊಂದು ವಾಕ್ಯಗಳ ವಿಶೇಷ ವಿವರಣೆಯೊಂದಿಗೆ

ಸರಳ ಅನುವಾದ

***

ಮತ್ತು

ಗುರುರಾಜೀಯಮ್, ಭಾಟ್ಟಸಂಗ್ರಹ,
ಶಾಂಕರಭಾಷ್ಯ, ಭಾಮತೀ,
ರಾಮಾನುಜಭಾಷ್ಯ ಇವುಗಳ ಸಂಪೂರ್ಣ ಅಡಿಟಿಪ್ಪಣಿಯೊಂದಿಗೆ

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥
॥ ಶ್ರೀಮಧ್ವರಾಜೋ ವಿಜಯತೇತರಾಮ್ ॥
॥ ಶ್ರೀಗುರುಭ್ಯೋ ನಮಃ ॥

ಶ್ರೀಬ್ರಹ್ಮಣ್ಯತೀರ್ಥಶ್ರೀಪಾದಶಿಷ್ಯಶ್ರೀವ್ಯಾಸತೀರ್ಥವಿರಚಿತಾ

# ತಾತ್ಪರ್ಯಚಂದ್ರಿಕಾ

## अथ भूमाधिकरणम्

'ಭೂಮಾ' ಶಬ್ದವು ಧರ್ಮಿಪರ ಮತ್ತು ಉಭಯತ್ರಪ್ರಸಿದ್ಧ

**ॐ भूमा सम्प्रसादादध्युपदेशात् ॐ ॥**

**अत्र यद्यपि भूमशब्दो बहुशब्दात् ''बहोर्लोपो भू च बहोः'' इति भावे निष्पन्नः । बहुत्वसङ्ख्या च लोकतोऽन्यत्रप्रसिद्धा ।**

ಅನುವಾದ - 'ಭೂಮಾ' ಎಂಬ ನಾಮಾತ್ಮಕ ಶಬ್ದವನ್ನು ಈ ಅಧಿಕರಣದಲ್ಲಿ ಸಮನ್ವಯ ಮಾಡುತ್ತಿದ್ದಾರೆ.

ಪ್ರಶ್ನೆ - 'ಭೂಮಾ' ಎಂಬ ಶಬ್ದವು 'ಬಹು' ಎಂಬ ಶಬ್ದದಿಂದ ನಿಷ್ಪನ್ನವಾಗಿದೆ. 'ಬಹೋರ್ಲೋಪೋ ಭೂ ಚ ಬಹೋಃ' ಎಂಬ ಸೂತ್ರದಿಂದ ಭಾವಾರ್ಥದಲ್ಲಿ 'ಬಹು' ಶಬ್ದಕ್ಕೆ 'ಭೂ' ಎಂಬ ಆದೇಶ ಬಂದು 'ಇಮನಿಚ್' ಪ್ರತ್ಯಯದ ಜೊತೆಗೆ ಸೇರಿ 'ಭೂಮಾ' ಎಂಬ ರೂಪವು ಸಿದ್ಧವಾಗಿದೆ. 'ಬಹು' ಶಬ್ದಕ್ಕೆ ಬಹುತ್ವಸಂಖ್ಯೆಯು ಅರ್ಥವಾಗಿರುವುದರಿಂದ 'ಭೂಮಾ' ಎಂಬ ಶಬ್ದಕ್ಕೂ ಸಹ ಬಹುತ್ವಸಂಖ್ಯೆಯೆಂದೇ ಅರ್ಥವಾಗುತ್ತದೆ. ಈ ಅರ್ಥವು 'ತೇನ', 'ವನ' ಮೊದಲಾದ ಸ್ಥಳಗಳಲ್ಲಿ ಲೋಕರೂಢಿಯಿಂದ ಅನ್ಯತ್ರಪ್ರಸಿದ್ಧವಾಗಿದೆ. ಆದ್ದರಿಂದ ಬಹುತ್ವಸಂಖ್ಯಾ ಎಂಬ ಅರ್ಥವುಳ್ಳ 'ಭೂಮಾ' ಎಂಬ ಶಬ್ದವು ಲೋಕತಃ ಅನ್ಯತ್ರಪ್ರಸಿದ್ಧವೆಂದಂತಾಯಿತು. ಹೀಗಿರುವಾಗ ಉಭಯತ್ರಪ್ರಸಿದ್ಧವಾದ ಈ ಪಾದದಲ್ಲಿ ಇದರ ಸಮನ್ವಯವು ಹೇಗೆ ಸಂಗತವಾಗುತ್ತದೆ?

**तथाऽपि बहुशब्दस्य ''बहुषु बहुवचनम्'' इत्यादौ सङ्ख्यायामिव बह्वन्नमित्यादौ वैपुल्येऽपि प्रयोगात् ।**

ಉತ್ತರ - 'ಬಹುಷು ಬಹುವಚನಮ್' ಇತ್ಯಾದಿ ಸೂತ್ರಗಳಲ್ಲಿ 'ಬಹು' ಎಂಬ ಶಬ್ದವನ್ನು ಸಂಖ್ಯಾರ್ಥದಲ್ಲಿ ಪ್ರಯೋಗಿಸಲಾಗಿದೆ. ಇದರಂತೆ 'ಬಹ್ವನ್ನಮ್' ಇತ್ಯಾದಿ ಪ್ರಯೋಗಗಳಲ್ಲಿ ವಿಪುಲವಾದದ್ದು ಎಂಬರ್ಥದಲ್ಲಿಯೂ 'ಬಹು' ಶಬ್ದವನ್ನು ಪ್ರಯೋಗಿಸಲಾಗಿದೆ. ಆದ್ದರಿಂದ 'ಬಹು' ಶಬ್ದಕ್ಕೆ ಸಂಖ್ಯಾವೆಂದಷ್ಟೇ ಅರ್ಥವಲ್ಲ. ವೈಪುಲ್ಯವೆಂಬರ್ಥವನ್ನೂ ಸಹ ವಿವಕ್ಷಿಸಬಹುದು.

**अत्रैव च श्रुतौ "यो वै भूमा तदमृतं यदल्पं तन्मर्त्यम्" इति बहुत्वसङ्ख्यायुक्तस्याल्पस्य भूमप्रतियोगित्वेनोपादानात्**

ಮತ್ತು ಇದೇ ಸೂತ್ರದಲ್ಲಿ 'ಯೋ ವೈ ಭೂಮಾ ತದಮೃತಂ ಯದಲ್ಪಂ ತನ್ಮರ್ತ್ಯಮ್' 'ಭೂಮನೆನಿಸಿದ ಪರಮಾತ್ಮನು ಅಮೃತನಾಗಿದ್ದಾನೆ. ಯಾರು ಅಲ್ಪರೋ ಅವರು ಮರ್ತ್ಯನೆನಿಸಿದ್ದಾರೆ' ಎಂದು ಶ್ರುತವಾಗಿದೆ. ಬಹುತ್ವಸಂಖ್ಯೆಯಿಂದ ಕೂಡಿರುವ ಅಲ್ಪರಾದ ಜೀವರನ್ನು ಭೂಮಕ್ಕೆ ಪ್ರತಿಯೋಗಿಯೆಂದು ಇಲ್ಲಿ ಹೇಳಲಾಗಿದೆ. ಭೂಮನಾಮಕನಾದ ಪರಮಾತ್ಮನಿಗೆ ಬಹುತ್ವಸಂಖ್ಯೆಯುಳ್ಳ ಜೀವರೂ ಪ್ರತಿಯೋಗಿಯಾಗಿರುವುದರಿಂದ ಭೂಮನು ಬಹುತ್ವಸಂಖ್ಯೆಯಿಂದ ಯುಕ್ತನಾಗಲು ಸಾಧ್ಯವಿಲ್ಲ.

**नामादिभ्योऽधिकसङ्ख्याहीने च वागादौ "वाग्वाव नाम्नो भूयसी । आकाशो वाव तेजसो भूयान्" इत्यादौ बहुशब्दान्निष्पन्नभूयःशब्दप्रयोगात्**

ಮತ್ತು ನಾಮ ಮೊದಲಾದವುಗಳಿಗಿಂತ ಅಧಿಕವಾದ ಸಂಖ್ಯೆಯನ್ನು ಹೊಂದದ ವಾಕ್, ಆಕಾಶ ಮೊದಲಾದವುಗಳಲ್ಲಿಯೂ ಭೂಯಶ್ಶಬ್ದವನ್ನು ಪ್ರಯೋಗಿಸಲಾಗಿದೆ. 'ವಾಗ್ವಾವ ನಾಮ್ನೋ ಭೂಯಸೀ' ಎಂಬಲ್ಲಿ ನಾಮಕ್ಕಿಂತ 'ವಾಕ್' ಎಂಬುದು ಅಧಿಕಸಂಖ್ಯೆಯಿಂದ ಕೂಡಿದೆಯೆಂದು ಅರ್ಥೈಸಲಾಗದು; ಹೊರತಾಗಿ ವಿಪುಲವಾಗಿದೆಯೆಂದೇ ಅರ್ಥೈಸಬೇಕು. ಇದರಂತೆ 'ಆಕಾಶೋ ವಾವ ತೇಜಸೋ ಭೂಯಾನ್' ಎಂಬಲ್ಲಿ ತೇಜಸ್ಸಿಗಿಂತ ಆಕಾಶವು ಭೂಯಾನ್ ಆಗಿದೆ ಎಂದರೆ ಬಹಳ ಆಕಾಶಗಳಿವೆ ಎಂದರ್ಥವಲ್ಲ. ಒಂದೇ ಆಕಾಶವು ವಿಪುಲವಾಗಿದೆಯೆಂದರ್ಥ. ಹೀಗೆ ಬಹು ಶಬ್ದದಿಂದ ನಿಷ್ಪನ್ನವಾದ 'ಭೂಯಃ' ಎಂಬ ಶಬ್ದವನ್ನು ವೈಪುಲ್ಯ ಎಂಬರ್ಥದಲ್ಲಿ ಪ್ರಯೋಗಿಸಲಾಗಿದೆ.

**प्राणो भूमेति पूर्वपक्षेऽपि सङ्ख्यार्थत्वाभावाच्च वैपुल्यार्थत्वात् ।**

ವೈಪುಲ್ಯವೆಂಬರ್ಥವೂ ಪೂರ್ವಪಕ್ಷಿಗೂ ಸಮ್ಮತವಾಗಿದೆ. 'ಪ್ರಾಣೋ ಭೂಮಾ' ಪ್ರಾಣನೇ ಭೂಮನಾಗಿದ್ದಾನೆ ಎಂದು ಹೇಳುವ ಪೂರ್ವಪಕ್ಷಕಾರನು ಅನೇಕ ಪ್ರಾಣರಿದ್ದಾರೆಂದು ವಿವಕ್ಷಿಸುವುದಿಲ್ಲ; ಹೊರತಾಗಿ ಪ್ರಾಣದೇವನು ವಿಪುಲನಾಗಿದ್ದಾನೆ ಎಂದೇ ಹೇಳುತ್ತಾನೆ. ಹೀಗೆ ಪ್ರಕರಣದ ಹಿಂದಿನ ಹಾಗೂ ಮುಂದಿನ ಶ್ರುತಿಗಳನ್ನು ಪರ್ಯಾಲೋಚನೆ ಮಾಡಿದಾಗ ಮತ್ತು ಪೂರ್ವಪಕ್ಷಕಾರನ ಅಭಿಪ್ರಾಯವನ್ನು ಗಮನಿಸಿದಾಗ 'ಭೂಮಾ' ಎಂಬ ಶಬ್ದಕ್ಕೆ ವೈಪುಲ್ಯವೆಂಬರ್ಥವನ್ನೇ ಪ್ರಕೃತ ವಿವಕ್ಷಿಸಬೇಕೆಂದು ಸ್ಪಷ್ಟವಾಗುತ್ತದೆ.

**गुणादिना च वैपुल्यस्य ब्रह्मण्यपि सम्भवात्**

ಬ್ರಹ್ಮನು ಗುಣಪರಿಪೂರ್ಣನಾದ್ದರಿಂದ ಗುಣಗಳಿಂದ ವಿಪುಲನಾಗಿದ್ದಾನೆ ಎಂದು ಹೇಳಬಹುದು. ಈ ವಿವಕ್ಷೆಯಿಂದ ಬ್ರಹ್ಮನನ್ನೂ ಭೂಮನೆಂದು ಕರೆಯಬಹುದು.

**इहैव च श्रुतौ भूमशब्दस्य ''यो वै भूमा तदमृतम् । यो वै भूमा तत्सुखम् । स एवाधस्तात्स उपरिष्टात्'' इत्यादौ धर्मिणि प्रयोगात्**

ಭೂಮಶಬ್ದವು ಧರ್ಮಿವಾಚಕವಾಗಿದೆಯೆಂಬುದು ಮತ್ತೊಂದು ವಿಚಾರ. ಏಕೆಂದರೆ 'ಭೂಮಾ' ಎಂಬ ಶಬ್ದವನ್ನು ಪ್ರಯೋಗಿಸುವಾಗ ಶ್ರುತಿಯು ಹೀಗೆ ಹೇಳಿದೆ - 'ಯೋ ವೈ ಭೂಮಾ ತದಮೃತಮ್ । ಯೋ ವೈ ಭೂಮಾ ತತ್ಸುಖಮ್ । ಸ ಏವಾಧಸ್ತಾತ್ ಸ ಉಪರಿಷ್ಟಾತ್' 'ಯಾರು ಭೂಮನೋ ಅವನ ಅಮೃತನಾಗಿದ್ದಾನೆ. ಯಾರು ಭೂಮನೋ ಅವನು ಸುಖಸ್ವರೂಪನಾಗಿದ್ದಾನೆ. ಯಾರು ಭೂಮನೋ ಅವನೇ ಮೇಲೆ, ಕೆಳಗೆ ಎಲ್ಲೆಡೆಯೂ ವ್ಯಾಪ್ತನಾಗಿದ್ದಾನೆ' ಹೀಗೆ ಹೇಳಿದೆ. ಒಂದು ವೇಳೆ ಧರ್ಮವನ್ನು ವಿವಕ್ಷಿಸಿದರೆ ಅಮೃತನೆಂದು, ಸುಖರೂಪನೆಂದು, ವ್ಯಾಪ್ತನೆಂದು ಹೇಳಲು ಸಾಧ್ಯವಿಲ್ಲ. ಆದ್ದರಿಂದ ಧರ್ಮಿಯಲ್ಲಿಯೇ ಭೂಮಶಬ್ದವನ್ನು ಶ್ರುತಿಯು ಪ್ರಯೋಗಿಸಿದೆಯೆಂದು ತಿಳಿಯಬೇಕು.

**पूर्वपक्षेऽपि च धर्मिपरत्वात्, टीकाऽनुव्याख्यानयोश्च नामत्वोक्त्या धर्मिणि रूढेरभिप्रेतत्वात्**

'ಪ್ರಾಣೋ ಭೂಮಾ' ಎಂಬುದಾಗಿ ಪ್ರಾಣನನ್ನೇ ಭೂಮನೆನ್ನುವ ಪೂರ್ವಪಕ್ಷಕಾರನೂ ಸಹ ಧರ್ಮಿವಾಚಕವೆಂದೇ ಭೂಮಶಬ್ದವನ್ನು ಒಪ್ಪಿರುತ್ತಾನೆ. ಮತ್ತು ಟೀಕೆ ಹಾಗೂ ಅನುವ್ಯಾಖ್ಯಾನಗಳಲ್ಲಿ ವಿಷಯಮಾಲಾನಿರೂಪಣೆಯ ಸಂದರ್ಭದಲ್ಲಿ 'ಭೂಮಾ' ಎಂಬ ಶಬ್ದವನ್ನು ನಾಮಾತ್ಮಕವೆಂದು ಹೇಳಿದ್ದರಿಂದ ಧರ್ಮಿಯಲ್ಲಿ ಇದು ರೂಢವಾಗಿದೆಯೆಂದು ಅಭಿಪ್ರೇತವಾಗಿದೆ. ಆದ್ದರಿಂದ 'ಬಹು' ಶಬ್ದದ ಮೇಲೆ 'ಭೂ' ಆದೇಶಬಂದು 'ಇಮನಿಚ್' ಪ್ರತ್ಯಯ ಬಂದಿರುವ ಕಾರಣ ಯೌಗಿಕವಾಯಿತು. ಆದ್ದರಿಂದ ಧರ್ಮವಾಚಕವಾಯಿತಲ್ಲವೇ ? ಎಂಬ ಶಂಕೆಗೆ ಅವಕಾಶವಿಲ್ಲ.

**व्याकरणस्य च साधुत्वान्वाख्यानपरत्वात्**

ಹಾಗಾದರೆ ವ್ಯಾಕರಣದಲ್ಲಿ 'ಬಹು' ಶಬ್ದಕ್ಕೆ 'ಇಮನಿಚ್' ಪ್ರತ್ಯಯವನ್ನು ಹೇಳಿ 'ಭೂ' ಆದೇಶವನ್ನು ಹೇಳಿ 'ಭೂಮಾ' ಎಂಬ ರೂಪವನ್ನು ನಿಷ್ಪನ್ನ ಮಾಡಿದ್ದು ತಪ್ಪಾಯಿತಲ್ಲವೇ? ಮತ್ತು ನೀವು ಧರ್ಮಿಪರವೆಂದು ಹೇಳುವುದು ವ್ಯಾಕರಣಕ್ಕೆ ವಿರುದ್ಧವಲ್ಲವೇ? ಎಂದು ಪ್ರಶ್ನಿಸಬಾರದು. ವ್ಯಾಕರಣವು ಕೇವಲ ಶಬ್ದಸಾಧುತ್ವಕ್ಕೋಸ್ಕರ ಮಾತ್ರ ಹೊರಟಿದೆ. 'ಭೂಮಾ' ಎಂಬ ಶಬ್ದವು ಹೇಗೆ ನಿಷ್ಪನ್ನವಾಗಿದೆಯೆಂದು ತಿಳಿಸುವುದಷ್ಟೇ ವ್ಯಾಕರಣದ ಉದ್ದೇಶ ಹೊರತು, ಧರ್ಮವಾಚಕವಾಗಿದೆಯೆಂದು ತಿಳಿಸಲು ಅದು ಹೊರಟಿಲ್ಲ.

**ಪರಿಪೂರ್ಣಚಂದ್ರಿಕಾ**

**भूमशब्दस्य विपुलरूपधर्मिपरतैव । न त्वनेकपरता । न वा बहुत्वानेकत्व-वैपुल्यरूपधर्मपरतेति न स्वतोऽन्यत्रप्रसिद्धता ।**

ಆದ್ದರಿಂದ 'ಭೂಮಾ' ಎಂಬ ಶಬ್ದವು ವಿಪುಲ ಎಂಬ ಧರ್ಮಿವಾಚಕವೇ ಆಗಿದೆಯೆಂದು ಸಿದ್ಧವಾಯಿತು. ಮತ್ತು ಅನೇಕತ್ವಸಂಖ್ಯಾವಾಚಕವೂ ಸಹ ಆಗಿಲ್ಲವೆಂದು ಸಿದ್ಧವಾಯಿತು. ಯಾವ ಕಾರಣದಿಂದ ಬಹುತ್ವ, ಅನೇಕತ್ವ, ವೈಪುಲ್ಯವೆಂಬ ಧರ್ಮವನ್ನು ಭೂಮಾ ಶಬ್ದವು ಹೇಳುವುದಿಲ್ಲವೋ ಆ ಕಾರಣದಿಂದಲೇ ಸ್ವತಃ ಅನ್ಯತ್ರಪ್ರಸಿದ್ಧವೂ ಸಹ ಆಗುವುದಿಲ್ಲ.

**नाप्यन्यत्रप्रसिद्धप्राणश्रुतिसाहित्यादन्यत्रप्रसिद्धत्वम् । तस्य ''अत एव प्राणः'' इत्यत्रोक्तब्रह्मपरतामुपेत्योत्क्रमणादिलिङ्गादेवेह पूर्वपक्षकरणात् ।**

ಇನ್ನು ಅನ್ಯತ್ರಪ್ರಸಿದ್ಧವಾದ ಪ್ರಾಣಶ್ರುತಿಯ ಸಾಹಿತ್ಯದಿಂದ 'ಭೂಮಾ' ಎಂಬ ಶಬ್ದವು ಅನ್ಯತ್ರಪ್ರಸಿದ್ಧವಾಗಿದೆಯಲ್ಲವೇ? ಎಂದೂ ಸಹ ಪ್ರಶ್ನಿಸಬಾರದು. ಪ್ರಾಣಶಬ್ದವು 'ಅತ ಏವ ಪ್ರಾಣಃ' ಎಂಬ ಸೂತ್ರದಲ್ಲಿ ಹೇಳಲ್ಪಟ್ಟ ನ್ಯಾಯದಂತೆ ವಿಷ್ಣುಪರವಾಗಿದೆ. ಹೀಗೆ ಒಪ್ಪಿ ಕೇವಲ ಉತ್ಕ್ರಮಣಾದಿ ಲಿಂಗದಿಂದಲೇ 'ಭೂಮಾ' ಎಂಬ ಶಬ್ದವು ವಾಯುದೇವತಾಪರವಾಗಿದೆಯೆಂದು ಇಲ್ಲಿ ಪೂರ್ವಪಕ್ಷ ಮಾಡಲಾಗುತ್ತಿದೆ. ಆದ್ದರಿಂದ ಅನ್ಯತ್ರಪ್ರಸಿದ್ಧವಾದ ಪ್ರಾಣಶ್ರುತಿಯ ಸಾಹಿತ್ಯದಿಂದ ಅನ್ಯತ್ರಪ್ರಸಿದ್ಧವಾಗಿದೆಯೆಂದು ಶಂಕಿಸಬಾರದು.

**उत्क्रमणादिलिङ्गसाहित्यादन्यत्रप्रसिद्धता तु पूर्ववन्निरसनीया ।**

ಹಾಗಾದರೆ ಉತ್ಕ್ರಮಣಾದಿ ಲಿಂಗವು ಅನ್ಯತ್ರಪ್ರಸಿದ್ಧವಾಗಿದೆ. ಇದರ ಸಾಹಿತ್ಯದಿಂದ 'ಭೂಮಾ' ಎಂಬ ಶಬ್ದವು ಅನ್ಯತ್ರಪ್ರಸಿದ್ಧವಾಗುತ್ತದಲ್ಲವೇ? ಎಂದೂ ಸಹ ಪ್ರಶ್ನಿಸಬಾರದು. ದ್ಯುಭ್ವಾದ್ಯಧಿಕರಣದಲ್ಲಿ ಹೇಳಲ್ಪಟ್ಟ ನ್ಯಾಯದಿಂದ ಅನ್ಯತ್ರಪ್ರಸಿದ್ಧದ ಲಕ್ಷಣವೂ ಇಲ್ಲಿ ಬಾರದ ಕಾರಣ 'ಭೂಮಾ' ಎಂಬ ಶಬ್ದವು ಅನ್ಯತ್ರಪ್ರಸಿದ್ಧವಾಗುವುದಿಲ್ಲವೆಂದು ತಿಳಿಯಬೇಕು.

**उभयत्रप्रसिद्धत्वं तु ''प्राणो वा आशाया भूयान् विष्णुर्वै देवेभ्यो भूयांस्तस्माद्भूयान्नाम् इत्यादेर्भूमशब्दोऽज्ञानां साधारणः'' इति न्यायविवरण एवोक्तम् ॥**

'ಭೂಮಾ' ಎಂಬ ಶಬ್ದವು ಉಭಯತ್ರಪ್ರಸಿದ್ಧವೇ ಆಗಿದೆ. ಈ ವಿಷಯವನ್ನು 'ಪ್ರಾಣೋ ವಾ ಆಶಾಯಾ ಭೂಯಾನ್ ವಿಷ್ಣುರ್ವೈ ದೇವೇಭ್ಯೋ ಭೂಯಾಂಸ್ತಸ್ಮಾದ್ಭೂಯಾನ್ನಮ' ಇತ್ಯಾದೇರ್ಭೂಮಶಬ್ದೋऽಜ್ಞಾನಾಂ ಸಾಧಾರಣಃ' ಇತ್ಯಾದಿ ನ್ಯಾಯವಿವರಣ ಗ್ರಂಥದ ವಾಕ್ಯಗಳಿಂದ

ಭೂಮಾಧಿಕರಣ (೧-೩-೨)

ಅಜ್ಞಾನಿಗಳ ದೃಷ್ಟಿಯಿಂದಷ್ಟೇ ಪ್ರಾಣ ಹಾಗೂ ವಿಷ್ಣು ಇಬ್ಬರಲ್ಲಿಯೂ 'ಭೂಮಾ' ಎಂಬ ಶಬ್ದವು ಸಾಧಾರಣವಾಗಿದೆ, ಎಂದು ಹೇಳಿರುತ್ತಾರೆ.

**ननु ''प्राणो वा'' इत्युपक्रमात् ''विष्णुर्वा'' इति समाख्याया दुर्बलत्वात्कथं ततः साधारण्यमिति चेन्न । समाख्यायाः साभ्यासत्वात्सोपपत्तिकत्वाच्चा-दौर्बल्यात् ।**

'ಪ್ರಾಣೋ ವಾ' ಇತ್ಯಾದಿ ಉಪಕ್ರಮಕ್ಕಿಂತ 'ವಿಷ್ಣುರ್ವಾ' ಇತ್ಯಾದಿ ಸಮಾಖ್ಯೆಯು ದುರ್ಬಲವಾಗಿದೆ. ಹೀಗಿರುವಾಗ ಉಪಕ್ರಮ ಹಾಗೂ ಸಮಾಖ್ಯಾ ಪ್ರಮಾಣಗಳಿಂದ ಸಮಾನವಾಗಿ ಉಭಯಸಾಧಾರಣವಾಗಿದೆಯೆಂದು ಹೇಳಲು ಹೇಗೆ ಸಾಧ್ಯ? ಎಂದು ಶಂಕಿಸಬಾರದು. ಉಪಕ್ರಮಕ್ಕಿಂತ ಕೇವಲ ಸಮಾಖ್ಯೆಯು ದುರ್ಬಲವಾಗಿರಬಹುದು. ಆದರೆ ಪ್ರಕೃತ ಅಭ್ಯಾಸ ಹಾಗೂ ಉಪಪತ್ತಿಗಳಿಂದ ಸಮಾಖ್ಯೆಯು ಯುಕ್ತವಾಗಿದೆ. ಆದ್ದರಿಂದ ಇದು ಉಪಕ್ರಮಕ್ಕಿಂತ ದುರ್ಬಲವಾಗುವುದಿಲ್ಲ.

**अत एव न्यायविवरणे समाख्यायामभ्यासोपपत्ती उक्ते ।**

ಆದ್ದರಿಂದಲೇ ನ್ಯಾಯವಿವರಣದಲ್ಲಿ ಸಮಾಖ್ಯಾಪ್ರಮಾಣವನ್ನು ಹೇಳುವಾಗ ಅಭ್ಯಾಸ ಹಾಗೂ ಉಪಪತ್ತಿಗಳನ್ನೂ ಸಹ ಹೇಳಿರುತ್ತಾರೆ.

**यद्वा उपक्रमसमाख्ययोर्बलाबलाज्ञानदशायां साधारण्यम् । अत एव न्यायविवरणे ''अज्ञानाम्'' इयुक्तम् ।**

ಅಥವಾ ಉಪಕ್ರಮ ಹಾಗೂ ಸಮಾಖ್ಯಾಪ್ರಮಾಣಗಳಿಗೆ ಪ್ರಾಬಲ್ಯ ಹಾಗೂ ದೌರ್ಬಲ್ಯಗಳ ವಿಚಾರವನ್ನು ಮಾಡದ ದೆಶೆಯಲ್ಲಿ ಉಭಯಸಾಧಾರಣವಾಗಿದೆಯೆಂದು ತಿಳಿಯಬೇಕು. ಆದ್ದರಿಂದಲೇ ನ್ಯಾಯವಿವರಣದಲ್ಲಿ 'ಅಜ್ಞಾನಾಮ್' ಎಂದು ಹೇಳಿದ್ದಾರೆ. ಅಂದರೆ ಅಜ್ಞಾನಿಗಳ ಪ್ರಕಾರವಷ್ಟೇ ಇದು ಉಭಯಸಾಧಾರಣವಾಗಿದೆಯೆಂದರ್ಥ.

# ಶ್ರೀರಾಘವೇಂದ್ರತೀರ್ಥವಿರಚಿತ
# ಪ್ರಕಾಶ

**प्रकाशः –**

ॐ भूमा सम्प्रसादादध्युपदेशात् ॐ ।। अत्र टीकायां ''प्राणो वा आशाया भूयान्' इत्युपक्रमेण 'विष्णुर्वै देवेभ्यो भूयांस्तस्माद्भूयान्नाम्' इति श्रुत्या च वायुविष्णुसाधारणस्य भूमनाम्नः'' इत्याद्युक्तम् ।

ಭೂಮಾಧಿಕರಣವು ಪ್ರಾರಂಭವಾಗುತ್ತಿದೆ. ಈ ಅಧಿಕರಣದ ಟೀಕೆಯಲ್ಲಿ 'ಪ್ರಾಣೋ ವಾ ಆಶಾಯಾ ಭೂಯಾನಿತ್ಯುಪಕ್ರಮೇಣ ವಿಷ್ಣುರ್ವೈ ದೇವೇಭ್ಯೋ ಭೂಯಾಂಸ್ತಸ್ಮಾದ್ಭೂಯಾನ್ನಾಮೇತಿ ಶ್ರುತ್ಯಾ ಚ ವಾಯುವಿಷ್ಣುಸಾಧಾರಣಸ್ಯ ಭೂಮನಾಮ್ನಃ' ಎಂದು ಹೇಳಿದ್ದಾರೆ. ಅಂದರೆ 'ಪ್ರಾಣೋ ವಾ ಆಶಾಯಾ ಭೂಯಾನ್'' ಎಂಬುದಾಗಿ ಉಪಕ್ರಮ ರೂಪಪ್ರಮಾಣದ ಆಧಾರದಿಂದ 'ಭೂಮ'ಶಬ್ದವು ವಾಯುವಿನಲ್ಲಿ ಕೇಳಿಸುತ್ತಿದೆ. 'ವಿಷ್ಣುರ್ವೈ ದೇವೇಭ್ಯೋ ಭೂಯಾನ್ ತಸ್ಮಾತ್ ಭೂಯಾನ್ ನಾಮ' ಎಂಬ ಸಮಾಖ್ಯಾಶ್ರುತಿಯಲ್ಲಿ ವಿಷ್ಣುವಿನಲ್ಲಿ ಕೇಳಿಸುತ್ತಿದೆ. ಹೀಗೆ ವಾಯು ಹಾಗೂ ವಿಷ್ಣು ಇಬ್ಬರಲ್ಲಿಯೂ 'ಭೂಮಾ' ಎಂಬ ಶಬ್ದವು ಸಾಧಾರಣವಾಗಿದೆ ಎಂದು ಇದರ ಅಭಿಪ್ರಾಯ.

**प्रकाशः** – तच्च न्यायविवरणटीकायां ''ननु भूमशब्दो भाववाची । तत्कथं धर्मिणो शङ्क्यते । कथं च भूयानित्यनेन समानार्थः । कथं च नामात्मकः । मैवम् । 'यो वै भूमा तत्सुखम्' इत्युत्तरवाक्यपर्यालोचनया भावभवित्रोरभेदाभिप्रायेण भवितृविषयतावगमात्'' इति ग्रन्थेनाक्षिप्य समाहितम् ।

ಇದೇ ಮಾತನ್ನು ನ್ಯಾಯವಿವರಣೆಯ ಟೀಕೆಯಲ್ಲಿ ಆಕ್ಷೇಪ ಮಾಡಿ ಸಮಾಧಾನ ನೀಡಿದ್ದಾರೆ - 'ನನು ಭೂಮಶಬ್ದೋ ಭಾವವಾಚೀ । ತತ್ಕಥಂ ಧರ್ಮಿಣೋಶಂಕ್ಯತೇ । ಕಥಂ ಚ ಭೂಯಾನಿತ್ಯನೇನ ಸಮಾನಾರ್ಥಃ । ಕಥಂ ಚ ನಾಮಾತ್ಮಕಃ । ಮೈವಮ್ । ಯೋ ವೈ ಭೂಮಾ ತತ್ಸುಖಮಿತ್ಯುತ್ತರವಾಕ್ಯ-ಪರ್ಯಾಲೋಚನಯಾ ಭಾವಭವಿತ್ರೋರಭೇದಾಭಿಪ್ರಾಯೇಣ ಭವಿತೃವಿಷಯತಾವಗಮಾತ್'' ಎಂದು. ಆಕ್ಷೇಪ ಹೀಗಿದೆ - 'ಭೂಮಾ' ಎಂಬ ಶಬ್ದವು ಧರ್ಮವಾಚಕವಾಗಿದೆ. ಆದರೆ ವಾಯು ಹಾಗೂ ವಿಷ್ಣುವನ್ನು ಪ್ರತಿಪಾದಿಸುತ್ತದೆನ್ನುವ ಮೂಲಕ ಧರ್ಮಿವಾಚಕವೆಂದು ನೀವು ಹೇಳುತ್ತಿದ್ದೀರಿ. ಇದು ಹೇಗೆ ಸರಿ? ಮತ್ತು ವಾಯುವಿಷಯದಲ್ಲಿರುವ ಉಪಕ್ರಮಪ್ರಮಾಣದಲ್ಲಾಗಲೀ ವಿಷ್ಣುವಿಷಯಕವಾದ ಸಮಾಖ್ಯಾ-ಪ್ರಮಾಣದಲ್ಲಾಗಲೀ 'ಭೂಯಾನ್'' ಎಂಬ ಶಬ್ದವಿದೆ ಹೊರತು, 'ಭೂಮ' ಎಂಬ ಶಬ್ದವಿಲ್ಲ. ಹೀಗಿರುವಾಗ 'ಭೂಯಾನ್'' ಎಂಬ ಶಬ್ದ ಹಾಗೂ 'ಭೂಮಾ' ಎಂಬ ಶಬ್ದಗಳು ಸಮಾನಾರ್ಥಕವೆಂದು ಹೇಗೆ ಹೇಳುತ್ತೀರಿ? ಮತ್ತು ಲಿಂಗಾತ್ಮಕವಾದ ಭೂಮಶಬ್ದವನ್ನು ನಾಮಾತ್ಮಕವೆಂದು ಹೇಗೆ ಹೇಳುತ್ತೀರಿ? ಹೀಗೆ ಮೂರು ಆಕ್ಷೇಪಗಳು ಬರುತ್ತವೆ.

ಇದಕ್ಕೆ ಹೀಗೆ ಉತ್ತರ - 'ಯೋ ವೈ ಭೂಮಾ ತತ್ಸುಖಮ್' ಎಂದು ಮುಂದಿನ ವಾಕ್ಯವನ್ನು ಆಲೋಚನೆ ಮಾಡಿದಾಗ ಧರ್ಮ ಹಾಗೂ ಧರ್ಮಿಗಳಿಗೆ ಅಭೇದವಿದೆಯೆಂದು ತಿಳಿಯುತ್ತದೆ. ಧರ್ಮಿಯನ್ನು ಅರ್ಥವೆಂದು ಹೇಳುವುದರಿಂದ ಧರ್ಮವೆಂಬರ್ಥವನ್ನೂ ಸಹ ಹೇಳಿದಂತೆ ಆಗುತ್ತದೆ. ಇತ್ಯಾದಿ ಗ್ರಂಥದಿಂದ ಆಕ್ಷೇಪ ಮಾಡಿ ಉತ್ತರಿಸಿದ್ದಾರೆ.

**प्रकाशः – तद्विवरीतुकामस्तदाक्षेपसमाधानयोरन्यत्रप्रसिद्धत्वशङ्कान्युदासोऽपि फलमिति भावेनाऽक्षेपमनूद्य समाधिं च प्रपञ्चयति – अत्र यद्यपीत्यादिना स्वतोऽन्यत्रप्रसिद्धतेत्यन्तेन ॥**

ತತ್ವಪ್ರಕಾಶಿಕಾಟೀಕೆಯನ್ನು ಹಾಗೂ ನ್ಯಾಯವಿವರಣಟೀಕೆಯನ್ನು ವಿವರಿಸಲು ಹೊರಟಿದ್ದಾರೆ. ವಿವರಣೆಯ ಅಭಿಪ್ರಾಯದಿಂದ ಆಕ್ಷೇಪ ಹಾಗೂ ಸಮಾಧಾನಗಳಿಗೆ 'ಭೂಮಾ' ಎಂಬ ಶಬ್ದವು ಅನ್ಯತ್ರಪ್ರಸಿದ್ಧವಾಗುತ್ತದಲ್ಲವೇ? ಎಂಬ ಶಂಕೆಯ ಪರಿಹಾರವೂ ಸಹ ಮತ್ತೊಂದು ಬಗೆಯ ಪ್ರಯೋಜನವಾಗಿದೆಯೆಂಬ ಅಭಿಪ್ರಾಯದಿಂದ ಆಕ್ಷೇಪವನ್ನು ಅನುವಾದ ಮಾಡಿ ಸಮಾಧಾನವನ್ನು ವಿವರಿಸುತ್ತಿದ್ದಾರೆ 'ಅತ್ರ ಯದ್ಯಪಿ' ಇತ್ಯಾದಿ ಗ್ರಂಥದಿಂದ ಪ್ರಾರಂಭಿಸಿ 'ಸ್ವತೋಽನ್ಯತ್ರಪ್ರಸಿದ್ಧತಾ' ಎಂಬ ಗ್ರಂಥದ ತನಕ.

**प्रकाशः –** बहुशब्दात् ''पृथ्वादिभ्य इमनिज्वा'' इति सूत्रेण भावे इमनिच्प्रत्यये सति 'बहोः' इति सूत्रेण बहोः परस्येमनिच्प्रत्ययस्यादेरिकारस्य लोपो बहुशब्दस्य 'भू' इत्यादेशश्चेति विधानाद्भूमेति रूपमिति भावः ।

'ಭೂಮಾ' ಎಂಬ ಶಬ್ದದ ನಿಷ್ಪತ್ತಿಯನ್ನು ಹೀಗೆ ತಿಳಿಯಬೇಕು. 'ಪೃಥ್ವಾದಿಭ್ಯ ಇಮನಿಜ್ವಾ' ಎಂಬ ಸೂತ್ರವು ಪೃಥಿವೀ ಮೊದಲಾದ ಶಬ್ದಗಳಿಗೆ ವಿಕಲ್ಪವಾಗಿ 'ಇಮನಿಚ್' ಪ್ರತ್ಯಯವನ್ನು ವಿಧಿಸುತ್ತಿದೆ. ಪೃಥಿವೀ ಮೊದಲಾದವುಗಳ ಮಧ್ಯದಲ್ಲಿ 'ಭೂ' ಶಬ್ದವೂ ಸಹ ಸೇರಿದೆ. ಆದ್ದರಿಂದ ಭಾವಾರ್ಥದಲ್ಲಿ ಬಹುಶಬ್ದಕ್ಕೆ 'ಇಮನಿಚ್' ಪ್ರತ್ಯಯವು ಬರುತ್ತದೆ. ಅನಂತರ 'ಇಮನಿಚ್' ಎಂಬಲ್ಲಿರುವ ಚಕಾರ, ಇಕಾರ ಇವುಗಳಿಗೆ 'ಇತ್' ಸಂಜ್ಞೆಯು ಬಂದು ಅವು ಲೋಪವಾದರೆ 'ಬಹು ಇಮನ್' ಎಂದಾಗುತ್ತದೆ. 'ಬಹೋಃ' ಎಂಬ ಸೂತ್ರದಿಂದ ಬಹು ಶಬ್ದದ ಮುಂದಿರುವ 'ಇಮನಿಚ್' ಪ್ರತ್ಯಯದ ಮೊದಲಿನ ಇಕಾರಕ್ಕೆ ಲೋಪ ಬರುತ್ತದೆ. ಮತ್ತು ಬಹು ಶಬ್ದಕ್ಕೆ 'ಭೂ' ಎಂಬ ಆದೇಶವೂ ಸಹ ಬರುತ್ತದೆ. ಆವಾಗ 'ಭೂಮನ್' ಎಂಬ ಪ್ರಾತಿಪದಿಕವು ನಿಷ್ಪನ್ನವಾಗುತ್ತದೆ. ಪ್ರಥಮಾ ವಿಭಕ್ತಿ ಏಕವಚನದಲ್ಲಿ 'ಭೂಮಾ' ಎಂಬ ರೂಪವು ಸಿದ್ಧವಾಗುತ್ತದೆಂದು ತಿಳಿಯಬೇಕು.

**प्रकाशः – अन्यत्र** सेनावनादौ । गुहानयन्यायेन भगवत्यप्यस्ति प्रसिद्धिरित्यतो 'लोकतः' इत्युक्तम् । यथा प्राचीनवैश्वानरनाम्नो लोकतोऽन्यत्रप्रसिद्धिस्तथेति भावः ।

ಹೀಗೆ ವ್ಯಾಕರಣದಿಂದ ನಿಷ್ಪನ್ನವಾದ 'ಭೂಮಾ' ಎಂಬ ಶಬ್ದವು ಬಹುತ್ವಸಂಖ್ಯಾರ್ಥದಲ್ಲಿ ಲೋಕತಃ ಅನ್ಯತ್ರಪ್ರಸಿದ್ಧವಾಗಿದೆ. ಅಂದರೆ ಸೇನಾ, ರೇನ, ವನ ಮೊದಲಾದವೆಡೆ 'ಭೂಮಾ' ಎಂಬ ಶಬ್ದವನ್ನು ಅನೇಕತ್ವ ಸಂಖ್ಯೆಯುಳ್ಳದ್ದೆಂಬರ್ಥದಲ್ಲಿ ಪ್ರಯೋಗಿಸುತ್ತೇವೆ.

ಗುಹಾಧಿಕರಣದ ನ್ಯಾಯದಂತೆ 'ಭೂಮಾ' ಎಂಬ ಶಬ್ದದ ಪ್ರಸಿದ್ಧಿಯನ್ನು ಭಗವಂತನಲ್ಲಿಯೂ ಹೇಳಬಹುದು. ಅದಕ್ಕೋಸ್ಕರ 'ಲೋಕತಃ' ಎಂಬ ಪದವನ್ನು ಹೇಳಿದ್ದಾರೆ. ಯಾವರೀತಿಯಾಗಿ ವೈಶ್ವಾನರಾಧಿಕರಣದಲ್ಲಿ ಸಮನ್ವಯ ಮಾಡಲ್ಪಟ್ಟ 'ವೈಶ್ವಾನರ' ಎಂಬ ನಾಮಾತ್ಮಕ ಶಬ್ದವು ಭಗವಂತನಲ್ಲಿ ಪ್ರಸಿದ್ಧವಾಗಿದ್ದರೂ ಲೋಕತಃಅನ್ಯತ್ರಪ್ರಸಿದ್ಧವಾಗಿದೆಯೆಂದು ವಿವಕ್ಷಿಸಲಾಗಿತ್ತೋ ಅದರಂತೆ 'ಭೂಮಾ' ಎಂಬ ಶಬ್ದವೂ ಸಹ ಲೋಕತಃ ಅನ್ಯತ್ರಪ್ರಸಿದ್ಧವಾಗಿದೆಯೆಂದು ತಿಳಿಯಬೇಕು.

**ಪ್ರಕಾಶಃ** – भूमशब्दस्य पूर्णपर्यायस्य धर्मिपरस्यैवात्र ग्रहणं न पुनर्भावार्थकस्य सङ्ख्यावाचिन इति भावेन तत्र प्रयोगोपपत्ती दर्शयति – **तथाऽपीत्यादिना ।।**

'ಭೂಮಾ' ಎಂಬ ಶಬ್ದವು ಪೂರ್ಣ ಎಂಬರ್ಥದಲ್ಲಿ ಧರ್ಮಿಪರವಾಗಿಯೇ ಇದೆ. ಧರ್ಮಿಪರವಾದ 'ಭೂಮಾ' ಎಂಬ ಶಬ್ದವನ್ನೇ ಸೂತ್ರಕಾರರು ಇಲ್ಲಿ ಸ್ವೀಕರಿಸಿದ್ದಾರೆ ಹೊರತು, ಭಾವಾರ್ಥದಲ್ಲಿರುವ ಸಂಖ್ಯಾವಾಚಿಯಾದ 'ಭೂಮಾ' ಎಂಬ ಶಬ್ದವನ್ನು ಸ್ವೀಕರಿಸಿಲ್ಲ. ಧರ್ಮಿಪರವಾದ 'ಭೂಮಾ' ಎಂಬ ಶಬ್ದವನ್ನು ಸ್ವೀಕರಿಸಿದ್ದಾರೆಂದು ತಿಳಿಯಬೇಕಾದರೆ ಮೊದಲು ಧರ್ಮ್ಯರ್ಥದಲ್ಲಿ ಅದರ ಪ್ರಯೋಗವನ್ನು ಹಾಗೂ ಅದು ಹೇಗೆ ಉಪಪನ್ನವಾಗುತ್ತದೆಂಬುದನ್ನು ತಿಳಿಯಬೇಕು. ಅದನ್ನು 'ತಥಾऽಪಿ' ಇತ್ಯಾದಿ ಗ್ರಂಥದಿಂದ ಸ್ಪಷ್ಟಪಡಿಸುತ್ತಿದ್ದಾರೆ.

**ಪ್ರಕಾಶಃ** – **'भूमशब्दस्य विपुलरूपधर्मिपरतैव'** इत्यन्वयः । तत्र हेतुः **'बहुशब्दस्य वैपुल्यार्थत्वात्'** इति । **'धर्मिणि प्रयोगात्'** इत्यादिश्च । वैपुल्यार्थत्वे हेतुः **वैपुल्येऽपि प्रयोगात्** इत्यादि । **'इत्यादौ'** इत्यादिपदेन **''बहवः पुरुषा ब्रह्मन्नुताहो एक एव तु''** इत्यादिग्रहः ।

'ತಥಾऽಪಿ' ಎಂಬ ಶಬ್ದಕ್ಕೆ 'ಭೂಮಶಬ್ದಸ್ಯ ವಿಪುಲರೂಪಧರ್ಮಿಪರತೈವ' ಎಂಬಲ್ಲಿ ಅನ್ವಯ ಮಾಡಬೇಕು. ಈ ವಿಷಯದಲ್ಲಿ 'ಬಹುಶಬ್ದಸ್ಯ ವೈಪುಲ್ಯಾರ್ಥತ್ವಾತ್' ಎಂಬುದರಿಂದ ಕಾರಣವನ್ನು ನೀಡಿದ್ದಾರೆ. ಅಂದರೆ 'ಬಹು' ಎಂಬ ಶಬ್ದವು ಸಂಖ್ಯಾರ್ಥದಲ್ಲಿ ಹೇಗೆ ಪ್ರಸಿದ್ಧವಾಗಿದೆಯೋ ಅದರಂತೆ 'ವಿಪುಲ' ಎಂಬರ್ಥದಲ್ಲಿಯೂ ಸಹ ಪ್ರಸಿದ್ಧವಾಗಿದೆ. ಇದರಂತೆ 'ಧರ್ಮಿಣಿ ಪ್ರಯೋಗಾತ್' ಎಂದೂ ಕಾರಣವನ್ನು ಕೊಟ್ಟಿದ್ದಾರೆ. ಧರ್ಮಿಯಲ್ಲಿ 'ಬಹು' ಎಂಬ ಶಬ್ದವನ್ನು ಪ್ರಯೋಗ ಮಾಡುವುದರಿಂದ. ಹೀಗೆ 'ವೈಪುಲ್ಯ' ಎಂಬರ್ಥವನ್ನು ಹೇಳಬಹುದೆನ್ನಲು 'ವೈಪುಲ್ಯೇऽಪಿ ಪ್ರಯೋಗಾತ್' ಎಂದು ಕಾರಣವನ್ನು ಹೇಳಿರುತ್ತಾರೆ. 'ಇತ್ಯಾದಿ' ಎಂಬ ಆದಿಪದದಿಂದ 'ಬಹವಃ ಪುರುಷಾ ಬ್ರಹ್ಮನ್ನುತಾಹೋ ಏಕ ಏವ ತು'' ಇತ್ಯಾದಿ ದೃಷ್ಟಾಂತಗಳನ್ನು ತಿಳಿಯಬೇಕು. ಜನಮೇಜಯರು ವೈಶಂಪಾಯನರನ್ನು ಕುರಿತು, ಪುರುಷರು ಅನೇಕರೋ? ಅಥವಾ ಒಬ್ಬನೋ? ಎಂದು ಪ್ರಶ್ನಿಸುತ್ತಾರೆ. ಇಲ್ಲಿರುವ 'ಬಹು' ಶಬ್ದವು ಸಂಖ್ಯಾರ್ಥದಲ್ಲಿ

ಪ್ರಸಿದ್ಧವಾಗಿದೆ. ಯಾವರೀತಿಯಾಗಿ ಸಂಖ್ಯಾರ್ಥದಲ್ಲಿ 'ಬಹು' ಎಂಬ ಅರ್ಥವು ಪ್ರಸಿದ್ಧವಾಗಿದೆಯೋ, ಅದರಂತೆ 'ವಿಪುಲ' ಎಂಬರ್ಥದಲ್ಲಿಯೂ ಸಹ ಪ್ರಸಿದ್ಧವಾಗಿದೆಯೆಂದು ಗ್ರಂಥದ ಅಭಿಪ್ರಾಯ.

**प्रकाशः – वैपुल्येऽपीति ।।** उक्तञ्च ''बहुगणवतुडति सङ्ख्या'' इत्यत्र वृत्त्यादौ ''बहु ओदनम् इति वैपुल्यार्थकोऽप्यस्ति'' इति । उपपत्तिमाह – **अत्रैव चेति ।।**

'ಬಹುಗಣವತುಡತಿ ಸಂಖ್ಯಾ' ಎಂಬ ವಾಕ್ಯದ ಕಾಶಿಕಾವೃತ್ತಿಯಲ್ಲಿ 'ಬಹು ಓದನಮ್ ಇತಿ ವೈಪುಲ್ಯಾರ್ಥಕೋऽಪ್ಯಸ್ತಿ' 'ಬಹು' ಎಂಬ ಶಬ್ದವು ವಿಪುಲ ಎಂಬರ್ಥವನ್ನೂ ಸಹ ಹೊಂದಿರುತ್ತದೆ' ಎಂದು ಹೇಳಲಾಗಿದೆ. ಹೀಗೆ ಅನೇಕ ಕಡೆ ಪ್ರಯೋಗಗಳಿರುವುದರಿಂದ ಧರ್ಮಿಪರವಾಗಿದೆಯೆಂದು ತಿಳಿಯುತ್ತದೆ. ಮತ್ತು ಉಪಪತ್ತಿಯೂ ಸಹ ಈ ವಿಷಯದಲ್ಲಿದೆಯೆಂಬುದಾಗಿ 'ಅತ್ರೈವ ಚ' ಇತ್ಯಾದಿ ಗ್ರಂಥದಿಂದ ಪ್ರತಿಪಾದಿಸುತ್ತಿದ್ದಾರೆ.

**प्रकाशः** – उपपत्त्यन्तरमाह – **नामादिभ्य इति ।।** पूर्वपक्षेऽपीत्युभयसाधारण्य-कथनाय । एवमग्रेऽपि । वैपुल्यार्थत्वं भूमशब्दस्य समर्थ्य वैपुल्ययुक्तधर्मिपरत्वं साधयति – **इहैव चेति ।।**

'ಭೂಮಾ' ಎಂಬ ಶಬ್ದವು ವೈಪುಲ್ಯಾರ್ಥಕವೇ ಆಗಿದೆಯೆನ್ನಲು ಮತ್ತೊಂದು ಉಪಪತ್ತಿಯನ್ನು 'ನಾಮಾದಿಭ್ಯಃ' ಇತ್ಯಾದಿ ವಾಕ್ಯದಿಂದ ಸಮರ್ಥಿಸುತ್ತಿದ್ದಾರೆ. 'ಪೂರ್ವಪಕ್ಷೇऽಪಿ' ಎಂದು ಹೇಳಿದ್ದರಿಂದ 'ಭೂಮಾ' ಎಂಬ ಶಬ್ದವು ಪ್ರಾಣ ಹಾಗೂ ವಿಷ್ಣು ಇಬ್ಬರಲ್ಲಿಯೂ ಸಾಧಾರಣವಾಗಿದೆಯೆಂದು ತಿಳಿಸಿದಂತಾಯಿತು. ಹೀಗೆ ಮುಂದೆಯೂ ತಿಳಿಯಬೇಕು. ಇಲ್ಲಿಯ ತನಕ 'ಭೂಮಾ' ಎಂಬ ಶಬ್ದಕ್ಕೆ ವೈಪುಲ್ಯ ಎಂಬರ್ಥವನ್ನು ಸಮರ್ಥಿಸಿ, 'ವೈಪುಲ್ಯ' ಎಂಬ ಧರ್ಮದಿಂದ ಕೂಡಿರುವ ಧರ್ಮಿಪರವಾಗಿಯೂ ಆಗಿದೆಯೆಂದು 'ಇಹೈವ ಚ' ಇತ್ಯಾದಿ ವಾಕ್ಯದಿಂದ ಸಾಧಿಸುತ್ತಿದ್ದಾರೆ.

**प्रकाशः – टीकाऽनुव्याख्यानयोश्चेति ।।** टीकायां स्पष्टम् । अनुव्याख्याने तु ''लिङ्गं साधारणं शब्दौ'' इति शब्दपदेन नामत्वोक्तिरिति भावः ।

'ಟೀಕಾऽನುವ್ಯಾಖ್ಯಾನಯೋಶ್ಚ' ಎಂಬುದರ ಅಭಿಪ್ರಾಯ ಹೀಗಿದೆ - ಟೀಕೆಯಲ್ಲಿ 'ಭೂಮನಾಮ್ನಃ' ಎಂದು ಹೇಳಿದ್ದರಿಂದ ಧರ್ಮಿವಾಚಕವೆಂದು ಸ್ಪಷ್ಟವಾಗಿ ತಿಳಿಯುತ್ತದೆ. ಅನುವ್ಯಾಖ್ಯಾನದಲ್ಲಾದರೂ 'ಲಿಂಗಂ ಸಾಧಾರಣಂ ಶಬ್ದೌ' ಎಂಬಲ್ಲಿ 'ಶಬ್ದ' ಎಂಬ ಪದದಿಂದ ನಾಮಾತ್ಮಕವೆಂದು ತಿಳಿಸಿದ್ದಾರೆಂದು ತಿಳಿಯಬೇಕು. ಮೊದಲು ಲಿಂಗವೆಂದು ಹೇಳಿ, ಅನಂತರ 'ಶಬ್ದೌ' ಎಂಬುದಾಗಿ ಹೇಳಿದ್ದರಿಂದ ಭೂಮಾಧಿಕರಣದಲ್ಲಿ ಹಾಗೂ ಅಕ್ಷರಾಧಿಕರಣದಲ್ಲಿ ನಾಮಾತ್ಮಕ ಶಬ್ದದ ಸಮನ್ವಯವನ್ನು ಮಾಡುತ್ತಿದ್ದಾರೆಂದು ಇದರ ಅರ್ಥ.

**प्रकाशः – रूढेरिति ।।** तथा चाव्युत्पन्न एवायमखण्डश्शब्द इत्युक्तं भवति । पाणिनीयव्युत्पादनस्य तर्हि का गतिरित्यत आह – **व्याकरणस्य चेति ।।**

'ರೂಢೇಃ' ಎಂದು ಹೇಳಿದ್ದರಿಂದ 'ಭೂಮಾ' ಎಂಬ ಶಬ್ದವು ಅಖಂಡ ಶಬ್ದವಾಗಿದೆಯೆಂದು ತಿಳಿಯಬೇಕು. ಅಂದರೆ ಇದರ ವ್ಯುತ್ಪತ್ತಿಯನ್ನು ತೋರಿಸಬೇಕಾಗಿಲ್ಲ. ಹಾಗಾದರೆ ಪಾಣಿನೀಯ ವ್ಯಾಕರಣದಲ್ಲಿ 'ಭೂಮಾ' ಎಂಬ ಶಬ್ದದ ವ್ಯುತ್ಪತ್ತಿಯನ್ನು ತೋರಿಸಿದ್ದಾರಲ್ಲ, ಇದಕ್ಕೇನು ಗತಿ? ಎಂಬ ಪ್ರಶ್ನೆಗೆ 'ವ್ಯಾಕರಣಸ್ಯ ಚ' ಎಂಬುದರಿಂದ ಉತ್ತರಿಸುತ್ತಿದ್ದಾರೆ.

'यत्रार्थस्य विसंवादः प्रत्यक्षेणोपलभ्यते ।
स्वरसंस्कारमात्रार्था तत्र व्याकरणस्मृतिः ।।'

इत्युक्तेः स्वरसंस्कारमात्रार्थत्वाच्चेत्यपि ध्येयम् ।

ಪ್ರತ್ಯಕ್ಷದಿಂದ ಅರ್ಥಕ್ಕೆ ಎಲ್ಲಿ ವಿಸಂವಾದ ಬಂದಿರುತ್ತದೋ, ಅಲ್ಲಿ ಉದಾತ್ತಾದಿಸ್ವರಸಂಸ್ಕಾರಕ್ಕೋಸ್ಕರವಷ್ಟೇ ವ್ಯಾಕರಣವು ಉಪಯುಕ್ತವಾಗುತ್ತದೆ.

ಈ ಮಾತಿನಂತೆ ಸ್ವರಸಂಸ್ಕಾರ ಸಿದ್ಧಿಗಾಗಿ ಮಾತ್ರ ವ್ಯಾಕರಣದಲ್ಲಿ 'ಭೂಮಾ' ಎಂಬ ಶಬ್ದವನ್ನು ನಿಷ್ಪನ್ನ ಮಾಡಿದ್ದಾರೆ. ಅಥವಾ ಶಬ್ದಸಾಧುತ್ವಕ್ಕೋಸ್ಕರವೂ ಹಾಗೇ ವ್ಯುತ್ಪತ್ತಿ ತೋರಿಸಿದ್ದಾರೆಂದು ಉತ್ತರಿಸಬಹುದು.

**प्रकाशः** – अत एव ''स एषोऽणिमा'' ''धातुः प्रसादान्महिमानमीशम्'' इत्यादिश्रुतिषु ''स चाह भूमा परमेष्ठिनं प्रभुर्बद्धाञ्जलिं सस्मितपूर्वया गिरा'' इत्यादिस्मृतिषु च प्रयोगो धर्मिणि बहुलमुपलभ्यते ।

ಆದ್ದರಿಂದಲೇ 'ಸ ಏಷೋऽಣಿಮಾ' 'ಧಾತುಃ ಪ್ರಸಾದಾನ್ಮಹಿಮಾನಮೀಶಮ್' ಇತ್ಯಾದಿ ಶ್ರುತಿಗಳಲ್ಲಿ 'ಇಮನಿಚ್' ಪ್ರತ್ಯಯಾಂತವಾದ ಅಣಿಮಾ, ಮಹಿಮಾನ ಮೊದಲಾದ ಶಬ್ದಗಳನ್ನು ಧರ್ಮ್ಯರ್ಥದಲ್ಲಿಯೇ ಪ್ರಯೋಗಿಸಲಾಗಿದೆ. ಮತ್ತು ''ಸ ಚಾಹ ಭೂಮಾ ಪರಮೇಷ್ಠಿನಂ ಪ್ರಭುರ್ಬದ್ಧಾಂಜಲಿಂ ಸಸ್ಮಿತಪೂರ್ವಯಾ ಗಿರಾ' ಎಂಬಲ್ಲಿಯೂ 'ಭೂಮಾ' ಎಂಬ ಶಬ್ದವನ್ನು ಧರ್ಮ್ಯರ್ಥದಲ್ಲಿ ಸ್ಮೃತಿಯೂ ಸಹ ಪ್ರಯೋಗಿಸಿದೆ.

**प्रकाशः** – क्वचित्तु ''तत्सिद्धिजातिसारूप्यप्रशंसाभूम'' इति जैमिनीये ''अध्यात्मसम्बन्धभूमा'' इत्यत्र च धर्मेऽपि प्रयोगात्तदर्थत्वाच्च व्याकरणस्येत्यपि ध्येयम् ।

ಅಥವಾ ಕೆಲವೆಡೆ 'ತತ್‌ಸಿದ್ಧಿಜಾತಿಸಾರೂಪ್ಯಪ್ರಶಂಸಾಭೂಮ' ಇತ್ಯಾದಿಯಾದ ಜೈಮಿನಿ ಸೂತ್ರದಲ್ಲಿ ಮತ್ತು 'ಅಧ್ಯಾತ್ಮಸಂಬಂಧಭೂಮಾ' ಎಂಬ ಬ್ರಹ್ಮಸೂತ್ರದಲ್ಲಿ 'ಭೂಮಾ' ಎಂಬ ಶಬ್ದವನ್ನು ಧರ್ಮಾರ್ಥದಲ್ಲಿಯೂ ಸಹ ಪ್ರಯೋಗಿಸಲಾಗಿದೆ. ಧರ್ಮಾರ್ಥಕವಾದ ಇಂತಹ 'ಭೂಮಾ' ಎಂಬ ಶಬ್ದವನ್ನಷ್ಟೇ ನಿಷ್ಪನ್ನ ಮಾಡುವುದಕ್ಕಾಗಿ ವ್ಯಾಕರಣವು ಹೊರಟಿರುತ್ತದೆ ಎಂದು ತಿಳಿಯಬೇಕು.

ಭೂಮಾಧಿಕರಣ (೧-೩-೨)

**प्रकाशः** – **स्वत इति** ।। श्रुतिलिङ्गसाहित्यं विनेत्यर्थः । प्रकारान्तरेण जातामन्यत्रप्रसिद्धत्वशङ्कां ''प्राणो वा आशाया भूयान्'' इत्युक्तप्राणशब्दस्य ''अत एव प्राणच'' इत्युक्तरीत्या विष्णुपरत्वात्'' इत्यादिटीकासूचितपरिहारेण निराह – **नापीति** ।।

ಇಲ್ಲಿಯ ತನಕ ಒಂದು ಪ್ರಕಾರದಲ್ಲಿ ಸಿದ್ಧವಾದ ಅನ್ಯತ್ರಪ್ರಸಿದ್ಧತ್ವ ಶಂಕೆಯನ್ನು ನಿರಾಕರಿಸಿದರು. ಈಗ ಮತ್ತೊಂದು ಪ್ರಕಾರದಿಂದ ಅನ್ಯತ್ರಪ್ರಸಿದ್ಧತ್ವಶಂಕೆಯನ್ನು 'ಪ್ರಾಣೋ ವಾ ಆಶಾಯಾ ಭೂಯಾನ್' ಇತ್ಯುಕ್ತಪ್ರಾಣಶಬ್ದಸ್ಯ ''ಅತ ಏವ ಪ್ರಾಣಃ'' ಇತ್ಯುಕ್ತರೀತ್ಯಾ ವಿಷ್ಣುಪರತ್ವಾತ್' ಎಂದರೆ 'ಪ್ರಾಣೋ ವಾ ಆಶಾಯಾ ಭೂಯಾನ್' ಎಂಬಲ್ಲಿ ಹೇಳಲ್ಪಟ್ಟ ಪ್ರಾಣಶಬ್ದಕ್ಕೆ 'ಅತ ಏವ ಪ್ರಾಣಃ' ಎಂಬ ಸೂತ್ರದಲ್ಲಿ ಹೇಳಿದಂತೆ ವಿಷ್ಣುಪರತ್ವವಿರುವುದರಿಂದ' ಇತ್ಯಾದಿ ಟೀಕೆಯಿಂದ ಸೂಚಿತವಾದ ಪರಿಹಾರದಿಂದ ನಿರಾಕರಿಸುತ್ತಿದ್ದಾರೆ. 'ನಾಪಿ' ಇತ್ಯಾದಿ ವಾಕ್ಯದಿಂದ.

**प्रकाशः** – यथाऽऽदित्यश्रुतिसाहित्यात्सर्वगतत्वस्यान्यत्रप्रसिद्धत्वं तथेह न शङ्क्यम् । तत्रादित्यश्रुतेरन्तर्नये साक्षादश्रवणेन लोकतोऽन्यत्रप्रसिद्ध्याश्रयेण वा संवत्सरसारत्वादिलिङ्गवशेनादित्यश्रुतेरन्यत्रप्रसिद्धत्वेन वा तत्साहित्येनान्यत्रप्रसिद्धेस्सर्वगतत्वस्योक्तावपि नेह तथेति भावेनोक्तं – **ब्रह्मपरतामुपेत्येति** ।

ಸರ್ವಗತತ್ವಾದಿಗಳಂತೆ 'ಭೂಮಾ' ಎಂಬ ಶಬ್ದವೂ ಸಹ ಅನ್ಯತ್ರಪ್ರಸಿದ್ಧವಾಗುತ್ತದೆಂದು ಶಂಕಿಸಬಾರದು. ಏಕೆಂದರೆ ಅಲ್ಲಿ ಆದಿತ್ಯಶ್ರುತಿಯ ಸಾಹಿತ್ಯದಿಂದ ಸರ್ವಗತತ್ವವು ಅನ್ಯತ್ರಪ್ರಸಿದ್ಧವಾಗಿತ್ತು. ಆದರೆ ಇಲ್ಲಿ ಅಂತಹ ಶ್ರುತಿಗಳು ಇರುವುದಿಲ್ಲ. ಆದಿತ್ಯಶ್ರುತಿಯು ಅಂತರಧಿಕರಣದ ನ್ಯಾಯದಲ್ಲಿ ನೇರವಾಗಿ ಕೇಳಿಸದ ಕಾರಣ ಲೋಕತಃ ಅನ್ಯತ್ರಪ್ರಸಿದ್ಧಿಯನ್ನು ಆಶ್ರಯಿಸಿ ಆ ಕಾರಣದಿಂದ ಆದಿತ್ಯಶ್ರುತಿಯು ಅನ್ಯತ್ರಪ್ರಸಿದ್ಧವಾಗುತ್ತದೆ ಎಂದು ಹೇಳಬಹುದು. ಅಥವಾ ಸಂವತ್ಸರಸಾರತ್ವವೇ ಮೊದಲಾದ ಲಿಂಗಗಳ ಬಲದಿಂದ ಆದಿತ್ಯಶ್ರುತಿಯು ಅನ್ಯತ್ರಪ್ರಸಿದ್ಧವಾಗಿತ್ತು. ಅದರ ಸಾಹಿತ್ಯದಿಂದ ಸರ್ವಗತತ್ವಕ್ಕೆ ಅನ್ಯತ್ರಪ್ರಸಿದ್ಧತ್ವವನ್ನು ವಿವಕ್ಷಿಸಿದ್ದು ತಪ್ಪಾಗುವುದಿಲ್ಲ. ಆದರೆ ಪ್ರಕೃತ ಅಂತಹ ಅನ್ಯತ್ರಪ್ರಸಿದ್ಧವಾದ ಯಾವುದೇ ಶ್ರುತಿಗಳಿಲ್ಲದ ಕಾರಣ 'ಭೂಮಾ' ಎಂಬ ಶಬ್ದವನ್ನು ಅನ್ಯತ್ರಪ್ರಸಿದ್ಧವೆಂದು ವಿವಕ್ಷಿಸಲು ಸಾಧ್ಯವಿಲ್ಲ.

**प्रकाशः** – **पूर्ववदिति** ।। समाख्याश्रुतितौल्याभावस्यान्यत्रप्रसिद्धलक्षणानुप्रवेशादत्र च तत्तौल्यस्यैव वक्ष्यमाणदिशा सत्त्वेन वा स्वत एवान्यत्रप्रसिद्धत्वस्यान्यत्रप्रसिद्धलक्षणत्वादिह च तदभावस्योक्तत्वान्न लिङ्गसाहित्येन अन्तर्यामित्वमिवान्यत्रप्रसिद्धत्वं शङ्कनीयमिति निरसनीयमित्यर्थः ।

ಶರೀರತ್ವಾದಿ ಲಿಂಗಗಳ ಸಾಹಚರ್ಯದಿಂದ ಅಂತರ್ಯಾಮಿತ್ವವು ಹೇಗೆ ಅನ್ಯತ್ರಪ್ರಸಿದ್ಧವಾಗಿತ್ತೋ ಅದರಂತೆ ಉತ್ಕ್ರಮಣಾದಿ ಲಿಂಗಗಳ ಸಾಹಚರ್ಯದಿಂದ 'ಭೂಮಾ' ಎಂಬ ಶಬ್ದವು ಅನ್ಯತ್ರಪ್ರಸಿದ್ಧವಾಗಿದೆಯಲ್ಲವೇ? ಎಂದು ಪ್ರಶ್ನಿಸಬಾರದು. ಏಕೆಂದರೆ ಸಮಾಖ್ಯಾಶ್ರುತಿತೌಲ್ಯಾಭಾವವು

ಅನ್ಯತ್ರಪ್ರಸಿದ್ಧಶ್ರುತಿಲಕ್ಷಣದಲ್ಲಿ ಸೇರಿದೆ. ಪ್ರಕೃತ ಸಮಾಖ್ಯಾಶ್ರುತಿಯ ತೌಲ್ಯವೇ ಇಲ್ಲಿರುವುದರಿಂದ ಸಮಾಖ್ಯಾಶ್ರುತಿಯ ತೌಲ್ಯಾಭಾವವೆಂಬ ಅನ್ಯತ್ರಪ್ರಸಿದ್ಧದ ಲಕ್ಷಣವು ಬರುವುದಿಲ್ಲ. ಅಥವಾ ಸ್ವತಃ ಅನ್ಯತ್ರಪ್ರಸಿದ್ಧವಾದದ್ದನ್ನೇ ಅನ್ಯತ್ರಪ್ರಸಿದ್ಧದ ಲಕ್ಷಣ ಎಂದು ವಿವಕ್ಷಿಸಬೇಕೆಂದು ಹೇಳಲಾಗಿತ್ತು. ಪ್ರಕೃತ 'ಭೂಮಾ' ಎಂಬ ಶಬ್ದವು ಸ್ವಾಭಾವಿಕವಾಗಿ ಅನ್ಯತ್ರಪ್ರಸಿದ್ಧವಾಗಿರುವುದಿಲ್ಲ. ಆದ್ದರಿಂದ ಸ್ವತಃ ಏವ ಅನ್ಯತ್ರಪ್ರಸಿದ್ಧತ್ವವೆಂಬ ಮತ್ತೊಂದು ಬಗೆಯ ಅನ್ಯತ್ರಪ್ರಸಿದ್ಧಿಯ ಲಕ್ಷಣವೂ ಸಹ 'ಭೂಮಾ' ಎಂಬ ಶಬ್ದದಲ್ಲಿ ಬರುವುದಿಲ್ಲ. ಇದು 'ಪೂರ್ವವತ್' ಎಂಬ ವಾಕ್ಯದ ಅಭಿಪ್ರಾಯ.

**प्रकाशः** – ''प्राणो वा आशाया भूयान्'' इत्यादिटीकोक्तेर्विशेषविवक्षया मूलमाह – **उभयत्रेति** ।

'ಪ್ರಾಣೋ ವಾ ಆಶಾಯಾ ಭೂಯಾನ್' ಇತ್ಯಾದಿಯಾಗಿ 'ಭೂಮಾ' ಎಂಬ ಶಬ್ದವು ಪ್ರಾಣ ಹಾಗೂ ವಿಷ್ಣು ಇಬ್ಬರಲ್ಲಿಯೂ ಸಾಧಾರಣವಾಗಿದೆಯೆಂದು ಹೇಳಿದ್ದಾರೆ. ಟೀಕೆಯ ಈ ಮಾತಿಗೆ ನ್ಯಾಯವಿವರಣವೇ ಮೂಲವಾಗಿದೆಯೆಂದು ಗ್ರಂಥಕಾರರು ತೋರಿಸುತ್ತಾ ನ್ಯಾಯವಿವರಣದಲ್ಲಿರುವ ವಿಶೇಷಾರ್ಥವನ್ನೂ ಸಹ ಪ್ರಕಟಪಡಿಸುತ್ತಿದ್ದಾರೆ. 'ಉಭಯತ್ರ' ಇತ್ಯಾದಿ ಗ್ರಂಥದಿಂದ.

**प्रकाशः** – न्यायविवरणेऽत्र टीकायां च ''तस्माद्भूयान्नाम'' इत्यंशोक्तेरुपयोगम् ''आसन्नस्योपक्रमस्यानासन्नायाः समाख्यायाश्च कथं साधारण्यप्रतीतिहेतुत्वमिति च'' इति न्यायविवरणटीकास्थशङ्कातात्पर्याभिव्यक्तिपूर्वकमाह – **नन्वित्यादिना** ॥

ನ್ಯಾಯವಿವರಣದಲ್ಲಿ ಮತ್ತು ಪ್ರಕೃತ ಟೀಕೆಯಲ್ಲಿ 'ವಿಷ್ಣುರ್ವೈ ದೇವೇಭ್ಯೋ ಭೂಯಾನ್' ಎಂದಷ್ಟೇ ಹೇಳಿದ್ದರೆ ಸಾಕಾಗುತ್ತಿತ್ತು. 'ತಸ್ಮಾದ್ಭೂಯಾನ್ನಾಮ' ಎಂದೇಕೆ ಹೇಳಿದರು? ಎಂಬ ಪ್ರಶ್ನೆಗೆ ಪ್ರಯೋಜನವನ್ನು ಹೇಳುತ್ತಿದ್ದಾರೆ. ಅಭ್ಯಾಸ ಹಾಗೂ ಉಪಪತ್ತಿಗಳು ಸಮಾಖ್ಯಾಪ್ರಮಾಣದಲ್ಲಿ ಇರುತ್ತದೆಂದು ತಿಳಿಸುವುದಕ್ಕಾಗಿ 'ತಸ್ಮಾತ್' ಇತ್ಯಾದಿಯಾಗಿ ಹೇಳಿದ್ದಾರೆ. ಹೇಗೆಂಬುದನ್ನು 'ಆಸನ್ನಸ್ಯೋಪಕ್ರಮಸ್ಯಾನಾಸನ್ನಾಯಾಃ ಸಮಾಖ್ಯಾಯಾಶ್ಚ ಕಥಂ ಸಾಧಾರಣ್ಯಪ್ರತೀತಿಹೇತುತ್ವಮಿತಿ ಚ' ಇತ್ಯಾದಿ ನ್ಯಾಯವಿವರಣ ಟೀಕೆಯಲ್ಲಿ ಉಪಕ್ರಮವೇ ಒಂದು ಕಡೆ ಇದೆ. ಸಮಾಖ್ಯಾಪ್ರಮಾಣವೇ ಮತ್ತೊಂದು ಕಡೆಯಿದೆ. ಹೀಗೆ ಬೇರೆ ಬೇರೆ ಕಡೆ ಇರುವ ಉಪಕ್ರಮ ಹಾಗೂ ಸಮಾಖ್ಯಾಪ್ರಮಾಣಗಳಿಂದ ಸಾಧಾರಣ್ಯಪ್ರತೀತಿಯು ಹೇಗೆ ಬರುತ್ತದೆ? ಎಂಬ ನ್ಯಾಯವಿವರಣ ಟೀಕಾದಲ್ಲಿರುವ ಆಶಂಕೆಯ ತಾತ್ಪರ್ಯವನ್ನು ಸ್ಪಷ್ಟಪಡಿಸುವುದಕ್ಕಾಗಿ 'ನನು' ಇತ್ಯಾದಿ ಗ್ರಂಥವು ಹೊರಟಿದೆ.

**प्रकाशः** – **साभ्यासत्वादिति** ॥ 'भूयान्' इत्यस्य द्विःश्रवणात्तस्माद्देवेभ्यो भूयस्त्वादित्युपपत्त्युक्तेरिति भावः । अस्मिन्पक्षेऽज्ञानामित्येतन्नापेक्ष्यमेवेति वा पूर्वोत्तरपक्षनिर्णायकानभिज्ञानामित्यर्थकं वा नेयम् ।

**प्रकाशः – स्वत इति ।।** श्रुतिलिङ्गसाहित्यं विनेत्यर्थः । प्रकारान्तरेण जातामन्यत्रप्रसिद्धत्वशङ्कां ''प्राणो वा आशाया भूयान्'' इत्युक्तप्राणशब्दस्य ''अत एव प्राणश्च'' इत्युक्तरीत्या विष्णुपरत्वात्'' इत्यादिटीकासूचितपरिहारेण निराह – **नापीति ।।**

ಇಲ್ಲಿಯ ತನಕ ಒಂದು ಪ್ರಕಾರದಲ್ಲಿ ಸಿದ್ಧವಾದ ಅನ್ಯತ್ರಪ್ರಸಿದ್ಧತ್ವ ಶಂಕೆಯನ್ನು ನಿರಾಕರಿಸಿದರು. ಈಗ ಮತ್ತೊಂದು ಪ್ರಕಾರದಿಂದ ಅನ್ಯತ್ರಪ್ರಸಿದ್ಧತ್ವಶಂಕೆಯನ್ನು 'ಪ್ರಾಣೋ ವಾ ಆಶಾಯಾ ಭೂಯಾನ್' ಇತ್ಯುಕ್ತಪ್ರಾಣಶಬ್ದಸ್ಯ ''ಅತ ಏವ ಪ್ರಾಣಃ'' ಇತ್ಯುಕ್ತರೀತ್ಯಾ ವಿಷ್ಣುಪರತ್ವಾತ್' ಎಂದರೆ 'ಪ್ರಾಣೋ ವಾ ಆಶಾಯಾ ಭೂಯಾನ್' ಎಂಬಲ್ಲಿ ಹೇಳಲ್ಪಟ್ಟ ಪ್ರಾಣಶಬ್ದಕ್ಕೆ 'ಅತ ಏವ ಪ್ರಾಣಃ' ಎಂಬ ಸೂತ್ರದಲ್ಲಿ ಹೇಳಿದಂತೆ ವಿಷ್ಣುಪರತ್ವವಿರುವುದರಿಂದ' ಇತ್ಯಾದಿ ಟೀಕೆಯಿಂದ ಸೂಚಿತವಾದ ಪರಿಹಾರದಿಂದ ನಿರಾಕರಿಸುತ್ತಿದ್ದಾರೆ. 'ನಾಪಿ' ಇತ್ಯಾದಿ ವಾಕ್ಯದಿಂದ.

**प्रकाशः** – यथाऽऽदित्यश्रुतिसाहित्यात्सर्वगतत्वस्यान्यत्रप्रसिद्धत्वं तथेह न शङ्क्यम् । तत्रादित्यश्रुतेरन्तर्नये साक्षादश्रवणेन लोकतोऽन्यत्रप्रसिद्ध्याश्रयेण वा संवत्सरसारत्वादिलिङ्गवशेनादित्यश्रुतेरन्यत्रप्रसिद्धत्वेन वा तत्साहित्येनान्यत्रप्रसिद्धेस्सर्वगतत्वस्योक्तावपि नेह तथेति भावेनोक्तं – **ब्रह्मपरतामुपेत्येति ।**

ಸರ್ವಗತತ್ವಾದಿಗಳಂತೆ 'ಭೂಮಾ' ಎಂಬ ಶಬ್ದವೂ ಸಹ ಅನ್ಯತ್ರಪ್ರಸಿದ್ಧವಾಗುತ್ತದೆಂದು ಶಂಕಿಸಬಾರದು. ಏಕೆಂದರೆ ಅಲ್ಲಿ ಆದಿತ್ಯಶ್ರುತಿಯ ಸಾಹಿತ್ಯದಿಂದ ಸರ್ವಗತತ್ವವು ಅನ್ಯತ್ರಪ್ರಸಿದ್ಧವಾಗಿತ್ತು. ಆದರೆ ಇಲ್ಲಿ ಅಂತಹ ಶ್ರುತಿಗಳು ಇರುವುದಿಲ್ಲ. ಆದಿತ್ಯಶ್ರುತಿಯು ಅಂತರಧಿಕರಣದ ನ್ಯಾಯದಲ್ಲಿ ನೇರವಾಗಿ ಕೇಳಿಸದ ಕಾರಣ ಲೋಕತಃ ಅನ್ಯತ್ರಪ್ರಸಿದ್ಧಿಯನ್ನು ಆಶ್ರಯಿಸಿ ಆ ಕಾರಣದಿಂದ ಆದಿತ್ಯಶ್ರುತಿಯು ಅನ್ಯತ್ರಪ್ರಸಿದ್ಧವಾಗುತ್ತದೆ ಎಂದು ಹೇಳಬಹುದು. ಅಥವಾ ಸಂವತ್ಸರಸಾರತ್ವವೇ ಮೊದಲಾದ ಲಿಂಗಗಳ ಬಲದಿಂದ ಆದಿತ್ಯಶ್ರುತಿಯು ಅನ್ಯತ್ರಪ್ರಸಿದ್ಧವಾಗಿತ್ತು. ಅದರ ಸಾಹಿತ್ಯದಿಂದ ಸರ್ವಗತತ್ವಕ್ಕೆ ಅನ್ಯತ್ರಪ್ರಸಿದ್ಧತ್ವವನ್ನು ವಿವಕ್ಷಿಸಿದ್ದು ತಪ್ಪಾಗುವುದಿಲ್ಲ. ಆದರೆ ಪ್ರಕೃತ ಅಂತಹ ಅನ್ಯತ್ರಪ್ರಸಿದ್ಧವಾದ ಯಾವುದೇ ಶ್ರುತಿಗಳಿಲ್ಲದ ಕಾರಣ 'ಭೂಮಾ' ಎಂಬ ಶಬ್ದವನ್ನು ಅನ್ಯತ್ರಪ್ರಸಿದ್ಧವೆಂದು ವಿವಕ್ಷಿಸಲು ಸಾಧ್ಯವಿಲ್ಲ.

**प्रकाशः – पूर्ववदिति ।।** समाख्याश्रुतितौल्याभावस्यान्यत्रप्रसिद्धलक्षणानुप्रवेशादत्र च तत्तौल्यस्यैव वक्ष्यमाणदिशा सत्त्वेन वा स्वत एवान्यत्रप्रसिद्धत्वस्यान्यत्रप्रसिद्धलक्षणत्वादिह च तदभावस्योक्तत्वान्न लिङ्गसाहित्येन अन्तर्यामित्वमिवान्यत्रप्रसिद्धत्वं शङ्कनीयमिति निरसनीयमित्यर्थः ।

ಶರೀರತ್ವಾದಿ ಲಿಂಗಗಳ ಸಾಹಚರ್ಯದಿಂದ ಅಂತರ್ಯಾಮಿತ್ವವು ಹೇಗೆ ಅನ್ಯತ್ರಪ್ರಸಿದ್ಧವಾಗಿತ್ತೋ ಅದರಂತೆ ಉತ್ಕ್ರಮಣಾದಿ ಲಿಂಗಗಳ ಸಾಹಚರ್ಯದಿಂದ 'ಭೂಮಾ' ಎಂಬ ಶಬ್ದವು ಅನ್ಯತ್ರಪ್ರಸಿದ್ಧವಾಗಿದೆಯಲ್ಲವೇ? ಎಂದು ಪ್ರಶ್ನಿಸಬಾರದು. ಏಕೆಂದರೆ ಸಮಾಖ್ಯಾಶ್ರುತಿತೌಲ್ಯಾಭಾವವು

ಅನ್ಯತ್ರಪ್ರಸಿದ್ಧಶ್ರುತಿಲಕ್ಷಣದಲ್ಲಿ ಸೇರಿದೆ. ಪ್ರಕೃತ ಸಮಾಖ್ಯಾಶ್ರುತಿಯ ತೌಲ್ಯವೇ ಇಲ್ಲಿರುವುದರಿಂದ ಸಮಾಖ್ಯಾಶ್ರುತಿಯ ತೌಲ್ಯಾಭಾವವೆಂಬ ಅನ್ಯತ್ರಪ್ರಸಿದ್ಧದ ಲಕ್ಷಣವು ಬರುವುದಿಲ್ಲ. ಅಥವಾ ಸ್ವತಃ ಅನ್ಯತ್ರಪ್ರಸಿದ್ಧವಾದದ್ದನ್ನೇ ಅನ್ಯತ್ರಪ್ರಸಿದ್ಧದ ಲಕ್ಷಣ ಎಂದು ವಿವಕ್ಷಿಸಬೇಕೆಂದು ಹೇಳಲಾಗಿತ್ತು. ಪ್ರಕೃತ 'ಭೂಮಾ' ಎಂಬ ಶಬ್ದವು ಸ್ವಾಭಾವಿಕವಾಗಿ ಅನ್ಯತ್ರಪ್ರಸಿದ್ಧವಾಗಿರುವುದಿಲ್ಲ. ಆದ್ದರಿಂದ ಸ್ವತಃ ಏವ ಅನ್ಯತ್ರಪ್ರಸಿದ್ಧತ್ವವೆಂಬ ಮತ್ತೊಂದು ಬಗೆಯ ಅನ್ಯತ್ರಪ್ರಸಿದ್ಧಿಯ ಲಕ್ಷಣವೂ ಸಹ 'ಭೂಮಾ' ಎಂಬ ಶಬ್ದದಲ್ಲಿ ಬರುವುದಿಲ್ಲ. ಇದು 'ಪೂರ್ವವತ್' ಎಂಬ ವಾಕ್ಯದ ಅಭಿಪ್ರಾಯ.

**प्रकाशः** – ''प्राणो वा आशाया भूयान्'' इत्यादिटीकोक्तेर्विशेषविवक्षया मूलमाह – **उभयत्रेति ।**

'ಪ್ರಾಣೋ ವಾ ಆಶಾಯಾ ಭೂಯಾನ್' ಇತ್ಯಾದಿಯಾಗಿ 'ಭೂಮಾ' ಎಂಬ ಶಬ್ದವು ಪ್ರಾಣ ಹಾಗೂ ವಿಷ್ಣು ಇಬ್ಬರಲ್ಲಿಯೂ ಸಾಧಾರಣವಾಗಿದೆಯೆಂದು ಹೇಳಿದ್ದಾರೆ. ಟೀಕೆಯ ಈ ಮಾತಿಗೆ ನ್ಯಾಯವಿವರಣವೇ ಮೂಲವಾಗಿದೆಯೆಂದು ಗ್ರಂಥಕಾರರು ತೋರಿಸುತ್ತಾ ನ್ಯಾಯವಿವರಣದಲ್ಲಿರುವ ವಿಶೇಷಾರ್ಥವನ್ನೂ ಸಹ ಪ್ರಕಟಪಡಿಸುತ್ತಿದ್ದಾರೆ. 'ಉಭಯತ್ರ' ಇತ್ಯಾದಿ ಗ್ರಂಥದಿಂದ.

**प्रकाशः** – न्यायविवरणेऽत्र टीकायां च ''तस्माद्भूयान्नाम'' इत्यंशोक्तेरुपयोगम् ''आसन्नस्योपक्रमस्यानासन्नायाः समाख्यायाश्च कथं साधारण्यप्रतीतिहेतुत्वमिति च'' इति न्यायविवरणटीकास्थशङ्कातात्पर्याभिव्यक्तिपूर्वकमाह – **नन्वित्यादिना ।।**

ನ್ಯಾಯವಿವರಣದಲ್ಲಿ ಮತ್ತು ಪ್ರಕೃತ ಟೀಕೆಯಲ್ಲಿ 'ವಿಷ್ಣುರ್ವೈ ದೇವೇಭ್ಯೋ ಭೂಯಾನ್' ಎಂದಷ್ಟೇ ಹೇಳಿದ್ದರೆ ಸಾಕಾಗುತ್ತಿತ್ತು. 'ತಸ್ಮಾದ್ಭೂಯಾನ್ನಾಮ' ಎಂದೇಕೆ ಹೇಳಿದರು? ಎಂಬ ಪ್ರಶ್ನೆಗೆ ಪ್ರಯೋಜನವನ್ನು ಹೇಳುತ್ತಿದ್ದಾರೆ. ಅಭ್ಯಾಸ ಹಾಗೂ ಉಪಪತ್ತಿಗಳು ಸಮಾಖ್ಯಾಪ್ರಮಾಣದಲ್ಲಿ ಇರುತ್ತದೆಂದು ತಿಳಿಸುವುದಕ್ಕಾಗಿ 'ತಸ್ಮಾತ್' ಇತ್ಯಾದಿಯಾಗಿ ಹೇಳಿದ್ದಾರೆ. ಹೇಗೆಂಬುದನ್ನು 'ಆಸನ್ನಸ್ಯೋಪಕ್ರಮಸ್ಯಾನಾಸನ್ನಾಯಾಃ ಸಮಾಖ್ಯಾಯಾಶ್ಚ ಕಥಂ ಸಾಧಾರಣ್ಯಪ್ರತೀತಿಹೇತುತ್ವಮಿತಿ ಚ' ಇತ್ಯಾದಿ ನ್ಯಾಯವಿವರಣ ಟೀಕೆಯಲ್ಲಿ ಉಪಕ್ರಮವೇ ಒಂದು ಕಡೆ ಇದೆ. ಸಮಾಖ್ಯಾಪ್ರಮಾಣವೇ ಮತ್ತೊಂದು ಕಡೆಯಿದೆ. ಹೀಗೆ ಬೇರೆ ಬೇರೆ ಕಡೆ ಇರುವ ಉಪಕ್ರಮ ಹಾಗೂ ಸಮಾಖ್ಯಾಪ್ರಮಾಣಗಳಿಂದ ಸಾಧಾರಣ್ಯಪ್ರತೀತಿಯು ಹೇಗೆ ಬರುತ್ತದೆ? ಎಂಬ ನ್ಯಾಯವಿವರಣ ಟೀಕಾದಲ್ಲಿರುವ ಆಶಂಕೆಯ ತಾತ್ಪರ್ಯವನ್ನು ಸ್ಪಷ್ಟಪಡಿಸುವುದಕ್ಕಾಗಿ 'ನನು' ಇತ್ಯಾದಿ ಗ್ರಂಥವು ಹೊರಟಿದೆ.

**प्रकाशः** – **साभ्यासत्वादिति ।।** 'भूयान्' इत्यस्य द्विःश्रवणात्तस्माद्देवेभ्यो भूयस्त्वादित्युपपत्त्युक्तेरिति भावः । अस्मिन्पक्षेऽज्ञानामित्येतन्नापेक्ष्यमेवेति वा पूर्वोत्तरपक्षनिर्णायकानभिज्ञानामित्यर्थकं वा नेयम् ।

ಭೂಮಾಧಿಕರಣ (೧-೩-೨)

'ಸಾಭ್ಯಾಸತ್ವಾತ್' ಎಂದರೆ - 'ಭೂಯಾನ್' ಎಂಬುದಾಗಿ ಎರಡು ಬಾರಿ ಹೇಳಿದ್ದರಿಂದ ಅಭ್ಯಾಸ ರೂಪ ಪ್ರಮಾಣವನ್ನೂ, 'ದೇವೇಭ್ಯೋ ಭೂಯಸ್ತ್ವಾತ್' ಎಂಬುದಾಗಿ ಉಪಪತ್ತಿಯನ್ನೂ ಸಹ ಹೇಳಿದೆಯೆಂದು ತಿಳಿಯಬೇಕು. ಉಪ್ರಕಮವು ಆಸನ್ನವಾದ್ದರಿಂದ ಪ್ರಬಲವಾಗಿದೆ. ಸಮಾಖ್ಯಾಪ್ರಮಾಣವು ಉಪಪತ್ತಿ ಹಾಗೂ ಅಭ್ಯಾಸಗಳಿಂದ ಕೂಡಿದ್ದರಿಂದ ಪ್ರಬಲವಾಗಿದೆಯೆಂದು ಹೇಳಿದಂತಾಯಿತು. ಈ ಪಕ್ಷದಲ್ಲಿ 'ಅಜ್ಞಾನಾಮ್' ಎಂಬುದನ್ನು ವಿವಕ್ಷಿಸಬಾರದು. ಅಜ್ಞಾನಿಗಳ ದೃಷ್ಟಿಯಿಂದ ಎಂಬುದನ್ನು ಪರಿಗಣಿಸದೇ ಉಭಯಸಾಧಾರಣ್ಯವನ್ನು ತಿಳಿಯಬೇಕು. ಅಥವಾ ಪೂರ್ವಪಕ್ಷಸಾಧಕವಾದ ಹಾಗೂ ಸಿದ್ಧಾಂತ ಸಾಧಕವಾದ ಆಧಾರಗಳಿದ್ದರೂ ಸಹ ಯಾರು ಇವುಗಳ ಒಂದೂ ಪ್ರಾಬಲ್ಯ, ದೌರ್ಬಲ್ಯಗಳನ್ನು ತಿಳಿದಿರುವುದಿಲ್ಲವೋ, ಅಂತಹ ದೃಷ್ಟಿಯಿಂದ ಉಭಯಸಾಧಾರಣವಾಗಿದೆಯೆಂದು ಹೇಳುವುದಕ್ಕಾಗಿ 'ಅಜ್ಞಾನಾಮ್' ಎಂದಿದ್ದಾರೆಂದು ಭಾವಿಸಬೇಕು.

**प्रकाशः** – अत एव टीकायामज्ञानामित्यस्यानुक्तिरिति भावः । इदानीं ''अज्ञानामित्युक्तत्वात्'' इति न्यायविवरणटीकां विवृण्वन्नज्ञानामित्यनुरोधेन समाध्यन्तरमाह – **यद्वोपक्रमेति** ।।

ಆದ್ದರಿಂದಲೇ ಟೀಕೆಯಲ್ಲಿ 'ಅಜ್ಞಾನಾಮ್' ಎಂಬುದಾಗಿ ಹೇಳಿಯೇ ಇಲ್ಲ.

ಪ್ರಕೃತ 'ಅಜ್ಞಾನಾಮಿತ್ಯುಕ್ತತ್ವಾತ್' ಎಂಬ ನ್ಯಾಯವಿರಣಟೀಕೆಯನ್ನು ವಿವರಿಸುವವರಾಗಿ 'ಅಜ್ಞಾನಾಂ' ಎಂಬುದನ್ನು ಕೂಡಿಸುವ ದೃಷ್ಟಿಯಿಂದ ಮತ್ತೊಂದು ಸಮಾಧಾನವನ್ನು 'ಯದ್ವಾ' ಇತ್ಯಾದಿ ಗ್ರಂಥದಿಂದ ಸಮರ್ಥಿಸುತ್ತಿದ್ದಾರೆ.

**गुरुराजीयम्** – ।। **ॐ भूमा सम्प्रसादादध्युपदेशात् ॐ** ।। **बहोर्लोप इति** ।। 'बहोर्भाव' इति विग्रहे 'पृथ्व्यादिभ्य इमनज्वा' इतीमनिच्प्रत्यये बहुशब्दोपरिकृते 'बहोर्लोपो भू च बहोः' इति सूत्रेण बहोरुत्तरेषामिमनिजादीनामिकारलोपे बहोः स्थाने 'भू' आदेशे च भूमेति रूपसिद्धिरिति भावः । नन्वन्यत्रप्रसिद्धशरीरित्वसाहित्यादन्तर्यामित्वमिव भूमशब्दस्याप्यन्यत्रप्रसिद्धप्राण-श्रुतिसाहित्यादन्यत्रप्रसिद्धत्वात्तस्योभयत्रप्रसिद्धसमन्वयप्रतिपादके पादेऽसङ्गतिरित्यत आह – **नापीति** ।। **पूर्ववदिति** ।। अन्यत्रप्रसिद्धजायमानत्वलिङ्गेन द्युभ्वाद्यायतनत्वस्यान्यत्रप्रसिद्धत्वे शङ्किते तस्य येन प्रकारेणान्यत्रप्रसिद्धत्वं निराकृतं तेनैव प्रकारेणेत्यर्थः । स चेत्थम् । अन्यत्रप्रसिद्धसाहचर्येण परतोऽन्यत्रप्रसिद्धत्वव-न्न्यायविवरणोदाहृताभ्यः 'प्राणो वा आशाया भूयान्' 'विष्णुर्वै देवेभ्यो भूयान्' इत्यादिश्रुतिभ्य उभयत्रप्रसिद्धसाहचर्यं विना स्वतः उभयत्रप्रसिद्धत्वस्य सत्वादिति वा अन्यत्रप्रसिद्धेत्यत्रप्रसिद्धान्यसाहित्यसापेक्षत्वादुभयत्रप्रसिद्धेश्च तन्निरपेक्षत्वा-

निरपेक्षादराद्वा समाख्याश्रुत्यादितौल्याभावस्याप्यन्यत्रप्रसिद्धलक्षणान्तर्गतत्वात् तस्य च प्रकृतेऽसत्वेनान्तर्यामित्वे सत्त्वात्त- स्यान्यत्रप्रसिद्धतेति वा सर्वगतत्वादीनां ब्रह्मण्ययुक्तत्वादेवान्यत्रप्रसिद्धतेति वा पूर्ववदित्यर्थः । ननु तथाऽपि नोभयत्रप्रसिद्धता । अभ्यासोपपत्तिसहितसमाख्याया-स्सकाशादुपक्रममात्रस्य दुर्बलत्वादित्यरुच्या पक्षान्तरमाह – यद्वेति ॥




'ಭೂಮಾ' ಎಂಬ ನಾಮಾತ್ಮಕ ಶಬ್ದವನ್ನು ಈ ಅಧಿಕರಣದಲ್ಲಿ ಸಮನ್ವಯ ಮಾಡುತ್ತಿದ್ದಾರೆ. 'ಪ್ರಾಣೋ ವಾ ಆಶಾಯಾ ಭೂಯಾನ್' ಎಂಬುದಾಗಿ ಛಾಂದೋಗ್ಯದಲ್ಲಿ ಪ್ರಾಣನನ್ನು 'ಭೂಮಾ' ಎನ್ನಲಾಗಿದೆ. 'ವಿಷ್ಣುರ್ವೈ ದೇವೇಭ್ಯೋ ಭೂಯಾನ್' ಎಂಬುದಾಗಿ ವಿಷ್ಣುವನ್ನೂ ಸಹ 'ಭೂಮಾ' ಎನ್ನಲಾಗಿದೆ. ಆದ್ದರಿಂದ ಪ್ರಾಣ ಹಾಗೂ ವಿಷ್ಣು ಇಬ್ಬರಲ್ಲಿಯೂ ಪ್ರಸಿದ್ಧವಾದ 'ಭೂಮಾ' ಎಂಬ ಶಬ್ದವು ಉಭಯತ್ರಪ್ರಸಿದ್ಧವಾಯಿತು.

ವಸ್ತುತಃ 'ಬಹು' ಎಂಬ ಶಬ್ದದ ಮೇಲೆ 'ಇಮನಿಚ್' ಪ್ರತ್ಯಯ ಹಾಗೂ ಭೂ ಆದೇಶಗಳು ಬಂದು 'ಭೂಮಾ' ಎಂಬ ಶಬ್ದವು ನಿಷ್ಪನ್ನವಾಗಿದೆ. ಆದ್ದರಿಂದ ಸಂಖ್ಯಾವಾಚಕವಾದ 'ಭೂಮಾ' ಎಂಬ ಶಬ್ದವು ಧರ್ಮವಾಚಕವಾಗುವುದರಿಂದ ಲಿಂಗಾತ್ಮಕವಾಗಿದೆಯೆಂದೆನಿಸುತ್ತದೆ. ಆದರೆ 'ಯೋ ವೈ ಭೂಮಾ ತದಮೃತಮ್' ಇತ್ಯಾದಿಯಾಗಿ ಶ್ರೇಷ್ಠನೆಂಬರ್ಥದಲ್ಲಿ ಉಪನಿಷತ್ತು 'ಭೂಮಾ' ಶಬ್ದವನ್ನು ಪ್ರಯೋಗ ಮಾಡುತ್ತಿದೆ. ಮತ್ತು 'ವಾಗ್ವಾವ ನಾಮ್ನೋ ಭೂಯಸೀ' ಇತ್ಯಾದಿ ಸ್ಥಳಗಳಲ್ಲಿ ಕೇಳಿಸುತ್ತಿರುವ 'ಭೂಮಾ' ಎಂಬ ಶಬ್ದಕ್ಕೆ ಸಮಾನಾರ್ಥಕವಾದ 'ಭೂಯಸ್' ಶಬ್ದವನ್ನು ಸಂಖ್ಯಾದ್ಯರ್ಥದಲ್ಲಿ ವಿವಕ್ಷಿಸಲು ಸಾಧ್ಯವಿಲ್ಲ. ಆದ್ದರಿಂದ ಶ್ರೇಷ್ಠನೆಂಬ ಧರ್ಮ್ಯವಾಚಕತ್ವವನ್ನೇ 'ಭೂಮಾ' ಎಂಬ ಶಬ್ದಕ್ಕೆ ಒಪ್ಪಬೇಕು.

ಇಂತಹ 'ಭೂಮಾ' ಎಂಬ ಶಬ್ದವು ಉಭಯತ್ರಪ್ರಸಿದ್ಧವಾಗಿದೆ. 'ಪ್ರಾಣೋ ವಾ ಆಶಾಯಾ ಭೂಯಾನ್' ಎಂಬ ಛಾಂದೋಗ್ಯೋಪನಿಷತ್ತಿನ ಉಪಕ್ರಮದಲ್ಲಿ ಪ್ರಾಣನಲ್ಲಿ ಪ್ರಸಿದ್ಧವಾದ 'ಭೂಮಾ' ಎಂಬ ಶಬ್ದವು 'ವಿಷ್ಣುರ್ವೈ ದೇವೇಭ್ಯೋ ಭೂಯಾನ್' ಎಂಬ ಸಮಾಖ್ಯಾಪ್ರಮಾಣದಲ್ಲಿ ವಿಷ್ಣುವಿನಲ್ಲಿಯೂ ಪ್ರಸಿದ್ಧವಾಗಿದೆ. ಉಪಕ್ರಮ ಪ್ರಮಾಣಕ್ಕಿಂತ ಸಮಾಖ್ಯಾಪ್ರಮಾಣವು ದುರ್ಬಲವಾಗಿದ್ದರೂ ಕೂಡ ಇಲ್ಲಿರುವ ಸಮಾಖ್ಯಾಪ್ರಮಾಣವು ಅಭ್ಯಾಸ ಹಾಗೂ ಉಪಪತ್ತಿಗಳಿಂದ ಸಹಿತವಾಗಿದೆ. ಆದ್ದರಿಂದ ಉಪಕ್ರಮದಿಂದ ಸಮಾನಬಲವುಳ್ಳದ್ದೇ ಆಗಿದೆ. ಹೀಗೆ ಸಮಬಲವಾದ ಉಪಕ್ರಮ ಹಾಗೂ ಸಮಾಖ್ಯಾಪ್ರಮಾಣಗಳು ಪ್ರಾಣ ಹಾಗೂ ವಿಷ್ಣುವಿನಲ್ಲಿ 'ಭೂಮಾ' ಶಬ್ದವನ್ನು ಪ್ರಯೋಗಿಸುತ್ತಿರುವ ಕಾರಣ ಉಭಯತ್ರಪ್ರಸಿದ್ಧವಾಗಿದೆಯೆಂದು ತಿಳಿಯಬೇಕು. ಅಥವಾ ಉಪಕ್ರಮ ಹಾಗೂ ಸಮಾಖ್ಯಾಪ್ರಮಾಣಗಳಲ್ಲಿ ಯಾರಿಗೆ ಪ್ರಾಬಲ್ಯ ಹಾಗೂ ದೌರ್ಬಲ್ಯ ವಿಚಾರವು ಬಂದಿರುವುದಿಲ್ಲವೋ, ಅಂತಹ ವ್ಯಕ್ತಿಯ ವಿಷಯದಲ್ಲಿ 'ಭೂಮಾ' ಎಂಬ ಶಬ್ದವು ಉಭಯಸಾಧಾರಣವಾಗಿದೆಯೆಂದು ತಿಳಿಯಬಹುದು.

ಭೂಮಾಧಿಕರಣ (೧-೩-೨)

## ಭೂಮಾಧಿಕರಣಕ್ಕೆ ಪಾದ ಸಂಗತಿ

**तात्पर्यचन्द्रिका**

**यद्वा विष्णौ प्राणशब्दसमन्वयस्योक्तत्वेनोपक्रमस्य सम्भाविताावकाशत्वात् समाख्यास्थविष्णुशब्दस्य च प्राणे तदनुक्तेस्तयोस्तुल्यबलत्वम् ।**

ಅನುವಾದ - ಪ್ರಾಣವಿಷಯಕವಾದ ಉಪಕ್ರಮಪ್ರಮಾಣ, ವಿಷ್ಣುವಿಷಯಕವಾದ ಸಮಾಖ್ಯಾಪ್ರಮಾಣಗಳೆರಡೂ ಸಮಾನಬಲವಾಗಿವೆಯೆಂದು ಮತ್ತೊಂದು ರೀತಿಯಲ್ಲಿ ಹೀಗೆ ತಿಳಿಯಬೇಕು. ಪ್ರಾಣಾಧಿಕರಣದಲ್ಲಿ ಪ್ರಾಣಶಬ್ದವನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡಿರುವುದರಿಂದ 'ಪ್ರಾಣೋ ವಾ ಆಶಾಯಾ ಭೂಯಾನ್' ಎಂಬ ಉಪಕ್ರಮದಲ್ಲಿ ಕೇಳಿಸುತ್ತಿರುವ ಪ್ರಾಣಶಬ್ದವೂ ಸಹ ವಿಷ್ಣುವಿನಲ್ಲಿ ಅವಕಾಶವನ್ನು ಹೊಂದಿರಬಹುದೆಂಬ ಸಂಭಾವನೆಯು ಬರುತ್ತದೆ. ಆದರೆ ಸಮಾಖ್ಯಾಪ್ರಮಾಣದಲ್ಲಿರುವ ವಿಷ್ಣುಶಬ್ದವನ್ನು ಪ್ರಾಣನಲ್ಲಿ ಸಮನ್ವಯ ಹೇಳದ ಕಾರಣ ವಿಷ್ಣುವನ್ನು ಬಿಟ್ಟು ಬೇರೆ ಕಡೆ ಅವಕಾಶ ಹೊಂದಲು ಸಾಧ್ಯವೇ ಇಲ್ಲ. ಹೀಗೆ ಎರಡೂ ಸಹ ಸಮಾನ ಬಲವುಳ್ಳವುಗಳಾಗುತ್ತವೆ. ಅಂದರೆ ಸಮಾಖ್ಯಾಪ್ರಮಾಣಕ್ಕಿಂತ ಉಪಕ್ರಮಪ್ರಮಾಣವು ಪ್ರಬಲವಾಗಿದ್ದರೂ ಪ್ರಾಣಶಬ್ದವು ವಿಷ್ಣುವಿನಲ್ಲಿ ಅವಕಾಶ ಹೊಂದಿರಬಹುದೆಂಬ ಸಂಭಾವನೆಯಿರುವುದರಿಂದ ಸ್ವಲ್ಪ ದುರ್ಬಲವಾಗಿದೆ. ವಿಷ್ಣುಶಬ್ದವು ನಿರವಕಾಶವಾದ ಪ್ರಯುಕ್ತ ಪ್ರಬಲವೇ ಆಗಿದೆ. ಹೀಗೆ ಸಮಾನ ಬಲವನ್ನು ತಿಳಿದು 'ಭೂಮಾ' ಎಂಬ ಶಬ್ದವು ಉಭಯಸಾಧಾರಣವಾಗಿದೆಯೆಂದು ಪೂರ್ವಪಕ್ಷ ಮಾಡಬಹುದು.

**'अज्ञानाम्' इत्युक्तिस्तु सिद्धान्तन्यायाननुसन्धानाभिप्राया ।**

ಹಾಗಾದರೆ ನ್ಯಾಯವಿವರಣದಲ್ಲಿ 'ಅಜ್ಞಾನಾಮ್' ಎಂದೇಕೆ ಹೇಳಿದ್ದಾರೆ? ಎಂದರೆ ಯಾರಿಗೆ ಪ್ರಾಣ ಶಬ್ದವು ವಿಷ್ಣುವಿನಲ್ಲಿ ಸಮನ್ವಯವಾಗುತ್ತದೆಂಬ ಸಿದ್ಧಾಂತ ನ್ಯಾಯದ ಅನುಸಂಧಾನ-ವಿರುವುದಿಲ್ಲವೋ ಅಂತಹವನನ್ನು ಕುರಿತು 'ಅಜ್ಞಾನಾಮ್' ಎಂದು ಹೇಳಿರುತ್ತಾರೆ.

**यद्यपि विष्णुपक्ष इव प्राणपक्षेऽपि ''प्राणो वाव सर्वेभ्यो भूयान्'' इति समाख्याऽस्ति ।**

ಪ್ರಶ್ನೆ - ವಿಷ್ಣು ವಿಷಯದಲ್ಲಿ ಹೇಗೆ ಸಮಾಖ್ಯಾಪ್ರಮಾಣವಿದೆಯೋ, ಅದರಂತೆ ಪ್ರಾಣವಿಷಯದಲ್ಲಿಯೂ ಸಹ 'ಪ್ರಾಣೋ ವಾವ ಸರ್ವೇಭ್ಯೋ ಭೂಯಾನ್' ಎಂಬುದಾಗಿ ಸಮಾಖ್ಯಾಪ್ರಮಾಣವಿದೆ. ಇದನ್ನು ಬಿಟ್ಟು ಉಪಕ್ರಮ ಪ್ರಮಾಣವನ್ನೇಕೆ ಹೇಳಿದಿರಿ? ಹೀಗೆ

ಸಮಾಖ್ಯಾಪ್ರಮಾಣವನ್ನು ಇಬ್ಬರಲ್ಲಿಯೂ ಹೇಳಿದಾಗ ಸಮಾನ ಬಲವನ್ನು ಮತ್ತು ಉಭಯಸಾಧಾರಣ್ಯವನ್ನು ಸುಲಭವಾಗಿ ಉಪಪಾದಿಸಬಹುದಲ್ಲವೇ?

**तथाऽपि तस्या उपासकेषु प्राणस्य भूयस्त्वपरत्वेन सर्वेभ्यो भूयस्त्वपरत्वाभावात् प्राणप्रापकोपक्रमे सति समाख्याया अनादरणीयत्वाच्च न तया साधारण्यमुक्तम् ।**

ಉತ್ತರ - ಪ್ರಾಣವಿಷಯದಲ್ಲಿ ಸಮಾಖ್ಯಾಪ್ರಮಾಣವನ್ನು ತಿಳಿಯುವುದು ಕಷ್ಟ. ಏಕೆಂದರೆ 'ಪ್ರಾಣೋ ವಾವ ಸರ್ವೇಭ್ಯೋ ಭೂಯಾನ್' ಎಂಬ ವಾಕ್ಯವು ಉಪಾಸಕರಿಗಿಂತ ಪ್ರಾಣನು ಉತ್ತಮನಾಗಿದ್ದಾನೆಂದಷ್ಟೇ ಹೇಳುತ್ತಿದೆ ಹೊರತು, ಸಕಲ ದೇವತೆಗಳಿಂದ ಉತ್ತಮನಾಗಿದ್ದಾನೆಂದು ಹೇಳುತ್ತಿಲ್ಲ. ಮತ್ತು ಪ್ರಾಣವಿಷಯದಲ್ಲಿ ಬಲಿಷ್ಠವಾದ ಉಪಕ್ರಮ ಪ್ರಮಾಣವೇ ಇರುವಾಗ ಸಮಾಖ್ಯಾಪ್ರಮಾಣವನ್ನು ಹೇಳಬಾರದು. ಈ ದೃಷ್ಟಿಯಿಂದ ಸಮಾಖ್ಯಾಪ್ರಮಾಣದಿಂದ ಉಭಯಸಾಧಾರಣ್ಯವನ್ನು ಹೇಳಿರುವುದಿಲ್ಲ.

**द्युभ्वाद्यधिकरणे तु रुद्रादिप्रापकोपक्रमाभावात्समाख्यया तदुक्तिः ।**

ಹಾಗಾದರೆ ದ್ಯುಭ್ವಾದ್ಯಧಿಕರಣದಲ್ಲಿಯೂ ಸಮಾಖ್ಯಾಪ್ರಮಾಣವನ್ನು ಹೇಳದೇ ಉಪಕ್ರಮ ಪ್ರಮಾಣವನ್ನೇ ಹೇಳಬಹುದಿತ್ತಲ್ಲವೇ? ಎಂದರೆ ಅಲ್ಲಿ ರುದ್ರಾದಿಗಳ ವಿಷಯದಲ್ಲಿ ಯಾವುದೇ ಉಪಕ್ರಮ ಪ್ರಮಾಣವು ಇರಲಿಲ್ಲ. ಅನಿವಾರ್ಯವಾಗಿ ಸಮಾಖ್ಯಾಪ್ರಮಾಣವನ್ನು ಹೇಳಬೇಕಾಗಿತ್ತು. ಇದಕ್ಕೋಸ್ಕರ ಉಪಕ್ರಮ ಪ್ರಮಾಣವನ್ನು ಹೇಳದೇ ಸಮಾಖ್ಯಾಪ್ರಮಾಣವನ್ನೇ ಹೇಳಿರುತ್ತಾರೆ. ಆದರೆ ಪ್ರಕೃತ ಬಲಿಷ್ಠವಾದ ಉಪಕ್ರಮ ಪ್ರಮಾಣವಿರಬೇಕಾದರೆ ಸಮಾಖ್ಯಾಪ್ರಮಾಣವನ್ನು ಹೇಳುವ ಅವಶ್ಯಕತೆಯಿಲ್ಲ.

**यद्यपि ''सर्वत्रप्रसिद्ध'' इत्यादावपि ''तस्यैतस्यासावादित्यो रसः'' इत्युपक्रम आदित्यश्रुतिरस्ति ।**

ಪ್ರಶ್ನೆ - 'ಸರ್ವತ್ರಪ್ರಸಿದ್ಧೋಪದೇಶಾತ್' ಎಂಬಲ್ಲಿಯೂ 'ತಸ್ಯೈತಸ್ಯಾಸಾವಾದಿತ್ಯೋ ರಸಃ' ಎಂಬುದಾಗಿ ಆದಿತ್ಯನಲ್ಲಿ ಶ್ರುತಿರೂಪ ಉಪಕ್ರಮ ಪ್ರಮಾಣವಿದೆ. ವಿಷ್ಣುವಿನಲ್ಲಿ 'ಅಂತರ್ಬಹಿಶ್ಚ ತತ್ಸರ್ವಮ್' ಇತ್ಯಾದಿಯಾಗಿ ಸಮಾಖ್ಯಾಪ್ರಮಾಣವಿದೆ. ಈ ಉಪಕ್ರಮ ಹಾಗೂ ಸಮಾಖ್ಯಾಪ್ರಮಾಣಗಳ ಆಧಾರದಿಂದ ಸರ್ವಗತತ್ವಧರ್ಮವನ್ನೂ ಸಹ ಉಭಯತ್ರಪ್ರಸಿದ್ಧವೆಂದೇ ಹೇಳಿರಿ. ಒಂದು ವೇಳೆ ಅದನ್ನು ಅನ್ಯತ್ರಪ್ರಸಿದ್ಧವೆನ್ನುವುದಾದರೆ ಪ್ರಕೃತ 'ಭೂಮಾ' ಎಂಬ ಶಬ್ದವನ್ನು ಉಭಯತ್ರಪ್ರಸಿದ್ಧವೆಂದು ಹೇಗೆ ಪರಿಗಣಿಸುತ್ತೀರಿ?

**तथाऽपि ब्रह्मणस्सर्वभूतगतत्वरूपाल्पौकस्त्वस्य पूर्वपक्षिणा काप्यनङ्गीकारेण ब्रह्मणि समाख्याया अभावात्तस्यान्यत्रप्रसिद्धता ।**

ಉತ್ತರ - ಸರ್ವಗತತ್ವಾಧಿಕರಣಕ್ಕೂ ಈ ಅಧಿಕರಣಕ್ಕೂ ಬಹಳಷ್ಟು ವ್ಯತ್ಯಾಸವಿದೆ. ಸರ್ವಭೂತಗತತ್ವರೂಪವಾದ ಅಲ್ಪಸ್ಥಾನಸ್ಥಿತತ್ವವನ್ನು ಪೂರ್ವಪಕ್ಷಿಯು ಬ್ರಹ್ಮನಿಗೆ ಎಲ್ಲಿಯೂ ಒಪ್ಪಿರುವುದಿಲ್ಲ. ಯಾವುದೇ ಸಮಾಖ್ಯಾಪ್ರಮಾಣವನ್ನು ಹೇಳಿದರೂ ಅದು ವಿಷ್ಣುವಿಷಯಕವೆಂದು ಪೂರ್ವಪಕ್ಷಿಯು ಹೇಳುವುದೇ ಇಲ್ಲ. ಹೀಗಿರುವಾಗ ವಿಷ್ಣುವಿನಲ್ಲಿ ಸಮಾಖ್ಯಾಪ್ರಮಾಣವಿದೆಯೆಂದು ಹೇಳಲು ಹೇಗೆ ಸಾಧ್ಯ ? ಆದ್ದರಿಂದ ಸರ್ವಗತತ್ವವನ್ನು ಅನ್ಯತ್ರಪ್ರಸಿದ್ಧವೆಂದು ಪರಿಗಣಿಸಿದ್ದಾರೆ.

**इह तु समाख्याश्रुतौ विष्णोर्भूयस्त्वेऽपि न विषयवाक्ये स भूमेति पूर्वःपक्षः ।**

ಆದರೆ ಈ ಪಾದದಲ್ಲಿರುವ ಎಲ್ಲಾ ಅಧಿಕರಣಗಳಲ್ಲಿಯೂ ಅನೇಕ ಸಮಾಖ್ಯಾಶ್ರುತಿಗಳನ್ನು ವಿಷ್ಣುವಿಷಯಕವೆಂದು ಪೂರ್ವಪಕ್ಷಿಯು ಒಪ್ಪುತ್ತಾನೆ. ಹಾಗೆ ಒಪ್ಪಿದರೂ ವಿಷಯವಾಕ್ಯದಲ್ಲಿರುವ 'ಭೂಮಾ' ಎಂಬ ಶಬ್ದಗಳನ್ನು ವಿಷ್ಣುವಿಷಯಕವೆಂದು ಒಪ್ಪುವುದಿಲ್ಲ. ಆದ್ದರಿಂದ ಸಮಾಖ್ಯಾಶ್ರುತಿ ಹಾಗೂ ಉಪಕ್ರಮ ಪ್ರಮಾಣಗಳ ಆಧಾರದಿಂದ 'ಭೂಮಾ' ಮೊದಲಾದ ಶಬ್ದಗಳನ್ನು ಉಭಯತ್ರಪ್ರಸಿದ್ಧವೆನ್ನಬಹುದು.

**अत एवात्र टीकायां ''नच विष्णोरपि भूमत्वस्य श्रुत्यन्तरे प्रसिद्धत्वादत्र वाच्यत्वमिति वाच्यम् । उपक्रमात् समाख्याया दुर्बलत्वात्'' इति ग्रन्थे समाख्या विष्णुपरेत्यङ्गीकृत्य पूर्वपक्षितम् ।**

ಆದ್ದರಿಂದಲೇ ಈ ಅಧಿಕರಣದ ಟೀಕೆಯಲ್ಲಿ 'ನಚ ವಿಷ್ಣೋರಪಿ ಭೂಮತ್ವಸ್ಯ ಶ್ರುತ್ಯಂತರೇ ಪ್ರಸಿದ್ಧತ್ವಾದತ್ರ ವಾಚ್ಯತ್ವಮಿತಿ ವಾಚ್ಯಮ್ । ಉಪಕ್ರಮಾತ್ ಸಮಾಖ್ಯಾಯಾ ದುರ್ಬಲತ್ವಾತ್' 'ವಿಷ್ಣುವಿನಲ್ಲಿಯೂ ಶ್ರುತ್ಯಂತರದಿಂದ ಭೂಮತ್ವವು ಪ್ರಸಿದ್ಧವಾಗಿದೆ. ಆದ್ದರಿಂದ ಅವನೇ ಈ ಪ್ರಕರಣದಲ್ಲಿ ಪ್ರತಿಪಾದ್ಯನೆನ್ನಬಹುದಲ್ಲವೇ? ಎಂದು ಪ್ರಶ್ನಿಸಬಾರದು. ಉಪಕ್ರಮಕ್ಕಿಂತ ಸಮಾಖ್ಯಾಪ್ರಮಾಣವು ದುರ್ಬಲವಾಗಿದೆ' ಇತ್ಯಾದಿ ಗ್ರಂಥದಲ್ಲಿ ಸಮಾಖ್ಯಾಪ್ರಮಾಣವನ್ನು ವಿಷ್ಣುಪರವೆಂದು ಒಪ್ಪಿಯೇ ಪೂರ್ವಪಕ್ಷ ಮಾಡಿದ್ದಾರೆ.

**टीकायां ''वायोरेव भूमत्वाद्'' इत्यवधारणं तु विषयवाक्ये वायोरेव भूमत्वाभिप्रायम् ।**

ಪರಿಪೂರ್ಣಚಂದ್ರಿಕಾ

ಹಾಗಾದರೆ ಟೀಕೆಯಲ್ಲಿ 'ವಾಯೋರೇವ ಭೂಮತ್ವಾತ್' ವಾಯುದೇವನೇ ಭೂಮನಾಗಿದ್ದಾನೆಂಬ ಅವಧಾರಣವನ್ನೇಕೆ ಮಾಡಿದ್ದಾರೆಂದರೆ, ವಿಷಯವಾಕ್ಯದಲ್ಲಿ ವಾಯುವೇ ಭೂಮನಾಗಿದ್ದಾನೆಂಬ ಅಭಿಪ್ರಾಯದಿಂದ. ಈ ಊರಿನಲ್ಲಿ ಇವನೇ ಪಂಡಿತನೆಂದು ಹೇಳುವಂತೆ ವಿಷಯವಾಕ್ಯದಲ್ಲಷ್ಟೇ ವಾಯು ಭೂಮನೆಂದು ಪ್ರತಿಪಾದ್ಯನಾಗಿದ್ದಾನೆ.

**अत्र प्राणश्रुतिर्विष्णुपरा चेत्तत्रापि विष्णुश्रुतिः प्राणपरा स्यादित्यभिप्रायं वा ।**

ಅಥವಾ ಪ್ರಾಣಶ್ರುತಿಯನ್ನು ವಿಷ್ಣುಪರವೆಂದು ಸಿದ್ಧಾಂತಿಗಳು ಹೇಳುವುದಾದರೆ ವಿಷ್ಣುಶ್ರುತಿಯೂ ಸಹ ಏಕೆ ಪ್ರಾಣ ಪರವಾಗಬಾರದು? ಎಂಬ ಅಭಿಪ್ರಾಯದಿಂದಲೂ 'ವಾಯೋರೇವ ಭೂಮತ್ವಾತ್' ಎಂಬ ಅವಧಾರಣವು ಯುಕ್ತವಾಗುತ್ತದೆ.

**टीकोक्त आनन्दमयाक्षेपस्तु समाख्याश्रुतौ विष्णोर्भूयस्त्वेऽपि पूर्णानन्दत्वस्य ''यो वै भूमा तत्सुखं भूमैव सुखं नाल्पे सुखमस्ति'' इति भूमरूपवायोरन्यत्र निषेधादानन्दमयश्रुतेश्च वायुपरत्वे तदयोगाद्युक्तः ।**

ಸಮಾಖ್ಯಾಪ್ರಮಾಣವು ವಿಷ್ಣುವಿಷಯದಲ್ಲಿದೆ ಎಂದು ಪೂರ್ವಪಕ್ಷಿಯು ಹೇಳುವುದಾದರೆ ಆನಂದಮಯತ್ವವನ್ನು ಹೇಗೆ ಆಕ್ಷೇಪಿಸುವುದು ? ಎಂಬ ಪ್ರಶ್ನೆಗೆ ಹೀಗೆ ಉತ್ತರಿಸಬೇಕು. ಸಮಾಖ್ಯಾಶ್ರುತಿಯು ವಿಷ್ಣುವನ್ನು 'ಭೂಮಾ' ಎನ್ನುತ್ತಿದೆಯೆಂದು ಪೂರ್ವಪಕ್ಷಿಯು ಹೇಳುವುದಾದರೂ ಸಹ ಆ ಸಮಾಖ್ಯಾಶ್ರುತಿಯಲ್ಲಿ ಆನಂದಮಯತ್ವವು ಕೇಳಿಸುತ್ತಿಲ್ಲ. ಹೊರತಾಗಿ ಯಾವ ಉಪಕ್ರಮ ಪ್ರಮಾಣವು ಪ್ರಾಣನನ್ನು ಭೂಮನೆನ್ನುತ್ತಿದೆಯೋ ಅಂತಹ ಭೂಮನನ್ನೇ ಆನಂದಮಯನೆಂದು ''ಯೋ ವೈ ಭೂಮಾ ತತ್ಸುಖಂ ಭೂಮೈವ ಸುಖಂ ನಾಲ್ಪೇ ಸುಖಮಸ್ತಿ'' ಇತ್ಯಾದಿಯಾಗಿ ಛಾಂದೋಗ್ಯವು ಹೇಳುತ್ತಿದೆ. ಭೂಮನಾದ ವಾಯುವೇ ಆನಂದಮಯನೆಂದ ಮೇಲೆ ವಿಷ್ಣುವನ್ನು ಪುನಃ ಆನಂದಮಯನೆಂದು ಹೇಳಲಾಗದು. ಒಂದು ವೇಳೆ ಆನಂದಮಯ ಶ್ರುತಿಯು ವಾಯುಪರವಾಗದಿದ್ದರೆ 'ಯೋ ವೈ ಭೂಮಾ' ಎಂಬ ಶ್ರುತಿಯ ವಿರೋಧ ಬರುತ್ತದೆ. ಆದ್ದರಿಂದ ವಿಷ್ಣುವಿನಲ್ಲಿ ಆನಂದಮಯತ್ವವು ಉಪಪನ್ನವಾಗುವುದಿಲ್ಲವೆಂದು ಆಕ್ಷೇಪ ಮಾಡಬಹುದು.

**तस्माद्भूमशब्दस्य साधारण्याद् युक्ता पादसङ्गतिः ।**

ಆದ್ದರಿಂದ 'ಭೂಮಾ' ಎಂಬ ಶಬ್ದವು ವಿಷ್ಣು ಹಾಗೂ ವಾಯು ಇಬ್ಬರಲ್ಲಿಯೂ ಸಾಧಾರಣವಾಗಿದೆ. ಆದ್ದರಿಂದಲೇ ಉಭಯತ್ರಪ್ರಸಿದ್ಧವಾಗುತ್ತದೆ. ಆದ್ದರಿಂದಲೇ ತೃತೀಯ ಪಾದದಲ್ಲಿ 'ಭೂಮಾ' ಶಬ್ದದ ಸಮನ್ವಯವು ಸಂಗತವಾಗುತ್ತದೆ.

ಭೂಮಾಧಿಕರಣ (೧-೩-೨)

**प्रकाशः –**

"प्राणशब्दस्यात एव प्राण इत्युक्तरीत्या विष्णुपरत्वात्" इति टीकासूचितं समाध्यन्तरमाह – **यद्वा विष्णाविति ।।**

ವಿವರಣೆ - 'ಪ್ರಾಣಶಬ್ದಸ್ಯಾತ ಏವ ಪ್ರಾಣ ಇತ್ಯುಕ್ತರೀತ್ಯಾ ವಿಷ್ಣುಪರತ್ವಾತ್' 'ಪ್ರಾಣಶಬ್ದವು 'ಅಥ ಏವ ಪ್ರಾಣಃ' ಎಂಬ ಸೂತ್ರದ ನ್ಯಾಯದಿಂದ ವಿಷ್ಣುಪರವಾಗಿದೆ' ಇತ್ಯಾದಿ ಟೀಕೆಯಿಂದ ಸೂಚಿತವಾದ ಮೂರನೇ ಪ್ರಕಾರದ ಸಮಾಧಾನವನ್ನು 'ಯದ್ವಾ' ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ. ಅಂದರೆ ಉಪಕ್ರಮ ಹಾಗೂ ಸಮಾಖ್ಯಾಪ್ರಮಾಣಗಳೆರಡೂ ಸಮಾನ ಬಲವಾಗಿವೆಯೆಂದು ಟೀಕೆಯ ಅಭಿಪ್ರಾಯ.

**प्रकाशः** – ननु पूर्वत्रेवात्रापि समाख्याश्रुतिद्वयेनैवोभयत्रप्रसिद्धिसम्भवे श्रुत्युपक्रमयोः क्लेशेन तौल्यमुपपाद्य कुतस्साधारणत्वमुपपाद्यते ।

ಆಕ್ಷೇಪ - ಹಿಂದಿನ ಅಧಿಕರಣದಂತೆ ಈ ಅಧಿಕರಣದಲ್ಲಿಯೂ ವಿಷ್ಣು ಹಾಗೂ ಪ್ರಾಣ ಇಬ್ಬರ ವಿಷಯದಲ್ಲಿ ಸಮಾಖ್ಯಾಪ್ರಮಾಣವನ್ನೇ ಹೇಳಬಹುದಿತ್ತು. ಆವಾಗ ಉಭಯತ್ರಪ್ರಸಿದ್ಧವಾಗಿದೆಯೆಂಬುದನ್ನು ತಿಳಿಯುವುದು ಸುಲಭವಾಗುತ್ತಿತ್ತು. ಈಗ ಸಮಾಖ್ಯಾಶ್ರುತಿ ಹಾಗೂ ಉಪಕ್ರಮಪ್ರಮಾಣಗಳನ್ನು ಹೇಳುತ್ತಿದ್ದೀರಿ. ಇದರಿಂದ ಉಭಯಸಾಧಾರಣ್ಯವನ್ನು ತಿಳಿಯುವುದು ಕಷ್ಟಕರವಾಗಿದೆ. ಸುಲಭವಾದದ್ದನ್ನು ಬಿಟ್ಟು ಕಷ್ಟದಿಂದ ಉಭಯಸಾಧಾರಣ್ಯವನ್ನೇಕೆ ತಿಳಿಯಬೇಕು.

**प्रकाशः** – नच वायुसमाख्यातो विष्णुसमाख्यायाः प्रागुक्तरीत्या बलवत्त्वात्तत्रापि 'अज्ञानाम्' इत्युपपादनीयमिति वाच्यम् ।

ವಾಯುಸಮಾಖ್ಯೆಗಿಂತ ವಿಷ್ಣುಸಮಾಖ್ಯೆಯು ಹಿಂದೆ ಹೇಳಿದಂತೆ ಬಲಿಷ್ಠವಾಗಿದೆ. ಆದ್ದರಿಂದ ಇಲ್ಲಿಯೂ ಸಹ 'ಅಜ್ಞಾನಾಮ್' ಇತ್ಯಾದಿ ರೀತಿಯಿಂದ ಸಿದ್ಧಾಂತನ್ಯಾಯದ ಅನುಸಂಧಾನವಿಲ್ಲದಿದ್ದಾಗ ಸಮಾನ ಬಲವೆಂದು ಹೇಳಬೇಕಾಗುತ್ತದೆ. ಈ ಅಭಿಪ್ರಾಯದಿಂದ ಉಪಕ್ರಮ ಹಾಗೂ ಸಮಾಖ್ಯಾಪ್ರಮಾಣವನ್ನು ಇಲ್ಲಿ ಅನುಸರಿಸಿದ್ದೇವೆಂದು ಉತ್ತರಿಸಬಾರದು.

**प्रकाशः** – "प्राणो वाव सर्वेभ्यो भूयान्न प्राणाद्भूयान् प्राणो ह्येव भूयान् तस्माद् भूयान् नाम" इति श्रुतेरपि साभ्यासोपपत्तिकत्वादिति भावेनाऽऽक्षिप्य समाधत्ते – **यद्यपीति ।।**

'ಪ್ರಾಣೋ ವಾವ ಸರ್ವೇಭ್ಯೋ ಭೂಯಾನ್ ಪ್ರಾಣಾದ್ಭೂಯಾನ್ ಪ್ರಾಣೋ ಹ್ಯೇವ ಭೂಯಾನ್ ತಸ್ಮಾದ್ ಭೂಯಾನ್ ನಾಮ' ಎಂಬ ಪ್ರಾಣವಿಷಯಕವಾದ ಸಮಾಖ್ಯಾಪ್ರಮಾಣವೂ ಸಹ ಅಭ್ಯಾಸ ಹಾಗೂ ಉಪಪತ್ತಿಗಳಿಂದ ಸಹಿತವಾಗಿದೆ. ಯಾವರೀತಿಯಾಗಿ ವಿಷ್ಣುಸಮಾಖ್ಯಾಪ್ರಮಾಣವು ಅಭ್ಯಾಸ ಹಾಗೂ

ಉಪಪತ್ತಿಗಳಿಂದ ಸಹಿತವಾದ ಕಾರಣ ಬಲಿಷ್ಠವಾಗಿದೆಯೋ, ಅದರಂತೆ ಪ್ರಾಣಸಮಾಖ್ಯಾ ಪ್ರಮಾಣವೂ ಸಹ ಬಲಿಷ್ಠವೇ ಆಗಿದೆ. ಹೀಗಿರುವಾಗ ಪ್ರಾಣವಿಷಯಕವಾದ ಸಮಾಖ್ಯಾಪ್ರಮಾಣವನ್ನು ಹೇಳದೆ ಉಪಕ್ರಮಪ್ರಮಾಣವನ್ನು ಏಕೆ ಅನುಸರಿಸಿದಿರಿ? ಎಂಬ ಆಕ್ಷೇಪಕ್ಕೆ 'ಯದ್ಯಪಿ' ಇತ್ಯಾದಿ ಗ್ರಂಥದಿಂದ ಸಮಾಧಾನ ನೀಡುತ್ತಿದ್ದಾರೆ.

**प्रकाशः** – उपासकेष्विति ।। ''इयदामननात्'' इत्यत्र भाष्ये तदर्थ एवोदाहृतत्वादिति भावः ।

'ಉಪಾಸಕೇಷು' ಎಂದರೆ 'ಇಯದಾಮನನಾತ್' ಎಂಬ ಸೂತ್ರದ ಭಾಷ್ಯದಲ್ಲಿ 'ಪ್ರಾಣೋ ವಾವ ಸರ್ವೇಭ್ಯೋ ಭೂಯಾನ್' ಎಂಬುದಕ್ಕೆ ಉಪಾಸಕರಲ್ಲಿ ಪ್ರಾಣನು ಅತಿ ಉತ್ತಮನಾಗಿದ್ದಾನೆಂಬರ್ಥವನ್ನೇ ಹೇಳಲಾಗಿದೆ. ಆ ಅರ್ಥದಲ್ಲಿಯೇ ಅದನ್ನು ಅಲ್ಲಿ ಉದಾಹರಿಸಿದ್ದಾರೆ ಎಂದು ತಿಳಿಯಬೇಕು ಎಂದರ್ಥ.

**प्रकाशः** – ननु श्रुतावुपासकाद्भूयस्त्वस्याप्रतीतेश्श्रुत्यन्तरात्तथा कल्पनस्य विलम्बितत्वादापाततः साधारण्यमस्तीत्यनुशयादाह – **प्राणप्रापक इति** ।।

'ಪ್ರಾಣೋ ವಾವ ಸರ್ವೇಭ್ಯೋ ಭೂಯಾನ್' ಎಂಬ ಶ್ರುತಿಯಲ್ಲಿ ಉಪಾಸಕರಿಗಿಂತ ಪ್ರಾಣನು ಉತ್ತಮನಾಗಿದ್ದಾನೆಂದು ತಿಳಿಯುತ್ತಿಲ್ಲ. ಮತ್ತೊಂದು ಶ್ರುತಿಯ ಆಧಾರದಿಂದ ಈ ಅರ್ಥವನ್ನು ಕಲ್ಪಿಸಬೇಕು. ಇದು ವಿಲಂಬವಾಗುತ್ತದೆ. ಆಪಾತತಃ ನೋಡಿದಾಗ ಎಲ್ಲರಿಗಿಂತಲೂ ಪ್ರಾಣನು ಉತ್ತಮನಾಗಿದ್ದಾನೆಂಬರ್ಥವೇ ತಿಳಿಯುತ್ತದೆ. ಹೀಗಿರುವಾಗ ಇದರಲ್ಲಿ ಸಕಲರಿಗಿಂತ ಉತ್ತಮತ್ವವು ಹೇಳಲ್ಪಟ್ಟಿಲ್ಲವೆಂದು ಹೇಗೆ ಹೇಳುತ್ತೀರಿ? ಎಂಬ ಆಶಂಕೆಯು ಪ್ರಾಪ್ತವಾಗುವುದರಿಂದ; ಮತ್ತೊಂದು ಸಮಾಧಾನವನ್ನು 'ಪ್ರಾಣಪ್ರಾಪಕ' ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ.

**प्रकाशः** – प्रागप्येवं स्यात् । वैरूप्यं कुत इत्यत आह – **द्युभ्वादीति** ।।

ಹಾಗಾದರೆ ಹಿಂದಿನ ಅಧಿಕರಣದಲ್ಲಿಯೂ ಉಪಕ್ರಮ ಪ್ರಮಾಣವನ್ನೇ ಹೇಳಬೇಕಿತ್ತು. ಅಥವಾ ಅಲ್ಲಿ ಸಮಾಖ್ಯಾಪ್ರಮಾಣವನ್ನು ಹೇಳಿರುವುದರಿಂದ ಇಲ್ಲಿಯೂ ಅದನ್ನೇ ಹೇಳಬೇಕಿತ್ತು. ವಿಭಿನ್ನ ಶೈಲಿಯಲ್ಲೇಕೆ ಪೂರ್ವಪಕ್ಷ ಮಾಡುತ್ತಿದ್ದೀರಿ ? ಎಂಬ ಪ್ರಶ್ನೆಗೆ 'ದ್ಯುಭ್ವಾದ್ಯಧಿಕರಣೇ ತು' ಎಂಬುದರಿಂದ ಉತ್ತರಿಸಿದ್ದಾರೆ. ದ್ಯುಭ್ವಾದ್ಯಧಿಕರಣದಲ್ಲಿ ಉಪಕ್ರಮ ಪ್ರಮಾಣವೇ ಇಲ್ಲದ ಕಾರಣ ಸಮಾಖ್ಯಾಪ್ರಮಾಣವನ್ನು ಅನುಸರಿಸುವುದು ಅನಿವಾರ್ಯವಾಗಿತ್ತು ಎಂದು ಉತ್ತರ.

**प्रकाशः** – उक्तसाधारण्यस्यातिप्रसङ्गमाशङ्क्याऽऽह – **यद्यपीति** ।।

ಉಪಕ್ರಮಪ್ರಮಾಣದಿಂದ ಹಾಗೂ ಸಮಾಖ್ಯಾಪ್ರಮಾಣದಿಂದ 'ಭೂಮಾ' ಎಂಬ ಶಬ್ದವು ಉಭಯಸಾಧಾರಣವಾಗುವುದಾದರೆ ಸರ್ವಗತತ್ವಾಧಿಕರಣದಲ್ಲಿಯೂ ಆದಿತ್ಯವಿಷಯದಲ್ಲಿ ಉಪಕ್ರಮ ಪ್ರಮಾಣವಿದೆ; ವಿಷ್ಣುವಿಷಯದಲ್ಲಿ ಸಮಾಖ್ಯಾಪ್ರಮಾಣವಿದೆ. ಆದ್ದರಿಂದ ಸರ್ವಗತತ್ವವೂ ಸಹ ಉಭಯತ್ರಪ್ರಸಿದ್ಧವಾಗಬೇಕಲ್ಲವೇ? ಎಂಬ ಅತಿಪ್ರಸಂಗಕ್ಕೆ 'ಯದ್ಯಪಿ' ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾರೆ.

ಭೂಮಾಧಿಕರಣ (೧-೩-೨)

**प्रकाशः** – ''अन्तर्बहिश्च तत्सर्वं व्याप्य नारायणस्स्थिः'' इत्यादौ सर्वगतत्वं प्रसिद्धम् । तथाप्यत्राभिप्रेतस्यार्भकौकस्त्वस्य काप्यसम्मतेरित्यर्थः । प्रकृते तु नैवमिति सोपष्टम्भमाह – **इह त्विति** ।।

'ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ' ಇತ್ಯಾದಿಯಾಗಿ ವಿಷ್ಣುವಿನಲ್ಲಿ ಸರ್ವಗತತ್ವವೇನೆ ೂೀಪ್ರಸಿದ್ಧವಾಗಿದೆ. ಆದರೆ ಅರ್ಭಕೌಕಸ್ತ್ವ ರೂಪವಾದ ಸರ್ವಗತತ್ವವನ್ನು ಪೂರ್ವಪಕ್ಷಿಯು ಯಾವುದೇ ವಾಕ್ಯದಲ್ಲಿಯೂ ಸಹ ಒಪ್ಪಿಲ್ಲ. ಆದ್ದರಿಂದ ಅದು ಅನ್ಯತ್ರಪ್ರಸಿದ್ಧವೇ ಆಗುತ್ತದೆ. ಆದರೆ ಪ್ರಕೃತ 'ಭೂಮಾ' ಎಂಬ ಶಬ್ದವು ಉಪಕ್ರಮಪ್ರಮಾಣದಲ್ಲಿ ಮಾತ್ರ ವಿಷ್ಣುವಿಷಯಕವಲ್ಲ. ಉಳಿದ ಸಮಾಖ್ಯಾದಿ ಪ್ರಮಾಣಗಳಲ್ಲಿ ವಿಷ್ಣುವಿಷಯಕವಾಗಬಹುದೆಂದು ಪೂರ್ವಪಕ್ಷಿಯು ಅಭಿಪ್ರಾಯ ಪಟ್ಟಿದ್ದಾನೆ. ಈ ಕಾರಣದಿಂದ 'ಭೂಮಾ' ಶಬ್ದವು ಉಭಯತ್ರಪ್ರಸಿದ್ಧವಾಗಿದೆಯೆಂಬುದಾಗಿ 'ಇಹ ತು' ಇತ್ಯಾದಿ ಗ್ರಂಥದಿಂದ ಪ್ರತಿಪಾದಿಸುತ್ತಿದ್ದಾರೆ.

**प्रकाशः** – भूमशब्दस्य रूढत्वोक्तेर्भावप्रत्ययान्तत्वासम्मतेर्भूमत्वस्येति साधु । तर्ह्यवधारणायोग इत्यत आह – **वायोरेवेति** ।। नतु सर्वत्रेत्यर्थः ।

'ಭೂಮಾ' ಎಂಬ ಶಬ್ದವು ಧರ್ಮವಾಚಕವಾಗಿದೆ. ಅಂದರೆ ಭಾವಾರ್ಥದಲ್ಲಿ 'ಇಮನಿಚ್' ಪ್ರತ್ಯಯವು ಬಂದು 'ಭೂಮಾ' ಎಂಬ ಶಬ್ದವು ನಿಷ್ಪನ್ನವಾಗಿದೆ. ಪುನಃ ಇದರ ಮೇಲೆ ಭಾವಾರ್ಥದಲ್ಲಿ 'ತ್ವ' ಪ್ರತ್ಯಯವನ್ನು ಹೇಳಲು ಸಾಧ್ಯವಿಲ್ಲ. ಹೀಗಿರುವಾಗ ಗ್ರಂಥಕಾರರು 'ಭೂಮತ್ವಸ್ಯ' ಎಂದು ಹೇಗೆ ಹೇಳಿದರು? ಎಂದರೆ ಪ್ರಕೃತ ವಿವಕ್ಷಿಸಿರುವ 'ಭೂಮಾ' ಎಂಬ ಶಬ್ದವು ರೂಢವಾಗಿದೆಯೆಂದು ಗ್ರಂಥಕಾರರು ಅಭಿಪ್ರಾಯ ಪಟ್ಟಿದ್ದಾರೆ. ಅಂದರೆ ಪ್ರಕೃತ ವಿವಕ್ಷಿಸಿದ 'ಭೂಮಾ' ಎಂಬ ಶಬ್ದವು ಧರ್ಮವಾಚಕವಾಗಿದೆ ಹೊರತು, ಧರ್ಮಿವಾಚಕವಾಗಿಲ್ಲ. ಆದ್ದರಿಂದ ಭಾವಾರ್ಥದಲ್ಲಿ ಪುನಃ 'ತ್ವ' ಪ್ರತ್ಯಯವನ್ನು ಹೇಳಬಹುದು.

'ಭೂಮಾ' ಎಂಬ ಶಬ್ದವು ಉಭಯಸಾಧಾರಣವಾಗುವುದಾದರೆ ವಾಯುವೇ ಭೂಮನೆಂದು ಹೇಗೆ ಅವಧಾರಣ ಮಾಡುತ್ತೀರಿ? ಎಂಬ ಪ್ರಶ್ನೆಗೆ 'ವಾಯೋರೇವ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. ವಿಷಯವಾಕ್ಯದಲ್ಲಷ್ಟೇ ವಾಯುವು ಮಾತ್ರ ಪ್ರತಿಪಾದ್ಯ; ಬೇರೆ ಕಡೆ ಅಲ್ಲವೆಂದು ಇದರ ಅರ್ಥ.

**प्रकाशः** – पूर्वपक्षे प्राणश्रुतेर्निरवकाशत्वयुक्तिसूचनार्थं वा तदित्याह – **अत्रेति** ।।

ಅಥವಾ ಪೂರ್ವಪಕ್ಷದಲ್ಲಿ ಪ್ರಾಣಶ್ರುತಿಯು ನಿರವಕಾಶವಾಗಿದೆಯೆಂದು ಆಕ್ಷೇಪಿಸಲಾಗಿದೆ. ಆ ನಿರವಕಾಶತ್ವಕ್ಕೆ ಯುಕ್ತಿಯನ್ನು ಸೂಚಿಸುವುದಕ್ಕಾಗಿಯೂ ಅವಧಾರಣವನ್ನು ಹೇಳಿದ್ದಾರೆಂದು ತಿಳಿಯಬೇಕು. ಇದನ್ನೇ 'ಅತ್ರ' ಇತ್ಯಾದಿ ವಾಕ್ಯದಿಂದ ಪ್ರತಿಪಾದಿಸಿದ್ದಾರೆ.

**प्रकाशः** – नन्वेवं विषयवाक्ये वायोरेव भूमत्वमित्याशयवर्णनेऽन्यत्राऽनन्दमयस्य विष्णुत्वेऽप्यदोषात्तदाक्षेपायोग इत्यत आह – **टीकेति** ।। इयता ग्रन्थेनोक्तस्य फलमाह – **तस्मादिति** ।।

ಪರಿಪೂರ್ಣಚಂದ್ರಿಕಾ

ವಿಷಯವಾಕ್ಯದಲ್ಲಿ ವಾಯುವೇ ಭೂಮನಾಗಿದ್ದಾನೆಂಬ ಅಭಿಪ್ರಾಯವನ್ನು ಹೇಳುವುದಾದರೆ ಉಳಿದ ವಾಕ್ಯಗಳಲ್ಲಿ ವಾಯುದೇವನು ಪ್ರತಿಪಾದ್ಯನಾಗಬೇಕಾಗಿಲ್ಲ. ಆವಾಗ ಆನಂದಮಯವಾಕ್ಯವು ವಿಷ್ಣುವನ್ನೇ ಪ್ರತಿಪಾದಿಸಬಹುದು. ಹೀಗಿರುವಾಗ ಆನಂದಮಯತ್ವವನ್ನು ಈ ಅಧಿಕರಣದ ಪೂರ್ವಪಕ್ಷದಿಂದ ಆಕ್ಷೇಪಿಸಲು ಹೇಗೆ ಸಾಧ್ಯ ? ಎಂಬ ಪ್ರಶ್ನೆಗೆ 'ಟೀಕೋಕ್ತೇಃ' ಎಂಬುದಾಗಿ ಉತ್ತರಿಸಿದ್ದಾರೆ. ಇಲ್ಲಿಯ ತನಕ ಹೇಳಿದ ಗ್ರಂಥದ ಫಲವನ್ನು 'ತಸ್ಮಾತ್' ಇತ್ಯಾದಿ ವಾಕ್ಯದಿಂದ ಉಪಸಂಹಾರ ಮಾಡುತ್ತಿದ್ದಾರೆ.




ಅಥವಾ 'ಅತ ಏವ ಪ್ರಾಣಃ' ಎಂಬ ಸೂತ್ರದಲ್ಲಿಯೇ ಪ್ರಾಣಶಬ್ದವನ್ನು ವಿಷ್ಣುಪರವೆಂದು ನಿರ್ಣಯಿಸಿದ್ದಾಗಿದೆ. ಆದ್ದರಿಂದ ಉಪಕ್ರಮದಲ್ಲಿರುವ ಪ್ರಾಣಶಬ್ದವು ಸಾವಕಾಶವಾಯಿತು. ಸಮಾಖ್ಯಾಪ್ರಮಾಣದಲ್ಲಿರುವ ವಿಷ್ಣುಶಬ್ದವು ಪ್ರಾಣನಲ್ಲಿ ಸಮನ್ವಯವಾಗದ ಕಾರಣ ನಿರವಕಾಶವಾಗಿದೆ. ವಾಸ್ತವಿಕವಾಗಿ ಉಪಕ್ರಮವು ಸಮಾಖ್ಯಾಪ್ರಮಾಣಕ್ಕಿಂತ ಬಲಿಷ್ಠವಾಗಿದ್ದರೂ ಸಾವಕಾಶವಾಗಿರುವುದರಿಂದ ಸಮಾಖ್ಯಾಪ್ರಮಾಣಕ್ಕೆ ಹಾಗೂ ಉಪಕ್ರಮ ಪ್ರಮಾಣಕ್ಕೆ ಸಮಾನ ಬಲವನ್ನು ಹೇಳಬಹುದು.

ಈ ಅಧಿಕರಣದಲ್ಲಿ 'ಭೂಮಾ' ಎಂಬ ಶಬ್ದವು ಉಭಯಸಾಧಾರಣವಾಗಿದೆಯೆನ್ನಲು ಉಪಕ್ರಮ ವಾಕ್ಯ ಹಾಗೂ ಸಮಾಖ್ಯಾಪ್ರಮಾಣಗಳನ್ನು ಆಧರಿಸುತ್ತಿದ್ದಾರೆ. ಆದರೆ 'ಪ್ರಾಣೋ ವಾವ ಸರ್ವೇಭ್ಯೋ ಭೂಯಾನ್' ಎಂಬುದಾಗಿ ಪ್ರಾಣನ ವಿಷಯದಲ್ಲಿಯೂ ಸಮಾಖ್ಯಾಪ್ರಮಾಣವನ್ನೇ ಹೇಳಬಹುದು. ಹೀಗೆ ಹೇಳಿದಾಗ ಪೂರ್ವಪಕ್ಷ ಹಾಗೂ ಸಿದ್ಧಾಂತ ಪಕ್ಷಗಳಲ್ಲಿ ಸಮಬಲವಾದ ಪ್ರಮಾಣಗಳನ್ನು ಹೇಳಿದಂತಾಗುತ್ತದೆ. ಆದರೆ 'ಪ್ರಾಣೋ ವಾವ ಸರ್ವೇಭ್ಯೋ ಭೂಯಾನ್' ಎಂಬ ಸಮಾಖ್ಯಾಪ್ರಮಾಣದಲ್ಲಿ ಸಕಲ ದೇವತೆಗಳಿಗಿಂತಲೂ ಪ್ರಾಣನು ಉತ್ತಮನೆಂದು ಸ್ಪಷ್ಟವಾಗಿ ತಿಳಿಯುವುದಿಲ್ಲ. ಕೇವಲ ಉಪಾಸಕರಿಗಿಂತ ಉತ್ತಮನಾಗಿದ್ದಾನೆಂದಷ್ಟೇ ತಿಳಿಯುತ್ತದೆ. ಈ ಕಾರಣಕ್ಕಾಗಿ ಉಪಕ್ರಮಪ್ರಮಾಣವನ್ನೇ ಆಧರಿಸಿದ್ದಾರೆ.

ಹಿಂದಿನ ದ್ಯುಭ್ವಾದ್ಯಧಿಕರಣದಲ್ಲಿಯೂ ಉಪಕ್ರಮಪ್ರಮಾಣವನ್ನೇ ಹೇಳಬಹುದಿತ್ತಲ್ಲವೇ? ಎಂದು ಪ್ರಶ್ನಿಸಬಾರದು. ಅಲ್ಲಿ ರುದ್ರಾದಿ ಪ್ರಾಪಕವಾದ ಉಪಕ್ರಮಪ್ರಮಾಣವು ಇಲ್ಲದ ಕಾರಣದಿಂದಲೇ ಪೂರ್ವಪಕ್ಷ ಹಾಗೂ ಸಿದ್ಧಾಂತ ಪಕ್ಷಗಳಲ್ಲಿ ಸಮಬಲವಾದ ಸಮಾಖ್ಯಾಪ್ರಮಾಣಗಳನ್ನೇ ಆಶ್ರಯಿಸಲಾಗಿದೆ.

ಉಪಕ್ರಮ ಹಾಗೂ ಸಮಾಖ್ಯಾಪ್ರಮಾಣಗಳಿಂದ 'ಭೂಮಾ' ಎಂಬ ಶಬ್ದವು ಉಭಯ ಸಾಧಾರಣವಾಗಿದೆಯೆಂದು ಹೇಳುವುದಾದರೆ ಸರ್ವಗತತ್ವಾಧಿಕರಣದಲ್ಲಿಯೂ 'ತಸ್ಯೈತಸ್ಯಾಮಾದಿತ್ಯೋ ರಸಃ' ಎಂದು ಆದಿತ್ಯನಲ್ಲಿ ಶ್ರುತಿರೂಪ ಉಪಕ್ರಮಪ್ರಮಾಣವಿದೆ. ಬ್ರಹ್ಮನ ವಿಷಯದಲ್ಲಿ ಸಮಾಖ್ಯಾಪ್ರಮಾಣವಿದೆ. ಹಾಗಾಗಿ 'ಭೂಮಾ' ಎಂಬ ಶಬ್ದದಂತೆ ಸರ್ವಗತತ್ವವೂ ಸಹ ಉಭಯತ್ರಪ್ರಸಿದ್ಧವಾಗಬೇಕಲ್ಲವೇ? ಎಂಬುದು ಮುಂದಿನ ಪ್ರಶ್ನೆ. ಈ ಪ್ರಶ್ನೆಗೆ ಹೀಗೆ ಉತ್ತರಿಸಬೇಕು. ಸರ್ವಗತತ್ವಾಧಿಕರಣದಲ್ಲಿ ಯಾವುದೇ ಶ್ರುತಿಯಲ್ಲಿಯೂ ಸಹ ಅಲೌಕಿಕತ್ವವೆಂಬ ಸರ್ವಭೂತಗತತ್ವವನ್ನು ಪೂರ್ವಪಕ್ಷಿಯು ಬ್ರಹ್ಮನಲ್ಲಿ ಒಪ್ಪಿರುವುದಿಲ್ಲ. ಆದ್ದರಿಂದ ಸಮಾಖ್ಯಾಪ್ರಮಾಣವನ್ನೇ ಅಲ್ಲಿ ಹೇಳಲು ಸಾಧ್ಯವಿಲ್ಲ. ಆದರೆ ಪ್ರಕೃತ ಈ ಅಧಿಕರಣದ ಪೂರ್ವಪಕ್ಷಿಯು ಸಮಾಖ್ಯಾಶ್ರುತಿಯು ವಿಷ್ಣುಪರವಾಗಬಹುದೆಂದು ಒಪ್ಪಿಕೊಂಡು ಉಪಕ್ರಮದಲ್ಲಿರುವ 'ಭೂಮಾ' ಎಂಬ ಶಬ್ದವನ್ನಷ್ಟೇ ವಿಷ್ಣುಪರವಲ್ಲವೆಂದು ಆಕ್ಷೇಪಿಸುತ್ತಿದ್ದಾನೆ. ಹೀಗೆ ಎರಡೂ ಅಧಿಕರಣಗಳ ವ್ಯತ್ಯಾಸವನ್ನು ಗಮನಿಸಬೇಕು.

## ಭೂಮಾಧಿಕರಣ (೧-೩-೨)

'ಯೋ ವೈ ಭೂಮಾ ತತ್ಸುಖಮ್' ಇತ್ಯಾದಿಯಾಗಿ ಭೂಮರೂಪನಾದ ವಾಯು, ಆನಂದಮಯನಾಗದಿದ್ದರೆ ಇಲ್ಲಿ ಭೂಮನಿಗೆ ಹೇಳಲ್ಪಟ್ಟ ಸುಖವೂ ಸಹ ಕೂಡುವುದಿಲ್ಲ. ಆದ್ದರಿಂದ ಭೂಮನೆನಿಸಿದ ಮುಖ್ಯಪ್ರಾಣನೇ ಆನಂದಮಯನಾಗುತ್ತಾನೆ. ಹೀಗೆ 'ಭೂಮಾ' ಎಂಬ ಶಬ್ದವು ವಿಷ್ಣು ಹಾಗೂ ವಾಯು ಇಬ್ಬರಲ್ಲಿಯೂ ಸಾಧಾರಣವಾಗಿರುವುದರಿಂದ ಪಾದಸಂಗತಿಯು ಯುಕ್ತವಾಗಿದೆ.

• • • • •

### ಹಿಂದಿನ ಅಧಿಕರಣದಿಂದ ಅವಾಂತರಸಂಗತಿ ವಿಚಾರ

## तात्पर्यचन्द्रिका

**अवान्तरसङ्गतिस्तु "स एवाधस्तात्स उपरिष्टात्" "एवं विजानन्नात्मरतिरात्मक्रीडः" । "यो वै भूमा तदमृतम्" इत्यादिना भूम्नायुक्तस्य सर्वगतत्वादेः**

ಅನುವಾದ - ಈ ಅಧಿಕರಣಕ್ಕೆ ಅವ್ಯವಹಿತವಾದ ಹಿಂದಿನ ದ್ಯುಭ್ವಾದ್ಯಧಿಕರಣದಿಂದ ಅವಾಂತರ ಸಂಗತಿಯನ್ನು ಹೀಗೆ ತಿಳಿಯಬೇಕು - 'ಸ ಏವಾಧಸ್ತಾತ್ ಸ ಉಪರಿಷ್ಟಾತ್'' ಎಂಬ ವಾಕ್ಯದಲ್ಲಿ ಸರ್ವಗತತ್ವಧರ್ಮವನ್ನು ಭೂಮನಲ್ಲಿ ಹೇಳಲಾಗಿದೆ. 'ಏವಂ ವಿಜಾನನ್ ಆತ್ಮರತಿಃ ಆತ್ಮಕ್ರೀಡಃ' ಎಂಬ ಶ್ರುತಿಯಲ್ಲಿ ಭೂಮನ ಜ್ಞಾನದಿಂದ ಸ್ವರೂಪಾನಂದದ ಆವಿರ್ಭಾವವಾಗುತ್ತದೆಂದು ಹೇಳಲಾಗಿದೆ. 'ಯೋ ವೈ ಭೂಮಾತದಮೃತಮ್' ಎಂಬಲ್ಲಿ ಅಮೃತತ್ವಧರ್ಮವನ್ನು ಭೂಮನಲ್ಲಿ ಹೇಳಲಾಗಿದೆ.

**"ब्रह्मैवेदममृतम्" "पुरस्ताद्ब्रह्म पश्चाद्ब्रह्म दक्षिणतश्चोत्तरेण अधश्चोर्ध्वं च प्रसृतम् " "आत्मक्रीड आत्मरतिः" इत्यादिना द्युभ्वाद्यायतने श्रवणात्;**

ಹೀಗೆ ಭೂಮನಲ್ಲಿ ಹೇಳಲ್ಪಟ್ಟ ಧರ್ಮಗಳೆಲ್ಲವೂ ಸಹ ದ್ಯುಭ್ವಾದ್ಯಾಯತನನಲ್ಲಿಯೂ ಕೇಳಿಸುತ್ತಿದೆ. ''ಬ್ರಹ್ಮೈವೇದಮಮೃತಮ್'' ಎಂಬ ಶ್ರುತಿಯಲ್ಲಿ ಅಮೃತತ್ವ ಧರ್ಮವು, 'ಪುರಸ್ತಾತ್ ಬ್ರಹ್ಮ ಪಶ್ಚಾದ್ಬ್ರಹ್ಮ ದಕ್ಷಿಣತಶ್ಚೋತ್ತರೇಣ ಅಧಶ್ಚೋರ್ಧ್ವಂ ಚ ಪ್ರಸೃತಮ್'', ಎಂಬಲ್ಲಿ ಸರ್ವಗತತ್ವಧರ್ಮವು ''ಆತ್ಮಕ್ರೀಡ ಆತ್ಮರತಿಃ'' ಎಂಬಲ್ಲಿ ದ್ಯುಭ್ವಾದ್ಯಾಯತನನ ಜ್ಞಾನದಿಂದ ಸ್ವರೂಪಾನಂದದ ಆವಿರ್ಭಾವವು ಕೇಳಿಸುತ್ತಿದೆ.

**भूम्नोऽन्यत्वे द्युभ्वाद्यायतनमप्यन्यत्स्यादिति पूर्वाक्षेपेण पूर्वपक्षोत्थानादाक्षेपिकी ।**

ಪರಿಪೂರ್ಣಚಂದ್ರಿಕಾ

ಈ ಹಿಂದೆ ಹೇಳಿದ ಕಾರಣದಿಂದ ಒಂದು ವೇಳೆ ಭೂಮನೆನಿಸಿದವನು ಮುಖ್ಯಪ್ರಾಣಾದಿಗಳಾದರೆ ದ್ಯುಭ್ವಾದ್ಯಾಯತನರೂ ಸಹ ಮುಖ್ಯಪ್ರಾಣಾದಿಗಳೇ ಆಗುತ್ತಾರೆ. ಹೀಗೆ ಹಿಂದಿನ ಅಧಿಕರಣದ ದ್ಯುಭ್ವಾದ್ಯಾಯತನತ್ವವನ್ನು ಆಕ್ಷೇಪಿಸುತ್ತಿರುವುದರಿಂದ ಆಕ್ಷೇಪಿಕೀ ಎಂಬ ಅವಾಂತರಸಂಗತಿಯನ್ನು ತಿಳಿಯಬೇಕು.

**टीकायां तु समन्वेतव्यभूमशब्दसन्निहितत्वात्पूर्णानन्दत्वस्य तदाक्षिप्तम् ।**

ಹಾಗಾದರೆ ಟೀಕೆಯಲ್ಲಿ ಆನಂದಮಯಾಧಿಕರಣದಿಂದ ಸಂಗತಿಯನ್ನು ಏಕೆ ತೋರಿಸಿದ್ದಾರೆ ಎಂದರೆ ಸಮನ್ವಯ ಮಾಡಬೇಕಾದ 'ಭೂಮಾ' ಎಂಬ ಶಬ್ದದ ಜೊತೆಗೆ ಪೂರ್ಣಾನಂದತ್ವವು ಕೇಳಿಸುತ್ತಿದೆ. ಈ ದೃಷ್ಟಿಯಿಂದ ಆನಂದಮಯತ್ವವನ್ನೇ ಆಕ್ಷೇಪ ಮಾಡಿದ್ದಾರೆ ಹೊರತು, ಅವ್ಯವಹಿತವಾದ ಹಿಂದಿನ ಅಧಿಕರಣದಿಂದ ಸಂಗತಿಯಿರುವುದಿಲ್ಲವೆಂಬ ಅಭಿಪ್ರಾಯದಿಂದ ಅಲ್ಲ.

**प्रकाशः –**

एवं ''अस्ति शास्त्रादिसङ्गतिः'' इति टीकामुपपाद्यांशोपपादनेन विवृत्य ''श्रुत्यादिसङ्गतिः'' इत्यादिटीकया तुल्यन्यायतया सूचितामव्यवहितपूर्वाधिकरणसङ्गतिं स्वयमाह – **अवान्तरेति ॥**

ವಿವರಣೆ - 'ಅಸ್ತಿ ಶಾಸ್ತ್ರಾದಿಸಂಗತಿಃ' ಎಂಬ ಟೀಕೆಯಲ್ಲಿ ಶಾಸ್ತ್ರಸಂಗತಿ, ಅಧ್ಯಾಯ ಸಂಗತಿ ಹಾಗೂ ಪಾದಸಂಗತಿಗಳನ್ನು ಭೂಮಾಧಿಕರಣಕ್ಕೆ ಹೇಳಿದ್ದಾರೆ. ಇಲ್ಲಿ ಹೇಳಲ್ಪಟ್ಟ ಶಾಸ್ತ್ರಸಂಗತಿ ಹಾಗೂ ಅಧ್ಯಾಯಸಂಗತಿಗಳು ಸುಲಭವಾಗಿರುವುದರಿಂದ ಅದನ್ನು ಗ್ರಂಥಕಾರರು ವಿವರಿಸಲಿಲ್ಲ. ಕೇವಲ ವಿವರಿಸಲೇಬೇಕಾದ ಅಂಶವನ್ನು ಮಾತ್ರ ಎಂದರೆ ಪಾದಸಂಗತಿಯನ್ನಷ್ಟೇ ವಿವರಿಸಿದರು. ಪ್ರಕೃತ 'ಶ್ರುತ್ಯಾದಿಸಂಗತಿಃ' ಇತ್ಯಾದಿ ಟೀಕೆಯಲ್ಲಿ ಸಮಾನನ್ಯಾಯದಿಂದ ಸೂಚಿತವಾದ ಅವ್ಯವಹಿತವಾದ ಪೂರ್ವಾಧಿಕರಣಸಂಗತಿಯನ್ನು ಸ್ವತಃ 'ಅವಾಂತರಸಂಗತಿಸ್ತು' ಇತ್ಯಾದಿ ಗ್ರಂಥದಿಂದ ವಿವರಿಸುತ್ತಿದ್ದಾರೆ. ಅಂದರೆ ಟೀಕೆಯಲ್ಲಿ ಆನಂದಮಯಾಧಿಕರಣದಿಂದ ಆಕ್ಷೇಪಸಂಗತಿಯನ್ನು ತೋರಿಸಿದ್ದಾರೆ. ಸಮಾನನ್ಯಾಯದಿಂದ ಹಿಂದಿನ ಅಧಿಕರಣದಿಂದಲೇ ಸಂಗತಿಯನ್ನು ಸೂಚಿಸಿದ್ದಾರೆ. ಅದನ್ನು ಗ್ರಂಥಕಾರರು ಇಲ್ಲಿ ವಿವರಿಸಿದ್ದಾರೆಂದು ತಿಳಿಯಬೇಕು.

**प्रकाशः** – सर्वगतत्वात्मक्रीडत्वामृतत्वादिधर्माणामुभयत्र श्रवणाद्भूम्नोऽन्यत्वे प्राक्तनस्यापि तथात्वं स्यादित्याक्षेपेण पूर्वपक्षोत्थानादाक्षेपिकीत्यर्थः ।

'ಸರ್ವಗತತ್ವ', 'ಆತ್ಮಕ್ರೀಡತ್ವ', 'ಅಮೃತತ್ವ' ಇವೇ ಮೊದಲಾದ ಧರ್ಮಗಳು ಭೂಮನಲ್ಲಿ ಕೇಳಿಸುತ್ತಿರುವಂತೆ ದ್ಯುಭ್ವಾದ್ಯಾಯತನನಲ್ಲಿಯೂ ಕೇಳಿಸುತ್ತಿದೆ. ಒಂದುವೇಳೆ ಭೂಮನು ವಿಷ್ಣುವಿಗಿಂತ ಭಿನ್ನನಾದರೆ ಹಿಂದಿನ ಅಧಿಕರಣದಲ್ಲಿ ಹೇಳಲ್ಪಟ್ಟ ದ್ಯುಭ್ವಾದ್ಯಾಯತನನೂ ಸಹ ಅವನೇ ಆಗುತ್ತಾನೆ. ಹೀಗೆ

ಪೂರ್ವಾಧಿಕರಣದ ಸಿದ್ಧಾಂತವನ್ನು ಆಕ್ಷೇಪ ಮಾಡುವ ಮೂಲಕ ಪೂರ್ವಪಕ್ಷ ಹುಟ್ಟುತ್ತಿರುವುದರಿಂದ ಆಕ್ಷೇಪಿಕೀ ಸಂಗತಿಯಿರುತ್ತದೆಂದು ತಿಳಿಯಬೇಕು.

**प्रकाशः** – नच निर्णीतब्रह्मप्रकरणगतसर्वगतत्वादिबलेन भूम्न एव विष्णुत्वं स्यादिति वाच्यम् ।

ಪ್ರಶ್ನೆ - ನಿರ್ಣಯಿಸಲ್ಪಟ್ಟ ಬ್ರಹ್ಮಪ್ರಕರಣದಲ್ಲಿರುವ ಸರ್ವಗತತ್ವಾದಿ ಧರ್ಮಗಳಿಂದ ಭೂಮನೇ ವಿಷ್ಣುವಾಗಿದ್ದಾನೆಂದು ನಿರ್ಣಯಿಸಬಹುದಲ್ಲವೇ?

**प्रकाशः** – उत्क्रमणलिङ्गस्य हरावयोगेन निरवकाशतया तदनुरोधेन भूम्नोऽन्यत्वे सर्वगतत्वादेरप्यन्यधर्मतावश्यम्भावाद् द्युभ्वाद्यायतनत्वादेर्वायावप्युपपत्ते जायमानत्व-लिङ्गस्याप्यक्लेशेनोपपत्तेः ।

ಉತ್ತರ - ಉತ್ಕ್ರಮಣಾದಿ ಲಿಂಗಗಳು ಭಗವಂತನಲ್ಲಿ ಕೂಡುವುದಿಲ್ಲ. ಮತ್ತು ಮುಖ್ಯಪ್ರಾಣಾದಿಗಳಲ್ಲಿ ಮಾತ್ರ ಕೂಡುವುದರಿಂದ ನಿರವಕಾಶವಾಗಿದೆ. ಇದಕ್ಕನುಸಾರಿಯಾಗಿ ಭೂಮನು ವಿಷ್ಣುವಿಗಿಂತ ಬೇರೆಯವನಾದ ಮುಖ್ಯಪ್ರಾಣನೇ ಆಗುತ್ತಾನೆ. ಆದ್ದರಿಂದ ಸರ್ವಗತತ್ವಾದಿಗಳನ್ನೂ ಸಹ ಮುಖ್ಯಪ್ರಾಣಾದಿಗಳ ಧರ್ಮವೆಂದೇ ಅವಶ್ಯವಾಗಿ ಹೇಳಬೇಕು. ಹಿಂದಿನ ಅಧಿಕರಣದಲ್ಲಿ ಹೇಳಲ್ಪಟ್ಟ ದ್ಯುಭ್ವಾದ್ಯಾಯನತ್ವಾದಿಗಳು ವಾಯುವಿನಲ್ಲಿಯೂ ಉಪಪನ್ನವಾಗುತ್ತವೆ. ಅಷ್ಟೇ ಅಲ್ಲದೆ ಜಾಯಮಾನತ್ವವೆಂಬ ಹಿಂದಿನ ಅಧಿಕರಣದ ಪೂರ್ವಪಕ್ಷ ಲಿಂಗವನ್ನು ಕ್ಲೇಶವಿಲ್ಲದೇ ಉಪಪಾದಿಸಬಹುದು.

**प्रकाशः** – भूम्नो विष्णुत्वनिर्णयं विना तस्य ब्रह्मप्रकरणत्वानिर्णयाच्चेति भावः ।

ಮತ್ತು ಪ್ರಕರಣದಲ್ಲಿ ಕೇಳಿಸುತ್ತಿರುವ ಭೂಮನು ವಿಷ್ಣುವೇ ಆಗಿದ್ದಾನೆಂದು ಎಲ್ಲಿಯ ತನಕ ನಿಮಗೆ ನಿರ್ಣಯಿಸಲು ಬರುವುದಿಲ್ಲವೋ ಅಲ್ಲಿಯ ತನಕ ಇದನ್ನು ವಿಷ್ಣುಪ್ರಕರಣವೆಂದು ನಿರ್ಣಯಿಸಲೂ ಸಹ ಸಾಧ್ಯವಿಲ್ಲ. ಪ್ರಕೃತ ನಾವು ಉತ್ಕ್ರಮಣವೆಂಬ ಲಿಂಗದಿಂದ ಭೂಮನನ್ನು ಮುಖ್ಯಪ್ರಾಣನೆಂದು ಹೇಳುವಾಗ ನಿಮಗೆ ಭೂಮನನ್ನು ವಿಷ್ಣುವೆಂದು ಹೇಳಲು ಸಾಧ್ಯವಿಲ್ಲ.

**प्रकाशः** – यद्यपि सर्वगतत्वामृतत्वे एव भूमवाक्ये श्रुते । 'आत्मक्रीडः' इत्यादिकं तु ''अथात आत्मादेशः'' इत्यत्रोपरितनवाक्ये श्रुतम् ।

ಪ್ರಶ್ನೆ - ಸರ್ವಗತತ್ವ, ಅಮೃತತ್ವಗಳು ಮಾತ್ರ ಭೂಮನಲ್ಲಿ ಕೇಳಿಸುತ್ತಿವೆ. ಆತ್ಮಕ್ರೀಡತ್ವಾದಿಧರ್ಮಗಳು 'ಅಥಾತ ಆತ್ಮಾದೇಶಃ' ಎಂಬ ಮುಂದಿನ ವಾಕ್ಯದಲ್ಲಿ ಪ್ರತಿಪಾದ್ಯನಾದ ಆತ್ಮನಲ್ಲಿ ಕೇಳಿಸುತ್ತಿವೆ. ಹೀಗಿರುವಾಗ ಆತ್ಮಕ್ರೀಡತ್ವಾದಿಗಳನ್ನು ಭೂಮನ ಧರ್ಮವೆಂದು ಹೇಗೆ ಹೇಳಿದಿರಿ?

**प्रकाशः** – तथाऽपि भूमात्मनोरभेदाभिप्रायेणैवमुक्तम् ।

ಉತ್ತರ - ಭೂಮಾ ಹಾಗೂ ಆತ್ಮಾ ಇಬ್ಬರಿಗೂ ಅಭೇದವನ್ನು ಒಪ್ಪಿ ಎಲ್ಲವನ್ನು ಭೂಮನ ಧರ್ಮವೆಂದು ಹೇಳಿದ್ದೇವೆ. ಆದ್ದರಿಂದ ಆತ್ಮಕ್ರೀಡತ್ವಾದಿಗಳೂ ಸಹ ಭೂಮನ ಧರ್ಮವಾಗಬಹುದು.

**प्रकाशः** – यद्यप्यात्मक्रीडत्वादिकमुपासकधर्मः । यदाहुः ''आत्मरतिर्भगवद्रतिः'' इति । ''तेनैव क्रीडते नित्यं स्त्रीरूपो मिथुनो भवेत्'' इति च ।

ಪ್ರಶ್ನೆ - ಆತ್ಮಕ್ರೀಡತ್ವಾದಿಗಳನ್ನು ಭೂಮನ ಧರ್ಮವೆಂದು ಹೇಗೆ ಹೇಳಿದಿರಿ? ಅವು ಉಪಾಸಕನ ಧರ್ಮವಾಗಿವೆ. ಏಕೆಂದರೆ 'ಆತ್ಮರತಿಃ ಭಗವದ್‌ರತಿಃ' ಎಂದು ಛಾಂದೋಗ್ಯಭಾಷ್ಯದಲ್ಲಿ ವ್ಯಾಖ್ಯಾನಿಸಿದ್ದಾರೆ. ಮತ್ತು 'ತೇನೈವ ಕ್ರೀಡತೇ ನಿತ್ಯಂ ಸ್ತ್ರೀರೂಪೋ ಮಿಥುನೋ ಭವೇತ್' ಎಂಬಲ್ಲಿ ಬ್ರಹ್ಮದೇವರನ್ನೇ ಸ್ತ್ರೀಯನ್ನಾಗಿ ಮಾಡಿಕೊಂಡು ಪರಮಾತ್ಮನು ವಿಹಾರ ಮಾಡಿದನೆಂದು ಹೇಳಿದ್ದಾರೆ. ಇದರಿಂದಲೂ ಆತ್ಮರತಿಯು ಚತುರ್ಮುಖನೆಂಬ ಉಪಾಸಕನಾದ ಜೀವನ ಧರ್ಮವೆಂದು ತಿಳಿಯುತ್ತದಲ್ಲವೇ?

**प्रकाशः** – तथाऽप्युपासकक्रीडादिहेतुत्वं तद्धर्म इत्याशयेनैतदुक्तिः ।

ಉತ್ತರ - ಉಪಾಸಕರ ಕ್ರೀಡೆಗೆ ಪರಮಾತ್ಮನು ಕಾರಣನಾಗಿದ್ದಾನೆ. ಆದ್ದರಿಂದ 'ಆತ್ಮಕ್ರೀಡ' ಎಂಬ ಶಬ್ದಕ್ಕೆ 'ಉಪಾಸಕಕ್ರೀಡಾದಿಹೇತು' ಉಪಾಸಕನ ಕ್ರೀಡೆಗೆ ಕಾರಣವಾಗಿರುವಿಕೆ ಎಂಬರ್ಥವನ್ನು ವಿವಕ್ಷಿಸಬೇಕು. ಇಂತಹ ಪರಮಾತ್ಮನ ಧರ್ಮವೇ ಆಗಿದೆ.

**प्रकाशः** – एतेन ''आत्मशब्दाद् द्युभ्वाद्यायतनं ब्रह्मेत्युक्तम् । तत्रात्मशब्दः प्राणेऽनैकान्तिकः । 'तरति शोकम् आत्मवित्' इत्यत्राब्रह्मणि प्राणे प्रयोगादित्याक्षेपिकी'' इति कल्पतरूक्तं निरस्तम् ।

ಕಲ್ಪತರುವಿನಲ್ಲಿ ಹಿಂದಿನ ಅಧಿಕರಣದಿಂದ ಸಂಗತಿಯನ್ನು ಹೀಗೆ ಹೇಳಲಾಗಿದೆ - ''ಆತ್ಮಶಬ್ದಾದ್ ದ್ಯುಭ್ವಾದ್ಯಾಯತನಂ ಬ್ರಹ್ಮೇತ್ಯುಕ್ತಮ್ । ತತ್ರಾತ್ಮಶಬ್ದಃ ಪ್ರಾಣೇಽನೈಕಾಂತಿಕಃ । 'ತರತಿ ಶೋಕಮ್ ಆತ್ಮವಿತ್, ಇತ್ಯತ್ರ ಬ್ರಹ್ಮಣಿ ಪ್ರಾಣೇ ಪ್ರಯೋಗಾದಿತ್ಯಾಕ್ಷೇಪಿಕೀ'' ಆತ್ಮಶಬ್ದವಿರುವುದರಿಂದ ದ್ಯುಭ್ವಾದ್ಯಾಯತನನಾದವನು ಬ್ರಹ್ಮನೇ ಆಗುತ್ತಾನೆಂದು ಹಿಂದೆ ಹೇಳಲಾಯಿತು. ಆದರೆ ಆತ್ಮಶಬ್ದವೆಂಬ ಹೇತುವಿಗೆ ಪ್ರಾಣನಲ್ಲಿ ಅನೈಕಾಂತಿಕ ದೋಷ ಬರುತ್ತದೆ. 'ತರತಿ ಶೋಕಮ್ ಆತ್ಮವಿತ್' ಎಂಬಲ್ಲಿ ಅಬ್ರಹ್ಮನಾದ ಪ್ರಾಣನಲ್ಲಿ ಆತ್ಮಶಬ್ದವನ್ನು ಪ್ರಯೋಗಿಸಲಾಗಿದೆ. ವ್ಯಭಿಚರಿತವಾದ ಇಂತಹ ಆತ್ಮಶಬ್ದ ಬಲದಿಂದ ದ್ಯುಭ್ವಾದ್ಯಾಯತನನಾದವನು ಬ್ರಹ್ಮನೇ ಆಗಿದ್ದಾನೆಂದು ನಿರ್ಣಯಿಸಲಾಗದು. ಹೀಗೆ ಆಕ್ಷೇಪಿಕೀ ಸಂಗತಿಯನ್ನು ತಿಳಿಯಬೇಕು. ಈಗಾಗಲೇ ಹೇಳಿದ ವಿಚಾರಗಳಿಂದ ಕಲ್ಪತರುವಿನ ಈ ವಿಚಾರಗಳನ್ನು ನಿರಾಕರಿಸಿದಂತಾಯಿತು.

**प्रकाशः** – 'आत्मवित्' इत्यस्याध्यायादौ श्रुतत्वेन भूम्नि साक्षादश्रुततया तदाक्षेपायोगात् ।

ಅದು ಹೀಗೆ - 'ತರತಿ ಶೋಕಂ ಆತ್ಮವಿತ್' ಎಂಬ ವಾಕ್ಯವು ಅಧ್ಯಾಯದ ಪ್ರಾರಂಭದಲ್ಲಿ ಪ್ರಸಕ್ತವಾಗಿದೆ. ನೇರವಾಗಿ ಭೂಮನಲ್ಲಿ ಈ ಆತ್ಮಶಬ್ದವು ಕೇಳಿಸುತ್ತಿಲ್ಲ. ಆದ್ದರಿಂದ ಆತ್ಮಶಬ್ದವನ್ನು ಆಕ್ಷೇಪ ಮಾಡುವ ಮೂಲಕ ಸಂಗತಿಯನ್ನು ತೋರಿಸುವುದು ಅಯುಕ್ತವಾಗುತ್ತದೆ.

**प्रकाशः** – प्राणादेरब्रह्मत्वेऽपि ''अथात आत्मादेशः'' इत्यथशब्देन प्राक्तन-प्राणप्रकरणविच्छेदेनोक्तात्माभिप्रायेण 'आत्मवित्' इत्यस्योपपत्तेः ।

ಮತ್ತು ಪ್ರಾಣಾದಿಗಳು ಬ್ರಹ್ಮರಾಗದಿದ್ದರೂ ಸಹ 'ಅಥಾತ ಆತ್ಮಾದೇಶಃ' ಎಂಬಲ್ಲಿ ಪ್ರಕರಣ ವಿಚ್ಛೇದಕವಾದ 'ಅಥ' ಶಬ್ದದಿಂದ ಆತ್ಮಾ ಎಂದು ಹೇಳಿದ್ದರಿಂದ ಬ್ರಹ್ಮನು ಆತ್ಮನಾಗಬಹುದು. ಒಂದು ವೇಳೆ ಪ್ರಾಣನಲ್ಲಿ ಆತ್ಮಶಬ್ದವನ್ನು ಪ್ರಯೋಗಿಸಲಾಗಿದೆಯೆಂದು ನಿಶ್ಚಯವಾಗಿದ್ದರೆ ದ್ಯುಭ್ವಾದ್ಯಾಯತನನನ್ನು ಆಕ್ಷೇಪಿಸಬಹುದಿತ್ತು. ಆದರೆ ಹಾಗಿಲ್ಲ. ಆದ್ದರಿಂದ ಆತ್ಮಶಬ್ದವನ್ನು ಪ್ರಾಣವಿಷಯಕವೆಂದು ಹೇಳಲಾಗದು.

**प्रकाशः** – भूमगतत्वेन भूमवाक्य एव श्रुतामृतत्वादिमुखेनाक्षेपस्यैवोचितत्वाच्च।

ಮತ್ತು ಭೂಮವಾಕ್ಯದಲ್ಲಿಯೇ ಭೂಮನಲ್ಲಿ ಶ್ರುತವಾದ ಅಮೃತತ್ವಾದಿಗಳ ಮೂಲಕ ಆಕ್ಷೇಪ ಮಾಡುವುದೇ ಅತ್ಯಂತ ಉಚಿತವಾಗಿದೆ.

**प्रकाशः** – यत्तु श्रुतप्रकाशे ''यथा प्रकरणाविच्छेदेन परमात्मपरत्वं साधितं तथा जीवप्रकरणाविच्छेदेन जीवपरत्वमिति शङ्कोत्थानात्सङ्गति'' इत्यादि तदपि तेनैव निरस्तम् ।

ಶ್ರುತಪ್ರಕಾಶದಲ್ಲಿ ಸಂಗತಿಯನ್ನು ಹೀಗೆ ತೋರಿಸಿದ್ದಾರೆ - 'ಯಥಾ ಪ್ರಕರಣಾವಿಚ್ಛೇದೇನ ಪರಮಾತ್ಮಪರತ್ವಂ ಸಾಧಿತಂ ತಥಾ ಜೀವಪ್ರಕರಣಾವಿಚ್ಛೇದೇನ ಜೀವಪರತ್ವಮಿತಿ ಶಂಕೋತ್ಥಾನಾತಸಂಗತಿಃ' 'ಹಿಂದಿನ ದ್ಯುಭ್ವಾದ್ಯಧಿಕರಣದಲ್ಲಿ ಪರವಿದ್ಯಾವಿಷಯನಾದ ಬ್ರಹ್ಮನಲ್ಲಿ ದ್ಯುಭ್ವಾದ್ಯಾಯತನತ್ವವು ಕೇಳಿಸುತ್ತಿರುವುದರಿಂದ ಪೂರ್ವಪಕ್ಷವು ಹುಟ್ಟಲು ಸಾಧ್ಯವೇ ಇಲ್ಲವೆಂಬ ಶಂಕೆಗೆ ಪ್ರಕರಣ ವಿಚ್ಛೇದವಿರುವುದರಿಂದ ಪರವಿದ್ಯಾವಿಷಯನಾದವನು ವಿಷ್ಣುವಾದರೂ ಸಹ ದ್ಯುಭ್ವಾದ್ಯಾಯತನನು ಪರಮಾತ್ಮನಾಗುವುದಿಲ್ಲವೆಂದು ಆಕ್ಷೇಪವನ್ನು ಮಾಡಿಕೊಂಡಿದ್ದಾರೆ. ಸಿದ್ಧಾಂತ ಮಾಡುವಾಗ ಪರವಿದ್ಯಾವಿಷಯ ಪ್ರಕರಣ ಹಾಗೂ ದ್ಯುಭ್ವಾದ್ಯಧಿಕರಣ ಪ್ರಕರಣವು ಒಂದೇ ಆಗಿದೆ ಹೊರತು, ಬೇರೆ ಪ್ರಕರಣಗಳು ಅಲ್ಲವೆಂದು ನಿರ್ಣಯಿಸಿದ್ದಾರೆ. ಅದರಂತೆ ಇಲ್ಲಿಯೂ ಸಹ ಪ್ರಕರಣವನ್ನು ವಿಚ್ಛೇದ ಮಾಡದೇ ಜೀವನನ್ನು ಯಾವನಾದರೂ ಒಬ್ಬನನ್ನು ಜೀವನೆಂದು ಹೇಳಬಹುದಲ್ಲವೇ? ಎಂಬ ಆಕ್ಷೇಪವು ಬರುತ್ತದೆ. ಅದರ ಪರಿಹಾರಕ್ಕೋಸ್ಕರ ಈ ಅಧಿಕರಣವು ಹೊರಟಿದೆಯೆಂಬುದಾಗಿ ಸಂಗತಿಯನ್ನು ತಿಳಿಯಬೇಕು. ಹೀಗೆ ಆಕ್ಷೇಪ ಮಾಡಿಕೊಂಡು ಸಂಗತಿಯನ್ನು ಹೇಳಿದ್ದಾರೆ. ಇದನ್ನೂ ಸಹ ಈಗ ನಿರಾಕರಿಸಿದಂತಾಯಿತು.

**प्रकाशः** – अमृतत्वादेरनाक्षेपे पूर्वनिर्णीतब्रह्मधर्मैर्भूमा ब्रह्मेत्यपि वक्तुं शक्यत्वेन पूर्वपक्षानुदयप्रसङ्गात् ।

ಪರಿಪೂರ್ಣಚಂದ್ರಿಕಾ

ಅಮೃತತ್ವಾದಿಗಳನ್ನು ಆಕ್ಷೇಪ ಮಾಡದಿದ್ದರೆ ಹಿಂದೆ ನಿರ್ಣಯಿಸಲ್ಪಟ್ಟ ಬ್ರಹ್ಮನ ಧರ್ಮಗಳಿಂದ ಭೂಮನು ಬ್ರಹ್ಮನೇ ಆಗಿದ್ದಾನೆಂದೂ ಹೇಳಬಹುದು. ಆವಾಗ ಪೂರ್ವಪಕ್ಷವೇ ಹುಟ್ಟಲು ಸಾಧ್ಯವಿಲ್ಲ. ಅದಕ್ಕೋಸ್ಕರ ಮೊದಲು ಅಮೃತತ್ವಾದಿಗಳನ್ನು ಆಕ್ಷೇಪ ಮಾಡಲೇ ಬೇಕು.

**प्रकाशः** – पूर्वं प्रकरणविच्छेदशङ्काया एवायुक्तत्वादित्युक्तत्वाच्चेति ।

ಮತ್ತು ಹಿಂದಿನ ಅಧಿಕರಣದಲ್ಲಿ ಪ್ರಕರಣವಿಚ್ಛೇದವನ್ನು ಶಂಕಿಸಬಾರದೆಂದು ನಿರ್ಣಯಿಸಿ ಹೇಳಿರುವುದರಿಂದ ಪುನಃ ಅದನ್ನೇ ವಿವಕ್ಷಿಸಿ ಇಲ್ಲಿ ಪೂರ್ವಪಕ್ಷವನ್ನು ಮಾಡಲು ಬರುವುದಿಲ್ಲ.

आनन्दमयाक्षेपटीका तु प्रयोजनपरेति भावः ।

ಅವ್ಯವಹಿತವಾದ ಹಿಂದಿನ ಅಧಿಕರಣದಿಂದಲೇ ಹೀಗೆ ಸಂಗತಿಯನ್ನು ತೋರಿಸಲು ಬರುವಾಗ ಆನಂದಮಯಾಧಿಕರಣದಿಂದ ಆಕ್ಷೇಪ ಮಾಡಿಕೊಂಡು ಟೀಕೆಯಲ್ಲಿ ತೋರಿಸಲ್ಪಟ್ಟ ಸಂಗತಿಯು ಕೇವಲ ಪ್ರಯೋಜನ ಪರವಾಗಿದೆಯೆಂದು ತಿಳಿಯಬೇಕು.

**प्रकाशः** – ननूक्तरीत्या सन्निहितपूर्वाक्षेपे सङ्गतिफलयोर्द्वयोरपि सम्भवात्किं व्यवहिताक्षेपेणेत्यत आह – **टीकायां त्विति** ॥

ಹಿಂದೆ ಹೇಳಿದಂತೆ ಹಿಂದಿನ ಅಧಿಕರಣದಿಂದಲೇ ಸಂಗತಿ ಹಾಗೂ ಫಲಗಳನ್ನು ತೋರಿಸಲು ಬರುವಾಗ ವ್ಯವಹಿತವಾದ ಆನಂದಮಯಾಧಿಕರಣದಿಂದ ಫಲವನ್ನು ಏಕೆ ತೋರಿಸುತ್ತಿದ್ದೀರಿ? ಎಂಬ ಪ್ರಶ್ನೆಗೆ 'ಟೀಕಾಯಾಂ ತು' ಇತ್ಯಾದಿ ಗ್ರಂಥದಿಂದ ಉತ್ತರಿಸುತ್ತಿದ್ದಾರೆ.




ಭೂಮನಲ್ಲಿ ಸರ್ವಗತತ್ವ, ಆತ್ಮಕ್ರೀಡಾತ್ವ, ಅಮೃತತ್ವ ಇವೇ ಮೊದಲಾದ ಧರ್ಮಗಳು ಕೇಳಿಸುತ್ತಿವೆ. ದ್ಯುಭ್ವಾದ್ಯಾಯತನನಲ್ಲಿಯೂ ಕೂಡ ಇವೇ ಧರ್ಮಗಳು ಕೇಳಿಸುತ್ತಿವೆ. ಆದ್ದರಿಂದ ಭೂಮಾ ಹಾಗೂ ದ್ಯುಭ್ವಾದ್ಯಾಯತನರು ಒಬ್ಬನೇ ಎಂದು ತಿಳಿಯುತ್ತದೆ. ಒಂದು ವೇಳೆ ಈಗಾಗಲೇ ಹೇಳಿದಂತೆ ಭೂಮನು ಮುಖ್ಯಪ್ರಾಣನಾದರೆ ದ್ಯುಭ್ವಾದ್ಯಾಯತನನೂ ಸಹ ಅವನೇ ಆಗುತ್ತಾನೆ. ಹೀಗಿರುವಾಗ ದ್ಯುಭ್ವಾದ್ಯಾಯತನನು ವಿಷ್ಣುವೆಂದು ಹಿಂದಿನ ಅಧಿಕರಣದಲ್ಲಿ ಹೇಗೆ ನಿರ್ಣಯಿಸಿದಿರಿ ? ಎಂದು ಆಕ್ಷೇಪಿಕೀ ಸಂಗತಿಯನ್ನು ತಿಳಿಯಬೇಕು. ಟೀಕೆಯಲ್ಲಿ ಆನಂದಮಯಾಧಿಕರಣದಿಂದ ಸಂಗತಿಯನ್ನು ತೋರಿಸಿರುತ್ತಾರೆ. ಯಾವ ನ್ಯಾಯವನ್ನು ವಿವಕ್ಷಿಸಿ ಆನಂದಮಯಾಧಿಕರಣದಿಂದ ಸಂಗತಿಯನ್ನು ತೋರಿಸಿದ್ದಾರೋ ಅದೇ ನ್ಯಾಯವು ಹಿಂದಿನ ಅಧಿಕರಣದಿಂದ ತೋರಿಸುವ ಸಂಗತಿಯಲ್ಲಿಯೂ ಇರುವುದರಿಂದ ಟೀಕೆಯಿಂದಲೇ ಪೂರ್ವಾಧಿಕರಣದ ಸಂಗತಿಯನ್ನು ಸೂಚಿಸಿದ್ದಾರೆ.



• • • • •

ಭೂಮಾಧಿಕರಣ (೧-೩-೨)

## ಅಧಿಕರಣದ ಸಂಶಯ ಪರಂಪರೆ

**तात्पर्यचन्द्रिका**

**अत्र "यो वै भूमा तत्सुखम्" इत्युक्तो भूमा किं मुख्यवायुरुत विष्णुरिति चिन्ता ।**

'ಯೋ ವೈ ಭೂಮಾ ತತ್ಸುಖಮ್' ಎಂಬ ಶ್ರುತಿಯಲ್ಲಿ ಯಾರು ಪೂರ್ಣನೋ, ಅವನೇ ಪೂರ್ಣಾನಂದವುಳ್ಳವನು. ಅಲ್ಪನಲ್ಲಿ ಪೂರ್ಣಾನಂದವಿಲ್ಲವೆಂದು ಹೇಳಲಾಗಿದೆ. ಇಲ್ಲಿ ಪೂರ್ಣನೆಂದು ಹೇಳಲ್ಪಟ್ಟ 'ಭೂಮಾ' ಎಂಬ ಶಬ್ದವು ಮುಖ್ಯಪ್ರಾಣನನ್ನು ಪ್ರತಿಪಾದಿಸುತ್ತಿದೆಯೋ? ಅಥವಾ ವಿಷ್ಣುವನ್ನೋ ? ಎಂದು ಸಂಶಯ.

**तदर्थं तत्सुखमित्युक्तं पूर्णसुखत्वं किं वायोरुत विष्णोरिति ।**

ಹಿಂದಿನ ಸಂಶಯವು ಪರಿಹಾರವಾಗಬೇಕೆಂದರೆ, 'ತತ್ಸುಖಮ್' ಎಂಬಲ್ಲಿ ಹೇಳಲ್ಪಟ್ಟ ಪೂರ್ಣಸುಖತ್ವವು ವಾಯುವಿನಲ್ಲಿ ಬರುತ್ತದೋ? ವಿಷ್ಣುವಿನಲ್ಲೋ? ಎಂಬ ಸಂಶಯವು ಪರಿಹಾರವಾಗಬೇಕು.

**तदर्थं भूम्नो ब्रह्मत्वे प्राणाद्भूयस्त्वानुक्तिरयुक्ता, उत युक्तेति ।**

ಹಿಂದಿನ ಸಂಶಯ ಪರಿಹಾರವಾಗಬೇಕೆಂದರೆ, ಭೂಮನು ಬ್ರಹ್ಮನಾದರೆ ಮುಖ್ಯಪ್ರಾಣನಿಗಿಂತ ಶ್ರೇಷ್ಠನಾದ ಮತ್ತೊಬ್ಬನನ್ನು ಹೇಳದಿರುವಿಕೆಯೆಂಬ ಅನುಕ್ತಿಯು ಅಯುಕ್ತವಾಗುತ್ತದೋ? ಅಥವಾ ಯುಕ್ತವಾಗುತ್ತದೋ? ಎಂಬ ಸಂಶಯ ಪರಿಹಾರವಾಗಬೇಕು.

**तदर्थं "प्राणो वा आशाया भूयान्" इत्युक्तः प्राणः किं मुख्यवायुरुत ब्रह्मेति ।**

ಹಿಂದಿನ ಸಂಶಯ ಪರಿಹಾರವಾಗಬೇಕೆಂದರೆ, 'ಪ್ರಾಣೋ ವಾ ಆಶಾಯಾ ಭೂಯಾನ್' ಎಂಬಲ್ಲಿ ಹೇಳಲ್ಪಟ್ಟ ಪ್ರಾಣನು ಮುಖ್ಯಪ್ರಾಣನೋ? ಅಥವಾ ಬ್ರಹ್ಮನೋ ? ಎಂಬ ಸಂಶಯವು ಪರಿಹಾರವಾಗಬೇಕು.

**प्राणस्य मुख्यवायुत्वे हि वायुतो ब्रह्मणो भूयस्त्वं वक्तव्यमिति तदनुक्तिरयुक्ता । ब्रह्मत्वे तु स्वस्मात्स्वस्य भूयस्त्वस्यावक्तव्यत्वेन तदनुक्तिर्युक्ता ।**

ಒಂದು ವೇಳೆ ಪ್ರಾಣನು ಮುಖ್ಯಪ್ರಾಣನಾದರೆ ವಾಯುವಿಗಿಂತ ಬ್ರಹ್ಮನಿಗೆ ಉತ್ತಮತ್ವವನ್ನು ಹೇಳಬೇಕು. ಆದರೆ ಶ್ರುತಿಯಲ್ಲಿ ಹಾಗೆ ಹೇಳಿರುವುದಿಲ್ಲ. ಹೀಗೆ ಅನುಕ್ತಿಯು ಅಯುಕ್ತವಾಗುತ್ತದೆ.

ಒಂದು ವೇಳೆ ಪ್ರಾಣನು ಬ್ರಹ್ಮನಾದರೆ ತನಗಿಂತ ತನ್ನಲ್ಲೇ ಉತ್ತಮತ್ವವನ್ನು ಹೇಳಿದಂತಾಗುತ್ತದೆ. ಹೀಗೆ ಹೇಳುವ ಅವಶ್ಯಕತೆ ಇಲ್ಲದ ಕಾರಣ ಪ್ರಾಣನಿಗಿಂತ ಉತ್ತಮತ್ವವನ್ನು ಶ್ರುತಿಯು ಹೇಳದಿರುವುದೇ ಯುಕ್ತವಾಗಿದೆ.

**तदर्थम् ''उत्क्रान्तप्राणान्'' इति प्राणे श्रुतमुत्क्रमणं किं ब्रह्मणि न युक्तमुत युक्तमिति ।**

ಹಿಂದಿನ ಸಂಶಯ ಪರಿಹಾರವಾಗಬೇಕೆಂದರೆ 'ಉತ್ಕ್ರಾಂತಪ್ರಾಣಾನ್' ಎಂಬಲ್ಲಿ ಪ್ರಾಣನಲ್ಲಿ ಹೇಳಲ್ಪಟ್ಟ ಉತ್ಕ್ರಮಣವು ಬ್ರಹ್ಮನಲ್ಲಿ ಅಯುಕ್ತವಾಗುತ್ತದೋ? ಅಥವಾ ಯುಕ್ತವಾಗುತ್ತದೋ? ಎಂಬ ಸಂಶಯವು ಪರಿಹಾರವಾಗಬೇಕು.

**प्रकाशः –**

विषयसंशयटीकां व्यनक्ति – **अत्रेति** ।। छान्दोग्ये सप्तमेऽध्याये नारदकृतप्रश्नं प्रति सनत्कुमारोक्तोत्तरत्वेन नामवाङ्मनस्सङ्कल्पचित्तध्यानविज्ञानबलान्नापस्तेज-आकाशस्मराशाप्राणशब्दवाच्यान् उषास्वाहापर्जन्यमित्राग्निवरुणचन्द्रभूतवाय्वनिरुद्ध-प्राणपुरन्दरोमाशिवसरस्वतीमुख्यप्राणानुत्तरोत्तरातिशयितत्वेनोक्त्वा

ವಿವರಣೆ - ವಿಷಯ ಹಾಗೂ ಸಂಶಯಗಳನ್ನು ನಿರೂಪಿಸುವ ಟೀಕೆಯನ್ನು 'ಅತ್ರ' ಇತ್ಯಾದಿ ಗ್ರಂಥದಿಂದ ವ್ಯಾಖ್ಯಾನಿಸುತ್ತಿದ್ದಾರೆ. ಛಾಂದೋಗ್ಯೋಪನಿಷತ್ತಿನ ಏಳನೇ ಅಧ್ಯಾಯವು ಸನತ್ಕುಮಾರರನ್ನು ಕುರಿತು ಮಾಡುವ ನಾರದರ ಪ್ರಶ್ನೆಯೊಂದಿಗೆ ಪ್ರಾರಂಭವಾಗುತ್ತದೆ. ನಾರದರ ಪ್ರಶ್ನೆಗೆ ಸನತ್ಕುಮಾರರು ಉತ್ತರಿಸುತ್ತಾ ನಾಮ, ವಾಕ್, ಮನಸ್, ಸಂಕಲ್ಪ, ಚಿತ್ತ , ಧ್ಯಾನ, ವಿಜ್ಞಾನ, ಬಲ, ಅನ್ನ, ಅಪ್, ತೇಜಸ್, ಆಕಾಶ, ಸ್ಮರ, ಆಶಾ, ಪ್ರಾಣ ಮೊದಲಾದ ಶಬ್ದಗಳಿಂದ ಪ್ರತಿಪಾದ್ಯರಾದ ಉಷಾ, ಸ್ವಾಹಾ, ಪರ್ಜನ್ಯ, ಮಿತ್ರ, ಅಗ್ನಿ, ವರುಣ, ಚಂದ್ರ, ಭೂತವಾಯು, ಅನಿರುದ್ಧ, ಪ್ರಾಣ, ಪುರಂದರ, ಉಮಾ, ಶಿವ, ಸರಸ್ವತೀ, ಮುಖ್ಯಪ್ರಾಣ ಇವರನ್ನು ಕ್ರಮವಾಗಿ ಉತ್ತಮರೆಂದು ಹೇಳಿರುತ್ತಾರೆ. ಅನಂತರ;

**प्रकाशः** – अनन्तरं नारदप्रश्नमन्तरेणैव ''एष तु वा अतिवदति यस्सत्येनातिवदति'' इत्युपक्रम्य सत्यविज्ञानमतिश्रद्धानिष्ठाकृतिसुखपर्यन्तानुक्त्वा वक्ति सनत्कुमारः –

ಮುಂದೆ ನಾರದರು ಪ್ರಶ್ನೆ ಮಾಡದಿದ್ದರೂ 'ಏಷ ತು ವಾ ಅತಿವದತಿ ಯಸ್ಸತ್ಯೇನಾತಿವದತಿ' 'ಯಾರು ಪರಮಾತ್ಮನನ್ನು ಪ್ರಾಣನಿಗಿಂತ ಉತ್ಕೃಷ್ಟನೆಂದು ಹೇಳುತ್ತಾನೋ, ಅವನೇ ಮುಖ್ಯನಾದ ಅಧಿಕಾರಿ' ಎಂದು

ಪ್ರಾರಂಭಿಸಿ ಸತ್ಯ, ವಿಜ್ಞಾನ, ಮತಿ, ಶ್ರದ್ಧಾ, ನಿಷ್ಠಾ, ಕೃತಿ, ಸುಖ ಎಂಬಲ್ಲಿಯ ತನಕ ಭಗವಂತನ ಅನೇಕ ವಿಧವಾದ ಗುಣಗಳನ್ನು ವರ್ಣಿಸಿದ್ದಾರೆ. ಅನಂತರ ಪುನಃ ಸನತ್ಕುಮಾರರು ಹೇಳುತ್ತಾರೆ -

**प्रकाशः** –''यो वै भूमा तत्सुखं नाल्पे सुखमस्ति, भूमैव सुखं भूमा त्वेव विजिज्ञासितव्य इति । भूमानं भगवो विजिज्ञास इति ।

ಯಾರು ಪೂರ್ಣವಾದ ಗುಣಗಳನ್ನು ಹೊಂದಿದ್ದಾನೋ, ಅವನೇ ಪೂರ್ಣಸುಖನಾಗುತ್ತಾನೆ. ಮುಕ್ತರಾದ ಜೀವರಲ್ಲಿಯೂ ಸಹ ಪೂರ್ಣಸುಖವಿರುವುದಿಲ್ಲ. ಆದ್ದರಿಂದ ಪೂರ್ಣಗುಣನಾದ ಪರಮಾತ್ಮನೇ ಪೂರ್ಣಸುಖನು. ಹೀಗೆ ಯಾರು ಪರಮಾತ್ಮನ ಸುಖವೆಂಬ ಗುಣವನ್ನು ತಿಳಿಯಲು ಅಪೇಕ್ಷಿಸುತ್ತಾನೋ, ಅವನು ಮೊದಲು ಗುಣಪರಿಪೂರ್ಣತ್ವವನ್ನು ತಿಳಿದುಕೊಳ್ಳಬೇಕು ಎಂಬುದಾಗಿ ಸನತ್ಕುಮಾರರು ಉಪದೇಶಿಸುತ್ತಾರೆ. ಪುನಃ ನಾರದರು, 'ಪೂಜ್ಯರೇ ! ಪರಮಾತ್ಮನ ಗುಣಪರಿಪೂರ್ಣತ್ವವನ್ನು ತಿಳಿಯಲು ನಾನು ಅಪೇಕ್ಷಿಸುತ್ತಿದ್ದೇನೆ. ಅದನ್ನೇ ನನಗೆ ಉಪದೇಶಿಸಿರಿ' ಎಂದು ಪ್ರಾರ್ಥಿಸುತ್ತಾರೆ.

**प्रकाशः** – यत्र नान्यत्पश्यति नान्यच्छृणोति नान्यद्विजानाति स भूमा । अथ यत्रान्यत्पश्यत्यन्यच्छृणोत्यन्यद्विजानाति तदल्पम् । यो वै भूमा तदमृतम् । अथ यदल्पं तन्मर्त्यम् । स भगवः कस्मिन्प्रतिष्ठित इति । स्वे महिम्नि यदि वा न महिम्नीति ।

'ಯಾರ ಅಧೀನವಾಗದೇ ಸ್ವತಂತ್ರವಾಗಿ ಬೇರೆ ಯಾವುದೂ ಸಹ ದರ್ಶನ, ಶ್ರವಣ, ವಿಶೇಷಜ್ಞಾನಗಳಿಗೆ ಗೋಚರವಾಗುವುದಿಲ್ಲವೋ, ಅಂತಹ ವ್ಯಕ್ತಿಯೇ ಗುಣಪರಿಪೂರ್ಣ ಸ್ವರೂಪನು. ಯಾರ ಅಧೀನವಾಗಿ ಅಸ್ವತಂತ್ರವಾಗಿ ಬೇರೆ ಪದಾರ್ಥವು ದರ್ಶನ, ಶ್ರವಣ, ವಿಶೇಷಜ್ಞಾನಗಳಿಗೆ ಗೋಚರವಾಗುತ್ತದೋ, ಅಂತಹ ವ್ಯಕ್ತಿಯು ಅಲ್ಪಗುಣಗಳುಳ್ಳವನು. ಗುಣಪರಿಪೂರ್ಣನಾದ ಪರಮಾತ್ಮನು ನಿತ್ಯಮುಕ್ತನು. ಮುಕ್ತರಾಗಿದ್ದರೂ ಅಲ್ಪಗುಣಗಳೇ ಆದ ಬ್ರಹ್ಮಾದಿಗಳು ಮೊದಲು ಮರಣವುಳ್ಳವರಾಗಿರುತ್ತಾರೆ'. ಹೀಗೆ ಸನತ್ಕುಕಮಾರರು ಗುಣಪೂರ್ಣನಾದ ಪರಮಾತ್ಮನ ಮಹಿಮೆಯನ್ನು ಉಪದೇಶಿಸಿದಾಗ ಪುನಃ ನಾರದರು ಪ್ರಶ್ನಿಸುತ್ತಾರೆ. 'ಆ ಪರಮಾತ್ಮನು ಯಾರನ್ನು ಆಶ್ರಯಿಸಿಕೊಂಡಿದ್ದಾನೆ' ಎಂದು. ಆಗ ಸನತ್ಕುಮಾರರು ಉತ್ತರಿಸುತ್ತಾರೆ - 'ಅವನು ತನ್ನ ಸ್ವರೂಪಭೂತವಾದ ಸಾಮರ್ಥ್ಯವನ್ನು ಆಶ್ರಯಿಸಿಕೊಂಡಿದ್ದಾನೆ. ಅಥವಾ ಬೇರೆ ಯಾವುದನ್ನೂ ಆಶ್ರಯಿಸಿಲ್ಲವೆಂದು ಹೇಳಬಹುದು' ಎಂದು ಉತ್ತರಿಸುತ್ತಾರೆ.

**प्रकाशः** – गो अश्वमिह महिमेत्याचक्षते हस्तिहिरण्यं दासभार्यं क्षेत्राण्यायतनानीति नाहमेवं ब्रवीमीति होवाचान्योन्यस्मिन्प्रतिष्ठित इति ।

ಹಸು, ಕುದುರೆ, ಆನೆ, ಸುವರ್ಣ, ಭೃತ್ಯರು, ಹೆಂಡತಿ, ಭೂಮಿ, ಮನೆ ಇವೆಲ್ಲವನ್ನೂ ಸಹ ಲೌಕಿಕರು ಸಂಪತ್ತೆಂದು ಪರಿಗಣಿಸುತ್ತಾರೆ. ಆದರೆ ಇಂತಹ ಅಲ್ಪವಾದ ಸಂಪತ್ತನ್ನು ಗುಣಪರಿಪೂರ್ಣನಾದ ಪರಮಾತ್ಮನು ಆಶ್ರಯಿಸಿದ್ದಾನೆಂದು ನಾನು ಹೇಳುವುದಿಲ್ಲ. 'ಪರಮಾತ್ಮನನ್ನು ಬಿಟ್ಟು ಬೇರೆ ಎಲ್ಲಾ ಪದಾರ್ಥಗಳು ತಮ್ಮ

ಸ್ವರೂಪಭೂತವಲ್ಲದ ಅಲ್ಪವಾದ ಸಂಪತ್ತನ್ನು ಆಶ್ರಯಿಸಿರುತ್ತಾರೆ. ಆದರೆ ಪರಮಾತ್ಮನು ಮಾತ್ರ ಹಾಗಿರುವುದಿಲ್ಲ' ಎಂದು ಮುಂದೆ ಸನತ್ಕುಮಾರರು ಸಮರ್ಥಿಸುತ್ತಾರೆ.

**प्रकाशः** – स एवाधस्तात्स एवोपरिष्टात्स पश्चात्स पुरस्तात्स दक्षिणतस्स उत्तरतस्स एवेदं सर्वम्'' इत्यादि । स भूमा विषय इत्यर्थः ।

ಗುಣಪೂರ್ಣನಾದ ನಾರಾಯಣನೆಂಬ ಪರಮಾತ್ಮನ ಲಕ್ಷಣವನ್ನು ಹೀಗೆ ತಿಳಿಯಬೇಕು - ಕೆಳಗೆ, ಮೇಲೆ, ಹಿಂದೆ, ಮುಂದೆ, ಎಡ, ಬಲ ಎಲ್ಲೆಡೆಯೂ ಅವನು ವ್ಯಾಪಿಸಿಕೊಂಡಿರುತ್ತಾನೆ. ಎಲ್ಲವೂ ಅವನ ಅಧೀನವಾಗಿದೆ. ಅವನೇ ಸ್ವತಂತ್ರನಾಗಿದ್ದಾನೆ ಎಂಬುದಾಗಿ.

ಈ ಪ್ರಕರಣದಲ್ಲಿ ಪ್ರಸಕ್ತನಾದ ಭೂಮನೇ ಈ ಅಧಿಕರಣಕ್ಕೆ ವಿಷಯನಾಗಿದ್ದಾನೆ.

**प्रकाशः** – **मुख्यवायुरिति** ।। जडत्वकोटेरग्रे निरसिष्यमाणत्वादिति भावः ।। **पूर्णसुखत्वमिति** ।। अत्र सुखशब्दस्य तादृशसुखवाचित्वं सिद्धान्ते स्पष्टयिष्यते ।।

'ಮುಖಮಾಯುಃ' ಎಂಬ ಪ್ರತೀಕಕ್ಕೆ ಜಡವಾದ ವಾಯುವನ್ನೇಕೆ ಇಲ್ಲಿ ಪೂರ್ವಪಕ್ಷವನ್ನಾಗಿ ಸ್ವೀಕರಿಸಿಲ್ಲ ಎಂದರೆ, ಜಡವಾದ ವಾಯುವನ್ನು ಇಲ್ಲಿ ವಿವಕ್ಷಿಸಲು ಬರುವುದಿಲ್ಲವೆಂದು ಮುಂದೆ ನಿರಾಕರಿಸುತ್ತಾರೆ ಎಂದಭಿಪ್ರಾಯ. ಗ್ರಂಥದಲ್ಲಿ 'ಪೂರ್ಣಸುಖತ್ವಮ್' ಎಂದು ಹೇಳಿದ್ದಾರೆ. ಸುಖಶಬ್ದಕ್ಕೆ ಪೂರ್ಣವಾದ ಸುಖವೆಂದೇ ಅರ್ಥವೆಂದು ಮುಂದೆ ಸಿದ್ಧಾಂತದಲ್ಲಿ ಸ್ಪಷ್ಟಪಡಿಸುತ್ತಾರೆ.

**प्रकाशः** – **भूयस्त्वेति** ।। ''अस्ति वाव प्राणाद्भूयः'' इत्यादिप्रश्नप्रतिवचनरूपेण भूयस्त्वानुक्तिरित्यर्थः । अस्पष्टांशे फलफलिभावमाह – **प्राणस्येति** ।।

'ಭೂಯಸ್ತ್ವ' ಎಂದು ಗ್ರಂಥದಲ್ಲಿದೆ. ಅಭಿಪ್ರಾಯವೇನೆಂದರೆ -'ಅಸ್ತಿ ವಾವ ಪ್ರಾಣಾದ್‌ಭೂಯಃ' 'ಪ್ರಾಣನಿಗಿಂತ ಉತ್ತಮನಿದ್ದಾನೇನು ?' ಎಂಬ ಪ್ರಶ್ನೆಗೆ ಉತ್ತರ ನೀಡುವ ಮೂಲಕವಾಗಿ ಭೂಮನನ್ನು ಉತ್ತಮನೆಂದು ಸನತ್ಕುಮಾರರು ಹೇಳಿರುವುದಿಲ್ಲ ಹೊರತು, ಪ್ರಶ್ನೆ ಮಾಡದೇ ಸ್ವತಃ ತಾವಾಗಿಯೇ ಹೇಳಿರುತ್ತಾರೆ. ಆದ್ದರಿಂದ ಪ್ರಶ್ನಪ್ರತಿವಚನರೂಪದಿಂದ ಭೂಯಸ್ತ್ವಾನುಕ್ತಿಯೆಂದು ತಿಳಿಯಬೇಕು. ಯಾವ ಅಂಶದಲ್ಲಿ ಫಲಫಲಿಭಾವವು ಸ್ಪಷ್ಟವಾಗಿ ತಿಳಿಯುವುದಿಲ್ಲವೋ, ಆ ಅಂಶದಲ್ಲಷ್ಟೇ ಫಲಫಲಿಭಾವವನ್ನು ತೋರಿಸುತ್ತಿದ್ದಾರೆ 'ಪ್ರಾಣಸ್ಯ' ಇತ್ಯಾದಿಯಾಗಿ

**प्रकाशः** – द्वाविह पूर्वपक्षौ । प्राणभूम्नोर्भेद इत्येकोऽभेद इत्यन्यः । तत्राद्यो न्यायविवरणानुसारी । द्वितीयो भाष्यानुसारी ।

ಒಟ್ಟು ಎರಡು ಪೂರ್ವಪಕ್ಷಗಳು - ಪ್ರಾಣ ಹಾಗೂ ಭೂಮಾ ಇಬ್ಬರೂ ಬೇರೆ ಬೇರೆ ಎಂದು ಮೊದಲನೆಯ ಪೂರ್ವಪಕ್ಷ. ಪ್ರಾಣನೇ ಭೂಮನಾಗಿದ್ದಾನೆಂಬುದು ಎರಡನೆಯ ಪೂರ್ವಪಕ್ಷ. ಮೊದಲನೆಯ ಪೂರ್ವಪಕ್ಷವು ನ್ಯಾಯವಿವರಣಕ್ಕೆ ಅನುಸಾರಿಯಾಗಿದೆ. ಎರಡನೆಯ ಪೂರ್ವಪಕ್ಷವು ಭಾಷ್ಯಕ್ಕೆ ಅನುಸಾರಿಯಾಗಿದೆ.

**प्रकाशः** – तत्राद्ये भूयस्त्वानुक्तिः पूर्वपक्षयुक्तिः । अन्त्ये चोत्क्रमणलिङ्गमिति व्यवस्थेति ज्ञापनाय प्राणस्य ब्रह्मत्वपक्षे भूयस्त्वानुक्तिघटनाय मध्ये फलफलिभावं प्रदर्श्य लिङ्गविषयां चिन्तां पश्चादाह – **तदर्थमुत्क्रान्तेति** ॥

ಮೊದಲನೆಯ ಪಕ್ಷದಲ್ಲಿ ಭೂಯಸ್ತ್ವದ ಅನುಕ್ತಿಯು ಪೂರ್ವಪಕ್ಷ ಯುಕ್ತಿ. ಎರಡನೇ ಪಕ್ಷದಲ್ಲಿ ಉತ್ಕ್ರಮಣಲಿಂಗವು ಪೂರ್ವಪಕ್ಷ ಯುಕ್ತಿ. ಈ ವ್ಯವಸ್ಥೆಯನ್ನು ತಿಳಿಸುವುದಕ್ಕಾಗಿಯೇ ಅಂದರೆ ಪ್ರಾಣನೇ ಬ್ರಹ್ಮನಾದರೆ ಮತ್ತು ಪ್ರಾಣನೇ ಬ್ರಹ್ಮನಾಗಿದ್ದಾನೆಂಬ ಪಕ್ಷದಲ್ಲಿ ಭೂಯಸ್ತ್ವಾನುಕ್ತಿಯು ಯುಕ್ತವಾಗುತ್ತದೆಂದು ತಿಳಿಸುವುದಕ್ಕಾಗಿ ಮಧ್ಯದಲ್ಲಿಯೇ ಫಲಫಲಿಭಾವವನ್ನು ತೋರಿಸಿ, ಕೊನೆಯಲ್ಲಿ ಉತ್ಕ್ರಮಣ-ಲಿಂಗವಿಷಯಕವಾದ ಸಂಶಯವನ್ನು ತೋರಿಸಿದ್ದಾರೆ. ವಸ್ತುತಃ ಪ್ರತಿಯೊಂದು ಅಧಿಕರಣದಲ್ಲಿಯೂ ಸಂಶಯಪರಂಪರೆಗಳೆಲ್ಲ ತೋರಿಸಿ, ಕೊನೆಯಲ್ಲಿ ಫಲಫಲಿಭಾವವನ್ನು ಹೇಳುತ್ತಾರೆ. ಆದರೆ ಇಲ್ಲಿ ಮಾತ್ರ ನಾಲ್ಕು ಸಂಶಯಗಳನ್ನು ತೋರಿಸಿ, ಕೊನೆಯ ಸಂಶಯವನ್ನು ತೋರಿಸುವ ಮೊದಲೇ ಫಲಫಲಿಭಾವವನ್ನು ಗ್ರಂಥಕಾರರು 'ತದರ್ಥಮುತ್ಕ್ರಾಂತ' ಎಂದು ತೋರಿಸಿದ್ದಾರೆ. ಇದರ ಅಂತರ್ಯವೇನೆಂದರೆ ಭೂಯಸ್ತ್ವಾನುಕ್ತಿಯೆಂಬ ಪೂರ್ವಪಕ್ಷಿಯಯುಕ್ತಿಯು ಪೂರ್ವಪಕ್ಷದಲ್ಲಿ ಯುಕ್ತವಾಗುತ್ತದೆಂದು ತೋರಿಸಬೇಕಾಗಿರುವುದು.

**प्रकाशः** – ''उत्क्रान्तः प्राणो येषां तानुत्क्रान्तप्राणान् । शूलेन समासं व्यतिषन्दहेत् । नैवैनं ब्रूयुः पितृहाऽसीति मातृहाऽसि'' इति **प्राणप्रकरणे प्राणस्यान्वयव्यतिरेकाभ्यां जीवनदत्वमुपपादयितुं श्रुतमुत्क्रमणमित्यर्थः** ।

'ಉತ್ಕ್ರಾಂತಃ ಪ್ರಾಣೋ ಯೇಷಾಂ ತಾನುತ್ಕ್ರಾಂತಪ್ರಾಣಾನ್ । ಶೂಲೇನ ಸಮಾಸಂ ವ್ಯತಿಷನ್‌ದಹೇತ್ । ನೈವೈನಂ ಬ್ರೂಯುಃ ಪಿತೃಹಾಽಸೀತಿ ಮಾತೃಹಾಽಸಿ' ಯಾರ ದೇಹದಿಂದ ಪ್ರಾಣನು ಉತ್ಕ್ರಾಂತನಾಗಿರುತ್ತಾನೋ ಅಂತಹ ತಂದೆ ಅಥವಾ ತಾಯಿಯ ಶರೀರವನ್ನು ಶೂಲದಿಂದ ಘಾಸಿಗೊಳಿಸಿದರೂ, ಅಥವಾ ಸುಟ್ಟರೂ, ತಂದೆಯನ್ನು ಕೊಂದವನು, ತಾಯಿಯನ್ನು ಕೊಂದವನು ಎಂದು ಯಾರೂ ಹೇಳುವುದಿಲ್ಲ. ಹೀಗೆ ಪ್ರಾಣಪ್ರಕರಣದಲ್ಲಿ ಪ್ರಾಣನ ಅನ್ವಯವ್ಯತಿರೇಕಗಳಿಂದ ಜೀವನ ಇರುವಿಕೆ ಹಾಗೂ ಇಲ್ಲದಿರುವಿಕೆಯನ್ನು ಸಮರ್ಥಿಸಿದ್ದಾರೆ. ಇದನ್ನು ಉಪಪಾದಿಸುವುದಕ್ಕಾಗಿ 'ಉತ್ಕ್ರಮಣಮ್' ಎಂದು ಹೇಳಿದ್ದಾರೆ.

**प्रकाशः** – नन्वेवमुत युक्तेत्यन्तचिन्तात्रयं प्रदर्श्य पश्चाद्भूमा मुख्यवायुरुत विष्णुरिति चिन्ता । तदर्थं प्रक्रमे श्रुतः प्राणः किं मुख्यवायुरुत ब्रह्मेति । तदर्थमुत्क्रान्तेत्यादिचिन्तेत्यपि चिन्तात्रयं प्रदर्शनीयमिति चेत् ।

ಹೀಗೆ ಚಿಂತಾಕ್ರಮವನ್ನು ತೋರಿಸುವ ಪಕ್ಷದಲ್ಲಿ 'ಉತ ಯುಕ್ತಾ' ಎಂಬ ಮೂರು ಸಂಶಯಗಳನ್ನು ತೋರಿಸಿದ ಮೇಲೆ ಭೂಮನು ಮುಖ್ಯಪ್ರಾಣನೋ? ಅಥವಾ ವಿಷ್ಣುವೋ? ಎಂಬ ಶಂಕಾ, ಇದರ ಪರಿಹಾರಕ್ಕಾಗಿ ಉಪಕ್ರಮದಲ್ಲಿ ಶ್ರುತನಾದ ಪ್ರಾಣನು ಮುಖ್ಯಪ್ರಾಣನೋ? ಅಥವಾ ಬ್ರಹ್ಮನೋ? ಎಂಬ

ಚಿಂತಾ ಇದಕ್ಕಾಗಿ 'ಉತ್ಕ್ರಾಂತ' ಇತ್ಯಾದಿ ವಾಕ್ಯದಿಂದ ಪ್ರತಿಪಾದ್ಯನು ಯಾರು ಎಂಬ ಚಿಂತಾ. ಹೀಗೆ ಮತ್ತೂ ಸಹ ಮೂರು ಚಿಂತೆಗಳನ್ನು ತೋರಿಸಬೇಕಿತ್ತು. ಆದರೆ ಗ್ರಂಥಕಾರರು ಇದನ್ನು ಏಕೆ ತೋರಿಸಿಲ್ಲ?

**प्रकाशः** – मैवम् । यदि प्राणभूम्नोर्भेदाभेदपक्षौ व्यवतिष्ठेयातां तदैवं भवेत् । न चैवम् । तयोरग्रे टीकारीत्या समुच्चयोक्तेः । अत एकप्रकारेणैव चिन्तापरम्परोपदर्शिता ।

ಹೀಗೆ ಪ್ರಶ್ನಿಸಬಾರದು. ಒಂದು ವೇಳೆ ಪ್ರಾಣ ಹಾಗೂ ಭೂಮಾ ಇಬ್ಬರಿಗೂ ಭೇದವಿದೆ ಅಥವಾ ಅಭೇದವಿದೆ ಎಂಬೆರಡು ಪಕ್ಷಗಳನ್ನು ಅಂಗೀಕರಿಸಿದ್ದರೆ, ಆವಾಗ ನೀವು ಹೇಳಿದಂತೆ ಪುನಃ ಮೂರು ಬಗೆಯ ಚಿಂತೆಗಳನ್ನು ತೋರಿಸಬಹುದಿತ್ತು. ಆದರೆ ಹಾಗಿಲ್ಲ, ಟೀಕೆಯ ಪ್ರಕಾರ ಮುಂದೆ ಹೇಳುವಂತೆ ಸಮುಚ್ಚಯಪಕ್ಷವನ್ನೇ ಸ್ವೀಕರಿಸಲಾಗಿದೆ. ಆದ್ದರಿಂದ ಗ್ರಂಥಕಾರರು ಒಂದೇ ಪ್ರಕಾರದಲ್ಲಿ ಸಂಶಯ ಪರಂಪರೆಯನ್ನು ತೋರಿಸಿದ್ದಾರೆ.

**प्रकाशः** – तथा चायमर्थः । यदि प्राणे श्रुतमुत्क्रमणलिङ्गं वक्ष्यमाणदिशा सर्वगते ब्रह्मणि न युक्तं तदोपक्रमे श्रुतस्य प्राणस्य वायुत्वात्ततोऽपि ब्रह्मणः श्रेष्ठत्वेन सिद्धान्तिनोपगतत्वात्प्रश्नप्रतिवचनाभ्यां प्राणाद्भूयस्त्वस्य वाच्यत्वेन तदनुक्तेरयुक्तत्वात्तस्यैव पूर्णसुखत्वं भूमत्वं चेति पूर्वपक्षे फलम् ।

ಸಿದ್ಧಾಂತ ಹಾಗೂ ಪೂರ್ವಪಕ್ಷಗಳ ಫಲಫಲಿಭಾವವನ್ನು ಹೀಗೆ ತಿಳಿಯಬೇಕು - ಒಂದು ವೇಳೆ ಪ್ರಾಣನಲ್ಲಿ ಶ್ರುತವಾದ ಉತ್ಕ್ರಮಣಲಿಂಗವು ಮುಂದೆ ಹೇಳುವ ಪ್ರಕಾರ ಸರ್ವಗತನಾದ ಬ್ರಹ್ಮನಲ್ಲಿ ಅಯುಕ್ತವಾದರೆ ಆಗ, ಉಪಕ್ರಮದಲ್ಲಿ ಶ್ರುತನಾದ ಪ್ರಾಣನು ವಾಯುವೇ ಆಗುತ್ತಾನೆ. ಅಂತಹ ವಾಯುವಿಗಿಂತ ಬ್ರಹ್ಮನು ಶ್ರೇಷ್ಠನೆಂದು ಸಿದ್ಧಾಂತಿಯು ಒಪ್ಪಿರುವುದರಿಂದ ಪ್ರಶ್ನೆ ಹಾಗೂ ಉತ್ತರಗಳಿಂದ ಪ್ರಾಣನಿಗಿಂತ ಉತ್ತಮತ್ವವನ್ನು ಬ್ರಹ್ಮನಿಗೆ ಹೇಳಬೇಕು. ಆದರೆ ಹಾಗೆ ಉಪನಿಷತ್ತಿನಲ್ಲಿ ಹೇಳಿರುವುದಿಲ್ಲ. ಹೀಗೆ ಹೇಳದಿರುವಿಕೆಯಿಂದಲೇ ಮುಖ್ಯಪ್ರಾಣನಿಗೆ ಪೂರ್ಣಸುಖತ್ವವನ್ನು ಹಾಗೂ ಭೂಮತ್ವವನ್ನು ಹೇಳಬೇಕೆಂಬುದು ಪೂರ್ವಪಕ್ಷದ ಫಲ.

**प्रकाशः** – यदा तु रूपविशेषादिना युक्तं तदा प्राणस्य ब्रह्मत्वात्स्वस्मात्स्वस्य भूयस्त्वायोगेन तदनुक्तेर्युक्तत्वात्पूर्णसुखत्वं भूमत्वं च विष्णोरेवेति सिद्धान्ते फलमिति ।

ಒಂದು ವೇಳೆ ಭಗವಂತನ ಅನೇಕ ರೂಪಗಳ ಭೇದದಿಂದ ತನ್ನಿಂದಲೇ ತನಗೆ ಭೂಯಸ್ತ್ವವನ್ನು ಹೇಳಿದ್ದು ಯುಕ್ತವಾಗುವುದಾದರೆ ಪ್ರಾಣನೂ ಸಹ ಬ್ರಹ್ಮನೇ ಆಗುತ್ತಾನೆ. ಆವಾಗ ತನ್ನಿಂದಲೇ ತನಗೆ ಉತ್ತಮತ್ವವು ಬರುವುದಿಲ್ಲವಾದ್ದರಿಂದ ಭೂಯಸ್ತ್ವದ ಅನುಕ್ತಿಯು ಯುಕ್ತವಾಗುತ್ತದೆ. ಆದ್ದರಿಂದ ಪೂರ್ಣಸುಖತ್ವ ಹಾಗೂ ಭೂಮತ್ವಗಳೆರಡು ವಿಷ್ಣುವಿನಲ್ಲೇ ಬರುತ್ತದೆಂಬುದು ಸಿದ್ಧಾಂತದ ಫಲ.

ಭೂಮಾಧಿಕರಣ (೧-೩-೨)

**प्रकाशः** – नन्वेवं ''व्यतिहारो विशिंषन्ति हीतरवत्'' इत्येतदवक्तव्यं प्राप्नोति । मैवम् ।। भेदपक्ष एव तस्य प्रवृत्तेः ।

ಭೂಮಾ ಹಾಗೂ ವಿಷ್ಣು ಇಬ್ಬರಿಗೂ ಐಕ್ಯವನ್ನು ಒಪ್ಪಿದರೆ 'ವ್ಯತಿಹಾರೋ ವಿಶಿಂಷಂತಿ ಹೀತರವತ್' ಎಂಬುದನ್ನು ಹೇಳುವ ಅವಶ್ಯಕತೆಯೇ ಇಲ್ಲ. ಇಬ್ಬರಿಗೂ ಐಕ್ಯವನ್ನು ಹೇಳಿದಾಗ ಭಾರತೀದೇವಿಗಿಂತ ವಿಷ್ಣುವೇ ಶ್ರೇಷ್ಠನೆಂದು ಹಾಗೂ ಪ್ರಾಣ ಹಾಗೂ ಬ್ರಹ್ಮ ಶಬ್ದಗಳಿಂದ ಅವನೇ ಪ್ರತಿಪಾದ್ಯನೆಂದು ನಿರ್ಣಯವಾಗುತ್ತದೆ. ಹೀಗಿರುವಾಗ ಪ್ರಶ್ನೋತ್ತರಗಳ ಅಧ್ಯಾಹಾರವು ಅನಾವಶ್ಯಕವಲ್ಲವೇ? ಎಂದು ಪ್ರಶ್ನಿಸಬಾರದು. ಏಕೆಂದರೆ ಭೇದಪಕ್ಷದಲ್ಲಷ್ಟೇ 'ವ್ಯತಿಹಾರೋ ವಿಶಿಂಷಂತಿ ಹೀತರವತ್' ಎಂಬುದು ಪ್ರವೃತ್ತವಾಗಿದೆ. ಭೂಮಾ ಹಾಗೂ ಪ್ರಾಣ ಇಬ್ಬರೂ ಸಹ ಬೇರೆಯೆಂದು ವಿವಕ್ಷಿಸಿದಾಗ ಪ್ರಶ್ನೋತ್ತರಗಳ ಅನಿವಾರ್ಯತೆ ಇರುತ್ತದೆ.

**प्रकाशः** – अभेदपक्षेऽपि प्राणान्तर्यामितयैवात्र प्राणपदेन ब्रह्मणः स्वीकारेण प्राणशब्दस्य मुख्यप्राणार्थकत्वस्यापि भावेन भूम्नः केवलब्रह्ममात्रत्वसिद्धये प्राणासाङ्कर्याय व्यतिहारस्यावश्यं वाच्यत्वाच्चेति ।

ಇನ್ನು ಪ್ರಾಣ ಹಾಗೂ ಬ್ರಹ್ಮ ಇಬ್ಬರಿಗೂ ಅಭೇದವನ್ನು ಒಪ್ಪಿದಾಗ ಪ್ರಾಣಪದವು ನೇರವಾಗಿ ಬ್ರಹ್ಮನನ್ನೇ ಪ್ರತಿಪಾದಿಸುವುದಿಲ್ಲ ಹೊರತಾಗಿ, ಮುಖ್ಯಪ್ರಾಣನ ಅಂತರ್ಯಾಮಿಯಾದ ಬ್ರಹ್ಮನನ್ನು ಪ್ರತಿಪಾದಿಸುತ್ತದೆಂದು ಸಿದ್ಧಾಂತದಲ್ಲಿ ಒಪ್ಪಲಾಗಿದೆ. ಆದ್ದರಿಂದ ಪ್ರಾಣಶಬ್ದಕ್ಕೆ ಮುಖ್ಯಪ್ರಾಣನೆಂಬರ್ಥವೂ ಸಹ ಇರುವುದರಿಂದ; ಕೇವಲ ಬ್ರಹ್ಮನನ್ನು ಪ್ರತಿಪಾದಿಸುವುದಕ್ಕಾಗಿ 'ಭೂಮಾ' ಎಂಬ ಶಬ್ದವನ್ನು ಪ್ರಯೋಗಿಸಲಾಗಿದೆ. ಆದ್ದರಿಂದ 'ಪ್ರಾಣ' ಎಂಬ ಶಬ್ದವು ಮುಖ್ಯಪ್ರಾಣ ಹಾಗೂ ಬ್ರಹ್ಮ ಇಬ್ಬರನ್ನೂ ಪ್ರತಿಪಾದಿಸಿದರೆ 'ಭೂಮಾ' ಎಂಬ ಶಬ್ದವು ಬ್ರಹ್ಮನನ್ನು ಮಾತ್ರ ಪ್ರತಿಪಾದಿಸುತ್ತದೆ. ಹೀಗೆ ಪ್ರಾಣನಿಂದ ಸಾಂಕರ್ಯಬರಬಾರದೆಂದು ವ್ಯತಿಹಾರವನ್ನು ಅವಶ್ಯವಾಗಿ ಹೇಳಬೇಕು.

**प्रकाशः** – नन्वेवं प्राण एव संशयधर्मी क्रियताम् । सूत्रे च प्राणपदमेव निवेश्यताम् । उभयत्रप्रसिद्धिश्च प्राणपदस्य ''आकाशोऽर्थान्तरत्वादि'' इत्यादावाकाशादिशब्दस्येव पूर्वोक्त्यन्यत्रप्रसिद्धिभ्यां भविष्यति ।

ಆಕ್ಷೇಪ - ಪ್ರಾಣಶಬ್ದವನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡುವುದಾದರೆ ಸೂತ್ರದಲ್ಲಿ ಪ್ರಾಣನನ್ನೇ ಸಂಶಯಧರ್ಮಿಯನ್ನಾಗಿ ಮಾಡಬಹುದಿತ್ತಲ್ಲವೇ ಅಂದರೆ 'ಭೂಮಾಸಂಪ್ರಸಾದಾತ್ ಅಧ್ಯುಪದೇಶಾತ್' ಎಂದು ಹೇಳುವ ಬದಲು 'ಪ್ರಾಣಸಂಪ್ರಸಾದಾತ್ ಅಧ್ಯುಪದೇಶಾತ್' ಎಂದೇ ಹೇಳಬಹುದಿತ್ತು. ಹೀಗೆ ಪ್ರಾಣಪದವನ್ನು ಸೂತ್ರದಲ್ಲಿ ಹೇಳುವುದರಿಂದ ಉಭಯತ್ರಪ್ರಸಿದ್ಧವಾಗಿದೆಯೆಂಬ ವಿಚಾರವು ಸುಲಭವಾಗಿ ತಿಳಿಯುತ್ತದೆ. ಏಕೆಂದರೆ 'ಆಕಾಶೋऽರ್ಥಾಂತರತ್ವಾದಿವ್ಯಪದೇಶಾತ್' ಇತ್ಯಾದಿ ಸೂತ್ರದಲ್ಲಿ ಆಕಾಶಶಬ್ದವು ಹೇಗೆ ಉಭಯತ್ರಪ್ರಸಿದ್ಧವಾಗಿದೆಯೋ ಅದರಂತೆ ಪ್ರಾಣಪದವೂ ಸಹ ಉಭಯತ್ರಪ್ರಸಿದ್ಧವಾಗಿದೆ. ಎಂದರೆ

ಪ್ರಥಮ ಪಾದದಲ್ಲಿ ಸಮನ್ವಯ ಮಾಡಲ್ಪಟ್ಟ ಆಕಾಶಶಬ್ದವು ವಿಷ್ಣುಪರವಾಗಿದೆಯೆಂಬುದನ್ನು ವಿವಕ್ಷಿಸಿ ಲೋಕತಃ ಅನ್ಯತ್ರಪ್ರಸಿದ್ಧವೂ ಆಗಿದೆಯೆಂಬ ವಿವಕ್ಷೆಯಿಂದ ಆಕಾಶಶಬ್ದವನ್ನು ಉಭಯತ್ರಪ್ರಸಿದ್ಧವೆಂದು ಪರಿಗಣಿಸಲಾಗಿದೆ. ಅದರಂತೆ 'ಅತ ಏವ ಪ್ರಾಣಃ' ಎಂಬ ಸೂತ್ರದಲ್ಲಿ ವಿಷ್ಣುವಿನಲ್ಲಿ 'ಪ್ರಾಣ' ಎಂಬ ಪದವನ್ನು ಸಮನ್ವಯ ಮಾಡಲಾಗಿದೆ. ಲೋಕರೂಢಿಯಿಂದ ಮುಖ್ಯಪ್ರಾಣನಲ್ಲಿಯೂ ಪ್ರಸಿದ್ಧವಾಗಿದೆ. ಹೀಗೆ ಉಭಯತ್ರಪಸಿದ್ಧವಾಗುವ ಪ್ರಯುಕ್ತ ಇದರ ಸಮನ್ವಯವೇ ಹೆಚ್ಚು ಸೂಕ್ತವಾಗುತ್ತದೆ.

**प्रकाशः** – नायं प्राणो ब्रह्म उत्क्रमणलिङ्गादिति पूर्वपक्षश्च ऋजुः । भूमा न विष्णुः तदभिन्नप्राणे श्रुतोत्क्रमणविरोधादित्युक्तिर्वक्रा ।

ಮತ್ತು ಈ ಪ್ರಾಣನು ಬ್ರಹ್ಮನಲ್ಲ. ಏಕೆಂದರೆ ಉತ್ಕ್ರಮಣಾದಿಲಿಂಗಗಳು ಕೇಳಿಸುತ್ತಿರುವುದರಿಂದ ಎಂದು ಪೂರ್ವಪಕ್ಷವನ್ನು ಸುಲಭವಾಗಿಯೇ ಮಾಡಬಹುದು. ಒಂದು ವೇಳೆ ಭೂಮಶಬ್ದವನ್ನು ಸಮನ್ವಯ ಮಾಡುವುದಾದರೆ ಭೂಮನು ವಿಷ್ಣುವಲ್ಲ. ಏಕೆಂದರೆ ಭೂಮನಿಗಿಂತ ಅಭಿನ್ನನಾದ ಪ್ರಾಣನಲ್ಲಿ ಉತ್ಕ್ರಮಣಾದಿಲಿಂಗಳು ಶ್ರುತವಾಗಿದೆ. ಆ ಲಿಂಗಗಳಿಂದ ವಿರೋಧ ಬರುತ್ತದೆಂದು ಪೂರ್ವಪಕ್ಷ ಮಾಡುವುದು ವಕ್ರವಾಗಿದೆ.

**प्रकाशः** – प्राणस्याविष्णुत्वात् तत्प्रकरणस्थभूम्नः पूर्णसुखस्य च अविष्णुत्वादानन्दमयोऽपि न विष्णुरिति पूर्वाक्षेपश्च भविष्यति ।

ಮತ್ತು ಪ್ರಾಣನು ವಿಷ್ಣುವಲ್ಲದ ಕಾರಣ ಪ್ರಾಣ ಪ್ರಕರಣದಲ್ಲಿರುವ ಭೂಮಾ ಹಾಗೂ ಪೂರ್ಣಸುಖಗಳೂ ಸಹ ವಿಷ್ಣುವಾಗಲು ಸಾಧ್ಯವಿಲ್ಲ. ಆದ್ದರಿಂದಲೇ ಆನಂದಮಯನೂ ಸಹ ವಿಷ್ಣುವಾಗುವುದಿಲ್ಲವೆಂದು ಹಿಂದಿನ ಅಧಿಕರಣದ ಮೇಲೆ ಆಕ್ಷೇಪಿಸಿ ಪೂರ್ವಪಕ್ಷವನ್ನು ಮಾಡಬಹುದು.

**प्रकाशः** – यथा छन्दोनये गायत्र्या अविष्णुत्वात्तदभिन्नस्य "परो दिवो ज्योतिर्दीप्यते" इति ज्योतिषस्तथात्वेन "ज्योतिर्हृदय आहितं यत्" इत्युक्त-ज्योतिषोऽप्यविष्णुत्वमिति तद्वदिति चेत्

ಉದಾಹರಣೆ : ಗಾಯತ್ರ್ಯಧಿಕರಣದಲ್ಲಿ 'ಛಾಂದೋಽಭಿಧಾನಾತ್' ಎಂಬ ಸೂತ್ರದಲ್ಲಿ ಗಾಯತ್ರಿಯು ವಿಷ್ಣುವಲ್ಲದ ಕಾರಣ ಗಾಯತ್ರಿಯಿಂದ ಅಭಿನ್ನನಾದ 'ಪರೋ ದಿವೋ ಜ್ಯೋತಿರ್ದೀಪ್ಯತೇ' ಇತ್ಯಾದಿ ಶ್ರುತಿಗಳಿಂದ ಪ್ರತಿಪಾದ್ಯನಾದ ಜ್ಯೋತಿಯೂ ಸಹ ವಿಷ್ಣುವಾಗುವುದಿಲ್ಲ. ಆದ್ದರಿಂದ 'ಜ್ಯೋತಿರ್ಹೃದಯ ಆಹಿತಂ ಯತ್' ಎಂಬಲ್ಲಿ ಹೇಳಲ್ಪಟ್ಟ ಜ್ಯೋತಿಯು ವಿಷ್ಣುವಲ್ಲವೆಂದು ಹೇಗೆ ಪೂರ್ವಪಕ್ಷ ಮಾಡಲಾಗಿದೆಯೋ ಅದರಂತೆ ಇಲ್ಲಿಯೂ ಸಹ ತಿಳಿಯಬೇಕು. ಈ ಎಲ್ಲ ಕಾರಣಗಳಿಂದ ಸೂತ್ರದಲ್ಲಿ 'ಭೂಮಾ' ಎಂಬ ಪದವನ್ನು ಹೇಳುವುದಕ್ಕಿಂತ 'ಪ್ರಾಣ' ಎಂಬ ಪದವನ್ನು ಹೇಳುವುದೇ ಸ್ವರಸವಾಗುತ್ತದಲ್ಲವೇ?

**प्रकाशः** – मैवम् । भूम्न उक्तौ प्रागसमन्वितशब्दसमन्वयलाभात् पूर्वाक्षेपस्य साक्षादेव सम्भवात्,

ಸಮಾಧಾನ - ಇದು ತಪ್ಪು. ಪ್ರಾಣ ಪದವನ್ನು ಸೂತ್ರದಲ್ಲಿ ಹೇಳದೇ 'ಭೂಮಾ' ಎಂಬ ಪದವನ್ನು ಸೂತ್ರದಲ್ಲಿ ಹೇಳಿದ್ದರಿಂದ ಹಿಂದೆ ಸಮನ್ವಯ ಮಾಡದ 'ಭೂಮಾ' ಎಂಬ ಹೊಸದೊಂದು ಶಬ್ದವನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡಿದಂತಾಗುತ್ತದೆ. ಮತ್ತು ಹಿಂದಿನ ಅಧಿಕರಣದಲ್ಲಿ ಹೇಳಲ್ಪಟ್ಟ ದ್ಯುಭ್ವಾದ್ಯಾಯತನತ್ವಾದಿಗಳು ಭೂಮನಲ್ಲಿ ಕೇಳಿಸುತ್ತಿರುವುದರಿಂದ ಪೂರ್ವಾಧಿಕರಣಗಳಿಂದ ಆಕ್ಷೇಪವನ್ನು ನೇರವಾಗಿಯೇ ಮಾಡಬಹುದು.

**प्रकाशः** – चन्द्रिकोक्तदिशा पूर्वाधिकरणसङ्गतिसौकर्यात् सम्प्रसादाध्युपदेश-धर्मोपपत्तीनां सिद्धान्तहेतूनां भूमवाक्य एव श्रवणात्

ಮತ್ತು ಗ್ರಂಥದಲ್ಲಿ ಹೇಳಿದ ಪ್ರಕಾರ ಹಿಂದಿನ ಅಧಿಕರಣದಿಂದ ಸಂಗತಿಯು ಸ್ಪಷ್ಟವಾಗಿ ತಿಳಿಯುತ್ತದೆ. ಅಷ್ಟೇ ಅಲ್ಲದೆ, ಸೂತ್ರದಲ್ಲಿ ಹೇಳಲ್ಪಟ್ಟ 'ಸಂಪ್ರಸಾದ' ಹಾಗೂ 'ಅಧ್ಯುಪದೇಶ' ಮೊದಲಾದ ಸಿದ್ಧಾಂತ ಹೇತುಗಳೆಲ್ಲವೂ ಭೂಮವಾಕ್ಯದಲ್ಲಿಯೇ ಶ್ರುತವಾಗುತ್ತಿವೆ.

**प्रकाशः** – सिद्धान्तेऽपि प्राणशब्दस्य मुख्यवायुपरत्वात्याजनाच्चान्तरनयेऽक्षिस्थ इव भूमैव प्राधान्येन चिन्तितो न प्राण इति ।

ಮತ್ತೊಂದು ಗಮನಿಸಬೇಕಾದ ವಿಚಾರವೆಂದರೆ - ಈ ಅಧಿಕರಣದ ಸಿದ್ಧಾಂತದಲ್ಲಿ ಪ್ರಾಣಶಬ್ದವು ಮುಖ್ಯಪ್ರಾಣನನ್ನು ಪ್ರತಿಪಾದಿಸುವುದಿಲ್ಲವೆಂದೇನೂ ಅಂಗೀಕರಿಸಿಲ್ಲ. ನಾಲ್ಕನೆಯ ಪಾದದಲ್ಲಿ ಮಾತ್ರ ಸಕಲ ಶಬ್ದಗಳೂ ಪರಮಾತ್ಮನನ್ನು ಮಾತ್ರ ಪ್ರತಿಪಾದಿಸುತ್ತವೆಂದು ಸಾಧಿಸಲಾಗಿದೆ. ಮೊದಲ ಮೂರು ಪಾದಗಳಲ್ಲಿ ವಿಷ್ಣುಪರವಾಗುವಂತೆ ಬೇರೆ ಪದಾರ್ಥಗಳನ್ನೂ ಸಹ ಪ್ರತಿಪಾದಿಸುತ್ತವೆಂದು ಒಪ್ಪಲಾಗಿದೆ. ಆದ್ದರಿಂದ ಮುಖ್ಯವಾಗಿ ಪ್ರಾಣಾದಿಶಬ್ದಗಳಿಂದ ಭಗವಂತನು ಪ್ರತಿಪಾದ್ಯನಾದರೂ ಸಹ ಮುಖ್ಯಪ್ರಾಣಾದಿಗಳೂ ಸಹ ಅಮುಖ್ಯವಾಗಿ ಪ್ರತಿಪಾದ್ಯರಾಗುವುದರಿಂದ ಪ್ರಾಣಶಬ್ದದ ಉಲ್ಲೇಖವನ್ನು ಸೂತ್ರದಲ್ಲಿ ಮಾಡಿರುವುದಿಲ್ಲ. ಆದ್ದರಿಂದ ಅಂತರಾಧಿಕರಣದಲ್ಲಿ ಆದಿತ್ಯಸ್ಥತ್ವವೆಂಬ ಲಿಂಗವನ್ನು ಸಮನ್ವಯ ಮಾಡದೇ ಪ್ರಧಾನವಾಗಿ ಅಕ್ಷಿಸ್ಥತ್ವವೆಂಬ ಲಿಂಗವನ್ನೇ ಸಮನ್ವಯ ಮಾಡಲು ಹೇಗೆ ಕಾರಣವಿದೆಯೋ ಅದರಂತೆ ಇಲ್ಲಿಯೂ ಸಹ ಪ್ರಾಣಶಬ್ದದ ಸಮನ್ವಯವನ್ನು ಮಾಡದೇ ಪ್ರಧಾನವಾಗಿ 'ಭೂಮಾ' ಎಂಬ ಶಬ್ದದ ಸಮನ್ವಯ ಮಾಡಲು ಕಾರಣವಿರುತ್ತದೆ. ಆದ್ದರಿಂದ ಸೂತ್ರಕಾರರು 'ಭೂಮಾ ಸಂಪ್ರದಾಸಾತ್' ಎಂದು ಹೇಳಿದ್ದು ಅತ್ಯಂತ ಯುಕ್ತವಾಗಿದೆ.

गुरुराजीयम् – ननु समाख्यावाक्ये विष्णोर्भूमत्वमुपेत्य विषयवाक्येऽन्यस्य भूमत्वमिति टीकाभिप्रेतमित्युक्तम् । तदयुक्तम् । तथा सति, 'अतो वायोरेव भूमत्वात्' इति पूर्वपक्षोपसंहारटीकाविरोधापातादित्यत आह – **टीकायामिति** ।।

ಪರಿಪೂರ್ಣಚಂದ್ರಿಕಾ

विषयवाक्ये वायोरेव भूमत्वमित्यभिप्रायकल्पने सङ्कुचितत्वं सम्भवतीत्यस्वरसादाह – अत्रेति ।। नन्वेवं समाख्यावाक्ये विष्णोरेव भूमत्वमित्यभ्युपगम्य विषयवाक्येऽन्यस्यैव तदिति पूर्वपक्षकरणे पूर्णानन्दत्वस्य वाक्यान्तरे ब्रह्मनिष्ठत्वेन विष्णोरेवानन्दमयत्वेऽपि विषयवाक्येऽन्यस्य भूमत्वमिति पूर्वपक्षसम्भवाट्टीकायामानन्दमयोऽपीत्याक्षेपोऽनुपपन्न इत्यत आह – टीकोक्त इति ।। अवान्तरसङ्गतिस्त्विति।। उपलक्षणमेतत् । तस्याक्षेपेण समाधानाद्वा सर्वगतस्योत्क्रमणरूपमरणासम्भवात्पूर्वोक्तः 'स एषोऽन्तश्चरते बहुधा जायमानः' इति बहुधाजननं तत्सहपठितमन्तस्सञ्चरणं चाक्षिप्य समाधानाद्वाऽऽक्षेपिकी सङ्गतिः । पूर्वत्र जनिस्समर्थिता अत्र तूत्क्रान्तिरूपमृतिरिति देहयोगवियोगरूपोपजीव्योपजीवकभावरूपाऽवान्तरसङ्गति-रित्याद्यूह्यम् ।




ಸಿದ್ಧಾಂತ ಹಾಗೂ ಪೂರ್ವಪಕ್ಷಗಳ ಫಲಫಲಿಭಾವವನ್ನು ಹೀಗೆ ತಿಳಿಯಬೇಕು - ಒಂದು ವೇಳೆ ಪ್ರಾಣನಲ್ಲಿ ಶ್ರುತವಾದ ಉತ್ಕ್ರಮಣಲಿಂಗವು ಮುಂದೆ ಹೇಳುವ ಪ್ರಕಾರ ಸರ್ವಗತನಾದ ಬ್ರಹ್ಮನಲ್ಲಿ ಅಯುಕ್ತವಾದರೆ ಉಪಕ್ರಮದಲ್ಲಿ ಶ್ರುತನಾದ ಪ್ರಾಣನು ವಾಯುವೇ ಆಗುತ್ತಾನೆ. ಅಂತಹ ವಾಯುವಿಗಿಂತ ಬ್ರಹ್ಮನು ಶ್ರೇಷ್ಠನೆಂದು ಸಿದ್ಧಾಂತಿಯು ಒಪ್ಪಿರುವುದರಿಂದ ಪ್ರಶ್ನೆ ಹಾಗೂ ಉತ್ತರಗಳಿಂದ ಪ್ರಾಣನಿಗಿಂತ ಉತ್ತಮತ್ವವನ್ನು ಬ್ರಹ್ಮನಿಗೆ ಹೇಳಬೇಕು. ಆದರೆ ಹಾಗೆ ಉಪನಿಷತ್ತಿನಲ್ಲಿ ಹೇಳಿರುವುದಿಲ್ಲ. ಹೀಗೆ ಹೇಳದಿರುವಿಕೆಯೇ ಮುಖ್ಯಪ್ರಾಣನಿಗೆ ಪೂರ್ಣಸುಖತ್ವವನ್ನು ಹಾಗೂ ಭೂಮತ್ವವನ್ನು ಹೇಳಬೇಕೆಂಬುದಕ್ಕೆ ಗಮಕ ಎಂದು ಪೂರ್ವಪಕ್ಷಕಾರರ ಆಶಯ.

ಒಂದು ವೇಳೆ ಭಗವಂತನ ಅನೇಕ ರೂಪಗಳ ಭೇದದಿಂದ ತನ್ನಿಂದಲೇ ತನಗೆ ಭೂಯಸ್ತ್ವವನ್ನು ಹೇಳಿದ್ದು ಯುಕ್ತವಾಗುವುದಾದರೆ ಪ್ರಾಣನೂ ಸಹ ಬ್ರಹ್ಮನೇ ಆಗುತ್ತಾನೆ. ಆವಾಗ ತನ್ನಿಂದಲೇ ತನಗೆ ಉತ್ತಮತ್ವವು ಬರುವುದಿಲ್ಲವಾದ್ದರಿಂದ ಭೂಯಸ್ತ್ವದ ಅನುಕ್ತಿಯು ಯುಕ್ತವಾಗುತ್ತದೆ. ಆದ್ದರಿಂದ ಪೂರ್ಣಸುಖತ್ವ ಹಾಗೂ ಭೂಮತ್ವಗಳೆರಡೂ ವಿಷ್ಣುವಿನಲ್ಲೇ ಬರುತ್ತದೆಂಬುದು ಸಿದ್ಧಾಂತದ ಉದ್ದೇಶ.



• • • • •

## ಮುಖ್ಯಪ್ರಾಣನೇ ಭೂಮನು
## (ಪ್ರಥಮ ಪೂರ್ವಪಕ್ಷ)

**तात्पर्यचन्द्रिका**

**पूर्वपक्षस्तु । भूमा मुख्यवायुरेव । ''प्राणो वा आशाया भूयान्'' इति प्राणशब्देनोपक्रमात् ।**

ಅನುವಾದ - ಮುಖ್ಯಪ್ರಾಣನೇ ಭೂಮನಾಗಿದ್ದಾನೆ. ಏಕೆಂದರೆ 'ಪ್ರಾಣೋ ವಾ ಆಶಾಯಾ ಭೂಯಾನ್' ಎಂಬುದಾಗಿ ಪ್ರಾಣಶಬ್ದದಿಂದಲೇ ಪ್ರಕರಣವು ಪ್ರಾರಂಭವಾಗುತ್ತಿದೆ.

**भूम्नो ब्रह्मत्वं हि द्वेधा भवेत् । प्राणो वायुरेव भूमा तु ब्रह्मेति प्राणभूम्नोर्भेदेन वा प्राणो भूमा च ब्रह्मैवेति तयोरभेदेन वा ।**

ಎರಡು ಪ್ರಕಾರದಲ್ಲಿ ಭೂಮನನ್ನು ಬ್ರಹ್ಮನೆಂದು ಹೇಳಬಹುದು. ೧. ಪ್ರಾಣನು ವಾಯುವೇ ಆಗಿದ್ದಾನೆ. ಹಾಗೂ ಭೂಮನು ಮಾತ್ರ ಬ್ರಹ್ಮನೇ ಆಗಿದ್ದಾನೆ. ಹೀಗೆ ಪ್ರಾಣ ಹಾಗೂ ಭೂಮಾ ಇಬ್ಬರಿಗೂ ಭೇದವೇ ಇರುತ್ತದೆ.

೨. ಪ್ರಾಣ ಹಾಗೂ ಭೂಮಾ ಇಬ್ಬರೂ ಸಹ ಬ್ರಹ್ಮರೇ ಆಗಿದ್ದಾರೆ. ಪ್ರಾಣ ಹಾಗೂ ಭೂಮರಿಗೆ ಅಭೇದವೇ ಇರುತ್ತದೆ. ಈ ಎರಡು ಪಕ್ಷಗಳಲ್ಲಿ ಯಾವುದನ್ನು ಒಪ್ಪುತ್ತೀರಿ?

**नाद्यः । प्राणादुत्तममनुक्त्वा भूम्न आम्नानात् यदि हि नामादिभ्यो वागादिवत्प्राणाद्भूमाऽन्यः स्यात्तदा ''अस्ति भगवो नाम्नो भूयः'' इत्यादिप्रश्नवत् ''वाग्वाव नाम्नो भूयसी'' इत्यादिप्रतिवचनवच्च 'अस्ति भगवः प्राणाद्भूयः' इति प्रश्नः 'भूमा वाव प्राणाद्भूयान्' इति प्रतिवचनं च स्यात् ।**

ಪ್ರಥಮಪಕ್ಷವು ಅಯುಕ್ತವಾಗಿದೆ. ಪ್ರಾಣ ಹಾಗೂ ಭೂಮಾ ಇಬ್ಬರಿಗೂ ಭೇದವಿರುವುದಾದರೆ ಪ್ರಾಣನಿಗಿಂತ ಉತ್ತಮನಿದ್ದಾನೆಂದು ಹೇಳದೇ ಭೂಮನನ್ನು ಶ್ರುತಿಯು ಹೇಳುತ್ತಿದೆ. ಒಂದು ವೇಳೆ ನಾಮಾದಿಗಳಿಗಿಂತ ವಾಗಾದಿಗಳು ಭಿನ್ನವಾದ್ದರಿಂದ ಹೇಗೆ ಉತ್ತಮವಾಗಿವೆಯೋ ಅದರಂತೆ ಪ್ರಾಣನಿಗಿಂತ ಭೂಮನು ಅನ್ಯನಾಗಿದ್ದರೆ ಆವಾಗ 'ಅಸ್ತಿ ಭಗವೋ ನಾಮ್ನೋ ಭೂಯಃ' ನಾಮಕ್ಕಿಂತ ಶ್ರೇಷ್ಠವಾದದ್ದು ಇದೆಯೇನು? ಎಂದು ಪ್ರಶ್ನಿಸುವಂತೆ ಮತ್ತು 'ವಾಗ್ವಾವ ನಾಮ್ನೋ ಭೂಯಸೀ' ನಾಮಕ್ಕಿಂತ ವಾಕ್ ಎಂಬುದು ಶ್ರೇಷ್ಠವಾಗಿದೆಯೆಂದು ಉತ್ತರಿಸುವಂತೆ ಪ್ರಕೃತದಲ್ಲಿಯೂ 'ಅಸ್ತಿ ಭಗವಃ ಪ್ರಾಣಾತ್ ಭೂಯಃ' ಪ್ರಾಣನಿಗಿಂತ ಉತ್ತಮವಾದ ವಸ್ತುವಿದೆಯೇನು ? ಎಂಬ ಪ್ರಶ್ನೆಯನ್ನು ಮತ್ತು

'ಭೂಮಾ ವಾವ ಪ್ರಾಣಾದ್ ಭೂಯಾನ್' ಪ್ರಾಣನಿಗಿಂತ ಭೂಮನೇ ಉತ್ತಮನಾಗಿದ್ದಾನೆಂಬ ಉತ್ತರವನ್ನೂ ಸಹ ಹೇಳಬೇಕಾಗಿತ್ತು.

**भूम्नः सर्वोत्तमत्वार्थमेव नामवागादितारतम्यस्य प्रक्रान्तत्वात् । नच यदर्थमन्यत्प्रक्रान्तं तदनुक्तिर्युक्ता ।**

ಭೂಮನು ಸರ್ವೋತ್ತಮನಾಗಿದ್ದಾನೆಂದು ಸಾಧಿಸುವುದಕ್ಕಾಗಿಯೇ ನಾಮ, ವಾಕ್ ಇವುಗಳಿಗೆಲ್ಲಾ ತಾರತಮ್ಯವನ್ನು ಹೇಳಲಾಗಿದೆ. ಯಾವ ಸರ್ವೋತ್ತಮತ್ವದ ಪ್ರತಿಪಾದನೆಗಾಗಿ ತಾರತಮ್ಯವು ಹೇಳಲ್ಪಟ್ಟಿದೆಯೋ ಆದ್ದರಿಂದ ತಾರತಮ್ಯವನ್ನು ಹೇಳಲೇಬೇಕು. ಅಂತಹ ಸರ್ವೋತ್ತಮತ್ವವನ್ನೇ ಕೊನೆಗೆ ಪ್ರತಿಪಾದಿಸದಿದ್ದರೆ ತಾರತಮ್ಯ ಹೇಳಿದ್ದೇ ಅಯುಕ್ತವಾಗುತ್ತದೆ.

**अत एव टीकायां "तारतम्यमाशावसानमुक्त्वा" इत्युक्तम् । तदुक्तं न्यायविवरणे "प्राणो वा आशाया भूयानित्युक्त्वा प्राणाद्भूयसोऽनुक्तिः" इति । विष्णुसमाख्या तु प्राणोपक्रमाद्दुर्वला ।**

ಆದ್ದರಿಂದಲೇ ಟೀಕೆಯಲ್ಲಿ 'ತಾರತಮ್ಯಮಾಶಾವಸಾನಮುಕ್ತ್ವಾ' 'ಆಶಾ' ಎನಿಸಿದ ಭಾರತೀದೇವಿಯ ತನಕ ತಾರತಮ್ಯವನ್ನು ಹೇಳಿ' ಎಂದು ವ್ಯಾಖ್ಯಾನಿಸಿದ್ದಾರೆ. ಇದನ್ನು ನ್ಯಾಯವಿವರಣದಲ್ಲಿ 'ಪ್ರಾಣೋ ವಾ ಆಶಾಯಾ ಭೂಯಾನಿತ್ಯುಕ್ತ್ವಾ ಪ್ರಾಣಾದ್ಭೂಯಸೋಽನುಕ್ತಿಃ' ಎಂದರೆ ಪ್ರಾಣನು 'ಆಶಾ' ಎನಿಸಿದ ಭಾರತೀದೇವಿಗಿಂತ ಉತ್ತಮನೆಂದು ಹೇಳಿ ಪ್ರಾಣನಿಗಿಂತ ಮತ್ತೊಬ್ಬನು ಉತ್ತಮನೆಂದು ಹೇಳದಿರುವಿಕೆಯು' ಎಂದು ಹೇಳಿರುತ್ತಾರೆ.

ಮುಖ್ಯಪ್ರಾಣನ ವಿಷಯದಲ್ಲಿ ಉಪಕ್ರಮಪ್ರಮಾಣವಿರುವಂತೆ ವಿಷ್ಣುವಿನ ವಿಷಯದಲ್ಲೂ ಸಮಾಖ್ಯಾಪ್ರಮಾಣವಿದೆಯೆಂದು ಹೇಳಬಾರದು. ಉಪಕ್ರಮಕ್ಕಿಂತ ಸಮಾಖ್ಯೆಯು ದುರ್ಬಲವಾಗಿರುತ್ತದೆ.

**प्रकाशः –**

प्राणभूम्नोर्भेदपक्षेऽभेदपक्षे चानुक्तिरुत्क्रमणलिङ्गं च क्रमेण पूर्वपक्षप्रापके इति भावेन "मुख्यप्राणोऽयं भूमेति पूर्वपक्षः" इत्यादिटीकां विवृण्वन्पूर्वपक्षयति – **पूर्वपक्षस्त्विति ॥**

ವಿವರಣೆ - ಪ್ರಾಣ ಹಾಗೂ ಭೂಮಾ ಇಬ್ಬರಿಗೂ ಭೇದವಿರುವಪಕ್ಷದಲ್ಲಿ ಅನುಕ್ತಿಯು ಪೂರ್ವಪಕ್ಷಲಿಂಗವಾಗಿದೆ. ಅಭೇದ ಪಕ್ಷದಲ್ಲಿ ಉತ್ಕ್ರಮಣಲಿಂಗವೂ ಪೂರ್ವಪಕ್ಷಲಿಂಗವಾಗಿದೆ. ಈ

ಅಭಿಪ್ರಾಯದಿಂದ 'ಮುಖ್ಯಪ್ರಾಣೋಽಯಂ ಭೂಮೇತಿ ಪೂರ್ವಪಕ್ಷಃ' ಇತ್ಯಾದಿ ಟೀಕಾ ಮಾತುಗಳು ಹೊರಟಿರುತ್ತವೆಂದು 'ಪೂರ್ವಪಕ್ಷಸ್ತು' ಇತ್ಯಾದಿ ಗ್ರಂಥದಿಂದ ಪೂರ್ವಪಕ್ಷ ಮಾಡುತ್ತಿದ್ದಾರೆ.

**प्रकाशः** – नामेत्यारभ्याभिधायेत्यन्तटीकायास्तात्पर्योक्तिः **आशाया भूयानिति ।** ''प्राणशब्देनोपक्रमात्'' इति टीकायामेवमनुक्त्वाऽन्यथोक्तेरुपयोगोऽग्रे स्पष्टः ।

'ನಾಮಾ' ಎಂಬಲ್ಲಿಂದ ಪ್ರಾರಂಭಿಸಿ 'ಅಭಿಧಾಯ' ಎಂಬಲ್ಲಿಯ ತನಕದ ಟೀಕಾವಾಕ್ಯಗಳ ತಾತ್ಪರ್ಯವನ್ನು 'ಆಶಾಯಾ ಭೂಯಾನ್' ಇತ್ಯಾದಿಯಾಗಿ ಹೇಳುತ್ತಿದ್ದಾರೆ. 'ಪ್ರಾಣಶಬ್ದೇನೋಪಕ್ರಮಾತ್' ಎಂದಷ್ಟೇ ಟೀಕೆಯಲ್ಲಿ ಹೇಳಿದ್ದರೆ ಸಾಕಾಗುತ್ತಿತ್ತು. ಸಂಪೂರ್ಣ ತಾರತಮ್ಯವನ್ನೆಲ್ಲಾ ಏಕೆ ಹೇಳಬೇಕು? ಎಂಬ ಪ್ರಶ್ನೆಗೆ 'ಅನುಕ್ತಿ' ಎಂಬ ಲಿಂಗವನ್ನು ಸ್ಪಷ್ಟವಾಗಿ ಸಾಧಿಸುವುದಕ್ಕಾಗಿ ಸಂಪೂರ್ಣ ತಾರತಮ್ಯವನ್ನು ಹೇಳಿದ್ದಾರೆಂಬ ವಿಚಾರವನ್ನು ಮುಂದೆ ಸ್ಪಷ್ಟಪಡಿಸಲಾಗುತ್ತದೆ.

**प्रकाशः** – ''तदुत्तममनुक्त्वा भूम्न आम्नातत्वात्'' इति टीका प्राणभूम्नोर्भेदपक्ष एव योज्येति भावेन विकल्पयति – **भूम्न इति ।।** ''तदुत्तमम्'' इत्यादिटीकां योजयति – **नाद्य इत्यादिना ।।**

'ತದುಕ್ತಮಮನುಕ್ತ್ವಾ ಭೂಮ್ನ ಆಮ್ನಾತತ್ವಾತ್'' ಪ್ರಾಣನಿಗಿಂತ ಉತ್ತಮನಿದ್ದಾನೆಂದು ಹೇಳದೆ ಭೂಮನನ್ನು ಹೇಳಿರುವುದರಿಂದ ಇತ್ಯಾದಿ ಟೀಕೆಯು, ಪ್ರಾಣ ಹಾಗೂ ಭೂಮಾ ಇಬ್ಬರ ಭೇದಪಕ್ಷದಲ್ಲಿ ಮಾತ್ರ ಉಪಪನ್ನವಾಗುತ್ತದೆಂಬ ವಿವಕ್ಷೆಯಿಂದ 'ಭೂಮ್ನಃ' ಇತ್ಯಾದಿಯಾಗಿ ವಿಕಲ್ಪ ಮಾಡುತ್ತಿದ್ದಾರೆ. 'ತದುತ್ತಮಮ್' ಇತ್ಯಾದಿ ಟೀಕೆಯನ್ನು 'ನಾದ್ಯಃ' ಇತ್ಯಾದಿ ಗ್ರಂಥದಿಂದ ಯೋಜನೆ ಮಾಡುತ್ತಿದ್ದಾರೆ.

**प्रकाशः** – ननु प्राणाद्भूयसोऽनुक्तिर्न प्राणस्य भूमत्वसाधिका । विद्यमानस्यापि प्राणादुत्तमस्यानुक्तिसम्भवात् । अतोऽप्रयोजको हेतुरित्यत आह – **भूम्न इति ।।**

ಪ್ರಾಣನಿಗಿಂತ ಉತ್ತಮನಿದ್ದಾನೆಂದು ಹೇಳದಿರುವಿಕೆಯು ಪ್ರಾಣನಿಗೆ ಭೂಮತ್ವವನ್ನು ಸಾಧಿಸುವುದಿಲ್ಲ. ಏಕೆಂದರೆ ಪ್ರಾಣನಿಗಿಂತ ಮತ್ತೊಬ್ಬನು ಶ್ರೇಷ್ಠನಿದ್ದಾನೆ; ಆದರೆ ಅವನನ್ನು ಹೇಳದಿರಬಹುದು. ಆದ್ದರಿಂದ 'ಅನುಕ್ತಿ' ಎಂಬ ಲಿಂಗವು ಅಪ್ರಯೋಜಕವಾಗಿದೆಯಲ್ಲವೇ? ಎಂಬ ಪ್ರಶ್ನೆಗೆ 'ಭೂಮ್ನಃ' ಇತ್ಯಾದಿ ಗ್ರಂಥದಿಂದ ಉತ್ತರಿಸಿದ್ದಾರೆ.

**प्रकाशः** – एवं भूयसोऽनुक्तेर्निरवकाशत्वमुपपाद्य टीकारूढं करोति – **अत एवेति ।।** भूम्नस्सर्वोत्तमत्वार्थं तारतम्यस्य प्रक्रान्तत्वादेवावश्यवक्तव्यत्वस्फोरणाय तथोक्तमित्यर्थः ।

ಹೀಗೆ ಉತ್ತಮತ್ವದ ಹೇಳದಿರುವಿಕೆಯು ನಿರವಕಾಶವಾದ ಲಿಂಗವಾಗಿದೆ ಎಂಬುದನ್ನು ಉಪಪಾದಿಸಿದಂತಾಯಿತು. ಇದನ್ನೇ 'ಅತ ಏವ' ಇತ್ಯಾದಿ ಗ್ರಂಥದಿಂದ ಟೀಕಾರೂಢ ಮಾಡುತ್ತಿದ್ದಾರೆ.

ಪರಿಪೂರ್ಣಚಂದ್ರಿಕಾ

ಅಂದರೆ ಭೂಮನು ಸರ್ವೋತ್ತಮನಾಗಿದ್ದಾನೆಂದು ಸಾಧಿಸುವುದಕ್ಕಾಗಿ ತಾರತಮ್ಯವನ್ನು ಶ್ರುತಿಯು ಹೇಳಿದೆ. ಆದ್ದರಿಂದ ಅವಶ್ಯ ಹೇಳಲೇಬೇಕಾದ ಸರ್ವೋತ್ತಮತ್ವದ ಸಿದ್ಧಿಗಾಗಿ ಟೀಕೆಯಲ್ಲಿ ಹಾಗೇ ಹೇಳಿರುತ್ತಾರೆ.

**प्रकाशः** – भाष्येऽप्रतीतावपि टीकायामेवमुक्तेर्मूलमाह – **तदुक्तमिति** ॥ ''नच विष्णोरपि भूमत्वस्य'' इत्यादिटीकार्थमाह – **विष्णुसमाख्या त्विति** ॥

ಭಾಷ್ಯದಲ್ಲಿ 'ಅನುಕ್ತಿ' ಎಂಬ ಲಿಂಗವನ್ನು ಹೇಳಿದ್ದು ಕಾಣಿಸುವುದಿಲ್ಲ. ಆದರೆ ನ್ಯಾಯವಿವರಣದಲ್ಲಿ ಹೇಳಿರುವುದರಿಂದ ಟೀಕೆಯಲ್ಲಿ ಅನುಕ್ತಿಯನ್ನು ಲಿಂಗವನ್ನಾಗಿ ವಿವಕ್ಷಿಸಿದ್ದಾರೆಂದು 'ತದುಕ್ತಮ್' ಇತ್ಯಾದಿ ಗ್ರಂಥದಿಂದ ಪ್ರತಿಪಾದಿಸುತ್ತಿದ್ದಾರೆ. 'ನಚ ವಿಷ್ಣೋರಪಿ ಭೂಮತ್ವಸ್ಯ' ಇತ್ಯಾದಿ ಟೀಕೆಯ ಅಭಿಪ್ರಾಯವನ್ನು 'ವಿಷ್ಣುಸಮಾಖ್ಯಾ ತು' ಇತ್ಯಾದಿ ವಾಕ್ಯದಿಂದ ವಿವರಿಸುತ್ತಿದ್ದಾರೆ.

**प्रकाशः** – ननु समाख्याऽपि साभ्यासत्वादिना प्रबलेति चेन्न । निरवकाशानुक्तिसाहित्येन प्राणोपक्रमस्य ततोऽपि प्राबल्यमित्याशयात् ।

ವಿಷ್ಣುವಿಷಯಕವಾದ ಸಮಾಖ್ಯಾಪ್ರಮಾಣವೂ ಸಹ ಅಭ್ಯಾಸ, ಉಪಪತ್ತಿ ಮೊದಲಾದವುಗಳಿಂದ ಸಹಿತವಾಗಿ ಬಲಿಷ್ಠವೇ ಆಗಿದೆ. ಹೀಗಿರುವಾಗ ಸಮಾಖ್ಯಾಪ್ರಮಾಣವನ್ನು ದುರ್ಬಲವೆಂದು ಹೇಗೆ ಹೇಳುತ್ತೀರಿ? ಎಂದು ಪ್ರಶ್ನಿಸಬಾರದು. ನಿರವಕಾಶವಾದ ಅನುಕ್ತಿಯೆಂಬ ಲಿಂಗದ ಸಾಹಿತ್ಯದಿಂದ ಮುಖ್ಯಪ್ರಾಣನ ವಿಷಯದಲ್ಲಿರುವ ಉಪಕ್ರಮಪ್ರಮಾಣವೂ ಸಹ ಸೋಪಪತ್ತಿಕವಾದ ಸಮಾಖ್ಯಾಪ್ರಮಾಣಕ್ಕಿಂತಲೂ ಪ್ರಬಲವೇ ಆಗಿದೆಯೆಂದು ಅಭಿಪ್ರಾಯ.




ಮುಖ್ಯಪ್ರಾಣನೇ ಭೂಮನಾಗಿದ್ದಾನೆ. 'ಪ್ರಾಣೋ ವಾ ಆಶಾಯಾ ಭೂಯಾನ್' ಎಂಬ ಉಪಕ್ರಮ ಪ್ರಮಾಣವೇ ಈ ವಿಷಯದಲ್ಲಿ ಆಧಾರವಾಗಿದೆ. ಪ್ರಾಣ ಹಾಗೂ ಭೂಮಾ ಇಬ್ಬರಿಗೂ ಭೇದವನ್ನು ಹೇಳಬಾರದು. ಏಕೆಂದರೆ ಹಾಗೇನಾದರೂ ಭೇದವಿದ್ದಿದ್ದರೆ ಪ್ರಾಣನಿಗಿಂತ ಭೂಮನನ್ನು ಉತ್ತಮನೆಂದು ಹೇಳಬೇಕಿತ್ತು. ಆದರೆ ಹಾಗೆ ಹೇಳಿರುವುದಿಲ್ಲ. ಅಥವಾ ಪ್ರಾಣನಿಗಿಂತ ಉತ್ತಮನೊಬ್ಬ ಇದ್ದಾನೆಂಬ ಪ್ರಶ್ನೆಯನ್ನೂ ಸಹ ಮಾಡಿರುವುದಿಲ್ಲ. ಆದ್ದರಿಂದ ಮುಖ್ಯಪ್ರಾಣನೇ ಭೂಮನಾಗಿದ್ದಾನೆಂದು ಸ್ಪಷ್ಟವಾಗುತ್ತದೆ. ಇನ್ನು ವಿಷ್ಣುವಿನ ವಿಷಯದಲ್ಲಿಯೂ ಸಮಾಖ್ಯಾಪ್ರಮಾಣವಿದೆಯೆಂದು ಹೇಳಬಹುದು. ಆದರೆ ಉಪಕ್ರಮ ಹಾಗೂ ಸಮಾಖ್ಯಾಪ್ರಮಾಣಗಳೆರಡರ ಮಧ್ಯದಲ್ಲಿ ಉಪಕ್ರಮ ಪ್ರಮಾಣವೇ ಶ್ರೇಷ್ಠವಾಗಿರುತ್ತದೆ. ಆದ್ದರಿಂದ ವಿಷ್ಣುವಿನ ಸಮಾಖ್ಯಾಪ್ರಮಾಣವು ಇದನ್ನು ವಿರೋಧಿಸುವುದಿಲ್ಲ.

• • • • •

ಭೂಮಾಧಿಕರಣ (೧-೩-೨)

## ಮುಖ್ಯಪ್ರಾಣದೇವರೇ ಭೂಮರೆಂದು ಭಾಷ್ಯದ ಪ್ರಕಾರ ಪೂರ್ವಪಕ್ಷ

**तात्पर्यचन्द्रिका**

**न द्वितीयः । ''अत एव प्राणः'' इत्युक्तरीत्या प्राणशब्दस्य ब्रह्मपरत्वसम्भवेऽपीह ''उत्क्रान्तप्राणान्'' इति प्राण उत्क्रमणश्रवणात्तस्य च पूर्णे ब्रह्मण्ययोगात् । तदुक्तं भाष्ये ''उत्क्रान्तप्राणानित्यादितल्लिङ्गात्'' इति ।**

ಅನುವಾದ - ಪ್ರಾಣ ಹಾಗೂ ಭೂಮಾ ಎರಡೂ ಸಹ ಬ್ರಹ್ಮನೇ ಆಗಿದ್ದಾನೆಂಬ ಎರಡನೇ ಪಕ್ಷವೂ ಸಹ ತಪ್ಪು. ಏಕೆಂದರೆ 'ಅತ ಏವ ಪ್ರಾಣಃ' ಎಂಬ ಸೂತ್ರದಲ್ಲಿ ಹೇಳಿದಂತೆ ಪ್ರಾಣಶಬ್ದವು ಬ್ರಹ್ಮಪರವಾಗಬಹುದು; ಆದರೆ 'ಉತ್ಕ್ರಾಂತಪ್ರಾಣಾನ್' ಎಂಬುದಾಗಿ ಪ್ರಾಣನಲ್ಲಿ ಉತ್ಕ್ರಮಣಲಿಂಗವು ಕೇಳಿಸುತ್ತಿದೆ. ಪೂರ್ಣನಾದ ಬ್ರಹ್ಮನಲ್ಲಿ ಉತ್ಕ್ರಮಣವನ್ನು ಹೇಳಲು ಸಾಧ್ಯವಿಲ್ಲ. ಇದನ್ನೇ ಭಾಷ್ಯದಲ್ಲಿ 'ಉತ್ಕ್ರಾಂತಪ್ರಾಣಾನಿತ್ಯಾದಿತಲ್ಲಿಂಗಾತ್' 'ಉತ್ಕ್ರಾಂತಪ್ರಾಣಾನ್' ಇವೇ ಮೊದಲಾದ ಪ್ರಾಣಲಿಂಗಗಳಿರುವುದರಿಂದ ಎಂದು ಹೇಳಿರುತ್ತಾರೆ.

**वायोर्भूमत्वे तु तद्युक्तम् ।**

ವಾಯುದೇವರು ಭೂಮನಾದಾಗ ಉತ್ಕ್ರಮಣಲಿಂಗವು ಯುಕ್ತವಾಗುತ್ತದೆ. ಬ್ರಹ್ಮನು ಎಲ್ಲೆಡೆ ವ್ಯಾಪ್ತನಾದ್ದರಿಂದಲೂ ಉತ್ಕ್ರಮಣವನ್ನು ಅವನಲ್ಲಿ ಹೇಳಲು ಸಾಧ್ಯವಿಲ್ಲ. ಆದರೆ ವಾಯುದೇವರು ಅಣುಸ್ವರೂಪನಾದ್ದರಿಂದ ಉತ್ಕ್ರಮಣವನ್ನು ಹೇಳಬಹುದು.

**नहि देशतः पूर्णत्वं भूमत्वम् । ''वाग्वाव नाम्नो भूयसी । वाग्वाव ऋग्वेदं विज्ञापयति यजुर्वेदं स यदा मनसा मनस्यति मन्त्रानधीयीयेत्यथाधीते'' इत्यादिषु वाङ्मनःसङ्कल्पादिवाक्येषु पूर्वत्र सर्वत्र भूयस्त्वस्य गुणज्यैष्ठ्यरूपतया भूमेत्यत्रापि तस्यैव वक्तव्यत्वात् ।**

ದೇಶತಃ ಪೂರ್ಣನಾಗಿರುವಿಕೆಯು ಭೂಮಶಬ್ದದ ಅರ್ಥವೆಂದು ಹೇಳಬಾರದು. ಏಕೆಂದರೆ ಗುಣಜ್ಯೇಷ್ಠತ್ವವನ್ನು ಭೂಮತ್ವವೆಂದು 'ವಾಗ್ವಾವ ನಾಮ್ನೋ ಭೂಯಸೀ । ವಾಗ್ವಾವ ಋಗ್ವೇದಂ ವಿಜ್ಞಾಪಯತಿ ಯಜುರ್ವೇದಂ ಸ ಯದಾ ಮನಸಾ ಮನಸ್ಯತಿ ಮಂತ್ರಾನಧೀಯೀಯೇತ್ಯಥಾಧೀತೇ' ಇತ್ಯಾದಿ ವಾಕ್ಯಗಳಲ್ಲಿ, ವಾಕ್, ಮನಸ್ಸು, ಸಂಕಲ್ಪ ಇವುಗಳ ಮಧ್ಯದಲ್ಲಿ ಹಿಂದಿನ ಅಭಿಮಾನಿದೇವತೆಗಳಿಗಿಂತ ಮುಂದಿನ ಅಭಿಮಾನಿದೇವತೆಗಳು ಉತ್ತಮರಾಗಿದ್ದಾರೆಂದು ಹೇಳಲಾಗಿದೆ. ಇಲ್ಲಿ ಉತ್ತಮ ಎಂದರೆ ದೇಶತಃ ವ್ಯಾಪ್ತರಾಗಿದ್ದಾರೆಂದರ್ಥವಲ್ಲ. ಹೊರತು ಹಿಂದಿನ

ಅಭಿಮಾನಿದೇವತೆಗಳಿಗಿಂತ ಮುಂದಿನ ಅಭಿಮಾನಿದೇವತೆಗಳು ಗುಣದಿಂದ ಉತ್ತಮರಾಗಿದ್ದಾರೆಂದಷ್ಟೇ ಅರ್ಥ. ಅದೇ ರೀತಿಯಾಗಿ 'ಆಶಾ' ಎನಿಸಿದ ಭಾರತೀದೇವಿಗಿಂತ 'ಭೂಮಾ' ಎಂಬ ಶಬ್ದವಾಚ್ಯನು ಉತ್ತಮನೆಂದು ಹೇಳಿದರೆ, ಗುಣದಿಂದ ಉತ್ತಮನೆಂದೇ ಅರ್ಥ ಹೊರತು, ಎಲ್ಲೆಡೆ ವ್ಯಾಪಿಸಿದ್ದಾನೆಂದು ಅರ್ಥವಲ್ಲ.

**अत एव टीकायां "प्राणस्योत्तमत्वम्" इत्युत्तमशब्दः । आनन्दमय उक्तमानन्दस्य पूर्णत्वं च न देशतः, किन्तु नीलतमत्व-विद्वत्तमत्वादिवत्सर्वस्मात्सजातीयादुत्कृष्टत्वम् ।**

ಆದ್ದರಿಂದಲೇ ಟೀಕೆಯಲ್ಲಿ 'ಪ್ರಾಣಸ್ಯೋತ್ತಮತ್ವಮ್' 'ಪ್ರಾಣನಿಗೆ ಉತ್ತಮತ್ವವಿದೆ' ಎಂಬುದಾಗಿ 'ಉತ್ತಮ' ಎಂಬ ಶಬ್ದವನ್ನು ಪ್ರಯೋಗಿಸಲಾಗಿದೆ. ಆನಂದಮಯನಲ್ಲಿ ಹೇಳಲ್ಪಟ್ಟ ಆನಂದದ ಪೂರ್ಣತ್ವವೂ ಸಹ ದೇಶತಃ ವ್ಯಾಪ್ತವಾಗಿದೆಯೆಂದಲ್ಲ. ಹೊರತಾಗಿ ನೀಲತಮತ್ವ, ವಿದ್ವತ್ತಮತ್ವ ಮೊದಲಾದ ಶಬ್ದಗಳನ್ನು ಕೇವಲ ಸಜಾತೀಯ ಪದಾರ್ಥಗಳಿಗಿಂತ ಶ್ರೇಷ್ಠವಾಗಿದೆ ಎಂಬರ್ಥದಲ್ಲಿ ಪ್ರಯೋಗಿಸುವಂತೆ ಆನಂದಮಯನಾದವನು ಎಂದರೆ ಉಳಿದ ಎಲ್ಲಾ ದೇವತೆಗಳ ಆನಂದಕ್ಕಿಂತ ಇವನ ಆನಂದವು ಉತ್ಕೃಷ್ಟವಾಗಿದೆಯೆಂದು ಆ ಆನಂದಮಯಶಬ್ದವು ಸಜಾತೀಯವಾದ ಉತ್ಕೃಷ್ಟತ್ವವನ್ನೇ ಹೇಳುತ್ತಿದೆ.

**अन्यथा "ते ये शतं मानुषा आनन्दाः, स एको मनुष्यगन्धर्वाणामानन्दः" इत्याद्ययोगात् । नहि मानुषाद्यानन्देभ्यो मनुष्यगन्धर्वाद्यानन्दा देशतः शतगुणिताः । एवंविधपूर्णानन्दत्वं चाणोरपि वायोर्युक्तमिति युक्तैवोक्त आनन्दमयाक्षेपः ।**

ಹೀಗೆ ಹೇಳದಿದ್ದರೆ 'ತೇ ಯೇ ಶತಂ ಮಾನುಷಾ ಆನಂದಾಃ, ಸ ಏಕೋ ಮನುಷ್ಯಗಂಧರ್ವಾಣಾಮಾನಂದಃ' ಇತ್ಯಾದಿ ಶ್ರುತಿಗಳಲ್ಲಿ ಮನುಷ್ಯರ ಆನಂದಕ್ಕಿಂತ ಮನುಷ್ಯ-ಗಂಧರ್ವರ ಆನಂದವು ಉತ್ತಮವೆಂದು ಹೇಳಿದ್ದೂ ಸಹ ತಪ್ಪಾಗಬೇಕಾದೀತು. ಏಕೆಂದರೆ ಮನುಷ್ಯಾದಿಗಳ ಆನಂದಕ್ಕಿಂತ ಮನುಷ್ಯಗಂಧರ್ವಾದಿಗಳ ಆನಂದವು ನೂರುಪಟ್ಟು ದೇಶದಷ್ಟು ವಿಸ್ತಾರವಾಗಿದೆಯೆಂಬರ್ಥವನ್ನು ಹೇಳಲು ಸಾಧ್ಯವಿಲ್ಲ. ಆದ್ದರಿಂದ ಮನುಷ್ಯರ ಆನಂದಕ್ಕಿಂತ ನೂರುಪಟ್ಟು ಗುಣತಃ ಉತ್ಕೃಷ್ಟವಾಗಿದೆಯೆಂದಷ್ಟೇ ವಿವಕ್ಷಿಸಬೇಕು. ಇಂತಹ ಪೂರ್ಣಾನಂದತ್ವವನ್ನು ಅಣುಸ್ವರೂಪರೇ ಆದ ವಾಯುದೇವರಲ್ಲಿಯೂ ಸಹ ಹೇಳಬಹುದು. ಆದ್ದರಿಂದ ಟೀಕೆಯಲ್ಲಿ ಆನಂದಮಯನ ಮೇಲಿನ ಆಕ್ಷೇಪವು ಯುಕ್ತವೇ ಆಗಿದೆ. ಅಂದರೆ 'ಭೂಮಾ' ಎಂಬ ಶಬ್ದದಿಂದ

ಪ್ರತಿಪಾದ್ಯರಾದ ಕಾರಣ ವಾಯುದೇವರೇ ಆನಂದಮಯರಾಗಬೇಕೆಂಬ ಆಕ್ಷೇಪವು ಸಮಂಜಸವಾಗಿದೆಯೆಂದರ್ಥ.

**प्रकाशः –**

''ननु 'प्राणो वा आशाया भूयान्' इत्युक्तप्राणस्य 'अत एव प्राणः' इत्युक्तरीत्या विष्णुपरत्वात्'' इत्यादिटीकां व्याचष्टे – **न द्वितीय इत्यादिना ॥**

ವಿವರಣೆ - ''ನನು ಪ್ರಾಣೋ ವಾ ಆಶಾಯಾ ಭೂಯಾನಿತ್ಯುಕ್ತಪ್ರಾಣಸ್ಯ ಅತ ಏವ ಪ್ರಾಣ ಇತ್ಯುಕ್ತರೀತ್ಯಾ ವಿಷ್ಣುಪರತ್ವಾತ್'' 'ಆಶಾ' ಎನಿಸಿದ ಭಾರತೀದೇವಿಗಿಂತ ಪ್ರಾಣನು ಶ್ರೇಷ್ಠನಾದ್ದರಿಂದ 'ಅತ ಏವ ಪ್ರಾಣಃ' ಎಂಬಲ್ಲಿ ಹೇಳಿದಂತೆ 'ಪ್ರಾಣ' ಶಬ್ದವು ವಿಷ್ಣುಪರವಾಗುತ್ತದೆ' ಇತ್ಯಾದಿ ಟೀಕೆಯನ್ನು ವ್ಯಾಖ್ಯಾನಿಸುತ್ತಿದ್ದಾರೆ 'ನ ದ್ವಿತೀಯ ಇತ್ಯಾದಿನಾ' ಎಂಬುದಾಗಿ.

**प्रकाशः – इहेति ॥ विषयवाक्ये ॥ उत्क्रमणश्रवणादिति ॥** तथा च तत्रेवात्र निरवकाशविष्णुलिङ्गाभावात्प्रत्युत विपरीतलिङ्गभावान्न तन्न्यायविषयत्वमस्येति भावः ।

'ಇಹ' ಎಂದರೆ ವಿಷಯವಾಕ್ಯದಲ್ಲಿ ಎಂದರ್ಥ. 'ಉತ್ಕ್ರಮಣಶ್ರವಣಾತ್' ಎಂದು ಗ್ರಂಥದಲ್ಲಿದೆ. ಹೀಗೆ ಹೇಳಿದ್ದರಿಂದ ವಿಷ್ಣುವಿನ ವಿಷಯದಲ್ಲಿ ನಿರವಕಾಶವಾದ ವಿಷ್ಣುಲಿಂಗಗಳು ಕೇಳಿಸುತ್ತಿಲ್ಲ. ಅಷ್ಟೇ ಅಲ್ಲದೆ ವಿಪರೀತವಾಗಿ ಮುಖ್ಯಪ್ರಾಣದೇವರ ಲಿಂಗವೇ ಕೇಳಿಸುತ್ತಿದೆ. ಆದ್ದರಿಂದ ಪ್ರಥಮಪಾದದ ಪ್ರಾಣಾಧಿಕರಣದ ನ್ಯಾಯಕ್ಕೆ ಈ ಅಧಿಕರಣದಲ್ಲಿ ಪ್ರಸಕ್ತವಾದ ಪ್ರಾಣಶಬ್ದವು ವಿಷಯವಾಗುವುದಿಲ್ಲವೆಂದು ತಿಳಿಯಬೇಕು. ಒಂದು ವೇಳೆ ನಿರವಕಾಶವಾದ ವಿಷ್ಣುವಿನ ಲಿಂಗವಿದ್ದಲ್ಲಿ ಮಾತ್ರ ಹಿಂದಿನ ಪ್ರಾಣಾಧಿಕರಣದ ನ್ಯಾಯದಿಂದ ಈ ಪ್ರಾಣಶಬ್ದವೂ ಸಹ ವಿಷ್ಣುಪರವಾಗುತ್ತದೆಂದು ಸಾಧಿಸಬಹುದಿತ್ತು.

**प्रकाशः – पूर्णे** देशादितो व्याप्ते देहादुत्क्रमणायोगादित्यर्थः । भाष्यं तद्व्याख्यानं चोक्तदिशा द्वितीयपक्षनिरासपरमिति भावेनाऽह – **तदुक्तमिति ॥**

'ಪೂರ್ಣೇ' ಎಂಬ ಶಬ್ದಕ್ಕೆ ದೇಶತಃ ವ್ಯಾಪ್ತನಾದ ವಿಷ್ಣುವಿನಲ್ಲಿ ದೇಹಾದಿಗಳಿಂದ ಉತ್ಕ್ರಮಣವು ಕೂಡುವುದಿಲ್ಲವೆಂದರ್ಥ. ಭಾಷ್ಯ ಹಾಗೂ ಅದರ ಟೀಕೆಯು ಎರಡನೆಯ ಪಕ್ಷವನ್ನು ನಿರಾಸ ಮಾಡುತ್ತಿದೆಯೆಂಬ ಅಭಿಪ್ರಾಯದಿಂದ 'ತದುಕ್ತಮ್' ಎಂದು ಹೇಳಿರುತ್ತಾರೆ.

**प्रकाशः** – ननु ''उत्क्रान्तिगत्यागतीनाम्'' इत्यादौ वक्ष्यमाणदिशा वायोरप्यणुत्वात्कथं तस्य भूमत्वं पूर्णसुखत्वं वा स्यादित्यतः ''तस्य च वायावेव सम्भवात्'' इति टीकां विवृण्वन्नाह – **वायोरिति ॥**

ಪ್ರಶ್ನೆ - 'ಉತ್ಕ್ರಾಂತಿಗತ್ಯಾಗತೀನಾಮ್' ಇತ್ಯಾದಿಯಾಗಿ ಮುಂದೆ ಹೇಳುವ ಪ್ರಕಾರ ವಾಯುದೇವರೂ ಸಹ ಅಣುರೂಪರೇ ಆಗಿದ್ದಾರೆ. ಹೀಗಿರುವಾಗ ಭೂಮತ್ವವನ್ನಾಗಲೀ, ಪೂರ್ಣಸುಖತ್ವವನ್ನಾಗಲೀ, ಅವರಲ್ಲಿ ಹೇಳಲು ಹೇಗೆ ಸಾಧ್ಯ ?

ಉತ್ತರ - 'ತಸ್ಯ ಚ ವಾಯಾವೇವ ಸಂಭವಾತ್' ಇತ್ಯಾದಿ ಟೀಕೆಯಲ್ಲಿ ಹೇಳಿದಂತೆ ಸಜಾತೀಯರಿಗಿಂತ ಉತ್ಕೃಷ್ಟರೆಂಬ ಅಭಿಪ್ರಾಯದಲ್ಲಷ್ಟೇ 'ಭೂಮಾ' ಎಂಬ ಶಬ್ದವನ್ನು ವಾಯುದೇವರಲ್ಲಿ ಪ್ರಯೋಗಿಸಲಾಗಿದೆಯೆಂದು 'ವಾಯೋಃ' ಇತ್ಯಾದಿ ವಾಕ್ಯದಿಂದ ವಿವರಿಸುತ್ತಿದ್ದಾರೆ.

**प्रकाशः** – ''वाग्वाव ऋग्वेदम्'' इत्यादि गुणकथनम् । ''स यदा मनसः'' इति मनःप्रकरणगतवाक्यम् ।

'ವಾಗ್ವಾವ ಋಗ್ವೇದಮ್' ಇತ್ಯಾದಿಯಾಗಿ ಅಭಿಮಾನಿ ದೇವತೆಗಳ ಗುಣಗಳನ್ನು ಹೇಳಿರುತ್ತಾರೆ. 'ಸ ಯದಾ ಮನಸಃ' ಎಂಬ ವಾಕ್ಯವು ಮನಃಪ್ರಕರಣದಲ್ಲಿದೆಯೆಂದು ತಿಳಿಯಬೇಕು.




ಭೂಮರೆನಿಸಿದವರು ಮುಖ್ಯಪ್ರಾಣದೇವರೇ ಹೊರತು, ಬ್ರಹ್ಮನಲ್ಲ. ಪ್ರಾಣಶಬ್ದದಿಂದ ಬ್ರಹ್ಮನೂ ಪ್ರತಿಪಾದ್ಯನಾದ್ದರಿಂದ ಬ್ರಹ್ಮನನ್ನೂ ಸಹ ಭೂಮನೆನ್ನಬಹುದಲ್ಲವೇ? ಎಂದು ಪ್ರಶ್ನಿಸಬಾರದು. ಪ್ರಥಮ ಪಾದದಲ್ಲಿ ಪ್ರಾಣಶಬ್ದವನ್ನು ಬ್ರಹ್ಮನೆಂದು ಸಮರ್ಥಿಸಲು ನಿರವಕಾಶವಾದ ವಿಷ್ಣುವಿನ ಲಿಂಗವಿತ್ತು. ಆದರೆ ಇಲ್ಲಿ ಅಂತಹ ವಿಷ್ಣುಲಿಂಗಗಳೇನೂ ಇರುವುದಿಲ್ಲ. ವಿಪರೀತವಾಗಿ 'ದೇಹಾದುತ್ಕ್ರಮಣ' ಎಂಬ ಲಿಂಗವೇ ಇರುತ್ತದೆ. ಮುಖ್ಯಪ್ರಾಣದೇವರು ಭೂಮರೆಂದು ಹೇಳಿದರೆ ಯಾವುದೇ ಬಾಧಕಗಳೂ ಸಹ ಇರುವುದಿಲ್ಲ. ಎಲ್ಲೆಡೆ ವ್ಯಾಪ್ತನಾಗಿದ್ದರೆ ಮಾತ್ರ ಭೂಮನೆನಿಸಬೇಕಾಗಿಲ್ಲ. ಭೂಮಪ್ರಕರಣವನ್ನು ಹಿಂದಿನ, ಮುಂದಿನ ವಾಕ್ಯಗಳಿಂದ ವಿಚಾರ ಮಾಡಿದಾಗ ಅಲ್ಲಿ ಗುಣತಃ ಉತ್ತಮತ್ವವೇ ಪ್ರಸಕ್ತವಾಗಿದೆ ಎಂದು ತಿಳಿಯುತ್ತದೆ. ಆದ್ದರಿಂದ ಆಶಾಯೆನಿಸಿದ ಭಾರತಿಗಿಂತ ಉತ್ತಮನಾಗಿದ್ದಾನೆಂದರೆ ಹೆಚ್ಚಿನ ದೇಶದಲ್ಲಿದ್ದಾನೆಂದು ಅರ್ಥವಲ್ಲ. ಹೆಚ್ಚಿನ ಗುಣಗಳುಳ್ಳವ- ನಾಗಿದ್ದಾನೆಂದಷ್ಟೇ ಅರ್ಥ. ಆದ್ದರಿಂದ ಅಣುಸ್ವರೂಪರಾಗಿದ್ದರೂ ಸಹ ಮುಖ್ಯಪ್ರಾಣದೇವರಲ್ಲಿ ಭೂಮತ್ವವು ಯುಕ್ತವಾಗುತ್ತದೆ. ಅವರೇ ಆನಂದಮಯರೂ ಸಹ ಆಗುತ್ತಾರೆಂದು ಆಕ್ಷೇಪ ಮಾಡಬಹುದು.





## ಉತ್ಕ್ರಮಣ ಲಿಂಗಕ್ಕೆ ನಿರವಕಾಶತ್ವಸಮರ್ಥನೆ

### तात्पर्यचन्द्रिका

**नच भूम्नः "स एवाधस्तात्स उपरिष्टात्स पश्चात्" इति वाक्यशेषस्यसर्वगतत्वविरोधेनोत्क्रमणं गौणमिति युक्तम् ।**

ಅನುವಾದ - ಉಪನಿಷತ್ತಿನಲ್ಲಿ ಭೂಮನೆಂದು ವರ್ಣಿಸಲ್ಪಟ್ಟ ಯಾವ ವ್ಯಕ್ತಿಯಿದ್ದಾನೋ ಅವನಲ್ಲಿ 'ಸ ಏವಾಧಸ್ತಾತ್ಸ ಉಪರಿಷ್ಟಾತ್ಸ ಪಶ್ಚಾತ್' ಭೂಮನೇ ಕೆಳಗೆ, ಮೇಲೆ, ಹಿಂದೆ, ಮುಂದೆ ಎಲ್ಲೆಡೆಯೂ ಇದ್ದಾನೆ. ಇತ್ಯಾದಿಯಾಗಿ ವಾಕ್ಯಶೇಷದಲ್ಲಿ ಸರ್ವಗತತ್ವಧರ್ಮವನ್ನು ಹೇಳಲಾಗಿದೆ. ಈ ಸರ್ವಗತತ್ವಧರ್ಮಕ್ಕೆ ವಿರೋಧ ಬರುವ ಕಾರಣ ಪ್ರಾಣನಲ್ಲಿ ಕೇಳಿಸುತ್ತಿರುವ ಉತ್ಕ್ರಮಣಲಿಂಗವನ್ನು ಗೌಣವನ್ನಾಗಿ ಮಾಡಬೇಕಲ್ಲವೇ? ಎಂದು ಪ್ರಶ್ನಿಸಬಾರದು.

**श्रौतोत्क्रमणविरोधेन 'अधस्तात्' 'उदुपरिष्टात्' इत्याद्यनेकपदसमभिव्याहाररूप-वाक्यगम्यसर्वगतत्वस्यैव गौणत्वात् ।**

ಏಕೆಂದರೆ ನೇರವಾಗಿ ಶ್ರುತಿಯಿಂದಲೇ ಉತ್ಕ್ರಮಣಲಿಂಗವು ಕೇಳಿಸುತ್ತಿದೆ. ಆದರೆ ಸರ್ವಗತತ್ವ ಲಿಂಗವು 'ಅಧಸ್ತಾತ್' 'ಉಪರಿಷ್ಟಾತ್' ಇವೇ ಮೊದಲಾದ ಅನೇಕ ಪದಗಳ ಸಮಭಿವ್ಯಾಹಾರ ರೂಪವಾದ ವಾಕ್ಯದಿಂದ ಸಿದ್ಧವಾಗುತ್ತದೆ. ನೇರವಾಗಿ ಶ್ರುತಿಯಿಂದ ತಿಳಿಯುವ ಉತ್ಕ್ರಮಣಲಿಂಗಕ್ಕಿಂತ ಕಷ್ಟದಿಂದ ತಿಳಿಯುವ ಸರ್ವಗತತ್ವ ಲಿಂಗವು ಬಾಧಿತವಾಗುತ್ತದೆ. ಆದ್ದರಿಂದ ಉತ್ಕ್ರಮಣಲಿಂಗಕ್ಕೆ ಅನುಸಾರಿಯಾಗಿ ಸರ್ವಗತತ್ವಲಿಂಗವನ್ನೇ ಗೌಣವನ್ನಾಗಿ ವ್ಯಾಖ್ಯಾನಿಸಬೇಕಾಗುತ್ತದೆ.

**ब्रह्मणस्तु सर्वगतत्वं श्रुत्यन्तरादिसिद्धम् । एवञ्च पूर्णानन्दत्वादिरूपं सिद्धान्ते हेतूकृतं सम्प्रसादादिकं पूर्वपक्षिणा वायौ शङ्क्यत इति न भूम्नो ब्रह्मता ।**

ಬ್ರಹ್ಮನಿಗಾದರೂ ಸರ್ವಗತತ್ವವು 'ಸ ಏವಾಧಸ್ತಾತ್' ಸಿದ್ಧವಾಗಿರುವುದಿಲ್ಲ. ಹೊರತಾಗಿ 'ಅಂತರ್‌ಬಹಿಶ್ಚ ತತ್ಸರ್ವಮ್' ಮೊದಲಾದ ಬೇರೆ ಶ್ರುತಿಗಳಿಂದ ಸಿದ್ಧವಾಗಿದೆ. ಆದ್ದರಿಂದ ಸೂತ್ರದಲ್ಲಿ ಹೇತುವನ್ನಾಗಿ ಮಾಡಲ್ಪಟ್ಟ 'ಸಂಪ್ರಸಾದಾತ್' ಎಂಬ ಪದದಿಂದ ತಿಳಿಯುವ ಪೂರ್ಣಾನಂದತ್ವವೆಂಬ ಸಿದ್ಧಾಂತಹೇತುವನ್ನು ಪೂರ್ವಪಕ್ಷಿಯು ವಾಯುದೇವರಲ್ಲಿ ಶಂಕಿಸುತ್ತಾನೆ. ಹೀಗೆ ಪೂರ್ಣಾನಂದರೇ ಆಗಿರುವ ವಾಯುದೇವರು ಭೂಮಶಬ್ದದಿಂದ ಪ್ರತಿಪಾದ್ಯರಾಗುತ್ತಾರೆ; ಹೊರತು ಪರಮಾತ್ಮನಲ್ಲ.

ಪರಿಪೂರ್ಣಚಂದ್ರಿಕಾ

**प्रकाशः –**

नन्वत्र भूम्नः 'स एवाधस्तात्' इत्यादिना सर्वगतत्वेन श्रुतस्य वायुत्वे वायोरपि सर्वगतत्वापत्त्या ब्रह्मणीव वायावप्युत्क्रमणमयुक्तम् । तत्रोपचरितं चेद्ब्रह्मण्यपि तथोपेत्य भूमत्वमुच्यतामिति भावेनाशङ्क्य निराह – **नच भूम्न इति ।।**

ವಿವರಣೆ - ಶ್ರುತಿಯಲ್ಲಿ ಯಾವಾತನು ಭೂಮನೆಂದು ಕರೆಸಿಕೊಳ್ಳುತ್ತಿದ್ದಾನೋ, ಅವನು 'ಸ ಏವಾಧಸ್ತಾತ್' ಇತ್ಯಾದಿ ಶ್ರುತಿಯು ಹೇಳುವಂತೆ ಸರ್ವಗತನೆಂದು ಶ್ರುತನಾಗಿದ್ದಾನೆ. ಒಂದು ವೇಳೆ ಭೂಮನೇ ವಾಯುದೇವರಾದರೆ, ಅವರೇ ಸರ್ವಗತರೂ ಆಗುತ್ತಾರೆ. ಆದ್ದರಿಂದ ಸರ್ವಗತನಾದ ಪರಮಾತ್ಮನಲ್ಲಿ ಉತ್ಕ್ರಮಣವು ಹೇಗೆ ಅಯುಕ್ತವಾಗುತ್ತದೋ, ಅದರಂತೆ ವಾಯುದೇವರಿಗೂ ಸಹ ಉತ್ಕ್ರಮಣವು ಅಯುಕ್ತವಾಗುತ್ತದೆ. ಒಂದು ವೇಳೆ ವಾಯುದೇವರ ವಿಷಯದಲ್ಲಿ ಉತ್ಕ್ರಮಣವನ್ನು ಔಪಚಾರಿಕವಾಗಿ ಹೇಳುವುದಾದರೆ ಬ್ರಹ್ಮನಲ್ಲಿಯೂ ಸಹ ಔಪಚಾರಿಕವಾಗಿಯೇ ಉತ್ಕ್ರಮಣವನ್ನು ಹೇಳಬೇಕಾದೀತು. ಈ ಅಭಿಪ್ರಾಯದಿಂದ ಆಕ್ಷೇಪ ಮಾಡಿ ಉತ್ತರಿಸುತ್ತಿದ್ದಾರೆ 'ನಚ ಭೂಮ್ನಃ' ಇತ್ಯಾದಿ ಗ್ರಂಥದಿಂದ.

**प्रकाशः – गौणमिति ।।** मनोगतमेवात्र भातीत्यर्थः । **श्रौतेति ।।** उत्क्रान्तेति पदश्रुत्या प्रतीतेत्यर्थः ।

'ಗೌಣಮ್' ಎಂದರೆ ಮನಸ್ಸಿನಲ್ಲಿರುವ ಉತ್ಕ್ರಮಣವನ್ನು ಪ್ರಾಣನಲ್ಲಿ ಗೌಣವಾಗಿ ಪ್ರಯೋಗಿಸಲಾಗಿದೆ ಎಂದರ್ಥ. 'ಶ್ರೌತೋತ್ಕ್ರಮಣವಿರೋಧೇನ' ಎಂದರೆ 'ಉತ್ಕ್ರಾಂತ' ಎಂಬ ಪದಶ್ರವಣದಿಂದ ಪ್ರತೀತವಾದ ಉತ್ಕ್ರಮಣಲಿಂಗದ ವಿರೋಧದಿಂದ ಎಂದರ್ಥ.

**प्रकाशः – ब्रह्मणोऽप्यत्रोक्तं सर्वगतत्वं सङ्कुचितमुपेत्योत्क्रमणं च मुख्यमङ्गीकृत्य भूमत्वमुच्यतामित्यत आह – ब्रह्मणस्त्विति ।।**

ಬ್ರಹ್ಮನಲ್ಲಿ ಒಪ್ಪಿದ ಸರ್ವಗತತ್ವವು ಗೌಣವೆಂದು ಒಪ್ಪಿ ಉತ್ಕ್ರಮಣವನ್ನೇ ಮುಖ್ಯವಾಗಿ ಅಂಗೀಕರಿಸಿ, ಭೂಮತ್ವವನ್ನು ಹೇಳಬಹುದಲ್ಲವೇ? ಎಂಬ ಪ್ರಶ್ನೆಗೆ 'ಬ್ರಹ್ಮಣಸ್ತು' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

**प्रकाशः –** ''सर्वगतं सुसूक्ष्मम्' 'अन्तर्बहिश्च तत्सर्वं व्याप्य नारायणःस्थितः'' इत्यादिश्रुत्यन्तर इत्यर्थः ।

'ಸರ್ವಗತಂ ಸುಸೂಕ್ಷ್ಮಮ್' ಎಂಬ ಶ್ರುತಿಯಲ್ಲಿ 'ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ' ಇತ್ಯಾದಿ ಶ್ರುತಿಗಳಲ್ಲಿ ಬ್ರಹ್ಮನಿಗೆ ಸರ್ವಗತತ್ವವು ಹೇಳಲ್ಪಟ್ಟದೆಯೆಂದು ತಿಳಿಯಬೇಕು.

**प्रकाशः –** एतेन ''सर्वगते हरावसम्भवात्'' इति टीका विवृता । नन्वथापि तत्सुखमित्युक्तपूर्णसुखत्वाद्युपदेशादिना भूमा विष्णुः किं न स्यादित्यत आह – **एवञ्चेति ।।**

ಹೀಗೆ ಹೇಳಿದ್ದರಿಂದ 'ಸರ್ವಗತೇ ಹರಾವಸಂಭವಾತ್' ಎಂಬ ಟೀಕೆಯನ್ನು ವಿವರಿಸಿದಂತಾಯಿತು.

ಪ್ರಶ್ನೆ - ಇಷ್ಟು ಹೇಳಿದರೂ 'ತತ್ಸುಖಮ್' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ಪೂರ್ಣಸುಖತ್ವ, ಅಧ್ಯುಪದೇಶ ಮುಂತಾದ ಹೇತುಗಳಿಂದ ಭೂಮನೆನಿಸಿದವನು ವಿಷ್ಣುವೇ ಏಕಾಗಬಾರದು? ಎಂಬ ಪ್ರಶ್ನೆಗೆ 'ಏವಂಚ' ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾರೆ.




ಭೂಮಪ್ರಕರಣದಲ್ಲಿ ಸರ್ವಗತತ್ವವು ಕೇಳಿಸುತ್ತಿದೆ. ಅದಕ್ಕನುಸಾರಿಯಾಗಿ ಪ್ರಾಣನಲ್ಲಿ ಕೇಳಿಸುತ್ತಿರುವ ದೇಹಾದ್ಯುತ್ಕ್ರಮಣವೆಂಬ ಲಿಂಗವನ್ನು ಗೌಣವಾಗಿ ವ್ಯಾಖ್ಯಾನಿಸಬೇಕೆಂದು ಹೇಳಬಾರದು. ಏಕೆಂದರೆ 'ಉತ್ಕ್ರಾಂತ' ಎಂಬ ಶಬ್ದದಿಂದಲೇ ನೇರವಾಗಿ ಪ್ರಾಣೋತ್ಕ್ರಮಣವೆಂಬ ಲಿಂಗವು ತಿಳಿಯುತ್ತಿದೆ. ಹಾಗೇ ಸರ್ವಗತತ್ವವನ್ನು ನೇರವಾಗಿ ಹೇಳುವ ಯಾವುದೇ ಶಬ್ದಗಳು ಶ್ರುತಿಯಲ್ಲಿರುವುದಿಲ್ಲ. ಆದ್ದರಿಂದ ಸರ್ವಗತತ್ವವನ್ನೇ ಗೌಣವನ್ನಾಗಿ ಅರ್ಥೈಸಬೇಕು. ಒಟ್ಟಾರೆ ಸಂಪ್ರಸಾದವೆಂಬ ಪೂರ್ಣಾನಂದತ್ವವು ವಿಷ್ಣುವಿನಲ್ಲಿ ಮಾತ್ರ ಬರುತ್ತದೆಂಬ ನಿಯಮವನ್ನು ಸಿದ್ಧಾಂತಿಗಳು ಮಾಡಲು ಸಾಧ್ಯವಿಲ್ಲ. ಮುಖ್ಯಪ್ರಾಣದೇವರಲ್ಲಿಯೂ ಈ ಲಿಂಗವು ಬರುತ್ತಿದೆ.



ವ್ಯಾಪ್ತನಾದ ಬ್ರಹ್ಮನಲ್ಲಿ ಉತ್ಕ್ರಮಣವನ್ನು ಹೇಳಲಾಗದೆಂದು ಪೂರ್ವಪಕ್ಷದ ಉಪಸಂಹಾರ

## तात्पर्यचन्द्रिका

**नच वाच्यं "अन्यभावव्यावृत्तेः" इत्यत्र ब्रह्मणो महत्त्वेऽप्यणुत्वं वक्ष्यते । अणुत्वमेव च क्रियावत्त्वे तन्त्रम् । नतु महत्त्वाभावविशिष्टम् । न वा महत्त्वाभावः । गौरवादिति ।**

ಅನುವಾದ - ಮುಂದಿನ ಅಕ್ಷರಾಧಿಕರಣದ 'ಅನ್ಯಭಾವವ್ಯಾವೃತ್ತೇಃ' ಎಂಬ ಗುಣಸೂತ್ರದಲ್ಲಿ ಬ್ರಹ್ಮನಿಗೆ ಮಹತ್ವವಿದ್ದರೂ ಸಹ ಅಣುತ್ವವು ಇರುತ್ತದೆಂದು ಸಮರ್ಥಿಸುತ್ತಾರೆ. ಅಣುರೂಪನಾದ ಬ್ರಹ್ಮನಿಗೆ ಉತ್ಕ್ರಮಣವೆಂಬ ಲಿಂಗವನ್ನು ಹೇಳಲು ಏನು ತೊಂದರೆ? ಏಕೆಂದರೆ ಕ್ರಿಯಾ ಇರಬೇಕೆಂದರೆ ಅಣುವಾಗಿದ್ದರೆ ಸಾಕು, ಪರಮಾತ್ಮನಲ್ಲಿ ಅಣುತ್ವವಿರುವ ಪ್ರಯುಕ್ತ ಕ್ರಿಯಾವನ್ನು ಹೇಳಬಹುದು. ಕ್ರಿಯಾವತ್ವಕ್ಕೆ ಅಣುತ್ವವೇ ಪ್ರಯೋಜಕ ಹೊರತು, ಮಹತ್ತ್ವಾಭಾವವಿಶಿಷ್ಟವಾದ ಅಣುತ್ವವಾಗಲೀ, ಅಥವಾ ಮಹತ್ತ್ವಾಭಾವವಾಗಲೀ ಪ್ರಯೋಜಕವಲ್ಲ. ಏಕೆಂದರೆ ಅಣುತ್ವಕ್ಕಿಂತ ಮಹತ್ತ್ವಾಭಾವವು ಗುರುಭೂತವಾಗಿದೆ. ಮಹತ್ತ್ವಾಭಾವಕ್ಕಿಂತಲೂ, ಮಹತ್ತ್ವಾಭಾವವಿಶಿಷ್ಟವಾದ ಅಣುತ್ವವು ಇನ್ನೂ ಗುರುಭೂತವಾಗಿದೆ. ಆದ್ದರಿಂದ ಲಘುಭೂತವಾದ ಅಣುತ್ವವನ್ನೇ ಪ್ರಯೋಜಕವೆಂದು ಹೇಳುವುದು

ಸಾಧುವಾಗಿದೆ. ಇಂತಹ ಅಣುತ್ವವು ಬ್ರಹ್ಮನಲ್ಲಿರುವುದರಿಂದ ಉತ್ಕ್ರಮಣವೆಂಬ ಕ್ರಿಯೆಯನ್ನು ಹೇಳಲು ಏನು ತೊಂದರೆ?

**महत्त्वमेवाक्रियत्वे तन्त्रम् । न त्वणुत्वाभावविशिष्टम् । न वाऽणुत्वाभाव इत्यपि सम्भवात् ।**

ಹೀಗೆ ಪ್ರಶ್ನಿಸಬಾರದು. ಏಕೆಂದರೆ ನೀವು ಹೇಳಿದ್ದಕ್ಕೆ ವಿಪರೀತವಾಗಿಯೂ ಹೇಳಲು ಬರುತ್ತದೆ. ಏಕೆಂದರೆ ಕ್ರಿಯಾಶೂನ್ಯತ್ವಕ್ಕೆ ಮಹತ್ತ್ವವೇ ಪ್ರಯೋಜಕವಾಗಿದೆ; ಹೊರತು ಅಣುತ್ವಾಭಾವವಿಶಿಷ್ಟವಾದ ಮಹತ್ತ್ವವಾಗಲೀ ಅಥವಾ ಅಣುತ್ವಾಭಾವವಾಗಲೀ ಪ್ರಯೋಜಕವಲ್ಲ. ಏಕೆಂದರೆ ಮಹತ್ತ್ವಕ್ಕಿಂತ ಅಣುತ್ವಾಭಾವವು ಗುರುಭೂತವಾಗಿದೆ. ಅಣುತ್ವಾಭಾವಕ್ಕಿಂತಲೂ ಅಣುತ್ವಾಭಾವವಿಶಿಷ್ಟವಾದ ಮಹತ್ತ್ವವು ಇನ್ನೂ ಗುರುಭೂತವಾಗಿದೆ. ಇವೆರಡಕ್ಕಿಂತ ಮಹತ್ತ್ವವು ಲಘುಭೂತವಾಗಿರುವ ಕಾರಣ ಕ್ರಿಯೆ ಇಲ್ಲದಿರಲು ಮಹತ್ತ್ವವನ್ನು ಪ್ರಯೋಜಕವೆಂದೂ ಹೇಳಬಹುದು ಎಂದರ್ಥ. ಬ್ರಹ್ಮನಲ್ಲಿ ಮಹತ್ತ್ವವಿರುವ ಪ್ರಯುಕ್ತ ಕ್ರಿಯಾಶೂನ್ಯತ್ವವನ್ನು ಒಪ್ಪಲೇಬೇಕು. ಅಂದರೆ ವ್ಯಾಪ್ತನಾದ ಬ್ರಹ್ಮನು ದೇಹದಿಂದ ಉತ್ಕ್ರಮಣನಾಗಲು ಸಾಧ್ಯವಿಲ್ಲ ಎಂದು ಹೇಳಿದಂತಾಗುತ್ತದೆ.

**'सर्वत्रप्रसिद्ध' इत्यत्र तु सर्वगतस्यापि व्योमदृष्टान्तेनैकदेशगतत्वमुक्तम् । नतु सक्रियत्वम् ।**

ಸರ್ವಗತತ್ವಾಧಿಕರಣದಲ್ಲಿ ಸರ್ವಗತನಾದ ಬ್ರಹ್ಮನು ಎಲ್ಲೆಡೆ ವ್ಯಾಪ್ತವಾದ ಆಕಾಶದ ದೃಷ್ಟಾಂತದಿಂದ ಹೃದಯವೆಂಬ ಅಲ್ಪಸ್ಥಾನದಲ್ಲಿಯೂ ಇರುತ್ತಾನೆಂದು ಸಮರ್ಥಿಸಲಾಗಿದೆ. ಹೊರತು ಅಣುಸ್ವರೂಪನಾದ್ದರಿಂದ ಕ್ರಿಯೆವುಳ್ಳವನೆಂದು ಸಮರ್ಥಿಸಿರುವುದಿಲ್ಲ. ಆದ್ದರಿಂದ ಸರ್ವಗತತ್ವಾಧಿಕರಣದಲ್ಲಿ ಕ್ರಿಯೆಯನ್ನು ಹೇಳಿರುವ ಪ್ರಯುಕ್ತ ಬ್ರಹ್ಮನಲ್ಲಿ ಉತ್ಕ್ರಮಣವನ್ನು ಹೇಳಬಹುದಲ್ಲವೇ? ಎಂಬ ಶಂಕೆಗೆ ಆಸ್ಪದವಿಲ್ಲ.

**''ज्योतिर्दर्शनात्'' इत्यत्र तु ''स समानः सन्नुभौ लोकावनुसञ्चरति'' इत्युक्तं यत्कर्मवशेनोभयलोकसञ्चरणं तत्कर्मातीतस्य ब्रह्मणो न युक्तमिति शङ्का,**

ಈ ಅಧಿಕರಣಕ್ಕೆ ಸರ್ವಗತತ್ವಾಧಿಕರಣದಿಂದ ಹೇಗೆ ಗತಾರ್ಥತ್ವವಿಲ್ಲವೋ, ಅದರಂತೆ 'ಜ್ಯೋತಿರ್ದರ್ಶನಾತ್' ಎಂಬ ಅಧಿಕರಣದಿಂದಲೂ ಗತಾರ್ಥತ್ವವು ಬರುವುದಿಲ್ಲ. ಏಕೆಂದರೆ 'ಜ್ಯೋತಿರ್ದರ್ಶನಾತ್' ಎಂಬ ಸೂತ್ರದಲ್ಲಿ 'ಸ ಸಮಾನಃ ಸನ್ನುಭೌ ಲೋಕಾವನುಸಂಚರತಿ' ಎಂಬ ಶ್ರುತಿಯಲ್ಲಿ ಕರ್ಮದ ಅಧೀನವಾಗಿ ಎರಡು ಲೋಕಗಳನ್ನು ಸಂಚಾರ ಮಾಡುತ್ತಾನೆ ಎಂದು ಹೇಳಲಾಗಿದೆ. ಈ ಎರಡು ಲೋಕದ ಸಂಚಾರವು ಯಾರಿಗೆ ಎಂಬ ಪ್ರಶ್ನೆ ಬಂದಾಗ ಕರ್ಮಾತೀತನಾದ ಬ್ರಹ್ಮನಿಗೆ ಈ ಸಂಚಾರವು ಯುಕ್ತವಾಗುವುದಿಲ್ಲವೆಂದು ಶಂಕೆ;

**नेदं सञ्चरणं कर्मवशात् । किन्तु स्वेच्छयेति परिहारश्च । नतु पूर्णस्य क्रियानुपपत्त्या शङ्कातत्परिहारौ । अत एव तत्र पूर्वपक्षे टीका ''जीवस्य हि कर्मवशादुभयलोकसञ्चरणं युक्तम्'' इति ।**

ಹಾಗೂ ಉಭಯಲೋಕದ ಸಂಚಾರವು ಕರ್ಮಾಧೀನವಾಗಿದೆಯೆಂದು ಶ್ರುತಿಯು ಹೇಳುತ್ತಿಲ್ಲ. ಹೊರತಾಗಿ ಸ್ವೇಚ್ಛೆಯಿಂದಲೇ ಸಂಚಾರವು ನಡೆಯುತ್ತದೆಂದು ಪರಿಹಾರವನ್ನೂ ಹೇಳಲಾಗಿದೆ. ಆದರೆ ಪೂರ್ಣನಾದ ಅಂದರೆ ಎಲ್ಲೆಡೆ ವ್ಯಾಪ್ತನಾದ ಪರಮಾತ್ಮನಿಗೆ ಸಂಚಾರವೆಂಬ ಕ್ರಿಯೆಯನ್ನೇ ಹೇಳಲು ಸಾಧ್ಯವಿಲ್ಲದ ಕಾರಣ ಶಂಕೆಯನ್ನಾಗಲೀ ಪರಿಹಾರವನ್ನಾಗಲೀ ಹೇಳಲು ಸಾಧ್ಯವಿಲ್ಲ. ಮತ್ತು ಇದು ಜೀವನಿಗೆ ಸಂಬಂಧಿಸಿದ ಸಂಚಾರವೆಂದೇ ಹೇಳಬೇಕು. ಆದ್ದರಿಂದಲೇ ಆ ಅಧಿಕರಣದ ಪೂರ್ವಪಕ್ಷಟೀಕೆಯಲ್ಲಿ 'ಜೀವಸ್ಯ ಹಿ ಕರ್ಮವಶಾದುಭಯಲೋಕಸಂಚರಣಂ ಯುಕ್ತಮ್' 'ಕರ್ಮಾಧೀನನಾದ ಜೀವನಿಗೆ ಉಭಯಲೋಕದ ಸಂಚಾರವು ಯುಕ್ತವಾಗುತ್ತದೆ' ಎಂದು ಹೇಳಿರುತ್ತಾರೆ.

**सिद्धान्तन्यायविवरणं च ''लोकसञ्चरणं तु जीवमादाय तस्यैवादुःखेन स्वातन्त्र्यात्'' इति ।**

ಇದರಂತೆ ಸಿದ್ಧಾಂತವನ್ನು ಹೇಳುವ ನ್ಯಾಯವಿವರಣದಲ್ಲಿಯೂ ಸಹ 'ಲೋಕಸಂಚರಣಂ ತು ಜೀವಮಾದಾಯ ತಸ್ಯೈವಾದುಃಖೇನ ಸ್ವಾತಂತ್ರ್ಯಾತ್' 'ಜೀವನ ವಿಷಯಲ್ಲದಷ್ಟೇ ಲೋಕಸಂಚಾರವನ್ನು ಹೇಳಿದ್ದಾರೆ. ಪರಮಾತ್ಮನು ಸ್ವತಂತ್ರನಾದ್ದರಿಂದ ಅವನಿಗೆ ಲೋಕಸಂಚಾರವನ್ನು ಹೇಳಿರುವುದಿಲ್ಲ' ಎಂಬುದಾಗಿ ಹೇಳಿದ್ದಾರೆ. ಆದ್ದರಿಂದ ಕ್ರಿಯೆಯು ಕೂಡುವುದಿಲ್ಲವೆಂಬ ಶಂಕೆಯನ್ನು ಮತ್ತು ಅದರ ಪರಿಹಾರವನ್ನು 'ಜ್ಯೋತಿರ್ದರ್ಶನಾತ್' ಎಂಬ ಸೂತ್ರದಲ್ಲಿ ಮಾಡಿರುವುದಿಲ್ಲ ಹೊರತಾಗಿ, ಕರ್ಮಾಧೀನವಾದ ಕ್ರಿಯೆಯೂ ಕೂಡುವುದಿಲ್ಲವೆಂದು ಶಂಕಿಸಿ ಉತ್ತರಿಸಿದ್ದಾರೆ. ಆದ್ದರಿಂದ ಜ್ಯೋತಿರಧಿಕರಣದಿಂದ ಗತಾರ್ಥತ್ವವು ಬರುವುದಿಲ್ಲವೆಂದು ತಿಳಿಯಬೇಕು.

**नच ''शास्त्रदृष्ट्या'' इति न्यायेनान्तर्यामिगता क्रिया । ''एष म आत्माऽन्तर्हृदये ज्यायान्पृथिव्याः'' इत्यादिश्रुत्या तस्यापि सर्वगतत्वात् ।**

'ಶಾಸ್ತ್ರದೃಷ್ಟ್ಯಾತು' ಇತ್ಯಾದಿ ಸೂತ್ರದ ನ್ಯಾಯದಿಂದ ಮುಖ್ಯಪ್ರಾಣದೇವರ ಅಂತರ್ಯಾಮಿಯಾದ ಪರಮಾತ್ಮನಿಗೂ ಸಹ ಉತ್ಕ್ರಮಣರೂಪಕ್ರಿಯೆಯನ್ನು ಹೇಳಬಹುದಲ್ಲವೇ? ಎಂದು ಪ್ರಶ್ನಿಸಬಾರದು. 'ಏಷ ಮ ಆತ್ಮಾಂತರ್ಹೃದಯೇ ಜ್ಯಾಯಾನ್ ಪೃಥಿವ್ಯಾಃ' ಇತ್ಯಾದಿ ಶ್ರುತಿಗಳಿಂದ ಅಂತರ್ಯಾಮಿಯಾದವನೂ ಸಹ ವ್ಯಾಪ್ತನೇ ಆಗಿದ್ದಾನೆಂದು ಸಿದ್ಧವಾಗಿದೆ.

ಪರಿಪೂರ್ಣಚಂದ್ರಿಕಾ

**यदि च सर्वगतस्यापि क्रिया तदा ''उत्क्रान्तिगत्यागतीनाम्'' इत्यत्र जीवस्य सक्रियत्वेनाणुत्वोक्तिरयुक्ता स्यादिति ।**

ಒಂದು ವೇಳೆ ಸರ್ವಗತನಾದ ಬ್ರಹ್ಮನಿಗೂ ಸಹ ಉತ್ಕ್ರಮಣಾದಿಕ್ರಿಯೆಯನ್ನು ಹೇಳಿದರೆ ಆವಾಗ 'ಉತ್ಕ್ರಾಂತಿಗತ್ಯಾಗತೀನಾಮ್' ಎಂಬ ಸೂತ್ರದಲ್ಲಿ ಕ್ರಿಯೆಯುಳ್ಳವನಾದ ಪ್ರಯುಕ್ತ ಜೀವನು ಅಣುವಾಗಿದ್ದಾನೆಂದು ಸಾಧಿಸಿದ್ದು ತಪ್ಪಾಗಬೇಕಾದೀತು. ಆದ್ದರಿಂದ ವ್ಯಾಪ್ತನಾದ ವ್ಯಕ್ತಿಗೆ ಕ್ರಿಯೆಯನ್ನು ಹೇಳಲು ಸಾಧ್ಯವಿಲ್ಲವೆಂದು ಈ ಅಧಿಕರಣದ ಪೂರ್ವಪಕ್ಷ.

**प्रकाशः –**

अधिकरणान्तरन्यायैरेवोत्क्रमणस्यापि भगवति सिद्धेर्न तेनेह पूर्वपक्षोदय इति भावेनाशङ्क्य निराह – **न चेत्यादिना ।।**

ವಿವರಣೆ - ಬೇರೆ ಅಧಿಕರಣಗಳ ನ್ಯಾಯದಿಂದಲೇ ಉತ್ಕ್ರಮಣವೆಂಬ ಕ್ರಿಯೆಯು ಭಗವಂತನಲ್ಲಿ ಸಿದ್ಧವಾಗುವ ಕಾರಣದಿಂದ ಈ ಅಧಿಕರಣವು ಗತಾರ್ಥವಾಗುತ್ತದೆ. ಆದ್ದರಿಂದ ಪೂರ್ವಪಕ್ಷವೇ ಹುಟ್ಟಲು ಸಾಧ್ಯವಿಲ್ಲವಲ್ಲವೇ? ಎಂಬ ಆಶಂಕೆಯನ್ನು 'ನಚ' ಇತ್ಯಾದಿ ಗ್ರಂಥದಿಂದ ನಿರಾಕರಿಸುತ್ತಿದ್ದಾರೆ.

**प्रकाशः – इत्यत्रेति** ।। उत्तराधिकरणगुणसूत्र इत्यर्थः । **न त्विति** ।। ''येन ब्रह्मणि महत्त्वस्यापि भावात्क्रियावत्त्वं न स्यात्'' इति वाक्यशेषः ।

'ಇತ್ಯತ್ರ' ಎಂದರೆ ಮುಂದಿನ ಅಕ್ಷರಾಧಿಕರಣದ ಗುಣಸೂತ್ರದಲ್ಲಿ ಎಂದರ್ಥ. 'ನತು ಮಹತ್ತ್ವಾಭಾವವಿಶಿಷ್ಟಮ್' ಎಂಬ ವಾಕ್ಯದ ಅನಂತರ - 'ಯೇನ ಬ್ರಹ್ಮಣಿ ಮಹತ್ತ್ವಸ್ಯಾಪಿ ಭಾವಾತ್ ಕ್ರಿಯಾವತ್ತ್ವಂ ನ ಸ್ಯಾತ್' 'ಒಂದು ವೇಳೆ ಮಹತ್ತ್ವಾಭಾವವಿಶಿಷ್ಟವಾದ ಅಣುತ್ವವು ಕ್ರಿಯಾವತ್ತ್ವಕ್ಕೆ ಪ್ರಯೋಜಕವಾಗಿದ್ದಲ್ಲಿ ಬ್ರಹ್ಮನಲ್ಲಿ ಮಹತ್ತ್ವವೂ ಸಹ ಇರುವುದರಿಂದ ಕ್ರಿಯಾವತ್ತ್ವವು ಬರುವುದಿಲ್ಲವೆಂದು ಹೇಳಬಹುದಿತ್ತು' ಎಂಬ ವಾಕ್ಯವನ್ನು ಶೇಷಪೂರ್ಣ ಮಾಡಿಕೊಳ್ಳಬೇಕು.

**प्रकाशः – गौरवादितीति** ।। नच वाच्यमिति पूर्वेणान्वयः । अभावघटितत्वादिति भावः ।

'ಗೌರವಾದಿತಿ' ಎಂಬಲ್ಲಿ 'ಇತಿ' ಶಬ್ದಕ್ಕೆ 'ನಚ ವಾಚ್ಯಮ್' ಎಂಬಲ್ಲಿ ಅನ್ವಯ ಮಾಡಬೇಕು. ಎಂದರೆ - ಅಭಾವಘಟಿತವಾದ್ದರಿಂದ ಗೌರವದೋಷ ಬರುತ್ತದೆಂದು ತಿಳಿಯಬೇಕು.

**प्रकाशः – इत्यपि सम्भवादिति** ।। तथा च ब्रह्मणि सत्यप्यणुत्वे न तेनोत्क्रमणादिक्रियावत्त्वसिद्धिः । महत्त्वस्याक्रियत्वप्रयोजकस्याकाशादाविव भावादिति भावः ।

'ಇತ್ಯಪಿ ಸಂಭವಾತ್' ಎಂದು ಗ್ರಂಥದಲ್ಲಿದೆ. ಈ ವಾಕ್ಯಕ್ಕೆ ; ಆದ್ದರಿಂದ ಬ್ರಹ್ಮನಲ್ಲಿ ಅಣುತ್ವವಿದ್ದರೂ ಸಹ ಅಣುತ್ವ ಪ್ರಯುಕ್ತವಾಗಿ ಉತ್ಕ್ರಮಣಾದಿ ಕ್ರಿಯೆಯನ್ನು ಹೇಳಲು ಸಾಧ್ಯವಿಲ್ಲ. ಏಕೆಂದರೆ ಕ್ರಿಯಾಶೂನ್ಯತ್ವಕ್ಕೆ ಪ್ರಯೋಜಕವಾದ ಮಹತ್ತ್ವಾದಿಗಳೂ ಸಹ ಆಕಾಶಾದಿಗಳಂತೆ ಬ್ರಹ್ಮನಲ್ಲಿ ಇರುವುದರಿಂದ ಎಂದಭಿಪ್ರಾಯ.

**प्रकाशः – उक्तमिति ।। ''अर्भकौकस्त्वात्'' इत्यादिगुणसूत्रेणेत्यर्थः ।**

'ಉಕ್ತಮ್' ಎಂದರೆ 'ಅರ್ಭಕೌಕಸ್ತ್ವಾತ್' ಇತ್ಯಾದಿ ಗುಣಸೂತ್ರದಲ್ಲಿ ಹೇಳಿದ್ದಾರೆಂದರ್ಥ.

**प्रकाशः – ज्योतिरिति ।। अत्र सिद्धक्रियावत्त्वमुपेत्यैव विशेषशङ्कया तत्प्रवृत्तमित्यर्थः । पूर्णस्य देशतो व्याप्तस्य । अन्तर्यामिगता क्रियेति ।। प्राणसंवादादिलिङ्गवदिति भावः ।।**

'ಜ್ಯೋತಿರ್ದರ್ಶನಾತ್' ಎಂಬ ಸೂತ್ರದಲ್ಲಿ ಮೊದಲೇ ಸಿದ್ಧವಾದ ಕ್ರಿಯಾವತ್ತ್ವವನ್ನು ಪರಮಾತ್ಮನಲ್ಲಿ ಅಂಗೀಕರಿಸಿಯೇ ಅದರ ಮೇಲೆ ಬರುವ ವಿಶೇಷ ಶಂಕೆಯನ್ನು ಪರಿಹರಿಸಿದ್ದಾರೆ. 'ಪೂರ್ಣಸ್ಯ' ಎಂದರೆ ದೇಶತಃ ವ್ಯಾಪ್ತನಾದ ಎಂದರ್ಥ. 'ಅಂತರ್ಯಾಮಿಗತಾ ಕ್ರಿಯಾ' ಎಂದರೆ ಪ್ರಾಣಸಂವಾದಾದಿಲಿಂಗಗಳಂತೆ ಅಂತರ್ಯಾಮಿಯಲ್ಲಿರುವ ಕ್ರಿಯೆಯನ್ನು ತಿಳಿಯಬೇಕೆಂದಭಿಪ್ರಾಯ.

**प्रकाशः – तस्यापि सर्वगतत्वादिति ।। ''तत्प्राण उत्क्रान्तेऽपद्यते'' इत्यादिप्राणोत्क्रमणादि त्वत्रत्यन्यायेनान्तर्यामिगतत्वेन तत्राभिमतम् । नतु तत्रैव तत्सिद्धमिति भावः ।**

'ಶಾಸ್ತ್ರದೃಷ್ಟ್ಯಾ' ಇತ್ಯಾದಿ ಸೂತ್ರದಲ್ಲಿ 'ತತ್ಪ್ರಾಣ ಉತ್ಕ್ರಾಂತೇಽಪದ್ಯತೇ' ಇತ್ಯಾದಿಯಾಗಿ ಪ್ರಾಣೋತ್ಕ್ರಮಣಾದಿಗಳನ್ನು ಹೇಳಿದ್ದು ಈ ಅಧಿಕರಣದ ಸಿದ್ಧಾಂತನ್ಯಾಯವನ್ನು ಅನುಸರಿಸಿ ಅಂತರ್ಯಾಮಿಗತತ್ವೇನ ಅಲ್ಲಿ ಹೇಳಿರುತ್ತಾರೆ. ಹೊರತು ಅಲ್ಲಿಯೇ ಸಿದ್ಧವಾದ ನ್ಯಾಯವನ್ನು ಅನುಸರಿಸಿ ಹೇಳಿರುವುದಲ್ಲವೆಂದು ತಿಳಿಯಬೇಕು.

**प्रकाशः** – एतेन ''सर्वगते हरावसम्भवात्'' इति टीकावाक्यम् अणुत्ववत्यपि हरौ सर्वगतेऽसम्भवादिति व्योमवदेकदेशगतेऽपि हरौ सर्वगतेऽसम्भवादिति अन्तर्यामिण्यपि सर्वगते हरावसम्भवादित्यादि रूपेण व्याख्यातं भवति ।

ಹೀಗೆ ಹೇಳಿದ್ದರಿಂದ 'ಸರ್ವಗತೇ ಹರೌವಸಂಭವಾತ್' ಇತ್ಯಾದಿ ಟೀಕಾವಾಕ್ಯವನ್ನು ಅನೇಕ ಬಗೆಯಲ್ಲಿ ವ್ಯಾಖ್ಯಾನಿಸಿದಂತಾಯಿತು. ಶ್ರೀಹರಿಯು ಅಣುತ್ವವುಳ್ಳವನಾದರೂ ಸಹ ಅವನು ಸರ್ವಗತನಾದ ಪ್ರಯುಕ್ತ ಅಂತಹ ಶ್ರೀಹರಿಯಲ್ಲಿ ಕ್ರಿಯೆಯು ಕೂಡುವುದಿಲ್ಲ. ಮತ್ತು ಆಕಾಶದಂತೆ ಪರಮಾತ್ಮನು

ಏಕದೇಶಗತನಾಗಿದ್ದರೂ ಸರ್ವಗತನಾದ ಪ್ರಯುಕ್ತ ಕ್ರಿಯೆಯು ಕೂಡುವುದಿಲ್ಲ. ಮತ್ತು ಅಂತರ್ಯಾಮಿಯಾಗಿದ್ದರೂ ಸಹ ಸರ್ವಗತನಾದ ಪ್ರಯುಕ್ತ ಶ್ರೀಹರಿಯಲ್ಲಿ ಕ್ರಿಯೆಯು ಕೂಡುವುದಿಲ್ಲ. ಇತ್ಯಾದಿಯಾಗಿ ವ್ಯಾಖ್ಯಾನಿಸಿದಂತಾಯಿತು.

**प्रकाशः – उत्क्रान्तीति ।।** द्वितीयस्य तृतीयपादे "उत्क्रान्तिगत्यागतीनाम्" इत्यत्र जीवः किं व्याप्तोऽणुर्वेति सन्देहे "व्याप्ता ह्यात्मानः" इति श्रुतेर्व्याप्त इति प्राप्ते "सोऽस्माच्छरीरादुत्क्रम्यामुं लोकमभिगच्छत्यमुष्मादिमं लोकमागच्छति" इत्युत्क्रमणगमनागमनरूपक्रियादर्शनाद्व्याप्तस्य तदयोगादणुरेव । व्याप्तत्वश्रुतेः परमात्मविषयत्वमिति वक्ष्यमाणत्वात्तद्विरोधस्स्यादित्यर्थः ।

'ಉತ್ಕ್ರಾಂತಿಗತ್ಯಾಗತೀನಾಮ್' ಎಂಬ ಪ್ರತೀಕದ ಅಭಿಪ್ರಾಯ ಹೀಗೆ -

ಎರಡನೆಯ ಅಧ್ಯಾಯದ ಮೂರನೆಯ ಪಾದದಲ್ಲಿ ಬರುವ ಈ ಸೂತ್ರದಲ್ಲಿ ಹೀಗೆ ವಿಚಾರ ಮಾಡಿದ್ದಾರೆ - ಜೀವನು ವ್ಯಾಪ್ತನೋ? ಅಥವಾ ಅಣುವೋ ಎಂದು ಸಂಶಯ. 'ವ್ಯಾಪ್ತಾ ಹ್ಯಾತ್ಮಾನಃ' ಎಂಬ ಶ್ರುತಿಯಿರುವುದರಿಂದ ಜೀವನು ವ್ಯಾಪ್ತನಾಗಿದಾನೆಂದು ಪೂರ್ವಪಕ್ಷ. 'ಸೋಽಸ್ಮಾಚ್ಛರೀರಾದುತ್ಕ್ರಮ್ಯಾಮುಂ ಲೋಕಮಭಿಗಚ್ಛತ್ಯಮುಷ್ಮಾದಿಮಂ ಲೋಕಮಾಗಚ್ಛತಿ' ಎಂಬುದಾಗಿ ಉತ್ಕ್ರಮಣ, ಗಮನ, ಆಗಮನ ಮೊದಲಾದ ಕ್ರಿಯೆಗಳನ್ನು ಹೇಳಿರುವ ಪ್ರಯುಕ್ತ ವ್ಯಾಪ್ತನಾದ ಜೀವನಿಗೆ ಇಂತಹ ಕ್ರಿಯೆಯು ಕೂಡುವುದಿಲ್ಲ. ಆದ್ದರಿಂದ ಜೀವನು ಅಣುಸ್ವರೂಪನೆಂದೇ ಹೇಳಬೇಕು. ವ್ಯಾಪ್ತತ್ವವನ್ನು ಹೇಳುವ ಶ್ರುತಿಯಿದ್ದರೂ ಸಹ ಅದು ಕೇವಲ ಪರಮಾತ್ಮಕ ವಿಷಯಕವೆಂದು ಮುಂದೆ ಸಮರ್ಥಿಸುತ್ತಾರೆ. ಆದ್ದರಿಂದ ಈ ಅಧಿಕರಣದಲ್ಲಿ ಕ್ರಿಯೆಯುಳ್ಳವನಾದ್ದರಿಂದ ಜೀವನನ್ನು ಅಣುಸ್ವರೂಪನೆಂದು ಸಮರ್ಥಿಸಲಾಗಿದೆ. ಇದರ ವಿರೋಧ ಬರುತ್ತದೆಂದು ತಿಳಿಯಬೇಕು.

ಆದ್ದರಿಂದ ಉತ್ಕ್ರಮಣಲಿಂಗವನ್ನು ವಿಷ್ಣುವಿನಲ್ಲಿ ಹೇಳಲು ಬಾರದ ಕಾರಣ ಪ್ರಾಣಶಬ್ದದಿಂದ ವಾಚ್ಯರಾದವರು ಮುಖ್ಯಪ್ರಾಣದೇವರೇ ಆಗುತ್ತಾರೆ. ಅವರೇ 'ಭೂಮಾ' ಎಂಬ ಶಬ್ದದಿಂದಲೂ ಪ್ರತಿಪಾದ್ಯರಾಗುತ್ತಾರೆಂಬ ಪೂರ್ವಪಕ್ಷವು ಸಿದ್ಧವಾಯಿತು.

**गुरुराजीयम्** – उपक्रमानुक्तयोरेकत्रासम्भवात्पक्षभेदेन व्यवस्थापनायाऽह – **भूम्नो ब्रह्मत्वं हि द्वेधा भवेदित्यादिना ।।** 'प्राणभूम्नोरभेदपक्ष' इत्यादिनैतद्विवेकं स्वयमेव करिष्यति । ननु सर्वगतत्वेन ब्रह्मण उत्क्रमणम् । तस्य भूमत्वानङ्गीकारे वायोरेव सर्वगतत्वापत्त्योत्क्रमणानुपपत्तिरित्यत आह – **वायोरिति ।।** ननु वायोरणुत्वेन तस्यैवानन्दमयत्वमिति टीकोक्ताक्षेपानुपपत्तिः । आनन्दमय उक्तस्य देशतः पूर्णत्वस्याणौ वायावसम्भवादित्यत आह – **आनन्दमय इति ।।**




ಪರಮಾತ್ಮನು ವ್ಯಾಪ್ತನಾದ ಕಾರಣ 'ದೇಹದಿಂದ ಹೊರಗೆ ಹೊರಟಿದ್ದಾನೆ'. ಅಥವಾ 'ದೇಹದಲ್ಲಿ ಪ್ರವೇಶ ಮಾಡಿದ್ದಾನೆ' ಇತ್ಯಾದಿಯಾಗಿ ಯಾವುದೇ ಕ್ರಿಯೆಯನ್ನು ಹೇಳಲು ಸಾಧ್ಯವಿಲ್ಲ. ಇಂತಹ ಕ್ರಿಯೆಯನ್ನು ಅಣುಸ್ವರೂಪನಾದ ಮುಖ್ಯಪ್ರಾಣನಲ್ಲಿ ಮಾತ್ರ ಹೇಳಬೇಕೆಂದು ಪೂರ್ವಪಕ್ಷದ ಅಭಿಪ್ರಾಯ. ಬ್ರಹ್ಮನು ವ್ಯಾಪ್ತನಾಗಿದ್ದರೂ ಸಹ ಅಣುಸ್ವರೂಪನೂ ಆಗಿರುವ ಪ್ರಯುಕ್ತ ಕ್ರಿಯೆಯನ್ನು ಹೇಳಬಹುದಲ್ಲವೇ ? ಎಂಬ ಪ್ರಶ್ನೆ ಸಹಜವಾಗಿ ಬರುತ್ತದೆ. ಆದರೆ ಅಣುತ್ವವಿರುವ ಪ್ರಯುಕ್ತ ಕ್ರಿಯೆಯು ಬರುತ್ತದೆಂದು ಹೇಳುವುದಾದರೆ ಮಹತ್ತ್ವವಿರುವ ಪ್ರಯುಕ್ತ ಕ್ರಿಯೆಯು ಬರುವುದಿಲ್ಲವೆಂದು ಹೇಳಿದರೆ ಈ ರೀತಿಯ ಪೂರ್ವಪಕ್ಷಿಗಳ ಪ್ರತಿಬಂದಿಗೆ ಉತ್ತರವನ್ನು ನೀಡಲು ಸಾಧ್ಯವಿಲ್ಲ. ಆದ್ದರಿಂದ ವ್ಯಾಪ್ತನಾದ ಪರಮಾತ್ಮನಿಗೆ ಕ್ರಿಯೆಯು ಕೂಡುವುದಿಲ್ಲವೆಂಬುದೇ ಈ ಅಧಿಕರಣದ ಪೂರ್ವಪಕ್ಷ. ಇದರ ನಿರಾಕರಣೆಯೇ ಸಿದ್ಧಾಂತ.

ಈ ಪೂರ್ವಪಕ್ಷ ಹಾಗೂ ಸಿದ್ಧಾಂತಗಳನ್ನು ಬೇರೆ ಯಾವುದೇ ಅಧಿಕರಣಗಳಲ್ಲಿಯೂ ಸಹ ಮಾಡಿರುವುದಿಲ್ಲ. 'ಸರ್ವತ್ರ ಪ್ರಸಿದ್ಧೋಪದೇಶಾತ್' ಎಂಬ ಸೂತ್ರದಲ್ಲಿ ಸರ್ವಗತನಾದ ಪರಮಾತ್ಮನು ಹೃದಯದಲ್ಲಿದ್ದಾನೆಂದು ಹೇಳಿದ್ದಾರೆ ಹೊರತು, ವ್ಯಾಪ್ತನಾದ ಪರಮಾತ್ಮನಿಗೆ ಕ್ರಿಯೆಯು ಬರುತ್ತದೆಂದು ಹೇಳಿರುವುದಿಲ್ಲ. ಇದರಂತೆ 'ಜ್ಯೋತಿರ್ದರ್ಶನಾತ್' ಎಂಬ ಸೂತ್ರದಲ್ಲಿ ಕರ್ಮಾಧೀನವಾಗಿ ಸಂಚಾರವು ಬರುತ್ತದೆಂದು ಹೇಳಿದ್ದಾರೆ ಹೊರತು, ವ್ಯಾಪ್ತನಾದ ಪರಮಾತ್ಮನಿಗೆ ಕ್ರಿಯೆಯು ಬರುವುದಿಲ್ಲವೆಂದು ಪೂರ್ವಪಕ್ಷವನ್ನು ಮಾಡಿರುವುದಿಲ್ಲ. ಮತ್ತು ಅದರ ಖಂಡನೆಯನ್ನೂ ಸಹ ಮಾಡಿರುವುದಿಲ್ಲ. ಆದ್ದರಿಂದ ಈ ಅಧಿಕರಣವು ಬೇರೆ ಅಧಿಕರಣದಿಂದ ಗತಾರ್ಥವಾಗಲು ಸಾಧ್ಯವಿಲ್ಲ. ಆದ್ದರಿಂದ ಉತ್ಕ್ರಮಣವೆಂಬ ಲಿಂಗವು ಮುಖ್ಯಪ್ರಾಣನಲ್ಲಿ ಮಾತ್ರ ಬರುತ್ತದೆ. ಪ್ರಾಣಶಬ್ದದಿಂದ ಮುಖ್ಯಪ್ರಾಣದೇವರೇ ಪ್ರತಿಪಾದ್ಯರಾಗುತ್ತಾರೆ, ಅವರೇ ಭೂಮರೂ ಸಹ ಆಗುತ್ತಾರೆಂಬ ಎಂಬ ಪೂರ್ವಪಕ್ಷವು ಉದಯವಾಯಿತು.



• • • • •

## ವಿಷ್ಣುವೇ ಭೂಮನೆಂದು ಸಿದ್ಧಾಂತ

### तात्पर्यचन्द्रिका

**सिद्धान्तस्तु । ''यो वै भूमा तत्सुखम्'' इति भूम्नः पूर्णसुखतोक्ता । सा च ''विश्वशम्भुवम्'' इत्यादिभाष्योक्तश्रुत्यादिभिर्विष्ण्वेकनिष्ठा ।**

ಅನುವಾದ - 'ಭೂಮಾ' ಎಂಬ ಶಬ್ದ ಪ್ರತಿಪಾದ್ಯನಾದವನು ಮಹಾವಿಷ್ಣುವೇ ಆಗಿದ್ದಾನೆ. ಏಕೆಂದರೆ 'ಯೋ ವೈ ಭೂಮಾ ತತ್ಸುಖಮ್' 'ಯಾರು ಭೂಮನಾಗಿದ್ದಾನೋ, ಅವನು ಪೂರ್ಣಸುಖವುಳ್ಳವನು' ಎಂಬುದಾಗಿ ಶ್ರುತಿಯು ಭೂಮನನ್ನು ಪೂರ್ಣಸುಖಸ್ವರೂಪನೆಂದು ಕರೆಯುತ್ತಿದೆ. ಇಂತಹ ಪೂರ್ಣಸುಖವು 'ವಿಶ್ವಶಂಭುವಮ್' 'ಪೂರ್ಣವಾದ ಸುಖಕ್ಕೆ

ಆಶಯನಾದವನು' ಇತ್ಯಾದಿಯಾದ ಭಾಷ್ಯದಲ್ಲಿ ಉದಾಹರಿಸಲ್ಪಟ್ಟ ಅನೇಕ ಶ್ರುತಿಗಳಿಂದ ಕೇವಲ ವಿಷ್ಣುವಿನಲ್ಲಿ ಮಾತ್ರ ಇರುತ್ತದೆಂದು ಸಿದ್ಧವಾಗಿದೆ.

**नहि द्वयोः सर्वोत्कृष्टानन्दत्वम् । विरोधात् ।**

ಇಂತಹ ಪೂರ್ಣಸುಖವನ್ನು ವಾಯುದೇವರಲ್ಲಿ ಹಾಗೂ ಪರಮಾತ್ಮನಲ್ಲಿ ಇಬ್ಬರಲ್ಲಿಯೂ ಒಪ್ಪೋಣವೆಂದು ಹೇಳಬಾರದು. ಏಕೆಂದರೆ ಇಬ್ಬರಿಗೆ ಸರ್ವೋತ್ಕೃಷ್ಟವಾದ ಆನಂದವನ್ನು ಹೇಳಿದರೆ ವಿರೋಧ ಬರುತ್ತದೆ. 'ಸರ್ವೋತ್ಕೃಷ್ಟ ಆನಂದ' ಎಂದರೆ ಬೇರೆ ಎಲ್ಲರ ಆನಂದಕ್ಕಿಂತ ಉತ್ತಮವಾದ ಆನಂದವೆಂದರ್ಥ. ಬೇರೆ ಎಲ್ಲರ ಆನಂದದಲ್ಲೇ ವಾಯುದೇವರ ಆನಂದವೂ ಸಹ ಸೇರುವುದರಿಂದ ಅವರ ಆನಂದವನ್ನು ಸರ್ವೋತ್ಕೃಷ್ಟವೆಂದು ಹೇಳಬಾರದು.

**'तत्सुखम्' इत्यत्रामुख्यभूतापूर्णसुखोक्तौ तु मुख्यामुख्यन्यायबाधः ।**

ಹಾಗೂ ಶ್ರುತಿಯಲ್ಲಿರುವ 'ತತ್ಸುಖಮ್' ಎಂಬ ಶಬ್ದವು ಪೂರ್ಣವಾದ ಸುಖವನ್ನೇ ಹೇಳುತ್ತದೆ. ಒಂದು ವೇಳೆ ಅಮುಖ್ಯವಾದ ಅಪೂರ್ಣಸುಖವನ್ನು ವಿವಕ್ಷಿಸಿದರೆ 'ಮುಖ್ಯಾಮುಖ್ಯಯೋಃ ಮುಖ್ಯೇ ಸಂಪ್ರತ್ಯಯಃ' ಎಂಬ ನ್ಯಾಯದಿಂದ ವಿರೋಧ ಬರುತ್ತದೆ. ಆದ್ದರಿಂದ ಅಮುಖ್ಯವಾದ ಸುಖವನ್ನು ವಿವಕ್ಷಿಸದೇ ಮುಖ್ಯವಾದ ಪೂರ್ಣಸುಖವನ್ನೇ ಸುಖಶಬ್ದದಿಂದ ವಿವಕ್ಷಿಸಬೇಕು.

**'नाल्पे सुखम्' इति निषेधायोगश्च । जडे सुखस्याप्रसक्तेः ।**

ಒಂದು ವೇಳೆ ಸುಖಶಬ್ದದಿಂದ ಅಮುಖ್ಯವಾದ ಸುಖವನ್ನೇ ವಿವಕ್ಷಿಸಿದರೆ 'ನಾಲ್ಪೇ ಸುಖಮ್' 'ಅಲ್ಪನಲ್ಲಿ ಸುಖವಿರುವುದಿಲ್ಲ' ಎಂಬುದಾಗಿ ಮಾಡಲ್ಪಟ್ಟ ನಿಷೇಧವು ಅಯುಕ್ತವಾಗುತ್ತದೆ. ಏಕೆಂದರೆ ಜಡದಲ್ಲಂತೂ ಸುಖಕ್ಕೆ ಪ್ರಸಕ್ತಿಯೇ ಇರುವುದಿಲ್ಲ.

**चेतने च सुखमात्रनिषेधे बाधात् । पूर्णसुखनिषेधस्तु चेतने न बाधितः ।**

ಚೇತನದಲ್ಲಿಯೂ ಸಹ ಸುಖಸಾಮಾನ್ಯವನ್ನೇ ನಿಷೇಧ ಮಾಡಿದರೆ ಬಾಧ ಬರುತ್ತದೆ. ಹಾಗಾಗಿ ಪೂರ್ಣಸುಖದ ನಿಷೇಧವನ್ನೇ ಚೇತನನಲ್ಲಿ ಮಾಡಬೇಕು. ಇದು ಬಾಧಿತವಲ್ಲ.

**किं चायं चरमकक्ष्यापन्नो भूमा सर्वोत्तमः ।**

ಮತ್ತೊಂದು ಕಾರಣದಿಂದಲೂ 'ಭೂಮಾ' ಎನಿಸಿದವನು ಸರ್ವೋತ್ತಮನಾದ ವಿಷ್ಣುವೇ ಆಗಿದ್ದಾನೆಂದು ನಿರ್ಣಯಿಸಬಹುದು. ತಾರತಮ್ಯವನ್ನು ಹೇಳುತ್ತಾ ಕೊನೆಯ ಸ್ಥಾನದಲ್ಲಿ ಭೂಮನನ್ನು ಶ್ರುತಿ ಹೇಳುತ್ತಿದೆ. ಇವನ ಅನಂತರ ಮತ್ತೊಬ್ಬನ ಪ್ರಸ್ತಾಪವಿರುವುದಿಲ್ಲ. ಆದ್ದರಿಂದ ಸರ್ವೋತ್ತಮನಾದ ಭಗವಂತನೇ ಭೂಮನಾಗುತ್ತಾನೆ.

ಭೂಮಾಧಿಕರಣ (೧-೩-೨)

**प्राणभूम्नोरभेदपक्षे "वाग्वाव नाम्नो भूयसी" इत्यादाविव प्रतियोगि-विशेषानुपादानात् ।**

ಪೂರ್ವಪಕ್ಷ ಮಾಡುವಾಗ ಅಭೇದ ಪಕ್ಷ ಹಾಗೂ ಭೇದಪಕ್ಷಗಳನ್ನು ಅಂಗೀಕರಿಸಿ ಆಕ್ಷೇಪಿಸಲಾಗಿತ್ತು. ಎರಡು ಪಕ್ಷಗಳಲ್ಲಿಯೂ ಸಹ ವಿಷ್ಣುವೇ ಭೂಮನಾಗುತ್ತಾನೆ. ಒಂದು ವೇಳೆ ಪ್ರಾಣ ಹಾಗೂ ಇಬ್ಬರಿಗೂ ಅಭೇದವನ್ನು ಒಪ್ಪುವುದಾದರೆ, 'ವಾಗ್ವಾವ ನಾಮ್ನೋ ಭೂಯಸೀ' 'ನಾಮಾಭಿಮಾನಿಯಾದ ದೇವತೆಗಿಂತ ವಾಗಾಭಿಮಾನಿಯಾದ ದೇವತೆಯು ಉತ್ತಮಳು' ಎಂದು ಹೇಗೆ ಪ್ರತಿಯೋಗಿವಿಶೇಷವನ್ನು ಶ್ರುತಿಯು ಹೇಳುತ್ತಿದೆಯೋ ಅದರಂತೆ ಭೂಮನನ್ನು ಉತ್ತಮನೆಂದು ಹೇಳಿದಾಗ ಹೀಗೆ ಪ್ರತಿಯೋಗಿವಿಶೇಷವನ್ನು ಹೇಳಿರುವುದಿಲ್ಲ. ಆದ್ದರಿಂದ ಭೂಮನು ಸರ್ವೋತ್ತಮನೇ ಆಗಬೇಕು.

**भेदपक्षे प्राणादप्युत्तमत्वात् ।**

ಪ್ರಾಣ ಹಾಗೂ ಭೂಮಾ ಇಬ್ಬರಿಗೂ ಭೇದವನ್ನು ಒಪ್ಪುವುದಾದರೆ ಮುಖ್ಯಪ್ರಾಣದೇವರಿಗಿಂತ ಭೂಮನು ಸರ್ವೋತ್ತಮನೆಂದು ನಿರಾತಂಕವಾಗಿ ಹೇಳಬಹುದು.

**"नाल्पे सुखम्" इति निरुपपदाल्पस्य प्रतियोगित्वेनोपादानाच्च । असर्वोत्तमस्य कस्माचिदल्पत्वेन निरुपपदाल्पस्य तत्प्रतियोगित्वायोगात् ।**

'ನಾಲ್ಪೇ ಸುಖಮ್' ಎಂಬಲ್ಲಿ ಉಪಪದವಿಲ್ಲದ ಅಲ್ಪಶಬ್ದದಿಂದ ಪ್ರತಿಯೋಗಿಯನ್ನು ಶ್ರುತಿಯು ಹೇಳುತ್ತಿದೆ. ಭೂಮನು ಪೂರ್ಣಸುಖಸ್ವರೂಪನಾಗಿದ್ದಾನೆ. ಅಲ್ಪನಾದವನು ಇಂತಹ ಪೂರ್ಣಸುಖವನ್ನು ಹೊಂದಿರುವುದಿಲ್ಲವೆಂದು ಹೇಳಿದ್ದರಿಂದ ಸರ್ವೋತ್ತಮನಲ್ಲದ ವ್ಯಕ್ತಿಯು ಯಾರೋ ಒಬ್ಬನಿಗಿಂತ ಅಲ್ಪನೇ ಆಗಿರುತ್ತಾನೆ. ಅಂತಹ ನಿರುಪಪದನಾದ ಅಲ್ಪನಿಗೆ ಪೂರ್ಣಸುಖವುಳ್ಳವನು ಪ್ರತಿಯೋಗಿಯಾಗಲು ಸಾಧ್ಯವಿಲ್ಲ.

**तच्च "विश्वतः परम्" इत्यादिभाष्योक्तश्रुत्यादिभिर्विष्ण्वेकनिष्ठम् । नच द्वयोः सर्वोत्तमत्वम् । विरोधात् । तस्माद्भूमा विष्णुः ।**

ಸರ್ವೋತ್ಕೃಷ್ಟವಾದ ಸುಖವು 'ವಿಶ್ವತಃ ಪರಮಮ್' ಇತ್ಯಾದಿ ಭಾಷ್ಯದಲ್ಲಿ ಉದಾಹರಿಸಿದ ಶ್ರುತ್ಯಾದಿಗಳಿಂದ ಕೇವಲ ವಿಷ್ಣುವಿನಲ್ಲಿ ಮಾತ್ರವೇ ಇರುತ್ತದೆಂದು ನಿಶ್ಚಯವಾಗುತ್ತದೆ. ಇಬ್ಬರಿಗೆ ಸರ್ವೋತ್ತಮತ್ವವನ್ನು ಹೇಳಲು ಬರುವುದಿಲ್ಲ. ಹಾಗೆ ಹೇಳಿದರೆ ವಿರೋಧ ಬರುತ್ತದೆ. ಆದ್ದರಿಂದ ಭೂಮನೆನಿಸಿದವನು ವಿಷ್ಣುವೇ ಆಗಿದ್ದಾನೆ.

ಪರಿಪೂರ್ಣಚಂದ್ರಿಕಾ

**प्रकाशः –**

पराभिमतहेत्वोरनुक्त्युत्क्रमणयोस्सावकाशतामग्रे विवक्षुस्सूत्रोपात्तसम्प्रसादादि-हेतुना भूमा विष्णुरित्युक्तिपरां ''विष्णुरेवायं भूमा'' इत्यादिटीकां विवृण्वन् सिद्धान्तयति – **सिद्धान्तस्त्विति ।।**

ವಿವರಣೆ - ಸಿದ್ಧಾಂತವನ್ನು ಪ್ರಾರಂಭಿಸುತ್ತಿದ್ದಾರೆ. ಪೂರ್ವಪಕ್ಷ ಮಾಡುವಾಗ ಅನುಕ್ತಿ ಹಾಗೂ ಉತ್ಕ್ರಮಣವೆಂಬ ಎರಡು ಯುಕ್ತಿಗಳನ್ನು ಹೇಳಿದ್ದರು. ಇವೆರಡೂ ಸಹ ಸಾವಕಾಶವಾಗಿವೆಯೆಂಬ ವಿಚಾರವನ್ನು ಮುಂದೆ ಸಮರ್ಥಿಸುತ್ತಾರೆ. ಪ್ರಕೃತ, ಸೂತ್ರದಲ್ಲಿ ಹೇಳಲ್ಪಟ್ಟ 'ಸಂಪ್ರಸಾದಾತ್' ಎಂಬ ಹೇತುವಿನಿಂದ ಭೂಮನು ವಿಷ್ಣುವೇ ಆಗಿದ್ದಾನೆಂಬುದನ್ನು ಸಮರ್ಥಿಸುತ್ತಿದ್ದಾರೆ. ಇದನ್ನು 'ವಿಷ್ಣುರೇವಾಯಂ ಭೂಮಾ' ಇತ್ಯಾದಿ ಟೀಕೆಯಲ್ಲಿ ವ್ಯಾಖ್ಯಾನಿಸಿದ್ದನ್ನೇ ಪ್ರಕೃತ ಗ್ರಂಥಕಾರರು ವಿವರಿಸುತ್ತಿದ್ದಾರೆ 'ಸಿದ್ಧಾಂತಸ್ತು' ಇತ್ಯಾದಿ ಗ್ರಂಥದಿಂದ.

**प्रकाशः –** ''पूर्णसुखरूपत्वाभिधानात्, नामादीनां सर्वेषामुपरि तदुत्तमत्वेन व्यपदेशाच्च'' इति टीकोक्तहेत्वोः ''पूर्णसुखत्वादिकं च कुतो विष्णुत्वनिश्चायकम्'' इत्यादिटीकोक्तनिरवकाशतां क्रमेण विवरिष्यन्नाद्यस्य तां तावदाह – **यो वै भूमेत्यादिना ।।**

'ಪೂರ್ಣಸುಖರೂಪತ್ವಾಭಿಧಾನಾತ್, ನಾಮಾದೀನಾಂ ಸರ್ವೇಷಾಮುಪರಿ ತದುತ್ತಮತ್ವೇನ ವ್ಯಪದೇಶಾಚ್ಚ' 'ಪೂರ್ಣಸುಖಸ್ವರೂಪವನ್ನು ಹೇಳಿರುವುದರಿಂದ ಮತ್ತು ನಾಮಾಭಿಮಾನಿದೇವತೆಗಳಿಂದೆಲ್ಲಾ ಉತ್ತಮನೆಂದು ಹೇಳಿರುವುದರಿಂದಲೂ' ಎಂದು ಟೀಕೆಯಲ್ಲಿ ಹೇಳಿರುವ ಎರಡು ಹೇತುಗಳನ್ನು, 'ಪೂರ್ಣಸುಖತ್ವಾದಿಕಂ ಚ ಕುತೋ ವಿಷ್ಣುತ್ವನಿಶ್ಚಾಯಕಮ್' 'ಪೂರ್ಣಸುಖವನ್ನು ಹೇಳಿದ ಮಾತ್ರದಿಂದ ವಿಷ್ಣುವೇ ಭೂಮನಾಗಿದ್ದಾನೆಂದು ಹೇಗೆ ನಿಶ್ಚಯಿಸುತ್ತೀರಿ?' ಇತ್ಯಾದಿ ಟೀಕಾಮಾತಿನಲ್ಲಿ ನಿರವಕಾಶವಾಗಿವೆಯೆಂದು ಸಮರ್ಥಿಸಲಾಗಿವೆ. ಅದನ್ನೇ ಕ್ರಮವಾಗಿ ವಿವರಿಸುತ್ತಾ ಮೊದಲನೇ ಹೇತುವಿಗೆ ನಿರವಕಾಶತ್ವವನ್ನು 'ಯೋ ವೈ ಭೂಮಾ' ಇತ್ಯಾದಿ ವಾಕ್ಯದಿಂದ ಸಮರ್ಥಿಸುತ್ತಿದ್ದಾರೆ.

**प्रकाशः –** विश्वशम्भुवं पूर्णसुखाश्रयमित्यर्थः ।

'लक्षणं परमानन्दो विष्णोरेव न संशयः ।
अव्यक्तादितृणान्तास्तु विप्रुडानन्दभागिनः ।।' इति

'सुखं लब्ध्वा हि कुरुते लोकचेष्टां जनार्दनः ।
अल्पात्सुखादल्पकर्मा पूर्णानन्दाद्धि सर्वकृत् ।।'

इत्यादिस्मृतयस्सर्वकर्तृत्वादियुक्तयश्चादिपदार्थाः ।

'ವಿಶ್ವಶಂಭುವಮ್' ಎಂಬ ಪದಕ್ಕೆ ಪೂರ್ಣವಾದ ಸುಖಕ್ಕೆ ಆಶ್ರಯನಾದವನು ಎಂದರ್ಥ.

'ಲಕ್ಷಣಂ ಪರಮಾನಂದೋ ವಿಷ್ಣೋರೇವ ನ ಸಂಶಯಃ।
ಅವ್ಯಕ್ತಾದಿತೃಣಾಂತಾಸ್ತು ವಿಪ್ರುಡಾನಂದಭಾಗಿನಃ'

'ಪರಮಾನಂದವೆಂಬುದೇ ವಿಷ್ಣುವಿನ ಲಕ್ಷಣವೆಂಬುದರಲ್ಲಿ ಸಂಶಯವಿಲ್ಲ. ಲಕ್ಷ್ಮೀದೇವಿಯಿಂದ ಆರಂಭಿಸಿ ತೃಣಪರ್ಯಂತ ಸಕಲಜೀವಿಗಳು ಅನುಭವಿಸುವ ಆನಂದವು ವಿಷ್ಣುವಿನ ಆನಂದದ ಮುಂದೆ ಒಂದು ಬಿಂದು ಮಾತ್ರ' ಎಂಬುದಾಗಿ ಪೂರ್ಣಸುಖಕ್ಕೆ ಪರಮಾತ್ಮನೇ ಆಶ್ರಯನಾಗಿದ್ದಾನೆಂದು ಹೇಳಲಾಗಿದೆ.

ಸುಖಂ ಲಬ್ಧ್ವಾ ಹಿ ಕುರುತೇ ಲೋಕಚೇಷ್ಟಾಂ ಜನಾರ್ದನಃ।
ಅಲ್ಪಾತ್ಸುಖಾದಲ್ಪಕರ್ಮಾ ಪೂರ್ಣಾನಂದಾದ್ಧಿ ಸರ್ವಕೃತ್ ॥

'ಸುಖದಿಂದಲೇ ಲೋಕದ ಚೇಷ್ಟೆಯನ್ನು ಜನಾರ್ದನನು ಮಾಡುತ್ತಾನೆ. ಅಲ್ಪಸುಖದಿಂದ ಸಣ್ಣ ಕೆಲಸವನ್ನಷ್ಟೇ ಮಾಡಬಹುದು. ಸಮಸ್ತ ಜಗತ್ತಿನ ಚೇಷ್ಟೆಯೆಂಬ ದೊಡ್ಡ ಕಾರ್ಯವನ್ನು ಮಾಡಬೇಕೆಂದರೆ ಪೂರ್ಣಾನಂದನೇ ಆಗಿರಬೇಕು'.

ಇವೇ ಮೊದಲಾದ ಶ್ರುತಿ, ಸ್ಮೃತಿಗಳಿಂದ ಪೂರ್ಣಾನಂದತ್ವ ಹಾಗೂ ಸರ್ವಕರ್ತೃತ್ವಾದಿಗಳು ವಿಷ್ಣುವಿನಲ್ಲಿ ಮಾತ್ರ ಬರುತ್ತವೆಂದು ತಿಳಿಯುತ್ತದೆ. ಗ್ರಂಥದಲ್ಲಿರುವ ಆದಿಪದದಿಂದ ಈ ಶ್ರುತಿ, ಸ್ಮೃತಿ ಪ್ರಮಾಣಗಳನ್ನು ಮತ್ತು ಸರ್ವಕರ್ತೃತ್ವಾದಿ ಯುಕ್ತಿಗಳನ್ನು ಸಂಗ್ರಹಿಸಬೇಕು.

**प्रकाशः** – वायोरप्यस्त्वित्यत आह – **नहीति** ।। एतेन ''नापि पूर्णानन्दत्वम्'' इति टीकायां 'विरोधात्' इति पदमत्राप्यनुवर्त्य योज्यमिति सूचितम् । सर्वशब्दस्यासङ्कुचितत्वेनान्योन्यनिरूपितोत्कर्षस्य द्वयोरयोगादित्यर्थः ।

ವಾಯುದೇವರಿಗೂ ಸರ್ವೋತ್ಕೃಷ್ಟವಾದ ಆನಂದವು ಬರಲಿ ಎಂಬ ಪ್ರಶ್ನೆಗೆ 'ನಹಿ' ಇತ್ಯಾದಿಯಾಗಿ ಉತ್ತರಿಸಿದ್ದಾರೆ. ಹೀಗೆ ಹೇಳಿದ್ದರಿಂದ 'ನಾಪಿ ಪೂರ್ಣಾನಂದತ್ವಂ' ಎಂಬ ಟೀಕೆಯಲ್ಲಿ 'ವಿರೋಧಾತ್' ಎಂಬ ಪದವಿದೆ ಅದನ್ನು ಇಲ್ಲಿಯೂ ಸಹ ಅನುವೃತ್ತಿ ಮಾಡಿಕೊಂಡು ಯೋಜನೆ ಮಾಡಬೇಕೆಂದು ತಿಳಿಯುತ್ತದೆ. ಪರಮಾತ್ಮನಿಗೆ ಹಾಗೂ ವಾಯುದೇವರಿಬ್ಬರಿಗೂ ಸರ್ವೋತ್ಕೃಷ್ಟವಾದ ಆನಂದವನ್ನು ಹೇಳಿದರೆ ಸರ್ವಶಬ್ದವು ಅಸಂಕುಚಿತವಾದ ಆನಂದವನ್ನೇ ಹೇಳುತ್ತದೆ. ಇಬ್ಬರನ್ನು ಸರ್ವೋತ್ಕೃಷ್ಟ ಆನಂದವುಳ್ಳವರೆಂದು ಹೇಳಿದರೆ ವಿಷ್ಣುವಿನ ಸರ್ವಶಬ್ದದಲ್ಲಿ ವಾಯುದೇವರು ಬರುತ್ತಾರೆ. ವಾಯುದೇವರಿಗೆ ಸಂಬಂಧಿಸಿದ ಸರ್ವಶಬ್ದದಲ್ಲಿ ವಿಷ್ಣುವು ಬರುತ್ತಾನೆ. ಹೀಗೆ ಪರಸ್ಪರ ವಿರೋಧ ಬರುವುದರಿಂದ ಇಬ್ಬರಿಗೆ ಸರ್ವೋತ್ತಮವಾದ ಆನಂದವನ್ನು ಹೇಳಲು ಸಾಧ್ಯವಿಲ್ಲ.

ಪರಿಪೂರ್ಣಚಂದ್ರಿಕಾ

**प्रकाशः** – ननु ''पूर्णसुखतोक्ता'' इत्ययुक्तम् । अश्रवणात् । सुखशब्दस्यापूर्णसुखार्थत्वेऽप्युपपत्तेरित्यतः ''पूर्णसुखत्वाभिधानात्'' इति हेतोरसिद्धिं परिहर्तुं प्रवृत्तां ''निरूपपदसुखशब्दमात्रस्यापि पूर्णसुखार्थत्वात्'' इति टीकां विपक्षे बाधकोक्त्या व्यनक्ति – तत्सुखमिति ।।

ಟೀಕೆಯಲ್ಲಿ 'ಪೂರ್ಣಸುಖತೋಕ್ತಾ' 'ಪೂರ್ಣವಾದ ಸುಖವನ್ನು ಶ್ರುತಿಯು ಹೇಳಿದೆ' ಎಂಬ ಮಾತು ಅಯುಕ್ತವಾಗಿದೆ. ಏಕೆಂದರೆ ಶ್ರುತಿಯಲ್ಲಿ ಭಗವಂತನಿಗೆ ಪೂರ್ಣಸುಖವಿದೆಯೆಂದು ಕೇಳಿಸುತ್ತಿಲ್ಲ. ಸುಖಶಬ್ದಕ್ಕೆ ಅಪೂರ್ಣವಾದ ಸುಖವುಳ್ಳವನೆಂದೂ ಸಹ ಅರ್ಥವನ್ನು ಮಾಡಬಹುದಲ್ಲವೇ? ಎಂಬ ಪ್ರಶ್ನೆಗೆ ಉತ್ತರವಾಗಿ ಹಾಗೂ 'ಪೂರ್ಣಸುಖತ್ವಾಭಿಧಾನಾತ್' 'ಪೂರ್ಣಸುಖತ್ವವನ್ನು ಹೇಳಿರುವುದರಿಂದ' ಎಂಬ ಹೇತು ನಿರ್ದುಷ್ಟವಾಗಿದೆ ಎಂದು ಸಮರ್ಥಿಸುವುದಕ್ಕಾಗಿ ಅಂದರೆ ಈ ಹೇತುವಿಗೆ ಬರುವ ಅಸಿದ್ಧಿದೋಷವನ್ನು ಪರಿಹರಿಸುವುದಕ್ಕಾಗಿ 'ನಿರುಪಪದಸುಖಶಬ್ದಮಾತ್ರಸ್ಯಾಪಿ ಪೂರ್ಣಸುಖಾರ್ಥತ್ವಾತ್' 'ಉಪಪದವಿಲ್ಲದ ಸುಖಶಬ್ದವು ಪೂರ್ಣಸುಖವನ್ನೇ ಹೇಳುತ್ತದೆ' ಎಂಬ ಟೀಕೆಯು ಹೊರಟಿದೆ. ಈ ಟೀಕಾ ಮಾತಿಗೆ ವಿಪಕ್ಷದಲ್ಲಿ ಬಾಧಕವನ್ನು ಹೇಳುವ ಮೂಲಕ ವ್ಯಾಖ್ಯಾನಿಸುತ್ತಿದ್ದಾರೆ 'ತತ್ಸುಖಮ್' ಇತ್ಯಾದಿ ಗ್ರಂಥದಿಂದ.

**प्रकाशः** – ''मुख्यामुख्ययोर्मुख्ये सम्प्रत्ययः'' इति न्यायबाध इत्यर्थः ।

'ಮುಖ್ಯಾಮುಖ್ಯಯೋರ್ಮುಖ್ಯೇ ಸಂಪ್ರತ್ಯಯಃ' ಎಂಬ ನ್ಯಾಯವು ಮುಖ್ಯ ಹಾಗೂ ಅಮುಖ್ಯಗಳಲ್ಲಿ ಮುಖ್ಯವನ್ನೇ ಸ್ವೀಕರಿಸಬೇಕೆಂದು ಹೇಳುತ್ತಿದೆ. ಸುಖಶಬ್ದದಿಂದ ಅಪೂರ್ಣಸುಖ ಹಾಗೂ ಪೂರ್ಣಸುಖಗಳೆಂಬ ಅಮುಖ್ಯಾರ್ಥವನ್ನು ಹಾಗೂ ಮುಖ್ಯಾರ್ಥವನ್ನು ಸ್ವೀಕರಿಸಲು ಬರುತ್ತದೆ. ಆದರೆ ಈ ನ್ಯಾಯಕ್ಕೆ ಅನುಸಾರಿಯಾಗಿ ಪೂರ್ಣಸುಖವೆನಿಸಿದ ಮುಖ್ಯಾರ್ಥವನ್ನೇ ಇಲ್ಲಿ ಸ್ವೀಕರಿಸಬೇಕು. ಇಲ್ಲದಿದ್ದರೆ ನ್ಯಾಯದ ವಿರೋಧ ಬರುತ್ತದೆಂದು 'ತತ್ಸುಖಮ್' ಎಂಬ ವಾಕ್ಯವು ಹೇಳುತ್ತಿದೆ.

**प्रकाशः** – इह सुखशब्दः पूर्णसुखवाचीत्यत्र ''करोति नासुखी भूमा सुखं नाल्पे सुखं भवेत्'' इत्यानन्दमयनयानुव्याख्याने ''पूर्णमेवात्र सुखं विवक्षितम् । नाल्पे सुखमस्तीत्युक्तत्वात्'' इतीह तत्वप्रदीपे चोक्तदिशाऽर्थापत्तिं चाह – नाल्प इति ।।

ಶ್ರುತಿಯಲ್ಲಿರುವ ಸುಖಶಬ್ದವು ಪೂರ್ಣಸುಖವನ್ನೇ ಹೇಳುತ್ತಿದೆ ಎಂಬ ವಿಷಯದಲ್ಲಿ 'ಕರೋತಿ ನಾಸುಖೀ ಭೂಮಾ ಸುಖಂ ನಾಲ್ಪೇ ಸುಖಂ ಭವೇತ್' ಎಂಬ ಆನಂದಮಯಾಧಿಕರಣದ ಅನುವ್ಯಾಖ್ಯಾನದಲ್ಲಿ ಮತ್ತು 'ಪೂರ್ಣಮೇವಾತ್ರ ಸುಖಂ ವಿವಕ್ಷಿತಮ್, ನಾಲ್ಪೇ ಸುಖಮಸ್ತಿ ಇತ್ಯುಕ್ತತ್ವಾತ್' ಎಂಬ ಈ ಅಧಿಕರಣದ ತತ್ವಪ್ರದೀಪದಲ್ಲಿ ಹೇಳಿದಂತೆ ಅರ್ಥಾಪತ್ತಿ ಪ್ರಮಾಣವನ್ನು ಹೇಳುತ್ತಿದ್ದಾರೆ 'ನಾಲ್ಪೇ' ಇತ್ಯಾದಿ ವಾಕ್ಯದಿಂದ.

**प्रकाशः** – ''यो वै भूमा तत्सुखम्'' इत्युक्त्वा ''नाल्पे सुखम्'' इति निषिध्यते । तत्राल्पशब्देन जडं चेतनं वा वाच्यम् । आद्ये जडे सुखस्याप्रसक्तेरप्रसक्तनिषेधापातात् ।

'ಯೋ ವೈ ಭೂಮಾ ತತ್ಸುಖಮ್' ಎಂದು ಹೇಳಿ 'ನಾಲ್ಪೇ ಸುಖಮ್' ಎಂಬುದಾಗಿ ನಿಷೇಧ ಮಾಡಲಾಗಿದೆ. ಇಲ್ಲಿರುವ ಅಲ್ಪಶಬ್ದದಿಂದ ಜಡವನ್ನಾಗಲೀ ಅಥವಾ ಚೇತನನನ್ನಾಗಲೀ ವಿವಕ್ಷಿಸಬೇಕು. ಆದರೆ ಆದರೆ ಜಡವಾದದ್ದನ್ನೇ ಅಲ್ಪವೆಂದು ವಿವಕ್ಷಿಸಿದರೆ ಅಪ್ರಸಕ್ತ ನಿಷೇಧ ಮಾಡಿದಂತಾಗುತ್ತದೆ. ಏಕೆಂದರೆ ಜಡದಲ್ಲಿ ಸುಖಕ್ಕೆ ಪ್ರಸಕ್ತಿಯೇ ಇಲ್ಲದ ಕಾರಣ ಜಡಪದಾರ್ಥದಲ್ಲಿ ಸುಖದ ನಿಷೇಧವು ತಪ್ಪಾಗುತ್ತದೆ.

**प्रकाशः** – नच ''नान्तरिक्षे न दिवि'' इतिवन्नित्यानुवादः । व्यर्थत्वात् । 'नान्तरिक्षे' इत्यादेस्तूपयोगोऽन्तर्यामिनये व्यक्तः ।

ಇನ್ನು 'ನಾಂತರಿಕ್ಷೇ ನ ದಿವಿ' ಇತ್ಯಾದಿಯಂತೆ ಅನುವಾದಕ್ಕೋಸ್ಕರ ಜಡವನ್ನು ಹೇಳಿದ್ದಾರೆನ್ನಬೇಕು. ಆದರೆ ಅದು ವ್ಯರ್ಥ. 'ನಾಂತರಿಕ್ಷೇ' ಇತ್ಯಾದಿಯಾಗಿ ಅನುವಾದ ಮಾಡಲು ಕಾರಣವೇನೆಂಬುದನ್ನು ಮುಂದೆ ಅಂತರ್ಯಾಮ್ಯಧಿಕರಣದಲ್ಲಿ ನಾವು ಸ್ಪಷ್ಟಪಡಿಸುತ್ತೇವೆ.

**प्रकाशः** – अतश्चेतन एव निषेध इति वाच्यम् । तत्र चाहं सुखीत्यादिप्रत्यक्षादिना सुखस्य प्रमितत्वेन सुखमात्रनिषेधे बाधापत्तेः ।

ಆದ್ದರಿಂದ ಚೇತನನೇ ಅಲ್ಪಶಬ್ದದಿಂದ ಪ್ರಸಕ್ತನಾಗಿದ್ದಾನೆಂದು ಹೇಳಬೇಕು. ಅಂತಹ ಚೇತನನಲ್ಲಿ ಸುಖವನ್ನು ನಿಷೇಧ ಮಾಡಲಾಗಿದೆ ಎಂದು ಹೇಳಬೇಕು. ಆದರೆ 'ಅಹಂ ಸುಖೀ' ಇತ್ಯಾದಿ ಪ್ರತ್ಯಕ್ಷದಿಂದ ಸುಖವು ಚೇತನನಲ್ಲಿ ಪ್ರಮಿತವಾಗಿದೆ. ಹೀಗಿರುವಾಗ 'ನಾಲ್ಪೇ ಸುಖಮ್' ಎಂಬ ವಾಕ್ಯದಿಂದ ಸುಖಸಾಮಾನ್ಯವನ್ನೇ ನಿಷೇಧಿಸಲು ಬರುವುದಿಲ್ಲ.

**प्रकाशः** – अतः ''अपशवो वा अन्ये गोअश्वेभ्यः'' इत्यत्र प्रशस्तपशुत्वनिषेधवत्पूर्णसुखमेव निषिध्यत इत्युपेयम् ।

ಆದ್ದರಿಂದ 'ಅಪಶವೋ ವಾ ಅನ್ಯೇ ಗೋ ಅಶ್ವೇಭ್ಯಃ' 'ಗೋ ಹಾಗೂ ಕುದುರೆಗಳಿಗಿಂತ ಉಳಿದ ಪ್ರಾಣಿಗಳು ಪಶುಗಳೇ ಅಲ್ಲ' ಎಂಬಲ್ಲಿ ಪ್ರಶಸ್ತವಾದ ಪಶುಗಳಲ್ಲ ಎಂದಷ್ಟೇ ಅರ್ಥೈಸುವಂತೆ ಪ್ರಕೃತ ಶ್ರುತಿಯಲ್ಲಿಯೂ ಉಳಿದ ಚೇತನರಲ್ಲಿ ಸುಖವೇ ಇಲ್ಲವೆಂದರೆ ಪೂರ್ಣವಾದ ಸುಖವಿಲ್ಲವೆಂದೇ ಅರ್ಥೈಸಬೇಕು.

**प्रकाशः** – तादृशस्य जीवेऽभावेन बाधाप्रसक्तेः । अतस्तत्र सुखनिषेधान्यथानुपपत्त्या च पूर्णसुखमेव सुखशब्दार्थ इत्यर्थः ।

ಪರಿಪೂರ್ಣಚಂದ್ರಿಕಾ

ಪೂರ್ಣಸುಖವಿಲ್ಲವೆಂದು ಜೀವನಲ್ಲಿ ಹೇಳಿದಾಗ ಬಾಧವು ಬರುವುದಿಲ್ಲ. ಆದ್ದರಿಂದ ಜೀವನಲ್ಲಿ ಸುಖನಿಷೇಧದ ಅನ್ಯಥಾನುಪಪತ್ತಿಯ ಪ್ರಮಾಣದಿಂದ ಪೂರ್ಣಸುಖವೇ ಸುಖಶಬ್ದದ ಅರ್ಥವೆಂದು ಸಿದ್ಧವಾಯಿತು.

**प्रकाशः** – एवं सौत्रसम्प्रसादशब्दितं पूर्णसुखत्वरूपं टीकाद्युक्तमाद्यहेतुं समर्थ्य अध्युपदेशशब्दितस्य ''सर्वेषामुपरि तदुत्तमत्वेन व्यपदेशाच्च'' इति द्वितीयहेतोरपि भूम्न्यसिद्धिं परिहरन्विष्ण्वेकनिष्ठतामाह – **किञ्चेति** ।।

ಸೂತ್ರದಲ್ಲಿ 'ಸಂಪ್ರಸಾದಾತ್' ಎಂಬ ಶಬ್ದದಿಂದ ಪೂರ್ಣಸುಖತ್ವವೆಂಬ ಹೇತುವನ್ನು ಹೇಳಿದ್ದಾರೆ. ಇದನ್ನು ಟೀಕಾದಿಗಳಲ್ಲಿ ಹೇಗೆ ವ್ಯಾಖ್ಯಾನಿಸಿದ್ದಾರೋ ಅದನ್ನು ಗ್ರಂಥಕಾರರು ಇಲ್ಲಿಯ ತನಕ ಸಮರ್ಥಿಸಿದರು. ಪ್ರಕೃತ 'ಅಧ್ಯುಪದೇಶಾತ್' ಎಂಬ ಶಬ್ದದಿಂದ 'ಸರ್ವೇಷಾಮುಪರಿ ತದುತ್ತಮತ್ವೇನ ವ್ಯಪದೇಶಾಚ್ಚ' 'ಎಲ್ಲರಿಗಿಂತಲೂ ಭೂಮನನ್ನು ಉತ್ತಮನೆಂದು ಹೇಳಿರುವುದರಿಂದ' ಎಂಬ ಎರಡನೆಯ ಹೇತುವನ್ನು ಸೂತ್ರಕಾರರು ಹೇಳಿದ್ದಾರೆ. ಈ ಹೇತು ಭೂಮನಲ್ಲಿ ಅಸಿದ್ಧವಾಗಿದೆಯೆಂಬ ದೋಷವನ್ನು ಪರಿಹರಿಸುತ್ತಾ ಇದು ವಿಷ್ಣುವಿನಲ್ಲಿ ಮಾತ್ರ ಇರುತ್ತದೆಂದು 'ಕಿಂಚ' ಇತ್ಯಾದಿ ವಾಕ್ಯದಿಂದ ಸಮರ್ಥಿಸುತ್ತಿದ್ದಾರೆ.

**प्रकाशः** – **प्रतियोगीति** ।। एतस्माद्भूयानित्यवधिविशेषानिर्देशादित्यर्थः ।

'ಪ್ರತಿಯೋಗಿ ವಿಶೇಷ' ಎಂದರೆ ಉಳಿದೆಲ್ಲಾ ಕಡೆ 'ಇಂತಹವರಿಂದ ಉತ್ತಮ' ಎಂಬುದಾಗಿ ಹೇಳಿ ಪ್ರತಿಯೋಗಿ ವಿಶೇಷವನ್ನು ಹೇಳಿ ಭೂಮನನ್ನು ಹೇಳುವಾಗ ಪ್ರತಿಯೋಗಿ ವಿಶೇಷವನ್ನು ಹೇಳದ ಕಾರಣ ಭೂಮನೇ ಸರ್ವೋತ್ತಮನೆಂದು ಸಿದ್ಧನಾಗುತ್ತಾನೆ.

**प्रकाशः** – ननु प्राणभूम्नोरभेदे ''प्राणो वा आशाया भूयान् '' इत्याशारूप-प्रतियोगिविशेषोपादानमस्ति । नच तत्प्राणस्यैव नतु भूम्न इति युक्तम् । द्वयोरेकत्वादिति चेन्न ।

ಪ್ರಶ್ನೆ - ಪ್ರಾಣ ಹಾಗೂ ಭೂಮಾ ಇಬ್ಬರಿಗೂ ಅಭೇದವನ್ನು ಒಪ್ಪಿದಾಗ 'ಪ್ರಾಣೋ ವಾ ಆಶಾಯಾ ಭೂಯಾನ್' ಎಂಬುದಾಗಿ ಭೂಮನಿಗೆ ಆಶಾಯೆಂಬ ಭಾರತೀದೇವಿಯನ್ನು ಪ್ರತಿಯೋಗಿವಿಶೇಷವೆಂದು ಹೇಳಲಾಗಿದೆ. ಪ್ರಾಣನನ್ನು ಕುರಿತು ಪ್ರತಿಯೋಗಿವಿಶೇಷವನ್ನು ಹೇಳಿದ್ದಾರೆ ಹೊರತು, ಭೂಮನನ್ನು ಕುರಿತು ಹೇಳಿಲ್ಲವೆಂದು ಉತ್ತರಿಸಬಾರದು. ಪ್ರಾಣ ಹಾಗೂ ಭೂಮಾ ಇಬ್ಬರೂ ಒಂದೇ ಆಗಿರುವುದರಿಂದ ಪ್ರಾಣನಿಗೆ ಪ್ರತಿಯೋಗಿವಿಶೇಷವನ್ನು ಹೇಳಿದಮೇಲೆ ಭೂಮನಿಗೂ ಸಹ ಪ್ರತಿಯೋಗಿವಿಶೇಷವನ್ನು ಹೇಳಿದಂತಾಯಿತು. ಆದ್ದರಿಂದ ಪ್ರತಿಯೋಗಿವಿಶೇಷವನ್ನು ಹೇಳದ ಕಾರಣ ಭೂಮನು ಸರ್ವೋತ್ತಮನಾಗಿದ್ದಾನೆಂದು ಹೇಗೆ ನಿಶ್ಚಯಿಸುತ್ತೀರಿ?

**प्रकाशः** – प्राणशब्दस्य वायुपरत्वमुपेत्यैव तदन्तर्यामितया विष्णोः प्राणशब्दितत्वोपगमेनाशोत्तमत्वस्य प्राणगतत्वात् ।

ಉತ್ತರ - ಪ್ರಾಣಶಬ್ದವು ವಾಯುಪರವಾಗಿದೆ ಎಂದು ಅಂಗೀಕರಿಸಿ ವಾಯುದೇವರ ಅಂತರ್ಯಾಮಿಯಾಗಿರುವುದರಿಂದ ವಿಷ್ಣುವೂ ಸಹ ಪ್ರಾಣಶಬ್ದದಿಂದ ಪ್ರತಿಪಾದ್ಯನಾಗುತ್ತಾನೆಂದು ನಾವು ಒಪ್ಪುತ್ತೇವೆ. ಹೀಗೊಪ್ಪಿದಾಗ ಆಶಾನಾಮಕಳಾದ ಭಾರತೀದೇವಿಗಿಂತ ಉತ್ತಮತ್ವವು ಮುಖ್ಯಪ್ರಾಣದೇವರಲ್ಲಿ ಹೇಳಿದಂತಾಗುತ್ತದೆ ಹೊರತು, ವಿಷ್ಣುವಿನಲ್ಲಿ ಹೇಳಿದಂತಾಗುವುದಿಲ್ಲ.

**प्रकाशः** – ''महतः परमव्यक्तम्'' इत्यादावन्यगतोच्चत्वनीचत्वनियामकत्वेन तच्छब्दार्थतया तत्र स्थितत्वस्याऽनुमानिकनये वक्ष्यमाणदिशा प्राणगताऽशोत्तमत्वादिनियन्तृतया तत्र हरेः प्राणपदेन ग्रहणाद्भूमगतोत्तमत्वं प्रत्याशायाः प्रतियोगित्वाभावात् ।

'ಮಹತಃ ಪರಮವ್ಯಕ್ತಮ್' 'ಮಹತ್ತತ್ವಕ್ಕಿಂತ ಅವ್ಯಕ್ತತತ್ವವು ಶ್ರೇಷ್ಠ' ಇತ್ಯಾದಿ ಸ್ಥಳಗಳಲ್ಲಿ ಬೇರೆ ಕಡೆಯಿರುವ ಉಚ್ಚತ್ವ, ನೀಚತ್ವಗಳಿಗೆ ಪರಮಾತ್ಮನು ನಿಯಾಮಕನಾಗಿ ಆಯಾ ಪದಾರ್ಥಗಳಲ್ಲಿ ಇದ್ದಾನೆಂದು ಆನುಮಾನಿಕಾಧಿಕರಣದಲ್ಲಿ ನಾವು ಸಮರ್ಥಿಸುತ್ತೇವೆ. ಅದರಂತೆ ಇಲ್ಲಿಯೂ ಸಹ ಮುಖ್ಯಪ್ರಾಣಾದಿ-ಗಳಲ್ಲಿರುವ ಆಶೋತ್ತಮತ್ವಾದಿ ಧರ್ಮಗಳನ್ನು ಭಗವಂತನು ನಿಯಂತ್ರಿಸುತ್ತಿದ್ದಾನೆ ಎಂದಷ್ಟೇ ಈ ಶ್ರುತಿಗೆ ವ್ಯಾಖ್ಯಾನಿಸಬೇಕು ಹೊರತು, ಪರಮಾತ್ಮನಿಗೆ ಆಶೋತ್ತಮತ್ವವನ್ನು ಹೇಳಲ್ಪಟ್ಟಿದೆಯೆಂದು ವ್ಯಾಖ್ಯಾನಿಸಬಾರದು. ಆದ್ದರಿಂದ ಪ್ರಾಣಪದಕ್ಕೆ ಮುಖ್ಯಪ್ರಾಣನೆಂದು ಒಂದು ಬಗೆಯ ಅರ್ಥ. ಮತ್ತೊಂದು ಮುಖ್ಯಪ್ರಾಣನಲ್ಲಿರುವ ಉತ್ತಮತ್ವಕ್ಕೆ ಭಗವಂತನು ನಿಯಾಮಕನಾಗಿದ್ದಾನೆಂದು ಅರ್ಥ. ಇಂತಹ ಅಂತರ್ಯಾಮಿಯಾದ ಭಗವಂತನನ್ನು ಪ್ರಾಣಪದದಿಂದ ಸ್ವೀಕರಿಸುವ ಕಾರಣ ಭೂಮನಲ್ಲಿರುವ ಉತ್ತಮತ್ವಕ್ಕೆ ಆಶಾನಾಮಕಳಾದ ಭಾರತಿಯು ಪ್ರತಿಯೋಗಿಯಾಗಲು ಸಾಧ್ಯವಿಲ್ಲ.

**प्रकाशः** – अन्यथा वायोरुत्तमतानुक्तिप्रसङ्गात् । एवञ्च तस्यावधिविशेषमनुपादायैव सर्वान्ते पाठात्सर्वोत्तमत्वसिद्धिरिति भावः ।

ಒಂದು ವೇಳೆ ಮುಖ್ಯಪ್ರಾಣದೇವರಲ್ಲಿರುವ ಉತ್ತಮತ್ವಕ್ಕೆ ಆಶಾನಾಮಕಳಾದ ಭಾರತಿಯು ಪ್ರತಿಯೋಗಿಯಾಗಿದ್ದಾಳೆಂದು ಒಪ್ಪದಿದ್ದರೆ ವಾಯುದೇವರಿಗೆ ಉತ್ತಮತ್ವವನ್ನೇ ಹೇಳಿದಂತಾಗುವುದಿಲ್ಲ. ಆದ್ದರಿಂದ ಭೂಮನಿಗೆ ಪ್ರತಿಯೋಗಿವಿಶೇಷವನ್ನು ಹೇಳದೇ ಕೊನೆಯ ಸ್ಥಾನದಲ್ಲಿ ಅವನನ್ನು ಪ್ರಸ್ತಾಪ ಮಾಡಿದ್ದರಿಂದ ಅವನು ಸರ್ವೋತ್ತಮನೇ ಆಗಿದ್ದಾನೆಂದು ಸಿದ್ಧವಾಗುತ್ತದೆ.

**प्रकाशः** – एतेन ''विशेषानुक्तेरखिलेशत्वमेवोक्तं भवति । न चेदमसिद्धम् । नामवागादीनां पूर्वपूर्वाधिपत्यस्योक्तत्वात्'' इति सुधावाक्यं विवृतं ध्येयम् ।।

ಪರಿಪೂರ್ಣಚಂದ್ರಿಕಾ

ಹೀಗೆ ಹೇಳಿದ್ದರಿಂದ 'ವಿಶೇಷಾನುಕ್ತೇರಖಿಲೇಶತ್ವಮೇವೋಕ್ತಂ ಭವತಿ । ನ ಚೇದಮಸಿದ್ಧಮ್ । ನಾಮವಾಗಾದೀನಾಂ ಪೂರ್ವಪೂರ್ವಾಧಿಪತ್ಯಸ್ಯೋಕ್ತತ್ವಾತ್' 'ಪ್ರತಿಯೋಗಿವಿಶೇಷವನ್ನು ಹೇಳದ ಕಾರಣ ಸರ್ವೋತ್ತಮತ್ವವನ್ನೇ ಹೇಳಿದಂತಾಗುತ್ತದೆ, ಇದು ಅಸಿದ್ಧವಲ್ಲ. ನಾಮ, ವಾಗಾದಿಅಭಿಮಾನಿದೇವತೆಗಳಲ್ಲಿ ಹಿಂದಿನವರಿಗೆ ಮುಂದಿನವರು ಅಧಿಪತಿಯೆಂದು ಹೇಳಿದ್ದರಿಂದ' ಇತ್ಯಾದಿ ಸುಧಾವಾಕ್ಯವನ್ನು ವಿವರಿಸಿದಂತಾಯಿತು.

**प्रकाशः** – **प्राणादपीति** ।। सर्वोत्तमादपि प्राणादित्यर्थः । अल्पस्य भूमप्रतियोगित्वेनोपादानेऽपि कथं सर्वोत्तमत्वलाभ इत्यत आह – **असर्वेति** ।।

'ಪ್ರಾಣಾದಪಿ' ಎಂಬ ಪದಕ್ಕೆ ಸರ್ವೋತ್ತಮನಾದ ಪ್ರಾಣನಿಗಿಂತಲೂ ವಿಷ್ಣು ಉತ್ತಮನಾಗಿದ್ದಾನೆಂದರ್ಥ. ಭೂಮಕ್ಕೆ ಪ್ರತಿಯೋಗಿಯಾದದ್ದು ಅಲ್ಪವೆಂದು ಸ್ವೀಕರಿಸುವುದರಿಂದ ಸರ್ವೋತ್ತಮತ್ವವು ಹೇಗೆ ಸಿದ್ಧವಾಗುತ್ತದೆ ? ಎಂಬ ಪ್ರಶ್ನೆಗೆ 'ಅಸರ್ವೋತ್ತಮಸ್ಯ' ಎಂಬುದರಿಂದ ಉತ್ತರಿಸಿದ್ದಾರೆ.

**प्रकाशः** – एवं टीकाद्युक्तमध्युपदेशहेतुं सुधारीत्या सर्वोत्तमत्वरूपं भूम्न्युपपाद्य वैष्णवत्वं तस्याह – **तच्चेति** ।। सर्वोत्तमत्वं

ಇಲ್ಲಿಯ ತನಕ ಟೀಕೆಯಲ್ಲಿ ಹೇಳಲ್ಪಟ್ಟ ಅಧ್ಯುಪದೇಶವೆಂಬ ಹೇತುವನ್ನು ಸುಧೆಯ ಪ್ರಕಾರ ಸರ್ವೋತ್ತಮತ್ವವೆಂದು ಭೂಮನಲ್ಲಿ ಅಂಗೀಕರಿಸಿ 'ತಚ್ಚ' ಎಂದರೆ - ಸರ್ವೋತ್ತಮತ್ವ ಎಂದರ್ಥ. ಅದು ವಿಷ್ಣುವಿನಲ್ಲಿ ಮಾತ್ರವಿದೆಯೆಂದು 'ತಚ್ಚ' ಇತ್ಯಾದಿ ಗ್ರಂಥದಿಂದ ಪ್ರತಿಪಾದಿಸುತ್ತಿದ್ದಾರೆ.

**प्रकाशः** – "विश्वतः परमां सर्वपरममकारवाच्यमित्यर्थः" इति टीकायां व्यक्तम् । "उत्तमः पुरुषस्त्वन्यः परमात्मेत्युदाहृतः" । "न त्वत्समोऽस्त्यभ्यधिकः कुतोऽन्यः" इत्यादिरादिपदार्थः ।

'ವಿಶ್ವತಃ ಪರಮಾಂ ಸರ್ವಪರಮಮಕಾರವಾಚ್ಯಮಿತ್ಯರ್ಥಃ' ಎಂಬ ಟೀಕೆಯಲ್ಲಿ 'ವಿಶ್ವತಃ ಪರಮಂ ನಿತ್ಯಂ' ಎಂಬಲ್ಲಿ 'ಪರಮಾಮ್' ಎಂಬ ಪದಕ್ಕೆ 'ಉತ್ತಮ ಹಾಗೂ ಅಕಾರ ಶಬ್ದಗಳಿಂದ ವಾಚ್ಯನಾಗಿದ್ದಾನೆಂದರ್ಥ' ಎಂಬುದಾಗಿ ಟೀಕೆಯಲ್ಲಿ ವ್ಯಾಖ್ಯಾನಿಸಿದ್ದಾರೆ. ಇದರಿಂದ ಸರ್ವೋತ್ತಮತ್ವವು ಸಿದ್ಧವಾಗುತ್ತದೆ. ಮತ್ತು "ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ' 'ಪರಮಾತ್ಮನೇ ಉತ್ತಮಪುರುಷನಾಗಿದ್ದಾನೆ'. 'ನ ತ್ವತ್ಸಮೋಽಸ್ತ್ಯಭ್ಯಧಿಕಃ ಕುತೋಽನ್ಯಃ' 'ನಿನಗೆ ಸರಿಸಾಟಿಯಾದ ವ್ಯಕ್ತಿ ಮತ್ತೊಬ್ಬನಿಲ್ಲ. ನಿನಗಿಂತ ಶ್ರೇಷ್ಠನಾದ ವ್ಯಕ್ತಿಯಂತೂ ದೂರತೋಽಪಾಸ್ತನಾಗಿದ್ದಾನೆ' ಇತ್ಯಾದಿ ಸ್ಮೃತಿವಾಕ್ಯಗಳನ್ನು ಆದಿಪದದಿಂದ ವಿವಕ್ಷಿಸಬೇಕು.

**प्रकाशः** – 'नच सर्वोत्तमत्वं वायोरपि विरोधादेव' इति टीकार्थमाह – **नचेति** ।। सर्वशब्दस्यासङ्कुचितत्वेनान्योन्यनिरूपितोत्तमत्वस्य द्वयोर्विरुद्धत्वात् इत्यर्थः ।

ಸರ್ವೋತ್ತಮತ್ವವನ್ನು ವಾಯುದೇವರಿಗೂ ಸಹ ಒಪ್ಪೋಣವೆಂದು ಹೇಳಬಾರದು. ಹಾಗಾದಲ್ಲಿ ವಿರೋಧ ಬರುತ್ತದೆಂದು 'ನಚ ಸರ್ವೋತ್ತಮತ್ವಂ ವಾಯೋರೇವ ವಿರೋಧಾತ್' ಎಂಬ ಟೀಕೆಯಲ್ಲಿ ಹೇಳಿರುತ್ತಾರೆ. ಅದನ್ನೇ 'ನಚ' ಇತ್ಯಾದಿ ಗ್ರಂಥದಿಂದ ವ್ಯಾಖ್ಯಾನಿಸುತ್ತಿದ್ದಾರೆ. ಸರ್ವಶಬ್ದವು ಅಸಂಕುಚಿತವಾದ್ದರಿಂದ ಪರಸ್ಪರ ನಿರೂಪಿತವಾದ ಉತ್ತಮತ್ವವನ್ನು ಹೇಳಿದರೆ ವಿರೋಧ ಬರುತ್ತದೆಂದರ್ಥ.

**प्रकाशः – सूत्राद्युक्तहेतुद्वयसमर्थनमुपसंहरन् साध्यमाह – तस्मादिति ।।** सम्प्रसादादिनिरवकाशहेतुद्वयादित्यर्थः ।

ಹೀಗೆ ಎರಡು ಸೂತ್ರಗಳಲ್ಲಿ ಹೇಳಲ್ಪಟ್ಟ ಎರಡು ಹೇತುಗಳ ವ್ಯಾಖ್ಯಾನವನ್ನು ಉಪಸಂಹಾರ ಮಾಡುತ್ತಾ, ಸಾಧ್ಯವನ್ನು 'ತಸ್ಮಾತ್' ಇತ್ಯಾದಿ ವಾಕ್ಯದಲ್ಲಿ ಹೇಳಿದ್ದಾರೆ. 'ತಸ್ಮಾತ್' ಎಂದರೆ ಸಂಪ್ರಸಾದವೇ ಮೊದಲಾದ ನಿರವಕಾಶವಾದ ಎರಡು ಹೇತುಗಳಿರುವುದರಿಂದ ಎಂದರ್ಥ. 'ವಿಷ್ಣುಃ ಭೂಮಾ, ಸಂಪ್ರಸಾದಾತ್' ಅಥವಾ 'ವಿಷ್ಣುಃ ಭೂಮಾ ಅಧ್ಯುಪದೇಶಾತ್' ಎಂಬುದಾಗಿ ಅನುಮಾನ ಸ್ವರೂಪವನ್ನು ಇಲ್ಲಿ ತಿಳಿಯಬೇಕು.

**गुरुराजीयम् – विरोधादिति ।।** सर्वशब्दस्य स्वेतरसर्वपरत्वेन एकस्य सर्वोत्तमत्वे अन्यस्य तद्धीनत्वापत्तौ पुनस्तस्य सर्वोत्तमत्वे विरोधात् । अन्यस्य वाऽधमत्वप्राप्त्या विरोधादित्यर्थः । एकप्रतियोगिकोत्कर्षापकर्षयोरेकत्र व्याहतत्वादित्याशयः । **प्रतियोगिविशेषेति ।।** निर्विशेषणभूमशब्दस्य निरूपचरित-सर्वोत्तमत्वाप्रतियोगिविशेषोक्तिरूपापवादकाभावाच्चरमकक्ष्यापन्नत्वेन सर्वोत्तमत्व-मित्यर्थः । **असर्वोत्तमस्येति ।।** तथासति 'नाल्पे' इत्यनेन भूमन्यपि सुखनिषेधापत्त्या भूमैव सुखमित्यनेन विरोधापत्तेरिति भावः ।।




ಯಾರು ಭೂಮನಾಗಿದ್ದಾನೋ, ಅವನು ಪರಿಪೂರ್ಣವಾದ ಸುಖವುಳ್ಳವನೆಂದು 'ಯೋ ವೈ ಭೂಮಾ ತತ್ಸುಖಮ್' ಎಂಬ ಶ್ರುತಿಯು ಪ್ರತಿಪಾದನೆ ಮಾಡುತ್ತಿದೆ. ನಿರುಪಪದವಾದ ಸುಖಶಬ್ದಕ್ಕೆ ಪರಿಪೂರ್ಣವೆಂದೇ ಅರ್ಥ. ಪರಿಪೂರ್ಣಸುಖ ಇರುವುದು ಪರಮಾತ್ಮನಲ್ಲಿ ಮಾತ್ರವೇ. ಬೇರೆಯವರೆಲ್ಲರೂ ಅಲ್ಪವಾದ ಸುಖವುಳ್ಳವರು. ಆದ್ದರಿಂದ ಬೇರೆಯವರು ಯಾರೂ ಸಹ 'ಭೂಮಾ' ಎಂಬ ಶಬ್ದದಿಂದ ಪ್ರತಿಪಾದ್ಯರಾಗುವುದಿಲ್ಲ. ಈ ಎಲ್ಲ ವಿಷಯವನ್ನು 'ಸಂಪ್ರಸಾದಾತ್' ಎಂಬ ಲಿಂಗದಿಂದ ಸೂತ್ರಕಾರರು ಹೇಳಿರುತ್ತಾರೆ.

'ವಿಶ್ವಶಂಭುವಮ್' ಎಂಬ ಶ್ರುತಿಯು ಪೂರ್ಣವಾದ ಸುಖಕ್ಕೆ ಆಶಯನಾದವನು ವಿಷ್ಣುವೇ ಆಗಿದ್ದಾನೆಂದು ಹೇಳುತ್ತಿರುವುದರಿಂದ ಮುಖ್ಯಪ್ರಾಣದೇವರನ್ನು ಪೂರ್ಣಸುಖಸ್ವರೂಪರೆಂದು ಹೇಳಬಾರದು.



**तात्पर्यचन्द्रिका**

**नच भेदपक्षे प्राणाद्भूयसोऽनुक्तिर्बाधिका ।**

ಅನುವಾದ - ಭೇದವಿಷಯಕ ಪೂರ್ವಪಕ್ಷದಲ್ಲಿ ಮುಖ್ಯಪ್ರಾಣದೇವರಿಗಿಂತ ಭೂಯಸ್ತ್ವವನ್ನು ಹೇಳದಿರುವಿಕೆಯೇ ಬಾಧಕವಾಗಿದೆಯೆಂದು ಆಕ್ಷೇಪಿಸಲಾಗಿತ್ತು. ಇದು ತಪ್ಪು.

**पूर्वपक्षेऽपि प्राणस्य विष्णुतो भूयस्त्वानुक्तेर्बाधकत्वात् ।**

ಪೂರ್ವಪಕ್ಷದಲ್ಲಿಯೂ ಸಹ ಪ್ರಾಣನಿಗೆ ವಿಷ್ಣುವಿಗಿಂತ ಭೂಯಸ್ತ್ವವನ್ನು ಹೇಳಿರುವುದಿಲ್ಲ. ಆದ್ದರಿಂದ ಪ್ರಾಣನಿಗಿಂತ ಉತ್ತಮತ್ವವನ್ನು ಹೇಳುವುದು ವಿಷ್ಣುಪಕ್ಷದಲ್ಲಿ ಹೇಗೆ ಬಾಧಕವಾಗುತ್ತದೆಂದು ಪೂರ್ವಪಕ್ಷಕಾರರು ಹೇಳುತ್ತಾರೋ, ಅದರಂತೆ ವಿಷ್ಣುವಿಗಿಂತ ಭೂಯಸ್ತ್ವವನ್ನು ಪ್ರಾಣನಲ್ಲಿ ಹೇಳದಿರುವಿಕೆಯೂ ಸಹ ಪೂರ್ವಪಕ್ಷಿಗಳಿಗೆ ಬಾಧಕವಾಗುತ್ತವೆ.

**विष्णोरधमत्वे हि नामादिदेवेभ्य इव प्राणस्य विष्णुतोऽपि भूयस्त्वं प्रश्नोत्तराभ्यामुच्येत ।**

ವಿಷ್ಣುವು ಪ್ರಾಣನಿಗಿಂತ ಅಧಮನಾದರೆ ನಾಮ, ವಾಕ್, ಮೊದಲಾದ ಅಭಿಮಾನಿ ದೇವತೆಗಳಿಗಿಂತ ಮುಖ್ಯಪ್ರಾಣದೇವರು ಉತ್ತಮರಾಗಿದ್ದಾರೆಂದು ಹೇಗೆ ಹೇಳಲ್ಪಟ್ಟದೆಯೋ, ಅದರಂತೆ ವಿಷ್ಣುವಿಗಿಂತಲೂ ಮುಖ್ಯಪ್ರಾಣದೇವರು ಉತ್ತಮರಾಗಿದ್ದಾರೆಂದು ಪ್ರಶ್ನೆ ಹಾಗೂ ಉತ್ತರಗಳಿಂದ ಹೇಳಬೇಕಿತ್ತು.

**तदुक्तं न्यायविवरणे "प्राणस्य विष्णोः सकाशाद्भूयस्त्वानुक्तिः" इति ।**

ಇದನ್ನೇ ನ್ಯಾಯವಿವರಣದಲ್ಲಿ 'ಪ್ರಾಣಸ್ಯ ವಿಷ್ಣೋಃ ಸಕಾಶಾದ್ಭೂಯಸ್ತ್ವಾನುಕ್ತಿಃ'' ಮುಖ್ಯಪ್ರಾಣದೇವರಿಗೆ ವಿಷ್ಣುವಿನ ದೆಸೆಯಿಂದ ಭೂಯಸ್ತ್ವವನ್ನು ಹೇಳದಿರುವಿಕೆಯು ಪೂರ್ವಪಕ್ಷಕಾರರಿಗೆ ಬಾಧಕವಾಗಿದೆ ಎಂದು ಹೇಳಿರುತ್ತಾರೆ.

**न चैवमनुक्त्योः साम्यम् । "एवं विजानन्नतिवादि" इति प्राणज्ञानिनोऽतिवादित्वमुक्त्वा "एष तु वा अतिवदति यः सत्येनातिवदति" इति सत्याख्यभूमज्ञानिनस्तुशब्देन विशेषोक्त्या भूम्नः प्राणादप्यतिशयस्योक्ततया 'अस्ति भगवः प्राणाद्भूयः' इति प्रश्नादेरध्याहार्यत्वेनानुक्तेरन्यथाऽप्युपपत्तेः ।**

ಹಾಗಾದರೆ ಪೂರ್ವಪಕ್ಷ ಹಾಗೂ ಸಿದ್ಧಾಂತ ಪಕ್ಷಗಳಲ್ಲಿ 'ಅನುಕ್ತಿ' ಎಂಬ ಬಾಧವು ಸಮಾನವಾಯಿತಲ್ಲವೇ? ಎಂದು ಪ್ರಶ್ನಿಸಬಾರದು. ಏಕೆಂದರೆ 'ಏವಂ ವಿಜಾನನ್ನತಿವಾದೀ' ಎಂಬುದಾಗಿ ಯಾರು ಪ್ರಾಣನನ್ನು ತಿಳಿದಿದ್ದಾರೋ, ಅವರು ಉತ್ತಮಜ್ಞಾನಿಗಳಾಗಿದ್ದಾರೆಂದು ಅತಿವಾದಿತ್ವವನ್ನು ಹೇಳಲಾಗಿದೆ. ಆದರೆ ಮುಂದೆ 'ಏಷ ತು ವಾ ಅತಿವದತಿ ಯಃ ಸತ್ಯೇನಾತಿವದತಿ' 'ಸತ್ಯನೆಂಬ ಭೂಮನನ್ನು ಯಾರು ತಿಳಿದಿದ್ದಾರೋ, ಅವರು ಮತ್ತಷ್ಟು ಉತ್ತಮ ಜ್ಞಾನಿಗಳಾಗಿದ್ದಾರೆ' ಎಂಬುದಾಗಿ 'ತು' ಎಂಬ ಶಬ್ದದಿಂದ ವಿಶೇಷವಾದ ಅತಿಶಯವನ್ನು ಶ್ರುತಿಯು ಹೇಳುತ್ತಿದೆ. ಈ 'ತು' ಶಬ್ದವು ಭೂಮನಿಗೆ ಪ್ರಾಣನಿಗಿಂತ ಅತಿಶಯವನ್ನು ಹೇಳುತ್ತಿದೆ ಎಂದರ್ಥ. ಆದ್ದರಿಂದ ಪ್ರಾಣನಿಗಿಂತ ಶ್ರೇಷ್ಠನಾದವನು ಮತ್ತೊಬ್ಬನಿದ್ದಾನೇನು? ಎಂಬ ಪ್ರಶ್ನೆಯನ್ನು ಮೂಲದಲ್ಲಿ ಹೇಳಿಲ್ಲದಿದ್ದರೂ ಅಧ್ಯಾಹಾರ ಮಾಡಿಕೊಳ್ಳಬೇಕು. ಆದ್ದರಿಂದ ಸಿದ್ಧಾಂತದಲ್ಲಿ ಇರುವ ಅನುಕ್ತಿಯೆಂಬುದು ಅನ್ಯಥಾ ಉಪಪನ್ನವಾಗುತ್ತದೆ.

**अत एव ''गत्यन्तरविवर्जिताः'' इत्यनुव्याख्याने सिद्धान्तीयानुक्ते-र्निरवकाशत्वमुक्तम् ।**

ಪೂರ್ವಪಕ್ಷಕಾರರು ಸಿದ್ಧಾಂತಿಗಳನ್ನು ಕುರಿತು ಯಾವ ಅನುಕ್ತಿಯೆಂಬ ಬಾಧಕವನ್ನು ಹೇಳಿದರೋ, ಅದು ಪ್ರಶ್ನೆ ಹಾಗೂ ಉತ್ತರಗಳನ್ನು ಅಧ್ಯಾಹಾರ ಮಾಡಿಬಿಟ್ಟರೆ ಸಾವಕಾಶವಾಗುತ್ತದೆ. ಆದರೆ ಸಿದ್ಧಾಂತಿಗಳು ಪೂರ್ವಪಕ್ಷಕಾರರನ್ನು ಕುರಿತು ಯಾವ ಅನುಕ್ತಿಯೆಂಬ ಬಾಧಕವನ್ನು ಹೇಳುತ್ತಿದ್ದಾರೋ, ಅದು ನಿರವಕಾಶವಾಗಿದೆ. ಆದ್ದರಿಂದಲೇ ಅನುವ್ಯಾಖ್ಯಾನದಲ್ಲಿ 'ಗತ್ಯಂತರವಿವರ್ಜಿತಾಃ' ಎಂಬುದಾಗಿ ನಿರವಕಾಶತ್ವವನ್ನು ಹೇಳಿರುತ್ತಾರೆ.

**एतच्च ''व्यतिहारो विशिंषन्ति'' इत्यत्र सूत्रकृदेव वक्ष्यति ।।**

ಈ ಬಗೆಯಲ್ಲಿ ಅಧ್ಯಾಹಾರ ಮಾಡಿಕೊಳ್ಳಬೇಕೆಂದು ಸೂತ್ರಕಾರರೇ 'ವ್ಯತಿಹಾರೋ ವಿಶಿಂಷಂತಿ' ಎಂಬ ಸೂತ್ರದಲ್ಲಿ ಹೇಳುತ್ತಾರೆ.

**प्रकाशः –**

एवं साधकोक्त्या भूमा विष्णुरित्युक्त्वा पूर्ववाद्युक्ते भूयस्त्वानुक्त्युत्क्रमणरूपे बाधके निराचिकीर्षुरनुक्तिं तावदनूद्य न्यायविवरणोक्तदिशा साम्येन तावदापादयति – न चेत्यादिना ।।

ವಿವರಣೆ - ಇಲ್ಲಿಯ ತನಕ ಭೂಮಶಬ್ದದಿಂದ ವಿಷ್ಣುವೇ ಪ್ರತಿಪಾದ್ಯನಾಗಿದ್ದಾನೆನ್ನಲು ಸಾಧಕಪ್ರಮಾಣಗಳನ್ನು ಹೇಳಿದ್ದಾಯಿತು. ಪ್ರಕೃತ ಪೂರ್ವಪಕ್ಷಿ ಸ್ವಪಕ್ಷಸಾಧಕವನ್ನಾಗಿ ಭೂಯಸ್ತ್ವಾನುಕ್ತಿ

ಹಾಗೂ ಉತ್ತಮಣಲಿಂಗಗಳನ್ನು ಸಮರ್ಥಿಸಿದ್ದನು. ಆ ಎರಡು ಬಾಧಕಗಳನ್ನು ನಿರಾಕರಣೆ ಮಾಡುವ ಉದ್ದೇಶದಿಂದ ಮೊದಲು ಅನುಕ್ತಿಯೆಂಬ ಬಾಧಕಪ್ರಮಾಣವನ್ನು ಅನುವಾದ ಮಾಡಿ ನ್ಯಾಯವಿವರಣದ ಪ್ರಕಾರ ನಾವೂ ಸಹ ಪೂರ್ವಪಕ್ಷಿಗಳಿಗೆ ಅನುಕ್ತಿಯನ್ನು ಆಕ್ಷೇಪಿಸಬಹುದೆಂದು ಆಪಾದಿಸುತ್ತಿದ್ದಾರೆ 'ನಚ' ಇತ್ಯಾದಿ ಗ್ರಂಥದಿಂದ.

**प्रकाशः** – विष्णुतो भूयस्त्वानुक्तेर्निरवकाशतामाह – **विष्णोरिति** ।। **उच्येतेति** ।। त्वन्मते तस्य सर्वोत्तमत्वार्थमेव नामवागादितारतम्यस्य प्रक्रान्तत्वात् ।

ವಿಷ್ಣುವಿಗಿಂತ ಮುಖ್ಯಪ್ರಾಣದೇವರಿಗೆ ಸರ್ವೋತ್ತಮತ್ವವನ್ನು ಹೇಳದಿರುವಿಕೆಯು ನಿರವಕಾಶ ಪ್ರಮಾಣವಾಗಿದೆ ಎಂಬುದಾಗಿ 'ವಿಷ್ಣೋಃ' ಇತ್ಯಾದಿ ವಾಕ್ಯದಿಂದ ಪ್ರತಿಪಾದಿಸುತ್ತಿದ್ದಾರೆ. 'ಉಚ್ಯೇತ' ಎಂಬುದರ ಅಭಿಪ್ರಾಯ ಹೀಗಿದೆ - ಪೂರ್ವಪಕ್ಷದ ಪ್ರಕಾರ ಪ್ರಾಣದೇವರಿಗೆ ಸರ್ವೋತ್ತಮತ್ವವನ್ನು ಹೇಳುವುದಕ್ಕಾಗಿಯೇ ನಾಮವಾಗಾದಿ ತಾರತಮ್ಯವು ಹೊರಟಿರುತ್ತದೆ.

**प्रकाशः** – तथा च प्राणस्यैव सर्वोत्तमत्वे विष्णुतो भूयस्त्वमाशानन्तरं विष्णुर्वाव आशाया भूयानित्युक्त्वा पश्चादस्ति भगवो विष्णोर्भूयानिति प्रश्नः प्राणो वाव विष्णोर्भूयानिति प्रतिवचनं च स्यात् ।

ಆದ್ದರಿಂದ ಮುಖ್ಯಪ್ರಾಣದೇವರಿಗೆ ಸರ್ವೋತ್ತಮತ್ವವನ್ನು ಪ್ರತಿಪಾದಿಸಲೇಬೇಕು. ಅದಕ್ಕಾಗಿ ವಿಷ್ಣುವಿನ ದೆಸೆಯಿಂದ ಉತ್ತಮತ್ವವನ್ನು ಮುಖ್ಯಪ್ರಾಣದೇವರಿಗೆ ಹೇಳಲೇಬೇಕು. ಅದಕ್ಕಾಗಿ ಆಶಾನಾಮಕಳಾದ ಭಾರತೀದೇವಿಯನ್ನು ಹೇಳಿದ ಮೇಲೆ 'ವಿಷ್ಣುರ್ವಾವ ಆಶಾಯಾ ಭೂಯಾನ್' ಎಂದು ಹೇಳಿ; ಮುಂದೆ 'ಅಸ್ತಿ ಭಗವೋ ವಿಷ್ಣೋರ್ಭೂಯಾನ್' ವಿಷ್ಣುವಿಗಿಂತ ಉತ್ತಮನಾದವನು ಇದ್ದಾನೇನು ಎಂಬ ಪ್ರಶ್ನೆಯನ್ನು ಹಾಗೂ 'ಪ್ರಾಣೋ ವಾವ ವಿಷ್ಣೋರ್ಭೂಯಾನ್' ಎಂಬ ಉತ್ತರವನ್ನೂ ಅಧ್ಯಾಹಾರ ಮಾಡಿಕೊಳ್ಳಲೇಬೇಕು.

**प्रकाशः** – प्रश्नादिनाऽवश्यवक्तव्यस्य भूयस्त्वस्यानुक्तौ हेत्वन्तराभावात्तदन्यथानुपपत्त्या न प्राणस्य सर्वोत्तमत्वं शङ्क्यम् । किन्तु भूम्न एव तथात्वं वाच्यमिति भावः ।

ಹೀಗೆ - ಪ್ರಶ್ನೆ ಹಾಗೂ ಉತ್ತರಗಳಿಂದ ಅವಶ್ಯ ವಕ್ತವ್ಯವಾದ ಭೂಯಸ್ತ್ವವನ್ನು ಹೇಳದಿರಲು ಬೇರೆ ಕಾರಣವಿಲ್ಲ. ಇದರ ಅನ್ಯಥಾನುಪಪತ್ತಿಯಿಂದ ಪ್ರಾಣನಿಗೆ ಸರ್ವೋತ್ತಮತ್ವವನ್ನು ಸಾಧಿಸಲಾಗದೆಂದು ಸಿದ್ಧವಾಗುತ್ತದೆ; ಹೊರತು ಭೂಮನಿಗೆ ಸರ್ವೋತ್ತಮತ್ವವನ್ನು ಹೇಳಬೇಕು ಎಂದು ಸಿದ್ಧವಾಗುವುದಿಲ್ಲ.

**प्रकाशः** – प्राणस्य विष्णुतो भूयस्त्वानुक्तिरूपयुक्तेष्टीकाकारैरत्र न्यायविवरणे सुधायां चाव्याख्यातत्वादत्र तां स्वयं व्याख्याय मूलारूढां करोति – **तदुक्तमिति** ।।

ಮುಖ್ಯಪ್ರಾಣದೇವರಿಗೆ ವಿಷ್ಣುವಿಗಿಂತ ಭೂಯಸ್ತ್ವವನ್ನು ಹೇಳದಿರುವಿಕೆ ಎಂಬ ಅನ್ಯಥಾನುಪಪತ್ತಿಯಿಂದ ಸರ್ವೋತ್ತಮತ್ವವು ಮುಖ್ಯಪ್ರಾಣದೇವರಿಗೆ ಸಿದ್ಧವಾಗುವುದಿಲ್ಲ ಎಂಬ ವಿಚಾರವನ್ನು ಭಾಷ್ಯಟೀಕೆಯಲ್ಲಾಗಲೀ ಎಂಬ ನ್ಯಾಯವಿವರಣದಲ್ಲಿ ಅಥವಾ ಸುಧೆಯಲ್ಲಾಗಲೀ ವ್ಯಾಖ್ಯಾನಿಸಿರುವುದಿಲ್ಲ. ಆದ್ದರಿಂದ ಸ್ವತಃ ಗ್ರಂಥಕಾರರೇ ಇಲ್ಲಿ ವ್ಯಾಖ್ಯಾನ ಮಾಡಿ ಎಲ್ಲ ವಿಚಾರವನ್ನು ಮೂಲಾರೂಢ ಮಾಡುತ್ತಿದ್ದಾರೆ 'ತದುಕ್ತಮ್' ಇತ್ಯಾದಿಯಾಗಿ.

**प्रकाशः** – न्यायविवरणपाठो **मुख्यप्राणस्येति** । नन्वेवं भूम्नोऽपि प्राणाद्भूयस्त्वानुक्त्यन्यथानुपपत्त्या न सर्वोत्तमत्वमिति सुवचम् । तथा च कथं निर्णय इति भावेनाशङ्क्य निराह – **नचेति** ।।

'ಪ್ರಾಣಸ್ಯ' ಎಂದು ಇಲ್ಲಿ ಹೇಳಿದ್ದಾರೆ ಆದರೆ ನ್ಯಾಯವಿವರಣದ ಪಾಠ 'ಮುಖ್ಯಪ್ರಾಣಸ್ಯ' ಎಂದಿದೆ.

ಹಾಗಾದರೆ ಭೂಮನಿಗೂ ಸಹ ಮುಖ್ಯಪ್ರಾಣದೇವರಿಗಿಂತ ಭೂಯಸ್ತ್ವವನ್ನು ಹೇಳದಿರುವಿಕೆ ಎಂಬ ಅನ್ಯಥಾನುಪಪತ್ತಿಯಿಂದ ಸರ್ವೋತ್ತಮತ್ವವು ಸಿದ್ಧವಾಗುವುದಿಲ್ಲವೆಂದು ಹೇಳಬಹುದಲ್ಲವೇ? ಹೀಗಿರುವಾಗ ಯಾವ ಪಕ್ಷವನ್ನು ಹೇಗೆ ನಿರ್ಧರಿಸಲು ಸಾಧ್ಯ? ಎಂಬ ಅಭಿಪ್ರಾಯದಿಂದ ಆಶಂಕಿಸಿ ಉತ್ತರಿಸುತ್ತಿದ್ದಾರೆ 'ನಚ' ಇತ್ಯಾದಿ ಗ್ರಂಥದಿಂದ.

**प्रकाशः** – ''एष तु वा अतिवदति'' इत्यादिटीकोक्तं समाधिं व्यनक्ति – **एवमिति** ।। प्राणपकरणे ''स वा एष एवं पश्यन्नेवं मन्वान एवं विजानन्नतिवादी भवति । तं चेद्ब्रूयुरतिवाद्यसीति । अतिवाद्यस्मीति ब्रूयान्नापह्नुवीत'' इत्युक्त्वा 'एष तु वा' इत्याद्याम्नायते ।

'ಏಷ ತು ವಾ ಅತಿವದತಿ' ಇತ್ಯಾದಿ ಟೀಕೆಯಲ್ಲಿ ಹೇಳಲ್ಪಟ್ಟ ಸಮಾಧಾನವನ್ನು 'ಏವಮ್' ಇತ್ಯಾದಿ ಗ್ರಂಥದಿಂದ ವ್ಯಾಖ್ಯಾನಿಸುತ್ತಿದ್ದಾರೆ. ಪ್ರಾಣಪ್ರಕರಣದಲ್ಲಿ 'ಸ ವಾ ಏಷ ಏವಂ ಪಶ್ಯನ್ನೇವಂ ಮನ್ವಾನ ಏವಂ ವಿಜಾನನ್ನತಿವಾದೀ ಭವತಿ । ತಂ ಚೇದ್ ಬ್ರೂಯುರತಿವಾದ್ಯಸೀತಿ । ಅತಿವಾದ್ಯಸ್ಮೀತಿ ಬ್ರೂಯಾನ್ನಪಹ್ನುವೀತ' 'ಯಾರು ಪ್ರಾಣನನ್ನು ಉತ್ತಮನೆಂದು ತಿಳಿಯುತ್ತಾನೋ, ಇನ್ನೊಬ್ಬರಿಗೂ ಸಹ ಉಪದೇಶಿಸುತ್ತಾನೋ, ಅವನು ಅತಿಶಯಿತವಾಗಿ ಪ್ರಾಣನನ್ನು ತಿಳಿದ ಕಾರಣ ಅತಿವಾದಿಯೆನಿಸುತ್ತಾನೆ. ಯಾರಾದರೂ ಅವನನ್ನು ಕುರಿತು ನೀನು ಅತಿವಾದಿಯಾಗಿದ್ದೀಯೆಂದು ಹೇಳಿದರೆ, ಹೌದು ನಾನು ಅತಿವಾದಿಯಾಗಿದ್ದೇನೆಂದೇ ಉತ್ತರಿಸಬೇಕು ಹೊರತು, ನಾನು ಅತಿವಾದಿಯಾಗಿಲ್ಲವೆಂದು ತಿರಸ್ಕರಿಸಬಾರದು' ಎಂಬುದಾಗಿ ಉಪನಿಷತ್ತಿನಲ್ಲಿ ಹೇಳಿ; 'ಏಷ ತು ವಾ' ಇತ್ಯಾದಿ ವಾಕ್ಯಗಳು ಪ್ರಸಕ್ತವಾಗಿದೆ. ಅಂದರೆ ಮುಖ್ಯಪ್ರಾಣನನ್ನು ತಿಳಿದವನು ಅತಿವಾದಿಯಾಗಿದ್ದಾನೆಂದು ಹೇಳುವುದಷ್ಟೇ ಅಲ್ಲದೇ ಮುಖ್ಯಪ್ರಾಣನಿಗಿಂತ ಅತ್ಯಂತ ಅತಿಶಯಿತನಾದ ಪರಮಾತ್ಮನನ್ನು ಇನ್ನೂ ಉತ್ತಮನೆಂದು ಯಾರು ತಿಳಿಯುತ್ತಾನೋ, ಅವನು ಅತಿಶಯಿತವಾದ ಅತಿವಾದಿಯೆನಿಸುತ್ತಾನೆಂದು ಹೇಳಲಾಗಿದೆ. ಆದ್ದರಿಂದ ಮುಖ್ಯಪ್ರಾಣದೇವರಿಗಿಂತಲೂ ಭೂಮನೇ ಸರ್ವೋತ್ಕೃಷ್ಟನು ಅವನೇ ವಿಷ್ಣುವೆಂದು ನಿರ್ಣಯವಾಗುತ್ತದೆ.

ಪರಿಪೂರ್ಣಚಂದ್ರಿಕಾ

**प्रकाशः** – ननु सत्यस्यातिशयितत्वे भूम्नः किमायातमित्यत उक्तम् 'सत्याख्य' इति । तयोरभेदश्च ''सैव हि सत्यादयः'' इत्यत्र वक्ष्यत इति भावः ।।

ಸತ್ಯನಿಗೆ ಅತಿಶಯತ್ವವನ್ನು ಉಪನಿಷತ್ತು ಹೇಳುತ್ತಿದೆ. ಇದರಿಂದ ಭೂಮನಿಗೆ ಅತಿಶಯಿತತ್ವವನ್ನು ಹೇಗೆ ಹೇಳಿದಂತಾಗುತ್ತದೆ ? ಎಂಬ ಪ್ರಶ್ನೆಗೆ 'ಸತ್ಯಾಖ್ಯ' ಎಂದು ಉತ್ತರಿಸಿದ್ದಾರೆ. ಸತ್ಯನೆಂದು ಭೂಮನೆಂದು 'ಸೈವ ಹಿ ಸತ್ಯಾದಯಃ' ಎಂಬ ಸೂತ್ರದಲ್ಲಿ ಮುಂದೆ ಸಮರ್ಥಿಸುವವರಿದ್ದಾರೆಂದು ಅಭಿಪ್ರಾಯ.

**प्रकाशः** – **प्रश्नादेरिति** ।। 'भूमा वाव प्राणाद्भूयान्' इति परिहारस्य चेत्यादिपदार्थः । ननु यथा पूर्ववादिना सिद्धान्तिनं प्रत्युक्ता प्राणाद्भूयस्त्वानुक्तिर्गत्यन्तरयुक्ता तथा सिद्धान्तिना पूर्ववादिनं प्रत्युक्ता प्राणस्य विष्णुतो भूयस्त्वानुक्तिरपि तथा स्यात् । एवञ्च पुनर्निर्णयो न स्यादित्यतो नैवमिति भावेनाह – अत एवेति ।।

'ಪ್ರಶ್ನಾದೇಃ' ಎಂಬಲ್ಲಿರುವ ಆದಿಪದದಿಂದ 'ಭೂಮಾ ವಾವ ಪ್ರಾಣಾದ್ಭೂಯಾನ್' ಎಂಬ ಪರಿಹಾರವನ್ನು ವಿವಕ್ಷಿಸಬೇಕು.

ಯಾವರೀತಿಯಾಗಿ ಪೂರ್ವಪಕ್ಷಿಯಿಂದ ಸಿದ್ಧಾಂತಿಯನ್ನು ಕುರಿತು ಹೇಳಲ್ಪಟ್ಟ 'ಪ್ರಾಣಾದ್ಭೂಯಸ್ತ್ವಾನುಕ್ತಿ' ಎಂಬ ಲಿಂಗವು ಸಾವಕಾಶವಾಗಿದೆಯೆಂದು ಸಿದ್ಧಾಂತಿಗಳು ಹೇಳಿದರೋ, ಅದರಂತೆ ಪೂರ್ವಪಕ್ಷಿಯನ್ನು ಕುರಿತು ಸಿದ್ಧಾಂತಿಯಿಂದ ಹೇಳಲ್ಪಟ್ಟ 'ಪ್ರಾಣನಿಗೆ ವಿಷ್ಣುವಿಗಿಂತ ಭೂಯಸ್ತ್ವಾನುಕ್ತಿ' ಎಂಬುದೂ ಸಹ ಸಾವಕಾಶವಾಗಿದೆಯೆಂದು ಹೇಳಬಹುದಲ್ಲವೇ? ಆದ್ದರಿಂದ ಪುನಃ ಎರಡೂ ಪಕ್ಷಗಳು ಸಮಬಲವಾಗುತ್ತವಲ್ಲವೇ? ನಿರ್ಣಯ ಮಾಡಲು ಸಾಧ್ಯವಿಲ್ಲವಲ್ಲವೇ? ಎಂಬ ಪ್ರಶ್ನೆಗೆ 'ಅತ ಏವ' ಇತ್ಯಾದಿ ಗ್ರಂಥದಿಂದ ಉತ್ತರಿಸುತ್ತಿದ್ದಾರೆ.

**प्रकाशः** – पूर्ववाद्युक्तानुक्तेस्सावकाशत्वादेव साम्यनिरासाय सिद्धान्तिनोक्तानुक्तेर्निरवकाशत्वं –

ಪೂರ್ವಪಕ್ಷಿಯಿಂದ ಹೇಳಲ್ಪಟ್ಟ ಅನುಕ್ತಿಯು ಸಾವಕಾಶವಾಗಿದೆ. ಆದ್ದರಿಂದಲೇ ಸಿದ್ಧಾಂತಿಯಿಂದ ಹೇಳಲ್ಪಟ್ಟ ಅನುಕ್ತಿಯು ನಿರವಕಾಶವಾಗಿದೆ. ಆದ್ದರಿಂದ ಇಬ್ಬರಲ್ಲಿ ಅನುಕ್ತಿಯೆಂಬುದು ಸಮಾನವಾಗಿರುವುದಿಲ್ಲ. ಈ ವಿಷಯವು ಅನುವ್ಯಾಖ್ಯಾನದಲ್ಲಿ ಸ್ಪಷ್ಟವಾಗಿ ಉಕ್ತವಾಗಿದೆ.

**प्रकाशः** –

'बाहुल्यं लिङ्गशब्दानामनुक्तिश्च विरुद्धता ।
अनुक्तिरन्वयाभावो विपरीतश्रुतिभ्रमः ।

ಭೂಮಾಧಿಕರಣ (೧-೩-೨)

लिङ्गावकाशराहित्यभ्रमस्तादृग्द्वयं तथा ।
बहुतादृक्त्वमुक्तस्य विरोधोऽर्थात्तथा गतिः ।।
समस्तमेतदित्यत्र पूर्वपक्षेषु युक्तयः ।
ता एव बलवत्यस्तु गत्यन्तरविवर्जिताः ।।

सिद्धान्तयुक्तयो ज्ञेयाः' इत्यनुव्याख्यान उक्तमित्यर्थः । विवरिष्यते चैतदग्रे ।

'ಬಾಹುಲ್ಯಂ ಲಿಂಗಶಬ್ದಾನಾಮನುಕ್ತಿಶ್ಚ ವಿರುದ್ಧತಾ ।
ಅನುಕ್ತಿರನ್ವಯಾಭಾವೋ ವಿಪರೀತಶ್ರುತಿಭ್ರಮಃ ॥
ಲಿಂಗಾವಕಾಶರಾಹಿತ್ಯಭ್ರಮಸ್ತಾದೃಗ್ದ್ವಯಂ ತಥಾ ।
ಬಹುತಾದೃಕ್ತ್ವಮುಕ್ತಸ್ಯ ವಿರೋಧೋऽರ್ಥಾತ್ತಥಾ ಗತಿಃ ॥
ಸಮಸ್ತಮೇತದಿತ್ಯತ್ರ ಪೂರ್ವಪಕ್ಷೇಷು ಯುಕ್ತಯಃ ।
ತಾ ಏವ ಬಲವತ್ಯಸ್ತು ಗತ್ಯಂತರವಿವರ್ಜಿತಾಃ ॥
ಸಿದ್ಧಾಂತಯುಕ್ತಯೋ ಜ್ಞೇಯಾಃ'

ಎಂಬ ಅನುವ್ಯಾಖ್ಯಾನದಲ್ಲಿ ಮೇಲೆ ಹೇಳಿದ ವಿಷಯವು ಸ್ಪಷ್ಟಪಡಿಸಲಾಗಿದೆ. ಇದನ್ನು ಮುಂದೆ ನಾವು ವಿವರಿಸುವವರಿದ್ದೇವೆ.

**प्रकाशः** – नन्वेवं निरवकाशानुक्तेरेव सिद्धान्तन्यायत्वोक्तेः पूर्वपक्षानुक्तेरन्यथोपपत्तिरूपन्यायस्य टीकायां कुतो व्युत्पादनं कृतम् । तथा सति न्यायभेदेनाधिकरणभेदस्स्यात् । 'सैव हि' इत्यस्य व्यर्थतापत्तेश्चेत्यतस्तत्रोक्तस्यैवात्र शिष्यहितायोक्तिरिति भावेनाह – एतच्चेति ।। पूर्वपक्षीयानुक्तेरुक्तरीत्या सावकाशत्वमित्यर्थः ।

ಹಾಗಾದರೆ ನಿರವಕಾಶವಾದ ಅನುಕ್ತಿಯೇ ಸಿದ್ಧಾಂತ ನ್ಯಾಯವಾಗಿದೆ. ಪೂರ್ವಪಕ್ಷದಲ್ಲಿ ಹೇಳಲ್ಪಟ್ಟ ಅನುಕ್ತಿಯು ಅನ್ಯಥಾ ಉಪಪನ್ನವಾದ್ದರಿಂದ ಸಾವಕಾಶವಾಗಿದೆ ಎಂದು ಹೇಳಿದಿರಿ. ಈ ನ್ಯಾಯವನ್ನು ಟೀಕೆಯಲ್ಲಿ ಹೇಳಿದ್ದೂ ತಪ್ಪಲ್ಲವೇ? ಹಾಗೇ ಹೇಳಿದರೆ ನ್ಯಾಯಭೇದದಿಂದ ಅಧಿಕರಣವೂ ಸಹ ಭಿನ್ನವಾಗಬೇಕಾಗುತ್ತದೆ. ಮತ್ತು 'ಸೈವ ಹಿ' ಎಂಬ ವ್ಯರ್ಥವಾಗಬೇಕಾಗುತ್ತದಲ್ಲವೇ? ಎಂಬೆರಡು ಪ್ರಶ್ನೆಗಳಿಗೆ 'ಸೈವ ಹಿ' ಎಂಬ ಸೂತ್ರದಲ್ಲಿ ಹೇಳಲ್ಪಟ್ಟ ವಿಚಾರವನ್ನೇ ಇಲ್ಲಿ ಶಿಷ್ಯರ ಹಿತಕ್ಕಾಗಿ ಮೊದಲೇ ಹೇಳಿರುತ್ತಾರೆಂಬ ಅಭಿಪ್ರಾಯದಿಂದ 'ಏತಚ್ಚ' ಇತ್ಯಾದಿ ಗ್ರಂಥವು ಹೊರಟಿದೆ. 'ಏತಚ್ಚ' ಎಂಬ ಪದಕ್ಕೆ ಪೂರ್ವಪಕ್ಷಕಾರರು ಹೇಳಲ್ಪಟ್ಟ ಅನುಕ್ತಿಯು ಹಿಂದೆ ಹೇಳಿದಂತೆ ಸಾವಕಾಶವಾಗಿದೆಯೆಂದು ತಿಳಿಯಬೇಕು.

**प्रकाशः** – तृतीयस्य तृतीयपादे द्वाविंशाधिकरणे विष्णुः प्राणादुत्तमो न वेति संशये छान्दोग्ये प्राणस्यैव सर्वोत्तमत्वेनोक्तत्वात्प्राणाद्भूयसोऽन्यस्य प्रश्नप्रतिवचनाभ्यामनुक्तेः प्राण एव सर्वोत्तम इति प्राप्ते प्रकरणान्तर इव

प्रश्नप्रतिवचनयोर्व्यतिहारोऽध्याहारः कार्यः । 'एष तु वा अतिवदति' इति 'तु' - शब्देन विशेषणाद्विष्णुरेव सत्यशब्देनोत्तमतयोच्यत इति वक्ष्यतीत्यर्थः ।

'ವ್ಯತಿಹಾರೋ ವಿಶಿಂಷಂತಿ' ಎಂಬ ಸೂತ್ರವು ಮೂರನೇ ಅಧ್ಯಾಯದ ಮೂರನೇ ಪಾದದ ಇಪ್ಪತ್ತೆರಡನೇ ಅಧಿಕರಣದಲ್ಲಿ ಬರುತ್ತದೆ.

ಈ ಅಧಿಕರಣದ ವಿಚಾರ ಹೀಗಿದೆ - ವಿಷ್ಣು ಪ್ರಾಣನಿಗಿಂತ ಉತ್ತಮನೋ, ಅಲ್ಲವೋ? ಎಂದು ಸಂಶಯ. ಛಾಂದೋಗ್ಯದಲ್ಲಿ ಪ್ರಾಣನನ್ನೇ ಸರ್ವೋತ್ತಮನೆಂದು ಹೇಳಿರುವ ಕಾರಣ ಮತ್ತು ಪ್ರಾಣನಿಗಿಂತ ಮತ್ತೊಬ್ಬನಿರಬಹುದೆಂಬ ಪ್ರಶ್ನೆಯನ್ನಾಗಲೀ, ಉತ್ತರವನ್ನಾಗಲೀ ಹೇಳದ ಕಾರಣ ಪ್ರಾಣನೇ ಸರ್ವೋತ್ತಮನಾಗಿದ್ದಾನೆಂದು ಪೂರ್ವಪಕ್ಷ. ಬೇರೆ ಪ್ರಕರಣದಲ್ಲಿ ಪ್ರಶ್ನೆ ಮತ್ತು ಪ್ರತಿವಚನಗಳಿರುವುದರಿಂದ ಅದರಂತೆ ಇಲ್ಲಿಯೂ ಸಹ ಪ್ರಶ್ನಪ್ರತಿವಚನಗಳನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. 'ಏಷ ತು ವಾ ಅತಿವದತಿ' ಎಂಬಲ್ಲಿರುವ 'ತು' ಶಬ್ದವನ್ನು ವಿಶೇಷಣವನ್ನಾಗಿ ಹೇಳಿರುವ ಕಾರಣ ವಿಷ್ಣುವೇ ಸತ್ಯಶಬ್ದದಿಂದ ಉತ್ತಮನಾಗಿದ್ದಾನೆಂದು ಕರೆಸಿಕೊಳ್ಳುತ್ತಾನೆ. ಹೀಗೆ - ಅಧ್ಯಾಹಾರ ಮಾಡಿಕೊಳ್ಳಬೇಕೆಂಬ ವಿಷಯವನ್ನು 'ವ್ಯತಿಹಾರೋ ವಿಶಿಂಷಂತಿ' ಎಂಬ ಸೂತ್ರವು ಪ್ರತಿಪಾದಿಸುತ್ತದೆ. ಇದನ್ನು ಮುಂದೆ ಸಮರ್ಥಿಸುತ್ತಾರೆ.




ಭೂಮನೇ ವಿಷ್ಣುವಾಗಿದ್ದಾನೆಂಬ ವಿಷಯದಲ್ಲಿ ಅನೇಕ ಸಾಧಕ ಪ್ರಮಾಣಗಳಿವೆ. ಅಷ್ಟೇ ಅಲ್ಲದೇ ಪೂರ್ವಪಕ್ಷಕಾರರು ಹೇಳಲ್ಪಟ್ಟ ಅನುಕ್ತಿ ಹಾಗೂ ಉತ್ಕ್ರಮಣ ಎಂಬ ಬಾಧಕಗಳೂ ಸಹ ಇರುವುದಿಲ್ಲ. ಏಕೆಂದರೆ ಪ್ರಾಣನಿಗಿಂತ ವಿಷ್ಣು ಅಧಿಕನಾಗಿದ್ದಾನೆಂದು ಹೇಳದಿರುವಿಕೆಯು ಬಾಧಕವಾಗುತ್ತದೆಂದು ಪೂರ್ವಪಕ್ಷಕಾರರು ಹೇಗೆ ಹೇಳುತ್ತಾರೋ ಅದರಂತೆ ವಿಷ್ಣುವಿಗಿಂತ ಪ್ರಾಣನು ಉತ್ತಮನಾಗಿದ್ದಾನೆಂಬ ಹೇಳದಿರುವಿಕೆಯು ಪೂರ್ವಪಕ್ಷಕಾರರಿಗೂ ಬಾಧಕವಾಗಿದೆ. ಪ್ರಾಣನು ಸರ್ವೋತ್ತಮನೆಂದೇ ಪೂರ್ವಪಕ್ಷಕಾರರು ಸಮರ್ಥಿಸಬೇಕು. ಆದ್ದರಿಂದ ವಿಷ್ಣುವಿಗಿಂತಲೂ ಪ್ರಾಣನಿಗೆ ಉತ್ತಮತ್ವವನ್ನು ಅವರು ಪ್ರತಿಪಾದಿಸಿದರೆ ಮಾತ್ರ ಭೂಮನು ಪ್ರಾಣನಾಗಿದ್ದಾನೆಂಬ ಸಮರ್ಥನೆಯು ಸಾಧ್ಯವಾಗುತ್ತದೆ. ಆದ್ದರಿಂದ ನಮ್ಮನ್ನು ಕುರಿತು ಯಾವ ಅನುಕ್ತಿಯನ್ನು ಬಾಧಕವನ್ನಾಗಿ ಹೇಳುತ್ತಿದ್ದಾರೋ, ಅದೇ ಅನುಕ್ತಿಯೆಂಬ ಲಿಂಗವು ಪೂರ್ವಪಕ್ಷಕಾರರಿಗೇನೇ ಮಾರಕವಾಗಿದೆ.

'ಅಧ್ಯುಪದೇಶಾತ್' ಎಂಬಲ್ಲಿ 'ಅಧಿ' ಎಂದರೆ 'ಸರ್ವಾಧಿಕ' ಎಂದರ್ಥ. ಪ್ರಾಣನನ್ನು ಸರ್ವೋತ್ತಮನೆಂದು ಶ್ರುತಿಯು ಹೇಳಿದೆ. ಶ್ರುತಿಯಲ್ಲಿ ಪ್ರಸಕ್ತವಾದ ಪ್ರಕರಣ ಹೀಗಿದೆ - ನಾರದರು ಸನತ್ಕುಮಾರರನ್ನು ಬ್ರಹ್ಮೋಪದೇಶಕ್ಕಾಗಿ ಉಪಸತ್ತಿ ಮಾಡುತ್ತಾರೆ. ಅಂತಹ ನಾರದರನ್ನು ಕುರಿತು ಸನತ್ಕುಮಾರರು 'ನಾಮ ಬ್ರಹ್ಮೇತ್ಯುಪಾಸೀತ' ನಾಮಾಭಿಮಾನಿಯಾದ ಉಷಾದೇವಿಯನ್ನು ಪೂರ್ಣಳೆಂದು ಉಪಾಸನೆ ಮಾಡಬೇಕು ಎಂದು ಪ್ರಾರಂಭ ಮಾಡಿ ಆಶಾನಾಮಕಳಾದ ಭಾರತೀದೇವಿಯ ತನಕ ಉಪಾಸನೆಯನ್ನು ತಾರತಮ್ಯ ಪ್ರಕಾರವಾಗಿ ಉಪದೇಶಿಸಿದರು. ಕೊನೆಯಲ್ಲಿ ಆಶಾನಾಮಕಳಾದ ಭಾರತೀದೇವಿಗಿಂತ ಪ್ರಾಣನನ್ನು ಉತ್ತಮನೆಂದು ಹೇಳಿದರು. ಅಂತಹ ಪ್ರಾಣನಿಗಿಂತ ಉತ್ತಮನಾದ

ಮತ್ತೊಬ್ಬನನ್ನು ಹೇಳಲಿಲ್ಲ. ಇದರಿಂದ ಸರ್ವೋತ್ತಮನಾದ ವ್ಯಕ್ತಿ ಪ್ರಾಣನೆಂದೇ ತಿಳಿಯುತ್ತದೆ. ಈ ಪ್ರಾಣಶಬ್ದದಿಂದ ಪ್ರತಿಪಾದ್ಯನಾದವನು ವಿಷ್ಣುವೇ ಆಗಿದ್ದಾನೆ ಹೊರತು, ಮುಖ್ಯಪ್ರಾಣದೇವರಲ್ಲ. ಆದ್ದರಿಂದ ವಿಷ್ಣುವೇ ಭೂಮನೆನಿಸುತ್ತಾನೆಂಬುದು ಒಟ್ಟು ಅಭಿಪ್ರಾಯ.



• • • • •

## ವ್ಯತಿಹಾರಾದ್ಯಧಿಕರಣಗಳಿಂದ ಇದು ಗತಾರ್ಥವಲ್ಲ

### तात्पर्यचन्द्रिका

**नचैवमिह पूर्वपक्षानुदयः । व्यतिहार इत्यत्रोक्तोऽध्याहारो न युक्तः ।**

ಅನುವಾದ - 'ವ್ಯತಿಹಾರೋ ವಿಶಿಂಷಂತಿ' ಎಂಬ ಸೂತ್ರದಲ್ಲಿ ಹೇಳುವಂತೆ 'ಅಸ್ತಿ ಭಗವಃ ಪ್ರಾಣಾದ್ ಭೂಯಃ' ಎಂಬ ಪ್ರಶ್ನೆ ಹಾಗೂ ಉತ್ತರಗಳನ್ನು ಅಧ್ಯಾಹಾರ ಮಾಡಿಕೊಳ್ಳುವುದಾದರೆ ಪೂರ್ವಪಕ್ಷವೇ ಇಲ್ಲಿ ಹುಟ್ಟಲು ಸಾಧ್ಯವಿಲ್ಲವಲ್ಲವೇ? ಎಂದು ಪ್ರಶ್ನಿಸಬಾರದು. ಏಕೆಂದರೆ 'ವ್ಯತಿಹಾರೋ ವಿಶಿಂಷಂತಿ' ಎಂಬ ಸೂತ್ರದಲ್ಲಿ ಹೇಳಲ್ಪಟ್ಟ ಅಧ್ಯಾಹಾರವು ಈ ಅಧಿಕರಣದಲ್ಲಿ ಒಪ್ಪಲು ಸಾಧ್ಯವೇ ಇಲ್ಲ.

**तुशब्दस्य ''विज्ञानं त्वेव विजिज्ञासितव्यम्'' इति सत्यानन्तरमुक्तेषु विज्ञानादिष्विवाभेदेऽप्युपपत्तेः ।**

ಏಕೆಂದರೆ 'ಏಷ ತು ವಾ ಅತಿವದತಿ' ಎಂಬಲ್ಲಿರುವ 'ತು' ಎಂಬ ಶಬ್ದದ ಬಲದಿಂದ ಪ್ರಶ್ನೋತ್ತರಗಳನ್ನು ಅಧ್ಯಾಹಾರ ಮಾಡಿಕೊಳ್ಳುವಿರಾದರೆ 'ವಿಜ್ಞಾನಂ ತ್ವೇವ ವಿಜಿಜ್ಞಾಸಿತವ್ಯಮ್' ಇತ್ಯಾದಿ 'ಸತ್ಯ'ನ ವಿಚಾರ ಹೇಳಿ, ಮುಂದೆ ಹೇಳಿರುವ ಹದಿನಾಲ್ಕು ಸ್ಥಳಗಳಲ್ಲಿಯೂ 'ತು' ಶಬ್ದವು ಕೇಳಿಸುತ್ತಿದೆ. ಹಾಗಾದರೆ ಇಲ್ಲಿಯೂ ಸಹ ವಿಜ್ಞಾನ ಮೊದಲಾದವುಗಳು ವಿಷ್ಣುವಿಗಿಂತ ಉತ್ತಮವೆಂದು ಹೇಳಬೇಕಾದೀತು. ಆದರೆ ಹಾಗೇ ಒಪ್ಪದೆ ವಿಷ್ಣುವಿಗಿಂತ ವಿಜ್ಞಾನಾದಿಗಳಿಗೆ ಅಭೇದವನ್ನೇ ಒಪ್ಪುತ್ತೀರಿ. ಆದ್ದರಿಂದ 'ತು' ಶಬ್ದಕ್ಕೆ ಅಧ್ಯಾಹಾರಾರ್ಥವನ್ನು ಹೇಳದೇ ಅಭೇದಾರ್ಥವನ್ನು ಹೇಳಿ ಕೂಡಿಸಬೇಕು.

**विज्ञानादीनां च सत्याभेदः ''सैव हि सत्यादयः'' इत्यधिकरणसिद्ध इति प्राप्ते,**

ವಿಜ್ಞಾನ ಮೊದಲಾದವುಗಳಿಗೆ ಸತ್ಯನಾಮಕನಾದ ಪರಮಾತ್ಮನಿಂದ ಅಭೇದವೇ ಇರುತ್ತದೆಂದು 'ಸೈವ ಹಿ ಸತ್ಯಾದಯಃ' ಇತ್ಯಾದಿ ಅಧಿಕರಣಗಳಲ್ಲಿ ಸಿದ್ಧವಾಗಿದೆ. ಆದ್ದರಿಂದ 'ತು' ಶಬ್ದವಿದ್ದರೂ ಇಲ್ಲಿ ಹೇಗೆ ಪ್ರಶ್ನೋತ್ತರಗಳನ್ನು ಅಧ್ಯಾಹಾರ ಮಾಡಿಕೊಂಡು ವಿಷ್ಣುವಿಗಿಂತ ವಿಜ್ಞಾನಾದಿಗಳು ಉತ್ತಮವೆಂದು

ಸಿದ್ಧಾಂತಿಗಳು ಒಪ್ಪುವುದಿಲ್ಲವೋ, ಅದರಂತೆ 'ಏಷ ತು ವಾ' ಎಂಬಲ್ಲಿರುವ 'ತು' ಶಬ್ದದಿಂದಲೂ ಅಧ್ಯಾಹಾರ ಮಾಡಿಕೊಳ್ಳಬೇಕಾಗಿಲ್ಲ. ಅಂದರೆ 'ವ್ಯತಿಹಾರೋ ವಿಶಿಂಷಂತಿ' ಎಂಬ ಸೂತ್ರದಲ್ಲಿ ಸೂತ್ರಕಾರರು ಹೇಳುವುದನ್ನು ಇಲ್ಲಿ ಅಂಗೀಕರಿಸಿಲ್ಲವೆಂದು ಪೂರ್ವಪಕ್ಷ.

**श्रुत्यन्तरे प्राणादेकस्यैवाधिकस्योक्तेः 'एष तु' इत्यत्र तुशब्दोऽध्याहार-कल्पकः । 'विज्ञानं तु' इत्यादौ तु सत्याख्यब्रह्मण्येव धर्मान्तराभिप्रायत्वान्न तत्कल्पक इति सिद्धान्तस्येहाभिप्रेतत्वात् ।**

ಬೇರೆ ಶ್ರುತಿಯಲ್ಲಿ ಮುಖ್ಯಪ್ರಾಣದೇವರಿಗಿಂತ ಒಬ್ಬನಿಗೆ ಮಾತ್ರ ಉತ್ತಮತ್ವವು ಹೇಳಲ್ಪಟ್ಟಿದೆ. ಆದ್ದರಿಂದ 'ಏಷ ತು ವಾ' ಎಂಬಲ್ಲಿರುವ 'ತು' ಶಬ್ದವು ಪ್ರಶ್ನೋತ್ತರಗಳ ಅಧ್ಯಾಹಾರಕ್ಕೆ ಕಲ್ಪಕವಾಗುತ್ತದೆ. ಆದರೆ 'ವಿಜ್ಞಾನಂ ತು' ಇತ್ಯಾದಿ ವಾಕ್ಯಗಳಲ್ಲಿರುವ 'ತು' ಶಬ್ದವು ಸತ್ಯನೆಂಬ ಬ್ರಹ್ಮನಲ್ಲಿಯೇ ಮತ್ತೊಂದು ಧರ್ಮವನ್ನು ಹೇಳಲು ಸಾರ್ಥಕ್ಯವನ್ನು ಹೊಂದಿದೆ ಹೊರತು, ಪ್ರಶ್ನೋತ್ತರಗಳಿಗೆ ಕಲ್ಪಕವಾಗುವುದಕ್ಕಲ್ಲ. ಆದ್ದರಿಂದ 'ವಿಜ್ಞಾನಂ ತು' ಎಂಬಲ್ಲಿರುವ 'ತು' ಶಬ್ದದಿಂದ 'ಏಷ ತು ವಾ' ಎಂಬಲ್ಲಿರುವ 'ತು' ಶಬ್ದದಂತೆ ಪ್ರಶ್ನೋತ್ತರವನ್ನು ಅಧ್ಯಾಹಾರ ಮಾಡಿಕೊಳ್ಳಬೇಕಾಗಿಲ್ಲವೆಂದು ಈ ಅಧಿಕರಣದ ಸಿದ್ಧಾಂತ.

**अत एव प्राणाद्भूम्नो भूयस्त्वोक्तिरूपा सिद्धान्तयुक्तिरधिकरणान्तर-व्युत्पाद्यत्वादिहानुव्याख्याने "अनुक्तिश्च" इति चशब्देनोक्ता । प्राणस्य विष्णुतो भूयस्त्वानुक्तिस्तु "अनुक्ति" इति स्वशब्देनोक्ता ।**

ಆದ್ದರಿಂದಲೇ ಪ್ರಾಣನಿಗಿಂತ ವಿಷ್ಣು ಉತ್ತಮನಾಗಿದ್ದಾನೆಂಬ 'ಉಕ್ತಿ'ರೂಪವಾದ ಸಿದ್ಧಾಂತ ಯುಕ್ತಿಯು ಬೇರೆ ಅಧಿಕರಣದಿಂದ ವ್ಯುತ್ಪಾದ್ಯವಾಗಿದೆ. ಈ ಕಾರಣದಿಂದ ಅನುವ್ಯಾಖ್ಯಾನದಲ್ಲಿ 'ಅನುಕ್ತಿಶ್ಚ' ಎಂಬಲ್ಲಿರುವ 'ಚ' ಶಬ್ದದಿಂದ 'ಉಕ್ತಿ' ಎಂಬುದನ್ನು ಹೇಳಿರುತ್ತಾರೆ. ಆದರೆ ವಿಷ್ಣುವಿಗಿಂತ ಪ್ರಾಣನು ಉತ್ತಮನಲ್ಲ ಎಂಬ ಅನುಕ್ತಿಯನ್ನು 'ಅನುಕ್ತಿಃ' ಎಂಬ ಶಬ್ದದಿಂದಲೇ ಹೇಳಿರುತ್ತಾರೆ.

**तदुक्तं न्यायविवरणे "प्राणस्य विष्णोस्सकाशाद्भूयस्त्वानुक्तिः । चशब्देन 'एष तु वा अतिवदति यः सत्येनातिवदति' इति प्राणाद्विष्णोर्भूयस्त्वोक्तिश्च" इति ।**

'ಅನುಕ್ತಿಶ್ಚ' ಎಂಬ ಅನುವ್ಯಾಖ್ಯಾನದ ನ್ಯಾಯವನ್ನೇ ವಿವರಿಸಲು ಹೊರಟ ನ್ಯಾಯವಿವರಣದಲ್ಲಿ 'ಪ್ರಾಣಸ್ಯ ವಿಷ್ಣೋಸ್ಸಕಾಶಾದ್ಭೂಯಸ್ತ್ವಾನುಕ್ತಿಃ । ಚಶಬ್ದೇನ 'ಏಷ ತು ವಾ ಅತಿವದತಿ ಯಃ ಸತ್ಯೇನಾತಿವದತಿ' ಇತಿ ಪ್ರಾಣಾದ್ವಿಷ್ಣೋರ್ಭೂಯಸ್ತ್ವೋಕ್ತಿಶ್ಚ' 'ಮುಖ್ಯಪ್ರಾಣದೇವರು ವಿಷ್ಣುವಿನ

ದೆಸೆಯಿಂದ ಉತ್ತಮರಾಗಿದ್ದಾರೆಂದು ಹೇಳದಿರುವಿಕೆಯು ಮತ್ತು 'ಚ' ಶಬ್ದದಿಂದ 'ಏಷ ತು ವಾ ಅತಿವದತಿ, 'ಯಃ ಸತ್ಯೇನಾತಿವದತೀ' ಎಂಬುದಾಗಿ ಮುಖ್ಯಪ್ರಾಣದೇವರಿಗಿಂತ ವಿಷ್ಣು ಉತ್ತಮನಾಗಿದ್ದಾನೆಂಬ ಹೇಳುವಿಕೆಯನ್ನು ಸ್ವೀಕರಿಸಬೇಕು' ಎಂಬುದಾಗಿ ಸ್ಪಷ್ಟಪಡಿಸಿದ್ದಾರೆ.

**प्राणस्य विष्णोः सकाशाद्भूयस्त्वानुक्तिस्त्वनन्यथासिद्धा । प्रश्नाद्यध्याहार-कल्पकाभावात् ।**

ಆದ್ದರಿಂದ ವಿಷ್ಣುವಿನ ದೆಸೆಯಿಂದ ಮುಖ್ಯಪ್ರಾಣದೇವರಿಗೆ ಭೂಯಸ್ತ್ವವನ್ನು ಹೇಳದ ಕಾರಣ 'ಭೂಯಸ್ತ್ವಅನುಕ್ತಿ' ಎಂಬ ಲಿಂಗವು ಅನ್ಯಥಾಸಿದ್ಧವಾದ್ದರಿಂದ ನಿರವಕಾಶವಾಗಿ ಬಲಿಷ್ಠವಾಗಿದೆ. ನಾವೂ ಸಹ ಪ್ರಶ್ನೋತ್ತರಗಳನ್ನು ಅಧ್ಯಾಹಾರ ಮಾಡಿಕೊಳ್ಳುತ್ತೇವೆಂದು ಪೂರ್ವಪಕ್ಷಿಗಳಿಗೆ ಉತ್ತರಿಸಲಾಗದು. ಏಕೆಂದರೆ ಪ್ರಶ್ನೋತ್ತರಗಳನ್ನು ಅಧ್ಯಾಹಾರ ಮಾಡಿಕೊಳ್ಳಲು ಬೇಕಾಗಿರುವ ಯಾವುದೇ ಕಲ್ಪಕಗಳು ಶ್ರುತಿಯಲ್ಲಿ ಕಾಣಿಸುತ್ತಿಲ್ಲ.

**प्रकाशः –**

**तेन गतार्थत्वमाशङ्क्य तदाक्षेपेणास्य प्रवृत्तिरित्याह – न चैवमित्यादिना ।।**

'ವ್ಯತಿಹಾರೋ ವಿಶಿಂಷಂತಿ' ಎಂಬ ಸೂತ್ರದಲ್ಲಿ ಪ್ರಶ್ನೋತ್ತರಗಳನ್ನು ಅಧ್ಯಾಹಾರ ಮಾಡಿಕೊಳ್ಳಬೇಕೆಂದು ಸಮರ್ಥಿಸುತ್ತಾರೆಂದು ಹೇಳಿದಿರಿ. ಹಾಗಾದರೆ ಆ ಸೂತ್ರದಲ್ಲಿ ಪ್ರತಿಪಾದಿಸಿದ ವಿಷಯವನ್ನೇ ಇಲ್ಲಿಯೂ ಪ್ರತಿಪಾದಿಸುತ್ತಿರುವುದರಿಂದ ಪುನರುಕ್ತಿ ಬರುತ್ತದಲ್ಲವೇ? ಎಂದು ಪ್ರಶ್ನಿಸಬಾರದು. 'ವ್ಯತಿಹಾರೋ ವಿಶಿಂಷಂತಿ' ಎಂಬ ಸೂತ್ರದ ಪ್ರಮೇಯವನ್ನೇ ಇಲ್ಲಿ ಆಕ್ಷೇಪಿಸುತ್ತಿರುವುದರಿಂದ ಪುನರುಕ್ತಿಗೆ ಅವಕಾಶವಿಲ್ಲವೆಂದು 'ನಚ ಏವಮ್' ಇತ್ಯಾದಿ ಗ್ರಂಥದಿಂದ ಪ್ರತಿಪಾದಿಸುತ್ತಿದ್ದಾರೆ.

**प्रकाशः – 'सैव हि' इति तदुत्तराधिकरणे प्राणात्सत्यशब्दितो विष्णुरेक एवोत्तम उत बहव इति संशये सत्यादुपरि विज्ञानमतिश्रद्धानिष्ठाकृतिसुखभूमाहङ्कारात्मना-मुक्तत्वाद्बहव इति प्राप्ते 'सत्यं भगवो विजिज्ञासे' इति सत्यनामकभगवद्गुण-जिज्ञासायां विज्ञानाद्युक्तेर्दाक्षायणयज्ञाद्युक्तेरिव प्रकृतस्यैव गुणकथनपरत्वेनैवोपपत्तेः सैव परदेवता सत्यादय इति वक्ष्यमाणत्वादिति भावः ।**

'ವ್ಯತಿಹಾರೋ ವಿಶಿಂಷಂತಿ' ಎಂಬ ಅಧಿಕರಣದ ಮುಂದಿನ ಅಧಿಕರಣದಲ್ಲಿ 'ಸೈವ ಹಿ ಸತ್ಯಾದಯಃ' ಎಂಬ ಸೂತ್ರವು ಪ್ರಸಕ್ತವಾಗಿದೆ. ಈ ಅಧಿಕರಣದಲ್ಲಿ ಮುಖ್ಯಪ್ರಾಣದೇವರಿಗಿಂತ ಸತ್ಯಶಬ್ದಪ್ರತಿಪಾದ್ಯನಾದ ವಿಷ್ಣುವೊಬ್ಬನೇ ಉತ್ತಮನೋ, ಅಥವಾ ಬಹಳಮಂದಿ ಉತ್ತಮರಿದ್ದಾರೋ ? ಎಂದು ಸಂಶಯ. ಸತ್ಯಶಬ್ದವಾಚ್ಯನಾದ ವ್ಯಕ್ತಿಗಿಂತಲೂ ವಿಜ್ಞಾನ, ಮತಿ, ಶ್ರದ್ಧಾ, ನಿಷ್ಠಾ, ಕೃತಿ, ಸುಖ, ಭೂಮಾ, ಅಹಂಕಾರ ಮೊದಲಾದ ಅನೇಕರನ್ನು ಹೇಳಿದ್ದರಿಂದ ಅನೇಕರು ಉತ್ತಮರಾಗಿದ್ದಾರೆಂದು ಪೂರ್ವಪಕ್ಷ. 'ಸತ್ಯಂ ಭಗವೋ

ವಿಜಿಜ್ಞಾಸೇ' ಎಂಬುದಾಗಿ ಸತ್ಯನಾಮಕನಾದ ಭಗವಂತನ ಗುಣಗಳ ಜಿಜ್ಞಾಸೆಯನ್ನು ಮಾಡುವಾಗ ವಿಜ್ಞಾನ, ಮತಿ ಮೊದಲಾದವುಗಳನ್ನು ಸನತ್ಕುಮಾರರು ಹೇಳಿರುತ್ತಾರೆ. ದಾಕ್ಷಾಯಣಯಜ್ಞಾದಿಗಳಲ್ಲಿ ಕೇವಲ ಗುಣಕಥನವನ್ನು ಹೇಗೆ ಮಾಡುತ್ತಾರೋ ಅದರಂತೆ ಪ್ರಕೃತನಾದ ಸತ್ಯನಾಮಕನಾದ ಪರಮಾತ್ಮನಲ್ಲಿ ವಿಜ್ಞಾನ ಮೊದಲಾದ ಗುಣಗಳನ್ನು ಚಿಂತನೆ ಮಾಡಿರುತ್ತಾರೆ. ಹೀಗೆ 'ಸೈವ ಹಿ ಸತ್ಯಾದಯಃ' ಎಂಬ ಸೂತ್ರದಲ್ಲಿ ಮುಂದೆ ಸಮರ್ಥಿಸುತ್ತಾರೆಂದು ತಿಳಿಯಬೇಕು.

**प्रकाशः – श्रुत्यन्तरे तैत्तिरीयादौ । अत एवेत्युक्तं व्यनक्ति – अधिकरणान्तर-व्युत्पाद्यत्वादिति ।। अनुव्याख्याने न्यायसङ्ग्रहानुव्याख्याने । इदानीं ''गत्यन्तरविवर्जिताः'' इत्युक्तसिद्धान्तीयानुक्तेर्निरवकाशत्वं व्यनक्ति – प्राणस्येति ।।**

'ಶ್ರುತ್ಯಂತರೇ' ಎಂದರೆ ತೈತ್ತಿರೀಯಾದಿ ಶ್ರುತಿಗಳಲ್ಲಿ ಎಂದರ್ಥ. 'ಅತ ಏವ' ಎಂಬುದನ್ನು 'ಅಧಿಕರಣಾಂತರವ್ಯುತ್ಪಾದ್ಯತ್ವಾತ್' ಎಂಬುದರಿಂದ ವ್ಯಾಖ್ಯಾನಿಸಿದ್ದಾರೆ. 'ಅನುವ್ಯಾಖ್ಯಾನೇ' ಎಂದರೆ 'ನ್ಯಾಯಗಳನ್ನು ಸಂಗ್ರಹಿಸುವ ಅನುವ್ಯಾಖ್ಯಾನದಲ್ಲಿ' ಎಂದರ್ಥ. ಪ್ರಕೃತ 'ಗತ್ಯಂತರವಿವರ್ಜಿತಾಃ' ಎಂದು ಹೇಳಲ್ಪಟ್ಟ ಸಿದ್ಧಾಂತದ ಅನುಕ್ತಿಯೆಂಬ ಲಿಂಗವನ್ನು ನಿರವಕಾಶವೆಂದು ಸಮರ್ಥಿಸುತ್ತಿದ್ದಾರೆ - 'ಪ್ರಾಣಸ್ಯ' ಇತ್ಯಾದಿ ವಾಕ್ಯದಿಂದ.

**गुरुराजीयम् – अनुक्तेरन्यथाप्युपपत्तेरिति** ।। गम्यमानत्वादप्रयोग इति तु शब्दकार्यप्रश्नप्रतिवचनानुक्तेः । अन्यथा विष्णोः प्राणोत्तमत्वाभावं विनाऽपि उपपत्तेरिति भावः । **व्यतिहार इत्यत्रोक्त इति** ।। एष्यदधिकरणपूर्वपक्षप्रवृत्तेरेतदधि-करणपूर्वपक्षदशायामेतदधिकरणसिद्धान्तानुन्मेषेण तेनास्य गतार्थतायाः वक्तुमशक्यत्वादिति न्यायस्य विपक्षे बाधकोक्त्या पूर्वमेवानेकश उपपादितत्वादभ्युपग-मवादेन वाऽत्रैवमुक्तिरिति ज्ञातव्यम् ।




'ವ್ಯತಿಹಾರೋ ವಿಶಿಂಷಂತಿ' ಎಂಬ ಸೂತ್ರದಲ್ಲಿಯೂ ಮುಂದೆ ಇದೇ ವಿಷಯವನ್ನು ಪ್ರತಿಪಾದಿಸುವರಿದ್ದಾರೆ. ಆದ್ದರಿಂದ ಪ್ರಶ್ನಪ್ರತಿವಚನಗಳನ್ನು ಉಪನಿಷತ್ತಿನಲ್ಲಿ ಅನುಸಂಧಾನ ಮಾಡಿಕೊಂಡು ವಿಷ್ಣುವೇ ಭೂಮನಾಗಿದ್ದಾನೆಂದು ಸಮರ್ಥಿಸುವುದು ಯುಕ್ತವಲ್ಲವೆಂದು ಹೇಳಬಾರದು. ಹಾಗೂ 'ವ್ಯತಿಹಾರೋ ವಿಶಿಂಷಂತಿ' ಎಂಬ ಸೂತ್ರದಲ್ಲಿ ಅಧ್ಯಾಹಾರ ಮಾಡಿಕೊಳ್ಳಬೇಕೆಂಬುದನ್ನು ಹೇಳಿದ್ದು ಸತ್ಯ. ಆದರೆ ಅದನ್ನೇ ಇಲ್ಲಿ ಆಕ್ಷೇಪ ಮಾಡುತ್ತಿರುವುದರಿಂದ ಪುನುರುಕ್ತಿಗೆ ಅವಕಾಶವಿಲ್ಲವೆಂದು ತಿಳಿಯಬೇಕು.

ಭೂಮಾಧಿಕರಣ (೧-೩-೨)

ನ್ಯಾಯವಿವರಣ ಹಾಗೂ ಛಾಂದೋಗ್ಯ ಭಾಷ್ಯಗಳಲ್ಲಿ ಪ್ರಾಣಶಬ್ದಕ್ಕೆ ಮುಖ್ಯಪ್ರಾಣನೆಂದೇ ವ್ಯಾಖ್ಯಾನಿಸಿದ್ದಾರೆ. ಹಾಗಾದರೆ ಶ್ರುತಿಯಲ್ಲಿ ವಿಷ್ಣುವನ್ನು ಉಲ್ಲೇಖಿಸಿದಂತೆಯೇ ಆಗಲಿಲ್ಲವಲ್ಲಾ? ಎಂದು ಪ್ರಶ್ನಿಸಬಾರದು. ಮುಖ್ಯಪ್ರಾಣದೇವರ ಅನಂತರ ಸತ್ಯವು ಪ್ರಸ್ತುತವಾಗಿದೆ. ಅಂತಹ ಸತ್ಯಶಬ್ದದಿಂದ ವಿಷ್ಣುವೇ ಪ್ರತಿಪಾದ್ಯನೆಂದು ತಿಳಿಯಬೇಕು. ಆದ್ದರಿಂದಲೇ 'ಏವಂ ವಿಜಾನನ್ ಅತಿವಾದೀ' ಎಂದು ಮುಖ್ಯಪ್ರಾಣದೇವರನ್ನು ಯಾರು ತಿಳಿಯುತ್ತಾರೋ, ಅವನನ್ನು 'ಅತಿವಾದಿ' ಅಂದರೆ ಅಧಿಕಜ್ಞಾನಿಯೆಂದು ಶ್ರುತಿಯು ಪ್ರಶಂಸಿಸಿದೆ. ಅನಂತರ 'ಏಷ ತು ವಾ ಅತಿವದತಿ ಯಃ ಸತ್ಯೇನಾತಿವದತಿ' ಎಂಬುದಾಗಿ ಯಾರು ಸತ್ಯಸ್ವರೂಪನಾದ ಬ್ರಹ್ಮನನ್ನು ತಿಳಿಯುತ್ತಾರೋ ಅವನು ಅತ್ಯಧಿಕವಾದ ಜ್ಞಾನಿ ಎಂಬುದಾಗಿ 'ತು' ಶಬ್ದವು ಅತಿಶಯವನ್ನು ತಿಳಿಸುತ್ತಿದೆ. ಆದ್ದರಿಂದ ಸತ್ಯಶಬ್ದದಿಂದ ಪರಬ್ರಹ್ಮನೇ ಪ್ರತಿಪಾದ್ಯನೆಂದು ಸಿದ್ಧವಾಗುತ್ತದೆ. ಆದ್ದರಿಂದ ಶ್ರುತಿಯಲ್ಲಿ ವಿಷ್ಣುವಿನ ಉಲ್ಲೇಖವಿದೆ ಎಂದು ಸಿದ್ಧವಾಗುತ್ತದೆ.

• • • • •

## ಪ್ರಾಣಶಬ್ದಾರ್ಥ ವಿಷಯದಲ್ಲಿ ಭಾಷ್ಯ ಹಾಗೂ ನ್ಯಾಯವಿವರಣೆಗಳಿಗೆ ವಿರೋಧವಿಲ್ಲ

### तात्पर्यचन्द्रिका

**नन्वत्र ''प्राणो वा आशायाः'' इत्यत्र प्राणो विष्णुरित्युपेत्य भाष्ये सिद्धान्तितम् । न्यायविवरणे तु मुख्यवायुरित्युपेत्य ।**

ಅನುವಾದ - ಆಕ್ಷೇಪ - 'ಪ್ರಾಣೋ ವಾ ಆಶಾಯಾ ಭೂಯಾನ್' ಎಂಬಲ್ಲಿರುವ ಪ್ರಾಣಶಬ್ದವು ವಿಷ್ಣುಪರವಾಗಿದೆ ಎಂಬರ್ಥವನ್ನು ಅಂಗೀಕರಿಸಿ ಭಾಷ್ಯದಲ್ಲಿ ಸಿದ್ಧಾಂತ ಮಾಡಿದ್ದಾರೆ. ಆದರೆ ನ್ಯಾಯವಿವರಣದಲ್ಲಿ ಪ್ರಾಣಶಬ್ದವು ಮುಖ್ಯಪ್ರಾಣಪರವಾಗಿದೆಯೆಂದು ಅಂಗೀಕರಿಸಿ ಸಿದ್ಧಾಂತ ಮಾಡಿದ್ದಾರೆ.

**तद्विरुद्धम् । न चार्थद्वयस्य वैकल्पिकत्वादेवाविरोधः । प्राणस्य विष्णुत्वपक्षे ''एष तु वा अतिवदति'' इति तुशब्दायोगात् ।**

ಒಂದೇ ಪ್ರಾಣಶಬ್ದಕ್ಕೆ ವಿಷ್ಣು ಹಾಗೂ ಮುಖ್ಯಪ್ರಾಣ ಎಂಬೆರಡು ಅರ್ಥವನ್ನು ಒಪ್ಪುವುದು ವಿರುದ್ಧವಾಗಿದೆ. ವಿಕಲ್ಪವನ್ನು ಆಶ್ರಯಿಸಿದಾಗ ವಿರೋಧಕ್ಕೆ ಅವಕಾಶವಿಲ್ಲವಲ್ಲವೇ? ಎಂದು ಕೇಳಬಾರದು. ಪ್ರಾಣಶಬ್ದದಿಂದ ವಿಷ್ಣುವೇ ಪ್ರತಿಪಾದ್ಯನಾದ ಮೇಲೆ 'ಏಷ ತು ವಾ ಅತಿವದತಿ' ಎಂಬಲ್ಲಿರುವ ಅತಿಶಯಿತತ್ವವೆಂಬ ಅರ್ಥವನ್ನು ಹೇಳುವ 'ತು' ಶಬ್ದವು ಅಯುಕ್ತವಾಗುತ್ತದೆ.

**आशाशब्दोक्तसरस्वतीतो मुख्यवायोरुत्तमत्वमनुक्त्वा विष्णोरेव तदुक्त्ययोगाच्च ।**

ಮತ್ತು 'ಆಶಾ' ಎಂಬ ಶಬ್ದದಿಂದ ಪ್ರತಿಪಾದ್ಯಳಾದ ಸರಸ್ವತೀದೇವಿಗಿಂತ ಮುಖ್ಯಪ್ರಾಣದೇವರಿಗೆ ಉತ್ತಮತ್ವವನ್ನು ಹೇಳದೇ ನೇರವಾಗಿ ವಿಷ್ಣುವಿಗೆ ಉತ್ತಮತ್ವವನ್ನು ಹೇಳುವುದು ಅಯುಕ್ತ. ಆದ್ದರಿಂದ ಇದೂ ಸಹ ತಪ್ಪಾಗುತ್ತದೆ.

**नच प्राणस्य मुख्यवायुत्वेऽपि श्रीतत्त्वस्य तत उत्तमत्वमनुक्त्वा विष्णोस्तदुक्तिरयुक्तेति वाच्यम् ।**

ಇನ್ನು ಪ್ರಾಣಶಬ್ದವು ಮುಖ್ಯಪ್ರಾಣಪರವಾದರೂ ಸಹ ಮುಖ್ಯಪ್ರಾಣದೇವರಿಗಿಂತ ಲಕ್ಷ್ಮೀದೇವಿಗೆ ಉತ್ತಮತ್ವವನ್ನು ಹೇಳದೇ ವಿಷ್ಣುವಿಗೆ ಉತ್ತಮತ್ವವನ್ನು ಹೇಳುವುದು ಅಯುಕ್ತವಲ್ಲವೇ? ಎಂದು ಪ್ರಶ್ನಿಸಬಾರದು. ಲಕ್ಷ್ಮೀದೇವಿಗೆ ಉತ್ತಮತ್ವವನ್ನು ಹೇಳದಿರಲು ಕಾರಣವಿದೆ -

**'नामादयस्तु बद्धत्वान्मोचकत्वात्परोऽपि च ।**

**उभयोरप्यभावेन यथाऽव्यक्तं न तूदितम् ।।'**

**इति वचनेनैव तदनुक्तेर्गत्युक्तेः ।**

'ನಾಮಾದಯಸ್ತು ಬದ್ಧತ್ವಾನ್ಮೋಚಕತ್ವಾತ್ಪರೋऽಪಿ ಚ । ಉಭಯೋರಪ್ಯಭಾವೇನ ಯಥಾऽವ್ಯಕ್ತಂ ನ ತೂದಿತಮ್ ।' 'ನಾಮ, ವಾಗಾದಿಗಳು ಬದ್ಧವಾದ್ದರಿಂದ ಉತ್ತಮವೆಂದು ಹೇಳಲ್ಪಟ್ಟಿವೆ. ವಿಷ್ಣು ಮೋಚಕನಾದ್ದರಿಂದ ಉತ್ತಮನೆಂದು ಉಕ್ತನಾಗಿದ್ದಾನೆ. ಬದ್ಧತ್ವ ಹಾಗೂ ಮೋಚಕತ್ವ ಎರಡೂ ಇಲ್ಲದ ಕಾರಣ ಲಕ್ಷ್ಮೀದೇವಿಗೆ ಉತ್ತಮತ್ವವನ್ನು ಹೇಳುವ ಪ್ರಸಕ್ತಿ ಶ್ರುತಿಯಲ್ಲಿರುವುದಿಲ್ಲ' ಎಂಬ ಮಾತಿನಿಂದ ಲಕ್ಷ್ಮೀದೇವಿಯನ್ನು ಉಲ್ಲೇಖಿಸದಿರಲು ಕಾರಣವನ್ನು ಹೇಳಲಾಗಿದೆ.

**''इयदामननात्'' इत्याद्यधिकरणैश्छान्दोग्यभाष्येण च विरोधाच्च । तत्र नित्यवद्वायुपरताया उक्तत्वादिति चेन्न ।**

ಮತ್ತು ಪ್ರಾಣಶಬ್ದವು ವಿಷ್ಣುಪರವಾದರೆ 'ಇಯದಾಮನನಾತ್' 'ವ್ಯತಿಹಾರೋ ವಿಶಿಂಷಂತಿ' 'ಸೈವ ಹಿ ಸತ್ಯಾದಯಃ' ಇವೇ ಮೊದಲಾದ ಅಧಿಕರಣಗಳಿಂದ ಮತ್ತು ಛಾಂದೋಗ್ಯಭಾಷ್ಯದಿಂದಲೂ ವಿರೋಧ ಬರುತ್ತದೆ. ಇವುಗಳಲ್ಲಿ ಪ್ರಾಣಶಬ್ದವು ಮುಖ್ಯಪ್ರಾಣಪರವೆಂದೇ ನಿರ್ಣಯಿಸಲಾಗಿದೆ. 'ಯತೋ ವಾ ಇಮಾನಿ ಭೂತಾನಿ ಜಾಯಂತೇ' ಇತ್ಯಾದಿ ವಾಕ್ಯಗಳಿಗೆ ವ್ಯವಸ್ಥಿತವಾಗಿ ಒಂದೇ ಅರ್ಥವನ್ನು ಹೇಳುವಂತೆ ಪ್ರಾಣಶಬ್ದಕ್ಕೂ ಸಹ ನಿತ್ಯವಾಗಿ ಒಂದೇ ಅರ್ಥವನ್ನು ಹೇಳಬೇಕೆಂದು ಅವುಗಳಲ್ಲಿ ನಿರ್ಣಯಿಸಿದ್ದಾರೆ. ಆದ್ದರಿಂದ ನ್ಯಾಯವಿವರಣದಲ್ಲಿ ಹೇಳಿದ ಪ್ರಕಾರ ಪ್ರಾಣಶಬ್ದವು

ಮುಖ್ಯಪ್ರಾಣಪರವೆಂದೇ ಹೇಳಬೇಕು. ಹೀಗೆ ಹೇಳಿದಾಗ ಭಾಷ್ಯದಲ್ಲಿ ವಿಷ್ಣುಪರವೆಂದು ಹೇಳಿದ್ದು ತಪ್ಪಲ್ಲವೇ?

**वायुपरत्वेऽपि ''आत्मन आकाशः सम्भूतः'' इत्यादावाकाशादिशब्दानामिवा-न्तर्यामिपरत्वस्यापि सम्भवेन भाष्ये तदुक्तेः ।**

ಸಮಾಧಾನ - ಪ್ರಾಣಶಬ್ದವು ಮುಖ್ಯಪ್ರಾಣನನ್ನು ಪ್ರತಿಪಾದನೆ ಮಾಡಿದರೂ ಸಹ 'ಆತ್ಮನ ಆಕಾಶಃ ಸಂಭೂತಃ' ಇತ್ಯಾದಿ ಸ್ಥಳಗಳಲ್ಲಿ 'ಆಕಾಶ' ಶಬ್ದವು ಭೂತಾಕಾಶವನ್ನು ಪ್ರತಿಪಾದನೆ ಮಾಡುವುದಲ್ಲದೇ ವಿಷ್ಣುವನ್ನೂ ಸಹ ಹೇಗೆ ಪ್ರತಿಪಾದಿಸುತ್ತದೋ, ಅದರಂತೆ ವಾಯುಶಬ್ದವು ವಿಷ್ಣುವನ್ನೂ ಸಹ ಪ್ರತಿಪಾದನೆ ಮಾಡಬಹುದು. ಮುಖ್ಯಪ್ರಾಣನಲ್ಲಿ ವಿಷ್ಣು ಅಂತರ್ಯಾಮಿಯಾಗಿರುವುದರಿಂದ ಅಂತರ್ಯಾಮಿ ವಿವಕ್ಷೆಯಿಂದ ಆಕಾಶಶಬ್ದದಂತೆ ಪ್ರಾಣನೆಂದೂ ಸಹ ಅವನನ್ನು ಕರೆಯಬಹುದು. ಈ ಅಭಿಪ್ರಾಯದಿಂದ ಭಾಷ್ಯಕಾರರು ಹಾಗೆ ಪ್ರಯೋಗ ಮಾಡಿದ್ದಾರೆ.

**तदुक्तिश्च पूर्वपक्षवन्न केवलं वायुपरत्वमिति स्वरूपकीर्तनार्थं वा प्राणान्तर्यामित्वेनैव प्राणाद्भूयस्त्वं लब्धमिति परिहारान्तरोक्त्यर्थं वा 'सम्भूतः' इत्यत्र च भवनवदिहोत्क्रमणस्यापि वक्तव्यत्वेन प्रसङ्गादुत्क्रमणलिङ्गसमन्वयार्थं वेति द्रष्टव्यम् ।**

ಭಾಷ್ಯದಲ್ಲಿ ಪ್ರಾಣಶಬ್ದದಿಂದ ವಿಷ್ಣುವನ್ನು ಪ್ರತಿಪಾದ್ಯನೆಂದು ಹೇಳಲು ಅನೇಕ ಕಾರಣಗಳಿವೆ. ಪೂರ್ವಪಕ್ಷದಲ್ಲಿ ಪ್ರಾಣಶಬ್ದವು ಕೇವಲ ವಾಯುಪರವೆಂದು ಒಪ್ಪುತ್ತಾರೆ. ಆದರೆ ಸಿದ್ಧಾಂತದಲ್ಲಿ ಪ್ರಾಣಶಬ್ದವು ಕೇವಲ ವಾಯುಪರವಲ್ಲ. ಅಂತರ್ಯಾಮಿಯಾದ ಪರಮಾತ್ಮನನ್ನೂ ಸಹ ಪ್ರತಿಪಾದಿಸುತ್ತದೆಂಬ ವಾಸ್ತವ ವಿಚಾರವನ್ನು ತಿಳಿಸಬೇಕಾಗಿದೆ. ಅಥವಾ ಮುಖ್ಯಪ್ರಾಣದೇವರಲ್ಲಿ ಅಂತರ್ಯಾಮಿಯಾಗಿರುವ ಪ್ರಯುಕ್ತ ಮುಖ್ಯಪ್ರಾಣದೇವರಿಗಿಂತ ವಿಷ್ಣು ಉತ್ತಮನಾಗಿದ್ದಾನೆಂದು ತಿಳಿಸಬೇಕಾಗಿದೆ. ಅಥವಾ 'ಆತ್ಮನ ಆಕಾಶಃ ಸಂಭೂತಃ' ಎಂಬಲ್ಲಿರುವ ಸಂಭೂತತ್ವಲಿಂಗವನ್ನು ವಿಷ್ಣುವಿನಲ್ಲಿ ಸಮರ್ಥಿಸಿದಂತೆ ಉತ್ಕ್ರಮಣವೆಂಬ ಲಿಂಗವನ್ನು ವಿಷ್ಣುವಿನಲ್ಲಿ ಸಮರ್ಥಿಸಬೇಕಾಗಿದೆ. ಈ ಎಲ್ಲಾ ಕಾರಣದಿಂದ ಭಾಷ್ಯದಲ್ಲಿ ಪ್ರಾಣಶಬ್ದವನ್ನು ವಿಷ್ಣುಪರವೆಂದು ಹೇಳಿದ್ದು ಸಾರ್ಥಕವಾಗಿದೆ.

**अत एव टीकायां ''प्राणशब्देनापि विष्णोरुक्तत्वात् । अस्तु वाऽयं प्राणो वायु'' इति ग्रन्थाभ्यां भाष्यन्यायविवरणोक्तपक्षौ विरोधमुद्भाट्य निरसितुमापाततो वैकल्पिकत्वेनोक्त्वा ''न चैतदर्थद्वयं विरुद्धम्'' इत्यनेन ग्रन्थेन तयोः समुच्चयेनाविरोध एव स्थापितः ।**

ಪರಿಪೂರ್ಣಚಂದ್ರಿಕಾ

ಆದ್ದರಿಂದಲೇ ಟೀಕೆಯಲ್ಲಿ 'ಪ್ರಾಣಶಬ್ದೇನಾಪಿ ವಿಷ್ಣೋರುಕ್ತತ್ವಾತ್ । ಅಸ್ತು ವಾಽಯಂ ಪ್ರಾಣೋ ವಾಯುಃ' ಎಂಬೆರಡು ಗ್ರಂಥಗಳಿಂದ ಭಾಷ್ಯ ಹಾಗೂ ನ್ಯಾಯವಿವರಣ ಪಕ್ಷಗಳಿಗೆ ವಿರೋಧವನ್ನು ಪ್ರಕಟಪಡಿಸಿ ಅವುಗಳ ವಿರೋಧವನ್ನು ಪರಿಹರಿಸುವುದಕ್ಕಾಗಿ ವಿಕಲ್ಪಪಕ್ಷವನ್ನು ಒಪ್ಪಬಹುದಲ್ಲವೇ? ಎಂದು ಉತ್ತರಿಸಿ 'ನ ಚೈತದರ್ಥದ್ವಯಂ ವಿರುದ್ಧಮ್' ಇತ್ಯಾದಿ ಗ್ರಂಥದಿಂದ ಸಮುಚ್ಚಯಪಕ್ಷವನ್ನು ಆಶ್ರಯಿಸುವ ಕಾರಣ ವಿರೋಧವಿಲ್ಲವೆಂದು ಸ್ಥಾಪನೆ ಮಾಡಿದ್ದಾರೆ.

**तत्वप्रदीपे तु ''अभ्युपगम्यवादत्वात्'' इत्यादिनाऽयं प्राणो विष्णुरित्यभ्युपेत्यवादेन भाष्यं प्रवृत्तमित्युक्तम् । तत्र भाष्यन्यायविवरणयोः पक्षभेदेन व्यवस्थितत्वाद्भाष्ये पूर्वपक्ष उत्क्रमणलिङ्गोक्तिः सिद्धान्ते ब्रह्मण्युत्क्रमणसमर्थनं च स्वरसम् ।**

ನ್ಯಾಯವಿವರಣಕ್ಕೆ ಭಾಷ್ಯದಿಂದ ಬಂದಂತಹ ವಿರೋಧವನ್ನು ತತ್ವಪ್ರದೀಪದಲ್ಲಿ ಮತ್ತೊಂದು ಬಗೆಯಲ್ಲಿ ಪರಿಹರಿಸಿದ್ದಾರೆ. 'ಅಭ್ಯುಗಪಮ್ಯವಾದತ್ವಾತ್' ಇತ್ಯಾದಿಯಾದ ವಾಕ್ಯದಿಂದ ಪ್ರಾಣನು ವಿಷ್ಣುವಾಗಿದ್ದಾನೆಂದು ಅಂಗೀಕಾರವಾದ ಮಾಡುವ ಮೂಲಕ ಭಾಷ್ಯವು ಹೊರಟಿರುತ್ತದೆಂದು ವ್ಯಾಖ್ಯಾನಿಸಿದ್ದಾರೆ. ಭಾಷ್ಯ ಹಾಗೂ ನ್ಯಾಯವಿವರಣಗಳು ಪಕ್ಷಭೇದದಿಂದ ವ್ಯವಸ್ಥಿತವಾಗಿರುತ್ತವೆ. ಭಾಷ್ಯದಲ್ಲಿ ಪೂರ್ವಪಕ್ಷ ಮಾಡುವಾಗ ಉತ್ಕ್ರಮಣವೆಂಬ ಲಿಂಗವು ಹಾಗೂ ಸಿದ್ಧಾಂತ ಮಾಡುವಾಗ ಬ್ರಹ್ಮನಲ್ಲಿ ಉತ್ಕ್ರಮಣವೆಂಬ ಕ್ರಿಯೆಯ ಸಮರ್ಥನೆಯೂ ಸ್ವರಸವಾಗುತ್ತದೆ.

**प्रकाशः –**

अत्र टीकायां भाष्योक्तं प्राणभूम्नोरुभयोरपि विष्णुत्वमुत्क्रमणलिङ्गं च समर्थ्याभेदपक्षमेव प्रतिष्ठाय ''अस्तु वाऽयं प्राणो वायुरेव'' इति भेदपक्षमपि भाष्यानुक्तमुक्त्वोपपाद्याभेदभेदपक्षायोरविरोधश्चोक्तः ।

ವಿವರಣೆ - ಟೀಕೆಯಲ್ಲಿ ಭಾಷ್ಯದ ಪ್ರಕಾರ ಪ್ರಾಣ ಹಾಗೂ ಭೂಮಾ ಇಬ್ಬರೂ ಸಹ ವಿಷ್ಣುವೇ ಆಗಿದ್ದಾರೆಂದು ಸಮರ್ಥಿಸಿ ಹಾಗೂ ಉತ್ಕ್ರಮಣವೆಂಬ ಲಿಂಗವನ್ನು ವಿಷ್ಣುವಿನಲ್ಲಿ ಸಮರ್ಥಿಸಿ ಅಭೇದಪಕ್ಷವನ್ನು ಸಮರ್ಥಿಸಿದ್ದಾರೆ. ಮತ್ತು 'ಅಸ್ತು ವಾಽಯಂ ಪ್ರಾಣೋ ವಾಯುರೇವ' ಎಂಬುದಾಗಿ ಭೇದಪಕ್ಷವನ್ನೂ ಸಹ ಭಾಷ್ಯದಲ್ಲಿ ಹೇಳಿ, ಅದನ್ನು ಸಮರ್ಥಿಸಿ, ಭೇದಪಕ್ಷ ಹಾಗೂ ಅಭೇದಪಕ್ಷಗಳಿಗೆ ಹೇಗೆ ವಿರೋಧ ಬರುವುದಿಲ್ಲವೋ, ಆ ಕ್ರಮದಲ್ಲಿ ಎರಡನ್ನೂ ಹೊಂದಿಸಿರುತ್ತಾರೆ.

**प्रकाशः** – अत्र भेदपक्षोक्तिस्समुच्चयेनाविरोधोक्तिश्च किं मूला किन्निमित्ता चेत्यतस्तदाशयं विवरितुमभेदपक्षमाक्षिपति – नन्विति ।।

ಹೀಗೆ ಟೀಕೆಯಲ್ಲಿ ಭೇದಪಕ್ಷವನ್ನು ಭಾಷ್ಯದಲ್ಲಿ ಹೇಳದಿದ್ದರೂ ಏಕೆ ಸ್ವೀಕರಿಸಿದರು? ಮತ್ತು ಸಮುಚ್ಚಯ ಪಕ್ಷವನ್ನು ಒಪ್ಪಿ ವಿರೋಧವಿಲ್ಲವೆಂದು ಪರಿಹಾರ ನೀಡುವುದಕ್ಕೆ ಏನು ಆಧಾರ ? ಮತ್ತು ಏನು ಕಾರಣ? ಎಂಬ ಪ್ರಶ್ನೆಗೆ ಟೀಕೆಯ ಅಭಿಪ್ರಾಯವನ್ನು ವಿವರಿಸುವವರಾಗಿ ಅಭೇದ ಪಕ್ಷವನ್ನು ಆಕ್ಷೇಪ ಮಾಡುತ್ತಿದ್ದಾರೆ 'ನನು' ಇತ್ಯಾದಿ ಗ್ರಂಥದಿಂದ.

**प्रकाशः – प्राणो विष्णुरित्युपेत्येति ।।** उत्क्रमणलिङ्गस्य हरौ समर्थनादेतदवगम्यत इति भावः ।

'ಪ್ರಾಣೋ ವಿಷ್ಣುರಿತ್ಯುಪೇತ್ಯ' ಎಂದು ಗ್ರಂಥದಲ್ಲಿದೆ. ಅಂದರೆ 'ವ್ಯತಿಹಾರೋ ವಿಶಿಂಷಂತಿ' ಇತ್ಯಾದಿ ಸೂತ್ರಗಳಲ್ಲಿ ಸಮರ್ಥಿಸುವಂತೆ ಉತ್ಕ್ರಮಣಲಿಂಗವು ವಿಷ್ಣುವಿನಲ್ಲಿಯೂ ಉಪಪನ್ನವಾಗುತ್ತದೆ. ಆದ್ದರಿಂದ ವಿಷ್ಣುವನ್ನು ಪ್ರಾಣನೆನ್ನಬಹುದೆಂದು ಅಭಿಪ್ರಾಯ.

**प्रकाशः – ननु ऋगादीनां परापरार्थद्वयवदिहापि विवक्षाभेदेन कदाचिदयं कदाचित्सोऽप्यर्थोऽस्तु को दोषः । अत एव 'अन्यमीशम्' इत्यस्यादृश्यत्वनयेऽन्योऽर्थो द्युभ्वादिनयेऽन्योऽर्थ उक्त इत्यत आह – नचेति ।।**

ಪ್ರಶ್ನೆ - ಋಗ್ವೇದಾದಿಗಳಲ್ಲಿ ಪರ ಅರ್ಥ ಅಪರಾರ್ಥ ಎಂಬುದಾಗಿ ಒಂದೇ ಸೂಕ್ತಕ್ಕೆ ಅನೇಕ ಬಗೆಯಲ್ಲಿ ಅರ್ಥೈಸುವುದು ಕಂಡಿದೆ. ಅದೇ ರೀತಿಯಾಗಿ ವಿವಕ್ಷಾಭೇದದಿಂದ ಒಂದೇ ಪ್ರಾಣಶಬ್ದವು ಮುಖ್ಯಪ್ರಾಣದೇವರನ್ನು ಹಾಗೂ ವಿಷ್ಣುವನ್ನು ಇಬ್ಬರನ್ನೂ ಸಹ ಪ್ರತಿಪಾದಿಸಬಹುದು. ಆದ್ದರಿಂದಲೇ 'ಜುಷ್ಟಂ ಯದಾ ಪಶ್ಯತ್ಯನ್ಯಮೀಶಮ್' ಎಂಬ ಶ್ರುತಿಗೆ ಅದೃಶ್ಯತ್ವಾದಿಗಳಲ್ಲಿ ದರ್ಶನಕರ್ತೃತ್ವೇನ ಪ್ರಸಕ್ತನಾದ ಜೀವ ಪ್ರತಿಯೋಗಿಕವಾದ ಭೇದವನ್ನು ವಿಷ್ಣುವಿನಲ್ಲಿ ಸಮರ್ಥಿಸಿದ್ದಾರೆ. ಆದರೆ ದ್ಯುಭ್ವಾದ್ಯಧಿಕರಣದ ಭೇದವ್ಯಪದೇಶ ಸೂತ್ರದಲ್ಲಿ ಲೋಕದಲ್ಲಿ ಈಶನೆಂದು ಪ್ರಸಿದ್ಧನಾದ ಯಾವ ರುದ್ರನಿದ್ದಾನೋ, ಅವನ ಭೇದವನ್ನು ವಿಷ್ಣುವಿನಲ್ಲಿ ಹೇಳಿದ್ದಾರೆ. ಹೀಗೆ 'ಜುಷ್ಟಂಯದಾ' ಎಂಬ ಒಂದೇ ಶ್ರುತಿಗೆ ಎರಡು ಅರ್ಥಗಳನ್ನು ವಿವಕ್ಷಾಭೇದದಿಂದ ಮಾಡಿದ್ದು ಕಂಡಿರುತ್ತದೆ. ಅದರಂತೆ ಒಂದೇ ಪ್ರಾಣಶಬ್ದಕ್ಕೆ ಎರಡು ಅರ್ಥಗಳನ್ನು ಏಕೆ ಹೇಳಬಾರದು?

ಉತ್ತರ - ಈ ಪ್ರಶ್ನೆಗೆ 'ನಚ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. ವಿಕಲ್ಪ ಮಾಡುವುದರಿಂದ ಎರಡೂ ಪಕ್ಷಗಳಿಗೆ ವಿರೋಧವಿಲ್ಲವೆಂದು ಹೇಳಬಾರದು. ಹಾಗಾದಲ್ಲಿ 'ತು' ಶಬ್ದವು ಅನುಪಪನ್ನವಾಗುತ್ತದೆ ಮತ್ತು ಭಾರತೀದೇವಿಗಿಂತ ಮುಖ್ಯಪ್ರಾಣದೇವರಿಗೆ ಉತ್ತಮತ್ವವನ್ನು ಹೇಳಿದಂತಾಗುವುದಿಲ್ಲ.

**प्रकाशः – प्राणभूम्नोर्भेदपक्षेऽपि दोषमाशङ्क्य निराह – नचेति ।। वचनेनेति ।।** तृतीये "कामादितरत्र तत्र चायतनादिभ्यः" इत्यत्र भाष्योक्तब्रह्मतर्कवचनेनेत्यर्थः ।

ಮುಖ್ಯಪ್ರಾಣ ಹಾಗೂ ಭೂಮಾ ಇಬ್ಬರೂ ಬೇರೆ ಎಂಬ ಪಕ್ಷದಲ್ಲಿಯೂ ದೋಷವನ್ನು ಆಕ್ಷೇಪಿಸಿ ನಿರಾಕರಿಸುತ್ತಿದ್ದಾರೆ 'ನಚ' ಇತ್ಯಾದಿ ಗ್ರಂಥದಿಂದ. 'ವಚನೇನ' ಎಂದರೆ ಮೂರನೇ ಅಧ್ಯಾಯದ 'ಕಾಮಾದಿತರತ್ರ ತತ್ರ ಚಾಯತನಾದಿಭ್ಯಃ' ಎಂಬ ಸೂತ್ರದ ಭಾಷ್ಯದಲ್ಲಿ ಉದಾಹರಿಸಲ್ಪಟ್ಟ ಬ್ರಹ್ಮತರ್ಕದ ಮಾತಿನಿಂದ ಎಂದರ್ಥ.

**प्रकाशः** – तत्र यथेत्यस्य ''श्रुतौ तथा जीवपरावुच्येते किञ्च नेतरत्'' इत्युत्तरार्धेनान्वयः । वैकल्पिकार्थद्वयपक्षे बाधकान्तरमाह – इयदिति ।। आदिपदेन 'व्यतिहारः' 'सैव हि' इत्यनयोर्ग्रहः ।

ಶ್ಲೋಕದಲ್ಲಿ 'ಯಥಾ' ಎಂಬ ಪದಕ್ಕೆ ಮುಂದಿನ ಶ್ಲೋಕದಲ್ಲಿರುವ 'ಶ್ರುತೌ ತಥಾ ಜೀವಪರಾವುಚ್ಯೇತೇ ಕಿಂಚ ನೇತರತ್' ಎಂಬ ಉತ್ತರಾರ್ಧದ ಜೊತೆಗೆ ಅನ್ವಯ ಮಾಡಬೇಕು. ಯಾವರೀತಿಯಾಗಿ ಅವ್ಯಕ್ತತತ್ವವು ಪ್ರತಿಪಾದ್ಯವಾಗಿಲ್ಲವೋ, ಅದರಂತೆ ಜೀವ ಹಾಗೂ ಪರಮಾತ್ಮರು ಮಾತ್ರ ಪ್ರತಿಪಾದ್ಯರಾಗಿದ್ದಾರೆ; ಬೇರೆ ಯಾವುದೂ ಪ್ರತಿಪಾದ್ಯವಾಗಿಲ್ಲ. ಎಂದು ಅಭಿಪ್ರಾಯ. ವಿಕಲ್ಪವನ್ನು ಆಶ್ರಯಿಸಿದ ಎರಡು ಪಕ್ಷಗಳಲ್ಲಿ ಮತ್ತೊಂದು ಬಾಧಕವನ್ನು ಹೇಳುತ್ತಿದ್ದಾರೆ 'ಇಯತ್' ಇತ್ಯಾದಿ ವಾಕ್ಯದಿಂದ. ಆದಿಪದದಿಂದ 'ವ್ಯತಿಹಾರಃ ವಿಶಿಂಷಂತಿ' 'ಸೈವ ಹಿ ಸತ್ಯಾದಯಃ' ಎಂಬೆರಡು ಸೂತ್ರಗಳನ್ನು ಸ್ವೀಕರಿಸಬೇಕು.

**प्रकाशः** – इयदामननादित्युपासनापादीयैकविंशाधिकरणे ह्युपासनाधिकारिणो नामवागादयः प्राणावसाना न वेति संशये नामादीनां सोत्तरत्वदर्शनात्प्राणादप्युत्त-माधिकारिसाधनसौलभ्यान्नामादयोऽधिकारिणो न प्राणावसाना इति प्राप्ते ''प्राणो वाव सर्वेभ्यो भूयान्'' इति श्रुतेरधिकारिणां इयत् छान्दोग्योक्तं प्राणावसायित्वमेवेति वक्ष्यमाणत्वादिति भावः ।

ಉಪಾಸನಾ ಪಾದದ ಇಪ್ಪತ್ತೊಂದನೆಯ ಅಧಿಕರಣದಲ್ಲಿ 'ಇಯದಾಮನನಾತ್' ಎಂಬ ಸೂತ್ರವಿದೆ. ಇದರಲ್ಲಿ ಮಾಡುವ ವಿಚಾರ ಹೀಗಿದೆ - 'ಉಪಸಾನಾಧಿಕಾರಿಗಳೆಲ್ಲರೂ ಪ್ರಾಣದೇವರೇ ಕೊನೆಯಾಗಿ ಉಳ್ಳವರೋ ಅಥವಾ ಬೇರೆಯವರೇ ಕೊನೆಯಾಗಿ ಉಳ್ಳವರಾಗಿದ್ದಾರೋ ಎಂದು ಸಂಶಯ. ನಾಮಾದಿಗಳಿಗೆ ಸೋತ್ತರತ್ವವು ಎಂದು ಕಾಣಿಸುತ್ತಿರುವುದರಿಂದ ಮುಖ್ಯಪ್ರಾಣದೇವರಿಗಿಂತಲೂ ಸಹ ಉತ್ತಮರು ಇರಬಹುದು. ಆದ್ದರಿಂದ ''ಪ್ರಾಣಃ, ಸೋತ್ತರಃ, ಉಪಾಸಕತ್ವಾತ್, ನಾಮವಾಗಾದಿವತ್'' ಎಂದು ಸಾಧಿಸಬಹುದು. ಆದ್ದರಿಂದ ಅಧಿಕಾರಿಗಳು ಮುಖ್ಯಪ್ರಾಣ ಕೊನೆಯಾಗಿ ಉಳ್ಳವರಲ್ಲ ಎಂದು ಪೂರ್ವಪಕ್ಷ. 'ಪ್ರಾಣೋ ವಾವ ಸರ್ವೇಭ್ಯೋ ಭೂಯಾನ್' ಎಂಬ ಶ್ರುತಿಯ ಆಧಾರದಿಂದ ಅಧಿಕಾರಿಗಳು ಇಯತ್ = ಇಷ್ಟೇ ಇದ್ದಾರೆಂದು ಛಾಂದೋಗ್ಯದಲ್ಲಿ ಮುಖ್ಯಪ್ರಾಣದೇವರ ತನಕ ಹೇಳಿದ್ದರಿಂದ ಅವರಿಗಿಂತ ಉತ್ತಮರಾದ ಅಧಿಕಾರಿಗಳಿಲ್ಲವೆಂದು ಮುಂದೆ ಸಮರ್ಥಿಸುತ್ತಾರೆ.

ಭೂಮಾಧಿಕರಣ (೧-೩-೨)

प्रकाशः –

तस्याः श्रेष्ठो मुख्यवायुः प्रकृष्टानां च नायकः ।
प्राणनामा न इत्येव ह्यानन्दस्समुदीरितः ।
आणा सरस्वती प्रोक्ता तत्प्रकृष्टसुखत्वतः ।
प्राण इत्युच्यते वायुस्सर्वे त्वेते दशोत्तरा ।।

इत्यादिछान्दोग्यभाष्येणेत्यर्थः ।

ಆಣಾನಾಮಕಳಾದ ಭಾರತೀದೇವಿಗಿಂತಲೂ ಮುಖ್ಯಪ್ರಾಣದೇವರೇ ಶ್ರೇಷ್ಠರಾಗಿದ್ದಾರೆ. ಪ್ರಕೃಷ್ಟವಾದ ನಾಯಕರಾದ್ದರಿಂದ ಅವರಿಗೆ 'ಪ್ರಾಣ' ಎಂದು ಹೆಸರು. ಅಥವಾ 'ನ' ಎಂದರೆ 'ಆನಂದ' ಎಂದರ್ಥ. 'ಆಣಾ' ಎಂದರೆ 'ಸರಸ್ವತೀ' ಎಂದರ್ಥ. ಅವಳಿಗಿಂತ ಉತ್ಕೃಷ್ಟವಾದ ಸುಖವನ್ನು ಹೊಂದಿರುವ ಪ್ರಯುಕ್ತ ವಾಯುದೇವರು ಪ್ರಾಣಶಬ್ದದಿಂದ ವಾಚ್ಯರಾಗಿದ್ದಾರೆ. ಹೀಗೆ ಎಲ್ಲ ದೇವತೆಗಳು ಅವರವರ ಯೋಗ್ಯತೆಗೆ ತಕ್ಕಂತೆ ಉತ್ತಮವಾದ ಆನಂದವನ್ನು ಪಡೆದಿರುತ್ತಾರೆ. ಹೀಗೆ ಛಾಂದೋಗ್ಯಭಾಷ್ಯದಲ್ಲಿ ಹೇಳಿರುತ್ತಾರೆ.

प्रकाशः – नित्यवदिति स्वार्थे वतिः । यद्वा व्यवस्थितैकार्थकेवाक्ये ''यतो वा इमानि भूतानि जायन्ते'' इत्यादौ यथोक्तिस्तथेत्यर्थः । इतरथा वायुर्वेति वाशब्दश्श्रूयेतेति भावः ।

'ನಿತ್ಯವತ್' ಎಂಬಲ್ಲಿರುವ 'ವತ್' ಪ್ರತ್ಯಯವು ಸ್ವಾರ್ಥದಲ್ಲಿದೆ. ಆದ್ದರಿಂದ ನಿತ್ಯದಿಂದ ಎಂದರ್ಥ. ಅಥವಾ 'ಇವ' ಎಂಬರ್ಥದಲ್ಲಿ 'ವತ್' ಪ್ರತ್ಯಯವು ಬಂದಿರುತ್ತದೆ. ಅಂದರೆ ವ್ಯವಸ್ಥಿತವಾಗಿ ಒಂದೇ ಅರ್ಥವನ್ನು ಪ್ರತಿಪಾದಿಸುವ 'ಯತೋ ವಾ ಇಮಾನಿ ಭೂತಾನಿ ಜಾಯಂತೇ' ಇತ್ಯಾದಿ ವಾಕ್ಯಗಳಲ್ಲಿ ಹೇಗೆ ವ್ಯಾಖ್ಯಾನಿಸಲಾಗುತ್ತದೋ, ಅದರಂತೆ ಎಂಬರ್ಥವನ್ನು ತಿಳಿಯಬೇಕು. ಹೀಗೊಪ್ಪದಿದ್ದರೆ ಭಾಷ್ಯದಲ್ಲಿ 'ವಾಯುರೇವ' ಎಂದು ಹೇಳುವ ಬದಲು 'ವಾಯುರ್ವಾ' ಎಂಬುದಾಗಿ 'ವಾ' ಎಂಬ ಶಬ್ದವನ್ನು ಹೇಳಬೇಕಾಗಿತ್ತು.

प्रकाशः – अभेदपक्षोक्तेः फलमाह – तदुक्तिश्चेति ।। उक्तं सर्वं टीकायास्तात्पर्यवर्णनमिति भावेन तदारूढं करोति – अत एवेति ।।

ಅಭೇದಪಕ್ಷವನ್ನು ಹೇಳಿದ್ದರ ಪ್ರಯೋಜನವನ್ನು 'ತದುಕ್ತಿಶ್ಚ' ಎಂಬ ವಾಕ್ಯದಿಂದ ಪ್ರತಿಪಾದಿಸುತ್ತಿದ್ದಾರೆ. ಟೀಕೆಯ ತಾತ್ಪರ್ಯವನ್ನು ಸ್ಪಷ್ಟವಾಗಿ ವರ್ಣಿಸಿದಂತಾಯಿತೆಂಬ ಅಭಿಪ್ರಾಯದಿಂದ ತಾವು ಹೇಳಿದ ವಿಷಯವನ್ನು ಟೀಕಾರೂಢ ಮಾಡುತ್ತಿದ್ದಾರೆ 'ಅತ ಏವ' ಇತ್ಯಾದಿ ಗ್ರಂಥದಿಂದ.

प्रकाशः – परिहारान्तरमाह – तत्वप्रदीपे त्विति ।। भाष्यादौ हरावुत्क्रमणस्य श्रुतिसिद्धत्वमेवोक्तम् । न तूपपत्तिसिद्धत्वम् ।

ಮತ್ತೊಂದು ಬಗೆಯಯಲ್ಲಿ ನ್ಯಾಯವಿವರಣಕ್ಕೆ ಭಾಷ್ಯದ ವಿರೋಧವನ್ನು ಪರಿಹರಿಸುತ್ತಿದ್ದಾರೆ 'ತತ್ವಪ್ರದೀಪೇ ತು' ಇತ್ಯಾದಿ ವಾಕ್ಯದಿಂದ. ಭಾಷ್ಯಾದಿಗಳಲ್ಲಿ ಉತ್ಕ್ರಮಣಾದಿಲಿಂಗಗಳು. ಶ್ರೀಹರಿಯಲ್ಲಿ ಶ್ರುತಿಸಿದ್ಧವಾಗುತ್ತದೆಂದು ಹೇಳಿದ್ದಾರೆ ಹೊರತು, ಉಪಪತ್ತಿಯಿಂದ ಸಿದ್ಧವಾಗುತ್ತದೆಂದು ಹೇಳಿರುವುದಿಲ್ಲ.

**गुरुराजीयम्** – नित्यवदिति स्वार्थिको वतिः । नित्यमेवेत्यर्थः । ननु भाष्ये प्राणशब्दस्य विष्णुवाचकत्वं कुत उक्तमित्यत आह – **तदुक्तिश्चेति** ।। ननु स्वरूपकीर्तनार्थत्वं वैयर्थ्यापरपर्याय एवेत्यत आह – **प्राणान्तर्यामित्वेन वेति** ।। ननु प्राणशब्दस्य विष्णुपरत्वाभावेऽपि प्रकरणविच्छेदकतुशब्दमहिम्ना प्राणाद्विष्णोर्भूयस्त्वोक्तिर्लभ्यत एवेति किमर्थं प्राणस्य विष्णुत्ववचनमित्यत आह – **सम्भूत इत्यत्रेति** ।। प्राणस्य विष्णुत्वानुक्तौ नोत्क्रमणादिलिङ्गसमन्वयः । उत्क्रमणादेः प्राणनिष्ठत्वश्रवणेऽपि भूमनिष्ठत्वेनाश्रवणादिति भावः ।




'ಪ್ರಾಣೋ ವಾ ಆಶಾಯಾ ಭೂಯಾನ್' ಎಂಬ ಛಾಂದೋಗ್ಯದಲ್ಲಿರುವ ಪ್ರಾಣಶಬ್ದಕ್ಕೆ 'ವಿಷ್ಣು' ಎಂಬರ್ಥವನ್ನು ಒಪ್ಪಿ ಸಿದ್ಧಾಂತ ಮಾಡಿರುತ್ತಾರೆ. ಆದರೆ ನ್ಯಾಯವಿವರಣದಲ್ಲಿ ಮುಖ್ಯಪ್ರಾಣನೆಂಬರ್ಥವನ್ನೂ ಒಪ್ಪಿಯೇ ಸಿದ್ಧಾಂತ ಮಾಡಿರುತ್ತಾರೆ. ವಿಚಾರ ಮಾಡಿದರೆ ನ್ಯಾಯವಿವರಣದ ಅಭಿಪ್ರಾಯವು ಅತ್ಯಂತ ಸಮಂಜಸವೆಂದೆನಿಸುತ್ತದೆ. ಏಕೆಂದರೆ ಪ್ರಾಣಶಬ್ದವು ವಿಷ್ಣುಪರವಾಗುವುದರಿಂದ 'ಏಷ ತು ವಾ ಅತಿವದಿತಿ' ಎಂಬಲ್ಲಿರುವ 'ತು' ಶಬ್ದವು ಸ್ವಾರಸ್ಯವಾಗುತ್ತದೆ. ಮತ್ತು ಆಶಾನಾಮಕಳಾದ ಭಾರತೀದೇವಿಗಿಂತ ಮುಖ್ಯಪ್ರಾಣದೇವರಿಗೆ ಉತ್ತಮತ್ವವನ್ನು ಹೇಳಿದಂತಾಗುತ್ತದೆ. ಅಷ್ಟೇ ಅಲ್ಲದೆ 'ಇಯದಾಮನನಾತ್' ಇತ್ಯಾದಿ ಸೂತ್ರಗಳಲ್ಲಿ ಹಾಗೂ ಛಾಂದೋಗ್ಯಭಾಷ್ಯದಲ್ಲೆಲ್ಲಾ ಪ್ರಾಣಶಬ್ದಕ್ಕೆ ಮುಖ್ಯಪ್ರಾಣನೆಂಬರ್ಥವನ್ನೇ ಅಂಗೀಕರಿಸಿದ್ದಾರೆ. ಹೀಗಿರುವಾಗ ಭಾಷ್ಯದಲ್ಲಿ ವಿಷ್ಣುವೆಂಬರ್ಥವನ್ನು ಅಂಗೀಕರಿಸಿದ್ದು ವಿರುದ್ಧವಾಗುತ್ತದಲ್ಲವೆ ಎಂಬ ವಿರೋಧಾಶಂಕೆಯು ಬರುತ್ತದೆ.

ಇದಕ್ಕೆ ಸಮಾಧಾನ ಹೀಗೆ - ಶ್ರೀಮದಾಚಾರ್ಯರು ಭಾಷ್ಯದಲ್ಲಿ ಪ್ರಾಣಶಬ್ದಕ್ಕೆ ವಿಷ್ಣುವೆಂಬರ್ಥವನ್ನು ಒಪ್ಪಲು ಅನೇಕ ಕಾರಣಗಳಿವೆ. ಪೂರ್ವಪಕ್ಷಕಾರರಂತೆ ನಾವು ಕೇವಲ ಪ್ರಾಣಪರತ್ವವನ್ನು ಮಾತ್ರ ಒಪ್ಪಿರುವುದಿಲ್ಲ. ವಿಷ್ಣುಪರತ್ವವನ್ನೂ ಸಹ ಒಪ್ಪುತ್ತೇವೆ. ಅಥವಾ ಮುಖ್ಯಪ್ರಾಣದೇವರಿಗಿಂತ ವಿಷ್ಣು ಉತ್ತಮನಾಗಿದ್ದಾನೆಂದು ಹೇಳಬೇಕಾಗಿದೆ. ಅಥವಾ ಅಂತರ್ಯಾಮಿತ್ವೇನೈವ ಉತ್ಕ್ರಮಣಾದಿಲಿಂಗವನ್ನು ವಿಷ್ಣುವಿನಲ್ಲಿ ಕೂಡಿಸಬೇಕಾಗಿದೆ. ಈ ಎಲ್ಲಾ ಕಾರಣಕ್ಕೋಸ್ಕರ ವಿಷ್ಣುಪರತ್ವವನ್ನು ಪ್ರಾಣಶಬ್ದಕ್ಕೆ ಒಪ್ಪಿರುತ್ತಾರೆ. ಆದ್ದರಿಂದ ಬೇರೆ ಬೇರೆ ವಿವಕ್ಷೆಗಳಿಂದ ಪ್ರಾಣಶಬ್ದದಿಂದ ಮುಖ್ಯಪ್ರಾಣ ಹಾಗೂ ವಿಷ್ಣು ಪ್ರತಿಪಾದ್ಯರಾಗಿದ್ದಾರೆಂದು ಉತ್ತರಿಸಬೇಕಾಗಿಲ್ಲ ಹೊರತಾಗಿ ಮುಖ್ಯಪ್ರಾಣ ಹಾಗೂ ವಿಷ್ಣು ಇಬ್ಬರೂ ಸಹ ಪ್ರತಿಪಾದ್ಯರೇ ಆಗಿದ್ದಾರೆಂದು ಒಪ್ಪಬೇಕು. ವಿಕಲ್ಪಪಕ್ಷವನ್ನು ಆಶ್ರಯಿಸಬಾರದು. ಸಮುಚ್ಚಯಪಕ್ಷವನ್ನೇ ಆಶ್ರಯಿಸಬೇಕು.



• • • • •

ಭೂಮಾಧಿಕರಣ (೧-೩-೨)

## ಭಗವಂತನಲ್ಲಿ ಉತ್ಕ್ರಮಣ ಕ್ರಿಯೆಯ ಸಮರ್ಥನೆ

**तात्पर्यचन्द्रिका**

**युक्तञ्च ब्रह्मण्युत्क्रमणम् ।**

**जात्यादेः सर्वगस्यापि प्रतिव्यक्तिसमाप्तिवत् ।**
**सर्वगस्यापीश्वरस्य क्रियाया अपि सम्भवात् ।। १ ।।**

**यथा सर्वगतान्तरेऽदृष्टाऽपि जातिरूपसर्वगते एकैकत्र समाप्तिः । एकैकव्यक्तिदर्शनेऽपि जातिप्रतीतेः ।**

ಅನುವಾದ - ಬ್ರಹ್ಮನಲ್ಲಿ ಉತ್ಕ್ರಮಣವೆಂಬ ಲಿಂಗವು ಯುಕ್ತವೇ ಆಗಿದೆ. 'ಜಾತ್ಯಾದೇಃ ಸರ್ವಗಸ್ಯಾಪಿ ಪ್ರತಿವ್ಯಕ್ತಿಸಮಾಪ್ತಿವತ್ । ಸರ್ವಗಸ್ಯಾಪೀಶ್ವರಸ್ಯ ಕ್ರಿಯಾಯಾ ಅಪಿ ಸಂಭವಾತ್' ಜಾತಿ ಮೊದಲಾದವುಗಳು ಎಲ್ಲೆಡೆ ವ್ಯಾಪ್ತವಾಗಿದ್ದರೂ ಆಯಾ ವ್ಯಕ್ತಿಗಳಲ್ಲಿ ಸಮಾಪ್ತಿಯನ್ನು ಹೊಂದಿವೆ. ಅದರಂತೆ ಈಶ್ವರನು ಸರ್ವಗತನಾಗಿದ್ದರೂ ಅವನಲ್ಲಿ ಕ್ರಿಯೆಯು ಯುಕ್ತವಾಗುತ್ತದೆ.

ಶ್ಲೋಕದ ವ್ಯಾಖ್ಯಾನ ಹೀಗಿದೆ - ಆಕಾಶ ಮೊದಲಾದ ಸರ್ವಗತವಾದ ಪದಾರ್ಥಗಳು ಒಂದೇ ಕಡೆ ಸಂಪೂರ್ಣವಾಗಿ ಇರುತ್ತವೆಂದು ಎಲ್ಲಿಯೂ ಕಂಡಿಲ್ಲ. ಆದರೂ ಸಹ ಎಲ್ಲೆಡೆ ವ್ಯಾಪ್ತವಾದ ಜಾತಿಯು ಆಯಾ ವ್ಯಕ್ತಿಗಳಲ್ಲಿ ಸಮಾಪ್ತವಾಗಿರುವುದು ಕಾಣಿಸುತ್ತಿದೆ. ಏಕೆಂದರೆ ಗೋ, ಘಟ ಮೊದಲಾದ ಒಂದೊಂದೇ ವ್ಯಕ್ತಿಗಳನ್ನು ನೋಡಿದಾಗಲೂ ಅವುಗಳಲ್ಲಿರುವ ಜಾತಿಯು ಪ್ರತೀತವಾಗುತ್ತದೆ.

**यथा चासम्भावितमपि सर्वगतेषु गगनादिषु सर्वगतदिगाद्यसम्बद्धत्वमजसंयोगाभावपक्षे । तथा सर्वगतान्तरेऽदृष्टमपि क्रियावत्त्वं ब्रह्मण्यस्तु ।**

ದಿಕ್, ಆಕಾಶ ಮೊದಲಾದವುಗಳು ಎಲ್ಲೆಡೆ ವ್ಯಾಪ್ತವಾದ್ದರಿಂದ ಅವುಗಳ ಸಂಯೋಗವೂ ಸಹ ಎಲ್ಲೆಡೆ ಇದ್ದೇ ಇರುತ್ತದೆ. ಪರಸ್ಪರ ವ್ಯಾಪ್ತವಾದ ಎರಡು ಪದಾರ್ಥಗಳು ಸಂಯೋಗವನ್ನು ಹೊಂದದೇ ಇರಲು ಸಾಧ್ಯವಿಲ್ಲ. ಹೀಗೆ ಅಸಂಭಾವಿತವಾಗಿದ್ದರೂ ಸರ್ವಗತವಾದ ಗಗನಾದಿಗಳಲ್ಲಿ ಸರ್ವಗತವಾದ ದಿಕ್ ಮೊದಲಾದವುಗಳ ಸಂಯೋಗವನ್ನು ತಾರ್ಕಿಕರು ಒಪ್ಪಿರುವುದಿಲ್ಲ. ಏಕೆಂದರೆ ನಿತ್ಯವಾದ ಪದಾರ್ಥಗಳಿಗೆ ಸಂಯೋಗವು ಕೂಡುವುದಿಲ್ಲವೆಂಬುದು ಅವರ ಮತ. ಈ ದೃಷ್ಟಾಂತದಂತೆ ಉಳಿದ ಸರ್ವಗತವಾದ ಪದಾರ್ಥಗಳಲ್ಲಿ ಕ್ರಿಯೆಯು ಕಾಣಿಸದಿದ್ದರೂ ಸರ್ವಗತನಾದ ಬ್ರಹ್ಮನಲ್ಲಿ ಉತ್ಕ್ರಮಣವೆಂಬ ಕ್ರಿಯೆಯು ಉಪಪನ್ನವಾಗಬಹುದು.

ಪರಿಪೂರ್ಣಚಂದ್ರಿಕಾ

**"तमुत्क्रामन्तं प्राणोऽनूत्क्रामति" "स्वाभाविकी ज्ञानबलक्रिया च" "ज्ञानं नित्यं क्रिया नित्या बलं शक्तिः परात्मनः" इत्यादिश्रुतेः ।**

ಬ್ರಹ್ಮನಲ್ಲಿ ಉತ್ಕ್ರಮಣ ಕ್ರಿಯೆಯು ಅಸಂಭಾವಿತವೆಂದು ಹೇಳಬಾರದು. ಏಕೆಂದರೆ 'ತಮುತ್ಕ್ರಾಂತಂ ಪ್ರಾಣೋऽನೂತ್ಕ್ರಾಮತಿ' 'ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚ' 'ಜ್ಞಾನಂ ನಿತ್ಯಂ ಕ್ರಿಯಾ ನಿತ್ಯಾ ಬಲಂ ಶಕ್ತಿಃ ಪರಾತ್ಮನಃ'' ಇವೇ ಮೊದಲಾದ ಶ್ರುತಿಗಳಿಂದ ಭಗವಂತನ ಕ್ರಿಯೆಯು ನಿತ್ಯವಾಗಿರುತ್ತದೆಂದು ತಿಳಿಯುತ್ತವೆ.

**क्रियाया औपाधिकत्वं तु "सर्वत्र प्रसिद्ध" इत्यत्रोक्तेनाणुत्वस्योपाधिकत्व-निरासकन्यायेन निरसनीयम् ।**

ಭಗವಂತನ ಕ್ರಿಯೆಯನ್ನು ಔಪಾಧಿಕವೆಂದು ಹೇಳಬಹುದಲ್ಲವೇ? ಎಂದು ಪ್ರಶ್ನಿಸಬಾರದು. ಇದನ್ನು 'ಸರ್ವತ್ರಪ್ರಸಿದ್ಧೋಪದೇಶಾತ್' ಎಂಬ ಸೂತ್ರದಲ್ಲಿಯೇ ನಿರಾಕರಿಸಲಾಗಿದೆ. ಆ ಅಧಿಕರಣದಲ್ಲಿ ಭಗವಂತನಿಗೆ ಅಣುತ್ವದ ಔಪಾಧಿಕತ್ವವನ್ನು ನಿರಾಸ ಮಾಡಿದೆ. ಆದ್ದರಿಂದಲೇ ಇದೂ ಸಹ ನಿರಾಕೃತವಾಯಿತು.

**किञ्च क्रियावत्त्वेऽणुत्वमेव तन्त्रम् । नतु महत्त्वाभावादि । गौरवात् । गुणजात्यादौ क्रियापाताच्च ।**

ಮತ್ತು ಭಗವಂತನಲ್ಲಿ ಕ್ರಿಯೆಯಿರಲು ಅಣುತ್ವವೆಂಬ ಕಾರಣವಿದೆ. ಕಾರಣವಿದ್ದಾಗ ಕ್ರಿಯೆಯನ್ನು ಒಪ್ಪದಿರಲು ಸಾಧ್ಯವಿಲ್ಲ. ಕ್ರಿಯೆಗೆ ಅಣುತ್ವವೇ ಕಾರಣ ಹೊರತು, ಮಹತ್ತ್ವಾಭಾವವಾಗಲೀ, ಮಹತ್ತ್ವಭಾವದಿಂದ ವಿಶಿಷ್ಟವಾದ ಅಣುತ್ವವಾಗಲೀ ಕಾರಣವಲ್ಲ. ಅವುಗಳನ್ನೇನಾದರೂ ಕಾರಣವೆಂದರೆ ಗೌರವ ದೋಷ ಬರುತ್ತದೆ. ಮತ್ತು ಮಹತ್ತ್ವಾಭಾವವು ಯಾವುದೇ ಪರಿಮಾಣವಿಲ್ಲದ ಗುಣ ಹಾಗೂ ಜಾತಿಗಳಲ್ಲಿಯೂ ಇರುತ್ತದೆ. ಹಾಗಾಗಿ ಗುಣಾದಿಗಳಲ್ಲಿಯೂ ಕ್ರಿಯೆಯು ಬರಬೇಕಾದೀತು.

**अत एव न महत्त्वमक्रियत्वे तन्त्रम् । गुणादौ महत्त्वाभावेऽप्यक्रियत्व-दर्शनात् ।**

ಆದ್ದರಿಂದರಿಂದಲೇ ಕ್ರಿಯೆಯಿಲ್ಲದಿರಲು ಮಹತ್ತ್ವವು ಪ್ರಯೋಜಕವಲ್ಲ. ಏಕೆಂದರೆ ಗುಣಾದಿಗಳಲ್ಲಿ ಮಹತ್ತ್ವವಿಲ್ಲದಿದ್ದರೂ ಕ್ರಿಯಾಶೂನ್ಯತ್ವವು ಕಾಣಿಸುತ್ತಿದೆ.

ಭೂಮಾಧಿಕರಣ (೧-೩-೨)

**भावरूपायां क्रियायां पूर्वं धीस्थायां पूर्वं धीस्थं यदणुत्वरूपं प्रयोजकं तदभावादेवाक्रियत्वोपपत्तौ तत्प्रयोजकान्तरस्यानन्वेषणीयत्वाच्च ।**

ಮತ್ತು ಭಾವರೂಪವಾದ ಕ್ರಿಯೆಯು ಮೊದಲು ಬುದ್ಧಿಯಲ್ಲಿರುತ್ತದೆ. ಮೊದಲೇ ಬುದ್ಧಿಯಲ್ಲಿ ಅಣುತ್ವವೆಂಬ ಪ್ರಯೋಜಕವೂ ಸಹ ಇರುತ್ತದೆ. ಇಂತಹ ಅಣುತ್ವವೆಂಬ ಪ್ರಯೋಜಕವಿಲ್ಲದ ಕಾರಣದಿಂದಲೇ ಭಾವರೂಪವಾದ ಕ್ರಿಯೆಯೂ ಇರುವುದಿಲ್ಲವೆಂದು ಹೇಳಲು ಬರುವಾಗ ಕ್ರಿಯಾಶೂನ್ಯತ್ವಕ್ಕೆ ಮತ್ತೊಂದು ಕಾರಣವನ್ನು ಹುಡುಕುವುದು ಅಸಾಧುವಾಗಿದೆ.

**यदि च विभुद्रव्ये पूर्वदेशादिरूपफलाभावेन क्रिया न स्यात्तर्हि सुखदुःखेच्छा-संस्कारादिरूपफलाभावेनेश्वरे ज्ञानमपि न स्यात् । ज्ञानं नित्यत्वाल्लोकविलक्षणं चेत्क्रियाऽपि तथाऽस्तु ।**

ಇನ್ನು ಭಗವಂತನಲ್ಲಿ ಕ್ರಿಯೆಯನ್ನು ಒಪ್ಪುವುದಕ್ಕೆ ಏನೂ ಪ್ರಯೋಜನವಿಲ್ಲ. ಸರ್ವತ್ರವ್ಯಾಪ್ತನಾದ್ದರಿಂದ ಪೂರ್ವದೇಶವಿಭಾಗವಾಗಲೀ, ಉತ್ತರದೇಶಸಂಯೋಗವಾಗಲೀ, ಉಂಟಾಗುವುದಿಲ್ಲ. ಫಲವಿಲ್ಲದ ಕಾರಣ ಕ್ರಿಯೆಯನ್ನೂ ಸಹ ಒಪ್ಪಲು ಬರುವುದಿಲ್ಲವಲ್ಲವೇ? ಎಂದು ಪ್ರಶ್ನಿಸಬೇಕು. ಇದೂ ಸಹ ತಪ್ಪು. ಹಾಗಾದರೆ ಸುಖ, ದುಃಖ, ಇಚ್ಛಾ, ಸಂಸ್ಕಾರ ಮೊದಲಾದ ಯಾವುದೇ ಫಲಗಳಿಲ್ಲದ ಕಾರಣ ಭಗವಂತನಲ್ಲಿ ಜ್ಞಾನವನ್ನೂ ಸಹ ಒಪ್ಪದಿರುವ ಪ್ರಸಂಗ ಬರುತ್ತದೆ. ಭಗವಂತನ ಜ್ಞಾನವು ನಿತ್ಯವಾಗಿರುವುದರಿಂದ ಲೋಕವಿಲಕ್ಷಣವಾಗಿದೆಯೆಂದು ಉತ್ತರಿಸುವುದಾದರೆ ಕ್ರಿಯೆಯೂ ಸಹ ಭಗವಂತನಂತೆಯೇ ನಿತ್ಯವಾಗಿರುವುದರಿಂದ ಫಲವಿಲ್ಲದಿದ್ದರೂ ಅವನಲ್ಲಿ ಉಪಪನ್ನವಾಗುತ್ತದೆಂದು ಒಪ್ಪಬಹುದು.

**प्रकाशः —**

स्वयं तदाह – **युक्तञ्चेति** ।। आदिपदार्थं वदन् श्लोकं व्याचष्टे – **यथेति** ।।

ವಿವರಣೆ - ಉತ್ತಮಣಲಿಂಗವು ಶ್ರೀಹರಿಯಲ್ಲಿ ಉಪಪನ್ನವಾಗುತ್ತದೆಂಬ ವಿಚಾರವನ್ನು ಗ್ರಂಥಕಾರರೇ ಸ್ವತಃ ಸಮರ್ಥಿಸುತ್ತಿದ್ದಾರೆ 'ಯುಕ್ತಂ ಚ' ಇತ್ಯಾದಿ ವಾಕ್ಯದಿಂದ. ಶ್ಲೋಕದಲ್ಲಿರುವ ಆದಿಪದದ ಅರ್ಥವನ್ನು ಸ್ವತಃ ಗ್ರಂಥಕಾರರೇ ಸ್ಪಷ್ಟಪಡಿಸುತ್ತಾ, ಶ್ಲೋಕವನ್ನು ವ್ಯಾಖ್ಯಾನಿಸುತ್ತಿದ್ದಾರೆ 'ಯಥಾ' ಇತ್ಯಾದಿ ವಾಕ್ಯದಿಂದ.

**प्रकाशः** – ननु तत्र प्रतीतिबलादन्यतरकर्मादिकारणाभावादिवशात्तथात्वेऽपीह किं मानमित्यत आह – **तमिति** ।। विष्णुमित्यर्थः ।।

ಒಂದೊಂದೇ ವ್ಯಕ್ತಿಯಲ್ಲಿ ಜಾತಿಯು ಪ್ರತೀತವಾಗುವುದರಿಂದ ಎಲ್ಲೆಡೆ ವ್ಯಾಪ್ತವಾದ ಜಾತಿಯು ಒಂದೊಂದು ಕಡೆಯೂ ಸಮಾಪ್ತವಾಗುತ್ತದೆಂದು ಒಪ್ಪಬೇಕು. ಮತ್ತು ಕಾಲ ಮತ್ತು ಆಕಾಶಗಳಿಗೆ

ಸಂಯೋಗವನ್ನೇಕೆ ಒಪ್ಪುವುದಿಲ್ಲವೆಂದರೆ ಸಂಯೋಗಕ್ಕೆ ಅನ್ಯತರಕರ್ಮವೂ ಕಾರಣ. ಕಾಲ ಅಥವಾ ಆಕಾಶಗಳೆರಡರಲ್ಲಿ ಒಂದಕ್ಕೆ ಕರ್ಮವನ್ನು ಹೇಳಬೇಕಾಗುತ್ತದೆ. ಆದರೆ ವಿಭುವಾದ ಎರಡು ಪದಾರ್ಥಗಳಲ್ಲಿಯೂ ಕರ್ಮವನ್ನು ಒಪ್ಪಲಾಗದ ಕಾರಣ ಕಾಲಾಕಾಶಸಂಯೋಗವನ್ನು ಒಪ್ಪಿರುವುದಿಲ್ಲ. ಆದರೆ ಪ್ರಕೃತ ಸರ್ವತ್ರವ್ಯಾಪ್ತನಾದ ಪರಮಾತ್ಮನಿಗೆ ಉತ್ಕ್ರಮಣವನ್ನು ಒಪ್ಪಲು ಏನು ಪ್ರಮಾಣ? ಎಂಬ ಪ್ರಶ್ನೆಗೆ 'ತಮ್' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. 'ತಮ್' ಎಂದರೆ ವಿಷ್ಣುವನ್ನು ಎಂದರ್ಥ. ಅಂದರೆ ವಿಷ್ಣುವಿನಲ್ಲಿ ಉತ್ಕ್ರಮಣಲಿಂಗವಿದೆಯೆನ್ನಲು ಅನೇಕ ಪ್ರಮಾಣಗಳಿವೆಯೆಂದರ್ಥ.

**प्रकाशः** – श्रुतेरौपाधिकक्रियाविषयत्वमस्त्वित्यत आह – क्रियाया इति ।।

ಶ್ರುತಿಯು ಔಪಾಧಿಕವಾದ ಕ್ರಿಯೆಯನ್ನಷ್ಟೇ ಭಗವಂತನಲ್ಲಿ ಹೇಳುತ್ತಿದೆಯೆಂದು ವ್ಯಾಖ್ಯಾನಿಸಬಹುದಲ್ಲವೇ? ಎಂಬ ಪ್ರಶ್ನೆಗೆ 'ಕ್ರಿಯಾಯಾಃ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. ಸರ್ವಗತತ್ವಾಧಿಕರಣದ ನ್ಯಾಯದಿಂದ ಔಪಾಧಿಕ ಕ್ರಿಯಾವಿಷಯತ್ವವನ್ನು ಅಲ್ಲಗಳೆಯಬೇಕೆಂದು ಇದರಿಂದ ತಿಳಿಯುತ್ತದೆ.

**प्रकाशः** – यथा सर्षपादेरणीयस्त्वे ततोऽप्यधिकपरिमाणहृदयादेरनुपाधित्वं तथाऽत्यन्ताणुतररूपगतक्रियायामपि न ततोऽपि स्थूलस्योपाधित्वम्, 'उत्क्रान्तप्राणान्' इत्यादौ क्रियोपाधेरनुक्तेश्च श्रौतोत्क्रमणानुरोधेनेश्वरस्य क्रियावत्त्वं तत्प्रयोजकमणुत्वं च स्वाभाविकम् ।

ಸರ್ಷಪಾದಿಗಳಿಗಿಂತಲೂ ಸಣ್ಣ ಪರಿಮಾಣವನ್ನು ಭಗವಂತನಿಗೆ ಹೇಳುವುದಾದರೆ ಅಂತಹ ಭಗವಂತನಿಗಿಂತ ಅಧಿಕ ಪರಿಮಾಣವುಳ್ಳ ಹೃದಯವು ಹೇಗೆ ಉಪಾಧಿಯಾಗುವುದಿಲ್ಲವೋ, ಅದರಂತೆ ಅತ್ಯಂತ ಅಣುತರವಾದ ರೂಪದಲ್ಲಿರುವ ಭಗವಂತನ ಕ್ರಿಯೆಗೂ ಸಹ ಅದಕ್ಕಿಂತ ಅಧಿಕ ಪರಿಮಾಣವುಳ್ಳ ಹೃದಯಾದಿಗಳು ಉಪಾಧಿಯಾಗುವುದಿಲ್ಲ. ಆದ್ದರಿಂದ ಭಗವಂತನ ಕ್ರಿಯೆಗೆ ಔಪಾಧಿಕತ್ವವನ್ನು ಹೇಳಲು ಬರುವುದಿಲ್ಲ. ಮತ್ತು 'ಉತ್ಕ್ರಾಂತಪ್ರಾಣಾನ್' ಇತ್ಯಾದಿಗಳಲ್ಲಿ ಭಗವಂತನ ಕ್ರಿಯೆಗೆ ಯಾವುದೇ ಉಪಾಧಿಯನ್ನು ಹೇಳಿಲ್ಲ. ಹಾಗಾಗಿ ಶ್ರುತಿಯಲ್ಲಿ ಹೇಳಲ್ಪಟ್ಟ ಉತ್ಕ್ರಮಣಲಿಂಗಕ್ಕೆ ಅನುಸಾರಿಯಾಗಿ ಈಶ್ವರನ ಕ್ರಿಯೆಯು ಮತ್ತು ಕ್ರಿಯೆಗೆ ಪ್ರಯೋಜಕವಾದ ಅಣುತ್ವವು ಎರಡೂ ಸಹ ಸ್ವಾಭಾವಿಕವೆಂದೇ ಹೇಳಬೇಕು.

**प्रकाशः** – अक्रियत्वं तत्प्रयोजकमहत्त्वं त्वौपाधिकमित्यपि सुवचम् । अतिमहापरिमाणादेः कथं ततो न्यूनपरिमाणोपाधिकृतत्वमिति चेत्सर्षपादितोऽप्यणुपरिमाणादेः कथं ततोऽधिकपरिमाणहृदयाद्युपाधिहेतुकत्वमिति सममित्यादिरूपेण निरसनीयमित्यर्थः । अत एव ''स्वाभाविकी'' इति श्रुत्युक्तिः ।

ಅಷ್ಟೇ ಅಲ್ಲದೇ ಅಕ್ರಿಯತ್ವ ಹಾಗೂ ಅದಕ್ಕೆ ಪ್ರಯೋಜಕವಾದ ಮಹತ್ವ ಇವೆರಡು ಔಪಾಧಿಕವಾಗುತ್ತವೆಂದು ಹೇಳುವುದು ಬಹಳ ಸುಲಭ. ಭಗವಂತನು ಅತಿಮಹಾ ಪರಿಮಾಣವುಳ್ಳವನಾದ್ದರಿಂದ ಅವನಿಗೆ ಅವನಿಗಿಂತ ನ್ಯೂನಪರಿಮಾಣವುಳ್ಳದ್ದು ಹೇಗೆ ಉಪಾಧಿಯಾಗುತ್ತದೆ, ಎಂದರೆ ಸರ್ಷಪಾದಿಗಳಿಗಿಂತಲೂ ಅತ್ಯಂತ ಅಣುವಾದ ಭಗವಂತನಿಗೆ ಸರ್ಷಪಕ್ಕಿಂತ ಅಧಿಕಪರಿಮಾಣವುಳ್ಳ

ಹೃದಯಾದಿಗಳು ಉಪಾಧಿಯಾಗುತ್ತವೆಂದು ಪೂರ್ವಪಕ್ಷಕಾರರು ಹೇಗೆ ಹೇಳಿದರೋ ಅದರಂತೆ ನಾವೂ ಸಹ ಪ್ರತಿಬಂಧಿಯಾಗಿ ಉತ್ತರಿಸುತ್ತೇವೆ. ಈ ಕ್ರಮದಲ್ಲಿ ಪೂರ್ವಪಕ್ಷವನ್ನು ನಿರಾಕರಿಸಬೇಕು. ಆದ್ದರಿಂದಲೇ ಶ್ರುತಿಯಲ್ಲಿ 'ಸ್ವಾಭಾವಿಕೀ' ಭಗವಂತನ ಕ್ರಿಯೆಯು ಸ್ವಾಭಾವಿಕವಾಗಿದೆಯೆಂದು ಹೇಳಿರುತ್ತಾರೆ.

**प्रकाशः** – ननु न हरौ क्रियावत्त्वं युक्तम् । प्रयोजकधर्माभावात् । अन्यथोत्क्रमणादिना जीवाणुत्वादिसिद्धिर्न स्यात् । व्याप्ते हरौ पूर्वदेशविभागादिफलाभावाच्च । अतस्तन्निवृत्तौ क्रियाया अपि निवृत्तिः । श्रुत्यादि तु गौणं व्याख्येयमित्यतः प्रयोजकं तावदाह – **किञ्चेति** ।।

ಆಕ್ಷೇಪ - ಶ್ರೀಹರಿಯಲ್ಲಿ ಕ್ರಿಯೆಯನ್ನು ಒಪ್ಪುವ ಅವಶ್ಯಕತೆ ಇಲ್ಲ. ಏಕೆಂದರೆ ಕ್ರಿಯೆಯನ್ನು ಒಪ್ಪಲು ಬೇಕಾಗಿರುವ ಯಾವುದೇ ಧರ್ಮಗಳು ಅವನಲ್ಲಿರುವುದಿಲ್ಲ. ಹಾಗೇ ಪ್ರಯೋಜಕ ಧರ್ಮಗಳಿಲ್ಲದಿದ್ದರೂ ಕ್ರಿಯೆಯನ್ನು ಒಪ್ಪುವುದಾದರೆ ಉತ್ಕ್ರಮಣಾದಿಕ್ರಿಯೆಯಿಂದ ಜೀವನಲ್ಲಿ ಅಣುತ್ವವನ್ನು ಸಾಧಿಸುವುದೂ ಸಹ ತಪ್ಪಾಗಬೇಕಾದೀತು. ಮತ್ತು ಶ್ರೀಹರಿಯು ಎಲ್ಲೆಡೆ ವ್ಯಾಪ್ತನಾಗಿದ್ದಾನೆ. ಕ್ರಿಯೆಯನ್ನು ಒಪ್ಪುವುದರಿಂದ ಪೂರ್ವದೇಶ ವಿಭಾಗ, ಉತ್ತರದೇಶಸಂಯೋಗ, ಇದೇ ಮೊದಲಾದ ಫಲಗಳನ್ನು ಹೇಳಬೇಕಾಗುತ್ತದೆ. ಎಲ್ಲೆಡೆ ವ್ಯಾಪಿಸಿರುವ ಪರಮಾತ್ಮನಲ್ಲಿ ಇಂತಹ ಫಲವನ್ನು ಹೇಳುವುದು ಅಸಂಭಾವಿತ. ಫಲವಿಲ್ಲದ ಮೇಲೆ ಕ್ರಿಯೆಯೂ ಸಹ ಇಲ್ಲವೆಂದೇ ತಿಳಿಯುತ್ತದೆ. ಶ್ರುತಿಯಲ್ಲಿ ಭಗವಂತನಿಗೆ ಕ್ರಿಯೆಯನ್ನು ಹೇಳಿದ್ದರೂ ಸಹ ಅದನ್ನು ಗೌಣವನ್ನಾಗಿ ವ್ಯಾಖ್ಯಾನಿಸಬೇಕಾಗುತ್ತದೆ. ಆದ್ದರಿಂದ ಭಗವಂತನಿಗೆ ಕ್ರಿಯೆಯನ್ನು ಒಪ್ಪುವುದು ತಪ್ಪಲ್ಲವೇ?

ಸಮಾಧಾನ - ಇದು ತಪ್ಪು. ಭಗವಂತನಲ್ಲಿ ಕ್ರಿಯೆಯನ್ನು ಒಪ್ಪಲು ಪ್ರಯೋಜಕ ಧರ್ಮವಿದೆ ಎಂದರೆ ಕ್ರಿಯಾವತ್ವಕ್ಕೆ ಪ್ರಯೋಜಕವಾದ ಅಣುತ್ವರೂಪವಾದಧರ್ಮವು ಭಗವಂತನಲ್ಲಿದೆಯೆಂದು ತಿಳಿಯಬೇಕು. ಇದನ್ನು 'ಕಿಂಚ' ಇತ್ಯಾದಿ ಗ್ರಂಥದಿಂದ ಸಮರ್ಥಿಸುತ್ತಿದ್ದಾರೆ.

**प्रकाशः** – आदिपदेन महत्त्वाभावविशिष्टमणुत्वं गृह्यते । महत्त्वाभावस्य तन्त्रत्वे दोषान्तरमाह – **गुणेति** ।। परीत्यैतत् । ''गुणाद्वा लोकवत्'' इत्यत्र गुणेऽपि क्रियावत्त्वोक्तेः ।

ಆದಿಪದದಿಂದ ಮಹತ್ತ್ವಾಭಾವವಿಶಿಷ್ಟವಾದ ಅಣುತ್ವವನ್ನು ವಿವಕ್ಷಿಸಬೇಕು. ಮಹತ್ತ್ವಾಭಾವವನ್ನೇ ಕ್ರಿಯೆಗೆ ಪ್ರಯೋಜಕವೆಂದು ಹೇಳಿದರೆ ಮತ್ತೊಂದು ದೋಷವನ್ನು 'ಗುಣ' ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ. ತಾರ್ಕಿಕಮತದ ಪ್ರಕಾರ ಈ ದೋಷವನ್ನು ಹೇಳಿದ್ದಾರೆ. ಏಕೆಂದರೆ ಸಿದ್ಧಾಂತದ ಪ್ರಕಾರ 'ಗುಣಾದ್ವಾ ಲೋಕವತ್' ಎಂಬ ಸೂತ್ರದಲ್ಲಿ ಗುಣಕ್ಕೂ ಸಹ ಕ್ರಿಯೆ ಇರುತ್ತದೆಂದು ಸಮರ್ಥಿಸಲಾಗಿದೆ.

**प्रकाशः** – प्रागुक्तप्रतिबन्दीं निराह – **अत एवेति** ।। एतमेव हेतुं व्यनक्ति – **गुणादाविति** ।। किं तर्ह्यक्रियत्वे तन्त्रं यदभावाद्धरावक्रियत्वं वार्यत इत्यतस्सयुक्तिकं तदाह – **भावेति** ।।

ಹಿಂದೆ ಹೇಳಿದ ಪ್ರತಿಬಂಧಿಯನ್ನು ನಿರಾಕರಿಸುತ್ತಿದ್ದಾರೆ 'ಅತ ಏವ' ಇತ್ಯಾದಿ ವಾಕ್ಯದಿಂದ. 'ಅತ ಏವ' ಇತ್ಯಾದಿ ವಾಕ್ಯದಿಂದ ಹೇಳಲ್ಪಟ್ಟ ಹೇತುವನ್ನೇ ನಿರಾಕರಿಸುತ್ತಿದ್ದಾರೆ - 'ಗುಣಾದೌ' ಇತ್ಯಾದಿ ವಾಕ್ಯದಿಂದ. ಹಾಗಾದರೆ ಕ್ರಿಯೆಯಿಲ್ಲದಿರಲು ಯಾವುದು ಪ್ರಯೋಜಕ? ಯಾವುದರ ಅಭಾವದಿಂದ ಕ್ರಿಯೆಯಿಲ್ಲವೆಂಬುದನ್ನು ಅಲ್ಲಗಳೆಯಲು ಸಾಧ್ಯ? ಎಂಬ ಪ್ರಶ್ನೆಗೆ ಯುಕ್ತಿಬದ್ಧವಾಗಿ 'ಭಾವ' ಇತ್ಯಾದಿ ವಾಕ್ಯದಿಂದ ವಿವರಿಸುತ್ತಿದ್ದಾರೆ.

**ಪ್ರಕಾಶಃ** – यदपि फलाभावादक्रियत्वमिति तदप्रयोजकमित्याह – **यदि चेति** ।। **तथाऽस्त्विति** ।। अनित्यक्रियाया विभागादिफलजनकत्वेऽपीश्वरक्रियाया नित्यत्वेन लोकक्रियाविलक्षणत्वात्तादृशफलाभावेऽपि क्रियावत्त्वं सम्भवतीत्यर्थः ।

ಇನ್ನು ಫಲವಿಲ್ಲದ ಕಾರಣ ಭಗವಂತನಿಗೆ ಕ್ರಿಯೆಯನ್ನು ಒಪ್ಪಬೇಕಾಗಿಲ್ಲ ಎಂದು ಆಕ್ಷೇಪಿಸಿದ್ದರು. ಈ ಕಾರಣವು ಅಪ್ರಯೋಜಕವಾಗಿದೆಯೆಂದು 'ಯದಿ ಚ' ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ. 'ತಥಾऽಸ್ತು' ಎಂಬುದರ ಅಭಿಪ್ರಾಯ ಹೀಗಿದೆ - ಲೋಕದಲ್ಲಿ ಅನಿತ್ಯಕ್ರಿಯೆಗೆ ವಿಭಾಗ, ಸಂಯೋಗ ಮೊದಲಾದ ಫಲಗಳಿರುವುದು ಕಂಡಿದೆ. ಆದರೆ ಈಶ್ವರನ ಕ್ರಿಯೆಯು ನಿತ್ಯವಾದ್ದರಿಂದ ಲೋಕಕ್ರಿಯೆಗಿಂತ ವಿಲಕ್ಷಣವಾಗಿದೆ. ಹಾಗಾಗಿ ಅಂತಹ ಸಂಯೋಗಾದಿ ಫಲಗಳಿಲ್ಲದಿದ್ದರೂ ಕ್ರಿಯೆಯನ್ನು ಒಪ್ಪಬಹುದೆಂದು ತಿಳಿಯಬೇಕು.

**गुरुराजीयम्** – यदुक्तमुत्क्रान्तप्राणानिति प्राणोत्क्रमणश्रवणात्तस्य च पूर्णे ब्रह्मण्ययोगाच्च न प्राणस्य विष्णुत्वमिति तन्निराकरोति – **युक्तश्चेति** ।। प्रसङ्गात्क्रियाया अनित्यत्वं पराचष्टे – **क्रियाया इति** ।। **न्यायेनेति** ।। उपाध्यनुक्तिन्यायेनेत्यर्थः । **यदि च विभुद्रव्य इति** ।। यावत्कर्मसत्त्वं संयोग-विभागोत्पादिनियमात्कार्याभावेन कारणाभावानुमानादित्यर्थः । पूर्वदेशाद्विभागादीत्यत्रादिशब्देनोत्तरदेशसंयोगोत्पत्तिसङ्ग्रहः ।




ಉತ್ಕ್ರಮಣವೆಂಬ ಕ್ರಿಯೆಯು ವ್ಯಾಪ್ತನಾದ ಭಗವಂತನಲ್ಲಿ ಹೇಗೆ ಕೂಡುತ್ತದೆ? ಎಂಬ ಗೊಂದಲವು ಬೇಡ. ಎಲ್ಲೆಡೆ ವ್ಯಾಪ್ತವಾದ ಜಾತಿಯು ಮಡಿಕೆ ಮೊದಲಾದವುಗಳಲ್ಲಿ ಇರುತ್ತದೆಂದು ಒಪ್ಪಿದ್ದಾರೆ. ಮತ್ತು ಆಕಾಶ, ದಿಕ್ ಇವೆರಡೂ ವ್ಯಾಪ್ತವಾಗಿರುವುದರಿಂದ ಪರಸ್ಪರ ಸಂಯೋಗವಿದ್ದರೂ ತಾರ್ಕಿಕರು ನಿತ್ಯದ್ರವ್ಯಗಳಿಗೆ ಸಂಯೋಗವನ್ನು ಒಪ್ಪುವುದಿಲ್ಲ. ಅದರಂತೆ ಎಲ್ಲೆಡೆ ಭಗವಂತನು ವ್ಯಾಪ್ತನಾಗಿದ್ದರೂ ಕ್ರಿಯೆಯನ್ನು ಒಪ್ಪಲು ಅಡ್ಡಿಯಿಲ್ಲ.

'ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚ' ಇವೇ ಮೊದಲಾದ ಪ್ರಮಾಣಗಳ ಆಧಾರದಿಂದ ಭಗವಂತನಲ್ಲಿರುವ ಕ್ರಿಯೆ ಮೊದಲಾದವು ಸ್ವಾಭಾವಿಕವಾಗಿರುತ್ತವೆ ಎಂದು ತಿಳಿದು ಬರುತ್ತಿದೆ. ಮತ್ತು ಭಗವಂತನಲ್ಲಿ ಇಂತಹ ಕ್ರಿಯೆಯಿರಲು ಅಣುತ್ವವೆಂಬ ಧರ್ಮವಿದೆ. ಅಣುವಾದ ಪದಾರ್ಥಗಳಲ್ಲಿ ಕ್ರಿಯೆಯಿರುವುದು ಲೋಕದಲ್ಲಿ

ಕಾಣುತ್ತೇವೆ. ಭಗವಂತನಿಗೆ ಅಣುರೂಪವೂ ಇರುವುದರಿಂದ ಕ್ರಿಯೆಯನ್ನು ಹೇಳಲು ಏನೂ ತೊಂದರೆಯಿಲ್ಲ. ಮತ್ತು ಇವನಲ್ಲಿರುವ ಕ್ರಿಯೆಯು ಲೋಕವಿಲಕ್ಷಣವಾಗಿರುವುರಿಂದ ಉತ್ತರದೇಶಸಂಯೋಗ, ಪೂರ್ವದೇಶವಿಭಾಗ ಮೊದಲಾದ ಪ್ರಯೋಜನಗಳಿಲ್ಲದಿದ್ದರೂ ಸ್ವಾಭಾವಿಕವಾಗಿ ಇರುತ್ತದೆಂದು ಒಪ್ಪಬೇಕು.

ಆದ್ದರಿಂದ ಉತ್ಕ್ರಮಣವೆಂಬ ಪೂರ್ವಪಕ್ಷಲಿಂಗವು ವಿಷ್ಣುವಿನಲ್ಲಿ ಸಾವಕಾಶವಾಯಿತು. ಈ ಲಿಂಗದಿಂದ ಮುಖ್ಯಪ್ರಾಣನೇ ಭೂಮನಾಗಿದ್ದಾನೆಂದು ಸಾಧಿಸಲು ಬರುವುದಿಲ್ಲ.

• • • • •

## ಭಗವತ್ ಕ್ರಿಯೆಯು ಶಕ್ತಿ, ವ್ಯಕ್ತಿ ಎಂದು ಎರಡು ವಿಧ

### तात्पर्यचन्द्रिका

**यद्वा पूर्वदेशसंयोगानभिव्यक्तिरुत्तरदेशसंयोगाभिव्यक्तिश्च क्रियाभिव्यक्तिफलमस्तु ।**

ಅನುವಾದ - ಅಥವಾ ಭಗವತ್ಕ್ರಿಯೆಗೂ ಸಹ ಫಲವಿದೆ. ಯಾವಾಗ ಭಗವಂತನಲ್ಲಿ ಕ್ರಿಯೆಯು ಉಂಟಾಗುತ್ತದೋ ಆವಾಗ ಪೂರ್ವದೇಶ ಸಂಯೋಗವು ಅಭಿವ್ಯಕ್ತವಾಗುವುದಿಲ್ಲ. ಉತ್ತರದೇಶ ಸಂಯೋಗವಷ್ಟೇ ಅಭಿವ್ಯಕ್ತವಾಗುತ್ತದೆ. ಎಲ್ಲೆಡೆ ಭಗವಂತನ ಸಂಯೋಗವೇ ಇದ್ದರೂ ಸಹ ಕೆಲವೆಡೆ ಅಭಿವ್ಯಕ್ತವಾಗಿ ಇನ್ನೂ ಕೆಲವೆಡೆ ಅಭಿವ್ಯಕ್ತವಾಗದೇ ಇರಬಹುದಾದ್ದರಿಂದ ಕ್ರಿಯಾಭಿವ್ಯಕ್ತಿಯೇ ಫಲವೆಂದು ಹೇಳಬಹುದು. ಆದ್ದರಿಂದ ಫಲವಿಲ್ಲದ ಕಾರಣ ಕ್ರಿಯೆಯೇ ಇಲ್ಲವೆಂದು ಹೇಳಲಾಗದು.

**अथवा अणुत्वमहत्त्वयोः सदा सत्त्वेऽपि यदा महत्त्वस्य व्यक्त्यात्मकताऽणुत्वस्य तु शक्त्यात्मकता तदा क्रियाया अपि शक्त्यात्मनैवावस्थानाद्ब्रह्मणः स्वतस्सिद्धः सर्वैः सह संयोग एव । न कस्मादपि विभागः ।**

ಅಥವಾ ಭಗವಂತನಲ್ಲಿ ಅಣುತ್ವ ಹಾಗೂ ಮಹತ್ತ್ವಗಳೂ ಯಾವಾಗಲೂ ಇರುತ್ತದೆ. ಆದರೂ ಸಹ ಯಾವಾಗ ಮಹತ್ತ್ವವು ವ್ಯಕ್ತ್ಯಾತ್ಮನಾ ಇರುತ್ತದೋ ಆವಾಗ ಅಣುತ್ವವು ಶಕ್ತ್ಯಾತ್ಮನಾ ಇರುತ್ತದೆ. ಅದೇ ಸಂದರ್ಭದಲ್ಲಿ ಕ್ರಿಯೆಯೂ ಸಹ ಶಕ್ತಿಸ್ವರೂಪದಿಂದಲೇ ಇರುತ್ತದೆ. ಆದ್ದರಿಂದ ಬ್ರಹ್ಮನಿಗೆ ಸ್ವಾಭಾವಿಕವಾಗಿ ಸಕಲಪದಾರ್ಥಗಳಿಂದ ಸಂಯೋಗವೇ ಇರುತ್ತದೆ; ಹೊರತು ಯಾವ ಪದಾರ್ಥದಿಂದಲೂ ವಿಭಾಗವು ಇರುವುದಿಲ್ಲ.

**यदा तु महत्त्वस्य शक्त्यात्मकताऽणुत्वस्य व्यक्त्यात्मकता तदा क्रियाया अपि व्यक्त्यात्मकत्वात्पूर्वदेशविभागादिकमस्तु ।**

ಪರಿಪೂರ್ಣಚಂದ್ರಿಕಾ

ಯಾವಾಗ ಮಹತ್ತ್ವವು ಶಕ್ತ್ಯಾತ್ಮನಾ ಇದ್ದು ಅಣುತ್ವವು ವ್ಯಕ್ತ್ಯಾತ್ಮನಾ ಇರುತ್ತದೋ, ಆವಾಗ ಕ್ರಿಯೆಯೂ ಸಹ ಅಭಿವ್ಯಕ್ತಿಸ್ವರೂಪದಿಂದಲೇ ಇರುತ್ತದೆ. ಆದ್ದರಿಂದಲೇ ಪೂರ್ವದೇಶ ವಿಭಾಗ, ಉತ್ತರದೇಶ ಸಂಯೋಗಾದಿಗಳೂ ಸಹ ಉಂಟಾಗುತ್ತದೆ.

**एकस्मिन् रूपेऽणुत्वव्यक्तावपि रूपान्तरे महत्त्वव्यक्तिरविरुद्धा । रूपाणामभेदेऽपि सविशेषत्वात् । अचिन्त्यशक्तित्वाच्चेशस्येति दिक् ।**

ಭಗವಂತನಿಗೆ ಅನೇಕ ರೂಪಗಳಿರುವುದರಿಂದ ಒಂದು ರೂಪದಲ್ಲಿ ಅಣುತ್ವವು ವ್ಯಕ್ತವಾಗಿದ್ದರೂ ಮತ್ತೊಂದು ರೂಪದಲ್ಲಿ ಮಹತ್ತ್ವವು ವ್ಯಕ್ತವಾಗಿರುತ್ತದೆ. ಹೀಗೊಪ್ಪುವುದು ವಿರುದ್ಧವಲ್ಲ. ಭಗವಂತನ ಪ್ರತಿಯೊಂದು ರೂಪಗಳಿಗೆ ಅಭೇದವಿದ್ದರೂ ಸಹ ವಿಶೇಷದ ಬಲದಿಂದ ಈ ಒಂದು ವ್ಯತ್ಯಾಸವನ್ನು ಹೇಳಬಹುದು. ಅಥವಾ ಅಚಿಂತ್ಯಾದ್ಭುತಶಕ್ತಿಯನ್ನು ಹೊಂದಿರುವ ಭಗವಂತನಲ್ಲಿ ಇಂತಹ ಕಲ್ಪನಾತೀತವಾದ ಗುಣಗಳು ಇರಬಹುದು. ಈ ಎಲ್ಲ ವಿಚಾರವು ಕೇವಲ ದಿಕ್ಪ್ರದರ್ಶನ. ಇನ್ನೂ ಹೆಚ್ಚಿನ ವಿಚಾರವನ್ನು ಶಿಷ್ಯಂದಿರೇ ಊಹಿಸಿಕೊಳ್ಳಬೇಕು.

**जीवस्याणुत्वे तु सर्वथा पूर्वदेशविभागादिहेतुभूता क्रिया हेतुः न क्रियामात्रमिति वक्ष्यते ।**

ಇನ್ನು 'ಉತ್ಕ್ರಾಂತಿಗತ್ಯಾಗತೀನಾಮ್' ಎಂಬ ಸೂತ್ರದಲ್ಲಿ ಜೀವನನ್ನು ಅಣುಸ್ವರೂಪವೆಂದು ಸಾಧಿಸುತ್ತೇವೆ. ಅದಕ್ಕೆ ಕಾರಣವೇನೆಂದರೆ ಸರ್ವಥಾ ಪೂರ್ವದೇಶವಿಭಾಗಾದಿಗಳಿಗೆ ಕಾರಣವಾಗಿರುವಂತಹ ಕ್ರಿಯೆಯೇ; ಹೊರತು ಕೇವಲ ಕ್ರಿಯೆಯನ್ನು ಕಾರಣವೆಂದು ಹೇಳುವುದಿಲ್ಲ. ಕ್ರಿಯೆಯನ್ನು ಮಾತ್ರ ಕಾರಣವೆಂದು ಹೇಳಿದ್ದಲ್ಲಿ, ನಿಮ್ಮ ಆಕ್ಷೇಪವು ಸಮಂಜಸವಾಗುತ್ತಿತ್ತು.

**अत्र सूत्रे 'सम्यक्प्रसीदति अनेन' इति व्युत्पत्त्या सम्प्रसादः पूर्णसुखम् । सुखे प्रसादशब्दस्तु ईश्वरस्य सुखं चेद्दुःखमपि स्यादिति न शङ्कयम् । पूर्णानन्दकार्येण सम्यक्प्रसादेन दुःखाभावनिश्चयात् ।**

'ಭೂಮಾ ಸಂಪ್ರಸಾದಾದಧ್ಯುಪದೇಶಾತ್' ಎಂಬ ಸೂತ್ರದಲ್ಲಿ 'ಸಂಪ್ರಸಾದಾತ್' ಎಂಬ ಹೇತುವನ್ನು ಹೇಳಿದ್ದಾರೆ .'ಸಮ್ಯಕ್ಪ್ರಸೀದತಿ ಅನೇನ' ಎಂಬ ವ್ಯುತ್ಪತ್ತಿಯಿಂದ 'ಸಂಪ್ರಸಾದ' ಶಬ್ದಕ್ಕೆ 'ಪೂರ್ಣಸುಖ' ಎಂದರ್ಥ. 'ಸುಖ' ಎಂಬರ್ಥದಲ್ಲಿ 'ಪ್ರಸಾದ' ಶಬ್ದವನ್ನು ಪ್ರಯೋಗಿಸುವುದಕ್ಕೆ ಕಾರಣ ಹೀಗಿದೆ. ಈಶ್ವರನಿಗೆ ಸುಖವು ಉಂಟಾಗುವುದಾದರೆ ದುಃಖವೂ ಉಂಟಾಗಲಿ ಎಂದು ಶಂಕಿಸಬಾರದು. ಏಕೆಂದರೆ ಅವನು ಪೂರ್ಣಾನಂದಸ್ವರೂಪನಾದ್ದರಿಂದ ಪೂರ್ಣಾನಂದದ ಕಾರ್ಯವಾದ ಸಮ್ಯಕ್ಪ್ರಸಾದದಿಂದ ದುಃಖವು ಸ್ವಲ್ಪವೂ ಸಹ ಅವನಲ್ಲಿ ಬರುವುದಿಲ್ಲವೆಂದು ನಿಶ್ಚಯಿಸುತ್ತೇವೆ.

ಭೂಮಾಧಿಕರಣ (೧-೩-೨)

**ज्ञानवत्सुखस्यापि दुःखाविनाभावाभावाच्चेति दर्शयितुं प्रयुक्तः ।**

ಮತ್ತು ಜ್ಞಾನವು ದುಃಖದ ಜೊತೆಗೆ ಅವಿನಾಭೂತವಾಗಿ ಹೇಗೆ ಇರುವುದಿಲ್ಲವೋ, ಅದರಂತೆ ಸುಖವೂ ಸಹ ದುಃಖದ ಜೊತೆಗೆ ಅವಿನಾಭೂತವಾಗಿವಿರುವುದಿಲ್ಲವೆಂಬುದನ್ನು ತೋರಿಸಲು ಸಂಪ್ರಸಾದ ಶಬ್ದವನ್ನೇ ಪ್ರಯೋಗಿಸಿದ್ದಾರೆ. ಇಲ್ಲದಿದ್ದರೆ ಪೂರ್ಣಸುಖಸ್ವರೂಪನಾದ್ದರಿಂದ ಎಂದೇ ಪ್ರಯೋಗಿಸುತ್ತಿದ್ದರು. ಹೀಗೆ ದುಃಖವು ಇರುವುದಿಲ್ಲವೆಂದು ತಿಳಿಸುವುದಕ್ಕಾಗಿ ಮತ್ತು ಸುಖವು ದುಃಖದ ಜೊತೆಗೆ ಅವಿನಾಭೂತವಾಗಿಲ್ಲವೆಂದು ತಿಳಿಸುವ ಎರಡು ಉದ್ದೇಶಗಳಿಂದ ಸೂತ್ರದಲ್ಲಿ ಸಂಪ್ರಸಾದ ಶಬ್ದವನ್ನೇ ಬಳಸಿದ್ದಾರೆ.

**अत्र विषयवाक्यक्रमात्सूत्रक्रमः ।**

'ಯೋ ವೈ ಭೂಮಾ ತತ್ಸುಖಮ್' ಎಂಬ ವಾಕ್ಯವು 'ಪ್ರಥಮಸೂತ್ರದ ವಿಷಯವಾಕ್ಯ. 'ಸ ಏವ ಅಧಸ್ತಾತ್' ಎಂಬ ಮುಂದಿನ ವಾಕ್ಯವು ಎರಡನೆಯ ಸೂತ್ರದ ವಿಷಯವಾಕ್ಯ. ವಿಷಯವಾಕ್ಯಕ್ಕೆ ಅನುಸಾರಿಯಾಗಿ ಸೂತ್ರಕ್ರಮವಿದೆ.

**प्रकाशः —**

**ननु 'उत्क्रान्तप्राणान्' इति भूतकालनिर्देशान्न क्रियाया नित्यत्वमिति चेत्तर्हि तदैक्षतेति निर्देशाज्ज्ञाननित्यत्वाभावोऽपि स्यात् । यदि वेदस्यानादिनित्यत्वादद्य इव श्वःप्रभृतिष्वप्यनन्तकालेष्वेवमेवोक्त्या ज्ञानस्यानाद्यनन्तकालतासिद्ध्या वा**

ವಿವರಣೆ - ಆಕ್ಷೇಪ - ಭಗವಂತನ ಕ್ರಿಯೆಯು ನಿತ್ಯವಾಗಿದೆಯೆಂದು ಹೇಳಿದಿರಿ. ಆದರೆ 'ಉತ್ಕ್ರಾಂತಪ್ರಾಣಾನ್' ಎಂಬ ಶ್ರುತಿಯಲ್ಲಿ ಭೂತಕಾಲವನ್ನು ಹೇಳುವ 'ಕ್ತ' ಪ್ರತ್ಯಯವು 'ಉತ್ಕ್ರಾಂತ' ಎಂಬ ಶಬ್ದದಲ್ಲಿರುತ್ತದೆ. ಆದ್ದರಿಂದ ಉತ್ಕ್ರಮಣವೆಂಬ ಕ್ರಿಯೆಯು ಭೂತಕಾಲದಲ್ಲಿ ಮಾತ್ರ ಇತ್ತು ಎಂದು ಇದರಿಂದ ತಿಳಿಯುತ್ತದೆ. ಹೀಗಿರುವಾಗ ನಿತ್ಯವಾಗಿರುತ್ತದೆಂದು ಹೇಗೆ ಹೇಳುತ್ತೀರಿ?

ಸಮಾಧಾನ - ಇದು ತಪ್ಪು. ಹಾಗಾದರೆ 'ತದೈಕ್ಷತ' ಎಂಬಲ್ಲಿಯೂ ಭೂತಕಾಲವನ್ನು ಹೇಳುವ 'ಲಙ್' ಪ್ರಯೋಗವಿದೆ. ಆದ್ದರಿಂದ ಭಗವದ್ವಿಷಯಕವಾದ ಜ್ಞಾನವನ್ನು ಅನಿತ್ಯವೆಂದು ಹೇಳಬೇಕಾದೀತು.

ಆಕ್ಷೇಪ - 'ಐಕ್ಷತ' ಎಂಬ 'ಲಙ್' ಪ್ರಯೋಗದಿಂದ ಪರಮಾತ್ಮನ ಜ್ಞಾನವು ಅನಿತ್ಯವೆಂದಾಗುವುದಿಲ್ಲ. ಏಕೆಂದರೆ ವೇದವು ಅನಾದಿನಿತ್ಯವಾಗಿದೆ. ಇವತ್ತು ಯಾವ ಮಾತನ್ನು ಹೇಳುತ್ತದೋ, ಅದೇ ಮಾತುಗಳನ್ನು ನಾಳೆ, ನಾಡಿದ್ದು ಮೊದಲಾದ ದಿವಸಗಳಲ್ಲಿಯೂ ಹೇಳುತ್ತದೆ. ಹೀಗೆ ಅನಂತಕಾಲದಲ್ಲಿಯೂ ಒಂದೇ ಮಾತನ್ನು ಪ್ರತಿನಿತ್ಯ ಹೇಳುವುದರಿಂದ 'ಐಕ್ಷತ' ಎಂಬ 'ಲಙ್' ಪ್ರಯೋಗವನ್ನು ನಿನ್ನೆ, ಇವತ್ತು, ನಾಳೆ, ನಾಡಿದ್ದೂ ಪ್ರತಿಯೊಂದು ದಿವಸವೂ ಸಹ ಮಾಡುತ್ತದೆ. ಆದ್ದರಿಂದ ಇವತ್ತು 'ಐಕ್ಷತ' ಎಂದು ಹೇಳಿದಾಗ,

ನಿನ್ನೆಯ ದಿವಸ ಪರಮಾತ್ಮನ ಜ್ಞಾನವಿತ್ತೆಂದು ತಿಳಿಯುತ್ತದೆ. ನಾಳೆಯ ದಿವಸ 'ಐಕ್ಷತ' ಎಂದು ಹೇಳಿದಾಗ ಇವತ್ತಿನ ದಿವಸ ಜ್ಞಾನವಿತ್ತೆಂದು ತಿಳಿಯುತ್ತದೆ. ಈ ಕ್ರಮದಲ್ಲಿ ಪ್ರತಿಯೊಂದು ದಿವಸವೂ ಭಗವಂತನಲ್ಲಿ ಜ್ಞಾನವೇ ಸಿದ್ಧವಾಗುವುದರಿಂದ 'ಲಙ್' ಪ್ರಯೋಗ ಮಾಡಿದರೂ ಭಗವಂತನ ಜ್ಞಾನವು ಅನಿತ್ಯವಾಗುವುದೆಂದಾಗುವುದಿಲ್ಲ.

**प्रकाशः** – लकारस्य कालत्रयान्यतमवाचित्वेन कालत्रयवाचिनः कस्यचिल्लकारस्याभावाद्येनकेनचिल्लङादिना निर्देशोऽपि तन्नित्यत्व एव श्रुत्यन्तरसिद्धे तात्पर्याद्वा ज्ञाननित्यत्वसिद्धिः ।

ಅಥವಾ ಯಾವುದೇ ಲಕಾರವು ಮೂರುಕಾಲಗಳಲ್ಲಿ ಒಂದು ಕಾಲವನ್ನಷ್ಟೇ ಹೇಳಲು ಸಾಧ್ಯ. ಮೂರೂಕಾಲಗಳನ್ನು ಒಟ್ಟಿಗೆ ಹೇಳುವ ಯಾವ ಲಕಾರವೂ ವ್ಯಾಕರಣ ಶಾಸ್ತ್ರದಲ್ಲಿಲ್ಲ. ಆದ್ದರಿಂದ ಯಾವುದಾದರೂ ಒಂದು ಲಕಾರವನ್ನು ಪ್ರಯೋಗಿಸಲೇ ಬೇಕು. ಈ ದೃಷ್ಟಿಯಿಂದ ಲಙ್ ಲಕಾರವನ್ನು ಶ್ರುತಿಯು ಬಳಸಿದೆ. ಭಗವಂತನ ಜ್ಞಾನವು ನಿತ್ಯವಾಗಿದೆಯೆಂದು ಬೇರೆ ಶ್ರುತಿಗಳಿಂದ ಸಿದ್ಧವಾದ ಪ್ರಯುಕ್ತ ಲಙ್ ಲಕಾರದಿಂದ ನಿರ್ದೇಶಿಸಲ್ಪಟ್ಟ ಜ್ಞಾನವೂ ಸಹ ನಿತ್ಯವೆಂದೇ ಶ್ರುತಿಯ ತಾತ್ಪರ್ಯವಿರುತ್ತದೆ. ಹೀಗೆ ಎರಡು ಕ್ರಮದಲ್ಲಿ ಭಗವಂತನ ಜ್ಞಾನವು ನಿತ್ಯವೆಂದು ಸಿದ್ಧವಾಗುತ್ತದೆ.

**प्रकाशः** – तर्हि क्रियाया अपि तथात्वमस्तु । अत एव पूर्वं ''ज्ञानं नित्यं क्रिया नित्या'' इत्युदाहृतम् ।

ಸಮಾಧಾನ - ಹಾಗಾದರೆ ನಾವೂ ಸಹ ಭಗವಂತನ ಕ್ರಿಯೆಯನ್ನು ಈ ಕ್ರಮದಲ್ಲಿಯೇ ನಿತ್ಯವೆನ್ನುತ್ತೇವೆ. ಅಂದರೆ ಉತ್ಕ್ರಾಂತ ಎಂಬಲ್ಲಿ ಭೂತಾರ್ಥದಲ್ಲಿ 'ಕ್ತ' ಪ್ರತ್ಯಯವಿದ್ದರೂ ಪ್ರತಿನಿತ್ಯ ವೇದದ ಪ್ರಯೋಗವು ಹೀಗೇ ಇರುವುದರಿಂದ ಭಗವಂತನ ಕ್ರಿಯೆಯು ನಿತ್ಯವೆಂದಾಗುತ್ತದೆ. ಅಥವಾ ಮೂರೂ ಕಾಲದಲ್ಲಿ ಭಗವಂತನ ಕ್ರಿಯೆಗೆ ನಿತ್ಯತ್ವವನ್ನು ಹೇಳುವ ಯಾವುದೇ ಲಕಾರಗಳಿಲ್ಲದ ಕಾರಣ ಭೂತಾರ್ಥದಲ್ಲಿರುವ 'ಕ್ತ' ಪ್ರತ್ಯಯವನ್ನು ಪ್ರಯೋಗಿಸಿದೆ. ಬೇರೆ ಶ್ರುತಿಯ ಆಧಾರದಿಂದ ಕ್ರಿಯೆಯ ನಿತ್ಯತ್ವವು ಸಿದ್ಧವಾಗುತ್ತದೆ. ಆದ್ದರಿಂದಲೇ ಹಿಂದೆ 'ಜ್ಞಾನಂ ನಿತ್ಯಂ ಕ್ರಿಯಾ ನಿತ್ಯಾ' ಎಂಬ ಕ್ರಿಯಾನಿತ್ಯತ್ವವನ್ನು ಸಮರ್ಥಿಸುವ ಶ್ರುತಿಯನ್ನು ಉದಾಹರಿಸಲಾಗಿದೆ.

**प्रकाशः** – ननु यदीश्वरक्रिया नित्या सर्वदोपलभ्येतेति चेन्न । अयोग्यत्वेन प्रत्यक्षेणोपलम्भस्य (आपदयितुमशक्यत्वात् अगमादिजन्योपलम्भस्य तु) तु क्रिया नित्येति सत्त्वात् ।

ಆಕ್ಷೇಪ - ಒಂದು ವೇಳೆ ಈಶ್ವರನ ಕ್ರಿಯೆಯು ನಿತ್ಯವೆನ್ನುವುದಾದರೆ ಯಾವಾಗಲೂ ಉಪಲಬ್ಧವಾಗಬೇಕಲ್ಲವೇ?

ಸಮಾಧಾನ - ಇದು ಸರಿಯಲ್ಲ. ಯಾವಾಗಲೂ ಉಪಲಬ್ಧವಾಗಬೇಕೆಂದು ಹೇಗೆ ಹೇಳುತ್ತೀರಿ? ಪ್ರತ್ಯಕ್ಷದಿಂದ ಉಪಲಬ್ಧವಾಗಲು ಸಾಧ್ಯವಿಲ್ಲ. ಈಶ್ವರನ ಕ್ರಿಯೆಯು ಪ್ರತ್ಯಕ್ಷಕ್ಕೆ ಅಯೋಗ್ಯವಾದ್ದರಿಂದ 'ಪ್ರತ್ಯಕ್ಷದಿಂದ ಉಪಲಬ್ಧವಾಗಲಿ' ಎಂದು ಆಪಾದನೆ ಮಾಡುವುದೇ ತಪ್ಪಾಗುತ್ತದೆ. ಇನ್ನು ಆಗಮಾದಿಗಳಿಂದ ಉಪಲಬ್ಧವಾಗಲಿ ಎಂದರೆ ಆಗಮಾದಿಗಳಲ್ಲಿ ಕ್ರಿಯೆಯನ್ನು ನಿತ್ಯವೆಂದೇ ಹೇಳಲಾಗಿದೆ.

**प्रकाशः** – अभिव्यक्तेः कादाचित्कत्वेन कदाचिदुपलम्भस्यापि सम्भवाच्च । उक्तञ्च सुधायामत्तेतिनये ''कदाचिदभिव्यक्तेः कदाचिदेवोपलभ्यत इत्यङ्गीकारे न बाधकं पश्यामः'' इति ।

ಅಥವಾ ಭಗವಂತನಲ್ಲಿ ಕ್ರಿಯೆಯು ನಿತ್ಯವಾಗಿದ್ದರೂ ಅದರ ಅಭಿವ್ಯಕ್ತಿಯು ಕೆಲವು ಕಾಲದಲ್ಲಷ್ಟೇ ಇರುತ್ತದೆಂದು ಒಪ್ಪಿದ್ದರಿಂದ ಕ್ರಿಯೆಯ ಉಪಲಬ್ಧಿಯೂ ಸಹ ಕೆಲವೊಮ್ಮೆ ಮಾತ್ರ ಇರುತ್ತದೆಂಬುದು ಯುಕ್ತವಾಗುತ್ತದೆ. ಇದೇ ವಿಚಾರವು ನ್ಯಾಯಸುಧೆಯ ಅತ್ತೃತ್ವಾಧಿಕರಣದಲ್ಲಿ 'ಕದಾಚಿದಭಿವ್ಯಕ್ತೇಃ ಕದಾಚಿದೇವೋಪಲಭ್ಯತ ಇತ್ಯಂಗೀಕಾರೇ ನ ಬಾಧಕಂ ಪಶ್ಯಾಮಃ' 'ಕೆಲವೊಮ್ಮೆ ಮಾತ್ರ ಅಭಿವ್ಯಕ್ತವಾಗುವ ಪ್ರಯುಕ್ತ, ಕೆಲವೊಮ್ಮೆ ಮಾತ್ರ ಉಪಲಬ್ಧವಾಗುತ್ತದೆಂದು ಅಂಗೀಕರಿಸಿದರೆ ಬಾಧಕವನ್ನೇನೂ ನಾವು ಕಾಣುವುದಿಲ್ಲ' ಎಂದು ಹೇಳಿರುತ್ತಾರೆ.

**प्रकाशः** – एतेन भगवति नित्यमुत्क्रमणवत्त्वे जीवस्य सर्वदा मरणमेव स्यादिति निरस्तम् । शक्त्यात्मनोत्क्रमणस्य नित्यत्वेऽपि कदाचिदेव व्यज्यमानत्वेन दोषाभावात् ।

ಆಕ್ಷೇಪ - ಒಂದು ವೇಳೆ ಭಗವಂತನಲ್ಲಿ ನಿತ್ಯವಾದ ಉತ್ಕ್ರಮಣವೆಂಬ ಕ್ರಿಯೆಯನ್ನು ಒಪ್ಪುವುದಾದರೆ ಜೀವನಿಗೆ ನಿರಂತರ ಮರಣವೇ ಬರಬೇಕಾಗುತ್ತದಲ್ಲವೇ?

ಸಮಾಧಾನ - ಈ ಆಕ್ಷೇಪವೂ ಸಹ ಹಿಂದಿನ ಪರಿಹಾರದಿಂದಲೇ ನಿರಾಕೃತವಾಯಿತು. ಏಕೆಂದರೆ ಭಗವಂತನ ದೇಹೋತ್ಕ್ರಮಣವು ಶಕ್ತ್ಯಾತ್ಮನಾ ನಿತ್ಯವೆಂದು ಒಪ್ಪಿದರೂ ಒಂದು ಕಾಲದಲ್ಲಷ್ಟೇ ವ್ಯಕ್ತವಾಗುತ್ತದೆ. ಯಾವ ಕಾಲದಲ್ಲಿ ವ್ಯಕ್ತವಾಗುತ್ತದೋ, ಅದನ್ನೇ ಮರಣವೆಂದು ತಿಳಿಯಬೇಕು. ಯಾವಾಗಲೂ ವ್ಯಕ್ತವಾಗದ ಕಾರಣ ದೋಷವಿಲ್ಲ.

**प्रकाशः** – ननु यदि क्रिया विभागादिकार्यं न कुर्यात्तर्हि क्रियात्वं व्याहन्येत । संयोगविभागासमवायिकारणत्वात्क्रियायाः । यदि सा तौ कुर्यात्तर्हि तस्यास्संयोगविभागौ प्रत्यनपेक्षकारणत्वात्तदुत्पत्तिसातत्यप्रसङ्ग इति चेत्

ಆಕ್ಷೇಪ - ಭಗವಂತನಲ್ಲಿ ಕ್ರಿಯೆಯು ನಿತ್ಯವಾಗಿದೆ. ಆದರೆ ನಿತ್ಯವಾಗಿ ವಿಭಾಗ, ಸಂಯೋಗ ಮೊದಲಾದ ಕಾರ್ಯವನ್ನು ಹುಟ್ಟಿಸುವುದಿಲ್ಲವೆಂದು ಸಿದ್ಧಾಂತಿಗಳು ಹೇಳುತ್ತಿದ್ದೀರಿ. ಹಾಗಾದರೆ ಇದು ಕ್ರಿಯೆಯೇ

ಆಗುವುದಿಲ್ಲ. ಏಕೆಂದರೆ ಸಂಯೋಗ, ವಿಭಾಗಗಳಿಗೆ ಯಾವುದು ಅಸಮವಾಯಿ ಕಾರಣವಾಗಿರುತ್ತದೋ, ಅದೇ ಕ್ರಿಯೆಯೆನಿಸುತ್ತದೆ. ಭಗವಂತನ ಕ್ರಿಯೆಯನ್ನು ಕ್ರಿಯೆಯೆನ್ನಬೇಕಾದರೆ ಸಂಯೋಗ, ವಿಭಾಗಗಳು ಉಂಟಾಗುತ್ತದೆಂದು ಒಪ್ಪಲೇಬೇಕು. ಏಕೆಂದರೆ ಸಂಯೋಗ, ವಿಭಾಗಗಳನ್ನು ಕುರಿತು ಕ್ರಿಯೆಯು ಅನಪೇಕ್ಷ ಕಾರಣವಾಗಿದೆ. ಅಂದರೆ ಕ್ರಿಯೆ ಇರುತ್ತದೆಂದರೆ ಸಂಯೋಗ ಅಥವಾ ವಿಭಾಗಗಳು ಆಗಲೇಬೇಕು. ಮತ್ತೊಂದು ಕಾರಣವನ್ನು ಅಪೇಕ್ಷಿಸುವುದಿಲ್ಲ. ಆದ್ದರಿಂದ ನಿರಂತರಕ್ರಿಯೆ ಇರುವುದಾದಲ್ಲಿ ನಿರಂತರ ಸಂಯೋಗ, ವಿಭಾಗಗಳು ನಡೆಯುತ್ತಲೇ ಇರಬೇಕಾಗುತ್ತದಲ್ಲವೇ?

**प्रकाशः** – ज्ञानेऽप्यस्य तुल्यत्वात् । अस्तु वा संयोगादिजनकत्वम् । तच्च द्वेधा । तदभिव्यक्तिजनकत्वेनोपचाराद्वा मुख्यत एव वेति भावेनाद्यं तावदाह – यद्वेति ॥

ಈ ದೋಷ ಭಗವಂತನ ಜ್ಞಾನವನ್ನು ನಿತ್ಯವೆಂದು ಹೇಳಿದಾಗಲೂ ಸಮಾನವಾಗಿದೆ. ಆದ್ದರಿಂದ ನಮ್ಮ ಪ್ರತಿಬಂಧಿಗೆ ನೀವು ಏನು ಉತ್ತರಿಸುತ್ತೀರೋ ಅದನ್ನೇ ನಾವೂ ಸಹ ಉತ್ತರಿಸುತ್ತೇವೆ.

ಅಥವಾ ಭಗವಂತನ ಕ್ರಿಯೆಯು ಸಂಯೋಗಾದಿಗಳಿಗೆ ಜನಕವಾಗಿದೆಯೆಂದೇ ಒಪ್ಪೋಣ. ಎರಡು ಬಗೆಯಲ್ಲಿ ಸಂಯೋಗಾದಿ ಜನಕವಾಗಬಹುದು ಎಂದರೆ ಸಂಯೋಗ ವಿಭಾಗಾದಿಗಳ ಅಭಿವ್ಯಕ್ತಿಗೆ ಜನಕವಾಗಿರುವುದರಿಂದ ಔಪಚಾರಿಕವಾಗಿ ಅಥವಾ ಮುಖ್ಯವಾಗಿ ಕ್ರಿಯೆಯು ಜನಕ ಎಂದು ಹೇಳಬಹುದು. ಇವೆರಡರಲ್ಲಿ ಮೊದಲನೆಯ ಪಕ್ಷವನ್ನು 'ಯದ್ವಾ' ಇತ್ಯಾದಿ ಗ್ರಂಥದಿಂದ ಸಮರ್ಥಿಸುತ್ತಿದ್ದಾರೆ.

**प्रकाशः** – क्रियायाश्शक्त्यात्मकत्वं व्यक्त्यात्मकत्वं चेति द्वैरूप्यम् । तत्र शक्त्यात्मना नित्याऽपि सा यदा व्यज्यते तदा पूर्वदेशसंयोगानभिव्यक्तिरुत्तरदेश-संयोगाभिव्यक्तिश्च जायते । देशान्तरसयोगानभिव्यक्तिमात्रेण विभागव्यवहार इति भावः ।

ಕ್ರಿಯೆಯು ಶಕ್ತ್ಯಾತ್ಮಕ ಹಾಗೂ ವ್ಯಕ್ತ್ಯಾತ್ಮಕ ಎಂದು ಎರಡು ವಿಧದಲ್ಲಿದೆ, ಶಕ್ತ್ಯಾತ್ಮನಾ ನಿತ್ಯವಾಗಿದ್ದರೂ ಯಾವಾಗ ವ್ಯಕ್ತವಾಗುತ್ತದೋ, ಆವಾಗ ಪೂರ್ವದೇಶಸಂಯೋಗವು ಅನಭಿವ್ಯಕ್ತವಾಗಿರುತ್ತದೆ. ಹಾಗೂ ಉತ್ತರದೇಶ ಸಂಯೋಗವು ಅಭಿವ್ಯಕ್ತವಾಗುತ್ತದೆ. ಇದರಂತೆ ದೇಶಾಂತರಸಂಯೋಗದ ಅನಭಿವ್ಯಕ್ತಿಯ ಕಾರಣದಿಂದ 'ವಿಭಾಗ' ಎಂಬ ವ್ಯವಹಾರವು ಯುಕ್ತವಾಗುತ್ತದೆಂದು ತಿಳಿಯಬೇಕು

**प्रकाशः** – ननु केयं क्रियाभिव्यक्तिर्नाम । न तावत्प्रतीतिः । ईश्वरापेक्षया नित्यसिद्धत्वेन सर्वदा संयोगव्यक्त्यापत्तेः ।

ಆಕ್ಷೇಪ - ಕ್ರಿಯೆಯು ಅಭಿವ್ಯಕ್ತವಾಗುತ್ತದೆಂಬುದಕ್ಕೆ ಏನರ್ಥ? ಪ್ರತೀತವಾಗುತ್ತದೆಂಬುದು ಸರಿಯಲ್ಲ. ಏಕೆಂದರೆ ಈಶ್ವರನ ದೃಷ್ಟಿಯಿಂದ ಕ್ರಿಯೆಯು ಪ್ರತೀತವಾಗುತ್ತದೋ? ಅಥವಾ ಬೇರೆಯವರ ದೃಷ್ಟಿಯಿಂದ

ಕ್ರಿಯೆಯು ಪ್ರತೀತವಾಗುತ್ತದೋ? ಎಂಬ ಪ್ರಶ್ನೆಗೆ ಉತ್ತರಿಸಬೇಕು. ಈಶ್ವರನ ದೃಷ್ಟಿಯಿಂದ ಪ್ರತೀತವಾಗುತ್ತದೆನ್ನುವುದಾದರೆ ಈಶ್ವರನಿಗೆ ನಿರಂತರವಾಗಿ ಪ್ರತೀತಿಯಿರುವುದರಿಂದ ಯಾವಾಗಲೂ ಸಂಯೋಗವು ಅಭಿವ್ಯಕ್ತವಾಗಬೇಕಾದೀತು.

**प्रकाशः** – परापेक्षया कदाऽप्यभावेन नित्यमनभिव्यक्त्यापत्तेः । परप्रतीतिरूपक्रियाभिव्यक्तिभावे वा संयोगव्यक्त्यादिकार्योत्पादस्य तदनपेक्षत्वात् । अत एव नावरणनिवृत्तिर्व्यक्तिरिति ।

ಇನ್ನು ಬೇರೆಯವರ ದೃಷ್ಟಿಯಿಂದ ಅಭಿವ್ಯಕ್ತವಾಗುತ್ತಿದೆಯೆನ್ನುವುದಾದರೆ ಈಶ್ವರನ ಕ್ರಿಯೆಯು ಅತೀಂದ್ರಿಯವಾದ್ದರಿಂದ ಅವನ ಕ್ರಿಯೆಯ ಪ್ರತೀತಿಯು ಬೇರೆಯವರಿಗೆ ಯಾವಾಗಲೂ ಬರಲು ಸಾಧ್ಯವೇ ಇಲ್ಲ. ಆದ್ದರಿಂದ ಈಶ್ವರನ ಕ್ರಿಯೆಯು ಅಭಿವ್ಯಕ್ತವಾಗುತ್ತದೆಂಬುದು ಕೂಡುವುದೇ ಇಲ್ಲ. ಒಂದು ವೇಳೆ ಆಗಮಾದಿಗಳಿಂದ ಜೀವರಿಗೆ ಅಂತಹ ಪ್ರತೀತಿಯನ್ನು ಒಪ್ಪಿದರೂ ಆ ಪ್ರತೀತಿಯು ಸಂಯೋಗ, ವಿಭಾಗ ಮೊದಲಾದ ಕಾರ್ಯಗಳ ವ್ಯುತ್ಪತ್ತಿಗೆ ಪ್ರಯೋಜಕವಾಗುವುದಿಲ್ಲ. ಆದ್ದರಿಂದಲೇ ಆವರಣ ನಿವೃತ್ತಿಯನ್ನು ಅಭಿವ್ಯಕ್ತಿಯೆಂದು ಹೇಳಲಾಗದು. ಏಕೆಂದರೆ ಕ್ರಿಯೆಗೆ ಇರುವ ಆವರಣನಿವೃತ್ತಿಯು ಈಶ್ವರನ ದೃಷ್ಟಿಯಿಂದ ಹೇಳಲಾಗದು. ಈಶ್ವರನಿಗೆ ಆವರಣವೇಇಲ್ಲದ ಕಾರಣ, ಆವರಣನಿವೃತ್ತಿಯನ್ನು ಅಭಿವ್ಯಕ್ತಿಯೆಂದು ಹೇಳುವುದು ತಪ್ಪಾಗುತ್ತದೆ. ಬೇರೆಯವರ ದೃಷ್ಟಿಯಿಂದ ಯಾವ ಆವರಣವಿದೆಯೋ, ಅದರ ನಿವೃತ್ತಿಯೇ ಅಭಿವ್ಯಕ್ತಿಯೆಂದು ಹೇಳುವುದಾದರೆ ನಿರಂತರವಾಗಿ ಆವರಣವು ನಿವೃತ್ತವಾಗದ ಕಾರಣ ಅಭಿವ್ಯಕ್ತಿಯು ಯಾವಾಗಲೂ ಇಲ್ಲವೆಂದೇ ಆಯಿತು. ಒಂದು ವೇಳೆ ಆವರಣವು ನಿವೃತ್ತವಾದರೂ ಕಾರ್ಯದ ವ್ಯುತ್ಪತ್ತಿಗೆ ಅದರ ಉಪಯೋಗವಿಲ್ಲ. ಆದ್ದರಿಂದ ಕ್ರಿಯೆಯು ಅಭಿವ್ಯಕ್ತವಾಗುತ್ತದೆಂಬುದನ್ನು ಸಮರ್ಥಿಸಲಾಗದು.

**प्रकाशः** – मैवम् । ''व्यक्तिशब्देनावस्थानविशेषस्य विवक्षितत्वात्'' इत्यत्तेति नये सुधायामेवोक्तेरिति तात्पर्यात् । संयोगविशेषस्वरूपोत्पादकत्वमप्यस्तीत्याह – **अथवेति** ।।

ಸಮಾಧಾನ - ವ್ಯಕ್ತಿ ಶಬ್ದಕ್ಕೆ ಪ್ರತೀತವಾಗುತ್ತದೆಂದರ್ಥವಲ್ಲ. ಹೊರತಾಗಿ, 'ವ್ಯಕ್ತಿಶಬ್ದೇನ ಅವಸ್ಥಾವಿಶೇಷಸ್ಯ ವಿವಕ್ಷಿತತ್ವಾತ್' ಎಂಬ ಅತ್ತ್ಯತ್ವಾಧಿಕರಣದ ನ್ಯಾಯಸುಧೆಯ ಮಾತಿನಂತೆ ವ್ಯಕ್ತಿಶಬ್ದದಿಂದ ಶಕ್ತಿಯ ಅವಸ್ಥಾವಿಶೇಷವನ್ನೇ ವಿವಕ್ಷಿಸಬೇಕು ಎಂದು ಹೇಳುತ್ತೇವೆ. ಹೀಗೆ ಹೇಳಿದಾಗ ಹಿಂದಿನ ದೋಷಗಳಿಗೆ ಅವಕಾಶವಿಲ್ಲ. ಅಂದರೆ ಕ್ರಿಯೆಯು ಅಭಿವ್ಯಕ್ತಿರೂಪದಿಂದ ಮಾತ್ರ ವ್ಯವಹಾರಕ್ಕೆ ಕಾರಣವಾಗುತ್ತದೆ. ಕ್ರಿಯಾಭಿವ್ಯಕ್ತಿಗೆ ಸಂಯೋಗವಿಶೇಷವೆಂಬ ಸ್ವರೂಪೋತ್ಪಾದಕತ್ವವೂ ಸಹ ಇರುತ್ತದೆಂಬ ವಿಚಾರವನ್ನು 'ಅಥವಾ' ಇತ್ಯಾದಿ ಗ್ರಂಥದಿಂದ ಸಮರ್ಥಿಸುತ್ತಿದ್ದಾರೆ.

**प्रकाशः** – ननूक्तं तथात्वे तदुत्पत्तिसातत्यप्रसङ्ग इति ।

ಆಕ್ಷೇಪ - ಕ್ರಿಯೆಯು ನಿತ್ಯವೆಂದು ಹೇಳಿದರೆ ಸಂಯೋಗ, ವಿಭಾಗಗಳ ಉತ್ಪತ್ತಿಯು ನಿರಂತರ ಆಗಬೇಕಾದೀತಲ್ಲವೇ?

**प्रकाशः** – तन्न । क्रियाव्यक्तिदशायामेव देशान्तरसंयोगविभाग-विशेषोत्पादाभ्युपगमात् । क्रियाव्यक्तिश्च तत्प्रयोजकाणुत्वव्यक्तिदशायामेवेति न कोऽपि दोष इति ।

ಸಮಾಧಾನ - ಇದು ತಪ್ಪು. ಕ್ರಿಯೆಯು ಯಾವಾಗ ಅಭಿವ್ಯಕ್ತವಾಗಿರುತ್ತದೋ, ಆವಾಗ ಮಾತ್ರ ಅದು ದೇಶಾಂತರಸಂಯೋಗ ಹಾಗೂ ವಿಭಾಗಗಳಿಗೆ ಉತ್ಪಾದಕವಾಗುತ್ತದೆಂದು ಒಪ್ಪಿದ್ದೇವೆ. ಕ್ರಿಯೆಯು ಯಾವಾಗ ಅಭಿವ್ಯಕ್ತವಾಗುತ್ತದೆಂದರೆ ಕ್ರಿಯೋತ್ಪತ್ತಿಗೆ ಪ್ರಯೋಜಕವಾದ ಅಣುತ್ವವೆಂಬ ಧರ್ಮವು ಭಗವಂತನಲ್ಲಿ ಯಾವಾಗ ಅಭಿವ್ಯಕ್ತವಾಗುತ್ತದೋ, ಆವಾಗ ಮಾತ್ರ. ಅಂದರೆ ಆ ಸಮಯದಲ್ಲಿ ಮಾತ್ರ ಕ್ರಿಯೆಯು ಉಂಟಾಗುತ್ತದೆಂದು ಒಪ್ಪುತ್ತೇವೆ. ಹೀಗೆ ಹೇಳಿದಾಗ ಯಾವುದೇ ದೋಷಕ್ಕೂ ಅವಕಾಶವಿಲ್ಲ.

**प्रकाशः** – ननु क्रिया स्वसत्तोत्तरक्षणे संयोगादिकं करोत्युत विरम्य वा । नाद्यः । स्वसत्ताया इदम्प्रथमताभावेन संयोगादिविशेषस्य विवक्षितक्षणादपि पूर्वमुत्पत्तिप्रसङ्गात् । न द्वितीयः । पूर्वोत्तरावस्थयोरविशिष्टस्य विरम्य व्यापारायोगात् । उत्तरसंयोगस्य कर्मविनाशकत्वेन कृतसंयोगस्य कर्मणोऽवस्थानानुपपत्तेश्च । तथा व्यक्तिश्च किं क्रियातो भिन्ना न वेत्यादिचोद्य-निराकरणमत्ताधिकरणानुव्याख्यानसुधादौ द्रष्टव्यमिति भावेनाह – दिगिति ।।

ಆಕ್ಷೇಪ - ಈಶ್ವರನ ಕ್ರಿಯೆಯು ಸಂಯೋಗ ಹಾಗೂ ವಿಭಾಗಗಳನ್ನು ಉತ್ಪತ್ತಿ ಮಾಡುತ್ತದೋ, ಇಲ್ಲವೋ ಎಂದು ವಿಕಲ್ಪಿಸಿದಾಗ ಉತ್ಪತ್ತಿಯಾಗುವುದಿಲ್ಲ. ಆದರೆ ಕ್ರಿಯೆಯಾಗಿದೆ ಎಂದು ಹೇಳಿದರೆ ವ್ಯಾಹತಿ ದೋಷ ಬರುತ್ತದೆ. ಇನ್ನು ಈಶ್ವರನ ಕ್ರಿಯೆಯು ಸಂಯೋಗ, ವಿಭಾಗಗಳಿಗೆ ಜನಕವಾಗಿದೆ ಎಂಬ ಪಕ್ಷದಲ್ಲಿ ಕ್ರಿಯೆಯು ತಾನಿರುವ ಉತ್ತರಕ್ಷಣದಲ್ಲಿ ಸಂಯೋಗಾದಿಗಳನ್ನು ಉತ್ಪತ್ತಿ ಮಾಡುತ್ತದೋ, ಅಥವಾ ಕೆಲವು ಕ್ಷಣಗಳ ಅನಂತರ ಉತ್ಪತ್ತಿ ಮಾಡುತ್ತದೋ, ಕ್ರಿಯೆಯು ನಿತ್ಯವಾದ್ದರಿಂದ ಇದೇ ಮೊದಲು ಇರುತ್ತದೆಂದು ಹೇಳಲಾಗದು ಎಂದು ಪ್ರಶ್ನಿಸುತ್ತೇವೆ. ಆದ್ದರಿಂದ ವಿವಕ್ಷಿತವಾದ ಕ್ಷಣಗಳಿಗಿಂತಲೂ ಮೊದಲ ಕ್ಷಣಗಳೂ ಸಹ ಸ್ವಸತ್ತೋತ್ತರ ಕ್ಷಣಗಳಾಗಿರುವುದರಿಂದ ಸಂಯೋಗಾದಿ ವಿಶೇಷಗಳ ಉತ್ಪತ್ತಿ ಮೊದಲೇ ಆಗಬೇಕಾದೀತು.

ಎರಡನೆಯ ಪಕ್ಷದಲ್ಲಿ 'ಕೆಲವು ಕ್ಷಣಗಳ ಅನಂತರ ಉತ್ಪತ್ತಿ ಮಾಡುತ್ತದೆ' ಎಂದು ಅಂಗೀಕರಿಸಿದರೆ ಅದೂ ಸಹ ಉಪಪನ್ನವಾಗುವುದಿಲ್ಲ. ಏಕೆಂದರೆ ಕ್ರಿಯೆಯಲ್ಲಿ ಪೂರ್ವೋತ್ತರಕ್ಷಣಗಳಲ್ಲಿ ವೈಲಕ್ಷಣ್ಯವು ಕಾಣಿಸುವುದಿಲ್ಲ. ಆದ್ದರಿಂದ ವಿರಮ್ಯ ವ್ಯಾಪಾರವನ್ನು ಹೇಳುವುದೂ ಸಹ ಅದಕ್ಕೆ ಕೂಡುವುದಿಲ್ಲ. ಹಾಗೂ ಉತ್ತರದೇಶಸಂಯೋಗವು ಕ್ರಿಯಾನಾಶಕವೆಂಬ ನಿಯಮವಿರುವುದರಿಂದ ಸಂಯೋಗದ ಉತ್ಪತ್ತಿಯ ಅನಂತರ ಸಂಯುಕ್ತವಾದ ಕ್ರಿಯೆಯ ಇರುವಿಕೆಯೂ ಸಹ ಕೂಡುವುದಿಲ್ಲ. ಇದರಂತೆ ಅಭಿವ್ಯಕ್ತಿಯೂ ಸಹ ಕ್ರಿಯೆಗಿಂತ ಭಿನ್ನವೋ, ಅಲ್ಲವೋ? ಇತ್ಯಾದಿ ವಿಕಲ್ಪಗಳನ್ನು ಮಾಡಿ ನಿರಾಕರಿಸಬೇಕು. ಆದ್ದರಿಂದ ಭಗವಂತನ ಕ್ರಿಯೆಯನ್ನು ನಿತ್ಯವೆಂದು ಹೇಗೆ ಹೇಳುತ್ತೀರಿ?

ಭೂಮಾಧಿಕರಣ (೧-೩-೨)

ಸಮಾಧಾನ - ಇವೇ ಮೊದಲಾದ ಆಕ್ಷೇಪಗಳನ್ನು ಅತ್ತ್ರತ್ವಾಧಿಕರಣದ ಅನುವ್ಯಾಖ್ಯಾನ ಹಾಗೂ ಸುಧೆಯಲ್ಲಿ ನಿರಾಕರಿಸಿದಂತೆ ಖಂಡನೆ ಮಾಡಬೇಕು. ಸುಧೆಯಲ್ಲಿ ಹೇಳಿದ ಪರಿಹಾರ ಹೀಗಿದೆ - ಭಗವಂತನ ಕ್ರಿಯೆಯು ಸಂಯೋಗ ಹಾಗೂ ವಿಭಾಗಗಳಿಗೆ ಜನಕವೇ ಆಗಿವೆ. ಮತ್ತು ಆ ಈಶ್ವರನ ಕ್ರಿಯೆಯು ಕೆಲವು ಕ್ಷಣಗಳ 'ಅನಂತರವೇ ಸಂಯೋಗಾದಿಗಳನ್ನು ಉತ್ಪತ್ತಿ ಮಾಡುತ್ತದೆ ಎಂದೂ ಸಹ ಉತ್ತರಿಸಬೇಕು. ಅಂದರೆ ಕ್ರಿಯೆಯು ಅಭಿವ್ಯಕ್ತಿಯಿಂದ ವಿಶಿಷ್ಟವಾದ ಸಂಯೋಗ ಹಾಗೂ ವಿಭಾಗಗಳನ್ನು ಉಂಟುಮಾಡುತ್ತದೆ. ಆದ್ದರಿಂದ ಈ ರೀತಿ ಹೇಳಿದಾಗ ವಿರಮ್ಯ ವ್ಯಾಪಾರದ ಅನುಪಪತ್ತಿಯು ಬರುವುದಿಲ್ಲ. ಒಂದು ವೇಳೆ ಕ್ರಿಯೆಗೆ ವಿರಮ್ಯ ವ್ಯಾಪಾರವು ಅನುಪಪನ್ನವಾಗಿದ್ದಲ್ಲಿ, ಅವಯವಕ್ರಿಯೆಯೂ ಕೂಡ ಉತ್ತರದೇಶಸಂಯೋಗವನ್ನು ತನ್ನ ಉತ್ಪತ್ತಿಯ ಅವ್ಯವಹಿತವಾದ ಮುಂದಿನ ಕ್ಷಣದಲ್ಲಿ ಉತ್ಪತ್ತಿ ಮಾಡಬೇಕಾದೀತು. ಕ್ರಿಯೆಯು ಸಂಯೋಗದ ಉತ್ಪತ್ತಿಯ ಅನಂತರದಲ್ಲಿ ಇರುವುದಿಲ್ಲವೆಂಬ ನಿಯಮವು ಅನಿತ್ಯಕ್ರಿಯೆಯಲ್ಲಿ ಮಾತ್ರ. ಅಂದರೆ ಈಶ್ವರನ ಕ್ರಿಯೆಯ ಅಭಿವ್ಯಕ್ತಿಯು ಕಾದಾಚಿತ್ಕವಾಗಿದೆ. ಆದ್ದರಿಂದ ಅಭಿವ್ಯಕ್ತಿಯನ್ನು ಅನುಸರಿಸಿ ಪೂರ್ವೋತ್ತರ ಅವಸ್ಥೆಗಳಲ್ಲಿ ವ್ಯತ್ಯಾಸವನ್ನು ಇಟ್ಟುಕೊಳ್ಳಬೇಕು. ಹೀಗೆ ಕ್ರಿಯೆಯು ಅಭಿವ್ಯಕ್ತಿಯಾದ ಅನಂತರವೇ ವಿರಾಮವಿಲ್ಲದೇ ಸಂಯೋಗದ ಉತ್ಪತ್ತಿಯಾಗುವುದರಿಂದ ಬಾಧಕವಿಲ್ಲ. ಇವೇ ಮೊದಲಾದ ಸಮಾಧಾನಗಳನ್ನು ಸುಧೆಯಲ್ಲಿ ಹೇಳಿದ್ದಾರೆ. ಅದನ್ನು ಇಲ್ಲಿ ಅನುಸಂಧಾನ ಮಾಡಿಕೊಳ್ಳಬೇಕು. ಈ ಅಭಿಪ್ರಾಯದಿಂದ ಗ್ರಂಥಕಾರರು 'ದಿಕ್‌ಪ್ರದರ್ಶನಮ್' ಎಂದು ಹೇಳಿದ್ದಾರೆ.

**प्रकाशः – तथा हि ।। व्यक्त्या विशिष्टस्य कर्मणः कार्योत्पादकत्वेन शक्त्यात्मकस्य विरम्यैव तत्करणोपपत्तेः । कृतसंयोगस्य कर्मणोऽवस्थानं नेत्यस्यानित्य-क्रियाविषयत्वेनोपपत्तेश्च ।**

'ತಥಾಹಿ' ಎಂಬ ಗ್ರಂಥದ ಅಭಿಪ್ರಾಯ ಹೀಗೆ -

ಅಭಿವ್ಯಕ್ತಿ ವಿಶಿಷ್ಟವಾದ ಕರ್ಮವೇ ಸಂಯೋಗಾದಿಜನಕವಾದ್ದರಿಂದ ಶಕ್ತ್ಯಾತ್ಮನಾ ಇರುವ ಕ್ರಿಯೆಗೆ ಅಥವಾ ಕರ್ಮಕ್ಕೆ ವಿರಮ್ಯವ್ಯಾಪಾರವನ್ನು ಕೂಡಿಸಲು ಬರುತ್ತದೆ. ಹಾಗೂ ಯಾವುದರಲ್ಲಿ ಸಂಯೋಗವು ಉತ್ಪನ್ನವಾಗುತ್ತದೋ, ಅಂತಹ ಸಂಯೋಗವೆಂಬ ಕ್ರಿಯೆಯು ನಿರಂತರವಾಗಿರುವುದಿಲ್ಲವೆಂಬ ವ್ಯಾಪ್ತಿಯು ಕೇವಲ ಅನಿತ್ಯಕ್ರಿಯೆಯಲ್ಲಿ ಮಾತ್ರ ಹೊರತು, ನಿತ್ಯಕ್ರಿಯೆಯಲ್ಲಿ ಸಂಬಂಧ ಪಡುವುದಿಲ್ಲ ಎಂದೂ ಸಮಾಧಾನವನ್ನು ಹೇಳಬಹುದು.

**प्रकाशः – उक्तं च बृहदारण्यकभाष्ये -**

व्यक्तिभावं गता या तु करोतीति स्वरूपिणी ।
शक्तिरूपस्थिता सैव क्रियाशक्तिरितीर्यते ।
सा च व्यक्तिस्तु जनिवत्क्रियाया रूपमेव तु ।

तथापि तु विशेषेण स्वरूपेण विशेषणम् ।
जनेर्जनिवदेवासौ ज्ञातव्या व्यतिरेकतः ।। इति ।

ಈ ವಿಷಯವು ಬೃಹದಾರಣ್ಯಕ ಭಾಷ್ಯದಲ್ಲಿ ಇನ್ನು ಸ್ಪಷ್ಟವಾಗಿ ಹೇಳಲ್ಪಟ್ಟಿದೆ.

ವ್ಯಕ್ತಿಭಾವಂ ಗತಾ ಯಾ ತು ಕರೋತೀತಿ ಸ್ವರೂಪಿಣೀ।
ಶಕ್ತಿರೂಪಸ್ಥಿತಾ ಸೈವ ಕ್ರಿಯಾಶಕ್ತಿರಿತೀರ್ಯತೇ।
ಸಾ ಚ ವ್ಯಕ್ತಿಸ್ತು ಜನಿವತ್ ಕ್ರಿಯಾಯಾ ರೂಪಮೇವ ತು।
ತಥಾಪಿ ತು ವಿಶೇಷೇಣ ಸ್ವರೂಪೇಣ ವಿಶೇಷಣಮ್।
ಜನೇರ್ಜನಿವದೇವಾಸೌ ಜ್ಞಾತವ್ಯಾ ವ್ಯತಿರೇಕತಃ।'

ಶಕ್ತಿರೂಪವಾದ ಕ್ರಿಯೆಗೂ, ವ್ಯಕ್ತಿರೂಪವಾದ ಕ್ರಿಯೆಗೂ ಭೇದವಿದೆಯೋ, ಅಭೇದವಿದೆಯೋ? ಭೇದವಿದೆಯೆಂದು ಹೇಳುವುದಾದರೆ ಶಕ್ತಿರೂಪ ಕ್ರಿಯೆಯು ಮಾತ್ರ ನಿತ್ಯವೆಂದಾಯಿತು. ವ್ಯಕ್ತಿರೂಪವಾದ ಕ್ರಿಯೆಯು ಅನಿತ್ಯವಾಯಿತು. ಅಭೇದವಿದೆಯೆಂದರೆ ನಿರಂತರ ಸಂಹಾರಾದಿ ಕ್ರಿಯೆಗಳು ಉಂಟಾಗಬೇಕಾದೀತಲ್ಲವೇ? ಈ ಆಕ್ಷೇಪವೂ ಸರಿಯಲ್ಲ. ಏಕೆಂದರೆ ಯಾವ ಕ್ರಿಯೆಯು ವ್ಯಕ್ತ್ಯಾತ್ಮನಾ ಇರುತ್ತದೋ, ಆಗ ಮಾತ್ರ ಸಂಹಾರಾದಿ ಕ್ರಿಯೆಗಳು ಇರುತ್ತವೆ ಎಂಬ ವ್ಯವಹಾರಕ್ಕೆ ವ್ಯಕ್ತವಾದ ಎಂದರೆ ಪ್ರಕಟವಾದ ಕ್ರಿಯೆಯಷ್ಟೇ ಕಾರಣವಾಗುತ್ತದೆ. ಅದೇ ಕ್ರಿಯೆಯು ಶಕ್ತಿರೂಪವಾಗಿರುವಾಗ ಕ್ರಿಯಾಶಕ್ತಿ ಎನಿಸಿಕೊಳ್ಳುತ್ತದೆ. ಹೀಗೆ ಶಕ್ತಿ ಹಾಗೂ ವ್ಯಕ್ತಿಗಳಿಗೆ ಭೇದವಿಲ್ಲದ ಕಾರಣ ಯಾವ ದೋಷವು ಬರುವುದಿಲ್ಲ. ಉತ್ಪತ್ತಿಯ ಉತ್ಪತ್ತಿಯು ವಸ್ತುವಿನ ಉತ್ಪತ್ತಿಗಿಂತ ಹೇಗೆ ಭಿನ್ನವಲ್ಲವೋ ಅದರಂತೆ ಶಕ್ತಿಯ ವ್ಯಕ್ತಿಯು ಶಕ್ತಿಗಿಂತ ಬೇರೆಯಲ್ಲ. ಶಕ್ತಿ ಮತ್ತು ವ್ಯಕ್ತಿಗಳು ಅಭಿನ್ನವಾಗಿದ್ದರೂ ಅವುಗಳಿಗೆ ವಿಶೇಷವಿರುವುದರಿಂದ ಸಂಹಾರಕಾಲದಲ್ಲಿ ಸಂಹಾರಕ್ರಿಯೆಯಷ್ಟೇ ಇರುತ್ತದೆ ಹೊರತು, ಸೃಷ್ಟಿಕ್ರಿಯೆ ಇರುವುದಿಲ್ಲ. ಆದ್ದರಿಂದ ಸೃಷ್ಟಿಕಾಲ, ಸಂಹಾರಕಾಲ ಮೊದಲಾದ ವಿಶೇಷ ವ್ಯವಹಾರವು ಯುಕ್ತವಾಗುತ್ತದೆ. ಒಂದು ವೇಳೆ ಅಭೇದವಿರುವುದಾದರೆ ಭೇದಕಾರ್ಯವನ್ನು ವಿಶೇಷವು ನಿರ್ವಾಹ ಮಾಡುತ್ತದೆ. ಶಕ್ತಿ-ವ್ಯಕ್ತಿಗಳಲ್ಲಿರುವ ವಿಶೇಷವೂ ಸಹ ವಿಶೇಷಿಗಳಾದ ಶಕ್ತಿ-ವ್ಯಕ್ತಿಗಳಿಗಿಂತ ಭಿನ್ನವಲ್ಲ. ಹಾಗೇನಾದರೂ ಭಿನ್ನವಾದರೆ ಶಕ್ತಿ ಹಾಗೂ ವ್ಯಕ್ತಿಗಳಿಗೆ ಭೇದವನ್ನು ಒಪ್ಪಬಹುದಿತ್ತು. ಹೊರತಾಗಿ ಆ ವಿಶೇಷವು ಶಕ್ತಿ ಹಾಗೂ ವ್ಯಕ್ತಿಗಳ ಸ್ವರೂಪವೇ ಆಗಿದೆ. ಆ ವಿಶೇಷವೇ 'ತಾನು, ವಿಶೇಷ, ಶಕ್ತಿ-ವ್ಯಕ್ತಿಗಳು, ವಿಶೇಷಿಗಳು' ಎಂಬ ವ್ಯವಹಾರವನ್ನು ನಿರ್ವಾಹ ಮಾಡುತ್ತದೆ. ವಿಶೇಷದಿಂದ ಕೂಡಿರುವ ಭೇದವ್ಯವಹಾರವನ್ನು ನಿರ್ವಾಹ ಮಾಡಲು ಮತ್ತೊಂದು ವಿಶೇಷವನ್ನು ಅಂಗೀಕರಿಸಬೇಕಾಗಿಲ್ಲ. ಹಾಗೇನಾದರೂ ಮತ್ತೊಂದು ವಿಶೇಷವನ್ನು ಒಪ್ಪಿದರೆ ಅನವಸ್ಥಾದೋಷವು ಬರುತ್ತದೆ. ಘಟದ ಉತ್ಪತ್ತಿಗಿಂತ, ಉತ್ಪತ್ತಿಯ ಉತ್ಪತ್ತಿಯು ಹೇಗೆ ಭಿನ್ನವಲ್ಲದಿದ್ದರೂ 'ಘಟವು ಹುಟ್ಟಿತು, ಘಟದ ಉತ್ಪತ್ತಿಯು ಉತ್ಪತ್ತಿಯೂ ಹುಟ್ಟಿತು' ಎಂಬ ವ್ಯವಹಾರವನ್ನು ನಿರ್ವಾಹ ಮಾಡುತ್ತದೋ? ಅದರಂತೆ ವಿಶೇಷವು ವಿಶೇಷಿಗಳಿಗಿಂತ ಅಭಿನ್ನವಾಗಿದ್ದರೂ 'ತಾನು ವಿಶೇಷ, ಶಕ್ತಿ-ವ್ಯಕ್ತಿಗಳು ವಿಶೇಷವುಳ್ಳವು' ಎಂಬ ವ್ಯವಹಾರವನ್ನು ನಿರ್ವಹಿಸುತ್ತದೆ.

ಭೂಮಾಧಿಕರಣ (೧-೩-೨)

प्रकाशः – एतेन "रूपान्तरविवक्षयोत्क्रमणस्य श्रुतिसिद्धत्वात्" इति टीकोपपादिता भवति ।

ಹೀಗೆ ವ್ಯಾಖ್ಯಾನಿಸಿದ್ದರಿಂದ 'ರೂಪಾಂತರವಿವಕ್ಷಯಾ ಉತ್ಕ್ರಮಣಸ್ಯ ಶ್ರುತಿಸಿದ್ಧತ್ವಾತ್' ಭಗವಂತನ ರೂಪವಿಶೇಷ ಪ್ರಯುಕ್ತವಾಗಿ ಉತ್ಕ್ರಮಣವನ್ನು ಉಪಪಾದಿಸಬಹುದೆಂಬುದು ಶ್ರುತಿಯಿಂದ ಸಿದ್ಧವಾಗಿದೆ ಎಂಬ ಟೀಕೆಯನ್ನು ವಿವರಿಸಿದಂತಾಯಿತು.

प्रकाशः – यदप्यवादि पूर्ववादिना यदि च सर्वगतस्यापि क्रिया तदोत्क्रान्तिगत्यागतीनामित्यादि तत्राह – जीवस्येति ।।

ಮತ್ತು ಪೂರ್ವಪಕ್ಷಕಾರನು ಒಂದು ವೇಳೆ ಸರ್ವಗತನಾದ ಬ್ರಹ್ಮನಿಗೆ ಕ್ರಿಯೆಯನ್ನು ಒಪ್ಪುವುದಾದರೆ ಜೀವನಿಗೆ ಅಣುತ್ವವನ್ನು ಸಮರ್ಥಿಸುವ ಅವಶ್ಯಕತೆಯಿಲ್ಲವೆಂದು ಆಕ್ಷೇಪಿಸಿದ್ದನು. ಆ ಆಕ್ಷೇಪಕ್ಕೆ 'ಜೀವಸ್ಯ' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. ಜೀವನ ಕ್ರಿಯೆಯು ಸರ್ವಥಾ ಸಂಯೋಗ, ವಿಭಾಗಗಳಿಗೆ ಜನಕವಾಗಿರುವುದರಿಂದ ಅಣುತ್ವವನ್ನು ಸಾಧನೆ ಮಾಡುವುದು ಯುಕ್ತವಾಗಿದೆಯೆಂದು ಇದರ ಅಭಿಪ್ರಾಯ.

प्रकाशः – सूत्रे सम्प्रसादादित्यस्य भाष्ये पूर्णसुखरूपत्वादिति व्याख्यानं कृतम् । तदयुक्तमिव । तथात्वे पूर्णसुखादित्येव सूत्रणापत्तिः । कथं च सम्प्रसादपदेन तल्लाभ इत्यतस्तत्वप्रदीपसुधयोरुक्तयोगप्रदर्शनेन पूर्णसुखलाभप्रकारं वदन् सम्प्रसाद-पदप्रयोगप्रयोजनं चाह – अत्र सूत्र इति ।।

ಸೂತ್ರದಲ್ಲಿ 'ಸಂಪ್ರಸಾದಾತ್' ಎಂಬ ಹೇತುವನ್ನು ಪ್ರಯೋಗಿಸಿದ್ದಾರೆ. ಅದನ್ನು ಭಾಷ್ಯದಲ್ಲಿ 'ಪೂರ್ಣಸುಖರೂಪತ್ವಾತ್' ಎಂದು ವ್ಯಾಖ್ಯಾನಿಸಿದ್ದಾರೆ. ಭಾಷ್ಯದ ಈ ವ್ಯಾಖ್ಯಾನವು ಅಯುಕ್ತವಾದಂತೆ ಕಾಣಿಸುತ್ತದೆ. 'ಸಂಪ್ರಸಾದಾತ್' ಎಂಬ ಪದದಿಂದ ಪೂರ್ಣಸುಖವನ್ನು ವಿವಕ್ಷಿಸುವುದಾದಲ್ಲಿ 'ಪೂರ್ಣಸುಖಾತ್' ಎಂದೇ ಸೂತ್ರವನ್ನು ಹೇಳಬೇಕಿತ್ತು. 'ಸಂಪ್ರಸಾದ' ಪದದಿಂದ ಪೂರ್ಣಸುಖವೆಂಬರ್ಥವು ಹೇಗೆ ದೊರೆಯುತ್ತದೆ ? ಎಂಬ ಪ್ರಶ್ನೆಗೆ ತತ್ವಪ್ರದೀಪ ಹಾಗೂ ನ್ಯಾಯಸುಧೆಯಲ್ಲಿ ಹೇಳಲ್ಪಟ್ಟ 'ಸಮ್ಯಕ್ ಪ್ರಸಾದಃ' ಎಂಬ ಯೋಗಾರ್ಥವನ್ನು ತೋರಿಸುವ ಮೂಲಕ ಪೂರ್ಣಸುಖವು ಹೇಗೆ ತಿಳಿಯುತ್ತದೆ ಎಂಬುದನ್ನು ಸ್ಪಷ್ಟಪಡಿಸುತ್ತಾ 'ಸಂಪ್ರಸಾದ' ಪದ ಪ್ರಯೋಗದ ಪ್ರಯೋಜನವನ್ನು 'ಅತ್ರ ಸೂತ್ರೇ' ಇತ್ಯಾದಿ ಗ್ರಂಥದ ಮೂಲಕ ಪ್ರತಿಪಾದಿಸುತ್ತಿದ್ದಾರೆ.

प्रकाशः – सम्यक्प्रसीदत्यनेनेतीति ।। सम्प्रेत्युपसर्गद्वयपूर्वकात् "षद्लृ विशरणगत्यवसादनेषु" इति धातोः "अकर्तरि च कारके संज्ञायाम्" इति करणे घञ्प्रत्यये रूपमिति भावः ।।

'ಸಮ್ಯಕ್‌ಪ್ರಸೀದತಿ ಅನೇನ' ಎಂಬ ವ್ಯುತ್ಪತ್ತಿಯಿಂದ 'ಸಂಪ್ರಸಾದ' ಶಬ್ದವು 'ಸುಖ' ಎಂಬರ್ಥವನ್ನು

ತಿಳಿಸುತ್ತದೆ. 'ಸಂ' 'ಪ್ರ' ಎಂಬ ಎರಡು ಉಪಸರ್ಗಗಳ ಮುಂದೆ 'ಷದ್‌ಲೃ ವಿಶರಣಗತ್ಯವಸಾದನೇಷು' ಎಂಬ ಧಾತುವಿಗೆ 'ಅಕರ್ತರಿ ಚ ಕಾರಕೇ ಸಂಜ್ಞಾಯಾಮ್' ಎಂಬ ಸೂತ್ರದಿಂದ ಕರಣಾರ್ಥದಲ್ಲಿ 'ಘಞ್' ಪ್ರತ್ಯಯವನ್ನು ಮಾಡಿದಾಗ 'ಸಂಪ್ರಸಾದ' ಶಬ್ದವು ನಿಷ್ಪನ್ನವಾಗುತ್ತದೆ.

**प्रकाशः – सम्यक्प्रसादेनेति ।।** स चेश्वरे श्रुतिस्मृत्यादिगम्य इति भावः – **दुःखाविनाभावेति ।।** मुक्तेषु सत्यपि सुखे दुःखाभावादिति भावः ।

'ಸಮ್ಯಕ್‌ಪ್ರಸಾದೇನ' ಎಂದು ಗ್ರಂಥದಲ್ಲಿದೆ. ಇದರಿಂದ ಈಶ್ವರನಲ್ಲಿ ಪೂರ್ಣಸುಖವಿದೆಯೆಂದು ಹೇಳಿರುತ್ತಾರೆ. ಇದು ಶ್ರುತಿ, ಸ್ಮೃತಿಗಳಿಂದ ಸಿದ್ಧವಾಗಿದೆಯೆಂದು ತಿಳಿಯಬೇಕು. 'ದುಃಖ ಅವಿನಾಭಾವ' ಎಂದರೆ ಮುಕ್ತರಲ್ಲಿ ಸುಖವಿದ್ದರೂ ದುಃಖವಿಲ್ಲವಾದ್ದರಿಂದ ಎಂದು ಅಭಿಪ್ರಾಯ.

**प्रकाशः – विषयवाक्येति ।।** 'यो वै भूमा तत्सुखम्' इति वाक्यमाद्यस्य विषयः । 'स एवाधस्तात्' इत्याद्युत्तरवाक्यं तु ''धर्मोपपत्तेश्च'' इत्यस्य विषय इति तत्क्रमात्क्रम इत्यर्थः । तत्र सर्वगतत्वादिधर्माणां प्रागाक्षिप्तानामपि सूत्रे हेतूकरणं च तदाक्षेपकस्य उत्क्रमणरूपबाधकस्य परिहृतत्वाद्युक्तमिति भावः ।

'ಯೋ ವೈ ಭೂಮಾ ತತ್ಸುಖಮ್' ಎಂಬ ವಾಕ್ಯವು ಪ್ರಥಮಸೂತ್ರಕ್ಕೆ ವಿಷಯವಾಗಿದೆ. 'ಸ ಏವಾಧಸ್ತಾತ್' ಎಂಬ ಮುಂದಿನ ವಾಕ್ಯವು 'ಧರ್ಮೋಪಪತ್ತೇಶ್ಚ' ಎಂಬ ಸೂತ್ರಕ್ಕೆ ವಿಷಯವಾಗಿದೆ. ಈ ವಿಷಯವಾಕ್ಯದ ಅನುಪೂರ್ವಿಯಿಂದ ಸೂತ್ರದ ಅನುಪೂರ್ವಿಯು ಅತ್ಯಂತ ಸಮಂಜಸವಾಗಿದೆಯೆಂದು ತಿಳಿಯಬೇಕು.

ಸರ್ವಗತತತ್ವಾದಿ ಧರ್ಮಗಳನ್ನು ಹಿಂದೆ ಪೂರ್ವಪಕಾರನು ಆಕ್ಷೇಪ ಮಾಡಿದ್ದರಿಂದ ಅದನ್ನೇ ಸೂತ್ರದಲ್ಲಿ ಹೇಗೆ ಹೇತುವನ್ನಾಗಿ ಮಾಡಿದರು ? ಎಂದರೆ, ಪೂರ್ವಪಕ್ಷದಲ್ಲಿ ಮಾಡಲ್ಪಟ್ಟ ಆಕ್ಷೇಪವು ಉತ್ಕ್ರಮಣವೆಂಬ ಬಾಧಕದಿಂದ ಈಗಾಗಲೇ ಪರಿಹರಿಸಿದ್ದಾಗಿದೆ. ಆದ್ದರಿಂದ ಸರ್ವಗತತ್ವಾದಿಧರ್ಮವನ್ನು ಹೇತುವನ್ನಾಗಿ ಉಪಯೋಗಿಸಬಹುದು.

**गुरुराजीयम् –** ननु सर्वगतस्यापि ब्रह्मणो यदि क्रियावत्त्वमभ्युपगम्यते तर्ह्युत्क्रान्तिगत्यागतीनामित्यत्र सक्रियत्वेन जीवस्याणुत्वोक्तिरयुक्तेत्यत आह – **जीवस्याणुत्वे त्विति ।।**




ಯಾವುದೇ ಪದಾರ್ಥದಲ್ಲಿ ಕ್ರಿಯೆ ಉಂಟಾಗಬೇಕೆಂದರೆ ಅದು ಅಣುರೂಪವಾಗಿರಬೇಕು. ಅಥವಾ ಮಧ್ಯಮ ಪರಿಮಾಣವುಳ್ಳದ್ದಾಗಿರಬೇಕು. ಏಕೆಂದರೆ ಕ್ರಿಯೆ ಎಂದರೆ ತಾನು ಯಾವ ಸ್ಥಳದಲ್ಲಿ ಇರುತ್ತದೋ, ಆ ಸ್ಥಳವನ್ನು ಬಿಟ್ಟು ಮತ್ತೊಂದು ಸ್ಥಳಕ್ಕೆ ಹೋಗುವುದು ಎಂದರ್ಥ. ಎಲ್ಲೆಡೆ ತುಂಬಿರುವ ವಸ್ತು ಇರುವ ಸ್ಥಳದಿಂದ ಹೊರಟು ಮತ್ತೊಂದು ಸ್ಥಳಕ್ಕೆ ಹೋಗಲು ಸಾಧ್ಯವೇ ಇಲ್ಲ. ಭಗವಂತನು ಎಲ್ಲೆಡೆ ವ್ಯಾಪ್ತನಾಗಿದ್ದಲ್ಲಿ ಇಂತಹ ಕ್ರಿಯೆಯನ್ನು ಒಪ್ಪುವುದು ಹೇಗೆ ? ಎಂಬುದೇ ಇಲ್ಲಿ ಬಂದಿರುವ ದೊಡ್ಡ ಗೊಂದಲ.

ಈ ಗೊಂದಲಕ್ಕೆ ಅನೇಕ ಬಗೆಯಲ್ಲಿ ಪರಿಹಾರಗಳನ್ನು ತಿಳಿದುಕೊಳ್ಳಬಹುದು. ಭಗವಂತನು ಅಣುವಿಗಿಂತ ಅಣುಸ್ವರೂಪನು, ಹಾಗೂ ಮಹತ್‌ಪದಾರ್ಥಕ್ಕಿಂತಲೂ ಮಹತ್‌ಸ್ವರೂಪನೂ ಆಗಿರುತ್ತಾನೆ. ಈ ವಿರುದ್ಧ ಧರ್ಮವು ಒಬ್ಬನೇ ಭಗವಂತನಲ್ಲಿ ಒಪ್ಪಲು ಹೇಗೆ ಸಾಧ್ಯ ? ಎಂಬುದು ಮತ್ತೊಂದು ಗೊಂದಲ. ಈ ಗೊಂದಲವನ್ನು ಪರಿಹರಿಸಿಕೊಂಡರೆ ಎಲ್ಲೆಡೆ ವ್ಯಾಪ್ತನಾದ ಭಗವಂತನಲ್ಲಿ ಕ್ರಿಯೆಯೂ ಸಹ ಉಪಪನ್ನವಾಗುತ್ತದೆಂದು ಸುಲಭವಾಗಿ ತಿಳಿಯಬಹುದು. ನ್ಯಾಯಸುಧಾ, ಅನುವ್ಯಾಖ್ಯಾನ ಹಾಗೂ ತತ್ತ್ವಪ್ರಕಾಶಿಕೆ ಮೊದಲಾದ ಗ್ರಂಥಗಳಲ್ಲಿ ಹೇಳಿರುವ ಪ್ರಮೇಯಗಳನ್ನು ಗ್ರಂಥಕಾರರು ಇಲ್ಲಿ ಸಂಗ್ರಹಿಸಿ, ಈ ಎಲ್ಲಾ ಪ್ರಶ್ನೆಗಳನ್ನು ಪರಿಹರಿಸುತ್ತಿದ್ದಾರೆ. ಭಗವಂತನಲ್ಲಿ ಯಾವಾಗ ಅಣುತ್ವವೆಂಬ ಧರ್ಮವಿರುತ್ತದೋ, ಆವಾಗಲೇ ಮಹತ್ತ್ವವೆಂಬ ಧರ್ಮವು ಅದೇ ಪ್ರಕಾರದಲ್ಲಿರುತ್ತದೆಂದು ನಾವು ಹೇಳುವುದಿಲ್ಲ, ಸ್ವಲ್ಪ ವ್ಯತ್ಯಾಸವಿದೆ. ಪ್ರತಿಯೊಂದು ಗುಣಗಳೂ ಸಹ ಶಕ್ತಿ ಹಾಗೂ ವ್ಯಕ್ತಿ ಸ್ವರೂಪದಲ್ಲಿರುತ್ತದೆ. ಅಣುತ್ವವು ಯಾವಾಗ ಶಕ್ತಿಸ್ವರೂಪದಲ್ಲಿರುತ್ತದೋ, ಆವಾಗ ಮಹತ್ತ್ವವು ವ್ಯಕ್ತಿರೂಪದಲ್ಲಿರುತ್ತದೆ. ಶಕ್ತಿರೂಪವೆಂದರೆ ಆ ಸಂದರ್ಭದಲ್ಲಿ ಆ ರೂಪದಿಂದ ಕೆಲಸವಾಗುತ್ತಿರುವುದಿಲ್ಲ ಎಂದರ್ಥ. ವ್ಯಕ್ತಿಸ್ವರೂಪವೆಂದರೆ ಅದೇ ಸಂದರ್ಭದಲ್ಲಿ ಆ ರೂಪದಿಂದ ಆ ಕಾರ್ಯವು ನಡೆಯುತ್ತಿರುತ್ತದೆ ಎಂದರ್ಥ. ಆದ್ದರಿಂದ ಅಣುತ್ವ ಹಾಗೂ ಮಹತ್ತ್ವಗಳು ನಿರಂತರವಾಗಿ ಭಗವಂತನಲ್ಲಿ ಇದ್ದರೂ ಸಹ ಎರಡೂ ಧರ್ಮಗಳು ಕೇವಲ ಶಕ್ತಿರೂಪದಿಂದಾಗಲೀ ಅಥವಾ ವ್ಯಕ್ತಿರೂಪದಿಂದಾಗಲೀ, ಇರುವುದಿಲ್ಲವೆಂಬ ಸೂಕ್ಷ್ಮಪ್ರಮೇಯವನ್ನು ಗಮನಿಸಬೇಕು. ಅಂತೂ ಭಗವಂತನಲ್ಲಿ ಅಣುತ್ವವು ಯಾವಾಗ ವ್ಯಕ್ತಿಸ್ವರೂಪದಿಂದ ಇರುತ್ತದೋ, ಆವಾಗ ಮಹತ್ತ್ವವು ವ್ಯಕ್ತಿಸ್ವರೂಪದಿಂದ ಇರುವುದಿಲ್ಲವೆಂದಂತಾಯಿತು. ಈ ಬಗೆಯಲ್ಲಿ ಚಿಂತಿಸಿದಾಗ ಅಣುಸ್ವರೂಪನಾದ ಭಗವಂತನಿಗೆ ಪೂರ್ವದೇಶ ವಿಭಾಗ, ಉತ್ತರದೇಶ ಸಂಯೋಗ ಮೊದಲಾದವುಗಳೆಲ್ಲವೂ ಸಿದ್ಧವಾಗುತ್ತವೆ. ಯಾವಾಗ ಮಹತ್ತ್ವವು ವ್ಯಕ್ತವಾಗಿರುತ್ತದೋ, ಆವಾಗ ಅಣುತ್ವವು ಶಕ್ತಿರೂಪದಲ್ಲಿರುವುದರಿಂದ ಪೂರ್ವದೇಶವಿಭಾಗ ಅಥವಾ ಉತ್ತರದೇಶಸಂಯೋಗಗಳನ್ನು ಒಪ್ಪಲು ಸಾಧ್ಯವಿಲ್ಲ. ಅಂದರೆ ವ್ಯಕ್ತನಾದ ಅಣುಸ್ವರೂಪವುಳ್ಳ ಭಗವಂತನಲ್ಲಿ ಕ್ರಿಯೆಯು ನಡೆಯುತ್ತದೆಂದು ಇದರ ಅಭಿಪ್ರಾಯ. ಭಗವಂತನಲ್ಲಿ ಅನೇಕ ಕ್ರಿಯೆಗಳಿವೆ. ಸೃಷ್ಟಿ ಮಾಡುವ ಕ್ರಿಯೆ, ಸಂಹಾರ ಮಾಡುವ ಕ್ರಿಯೆ ಇತ್ಯಾದಿಯಾಗಿ ಎಣಿಸಲು ಸಾಧ್ಯವಾಗದಷ್ಟು ಕ್ರಿಯೆಗಳಿವೆ. ಇವೆಲ್ಲವೂ ಸಹ ಭಗವತ್‌ಸ್ವರೂಪವೇ ಎಂಬುದರಲ್ಲಿ ಸಂದೇಹವಿಲ್ಲ. ಆದರೆ ಸೃಷ್ಟಿ ಮಾಡುವ ಕ್ರಿಯೆಯು ಭಗವತ್‌ಸ್ವರೂಪವಾದ್ದರಿಂದ ನಿರಂತರವಾಗಿರುವುದಾದರೆ, ನಿರಂತರ ಸೃಷ್ಟಿಯೇ ಆಗುತ್ತಿರಬೇಕಾಗುತ್ತದೆ. ಸಂಹಾರ, ನಿಯಮನ ಮೊದಲಾದ ಕ್ರಿಯೆಗಳು ನಡೆಯಲು ಸಾಧ್ಯವಿಲ್ಲದಂತಾಗುತ್ತದೆ. ಈಗಾಗಲೇ ಹೇಳಿದಂತೆ ಪ್ರತಿಯೊಂದೂ ಕ್ರಿಯೆಯನ್ನು ಶಕ್ತ್ಯಾತ್ಮನಾ, ವ್ಯಕ್ತ್ಯಾತ್ಮನಾ ವಿಭಾಗ ಮಾಡಿಕೊಂಡಾಗ ಯಾವಾಗ ಸೃಷ್ಟಿ ಸಮಯವು ಪ್ರಾಪ್ತವಾಗುತ್ತದೋ, ಆವಾಗ ಮಾತ್ರ ಸೃಷ್ಟಿ ಮಾಡುವ ಕ್ರಿಯೆಯು ಅಭಿವ್ಯಕ್ತವಾಗುತ್ತದೆ. ಸಂಹಾರ ಮಾಡುವ ಕಾಲವು ಪ್ರಾಪ್ತವಾದಾಗ ಸಂಹಾರ ಮಾಡುವಂತಹ ಕ್ರಿಯೆಯು ಪ್ರಾಪ್ತವಾಗುತ್ತದೆ. ಹೀಗೆ ಹೇಳಿದಾಗ ಎಲ್ಲಾ

ವಿಧದ ಸಮಾಧಾನಗಳನ್ನು ಹೇಳಿದಂತಾಗುತ್ತದೆ. ಶ್ರೀರಾಮಚಂದ್ರನು ರಾವಣನನ್ನು ಕೊಂದನು ಎಂದು ಹೇಳಿದಾಗ ರಾವಣನ ಹನನವೆಂಬ ಕ್ರಿಯೆಯು ಶ್ರೀರಾಮಚಂದ್ರನಲ್ಲಿ ನಿರಂತರವಾಗಿ ಇರುತ್ತದೆ. ಅಂದ ಮಾತ್ರಕ್ಕೆ ಯಾವಾಗಲೂ ರಾವಣನನ್ನು ಸಂಹಾರ ಮಾಡುತ್ತಲೇ ಇರುತ್ತಾನೆ ಎಂದರ್ಥವಲ್ಲ. ಹೊರತಾಗಿ ಯಾವಾಗ ಆ ಸಮಯವು ಪ್ರಾಪ್ತವಾಗುತ್ತದೋ, ಆ ಸಂದರ್ಭದಲ್ಲಿ ಮಾತ್ರ ರಾವಣನನ್ನು ಕೊಲ್ಲುವಂತಹ ಕ್ರಿಯೆಯು ಅಭಿವ್ಯಕ್ತವಾಗುತ್ತದೆ. ಉಳಿದ ಕಾಲಗಳೆಲ್ಲಾ ಶಕ್ತಿಸ್ವರೂಪದಲ್ಲಿರುತ್ತದೆ ಎಂದು ತಿಳಿಯ ಬೇಕಾದ ಮುಖ್ಯಪ್ರಮೇಯ.

ಹೀಗೆ ಭಗವಂತನ ಕ್ರಿಯೆಗಳು ಅಣುತ್ವ, ಮಹತ್ತ್ವ ಮೊದಲಾದ ಗುಣಗಳು ಶಕ್ತಿ ಹಾಗೂ ವ್ಯಕ್ತಿಸ್ವರೂಪ ಎಂಬ ಎರಡು ಬಗೆಯನ್ನು ಹೊಂದಿರುತ್ತವೆ ಎಂದಷ್ಟೇ ಅಲ್ಲ. ಭಗವಂತನಿಗೆ ಅನೇಕ ರೂಪಗಳು ಪ್ರಮಾಣಸಿದ್ಧವಾಗಿದೆ. ಒಂದು ರೂಪದಲ್ಲಿ ಅಣುತ್ವವು ವ್ಯಕ್ತವಾಗಬಹುದು. ಮತ್ತೊಂದು ರೂಪದಲ್ಲಿ ಮಹತ್ತ್ವವು ವ್ಯಕ್ತವಾಗಬಹುದು. ಹೀಗೆ ರೂಪಗಳ ಭೇದದಿಂದಲೂ ಅಣುತ್ವ ಮಹತ್ತ್ವಗಳನ್ನು ಉಪಪಾದಿಸುವುದು ಸುಲಭ. ಸವಿಶೇಷ ಭೇದವಿರುವುದರಿಂದ ಹೀಗೆ ಭೇದದ ಕಾರ್ಯವು ಆಯಾ ರೂಪಗಳಲ್ಲಿ ನಡೆಯುತ್ತವೆ. ಅಥವಾ ಅಚಿಂತ್ಯಾತ್ಮಕ ಶಕ್ತಿಯನ್ನು ಹೊಂದಿರುವ ಭಗವಂತನಲ್ಲಿ ನಮ್ಮ ಕಲ್ಪನೆಗೆ ಮೀರಿದ ವಿಚಾರಗಳೇ ಇರುತ್ತವೆ.

ಸೂತ್ರದಲ್ಲಿ 'ಸಂಪ್ರಸಾದಾತ್' ಎಂದು ಹೇಳಿದ್ದಾರೆ. 'ಸಂಪ್ರಸಾದಾತ್' ಎಂಬ ಶಬ್ದಕ್ಕೆ ಪೂರ್ಣಸುಖವುಳ್ಳವನಾದ್ದರಿಂದ ಎಂದರ್ಥ. ಒಂದು ವೇಳೆ 'ಸಂಪ್ರಸಾದಾತ್' ಶಬ್ದವನ್ನು ಬಳಸದೇ 'ಪೂರ್ಣಸುಖಾತ್' ಎಂದೇ ಹೇಳಿದ್ದರೆ, ಸುಖವಿರುವುದಾದರೆ ದುಃಖವು ಬರಲಿ, ಅಥವಾ ಸುಖದ ಜೊತೆಗೆ ದುಃಖವು ಅವಿನಾಭೂತವಾಗಿದೆ, ಇತ್ಯಾದಿಯಾಗಿ ಪ್ರಶ್ನೆಗಳು ಹುಟ್ಟುತ್ತಿದ್ದವು. 'ಸಂಪ್ರಸಾದಾತ್' ಶಬ್ದವನ್ನು ಬಳಸಿದ್ದರಿಂದ ಸುಖದ ಕಾರ್ಯವೆನಿಸಿದ ಪ್ರಸಾದವು ಈಶ್ವರನಲ್ಲಿ ಪೂರ್ಣವಾಗಿರುವುದರಿಂದ ದುಃಖಕ್ಕೆ ಅವಕಾಶವಿಲ್ಲ. ಮತ್ತು ಜ್ಞಾನದಂತೆ ಸುಖವೂ ಸಹ ದುಃಖದಿಂದ ಅವಿನಾಭೂತವಾಗಿಲ್ಲ ಎಂಬೆರಡು ಪ್ರಮೇಯಗಳನ್ನು ಸೂತ್ರಕಾರರು ಸೂಚಿಸಿದ್ದಾರೆ. ಉಪನಿಷತ್ತಿನಲ್ಲಿರುವ ವಿಷಯವಾಕ್ಯಕ್ಕೆ ಅನುಗುಣವಾಗಿಯೇ ಸೂತ್ರಗಳ ಕ್ರಮವಿರುವುದರಿಂದ ಸೂತ್ರಗಳ ವಿನ್ಯಾಸ ಶೈಲಿಯು ಅತ್ಯಂತ ಅರ್ಥಪೂರ್ಣವಾಗಿದೆ.



● ● ● ● ●

ಶಾಂಕರಭಾಷ್ಯ ವಿಮರ್ಶೆ

## तात्पर्यचन्द्रिका

**अन्ये तु । जडरूपः पञ्चवृत्तिर्वायुरेव भूमेति प्राप्ते निर्विशेषब्रह्मैव भूमेति सिद्धान्त इत्याहुः ।**

ಅನುವಾದ - ಶಾಂಕರ ಭಾಷ್ಯದಲ್ಲಿ ಸೂತ್ರವನ್ನು ಹೀಗೆ ವ್ಯಾಖ್ಯಾನಿಸಿದ್ದಾರೆ - ಜಡರೂಪವಾದ ಪ್ರಾಣಾಪಾನಾದಿ ಪಂಚವೃತ್ತಿಯನ್ನೂ ತಾಳಿದ ವಾಯುವೇ ಭೂಮವೆನಿಸಿದೆ ಎಂದು ಪೂರ್ವಪಕ್ಷ. ನಿರ್ವಿಶೇಷಬ್ರಹ್ಮನೇ ಭೂಮನಾಗಿದ್ದಾನೆಂದು ಸಿದ್ಧಾಂತ.

ಭೂಮಾಧಿಕರಣ (೧-೩-೨)

**तन्न । पञ्चवृत्तौ ''तरति शोकमात्मवित्'' इत्युपक्रमस्यात्मशब्दादेः ''भूमैव सुखम्'' इत्युक्तसुखत्वस्य चायोगेन पूर्वपक्षस्यातितुच्छत्वात् ।**

ಇದು ತಪ್ಪು. ಜಡವಾದ ವಾಯು ಭೂಮವೆನಿಸಿದರೆ 'ತರತಿ ಶೋಕಮಾತ್ಮವಿತ್', ಹಾಗೂ ಆತ್ಮಶಬ್ದ ಎಂದು ಉಪಕ್ರಮದಲ್ಲಿ ಶ್ರುತವಾದ 'ಭೂಮೈವ ಸುಖಮ್' ಎಂಬಲ್ಲಿ ಶ್ರುತವಾದ ಸುಖತ್ವವು ಜಡವಾದ್ದರಲ್ಲಿ ಕೂಡುವುದಿಲ್ಲವಾದ್ದರಿಂದ ತಪ್ಪಾಗುತ್ತದೆ. ಆದ್ದರಿಂದ ಪೂರ್ವಪಕ್ಷ ಹುಟ್ಟಲು ಸಾಧ್ಯವೇ ಇಲ್ಲ.

**प्राणशब्दश्च ''ते ह प्राणा अहं श्रेयसि व्यूदिरे । अहं श्रेयानस्म्यहं श्रेयानस्मीति । तान्वरिष्ठः प्राण उवाच'' इत्यादौ तदभिमानिदेवतायामेव प्रसिद्धः ।**

ಮತ್ತು ಪ್ರಾಣಶಬ್ದವು 'ತೇ ಹ ಪ್ರಾಣಾ ಅಹಂ ಶ್ರೇಯಸಿ ವ್ಯೂದಿರೇ । ಅಹಂ ಶ್ರೇಯಾನಸ್ಮ್ಯಹಂ ಶ್ರೇಯಾನಾಸ್ಮೀತಿ । ತಾನ್ವರಿಷ್ಠಃ ಪ್ರಾಣ ಉವಾಚ' ಇತ್ಯಾದಿ ಪ್ರಕರಣದಲ್ಲಿ ಪ್ರಸಕ್ತವಾದ ಪ್ರಾಣಶಬ್ದವು ಅಭಿಮಾನಿದೇವತೆಯಲ್ಲಿಯೇ ಪ್ರಸಿದ್ಧವಾಗಿದೆ.

**सिद्धान्तोऽप्ययुक्तः । उक्तरीत्योपक्रमानुगुणस्य गुणज्यैष्ठ्यरूपस्योत्तमत्वस्य निर्गुणेऽयोगात् ।**

ಸಿದ್ಧಾಂತವೂ ಸಹ ತಪ್ಪು. ಹಿಂದೆ ಹೇಳಿದ ಪ್ರಕಾರ ಉಪಕ್ರಮಕ್ಕೆ ಅನುಗುಣವಾಗಿರುವ ಗುಣಜ್ಯೇಷ್ಠತ್ವರೂಪವಾದ ಉತ್ತಮತ್ವವನ್ನು ಭೂಮಶಬ್ದವು ಪ್ರತಿಪಾದಿಸುತ್ತಿದೆ. ಇದು ನಿರ್ಗುಣನಲ್ಲಿ ಯುಕ್ತವಾಗುವುದಿಲ್ಲ.

**कल्पितज्यैष्ठ्यस्य च ''भूमा त्वेव विजिज्ञासितव्यः । भूमानं भगवो विजिज्ञासे'' इत्युक्तं चरमकक्ष्यात्वेन मुमुक्षुजिज्ञास्यत्वमयुक्तम् ।१**

(१) शाङ्करभाष्यम्

भूमा प्राणः परेशो वा प्रश्नप्रत्युक्तिवर्जनात् ।
अनुवर्त्यातिवादित्वं भूमोक्तेर्वायुरेव सः ॥
विच्छिद्यैव त्विति प्राणं सत्यस्योपक्रमात्तथा ।
महोपक्रम आत्मोक्तेरीशोऽयं द्वैतवारणात् ॥

इदं समामनन्ति –'भूमा त्वेव विजिज्ञासितव्यः' इति 'भूमानं भगवो विजिज्ञासे' इति ।

'यत्र नान्यत्पश्यति नान्यच्छृणोति नान्यद् विजानाति स भूमाऽथ यत्रान्यत् पश्यत्यन्यच्छृणोत्यन्यद् विजानाति तदल्पम्' इत्यादि । तत्र संशयः– किं प्राणो भूमा स्यादाहोस्वित् परमात्मा? इति । कुतः संशयः? भूमेति तावद् बहुत्वमभिधीयते, 'बहोर्लोपो भू च बहोः' इति भूमशब्दस्य भावप्रत्ययान्ततास्मरणात् । किमात्मकं पुनस्तद् बहुत्वम्? इति विशेषाकाङ्क्षायां 'प्राणो वा आशाया भूयान्' इति सन्निधानात् प्राणो भूमेति प्रतिभाति । तथा 'श्रुतं ह्येव मे भगवद्दृशेभ्यस्तरति शोकमात्मविदिति सोऽहं भगवः शोचामि तं मा भगवान् शोकस्य पारं तारयतु ।' इति प्रकरणोत्थानात् परमात्मा भूमेत्यपि प्रतिभाति । तत्र कस्योपादानं न्याय्यम्? कस्य वा हानम्? इति भवति संशयः । किं तावत्प्राप्तम्? प्राणो भूमेति । कस्मात्? भूयःप्रश्नप्रतिवचन-परम्परादर्शनात् । यथाहि 'अस्ति भगवो नाम्नो भूयः' इति 'वाग्वाव नाम्नो भूयसी' इति । तथा 'अस्ति भगवो वाचो भूयः' इति 'मनो वाव वाचो भूयः' इति च नामादिभ्यो ह्याप्राणाद्भूयःप्रश्नप्रतिवचनप्रवाहः प्रवृत्तः । नैवं प्राणात्परं भूयःप्रश्नप्रतिवचनं दृश्यते 'अस्ति भगवः प्राणाद्भूयः' इत्यदो वाव प्राणाद्भूय इति । प्राणमेव तु नामादिभ्य आशान्तेभ्यो भूयांसं 'प्राणो वा आशाया भूयान्' इत्यादिना सप्रपञ्चमुक्त्वा प्राणदर्शिनश्चातिवादित्वम् – 'अतिवाद्यसीत्यतिवाद्यस्मीति ब्रूयान्नापह्नुवीत' इत्यभ्यनुज्ञाय 'एष तु वा अतिवदति यः सत्येनातिवदति' इति प्राणव्रतमतिवादित्वमनुकृष्यापरित्यज्यैव प्राणं सत्यादिपरम्परया भूमानमवतारयन् प्राणमेव भूमानं मन्यत इति गम्यते । कथं पुनः प्राणे भूमनि व्याख्यायमाने 'यत्र नान्यत्पश्यति' इत्येतद्भूम्नो लक्षणपरं वचनं व्याख्यायेतेति । उच्यते – सुषुप्त्यवस्थायां प्राणग्रस्तेषु करणेषु दर्शनादिव्यवहारनिवृत्तिदर्शनात् सम्भवति प्राणस्यापि 'यत्र नान्यत्पश्यति' इत्येतल्लक्षणम् । तथाच श्रुतिः, 'न शृणोति न पश्यति' इत्यादिना सर्वकरणव्यापारप्रत्यस्तमयरूपां सुषुप्त्यवस्थामुक्त्वा 'प्राणाग्नय एवैतस्मिन् पुरे जाग्रति' इति तस्यामेवावस्थायां पञ्चवृत्तेः प्राणस्य जागरणं ब्रुवती प्राणप्रधानां सुषुप्त्यवस्थां दर्शयति । यच्चैतद्भूम्नः सुखत्वं श्रुतम् 'यो वै भूमा तत्सुखम्' इति, तदप्यविरुद्धम् । 'अत्रैष देवः स्वप्नान्न पश्यत्यथ यदेतस्मिञ्छरीरे सुखं भवति' इति सुषुप्त्यवस्थायामेव सुखश्रवणात् । यच्च 'यो वै भूमा तदमृतम्' इति तदपि प्राणस्याविरुद्धम्, 'प्राणो वा अमृतम्' इति श्रुतेः । कथं पुनः प्राणं भूमानं मन्यमानस्य 'तरति शोकमात्मवित्' इत्यात्मविविदिषया प्रकरणस्योत्थानमुपपद्यते । प्राण एवेहात्मा विवक्षित इति ब्रूमः । तथाहि – 'प्राणो ह पिता प्राणो माता प्राणो भ्राता प्राणः स्वसा प्राण आचार्यः प्राणो ब्राह्मणः' इति प्राणमेव सर्वात्मानं करोति । 'यथा वा अरा नाभौ समर्पिता एवमस्मिन् प्राणे सर्वं समर्पितम्' इति च सर्वात्मत्वारनाभिनिदर्शनाभ्यां च

सम्भवति वैपुल्यात्मिका भूमरूपता प्राणस्य । तस्मात्प्राणो भूमेत्येवं प्राप्तम् । तत इदमुच्यते – परमात्मैवेह भूमा भवितुमर्हति, न प्राणः । कस्मात्? सम्प्रसादादध्युपदेशात्। सम्प्रसाद इति सुषुप्तं स्थानमुच्यते, सम्यक् प्रसीदत्यस्मिन्निति निर्वचनात् । बृहदारण्यके च स्वप्नजागरितस्थानाभ्यां सह पाठात् तस्यां च सम्प्रसादावस्थायां प्राणो जागर्तीति प्राणोऽत्र सम्प्रसादोऽभिप्रेयते । प्राणादूर्ध्वं भूम्न उपदिश्यमानत्वादित्यर्थः । प्राण एव चेद्भूमा स्यात्स एव तस्मादूर्ध्वमुपदिश्येतेत्यत्यश्लिष्टमेवैतत् स्यात् । नहि नामैव नाम्नो भूय इति नाम्न ऊर्ध्वमुपदिष्टम् । किं तर्हि नाम्नोऽन्यदर्थान्तरमुपदिष्टं वागाख्यम् 'वाग्वाव नाम्नो भूयसी' इति । तथा वागादिभ्योऽप्याप्राणादर्थान्तरमेव तत्र तत्रोर्ध्वमुपदिष्टम् । तद्वत् प्राणादूर्ध्वमुपदिश्यमानो भूमा प्राणादर्थान्तरभूतो भवितुमर्हति । नन्विह नास्ति प्रश्नोऽस्ति भगवः प्राणाद्भूय इति, नापि प्रतिवचनमस्ति प्राणाद्वाव भूयोऽस्तीति, कथं प्राणादधि भूमोपदिश्यत इत्युच्यते । प्राणविषयमेव चातिवादित्वमुत्तरत्रानुकृष्यमाणं पश्यामः 'एष तु वा अतिवदति यः सत्येनातिवदति' इति । तस्मान्नास्ति प्राणादध्युपदेश इति । अत्रोच्यते – न तावत् प्राणविषयस्यैवातिवादित्वस्यैतदनुकर्षणमिति शक्यं वक्तुम्, विशेषवादात् 'यः सत्येनातिवदति' इति । ननु विशेषवादोऽप्ययं प्राणविषय एव भविष्यति । कथम्? यथैषोऽग्निहोत्री यः सत्यं वदतीत्युक्ते न सत्यवदनेनाग्निहोत्रित्वम्, केन तर्हि? अग्निहोत्रेणैव । सत्यवदनं त्वग्निहोत्रिणो विशेष उच्यते । तथा 'एष तु वा अतिवदति यः सत्येनातिवदति' इत्युक्ते न सत्यवदनेनातिवादित्वम् । केन तर्हि? प्रकृतेन प्राणविज्ञानेनैव । सत्यवदनं तु प्राणविदो विशेषो विवक्ष्यत इति । नेति ब्रूमः । श्रुत्यर्थपरित्यागप्रसङ्गात् । श्रुत्या ह्यत्र सत्यवदनेनातिवादित्वं प्रतीयते । 'यः सत्येनातिवदति सोऽतिवदति' इति । नात्र प्राणविज्ञानस्य सङ्कीर्तनमस्ति । प्रकरणात्तु प्राणविज्ञानं सम्बद्ध्येत । तत्र प्रकरणानुरोधेन श्रुतिः परित्यक्ता स्यात् । प्रकृतव्यावृत्त्यर्थश्च तुशब्दो न सङ्गच्छते 'एष तु वा अतिवदति' इति । 'सत्यं त्वेव विजिज्ञासितव्यम्' इति च प्रयत्नान्तरकरणमर्थान्तरविवक्षां सूचयति । तस्माद् यथैकवेदप्रशंसायां प्रकृतायाम् 'एष तु महाब्राह्मणो यश्चतुरो वेदानधीते' इत्येकवेदेभ्योऽर्थान्तरभूतश्चतुर्वेदः प्रशस्यते तादृगेतद् द्रष्टव्यम् । नच प्रश्नप्रतिवचनरूपयैवार्थान्तरविवक्षया भवितव्यमिति नियमोऽस्ति । प्रकृत-सम्बन्धासम्भवकारित्वादर्थान्तरविवक्षायाः । तत्र प्राणान्तमनुशानं श्रुत्वा तूष्णीम्भूतं नारदं स्वयमेव सनत्कुमारो व्युत्पादयति । यत्प्राणविज्ञानेन विकारानृत-विषयेणातिवादित्वमनतिवादित्वमेव तत् 'एष तु वा अतिवदति यः सत्येनातिवदति' इति। तत्र सत्यमिति परं ब्रह्मोच्यते, परमार्थरूपत्वात् । 'सत्यं ज्ञानमनन्तं ब्रह्म' इतिच श्रुत्यन्तरात् । तथा व्युत्पादिताय नारदाय 'सोऽहं भगवः सत्येनातिवदानि' इत्येवंप्रवृत्ताय

विज्ञानादिसाधनपरम्परया भूमानमुपदिशति । तत्र तत्प्राणादधि सत्यं वक्तव्यं प्रतिज्ञातं तदेवेह भूमेत्युच्यत इति गम्यते । तस्मादस्ति प्राणादधि भूम्न उपदेश इत्यतः प्राणादन्यः परमात्मा भूमा भवितुमर्हति । एवं चेहात्मविविदिषया प्रकरणस्योत्थानमुपपन्नं भविष्यति । प्राण एवेहात्मा विवक्षित इत्येतदपि नोपपद्यते । नहि प्राणस्य मुख्यया वृत्त्याऽत्मत्वमस्ति । नचान्यत्र परमात्मज्ञानाच्छोकविनिवृत्तिरस्ति, 'नान्यः पन्था विद्यतेऽयनाय' इति श्रुत्यन्तरात् । 'तं मा भगवाञ्छोकस्य पारं तारयतु' इति चोपक्रम्योपसंहरति – 'तस्मै मृदितकषायाय तमसः पारं दर्शयति भगवान् सनत्कुमारः' इति । तम इति शोकादिकारणमविद्योच्यते । प्राणान्ते चानुशासने न प्राणस्यान्यायत्ततोच्येत । 'आत्मनः प्राणः' इतिच ब्राह्मणम् । प्रकरणान्ते परमात्मविवक्षा भविष्यति, भूमा तु प्राण एवेति चेन्न । 'स भगवः कस्मिन् प्रतिष्ठित इति स्वे महिम्नि' इत्यादिना भूम्न एवाऽप्रकरणसमाप्तेरनुकर्षणात् । वैपुल्यात्मिका च भूमरूपता सर्वकारणत्वात् परमात्मनः सुतरामुपपद्यते ।। ८ ।।

**धर्मोपपत्तेश्च**

अपिच ये भूम्नि श्रूयन्ते धर्मास्ते परमात्मन्युपपद्यन्ते । 'यत्र नान्यत् पश्यति नान्यच्छृणोति नान्यद् विजानाति स भूमा' इति दर्शनादिव्यवहाराभावं भूमन्यवगमयति । परमात्मनि चायं दर्शनादिव्यवहाराभावोऽवगतः । 'यत्र त्वस्य सर्वमात्मैवाभूत् तत्केन कं पश्येत्' इत्यादिश्रुत्यन्तरात् । योऽप्यसौ सुषुप्तावस्थायां दर्शनादिव्यवहाराभाव उक्तः सोऽप्यात्मन एवासङ्गत्वविवक्षयोक्तो न प्राणस्वभावविवक्षया, परमात्मप्रकरणात् । यदपि तस्यामवस्थायां सुखमुक्तम्, तदप्यात्मन एव सुखरूपत्वविवक्षयोक्तम् । यत आह – 'एषोऽस्य परम आनन्द एतस्यैवानन्दस्यान्यानि भूतानि मात्रामुपजीवन्ति' इति । इहापि 'यो वै भूमा तत्सुखं नाल्पे सुखमस्ति भूमैव सुखम्' इति साम्यसुखनिराकरणेन ब्रह्मैव सुखं भूमानं दर्शयति । 'यो वा भूमा तदमृतम्' इत्यमृतत्वमपीह श्रूयमाणं परमकारणं गमयति । विकाराणाममृतत्वस्यापेक्षिकत्वात्, 'अतोऽन्यदार्तम्' इति च श्रुत्यन्तरात् । तथाच सत्यत्वं स्वमहिमप्रतिष्ठितत्वं सर्वगतत्वं सर्वात्मत्वमिति चैते धर्माः श्रूयमाणाः परमात्मन्येवोपपद्यन्ते नान्यत्र । तस्माद्भूमा परमात्मेति सिद्धम् ।। ९ ।।

**भामती –**

नारदः खलु देवर्षिः कर्मविदनात्मवित्तया शोच्यमानं मन्यमानो भगवन्तमात्मज्ञमाजानसिद्धं महायोगिनं सनत्कुमारमुपससाद । उपसद्य चोवाच, भगवन्, अनात्मज्ञताजनितशोकसागर-पारमुत्तारयतु मां भगवानिति । तदुपश्रुत्य सनत्कुमारेण 'नाम ब्रह्मेत्युपास्व' इत्युक्ते नारदेन पृष्टं किं नाम्नोऽस्ति भूय इति । तत्र सनत्कुमारस्य प्रतिवचनम् 'वाग्वाव नाम्नो

भूयसी' इति । तदेवं नारदसनत्कुमारयोर्भूयसी प्रश्नोत्तरे वागिन्द्रियमुपक्रम्य मनःसङ्कल्पचित्तध्यानविज्ञानबलान्नतोयवायुसहिततेजोनभःस्मराशाप्राणेषु पर्यवसिते । कर्तव्याकर्तव्यविवेकः सङ्कल्पः, तस्य कारणं पूर्वापरविषयनिमित्तप्रयोजननिरूपणं चित्तम् । स्मरः स्मरणम् । प्राणस्य च समस्तक्रियाकारकफलभेदेन पित्राद्यात्मत्वेन च रथारनाभिदृष्टान्तेन सर्वप्रतिष्ठत्वेन च प्राणभूयस्त्वदर्शिनोऽतिवादित्वेन च नामादिप्रपञ्चादाशान्ताद् भूयस्त्वमुक्त्वाऽपृष्ट एव नारदेन सनत्कुमार एकग्रन्थेन 'एष तु वा अतिवदति यः सत्येनातिवदति' इति सत्यादीन् कृतिपर्यन्तानुक्त्वोपदिदेश – 'सुखं त्वेव विजिज्ञासितव्यम्' इति । तदुपश्रुत्य नारदेन 'सुखं त्वेव विजिज्ञासितव्यम्' इति । तदुपश्रुत्य नारदेन 'सुखं त्वेव भगवो विजिज्ञासे' इत्युक्ते सनत्कुमारः 'यो वै भूमा तत् सुखम्' इत्युपक्रम्य भूमानं व्युत्पादयाम्बभूव 'यत्र नान्यत् पश्यति' इत्यादिना । तदीदृशे विषये विचार आरभ्यते । तत्र संशयः– किं प्राणो भूमा स्यादाहो परमात्मा? इति । भावभवित्रोस्तादात्म्यविवक्षया सामानाधिकरण्यं संशयस्य बीजमुक्तं भाष्यकृता । तत्र 'एतस्मिन् ग्रन्थसन्दर्भे यदुक्ताद् भूयसोऽन्यतः । उच्यमानं तु तद्भूय उच्यते प्रश्नपूर्वकम् ।।' नच प्राणात् किं भूयः? इति पृष्टम् । नापि भूमा वाऽस्माद् भूयानिति प्रत्युक्तम् । तस्मात्प्राणभूयस्त्वाभिधानानन्तरमपृष्टेन भूमोच्यमानः प्राणस्यैव भवितुमर्हति । अपिच भूमेति भावो न भवितारमन्तरेण शक्यो निरूपयितुमिति भवितारमपेक्षमाणः प्राणस्यानन्तर्येण बुद्धिसन्निधानात्तमेव भवितारं प्राप्य निर्वृणोति । 'यस्योभयं हविरार्तिमार्च्छेत्' इत्यत्रार्तिरिवार्तं हविः । यथाहुः 'मृष्यामहे हविषा विशेषणम्' इति । नचात्मनः प्रकरणादात्मैव बुद्धिस्थ इति तस्यैव भूमा स्यादिति युक्तम् । सनत्कुमारस्य 'नाम ब्रह्मेत्युपास्स्व' इति प्रतीकोपदेशरूपेणोत्तरेण नारदप्रश्नस्यापि तद्विषयत्वेन परमात्मोपदेशप्रकरणस्यानुत्थानात् । अतद्विषयत्वे चोत्तरस्य प्रश्नोत्तरयोर्वैय्यधिकरण्येन विप्रतिपत्तेरप्रामाण्यप्रसङ्गात् । तस्मादसति प्रकरणे प्राणस्यानन्तर्यात्तस्यैव भूमेति युक्तम् । तदेतत्संशयबीजं दर्शयता भाष्यकारेण सूचितं पूर्वपक्षसाधनमिति न पुनरुक्तम् । नच भूयो भूयः प्रश्नात्परमात्मैव नारदेन जिज्ञासित इति युक्तम् । प्राणोपदेशानन्तरं तस्योपरमात् । तदेवं प्राण एव भूमेति स्थिते यद् यत्तद्विरोधितया वचः प्रतिभाति तत्तदनुगुणतया नेयम् । नीतं च भाष्यकृता । स्यादेतत् । 'एष तु वा अतिवदति' इति तुशब्देन प्राणदर्शिनोऽतिवादिनो व्यवच्छिद्य सत्येनातिवादित्वं वदन् कथं प्राणस्य भूमानमभिदधीत? इत्यत आह – **प्राणमेव त्विति ।। प्राणदर्शिनश्चातिवादित्वमिति ।।** नामाद्याशान्तमतीत्य वदनशीलत्वमित्यर्थः । एतदुक्तं भवति – नायं तुशब्दः प्राणादिवादित्वाद् व्यवच्छिनत्ति, अपितु तदतिवादित्वमपरित्यज्य प्रत्युत तदनुकृष्य तस्यैव

प्राणस्य सत्यस्य श्रवणमननश्रद्धानिष्ठाकृतिभिर्विज्ञानाय निश्चयाय सत्येनातिवदतीति प्राणव्रतमेवातिवादित्वमुच्यते । तुशब्दो नामाद्यतिवादित्वाद् व्यवच्छिनत्ति । न नामाद्याशान्तवाद्यतिवादी, अपितु सत्यप्राणवाद्यतिवादीत्यर्थः । अत्र चागमाचार्योपदेशाभ्यां सत्यस्य श्रवणम् । अथागमाविरोधिन्यायनिवेशनं मननम्, मत्वा च गुरुशिष्य-सब्रह्मचारिभिरनुसूयुभिः सह संवाद्य तत्त्वं श्रद्धत्ते । श्रद्धानन्तरं च विषयान्तरदर्शी विरक्तस्ततो व्यावृत्तस्तत्त्वज्ञानाभ्यासं करोति, सेयमस्य कृतिः प्रयत्नः । अथ तत्त्वज्ञानाभ्यासनिष्ठा भवति, यदनन्तरमेव तत्त्वविज्ञानमनुभवः प्रादुर्भवति । तदेतद् बाह्या अप्याहुः– 'भूतार्थभावनाप्रकर्षपर्यन्तजं योगिज्ञानम्' इति भावनाप्रकर्षस्य पर्यन्तो निष्ठा तस्माज्जायते तत्त्वानुभव इति । तस्मात्प्राण एव भूमेति प्राप्तेऽभिधीयते 'एष तु वा अतिवदति यः सत्येनातिवदति' इत्युक्त्वा भूमोच्यते । तत्र सत्यशब्दः परमार्थे निरूढवृत्तिः श्रुत्या परमार्थमाह । परमार्थश्च परमात्मैव । ततो ह्यन्यत् सर्वं विकारजातमनृतं कयाचिदपेक्षया कथञ्चित् सत्यमुच्यते । तथाच 'एष तु वा अतिवदति यः सत्येनातिवदति' इति ब्रह्मणोऽतिवादित्वं श्रुत्याऽन्यनिरपेक्षया लिङ्गादिभ्यो बलीयस्यावगमितं कथमिव सन्निधानमात्रात् श्रुत्याद्यपेक्षाददतिदुर्बलात्कथञ्चित् प्राणविषयत्वेन शक्यं व्याख्यातुम् । एवञ्च प्राणादूर्ध्वं ब्रह्मणि भूमाऽवगम्यमानो न प्राणविषयो भवितुमर्हति, किन्तु सत्यस्य परमात्मन एव । एवं चानात्मविद आत्मानं विविदिषोर्नारदस्य प्रश्ने परमात्मानमेवास्मै व्याख्यास्यामीत्यभिसन्धिमान् सनत्कुमारः सोपानारोहणन्यायेन स्थूलादारभ्य तत्तद्भूमव्युत्पादनक्रमेण भूमानमतिदुर्ज्ञानतया परमसूक्ष्मं व्युत्पादयामास । नच प्रश्नपूर्वता प्रवाहपतितेनोत्तरेण सर्वेण प्रश्नपूर्वेणैव भवितव्यमिति नियमोऽस्तीत्यादिसुगमेन भाष्येण व्युत्पादितम् । विज्ञानादिसाधनपरम्परा मननश्रद्धादिः, प्राणान्ते चानुशासने तावन्मात्रेणैव प्रकरणसमाप्तेर्न प्राणस्यान्यायत्ततोच्येत । तदभिधाने हि सापेक्षत्वेन न प्रकरणं समाप्येत । तस्मान्नेदं प्राणस्य प्रकरणमपि तु यदायत्तः प्राणस्तस्य, स चात्मेत्यात्मन एव प्रकरणम् । शङ्कते – **प्रकरणान्त इति** ॥ प्राणप्रकरणसमाप्तावित्यर्थः । निराकरोति – **न स भगव इति** ॥ सन्दंशन्यायेन हि भूम्न एतत्प्रकरणम्, स चेद्भूमा प्राणः, प्राणस्यैतत्प्रकरणं भवेत् । तच्चायुक्तमित्युक्तम् ॥ ८ ॥

न केवलं श्रुतेर्भूमात्मता परमात्मनः, लिङ्गादपीत्याह सूत्रकारः – **धर्मोपपत्तेश्च** ॥ यदपि पूर्वपक्षिणा कथञ्चिन्नीतम्, तदनुभाष्य भाष्यकारो दूषयति – **योऽप्यसौ सुषुप्तावस्थायामिति** ॥ सुषुप्तावस्थायामिन्द्रियाद्यसंयोग्यात्मैव, न प्राणः । परमात्मप्रकरणात् । अन्यदार्तम् । विनश्वरमित्यर्थः । अतिरोहितार्थमन्यत् ॥ ९ ॥

ಕಲ್ಪಿತವಾದ ಉತ್ತಮತ್ವವನ್ನು ನಿರ್ಗುಣಬ್ರಹ್ಮನಲ್ಲಿ ಹೇಳಬೇಕು. ಆದರೆ 'ಭೂಮಾ ತ್ವೇವ ವಿಜಿಜ್ಞಾಸಿತವ್ಯಃ' । 'ಭೂಮಾನಂ ಭಗವೋ ವಿಜಿಜ್ಞಾಸೇ' 'ಭೂಮಾ ಎಂದೇ ಜಿಜ್ಞಾಸೆ ಮಾಡಬೇಕು', 'ಭೂಮನೇ ಭಗವಂತನಾಗಿದ್ದಾನೆಂದು ಜಿಜ್ಞಾಸೆ ಮಾಡಬೇಕು' ಎಂಬಲ್ಲಿ ಕೊನೆಯ ಸ್ಥಾನದಲ್ಲಿ ಭೂಮನು ಮುಮುಕ್ಷುಗಳಿಂದ ಜಿಜ್ಞಾಸ್ಯನಾಗಿದ್ದಾನೆ. ಕಲ್ಪಿತವಾದ ಉತ್ತಮತ್ವವುಳ್ಳವನಿಗೆ ಮುಮುಕ್ಷು ಜಿಜ್ಞಾಸ್ಯತ್ವವು ಕೂಡುವುದಿಲ್ಲವಾದ್ದರಿಂದ ಇದೂ ತಪ್ಪಾಗಬೇಕಾಗುತ್ತದೆ.

**किञ्च "सर्वेषु लोकेषु कामचारो भवति" इति यद्भूमज्ञानफलं श्रुतं तदप्ययुक्तम् । निर्विशेषज्ञानस्य हि सर्वलोकानां कामस्य च निवृत्तिः फलम् । नतु तत्र कामचारः ।**

ಮತ್ತು 'ಸರ್ವೇಷು ಲೋಕೇಷು ಕಾಮಚಾರೋ ಭವತಿ' ಎಂಬಲ್ಲಿ ಕಾಮಚಾರ ಮೊದಲಾದವು ಭೂಮಜ್ಞಾನದ ಫಲವೆಂದು ಶ್ರುತವಾಗಿದೆ. ಇದೂ ಸಹ ಅಯುಕ್ತವಾಗುತ್ತದೆ. ಏಕೆಂದರೆ ನಿರ್ವಿಶೇಷಬ್ರಹ್ಮನ ಜ್ಞಾನಕ್ಕೆ ಸಕಲ ಲೋಕಗಳ ಕಾಮನೆಯ ನಿವೃತ್ತಿಯೇ ಫಲವಾಗಿರುವಾಗ, ಕಾಮಚಾರವು ಫಲವಾಗಲು ಸಾಧ್ಯವಿಲ್ಲ.

**प्रकाशः –**

अन्ये त्विति ।। 'भूमा त्वेव विजिज्ञासितव्यः' । 'भूमानं भगवो विजिज्ञासे" इत्यादौ श्रुतभूमा जडवायुरुत ब्रह्मेति संशये

ವಿವರಣೆ - ಶಾಂಕರಭಾಷ್ಯದ ಅಧಿಕರಣ ರಚನೆ ಹೀಗಿದೆ - "ಭೂಮಾ ತ್ವೇವ ವಿಜಿಜ್ಞಾಸಿತವ್ಯಃ । 'ಭೂಮಾನಂ ಭಗವೋ ವಿಜಿಜ್ಞಾಸೇ' ಇತ್ಯಾದಿ ಶ್ರುತಿಯಲ್ಲಿ ಶ್ರುತನಾದ ಭೂಮನು ಜಡವಾಯುವೋ, ಅಥವಾ ಬ್ರಹ್ಮನೋ ? ಎಂದು ಸಂಶಯ.

**प्रकाशः –** "अस्ति भगवो नाम्नः" इत्यारभ्याऽऽप्राणात्प्रवृत्तस्य भूयो विषयप्रश्नप्रतिवचनप्रवाहस्य प्राणे परिसमाप्त्या प्राणानन्तरं प्रश्नप्रतिवचनाभ्यां विना भूम्न आम्नानाद्भूमा प्राणशब्दितो वायुरेव ।

ಪೂರ್ವಪಕ್ಷ - ನಾರದರಿಗೆ ಸನತ್ಕುಮಾರರು ಬ್ರಹ್ಮೋಪದೇಶವನ್ನು ಮಾಡುತ್ತಾರೆ. ಮೊದಲು 'ನಾಮ ಬ್ರಹ್ಮೇತಿ ಉಪಾಸೀತ' ಎಂದು. ಹೀಗೆ ಸನತ್ಕುಮಾರರು ಉಪದೇಶಿಸಿದಾಗ ನಾರದರು 'ಅಸ್ತಿ ಭಗವೋ ನಾಮ್ನೋ ಭೂಯಸೀ' ನಾಮಕ್ಕಿಂತಲೂ ಶ್ರೇಷ್ಠವಾದದ್ದು ಯಾವುದು? ಎಂದು ಪ್ರಶ್ನಿಸುತ್ತಾರೆ. ಅನಂತರ 'ವಾಗ್ವಾವ ನಾಮ್ನೋ ಭೂಯಸೀ' ಎಂದು ಸನತ್ಕುಮಾರರು ಉತ್ತರಿಸುತ್ತಾರೆ. ಹೀಗೆ ಪ್ರಶ್ನೋತ್ತರಗಳು ಮುಂದುವರಿದು ಪ್ರಾಣನಲ್ಲಿ ಕೊನೆಗೊಳ್ಳುತ್ತವೆ. ಕೊನೆಯಲ್ಲಿ 'ಯೋ ವೈ ಭೂಮಾ ತತ್ಸುಖಮ್' ಎಂದು ಪ್ರಾಣನನ್ನು ಕರೆಯಲಾಗಿದೆ. ಇದರಿಂದ ಪ್ರಾಣನೇ ಭೂಮನೆಂದು ತಿಳಿಯುತ್ತದೆ. 'ಪ್ರಾಣ' ಎಂದರೆ ಪಂಚವೃತ್ತಿಯೆನಿಸಿದ ಜಡಪ್ರಾಣಗಳನ್ನು ವಿವಕ್ಷಿಸಬೇಕು.

**प्रकाशः** – किञ्च भूमेति भावप्रत्ययान्तत्वाद्भावस्य भवितृसापेक्षत्वात्प्राणस्यैव चानन्तर्येण बुद्धौ सन्निधानात्तस्यैव भवितृत्वेनान्वयः ।

ಮತ್ತು 'ಭೂಮಾ' ಎಂಬ ಶಬ್ದವು ಭಾವಪ್ರತ್ಯಯಾಂತವಾಗಿದೆ. ಧರ್ಮವು ಧರ್ಮಿಸಾಪೇಕ್ಷಿತವಾದ್ದರಿಂದ ಪ್ರಾಣನೇ ಬುದ್ಧಿಯಲ್ಲಿ ಸನ್ನಿಹಿತನಾದ್ದರಿಂದ ಭಾವಪ್ರತ್ಯಯಾಂತವಾದ ಭೂಮಪದಾರ್ಥವು ಭವಿತೃತ್ವೇನ ಬುದ್ಧಿಯಲ್ಲಿ ಪ್ರಸಕ್ತನಾದ ಪ್ರಾಣನಿಂದಲೇ ಅನ್ವಯವನ್ನು ಹೊಂದುತ್ತದೆ.

**प्रकाशः** – नतु 'तरति शोकमात्मवित्' इत्युक्तः परमात्मा । विप्रकृष्टत्वात् ।

ಹೀಗೆ ಧರ್ಮಿಯೆನಿಸಿದ ಪ್ರಾಣನೇ ಅನ್ವಿತನಾಗುತ್ತಾನೆ ಹೊರತು, 'ತರತಿ ಶೋಕಮಾತ್ಮವಿತ್' ಎಂಬುದರಿಂದ ಪ್ರತಿಪಾದ್ಯನಾದ ಪರಮಾತ್ಮನು ಅನ್ವಯವನ್ನು ಹೊಂದುವುದಿಲ್ಲ. ಹತ್ತಿರ ಪ್ರಸಕ್ತನಾದ ಪ್ರಾಣನಿಂದಲೇ ಅನ್ವಯವು ಕೂಡುವಾಗ ದೂರದಲ್ಲಿರುವ ಪರಮಾತ್ಮನ ಅನ್ವಯವು ತಪ್ಪಾಗುತ್ತದೆ.

**प्रकाशः** – नच "तरति शोकमात्मवित्" इत्यादिनाऽऽत्मनः प्रकरणादात्मैव बुद्धिस्थ इत्यात्मप्रकरणेन सन्निधिबाधात्स एव भूमेति युक्तम् ।

'ತರತಿ ಶೋಕಮಾತ್ಮವಿತ್' ಇತ್ಯಾದಿ ವಾಕ್ಯಗಳಿಂದ ಪ್ರಕರಣವು ಪ್ರಾರಂಭವಾಗುತ್ತಿದೆ. ಆದ್ದರಿಂದ ಇದು ಆತ್ಮನ ಪ್ರಕರಣವೇ ಆಗಬೇಕು. ಆದ್ದರಿಂದ ಆತ್ಮನೇ ಬುದ್ಧಿಸ್ಥನಾಗುವ ಕಾರಣ ಆತ್ಮವಿಷಯಕವಾದ ಪ್ರಕರಣದಿಂದ ಸನ್ನಿಧಿರೂಪಪ್ರಮಾಣದಿಂದ ಲಭ್ಯವಾಗುವ ಪ್ರಾಣವು ಬಾಧಿತವಾಗುತ್ತದೆ. ಆದ್ದರಿಂದ ಭೂಮನಾದವನು ಆತ್ಮನೇ ಆಗಬೇಕಲ್ಲವೇ? ಹೀಗೆ ಪ್ರಶ್ನಿಸಬಾರದು.

**प्रकाशः** – नामवागादिप्रतीकोपदेशरूपाब्रह्मविषयोत्तरानुसारेणोपक्रमस्याप्यब्रह्मविषयत्वेन ब्रह्मप्रकरणस्यानुत्थानात् ।

ಇದು ಆತ್ಮನ ಪ್ರಕರಣವೇ ಅಲ್ಲ. ಪರಮಾತ್ಮನಿಗೆ ಪ್ರತೀಕವೆನಿಸಿದ ನಾಮ, ವಾಕ್ ಮೊದಲಾದವುಗಳನ್ನೇ ಸನತ್ಕುಮಾರರು ಉಪದೇಶಿಸುತ್ತಿದ್ದಾರೆ ಹೊರತು, ಪರಮಾತ್ಮನ ವಿಷಯಕವಾದ ಉಪದೇಶವಲ್ಲ. ಉಪಕ್ರಮವೂ ಪರಮಾತ್ಮ ವಿಷಯಕವಾಗಿದ್ದಲ್ಲಿ ಇದು ಬ್ರಹ್ಮಪ್ರಕರಣವೆನ್ನಬಹುದಿತ್ತು. ಆದರೆ ಉಪಕ್ರಮವೇ ಅಬ್ರಹ್ಮ ವಿಷಯವಾದಾಗ ಬ್ರಹ್ಮಪ್ರಕರಣವೆಂದು ಹೇಳಲು ಸಾಧ್ಯವಿಲ್ಲ.

**प्रकाशः** – किञ्च प्राणतत्वमुपदिश्य प्राणोपासकस्यातिवादित्वनामकोत्कर्षमभिधाय प्राणप्रकरणविच्छेदशङ्कानिवृत्तये तदेवातिवादित्वमनुवर्त्य भूमानमुपदिशत्प्राणभूम्नोरभेदं गमयति ।

ಮತ್ತು ಪ್ರಾಣತತ್ತ್ವವನ್ನು ಉಪದೇಶ ಮಾಡಿ ಪ್ರಾಣೋಪಾಸಕನನ್ನು ಅತಿವಾದಿತ್ವವೆಂಬ ಉತ್ಕರ್ಷವನ್ನು ಉಪನಿಷತ್ತು ಹೇಳುತ್ತಿದೆ. ಅನಂತರ ಪ್ರಾಣಪ್ರಕರಣವೂ ವಿಚ್ಛೇದವಾಗಬಹುದೆಂಬ ಶಂಕೆಯನ್ನು ಪರಿಹರಿಸಲು ಅದೇ ಅತಿವಾದಿತ್ವವನ್ನು ಅನುವೃತ್ತಿ ಮಾಡುವುದಕ್ಕಾಗಿ 'ಏಷ ತು ವಾ' ಎಂಬಲ್ಲಿರುವ 'ತು' ಎಂಬ ಪದವು

ನಿವಿಷ್ಟವಾಗಿದೆ. ಆದರಿಂದ ಅತಿವಾದಿತ್ವವನ್ನು ಅನುವೃತ್ತಿ ಮಾಡಿಕೊಂಡು ಭೂಮನನ್ನು ಉಪದೇಶಿಸಿದ ಕಾರಣ ಪ್ರಾಣ ಹಾಗೂ ಭೂಮಾ ಇಬ್ಬರಿಗೂ ಅಭೇದವು ತಿಳಿಯುತ್ತದೆ.

**प्रकाशः** – तस्मात्प्राणो भूमा । सुखत्वामृतत्वादिकं च कथञ्चिन्नेयमिति प्राप्ते

ಆದ್ದರಿಂದ ಜಡವಾದ ಪ್ರಾಣವೇ ಭೂಮಾ. ಭೂಮಪ್ರಕರಣದಲ್ಲಿ ಕೇಳಿಸುತ್ತಿರುವ ಸುಖತ್ವ, ಅಮೃತತ್ವ ಮೊದಲಾದ ಧರ್ಮಗಳನ್ನು ಈ ಜಡವಾಯುವಿನಲ್ಲಿ ಕಥಂಚಿತ್ ಹೊಂದಿಸಬೇಕು. ಇಷ್ಟು ಪೂರ್ವಪಕ್ಷ.

**प्रकाशः** – ''एष तु वा अतिवदति यस्सत्येनातिवदति'' इत्यत्रातिवादित्वहेतु-प्राणोपासनं तुशब्देन व्यावर्त्य मुख्यातिवादित्वहेतोर्ब्रह्मणस्सत्यशब्देन परमार्थसत्त्ववाचिना पृथगुपदेशात् ।

ಸಿದ್ಧಾಂತ - 'ಏಷ ತು ವಾ ಅತಿವದಿತಿ ಯಸ್ಸತ್ಯೇನಾತಿವದತಿ' ಎಂಬಲ್ಲಿ ಅತಿವಾದಿತ್ವಕ್ಕೆ ಕಾರಣವಾದ ಪ್ರಾಣೋಪಾಸನೆಯನ್ನು 'ತು' ಎಂಬ ಶಬ್ದದಿಂದ ವ್ಯಾವೃತ್ತಿ ಮಾಡಲಾಗಿದೆ. ಮತ್ತು ಮುಖ್ಯವಾದ ಅತಿವಾದಿತ್ವಕ್ಕೆ ಹೇತುಭೂತವಾದ ಬ್ರಹ್ಮನ ಉಪಾಸನೆಯನ್ನು ಸತ್ಯಶಬ್ದದಿಂದ ಪ್ರತ್ಯೇಕವಾಗಿ ಹೇಳಲಾಗಿದೆ. ಬ್ರಹ್ಮನು ಪಾರಮಾರ್ಥಿಕ ಸತ್ಯನಾಗಿದ್ದಾನೆಂದು ಸತ್ಯಶಬ್ದವು ಹೇಳುತ್ತಿದೆ.

**प्रकाशः** – तथा परमोपक्रमे ''तरति शोकमात्मवित्'' इति वेद्यतया परमात्मन उच्यमानत्वान्निर्विशेषब्रह्मज्ञानोपयोगितया नामाद्यब्रह्मोपदेशोपपत्तेः आत्मप्रकरणेन च सन्निधानबाधात् ।

ಮತ್ತು 'ತರತಿ ಶೋಕಮ್ ಆತ್ಮವಿತ್' ಎಂದು ಪರಮಾತ್ಮನೇ ಪ್ರಕರಣದ ಪ್ರಾರಂಭದಲ್ಲಿ ಪ್ರತಿಪಾದ್ಯನಾಗಿದ್ದಾನೆ. ಹಾಗಾದರೆ ನಾಮ, ವಾಕ್ ಇವುಗಳ ಉಪದೇಶವನ್ನೇಕೆ ಮಾಡಿದ್ದಾರೆ ಎಂದರೆ, ನಿರ್ವಿಶೇಷಬ್ರಹ್ಮನ ಜ್ಞಾನಕ್ಕೆ ಉಪಯೋಗವಾಗುವುದಕ್ಕಾಗಿ ಅವುಗಳ ಉಪಾಸನೆಯು ಉಪದಿಷ್ಟವಾಗಿವೆ. ಆದ್ದರಿಂದ ಇದು ಆತ್ಮಪ್ರಕರಣವೇ ಆಗಿದೆಯೆಂದು ನಿಶ್ಚಿತ ವಿಚಾರ. ಇಂತಹ ಆತ್ಮಪ್ರಕರಣದಿಂದ ಸನ್ನಿಧಿಯೆಂಬ ಪ್ರಮಾಣವು ಬಾಧಿತವಾಗುತ್ತದೆ.

**प्रकाशः** – तथा ''यत्र नान्यत्पश्यति'' इति द्वैतनिषेधेन भूम्नो लक्षणाभिधानेनाद्वैतः परमात्मैव भूमेति सिद्धान्त इत्याहुरित्यर्थः ।।

ಅದರಂತೆ 'ಯತ್ರ ನಾನ್ಯತ್ಪಶ್ಯತಿ' ಇತ್ಯಾದಿ ವಾಕ್ಯಗಳಲ್ಲಿ ದ್ವೈತವನ್ನು ನಿಷೇಧಿಸಲಾಗಿದೆ. ಇದರಿಂದ ಅದ್ವಿತೀಯತ್ವವೆಂಬ ಲಕ್ಷಣವನ್ನು ಭೂಮನಲ್ಲಿ ಹೇಳಿದಂತಾಯಿತು. ಇದು ಪರಮಾತ್ಮನ ಅಸಾಧಾರಣ ಗುಣವಾದ್ದರಿಂದ ಪರಮಾತ್ಮನೇ ಭೂಮನೆಂದು ಸಿದ್ಧವಾಗುತ್ತದೆ. ಇಷ್ಟು ಅದ್ವೈತಿಗಳ ಅಧಿಕರಣ ಶರೀರ.

ಪರಿಪೂರ್ಣಚಂದ್ರಿಕಾ

**प्रकाशः** – जडेति ।। ''पञ्चवृत्तेः प्राणस्य'' इति तदीयभाष्योक्तेरिति भावः । आत्मशब्दादेरिति ।। आत्मशब्दस्य मुक्तिहेतुवेदनविषयत्वादेश्चाचिद्व्यावर्तकत्वेन पूर्वाधिकरणईक्षत्यधिकरणादौ चोक्तत्वात् । सुखस्य चेतनमात्रलिङ्गत्वादिति भावः ।

'ಪಂಚವೃತ್ತೇಃ ಪ್ರಾಣಸ್ಯ' ಎಂದು ಶಾಂಕರಭಾಷ್ಯದಲ್ಲಿರುವುದರಿಂದ ಪ್ರಾಣಶಬ್ದವು ಜಡವಾಯು ಪರವೆಂದು ಅವರು ಹೇಳುತ್ತಾರೆ. 'ಆತ್ಮಶಬ್ದಾದೇಃ' ಇತ್ಯಾದಿ ವಾಕ್ಯದ ಅಭಿಪ್ರಾಯ ಹೀಗಿದೆ - ಪ್ರಕರಣದಲ್ಲಿ 'ಆತ್ಮಶಬ್ದ' ಮತ್ತು 'ತರತಿ ಶೋಕಮ್ ಆತ್ಮವಿತ್' ಎಂಬಲ್ಲಿ ಮುಕ್ತಿಹೇತುವೇದನವಿಷಯತ್ವ ಮೊದಲಾದ ಧರ್ಮಗಳು ಹೇಳಲ್ಪಟ್ಟಿವೆ. ಇವು ಅಚಿದ್ವ್ಯಾವರ್ತಕವೆಂದು ಹಿಂದಿನ ದುಭ್ವಾದ್ಯಧಿಕರಣದಲ್ಲಿ, ಹಾಗೂ ಈಕ್ಷತ್ಯಧಿಕರಣದಲ್ಲಿ ಸಮರ್ಥಿಸಿದ್ದರಿಂದ, ಪುನಃ ಅದನ್ನೇ ಹೇಳುವುದು ಸರಿಯಲ್ಲ. ಮತ್ತು ಸುಖವು ಕೇವಲ ಚೇತನನಲ್ಲಿರುವ ಧರ್ಮವಾದ್ದರಿಂದ ಜಡವಾಯುವು ಭೂಮವೆನಿಸುತ್ತವೆಂಬ ಪೂರ್ವಪಕ್ಷವೇ ಹುಟ್ಟಲು ಸಾಧ್ಯವಿಲ್ಲ.

**प्रकाशः** – ननूक्तमत्र भामत्यां नामादिप्रतीकोपदेशरूपेणोत्तरेण अब्रह्मविषयेण 'तरति शोकमात्मवित्' इति प्रश्नस्याप्यब्रह्मविषयत्वं वाच्यम् । अन्यथा प्रश्नोत्तरयोर्वैयधिकरण्यापत्तेः । अतो न ब्रह्मप्रकरणोत्थानमिति चेत् ।

ಆಕ್ಷೇಪ - ಭಾಮತಿಯಲ್ಲಿ ಇದನ್ನು ಪರಿಹರಿಸಲಾಗಿದೆ - ನಾಮ, ವಾಕ್ ಮೊದಲಾದ ಪ್ರತೀಕಗಳ ಉಪದೇಶವನ್ನು ಉತ್ತರವನ್ನಾಗಿ ಸನತ್ಕುಮಾರರು ಹೇಳಿರುತ್ತಾರೆ. ಉತ್ತರವು ಅಬ್ರಹ್ಮವಿಷಯಕವಾದ್ದರಿಂದ 'ತರತಿ ಶೋಕಮ್ ಆತ್ಮವಿತ್' ಎಂಬ ಪ್ರಶ್ನೆಯೂ ಸಹ ಅಬ್ರಹ್ಮವಿಷಯಕವೇ ಆಗಬೇಕು. ಇಲ್ಲದಿದ್ದರೆ ಪ್ರಶ್ನೋತ್ತರಗಳಿಗೆ ವೈಯಧಿಕರಣ್ಯವು ಬರುತ್ತದೆ. ಆದ್ದರಿಂದ ಇದನ್ನು ಬ್ರಹ್ಮಪ್ರಕರಣವೆಂದು ಹೇಗೆ ನಿಶ್ಚಯಿಸುತ್ತೀರಿ.

**प्रकाशः** – निर्विशेषब्रह्मज्ञानोपयोगितया नामाद्यब्रह्मोपदेशोपपत्त्या सावकाशेन नामाद्यब्रह्मोपदेशरूपोत्तरेण प्रश्नस्यात्मश्रुतेर्मुक्तिहेतुविति विषयत्वस्य च बाधायोगात्, अन्यस्य च प्रबलजडप्रापकस्याभावात्सन्निहितसुखत्वस्य सर्वथा जडेऽनुपपत्तेश्चेति ।

ಸಮಾಧಾನ - ಭಾಮತಿಯ ಅಭಿಪ್ರಾಯ ಸರಿಯಿಲ್ಲ. ನಿರ್ವಿಶೇಷಬ್ರಹ್ಮನ ಜ್ಞಾನಕ್ಕೆ ಉಪಯೋಗವಾಗುವುದಕ್ಕಾಗಿ ನಾಮ, ವಾಕ್ ಮೊದಲಾದ ಅಬ್ರಹ್ಮವಿಷಯಕವಾದ ಉಪದೇಶವನ್ನು ಸನತ್ಕುಮಾರರು ಮಾಡಿರುತ್ತಾರೆ ಎಂದು ಹೇಳಿದಲ್ಲಿ ಇಂತಹ ಅಬ್ರಹ್ಮವಿಷಯಕವಾದ ಉಪದೇಶವು ಸಾವಕಾಶವಾಗಿದೆ. ಇಂತಹ ಸಾವಕಾಶವಾದ ನಾಮ, ವಾಕ್ ಮೊದಲಾದ್ದರ ಉಪದೇಶ ರೂಪವಾದ ಉತ್ತರದಿಂದ ಪ್ರಶ್ನೆಯಲ್ಲಿರುವ ಆತ್ಮಶಬ್ದ, ಮುಕ್ತಿಹೇತುತ್ವ ಮೊದಲಾದ ನಿರವಕಾಶಲಿಂಗಗಳಿಗೆ ಬಾಧವನ್ನು ಹೇಳುವುದು ತಪ್ಪಾಗುತ್ತದೆ. ಮತ್ತು ಸಮಗ್ರಪ್ರಕರಣವು ಜಡಪರವೆನ್ನಲು ಪ್ರಬಲವಾದ

ಜಡಪ್ರಾಪಕಲಿಂಗಗಳೇನೂ ಕಾಣಸುತ್ತಿಲ್ಲ. ಹತ್ತಿರದಲ್ಲೇ ಕೇಳಿಸುತ್ತಿರುವ ಸುಖವೆಂಬ ಗುಣವನ್ನಂತೂ ಜಡದಲ್ಲಿ ಹೇಳಲು ಸರ್ವಥಾ ಸಾಧ್ಯವಿಲ್ಲ. ಆದ್ದರಿಂದ ಇದನ್ನು ಜಡಪ್ರಕರಣವೆಂದು ಪೂರ್ವಪಕ್ಷ ಮಾಡಲು ಹೇಗೆ ಸಾಧ್ಯ?

**प्रकाशः** – ननु जडे प्राणश्रुतिप्रसिद्ध्यनुरोधेन सुखत्वं दुःखराहित्याद्याशयेन नेयमित्यत आह – **प्राणशब्दश्चेति ।। प्राणाः** इन्द्रियाभिमानिनः । **व्यूदिरे** विवादमकुर्वन् । **प्राणः** मुख्यप्राणः । **एषा** छन्दोगश्रुतिः ।

ಜಡವಾದಪ್ರಾಣದಲ್ಲಿಯೂ ಪ್ರಾಣಶ್ರುತಿಯ ಪ್ರಸಿದ್ಧಿಯನ್ನು ಹೇಳಬಹುದಾದ್ದರಿಂದ ಶ್ರುತವಾದ ಸುಖವನ್ನು ದುಃಖರಾಹಿತ್ಯವೆಂಬರ್ಥದಲ್ಲಿ ಕೂಡಿಸಬಹುದಲ್ಲವೇ? ಎಂಬ ಪ್ರಶ್ನೆಗೆ 'ಪ್ರಾಣಶಬ್ದಶ್ಚ' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. 'ಪ್ರಾಣಾಃ' ಎಂದರೆ 'ಇಂದ್ರಿಯಾಭಿಮಾನಿ ದೇವತೆಗಳು' ಎಂದರ್ಥ. 'ವ್ಯೂದಿರೇ' ಎಂಬುದಕ್ಕೆ 'ವಿವಾದವನ್ನು ಮಾಡಿದರು' ಎಂದರ್ಥ. 'ಪ್ರಾಣಃ' ಎಂದರೆ 'ಮುಖ್ಯಪ್ರಾಣನೆಂದರ್ಥ'. 'ಏಷಾ' ಎಂದರೆ ಛಾಂದೋಗ್ಯ ಶ್ರುತಿ ಎಂದರ್ಥ.

**प्रकाशः** – "तान्वरिष्ठः प्राण उवाच । मामोहमापद्यथ । अहमेवैतत्पञ्चधाऽऽत्मानं प्रविभज्यैतद्बाणमवष्टभ्य विधारयामि" इति षट्प्रश्ने ।

'ತಾನ್ವರಿಷ್ಠಃ ಪ್ರಾಣ ಉವಾಚ । ಮಾಮೋಹಮಾಪದ್ಯಥ । ಅಹಮೇವೈತತ್ಪಂಚಧಾಽಽತ್ಮಾನಂ ಪ್ರವಿಭಜ್ಯೈತದ್ಬಾಣಮವಷ್ಟಭ್ಯವಿಧಾರಯಾಮಿ' ಎಂಬುದು ಷಟ್‌ಪ್ರಶ್ನೋಪನಿಷತ್ತಿನಲ್ಲಿದೆ.

**प्रकाशः** – आदिपदेन "तेहेमे प्राणा अहं श्रेयसि विवदमाना ब्रह्म जग्मुः । तद्धोचुः को नो वरिष्ठः" इति वाजसनेयश्रुतिर्ग्राह्या । एवशब्देनाभिमान्यधिकरण-न्यायेन तत्र मुख्यत्वं सूचितम् ।

ಆದಿಪದದಿಂದ 'ತೇಹೇಮೇ ವಾ ಪ್ರಾಣಾ ಅಹಂ ಶ್ರೇಯಸಿ ವಿವದಮಾನಾ ಬ್ರಹ್ಮ ಜಗ್ಮುಃ । ತದ್ಧೋಚುಃ ಕೋ ನೋ ವರಿಷ್ಠಃ' ಎಂಬ ವಾಜಸನೇಯ ಶ್ರುತಿಯನ್ನು ವಿವಕ್ಷಿಸಬೇಕು. 'ಏವ' ಶಬ್ದದಿಂದ ಅಭಿಮಾನ್ಯಧಿಕರಣದ ನ್ಯಾಯದಿಂದ ಪ್ರಾಣಶಬ್ದವು ಮುಖ್ಯಪ್ರಾಣನನ್ನು ಮುಖ್ಯವಾಗಿ ಹೇಳುತ್ತದೆಂದು ಸೂಚಿಸಿದ್ದಾರೆ.

**प्रकाशः** – श्रुतीनां जडपरत्वे वचनादेरयोग इति भावः । एतेन नामवाक्चित्तसङ्कल्पादि जडप्रायपाठात्प्राणो जड इति निरस्तम् । श्रौतप्रसिद्ध्या प्रायपाठबाधात् ।

ಈ ಎಲ್ಲಾ ಶ್ರುತಿಗಳು ಜಡವಾಯುವನ್ನು; ಪ್ರತಿಪಾದಿಸುವುದಾದರೆ ಮಾತನಾಡುವಿಕೆ, ವಿವಾದ ಇವುಗಳೆಲ್ಲಾ ಅಯುಕ್ತವಾಗಬೇಕಾಗುತ್ತದೆ. ಹೀಗೆ ಹೇಳಿದ್ದರಿಂದ ನಾಮ, ವಾಕ್, ಚಿತ್ತ, ಸಂಕಲ್ಪ ಮೊದಲಾದ

ಜಡಗಳೇ ಪ್ರಸಕ್ತವಾಗಿರುವುದರಿಂದ ಪ್ರಾಯಪಾಠದ ಬಲದಿಂದ ಪ್ರಾಣಶಬ್ದವೂ ಸಹ ಜಡಪರವೇ ಆಗಬೇಕಲ್ಲವೇ? ಎಂಬ ಶಂಕೆಯನ್ನು ನಿರಾಕರಿಸಿದಂತಾಯಿತು ಎಂದರೆ ಪ್ರಾಣಶಬ್ದವು ಮುಖ್ಯಪ್ರಾಣನಲ್ಲಿ ಶ್ರುತಿಪ್ರಸಿದ್ಧವಾಗಿದೆ. ಶ್ರುತಿಪ್ರಸಿದ್ಧಿಗಿಂತ ಪ್ರಾಯಪಾಠವು ದುರ್ಬಲವಾದ್ದರಿಂದ ಬಾಧಿತವಾಗುತ್ತದೆ ಎಂದಭಿಪ್ರಾಯ.

**प्रकाशः** – त्वन्मत आनन्दमयनये ''असन्नेव स भवति'' इत्यानन्दमयपुच्छविषयश्रुत्या पुच्छस्य ब्रह्मत्वबोधिन्याऽन्नमयाद्यब्रह्मपुच्छप्रायपाठबाधवत् ।

ಶ್ರುತಿಪ್ರಸಿದ್ಧಿಯಿಂದ ಪ್ರಾಯಪಾಠವು ಬಾಧಿತವಾಗುತ್ತದೆಂಬ ವಿಷಯವು ಅದ್ವೈತಿಗಳಿಗೂ ಸಮ್ಮತವಾಗಿದೆ. ಆನಂದಮಯಾಧಿಕರಣದಲ್ಲಿ ಅದ್ವೈತಿಗಳು ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯ ಈ ಐದನ್ನೂ ಸಹ ಬ್ರಹ್ಮನೆಂದು ಹೇಳುವುದಿಲ್ಲ. ಮತ್ತು ಅನ್ನಮಯಾದಿ ನಾಲ್ಕರ ಪುಚ್ಛವನ್ನೂ ಸಹ ಬ್ರಹ್ಮನೆಂದು ಹೇಳುವುದಿಲ್ಲ. ಆದರೆ ಆನಂದಮಯನ ಪುಚ್ಛನನ್ನು ಮಾತ್ರ ಬ್ರಹ್ಮನೆಂದು ಹೇಳುತ್ತಾರೆ. ಅನ್ನಮಯಾದಿ ಪುಚ್ಛಗಳು ಅಬ್ರಹ್ಮವಾದ್ದರಿಂದ ಪ್ರಾಯಪಾಠಕ್ಕೆ ಅನುಸಾರಿಯಾಗಿ ಆನಂದಮಯನ ಪುಚ್ಛನನ್ನೂ ಸಹ ಬ್ರಹ್ಮನೆನ್ನಬಾರದಲ್ಲವೇ? ಎಂಬ ಪ್ರಶ್ನೆಗೆ ಅವರು 'ಅಸನ್ನೇವ ಸ ಭವತಿ' ಎಂಬ ಶ್ರುತಿಯು ಆನಂದಮಯನ ಪುಚ್ಛನನ್ನು ಬ್ರಹ್ಮನೆಂದು ಹೇಳುತ್ತಿದೆ. ಶ್ರುತಿಪ್ರಸಿದ್ಧಿಯ ಅನುಸಾರಿಯಾಗಿ ಪ್ರಾಯಪಾಠಕ್ಕೆ ಬಾಧವನ್ನು ಹೇಳಬೇಕೆಂದು ಉತ್ತರಿಸಿದ್ದಾರೆ. ಅದರಂತೆ ಪ್ರಕೃತದಲ್ಲಿಯೂ ಪ್ರಾಣಶಬ್ದವು ಮುಖ್ಯಪ್ರಾಣನಲ್ಲೇ ಪ್ರಸಿದ್ಧವಾಗಿರುವಾಗ ಅದಕ್ಕನುಸಾರಿಯಾಗಿ ಪ್ರಾಯಪಾಠವನ್ನೇ ಬಾಧಿಸಬೇಕು.

**प्रकाशः** – नामादिशब्दानामभिमानिनयन्यायेन ''नामाभिमानिनी चोषा'' इत्यादि वक्ष्यमाणस्मृत्या च चेतनार्थत्वेन जडप्रायपाठाभावाच्चेति ।

ನಿಜವಾದ ವಿಚಾರವೇನೆಂದರೆ ನಾಮ, ವಾಕ್ ಈ ಎಲ್ಲ ಪದಗಳು ಜಡವನ್ನು ಹೇಳುತ್ತಲೇ ಇಲ್ಲ. ಹೊರತಾಗಿ ಆಯಾ ಅಭಿಮಾನಿ ದೇವತೆಗಳನ್ನು ಹೇಳುತ್ತಿವೆ. ಅಭಿಮಾನ್ಯಧಿಕರಣ ನ್ಯಾಯದಿಂದ ಮತ್ತು 'ನಾಮಾಭಿಮಾನಿನೀ ಚೋಷಾ' ಇತ್ಯಾದಿ ಮುಂದೆ ಹೇಳುವ ಸ್ಮೃತಿಯಿಂದ ಇವೆಲ್ಲವೂ ಸಹ ಚೇತನ ಪರವಾಗಿರುವಾಗ ಪ್ರಾಯಪಾಠವು ಜಡವಿಷಯಕವಾಗಿದೆಯೆಂದು ಹೇಳುವುದೇ ತಪ್ಪು.

**प्रकाशः** – भूमत्वं च किं वास्तवमुत कल्पितम् । न द्वयमपीत्याह – **उक्तरीत्येति** ।। ''न हि देशतः पूर्णत्वं भूमत्वम्'' इत्यादिना पूर्वोक्तरीत्येत्यर्थः । **उत्तमत्वस्य** भूमत्वस्य ।

ಸಿದ್ಧಾಂತ ಮಾಡುವಾಗ ಅದ್ವೈತಿಗಳು ನಿರ್ವಿಶೇಷಬ್ರಹ್ಮನನ್ನು ಭೂಮನೆಂದಿದ್ದಾರೆ. ನಿರ್ವಿಶೇಷ ಬ್ರಹ್ಮನಲ್ಲಿ ಎಂತಹ ಭೂಮತ್ವವನ್ನು ಇವರು ಹೇಳುತ್ತಾರೆ. ಸತ್ಯಭೂತವಾದ ಭೂಮತ್ವವನ್ನೋ, ಅಥವಾ ಕಲ್ಪಿತವಾದ ಭೂಮತ್ವವನ್ನೋ? ಎರಡನ್ನೂ ಸಹ ಹೇಳಲು ಸಾಧ್ಯವಿಲ್ಲವೆಂದು 'ಉಕ್ತರೀತ್ಯಾ' ಇತ್ಯಾದಿ ವಾಕ್ಯದಿಂದ ಹೇಳಿದ್ದಾರೆ. 'ನ ಹಿ ದೇಶತಃಪೂರ್ಣತ್ವಂ ಭೂಮತ್ವಮ್' ಇತ್ಯಾದಿಯಾಗಿ ಹಿಂದೆ ಹೇಳಿದ ಪ್ರಕಾರ ಎಂದರ್ಥ.

'ಉತ್ತಮತ್ವಸ್ಯ' ಎಂದರೆ 'ಭೂಮತ್ವಸ್ಯ' ಭೂಮತ್ವಕ್ಕೆ ಎಂದರ್ಥ.

**प्रकाशः – इति यद्भूमज्ञानफलमिति ।।** यद्यपि भूमवाक्यादुपरि "अथात आत्मादेशः" इत्युक्तात्मवाक्ये "स वा एष एवं पश्यन्नेवं मन्वान एवं विजानन्नात्मरतिरात्मक्रीड आत्ममिथुन आत्मानन्दस्सस्वराट् भवति । तस्य सर्वेषु लोकेषु कामंचारो भवति" इत्यात्मज्ञानस्यैव फलं श्रुतम् । तथापि भूमात्मनोरभेदादेवमुक्तम् ।

ಗ್ರಂಥಕಾರರು 'ಇತಿ ಯದ್ಭೂಮಜ್ಞಾನಫಲಮ್' ಭೂಮಜ್ಞಾನವೇ ಫಲವೆಂದು ಶ್ರುತವಾಗಿದೆ ಎಂದಿದ್ದಾರೆ. ಆದರೆ ಭೂಮವಾಕ್ಯದ ಮುಂದೆ 'ಅಥಾತ ಆತ್ಮಾದೇಶಃ' ಎಂಬ ಆತ್ಮವಾಕ್ಯದಲ್ಲಿ 'ಸ ವಾ ಏಷ ಏವಂ ಪಶ್ಯನ್ನೇವಂ ಮನ್ವಾನ ಏವಂ ವಿಜಾನನ್ನಾತ್ಮರತಿರಾತ್ಮಕ್ರೀಡ ಆತ್ಮಮಿಥುನ ಆತ್ಮಾನಂದಸ್ಸ ಸ್ವರಾಟ್ ಭವತಿ । ತಸ್ಯ ಸರ್ವೇಷು ಲೋಕೇಷು ಕಾಮಚಾರೋ ಭವತಿ' ಎಂಬುದಾಗಿ ಆತ್ಮಜ್ಞಾನವನ್ನೇ ಫಲವೆಂದು ಹೇಳಲಾಗಿದೆ. ಗ್ರಂಥಕಾರರು ಭೂಮಜ್ಞಾನದ ಫಲವೆಂದು ಹೇಗೆ ಹೇಳಿದರು? ಎಂದರೆ ಭೂಮಾ ಹಾಗೂ ಆತ್ಮಾ ಇಬ್ಬರೂ ಐಕ್ಯವನ್ನು ವಿವಕ್ಷಿಸಿ ಗ್ರಂಥಕಾರರು ಹೀಗೆ ಹೇಳಿದ್ದಾರೆ.

**गुरुराजीयम्** – नन्वेतत्तदा स्याद्यदि गुणज्यैष्ठ्यरूपमुत्तमत्वं स्यात् । नचैवम् । देशतः पूर्णत्वस्यैव भूमत्वपदार्थत्वात् । तस्य च निर्गुणेऽपि सम्भवादित्यत आह – उक्तरीत्येति ।। देशतः पूर्णत्वं न भूमत्वम् । 'वाग्वाव नाम्नो भूयसी' इत्यादि वाक्येषु पूर्वत्र सर्वत्र भूयस्त्वस्य देशतः पूर्णत्वस्यासम्भवेन तत्र तस्यैव वक्तव्यत्वादित्युक्तरीत्येत्यर्थः ।




ಶಾಂಕರಭಾಷ್ಯದಲ್ಲಿ 'ಭೂಮಾ ಸಂಪ್ರಸಾದಾತ್ ಅಧ್ಯುಪದೇಶಾತ್' ಎಂಬ ಸೂತ್ರವನ್ನು ವ್ಯಾಖ್ಯಾನಿಸುತ್ತಾ ಅಧಿಕರಣ ಶರೀರವನ್ನು ಹೀಗೆ ರಚನೆ ಮಾಡಿದ್ದಾರೆ. ನಾರದರಿಗೆ ಸನತ್ಕುಮಾರರು ಬ್ರಹ್ಮೋಪದೇಶವನ್ನು ಮಾಡುತ್ತಾ 'ನಾಮ ಬ್ರಹ್ಮೇತಿ ಉಪಾಸೀತ' ಎಂದು ಹೇಳಿದರು. ಆವಾಗ ನಾರದರು 'ಅಸ್ತಿ ಭಗವಃ ನಾಮ್ನೋ ಭೂಯಃ' ನಾಮಕ್ಕಿಂತ ಮಿಗಿಲಾದುದು ಯಾವುದು? ಎಂದು ಪ್ರಶ್ನಿಸುತ್ತಾರೆ. ಪುನಃ ಸನತ್ಕುಮಾರರು 'ವಾಗ್ವಾವ ನಾಮ್ನೋ ಭೂಯಸೀ' ಎಂದು ಉತ್ತರಿಸಿದರು. ಹೀಗೆ ಪ್ರಶ್ನೋತ್ತರಗಳು ನಡೆದು ಕೊನೆಯಲ್ಲಿ 'ಯೋ ವೈ ಭೂಮಾ ತತ್ಸುಖಮ್' ಎಂದು ಪ್ರಾಣನನ್ನು ಭೂಮನೆಂದು ಉಪದೇಶಿಸಿದರು. ಆದ್ದರಿಂದ ಜಡಭೂತವಾದ ಪ್ರಾಣವೇ ಭೂಮನೆಂದು ಪೂರ್ವಪಕ್ಷ.

ಪರಿಪೂರ್ಣಚಂದ್ರಿಕಾ

ಸನತ್ಕುಮಾರರು ಪ್ರಾಣನ ತನಕ ಉಪದೇಶಿಸಿ ಅನಂತರ 'ಏಷ ತು ವಾ ಅತಿವದತಿ ಯ ಸತ್ಯೇನ ಅತಿವದತಿ' 'ಸತ್ಯನನ್ನು ಯಾರು ತಿಳಿಯುತ್ತಾನೋ, ಅವನೇ ಅತಿವಾದಿ' ಎಂದು ಹೇಳಿದ್ದಾರೆ. ಇಲ್ಲಿ 'ಸತ್ಯ' ಶಬ್ದಕ್ಕೆ ಬ್ರಹ್ಮನೆಂದರ್ಥ. 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಎಂಬುದಾಗಿ ತೈತ್ತಿರೀಯ ಶ್ರುತಿಯು ಬ್ರಹ್ಮನನ್ನೇ ಸತ್ಯವೆನ್ನುತ್ತಿದೆ. ಅದನ್ನೇ 'ಯೋ ವೈ ಭೂಮಾ ತತ್ಸುಖಮ್' ಎಂದು ಭೂಮನೆಂದು ಉಪದೇಶಿಸಲಾಗಿದೆ. ಆದ್ದರಿಂದ ನಿರ್ವಿಶೇಷಬ್ರಹ್ಮನೇ ಭೂಮನು ಹೊರತು, ಜಡವಾದ ವಾಯುವಲ್ಲ. ಹೀಗೆ ನಿರ್ವಿಶೇಷ ಬ್ರಹ್ಮನ ಪ್ರತಿಪಾದನೆಗಾಗಿ ಈ ಪಾದವು ಹೊರಟಿರುವುದರಿಂದ ಭೂಮಾಧಿಕರಣವು ನಿರ್ವಿಶೇಷಬ್ರಹ್ಮನನ್ನೇ ಭೂಮನೆನ್ನುತ್ತದೆ ಎಂದು ಸಿದ್ಧಾಂತ ಮಾಡಿದ್ದಾರೆ.

ಪೂರ್ವಪಕ್ಷ ಮತ್ತು ಸಿದ್ಧಾಂತಗಳೇ ಇವರ ಮತದಲ್ಲಿ ಕೂಡುವುದಿಲ್ಲ. ಏಕೆಂದರೆ ಪ್ರಾರಂಭದಲ್ಲಿ ಆತ್ಮಶಬ್ದ ಹಾಗೂ ಸುಖಶಬ್ದಗಳು ಕೇಳಿಸುತ್ತಿವೆ. ಜಡದಲ್ಲಿ ಇವೆರಡೂ ಸಹ ಉಪಪನ್ನವಾಗುವುದಿಲ್ಲ. ಮತ್ತು ಮಾತನಾಡುವಿಕೆ, ಚರ್ಚೆ ಮಾಡುವಿಕೆ ಮೊದಲಾದ ಚೇತನನ ಧರ್ಮವು ಪ್ರಾಣನಲ್ಲಿ ಕೇಳಿಸುತ್ತಿವೆ. ಇವೂ ಸಹ ಜಡದಲ್ಲಿ ಅನುಪಪನ್ನವಾಗುತ್ತವೆ. ಹಾಗಾಗಿ ಜಡವಾಯು ಭೂಮನೆಂದು ಪೂರ್ವಪಕ್ಷ ಮಾಡಿದ್ದೇ ತಪ್ಪು.

ಸಿದ್ಧಾಂತವೂ ಸಹ ತಪ್ಪು. ಉಪಕ್ರಮದಲ್ಲಿ ಗುಣಜ್ಯೇಷ್ಠತ್ವವು ಕೇಳಿಸುತ್ತಿದೆ. ನಿರ್ವಿಶೇಷನಾದ ನಿರ್ಗುಣಬ್ರಹ್ಮನಲ್ಲಿ ಉತ್ತಮವಾದ ಗುಣಗಳಿರಲು ಹೇಗೆ ಸಾಧ್ಯ? ಮತ್ತು ಯಾರು ಭೂಮನನ್ನು ತಿಳಿಯುತ್ತಾರೋ, ಅವನು ಬಯಸಿದ್ದನ್ನೆಲ್ಲಾ ಹೊಂದುತ್ತಾನೆಂಬ ಫಲವನ್ನು ಶ್ರುತಿಯು ಹೇಳುತ್ತಿದೆ. ಆದರೆ ಅದ್ವೈತಮತದಲ್ಲಿ ನಿರ್ವಿಶೇಷಬ್ರಹ್ಮನ ಜ್ಞಾನದಿಂದ ಅಂತಹ ಅಪೇಕ್ಷೆಗಳೇ ಉಂಟಾಗುವುದಿಲ್ಲವೆಂದು ಸಕಲ ನಿವೃತ್ತಿಯನ್ನು ಫಲವನ್ನಾಗಿ ಹೇಳಿದ್ದಾರೆ. ಈ ಎಲ್ಲಾ ಕಾರಣಗಳಿಂದ ಅದ್ವೈತಿಗಳ ಅಧಿಕರಣಶರೀರವು ಅಯುಕ್ತವಾಗಿದೆಯೆಂದು ತಿಳಿಯಬೇಕು.



• • • • •

## ಅದ್ವೈತಿಗಳ ಸೂತ್ರಾರ್ಥ ವಿಮರ್ಶೆ

## तात्पर्यचन्द्रिका

**यच्चोक्तं सम्यक्प्रसीदत्यस्मिन्निति व्युत्पत्त्या सुषुप्त्यवस्थावाचिना सम्प्रसादशब्देन तत्र जाग्रत्प्राणो लक्ष्यते । तथा च प्राणादूर्ध्वमुपदेशादित्याद्यसूत्रार्थ इति ।**

ಅನುವಾದ - ಸೂತ್ರಾರ್ಥವನ್ನು ಅದ್ವೈತಿಗಳು ಹೀಗೆ ಹೇಳುತ್ತಾರೆ - 'ಸಮ್ಯಕ್‌ಪ್ರಸೀದತಿ ಅಸ್ಮಿನ್' ಎಂಬ ವ್ಯುತ್ಪತ್ತಿಯಿಂದ ಸಂಪೂರ್ಣವಾಗಿ ಪ್ರಸನ್ನವಾಗಿರುವ ಅವಸ್ಥೆಯೆಂದರೆ 'ಸುಷುಪ್ತಿ'. ಆದ್ದರಿಂದ 'ಸಂಪ್ರಸಾದ ಶಬ್ದಕ್ಕೆ 'ಸುಷುಪ್ತಿ' ಎಂದು ಅರ್ಥವಿದ್ದರೂ ಲಕ್ಷಣಯಾ 'ಸುಷುಪ್ತಿ' ಅವಸ್ಥೆಯಲ್ಲಿ ಜಾಗ್ರತವಾಗಿರುವ ಪ್ರಾಣವಾಯುವನ್ನು ವಿವಕ್ಷಿಸಬೇಕು. ಇಂತಹ ಸಂಪ್ರಸಾದ ಎನಿಸಿದ ಜಾಗ್ರತ್ಪ್ರಾಣಗಳಿಗಿಂತ ಅಧಿ = ಉತ್ತಮವೆಂದು, ಉಪದೇಶಾತ್ = ಉಪದೇಶಿಸಿರುವುದರಿಂದ ಭೂಮನಾದವನು ಬ್ರಹ್ಮನೇ ಆಗುತ್ತಾನೆ.

ಭೂಮಾಧಿಕರಣ (೧-೩-೨)

**तन्न । अस्मद्रीत्या सुखे सम्प्रसादशब्दस्य योगसम्भवे प्राणे योगमुखलक्षणाया अयोगात् ।**

ಅದು ಸರಿಯಲ್ಲ. ನಾವು ಹೇಳುವಂತೆ 'ಸಂಪ್ರಸಾದ' ಶಬ್ದಕ್ಕೆ 'ಸುಖ' ಎಂಬರ್ಥದಲ್ಲಿ ಯೋಗಾರ್ಥವನ್ನು ಮಾಡಲು ಬರುವಾಗ ಪ್ರಾಣವಾಯುವಿನಲ್ಲಿ ಯೋಗಾರ್ಥದ ಮೂಲಕ ಲಕ್ಷಣಾ ಮಾಡುವುದು ತಪ್ಪಾಗುತ್ತದೆ.

**सम्प्रसादादित्यस्य च ''धर्मोपपत्तेश्च'' इत्युत्तरसूत्रस्थचशब्दानुषङ्गेण पूर्णसुखत्वरूपहेत्वन्तरपरत्वसम्भवे अध्युपदेशादित्यनेनोक्तनिरवधिकोत्तमत्वं प्रत्यवधित्वेन सङ्कोचकत्वायोगाच्च ।**

ಮತ್ತು 'ಸಂಪ್ರಸಾದಾತ್' ಎಂಬಲ್ಲಿ ಮುಂದಿನ 'ಧರ್ಮೋಪಪತ್ತೇಶ್ಚ' ಎಂಬ ಸೂತ್ರದಲ್ಲಿರುವ 'ಚ' ಶಬ್ದವನ್ನು ಅನುಷಂಗ ಮಾಡಿಕೊಂಡಾಗ ಪೂರ್ಣಸುಖತ್ವವೆಂಬ ಮತ್ತೊಂದು ಹೇತುವೂ ಇದೆ ಎಂದು ವ್ಯಾಖ್ಯಾನಿಸಲು ಬರುತ್ತದೆ. ಅಂದರೆ 'ಸಂಪ್ರಸಾದಾತ್' ಪೂರ್ಣಸುಖಸ್ವರೂಪನಾದ್ದರಿಂದ, 'ಅಧ್ಯುಪದೇಶಾತ್' ನಿರವಧಿಕವಾಗಿ ಉತ್ತಮನಾದ್ದರಿಂದ ಹೀಗೆ ಎರಡು ಹೇತುಗಳನ್ನು ಸೂತ್ರಕಾರರು ಹೇಳಿದ್ದಾರೆಂದು ನಾವು ವ್ಯಾಖ್ಯಾನಿಸುವಂತೆ ಸೂತ್ರಕ್ಕೆ ಅರ್ಥೈಸಬೇಕು. ಇದೇ ಸಮಂಜಸ. ಇದನ್ನು ಬಿಟ್ಟು 'ಅಧ್ಯುಪದೇಶಾತ್' ಎಂಬುದು ನಿರವಧಿಕವಾದ ಉತ್ತಮತ್ವವನ್ನು ಹೇಳುತ್ತಿದೆ. ಅದಕ್ಕೆ ಅವಧಿ ಯಾವುದು ? ಎಂಬ ಪ್ರಶ್ನೆಗೆ 'ಸಂಪ್ರಸಾದಾತ್' ಎಂಬುದು ಪ್ರಾಣವಾಯುವೆಂಬ ಅವಧಿಯನ್ನು ಹೇಳುತ್ತಿದೆಯೆಂಬುದಾಗಿ ನಿರವಧಿಕ ಉತ್ತಮತ್ವಕ್ಕೆ ಸಂಕೋಚಕವಾಗಿ 'ಸಂಪ್ರಸಾದಾತ್' ಎಂಬುದನ್ನು ವ್ಯಾಖ್ಯಾನಿಸುವುದು ತಪ್ಪಾಗುತ್ತದೆ.

**किञ्च न तावदयं भूम्नः प्राणत्वाभावे हेतुः । तत्वज्ञानार्थं वादप्रक्रियया प्रवृत्तेषु सूत्रेषु प्रथमाकाङ्क्षितस्याध्याहारनिरपेक्षस्य च स्वपक्षहेतुत्वस्य सम्भवे तद्विपरीतस्य पूर्वपक्षनिरासहेतुत्वस्यायोगात् । स्वपक्षसाधनहेतुत्वं हि परपक्षनिरास-हेतुत्ववन्नाध्याहारापेक्षम् ।**

ಪ್ರಥಮ ಸೂತ್ರದಲ್ಲಿ ನೀವು ಅನುಮಾನ ಸ್ವರೂಪವನ್ನು ಹೇಗೆ ತೋರಿಸುತ್ತೀರಿ? 'ಅಯಂ ಭೂಮಾ', 'ಪ್ರಾಣಃ ಭವಿತುಂ ನಾರ್ಹತಿ' 'ಪ್ರಾಣದೂರ್ಧ್ವಂ ಉಪದೇಶಾತ್' ಎಂದೋ, ಅಥವಾ 'ಅಯಂ ಭೂಮಾ ಬ್ರಹ್ಮೈವ ಪ್ರಾಣದೂರ್ಧ್ವಂ ಉಪದೇಶಾತ್' ಎಂದೋ? ಇಲ್ಲಿ ಉಪದೇಶವು ಭೂಮನು ಪ್ರಾಣನಲ್ಲ ಎಂದು ಹೇಳಿ, ಇದು ಪರಪಕ್ಷನಿರಾಸಕವಾದ ಹೇತುವೆನ್ನುವುದು ತಪ್ಪಾಗುತ್ತದೆ. ಏಕೆಂದರೆ ಸೂತ್ರಗಳೆಲ್ಲವೂ ತತ್ವಜ್ಞಾನಕ್ಕೋಸ್ಕರ ವಾದಪ್ರಕ್ರಿಯೆಯಿಂದ ಪ್ರವೃತ್ತವಾಗಿವೆ. ಆದ್ದರಿಂದ

ಸೂತ್ರದಲ್ಲಿ ಪ್ರಥಮಾಕಾಂಕ್ಷಿತವಾದದ್ದು ಯಾವುದು ಎಂದರೆ ಸ್ವಪಕ್ಷಸಾಧಕವಾದ ಹೇತುತ್ವ. ಅಂದರೆ 'ಸಂಪ್ರಸಾದಾತ್' ಎಂಬುದನ್ನು ಸ್ವಪಕ್ಷಸಾಧಕಹೇತುವೆಂದು ಹೇಳಿದಾಗ ಅಧ್ಯಾಹಾರವನ್ನು ಮಾಡಬೇಕಾಗಿಲ್ಲ. ಇದಕ್ಕೆ ವಿಪರೀತವಾಗಿ ಮಾಡಬಾರದು ಹಾಗೂ ಭೂಮನು ಪ್ರಾಣನಲ್ಲ ಎಂಬುದಾಗಿ ಪರಪಕ್ಷ ನಿರಾಸಮಾಡುವುದಕ್ಕಾಗಿ ಹೇತುವೆಂದು ಹೇಳಿದರೆ ಅಧ್ಯಾಹಾರ ಮಾಡಬೇಕಾದಂತೆ ಈಗ ಮಾಡಬೇಕಾಗಿಲ್ಲ.

**समन्वयसूत्रस्थस्य तच्छब्दस्याध्यायपरिसमाप्त्यनुषङ्गेण भूमा तत् ब्रह्मेत्यन्वयात् । अत एव ''आनन्दमय'' इत्यादिषु स्वपक्षसाधकसूत्रेषु पक्षहेत्वोरेवोक्तिः । ''नेतरोऽनुपपत्तेः'' इत्यादिपरपक्षनिराससूत्रेषु तु साध्यस्यापि ।**

ಸ್ವಪಕ್ಷಸಾಧನೆ ಮಾಡುವುದಾದಲ್ಲಿ ಅಧ್ಯಾಹಾರವನ್ನು ಏಕೆ ಮಾಡಬೇಕಾಗಿಲ್ಲ ಎಂದರೆ, ಸಮನ್ವಯ ಸೂತ್ರದಲ್ಲಿರುವ 'ತತ್' ಎಂಬ ಪದವು ಅಧ್ಯಾಯ ಮುಗಿಯುವ ತನಕ ಪ್ರತಿಯೊಂದು ಸೂತ್ರಗಳಲ್ಲಿಯೂ ಅನುಷಂಗವಾಗುತ್ತದೆ. ಆದ್ದರಿಂದ ಭೂಮಾ ತತ್ = ಬ್ರಹ್ಮ ಎಂದು ಅನ್ವಯವಾಗುತ್ತದೆ. ಆದ್ದರಿಂದಲೇ 'ಆನಂದಮಯ' ಮೊದಲಾದ ಸ್ವಪಕ್ಷಸಾಧಕಸೂತ್ರಗಳಲ್ಲಿ ಸೂತ್ರಕಾರರು ಪಕ್ಷ ಹಾಗೂ ಹೇತುಗಳೆರಡನ್ನೇ ಹೇಳಿರುತ್ತಾರೆ. 'ನೇತರೋಽನುಪಪತ್ತೇಃ' ಇತ್ಯಾದಿಯಾದ ಕೆಲವು ಪರಪಕ್ಷನಿರಾಸಕ ಸೂತ್ರಗಳಲ್ಲಿ ಸಾಧ್ಯವನ್ನೂ ಹೇಳಿರುತ್ತಾರೆ. ಪ್ರಕೃತ ಪರಪಕ್ಷ ನಿರಾಸಕ್ಕೋಸ್ಕರ ಈ ಸೂತ್ರವೆನ್ನುವುದಾದರೆ 'ನ ಪ್ರಾಣಃ' ಎಂಬುದನ್ನು ಅಧ್ಯಾಹಾರ ಮಾಡಿಕೊಳ್ಳಬೇಕಾಗುತ್ತದೆ.

**नापि भूम्नो ब्रह्मत्वे हेतुः । प्राणादूर्ध्वमुपदेशस्यानन्दमयप्रकरणे मनोमयादिषु सत्त्वात् । भूमप्रकरणे च प्राणोपदेशादूर्ध्वं ''सत्यं विजिज्ञासितव्यम्'' इति सत्यशब्दार्थस्य ब्रह्मण इव ''विज्ञानं त्वेव विजिज्ञासितव्यं मतिस्त्वेव विजिज्ञासितव्या श्रद्धा त्वेव विजिज्ञासितव्या'' इत्यादेरुक्तत्वेन विज्ञानमति-श्रद्धाकृतिनिष्ठादिष्वपि सत्त्वात् । त्वन्मते मनोमयादीनां विज्ञानादीनां चाब्रह्मत्वात् ।**

'ಸಂಪ್ರಸಾದಾತ್' ಎಂಬುದನ್ನು ಭೂಮನನ್ನು ಬ್ರಹ್ಮನೆನ್ನಲು ಹೇತು ಮಾಡಿದರೆ ವ್ಯಭಿಚಾರ ಬರುತ್ತದೆ. ಏಕೆಂದರೆ ಆನಂದಮಯ ಪ್ರಕರಣದಲ್ಲಿ ಮನೋಮಯಾದಿಗಳು ಪ್ರಾಣನಿಗಿಂತ ಉತ್ತಮವಾಗಿವೆಯೆಂದು ಹೇಳಲ್ಪಟ್ಟಿದೆ. ಆದ್ದರಿಂದ ಪ್ರಾಣನಿಗಿಂತ ಉತ್ತಮತ್ವವು ಮನೋಮಯಾದಿಗಳಲ್ಲಿ ಕೇಳಿಸುತ್ತಿದ್ದರೂ ಅವುಗಳನ್ನು ಬ್ರಹ್ಮವೆಂದು ಅದ್ವೈತಿಗಳು ಒಪ್ಪಿಲ್ಲ. ಮತ್ತು

ಭೂಮಪ್ರಕರಣದಲ್ಲಿಯೂ ಪ್ರಾಣನಿಗಿಂತ 'ಸತ್ಯಂ ವಿಜಿಜ್ಞಾಸಿತವ್ಯಮ್' ಎಂಬಲ್ಲಿರುವ 'ಸತ್ಯ' ಶಬ್ದದ ಅರ್ಥನಾದ ಬ್ರಹ್ಮನನ್ನು ಉತ್ತಮನೆಂದು ಹೇಳಿದಂತೆ 'ವಿಜ್ಞಾನಂ ತ್ವೇವ ವಿಜಿಜ್ಞಾಸಿತವ್ಯಂ, ಮತಿಸ್ತ್ವೇವ ವಿಜಿಜ್ಞಾಸಿತವ್ಯಾ, ಶ್ರದ್ಧಾ ತ್ವೇವ ವಿಜಿಜ್ಞಾಸಿತವ್ಯಾ' ಇತ್ಯಾದಿಯಾಗಿ ಹೇಳಿರುವುದರಿಂದ ವಿಜ್ಞಾನ, ಮತಿ, ಶ್ರದ್ಧಾ, ಕೃತಿ, ನಿಷ್ಠಾ ಇವುಗಳನ್ನೂ ಸಹ ಪ್ರಾಣನಿಗಿಂತ ಉತ್ತಮವೆಂದು ಹೇಳಲಾಗಿದೆ. ಈ ವಿಜ್ಞಾನಾದಿಗಳನ್ನು ಅದ್ವೈತಿಗಳು ಬ್ರಹ್ಮನೆಂದು ಒಪ್ಪಿರುವುದಿಲ್ಲ. ಆದ್ದರಿಂದ ಪ್ರಾಣನಿಗಿಂತ ಉತ್ತಮತ್ವವು ಇದ್ದರೂ ಸಹ ಬ್ರಹ್ಮತ್ವವಿಲ್ಲದ ಕಾರಣ ಹೇತವು ವ್ಯಭಿಚರಿತವಾಗಿದೆ.

**यच्चोक्तं "यत्र नान्यत्पश्यति" इत्यादिनोक्त व्यवहाराभावरूपनिर्विशेष-ब्रह्मधर्माद्भूमा ब्रह्मैवेति द्वितीयसूत्रार्थ इति ।**

'ಧರ್ಮೋಪಪತ್ತೇಶ್ಚ' ಎಂಬ ಎರಡನೆಯ ಸೂತ್ರವನ್ನು ಹೀಗೆ ವ್ಯಾಖ್ಯಾನಿಸುತ್ತಾರೆ - 'ಯತ್ರ ನಾನ್ಯತ್ಪಶ್ಯತಿ' ಇತ್ಯಾದಿ ಶ್ರುತಿಯಲ್ಲಿ ಚಾಕ್ಷುಷವ್ಯವಹಾರಾದಿಗಳನ್ನು ನಿಷೇಧಮಾಡಿದ್ದರಿಂದ ವ್ಯವಹಾರಾಭಾವವೆಂಬ ನಿರ್ವಿಶೇಷ ಬ್ರಹ್ಮನ ಧರ್ಮವು ಶ್ರುತವಾಗಿದೆ. ಆದ್ದರಿಂದ ನಿರ್ವಿಶೇಷ ಬ್ರಹ್ಮನೇ ಭೂಮನಾಗುತ್ತಾನೆಂದು ಎರಡನೆಯ ಸೂತ್ರಾರ್ಥ.

**तन्न । तत्र "एवं पश्यन्नेवं विजानन् सर्वेषु लोकेषु कामचारो भवति" इति दर्शनादिव्यवहारस्याप्युक्तेः ।**

ಇದೂ ತಪ್ಪು. ವ್ಯವಹಾರವನ್ನು ಶ್ರುತಿಯು ನಿಷೇಧಿಸಿದೆ ಎಂಬುದೇ ಸರಿಯಲ್ಲ. 'ಏವಂ ಪಶ್ಯನ್ನೇವಂ ವಿಜಾನನ್ ಸರ್ವೇಷು ಲೋಕೇಷು ಕಾಮಚಾರೋ ಭವತಿ' ಎಂಬ ವಾಕ್ಯದಲ್ಲಿ ದರ್ಶನಾದಿ ವ್ಯವಹಾರಗಳನ್ನೂ ಶ್ರುತಿಯು ವಿಧಿಸುತ್ತಿದೆ.

**'नान्यत्पश्यति' इत्यन्यदर्शनरूपविशेषनिषेधेन भूमद्रष्टृत्वस्याभ्यनुज्ञानाच्च । अन्यदर्शनादेरेव निषेधेनान्यस्यानुमतत्वाच्च ।**

'ನಾನ್ಯತ್ಪಶ್ಯತಿ' ಎಂಬಲ್ಲಿ ಭೂಮವಿಷಯಕವಾದ ದರ್ಶನವು ಬೇರೆಯವರಿಗಿಲ್ಲವೆಂದು ಹೇಳಲಾಗಿದೆ ಹೊರತು, ಭೂಮನಿಗೆ ದ್ರಷ್ಟೃತ್ವವನ್ನು ನಿಷೇಧಿಸಿಲ್ಲ. ಅವನಿಗೆ ದ್ರಷ್ಟೃತ್ವವು ಶ್ರುತಿಗೆ ಸಮ್ಮತವೇ ಆಗಿದೆ. ಅಥವಾ ಶ್ರುತಿಯು ಅನ್ಯದರ್ಶನವನ್ನು ನಿಷೇಧ ಮಾಡುತ್ತಿದೆ ಹೊರತು, ಅನ್ಯವನ್ನೇ ನಿಷೇಧಿಸುತ್ತಿಲ್ಲ. ಅನ್ಯಪದಾರ್ಥವನ್ನು ನಿಷೇಧ ಮಾಡಿದ್ದಲ್ಲಿ ಅದ್ವಿತೀಯತ್ವವು ನಿರ್ವಿಶೇಷನ ಬ್ರಹ್ಮನ ಧರ್ಮವಾಗುವ ಕಾರಣ ಅವನ ಲಕ್ಷಣವೆಂದು ಹೇಳಬಹುದಿತ್ತು. ಆದರೆ ಅನ್ಯಪದಾರ್ಥವನ್ನು ಶ್ರುತಿಯು ಅನುಮೋದಿಸುತ್ತಿದೆ.

ಪರಿಪೂರ್ಣಚಂದ್ರಿಕಾ

अत्रापि "धर्मोपपत्तेः" इत्युक्तेर्निर्धर्मकत्वमतप्रतिकूलता व्यक्तैव ।

ಪ್ರತಿಯೊಂದು ಅಧಿಕರಣಗಳಂತೆ ಇಲ್ಲಿಯೂ 'ಧರ್ಮೋಪಪತ್ತೇಃ' ಎಂದು ಹೇಳಿರುವುದರಿಂದ ಅದ್ವೈತಿಗಳ ನಿರ್ಧರ್ಮಕತ್ವ ಪ್ರತಿಪಾದನೆಗೆ ಸೂತ್ರವು ಪ್ರತಿಕೂಲವೇ ಆಗಿದೆ ಹೊರತು, ಅನುಕೂಲವಾಗಿಲ್ಲವೆಂಬ ವಿಚಾರವು ಅತ್ಯಂತ ಸ್ಪಷ್ಟ.

**प्रकाशः –**

अधिकरणशरीरं निरस्य सूत्रार्थमप्यनूद्य निराह – **यच्चेति** ।। अत्र सम्प्रसादशब्दोऽधिकरणव्युत्पत्त्या, बृहदारण्यके "स एष एतस्मिन्सम्प्रसादे स्वप्नान्ते बुद्धान्ते" इति स्वप्नजागरितस्थानाभ्यां सह पाठाच्च सुप्तिपरः । तस्यां च 'प्राणो जागर्ति' इति तेन प्राणो लक्ष्यते ।

ವಿವರಣೆ - ಅಧಿಕರಣ ಶರೀರವನ್ನು ನಿರಾಕರಿಸಿ ಅವರ ಸೂತ್ರಾರ್ಥವನ್ನು ಅನುವಾದ ಮಾಡಿ ನಿರಾಕರಿಸುತ್ತಿದ್ದಾರೆ 'ಯಚ್ಚ' ಇತ್ಯಾದಿ ಗ್ರಂಥದಿಂದ. ಇವರು 'ಸಂಪ್ರಸಾದ' ಶಬ್ದಕ್ಕೆ ಅಧಿಕರಣವ್ಯುತ್ಪತ್ತಿಯಿಂದ ಮತ್ತು ಬೃಹದಾರಣ್ಯಕದಲ್ಲಿ 'ಸ ಏಷ ಏತಸ್ಮಿನ್‌ಸಂಪ್ರಸಾದೇ ಸ್ವಪ್ನಾಂತೇ ಬುದ್ಧಾಂತೇ' ಎಂಬಲ್ಲಿ ಸ್ವಪ್ನಾಂತೇ = ಸ್ವಪ್ನ ಸ್ಥಾನದಲ್ಲಿ, ಬುದ್ಧಾಂತೇ = ಜಾಗರಿತ ಸ್ಥಾನದಲ್ಲಿ ಎಂದು ಸಹ ಪಾಠವಿರುವುದರಿಂದ ಸಂಪ್ರಸಾದ ಶಬ್ದವು ಸುಷುಪ್ತಿಪರವೆನ್ನುತ್ತಾರೆ. ಇಂತಹ ಸ್ಥಾನಗಳಲ್ಲಿ 'ಪ್ರಾಣೋ ಜಾಗರ್ತಿ' ಎಂದಿರುವುದರಿಂದ 'ಸಂಪ್ರಸಾದ' ಶಬ್ದದಿಂದ ಪ್ರಾಣನು ಲಕ್ಷಣಯಾ ತಿಳಿಯುತ್ತಾನೆ.

**प्रकाशः** – तथा चार्थमाह – **तथा चेति** ।। "प्रसिद्धप्राणादिपदपरित्यागेनाप्रसिद्धसम्प्रसादपदोपादाने कारणाभावात्" इति सुधोक्तमुपलक्षणमिति भावेनाह – **योगमुखेति** ।। तस्यातिविलम्बितत्वादिति भावः ।

ಒಟ್ಟು ಹೀಗೆ ಅರ್ಥವೆಂದು 'ತಥಾ ಚ' ಇತ್ಯಾದಿ ವಾಕ್ಯದಿಂದ ಹೇಳಿದ್ದಾರೆ. ಪ್ರಸಿದ್ಧವಾದ ಪ್ರಾಣಪದವನ್ನು ಬಿಟ್ಟು ಅಪ್ರಸಿದ್ಧವಾದ 'ಸಂಪ್ರಸಾದ' ಪದವನ್ನು ಸ್ವೀಕರಿಸಲು ಕಾರಣವಿಲ್ಲವೆಂದು 'ಪ್ರಸಿದ್ಧ ಪ್ರಾಣಾದಿಪದಪರಿತ್ಯಾಗೇನ ಅಪ್ರಸಿದ್ಧಸಂಪ್ರಸಾದಪದೋಪಾದನೇ ಕಾರಣಾಭಾವಾತ್' ಎಂಬ ಸುಧಾವಾಕ್ಯದಲ್ಲಿ ಹೇಳಲ್ಪಟ್ಟಿದೆ. ಈ ದೋಷವು ಕೇವಲ ಉಪಲಕ್ಷಣವೆಂದು ತಿಳಿದು ಮತ್ತೊಂದು ದೋಷವನ್ನು 'ಯೋಗಮುಖ' ಇತ್ಯಾದಿ ವಾಕ್ಯದಿಂದ ಗ್ರಂಥಕಾರರು ಹೇಳುತ್ತಿದ್ದಾರೆ. ಲಕ್ಷಣಾ ಮಾಡುವುದು ಅತ್ಯಂತ ವಿಲಂಬಿತವಾದ್ದರಿಂದ ಅಸಾಧುವಾಗಿದೆಯೆಂದು ಅಭಿಪ್ರಾಯ.

**प्रकाशः** – अगत्यैवमाश्रीयत इति तत्राह – **सम्प्रसादादित्यस्येति** ।। अस्तु वाऽयमेक एव हेतुः । तथापि स किं पूर्वपक्षनिरासकोऽथ भूम्नो ब्रह्मत्वसाधकः ।

ಅನಿವಾರ್ಯವಾಗಿ ಲಕ್ಷಣಾ ಮಾಡುತ್ತೇವೆಂದರೆ 'ಸಂಪ್ರಸಾದಾತ್' ಎಂಬುದರಿಂದ ಉತ್ತರಿಸುತ್ತಿದ್ದಾರೆ. ಅಥವಾ 'ಸಂಪ್ರಸಾದಾತ್ ಅಧ್ಯುಪದೇಶಾತ್' ಎಂಬುದನ್ನು ಒಂದೇ ಹೇತುವೆಂದು ಹೇಳಿರಿ. ಆದರೆ ಈ ಹೇತು ಪೂರ್ವಪಕ್ಷನಿರಾಸಕವೋ ? ಅಥವಾ ಭೂಮನಿಗೆ ಬ್ರಹ್ಮತ್ವ ಸಾಧಕವೋ? ಎಂಬೆರಡು ಪ್ರಶ್ನೆಗಳಿಗೆ ಉತ್ತರಿಸಬೇಕು.

**प्रकाशः** – आद्यं प्रत्याचष्टे – **किञ्च न तावदिति** ।। ''परमात्मैवेह भूमा न प्राण'' इति परभाष्योक्तेर्द्वेधाऽपि सम्भवाद्विकल्पः ।। **तद्विपरीतस्येति** ।। प्रथममनाकाङ्क्षितत्वान्न प्राण इत्यध्याहर्तव्यत्वाच्चेत्यर्थः ।

ಪ್ರಥಮ ಪಕ್ಷವನ್ನು 'ಕಿಂಚ ನತಾವತ್' ಇತ್ಯಾದಿ ಗ್ರಂಥದಿಂದ ನಿರಾಕರಿಸಿದ್ದಾರೆ. ಶಾಂಕರಭಾಷ್ಯದಲ್ಲಿ 'ಪರಮಾತ್ಮೈವೇಹ ಭೂಮಾ ನಾ ಪ್ರಾಣಃ' ಎಂಬ ವಾಕ್ಯವಿದೆ. ಇದು ಪರಪಕ್ಷ ನಿರಾಸಕವೋ, ಸ್ವಪಕ್ಷ ಸಾಧಕವೋ ಎಂದು ಸ್ಪಷ್ಟವಾಗಿ ತಿಳಿಯುವುದಿಲ್ಲ. ಅದಕ್ಕಾಗಿಯೇ ಎರಡು ಬಗೆಯಲ್ಲಿ ಗ್ರಂಥಕಾರರು ವಿಕಲ್ಪಿಸಿದ್ದಾರೆಂದು ತಿಳಿಯಬೇಕು. 'ತದ್ವಿಪರೀತಸ್ಯ' ಎಂಬುದರ ಅಭಿಪ್ರಾಯ ಹೀಗಿದೆ - ಮೊದಲು ಅನಾಕಾಂಕ್ಷಿತವಾದ್ದರಿಂದ 'ನ ಪ್ರಾಣಃ' ಎಂಬುದನ್ನು ಅಧ್ಯಾಹಾರ ಮಾಡಿಕೊಳ್ಳಬೇಕು ಎಂದು.

**प्रकाशः** – अध्यहारस्स्वपक्षहेतुत्त्वेऽपि तुल्यः । साध्यपदाश्रवणादित्यत आह – **स्वपक्षेति** ।। **अत एवेति** ।। ''तत्तु समन्वयात्'' इत्यतस्साध्यनिर्देशस्यानुवर्तनादेवेत्यर्थः ।

ಸ್ವಪಕ್ಷಸಾಧಕವೆಂದು ಹೇಳಿದಾಗಲೂ ಅಧ್ಯಾಹಾರವನ್ನು ಮಾಡಿಕೊಳ್ಳಲೇ ಬೇಕಲ್ಲವೇ? ಏಕೆಂದರೆ ಸೂತ್ರದಲ್ಲಿ ಸಾಧ್ಯಪದವು ಕೇಳಿಸುತ್ತಿಲ್ಲವಾದ್ದರಿಂದ ಎಂಬ ಪ್ರಶ್ನೆಗೆ 'ಸ್ವಪಕ್ಷ' ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾರೆ. 'ಅತ ಏವ' ಎಂದರೆ 'ತತ್ತು ಸಮನ್ವಯಾತ್' ಎಂಬ ಸೂತ್ರದಿಂದ ಸಾಧ್ಯನಿರ್ದೇಶವನ್ನು ಅನುಷಂಗ ಮಾಡಿಕೊಳ್ಳುವ ಕಾರಣದಿಂದಲೇ ಎಂದರ್ಥ.

**प्रकाशः** – ननु 'तत्तु' इति 'तु' शब्दस्यावधारणार्थत्वाद्भूमा तदेव ब्रह्मैवेत्युक्तावर्थात् 'न प्राणः' इत्यस्य लाभात्तत्र हेत्वन्वय इति चेन्न । साक्षादुपात्त साध्यान्वयत्यागेनार्थिकान्वयायोगात् । अत एव तादृशस्थले साध्यस्याप्युक्तिरित्युक्तमिति ज्ञेयम् ।

'ತತ್ತು' ಎಂಬ ಸೂತ್ರದಿಂದ 'ತು' ಶಬ್ದವು ಅವಧಾರಣಾರ್ಥದಲ್ಲಿ ಅನ್ವಯವನ್ನು ಹೊಂದಿದೆ. ಆದ್ದರಿಂದ ಭೂಮನು ಬ್ರಹ್ಮನೇ ಆಗುತ್ತಾನೆಂದು ಹೇಳಿದಂತಾಗುತ್ತದೆ. ಅರ್ಥಾತ್ 'ಪ್ರಾಣನು ಭೂಮನಲ್ಲ' ಎಂದು ಸಿದ್ಧವಾಗುತ್ತದೆ. ಅರ್ಥಾತ್ 'ಸಿದ್ಧವಾದ ಪ್ರಾಣನೂ ಭೂಮನಲ್ಲ' ಎಂಬ ಸಾಧ್ಯದಲ್ಲಿ ಹೇತುವು ಅನ್ವಯವನ್ನು ಹೊಂದುತ್ತದೆಂದು ಹೇಳಬಹುದಲ್ಲವೇ?

ಹೀಗೆ ಪ್ರಶ್ನಿಸಬಾರದು. ಸಾಕ್ಷಾತ್ ಹೇಳಲ್ಪಟ್ಟ ಸಾಧ್ಯದ ಜೊತೆಗೆ ಅನ್ವಯವನ್ನು ಬಿಟ್ಟು ಆರ್ಥಿಕವಾಗಿ ಸಿದ್ಧವಾಗುವ ಪರಪಕ್ಷನಿರಾಸದಲ್ಲಿ ಹೇತುವಿಗೆ ಅನ್ವಯವನ್ನು ಮಾಡುವುದು ತಪ್ಪಾಗುತ್ತದೆ. ಆದ್ದರಿಂದಲೇ ಸೂತ್ರಕಾರರು ಯಾವ ಸ್ಥಳದಲ್ಲಿ ಪರಪಕ್ಷನಿರಾಸವನ್ನು ಮಾಡುತ್ತಾರೋ, ಅಂತಹ ಸ್ಥಳದಲ್ಲಿ ಸಾಧ್ಯನಿರ್ದೇಶವನ್ನೂ ಮಾಡಿರುತ್ತಾರೆಂದು ತಿಳಿಯಬೇಕು.

**प्रकाशः** – द्वितीयं निराचष्टे – **नापीति** ।। ''तस्माद्वा एतस्मात्प्राणमयात् । अन्योऽन्तर आत्मा मनोमयः'' इति तस्माच्च विज्ञानमयानन्दमययोरुक्तेरित्यर्थः ।

ಎರಡನೆಯ ಪಕ್ಷವನ್ನು 'ನಾಪಿ' ಇತ್ಯಾದಿ ವಾಕ್ಯದಿಂದ ನಿರಾಕರಿಸಿದ್ದಾರೆ. 'ತಸ್ಮಾದ್ವಾ ಏತಸ್ಮಾತ್ ಪ್ರಾಣಮಯಾತ್ । ಅನ್ಯೋಽಂತರ ಆತ್ಮಾ ಮನೋಮಯಃ' ಎಂಬುದಾಗಿ ಪ್ರಾಣನಿಗಿಂತ ಉತ್ತಮತ್ವದ ಉಪದೇಶವು ವಿಜ್ಞಾನಮಯ, ಆನಂದಮಯರುಗಳಲ್ಲಿಯೂ ಕೇಳಿಸುತ್ತಿದೆ. ಆದರೆ ಇವುಗಳಲ್ಲಿ ಬ್ರಹ್ಮತ್ವವು ಇರುವುದಿಲ್ಲವೆಂದು ಅದ್ವೈತಿಗಳು ಹೇಳಿದ್ದಾರೆ.

**प्रकाशः** – ननु तत्र प्राणमयादूर्ध्वम् । नतु प्राणादिति चेन्न । अस्य विशेषस्याप्रयोजकत्वात् । त्वन्मते तत्र मयटो विकारार्थत्वेन प्राणविकारस्यापि प्राणत्वात् । अन्यथा तं प्रत्युदाहृतः ''प्राणं देवा अनुप्राणन्ति'' इति श्लोकोऽनन्वितस्स्यात् । भृगुवल्ल्यां प्राणादेव च मनःप्रभृतीनामूर्ध्वमुपदेशाच्चेति भावः । अविवादस्थलं चाह – **भूमप्रकरणे चेति** ।।

ಪ್ರಶ್ನೆ - ಅನ್ನಮಯಾದಿ ಪ್ರಕರಣಗಳಲ್ಲಿ ಪ್ರಾಣಮಯನಿಗಿಂತ ಉತ್ತಮತ್ವವು ಹೇಳಲ್ಪಟ್ಟಿದೆ ಹೊರತು, ಪ್ರಾಣನಿಗಿಂತ ಉತ್ತಮತ್ವವನ್ನು ಹೇಳಿಲ್ಲವಲ್ಲ.

ಉತ್ತರ - ಈ ವೈಲಕ್ಷಣ್ಯವನ್ನು ಅದ್ವೈತಿಗಳಿಗೆ ಹೇಳಲಾಗದು. ಏಕೆಂದರೆ ಅದ್ವೈತಮತದಲ್ಲಿ 'ಮಯಟ್' ಪ್ರತ್ಯಯಕ್ಕೆ ವಿಕಾರ ಎಂಬರ್ಥವನ್ನು ಅಂಗೀಕರಿಸಲಾಗಿದೆ. ಪ್ರಾಣವಿಕಾರವೂ ಸಹ ಪ್ರಾಣನೇ ಆಗಿರುವುದರಿಂದ ಪ್ರಾಣಮಯ ಶಬ್ದಕ್ಕೆ ವಿಕಾರಭೂತವಾದ ಜಡವಾಯು ಎಂಬರ್ಥವು ತಪ್ಪಾಗುವುದಿಲ್ಲ. ಹೀಗೊಪ್ಪದಿದ್ದರೆ ಆ ಸಂದರ್ಭದಲ್ಲಿ ಉದಾಹರಿಸಲ್ಪಟ್ಟ 'ಪ್ರಾಣಂ ದೇವಾ ಅನುಪ್ರಾಣಂತಿ' ಎಂಬ ಶ್ಲೋಕಕ್ಕೆ ಅನ್ವಯವೇ ಇಲ್ಲದಂತಾಗುತ್ತದೆ. ಇನ್ನು ಭೃಗುವಲ್ಲಿಯಲ್ಲಂತೂ ಸ್ಪಷ್ಟವಾಗಿ ಪ್ರಾಣನಿಂದಲೇ ಮನಸ್ಸು ಮೊದಲಾದವುಗಳನ್ನು ಉತ್ತಮವೆಂದು ಉಪದೇಶಿಸಲಾಗಿದೆ. ಆದ್ದರಿಂದ ಬ್ರಹ್ಮನಲ್ಲದಿದ್ದರೂ ಪ್ರಾಣನಿಗಿಂತ ಉತ್ತಮತ್ವವು ಹೇಳಿರುವುದರಿಂದ ವ್ಯಭಿಚಾರ ದೋಷವೂ ಬಂದೇ ಬರುತ್ತದೆ. ಅಥವಾ ಏನು ವಿವಾದವಿಲ್ಲದೇ ಸ್ಪಷ್ಟವಾಗಿಯೇ ಪ್ರಾಣನಿಗಿಂತ ಉತ್ತಮತ್ವವನ್ನು ಬೇರೆಡೆ ಹೇಳಿದ್ದ ಸ್ಥಳವನ್ನು ತೋರಿಸುತ್ತಿದ್ದಾರೆ 'ಭೂಮಪ್ರಕರಣೇ ಚ' ಇತ್ಯಾದಿ ವಾಕ್ಯದಿಂದ

**प्रकाशः** – अस्तु को दोष इत्यत आह – **त्वन्मत इति** ।। तथा च हेतोर्व्यभिचार इति भावः ।

ಭೂಮಾಧಿಕರಣ (೧-೩-೨)

ವಿಜ್ಞಾನಾದಿಗಳೆಲ್ಲವೂ ಬ್ರಹ್ಮನಾಗುವುದು ಬೇಡ ? ಏನು ದೋಷ ? ಎಂಬ ಪ್ರಶ್ನೆಗೆ 'ತ್ವನ್ಮತೇ' ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾರೆ. ಆದ್ದರಿಂದ ಪ್ರಾಣನಿಗಿಂತ ಉತ್ತಮತ್ವವು ಹೇಳಲ್ಪಟ್ಟದೆಯೆಂಬ ಅರ್ಥವನ್ನು ಹೇಳಿದಾಗ ಹೇತು ವ್ಯಭಿಚರಿತವಾಗುತ್ತದೆಯೆಂದು ತಿಳಿಯಬೇಕು.

**प्रकाशः** – 'धर्मोपपत्तेश्च' इत्यस्य परभाष्योक्तमर्थमनूद्य निराह – **यच्चेति** ।। **विशेषेति** ।। विशेषनिषेधस्य शेषाभ्यनुज्ञानगमकत्वादिति भावः । **अन्यदर्शनादेरिति** ।। तथा च भूमा सद्वितीय एव । नतु निर्विशेषोऽद्वैत इति भावः ।।

'ಧರ್ಮೋಪಪತ್ತೇಶ್ಚ' ಎಂಬ ಎರಡನೆಯ ಸೂತ್ರಕ್ಕೆ ಶಾಂಕರಭಾಷ್ಯದಲ್ಲಿ ಮಾಡಲ್ಪಟ್ಟ ವ್ಯಾಖ್ಯಾನವನ್ನು ಅನುವಾದ ಮಾಡಿ ನಿರಾಕರಿಸುತ್ತಿದ್ದಾರೆ 'ಯಚ್ಚ' ಇತ್ಯಾದಿ ವಾಕ್ಯದಿಂದ. ವಿಶೇಷ ನಿಷೇಧವು ಸಾಮಾನ್ಯದ ವಿಧಿಗೆ ಗಮಕವಾಗಿರುತ್ತದೆ. 'ಯತ್ರ ನಾನ್ಯತ್ಪಶ್ಯತಿ' ಇತ್ಯಾದಿ ಸ್ಥಳಗಳಲ್ಲಿ ವಿಶೇಷವಾದ ದರ್ಶನಾದಿಗಳನ್ನು ನಿಷೇಧಿಸಿದ್ದರಿಂದ ಸಾಮಾನ್ಯದರ್ಶನವು ಇರಬಹುದೆಂದು ತಿಳಿಯುತ್ತದೆ. ಗ್ರಂಥದಲ್ಲಿ 'ಅನ್ಯದರ್ಶನಾದೇಃ' ಎಂದಿದೆ. ಇದರ ಅಭಿಪ್ರಾಯ ಹೀಗೆ - ಅನ್ಯದರ್ಶನಾದಿಗಳನ್ನು ನಿಷೇಧ ಮಾಡಿದ್ದರಿಂದ ಅನ್ಯನು ಸಿದ್ಧನಾದನು. ಆದ್ದರಿಂದಲೇ ಭೂಮನು ಸದ್ವಿತೀಯನಾದನು ಹೊರತು, ನಿರ್ವಿಶೇಷನು ಅದ್ವಿತೀಯನಾಗಲಿಲ್ಲ ಎಂದು ಅಭಿಪ್ರಾಯ.

**गुरुराजीयम्** – ननु तात्त्विकस्य गुणज्यैष्ठ्यरूपभूमत्वस्य निर्गुणेऽसम्भवेऽपि कल्पितस्य गुणज्यैष्ठ्यस्य तत्र सत्त्वेन सिद्धान्तो युक्त एवेत्यत आह – **कल्पितेति** ।। जाग्रदिति शक्यसम्बन्धोक्तिः । **अस्मद्रीत्येति** । सम्यक् प्रसीदत्यनेनेति सम्प्रसादः पूर्णसुखमित्यस्मद्रीत्येत्यर्थः ।। **अत एवेति** ।। स्वपक्षसाधन-हेतुत्वस्याध्याहारनिरपेक्षत्वादेवेत्यर्थः । ननु प्राणादुत्तरं श्रुतस्य मनोमयादेरानन्दमयाधिकरणे ब्रह्मत्वसमर्थनेन ब्रह्मत्वात् । भूमप्रकरणे च प्राणोपदेशादूर्ध्वं श्रुतस्य विज्ञानादेरपि ''सैव हि सत्यादयः'' इत्यधिकरणोक्तन्यायेन ब्रह्मत्वेन साध्यस्यापि तत्र सत्त्वान्न व्यभिचार इत्यतो भवत्येवास्मत्सिद्धान्तो न त्वसिद्धान्त इत्याह – **त्वन्मत इति** ।। अनेनान्यतरानैकान्तिकमित्युक्तं भवति ।




ಅದ್ವೈತಿಗಳ ಪ್ರಥಮ ಸೂತ್ರಾರ್ಥ ಹೀಗಿದೆ - 'ಸಂಪ್ರಸಾದಾತ್' 'ಅಧಿ ಉಪದೇಶಾತ್ ಭೂಮಾ ಪರಮಾತ್ಮೈವ' 'ಸಂಪ್ರಸಾದಾತ್' ಎಂದರೆ 'ನಿದ್ರಾವಸ್ಥೆ' ಎಂದರ್ಥ. ನಿದ್ರಾವಸ್ಥೆಯಲ್ಲಿ ಕ್ರಿಯಾಶೀಲವಾದ ಪ್ರಾಣವಾಯುವನ್ನು

ಲಕ್ಷಣಯಾ ಸ್ವೀಕರಿಸಬೇಕು. ಅಂತಹ ಪ್ರಾಣವಾಯುವಿಗಿಂತ ಅಧಿಕವಾಗಿ 'ಭೂಮ್ನಃ' ಭೂಮನನ್ನು 'ಉಪದೇಶಾತ್' 'ಉಪದೇಶ ಮಾಡಿರುವುದರಿಂದ ಬ್ರಹ್ಮನೇ ಭೂಮನಾಗುತ್ತಾನೆ' ಎಂದು ವ್ಯಾಖ್ಯಾನಿಸುತ್ತಾರೆ.

ಇದು ತಪ್ಪು. 'ಸಂಪ್ರಸಾದ' ಶಬ್ದಕ್ಕೆ 'ಸುಖ' ಎಂಬ ಯೌಗಿಕಾರ್ಥವನ್ನು ವಿವಕ್ಷಿಸಲು ಬರುವಾಗ ಲಕ್ಷಣಯಾ 'ಪ್ರಾಣವಾಯು' ಎಂಬ ವ್ಯಾಖ್ಯಾನವು ಅಯುಕ್ತ. ಮತ್ತು ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ ಯಾವ ಸೂತ್ರಗಳು ತತ್ವಜ್ಞಾನಕ್ಕೋಸ್ಕರ ಹೊರಟಿವೆಯೋ, ಅಂತಹ ಸೂತ್ರಗಳಲ್ಲಿ ಸಾಧ್ಯದ ಅಧ್ಯಾಹಾರವು ಇರುವುದಿಲ್ಲ. 'ಆನಂದಮಯೋಽಭ್ಯಾಸ್ಯಾತ್' ಎಂಬ ಸೂತ್ರವು ಬ್ರಹ್ಮನನ್ನು ಆನಂದಮಯನೆನ್ನುತ್ತಿದೆ. ಈ ಸೂತ್ರವು ಸ್ವಪಕ್ಷಸಾಧಕವಾಗಿರುವುದರಿಂದ ಪಕ್ಷ ಹಾಗೂ ಹೇತುಗಳನ್ನಷ್ಟೇ ಹೇಳಲಾಗಿದೆ. ಸಾಧ್ಯವನ್ನು ಹೇಳಿರುವುದಿಲ್ಲ. ಆದರೆ 'ನೇತರೋಽನುಪಪತ್ತೇಃ' ಇತ್ಯಾದಿಯಾದ ಪರಪಕ್ಷ ನಿರಾಸಕವಾದ ಸೂತ್ರಗಳಲ್ಲಿ 'ನೇತರಃ' ಎಂಬುದಾಗಿ ಸಾಧ್ಯವನ್ನೂ ಹೇಳಿರುತ್ತಾರೆ. ಪ್ರಕೃತ ಅದ್ವೈತಿಗಳು 'ಭೂಮಾ ಸಂಪ್ರಸಾದಾತ್' ಇತ್ಯಾದಿ ಸೂತ್ರವು ಪ್ರಾಣನು ಭೂಮನಲ್ಲವೆಂದು ಪರಪಕ್ಷ ನಿರಾಸಕ್ಕೋಸ್ಕರ ಹೊರಟಿದೆ ಎಂದು ಹೇಳುವುದಾದರೆ ಇಲ್ಲಿಯೂ ಸಹ 'ನ ಪ್ರಾಣಃ' ಎಂಬ ಸಾಧ್ಯದ ನಿರ್ದೇಶವಿರಬೇಕಿತ್ತು. ಆದ್ದರಿಂದ ಇದನ್ನು ಸ್ವಪಕ್ಷಸಾಧಕಸೂತ್ರವೆಂದೇ ಪರಿಗಣಿಸಬೇಕಾಗುತ್ತದೆ. ಮತ್ತು ಪ್ರಾಣನಿಗಿಂತ ಭೂಮನು ಉತ್ತಮನೆಂದು ಹೇಳಿರುವ ಕಾರಣ ಬ್ರಹ್ಮನೇ ಭೂಮನಾಗುತ್ತಾನೆಂಬ ಸಾಧನೆಯನ್ನು ಅದ್ವೈತಿಗಳಿಂದ ಮಾಡಲಾಗದು. ಪ್ರಾಣನ ಉಪದೇಶದ ಅನಂತರ ಸತ್ಯನಾಮಕನಾದ ಬ್ರಹ್ಮನ ಉಪದೇಶವು ಹೇಗೆ ಇದೆಯೋ, ಅದರಂತೆ ವಿಜ್ಞಾನ, ಮತಿ, ಶ್ರದ್ಧಾ ಇವುಗಳ ಉಪದೇಶವೂ ಸಹ ಅಲ್ಲಿಯೇ ಇರುತ್ತದೆ. ಸತ್ಯನು ಬ್ರಹ್ಮನೆಂದು ಅದ್ವೈತಿಗಳು ಹೇಳುವುದಾದರೆ ವಿಜ್ಞಾನ, ಮತಿ, ಶ್ರದ್ಧಾ ಇವುಗಳೂ ಸಹ ಬ್ರಹ್ಮನೇ ಆಗಬೇಕಾಗುತ್ತದೆ. ಆದ್ದರಿಂದ ಪ್ರಾಣನಿಗಿಂತ ಉತ್ತಮವೆಂಬ ಉಪದೇಶವು ಬ್ರಹ್ಮತ್ವದ ನಿರ್ಧಾರಕ್ಕೆ ಕಾರಣವಾಗುವುದಿಲ್ಲ.

'ಧರ್ಮೋಪಪತ್ತೇಶ್ಚ' ಎಂಬ ಎರಡನೆಯ ಸೂತ್ರಕ್ಕೆ 'ಯತ್ರ ನಾನ್ಯತ್ಪಶ್ಯತಿ' ಯಾವುದೇ ವ್ಯವಹಾರವಿಲ್ಲವೆಂಬ ಧರ್ಮವನ್ನು ಶ್ರುತಿಯು ಹೇಳುತ್ತಿರುವುದರಿಂದ ನಿರ್ವಿಶೇಷ ಬ್ರಹ್ಮನ ಧರ್ಮವನ್ನು ಹೇಳಿದಂತಾಗುತ್ತದೆ. ಈ ಕಾರಣದಿಂದಲೂ ನಿರ್ವಿಶೇಷ ಬ್ರಹ್ಮನೇ ಭೂಮನೆಂದು ವ್ಯಾಖ್ಯಾನಿಸುತ್ತಾರೆ.

ಇದೂ ಸಹ ಸರಿಯಲ್ಲ. ಭೂಮನನ್ನು ಬೇರೆಯವರು ತಿಳಿಯುವುದಿಲ್ಲವೆಂದು ಶ್ರುತಿ ಹೇಳುತ್ತಿದೆ ಹೊರತು, ಭೂಮನಿಗೆ ದ್ರಷ್ಟೃತ್ವವನ್ನು ನಿಷೇಧ ಮಾಡುತ್ತಿಲ್ಲ. ಒಂದು ವೇಳೆ ನಿಷೇಧವನ್ನೇ ಮಾಡಿದ್ದಲ್ಲಿ ನಿರ್ವಿಶೇಷನ ಬ್ರಹ್ಮನಧರ್ಮವೆಂದು ಪರಿಗಣಿಸಬಹುದಿತ್ತು. ಅಷ್ಟೇ ಅಲ್ಲದೆ 'ಏವಂ ಪಶ್ಯನ್ ಏವಂ ವಿಜಾನನ್' ಇತ್ಯಾದಿಯಾಗಿ ದರ್ಶನ ಮೊದಲಾದ ವ್ಯವಹಾರವನ್ನೂ ಸಹ ಹೇಳಿರುವುದರಿಂದ ದರ್ಶನಾದಿಗಳ ವ್ಯವಹಾರಾಭಾವವು ಶ್ರುತವಾಗಿದೆಯೆಂಬ ಪರಿಕಲ್ಪನೆಯೇ ತಪ್ಪಾಗುತ್ತದೆ.

ಪ್ರತಿಯೊಂದು ಅಧಿಕರಣಗಳಂತೆ ಈ ಅಧಿಕರಣದಲ್ಲಿಯೂ 'ಧರ್ಮೋಪಪತ್ತೇಃ' ಎಂಬ ಸೂತ್ರದಲ್ಲಿ ನಿರ್ಧರ್ಮತ್ವಕ್ಕೆ ವಿರುದ್ಧವಾದ ಧರ್ಮವನ್ನು ಸೂತ್ರವು ಹೇಳುತ್ತಿರುವುದರಿಂದ ಅದ್ವೈತಿಗಳಿಗೆ ಈ ಅಧಿಕರಣವು ಕಂಟಕವೇ ಆಗಿದೆಯೆಂದು ತಿಳಿಯಬೇಕು.



## तात्पर्यचन्द्रिका

**केचित्तु । भूमा प्राण इत्येव पूर्वः पक्षः । प्राणशब्दस्तु प्राणसहचारिणि जीवे लाक्षणिकः । "प्राणोह पिता" इत्यादिना प्राणे पितृत्वादिव्यपदेशात् ।**

ಅನುವಾದ - ರಾಮಾನುಜರು ಭೂಮಾಧಿಕರಣದ ಪೂರ್ವಪಕ್ಷವನ್ನು ಹೀಗೆ ಮಾಡಿರುತ್ತಾರೆ - ಭೂಮನು ಪ್ರಾಣನೇ ಆಗಿದ್ದಾನೆ. ಆದರೆ ಪ್ರಾಣ ಶಬ್ದವು ಪ್ರಾಣಶಬ್ದದಿಂದ ಸಹಚಾರಿತನಾದ ಜೀವನಲ್ಲಿ ಲಾಕ್ಷಣಿಕ ವಾಗಿದೆ. ಏಕೆಂದರೆ 'ಪ್ರಾಣೋಹ ಪಿತಾ' ಇತ್ಯಾದಿ ವಾಕ್ಯದಲ್ಲಿ ಪ್ರಾಣನನ್ನು ತಂದೆಯೆಂದು ಕರೆಯಲಾಗಿದೆ. ಆದ್ದರಿಂದ ಜಡವಾದ ಪ್ರಾಣವು ಪ್ರಾಣಶಬ್ದದಿಂದ ವಾಚ್ಯವಾಗುವುದಿಲ್ಲ.

**"पितृहा वै त्वमसि" इत्यादिना सप्राणस्य शरीरस्य हिंस्यत्वव्यपदेशाच्च । नहि केवलजडस्य पितृत्वादिकं हिंस्यत्वं च युक्तमित्याहुः ।** [१]

(१) **रामानुजभाष्यम्**

**भूमा सम्प्रसादादध्युपदेशात् ॥** इदमामनन्ति छन्दोगाः 'यत्र नान्यत् पश्यति नान्यच्छृणोति नान्यद् विजानाति स भूमा । अथ यत्रान्यत् पश्यत्यन्यच्छृणोत्यन्यद् विजानाति तदल्पम् ॥' इति । अत्रायं भूमशब्दो भावप्रत्ययान्तो व्युत्पाद्यते । तथाहि पृथ्वादिषु बहुशब्दः पठ्यते, ततः 'पृथ्वादिभ्य इमनिज्वा' इति इमनिच्प्रत्यये कृते 'बहोर्लोपो भू च बहोः' इति प्रकृतिप्रत्यययोर्विकारे भूमेति भवति । भूमा बहुत्वमित्यर्थः । अत्र चायं बहुशब्दो वैपुल्यवाची, न सङ्ख्यावाची । 'यत्रान्यत् पश्यति.....तदल्पम्' इत्यल्पप्रतियोगित्व-श्रवणात् । अल्पशब्दनिर्दिष्टधर्मिप्रतियोगिप्रतिपादनपरत्वादेव धर्मिपरश्च निश्चीयते, न धर्ममात्रपरः । तदेवं भूमेति विपुल इत्यर्थः । वैपुल्यविशेष्यश्चेहा-त्मेत्यवगतः 'तरति शोकमात्मविद्' इति प्रक्रम्य भूमविज्ञानमुपदिश्य 'आत्मैवेदं सर्वम्' इति तस्यैवोपसंहारात् । अत्र संशय्यते – किमयं भूमगुणविशिष्टः प्रत्यगात्मा? उत परमात्मा? इति । किं युक्तम्? प्रत्यगात्मेति । कुतः? 'श्रुतं ह्येव मे भगवद्दृशेभ्यस्तरति शोकमात्मवित्' इत्यात्मजिज्ञासयोपसेदुषे नारदाय नामादिप्राणपर्यन्तेषूपास्यतयोदिष्टेषु 'अस्ति भगवो नाम्नो भूयः' 'अस्ति भगवो वाचो भूयः' इत्यादयः प्रश्नाः । 'वाग्वाव नाम्नो भूयसी' 'मनो वाव वाचो भूयः' इत्यादीनि च प्रतिवचनानि, प्राणात् प्राचीनेषु दृश्यन्ते । प्राणे तु न पश्यामः । अतः प्राणपर्यन्त एवायमात्मोपदेश इति प्रतीयते । तेनेह प्राणशब्दनिर्दिष्टः प्राणसहचारी प्रत्यगात्मैव, न वायुविशेषमात्रम् । 'प्राणो ह पिता प्राणो ह माता' इत्यादयश्च प्राणस्य चेतनतामवगमयन्ति । 'पितृहा....मातृहा' इत्यादिना

सप्राणेषु पितृप्रभृतिषूपमर्दकारिणि हिंसकत्वनिमित्तोपक्रोशवचनात्तेष्वेव विगतप्राणेष्वत्यन्तोपमर्दकारिण्यप्युपक्रोशाभाववचनाच्च हिंसायोग्यश्चेतन एव प्राणशब्दनिर्दिष्टः । अप्राणेषु स्थावरेष्वपि चेतनेषूपमर्दभावाभावयोर्हिंसातदभावदर्शनादयं हिंसायोग्यतया निर्दिष्टः प्राणः प्रत्यगात्मैवेति निश्चीयते । अत एव च अरनाभिदृष्टान्ताद्युपन्यासेन प्राणशब्दनिर्दिष्टः पर इति न भ्रमितव्यम् । परस्य हिंसाप्रसङ्गाभावात्, जीवादितरस्य तद्भोग्यभोगोपकरणभूतस्य कृत्स्नस्याचिद्वस्तुनो जीवायत्तस्थितित्वेन प्रत्यगात्मन्येवारनाभिदृष्टान्तोपपत्तेश्च । अयमेव च प्राणशब्दनिर्दिष्टो भूमा, 'अस्ति भगवः प्राणाद्भूयः' इति प्रश्नस्य 'अदो वाव प्राणाद्भूयः' इति प्रतिवचनस्य चाभावाद् भूमसंशब्दनात् प्राक्प्राणप्रकरणस्याविच्छेदात् ॥ किञ्च प्राणवेदिनोऽतिवादित्वमुक्त्वा तमेव 'एष तु वा अतिवदति' इति प्रत्यभिज्ञाप्य 'यः सत्येनातिवदति' इति तस्य सत्यवदनं प्राणोपासनाङ्गतयोपदिश्य उपादेयस्य सत्यवदनस्य शेषितया पूर्वनिर्दिष्टप्राणयाथात्म्यविज्ञानं 'यदा वै विजानात्यथ सत्यं वदति' इत्युपदिश्य तत्सिद्ध्यर्थं च मननश्रद्धानिष्ठाप्रयत्नानुपदिश्य तदारम्भाय च प्राप्यभूतप्राणशब्दनिर्दिष्ट-प्रत्यगात्मस्वरूपस्य सुखरूपताज्ञानमुपदिश्य तस्य च सुखस्य विपुलता 'भूमा त्वेव विजिज्ञासितव्यः' इत्युपदिश्यते । तदेवं प्रत्यगात्मन एवाविद्यावियुक्तं रूपं विपुलसुखमित्युपदिष्टमिति 'तरति शोकमात्मवित्' इत्युपक्रमाविलरोधश्च । अतो भूमगुणविशिष्टः प्रत्यगात्मा, यत एवं भूमगुणविशिष्टः प्रत्यगात्मा, अत एवाहमर्थे प्रत्यगात्मनि 'अहमेवाधस्तादहमुपरिष्टात्' इत्यारभ्य 'अहमेवेदं सर्वम्' इति प्रत्यगात्मनो वैभवमुपदिशति । एवं प्रत्यगात्मत्वे निश्चिते सति तदनुगुणतया वाक्यशेषो नेतव्य इति । सिद्धान्तः– एवं प्राप्तेऽभिधीयते – **भूमा सम्प्रसादादध्युपदेशात्** ॥ भूमगुणविशिष्टो न प्रत्यगात्मा, अपितु परमात्मा । कुतः? सम्प्रसादादध्युपदेशात् । सम्प्रसादः प्रत्यगात्मा । 'एषः सम्प्रसादोऽस्माच्छरीरात् समुत्थाय परं ज्योतिरुपसम्पद्य स्वेन रूपेणाभिनिष्पद्यते' इत्युपनिषत्प्रसिद्धेः । सम्प्रसादात् प्रत्यगात्मनोऽधिकतया भूमविशिष्टस्य सत्यशब्दाभिधेयस्य उपदेशादित्यर्थः । सत्यशब्दाभिधेयं च परं ब्रह्म । एतदुक्तं भवति, यथा नामादिषु प्राणपर्यन्तेषु पूर्वपूर्वाधिकतयोत्तरोत्तराभिधानात् पूर्वेभ्य उत्तरेषामर्थान्तरत्वम्, एवं प्राणशब्दनिर्दिष्टात् प्रत्यगात्मनोऽधिकतया निर्दिष्टः सत्यशब्दाभिधेयः तस्मादर्थान्तरभूत एव । सत्यशब्दनिर्दिष्ट एव भूमेति सत्याख्यं परं ब्रह्मैव भूमेत्युपदिश्यते, इति । तदाह वृत्तिकारः– 'भूमा त्वेवेति भूमा ब्रह्म, नामादिपरम्परया आत्मन ऊर्ध्वमस्योपदेशात्' इति । प्राणशब्दनिर्दिष्टादधिकतया सत्यस्योपदेशः कथमवगम्यत इति चेत् 'स वा एष एवं पश्यन्नेवं मन्वान एवं

विजानन्नतिवादी भवति' इति प्राणविदोऽतिवादित्वमुक्त्वा 'एष तु वा अतिवदति यः सत्येनातिवदति' इति सत्यवेदित्वेनातिवादिनं तुशब्देन पूर्वस्मादतिवादिनो व्यावर्तयति । अत एव 'एष तु वा अतिवदति' इत्यत्र प्राणातिवादिनो न प्रत्यभिज्ञा । अतोऽस्यातिवादित्वनिमित्तं सत्यं पूर्वातिवादित्वनिमित्तात् प्राणादधिकमिति विज्ञायते । ननु च प्राणवेदिन एव सत्यवदनमङ्गत्वेनोपदिष्टम्, अतः प्राणप्रकरणाविच्छेद इत्युक्तम् । नैतद् युक्तम्, तुशब्देन ह्यतिवाद्येवान्यः प्रतीयते, नतु तस्यैवातिवादिनस्सत्यवदनाङ्ग-विशिष्टतामात्रम् । 'एष तु वा अग्निहोत्री यस्सत्यं वदति' इत्यादिष्वग्निहोत्र्यन्तराप्रतीतेः, प्रतीतस्यैवाग्निहोत्रिणस्सत्यवदनाङ्गविधानमिति क्लिष्टा गतिराश्रीयते । अत्र त्वतिवाद्यन्तरत्व-निमित्तं सत्यशब्दाभिधेयं परं ब्रह्म प्रतीयते । सत्यशब्दश्च 'सत्यं ज्ञानमनन्तं ब्रह्म' इत्यादिषु परस्मिन् ब्रह्मणि प्रयुक्तः । अतस्तन्निष्ठस्यातिवादिनः पूर्वस्मादधिकत्वं हि वस्त्व न्तरात्पुरुषार्थतयाऽतिक्रान्तस्वोपास्यवस्तुवादित्वम् । नामाद्याशापर्यन्तोपास्यवस्त्वतिक्रान्त-स्वोपास्यप्राणशब्दनिर्दिष्टप्रत्यगात्मवादित्वात् प्राणविदोऽतिवादित्वम् । तस्यापि सातिशय-पुरुषार्थत्वान्निरतिशयपुरुषार्थतयोपास्यपरब्रह्मवादिन एव साक्षादतिवादित्वमिति 'एष तु वा अतिवदति यः सत्येनातिवदति' इत्युक्तम् । सत्येनेतीत्थम्भूतलक्षणे तृतीया । सत्येन परेण ब्रह्मणोपास्येनोपलक्षितो योऽतिवदतीत्यर्थः । अत एवैनं शिष्यः प्रार्थयते 'सोऽहं भगवत्सत्येनातिवदति' इति । आचार्यश्च 'सत्यं त्वेव विजिज्ञासितव्यम्' इत्याह । 'आत्मनः प्राणः' इति च प्राणशब्दनिर्दिष्टस्याऽत्मन उत्पत्तिरुच्यते । अतः 'तरति शोकमात्मवित्' इति प्रक्रान्त आत्मा प्राणशब्दनिर्दिष्टादन्य इति गम्यते ।

यदुक्तम् 'अस्ति भगवः प्राणाद्भूयः' इति प्रश्नस्य 'अदो वाव प्राणाद् भूयः' इति प्रतिवचनस्य चादर्शनात् प्रक्रान्त आत्मोपदेशः प्राणोपदेशपर्यवसानो गम्यत इति, तदयुक्तम् । नहि प्रश्नप्रतिवचनाभ्यामेवार्थान्तरत्वं गम्यते, प्रमाणान्तरेणापि तत्सम्भवात् । उक्तं च प्रमाणान्तरम्, 'अस्ति भगवः प्राणाद्भूयः' इत्यपृच्छतोऽयमभिप्रायः। नामादिष्वाशापर्यन्तेष्वचेतनेषु पुरुषार्थभूयस्तया पूर्वपूर्वमतिक्रान्तेष्वप्युत्तरोत्तरेषूपदिष्टेषु तत्तद्वेदिन आचार्येणातिवादित्वं नोक्तम् । प्राणशब्दनिर्दिष्टप्रत्यगात्मयाथात्म्यवेदिनस्तु पुरुषार्थभूयस्त्वातिशयं मन्वानेन 'स वा एष एवं पश्यन्नेवं मन्वान एवं विजानन्नतिवादी भवति' इति अतिक्रान्तवस्तुवादित्वमुक्तम् । अतोऽत्रैवात्मोपदेशस्समाप्त इति मत्वा शिष्यो भूयो न पप्रच्छ । आचार्यस्त्विदमपि सातिशयं मत्वा निरतिशयपुरुषार्थभूतं सत्यशब्दाभिधेयं परं ब्रह्म 'एष तु वा अतिवदति यः सत्येनातिवदति' इति स्वयमेवोपचिक्षेप । शिष्योऽपि परमपुरुषार्थरूपे परस्मिन् ब्रह्मण्युपक्षिप्ते तत्स्वरूपतदुपासनयाथात्म्यबुभुत्सया 'सोऽहं भगवः सत्येनातिवदानि' इति प्रार्थयामास । ततो ब्रह्मसाक्षात्कारनिमित्तातिवादित्वसिद्धये

ब्रह्मसाक्षात्कारोपायभूतं ब्रह्मोपासनं 'सत्यं त्वेव विजिज्ञासितव्यम्' इत्युपदिश्य तदुपायभूतं ब्रह्ममननं 'मतिस्त्वेव विजिज्ञासितव्या' इत्युपदिश्य श्रवणप्रतिष्ठार्थत्वान्मननस्य मननोपदेशेन श्रवणमर्थसिद्धं मत्वा श्रवणोपायभूतां ब्रह्मणि श्रद्धाम् 'श्रद्धा त्वेव विजिज्ञासितव्या' इत्युपदिश्य तदुपायभूतां च तन्निष्ठां 'निष्ठा त्वेव विजिज्ञासितव्या' इत्युपदिश्य तदुपायभूतां च तदुद्योगप्रयत्नरूपां कृतिमपि 'कृतिस्त्वेव विजिज्ञासितव्या' इत्युपदिश्य श्रवणाद्युपक्रमरूपकृतिसिद्धये प्राप्यभूतस्य सत्यशब्दाभिहितस्य ब्रह्मणस्सुखरूपता ज्ञातव्येति 'सुखं त्वेव विजिज्ञासितव्यम्' इत्युपदिश्य निरतिशयविपुलमेव सुखं परमपुरुषार्थरूपं भवतीति तस्यैव ब्रह्मणस्सुखरूपस्य निरतिशयविपुलता ज्ञातव्येति 'भूमा त्वेव विजिज्ञासितव्यः' इत्युपदिश्य निरतिशयविपुलसुखरूपस्य ब्रह्मणो लक्षणमिदमुच्यते 'यत्र नान्यत् पश्यति नान्यच्छृणोति नान्यद् विजानाति स भूमा' इति । अयमर्थः- अनवधिकातिशयसुखरूपे ब्रह्मण्यनुभूयमाने ततोऽन्यत् किमपि न पश्यत्यनुभविता । ब्रह्मस्वरूपतद्विभूत्यन्तर्गतत्वाच्च कृत्स्नस्य वस्तुजातस्य । अत ऐश्वर्यापरपर्यायविभूतिगुण-विशिष्टं निरतिशयसुखरूपं ब्रह्मानुभवन् तद्व्यतिरिक्तस्य वस्तुनोऽभावादेव किमप्यन्यन्न पश्यति । अनुभाव्यस्य सर्वस्य सुखरूपत्वादेव दुःखं च न पश्यति, तदेव हि सुखम्, यदनुभूयमानं पुरुषानुकूलं भवति ।

ननु चेदमेव जगद् ब्रह्मणोऽन्यतयाऽनुभूयमानं दुःखरूपं परिमितसुखरूपं च भवत्कथमिव ब्रह्मविभूतित्वेन तदात्मकतयाऽनुभूयमानं सुखरूपमेव भवेत् । उच्यते । कर्मवश्यानां क्षेत्रज्ञानां ब्रह्मणोऽन्यत्वेनानुभूयमानं कृत्स्नं जगत् तत्तत्कर्मानुरूपं दुःखं च परिमितसुखं च भवति । अतो ब्रह्मणोऽन्यतया परिमितसुखत्वेन दुःखत्वेन च जगदनुभवस्य कर्मनिमित्तत्वात् कर्मरूपाविद्याविमुक्तस्य तदेव जगद्विभूतिगुणविशिष्टब्रह्मानुभवान्तर्गतं सुखमेव भवति । यथा पित्तोपहतेन पीयमानं पयः पित्ततारतम्येनाल्पसुखं विपरीतं च भवति, यथा पित्तानुपहतस्य सुखायैव भवति । यथैव राजपुत्रस्य पितुर्लीलोपकरणमतया-त्वेनानुसन्धीयमानं प्रियत्वमनुपगतम्, तथात्वानुसन्धाने प्रियतमं भवति, तथा निरतिशयानन्दस्वरूपस्य ब्रह्मणोऽनवधिकातिशयासङ्ख्येयकल्याणगुणाकरस्य लीलोपकरणं तदात्मकं चानुसन्धीयमानं जगन्निरतिशयप्रीतये भवत्येव । अतो जगदैश्वर्य-विशिष्टमनवधिकातिशयसुखरूपं ब्रह्मानुभवंस्ततोऽन्यत् किमपि न पश्यति । दुःखं च न पश्यति । एतदेवोपपादयति वाक्यशेषः 'स वा एष एवं पश्यन्नेवं मन्वान एवं विजानन्नात्मरतिरात्मक्रीड आत्ममिथुन आत्मानन्दस्स स्वराड् भवति । तस्य सर्वेषु लोकेषु कामचारो भवति । अथ येऽन्यथाऽतो विदुरन्यराजानस्तेऽक्षय्यलोका भवन्ति । तेषां सर्वेषु लोकेष्वकामचारो भवति' इति । स्वराड् अकर्मवश्यः । अन्यराजानः कर्मवश्याः । तथा 'न

'ಪಿತೃಹಾ ವೈ ತ್ವಮಸಿ' ಇತ್ಯಾದಿ ವಾಕ್ಯದಲ್ಲಿ ಪ್ರಾಣಸಹಿತವಾದ ಶರೀರವನ್ನು ಹಿಂಸೆಗೆ ಯೋಗ್ಯವಾಗಿದೆಯೆನ್ನಲಾಗಿದೆ. ಕೇವಲ ಜಡವಾದ ಪ್ರಾಣಕ್ಕೆ ಪಿತೃತ್ವವಾಗಲೀ ಅಥವಾ ಹಿಂಸ್ಯತ್ವವಾಗಲೀ ಯುಕ್ತವಾಗುವುದಿಲ್ಲ. ಆದ್ದರಿಂದ ಜೀವನೇ ಪ್ರಾಣಶಬ್ದವಾಚ್ಯನಾಗಿದ್ದಾನೆಂದು ಪೂರ್ವಪಕ್ಷ.

**तन्न । प्राणशब्दस्य प्रसिद्ध्यनुसारेण प्राणाभिमानिदेवतावाचित्वेऽपि ''अथ यद्यप्येनानुत्क्रान्तप्राणान्'' इत्यादिनोपपादितस्य पितृत्वादेः सम्भवेन लक्षणायोगात् ।**

ರಾಮಾನುಜರ ಈ ಅಧಿಕರಣದ ಪೂರ್ವಪಕ್ಷವೇ ಸರಿಯಿಲ್ಲ. ಏಕೆಂದರೆ ಶ್ರುತಿಪ್ರಸಿದ್ಧಿಗೆ ಅನುಸಾರಿಯಾಗಿ ಪ್ರಾಣಶಬ್ದವು ಅಭಿಮಾನಿದೇವತೆಯನ್ನೇ ಪ್ರತಿಪಾದಿಸುತ್ತದೆ. ಹೀಗೆ ಹೇಳಿದಾಗಲೂ 'ಅಥ ಯದ್ಯಪ್ಯೇನಾನುತ್ಕ್ರಾಂತಪ್ರಾಣಾನ್' ಇತ್ಯಾದಿ ವಾಕ್ಯದಲ್ಲಿ ಹೇಳಲ್ಪಟ್ಟ ಪಿತೃತ್ವಾದಿಗಳೂ ಸಹ ಯುಕ್ತವಾಗುತ್ತದೆ. ಆದ್ದರಿಂದ ಜೀವನಲ್ಲಿ ಲಕ್ಷಣವನ್ನೇಕೆ ಮಾಡಬೇಕು.

---

पश्यो मृत्युं पश्यति, न रोगं नोत दुःखताम् । सर्वं ह पश्यः पश्यति सर्वमाप्नोति सर्वशः ।।' इति च । निरतिशयसुखरूपत्वं च ब्रह्मणः 'आनन्दमयोऽभ्यासात्' इत्यत्र प्रपञ्चितम् । अतः प्राणशब्दनिर्दिष्टात् प्रत्यगात्मनोऽर्थान्तरभूतस्य सत्यशब्दाभिधेयस्य ब्रह्मणो भूमेत्युपदेशाद् भूमा परं ब्रह्म ।। ८ ।।

**धर्मोपपत्तेश्च** ।। अस्य भूम्नो ये धर्मा आम्नायन्ते, तेऽपि परस्मिन्नेवोपपद्यन्ते । 'एतदमृतम्' इति स्वाभाविकममृतत्वम् । 'स्वे महिम्नि' इत्यनन्याधारत्वम् । 'स एवाधस्तात्' इत्यादि । 'स एवेदं सर्वम्' इति सर्वात्मकत्वम् । 'आत्मतः प्राणः' इत्यादि प्राणप्रभृतिसर्वस्योत्पादकत्वमित्यादयो हि धर्माः परमात्मन एव । यत्तु 'अहमेवाधस्तात्' इत्यादिना सर्वात्मकत्वमुपदिष्टम्, तद्भूमविशिष्टस्य ब्रह्मणोऽहङ्ग्रहेणोपासनमुपदिश्यते 'अथातोऽहङ्कारादेशः' इत्यहङ्ग्रहोपदेशोपक्रमात् । अहमर्थस्य प्रत्यगात्मनोऽपि ह्यात्मा परमात्मेत्यन्तर्यामिब्राह्मणादिषूक्तम् । अतः प्रत्यगर्थस्य परमात्मपर्यवसानादहंशब्दोऽपि परमात्मपर्यवसायीति प्रत्यगात्मशरीरकत्वेन परमात्मानुसन्धानार्थोऽयमहङ्ग्रहोपदेशः । परमात्मनस्सर्वशरीरतया सर्वात्मत्वात् प्रत्यगात्मनोऽप्यात्मा परमात्मा । तदेव 'अथात आत्मादेशः' इत्यादिना 'आत्मैवेदं सर्वम्' इत्यन्तेनोच्यते । एतदेवोपपादयितुं प्रत्यगात्मनोऽप्यात्मभूतात् परमात्मनः सर्वस्योत्पत्तिरुच्यते । 'तस्य ह वा एतस्यैवं पश्यत एवं मन्वानस्यैवं विजानत आत्मतः प्राण आत्मत आकाशः' इत्यादिना । उपासकस्यान्तर्यामितयाऽवस्थितात् परमात्मनस्सर्वस्योत्पत्तिरित्यर्थः । अतः परमात्मनः प्रत्यगात्मशरीरकत्वज्ञानप्रतिष्ठार्थमहङ्ग्रहोपासनं कर्तव्यम् । तस्माद् भूमविशिष्टः परमात्मेति सिद्धम् ।। ९ ।।

"अथ यद्यप्येनानुत्क्रान्तप्राणान्" इति प्रकृतानामाचार्यादिजीवानाम् उत्क्रान्तप्राणत्वस्योक्तत्वेन प्राणस्य जीवमात्रत्वायोगाच्च । नहि स्वयं स्वस्मादुत्क्रान्तो भवति ।

'ಅಥ ಯದ್ಯಪ್ಯೇನಾನುತ್ಕ್ರಾಂತಪ್ರಾಣಾನ್' ಇತ್ಯಾದಿ ವಾಕ್ಯದಲ್ಲಿ ಆಚಾರ್ಯರೇ ಮೊದಲಾದ ಜೀವರುಗಳು ಪ್ರಕೃತರಾಗಿದ್ದಾರೆ. ಅಂತಹ ಜೀವರ ಪ್ರಾಣವು ಉತ್ಕ್ರಾಂತವಾಗುತ್ತದೆಂದು ಶ್ರುತಿಯು ಹೇಳುತ್ತಿದೆ. ಆದ್ದರಿಂದ ಪ್ರಾಣನು ಜೀವನಾಗಲು ಸಾಧ್ಯವಿಲ್ಲ. ಏಕೆಂದರೆ ಜೀವನನ್ನೇ ಪ್ರಾಣನೆಂದರೆ 'ಪ್ರಾಣನು ಪ್ರಾಣನಿಂದ ಉತ್ಕ್ರಾಂತನಾದನು' ಎಂದು ಹೇಳಿದಂತಾಗುತ್ತದೆ. ಆದರೆ ತಾನು ತನ್ನಿಂದ ಉತ್ಕ್ರಾಂತನಾಗಲು ಎಂದೂ ಸಹ ಸಾಧ್ಯವಿಲ್ಲ.

अत एव "एष सम्प्रसादोऽस्माच्छरीरात्समुत्थाय" इति श्रुतेः सम्प्रसादो जीवः । तस्मादध्युपदेशादिति केषाञ्चित्सूत्राक्षरार्थोऽपि निरस्तः ।

ಆದ್ದರಿಂದಲೇ 'ಏಷ ಸಂಪ್ರಸಾದೋಽಸ್ಮಾಚ್ಛರೀರಾತ್ಸಮುತ್ಥಾಯ'' ಎಂಬ ಶ್ರುತಿಯಲ್ಲಿರುವ 'ಸಂಪ್ರಸಾದ' ಶಬ್ದವು ಜೀವನನ್ನು ಪ್ರತಿಪಾದಿಸುತ್ತದೆ. ಅಂತಹ ಜೀವನ ದೆಸೆಯಿಂದ 'ಅಧ್ಯುಪದೇಶಾತ್' ಅಧಿಕನೆಂಬ ಉಪದೇಶವಿರುವ ಪ್ರಯುಕ್ತ ಬ್ರಹ್ಮನೇ ಭೂಮನಾಗುತ್ತಾನೆಂಬ ರಾಮಾನುಜರ ಸೂತ್ರವ್ಯಾಖ್ಯಾನವೂ ಸಹ ನಿರಾಸಿತವಾಯಿತು.

तथात्वे श्रुतौ प्राणशब्दस्य जीवे लक्षणापत्तेः । जीवसामान्यादध्युपदेशमात्रेण ब्रह्मत्वासिद्धेश्च । त्वद्रीत्या श्रद्धादिषु व्यभिचाराच्च ।

ಒಂದು ವೇಳೆ 'ಸಂಪ್ರಸಾದ' ಶಬ್ದಕ್ಕೆ ಜೀವನೆಂದು ಅರ್ಥೈಸುವುದಾದರೆ ಶ್ರುತಿಯಲ್ಲಿರುವ ಪ್ರಾಣಶಬ್ದಕ್ಕೆ ಜೀವನಲ್ಲಿ ಲಕ್ಷಣಾ ಮಾಡಬೇಕಾಗುತ್ತದೆ. ಮತ್ತು ಸಾಮಾನ್ಯನಾದ ಜೀವನಿಗಿಂತ ಉತ್ತಮತ್ವವನ್ನು ಹೇಳಿದ ಮಾತ್ರಕ್ಕೆ ಭೂಮನು ಬ್ರಹ್ಮನೇ ಆಗುತ್ತಾನೆಂದು ಸಿದ್ಧವಾಗುವುದಿಲ್ಲ. ಅಷ್ಟೇ ಅಲ್ಲದೇ, ನಿಮ್ಮ ಪ್ರಕಾರವೇ ಜೀವನಿಗಿಂತ ಉತ್ತಮತ್ವವೂ ಶ್ರದ್ಧಾ ಮೊದಲಾದವುಗಳಲ್ಲಿಯೂ ಹೇಳಲ್ಪಟ್ಟಿದೆ. ಆದರೆ ಅವುಗಳಲ್ಲಿ ಬ್ರಹ್ಮತ್ವವಿಲ್ಲದ ಕಾರಣ ವ್ಯಭಿಚಾರವು ಬರುತ್ತದೆ.

'सम्प्रसादोऽस्मात्' इति श्रुतौ शरीरात्समुत्थानलिङ्गेन सम्प्रसादशब्दस्याल्प-सुखयुक्तजीवे कथञ्चिद्यौगिकत्वेऽपि सूत्रेऽल्पसुखयुक्तजीवपरत्वे हेत्वभावाच्च ।

'ಸಂಪ್ರಸಾದೋಽಸ್ಮಾತ್' ಎಂಬ ಶ್ರುತಿಯಲ್ಲಿ ಶರೀರದಿಂದ ಹೊರಡುವಿಕೆಯೆಂಬ ಲಿಂಗದಿಂದ 'ಸಂಪ್ರಸಾದ' ಶಬ್ದಕ್ಕೆ ಅಲ್ಪಸುಖವುಳ್ಳ ಜೀವನಲ್ಲಿ ಯಾವುದೋ ಒಂದು ರೀತಿ ಯೌಗಿಕಾರ್ಥವನ್ನು ಮಾಡಿದರೂ ಸೂತ್ರದಲ್ಲಿರುವ 'ಸಂಪ್ರಸಾದ' ಶಬ್ದಕ್ಕೆ ಸ್ವಲ್ಪಸುಖವುಳ್ಳ ಜೀವನೆಂಬರ್ಥವನ್ನು ಹೇಳಲು ಯಾವುದೇ ಕಾರಣವಿಲ್ಲ.

"नामाभिमानिनी चोषा" इत्यादिस्मृत्या नामादीनामपि जीवविशेषत्वाच्चेति ।

ಮತ್ತು 'ನಾಮಾಭಿಮಾನಿನೀ ಚೋಷಾ ತಸ್ಯಾ ಬ್ರಹ್ಮ ಪರಂ ಸ್ಮರ' ಇತ್ಯಾದಿ ಸ್ಮೃತಿಯಿಂದ ನಾಮಾದಿಗಳೂ ಸಹ ಜೀವನಿಗಿಂತ ಉತ್ತಮವೆಂದು ಹೇಳಲ್ಪಟ್ಟಿವೆ. ಆದ್ದರಿಂದ ಜೀವಾಧಿಕ್ಯೇನ ಉಪದೇಶವು ನಾಮಾದಿಗಳಲ್ಲಿದ್ದರೂ ಬ್ರಹ್ಮತ್ವವು ಇಲ್ಲದ ಕಾರಣ ವ್ಯಭಿಚಾರ ಬರುತ್ತದೆ.

**टीकाक्षरार्थस्तु स्पष्टः । यद्यपि श्रुतौ विश्वतः परममिति द्राविडपाठः । तथापि विश्वतः परमामित्यान्ध्रपाठो भाष्य उदाहृतः ।।**

**।। इति श्रीब्रह्मण्यतीर्थपूज्यश्रीपादशिष्यव्यासतीर्थविरचिता तात्पर्यचन्द्रिकायां भूमाधिकरणं सम्पूर्णम् ।।**

ಟೀಕೆಯ ಕಠಿಣ ಪದಗಳ ಅರ್ಥವು ಉಪನ್ಯಾಸಮುಖದಿಂದಲೇ ವಿವರಿಸುವಾಗಲೇ ಸ್ಪಷ್ಟವಾಗಿದೆ. ಭಾಷ್ಯದಲ್ಲಿ ಉದಾಹರಿಸಿದ ಶ್ರುತಿಯಲ್ಲಿ 'ವಿಶ್ವತಃ ಪರಮ್' ಎಂದು ತಮಿಳು ದೇಶದ ಪಾಠ, 'ವಿಶ್ವತಃ ಪರಮಾಮ್' ಎಂಬುದು ಆಂಧ್ರ ಪಾಠ. ಹೀಗೆ ವೇದದಲ್ಲಿಯೂ ಪಾಠಭೇದವನ್ನು ಗಮನಿಸಬೇಕು.

ಇಲ್ಲಿಗೆ ಶ್ರೀವ್ಯಾಸತೀರ್ಥರಿಂದ ರಚಿತವಾದ ತಾತ್ಪರ್ಯಚಂದ್ರಿಕೆಯ ಕನ್ನಡಾನುವಾದದಲ್ಲಿ ಭೂಮಾಧಿಕರಣವು ಸಂಪೂರ್ಣವಾಯಿತು.

**प्रकाशः –**

केचित्त्विति ।। "यत्र नान्यत्पश्यति नान्यच्छृणोति नान्यद्विजानाति स भूमा" इत्यादावुक्तो भूमा किं प्रत्यागात्मरूपो जीवोऽथ परमात्मेति संशये

ವಿವರಣೆ - ರಾಮಾನುಜರ ಅಧಿಕರಣ ಶರೀರ ಹೀಗಿದೆ - 'ಯತ್ರ ನಾನ್ಯತ್ಪಶ್ಯತಿ ನಾನ್ಯಚ್ಛೃಣೋತಿ ನಾನ್ಯದ್ವಿಜಾನಾತಿ ಸ ಭೂಮಾ' ಇತ್ಯಾದಿ ಶ್ರುತಿಯಲ್ಲಿ ಪ್ರತಿಪಾದ್ಯನಾದ ಭೂಮನು ಪ್ರತ್ಯಗಾತ್ಮನಾದ ಜೀವನೋ ಅಥವಾ ಪರಮಾತ್ಮನೋ ? ಎಂದು ಸಂಶಯ.

प्रकाशः – नामादिषु प्रश्नोत्तरत्वेन प्रवृत्तस्य भूयस्त्ववचनस्य प्राणे पर्यवसानात् प्राणादूर्ध्वं तदनुक्तेः प्राणभूम्नोरभेदात् प्राणशब्दस्य "तरति शोकमात्मवित्" इत्यात्मजिज्ञासया प्रक्रान्ते प्रकरणे प्राणपर्यन्तोपास्योपदेशहेतुना प्राणसाहचर्यनिमित्तेन लक्षणया जीवपरत्वात्

ನಾಮ, ವಾಕ್ ಇವುಗಳ ವಿಷಯದಲ್ಲಿ ಪ್ರಶ್ನೆ ಹಾಗೂ ಉತ್ತರಗಳು ನಾರದರು ಹಾಗೂ ಸನತ್ಕುಮಾರರ ನಡುವೆ ನಡೆಯುತ್ತಿದೆ. ಕೊನೆಯಲ್ಲಿ ಪ್ರಾಣನನ್ನು ಉತ್ತಮರೆಂದು ಸನತ್ಕುಮಾರರು ಉತ್ತರಿಸಿದ್ದಾರೆ. ಪ್ರಾಣನಿಗಿಂತ ಮತ್ತೊಬ್ಬ ಉತ್ತಮನನ್ನು ಅವರು ಹೇಳಿಲ್ಲ. ಆದ್ದರಿಂದ ಪ್ರಾಣನೇ ಭೂಮನೆಂದು ಹೇಳಬೇಕು. ಆದ್ದರಿಂದ ಇಂತಹ ಪ್ರಾಣಶಬ್ದವು; 'ತರತಿ ಶೋಕಮಾತ್ಮವಿತ್' ಇತ್ಯಾದಿಯಾಗಿ ಆತ್ಮಜಿಜ್ಞಾಸೆಯಿಂದ ಪ್ರಾರಂಭವಾದ ಪ್ರಕರಣವು ಪ್ರಾಣನಲ್ಲಿ ಪರ್ಯವಸಾನವನ್ನು ಹೊಂದಿರುವ ಕಾರಣದಿಂದ ಪ್ರಾಣನ ಸಾಹಚರ್ಯವೆಂಬ ನಿಮಿತ್ತದಿಂದ ಲಕ್ಷಣಯಾ ಜೀವನನ್ನೇ ಪ್ರತಿಪಾದಿಸುತ್ತದೆ.

**प्रकाशः** – प्रसिद्धजडवायुपरत्वे प्रक्रान्तात्मशब्दायोगात् ''प्राणो वै पिता प्राणो वै माता प्राणो भ्राता प्राणस्स्वसा प्राण आचार्यः प्राणो ब्राह्मणः'' इत्युक्तपितृत्वादेरयोगात्

ಒಂದು ವೇಳೆ ಪ್ರಾಣಶಬ್ದವು ಜಡವಾಯುವನ್ನು ಪ್ರತಿಪಾದಿಸುವುದಾದರೆ ಉಪಕ್ರಮದಲ್ಲಿರುವ ಆತ್ಮಶಬ್ದವು ತಪ್ಪಾಗುತ್ತದೆ. ಮತ್ತು 'ಪ್ರಾಣೋ ವೈ ಪಿತಾ ಪ್ರಾಣೋ ವೈ ಮಾತಾ ಪ್ರಾಣೋ ಭ್ರಾತಾ ಪ್ರಾಣಃ ಸ್ವಸಾ ಪ್ರಾಣ ಆಚಾರ್ಯಃ ಪ್ರಾಣೋ ಬ್ರಾಹ್ಮಣಃ' ಎಂಬಲ್ಲಿ ಪ್ರಾಣನಿಗೆ ಹೇಳಲ್ಪಟ್ಟ ಪಿತೃತ್ವ, ಮಾತೃತ್ವ, ಭ್ರಾತೃತ್ವ ಇವುಗಳೆಲ್ಲವೂ ಅಯುಕ್ತವಾಗುತ್ತವೆ.

**प्रकाशः** – तथा ''पितृहा वै त्वमसि'' इति ''मातृहा त्वमसि'' इत्यादिना तथा ''उत्क्रान्तप्राणान्'' इत्यारभ्य प्रवृत्तेन ''न पितृहाऽसि' इ'ति ''न मातृहाऽसि'' इत्यादिना चात्र प्रकरणे स प्राणेषु हिंसके पुरुषे हिंसानिमित्तोपक्रोश वचनस्याप्राणेषु हिंसके हिंसानिमित्तोपक्रोश भावस्य च दर्शनेन केवलजडे हिंस्यत्वनिमित्तोपक्रोशादेश्चायोगात्

ಮತ್ತು 'ಪಿತೃಹಾ ವೈ ತ್ವಮಸಿ' ಎಂಬುದಾಗಿ ಮತ್ತು 'ಮಾತೃಹಾ ತ್ವಮಸಿ' ಇತ್ಯಾದಿಯಾಗಿ ಹಾಗೂ ಅದರಂತೆ 'ಉತ್ಕ್ರಾಂತಪ್ರಾಣಾನ್' ಎಂಬುದರಿಂದ ಪ್ರಾರಂಭಿಸಿ ಪ್ರವೃತ್ತವಾದ 'ನ ಪಿತೃಹಾಸಿ' 'ನ ಮಾತೃಹಾಽಸಿ' ಇತ್ಯಾದಿಯಾಗಿ ಇದೇ ಪ್ರಕರಣದಲ್ಲಿ ಪ್ರಾಣಸಹಿತನಾದ ಪುರುಷನನ್ನು ಹಿಂಸೆ ಮಾಡಿದರೆ ಆಕ್ರೋಶದ ಮಾತನ್ನು ಶ್ರುತಿಯು ಹೇಳುತ್ತಿದೆ. ಪ್ರಾಣವಿಲ್ಲದ ಪುರುಷನನ್ನು ಹಿಂಸೆ ಮಾಡಿದರೆ ಹಿಂಸಾ ನಿಮಿತ್ತವಾದ ಆಕ್ರೋಶವನ್ನು ಶ್ರುತಿಯು ಹೇಳುತ್ತಿಲ್ಲ. ಏಕೆಂದರೆ ಪ್ರಾಣವಿಲ್ಲದ ಶರೀರವು ಕೇವಲ ಜಡವಾಗುವುದರಿಂದ ಹಿಂಸೆಯು ಉಂಟಾಗುವುದಿಲ್ಲ. ಆದಕ್ಕೆ ನಿಮಿತ್ತವಾದ ಆಕ್ರೋಶವನ್ನೂ ಸಹ ಶ್ರುತಿಯು ಹೇಳಲು ಸಾಧ್ಯವಿಲ್ಲ.

**प्रकाशः** – लोके च सजीवनिर्जीवयोरुपमर्दकारिषूपक्रोशतदभावोपलम्भात् प्राणशब्दितो जीव एव भूमेति प्राप्ते

ಲೋಕದಲ್ಲಿಯೂ ಸಹ ಜೀವ ಇರುವ ಶರೀರವನ್ನು ಹಿಂಸೆ ಮಾಡಿದರೆ ಆಕ್ರೋಶವು ವ್ಯಕ್ತವಾಗುತ್ತದೆ. ನಿರ್ಜೀವ ಶರೀರವನ್ನು ಹಿಂಸಿಸಿದರೆ ಆಕ್ರೋಶವು ವ್ಯಕ್ತವಾಗುವುದಿಲ್ಲ. ಈ ಕಾರಣದಿಂದ ಪ್ರಾಣಶಬ್ದವು ಜೀವನನ್ನೇ ಪ್ರತಿಪಾದಿಸುತ್ತದೆ. ಅಂತಹ ಜೀವನೇ ಭೂಮನಾಗಿದ್ದಾನೆಂದು ಪೂರ್ವಪಕ್ಷ.

**प्रकाशः** – भूयो विषयप्रश्नप्रत्युक्तयोः प्राणपर्यंतत्वेऽपि प्राणवादिनोऽतिवादित्वोक्त्यनन्तरम् ''एष तु वा अतिवदति यः सत्येनातिवदति'' इति तुशब्देनोपासकभेदं प्रतिपाद्य सत्योपासकस्य पूर्वस्मात्प्राणोपासकादाधिक्यकथनादतिवादित्वस्य स्वोपास्याधिक्यवादित्वरूपत्वात्सत्यशब्दावसेयं ब्रह्मैव भूमा सम्प्रसादात्प्राणशब्दिताज्जीवादूर्ध्वमुपदेशात् । अमृतत्वस्वमहिमप्रतिष्ठितत्वसर्वात्मत्वादिधर्माणामुपपत्तेश्च ब्रह्मैव भूमेति सिद्धान्त इत्याहुरित्यर्थः ।

ಜೀವನು ಪ್ರಾಣನಾಗಲು ಸಾಧ್ಯವಿಲ್ಲ. ಏಕೆಂದರೆ ನಾಮ, ವಾಕ್ ಮೊದಲಾದ ಅನೇಕ ದೇವತೆಗಳ ವಿಷಯದಲ್ಲಿ ಪ್ರಶ್ನೆ ಹಾಗೂ ಉತ್ತರಗಳು ನಡೆದು ಪ್ರಾಣನ ತನಕ ಸನತ್ಕುಮಾರರು ಉತ್ತರಿಸಿದ್ದಾರೆ. ಯಾರು ಈ ಪ್ರಾಣನನ್ನು ತಿಳಿಯುತ್ತಾರೋ, ಅವನನ್ನು ಅತಿವಾದಿಯೆಂದು ಹೇಳಿ, ಅನಂತರ 'ಏಷ ತು ವಾ ಅತಿವದತಿ ಯಃ ಸತ್ಯೇನಾತಿವದತಿ' 'ಯಾವಾತನು ಸತ್ಯನನ್ನು ತಿಳಿಯುತ್ತಾನೋ, ಅವನು ವಿಶೇಷವಾದ ಅತಿವಾದಿಯೆನಿಸುತ್ತಾನೆ' ಎಂಬುದಾಗಿ ಶ್ರುತಿಯಲ್ಲಿರುವ 'ತು' ಶಬ್ದವು ಉಪಾಸಕರಲ್ಲಿ ಭೇದವನ್ನು ಪ್ರತಿಪಾದಿಸಿದೆ. ಅಂದರೆ ಪ್ರಾಣೋಪಾಸಕನು ಕೇವಲ ಅತಿವಾದಿಯಾಗುತ್ತಾನೆ. ಸತ್ಯೋಪಾಸಕನು ವಿಶೇಷವಾದ ಅತಿವಾದಿಯಾಗುತ್ತಾನೆ ಎಂಬುದಾಗಿ. ಹೀಗೆ ಪ್ರಾಣೋಪಾಸಕನೇ ಬೇರೆ, ಸತ್ಯೋಪಾಸಕನೇ ಬೇರೆ ಎಂದು ಉಪನಿಷತ್ತು ಹೇಳಿದೆ. ಮತ್ತು ಸತ್ಯೋಪಾಸಕನು, ಪ್ರಾಣೋಪಾಸಕನಿಗಿಂತ ಶ್ರೇಷ್ಠನೆಂದು ಹೇಳಿರುವುದರಿಂದ ಸತ್ಯಶಬ್ದದಿಂದ ಬ್ರಹ್ಮನೇ ಪ್ರತಿಪಾದ್ಯನೆಂದು ಅವನೇ ಭೂಮನೆಂದು ತಿಳಿಯುತ್ತದೆ. ಏಕೆಂದರೆ 'ಸಂಪ್ರಸಾದಾತ್' ಪ್ರಾಣಶಬ್ದ ಪ್ರತಿಪಾದ್ಯನಾದ ಜೀವನಿಗಿಂತ, 'ಅಧ್ಯುಪದೇಶಾತ್' ಉತ್ತಮನೆಂದು ಉಪದೇಶಿಸಿದ್ದರಿಂದ ಮತ್ತು ಅಮೃತತ್ವ, ಸ್ವಮಹಿಮಪ್ರತಿಷ್ಠಿತತ್ವ, ಸರ್ವಾತ್ಮಕತ್ವ ಮೊದಲಾದ ಧರ್ಮಗಳನ್ನೂ ಸಹ ಹೇಳಿರುವುದರಿಂದ ಬ್ರಹ್ಮನೇ ಭೂಮನಾಗುತ್ತಾನೆ ಹೊರತು, ಜೀವನಲ್ಲವೆಂದು ಸಿದ್ಧಾಂತ.

**प्रकाशः** – तर्हि को विशेष इत्यत आह – **प्राणशब्दस्त्विति** ।। जीवग्रहे हेतुद्वयमाह – **प्राणो ह्येति** ।। सिद्धान्तस्य स्फुटत्वात्पूर्वपक्षस्यैवोपन्यासः ।

ನಮ್ಮ ಸಿದ್ಧಾಂತದಂತೆ ರಾಮಾನುಜರ ಅಧಿಕರಣದ ಸಿದ್ಧಾಂತವೂ ಸಹ ಇರುವುದರಿಂದ ಏನು ವ್ಯತ್ಯಾಸ? ಎಂಬ ಪ್ರಶ್ನೆಗೆ, 'ಪ್ರಾಣಶಬ್ದಸ್ತು' ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾರೆ. ಇಬ್ಬರ ಸಿದ್ಧಾಂತವು ಒಂದೇ ಆಗಿದ್ದರೂ ಪ್ರಾಣಸಾಹಚರ್ಯದಿಂದ ಜೀವನೇ ಭೂಮನಾಗುತ್ತಾನೆಂದು ವಿಭಿನ್ನವಾದ ಪೂರ್ವಪಕ್ಷವನ್ನು ರಾಮಾನುಜರು ಹೇಳಿದ್ದಾರೆಂದು ಅಭಿಪ್ರಾಯ. ಜೀವನೇ ಪೂರ್ವಪಕ್ಷಕ್ಕೆ ವಿಷಯನಾಗಲು ಎರಡು ಹೇತುಗಳನ್ನು 'ಪ್ರಾಣೋ ಹ' ಇತ್ಯಾದಿ ವಾಕ್ಯದಿಂದ ಹೇಳಿದ್ದಾರೆ. ಹೀಗೆ ರಾಮಾನುಜರ ಸಿದ್ಧಾಂತವು ನಮಗೆ ಸಮ್ಮತೇ ಆಗಿರುವುದರಿಂದ ಪೂರ್ವಪಕ್ಷದಲ್ಲಿ ಮಾತ್ರ ವಿವಾದವಿರುವುದರಿಂದ ಗ್ರಂಥಕಾರರು ಕೇವಲ ಪೂರ್ವಪಕ್ಷವನ್ನಷ್ಟೇ ಉಪನ್ಯಾಸ ಮಾಡಿದ್ದಾರೆ.

## ಪರಿಪೂರ್ಣಚಂದ್ರಿಕಾ

**प्रकाशः** – यदुक्तं प्राणशब्दश्चेतनपर इति तद्युक्तम् । लाक्षणिकत्वं त्वयुक्तमित्याह – **प्राणशब्दस्येति** ।। **प्रसिद्धीति** ।। प्रागुक्तश्रुतिप्रसिद्ध्यनुसारेणेत्यर्थः ।

ಪ್ರಾಣಶಬ್ದವು ಚೇತನಪರವೆಂದು ಹೇಳಿದ್ದು ಯುಕ್ತವಾಗಿದೆ. ಆದರೆ ಜೀವನಲ್ಲಿ ಲಕ್ಷಣಾ ಮಾಡಬೇಕೆಂದು ಹೇಳಿದ್ದು ಅಯುಕ್ತವಾಗಿದೆಯೆಂಬುದಾಗಿ 'ಪ್ರಾಣಶಬ್ದಸ್ಯ' ಇತ್ಯಾದಿ ವ್ಯಾಕವು ಪ್ರತಿಪಾದಿಸುತ್ತಿದೆ. 'ಪ್ರಸಿದ್ಧಿ' ಎಂದರೆ ಹಿಂದೆ ಹೇಳಲ್ಪಟ್ಟ ಶ್ರುತಿಪ್ರಸಿದ್ಧಿಗೆ ಅನುಸಾರಿಯಾಗುವುದರಿಂದ ಎಂದರ್ಥ.

**प्रकाशः** – तदीयसूत्रार्थोऽप्ययुक्त इत्याह – **अत एवेति** ।। अतश्शब्दार्थं व्यनक्ति – **तथात्व इति** ।। त्वया तथोक्तत्वादिति भावः ।।

ರಾಮಾನುಜರ ಸೂತ್ರಾರ್ಥವೂ ಸಹ ಅಯುಕ್ತವಾಗಿದೆಂಬುದಾಗಿ 'ಅತ ಏವ' ಇತ್ಯಾದಿ ವಾಕ್ಯವು ಪ್ರತಿಪಾದಿಸುತ್ತಿದೆ. 'ಅತಃ' ಶಬ್ದದ ಅರ್ಥವನ್ನೇ 'ತಥಾತ್ವೇ' ಎಂಬುದಾಗಿ ಸ್ಪಷ್ಟಪಡಿಸುತ್ತಿದ್ದಾರೆ. ಸೂತ್ರದಲ್ಲಿರುವ ಪ್ರಾಣಶಬ್ದಕ್ಕೆ ಲಕ್ಷಣಾ ಮಾಡಿದರೆ ಶ್ರುತಿಯಲ್ಲಿರುವ ಪ್ರಾಣಶಬ್ದಕ್ಕೂ ಸಹ ಲಕ್ಷಣಾ ಮಾಡಬೇಕಾಗುತ್ತದೆಂದು ಈವಾಕ್ಯದಲ್ಲಿ ಹೇಳುತ್ತಿದ್ದಾರೆ. 'ತಥಾತ್ವೇ' ಎಂದರೆ 'ಸೂತ್ರದಲ್ಲಿರುವ ಪ್ರಾಣಶಬ್ದಕ್ಕೆ ನೀನು ಲಕ್ಷಣಾ ಮಾಡುವುದಾದರೆ' ಎಂದರ್ಥ.

**प्रकाशः** – 'महतः परमव्यक्तम्' इत्यादौ त्वन्मते जीवादधिकत्वेन निर्दिष्टे शरीरे ब्रह्मत्वाभावादप्रयोजकोऽयं हेतुरित्याह – **जीवेति** ।। **त्वद्रीत्येति** ।। त्वन्मते तेषामब्रह्मत्वात्सत्यवाक्य इव श्रद्धा त्वेवेत्याधिक्यद्योतकतुशब्दस्य श्रद्धादौ भावादिति भावः ।

'ಮಹತಃ ಪರಮವ್ಯಕ್ತಮ್' ಇತ್ಯಾದಿ ವಾಕ್ಯಗಳಲ್ಲಿ ನೀವು ಜೀವನಿಗಿಂತ ಉತ್ತಮವೆಂದು ನಿರ್ದೇಶಿಸಲ್ಪಟ್ಟ ಶರೀರದಲ್ಲಿ ಬ್ರಹ್ಮತ್ವವು ಇರುವುದಿಲವೆಂದು ಹೇಳಿದ್ದೀರಿ. ಆದ್ದರಿಂದ ನಿಮ್ಮ ಹೇತು ಅಪ್ರಯೋಜಕವಾಗಿದೆಯೆಂದು 'ಜೀವ' ಇತ್ಯಾದಿ ವಾಕ್ಯದಿಂದ ಪ್ರತಿಪಾದಿಸಿದ್ದಾರೆ. 'ತ್ವದ್ರೀತ್ಯಾ' ಎಂದರೆ ನಿಮ್ಮ ಮತದಲ್ಲಿ ಸತ್ಯವು ಮಾತ್ರ ಬ್ರಹ್ಮ, ಶ್ರದ್ಧಾದಿಗಳು ಬ್ರಹ್ಮವಲ್ಲ. 'ತು' ಶಬ್ದವು ಆಧಿಕ್ಯವನ್ನು ಸೂಚಿಸುವುದಾದರೆ 'ಶ್ರದ್ಧಾತ್ವೇವ ವಿಜ್ಞಾಜಿಸಿತವ್ಯಾ' ಇತ್ಯಾದಿ ವಾಕ್ಯಗಳಲ್ಲಿಯೂ 'ತು' ಶಬ್ದವು ಶ್ರುತವಾದ್ದರಿಂದ ಶ್ರದ್ಧಾದಿಗಳಲ್ಲಿಯೂ ಅತಿಶಯಿತವಾದ ಅತಿವಾದಿತ್ವವು ಇರುತ್ತದೆ. ಆದರೆ ಬ್ರಹ್ಮತ್ವವು ಇಲ್ಲದ ಕಾರಣ ಹೇತು ವ್ಯಭಿಚರಿತವಾಗಿದೆಯೆಂದು ತಿಳಿಯಬೇಕು.

**प्रकाशः** – तथा हि तद्भाष्यं ''ब्रह्मोपासनं सत्यं त्वेव विजिज्ञासितव्यमुपदिश्य तदुपायभूतं ब्रह्ममननं मतिस्त्वेव विजिज्ञासितव्येत्युपदिश्य श्रवणप्रतिष्ठार्थत्वान्मननस्य मननोपदेशेन श्रवणमप्यर्थात्सिद्धं मत्वा श्रवणोपायभूतां ब्रह्मणि श्रद्धां श्रद्धा त्वेव विजिज्ञासितव्येत्युपदिश्य'' इत्यादि ।

ಏಕೆಂದರೆ ರಾಮಾನುಜರ ಭಾಷ್ಯವೇ ಹೀಗಿದೆ - "ಬ್ರಹ್ಮೋಪಾಸನಂ ಸತ್ಯಂ ತ್ವೇವ ವಿಜಿಜ್ಞಾಸಿತವ್ಯಮುಪದಿಶ್ಯ ತದುಪಾಯಭೂತಂ ಬ್ರಹ್ಮಮನನಂ ಮತಿಸ್ತ್ವೇವ ವಿಜಿಜ್ಞಾಸಿತವ್ಯೇತ್ಯುಪದಿಶ್ಯ ಶ್ರವಣಪ್ರತಿಷ್ಠಾರ್ಥತ್ವಾನ್ಮನನಸ್ಯ ಮನನೋಪದೇಶೇನ ಶ್ರವಣಮಪ್ಯರ್ಥಾತ್ಸಿದ್ಧಂ ಮತ್ವಾ ಶ್ರವಣೋಪಾಯಭೂತಾಂ ಬ್ರಹ್ಮಣಿ ಶ್ರದ್ಧಾಂ ಶ್ರದ್ಧಾ ತ್ವೇವ ವಿಜಿಜ್ಞಾಸಿತವ್ಯೇತ್ಯುಪದಿಶ್ಯ" ಬ್ರಹ್ಮೋಪಾಸನೆಯನ್ನು 'ಸತ್ಯಂ ತ್ವೇವ ವಿಜಿಜ್ಞಾಸಿತವ್ಯಮ್' 'ಸತ್ಯವೆಂದು ಜಿಜ್ಞಾಸೆ ಮಾಡಬೇಕು' ಎಂದು ಉಪದೇಶಿಸಿದ್ದಾರೆ. ಅದಕ್ಕೆ ಉಪಾಯಭೂತವಾಗಿ ಬ್ರಹ್ಮನ ಮನನವನ್ನು 'ಮತಿಸ್ತ್ವೇವ ವಿಜಿಜ್ಞಾಸಿತವ್ಯಾ' ಎಂದು ಉಪದೇಶಿಸಲಾಗಿದೆ. ಮನನವು ಶ್ರವಣದ ನಿರ್ಧಾರಕ್ಕಾಗಿ ಉಪದೇಶಿಸಿದ್ದರಿಂದ ಮನನದಿಂದಲೇ ಶ್ರವಣವೂ ಸಹ ಅರ್ಥಾತ್ ಸಿದ್ಧವಾಯಿತೆಂದು ತಿಳಿದು ಶ್ರವಣಕ್ಕೆ ಸಾಧನವಾದ ಶ್ರದ್ಧೆಯನ್ನು ಮುಂದೆ ಉಪದೇಶಿಸಲಾಗಿದೆ. 'ಶ್ರದ್ಧಾ ತ್ವೇವ ವಿಜಿಜ್ಞಾಸಿತವ್ಯಾ' ಇತ್ಯಾದಿಯಾಗಿ. ಹೀಗೆ ನೀವೇ ವ್ಯಾಖ್ಯಾನಿಸಿದ್ದೀರಿ. ಆದ್ದರಿಂದ ಶ್ರದ್ಧಾ, ಮತಿ ಇವುಗಳೆಲ್ಲಾ ಬ್ರಹ್ಮವಲ್ಲವೆಂದು ನೀವು ಒಪ್ಪಿದಂತಾಯಿತು.

**ಪ್ರಕಾಶಃ** – ननु 'सम्प्रसादोऽस्मात्' इति श्रुतौ जीवे प्रसक्तेन जीववाचिना सौत्रसम्प्रसादशब्देन जीवस्योक्तेस्तदनुरोधाच्छ्रुतौ लक्षणाऽऽश्रीयत इत्यत आह – **सम्प्रसाद इति ।।**

ಬೃಹದಾರಣ್ಯಕಶ್ರುತಿಯಲ್ಲಿ 'ಸಂಪ್ರಸಾದಃ ಅಸ್ಮಾತ್' ಇತ್ಯಾದಿಯಾಗಿ ಜೀವನಲ್ಲಿ 'ಸಂಪ್ರಸಾದ' ಶಬ್ದವನ್ನು ಪ್ರಯೋಗಿಸಲಾಗಿದೆ. ಅದನ್ನೇ ಸೂತ್ರದಲ್ಲಿ 'ಸಂಪ್ರಸಾದ' ಶಬ್ದದಿಂದ ಹೇಳಿರುವುದರಿಂದ ಜೀವನು ಪ್ರತಿಪಾದ್ಯನಾಗುತ್ತಾನೆ. ಹೀಗೆ ಶ್ರುತಿಗೆ ಅನುಸಾರಿಯಾಗಿ ಸೂತ್ರವು 'ಸಂಪ್ರಸಾದ' ಶಬ್ದದಿಂದ ಜೀವನನ್ನು ಹೇಳುವ ಕಾರಣ ಈ ಸೂತ್ರಕ್ಕೆ ಅನುಸಾರಿಯಾಗಿ ಶ್ರುತಿಯಲ್ಲಿರುವ ಪ್ರಾಣಶಬ್ದಕ್ಕೆ ಲಕ್ಷಣಾ ಮಾಡಬಹುದಲ್ಲವೇ? ಎಂಬ ಪ್ರಶ್ನೆಗೆ 'ಸಂಪ್ರಸಾದ' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

**ಪ್ರಕಾಶಃ** – सम्प्रसादशब्दस्य जीवेऽभिधानाद्यभावेन रूढ्यभावात्स्वयोग्य-किञ्चित्पूर्णसुखवति तस्मिन् सम्बद्धं प्रसादशब्दितं सुखं यस्येति व्युत्पत्त्या सुखसम्बद्धो जीवः सम्प्रसादशब्देन ग्राह्यः । नचात्र मुख्यार्थस्य तत्सुखमित्युक्तस्य सन्निहितपूर्णसुखस्य त्यागेन जीवग्रहणे हेतुरस्ति । येन श्रुतौ तद्बलाल्लक्षणाऽश्रीयेतेत्यर्थः ।

'ಸಂಪ್ರಸಾದ' ಶಬ್ದಕ್ಕೆ ಜೀವನೆಂಬ ಅರ್ಥವು ಕೋಶಾದಿಗಳಿಂದ ಸಿದ್ಧವಾಗಿಲ್ಲ. ಆದ್ದರಿಂದಲೇ ರೂಢಿಯೂ ಸಹ ಇರುವುದಿಲ್ಲ. ಹಾಗಾಗಿ ತನ್ನ ಯೋಗ್ಯತೆಗೆ ಅನುಸಾರಿಯಾದ ಸ್ವಲ್ಪವೇ ಪೂರ್ಣವಾದ ಸುಖ ಇರುವುದರಿಂದ ಅಂತಹ ಜೀವನಲ್ಲಿ 'ಪ್ರಸಾದ' ಶಬ್ದಪ್ರತಿಪಾದ್ಯವಾದ ಸುಖವು ಸ್ವಲ್ಪವೇ ಸಂಬಂಧವನ್ನು ಹೊಂದಿರುತ್ತವೆ. ಆದ್ದರಿಂದ 'ಪ್ರಸಾದಃ ಸಂಬದ್ಧಂ ಯಸ್ಯ' ಎಂಬ ವ್ಯುತ್ಪತ್ತಿಯಿಂದ 'ಸಂಪ್ರಸಾದ' ಶಬ್ದದಿಂದ ಯೌಗಿಕಾರ್ಥವನ್ನು ಸ್ವೀಕರಿಸುವ ಮೂಲಕ ಜೀವನೆಂಬರ್ಥವನ್ನು ಸ್ವೀಕರಿಸಬೇಕು. ಆದರೆ 'ತತ್ಸುಖಮ್' ಎಂಬ ಶ್ರುತಿಯಲ್ಲಿ ಪರಿಪೂರ್ಣವಾದ ಸುಖವುಳ್ಳ ಬ್ರಹ್ಮನೆಂಬ ಮುಖ್ಯಾರ್ಥನನ್ನು ಬಿಟ್ಟು ಸ್ವಲ್ಪವೇ

ಪೂರ್ಣಸುಖವುಳ್ಳ ಜೀವನೆಂಬರ್ಥವನ್ನು ಸ್ವೀಕರಿಸಲು ಕಾರಣವಿಲ್ಲ. ಹಾಗೇನಾದರೂ ಕಾರಣವಿದ್ದರೆ ಅದರ ಬಲದಿಂದ ಶ್ರುತಿಯಲ್ಲಿರುವ ಪ್ರಾಣಶಬ್ದಕ್ಕೆ ಲಕ್ಷಣಾವನ್ನು ಮಾಡಬಹುದಿತ್ತು.

**प्रकाशः** – किञ्च जीवादाधिक्येनोपदेशस्य वागादावपि सत्त्वात्तत्रापि व्यभिचार इति भावेनाह – **नामेति** ।। ''नामाभिमानिनी चोषा तस्या ब्रह्म परं स्मर'' इत्यादिछान्दोग्यभाष्योदाहृतस्मृत्येत्यर्थः ।

ಮತ್ತು ಜೀವನಿಗಿಂತ ಉತ್ತಮತ್ವದ ಉಪದೇಶವು ವಾಗಾದಿಗಳಲ್ಲಿಯೂ ಸಹ ಇರುವುದರಿಂದ ಅಲ್ಲಿ ಬ್ರಹತ್ತ್ವವಿಲ್ಲದ ಕಾರಣ ವ್ಯಭಿಚಾರಬರುತ್ತದೆಂಬ ಅಭಿಪ್ರಾಯದಿಂದ 'ನಾಮ' ಇತ್ಯಾದಿ ವಾಕ್ಯವು ಹೊರಟಿದೆ. 'ನಾಮಾಭಿಮಾನಿನೀ ಚೋಷಾ ತಸ್ಯಾ ಬ್ರಹ್ಮ ಪರಂ ಸ್ಮರ' ಇತ್ಯಾದಿಯಾಗಿ ಛಾಂದೋಗ್ಯ ಭಾಷ್ಯದಲ್ಲಿ ಉದಾಹರಿಸಿದ ಸ್ಮೃತಿಯಿಂದ ಎಂದು ಇದರ ಅರ್ಥ.

**प्रकाशः** – ''धर्मोपपत्तेश्च'' इति सूत्रार्थो न विरुद्ध इति न दूषितः । ''प्रतिसूत्रं प्रकाश्येते घटनाघटने मया'' इत्युक्तेः प्रायिकत्वाभिप्रायत्वादद्वैतमत एतत्सूत्रार्थस्यापि दूषणाच्च न प्रतिज्ञाविरोधः ।

'ಧರ್ಮೋಪಪತ್ತೇಶ್ಚ' ಎಂಬ ಸೂತ್ರದ ಅರ್ಥವು ನಮ್ಮ ಸಿದ್ಧಾಂತಕ್ಕೆ ವಿರುದ್ಧವಲ್ಲದ ಕಾರಣ ಪ್ರತ್ಯೇಕವಾಗಿ ದೂಷಣೆ ಮಾಡಿಲ್ಲ. ಹಾಗಾದರೆ 'ಪ್ರತಿಸೂತ್ರಂ ಪ್ರಕಾಶ್ಯೇತೇ ಘಟನಾಘಟನೇ ಮಯಾ' ಎಂಬ ಪ್ರತಿಜ್ಞಾವಾಕ್ಯದಲ್ಲಿ ಪ್ರತಿಯೊಂದು ಸೂತ್ರಗಳನ್ನೂ ಸಹ ವಿಮರ್ಶಿಸುತ್ತೇವೆ ಎಂದು ಹೇಳಿದ್ದಾರಲ್ಲ, ಎಂದರೆ ಆ ಮಾತು ಪ್ರಾಯಿಕ. ಅಂದರೆ ಅಥವಾ ಅದ್ವೈತಮತದ ನಿರಾಕರಣೆಯಿಂದಲೇ ಇವರ ಈ ಸೂತ್ರಾರ್ಥವೂ ಸಹ ನಿರಾಕರಿಸಿದಂತಾಯಿತೆಂಬ ಅಭಿಪ್ರಾಯವಿರುವುದರಿಂದಲೂ ಪ್ರತಿಜ್ಞೆಗೆ ವಿರೋಧವಿರುವುದಿಲ್ಲ.

**प्रकाशः** – एतेन रामानुजरीतिमनुसृत्य पूर्वोत्तरपक्षौ कुर्वतः कस्यचिच्छैवस्य मतं प्रत्युक्तं ध्येयम् । यदत्र सौत्रहेतोश्चन्द्रिकोक्तव्यभिचारनिरासाय सम्प्रसादाज्जीवादधिकात्मत्वेनोपदेशादित्यर्थ इत्युक्तं तन्न । सूत्रे अध्यात्मोपदेशादिति निर्देशाभावात् ।

ರಾಮಾನುಜ ಮತವನ್ನು ಅನುಸರಿಸಿ ಪೂರ್ವಪಕ್ಷ ಹಾಗೂ ಸಿದ್ಧಾಂತ ಪಕ್ಷಗಳನ್ನು ಸಮರ್ಥಿಸುವ ಯಾರೋ ಒಬ್ಬ ಶೈವನ ಮತವೂ ಸಹ ರಾಮಾನುಜಮತ ನಿರಾಕರಣೆಯಿಂದಲೇ ನಿರಾಕೃತವಾಯಿತೆಂದು ತಿಳಿಯಬೇಕು. ಸೂತ್ರದಲ್ಲಿ ಹೇಳಲ್ಪಟ್ಟ 'ಅಧ್ಯುಪದೇಶಾತ್' ಎಂಬ ಹೇತುವಿಗೆ ಗ್ರಂಥದಲ್ಲಿ ವ್ಯಭಿಚಾರ ದೋಷವನ್ನು ಹೇಳಿದ್ದಾರೆ. ಅದನ್ನು ಪರಿಹರಿಸುವುದಕ್ಕಾಗಿ ಈ ಶೈವನು ಜೀವನಿಗಿಂತ ಅಧಿಕನಾದ ಆತ್ಮನೆಂಬ ಉಪದೇಶವಿರುವುದರಿಂಧ ವ್ಯಭಿಚಾರ ಬರುವುದಿಲ್ಲವೆಂದು ಹೇಳುತ್ತಾನೆ. ಇದೂ ಸಹ ತಪ್ಪು. ಏಕೆಂದರೆ - ವ್ಯಭಿಚಾರ ಪರಿಹಾರಕ್ಕಾಗಿ ಆತ್ಮೋಪದೇಶವನ್ನು ಶ್ರುತಿಯು ಮಾಡುತ್ತಿದೆ ಎಂದರೆ ಸೂತ್ರದಲ್ಲಿ 'ಅಧ್ಯಾತ್ಮೋಪದೇಶಾತ್' ಎಂದೇ ನಿರ್ದೇಶಿಸಬೇಕಿತ್ತು. ಆದರೆ ಹಾಗೆ ನಿರ್ದೇಶವಿಲ್ಲ.

ಭೂಮಾಧಿಕರಣ (೧-೩-೨)

**प्रकाशः** – यदत्रोक्तं शिवार्कमणिदीपिकायां ''निरतिशयसुखवर्णनपरस्य भूमोपदेशस्यात्मविषयत्वं स्पष्टमिति हेतावपेक्षितमप्यात्मत्वविशेषणं सूत्रे न कृतम्'' इति

ಈ ವಿಷಯದಲ್ಲಿ 'ಶಿವಾರ್ಕಮಣಿ ದೀಪಿಕಾ' ಎಂಬ ಶೈವರ ಗ್ರಂಥವು ಉತ್ತರಿಸಲು ಪ್ರಯತ್ನ ಪಟ್ಟಿದೆ. 'ನಿರತಿಯಶಸುಖವರ್ಣನಪರಸ್ಯ ಭೂಮೋಪದೇಶಸ್ಯಾತ್ಮವಿಷಯತ್ವಂ ಸ್ಪಷ್ಟಮಿತಿ ಹೇತಾವಪೇಕ್ಷಿತಮಪ್ಯಾತ್ಮತ್ವ-ವಿಶೇಷಣಂ ಸೂತ್ರೇನ ಕೃತಮ್' ನಿರತಿಶಯವಾದ ಸುಖವನ್ನು ವರ್ಣಿಸಲು ಹೊರಟಿರುವ 'ಭೂಮಾ' ಎಂಬ ಪದವು ಆತ್ಮವಿಷಯಕವಾಗಿದೆ. ಈ ವಿಷಯವೂ ಅತ್ಯಂತ ಸ್ಪಷ್ಟವಾದ್ದರಿಂದ ಆತ್ಮತ್ವವಿಶೇಷಣವು ಹೇತುವಿನಲ್ಲಿ ಆಪೇಕ್ಷಿತವಾಗಿದ್ದರೂ ಸೂತ್ರಕಾರರು ಪ್ರತ್ಯೇಕವಾಗಿ ನಿರ್ದೇಶಿಸಿಲ್ಲ ಎಂದು.

**प्रकाशः** – तन्न । अधिकत्वस्यापि स्पष्टत्वेनावाच्यत्वापातात् । भूमोपदेशस्यात्मविषयत्वाय निरतिशयसुखत्वस्य हेतुत्वेनावश्यकत्वेऽस्मन्मतरीत्या 'सम्प्रसादात्' इत्यस्यैव तदर्थत्वस्य न्याय्यत्वेन तेनात्मत्वं प्रसाध्याधिकात्मत्वेनोपदेशादित्याद्युक्तेः क्लिष्टत्वात् ।

ಇದು ತಪ್ಪು. ಅಧಿಕತ್ವವೂ ಸಹ ಸ್ಪಷ್ಟವಾಗಿಯೇ ತಿಳಿಯುವುದರಿಂದ 'ಅಧ್ಯುಪದೇಶಾತ್' ಎಂಬುದೂ ಸಹ ಹೇಳಿದ್ದು ನಿಮ್ಮ ಪ್ರಕಾರ ವ್ಯರ್ಥವಾಗುತ್ತದೆ. ಭೂಮೋಪದೇಶವು ಆತ್ಮವಿಷಯವಾಗಿದೆಯೆಂದು ಸಾಧಿಸುವುದಕ್ಕಾಗಿ ನಿರತಿಶಯಸುಖತ್ವವನ್ನು ಹೇತುವೆಂದು ನೀವು ಅವಶ್ಯವಾಗಿ ಹೇಳುತ್ತೀರಿ. ಈ ವಿವಕ್ಷೆಯಿದ್ದಲ್ಲಿ ನಮ್ಮ ಮತದ ಪ್ರಕಾರ 'ಸಂಪ್ರಸಾದಾತ್' ಎಂಬುದನ್ನೇ ಪ್ರತ್ಯೇಕ ಹೇತುವೆಂದು ಹೇಳುವುದು ಸುಲಭ. ಹೊರತಾಗಿ 'ಸಂಪ್ರಸಾದದಿಂದ ಆತ್ಮತ್ವವನ್ನು ಸಾಧಿಸಿ ಅದರಿಂದ ಅಧಿಕ ಆತ್ಮತ್ವದ ಉಪದೇಶವು ಇರುತ್ತದೆಂದು ಹೇಳುವುದು ಅತ್ಯಂತ ಕ್ಲಿಷ್ಟಕರ. ಅಂದರೆ 'ಸಂಪ್ರಸಾದಾತ್' ಮತ್ತು 'ಅಧ್ಯುಪದೇಶಾತ್' ಎಂಬುದು ಬೇರೆ ಬೇರೆ ಹೇತುಗಳೆಂದೇ ಹೇಳಬೇಕು. 'ಸಂಪ್ರಸಾದಾತ್ ಅಧ್ಯುಪದೇಶಾತ್' ಎಂಬುದು ಒಂದೇ ಹೇತುವೆಂದು ಹೇಳುವುದು ತಪ್ಪಾಗುತ್ತದೆಂದು ಅಭಿಪ್ರಾಯ.

**प्रकाशः** – ''भूमा नारायणाख्यस्स्यात्स एवाहं कृतिस्स्मृतः'' इत्यादिस्मृतिविरोधात् भूमा शिव इति सिद्धान्तस्यानुत्थानाच्चेति । **स्पष्ट इति ।।** उपन्यासमुखेन विवृत इत्यर्थः ।। छ ।।

**।। इति श्रीमत्सर्वतन्त्रस्वतन्त्रसुधीन्द्रतीर्थगुरुपादशिष्यराघवेन्द्रयतिकृते चन्द्रिकाप्रकाशे भूमाधिकरणं सम्पूर्णम् ।।**

ಪರಿಪೂರ್ಣಚಂದ್ರಿಕಾ

'ಭೂಮಾ ನಾರಾಯಣಾಖ್ಯಃ ಸ್ಯಾತ್ ಸ ಏವಾಹಂ ಕೃತಿ ಸ್ಮೃತಃ' ಇವೇ ಮೊದಲಾದ ಸ್ಮೃತಿಗಳ ವಿರೋಧವಿರುವುದರಿಂದ ಭೂಮನೇ ಶಿವನಾಗಿದ್ದಾನೆಂಬ ನಿಮ್ಮ ಸಿದ್ಧಾಂತವೇ ಹುಟ್ಟಲು ಸಾಧ್ಯವಿಲ್ಲ. 'ಸ್ಪಷ್ಟ' ಎಂದು ಗ್ರಂಥದಲ್ಲಿ ಹೇಳಿದ್ದಾರೆ. ಅಂದರೆ ಟೀಕೆಯ ಅನೇಕ ಕಠಿಣಪದಗಳ ಅರ್ಥವನ್ನು ಉಪನ್ಯಾಸ ಮುಖದಲ್ಲಿಯೇ ವಿವರಿಸಿದ್ದಾಗಿದೆ ಎಂದರ್ಥ.

ಇಲ್ಲಿಗೆ ಶ್ರೀರಾಘವೇಂದ್ರತೀರ್ಥ ಪೂಜ್ಯಯತಿಗಳಿಂದ ರಚಿತವಾದ ಭೂಮಾಧಿಕರಣದ
ಪ್ರಕಾಶ ಟಿಪ್ಪಣಿಯ ಕನ್ನಡಾನುವಾದವು ಸಮಾಪ್ತವಾಯಿತು.

**गुरुराजीयम्** – नन्वेवं प्रसादशब्दस्य सुखपरत्वे सम्प्रसादोऽस्माच्छरीरादिति श्रुतावपि सुखपरत्वं स्यात् । यदि च तत्र जीवपरत्वं तर्हि सम्प्रसादादिति सूत्रस्थप्रसादशब्दस्यापि जीवपरत्वमिति समानमित्यत आह – **सम्प्रसाद इति** ।। अल्पत्वं सुखविषयं तच्च तत्सुखं च तद्युक्तो जीव इति वदता दुःखबाहुल्यवज्जीवपरत्वं सम्प्रसादशब्दस्य न सम्भवति । नहि गङ्गायां घोष इत्यत्र गङ्गाशब्दस्तीरपर इत्येतावता गङ्गायां मत्स्य इत्यत्रापि तत्परो भवति । तदिह 'सम्प्रसादोऽस्माच्छरीरात्' इत्यत्र बाधकसद्भावेन सम्प्रसादशब्दस्य जीवपरत्वेऽप्यन्यत्र न तत्परत्वम् । अन्यथाऽतिप्रसङ्गः स्यादिति भावः ।।

।। इति श्रीकेशवभट्टारकेण विरचितायां भावदीपिकायां
भूमाधिकरणं सम्पूर्णम् ।। २ ।।



ರಾಮಾನುಜರ ಭೂಮಾಧಿಕರಣ ಹೀಗಿದೆ - ಪ್ರಕರಣದಲ್ಲಿರುವ 'ಭೂಮಾ' ಎಂಬ ಶಬ್ದವು ಲಕ್ಷಣಾ ವೃತ್ತಿಯಿಂದ ಜೀವನನ್ನೇ ಪ್ರತಿಪಾದಿಸುತ್ತದೆ. ಕಾರಣವೇನೆಂದರೆ ಪ್ರಾಣಶಬ್ದವು ಜಡವಾಯುವನ್ನು ಪ್ರತಿಪಾದಿಸಲು ಪ್ರಕರಣದಲ್ಲಿ ಹೇಳಲ್ಪಟ್ಟ ಪಿತೃತ್ವ, ಹಿಂಸ್ಯತ್ವ ಮೊದಲಾದ ಬಾಧಕಗಳಿವೆ. ಆದ್ದರಿಂದ ಚೇತನನ್ನೇ ಪ್ರತಿಪಾದಿಸಬೇಕು. ಪ್ರಾಣಶಬ್ದದ ಸಾಹಚರ್ಯವಿರುವ ಪ್ರಯುಕ್ತ ಜೀವಾತ್ಮನೇ ಪ್ರಾಣನಾಗುತ್ತಾನೆ. ಮೋಕ್ಷವನ್ನು ಹೊಂದಿದ ನಂತರ ಪೂರ್ಣಸುಖಸ್ವರೂಪನಾಗುವುದರಿಂದ 'ಭೂಮಾ ತತ್ಸುಖಮ್' ಪೂರ್ಣಸುಖಸ್ವರೂಪನಾದ ಭೂಮನೆಂದರೆ ಜೀವಾತ್ಮನೇ ಆಗುತ್ತಾನೆಂಬುದು ಯುಕ್ತವಾಗಿದೆ. ಇಷ್ಟು ಪೂರ್ವಪಕ್ಷ.

ಜೀವನಿಗಿಂತ ಬ್ರಹ್ಮತತ್ವವು ಉತ್ತಮವೆಂದು 'ಸತ್ಯ' ಶಬ್ದದಿಂದ ತಿಳಿಯುತ್ತಿದೆ. ಮತ್ತು ಪ್ರಾಣಜ್ಞಾನಿಯನ್ನು ಅತಿವಾದಿಯೆಂದು ಸತ್ಯನನ್ನು ತಿಳಿದವನು ಅತಿಶಯವಾದ ಅತಿವಾದಿಯೆಂದು ಶ್ರುತಿಯು ಉಪಾಸಕನ ಭೇದವನ್ನು ಹೇಳುತ್ತಿದೆ. ಆದ್ದರಿಂದಲೇ ಪ್ರಾಣನೇ ಬೇರೆ, ಭೂಮನೇ ಬೇರೆ ಎಂಬ ವಿಷಯವು ಸ್ಪಷ್ಟವಾಗುತ್ತದೆ. 'ಸತ್ಯಂ ಜ್ಞಾನ ಅನಂತಂ ಬ್ರಹ್ಮ' ಎಂಬ ಶ್ರುತಿಯ ಆಧಾರದಿಂದ ಸತ್ಯ ಶಬ್ದದ ಪ್ರತಿಪಾದ್ಯನು ಬ್ರಹ್ಮನೇ ಆಗುತ್ತಾನೆ. ಇಷ್ಟು ಸಿದ್ಧಾಂತ.

ರಾಮಾನುಜರ ಈ ಅಧಿಕರಣ ಶರೀರವು ಅಯುಕ್ತವಾಗಿದೆ. ಏಕೆಂದರೆ ಅವರಪೂರ್ವಪಕ್ಷವು ಸಮಂಜಸವಾಗಿದ್ದಲ್ಲಿ ಸಿದ್ಧಾಂತವು ಸರಿಯೆನ್ನಬಹುದಿತ್ತು. ಆದರೆ ಪೂರ್ವಪಕ್ಷವೇ ಸರಿಯಿಲ್ಲ. ಪ್ರಾಣಶಬ್ದಕ್ಕೆ ಅಭಿಮಾನಿ ಚೇತನವೆಂದು ಅರ್ಥೈಸಿದರೂ ಸಹ ಪಿತೃತ್ವ ಹಿಂಸತ್ವ ಮೊದಲಾದ ಧರ್ಮಗಳನ್ನು ಕೂಡಿಸಬಹುದು. ಪಿತೃತ್ವಾದಿ ಬಾಧಕಗಳಿರುವುದರಿಂದ ಜೀವನಲ್ಲಿ ಲಕ್ಷಣಾ ಮಾಡುವುದು ಅನಿವಾರ್ಯವೆಂಬ ಅವರ ವಿಚಾರದಲ್ಲಿ ಅರ್ಥವೇ ಇಲ್ಲ. ಮತ್ತು ತಂದೆ, ತಾಯಿ, ಆಚಾರ್ಯ ಮೊದಲಾದ ಜೀವರ ಪ್ರಾಣವು ಉತ್ಕ್ರಾಂತವಾಗುತ್ತದೆಂದು ಶ್ರುತಿಯು ಹೇಳುತ್ತಿದೆ. ಪ್ರಾಣನೇ ಜೀವನಾದರೆ, ಜೀವನ ದೆಸೆಯಿಂದ ಜೀವನು ಉತ್ಕ್ರಾಂತನಾಗುತ್ತಾನೆ ಎಂದು ಹೇಳಿದಂತಾಗುತ್ತದೆ. ಇದು ತಪ್ಪಲ್ಲವೇ? ಪ್ರಾಣೋತ್ಕ್ರಮಣವು ಪ್ರಸಿದ್ಧವಾಗಿದೆ ಹೊರತು, ಜೀವೋತ್ಕ್ರಮಣವು ಪ್ರಸಿದ್ಧವಾಗಿಲ್ಲ. ಆದ್ದರಿಂದ ಸೂತ್ರದಲ್ಲಿರುವ 'ಸಂಪ್ರಸಾದ' ಶಬ್ದವು ಜೀವನನ್ನು ಪ್ರತಿಪಾದಿಸುವುದಿಲ್ಲ. ಪ್ರಾಣನನ್ನೇ ಪ್ರತಿಪಾದಿಸುತ್ತದೆ. ಜೀವನನ್ನು ಪ್ರತಿಪಾದಿಸುತ್ತದೆಂಬ ಪೂರ್ವಪಕ್ಷವು ಅಯುಕ್ತವಾಗಿದೆಯೆಂದು ತಿಳಿಯಬೇಕು.



# ಭೂಮಾಧಿಕರಣ
(೧-೩-೨)

## ಭಾಗ -೩

ನ್ಯಾಯವಿವರಣ, ನ್ಯಾಯವಿವರಣಪಂಚಿಕಾ,
ಅಣುಭಾಷ್ಯ, ತತ್ವಮಂಜರೀ,
ತಂತ್ರದೀಪಿಕಾ, ನ್ಯಾಯಮುಕ್ತಾವಳಿ ಗ್ರಂಥಗಳ
ಸರಳ ಕನ್ನಡ ಅನುವಾದ

* * *

ಸೂತ್ರಾರ್ಥರತ್ನಾವಳಿ ಗ್ರಂಥದ ಸಂಸ್ಕೃತ ಮೂಲ

॥ ಶ್ರೀಗುರುಭ್ಯೋ ನಮಃ ॥

श्रीमदानन्दतीर्थभगवत्पादाचार्यविरचितम्

# न्यायविवरणम्

श्री जयतीर्थविरचिता

# न्यायविवरणपञ्चिका

## भूमाधिकरणम् (१।३।२)

**न्यायविवरणम् –**

**'प्राणो वा आशाया भूयान् विष्णोर्वै देवेभ्यो भूयांस्तस्माद् भूयान्नाम' इत्यादेर्भूमशब्दोऽज्ञानां साधारणः ॥२॥**

ಮುಖ್ಯಪ್ರಾಣನು ಆಶಾ ಎಂಬ ಭಾರತೀದೇವಿಗಿಂತ ಉತ್ತಮನಾಗಿದ್ದಾನೆ ಎಂದು ಪ್ರಾರಂಭದಲ್ಲಿ ಹೇಳಿರುವ ಕಾರಣ ಮುಖ್ಯಪ್ರಾಣನೇ ಭೂಮಾ ಎನಿಸಿದ್ದಾನೆಂದು ಪ್ರಶ್ನೆ ಬರುತ್ತದೆ. ಆದರೆ ಸಕಲದೇವತೆಗಳಿಗಿಂತ ಶ್ರೇಷ್ಠನಾದ ವಿಷ್ಣುವೇ ಭೂಯಾನ್ ಎನಿಸುತ್ತಾನೆ. 'ಪೂರ್ಣಮದಃ ಪೂರ್ಣಮಿದಂ' ಮೊದಲಾದ ಬೇರೆ ಶ್ರುತಿಗಳ ಸಮಾಖ್ಯೆಯಿಂದ ಇವು ವಿಷ್ಣುವಿಷಯಕವೆಂದು ತಿಳಿಯುತ್ತದೆ. ಭೂಮಾ ಎಂಬ ಶಬ್ದವು ಅಜ್ಞಾನಿಗಳ ಪ್ರಕಾರ ಪ್ರಾಣ ಹಾಗೂ ವಿಷ್ಣು ಇಬ್ಬರಲ್ಲಿಯೂ ಸಾಧಾರಣವಾಗಿದೆ.

टीका – 'शब्दौ' (अनु.व्या.) इत्यनेन द्वितीयतृतीययोरधिकरणयोर्नामात्मकौ साधारणौ शब्दौ विचार्यावित्युक्तम् । लिङ्गमिति पृथगुक्तम् । तेन शब्दस्य नामविषयत्वात् । 'साधारणम्' इत्यस्य च यथान्वयं विपरिणामेन सर्वत्रानुवृत्तेः । अनुवृत्तिज्ञापनार्थमेवान्तेऽपि 'द्विःस्थिता' इत्याह । 'द्वि' इत्यनेकोपलक्षणम् । 'विचार्या' इत्येतदपि यथान्वयं विपरिणम्यते । एवं स्थिते 'भूमा सम्प्रसादादध्युपदेशाद्' इत्यत्र तावत् पूर्ववच्छङ्काचतुष्टयनिरासार्थमाह – प्राणो वा इति ।। 'प्राणो वा आशाया भूयान्' इत्यादिश्रुत्यन्तरसमाख्यानाद् विष्णुविषयताप्रतीतेश्च भूमशब्दोऽज्ञानां तयोः साधारणो विचार्यः । ननु भूमशब्दो भाववाची । तत्कथं धर्मिणो शङ्क्यते । कथं च

भूयान् इत्यनेन समानार्थः । कथं च नामात्मकः । मैवम् । 'यो वै भूमा तत्सुखम्' इत्याद्युत्तरवाक्यपर्यालोचनया भावभवित्रोरभेदाभिप्रायेण भवितृविषयतावगमात् । आ सन्नस्योपक्रमस्यानासन्नायाः समाख्यायाश्च कथं साधारण्यप्रतीतिहेतुत्वमिति चेन्न, 'अज्ञानाम्' इत्युक्तत्वात् ।

'ಪ್ರಾಣೋ ವಾ ಆಶಾಯಾ ಭೂಯಾನ್' ಹೇಳಲ್ಪಟ್ಟ ಭೂಮನು ಉಪಕ್ರಮ ಹಾಗೂ ಮುಖ್ಯವಾಯುವೋ ಅಥವಾ ವಿಷ್ಣುವೋ ಎಂದು ಸಂದೇಹ ಬರುತ್ತದೆ. ಮುಖ್ಯಪ್ರಾಣನೇ ಭೂಮನೆಂದು ಪೂರ್ವಪಕ್ಷ. ವಿಷ್ಣುವೆಂದು ಸಿದ್ಧಾಂತ. ಅನುಕ್ತಿ ಎಂಬುದು ಪೂರ್ವಪಕ್ಷ ನ್ಯಾಯ. ಅದನ್ನು ಪ್ರಾಣೋ ವಾ ಇತ್ಯಾದಿವಾಕ್ಯವು ವಿವರಿಸುತ್ತಿದೆ. ಪ್ರಾಣನಿಗಿಂತ ಶ್ರೇಷ್ಠನಾಗಿದ್ದಾನೆಂದು ಹೇಳದಿರುವಿಕೆಯು ಪ್ರಾಣನಿಗೆ ಭೂಮತ್ವವನ್ನು ಸಾಧಿಸುತ್ತಿದೆ. ಪ್ರಾಣನಿಗಿಂತ ಉತ್ತಮನಾದವನು ಯಾವನಾದರೂ ಒಬ್ಬನು ಇರುತ್ತಾನೆ. ಆದರೂ ಸಹ ಅವನನ್ನು ಉಲ್ಲೇಖಿಸಲೇಬೇಕೆಂಬ ನಿಯಮವಿರುವುದಿಲ್ಲವಲ್ಲವೇ? ಎಂಬ ಪ್ರಶ್ನೆಗೆ 'ಪ್ರಾಣೋ ವಾ ಆಶಾಯಾ ಭೂಯಾನ್ ಇತ್ಯುಕ್ತ್ವಾ'' ಇತ್ಯಾದಿ ವಾಕ್ಯಗಳಿಂದ ಉತ್ತರಿಸುತ್ತಿದ್ದಾರೆ. ಆದ್ದರಿಂದ ನಾಮಾಭಿಮಾನಿ ವಾಗಭಿಮಾನಿ ಮೊದಲಾದ ದೇವತೆಗಳ ತಾರತಮ್ಯವನ್ನು 'ಆಶಾ' ಎಂಬ ಭಾರತೀದೇವಿಯ ತನಕ ಹೇಳಿ 'ಪ್ರಾಣೋ ವಾ ಆಶಾಯಾ ಭೂಯಾನ್' ಆಶಾದೇವಿಗಿಂತಲೂ ಪ್ರಾಣನೇ ಶ್ರೇಷ್ಠನು ಎಂದು ಹೇಳಲಾಗಿದೆ. ಅನಂತರ ಪ್ರಾಣನಿಗಿಂತ ಉತ್ತಮನಾದವನು ಮತ್ತೊಬ್ಬನಿದ್ದಾನೆಂದು ಹೇಳಿರುವುದಿಲ್ಲ. ಆದ್ದರಿಂದ ಶ್ರುತಿಯಲ್ಲಿ ಪ್ರತಿಪಾದ್ಯನಾದ ಭೂಮನು ಮುಖ್ಯಪ್ರಾಣನೇ ಆಗುತ್ತಾನೆ. ಹೀಗೆ 'ಅನುಕ್ತಿಃ' ಎಂಬುದು ಪೂರ್ವಪಕ್ಷನ್ಯಾಯವೆಂದು ತಿಳಿಯಬೇಕು.

.ಶ್ರೀಜಯತೀರ್ಥಭಿಕ್ಷುಗಳಿಂದ ರಚಿತವಾದ ನ್ಯಾಯವಿವರಣೆಯ ಟೀಕೆಯಲ್ಲಿ

ಕನ್ನಡಾನುವಾದದಲ್ಲಿ ಭೂಮಾಧಿಕರಣವು ಸಮಾಪ್ತವಾಯಿತು.

॥ ಶ್ರೀಕೃಷ್ಣಾರ್ಪಣಮಸ್ತು ॥

श्रीमदानन्दतीर्थभगवत्पादाचार्यविरचितम्

# अणुभाष्यम्

## भूमाधिकरणम् (१।३।२)

**पूर्णगुणः**

ಅಣುಭಾಷ್ಯ - ಪೂರ್ಣವಾದ ಸುಖಸ್ವರೂಪವುಳ್ಳ ಪರಮಾತ್ಮನೇ ಭೂಮನು.

***

श्री आनन्दतीर्थभगवत्पादाचार्यविरचितम्

ब्रह्मसूत्राणुभाष्यम्

श्रीराघवेन्द्रतीर्थविरचिता

ब्रह्मसूत्राणुभाष्यविवृतिः

# तत्वमञ्जरी

## भूमाधिकरणम् (१।३।२)

१०३. नन्वथापि पूर्णानन्दो विष्णुरित्ययुक्तम् । छान्दोग्ये सप्तमे यो वै भूमा तत्सुखम्' इति भूमशब्दितस्य निरुपपदसुखपदेन पूर्णसुखत्वोक्तेः । भूम्नश्च 'प्राणो वा आशाया भूयान्' इत्युपक्रमेण 'उत्क्रान्तप्राणान्' इतीश्वरे व्याप्तेरनुपपन्नोत्क्रमण-लिङ्गयुक्तप्राणशब्दि-तमुख्यवातुतदवादितदयतः प्राप्तं 'भूमासंप्रसादात्' इत्यादि-सूत्रद्वयम् ।

ಆನಂದಮಯಾಧಿಕರಣದಲ್ಲಿ ಪೂರ್ಣವಾದ ಆನಂದವುಳ್ಳವನು ವಿಷ್ಣುವೇ ಆಗಿದ್ದಾನೆಂದು ಸಮರ್ಥಿಸಲಾಯಿತು. ಇದು ಸರಿಯಲ್ಲ. ಏಕೆಂದರೆ, ಛಾಂದೋಗ್ಯದ ಏಳನೆಯ ಅಧ್ಯಾಯದಲ್ಲಿ 'ಯೋ ವೈ ಭೂಮಾ ತತ್ಸುಖಮ್' ಎಂಬ ಶ್ರುತಿಯಲ್ಲಿ 'ಭೂಮಾ' ಎಂಬ ಶಬ್ದಕ್ಕೆ ಪೂರ್ಣಸುಖವುಳ್ಳವನೆಂಬರ್ಥವನ್ನು ಹೇಳಲಾಗಿದೆ. ನಿರುಪಪದವಾದ ಸುಖಶಬ್ದವು ಪೂರ್ಣಸುಖವನ್ನೇ ಹೇಳುತ್ತದಾದ್ದರಿಂದ ಇಂತಹ ಭೂಮನು ಮುಖ್ಯಪ್ರಾಣನೇ ಆಗಿದ್ದಾನೆ. ಏಕೆಂದರೆ 'ಪ್ರಾಣೋ ವಾ ಆಶಾಯಾ ಭೂಯಾನ್' ಆಶಾ ನಾಮಕಳಾದ ಭಾರತೀದೇವಿಗಿಂತಲೂ ಪ್ರಾಣನು ಅಧಿಕನಾಗಿದ್ದಾನೆಂದು ಪ್ರಾರಂಭದಲ್ಲಿ ಹೇಳಲಾಗಿದೆ. ಮತ್ತು 'ಉತ್ಕ್ರಾಂತಪ್ರಾಣಾನ್' ಎಂಬಲ್ಲಿ ಉತ್ಕ್ರಮಣವೆಂಬ ಲಿಂಗವನ್ನು ಹೇಳಲಾಗಿದೆ. ವ್ಯಾಪ್ತನಾದ ಈಶ್ವರನಲ್ಲಿ ಉತ್ಕ್ರಮಣವು ಉಪಪನ್ನವಾಗುವುದಿಲ್ಲ. ಆದ್ದರಿಂದ ಪ್ರಾಣಶಬ್ದದಿಂದ ಮುಖ್ಯಪ್ರಾಣನೇ ಪ್ರತಿಪಾದ್ಯನಾದ್ದರಿಂದ ಭೂಮನೂ ಸಹ ಅವನೇ ಆಗುತ್ತಾನೆ. ಇಷ್ಟು ಪೂರ್ವಪಕ್ಷ. ಇದನ್ನು ನಿರಾಕರಿಸುವುದಕ್ಕಾಗಿ 'ಭೂಮಾ ಸಂಪ್ರಸಾದಾತ್' 'ಧರ್ಮೋಪಪತ್ತೇಶ್ಚ' ಎಂಬೆರಡು ಸೂತ್ರಗಳು ಹೊರಟಿವೆ.

१०४. तदर्थः – **पूर्णगुण इति** । पूर्ववदनुषङ्गः । 'यो वै भूमा' इति भूमशब्दोक्तः पूर्णगुणः स प्राक् पूर्णानन्दत्वेनोक्तः स एको जनार्दनः ।

ಭೂಮಾಧಿಕರಣದ ಸಾರವನ್ನು 'ಪೂರ್ಣಗುಣಃ' ಎಂಬ ಮಾತಿನಲ್ಲಿ ಸಂಗ್ರಹಿಸಿದ್ದಾರೆ. ಇಲ್ಲಿಯೂ ಸಹ ಹಿಂದಿನ ಅಧಿಕರಣದಂತೆ ಅನುಷಂಗ ಮಾಡಬೇಕು. 'ಯೋ ವೈ ಭೂಮಾ' ಎಂಬ ಶ್ರುತಿಯಲ್ಲಿ ಕೇಳಿಸುತ್ತಿರುವ 'ಭೂಮಾ' ಎಂಬ ಶಬ್ದವು ಪೂರ್ಣಗುಣವುಳ್ಳವನೆಂಬರ್ಥವನ್ನು ಹೇಳುತ್ತದೆ. ಹಿಂದೆ ಜನಾರ್ದನನೇ ಪೂರ್ಣಗುಣವುಳ್ಳವನೆಂದು ಹೇಳಿದ್ದರಿಂದ ಅವನೇ 'ಭೂಮಾ' ಎಂಬ ಶಬ್ದದಿಂದಲೂ ಪ್ರತಿಪಾದ್ಯನಾಗುತ್ತಾನೆ.

तस्मात् प्राणोपक्रमणेन 'विष्णुर्वा व देवेभ्यो भूयान्' इति समाख्यया च तत्रान्यत्र च वाचकत्वेन प्रतीतैः भूमसुखप्राणात्मादिसर्वशब्दैः मुख्यतो जनार्दन एव वाच्यो न तु मुख्यप्राणः ।

ಆದ್ದರಿಂದ ಉಪಕ್ರಮದಲ್ಲಿ ಪ್ರಾಣನನ್ನು ಹೇಳಿದ್ದರೂ 'ವಿಷ್ಣುರ್ವಾವ ದೇವೇಭ್ಯೋ ಭೂಯಾನ್' ಎಂಬ ಸಮಾಖ್ಯಾಪ್ರಮಾಣದಿಂದ ಎರಡು ಕಡೆ ಸಾಧಾರಣವಾದ 'ಭೂಮಾ' ಎಂಬ ಶಬ್ದವು ಮತ್ತು 'ಸುಖ' 'ಪ್ರಾಣ' 'ಆತ್ಮಾ' ಮೊದಲಾದ ಶಬ್ದಗಳು ಪರಮಮುಖ್ಯವೃತ್ತಿಯಿಂದ ಜನಾರ್ದನನನ್ನೇ ಪ್ರತಿಪಾದಿಸುತ್ತವೆ ಹೊರತು ಮುಖ್ಯಪ್ರಾಣನಲ್ಲ.

१०५. कुतः । पूर्णगुणो विष्णु लिङ्गैः सर्वैर्युतो हि । 'तत्सुखं' इत्युक्तपूर्णसुखत्व - सर्वोत्तमत्व -स एवाधस्तादित्यादिनोक्तसर्वगतत्वादिलिङ्गैर्युतत्वात् । तेषां भाष्योक्तवाक्यैर्हरौ प्रसिद्धत्वादित्यर्थः ।

ಏಕೆಂದರೆ, ಪೂರ್ಣಗುಣಸ್ವರೂಪನಾದ ವಿಷ್ಣುವು 'ಸರ್ವೋತ್ತಮತ್ವ', 'ಸ್ವೇ ಮಹಿಮ್ನಿ ಪ್ರತಿಷ್ಠಿತತ್ವ' ಮೊದಲಾದ ಲಿಂಗಗಳಿಂದ ಯುಕ್ತನಾಗಿದ್ದಾನೆ. 'ತತ್ಸುಖಮ್' ಎಂಬಲ್ಲಿ ಕೇಳಿಸುತ್ತಿರುವ 'ಪೂರ್ಣಸುಖತ್ವ' ಹಾಗೂ ಸರ್ವೋತ್ತಮತ್ವ 'ಸ ಏವಾಧಸ್ತಾತ್' ಇತ್ಯಾದಿ ವಾಕ್ಯಗಳಿಂದ ಕೇಳಿಸುತ್ತಿರುವ ಸರ್ವಗತತ್ವ ಮೊದಲಾದ ಲಿಂಗಗಳೆಲ್ಲವೂ ವಿಷ್ಣುವಿನಲ್ಲೇ ಉಪಪನ್ನವಾಗುತ್ತವೆ. ಭಾಷ್ಯದಲ್ಲಿ ಉದಾಹರಿಸಿದ ಅನೇಕ ವಾಕ್ಯಗಳಿಂದ ಈ ಎಲ್ಲ ಲಿಂಗಗಳೂ ವಿಷ್ಣುವಿನಲ್ಲೇ ಪ್ರಸಿದ್ಧವಾಗಿವೆ.

**१०६. न च प्राणलिङ्गविरोध इत्यतोऽपि – लिङ्गैः सर्वैर्युतो हीति । 'तमुत्क्रामन्तं प्राणोऽनूत्क्रामति' इत्यादौ उत्क्रमणलिङ्गयुतो जनार्दनः प्रसिद्ध इत्यर्थः । प्राणपदेन तदन्तर्यामिरूपस्यैव गृहीतेः । प्राणलिङ्गानां उत्क्रमणादीनां व्यक्त्यात्मना स्थिताणुरूविशेषे युक्तत्वादिति भावः ।**

'ತಮುತ್ಕ್ರಾಮಂತಂ ಪ್ರಾಣೋ ಅನುಕ್ರಾಮತಿ' ಎಂಬುದಾಗಿ ಪ್ರಾರಂಭದಲ್ಲಿ ಮುಖ್ಯಪ್ರಾಣನ ಲಿಂಗವು ಕೇಳಿಸುತ್ತಿರುವುದರಿಂದ ಅದರ ವಿರೋಧವು ಬರುತ್ತದಲ್ಲವೇ ? ಎಂಬ ಪ್ರಶ್ನೆಗೆ 'ಲಿಂಗೈಸ್ಸರ್ವೈರ್ಯುತೋ ಹಿ' ಎಂಬುದರಿಂದಲೇ ಉತ್ತರವನ್ನು ತಿಳಿಯಬೇಕು. 'ತಮುತ್ಕ್ರಾಮಂತಂ ಪ್ರಾಣೋಽನುಕ್ರಾಮತಿ' ಎಂಬ ಪ್ರಾರಂಭದ ವಾಕ್ಯದಲ್ಲಿ ಕೇಳಿಸುತ್ತಿರುವ ಉತ್ಕ್ರಮಣಲಿಂಗವೂ ಸಹ ಜನಾರ್ದನನಲ್ಲೇ ಪ್ರಸಿದ್ಧವಾಗಿದೆ. ಪ್ರಾಣಪದದಿಂದ ಮುಖ್ಯಪ್ರಾಣ ಹಾಗೂ ವಿಷ್ಣು ಇಬ್ಬರೂ ಪ್ರತಿಪಾದ್ಯರಾದರೂ ಸಹ ಅಂತರ್ಯಾಮಿ ವಿವಕ್ಷೆಯಿಂದ ವಿರೋಧವಿರುವುದಿಲ್ಲ. ಅಂದರೆ ಎಲ್ಲೆಡೆ ವ್ಯಾಪ್ತನಾಗಿದ್ದರೂ ಅನೇಕ ರೂಪಗಳಿರುವುದರಿಂದ ಪ್ರಾಣ ಎಂಬ ಅಂತರ್ಯಾಮಿ ರೂಪದಿಂದ ದೇಹದಿಂದ ನಿರ್ಗಮಿಸುತ್ತಾನೆಂದು ತಿಳಿಯಬೇಕು. ಮುಖ್ಯಪ್ರಾಣನ ಲಿಂಗವೆನಿಸಿದ ಉತ್ಕ್ರಮಣಾದಿಗಳನ್ನು ದೇಹದಲ್ಲಿರುವ ಭಗವಂತನ ಅಣುರೂಪದ ವಿವಕ್ಷೆಯಿಂದ ವ್ಯಕ್ತ್ಯಾತ್ಮನಾ ಯುಕ್ತವಾಗುತ್ತದೆಂದು ತಿಳಿಯಬೇಕು.

**१०५. भू बहाविति धातोः बहुः पूर्णतायामिति चेति छान्दोग्य भाष्यदिशा भूमशब्दः पूर्मगुणवाची ध्येयः । अत्र जनार्दन इत्युक्तिः मोचकत्वेनोक्तभूम्न उपासकतयोक्तप्राणत्वं न शंक्यमिति सूचनाय । एक इत्युक्तिरपि भूमसुखसत्यविज्ञानाद्य नेकशब्दैरेको गुणभेदेनोच्यते नत्वनेक इति वक्तुम् । सैव हीत्यतोऽयागतार्थत्वं अन्यतो ध्येयम् ।। २ ।।**

'ಭೂ ಬಹೌ' ಎಂಬ ಧಾತುವಿನಿಂದ 'ಭೂಮಾ' ಎಂಬ ಶಬ್ದವು ನಿಷ್ಪನ್ನವಾಗಿದೆ. 'ಬಹುಃ ಪೂರ್ಣತಾಯಾಮ್' ಎಂಬುದಾಗಿ ಛಾಂದೋಗ್ಯಭಾಷ್ಯದಲ್ಲಿ ಹೇಳಿದ ಪ್ರಕಾರ 'ಭೂಮಾ' ಎಂಬ ಶಬ್ದವು ಪೂರ್ಣಗುಣಸ್ವರೂಪನಾದ ಜನಾರ್ದನನನ್ನೇ ಪ್ರತಿಪಾದಿಸುತ್ತದೆಂದು ತಿಳಿಯಬೇಕು.

ಇಲ್ಲಿ 'ಜನಾರ್ದನ' ಎಂಬ ಶಬ್ದಪ್ರಯೋಗಕ್ಕೆ ಕಾರಣವಿದೆ.ಏಕೆಂದರೆ ಅರ್ದನ ಎಂಬ ಪದಕ್ಕೆ ಮೋಚಕನೆಂದರ್ಥ. ಮೋಚಕನೆಂದು ಹೇಳಲ್ಪಟ್ಟ ಭೂಮನನ್ನು, ಉಪಾಸಕನೆಂದು ಹೇಳಲ್ಪಟ್ಟ ಮುಖ್ಯಪ್ರಾಣನೆಂದು ಶಂಕಿಸಬಾರದು. ಅಂದರೆ ಉಪಾಸಕನಾದ ಮುಖ್ಯಪ್ರಾಣನು ಭೂಮಾ ಎಂಬ ಶಬ್ದದಿಂದ ವಾಚ್ಯನಾಗಲಾರನು. ಇದನ್ನು ಸೂಚಿಸುವುದಕ್ಕಾಗಿ 'ಜನಾರ್ದನಃ' ಎಂದು ಹೇಳಿದ್ದಾರೆ. ಏಕಃ ಎಂದು ಹೇಳಿರುವುದರಿಂದ ಭೂಮಾ, ಸುಖ, ಸತ್ಯ, ವಿಜ್ಞಾನ ಮೊದಲಾದ ಅನೇಕಶಬ್ದಗಳಿಂದ ಗುಣಭೇದದಿಂದ ಒಬ್ಬನೇ ಪ್ರತಿಪಾದ್ಯನಾಗಿದ್ದಾನೆ. ಹೊರತು ಅನೇಕರಲ್ಲ ಎಂದು ತಿಳಿಸಿದ್ದಾರೆ. 'ಹಿ' ಎಂದು ಹೇಳಿದ್ದರಿಂದ ಈ ಅಧಿಕರಣವು ಬೇರೆ ಅಧಿಕರಣದಿಂದ ಗತಾರ್ಥವಾಗಿಲ್ಲವೆಂದು ತಿಳಿಯುತ್ತದೆ.

ಶ್ರೀರಾಘವೇಂದ್ರತೀರ್ಥಶ್ರೀಪಾದಂಗಳವರಿಂದ ವಿರಚಿತವಾದ

ತತ್ವಮಂಜರಿಯ ಕನ್ನಡಾನುವಾದದಲ್ಲಿ ಭೂಮಾಧಿಕರಣವು ಮುಗಿಯಿತು.

***

।। श्रीजानकीवदनाम्भोजराजहंसाय रामचन्द्राय नमः ।।

।। श्री गुरुभ्यो नमः ।। हरिः ॐ ।।

श्री राघवेन्द्रतीर्थविरचिता

# तन्त्रदीपिका

## भूमाधिकरणम् (१।३।२)

।। ॐ भूमा सम्प्रसादादध्युपदेशात् ॐ ।। १-३-८ ।।

अत्र तादृश भूमनाम समन्वीयते । ''यो वृ भूमा तत्सुखम्'' इत्युक्तो भूमा ततु ब्रह्मैव । नतु प्राणः ।

ಈ ಅಧಿಕರಣದಲ್ಲಿ ಉಭಯತ್ರಪ್ರಸಿದ್ಧವಾದ 'ಭೂಮಾ' ಎಂಬ ನಾಮಾತ್ಮಕಶಬ್ದದ ಸಮನ್ವಯವನ್ನು ವಿಷ್ಣುವಿನಲ್ಲಿ ಮಾಡುತ್ತಿದ್ದಾರೆ. 'ಯೋ ವೈ ಭೂಮಾ ತತ್ಸುಖಮ್' ಎಂಬುದಾಗಿ ಛಾಂದೋಗ್ಯದಲ್ಲಿ ಹೇಳಲ್ಪಟ್ಟ ಭೂಮನು ವಿಷ್ಣುವೇ ಆಗಿದ್ದಾನೆ ಹೊರತು ಮುಖ್ಯಪ್ರಾಣನಲ್ಲ.

ಭೂಮಾಧಿಕರಣ (೧-೩-೨)

कुतः? सम्प्रसादात् सम्यक् प्रसीदत्यनेनेति सम्प्रसादः पूर्णसुखम् । ''तत्सुखम्'' इति पूर्णसुखत्वाभिधानात् । अध्युपदेशात्, अधि आधिकत्वेन नामादीनां सर्वेषामुपरि तदुत्तमत्वेन व्यपदेशाच्चेत्यग्रेतनश्चकारोऽत्रानुकृष्यते ।

ಸೂತ್ರಾರ್ಥ - ಏಕೆಂದರೆ 'ಸಂಪ್ರಸಾದಾತ್' 'ಚೆನ್ನಾಗಿ ಯಾವುದರಿಂದ ಪ್ರಸನ್ನನಾಗುತ್ತಾನೋ ಅದು 'ಸಂಪ್ರಸಾದ' ಎನಿಸುತ್ತದೆ. ಅಂದರೆ ಪೂರ್ಣಸುಖವೆಂದರ್ಥ. 'ತತ್ಸುಖಮ್' ಎಂಬಲ್ಲಿ ಪೂರ್ಣಸುಖವನ್ನು ಹೇಳಿರುವುದರಿಂದ. ಅಧ್ಯುಪದೇಶಾತ್ = ಅಧಿ ಅಧಿಕವೆಂದು, ನಾಮಾಭಿಮಾನಿ ಮೊದಲಾದವರಿಗಿಂತ ಉತ್ತಮನೆಂದು ಉಪದೇಶಿಸಿರುವುದರಿಂದಲೂ ಭೂಮಾ = ವಿಷ್ಣುವೇ ಭೂಮನಾಗಿದ್ದಾನೆ. ಮುಂದಿನ ಸೂತ್ರದಲ್ಲಿರುವ ಚಶಬ್ದವನ್ನು ಇಲ್ಲಿ ಅನ್ವಯ ಮಾಡಬೇಕು.

अत्र भूमेति पुंनिर्देशः प्राग्वत् । सम्बन्धभूमेत्यस्य भावार्थत्वेऽपीह भावभवित्रोरभेदात्पूर्णरूपभवित्रर्थत्वं बोध्यम् ।

ಇಲ್ಲಿ 'ಭೂಮಾ' ಎಂಬುದು ಪುಲ್ಲಿಂಗಶಬ್ದವಾಗಿದೆ. ವಾಸ್ತವಿಕವಾಗಿ 'ಭೂಮಾ' ಎಂಬ ಶಬ್ದವು 'ಸಂಬಂಧಭೂಮಾ' ಎಂಬ ಸೂತ್ರದಲ್ಲಿ ಹೇಳಿದಂತೆ ಧರ್ಮಾರ್ಥಕವೇ ಆಗಿದೆ. ಆದರೂ ಸಹ ಧರ್ಮ, ಹಾಗೂ ಧರ್ಮಿಗಳಿಗೆ ಅಭೇದವಿರುವ ಪ್ರಯುಕ್ತ ಪ್ರಕೃತ ಪೂರ್ಣ ಎಂಬ ಧರ್ಮ್ಯರ್ಥವನ್ನೇ ವಿವಕ್ಷಿಸಬೇಕೆಂದು ತಿಳಿಯಬೇಕು.

पूर्णसुखत्वादिति वाच्ये सम्प्रसादादिति यौगिकोक्तिरीशस्य सुखित्वे दुःखित्वं स्यादिति न शङ्क्यम् । पूर्णसुखकार्येण प्रसादेन दुःखाभावनिश्चयादिति सूचयितुम् ।

ಸೂತ್ರದಲ್ಲಿ 'ಸಂಪ್ರಸಾದಾತ್' ಎಂದು ಹೇಳುವ ಬದಲು 'ಪೂರ್ಣಸುಖತ್ವಾತ್' ಎಂದೇ ಹೇಳಬಹುದಿತ್ತು. ಆದರೆ 'ಸಂಪ್ರಸಾದಾತ್' ಎಂಬ ಯೌಗಿಕಶಬ್ದಪ್ರಯೋಗದಿಂದ ಪೂರ್ಣಸುಖದ ಕಾರ್ಯವೆನಿಸಿದ ಪ್ರಸನ್ನತೆಯನ್ನು ಇದರಿಂದ ತಿಳಿಸಿದ್ದಾರೆ. ಸುಖವುಳ್ಳವನಾದರೆ ದುಃಖವೂ ಸಹ ಬರಬೇಕಲ್ಲವೇ? ಎಂಬ ಶಂಕೆಯನ್ನು ಇದರಿಂದ ಪರಿಹರಿಸಿದಂತಾಯಿತು. ಪೂರ್ಣಸುಖದ ಕಾರ್ಯವೆನಿಸಿದ ಪ್ರಸಾದದಿಂದ ವಿಷ್ಣುವಿಗೆ ದುಃಖವೇ ಇರುವುದಿಲ್ಲವೆಂದು ನಿಶ್ಚಯವಾಗಿದೆ.

इतश्चैवमित्याह -

**।। ॐ धर्मोपपत्तेश्च ॐ ।। १-३-९ ।।**

ಮತ್ತೊಂದು ಕಾರಣದಿಂದಲೂ ಭೂಮನು ವಿಷ್ಣುವೇ ಆಗಿದ್ದಾನೆಂದು ಸಮರ್ಥಿಸುತ್ತಿದ್ದಾರೆ. ಓಂ ಧರ್ಮೋಪಪತ್ತೇಶ್ಚ ಓಂ.

''स एवाधस्तात् स उपरिष्टात्'' इत्युक्तसर्वगतत्वादिधर्माणामुपपत्तेश्च भूमा ब्रह्मैवेत्यर्थः ।

ಸೂತ್ರಾರ್ಥ ಹೀಗಿದೆ - 'ಸ ಏವಾಧಸ್ತಾತ್ ಸ ಏವ ಉಪರಿಷ್ಟಾತ್' ಎಂಬ ಛಾಂದೋಗ್ಯದಲ್ಲಿ ಹೇಳಲ್ಪಟ್ಟ ಸರ್ವಗತತ್ವವೇ ಮೊದಲಾದ ಧರ್ಮಗಳು, ಉಪಪತ್ತೇಶ್ಚ = ಉಪಪನ್ನವಾಗುವುದರಿಂದಲೂ ಭೂಮಾ = ಬ್ರಹ್ಮನೇ ಭೂಮನಾಗಿದ್ದಾನೆ.

श्रुतौ सत्यस्यादित्वेऽपि सत्यादेः प्रणाड्या भूमा यत्तत्वोक्तेः सर्वस्य ब्रह्मतासये भूम्न उक्तिरित्येके । सम्प्रसादादिहेतुयुतत्वाच्च । सैव हीत्यतो गतत्वं चान्यतोऽवसेयम् ॥ २ ॥

ಶ್ರುತಿಯಲ್ಲಿ ಸತ್ಯನನ್ನೇ ಮೊದಲು ಹೇಳಿರುವುದರಿಂದ ಅವನಿಗೆ ಬ್ರಹ್ಮತ್ವವನ್ನು ಸಾಧಿಸಬೇಕಿತ್ತು. ಆದರೂ ಸಹ ಸತ್ಯ ಮೊದಲಾದವುಗಳಿಗೆ ಕ್ರಮವಾಗಿ ಭೂಮಾಧೀನತ್ವವು ಹೇಳಲ್ಪಟ್ಟಿದೆ. ಆದ್ದರಿಂದ ಸತ್ಯ ಮೊದಲಾದ ಎಲ್ಲ ಪದಾರ್ಥಗಳೂ ಬ್ರಹ್ಮವೇ ಆಗಿದೆ ಎಂದು ಸಾಧಿಸುವುದಕ್ಕಾಗಿ ಭೂಮಶಬ್ದವನ್ನೇ ಸೂತ್ರದಲ್ಲಿ ಗ್ರಹಣ ಮಾಡಿದ್ದಾರೆ. ಇದು ಕೆಲವರ ಉತ್ತರ. 'ಸಂಪ್ರಸಾದ' ಮೊದಲಾದ ಬ್ರಹ್ಮನ ಲಿಂಗಗಳು ಕೇಳಿಸುತ್ತಿರುವುದರಿಂದಲೂ ಬ್ರಹ್ಮನೇ ಭೂಮನಾಗಿದ್ದಾನೆ. 'ಸೈವ ಹಿ ಸತ್ಯಾದಯಃ' ಎಂಬ ಸೂತ್ರದಿಂದ ಈ ಅಧಿಕರಣಕ್ಕೆ ಗತಾರ್ಥತ್ವದೋಷವು ಬರುವುದಿಲ್ಲವೆಂದು ಬೇರೆ ಗ್ರಂಥದಿಂದ ತಿಳಿಯಬೇಕು.

ಶ್ರೀರಾಘವೇಂದ್ರತೀರ್ಥಶ್ರೀಪಾದಂಗಳವರಿಂದ ರಚಿತವಾದ

ತಂತ್ರದೀಪಿಕಾದ ಕನ್ನಡಾನುವಾದದಲ್ಲಿ ಭೂಮಾಧಿಕರಣವು ಸಮಾಪ್ತವಾಯಿತು.

श्री राघवेन्द्रतीर्थविरचिता

# श्रीन्यायमुक्तावलिः

## भूमाधिकरणम् (१।३।२)

**।। ॐ भूमा सम्प्रसादादध्युपदेशात् ॐ ।। २ ।।**

**।। ॐ धर्मोपपत्तेश्च ॐ ।।**

''स एवाधस्तात्स एवोपरिष्टात्स पश्चात्स पुरस्तात्स दक्षिणतः स उत्तरतः स एवेदं सव'' (छां.७-२५-१) ''यत्रनान्यत्पश्यति नान्यच्छृणोति नान्यद्विजानाति स भूमा स भगवः कस्मिन्प्रतिष्ठित इति स्वे महिम्निइति'' (छां.७-२४-१) इत्यादिना श्रुतस्य सर्वगतत्वादेर्भूमधर्मस्य ''ब्रह्मैवेदममृतं पुरस्तात् ब्रह्मपश्चाद्ब्रह्म दक्षिणत'' (मुं.४-१४) इत्यादिना द्युभ्वाद्यायतने श्रुतत्वात्तदाक्षेपेण पूर्वपक्षोत्थानात्सङ्गतिः ।

'ಸ ಏವಾಧಸ್ತಾತ್ ಸ ಏವೋಪರಿಷ್ಟಾತ್ ಸ ಪಶ್ಚಾತ್ ಸ ಪುರಸ್ತಾತ್ ಸ ದಕ್ಷಿಣತಃ ಸ ಉತ್ತರತಃ ಸ ಏವೇದಂ ಸರ್ವಮ್' ಭೂಮನೇ ಮೇಲೆ ಕೆಳಗೆ, ಅನಂತರ, ಹಿಂದೆ, ಬಲ, ಎಡ ಎಲ್ಲ ಕಡೆಯೂ ಇರುತ್ತಾನೆ ಎಂಬುದಾಗಿ ಛಾಂದೋಗ್ಯೋಪನಿಷತ್ತು ಭೂಮನನ್ನು ವರ್ಣಿಸುತ್ತಿದೆ. ಮತ್ತು 'ಯತ್ರ ನಾನ್ಯತ್ ಪಶ್ಯತಿ ನಾನ್ಯತ್ ಶೃಣೋತಿ ನಾನ್ಯದ್ ವಿಜಾನಾತಿ ಸ ಭೂಮಾ ಸ ಭಗವಃ ಕಸ್ಮಿನ್ ಪ್ರತಿಷ್ಠಿತಃ ಇತಿ ಸ್ವೇ ಮಹಿಮ್ನಿ ಇತಿ' ಯಾವಾತನನ್ನು ಸಂಪೂರ್ಣ ನೋಡಲು, ಕೇಳಲು, ತಿಳಿಯಲು ಸಾಧ್ಯವಿಲ್ಲವೋ ಅವನೇ ಭೂಮನಾಗಿದ್ದಾನೆ. ಅವನೇ ಭಗವಂತನು ಅವನು ಎಲ್ಲಿದ್ದಾನೆ ಎಂದರೆ ತನ್ನ ಸಾಮರ್ಥ್ಯದಲ್ಲಿಯೇ ಇದ್ದಾನೆ' ಹೀಗೆ ಸರ್ವಗತತ್ವ, 'ಸ್ವೇ ಮಹಿಮ್ನಿ ಪ್ರತಿಷ್ಠಿತತ್ವ' ಮೊದಲಾದ ಧರ್ಮಗಳನ್ನು ಭೂಮನಲ್ಲಿ ಛಾಂದೋಗ್ಯವು ಹೇಳುತ್ತಿದೆ. 'ಬ್ರಹ್ಮೈವೇದಮಮೃತಂ ಪುರಸ್ತಾತ್ ಬ್ರಹ್ಮ ಪಶ್ಚಾತ್ ಬ್ರಹ್ಮ ದಕ್ಷಿಣತಃ' ಅಮೃತಸ್ವರೂಪನಾದ ಬ್ರಹ್ಮನೇ ಹಿಂದೆ ಮುಂದೆ ಎಲ್ಲೆಡೆ ಇರುತ್ತಾನೆಂದು ಮಾಂಡೂಕ್ಯೋಪನಿಷತ್ತಿನಲ್ಲಿಯೂ ಹೇಳಲಾಗಿದೆ. ಹೀಗೆ ಯಾವಾತನು ದ್ಯುಭ್ವಾದ್ಯಾಯತನನಾಗಿದ್ದನೋ ಅವನನ್ನು ಭೂಮನೆಂದು ಹೇಳಿರುವುದರಿಂದ ದ್ಯುಭ್ವಾದ್ಯಾಯತನನು ವಿಷ್ಣುವೇ ಆಗಿದ್ದಾನೆಂದು ಹೇಗೆ ನಿರ್ಣಯಿಸುತ್ತೀರಿ? ಎಂಬುದನ್ನು ಆಕ್ಷೇಪಿಸಿ ಪೂರ್ವಪಕ್ಷವನ್ನು ಮಾಡುತ್ತಿರುವುದರಿಂದ ಹಿಂದಿನ ಅಧಿಕರಣದಿಂದ ಸಂಗತಿಯನ್ನು ತಿಳಿಯಬೇಕು.

''यो वै भूमा तत्सुखमिति'' (छां. ७-२३-१) छान्दोग्ये सप्तमेऽध्याये श्रुतो भूमा किं मुख्यप्राण उत विष्णुरिति सन्देहः ।।

'ಯೋ ವೈ ಭೂಮಾ ತತ್ಸುಖಮ್' ಎಂಬುದಾಗಿ ಛಾಂದೋಗ್ಯೋಪನಿಷತ್ತಿನ ಏಳನೆಯ ಅಧ್ಯಾಯದಲ್ಲಿ ಶ್ರುತನಾದ ಭೂಮನು ಮುಖ್ಯಪ್ರಾಣನೋ ವಿಷ್ಣುವೋ ಎಂದು ಸಂದೇಹ.

प्राणो भूमेति पूर्वः पक्षः ।। नाम वाक् मनः सङ्कल्प चित्त ध्यान विज्ञान बलान्नाप तेजआकाशस्मराशाप्राणेषु प्रत्येकं प्रश्नप्रत्युक्तिपूर्वमुत्तरोत्तराधिक्यमुक्त्वा प्राणादूर्ध्वमस्ति प्राणाद्भूय इति प्रश्नस्य भूमा वाव प्राणाद्भूयानिति प्रत्युक्तेश्चाभावेन भूम्नःप्राणादनन्यत्वात्, विष्णुर्वाव देवेभ्यो भूयानिति समाख्यायाः प्राणो वा आशाया भूयानिति उपक्रमात् दुर्बलतया तेन तद्बाधात् ।

ಮುಖ್ಯಪ್ರಾಣನೇ ಭೂಮನಾಗಿದ್ದಾನೆಂದು ಪೂರ್ವಪಕ್ಷ, ನಾಮ, ವಾಕ್, ಮನಸ್ಸು, ಸಂಕಲ್ಪ, ಚಿತ್ತಜ್ಞಾನ ವಿಜ್ಞಾನ, ಅಪ್ಪು, ತೇಜಸ್ಸು, ಆಕಾಶ, ಸ್ಮರ, ಆಶಾ ಪ್ರಾಣ ಇವರುಗಳಲ್ಲಿ ಪ್ರತ್ಯೇಕವಾಗಿ ಪ್ರಶ್ನ ಹಾಗೂ ಉತ್ತರಗಳನ್ನು ಹೇಳುತ್ತಾ ಉತ್ತರೋತ್ತರಾಧಿಕ್ಯವನ್ನು ಸಮರ್ಥಿಸಲಾಗಿದೆ. ನಾಮಾಭಿಮಾನಿದೇವತೆಯಿಂದ ಪ್ರಾರಂಭಿಸಿ ಮುಖ್ಯಪ್ರಾಣನ ತನಕ ತಾರತಮ್ಯವನ್ನು ಹೇಳಲಾಗಿದೆ. ಮುಖ್ಯಪ್ರಾಣನಿಗಿಂತ ಶ್ರೇಷ್ಠನಾದವನು ಮತ್ತೊಬ್ಬನಿದ್ದಾನೆಯೇ ಎಂಬ ಪ್ರಶ್ನೆಗೆ 'ಭೂಮೋ ವಾವ ಪ್ರಾಣೋ ಭೂಯಾನ್' ಭೂಮನೇ ಪ್ರಾಣನಿಗಿಂತ ಉತ್ತಮನಾಗಿದ್ದಾನೆಂದು ಉತ್ತರವು ಕೇಳಿಸುತ್ತಿಲ್ಲ. ಇದರಿಂದ ಪ್ರಾಣನೇ ಭೂಮನಾಗಿದ್ದಾನೆಂದು ಸ್ಪಷ್ಟವಾಗುತ್ತದೆ. 'ವಿಷ್ಣುರ್ವಾವ ದೇವೇಭ್ಯೋ ಭೂಯಾನ್' ಎಂಬುದಾಗಿ ವಿಷ್ಣುವೇ ಭೂಮನೆನ್ನಲು ಸಮಾಖ್ಯಾಪ್ರಮಾಣವನ್ನು ಹೇಳಬಹುದು. ಆದರೆ 'ಪ್ರಾಣೋ ವಾ ಆಶಾಯಾ ಭೂಯಾನ್' ಎಂಬುದಾಗಿ ಪ್ರಾರಂಭದಲ್ಲಿರುವ ಉಪಕ್ರಮ ಪ್ರಮಾಣಕ್ಕಿಂತ ದುರ್ಬಲವಾದ ಸಮಾಖ್ಯಾಪ್ರಮಾಣವು ಬಾಧಿತವಾಗುತ್ತದೆ.

उत्क्रान्तप्राणानिति प्राणे श्रुतस्योत्क्रमणलिङ्गस्य सर्वगते विष्णावयोगेन "अत एव प्राण" (ब्र.सू. १-१-२३) इति न्यायेन प्राणश्रुतेः विष्णाववकाश इत्यस्याप्ययोगादिति ।।

'ಉತ್ಕ್ರಾಂತಪ್ರಾಣಾನ್' ಎಂಬ ಶ್ರುತಿಯಲ್ಲಿ ಮುಖ್ಯಪ್ರಾಣನಿಗೆ ಹೇಳಲ್ಪಟ್ಟ ಉತ್ಕ್ರಮಣವೆಂಬ ಲಿಂಗವು ಎಲ್ಲೆಡೆ ವ್ಯಾಪ್ತನಾದ ವಿಷ್ಣುವೆಂದು ಹೇಳಲು ಸಾಧ್ಯವಿಲ್ಲ. ಆದ್ದರಿಂದ 'ಅತ ಏವ ಪ್ರಾಣಃ' ಎಂಬ ಸೂತ್ರದ ನ್ಯಾಯದಿಂದ ಪ್ರಾಣಶಬ್ದವು ವಿಷ್ಣುವನ್ನು ಪ್ರತಿಪಾದಿಸುತ್ತದೆಂಬ ಶಂಕೆಗೂ ಅವಕಾಶವಿಲ್ಲ.

**सिद्धान्तस्तु** ।। निरुपपदसुखपदोक्तपूर्णसुखत्वस्य सर्वेषां नामादीनां उपरि सर्वाधिकत्वेनाम्नातत्वस्य स एवाधस्तादित्यादिनोक्तसर्वगतत्वादिधर्माणां च

''विश्वशम्भुवं, विश्वतः परम्'' इत्यादिश्रुतिभिः (महाना.उ ।) ब्रह्मैकनिष्ठत्वात् विष्णावणुत्वस्यापि वक्ष्यमाणत्वेनोत्क्रमणक्रियाया अपि युक्तत्वात् ।

ಸಿದ್ಧಾಂತ ಹೀಗಿದೆ - ಉಪಪದವಿಲ್ಲದ ಸುಖಪದಕ್ಕೆ ಪೂರ್ಣಸುಖನೆಂದೇ ಅರ್ಥ. ಮತ್ತು ನಾಮಾಭಿಮಾನಿ ದೇವತೆಯಿಂದ ಪ್ರಾರಂಭಿಸಿ ಸರ್ವಾಧಿಕ್ಯವನ್ನು ಶ್ರುತಿಯು ಏನು ಹೇಳಿದೆಯೋ ಅದು ವಿಷ್ಣುವಿನಲ್ಲೇ ಉಪಪನ್ನವಾಗುತ್ತದೆ. ಮತ್ತು 'ಸ ಏವಾಧಸ್ತಾತ್' ಇತ್ಯಾದಿಶ್ರುತಿಯಲ್ಲಿ ಹೇಳಲ್ಪಟ್ಟ ಸರ್ವಗತತ್ವಾದಿ ಧರ್ಮಗಳು 'ವಿಶ್ವಶಂಭುವಮ್' 'ವಿಶ್ವತಃ ಪರಮ್' ಇತ್ಯಾದಿ ಶ್ರುತಿಗಳಿಂದ ವಿಷ್ಣುವಿನಲ್ಲೇ ಬರುತ್ತವೆಂದು ನಿರ್ಣಯವಾಗುತ್ತದೆ. ಉಪಕ್ರಮದಲ್ಲಿ ಹೇಳಲ್ಪಟ್ಟ ಉತ್ಕ್ರಮಣ ಲಿಂಗದ ವಿರೋಧವು ಇರುವುದಿಲ್ಲ. ಏಕೆಂದರೆ ವಿಷ್ಣುವಿಗೆ ಅನೇಕ ರೂಪಗಳಿರುವುದರಿಂದ ದೇಹದಲ್ಲಿರುವ ಅಣುರೂಪದಿಂದ ನಿರ್ಗಮನ ಮಾಡುತ್ತಾನೆಂದು ಉತ್ಕ್ರಮಣವನ್ನು ಹೇಳಬಹುದು. ಮುಂದೆ ವಿಷ್ಣುವಿಗೆ ಅಣುರೂಪತ್ವವನ್ನು ಸಮರ್ಥಿಸಲಾಗುತ್ತದೆ. ಆದ್ದರಿಂದ ಉತ್ಕ್ರಮಣಕ್ರಿಯೆಯು ಯುಕ್ತವಾಗುತ್ತದೆ.

प्राणो भूमा च विष्णुरेवेति प्राणभूम्नोरभेदेन वा भूमा विष्णुरेवेति ।

ಪ್ರಾಣ ಹಾಗೂ ಭೂಮಾ ಎಂಬ ಶಬ್ದಗಳಿಂದ ವಿಷ್ಣುವೇ ಪ್ರತಿಪಾದ್ಯನು. ಪ್ರಾಣ ಹಾಗೂ ಭೂಮಾ ಶಬ್ದಗಳೆರಡೂ ಒಬ್ಬನನ್ನೇ ಪ್ರತಿಪಾದಿಸುತ್ತಿವೆ. ಅಥವಾ ಪ್ರಾಣಶಬ್ದವು ಮುಖ್ಯಪ್ರಾಣನನ್ನು ಪ್ರತಿಪಾದಿಸಿದರೂ ಪ್ರಶ್ನೆ ಹಾಗೂ ಉತ್ತರಗಳ ಅಧ್ಯಾಹಾರದಿಂದ ಪ್ರಾಣ ಹಾಗೂ ಭೂಮಾ ಇಬ್ಬರಿಗೂ ಅಭೇದವಿದೆಯೆಂದು ತಿಳಿಯುತ್ತದೆ. ಆದ್ದರಿಂದ ಭೂಮನು ವಿಷ್ಣುವೇ ಆಗಿದ್ದಾನೆ.

फले तु सुखमित्युक्तपूर्णसुखत्वमुखेनानन्दमयाक्षेपसमाधी ।। २ ।।

'ತತ್ಸುಖಮ್' ಎಂಬಲ್ಲಿ ಹೇಳಲ್ಪಟ್ಟ ಪೂರ್ಣಸುಖತ್ವದ ಮೂಲಕವಾಗಿ ಪೂರ್ವಪಕ್ಷ ಮಾಡುತ್ತಿರುವುದರಿಂದ ಹೇಗೆ ಆನಂದಮಯನಾಗುತ್ತಾನೆಂಬ ಆನಂದಮಯಾಧಿಕರಣದ ಆಕ್ಷೇಪವೇ ಪೂರ್ವಪಕ್ಷದ ಫಲ. ಅದರ ಸಮಾಧಾನವೇ ಸಿದ್ಧಾಂತದ ಫಲ.

ಶ್ರೀರಾಘವೇಂದ್ರತೀರ್ಥಶ್ರೀಪಾದಂಗಳವರಿಂದ ರಚಿತವಾದ
ನ್ಯಾಯಮುಕ್ತಾವಳಿಯ ಕನ್ನಡಾನುವಾದದಲ್ಲಿ ಭೂಮಾಧಿಕರಣವು ಸಮಾಪ್ತವಾಯಿತು.

# सूत्रार्थरत्नावलिः

## भूमाधिकरणम् (१।३।२)

अत्र भूमनाम्नो विष्णौ समन्वयः क्रियते ।

**(८) ॐ।। भूमा सम्प्रसादादध्युपदेशात् ।।ॐ**

ननु ''भूमाख्यः प्राणो भवेत् । 'प्राणो वा'(छां. ७।१५।१) इति प्राणस्योत्तमत्वमुक्त्वा, तदुत्तमत्वमनुक्त्वा भूम्न आम्नातत्वात् । 'उत्क्रान्तप्राणान् शूलेन' (छां. ७।१५।३) इत्यनेनोत्क्रमणलिङ्गश्रवणात् । न चेदं लिङ्गं विष्णाववकाशमर्हति । सर्वगतत्वात् । प्राणशब्दस्य वायुवाच्यत्वात् । ततश्चानन्दमयोऽपि स एव'' इति प्राप्ते, सूत्रमुपन्यस्यति –

**ॐ।। भूमा सम्प्रसादादध्युपदेशादिति ।। अस्यार्थः – भूमा 'यो वै भूमा' इति श्रुतौ भूमशब्दोक्तपूर्णो विष्णुरेव । कुतः? सम्प्रसादात् 'भूम्नस्तत्सुखम्' इत्यनेन सम्प्रसादशब्दितपूर्णसुखरूपत्वाभिधानात् । किञ्च अध्युपदेशात् । नामादेरपि तदुपरि नामादिदेवतोत्तमत्वेन भूम्नोऽभिधानाच्चेत्यर्थः ।**

एवञ्च विष्णुरेवायं भूमा । पूर्णसुखत्वात् । तस्य चान्यत्र निरवकाशत्वात् । किञ्चास्य भूम्नः सर्वेषामुपर्युपदेशः श्रूयते । न चास्यान्यत्रावकाशः । न चोपक्रमे प्राणशब्देन कथमसौ विष्णुरिति वाच्यम् । प्राणशब्देनापि विष्णोरुक्तत्वात् । न चोत्क्रमणादिलिङ्गविरोधः । 'तमुत्क्रान्तम्'(बृ. ६।४।७) इति श्रुतिसिद्धत्वेन तस्य विष्णावेव मुख्यत्वात् । अथवाऽयं प्राणो वायुरेव । तथाऽपि न तस्य भूमत्वप्राप्तिः । एष तु वा इत्यादिना सूचितप्रश्नाद्यध्याहारेण प्राणाद् विष्णोर्भूयस्त्वमुक्त्वा भूम्न आम्नानात् ।

सर्वेषां नामादीनामुपरि विष्णोः सर्वोत्तमत्वेनाभिधानात् । भूमा विष्णुरेवेति सिद्धम् ।

**(९) ॐ॥ धर्मोपपत्तेश्च ॥ॐ**

युक्त्यन्तरेण विष्णोर्भूमत्वप्रतिपादयत् सूत्रं पठति –

**ॐ धर्मोपपत्तेश्चेति ।। अस्यार्थः – 'स एवाधस्तात्' (छां.७।२५) इत्यादिना भूम्नि सर्वगतत्वादिधर्मश्रवणात् । तस्य च विष्णोरेवोपपत्तेः । विष्णुरेव भूमा इत्यर्थः ।**

एवञ्च प्राणपदेन वाय्वन्तर्गतस्य विष्णोरभिधानात् । 'आत्मन आकाशः' (तै.आ.२।१) इत्यत्र सम्भूतपदेन भूतस्य तदभिमानिदेहस्य स्वरूपोत्पत्त्यभिधानेऽपि तदभिमानिनो हरेश्च देहसम्बन्धप्रादुर्भावयोश्चाभिधानवत् 'भूमा वाव प्राणः' इत्यनेन स्वरूपोत्तमत्वस्य भूम्नोऽभिधानेऽपि वाय्वन्तर्गताद् रूपात् प्रसादोन्मुखत्वरूपोत्तमत्वविशिष्टभूमाभिधानसम्भवेन प्रश्नप्रतिवचनसहिष्णुत्वसम्भवात् । किञ्च 'स एवाधस्तात्' इत्यादिना भूम्नि सर्वगतत्वादयो धर्माः श्रूयन्ते । नैते अन्यत्रावकाशा लभन्ते । ततश्च निरवकाशेभ्यः सर्वगतत्वादिभ्यो भूमा विष्णुरेवेति तस्यैवानन्दमयत्वमिति सिद्धम् ।।

।। इति सूत्रार्थरत्नावळ्यां भूमाधिकरणम् ।।

॥ ಪರಿಪೂರ್ಣಚಂದ್ರಿಕೆಯಲ್ಲಿ ಭೂಮಾಧಿಕರಣವು ಮುಗಿಯಿತು ॥

॥ ಶ್ರೀಮಧ್ವೇಶಾರ್ಪಣಮಸ್ತು ॥





## ಜೀವದ ಎಲ್ಲಾ ಚಟುವಟಿಕೆಗಳಿಗೆ ನೆಲೆಯಾದುದೇ ದೇಹ.

ಸೂಕ್ಷ್ಮಾತಿಸೂಕ್ಷ್ಮ ರಚನೆಗಳ ವಿಸ್ಮಯ. ಪ್ರತೀಕ್ಷಣವೂ ಎಂತೆಂಥದ್ದೋ
ಭೌತಿಕ ಅಭೌತಿಕ ಕ್ರಿಯೆಗಳ ಆಗರ, ಇಷ್ಟೊಂದು ಆಗುಹೋಗುಗಳು ಆಕಸ್ಮಿಕವಲ್ಲ.
ನಿಯಾಮಕರ್ಯಾರು? ಎನ್ನುವ ಪ್ರಶ್ನೆ ಸಹಜ.
ದೇವತೆಗಳು - ಉಪದೇವತೆಗಳು - ಕ್ಷುದ್ರದೇವತೆಗಳು - ಅಧೀನಕರ್ಮಿಗಳು ಇದೆಲ್ಲವನ್ನು ಸ್ವಾತಂತ್ರ್ಯದಿಂದ
ನಿಯಂತ್ರಿಸಲು ಇವರಿಗೆ ಸಾಧ್ಯವಿಲ್ಲ.
ಇವರೂ ಸಹ ಜೀವರೇ ತಾನೆ ? ಆ ಜೀವನಿಗೆ ಮತ್ತೊಬ್ಬ ಜೀವನನ್ನು ಪರಾವಲಂಬಿಯಾಗಿಯೇ
ನಿಯಂತ್ರಿಸುವುದೆಂದರೆ ಅನವಸ್ಥಾದೋಷಕ್ಕೆ ನಾಂದಿ ಹಾಡಿದಂತೆ.
ಸಮಸ್ತ ಜೀವಗಳ ಆತ್ಯಂತಿಕ, ಏಕನಿಯಾಮಕನಿದ್ದರೆ ಮಾತ್ರ
ಈ ಎಲ್ಲಾ ಪ್ರಶ್ನೆಗಳಿಗೆ ಸಮಂಜಸವಾದ ಉತ್ತರ ಸಾಧ್ಯ ?
ಅವನೇ ಅಮೃತ - ಅಭಯ ಮೊದಲಾದ ಲಿಂಗಗಳಿಂದ ಕೂಡಿದ
ಅಂತರ್ಯಾಮಿಯಾದ ಮಹಾವಿಷ್ಣು....

ಇಂತಹ ಅಂತರ್ಯಾಮಿ ಅದೃಶ್ಯತ್ವವೇ ಮೊದಲಾದ ಅನೇಕ ಗುಣಗಳ ಗಣಿ.
ನಿಮಗೊತ್ತಾ ?!! ಭಗವಂತನಲ್ಲಿರುವ ಧರ್ಮಗಳೆಲ್ಲವು ಅವನ ಸ್ವರೂಪವೇ ಆಗಿವೆ !! ಅವನಲ್ಲಿರುವ
ದುರ್ಗುಣಗಳ ಅಭಾವವೂ ಸಹ ಅವನ ಸ್ವರೂಪವೇ ಆಗಿವೆ,
ಇದೆಲ್ಲವೇ ನಿಜವಾದ ಅದ್ಭುತ. ಹೊಳೆಯುವ ಶುದ್ಧ ಹಳದಿ ಬಣ್ಣದವನೆಂಬ
ಹೇತುವುಳ್ಳವನು ಮಹಾವಿಷ್ಣುವೆ !!
ವೈಶ್ವಾನರ ಎಂಬ ನಾಮಸಮನ್ವಯದಿಂದಾಗಿ ಹಲವು ಲಿಂಗಗಳ ಸಮನ್ವಯವು ಸಿದ್ದಿಸುತ್ತವೆ.
ಉಭಯತ್ರಪ್ರಸಿದ್ಧ ನಾಮಲಿಂಗಾತ್ಮಕಶಬ್ದಗಳ ಸಮನ್ವಯವೇ ಮೂರನೆಯ ಪಾದದ ಗುರಿ.

ಸ್ವರ್ಗಾದಿಲೋಕಗಳಿಗೆ ಆಧಾರನಾದವನು ಮಹಾವಿಷ್ಣುವೆಂದು
ಮಾಂಡೂಕ್ಯೋಪನಿಷತ್ತು ಸಾರುತ್ತಿದೆ.
ಭೂಮಾ ಎಂಬ ಹೆಸರು ಪ್ರಾಣದೇವರದ್ದೆಂದು ಅನ್ನುವುದು ಮಿಥ್ಯಾ.
ಪರಿಪೂರ್ಣಸುಖ ಸರ್ವೋತ್ತಮತ್ವ ಮೊದಲಾದ ಹೇತುಗಳು ''ಭೂಮಾ ಮಹಾವಿಷ್ಣುವೇ''
ಎಂದು ನಗಾರಿ ಹೊಡೆಯುತ್ತಿವೆಯೆಲ್ಲಾ!!!! ....

ಪ್ರಕಾಶಕರು : ಶ್ರೀಪಾದರಾಜಮಠ, ಮುಳಬಾಗಿಲು